ಬರೆಸಿರುವದರಿಂದ, ಅದರ ಯೋಗ್ಯತೆಯನ್ನು ನಾನು ವರ್ಣಿಸಲಾರೆನು. ಇಡಿಯ ಕರ್ನಾಟಕದ ಚಿತ್ತವನ್ನು ಈ ಕಾದಂಬರಿಯು ಆಕರ್ಷಿಸಿರುವದು. ಈಗಿನ ಕಾಲದಲ್ಲಿ ಈ ಕಾದಂಬರಿಯನ್ನು ಓದದ ಕನ್ನಡಿಗರು ನಿಶ್ಚಯವಾಗಿ ಅಧನ್ಯರು. ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯರ ಅಲೌಕಿಕ ಸಾಮರ್ಥ್ಯವು ಯಾವ ಕನ್ನಡಿಗರ ಸದೂರ್ಮಿಗಳನ್ನು ಸ್ಫೂರ್ತಿಗೊಳಿಸಲಿಕ್ಕಿಲ್ಲ? ಗಳಗನಾಥರ ವಿವಿಧ ಮನೋಹರ ಕಾದಂಬರಿಗಳಲ್ಲಿ ಇದು ಶ್ರೇಷ್ಠತರ ಕಾದಂಬರಿಯಾಗಿದ್ದು, ವಿದ್ಯಾರಣ್ಯರಂಥ ಮಹಾತ್ಮರ ಸತ್ ಸ್ಫೂರ್ತಿಯಿಂದ ಆ ಗಳಗನಾಥರ ಹೃದಯವು ಇದರಲ್ಲಿ ಬಿಚ್ಚಿ ಇಡಲ್ಪಟ್ಟಿರುವದು.

ಈ ಮನೋಹರ ಕಾದಂಬರಿಯಲ್ಲಿ ೬೦ ಪ್ರಕರಣಗಳಿದ್ದು, ಅವುಗಳಲ್ಲಿ ೧. ವ್ಯಾವಹಾರಿಕ ಯೋಗತ್ರಯಗಳು ೨. ಧರ್ಮದ ದುರಭಿಮಾನ ೩. ವೈದಿಕ ಧರ್ಮಗಳು ೪. ಅವೈದಿಕ ಧರ್ಮಗಳು ೫. ಶಾಂತಿಯ ಪ್ರತ್ಯಕ್ಷ ಕಾರಣವು ಅಧ್ಯಯನವಲ್ಲ, ಗುರು ಕೃಪೆಯು! ೬. ಅಸ್ಪೃಶ್ಯತೆಯೂ, ಧಾರ್ಮಿಕ ವ್ಯವಹಾರವೂ ೭ ಅಸ್ಪೃಶ್ಯತೆಯೂ ರಾಜಕೀಯ ವ್ಯವಹಾರವೂ, ೮. ಸಹಯೋಗ ೯. ಅಸಹಯೋಗದ ಪ್ರಭೇದಗಳು. ೧೦. ಅಹಿಂಸಾ ತತ್ವವೂ, ರಾಜಕೀಯ ಅಹಿಂಸೆಯೂ ೧೧. ರಾಷ್ಟ್ರದ ವಿವೇಕೋದಯ (ಬ್ರಾಹ್ಮಣ ಬ್ರಾಹ್ಮಣೇತರ ವಿವೇಕ) ೧೨. ದೇಶದ್ರೋಹವೂ, ರಾಜದ್ರೋಹವೂ ೧೩. ಪರತಂತ್ರರಿಗೆ ಸೆರೆಮನೆಯೇ ಸ್ವರಾಜ್ಯವು ೧೪. ದೇಶದ್ರೋಹಿಗಳ ಹೇಸಿನತ. ೧೫ ಸಜ್ಜನರಿಗೆ ಶತ್ರುಗಳೂ ಸ್ವಕೀಯರೇ. ೧೬ ದೇಶವಿಘಾತಕ ಭೇದಭಾವನಿರಸನ. ೧೭. ರಾಜದ್ರೋಹದ ಸ್ವರೂಪ ೧೮ ಅಂತಃಕಲಹವು ಅಳಿಗಾಲದ ಲಕ್ಷಣವು ಇತ್ಯಾದಿ ಮಹತ್ವದ ವಿಷಯಗಳನ್ನು ಕುರಿತು ಶ್ರೀ ಮಾಧವಾಚಾರ್ಯರು ಸಮರ್ಪಕವಾಗಿ ನಿರ್ಣಯಿಸಿರುತ್ತಾರೆ. ಈ ಪುಸ್ತಕವನ್ನು ಪ್ರತಿ ಒಬ್ಬ ಕನ್ನಡಿಗನೂ ಮನೆಯಲ್ಲಿ ಸಂಗ್ರಹಿಸತಕ್ಕದ್ದು.

ಈ ಕಾದಂಬರಿಯು ನಮ್ಮ "ಸದ್ಗುರು" ಎಂಬ ಮಾಸಪತ್ರಿಕೆಯಲ್ಲಿ ಭಾಗಶಃ ಎರಡು ವರ್ಷ ಪ್ರಕಟವಾಗಿ, ಉಳಿದ ಕಾದಂಬರೀ ಭಾಗವನ್ನು ಸ್ವತಂತ್ರವಾಗಿ ಬರೆದು ಮುಗಿಸಿರುತ್ತದೆ. ಇದರ ಐದು ಸಾವಿರ ಪ್ರತಿಗಳಲ್ಲಿ ಇನ್ನು ಬಹಳವಾದರೆ ಎರಡುಸಾವಿರ ಪ್ರತಿಗಳು ಉಳಿದಿರಬಹುದು! ಇದನ್ನು ಮುಂಬಯಿ ವಿಶ್ವವಿದ್ಯಾಲಯದವರು ಎಂ.ಎ., ಕ್ಲಾಸಿಗೆ ಪಠ್ಯ ಪುಸ್ತಕವಾಗಿ ನಿಯಮಿಸಿರುವರು. ಬೆಂಗಳೂರಿನ ಸಾಹಿತ್ಯ ಪರಿಷತ್ತಿನ ಅವಲೋಕನಕ್ಕಾಗಿ ಇದನ್ನು ಕಳಿಸಿದಾಗ, ಈವರೆಗೆ ಮಾಡಿದ ಕನ್ನಡಿಗರ ಗೌರವದ ಸೇವಾತಿಶಯಕ್ಕಾಗಿ ಆ ಪರಿಷತ್ತು ಗಳಗನಾಥರಿಗೆ ೨೫೦ ರೂಪಾಯಿ ಉಚಿತವಾಗಿ ಕೊಟ್ಟಿದೆ. ಮೈಸೂರ ಸರ್ಕಾರದ ದೇವರಾಜ ಚಾರ್ಟಿ ಫಂಡಿನಿಂದ ಇದಕ್ಕೆ ೨೦೦ ರೂಪಾಯಿಗಳ ಉಚಿತವು ದೊರೆತಿರುವದು. ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘವೂ ಇದಕ್ಕೆ ಉಚಿತವನ್ನು ಕೊಟ್ಟಿರುವದು. ಇದರ ಬೆಲೆ ೩-೧೨-೦. ಪೋಸ್ಟು ವೆಚ್ಚ ಎಂಟು ಆಣೆ.

**೨. ಕನ್ನಡಿಗರ ಕರ್ಮಕಥೆ-೧೯೧೬:** ಘನತರವಾದ ವಿಜಯನಗರದ ರಾಜ್ಯವು ಪ್ರಸಿದ್ಧ ತಾಳೀಕೋಟೆಯ ಕಾಳಗದಿಂದ ರಸಾತಳಕ್ಕೆ ಹೇಗೆ ಹೋಯಿತೆಂಬುದನ್ನು ಈ ವಿಸ್ತೃತ ಕಾದಂಬರಿಯಲ್ಲಿ ಬಹು ಮನೋಹರವಾಗಿ ವರ್ಣಿಸಿರುತ್ತದೆ. ಇದನ್ನು

ಓದುವದರಿಂದ ಕನ್ನಡಿಗರಲ್ಲಿ ಸ್ವಾಭಿಮಾನ ಮೂಲವಾದ ಹಲವು ವಿಕಾರಗಳೂ, ವಿಚಾರಗಳೂ ಉತ್ಪನ್ನವಾಗದೆ ಇರಲಿಕ್ಕಿಲ್ಲ! ರಾಮರಾಜ, ತಿರುಮಲ, ವೆಂಕಟಾದ್ರಿ, ಮೇಹರ್ಜಾನ, ರಣಮಸ್ತಖಾನ ಮೊದಲಾದ ಪಾತ್ರಗಳ ಚರಿತ್ರ ವಾಚನದಿಂದ ಮನಸ್ಸು ತಲ್ಲೀನವಾಗಿ ಹೋಗುತ್ತದೆ ! ಈ ವಿಸ್ತೃತ ಕಾದಂಬರಿಯ ಬೆಲೆಯು ೧-೮-೦. ಪೋಸ್ಟೇಜು ೫ ಆಣೆ.

೩. **ಕುಮುದಿನಿ-೧೯೧೬:** ಇದೂ ಒಂದು ಕನ್ನಡಿಗರ ಅತ್ಯಂತವಾದ ಅಭಿಮಾನಕ್ಕೆ ಆಸ್ಪದವಾದ ಕಾದಂಬರಿಯೇ ಆಗಿರುವದು. ಈ ಐತಿಹಾಸಿಕ ಸ್ವತಂತ್ರ ಕಾದಂಬರಿಯು ವಿಜಯನಗರದ ಇತಿಹಾಸಕ್ಕೆ ಸಂಬಂಧಿಸಿದ್ದು, ಈ ಕಾದಂಬರಿಯೊಳಗಿನ ಶೋಕರಸ ಪ್ರಧಾನವಾದ "ಅಂತಕನ ಕೋಲಾಹಲ" ಎಂಬ ಪ್ರಕರಣವನ್ನು ಓದಿ ನಿಜವಾಗಿ ನಾವು ಮೂರ್ಛಿತರಾದೆವೆಂದು, ಒಬ್ಬ ಮೈಸೂರ ಸೀಮೆಯ ಸಹೃದಯ ವಾಚಕರು ತಿಳಿಸಿರುತ್ತಾರೆ. ಇದನ್ನು ಮೈಸೂರ ಸರಕಾರದವರು ಮೆಟ್ರಿಕ ಕ್ಲಾಸಿಗೆ ಪಠ್ಯ ಪುಸ್ತಕವಾಗಿ ನಿಯಮಿಸಿರುವರು. ಇದರ ಭಾಷಾಂತರವು ಸಂಸ್ಕೃತದಲ್ಲಿ ಆಗಿದೆ. ಬೆಲೆ ೧ ರೂಪಾಯಿ. ಪೋಸ್ಟೇಜು ನಾಲ್ಕು ಆಣೆ.

೪. **ದುರ್ಗದ ಬಿಚ್ಚುಗತ್ತಿ-೧೯೩೮:** ನನ್ನ "ಮಾಧವ ಕರುಣಾ ವಿಲಾಸ" ಎಂಬ ಸ್ವತಂತ್ರವಾದ ದೊಡ್ಡ ಐತಿಹಾಸಿಕ ಕಾದಂಬರಿಯ ತರುವಾಯದಲ್ಲಿ ಬರೆದ ಸ್ವತಂತ್ರ ಐತಿಹಾಸಿಕ ಕಾದಂಬರಿ ಈ 'ದುರ್ಗದ ಬಿಚ್ಚುಗತ್ತಿ' ಇದನ್ನು "ಶ್ರೀ ಮುರುಗೇಶ ಗುರುವರರು' ಪ್ರೇರಿಸಿ ಬರೆಸಿರುವರು. ಈ ಕಾದಂಬರಿಯಲ್ಲಿ ಕರ್ನಾಟಕ ಪ್ರಸಿದ್ಧಿಯ ಚಿತ್ರದುರ್ಗ ಕೋಟೆಯ ನಾಯಕರ ಮನೆತನಕ್ಕೆ ಸಂಬಂಧಿಸಿದ ವೃತ್ತಾಂತ ನಿರೂಪಿತವಾಗಿದೆ. ಇದರ ಬೆಲೆ ೧-೨-೦.

## ಮರಾಠರಿಗೆ ಸಂಬಂಧಿಸಿದವು

೫. **ಈಶ್ವರೀಸೂತ್ರ-೧೯೧೩:** ಶಿವಾಜಿಯು ತೋರಣಗಡವೆಂಬ ದುರ್ಗವನ್ನು ತಕ್ಕೊಂಡು ಸ್ವರಾಜ್ಯವನ್ನು ಸ್ಥಾಪಿಸಿ ಸ್ವರಾಜ್ಯದ ತೋರಣ ಕಟ್ಟಿದ ಮನೋಹರ ವೃತ್ತಾಂತವು ಇದರಲ್ಲಿ ವರ್ಣಿಸಿರುತ್ತದೆ. ಇದರ ಲೋಕಪ್ರಿಯತೆಯನ್ನು ಇಷ್ಟೆಂದು ವರ್ಣಿಸಲಾಗುವದಿಲ್ಲ. ಕಾದಂಬರಿಯನ್ನು ಪುನಃ ಪುನಃ ಓದಿದರೂ ಮನಸ್ಸು ತೃಪ್ತವಾಗುವದಿಲ್ಲ. ಇದರ ಬೆಲೆ ೧ ರೂ. ಪೋಸ್ಟೇಜು ೪ ಆಣೆ.

೬. **ಮರಾಟರ ಅಭ್ಯುದಯ-೧೯೧೮:** ಮೇಲೆ ಹೇಳಿದಂತೆ ಶಿವಾಜಿಯು ರಾಜ್ಯವನ್ನು ಸ್ಥಾಪಿಸಿದ ಬಳಿಕ ಅದನ್ನು ನಾಶಮಾಡುವುದಕ್ಕಾಗಿ ವಿಜಾಪುರದ ಬಾದಶಹನು ಅಫಜಲಖಾನನೆಂಬ ಬಲಾಢ್ಯ ಸರದಾರನನ್ನು ದೊಡ್ಡ ಸೈನ್ಯದೊಡನೆ ಕಳಿಸಲು, ಶಿವಾಜಿಯು ಆತನನ್ನು ಯುಕ್ತಿಯಿಂದ ಸಂಹರಿಸಿದ ಸಂಗತಿಯು ಇದರಲ್ಲಿ ಮನೋಹರವಾಗಿ ವರ್ಣಿಸಿರುತ್ತದೆ. ಇದನ್ನು ಓದುವಾಗ ಹಲವು ಕಡೆಯಲ್ಲಿ ವಾಚಕರ ಹೃದಯವು ಉಕ್ಕಿ ಬರುವುದೆಂಬುದು ಅನುಭವದ ಮಾತಾಗಿರುವುದು. ಬೆಲೆ ೧ ರೂ. ಪೋಸ್ಟೇಜು ೪ ಆಣೆ.

**೭. ಕಮಲಕುಮಾರಿ-೧೯೧೦:** ದಿಲ್ಲಿಯ ಬಾದಶಹನಾದ ಔರಂಗಜೇಬನು ಶಿವಾಜಿಯ ಹೆಚ್ಚಳವನ್ನು ತಡೆಯದೆ, ಉದಯಭಾನು ಎಂಬ ತನ್ನ ಶೂರ ಸರದಾರನನ್ನು ದೊಡ್ಡ ಸೈನ್ಯದೊಡನೆ ಆತನ ಮೇಲೆ ಕಳಿಸಿದಾಗ, ಶಿವಾಜಿಯ ಬಾಲಮಿತ್ರನಾದ ಅತ್ಯಂತ ಸ್ವಾಮಿನಿಷ್ಠ ತಾನಾಜಿಯು ಸಿಂಹಗಡವನ್ನು ಉದಯಭಾನುವಿನಿಂದ ಕಸಿದುಕೊಂಡು, ತನ್ನ ಒಡೆಯನ ಕಾರ್ಯವನ್ನು ಸಾಧಿಸಿದ ಮನೋಹರ ಪ್ರಸಂಗವನ್ನು ಈ ಕಾದಂಬರಿ ಯಲ್ಲಿ ವರ್ಣಿಸಿರುತ್ತದೆ. ಇದರ ಆರನೆಯ ಆವೃತ್ತಿಯು ಹೊರಡಬೇಕಾಗಿರುವುದು ಕಾದಂಬರಿಗಳಲ್ಲಿ ಇದನ್ನು ಸರಿಗಟ್ಟುವ ಕಾದಂಬರಿಗಳು ಅತಿ ವಿರಳವೆಂದು ಹೇಳಬಹುದು. ಬೆಲೆ ೧ ರೂ. ಪೋಸ್ಟೇಜು ೪ ಆಣೆ.

**೮. ಛತ್ರಪತಿ-೧೯೧೯:** ಮೇಲೆ ಹೇಳಿದಂತೆ ಶಿವಾಜಿಯು ಬಹು ಆಯಕಟ್ಟಿನ ಸ್ಥಳವಾದ ಸಿಂಹಗಡವನ್ನು ಸ್ವಾಧೀನಪಡಿಸಿಕೊಂಡು ಅತಿ ಬಲಿಷ್ಠನಾಗಲು, ಇದನ್ನು ಔರಂಗಜೇಬ ಬಾದಶಹನು ಸೈರಿಸದೆ, ರಾಜಾ ಜಯಸಿಂಗನೆಂಬ ತನ್ನ ಬಲಾಢ್ಯ ರಜಪೂತ ಸರದಾರನನ್ನು ದೊಡ್ಡ ಸೈನ್ಯದೊಡನೆ ಶಿವಾಜಿಯ ಮೇಲೆ ಕಳಿಸಿದನು. ಆಗ ಶಿವಾಜಿಯು ದೂರ ಲಕ್ಷ ಕೊಟ್ಟು ಜಯಸಿಂಗನೊಡನೆ ಯುದ್ಧಮಾಡದೆ ಆತನ ಸೂಚನೆಯಂತೆ ದಿಲ್ಲಿಗೆ ಬಾದಶಹನನ್ನು ಕಾಣುವದಕ್ಕಾಗಿ ಹೋಗಲು, ಬಾದಶಹನು ಆತನನ್ನು ಸೆರೆಯಲ್ಲಿರಿಸಿದನು. ಆಗ ಶಿವಾಜಿಯು ತನ್ನ ಮಗ ಸಂಭಾಜಿಯೊಡನೆ ಪೆಟ್ಟಿಗೆಯಲ್ಲಿ ಮಲಗಿಕೊಂಡು ಹೇಗೆ ಪಾರಾಗಿ ಬಂದನೆಂಬದನ್ನು ಈ ಕಾದಂಬರಿಯಲ್ಲಿ ಮನೋಹರವಾಗಿ ವರ್ಣಿಸಿರುತ್ತದೆ. ಬೆಲೆ ೧ ರೂ. ಪೋ. ೪ ಆಣೆ.

**೯. ಗೃಹಕಲಹ-೧೯೨೧:** ಇದು ಶಿವಾಜಿ ಮಹಾರಾಜರ ಮರಣ ಪ್ರಸಂಗದ ಕಾದಂಬರಿಯು. ಅತ್ಯಂತ ಶೋಕ ಪರ್ಯವಸಾಯಿ. ಇದು ಗೃಹಕಲಹದ ದುಷ್ಪರಿಣಾಮ ವನ್ನು ಹೃದಯಭೇದಕವಾಗಿ ವ್ಯಕ್ತಪಡಿಸುವದು. ಇದು ಅತ್ಯಂತ ಲೋಕಪ್ರಿಯವಾಗಿರುವದು ಬೆಲೆ ೧ ರೂ. ಪೋ. ೪ ಆಣೆ.

**೧೦. ಶಿವಪ್ರಭುವಿನ ಪುಣ್ಯ-೧೯೧೮:** ಶಿವಾಜಿಯ ಮಗ ಸಂಭಾಜಿಯನ್ನು ಔರಂಗಜೇಬನು ಅತಿಕ್ರೂರತನದಿಂದ ಕೊಲ್ಲಿಸಿದ ಪ್ರಸಂಗವೂ, ಶಿವಾಜಿಯ ಚಿಕ್ಕ ಮಗ ರಾಜಾರಾಮನು ಪರಿಪರಿಯ ಕಷ್ಟಗಳನ್ನು ಅನುಭವಿಸಿ, ಅಣ್ಣನ ಕಾಲದಲ್ಲಿ ನಾಶವಾದಂತಾಗಿದ್ದ ಮಹಾರಾಷ್ಟ್ರ ರಾಜ್ಯವನ್ನು ಮತ್ತೆ ಸ್ಥಾಪಿಸಿದ ಪ್ರಸಂಗವೂ ಈ ಕಾದಂಬರಿಯಲ್ಲಿ ಬಹು ಹೃದಯಂಗಮವಾಗಿ ವರ್ಣಿಸಲ್ಪಟ್ಟಿರುವವು. ಬೆಲೆ ೧ ರೂ. ಪೋ. ೪ ಆಣೆ.

**೧೧. ಸ್ವರಾಜ್ಯಸುಗಂಧ-೧೯೩೮:** ಶಿವಾಜಿಯು ಆಗಲೇ ರಾಯಗಡದಲ್ಲಿ ಛತ್ರಪತಿಯಾಗಿ ಪಟ್ಟಾಭಿಷಿಕ್ತನಾಗಿದ್ದ. ದಿಲ್ಲಿಯ ಮತ್ತು ವಿಜಾಪುರ ಬಾದಶಹರ ವಶದಲ್ಲಿದ್ದ ಅನೇಕ ಕೋಟೆಗಳನ್ನು ಗೆದ್ದುಕೊಂಡು ತನ್ನ ರಾಜ್ಯವನ್ನು ವಿಸ್ತರಿಸಿದ್ದ. ಆದರೆ ಈಗ ಆತನ ದೃಷ್ಟಿಯು 'ಕಲ್ಯಾಣ' ಮತ್ತು 'ರಾಜಮಾಚಿ' ಎಂಬ ಎರಡು ಕೋಟೆಗಳ ಕಡೆಗೆ ಕೇಂದ್ರೀಕೃತವಾಗಿತ್ತು. ಈ ಕಾದಂಬರಿಯಲ್ಲಿ ಈ ಎರಡೂ ಕೋಟೆಗಳನ್ನು ಆತನ ಸರದಾರರು ವಶಪಡಿಸಿಕೊಂಡ ವಿಷಯ ನಿರೂಪಿತವಾಗಿದೆ.

**೧೨. ಕುರುಕ್ಷೇತ್ರ-೧೯೧೯:** ಗರ್ವವು ನಾಶಕರವಾದದ್ದು. ಪ್ರತಾಪಶಾಲಿಯಾದ ಪೇಶ್ವೆ ಭಾವುಸಾಹೇಬನ ಅತಿ ಗರ್ವದ ಬಾಧೆಯಿಂದ ಪ್ರಸಿದ್ಧ ಪಾನಿಪತ್ತದ ಕಾಳಗದಲ್ಲಿ ಪೇಶ್ವೆಯವರ ಉತ್ಕರ್ಷವು ಕುಗ್ಗಿದ ದುಃಖಕಾರಕ ಸಂಗತಿಯು ಈ ಕಾದಂಬರಿಯ ಯೋಗದಿಂದ ಬೋಧಪ್ರದವಾಗಿ ಗೊತ್ತಾಗುತ್ತದೆ. ಆದರೂ ಮಹಾರಾಷ್ಟ್ರದ ಪ್ರತಾಪವೂ, ಸಾಮರ್ಥ್ಯವೂ ಎಷ್ಟು ಘನತರವಾದವಿದ್ದವೆಂಬುದನ್ನು ಈ ಕಾದಂಬರಿಯು ತೋರಿಸದೆ ಇರುವದಿಲ್ಲ. ಬೆಲೆ ೧ ರೂ. ಪೋ. ೪ ಆಣೆ.

## ರಜಪೂತರಿಗೆ ಸಂಬಂಧಿಸಿದವು

**೧೩. ಕ್ಷಾತ್ರತೇಜ-೧೯೧೪:** ಈ ಐತಿಹಾಸಿಕ ಕಾದಂಬರಿಯಲ್ಲಿ ಔರಂಗಜೇಬನ ಹಾಗು ರಜಪೂತರ ಗುಣಸ್ವಭಾವಗಳು ಚಿತ್ತಾಕರ್ಷಣಪೂರ್ವಕವಾಗಿ ಗೊತ್ತಾಗುತ್ತವೆ. ಇದರಲ್ಲಿ ರೂಪಮತಿಯ ಕುಲೀನತೆ, ಇಂದಿರೆ-ಪದ್ಮೆ-ದುರ್ಗಾದಾಸ ಇವರ ಸ್ವಾಮಿನಿಷ್ಠೆ, ಚಂದ್ರಾವತೀರಾಣಿಯ ತೇಜಸ್ವಿತೆ, ವೈಕುಂಠಯೋಗಿಗಳ ನಿಸ್ಪೃಹತೆ, ಮೊದಲಾದವನ್ನು ಸಾಂಸಾರಿಕರಾದ ನಾವು ಲಕ್ಷಪೂರ್ವಕ ಅವಲೋಕಿಸಬಹುದಾಗಿದೆ. ಇದನ್ನು ಮುಂಬಯಿ ವಿದ್ಯಾಖಾತೆಯವರು ಮೆಟ್ರಿಕ್ಕಿಗೆ ಪಠ್ಯಪುಸ್ತಕವಾಗಿ ನಿಯಮಿಸಿದ್ದರು. ಬೆಲೆ ೧ ರೂ. ಪೋ. ೪ ಆಣೆ.

**೧೪. ಸತ್ವಸಾರ-೧೯೧೩:** ಇದೊಂದು ಸುಂದರವಾದ ಐತಿಹಾಸಿಕ ಕಾದಂಬರಿಯು. ಮೇವಾಡದ ಸುಪ್ರಸಿದ್ಧ ಮಹಾರಾಜಾ ಪ್ರತಾಪಸಿಂಹನು ಈ ೧೪ ಕಾದಂಬರಿಯ ನಾಯಕನಾಗಿದ್ದಾನೆ. ಮಹಾತ್ಮರ ಸತ್ವದಿಂದಲ್ಲದೆ ಕೇವಲ ದ್ರವ್ಯಾದಿ ಉಪಕರಣಗಳಿಂದ ಮಹಾಕಾರ್ಯಗಳು ಆಗುವದಿಲ್ಲವೆಂತಲೂ, ಸತ್ವಶಾಲಿಯನ್ನು ದ್ರವ್ಯವು ತಾನಾಗಿ ಹೊಂದುವದೆಂತಲೂ ಈ ಕಾದಂಬರಿಯು ಕಲಿಸುವದು. ಇದನ್ನು ಕನ್ನಡಿಗರು ಈ ಕಾಲದಲ್ಲಿ ಓದಿಯೇ ತೀರಬೇಕೆಂದು ಆಗ್ರಹದಿಂದ ಹೇಳುವೆನು. ಇದನ್ನು ಮುಂಬಯಿ ಯೂನಿವರ್ಸಿಟಿಯವರು ಟೆಕ್ಸ್ಟಬುಕ್ಕಾಗಿ ನಿಯಮಿಸಿದ್ದರು. ಬೆಲೆ ೧ ರೂ. ಪೋ. ೪ ಆಣೆ.

**೧೫. ತಿಲೋತ್ತಮೆ-೧೯೧೭:** ಇದೂ ಒಂದು ಐತಿಹಾಸಿಕ ಮನೋಹರ ಕಾದಂಬರಿಯೇ ಇರುತ್ತದೆ. ಈ ಕಾದಂಬರಿಯಲ್ಲಿಯ ಆಯೇಷೆ, ತಿಲೋತ್ತಮೆ, ಉಸ್ಮಾನ, ಜಗತ್ಸಿಂಗ ಮೊದಲಾದ ಸದ್ಗುಣಮಂಡಿತ ಪಾತ್ರಗಳ ಸಹವಾಸದಿಂದ ವಾಚಕರ ಹೃದಯವು ದ್ರವಿಸಿ ಅದರಲ್ಲಿ ಸದ್ಗುಣಗಳ ಅಂಕುರಗಳು ತೋರದೆ ಇರವು. ಬೆಲೆ ೧ ರೂ. ಪೋ. ೪ ಆಣೆ.

**೧೬. ಧಾರ್ಮಿಕತೇಜ-೧೯೨೮:** ಇದು ಅತ್ಯಂತ ಗೌರವದ ಮನೋಹರ ಐತಿಹಾಸಿಕ ಹೊಸ ಕಾದಂಬರಿಯು. ಛತ್ರಸಾಲನೆಂಬ ಪ್ರತಾಪಿಯಾದ ಕ್ಷತ್ರಿಯನು ಔರಂಗಜೇಬ ಬಾದಶಹನ ಕಾಲದಲ್ಲಿ ಬುಂದೇಲಖಂಡದ ಸ್ವಾತಂತ್ರ್ಯವನ್ನು ಸ್ಥಾಪಿಸಿದ ವೃತ್ತಾಂತವು ಬಹು ಗಂಭೀರವಾಗಿ ವರ್ಣಿಸಲ್ಪಟ್ಟಿರುತ್ತದೆ. ಪ್ರಾಣನಾಥ ಪ್ರಭುಗಳ ಮಹಿಮೆ ಯಲ್ಲಿಯೂ, ದಲಪತರಾಯ ಸಭಾಕರಣ-ಹೀರಾದೇವಿ-ಸುಫಲದೇವಿ-ಕಂಚುಕಿರಾಯ-ರಣದುಲ್ಲಾಖಾನ ಮೊದಲಾದ ನೀಚೋಚ್ಚ ಪಾತ್ರಗಳ ಚರಿತ್ರ ವಾಚನದಲ್ಲಿಯೂ ಮನಸ್ಸು ತೊಡಗಿಹೋಗವದು. ಬೆಲೆ ೧ ರೂ. ೮ ಆಣೆ. ಪೊ. ೫ ಆಣೆ.

**೧೭. ರಾಣಾ ರಾಜಸಿಂಹ-೧೯೨೮:** ಇದು ಔರಂಗಜೇಬನ ಕಾಲದ ಐತಿಹಾಸಿಕ ಹೊಸ ಕಾದಂಬರಿಯು. ಇದರಲ್ಲಿ ರಾಣಾ ರಾಜಸಿಂಹನ ಘನವಾದ ಯೋಗ್ಯತೆಯೂ, ಔರಂಗಜೇಬನ ಉದ್ದಾಮ ಮಹತ್ವಾಕಾಂಕ್ಷೆಯೂ, ಅನಂತಶರ್ಮರ ಸತ್ವವೂ, ಮೊಗಲ ಜನಾನಖಾನೆಯ ಸ್ಥಿತಿಯೂ ಚನ್ನಾಗಿ ಚಿತ್ರಿಸಿರುತ್ತದೆ. ಬೆಲೆ ೧೨ ಆಣೆ. ಪೋ. ೪ ಆ.

**ಸಂಕೀರ್ಣ ಕಾದಂಬರಿಗಳು**

**೧೮. ಪ್ರಬುದ್ಧ ಪದ್ಮನಯನೆ-೧೯೯೮:** ಇದೊಂದು ಕನ್ನಡಿಗರ ಪ್ರೀತಿಯ ಅತಿಮನೋಹರವಾದ ಸ್ವತಂತ್ರ ಕಾಲ್ಪನಿಕ ಕಾದಂಬರಿಯು. ಈವರೆಗೆ ಈ ಕಾದಂಬರಿಯು ಐದು ಆವೃತ್ತಿಗಳಾಗಿ ಹೋಗಿರುವವು. ಇದರ ಭಾಷಾಂತರವನ್ನು ಸಂಸ್ಕೃತದಲ್ಲಿ ಒಬ್ಬರು ಮಾಡಿರುವರು. ಹಳ್ಳಿಯ ಜನರು ಇದರ ಆಟಗಳನ್ನು ಕಟ್ಟಿ ಆಡಿರುವರು. ರಸಿಕರು ಅವಶ್ಯವಾಗಿ ಓದತಕ್ಕ ಕಾದಂಬರಿಯ ಬೆಲೆ ೧ ರೂ. ಪೋ. ೪ ಆಣೆ.

**೧೯. ರಾಣೀ ಮೃಣಾಲಿನಿ-೧೯೧೫:** ಇದಕ್ಕೆ ಈ ಹೊಸ ಆವೃತ್ತಿಯಲ್ಲಿ ಹೆಚ್ಚು ವಿಷಯವನ್ನು ಸೇರಿಸಿ ದೊಡ್ಡ ಪುಸ್ತಕವಾಗಿ ಮಾಡಿರುತ್ತದೆ. ಈ ಐತಿಹಾಸಿಕ ಕಾದಂಬರಿಯಾದರೂ ಅತ್ಯಂತ ಚಿತ್ತಾಕರ್ಷಕವಾಗಿರುವದು. ಇದರ ಸ್ವಾರಸ್ಯವೆಷ್ಟು, ಲಾಲಿತ್ಯವೆಷ್ಟು, ಗಾಂಭೀರ್ಯವೆಷ್ಟು! ಶಾಭಾಶ್! ಕಾದಂಬರಿಕಾರರಿದ್ದರೆ ಬಂಕೀಮಚಂದ್ರರಂಥ ಕಾದಂಬರಿಕಾರರಿರಬೇಕು! ಈ ಕಾದಂಬರಿಗೆ ಹೊಸದಾಗಿ ಜೋಡಿಸಿದ ವಿಷಯವು ಸ್ವತಂತ್ರವಾಗಿ ಬರೆದದ್ದು. ಬೆಲೆ ೧ ರೂ ೮ ಆಣೆ. ಪೋ ೫ ಆಣೆ.

**೨೦. ವೈಭವ-೧೯೧೨:** ಇದು ಚಾಣಕ್ಯ-ಚಂದ್ರಗುಪ್ತರಿಗೆ ಸಂಬಂಧಿಸಿದ ಅತಿ ಮನೋಹರವಾದ ಐತಿಹಾಸಿಕ ಕಾದಂಬರಿಯಾಗಿರುತ್ತದೆ. ಇದನ್ನು ಓದಲು ಕೈಯಲ್ಲಿ ತಕ್ಕೊಂಡವರು ಪೂರ್ಣವಾಗಿ ಮುಗಿಸದೆ ಕೆಳಗಿಡುವ ಹಾಗಿಲ್ಲೆಂದು ನಾವು ನಂಬಿಗೆಯಿಂದ ಹೇಳುವೆವು. ಕನ್ನಡ ಮುದ್ರಾಮಂಜೂಷಕ್ಕೂ ಇದಕ್ಕೂ ಏನೂ ಸಂಬಂಧವಿಲ್ಲ. ಬೆಲೆ ೧ ರೂ. ಪೋ. ೪ ಆಣೆ.

**೨೧. ಧರ್ಮರಹಸ್ಯ-೧೯೧೪:** ಇದೊಂದು ಗಂಭೀರ ವಿಚಾರದ ಐತಿಹಾಸಿಕ ಕಾದಂಬರಿಯಾಗಿರುತ್ತದೆ. ಅಶೋಕರಾಜ, ಚಿದಾನಂದಸ್ವಾಮಿ, ಜಿತೇಂದ್ರ, ಮೊಗ್ಗಲೀಪುತ್ರ ಮೊದಲಾದ ನೀಚೋಚ್ಚ ಪಾತ್ರಗಳ ವಕ್ರ-ಸರಲಗತಿಗಳೂ, ಅನುದಾತ್ತ-ಉದಾತ್ತ ಭಾವಗಳೂ ಎಷ್ಟು ಹೃದಯಂಗಮವಾಗಿ ವರ್ಣಿಸಲ್ಪಟ್ಟಿರುವವೆಂಬದನ್ನು ಬರೆಯಲಾರೆವು. ಈ ಪುಸ್ತಕವನ್ನು ಬರೆಯಲುಪಕ್ರಮಿಸಿದಾಗ ಹಲವು ಸಾರೆ ಕಣ್ಣೀರುಗಳು ಉದುರಿರುವವು. ಇದನ್ನು ಮೈಸೂರ ವಿದ್ಯಾಖಾತೆಯವರು ಮ್ಯೊಟ್ರಿಕ್ ಕ್ಲಾಸಿಗೆ ಪಠ್ಯಪುಸ್ತಕವಾಗಿ ನಿಯಮಿಸಿದ್ದರು. ಬೆಲೆ ೧ ರೂ. ಪೋ. ೪ ಆಣೆ.

**೨೨. ಸಂಸಾರ ಸುಖ-೧೯೨೬:** ಇದು ಅಕಬರಬಾದಶಹನಿಗೆ ಸಂಬಂಧಿಸಿದ ಕಾದಂಬರಿಯು. ಅಂತಹ ದೊಡ್ಡ ಬಾದಶಹನೆಂದರೇನು, ಕಡೆಗೆ ಸಂಸಾರದ ತಾಪದಿಂದ ಹಣ್ಣಾದನು. ಮಾನಸಿಂಹನ ಸೋದರಳಿಯನಾದ ಖುಸರುವಿನ ದುರ್ದೈವವನ್ನು ನೆನಿಸಿ ಮನಸ್ಸು ವಿಷಾದಪಡುವದು. ರಾಜ್ಯತೃಷ್ಣೆಯು ಎಷ್ಟು ಅನರ್ಥಕಾರಕವೆಂಬುದನ್ನು ಈ ಕಾದಂಬರಿಯು ತಿಳಿಸುತ್ತದೆ. ಬೆಲೆ ೧ ರೂ. ಪೋ. ೪ ಆಣೆ.



## ಇತರ ಕೃತಿಗಳು

| | | | |
|---|---|---|---|
| ೧. | ಪದ್ಯಾರ್ಥ ಸಾರ | – | ೧೮೯೭ |
| ೨. | ಲಘು ನಿಬಂಧ ಸಂಗ್ರಹ ಮತ್ತು ಪತ್ರವ್ಯವಹಾರ | – | ೧೮೯೯ |
| ೩. | ಚಿದಂಬರ ಚರಿತ್ರೆ | – | ೧೯೦೯ |
| ೪. | ನಿಬಂಧ ಶಿಕ್ಷಣ | – | ೧೯೧೦ |
| ೫. | ಗಿರಿಜಾ ಕಲ್ಯಾಣ ಸಾರ | – | ೧೯೧೧ |
| ೬ | ರಾಜನಿಷ್ಠೆಯು ನಮ್ಮ ಪುಣ್ಯಶಾಲಿಗಳಾದ ಸಾರ್ವಭೌಮರು | – | ೧೯೧೨ |
| ೭. | ದಾಂಪತ್ಯ | – | ೧೯೧೨ |
| ೮. | ಕುಟುಂಬ | – | ೧೯೧೩ |
| ೯. | ನಿರ್ಯಾಣ ಮಹೋತ್ಸವ | – | ೧೯೧೫ |
| ೧೦. | ಭಗವತೀ ಕಾತ್ಯಾಯಿನೀ | – | ೧೯೧೯ |
| ೧೧. | ಭಾಗವತಾಮೃತ | – | ೧೯೨೨ |
| ೧೨. | ಶೈವ ಸುಧಾರ್ಣವ | – | ೧೯೨೩ |
| ೧೩. | ರಾಮಾಯಣಾಮೃತ (ತುಲಸಿ ರಾಮಾಯಣ) | – | ೧೯೨೬ |
| ೧೪. | ಸದ್ಗುರು ಪ್ರಭಾವ | – | ೧೯೨೮ |
| ೧೫. | ಗೀತೆಯ ಶ್ರವಣಾಧಿಕಾರ | – | ೧೯೨೮ |
| ೧೬. | ವಿವೇಕಾನಂದರು ವೈದಿಕರಿಗೆ ಯಾರು? | – | ೧೯೨೮ |
| ೧೭. | ಮಹಾಭಾರತಾಮೃತ ಆದಿಪರ್ವ | – | ೧೯೩೧ |
| ೧೮. | ರಹಸ್ಯಗಳು | – | ೧೯೩೩ |
| ೧೯. | ಮಹಾಭಾರತಾಮೃತ–ಸಭಾಸದನ | – | ೧೯೩೩ |
| ೨೦. | ಕಲಿಕುಠಾರ ಅಥವಾ ಲೋಕಾಪುರಪೀಠ ಪ್ರಭಾವ ೨ನೇ ಭಾಗ | – | ೧೯೩೮ |
| ೨೧. | ನಳ ಚರಿತ್ರ | – | ೧೯೩೮ |
| ೨೨. | ವೀರ ಪ್ರತಾಪ ಅಥವಾ ಸ್ವಾಭಿಮಾನ ಸಂಭ್ರಮ | – | ೧೯೪೯ |
| ೨೩. | ಕಲಿಕುಠಾರ ಜ್ಞಾನಯೋಗ ಪ್ರಧಾನ ಖಂಡ | – | ೧೯೫೯ |
| ೨೪. | ಉತ್ತರ ರಾಮಚರಿತ್ರ ಸಾರ | – | ಸು. ೧೯೧೧ |
| ೨೫. | ಸಾಧು ಸದಾಶಿವ ಲೀಲೆ | – | ಸು. ೧೯೧೬ |
| ೨೬. | ಕನ್ಯಾ ಶಿಕ್ಷಕ | – | ಸು. ೧೯೨೦ |
| ೨೭. | ಬ್ರಾಹ್ಮಣ್ಯ ಪ್ರಾಪ್ತಿ ಸಾಧನೆ | – | ಸು. ೧೯೨೩ |
| ೨೮. | ಸುಂದರ ಲೇಖ ಸಮುಚ್ಚಯ | – | ಸು. ೧೯೨೮ |

---

ಆಧಾರ : ಗಳಗನಾಥರು ಮತ್ತು ಅವರ ಕಾದಂಬರಿಗಳು, ಕೃಷ್ಣಮೂರ್ತಿ ಕಿತ್ತೂರ
ಪ್ರ – ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ – ೧೯೭೮

# ಪ್ರಸ್ತಾವನೆ

ಶ್ರೀ ಸದ್ಗುರು ಕೃಪೆಯಿಂದಲೂ, ನಮ್ಮ ಸದಯಾಂತಃಕರಣದ ವಾಚಕರ ಉತ್ತೇಜನ ದಿಂದಲೂ ''ಈಶ್ವರಿಸೂತ್ರ''ವೆಂಬ ಹೆಸರಿನ ಐತಿಹಾಸಿಕ ಕಾದಂಬರಿಯು ಮುಗಿಯಿತು. ಇದು ಮ.ರಾ.ರಾ. ಹರಿ ನಾರಾಯಣ ಆಪಟೆಯವರ ''ಉಷಃಕಾಲ''ವೆಂಬ ಹೆಸರಿನ ಮರಾಠೀ ಕಾದಂಬರಿಯ ರುಚಿಕರಸಾರ ಶೋಷಣವಾಗಿರುತ್ತದೆ. ಸಾಂಸಾರಿಕ ಕಾರ್ಯಗಳಾಗಲಿ, ಸಾಮಾಜಿಕ ಕಾರ್ಯಗಳಾಗಲಿ, ರಾಜಕೀಯ ಕಾರ್ಯಗಳಾಗಲಿ, ಬೇರೆ ಯಾವ ಕಾರ್ಯಗಳೇ ಆಗಲಿ ಈಶ್ವರೀಸೂತ್ರದಿಂದಲೇ ಆಗುತ್ತವೆಂಬ ಮಾತಿನ ಅನುಭವವು, ಈ ಕಾದಂಬರಿ ಯಿಂದ ಚನ್ನಾಗಿ ಆಗುವಹಾಗಿರುವ ಕಾರಣ, ಇದಕ್ಕೆ ಈಶ್ವರೀಸೂತ್ರವೆಂಬ ಹೆಸರನ್ನು ಇಡಬೇಕಾಯಿತು. ಶಿವಾಜಿಯೆಂದರೆ, ಒಬ್ಬ ಪ್ರತಿಷ್ಠಿತ ಸರದಾರನ ಹಿರಿಯ ಹೆಂಡತಿಯ ಮಗನೆಂಬುದೇನೋ ನಿಜ; ಆದರೆ ಕಿರಿಯ ಹೆಂಡತಿಯ ಮೇಲೆ ಶಿವಾಜಿಯ ತಂದೆಯ ಪ್ರೇಮವು ವಿಶೇಷವಾಗಿದ್ದದ್ದರಿಂದ, ಶಿವಾಜಿಯು ತನ್ನ ತಾಯಿಯೊಡನೆ ಪುಣೆ ಪಟ್ಟಣದಲ್ಲಿ ಸರ್ವಸಾಧಾರಣ ಮನುಷ್ಯನಂತೆ ಇರಬೇಕಾಗಿತ್ತು. ಇದಲ್ಲದೆ, ಶಿವಾಜಿಯ ತಂದೆಯಾದ ಶಹಾಜರಾಜನು ವಿಜಾಪುರದ ಬಾದಶಹನ ಅತ್ಯಂತ ಸ್ವಾಮಿನಿಷ್ಠ ಸೇವಕನಾಗಿದ್ದರೆ, ಶಿವಾಜಿಯು ಮುಸಲ್ಮಾನರನ್ನು ಮನಮುಟ್ಟಿ ತಿರಸ್ಕರಿಸುವ ಲಂಡನಂತೆ ಇದ್ದನು; ಮತ್ತು ಶಹಾಜಿರಾಜನು ಸ್ವಾಮಿಸೇವೆಯಲ್ಲಿ ತತ್ಪರನಾಗಿದ್ದರೆ, ಶಿವಾಜಿಯು ತನ್ನ ಮನೆತನಕ್ಕೇ ಕುಂದನ್ನುಂಟುಮಾಡುವ ಕಳವು, ದರವಡೆ ಮೊದಲಾದ ಸ್ವಾಮಿ ದ್ರೋಹದ ಕೆಲಸಗಳಲ್ಲಿ ತತ್ಪರನಾಗಿದ್ದನು. ತಂದೆಮಕ್ಕಳ ಈ ವಿರುದ್ಧ ಸ್ವಭಾವದ ಮೂಲಕ, ಪರಸ್ಪರರಲ್ಲಿ ಪ್ರೇಮದ ಬಳಿಕೆಯಿದ್ದಿಲ್ಲೆಂದು ಸಾರ್ವತ್ರಿಕವಾದ ಅನುಭವದಿಂದ ಭಾವಿಸಿದರೆ ತಪ್ಪಾಗಲಿಕ್ಕಿಲ್ಲ. ತಂದೆಮಕ್ಕಳ ಈ ವಿರೋಧವೂ ಹೋಗಲಿ, ಶಿವಾಜಿಯ ಪುಂಡತನದ ಕಾಲದಲ್ಲಿ ಮುಸಲ್ಮಾನರು ದುರ್ಬಲರಾಗಿದ್ದರೆಂದು ಹೇಳಬೇಕೆಂದರೆ, ಉತ್ತರದಲ್ಲಿ ದಿಲ್ಲಿಯೊಳಗೆ ಔರಂಗಜೇಬನಂಥ ಬಲಿಷ್ಠನಾದ ಮಹತ್ವಾಕಾಂಕ್ಷಿ ಮೊಗಲ ಬಾದಶಹನು, ಹಿಂದಕ್ಕೆ ಯಾವ ಮುಸಲ್ಮಾನ ಬಾದಶಹರ ಕಾಲಕ್ಕೂ ಬೆಳೆಯದಷ್ಟು ಸಾಮ್ರಾಜ್ಯವನ್ನು ಬೆಳಸಿ, ಹಿಂದೂ ಜನರಿಗೆ ಶೂಲಪ್ರಾಯನಾಗಿ ಬಾಧಿಸುತ್ತಿದ್ದನು; ದಕ್ಷಿಣದಲ್ಲಿ ವಿಜಾಪುಗದ ಬಲಾಢ್ಯ ಬಾದಶಹನು ತನ್ನ ಸಾಮರ್ಥ್ಯದ ಮಬ್ಬಿನಿಂದ ನೆರೆ ಹೊರೆಯವರನ್ನು ಧಿಕ್ಕರಿಸುತ್ತ, ಪೃಥ್ವಿಯು ನಿರ್ವೀರವೆಂದು ತಿಳಿಯುವವನಂತೆ, ಗೋಲಗುಮುಟದಂಥ ಪ್ರಚಂಡವಾದ

ಮಸೀದೆಯನ್ನು ಕಟ್ಟಿಸುತ್ತ, ವಿಷಯ ಸುಖದಲ್ಲಿ ಲೊಲಾಡುತ್ತಿದ್ದನು. ಒಟ್ಟಿಗೆ, ಮುಸಲ್ಮಾನ ರೆಂಬ ವ್ಯಾಘ್ರಗಳ ಅಬ್ಬರದ ಈ ಕಾಲದಲ್ಲಿ, ಹಿಂದೂ ಜನರೆಂಬ ಕುರಿಗಳು, ತೃಣರರ್ಣ ಗಳಿಂದಲಾದರೂ ಸಮಾಧಾನದಿಂದ ಹೊಟ್ಟೆಯನ್ನು ತುಂಬಿಕೊಳ್ಳಲಾರದಷ್ಟು ಅಸ್ವಸ್ಥ ಚಿತ್ತವುಳ್ಳವಾಗಿದ್ದವೆಂದು ಹೇಳಬಹುದು. ಇದೂ ಇರಲಿ, ಶಿವಾಜಿಯ ಸಹಾಯಕರಾದ ಮಾವಳ ಜನರು ಕೇವಲ ಶೂರರೂ, ಧೈರ್ಯಶಾಲಿಗಳೂ, ಸುಶಿಕ್ಷಿತರೂ ಇದ್ದರೆಂದು ಹೇಳಬೇಕೆಂದರೆ, ಮಹಾರಾಷ್ಟ್ರದಲ್ಲಿ ಅವರನ್ನು ಹೋಲುವಂಥ ಹೇಡಿಗಳೂ, ಅಂಜುಬುರುಕರೂ, ಅಶಿಕ್ಷಿತರೂ ಆಗ್ಗೆ ಮತ್ತೊಬ್ಬರಿದ್ದಿಲ್ಲವೆಂದು ಪ್ರಸಿದ್ಧಿಯಿರುವದು. ಇಂಥ ಸ್ಥಿತಿಯಲ್ಲಿ ತಾಯಿ–ತಂದೆಗಳ ಮಾತು ಮೀರಿ ದಡ್ಡಿಯನ್ನು ಬಿಟ್ಟುಹೋದ ತುಂಟ ಮರಿಟಗರಿನಂತೆ ಇದ್ದ ಶಿವಾಜಿಯು, ಕುರಿಯ ಹಿಂಡನ್ನು ಹೋಲುವ ಮಾವಳರ ಸಹಾಯದಿಂದ, ಇಡಿ ಹಿಂದುಸ್ಥಾನವನ್ನೇ ತಮ್ಮ ಭಯಂಕರ ಗರ್ಜನೆಯಿಂದ ಗದಗುಟ್ಟಿನಡುಗಿಸಿದ ಮುಸಲ್ಮಾನ ವ್ಯಾಘ್ರಗಳನ್ನು ದಂಗುಬಡಿಸಿ ಸ್ವರಾಜ್ಯವನ್ನು ಸ್ಥಾಪಿಸಿ, ತಾನೂ, ತನ್ನ ಪರಿವಾರವೂ ಸತ್ವಾತಿಶಯದಿಂದ ಕ್ಷಣದಲ್ಲಿ ಸಿಂಹರೂಪವನ್ನು ಹೊಂದಿದ್ದು ಈಶ್ವರೀಸೂತ್ರದಿಂದಲೋ, ಕಾರ್ಯಕಾರಣದ ಭಾವದಿಂದಲೋ, ಎಂಬದನ್ನು ವಾಚಕರೇ ವಿಚಾರಿಸತಕ್ಕದ್ದು.

ಧರ್ಮಗ್ಲಾನಿಯಾಗಲು, ಜಗತ್ತುನಾಶದ ಪಂಥವನ್ನು ಹಿಡಿಯುವದರಿಂದ, ಅದರ ಉದ್ಧಾರಾರ್ಥವಾಗಿ "ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ। ಅಭ್ಯುತ್ಥಾನಮ ಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ" ಎಂದರೆ, ಧರ್ಮಗ್ಲಾನಿಯಾದಾಗೆಲ್ಲ ನಾನು ಅವತರಿಸುವೆನೆಂದು ಭಗವಂತನು ಗೀತೆಯಲ್ಲಿ ಹೇಳಿರುವನು. ಈ ಭಗವದುಕ್ತಿಯು ಹಿಂದೂ ಧರ್ಮದ ಮಟ್ಟಿಗೆ ಆಗಲಿ, ಹಿಂದುಸ್ಥಾನದ ಮಟ್ಟಿಗಾಗಲಿ ಇರುತ್ತದೆಂದು ನಾವಂತು ತಿಳಿಯುವದಿಲ್ಲ. ಜರೂಸಲೇಮದಲ್ಲಿ ಶ್ರೀ ಏಸೂಕ್ರಿಸ್ತನು ಅವತರಿಸಿದ್ದೂ, ಮಕ್ಕೆಯಲ್ಲಿ ಶ್ರೀಮಹಮ್ಮದ ಪೈಗಂಬರರು ಅವತರಿಸಿದ್ದೂ, ಅಯೋಧ್ಯೆಯಲ್ಲಿ ಶ್ರೀರಾಮನೂ, ದ್ವಾರಕೆಯಲ್ಲಿ ಶ್ರೀಕೃಷ್ಣನೂ ಅವತರಿಸಿದ್ದೂ, ಅದರಂತೆ ದೇಶ–ಕಾಲ–ಪರಿಸ್ಥಿತಿಗಳಿಗನುಸರಿಸಿ ಭಗವದವತಾರಗಳು ಅಲ್ಲಲ್ಲಿ ಯಾವಾಗಲೂ ಆಗುತ್ತಿರುವದೂ ಧರ್ಮರಕ್ಷಣಕ್ಕಾಗಿಯೇ ಎಂಬ ಜ್ಞಾನಿಗಳ ಬೋಧವನ್ನು ಎಲ್ಲರೂ ನಂಬಬಹುದಾಗಿದೆ. ಶಿವಾಜಿಯು ಹುಟ್ಟಿ ಕಾಲವು ಧರ್ಮಗ್ಲಾನಿಯದೇ ಇತ್ತು, ಧರ್ಮಗ್ಲಾನಿಯೆಂದರೆ, ಹಿಂದೂಧರ್ಮದ್ದೊಂದೇ ಗ್ಲಾನಿಯೆಂದು ನಾವು ಹೇಳುವದಿಲ್ಲ; ಹಿಂದೂಮುಸಲ್ಮಾನ ಧರ್ಮಗಳೆರಡರದೂ ಗ್ಲಾನಿಯೆಂದು ಹೇಳುವೆವು. ಹಿಂದು ಮುಸಲ್ಮಾನರಿಬ್ಬರೊಳಗೆ ಒಬ್ಬರಲ್ಲಾದರೂ ಧರ್ಮವಿದ್ದರೆ, ಅವರ ಸಹವಾಸ ಯೋಗದಿಂದ ಮತ್ತೊಬ್ಬರಲ್ಲಿ ಧರ್ಮವು ಉಳಿದು, ಭಗವಂತನು ಅವತಾರ ತಾಳುವ ಆಯಾಸಪಡಬೇಕಾಗಿದ್ದಿಲ್ಲ. ಯಾಕಂದರೆ, ಹಿಂದೂ–ಮುಸಲ್ಮಾನ ಧರ್ಮಗಳೆರಡೂ ಈಶ್ವರ ಪ್ರಣೀತಗಳೇ ಆದದ್ದರಿಂದ, ಅವುಗಳಲ್ಲಿ ಒಂದರ ಜಾಗ್ರತಿಯೂ ಜಗತ್ತಿನ ಸುರಕ್ಷಿತತೆಗೆ ಕಾರಣವಾಗಬಹುದಾಗಿತ್ತು; ಆದರೆ ಧರ್ಮಗ್ಲಾನಿಯ ಮುಖ್ಯ ಲಕ್ಷಣವಾದ ಬೀಜ

ಸ್ವಾರ್ಥಪರಾಯಣತೆಯೆಂಬ ಮಾಯೆಯು, ಅಥವಾ ಸೈತಾನವು ಕ್ರಮವಾಗಿ ಹಿಂದೂ–ಮುಸಲ್ಮಾನರಿಬ್ಬರನ್ನು ಮುಚ್ಚಿಹಾಕಿದ್ದರಿಂದ, ಇಬ್ಬರೂ ನಾಶದ ಪಂಥವನ್ನು ಹಿಡಿದಿದ್ದರು; ಅದರಿಂದಲೇ ಭಗವದವತಾರಕ್ಕೆ ಅನುವು ದೊರೆಯಿತು. ಪ್ರಿಯ ವಾಚಕರೇ, ಆಗ ಮುಸಲ್ಮಾನರು ಬಲಗರ್ವಿತರಾಗಿ ಅಹಂಕಾರದಿಂದ ಅನ್ಯರನ್ನು ಬಲಾತ್ಕರಿಸಿ ವಿಷಯ ಸುಖಗಳನ್ನು ಸೇವಿಸಿ ಗಟ್ಟಿಯಾಗಿ ಬಾಯಿ ಚಪ್ಪರಿಸುತ್ತಿದ್ದರೆ, ಹಿಂದೂ ಜನರು ಹೇಡಿಗಳಾಗಿ ನೀಚಸೇವೆಯಿಂದ ಕಳ್ಳರಂತೆ ವಿಷಯಸುಖಕ್ಕೆ ಜೋತು, ಹೊಟ್ಟೆಬೇನೆ ಹಚ್ಚಿಕೊಂಡು, ದೊರೆತ ವಿಷಯಗಳನ್ನು ಮುಸುಕಿನಲ್ಲಿ ಭೋಗಿಸಿ ಮೆಲ್ಲನೆ ಬಾಯಿ ಒರಿಸಿಕೊಳ್ಳುತ್ತಿದ್ದರು! ಇಂಥ ಧರ್ಮಗ್ಲಾನಿಯ ಕಾಲದಲ್ಲಿ ಈಶ್ವರೀಸೂತ್ರ ಚಾಲಕತ್ವದ ಅಧಿಕಾರವು ಗುರುಕೃಪೆಯಿಂದ ಶಿವಾಜಿಯಂಥ ಪುಣ್ಯವಂತನ ಕೈಸೇರಿದ್ದರಿಂದ, ಆತನು ಅವತಾರಿಕನೆಂದು ಹಿಂದೂ ಜನರಿಂದ ಹೊಗಳಿಸಿಕೊಂಡದ್ದರಲ್ಲಿ ಆಶ್ಚರ್ಯವೇನು?

ಆನಂದವನ<br>೬–೧೨–೧೩

ಕನ್ನಡಿಗರ ಸೇವಕ,<br>**ವೇ.ತಿ. ಕುಲಕರಣಿ, ಗಳಗನಾಥ**

# ಮಾರುತಿಯ ದೇವಾಲಯ

ಸನ್ 1645ನೇ ಇಸವಿಯ ಜುಲೈ ತಿಂಗಳ 8ನೇ ತಾರೀಖು, ಐದು ತಾಸು ರಾತ್ರಿಯಾಗಿದೆ. ಮೊದಲೇ ಕೃಷ್ಣಪಕ್ಷ, ಅದರಲ್ಲಿ ಮೋಡಗಳು ಆಕಾಶದಲ್ಲಿ ದಟ್ಟವಾಗಿ ಮುಸುಕಿದ್ದರಿಂದ, ನಕ್ಷತ್ರಗಳ ಪ್ರಕಾಶಕ್ಕೂ ಆಸ್ಪದವಿಲ್ಲದೆ ಹೋಗಿ, ಕಗ್ಗತ್ತಲೆಯು ಮುಸುಕಿದೆ. ಪ್ರಾಣಿಮಾತ್ರಗಳ ಸದ್ದು ಅಡಗಿ ಎಲ್ಲ ಕಡೆಯಲ್ಲಿಯಂತೆ ಸುಲ್ತಾನಗಡದಲ್ಲಿ ಶಾಂತಿಯ ಸಾಮ್ರಾಜ್ಯವು ಪ್ರಸ್ಥಾಪಿತವಾಗಿದೆ. ಅತ್ಯಂತ ಭದ್ರವಾದ ಆ ಪ್ರಸಿದ್ಧ ದುರ್ಗದ ಬಾಗಿಲುಗಳಲ್ಲಿಯೂ, ಕೊತ್ತಲುಗಳ ಮೇಲೆಯೂ ವಾಡಿಕೆಯಂತೆ ಕೆಲವು ಕಾವಲುಗಾರರು ಜಾಗರೂಕರಾಗಿ ಕುಳಿತುಕೊಂಡಿರುತ್ತಾರೆ, ಕೆಲವರು ಮಲಗಿಕೊಂಡಿರುತ್ತಾರೆ. ಗುಡ್ಡದಮೇಲೆ ಪಶ್ಚಿಮದ ಗಾಳಿಯು ಭರಗುಟ್ಟಿ ಬೀಸಿ ಜಡಿಮಳೆಯು ಸರುವುಗಟ್ಟಿ ಸುರಿಯಹತ್ತಿದ್ದರಿಂದ, ಮೊದಲೇ ಹೊರಗೆ ಬರಲಾರದ ಜನರು, ಎಚ್ಚರಿದ್ದರೂ ಮುಸುಕುಹಾಕಿಕೊಂಡು ಸುಮ್ಮನೆ ಮಲಗಿಕೊಂಡಿರುತ್ತಾರೆ. ಇಂಥ ಹೊತ್ತಿನಲ್ಲಿ ದುರ್ಗದ ಒಡೆಯನಾದ ರಂಗರಾವ ಅಪ್ಪಾ ಎಂಬ ವೃದ್ಧ ಕಿಲ್ಲೇದಾರನು ಕಣ್ಣಿಗ್ಗೆಕಣ್ಣು ಹಚ್ಚಿದ್ದಿಲ್ಲ. ಆತನು ಏಕಾಂತಗೃಹದಲ್ಲಿ ಒಬ್ಬನೇ ಚಿಂತಾಕ್ರಾಂತನಾಗಿ ಕುಳಿತುಕೊಂಡಿದ್ದನು. ಆತನ ತಲೆಗೂದಲುಗಳೆಲ್ಲ ಬೆಳ್ಳಗಾಗಿದ್ದವು. ಆತನ ಮುಖಮುದ್ರೆಯು ಭವ್ಯವಾಗಿತ್ತು ಮುಪ್ಪಿಗಿಂತಲೂ ಚಿಂತೆಯ ಲಕ್ಷಣವೇ ವಿಶೇಷವಾಗಿ ತೋರುತ್ತಿದ್ದ ಆ ಶೂರಪುರುಷನು, ಮೇಲೆ ಹೇಳಿದಂತೆ ಚಿಂತಾಕ್ರಾಂತನಾಗಿ ಕುಳಿತುಕೊಂಡಿದ್ದರೂ, ಮೂಲತಃ ಆತನು ಭವ್ಯನೂ, ತೇಜಸ್ವಿಯೂ, ಸೊಬಗಿನವನೂ ಇದ್ದನೆಂಬದು ನೋಡುವವರಿಗೆ ತಟ್ಟನೆ ಒಡೆದು ಕಾಣುತ್ತಿತ್ತು, ಆ ಕಾಲದ ಹಲವು ವೃದ್ಧ ಪುರುಷರು ಪ್ರತ್ಯಕ್ಷ ಜಮದಗ್ನಿಯ ಅವತಾರದಂತೆ ಇರುತ್ತಿದ್ದರು. ಅವರಿಗೆ ಸಿಟ್ಟು ಬಹಳ. ಅವರು ಒಂದೇ ಹಾದಿಯವರೂ, ಒಂದೇ ಮಾತಿನವರೂ, ದೃಢನಿಶ್ಚಯದವರೂ ಇದ್ದದ್ದರಿಂದ ಜನರು, ವಿಶೇಷವಾಗಿ ಅವರ ಕೈಕೆಳಗಿನ ಜನರು ಬಹಳ ಅಂಜಿ ನಡೆಯುತ್ತಿದ್ದರು. ಇಂಥ ಕ್ರಿಯಾವಂತ ಜನರಿಂದಲೇ ರಾಜಕಾರ್ಯಗಳಾಗಲಿ, ರಾಷ್ಟ್ರಕಾರ್ಯಗಳಾಗಲಿ ಜರುಗುತ್ತವೆಂಬದರಲ್ಲಿ ಸಂಶಯವಿಲ್ಲ, ಅರಸನು ಈಶ್ವರಾಂಶನೆಂಬರ್ಥದ ಸ್ಮೃತಿವಚನದಲ್ಲಿ ನಂಬಿಗೆ ಇದ್ದದ್ದರಿಂದ, ಆ ಕಾಲದ ವೃದ್ಧ ಜನರು ಅಕೃತ್ರಿಮ ಸ್ವಾಮಿನಿಷ್ಠರಾಗಿರುತ್ತಿದ್ದರು. ನಮ್ಮ ರಂಗರಾವ ಅಪ್ಪಾನು ಈ ಉಜ್ವಲ ಗುಣಗಳಿಂದ ಆಗಿನ ಕಾಲದ ವೃದ್ಧರಲ್ಲೆಲ್ಲ ಅಗ್ರೇಸರನಾಗಿದ್ದನೆಂದು ಹೇಳಬಹುದು!

ರಂಗರಾಯನು ವಿಜಾಪುರದ ಬಾದಶಹರ ಅಧಿಕಾರಕ್ಕೆ ಒಳಪಟ್ಟಿದ್ದನು. ಬಾದಶಹನಲ್ಲಿ ರಾಯನ ನಿಷ್ಠೆ ಬಹಳ. ತನ್ನ ಸ್ವಾಮಿಯು ಅನ್ಯಧರ್ಮದವನೆಂದು ರಂಗರಾಯನು ಎಷ್ಟು ಮಾತ್ರವೂ ಅಶ್ರದ್ಧೆಯನ್ನು ತಾಳುತ್ತಿದ್ದಿಲ್ಲ. ಇಲ್ಲದ ನಿಷ್ಠೆಯನ್ನು ಹೊರಗೆ ತೋರಿಸಿ, ಒಳಗೆ ಸ್ವಾಮಿದ್ರೋಹವೆಣಿಸುವ ಮಹಾಪಾತಕಕ್ಕೆ ಆತನ ಮನಸ್ಸು ಎಂದೂ ಹರಿಯುತ್ತಿದ್ದಿಲ್ಲ. ಸ್ವಾಮಿಯ ಹಿತಚಿಂತನವು ತನ್ನ ಧರ್ಮವೆಂತಲೂ, ಸ್ವಾಮಿಯ ಆಜ್ಞಾಪಾಲನವು ತನ್ನ ಕರ್ತವ್ಯವೆಂತಲೂ, ಸ್ವಾಮಿಯ ಕೃಪಾಸಂಪಾದನವು ಪರಮಪುರುಷಾರ್ಥವೆಂತಲೂ ಆತನು ತಿಳಿದಿದ್ದನು. ರಂಗರಾವ ಅಪ್ಪಾನು ಇಂತ ಗಟ್ಟಿಮನುಷ್ಯನಿದ್ದರೂ, ತನ್ನ ಮಗನಾದ ನಾನಾಸಾಹೇಬನ ಉನ್ಮತ್ತ ನಡತೆಯ ಚಿಂತೆಯಿಂದ ಹಣ್ಣಾಗಿದ್ದನು. ಈ ಕಾಲದಲ್ಲಿ ವಿಜಾಪುರದೊಳಗೆ ಮಹಮ್ಮದಶಹನೂ, ದಿಲ್ಲಿಯಲ್ಲಿ ಔರಂಗಜೇಬನೂ ಆಳುತ್ತಿದ್ದರು. ಮಹಮ್ಮದಶಹನು ನ್ಯಾಯಿಯೂ, ಗುಣಗ್ರಾಹಿಯೂ ಆದ ಬಾದಶಹನೆಂದೆನಿಸಿಕೊಂಡರೂ, ಆತನು ವಿಷಯಸುಖಕ್ಕೆ ಮೆಚ್ಚಿ, ಯಾವಾಗಲೂ ವಿಲಾಸ ಮಗ್ನನಾಗಿರುತ್ತಿದ್ದದ್ದರಿಂದ, ರಾಜ್ಯಕಾರಭಾರದಲ್ಲಿ ಬಲಿಷ್ಠರ ಕೈಯೇ ಮೇಲಾಗುತ್ತಿತ್ತು; ಒಮ್ಮೊಮ್ಮೆ ಅನೀತಿಯ ಜನರ ಬೆಳಕು ಬೀಳಲಿಕ್ಕೂ ಆಸ್ಪದವಿರುತ್ತಿತ್ತು. ತಂತ್ರಗಾರನಾದ ಔರಂಗಜೇಬನಂತೂ ಕೇವಲ ಧರ್ಮಾಭಿಮಾನಿಯಾಗಿದ್ದನು. ಆತನು ಹಿಂದೂ ಜನರನ್ನು ಕಂಡರೆ ಸೇರುತ್ತಿದ್ದಿಲ್ಲ. ಒಟ್ಟಿಗೆ ಉತ್ತರ ಹಿಂದುಸ್ಥಾನದಲ್ಲಿ ಔರಂಗಜೇಬನೂ, ದಕ್ಷಿಣಹಿಂದುಸ್ಥಾನದಲ್ಲಿ ಮಹಮ್ಮದಶಹನೂ ಮುಖ್ಯ ಬಾದಶಹರಾದ್ದರಿಂದ, ಅವರ ಅಧಿಕಾರಕ್ಕೊಳಪಟ್ಟ ಮುಸಲ್ಮಾನ ಸುಭೇದಾರರೂ, ಅಧಿಕಾರಿಗಳೂ ಪ್ರಬಲರಾಗಿ ಉನ್ಮತ್ತತನದಿಂದ ಹಿಂದೂ ಜನರನ್ನು ಪರಿಪರಿಯಾಗಿ ಪೀಡಿಸುತ್ತಿದ್ದರು. ಯಃಕಶ್ಚಿತ ಮುಸಲ್ಮಾನನು ಕೂಡ ದೊಡ್ಡ ದೊಡ್ಡ ಹಿಂದೂ ಗೃಹಸ್ಥರ ಮಾನಖಂಡನ ಮಾಡುತ್ತಿದ್ದನು. ಈ ಉನ್ಮತ್ತ ಆಳಿಕೆಯಲ್ಲಿ ಗೋಹತ್ಯವು ಮಿತಿಮೀರಿತು; ದೇವಾಲಯಗಳ ನಾಶಕ್ಕೆ ಪ್ರತಿಬಂಧವಿಲ್ಲದಾಯಿತು; ಹಿಂದುಗಳ ಧರ್ಮಕಾರ್ಯಗಳಿಗೆ ಅಡ್ಡಿಯು ಬರತೊಡಗಿತು; ಬ್ರಾಹ್ಮಣರ ಸ್ನಾನ–ಸಂಧ್ಯಾದಿ ಕರ್ಮಗಳು ಕೂಡ ನಿಶ್ಚಿಂತೆಯಿಂದ ನಡೆಯದಾದವು; ಸ್ತ್ರೀಯರ ಪಾತಿವ್ರತ್ಯದಲ್ಲಿಯೂ, ಜನರ ಐಶ್ವರ್ಯಾಧಿಕಾರಗಳಲ್ಲಿಯೂ ನಿಶ್ಚಯವು ಇಲ್ಲದಾಯಿತು. ಔರಂಗಜೇಬನು ಹಿಂದೂ ಜನರ ಮೇಲೆ ಹೊರಿಸಿದ ಜಿಜಿಯಾ ಎಂಬ ತಲೆಪಟ್ಟಿಯಿಂದ, ಹಾಗು ಮುಸಲ್ಮಾನರಾಗುವದಕ್ಕಾಗಿ ಆತನು ಮಾಡುವ ಒತ್ತಾಯ ದಿಂದ ಹಿಂದೂ ಜನರು ಹಣ್ಣಾದರು. ಒಟ್ಟಿಗೆ, ಘನವಂತನಾದ ಅಕಬರಬಾದಶಹನು ಸಂಪಾದಿಸಿದ ಹಿಂದೂ ಜನರ ಪ್ರೇಮವನ್ನೆಲ್ಲ ಕಳಕೊಂಡು, ಮುಸಲ್ಮಾನರು ಈಗ ಹಿಂದುಗಳ ಸಂತಾಪಕ್ಕೂ, ಶಾಪಕ್ಕೂ ಗುರಿಯಾಗಿದ್ದರು. ಹಿಂದೂಜನರಿಗೆ ರಕ್ಷಕರೇ ಇಲ್ಲದಾಗಿದ್ದರು. ಆ ಅನಾಥರು ತಮ್ಮನ್ನು ರಕ್ಷಿಸುವದಕ್ಕಾಗಿ ದೇವರಿಗೆ ಮೊರೆಯಿಡುತ್ತಲಿದ್ದರು. ಈ ದುಸ್ಥಿತಿಯನ್ನು ನೋಡಿ, ಎಷ್ಟೋ ಮಹಾರಾಷ್ಟ್ರ ತರುಣರ ಮನಸ್ಸು ತಳಮಳಿಸಹತ್ತಿತ್ತು; ಮುಸಲ್ಮಾನರ ವಿಷಯವಾಗಿ ಅವರಲ್ಲಿ ತಿರಸ್ಕಾರವು ಉತ್ಪನ್ನವಾಯಿತು; ಕೆಲವರಂತು ಮುಸಲ್ಮಾನರ ಮೇಲೆ ಬೆಂಕಿಯನ್ನು ಕಾರಹತ್ತಿದರು. ಹೀಗೆ ಬೆಂಕಿ ಕಾರುವವರಲ್ಲಿ ನಾನಾಸಾಹೇಬನು ಒಬ್ಬನಾಗಿದ್ದನು.

ನಾನಾಸಾಹೇಬನಿಗೆ ಇಪ್ಪತ್ತೈದು ವರ್ಷಗಳಾಗಿರಬಹುದು. ಆತನು ಮಹಾತೇಜಸ್ವಿಯು, ಅಪ್ರತಿಮವೀರನು, ಸುಂದರನು. ಆ ತರುಣನಿಗೆ ಅಂಜಿಕೆಯ ಸುದ್ದಿಯೇ ಗೊತ್ತಿದ್ದಿಲ್ಲೆಂದು ಹೇಳಬಹುದು. ತನ್ನಂತೆ ತನ್ನ ಮಗನು ರಾಜನಿಷ್ಠನಾಗಿ ವಿಜಾಪುರದ ಬಾದಶಹನ ಕೃಪೆಯಿಂದ ಉತ್ಕರ್ಷವನ್ನು ಪಡೆದು ಮನೆತನದ ಕೀರ್ತಿಯನ್ನು ಹೆಚ್ಚಿಸಬೇಕೆಂದು ರಂಗರಾವ ಅಪ್ಪಾನು ಬಯಸುತ್ತಿದ್ದನು; ಆದರೆ ಮುಸಲ್ಮಾನರ ಹೆಸರು ತಕ್ಕೊಂಡ ಕೂಡಲೆ ಬೆಂಕಿಯಾಗುತ್ತಿದ್ದ ಮಗನಿಂದ, ತಂದೆಯ ಈ ಬಯಕೆಯು ಹೇಗೆ ಪೂರ್ಣವಾಗಬೇಕು? ತನ್ನ ಇದ್ದ ಒಬ್ಬ ಮಗನು ಹೀಗೆ ತನ್ನ ಮನಸ್ಸಿನ ವಿರುದ್ಧವಾಗಿ ನಡೆಯಹತ್ತಿದ್ದರಿಂದ, ಆ ಸ್ವಾಮಿನಿಷ್ಠ ವೃದ್ಧನಿಗೆ ಹೃದ್ರೋಗವು ಹತ್ತಿದಂತಾಗಿತ್ತು. ಚಿಕ್ಕಂದಿನಲ್ಲಿ ಬೇಡಿದ್ದನ್ನು ಕೊಟ್ಟು, ಹೇಳಿದ ಹಾಗೆ ಕೇಳಿ, ಮಾಡಿದ ಹಾಗೆ ಸುಮ್ಮನಿದ್ದು ಅತ್ಯುತ್ತಮ ರೀತಿಯಿಂದ ವಿದ್ಯಾಬುದ್ಧಿಗಳನ್ನು ಕಲಿಸಿದ ಮಗನು, ತನ್ನ ಮಾತು ಕೇಳದ ಹಾಗಾದಾಗ ತಂದೆಗೆ ಎಷ್ಟು ವ್ಯಸನವಾಗುತ್ತಿರಬಹುದೆಂಬುದನ್ನು ಅನುಭವವಿಲ್ಲದವರಿಂದ ಹೇಳಲಿಕ್ಕಾಗುವದಿಲ್ಲ. ಈ ನಾನಾಸಾಹೇಬನಂತೆ, ಶಹಾಜಿರಾಜನ ಮಗನಾದ ಶಿವಾಜಿಯೆಂಬ ಹದಿನೆಂಟು ವರ್ಷದ ಹುಡುಗನು ಮುಸಲ್ಮಾರನ್ನು ದ್ವೇಷಿಸಹತ್ತಿ ಮಾವಳದ ಕೆಲವು ಓರಿಗೆಯ ಹುಡುಗರನ್ನೂ, ಕೆಲವು ತುಂಟ ತರುಣರನ್ನೂ ಕಟ್ಟಿಕೊಂಡು ವಿಜಾಪುರದ ರಾಜ್ಯದಲ್ಲಿ ಪುಂಡತನ ವನ್ನು ಮಾಡತೊಡಗಿದ್ದನು. ಹಾದಿಯ ಬಡಿಯುವದು, ದರೋಡೆಗಳನ್ನು ಮಾಡುವದು, ಸರಕಾರದ ಹಣವನ್ನು ಹಾದಿಯಲ್ಲಿ ಸುಲಿಯುವದು ಶಿವಾಜಿಯ ಆರಂಭದ ಕೆಲಸಗಳಾಗಿದ್ದವು. ಇಂಥ ನೀಚ ಕೆಲಸಗಳನ್ನು ಮಾಡುವ ಒಬ್ಬ ಪೋರನು, ಹೊಸ ರಾಜ್ಯ ಸ್ಥಾಪಿಸುವನೆಂದು ಹೇಳುತ್ತಿರುವದನ್ನು ಹುಡುಗಾಟಿಕೆಯ ಮಾತೆಂದು ತಿಳಿದು, ಕಂಡವರು ಕಂಡ ಹಾಗೆ ಶಿವಾಜಿಯನ್ನು ಆಡಿಕೊಳ್ಳಹತ್ತಿದರು. ಶಹಾಜಿರಾಜನು ಅತ್ಯಂತ ರಾಜನಿಷ್ಠನು. ವಿಜಾಪುರದ ಪ್ರಸಿದ್ಧ ಸರದಾರರಲ್ಲಿ ಆತನು ಒಬ್ಬನಾಗಿದ್ದು, ಬಾದಶಹನ ಪೂರ್ಣ ಕೃಪೆಗೆ ಪಾತ್ರನಾಗಿದ್ದನು. ಅಂಥವನು ಮಗನ ಪುಂಡಾಟಿಕೆಗೆ ಹೇಗೆ ಸೇರಬೇಕು? ತಂದೆಯಾದ ಶಹಾಜಿಯೂ, ತಾಯಿ ಯಾದ ಜೀಜಾಬಾಯಿಯೂ, ಗುರುವಾದ ದಾದೋಜಿಕೊಂಡದೇವನೂ ಎಷ್ಟು ಬೋಧಿಸಿದರೂ ಶಿವಾಜಿಯ ಮನಸ್ಸು ತಿರುಗಲಿಲ್ಲ. ಬರಬರುತ್ತ ಅವನಲ್ಲಿ ಮುಸಲ್ಮಾನರ ವಿಷಯವಾದ ದ್ವೇಷವು ಹೆಚ್ಚಹತ್ತಿತು. ಮಹಾ ತೇಜಸ್ವಿಯಾದ ಆ ಅಲೌಕಿಕ ತರುಣನ ಸವಿಮಾತುಗಳಿಗೂ, ಪರಾಕ್ರಮದ ಕೃತಿಗಳಿಗೂ ಮರುಳಾಗಿ, ಎಷ್ಟೋ ತಲೆತಿರುಗಿದ ತರುಣರು ಆತನನ್ನು ಕೂಡಿಕೊಂಡರು. ದಿನದಿನಕ್ಕೆ ಪುಂಡರ ತಂಡವು ಹೆಚ್ಚಿ, ಪುಂಡಾಟಿಕೆಯ ಕಾಟವು ಬಲಿಯಿತು. ಶಿವಾಜಿಯ ಈ ರಾಜದ್ರೋಹದ ಕೃತಿಯು ಬಾದಶಹನ ಕಿವಿಯವರೆಗೆ ಹೋಗಿ, ಅದರಿಂದ ಶಹಾಜಿರಾಜನ ಮೇಲಿನ ಬಾದಶಹನ ವಿಶ್ವಾಸವು ಕಡಿಮೆಯಾಗಹತ್ತಿತು. ಇದರಂತೆ ಎಷ್ಟೋ ಮಹಾರಾಷ್ಟ್ರ ಸರದಾರರೂ, ಕಿಲ್ಲೇದಾರರೂ, ಸಂಸ್ಥಾನಿಕರೂ ತಮ್ಮ ಮಕ್ಕಳು ಶಿವಾಜಿಯನ್ನು ಕೂಡಿಕೊಂಡದ್ದ ರಿಂದ ಬಾದಶಹನ ವಿಶ್ವಾಸವನ್ನು ಕಳಕೊಂಡರು. ಅವರಂತೆ ತನ್ನ ಗತಿಯೂ ಆಗಿ, ರಾಜದ್ರೋಹಿಯೆಂಬ ಕಲಂಕಕ್ಕೆ ತಾನು ಎಲ್ಲಿ ಗುರಿಯಾಗುವೆನೋ ಎಂದು ಸ್ವಾಮಿನಿಷ್ಠನಾದ ರಂಗರಾವ ಅಪ್ಪಾನು ಚಿಂತಿಸುತ್ತಿದ್ದನು.

ನಾನಾಸಾಹೇಬನು ಎಷ್ಟು ದಿಟ್ಟನಿದ್ದರೂ, ಆತನಿಗೆ ತಂದೆಯ ಮುಂದೆ ನಿಂತು ಮಾತಾಡುವ ಧೈರ್ಯವಿದ್ದಿಲ್ಲ. ಬಾದಶಹನಿಗೆ ಹೇಳಿಕೊಂಡು ದರ್ಬಾರದಲ್ಲಿ ಒಂದು ಚಾಕರಿಯನ್ನು ಕೊಡಿಸಿದರೆ, ಮಗನು ಹಾದಿಗೆ ಬಂದಾನೆಂದು ಆ ಸ್ವಾಮಿಭಕ್ತನು ನೆನಿಸಿದನು. ನಾನಾಸಾಹೇಬನ ಪರಾಕ್ರಮದ ಸುದ್ದಿಯು ಬಾದಶಹನ ಕಿವಿಗೆ ಮುಟ್ಟಿದಂತೆ, ಶಿವಾಜಿಯ ಹಾಗೆ ನಾನಾಸಾಹೇಬನೂ ಮುಸಲ್ಮಾನರನ್ನು ದ್ವೇಷಿಸುತ್ತಾನೆಂಬ ಸುದ್ದಿಯೂ ಬಾದಶಹನ ಕಿವಿಗೆ ಮುಟ್ಟಿತು. ಆದ್ದರಿಂದ ಬಾದಶಹನು ನಿಜವಾದ ಸಂಗತಿಯನ್ನು ಅರಿತುಕೊಳ್ಳುವದಕ್ಕಾಗಿ ನಾನಾಸಾಹೇಬನಿಗೆ ಬಹುಮಾನದ ಉಡುಗೊರೆಗಳನ್ನು ಕೊಟ್ಟು, ಆತನನ್ನು ದರ್ಬಾರಕ್ಕೆ ಕಳಿಸಬೇಕೆಂಬರ್ಥದ ಪತ್ರವನ್ನು ಬರೆದು ರಂಗರಾಯನ ಕಡೆಗೆ ಕಳಿಸಿದನು. ಬಾದಶಹನು ಪತ್ರದಲ್ಲಿ—"ನಿಮ್ಮ ನಾನಾಸಾಹೇಬರು ಈಗ ದೊಡ್ಡವರಾಗಿರುವರು. ಅವರ ಪರಾಕ್ರಮದ ಸುದ್ದಿಗಳನ್ನು ನಾವು ಕೇಳಿದ್ದೇವೆ; ಆದ್ದರಿಂದ ಒಂದೆರಡು, ವರ್ಷ ದರ್ಬಾರದಲ್ಲಿದ್ದು ಹುಜೂರಿನ ಸೇವೆ ಮಾಡುವದಕ್ಕಾಗಿ ಅವರನ್ನು ಈ ಪತ್ರ ಕಂಡಕೂಡಲೆ ಕಳಿಸತಕ್ಕದ್ದು" ಎಂದು ಬರೆದಿದ್ದನು. ಇದರಿಂದ ಆ ವೃದ್ಧ ಕಿಲ್ಲೇದಾರನಿಗೆ ಬಹಳ ಸಂಭ್ರಮವಾಯಿತು. ಇಷ್ಟು ದಿವಸ ಮಾಡಿದ ಸ್ವಾಮಿಸೇವೆಯು ಸಫಲವಾಯಿತೆಂದು ಆತನು ಆನಂದಪಟ್ಟನು. ಆದರೆ ಮಗನ ಹಟಮಾರಿ ತನದ ನೆನಪಾಗಲು, ಆತನು ಉಸಿರ್ಗಳೆದು ಬಗೆಬಗೆಯಾಗಿ ಆಲೋಚಿಸತೊಡಗಿದನು. ಮಗನು ಎಟ್ಟಿತನದಿಂದ ದರ್ಬಾರಕ್ಕೆ ಹೋಗಲು ಅಸಮ್ಮತಿಸಿದರೆ, ಏನು ಮಾಡಬೇಕೆಂಬದು ಆತನಿಗೆ ತಿಳಿಯದಾಯಿತು. ಮಗನನ್ನು ಏಕಾಂತದಲ್ಲಿ ಕರೆಸಿಕೊಂಡು, ಬಾದಶಹನಿಂದ ಬಂದ ಬಹುಮಾನದ ಉಡುಗರೆಯನ್ನು ತೋರಿಸಿ, ಬಾದಶಹನ ಕೃಪೆಯಿಂದಾಗಬಹುದಾದ ಉತ್ಕರ್ಷವನ್ನು ವರ್ಣಿಸಿ ಮಗನ ಮನಸ್ಸು ತಿರುಗಿಸಲಿಕ್ಕೆ ಆತನು ಹಾತೊರೆಯಹತ್ತಿದನು; ಆದರೆ ತಟ್ಟನೆ ಮಗನನ್ನು ಕರೆಸುವ ಧೈರ್ಯವು ಆತನಿಗೆ ಆಗಲೊಲ್ಲದು. ಸಂಜೆಯ ಊಟವಾದ ಬಳಿಕ, ಈಗ ಕರಿಸಬೇಕು—ಆಗ ಕರಿಸಬೇಕು ಅನ್ನುವದರೊಳಗೆ ಐದು ತಾಸು ರಾತ್ರಿಯಾಗಿ ಹೋಯಿತು. ಕಡೆಗೆ ರಂಗರಾಯನು ಸುಭಾನನೆಂಬ ಸೇವಕನನ್ನು ಕರೆದು, ನಾನಾಸಾಹೇಬನನ್ನು ಕರೆತಾರೆಂದು ಆಜ್ಞಾಪಿಸಿದನು. ಕೂಡಲೆ ಸುಭಾನನು ತನ್ನ ಚಿಕ್ಕ ಯಜಮಾನನ ಮಲಗುವ ಕೋಣೆಗೆ ಹೋಗಿ ಆತನನ್ನು ಎಬ್ಬಿಸಿ, ದೊಡ್ಡ ಸಾಹೇಬರು ಕರೆಯುತ್ತಾರೆಂದು ಹೇಳಿದನು; ಆದರೆ ನಾನಾಸಾಹೇಬನು ಬೇಗನೆ ಬರಲಿಲ್ಲ. ಮೂರು ನಾಲ್ಕು ಸಾರೆ ಆಗ್ರಹದಿಂದ ಕರೆಕಳುಹಿದ ಬಳಿಕ ಆತನು ತಂದೆಯ ಬಳಿಗೆ ಬಂದು ತಲೆಬಾಗಿ ನಿಂತುಕೊಂಡನು. ಆಗ ಬಾದಶಹನು ಕಳುಹಿದ ಸೊಬಗಿನ ಪೋಷಾಕನ್ನು ರಂಗರಾಯನು ಮಗನಿಗೆ ತೋರಿಸಿ, ಓದಿ ನೋಡೆಂದು ಬಾದಶಹನ ಪತ್ರವನ್ನು ಆತನ ಕೈಯಲ್ಲಿ ಕೊಟ್ಟನು. ಪೋಷಾಕನ್ನು ನೋಡಿದ ಕೂಡಲೆ ನಾನಾಸಾಹೇಬನ ಹುಬ್ಬುಗಳು ಗಂಟಿಕ್ಕಿದವು. ಪತ್ರವನ್ನು ಓದಿದ ಕೂಡಲೆ ಆತನ ಸರ್ವಾಂಗವು ಕೆಂಪಗಾಯಿತು: ತುಟಿಗಳು ನಡುಗಹತ್ತಿದವು; ಆತನ ಸಂತಾಪದ ಲಕ್ಷಣಗಳು ಸ್ಪಷ್ಟವಾಗಿ ತೋರಹತ್ತಿದವು. ಅಷ್ಟರಲ್ಲಿ ರಂಗರಾಯನು ಮಗನಿಗೆ—"ನೋಡಿದೆಯಾ ಪೋಷಾಕನ್ನು? ಓದಿದೆಯಾ ಪತ್ರವನ್ನು?

ಇನ್ನು ಒಂದೆರಡು ದಿನಗಳಲ್ಲಿ ನೀನು ವಿಜಾಪುರಕ್ಕೆ ಹೋಗಲೇಬೇಕು. ಬಾದಶಹನ ಅಪ್ಪಣೆಯನ್ನು ಶಿರಸಾವಮಾನ್ಯಮಾಡಲೇಬೇಕು. ನಾವು ಎಷ್ಟೋ ತಲೆಗಳಿಂದ ಬಾದಶಹನ ಅನ್ನವನ್ನು ಉಣ್ಣುತ್ತ ಬಂದಿದ್ದೇವೆ,'' ಎಂದು ಹೇಳುತ್ತಿರಲು, ನಾನಾಸಾಹೇಬನು ಸಿಟ್ಟಿನಿಂದ ಹುಚ್ಚಾದನು. ಬಾದಶಹನ ದರ್ಬಾರದ ಮಾತು ತೆಗೆದ ಕೂಡಲೆ ನಾನಾಸಾಹೇಬನಿಗೆ ಸಂತಾಪವಾಗುತ್ತಿತ್ತು, ಮೊಗಲರ ವಿಷಯವಾಗಿ ತಿರಸ್ಕಾರವನ್ನು ತೋರಿಸುವದು ಆತನ ಸ್ವಭಾವಗುಣವೇ ಆಗಿತ್ತೆಂದು ಹೇಳಬಹುದು. ಆದರೆ ಇಂದಿನಷ್ಟು ಸಂತಾಪವು ಆತನಿಗೆ ಎಂದೂ ಆಗಿದ್ದಿಲ್ಲ. ಆತನ ಬಾಯಿಂದ ಅಕ್ಷರಗಳು ಹೊರಡದಾದವು. ಪಿಟ್ಟೆಂದು ಮಾತಾಡದೆ ಕೆಳಗೆ ಮೋರೆಮಾಡಿಕೊಂಡು ಸುಮ್ಮನೆ ಆತನು ನಿಂತುಬಿಟ್ಟನು.

ಮಗನು ಹೀಗೆ ಸುಮ್ಮನೆ ನಿಂತದ್ದನ್ನು ನೋಡಿ ರಂಗರಾಯನು—''ನಾನಾ, ಯಾಕೆ? ಮಾತಾಡಲೊಲ್ಲೆ? ಇನ್ನು ನಾಲ್ಕು ದಿನಗಳಲ್ಲಿ ವಿಜಾಪುರಕ್ಕೆ ಹೋಗುವೆಯಷ್ಟೆ? ಮುಹೂರ್ತವನ್ನು ನೋಡಲೋ? ಗುರುವಾರ ಮುಹೂರ್ತವು ನೆಟ್ಟಗಿರುವದು. ನೋಡು, ನಾನು ಇಂದಿನವರೆಗೆ ಎಷ್ಟೋ ಸಾರೆ ನಿನಗೆ ಹೇಳುತ್ತ ಬಂದರೂ, ನನ್ನ ಮಾತನ್ನು ನೀನು ಲೆಕ್ಕಿಸಲಿಲ್ಲ. ಹುಡುಗ ತನವೆಂದು ನಾನೂ ಅಷ್ಟು ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ; ಆದರೆ ಈಗ ಮಾತ್ರ ಹಾಗೆ ಮಾಡಲಾಗದು ನೋಡು. ಈಗ ನೀನು ದೊಡ್ಡವನಾದೆ. ನಿನ್ನ ಹಿತಾಹಿತಗಳು ನಿನಗೆ ತಿಳಿಯಹತ್ತಿವೆ. ಇನ್ನು ನೀನು ರಾಜ್ಯಕಾರಭಾರದಲ್ಲಿ ಮನಸ್ಸು ಹಾಕಬೇಕು; ದರ್ಬಾರಕ್ಕೆ ಹೋಗಬೇಕು–ಬರಬೇಕು; ಬಹುದಿವಸ ಬಾದಶಹನ ಅನ್ನವನ್ನು ಉಂಡ ನಾವು, ಬಾದಶಹನಿಗೆ ಎರಡನ್ನು ಎಣಿಸಲಾಗದು; ದ್ರೋಹವನ್ನು ಬಗೆಯಲಾಗದು. ನಾನಾ, ನಾನು ಇಷ್ಟು ಹೇಳಿದರೂ ಒಂದು ತುಟಿ ಎರಡು ಮಾಡಲೊಲ್ಲೆಯಲ್ಲ? ಯಾಕೆ ಸುಮ್ಮನಿರುವೆ? ನಿನ್ನ ಮನಸ್ಸಿನಲ್ಲಿರು ವದಾದರೂ ಏನು?'' ಅನ್ನಲು, ನಾನಾಸಾಹೇಬನು—''ಅಪ್ಪಾ, ನಾನು ಏನು ಮಾತಾಡಲಿ? ನನ್ನ ಮನಸ್ಸಿನಲ್ಲಿದ್ದದ್ದನ್ನು ಈ ಮೊದಲೇ ಎಷ್ಟೋ ಸಾರೆ ಹೇಳಿದ್ದೇನೆ. ಬೇಕಾದರೆ ಈಗೂ ಹಾಗೆಯೇ ಹೇಳುವೆನು. ನಾನು ದುಷ್ಟ ಬಾದಶಹನ ದರ್ಬಾರಕ್ಕೆ ಎಂದೂ ಹೋಗುವದಿಲ್ಲ, ಅವನಿಗೆ ಕುರ್ನಿಸಾತವನ್ನು ಮಾಡುವದಿಲ್ಲ, ಆತನ ಹಸ್ತಸ್ಪರ್ಶವಾದ ಕೂಡಲೆ ನನ್ನ...'' ಎಂದು ನುಡಿಯುತ್ತಿರಲು, ರಂಗರಾಯನ ಸರ್ವಾಂಗವು ಸಂತಾಪದಿಂದ ನಡುಗ ಹತ್ತಿತು. ಆತನು ಕ್ರೋಧಾವೇಶದಿಂದ ಮಗನಿಗೆ—''ಎಲೈ ಅಧಮಾಧಮನೇ, ನೀನು ಕುಲಕಂಟಕನು. ವಂಶದ ಕೀರ್ತಿಯನ್ನು ಮುಣುಗಿಸುತ್ತೀ. ಈವೊತ್ತಿನವರೆಗೆ ಬಾದಶಹನ ಅನ್ನದಿಂದ ಬೆಳೆದ ನಿನ್ನ ದೇಹವನ್ನು, ಬಾದಶಹನ ಸೇವೆಯಲ್ಲಿ ಸವಿಸದೆ ಸ್ವಾಮಿದ್ರೋಹವನ್ನು ಚಿಂತಿಸುವೆಯಾ? ಇಷ್ಟು ದಿವಸ ಸಣ್ಣವನೆಂದು ಕೈಕಾದೆನು. ಇನ್ನು ನೀನು ನನ್ನ ಕಣ್ಣಿಗೆ ಬೀಳಬೇಡ. ಎಲೈ ತುಂಟ ಪೋರಾ, ನಿನ್ನ ಪಿಂಡವು ಯಾರ ಅನ್ನದಿಂದ ಬೆಳೆದಿರುವದು? ನೀನು ದಿನಾಲು ಉಣ್ಣುವ ಅನ್ನವು ಯಾರದು? ನಡೆ, ನನ್ನೆದುರಿಗೆ ನಿಲ್ಲಬೇಡ. ಇನ್ನು ನನಗೆ ಮೋರೆ ತೋರಿಸಿದರೆ ನಿನ್ನ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲ! ತಿರುಗಿ ನಿನ್ನ ಹೆಸರನ್ನು ಕೂಡ ನಾನು ಬಾಯಿಂದ ಉಚ್ಚರಿಸಲಿಕ್ಕಿಲ್ಲ; ನಿನ್ನಂಥ ಪುತ್ರನನ್ನು ನಾನು

ಹಡೆಯುವದಕ್ಕಿಂತ, ನಿಪುತ್ರಕನಾಗಿದ್ದರೆ ಪರಿಣಾಮವಾಗುತ್ತಿತ್ತು. ಇದ್ದ ಒಬ್ಬ ಮಗನು, ಬಾದಶಹನ ಚಾಕರಿಯನ್ನು ಮಾಡಿ ಏನಾದರೂ ಕೀರ್ತಿಯನ್ನು ಸಂಪಾದಿಸಬಹುದೆಂದು ತಿಳಿದಿದ್ದೆನು; ಆದರೆ ವ್ಯರ್ಥವು. ನಾನು ಅಂಥ ಪುಣ್ಯವನ್ನೇ ಮಾಡಿಲ್ಲ, ನೀನಾದರೂ ಏನು ಮಾಡೀ? ಹೋಗು, ಇಂದಿನಿಂದ ನಮ್ಮ ಪರಸ್ಪರ ಋಣಾನುಬಂಧವು ಕಡಿಯಿತೆಂದು ತಿಳಿ. ನಿನ್ನ ಸಲುವಾಗಿ ನನ್ನ ಮೋರೆಗೆ ದೂರದಿಂದ ಮಸಿ ಹತ್ತಿದರೆ ಹತ್ತಲಿ, ನೀನು ನನ್ನ ಹತ್ತರ ಬೇಡ,'' ಎಂದು ನುಡಿಯುತ್ತಿರಲು, ಸಂತಾಪದ ಭರದೊಳಗೆ ಕಣ್ಣಲ್ಲಿ ಕತ್ತಲುಗೂಡಿಸಿದಂತಾಗಿ ಆತನು ದಪ್ಪನೆ ನೆಲಕ್ಕೆ ಬಿದ್ದನು. ಆಗ ನಾನಾಸಾಹೇಬನು ಓಡಿಹೋಗಿ ನೀರು ತಂದು ತಂದೆಯನ್ನು ಉಪಚರಿಸಿದನು; ಆದರೆ ರಂಗರಾಯನು ಕಣ್ದೆರೆದು ನೋಡವಷ್ಟರಲ್ಲಿ ನಾನಾಸಾಹೇಬನು ಹೊರಟುಹೋಗಿದ್ದನು.

ತಂದೆಯ ಕಠೋರವಮಾತುಗಳು ನಾನಾಸಾಹೇಬನ ಮನಸ್ಸನ್ನು ಬಹಳವಾಗಿ ನೋಯಿಸಿದವು. ಇನ್ನು ಮನೆಯಲ್ಲಿದ್ದು ತಂದೆಗೆ ಅಪಕೀರ್ತಿ ಕೊಡುವದು ಸರಿಯಲ್ಲೆಂದು ತಿಳಿದು, ಆತನು ಅದೇ ಕಾಲದಲ್ಲಿ ಅಶ್ವಶಾಲೆಗೆ ಹೋಗಿ ತನ್ನ ಪ್ರೀತಿಯ ಕುದುರೆಗೆ ತಡಿಹಾಕಿದನು; ಮನೆಯಲ್ಲಿ ಯಾರಿಗೂ ಹೇಳಲಿಲ್ಲ, ಕೇಳಲಿಲ್ಲ; ತನ್ನ ಖಡ್ಗವನ್ನೊಂದು ತಕ್ಕೊಂಡು, ತೊಟ್ಟ ಅಂಗಿ–ಸುತ್ತಿದ ಸೆಲ್ಲೆಯಿಂದ ಕುದುರೆಯನ್ನು ಹತ್ತಿ ಮಧ್ಯರಾತ್ರಿ ಯಲ್ಲಿಯೇ ಮಾರ್ಗವನ್ನು ಹಿಡಿದುಸಾಗಿದನು. ಬಹುದಿವಸದಿಂದ ತನ್ನ ಮನಸ್ಸಿನಲ್ಲಿದ್ದಂತೆ, ಶಹಾಜಿರಾಯನ ಮಗನಾದ ಶಿವಾಜಿಯನ್ನು ಕೂಡಿಕೊಳ್ಳಬೇಕೆಂದು ಆತನು ಹೊರಟು ದಿನಾಲು ರಾತ್ರಿ ಹಾದಿಯನ್ನು ನಡೆಯುತ್ತಿದ್ದನು. ಒಂದು ದಿನ ಪುಣೆಯಿಂದ ಸಾಸವಡಕ್ಕೆ ಹೋಗುವ ಹಾದಿಯಲ್ಲಿ ಅವನ ಕುದುರೆಯು ಸಾಗಿತ್ತು. ಆಗ ಒಂದೇ ಸವನೆ ಮಳೆ ಸುರಿಯುತ್ತಿದ್ದದ್ದರಿಂದ, ನಾನಾಸಾಹೇಬನು ತಪ್ಪನೆ ತೊಯಿಸಿಕೊಂಡಿದ್ದನು. ಸಂಕೇತ ಸ್ಥಾನವನ್ನು ಮುಟ್ಟಿ ಹಿಂಡಿನಲ್ಲಿ ಯಾವಾಗ ಕೂಡಿಕೊಂಡೇನೆಂಬ ಆತುರದಿಂದ, ಕತ್ತಲಲ್ಲಿ ಕುದುರೆ ಮುಗ್ಗರಿಸಿ ಬಿದ್ದೀತೆಂಬ ಅರಿವು ಇಲ್ಲದೆ, ಆತನು ವೇಗದಿಂದ ಸಾಗಿದ್ದನು. ಹೀಗೆ ಆ ಮಹಾರಾಷ್ಟ್ರ ತರುಣನು ಭಯಂಕರವಾದ ರಾತ್ರಿಯಲ್ಲಿ ಒಬ್ಬನೇ ಸಾಗಿರಲು, ಕುದುರೆಗಳ ಕೊಳಗಗಳ ಸಪ್ಪಳವು ಕೇಳಿಸಿದಂತೆ ಆತನಿಗೆ ಭಾಸವಾಯಿತು. ಕಿವಿಗೊಟ್ಟು ಕೇಳುತ್ತಿರಲು, ಸಪ್ಪಳವು ಸ್ಪಷ್ಟವಾಗಿ ಕೇಳಹತ್ತಿತು. ಬರಬರುತ್ತ ಕುದುರೆಗಳನ್ನೇರಿದ ನಾಲ್ವರು ಮುಸಲ್ಮಾನ ರಾಹುತರು ಆತನ ಸಮೀಪಕ್ಕೆ ಬಂದರು. ರಾಹುತರಾದರೂ ಮಳೆಗೆ ಬೆದರದೆ ನಾನಾಸಾಹೇಬನನ್ನು ಬೆನ್ನಟ್ಟಿ ಬಂದದ್ದರಿಂದ ಅವರೂ ಪೂರ್ಣವಾಗಿ ತೊಯಿಸಿಕೊಂಡಿದ್ದರು. ಅವರು ಮೇಲೆ ಮೇಲೆ ತಮ್ಮ ಮೋರೆಯ ಮೇಲೆ ಕೈಯೆಳೆದು, ಗಡ್ಡಗಳನ್ನು ಹಿಂಡಿ ಕೈಕೊಡವಿ ನೀರನ್ನು ಕೆಡವುತ್ತಿದ್ದರು. ಈ ಮೊದಲು ತನ್ನ ಅಳವಿನೊಳಗೆ ಸಿಕ್ಕ ಎಷ್ಟೋ ಮುಸಲ್ಮಾನರನ್ನು, ಅವರ ಉದ್ಧಟತನಕ್ಕಾಗಿ ನಾನಾಸಾಹೇಬನು ತುಂಡರಿಸಿದ್ದರಿಂದ, ಮುಸಲ್ಮಾನರು ನಾನಾಸಾಹೇಬನ ಜೀವವನ್ನು ಹಿಂಡುವದಕ್ಕಾಗಿ ಹೊಂಚುಹಾಕಿಕೊಂಡು ಕುಳಿತದ್ದರಲ್ಲಿ ಆಶ್ಚರ್ಯವೇನು ಇಲ್ಲ. ಮಧ್ಯರಾತ್ರಿಯಲ್ಲಿ ನಾನಾಸಾಹೇಬನು ಮಾರ್ಗಕ್ರಮಿಸುತ್ತಿದ್ದದ್ದು

ಆ ಮುಸಲ್ಮಾನರಿಗೆ ಹೇಗೆ ತಿಳಿಯಿತೋ ದೇವರಿಗೇ ಗೊತ್ತು! ಅವರು ನಾನಾಸಾಹೇಬನ ಸೇಡು ತೀರಿಸಿಕೊಳ್ಳುವದಕ್ಕಾಗಿ ಅತಿವೇಗದಿಂದ ಅವನ ಬೆನ್ನಟ್ಟಿ ಬಂದಿದ್ದರು. ಮುಸಲ್ಮಾನರು ಕಣ್ಣಿಗೆ ಬಿದ್ದಕೂಡಲೆ ನಾನಾಸಾಹೇಬನ ಹುಬ್ಬುಗಳು ಗಂಟಿಕ್ಕಿದವು. ಅವನ ಸರ್ವಾಂಗವು ತಪ್ತವಾಯಿತು. ಆತನು ತನ್ನ ಖಡ್ಗವನ್ನು ಕೈಯಲ್ಲಿ ಗಟ್ಟಿಯಾಗಿ ಹಿಡಕೊಂಡು ಕುದುರೆಯನ್ನು ಒತ್ತರದಿಂದ ಮುಂದಕ್ಕೆ ನೂಕಿದನು; ಆದರೆ ಆತನಿಗೆ ಮತ್ತೇನು ತಿಳಿಯಿತೋ ಏನೋ, ಕುದುರೆಯನ್ನು ಹಿಂದಕ್ಕೆ ತಿರುಗಿಸಬೇಕೆಂದು ಅದರ ಕಡಿವಾಣವನ್ನು ಜಗ್ಗಿದನು. ಇದರಿಂದ ಕುದುರೆಗೆ, ತಾನು ಮುಂದಕ್ಕೆ ಸಾಗಬೇಕೆಂಬದೂ ತಿಳಿಯಲೊಲ್ಲದು, ಹೀಗೆ ಗುದ್ದಾಟ ನಡೆದಿರುವಾಗ, ಕುದುರೆಯು ಒಮ್ಮೆಲೆ ಬೆದರಿ ನಾನಾಸಾಹೇಬನನ್ನು ಅಸುಗೊಳ್ಳದೆ ಮನಸ್ಸಿಗೆ ಬಂದ ಕಡೆಗೆ ಓಡಹತ್ತಿತ್ತು, ಅದನ್ನು ನೋಡಿ, ಮುಸಲ್ಮಾನರು ಕುದುರೆಗಳೂ ಬೆದರಿ ದಿಕ್ಕುಗೊಂದು ಓಡತೊಡಗಿದವು. ಅವುಗಳಲ್ಲಿ ಒಬ್ಬನ ಕುದುರೆಯು ನಾನಾಸಾಹೇಬನ ಕುದುರೆಯ ಮುಂದೆ ಓಡಹತ್ತಿತ್ತು. ಉಳಿದವರ ಕುದುರೆಗಳು ಎತ್ತೋ ಹೋಗಿಬಿಟ್ಟವು. ನಾನಾಸಾಹೇಬನು ತನ್ನ ಮುಂದ ಓಡುತ್ತಿರುವ ಮುಸಲ್ಮಾನ ರಾವುತನ ಸಮಾಚಾರವನ್ನು ತಕ್ಕೊಳ್ಳುವದಕ್ಕಾಗಿ ಖಡ್ಗವನ್ನು ನೆಗಹಿ ಒತ್ತರದಿಂದ ಕುದುರೆಯನ್ನು ಓಡಿಸುತ್ತಿರಲು, ಮುಂದಿನ ಕುದುರೆಯು ಒಂದು ಮರದ ಕೊಂಬೆಯನ್ನು ತಡಹಾಯ್ದು ನೆಲಕ್ಕೆ ಬಿದ್ದಿತು. ಮೇಲೆ ಕುಳಿತವನು ಒತ್ತಟ್ಟಿಗೆ ಸಿಡಿದುಬಿದ್ದನು. ನಾನಾಸಾಹೇಬನೂ ಅದೇ ಹಾದಿಯನ್ನು ಹಿಡಿಯತಕ್ಕವನು; ಆದರೆ ಆತನ ಕುದುರೆಯು ತನ್ನ ಮುಂದೆ ಆಕಸ್ಮಿಕವಾಗಿ ಬಿದ್ದ ಕುದುರೆಯನ್ನು ನೋಡಿ ಬೆದರಿ ಮತ್ತೊಂದು ಕಡೆಗೆ ಓಡಹತ್ತಿದ್ದರಿಂದ, ಆತನು ಗಂಡಾಂತರದಿಂದ ಪಾರಾದನು.

ಬೆದರಿದ ತನ್ನ ಕುದುರೆಯನ್ನು ನಿಲ್ಲಿಸುವದು ನಾನಾಸಾಹೇಬನಿಗೆ ತೀರಾ ಅಶಕ್ಯವಾಯಿತು. ಹೋದತ್ತ ಹೋಗಲೆಂದು ಆತನು ಕುದುರೆಯ ಮೇಲೆ ಗಟ್ಟಿಯಾಗಿ ಕುಳಿತುಕೊಂಡುಬಿಟ್ಟನು. ಕುದುರೆಯು ಓಡಿ ಓಡಿ ದಣಿದು ತಾನೇ ಅಂಕಿತಕ್ಕೆ ಬಂದಿತು. ಆಗ ನಾನಾಸಾಹೇಬನು ಅದರ ಕುತ್ತಿಗೆಯನ್ನು ಚಪ್ಪರಿಸಿ—''ಝೋಂಡ್ಯಾ, ಮಗನೇ, ಬೆದರಿ ಕೈಗೆ ಸಿಕ್ಕ ಬೇಟೆಯನ್ನು ಕಳಕೊಂಡೆಯಾ? ಆಗಲಿ, ಇನ್ನು ಹೀಗೆ ಹುಡುಗಾಟಿಕೆ ಮಾಡಬೇಡ. ಬೆದರಿ ಯಾವ ಕಡೆಗೆ ಬಂದೆಯೋ ಏನೋ, ದಿಕ್ಕು ತಪ್ಪಿಹೋಯಿತು, ಇಂದು ನೀನು ಬಹಳವಾಗಿ ದಣಕೊಂಡಿರುತ್ತೀ. ನಡೆ, ಅಲ್ಲಿ ದೂರ ದೀಪವು ಕಾಣುತ್ತದೆ; ಅಲ್ಲಿ ಹೋಗಿ ವಿಶ್ರಾಂತಿಯನ್ನು ಹೊಂದೋಣ,'' ಎಂದು ನುಡಿದು, ಚುಚುಕರಿಸಿ, ಮತ್ತೊಮ್ಮೆ ಕುತ್ತಿಗೆಯನ್ನು ಚಪ್ಪರಿಸಿ, ಅದರ ಮೋರೆಯನ್ನು ಮೇಲೆ ಮಾಡಿ ಚುಂಬಿಸಿದನು. ತಮ್ಮ ಕುದುರೆಗಳ ಮೇಲೆ ಮಹಾರಾಷ್ಟ್ರರ ಪ್ರೇಮ ಬಹಳವೆಂಬ ಮಾತಿನ ಸತ್ಯತೆಯು ಇದರಿಂದ ತೋರಬಹುದಾಗಿದೆ. ಒಡೆಯನು ತನ್ನನ್ನು ಈ ಪರಿ ರಮಿಸಿದ್ದರಿಂದ ಕುದುರೆಯು ಹುರುಪುಗೊಂಡು ಬುರುಗುಟ್ಟುತ್ತ ಕಡಿವಾಣವನ್ನು ಕಡಿಯುತ್ತ ಗೋಣು ಓರೆ ಮಾಡಿಕೊಂಡು ಲುಟುಲುಟು ನಡೆಯತೊಡಗಿತು. ಸ್ವಲ್ಪ ಹೊತ್ತಿನಲ್ಲಿ ನಾನಾಸಾಹೇಬನು ಬೆಳಕು ಕಾಣುತ್ತಿದ್ದಲ್ಲಿಗೆ ಮುಟ್ಟಿದನು. ಅಲ್ಲಿ ಒಂದು ಸಣ್ಣ

ದೇವಾಲಯವಿದ್ದು, ಅದರ ಅಂಗಳದ ಎರಡೂ ಮಗ್ಗಲು ಎರಡು ದೊಡ್ಡ ಗೋರೆವಿಯ ಕಟ್ಟಿಗೆಗಳು ಉರಿದುರಿದು ಈಗ ತೀರಾ ಶಾಂತವಾಗತೊಡಗಿದ್ದವು. ನಾನಾಸಾಹೇಬನು ಗುಡಿಯ ಅಂಗಳದಲ್ಲಿ ಕುದುರೆಯನ್ನು ಇಳಿದು ಅತ್ತಿತ್ತ ನೋಡಿದನು; ಆದರೆ ಆತನಿಗೆ ಮನುಷ್ಯರ ಸುಳವು ಸರ್ವಥಾ ಕಾಣಸಲಿಲ್ಲ. ಆತನು ಗುಡಿಯ ಬಾಗಿಲಿಗೆ ಹೋಗಿ ಒಳಗೆ ಹಣಿಕಿ ನೋಡಿದನು. ಎದುರಿಗೆ ಮಾರುತಿಯ ಭವ್ಯಮೂರ್ತಿಯ ಹೊರತು ಏನೂ ಕಾಣಸಲಿಲ್ಲ. ಮೂರ್ತಿಯ ಮುಂದೆ ಆದೇ ಒಡೆದ ಕಾಯಿಯ ಪರಟಿಯೂ ಕೊಬ್ಬರಿಯ ಸಣ್ಣ ಸಣ್ಣ ಚೂರೂ ಇದ್ದವು. ನಾನಾಸಾಹೇಬನು ಬೇಸತ್ತು ಅಲ್ಲಿಯೇ ಮಾರುತಿಯ ಎದುರಿಗೆ ಗುಡಿಯಲ್ಲಿ ಅಡ್ಡಾದನು. ಆತನ ಕುದುರೆಯು ಹೊರಗೆ ಕಟ್ಟಿತ್ತು. ನಾನಾಸಾಹೇಬನು ಹೀಗೆ ಅಡ್ಡಾಗಿ ಸ್ವಲ್ಪ ವಿಶ್ರಾಂತಿಯನ್ನು ಪಡೆಯುತ್ತಿರಲು, ಆತನ ಬುಡಕ್ಕೆ ಭೂಮಿಯ ಗರ್ಭದಲ್ಲಿ ಯಾರೋ ನಗುತ್ತಿರುವಂತೆಯೂ, ಮಾತಾಡುತ್ತಿರುವಂತೆಯೂ ಭಾಸವಾಯಿತು!

## ಗುಪ್ತಗುಹೆ

ಗುಡಿಯ ಒಳಗೂ ಹೊರಗೂ ಎಲ್ಲಿಯೂ ಮನುಷ್ಯರ ಸುಳವು ಇಲ್ಲದೆ, ಯಾರೋ ಮಾತಾಡಿದಂತೆಯೂ, ನಕ್ಕಂತೆಯೂ ಕೇಳಿಸಿದ್ದರಿಂದ, ನಾನಾಸಾಹೇಬನಿಗೆ ಬಹಳ ಆಶ್ಚರ್ಯವಾಯಿತು. ಹೊರಗೆ ಯಾರಾದರೂ ಮಾತಾಡಿರಬಹುದೆಂದು ತಿಳಿದು, ಆತನು ಗುಡಿಯ ಹೊರಗೆ ಹೋಗಿ, ಗುಡಿಯ ಸುತ್ತು ಪ್ರದಕ್ಷಿಣೆಮಾಡಿ, ನಡುನಡುವೆ ಅಲ್ಲಲ್ಲಿ ನಿಂತು ಕಿವಿಗೊಟ್ಟು, ಸಪ್ಪಳವನ್ನು ಕೇಳಿದನು; ಆದರೆ ಹೊರಗೆ ಕಟ್ಟಿದ್ದ ತನ್ನ ಕುದುರೆಯು ಭುರಗುಟ್ಟುವ ಸಪ್ಪಳವೂ, ಅಂಗಳದಲ್ಲಿ ಉರಿಯುತ್ತಿದ್ದ ಗೊರವಿಯ ಕಟ್ಟಿಗೆಯ ಬೆಂಕಿಯ ಮೇಲೆ ಗಾಳಿಗೆ ಸಿಡಿಯುವ ನೀರಹನಿಗಳ ಚಿರುಗುಟ್ಟುವ ಸಪ್ಪಳವೂ ಹೊರತಾಗಿ ಬೇರೆ ಸಪ್ಪಳಗಳು ಆತನಿಗೆ ಕೇಳಿಸದಾದವು. ಆತನು ಮತ್ತೆ ಗುಡಿಯೊಳಗೆ ಬಂದನು. ಗುಡಿಯ ಒಂದು ಮೂಲೆಯ ನೆಲಒಲೆಯಲ್ಲಿ ಬೂದಿ ಮುಚ್ಚಿದ ಕೆಂಡದ ರಾಶಿಯಿದ್ದು ಅದರಲ್ಲಿ ಒಂದು ಕೊರಡು ಸಾವಕಾಶವಾಗಿ ಹೊತ್ತುತ್ತಿತ್ತು. ಆ ಒಲೆಯ ಬಳಿಯಲ್ಲಿ ನಾಲ್ಕು ಕೊರಡು ಗಳೂ, ಎರಡು ಚಿಲಿಮೆಗಳೂ, ಒಂದು ತಂಡಾಸವೂ, ಒಂದು ತಂಬಿಗೆಯೂ ಇದ್ದವು. ಅವುಗಳ ಕಡೆಗೆ ನಾನಾಸಾಹೇಬನ ಲಕ್ಷ್ಯವು ಹೋಗಲಿಲ್ಲ. ಆತನು ಗುಡಿಯ ಗೋಡೆಗಳ ಮೇಲೆ ಕೈಯಾಡಿಸುತ್ತ ಸುತ್ತಮುತ್ತು ತಿರುಗಿ ಕಿವಿಗೊಟ್ಟು, ಸಪ್ಪಳವನ್ನು ಕೇಳಿದನು; ಆದರೆ ಮೊದಲಿನ ಸಪ್ಪಳವು ತಿರುಗಿ ಆತನ ಕಿವಿಗೆ ಬೀಳಲಿಲ್ಲ. ಆತನು ಮತ್ತೆ ಗುಡಿಯ ನೆಲಕ್ಕೆ ಕಿವಿಯಾನಿಸಿ ಸಪ್ಪಳವನ್ನು ಕೇಳಿದನು; ಅದರಿಂದಲೂ ಪ್ರಯೋಜನವಾಗಲಿಲ್ಲ. ಅವನು ಮತ್ತೆ ಎದ್ದು ಮೂರ್ತಿಯ ಸುತ್ತು ಮುತ್ತು ನೋಡಿದನು—ಕಿವಿಗೊಟ್ಟು, ಸಪ್ಪಳವನ್ನು ಕೇಳಿದನು; ಆದರೆ ಫಲವೇನೂ ಆಗಲಿಲ್ಲ; ಅದರಿಂದ ತಾನು ಕೇಳಿದ್ದು ಸಪ್ಪಳವಿರಲಿಕ್ಕಿಲ್ಲೆಂದು ಆತನು

ಸಮಾಧಾನ ಮಾಡಿಕೊಳ್ಳಹತ್ತಿದನು. ತನ್ನ ಚಿತ್ತವು ವ್ಯಗ್ರವಾಗಿರುವದರಿಂದ ಏನೋ ಸ್ವಪ್ನಳವಾದಂತೆ ಭಾಸವಾಗಿರಬಹುದೆಂದು ತಿಳಿದು, ಗುಡಿಯಲ್ಲಿ ಅಡ್ಡಾಗಿ ಮೂರ್ತಿಯನ್ನು ದಿಟ್ಟಿಸಿ ನೋಡಹತ್ತಿದನು, ಅಷ್ಟರಲ್ಲಿ ಆ ಮಾರುತಿಯ ಪ್ರತಿಮೆಯು ತನ್ನ ಸ್ಥಳಬಿಟ್ಟು ಮೆಲ್ಲಗೆ ಮುಂದಕ್ಕೆ ಸರಿದು ಬರತೊಡಗಿತು. ಅದನ್ನು ನೋಡಿದ ಕೂಡಲೆ ನಾನಾಸಾಹೇಬನು ಬೆಚ್ಚಿಬಿದ್ದು—"ಎಲಾ! ಇದೇನು?" ಎಂದು ಮಲಗಿದವನು ಚಟ್ಟನೆ ಎದ್ದು ನಿಂತು ಕೊಂಡನು. ನೂರಾರು ವರ್ಷಗಳಿಂದ ಸಿಂದೂರವನ್ನು ಬಳಕೊಂಡು ಸ್ಥಿರವಾಗಿ ಇದ್ದ ಪ್ರತಿಮೆಯು, ಎಡಕ್ಕೆ ಬಲಕ್ಕೆ ಜೋಲಿಕೊಡದೆ, ಮುಂದಕ್ಕೆ ಮುಗ್ಗರಿಸದೆ ಮೆಲ್ಲಗೆ ಸರಿದು ಬರುವದನ್ನು ನೋಡಿ, ಮಧ್ಯರಾತ್ರಿಯಲ್ಲಿ ಅಡವಿಯೊಳಗೆ ಯಾವನು ಹೆದರಲಿಕ್ಕಿಲ್ಲ! ನಾನಾಸಾಹೇಬನು ಕಣ್ಣುಕೆಕ್ಕರಿಸಿ ಮೂರ್ತಿಯನ್ನು ನೋಡುತ್ತ, ಖಡ್ಗವನ್ನು ಮುಷ್ಟಿಯಲ್ಲಿ ಗಟ್ಟಿಯಾಗಿ ಹಿಡಕೊಂಡನು. ಮೂರ್ತಿಯು ಸಜೀವವಾಗಿರಬಹುದೋ? ಭೂತಚೇಷ್ಟೆ ಯಾಗಿರಬಹುದೋ? ಛೆ! ಛೆ! ದೇವರ ಬಳಿಯಲ್ಲಿ ಭೂತಗಳ ಚೇಷ್ಟೆ ನಡೆಯಬಹುದೆ? ಹಾಗಾದರೆ ಮಾರುತಿಯ ಪವಿತ್ರವಾದ ಮೂರ್ತಿಯನ್ನು ಯಾರು ಸರಿಸುತ್ತಿರಬಹುದು? ಎಂಬಿವೇ ಮೊದಲಾದ ಪ್ರಶ್ನೆಗಳನ್ನು ತನ್ನೊಳಗೆ ತಾನು ಮಾಡಿಕೊಳ್ಳುತ್ತ ಬೆರಗಾಗಿ ನಿಂತುಕೊಂಡಿದ್ದನು. ಮೂರ್ತಿಯ ಬಳಿಯಲ್ಲಿ ಹೋಗಿ ನೋಡುವ ಧೈರ್ಯವು ಅವನಿಗಾಗಲೊಲ್ಲದು. ಹೊರಗಿನ ಗೊರವಿಯ ಕಟ್ಟಿಗೆಯನ್ನು ತಂದು ನೋಡಬೇಕೆಂದು ಯೋಚಿಸುವಷ್ಟರಲ್ಲಿ ಒಂದು ಕಟ್ಟಿಗೆಯು ಯಾವಾಗಲೋ ಆರಿ ಹೋಗಿತ್ತು, ಇನ್ನೊಂದು ಕಟ್ಟಿಗೆಯು ಅದೇ ನಂದಿ, ಹೊಗೆಯಿಡಗಿದ್ದರಿಂದ ಬೆಳಕು ದೊರೆಯುವ ಆಶೆಯು ತೋರಲಿಲ್ಲ, ನಾನಾ ಸಾಹೇಬನು ಏನೇನೋ ಯೋಚಿಸುತ್ತ ನಿಂತಿರಲು ಮಾರುತಿಯ ಪ್ರತಿಮೆಯ ಹಿಂದೆ ಬೆಳಕು ಕಾಣಿಸಹತ್ತಿತ್ತು, ಆಗ ಆತನು ಇದೇನು ಚಮತ್ಕಾರವೋ, ಪರೀಕ್ಷಿಸಿಯೇ ತೀರಬೇಕೆಂದು ಧೈರ್ಯಮಾಡಿ, ಖಡ್ಗವನ್ನು ಗಟ್ಟಿಯಾಗಿ ಹಿಡಿದು ಮುಂದಕ್ಕೆ ಸಾಗಿ ಮಾರುತಿಯ ಹೆಗಲ ಮೇಲಿಂದ ಹಣಿಕಿ ನೋಡಿದನು. ಪ್ರತಿಮೆಯು ತನ್ನ ಸ್ಥಳಬಿಟ್ಟು ಒಂದು ಒಂದೂವರೆ ಮೊಳ ಮುಂದಕ್ಕೆ ಬಂದಿದ್ದು, ಅಲ್ಲಿ ಕಾಣುವ ಚತುಷ್ಕೋನಾ ಕೃತಿಯ ಕಿಂಡಿಯೊಳಗಿಂದ ಪ್ರಕಾಶವು ಬಿದ್ದಿತ್ತು ಒಳಗೆ ಯಾರೋ ಶ್ಲೋಕಗಳನ್ನೂ, ಅಭಂಗಗಳನ್ನೂ ಧೀರ ಗಂಭೀರಧ್ವನಿಯಿಂದ ಗುಣುಗುಟ್ಟುತ್ತಿರುವಂತೆ ಆತನಿಗೆ ಕೇಳಿಸಿತು. ತನಗೆ ಮೊದಲು ನೆಲದೊಳಗಿಂದ ಸಪ್ಪಳವು ಕೇಳಿಸಿದ ಹಾಗಾದದ್ದು ಇದೇ ಮನುಷ್ಯನ ದೆಂದು ನಾನಾಸಾಹೇಬನು ನಿಶ್ಚಯಿಸಿದನು. ಇಷ್ಟು ಗೊತ್ತಾದ ಬಳಿಕ ಕೇಳುವದೇನು? ಇದ್ದ ಗುಪ್ತಸಂಗತಿಯನ್ನು ಬೈಲಿಗೆಳೆಯಲೇಬೇಕೆಂದು ನಿರ್ಧರಿಸಿ, ಆತನು ಆ ತಗ್ಗಿನಲ್ಲಿ ಇಳಿಯುವದಕ್ಕಾಗಿ ಮುಂದೆ ಕಾಲನ್ನಿಟ್ಟನು. ಆದರೆ ತಾನು ಒಳಗೆ ಇಳಿದ ಬಳಿಕ ಮೂರ್ತಿಯು ಹಿಂದಕ್ಕೆ ಸರಿದು ತನ್ನ ಸ್ಥಳದಲ್ಲಿ ಕುಳಿತುಬಿಟ್ಟರೆ, ಇಲ್ಲವೆ ಒಳಗಿನ ಮನುಷ್ಯನು ಒಳಗೆ ನನ್ನನ್ನು ಕೊಂದುಬಿಟ್ಟರೆ ಮಾಡುವದೇನೆಂದು ಆತನು ಸ್ವಲ್ಪ ಆತಂಕಪಟ್ಟು, ಸುಮ್ಮನೆ ನಿಂತು ಕೊಂಡನು. ಆದರೆ ನಿಜವಾದ ಶೂರರನ್ನು ಇಂಥ ಅಂಜುಬುರಕ ವಿಚಾರಗಳು ಎಷ್ಟು

ಹೊತ್ತು ತಡೆದು ನಿಲ್ಲಿಸಬಹುದು? ನಾನಾಸಾಹೇಬನು ಮನಸ್ಸಿನಲ್ಲಿ—ನಾನು ನಿಜವಾದ ಮರಾಠನ ಹೊಟ್ಟೆಯಲ್ಲಿ ಹುಟ್ಟಿದ್ದು, ಇಂಥ ಅಂಜಿಕೆಗೆ ಸೊಪ್ಪುಹಾಕಬಹುದೇ? ಎಂದು ಒಟಗುಟ್ಟುತ್ತ ಒಳಗೆ ಇಳಿಯಲಿಕ್ಕೆ ಸಿದ್ಧನಾಗಿ ''ಬಲಭೀಮಕೀಜಯ'' ಎಂದು ಗರ್ಜಿಸಿ ಕಿಂಡಿಯಲ್ಲಿ ಕಾಲನ್ನು ಇಳಿಯಬಿಟ್ಟನು.

ಹೀಗೆ ಯಾವ ಭಯವನ್ನೂ ಲೆಕ್ಕಿಸದೆ ನಾನಾಸಾಹೇಬನು ಕಿಂಡಿಯಲ್ಲಿ ಕಾಲನ್ನು ಇಳಿಬಿಡಲು, ಒಳಗಿನಿಂದ ''ಯಾವನವನು? ಒಳಗೆ ಇಳಿಯಲಿಕ್ಕೆ ಯಾವನ ಎದೆಯಾಗುವದು?'' ಎಂಬ ಶಬ್ದವು ಆತನ ಕಿವಿಗೆ ಬಿದ್ದದ್ದಲ್ಲದೆ, ಯಾರೋ ಕಸುವಿನಿಂದ ಯಾತರಿಂದಲೋ ಅವನ ಕಾಲಿಗೆ ಹೊಡೆದರು; ಆದರೆ ಆ ತರುಣ ಮರಾಠನು ಆ ಹೊಡೆತವನ್ನು ಲೆಕ್ಕಿಸದೆ, ''ಎದೆಯಾಗುವವನೇ ಎದೆಗಾರಿಕೆಯನ್ನು ತೋರಿಸುವನಲ್ಲದೆ, ಅನ್ಯರು ಹೇಗೆ ತೋರಿಸುವರು?'' ಎಂದು ನುಡಿದು ತಟ್ಟನೆ ಕೈಯನ್ನು ಬಿಟ್ಟು, ಒಳಗೆ ಧುಮುಕಿದನು. ತನ್ನ ಕಾಲಿಗೆ ಹೊಡೆದವನ ಸಮಾಚಾರ ತಕ್ಕೊಳ್ಳುವದಕ್ಕಾಗಿ ನಾನಾಸಾಹೇಬನು ಆತುರಪಟ್ಟು, ಆ ಗುಹೆಯೊಳಗಿದ್ದ ಮನುಷ್ಯನ ಮೈಮೇಲೆ ಹೋದನು. ಇನ್ನು ಅವರಿಬ್ಬರು ಕೈಗೆಕೈಹತ್ತಿ ಗುದ್ದಾಡತಕ್ಕವರು; ಅಷ್ಟರಲ್ಲಿ ಗವಿಯೊಳಗಿನ ಮನುಷ್ಯನ ಗಂಭೀರ ರೂಪವೂ, ಮೈಯ ಹುರಿಕಟ್ಟೂ, ನಾನಾಸಾಹೇಬನ ಕಣ್ಣಿಗೆ ಬೀಳಲು, ಆತನು ಬೆದರಿ ಹಿಂದಕ್ಕೆ ಸರಿದು ಆಶ್ಚರ್ಯದಿಂದ ಆ ಮನುಷ್ಯನನ್ನು ನೋಡ ತೊಡಗಿದನು. ಗುಹೆಯೊಳಗಿನ ಆ ಮನುಷ್ಯನು ತೀರಾ ಫಕೀರನ ಹಾಗೆ ಇದ್ದನು. ಆತನು ಕುತ್ತಿಗೆ ಯಿಂದ ಪಾದದವರಿಗೆ ಒಂದು ಕಪನಿಯನ್ನು ಹಾಕಿದ್ದನು. ಆತನ ಬಲಗೈಯೊಳಗಿನ ರುದ್ರಾಕ್ಷಮಾಲೆಯನ್ನೂ, ಎಡಗೈಯೊಳಗಿನ ಯೋಗ ದಂಡವನ್ನೂ ನೋಡಿದರೆ ಮಾತ್ರ, ಆತನು ಫಕೀರನಲ್ಲೆಂದು ಅನ್ನಬೇಕಾಗುತ್ತಿತ್ತು. ಆತನು ಜಡೆಯನ್ನೂ, ಗಡ್ಡವನ್ನೂ ಬೆಳಿಸಿದ್ದನು. ಆ ಗುಹೆಯೊಳಗಿನದೊಂದು ಮಾಡದಲ್ಲಿ ದೀಪವು ಮಿಣಗುಟ್ಟುತ್ತಿತ್ತು. ಅದರ ಮಂದ ಪ್ರಕಾಶದಲ್ಲಿ ಅವರಿಬ್ಬರು ಎವೆಯಿಕ್ಕದೆ ಒಬ್ಬರನ್ನೊಬ್ಬರು ನೋಡುತ್ತಿದ್ದರು. ನಾನಾಸಾಹೇಬನ ನೋಟದಲ್ಲಿ ಆಶ್ಚರ್ಯ–ಕೌತುಕ–ಪೂಜ್ಯಬುದ್ಧಿಗಳು ಒಪ್ಪುತ್ತಿದ್ದು ಸಂತಾಪವು ಅತ್ಯಲ್ಪವಾಗಿ ತೋರುತ್ತಿತ್ತು. ಆ ರುದ್ರಾಕ್ಷಮಾಲಾಧಾರಿಯಾದ ಪುರುಷನ ನೋಟದಲ್ಲಿ ಆಶ್ಚರ್ಯ–ಸಂತಾಪಗಳ ಹೊರತು ಮತ್ತೆ ಏನೂ ತೋರುತ್ತಿದ್ದಿಲ್ಲ. ಬಹಳ ಹೊತ್ತು ಒಬ್ಬರನ್ನೊಬ್ಬರು ನೋಡುತ್ತ ನಿಂತರೂ, ಒಬ್ಬರ ಮುಖದಿಂದಲೂ ಮಾತುಗಳು ಹೊರಡಲಿಲ್ಲ. ಹೊಡೆದಾಡಬೇಕೆಂಬ ಮೊದಲಿನ ಅವರ ಆವೇಶವು ಈಗ ಕಡಿಮೆಯಾಗತೊಡಗಿತ್ತು. ಕಡೆಗೆ ರುದ್ರಾಕ್ಷಮಾಲಾಧರನಾದ ಪುರುಷನೇ ನಾನಾಸಾಹೇಬನನ್ನು ಕುರಿತು ಶುದ್ಧ ಮುಸಲ್ಮಾನೀ ಭಾಷೆಯಿಂದ ನೀನು ಯಾರು? ಇಲ್ಲಿ ಹೇಗೆ ಬಂದೆ? ಇಲ್ಲಿ ನಿನ್ನ ಕೆಲಸವೇನು? ನಿನಗೆ ಜೀವವು ಬೇಕಾಗಿದ್ದರೆ ಸುಮ್ಮನೆ ಬಂದ ದಾರಿಯಿಂದ ತಿರುಗಿ ಹೋಗು? ಇಲ್ಲದಿದ್ದರೆ... ಎಂದು ನುಡಿಯುತ್ತಿರಲು, ನಾನಾಸಾಹೇಬನು–ಇಲ್ಲದಿದ್ದರೆ ಏನಾಗುವದು? ನಾನು ಸಾವಿಗೆ ಈಡಾಗುವೆನಷ್ಟೇ? ಇರಲಿರಲಿ. ನನ್ನನ್ನು ಸಾವಿಗೆ ಈಡು ಮಾಡುವವನಾದರೂ ಯಾವನು? ಎದುರಿಗೆ ಬರಲಿ ನೋಡೋಣ. ಬಾವಾಜಿಯವರೇ,

ತಮ್ಮಿಂದಂತು ಈ ಕೆಲಸವಾಗುವದು ಅಶಕ್ಯವು; ಎಂದು ಹೇಳಿದನು. ಅದಕ್ಕೆ ಆ ಪುರುಷನು-ಏಕೆ-ಆದೇಕೆ? ನನ್ನಿಂದ ಈ ಕೆಲಸವಾಗುವದು ಯಾಕೆ ಅಶಕ್ಯವಾಗಿರುವದು? ನನ್ನನ್ನು ನೀನು ಯಾರೆಂದು ತಿಳಿದಿರುತ್ತೀ? ನನ್ನ ಈ ವೇಷದ ಮೇಲೆ ಹೋಗಬೇಡ-ನನ್ನ ಕೂದಲು ನರೆ ಹಾಯಹತ್ತಿರುತ್ತವೆಂದು ದುರ್ಲಕ್ಷಿಸಬೇಡ. ನಿನ್ನನ್ನು ಕ್ಷಣದಲ್ಲಿ ನೆಲಕ್ಕೆ ಉರುಳಿಸೇನು! ಆದರೆ ನೀನು ಮೊದಲು ಯಾರೆಂಬದನ್ನು ಹೇಳು. ಗುಹೆಯಲ್ಲಿ ಹಾರಿಕೊಂಡದ್ದರಿಂದ ನೀನು ಮೃತ್ಯುವಿನ ಬಾಯಲ್ಲಿ ಹಾರಿಕೊಂಡಹಾಗಾಗಿರುತ್ತದೆ. ಮುಸಲ್ಮಾನನಿದ್ದರಂತು ಸತ್ತೆಯೆಂದು ತಿಳಿ.

ಬಾವಾಜಿಯ ಈ ಮಾತುಗಳನ್ನು ಕೇಳಿ ನಾನಾಸಾಹೇಬನು-ಏನಂದಿರಿ? ಬಾವಾಜಿಯವರೇ, ಇದು ಮುಸಲ್ಮಾನನಿದ್ದರೆ ಸಾಯುವ ಸ್ಥಳವೇ? ಈ ಮಾತು ಸಟಿಯಲ್ಲವಷ್ಟೇ? ಹಾಗಿದ್ದರೆ ನಾನು ಈ ಸ್ಥಳವನ್ನು ಬಿಟ್ಟು ಕದಲುವದಿಲ್ಲ. ನಿಮ್ಮ ದಾಸನಾಗಿ ಸೇವೆಮಾಡಿಕೊಂಡು ಇರುತ್ತೇನೆ. ನಾನು ಯಾರೆಂಬದು ಇನ್ನೂ ನಿಮಗೆ ಗೊತ್ತಾಗಲಿಲ್ಲವೋ? ಬಾವಾಜಿಯವರೇ, ನಾನು ಅಚ್ಚ ಮರಾಟಿಗನಿರುತ್ತೇನೆ. ಇದಕ್ಕೂ ಹೆಚ್ಚು ನಾನೇನು ಹೇಳಲಿ? ಇಗೋ ನೋಡಿರಿ, ಮರಾಟರ ಹೆಗ್ಗುರುತನ್ನು! ಇದರಿಂದಲೂ ನಿಮಗೆ ಸಮಾಧಾನವಾಗದಿದ್ದರೆ, ಎಲ್ಲಿಯಾದರೂ ನನಗೆ ಮದಾಂಧರಾದ ಯಮನರ ಭೆಟ್ಟಿಯಾಗಲಿ; ಆಗ ಮರಾಟನ ಕೈತೋರಿಸುತ್ತೇನೆ; ಆದರೆ ನನ್ನನ್ನು ಮುಸಲ್ಮಾನನೆಂದು ತಿಳಿದು ಅಪಮಾನಗೊಳಿಸಬೇಡಿರಿ, ಎಂದು ನುಡಿಯುತ್ತಿರಲು, ಬಾವಾಜಿಯು ನಾನಾಸಾಹೇಬನ ಈ ಆವೇಶದ ಮಾತುಗಳನ್ನು ಕೇಳಿ ಕೌತುಕದಿಂದ ಆತನನ್ನು ನೋಡುತ್ತ ನಿಂತುಕೊಂಡನು. ತನ್ನೆದುರಿಗೆ ನಿಂತುಕೊಂಡ ತರುಣನು ಅಚ್ಚ ಮರಾಟ ನಿರುವನಲ್ಲದೆ, ಮುಸಲ್ಮಾನರನ್ನು ಕಂಡರೆ ಸೇರದವನಿರುತ್ತಾನೆಂದು ತಿಳಿದು ಆತನು ಸಮಾಧಾನ ಪಟ್ಟು ನಾನಾಸಾಹೇಬನಿಗೆ- ಶಾಬಾಸ, ಶಾಬಾಸ! ಎಲೈ ತರುಣಮಹಾರಾಷ್ಟ್ರನೇ, ನೀನಾಡಿದ ಮಾತುಗಳೆಲ್ಲ ನಿಜವಾಗಿದ್ದರೆ, ಈ ಸ್ಥಳದಲ್ಲಿ ನಿನ್ನ ಕೂದಲು ಕೊಂಕಲಾರದೆಂದು ತಿಳಿ, ಬೆದರಬೇಡ, ಆದರೆ ನೀನು ಯಾರು? ಎಲ್ಲಿಯವನು? ಇಲ್ಲಿಗೆ ಹೇಗೆ ಬಂದೆ? ಎಂಬವನ್ನು ಹೇಳದಿದ್ದರೆ ನಿನ್ನ ವಿಷಯವಾಗಿ ನಂಬಿಗೆಯು ಹೇಗೆ ಉತ್ಪನ್ನವಾಗಬೇಕು? ಎಂದು ಪ್ರಶ್ನೆಮಾಡಲು, ನಾನಾಸಾಹೇಬನು-ಬಾವಾಜಿಯವರೇ, ನನ್ನ ವೃತ್ತಾಂತದಿಂದ ಪ್ರಯೋಜನವೇನು ಆಗುವಂತೆ ಇಲ್ಲ. ನಾನೊಬ್ಬ ಯಃಕಶ್ಚಿತ ಮಹಾರಾಷ್ಟ್ರ ತರುಣನಿದ್ದೇನೆ. ನನಗೆ ಹಿಂದೆಯಿಲ್ಲ-ಮುಂದೆಯಿಲ್ಲ; ಮನಬಂದತ್ತ ತಿರುಗುತ್ತಿರುವೆನು; ಆದರೆ ತಮ್ಮ ಬಳಿಯಲ್ಲಿ ನನ್ನನ್ನು ಇಟ್ಟುಕೊಂಡರೆ, ಜನ್ಮವಿರುವತನಕ ಸೇವೆಮಾಡಿಕೊಂಡಿರುವೆನು. ಇದಕ್ಕೂ ಹೆಚ್ಚಿಗೆ ನನ್ನ ವಿಷಯವಾಗಿ ಏನೂ ಹೇಳಲಿಕ್ಕಾಗುವದಿಲ್ಲ. ನನ್ನವರೆನ್ನುವವರು ಈ ಭೂಮಿಯಲ್ಲಿ ಯಾರೂ ಇಲ್ಲೆಂದು ನಾನು ತಿಳಿಯುತ್ತೇನೆ. ತಾವು ವಿರಕ್ತರಿರುವಿರೆಂಬುದು ವೇಷದಿಂದಲೇ ಗೊತ್ತಾಗುತ್ತದೆ. ನಾನು ವಿರಕ್ತನಿದ್ದು ವೇಷಾಂತರವನ್ನು ಮಾಡಿರುವದಿಲ್ಲ. ಮಾಡೆಂದು ಹೇಳಿದರೆ ಈಗಲೇ ಮಾಡುವೆನು. ನನ್ನ ಕೊರಳಿಗೆ ಯಾವ ಉರಲೂ ಇರುವದಿಲ್ಲ, ಎಂದು ಹೇಳಿದನು. ಅದಕ್ಕೆ ಬಾವಾಜಿಯು—ಛೀ! ಛೀ! ನಿನ್ನ

ಮಾತಿನ ಮೇಲೆ ಸರ್ವಥಾ ನನ್ನ ನಂಬಿಗೆಯಿಲ್ಲ. ನನ್ನವರು ಯಾರೂ ಇಲ್ಲೆಂದು ನೀನು ಹೇಳುವ ಮಾತು ಸತ್ಯವಾದದ್ದಲ್ಲ. ನನ್ನಂತೆ ವಿರಕ್ತನಾಗಬೇಕೆಂದು ನೀನು ಇಲ್ಲಿಗೆ ಬಂದಿರುವ ದಿಲ್ಲ. ನಿನ್ನ ಉದ್ದೇಶವನ್ನು ನಾನು ಅರಿತಿರುವೆನು. ನಿನ್ನ ಗುರುತು ಹಿಡಿದಿರುವದಿಲ್ಲೆಂತಲೂ ನೀನು ತಿಳಿಯಬೇಡ. ನಿನ್ನ ಉದ್ದೇಶವು ಒಳ್ಳೆಯದಿದ್ದು, ಅದನ್ನು ಸಾಧಿಸುವ ಮಾರ್ಗವನ್ನು ನೀನು ಬೇಗನೆ ಹಿಡಿಯೆಂದು ನಾನು ನಿನ್ನನ್ನು ಆಶೀರ್ವದಿಸುತ್ತೇನೆ. ನಿನ್ನ ಹೆಸರನ್ನೂ ಊರನ್ನೂ ಬಚ್ಚಿ ಇಡುವ ಮನಸ್ಸಿದ್ದರೆ ಬಚ್ಚಿಡು, ಬೇಡವೆನ್ನುವದಿಲ್ಲ. ಆದರೆ,—

ಈ ಮೇರೆಗೆ ಬಾವಾಜಿಯು ನುಡಿಯುತ್ತಿರಲು, ಯಾರೋ ಸಿಳ್ಳುಹಾಕಿದ ಹಾಗೆ ಕೇಳಿಸಿತು. ಬಾವಾಜಿಯು ಅದನ್ನು ಕಿವಿಗೊಟ್ಟು ಕೇಳಿ ಚಟ್ಟನೆ ಎದ್ದು, ಕತ್ತಲೆಯಿದ್ದ ನಿಟ್ಟಿನ ಕಡೆಗೆ ಸಾಗಿದವನು ಒಮ್ಮೆಲೆ ಕಾಣದ ಹಾಗಾದನು. ಅದನ್ನು ನೋಡಿ ನಾನಾಸಾಹೇಬನು ಬೆರಗಾಗಿ, ಬಾವಾಜಿಯ ಹಾದಿಯನ್ನು ಕಾಲುಗಳಿಗೆ ನೋಡಿದನು, ಅರ್ಧಗಳಿಗೆ ನೋಡಿದನು; ಆದರೆ ಬಾವಾಜಿಯ ಸುಳುವು ಇಲ್ಲ. ನಾನಾಸಾಹೇಬನು ಇದೇನು ಅದ್ಭುತವೆಂದು ಮನಸ್ಸಿನಲ್ಲಿ ಆಶ್ಚರ್ಯಪಡುತ್ತ ಇದನ್ನು ಪರೀಕ್ಷಿಸಿ ನೋಡಿಯೇ ತೀರಬೇಕೆಂದು ತಾನೂ ಆ ಕತ್ತಲೆಯ ನಿಟ್ಟಿನ ಕಡೆಗೆ ಸಾಗಿದನು. ಕೈಯಾಡಿಸಿ ನೋಡಲು, ಒಂದು ಬಾಗಿಲು ಆತನ ಕೈಗೆ ಹತ್ತಿತು. ಒಳಗೆ ಪ್ರವೇಶಿಸಬೇಕೆಂದರೆ, ಅಲ್ಲಿ ಕತ್ತಲೆ ಮುಸುಕಿತ್ತು, ಆದರೂ ಏನಿರುತ್ತದೆ ನೋಡ ಬೇಕೆಂಬ ಕುತೂಹಲದಿಂದ ಪ್ರೇರಿತನಾದ ಆ ದಿಟ್ಟ ತರುಣನು, ಕೈಯಾಡಿಸುತ್ತ ಕತ್ತಲಲ್ಲಿಯೇ ನೆಟ್ಟಗೆ ಸಾಗಿದನು. ಎಷ್ಟು ಮಾರ್ಗವನ್ನು ಕ್ರಮಿಸಿದೆನೆಂಬದು ಆತನಿಗೆ ಗೊತ್ತಾಗಲಿಲ್ಲ; ಬಾವಾಜಿಯ ಗೊತ್ತೂ ಆತನಿಗೆ ಹತ್ತಲಿಲ್ಲ. ಇನ್ನು ಬೇಸತ್ತು ಆತನು ಹಿಂದಿರುಗತಕ್ಕವನು. ಅಷ್ಟರಲ್ಲಿ ಆತನ ಕೈಗೆ ಗೋಡೆ ಹತ್ತಿತು. ಆ ಗೋಡೆಯ ತುಂಬ ಕೈಯಾಡಿಸಿ ನೋಡಿದರೂ, ಎಲ್ಲಿಯೂ ಮಾರ್ಗವು ತೋರಲಿಲ್ಲ. ಹೀಗೆ ಸುಮ್ಮನೆ ಎದುರಿಗೆ ಗೋಡೆ ಕಟ್ಟುವದರ ತಾತ್ಪರ್ಯವೇನು? ಅಡ್ಡಮಗ್ಗಲು ಎಲ್ಲಿಯಾದರೂ ಮಾರ್ಗವಿರಬಹುದೆಂದು ಎಡಗಡೆಯ ಮಗ್ಗಲ ಗೋಡೆಯ ಮೇಲೆ ಕೈಯಾಡಿಸುತ್ತ ಮಾರ್ಗವನ್ನು ಹುಡುಕಹತ್ತಿದನು. ಹೀಗೆ ಹುಡುಕುತ್ತ ಆತನು ಬರುತ್ತಿರಲು, ಆತನ ಕೈಗೆ ಒಂದು ಬಾಗಿಲು ಹತ್ತಿತು. ಆ ಬಾಗಿಲೊಳಗಿನ ಮಾರ್ಗವು ಅಂಬೇಗಾಲು ಹಚ್ಚಿಯೂ ಪ್ರಶಸ್ತವಾಗಿ ಹೋಗಲಿಕ್ಕೆ ಬಾರದಷ್ಟು ಸಂಕುಚಿತ ವಾಗಿತ್ತು. ನಾನಾಸಾಹೇಬನು ಆ ಮಾರ್ಗದಿಂದ ಹೋಗಿ, ಹಾದಿಯಲ್ಲಿ ಹತ್ತಿದ ಮೂರು ನಾಲ್ಕು ಪಾವಟಿಗೆಗಳನ್ನು ಇಳಿದು ಕೆಳಗೆ ಹೋಗಿ ಮತ್ತೆ ನೆಟ್ಟಗೆ ಹೋದನು. ಈ ಪ್ರಕಾರದ ಗವಿಯೊಳಗಿನ ಮಾರ್ಗಗಳು ಆಗಿನ ಕಾಲದಲ್ಲಿ ಕೋಟೆಯೊಳಗಿನ ಜನರಿಗೂ, ದಂಡಾಳು ಗಳಿಗೂ ಗೊತ್ತಿರುತ್ತಿದ್ದವು. ಕೋಟೆಯ ಬುಡದೊಳ ಗಿಂದ ನಾಲ್ಕೈದು ಹರದಾರಿಗಳವರೆಗೆ ಇಂಥ ಹಾದಿಗಳು ಹೋಗುತ್ತಿದ್ದವು. ಆಗಿನ ಕಾಲದಲ್ಲಿ ಇವುಗಳ ಅವಶ್ಯಕತೆಯು ಇರುತ್ತಿತ್ತು. ವೈರಿಗಳ ಕೈಸೇರುವ ಪ್ರಸಂಗ ಒದಗಿದಲ್ಲಿ ಕೋಟೆ ಯೊಳಗಿನವರು, ಈ ಮಾರ್ಗದಿಂದ ತಮ್ಮ ಸಂರಕ್ಷಣವನ್ನು ಮಾಡಿಕೊಳ್ಳುತ್ತಿದ್ದರು. ಇಂಥ ಮಾರ್ಗಗಳು ಈಗ ನಷ್ಟವಾಗಿರುವದರಿಂದ, ಗವಿಯೊಳಗಿನ ಹಾದಿಯ ಮಾತು ಈ ಕಟ್ಟು ಕಥೆಯಂತೆ ತೋರಿದರೆ ಆಶ್ಚರ್ಯವಲ್ಲ.

ದೇವಗಿರಿ ಅಥವಾ ದೌಲತ್ತಾಬಾದದ ಕೋಟೆಯನ್ನು ನೋಡಿದ ಆತನಿಗೆ, ಇಂಥ ನೆಲ ಮಾರ್ಗದ ಪರಿಚಯವಿದ್ದುದರಿಂದ, ಆತನು ಪಾವಟಿಗೆಗಳನ್ನು ಇಳಿದು ತಡೆಯಿಲ್ಲದೆ ಸಾಗಿದನು. ಕೆಲವು ಅಂತರವನ್ನು ಕ್ರಮಿಸಿದ ಬಳಿಕ ಎದುರಿಗೆ ಗೋಡೆ ಹತ್ತಲು, ಬಲಕ್ಕೆ ತಿರುಗಿ ಅಲ್ಲಿಯ ಹಾದಿಯಿಂದ ನೆಟ್ಟಗೆ ಕೆಲವು ಅಂತರವನ್ನು ಕ್ರಮಿಸಿಹೋದನು. ಆಮೇಲೆ ಆತನಿಗೆ ದೀಪದ ಬೆಳಕು ಕಾಣಹತ್ತಿತು. ಇಲ್ಲಿ ಈ ಬೆಳಕು ಎಲ್ಲಿಂದ ಬಂತೆಂದು ಆತನು ಸ್ವಲ್ಪ ವಿಚಾರ ಮಾಡಿ, ಏನೇ ಆಗಲಿ ಬೆಳಕು ಕಾಣುವಲ್ಲಿಗೆ ಹೋಗಿಯೇ ಬರಬೇಕೆಂದು ಮುಂದಕ್ಕೆ ಸಾಗಿದನು. ಹೀಗೆ ಸಾಗುತ್ತಿರುವಾಗ, ಆತನಿಗೆ ಒಂದು ಕಟ್ಟಿಗೆಯ ಬಾಗಿಲು ಹತ್ತಿತು. ಆ ಬಾಗಿಲ ಪಡಿಕಿನೊಳಗಿಂದ ನೋಡಲು, ಒಳಗೆ ಒಂದು ಸಭಾಮಂಟಪವಿದ್ದು, ಎದುರಿಗೆ ಯಾವದೋ ಒಂದು ದೇವರ ಪ್ರತಿಮೆಯು ಇದ್ದಂತೆ ತೋರಿತು. ಮೂರ್ತಿಯ ಮುಂದುಗಡೆಯಲ್ಲಿ ನಂದಾ ದೀಪಗಳು ಉರಿಯುತ್ತಿದ್ದವು. ಬಾಗಿಲು ತೆರೆದು ಇದ್ದದ್ದನ್ನು ನಿಸ್ಸಂಶಯವಾಗಿ ನೋಡಬೇಕೆಂದು ನಾನಾಸಾಹೇಬನು ಬಾಗಿಲ ತುಂಬ ಕೈಯಾಡಿಸಿ ನೋಡಿದನು. ಅದಕ್ಕೆ ಕೀಲಿಯನ್ನು ಹಾಕಿದ್ದಿಲ್ಲ. ಬಾಗಿಲ ಮೇಲ್ಗಡೆಗೊಂದು ಕೆಳಗಡೆಗೊಂದು ಹೀಗೆ ಎರಡು ಚಿಲಕಗಳನ್ನು ಹಾಕಿದ್ದರು. ಮೇಲ್ಗಡೆಯ ಚಿಲಕವು ಏನು ಮಾಡಿದರೂ ತೆಗೆಯಲಿಕ್ಕೆ ಬರಲಿಲ್ಲ. ಆಗ ನಾನಾಸಾಹೇಬನು, ಹಿಂದಿನ ಕಾಲದ ಬಾಗಿಲವನ್ನು ತೆಗೆಯುವ ಪದ್ಧತಿಯಂತೆ, ಒಂದು ಕೈಯಿಂದ ಬಾಗಿಲವನ್ನು ಎತ್ತಿದನು. ಕೂಡಲೆ ಎರಡೂ ಚಿಲಕಗಳು ತೆಗೆಯಲಿಕ್ಕೆ ಬಂದು, ಎರಡೂ ಫಡಕುಗಳು ಪ್ರಶಸ್ತವಾಗಿ ತೆರೆದವು. ಆಗ ನಾನಾಸಾಹೇಬನು ಒಳಗೆ ಹೋಗಿ ನೋಡಲು, ಮೊದಲು ತರ್ಕಿಸಿದ್ದಂತೆ ಭವ್ಯ ಸಭಾಮಂಟಪವಿದ್ದು, ಎದುರಿಗೆ ಅಷ್ಟಭುಜಗಳ ದೇವಿಯ ಪ್ರತಿಮೆಯು ಇತ್ತು. ದೇವಿಯು ಕಾಲಬುಡದಲ್ಲಿ ಒಬ್ಬ ರಾಕ್ಷಸನನ್ನು ಮೆಟ್ಟಿದ್ದಳು. ತಲೆಯ ಹೊರತು ದೇವಿಯ ಮೈಗೆಲ್ಲ ಸಿಂದೂರವನ್ನು ಹಚ್ಚಿದ್ದರು. ದೇವಿಯ ನಾಲ್ಕು ಕೈಗಳಲ್ಲಿ ನಾಲ್ಕು ಆಯುಧಗಳಿದ್ದು, ಉಳಿದ ನಾಲ್ಕು ಕೈಗಳಲ್ಲಿ ನಾಲ್ಕು ರುಂಡಗಳಿದ್ದವು. ರುಂಡಗಳೊಳಗಿಂದ ನಾಲಿಗೆಗಳು ಹೊರಬಿದ್ದಿದ್ದವು. ದೇವಿಯ ಮುಂದುಗಡೆಯಲ್ಲಿ ಆಳುದ್ದ ಸಮೆಗಳೊಳಗೆ ನಂದಾದೀಪಗಳು ಉರಿಯುತ್ತಿದ್ದವು. ದೇವಿಯ ಆ ಭವ್ಯಮೂರ್ತಿಯನ್ನು ನೋಡಿದ ಕೂಡಲೆ, ಭಾವಿಕನಾದ ನಾನಾಸಾಹೇಬನು ಸಾಷ್ಟಾಂಗ ನಮಸ್ಕಾರವನ್ನು ಮಾಡಿ, ಗಲ್ಲಗಲ್ಲ ಬಡಕೊಂಡು, ಕಿವಿಹಿಂಡಿಕೊಂಡು, ಕೈಮುಗಿದು ನಮಸ್ಕಾರದ ವಿಧಿಯನ್ನು ಮುಗಿಸಿದನು.

ಈ ಮೇರೆಗೆ ದೇವಿಯನ್ನು ವಂದಿಸಿದ ಬಳಿಕ ನಾನಾಸಾಹೇಬನು ಸಭಾಮಂಟಪದಲ್ಲಿ ನಾಲ್ಕೂ ಕಡೆಗೆ ನೋಡಿದನು. ನೋಡಿದತ್ತೆಲ್ಲ ಶಸ್ತ್ರಾಸ್ತ್ರಗಳು ಕಣ್ಣಿಗೆ ಬೀಳುತ್ತಿದ್ದವು. ಕತ್ತಿ ಢಾಲು, ತುಬಾಕಿಗಳನ್ನು ಗೋಡೆಗೆ ತೂಗಹಾಕಿದ್ದರು. ಬರ್ಚಿಗಳಿಗಂತು ಲೆಕ್ಕವೇ ಇದ್ದಿಲ್ಲ. ಒಂದು ಮೂಲೆಯಲ್ಲಿ ನಾಲ್ಕು ತೋಫುಗಳಿದ್ದು, ಅವುಗಳ ಬಳಿಯಲ್ಲಿ ಗುಂಡಗಳ ಎರಡು ರಾಶಿಗಳಿದ್ದವು. ಕುಂತ, ಸುರಗಿ ಮೊದಲಾದ ಸಣ್ಣಸಣ್ಣ ಶಸ್ತ್ರಗಳಿಗಂತು ನೆಲೆಯೇ ಇದ್ದಿಲ್ಲ. ಒಂದು ಕಡೆಯಲ್ಲಿ ಎತ್ತರವಾದ ಐದಾರು ಕೋಲುಗಳನ್ನು ನಿಲ್ಲಿಸಿದ್ದು, ಅವುಗಳಿಗೆ

ಚಿಲಕತ್ತುಗಳನ್ನೂ, ಉಕ್ಕಿನ ಟೊಪ್ಪಿಗೆಗಳನ್ನೂ ತೂಗಹಾಕಿದ್ದರು. ಇದನ್ನೆಲ್ಲ ನೋಡಿ ನಾನಾಸಾಹೇಬನು ಬೆರಗಾಗಿ, ಬಾಯ ಮೇಲೆ ಕೈಯಿಟ್ಟುಕೊಂಡು ಎವೆಯಿಕ್ಕದೆ ಅವನ್ನು ನೋಡತೊಡಗಿದನು. ಕೆಳಗೆ ದೃಷ್ಟಿಯನ್ನು ಹಾಕಲು, ಶಸ್ತ್ರಗಳನ್ನು ತೂಗಹಾಕಿದ ಗೋಡೆಗಳಿಗೆ ಹೊಂದಿ ಎದುರುಬದುರಾಗಿ ದೊಡ್ಡ ದೊಡ್ಡ ಪೆಟ್ಟಿಗೆಗಳನ್ನು ಸಾಲಾಗಿ ಇಟ್ಟು ಅವುಗಳಿಗೆ ದೊಡ್ಡ ದೊಡ್ಡ ಕೀಲಿಗಳನ್ನು ಹಾಕಿದ್ದರು. ಪೆಟ್ಟಿಗೆಗಳ ಭದ್ರತೆಯನ್ನೂ, ಕೀಲಿಗಳ ಬಂದೋಬಸ್ತನ್ನೂ ನೋಡಿದರೆ, ಒಳಗೆ ಅಮೋಘಧನ ಸಂಗ್ರಹವಿರುತ್ತದೆಂದು ಯಾರಿಗಾದರೂ ತೋರುವಂತೆ ಇತ್ತು. ಇದನ್ನೆಲ್ಲ ನೋಡಿ ನಾನಾ ಸಾಹೇಬನಿಗೆ ಪರಮಾಶ್ಚರ್ಯವಾಯಿತು. ಇವೆಲ್ಲ ಸಾಮಾನುಗಳ ಸಂಗ್ರಹದ ಉದ್ದೇಶವೇನೆಂಬದೂ, ಸಂಗ್ರಹವನ್ನು ಯಾರು ಮಾಡಿರುವರೆಂಬದೂ ಆತನಿಗೆ ತಿಳಿಯದಾಯಿತು. ಆತನು ದೇವಿಯನ್ನು ನೋಡುತ್ತ ವಿಚಾರ ಮಾಡಿ ಮಾಡಿ ಬೇಸತ್ತು, ಒಂದರರದಾದರೂ ನೆಲೆಹತ್ತದೆ ದಣಿದಂತಾಗಿ ದೇವಿಯ ಮುಂದೆ ಕುಳಿತುಕೊಂಡನು. ಕೆಲವು ಹೊತ್ತಿನ ಮೇಲೆ ಆ ಬಾವಾಜಿಯು, ನಾನಾಸಾಹೇಬನು ಮೊದಲು ಕುಳಿತಿದ್ದ ಸ್ಥಳಕ್ಕೆ ಬಂದು, ಅಲ್ಲಿ ಆತನನ್ನು ಕಾಣದೆ, ಆ ಚತುಷ್ಕೋನಾಕೃತಿಯ ಕಿಂಡಿಯೊಳಗಿಂದ ಗುಡಿಯೊಳಗೆ ಹತ್ತಿಬಂದು ಅಲ್ಲಿಯೂ ನೋಡಿದನು, ಗುಡಿಯ ಹೊರಗೆ ಹೋಗಿಯೂ ನೋಡಿದನು; ಆದರೆ ನಾನಾಸಾಹೇಬನು ಎಲ್ಲಿಯೂ ಕಾಣಲಿಲ್ಲ. ಅಷ್ಟರಲ್ಲಿ ಬೆಳ್ಳಗೆ ಬೆಳಗಾಯಿತು. ನಾನಾಸಾಹೇಬನ ಕುದುರೆಯು ಮೇಯುತ್ತ ತಿರುಗಾಡುತ್ತಿತ್ತು. ಬಾವಾಜಿಯು ಮತ್ತೆ ಗುಡಿಯೊಳಗೆ ಬಂದು ಮಾರುತಿಯನ್ನು ಆತನ ಸ್ಥಾನದ ಮೇಲೆ ಸರಿಯಾಗಿ ಕುಳ್ಳಿರಿಸಿ, ಮೂಲೆಯೊಳಗಿನ ನೆಲ ಒಲಿಯ ಬಳಿಯ ತನ್ನ ಸ್ಥಳದಲ್ಲಿ ಕುಳಿತು ಏನೋ ಒಟಗುಟ್ಟುತ್ತ, ಶ್ಲೋಕ–ಸ್ಮೃತಿಗಳನ್ನು ಅನ್ನುತ್ತ ಚಿಲಿಮೆಯನ್ನು ಕೈಯಲ್ಲಿ ತಕ್ಕೊಂಡನು. ಚಿಲಿಮೆಯ ಸಿದ್ಧತೆಯಾದ ಬಳಿಕ ಅದರ ಮೇಲೆ ಬೆಂಕಿಯನ್ನು ಹೇರಿ ಸೇದುತ್ತ, ನಡುನಡುವೆ ಯಾವದೊಂದು ಶ್ಲೋಕವನ್ನೂ, ಯಾವದೊಂದು ಅಭಂಗವನ್ನೂ, ಓವಿಯನ್ನೂ ಅನ್ನುತ್ತ ಕುಳಿತುಕೊಂಡನು. ಎಷ್ಟು ಹೊತ್ತಾದರೂ ಆ ಸ್ವಚ್ಛಂದಪುರುಷನು ಮೇಲಕ್ಕೆ ಏಳುವ ಲಕ್ಷಣವು ತೋರಲಿಲ್ಲ. ಮಧ್ಯಾಹ್ನವು ತಿರುಗಿದ ಮೇಲೆ ಆತನು ಗುಡಿಯಿಂದ ದೂರ ಇರುವ ಒಂದು ಬಾವಿಗೆ ಹೋಗಿ, ಸ್ನಾನ–ಸಂಧ್ಯಾದಿಕರ್ಮಗಳನ್ನು ತೀರಿಸಿಕೊಂಡನು. ಆತನು ಯಥಾಸ್ಥಿತವಾಗಿ ಸರ್ವಾಂಗಕ್ಕೆ ಭಸ್ಮವನ್ನು ಹಚ್ಚಿಕೊಂಡಿದ್ದನು. ಸಾವಕಾಶ ಎಲ್ಲ ಕೆಲಸವಾದ ಮೇಲೆ ತನ್ನ ಜೋಳಿಗೆ, ಕಮಂಡಲು, ಯೋಗದಂಡ ಮೊದಲಾದವನ್ನು ತಕ್ಕೊಂಡು ಬಾವಿಯಿಂದ ಹೊರಟನು. ಆತನು ಗುಡಿಗೆ ಹೋಗದೆ, ಗುಡಿಯ ವಿರುದ್ಧ ದಿಕ್ಕಿಗೆ ನಾಲ್ಕೈದು ಮೈಲು ಹೋಗಿ ಹಾದಿಯಲ್ಲಿಯ ಹಳ್ಳಿಯಲ್ಲಿ ''ಅಲಕ್! ಅಲಕ್!'' ಎಂದು ಅನ್ನುತ ಭಿಕ್ಷೆ ಬೇಡಿ, ದೊರೆತ ಪದಾರ್ಥಗಳನ್ನು ತಕ್ಕೊಂಡು ಬಂದು ನೆಟ್ಟಗೆ ಗುಡಿಯನ್ನು ಹೊಕ್ಕನು. ಆತನ ಹಾದಿಯಲ್ಲಿ ತಂದಿದ್ದ ಹುಲ್ಲನ್ನು ನಾನಾಸಾಹೇಬನ ಕುದುರೆಗೆ ಹಾಕಿದ್ದರಿಂದ, ಅದೂ ಬಾಯಾಡಿಸತೊಡಗಿತು. ಬಾವಾಜಿಯು ಆರಹತ್ತಿದ್ದ ಒಲೆಯಲ್ಲಿ ಒಂದು ಕೊರಡನ್ನು ಚಲ್ಲಿ, ತಂಡಾಸದಿಂದ ಬೆಂಕಿಯನ್ನು ಕುಕ್ಕಿ ಉಜ್ವಲಗೊಳಿಸಿದನು. ಆಮೇಲೆ ಅಲ್ಲಿ ಇಟ್ಟಿದ್ದ

ಈಳಿಗೆಯನ್ನು ತಕ್ಕೊಂಡು ಸ್ವಚ್ಛವಾಗಿ ತೊಳೆದು, ತಾನು ತಂದಿದ್ದ ಸೊಪ್ಪಿನ ಪಲ್ಲೆಯನ್ನು ಹೆಚ್ಚುತ್ತ ಕುಳಿತುಕೊಂಡನು. ಅಷ್ಟರಲ್ಲಿ ಕತ್ತಲಾಯಿತು; ಆದರೂ ದೀಪವನ್ನು ಹಚ್ಚಲಿಲ್ಲ, ಮತ್ತೆ ಒಲೆಯ ಬಳಿಯಲ್ಲಿ ಪ್ರಶಸ್ತವಾಗಿ ಕುಳಿತು ಶ್ಲೋಕ– ಸ್ತುತಿಗಳನ್ನು ಗಟ್ಟಿಯಾಗಿ ಅನ್ನುತ್ತ, ತಂಬಾಕವನ್ನು ಸೇದುತ್ತ ಕಾಲಕಳೆಯಹತ್ತಿದನು. ನಾಲ್ಕುಗಳಿಗೆ ರಾತ್ರಿಯಾಯಿತು. ಹೆಚ್ಚಿದ್ದ ಪಲ್ಲೆಯೆಲ್ಲ ಹೊಟ್ಟೆಯಲ್ಲಿ ಹೋಯಿತು. ಆಗ ಆತನು ಹೊರಗೆ ಹೋಗಿ ಬಂದು, ಮಾರುತಿಯ ಬಳಿಯಲ್ಲಿದ್ದ ಠಾಣಾ ದೀಪವನ್ನು ತಕ್ಕೊಂಡು, ಎಣ್ಣೆ–ಬತ್ತಿಗಳನ್ನು ಹಾಕಿ ದೀಪವನ್ನು ಹಚ್ಚಿದನು. ಆತನು ಯಾರದೋ ಹಾದಿಯನ್ನು ನೋಡುತ್ತಿರುವಂತೆ ತೋರಿತು. ಒಂದೆರಡು ಸಾರೆ ಹೊರಗೆ ಹೋದನು, ಒಳಗೆ ಬಂದನು. ಅಷ್ಟರಲ್ಲಿ ದೂರು ಯಾರೋ ಬರುತ್ತಿರುವಂತೆ ಕಾಣಲು, ''ಇದೇನು? ಈವೊತ್ತು ಒಬ್ಬನೇ ಬಂದನಲ್ಲ'' ಎಂದು ನುಡಿಯುತ್ತ ಒಲೆಯ ಬಳಿಯಿಂದ ಉಲುಕದೆ, ಚಿಲಿಮೆಯ ಝುರಿಕೆಗಳನ್ನು ಸೇದುತ್ತ ಪರಮಾರ್ಥದ ಪದಗಳನ್ನು ಅನ್ನುತ್ತ ಸ್ವಸ್ಥವಾಗಿ ಕುಳಿತುಕೊಂಡಿದ್ದನು. ಕೆಲವು ಹೊತ್ತಿನ ಮೇಲೆ ಒಬ್ಬ ತರುಣನು ಬಾವಾಜಿಯ ಬಳಿಗೆ ಬಂದು ವಿನಯದಿಂದ ನಮಸ್ಕರಿಸಿ—''ಈ ದಿನ ಸವಾರಿಯು ಇತ್ತ ಬರುವಂತೆ ತೋರುವದಿಲ್ಲ'' ಅನ್ನಲು, ಬಾವಾಜಿಯು, ಒಮ್ಮೆಲೆ ಚಕಿತಮುದ್ರೆಯಿಂದ—''ಏನಂದಿ? ಇಂದು ಇತ್ತ ಬರುವದಿಲ್ಲವೆ? ಈ ದಿನವಂತು ಅವಶ್ಯ ಬರಲೇಬೇಕಾಗಿತ್ತು'' ಎಂದು ನುಡಿದು, ಕೆಲವು ಹೊತ್ತು ವಿಚಾರಮಾಡಿ ತಿರುಗಿ ಆ ಮನುಷ್ಯನನ್ನು ಕುರಿತು—ಎಲ್ಲಿಂದಾದರೂ ವಿಶೇಷ ಸುದ್ದಿಯು ಬಂದಿರುವದೋ? ಯಾವನಾದರೂ ಒಂದು ಹೊಸ ಸುದ್ದಿಯನ್ನು ಹೇಳಿದನೋ ಏನು? ಎಂದು ಕೇಳಿದನು. ಅದಕ್ಕೆ ಆ ಮನುಷ್ಯನು–ಇಲ್ಲ, ನನಗಂತು ಸುದ್ದಿಗಿದ್ದಿಯ ಗೊತ್ತು ಇಲ್ಲ; ಆದರೆ ಹಾಗೆ ಮಾತ್ರ ಏನೋ ಇದ್ದ ಹಾಗೆ ತೋರಿದ್ದು ನಿಜವು. ಈ ದಿನ ಮಾರುತಿಯ ಗುಡಿಗೆ ಯಾರೂ ಹೋಗಲಾಗದೆಂದು ಮಧ್ಯಾಹ್ನದಲ್ಲಿಯೇ ಎಲ್ಲರಿಗೆ ಅಪ್ಪಣೆಯಾಗಿತ್ತು. ಹಾದಿಯನ್ನು ನೋಡೀರೆಂದು ನಾನು ಸುದ್ದಿಯನ್ನು ಹೇಳಲಿಕ್ಕೆ ಬಂದೆನು, ಎಂದು ಹೇಳಿದನು. ಅದನ್ನು ಕೇಳಿ ಬಾವಾಜಿಯು ವಿಚಾರಮಗ್ನನಾಗಿ–ಸೋಮಾಜೀ, ಈ ದಿನ ಬಂದಿದ್ದರೆ ಬಹಳ ನೆಟ್ಟಗಾಗುತ್ತಿತ್ತು; ಆದರೂ ಚಿಂತೆಯಿಲ್ಲ; ನಾಳಿಗೆ ಬರಬಹುದು. ಈಗ ಒಬ್ಬನು ಮಹತ್ವದ ಸುದ್ದಿಯನ್ನು ಹೇಳುವದಕ್ಕಾಗಿ ಬರುವವನಿದ್ದಾನೆ. ಇಲ್ಲಿ ಎರಡನೆಯವರು ಇದ್ದದ್ದನ್ನು ನೋಡಿದರೆ, ಆತನು ಸಂಕೋಚಪಡಬಹುದು; ಆದ್ದರಿಂದ ನೀನು ಈಗಲೆ ಹೊರಟುಹೋಗುವದು ನೆಟ್ಟಗೆ, ಎಂದು ಹೇಳಲು, ಆ ಚಿಕ್ಕವಯಸ್ಸಿನ ಕರಿಯ ಮನುಷ್ಯನು ಬಾವಾಜಿಯನ್ನು ನಮಸ್ಕರಿಸಿ ಹೊರಟುಹೋದನು. ಇತ್ತ ಬಾವಾಜಿಯು ಸ್ವಲ್ಪ ಹೊತ್ತಿನಮೇಲೆ ಗುಡಿಯ ಬಾಗಿಲನ್ನು ಇಕ್ಕಿ ಮಾರುತಿಯನ್ನು ನಮಸ್ಕರಿಸಿ, ಗುಹೆಯಲ್ಲಿ ಇಳಿಯುವದಕ್ಕಾಗಿ ಪ್ರತಿಮೆಯನ್ನು ಸರಿಸಲುದ್ಯೋಗಿಸಲು, ಹೊರಗೆ ಯಾರೋ ಬಾಗಿಲನ್ನು ಬಡಿಯಹತ್ತಿದರು.

# ಸಾಕ್ಷಾತ್ಕಾರ

ಹಿಂದಿನ ಪ್ರಕರಣದಲ್ಲಿ ಹೇಳಿದಂತೆ, ಯಾರೋ ಗುಡಿಯ ಬಾಗಿಲು ಬಡಿಯುವದನ್ನು, ನೋಡಿ, ಬಾವಾಜಿಯು ಮಾರುತಿಯ ಮೂರ್ತಿಯನ್ನು ಬಿಟ್ಟು ಬಾಗಿಲು ತೆರೆಯಲು, ಅವನಂಥ ಮತ್ತೊಬ್ಬ ಬಾವಾಜಿಯು ಬಾಗಿಲಲ್ಲಿ ನಿಂತುಕೊಂಡಿದ್ದನು. ಮೊದಲನೇ ಬಾವಾಜಿಯು ವಿಲಕ್ಷಣವಾದ ಮುದ್ರೆಯಿಂದ ಎರಡನೆಯವನನ್ನು ನೋಡಿ–ಏನು? ಇಷ್ಟು ಬೇಗನೆ ನೀನು ಹೇಗೆ ತಿರುಗಿ ಬಂದೆ! ಎಂದು ಕೇಳಲು, ಎರಡನೆಯವನು–ಹೌದು, ಹಾದಿಯಲ್ಲಿಯೇ ಒಂದು ಮಹತ್ವದ ಸುದ್ದಿಯನ್ನು ಕೇಳಿದ್ದರಿಂದ ಅದನ್ನು ತಮಗೆ ಹೇಳಲಿಕ್ಕೆ ಬಂದೆನು, ಎಂದು ಹೇಳಿದನು. ಅದಕ್ಕೆ ಮೊದಲನೆಯ ಬಾವಾಜಿಯು ಏನೂ ಮಾತಾಡದೆ, ಮುಂದೆ ಏನು ಹೇಳುತ್ತಾನೆ ಕೇಳಬೇಕೆಂದು ಆ ಹೊಸಬನ ಮೋರೆಯನ್ನು ನೋಡುತ್ತ ನಿಂತನು. ಆಗ ಹೊಸ ಬಾವಾಜಿಯೂ ಏನೂ ಮಾತಾಡದಿರಲು, ಗುಡಿಯೊಳಗಿನ ಬಾವಾಜಿಯ–ಯಾಕೆ? ಸುಮ್ಮನೆ ನಿಂತೆ! ನೀನು ತಂದಿರುವ ಮಹತ್ವದ ಸುದ್ದಿಯಾದರೂ ಯಾವದು ಹೇಳು, ಎಂದು ಕೇಳಿದನು. ಆಗ ಹೊಸಬನು–ಸುಲ್ತಾನಗಡದ ಕಿಲ್ಲೇದಾರನ ಗುಡಿಚಾಪೆ ಕಟ್ಟಿತಂತೆ; ಮುಸಲ್ಮಾ...... ಎಂದು ನುಡಿಯುತ್ತಿರಲು, ಮೊದಲನೆಯ ಗೋಸಾವಿಯು ತಿರಸ್ಕಾರದಿಂದ–ಛೀ ಮೂರ್ಖಾ, ಇದಾವ ದೊಡ್ಡ ಸುದ್ದಿಯೆಂದು ಹೇಳಲಿಕ್ಕೆ ಬಂದೆ! ನಿಯಮಿಸಿದ ಕೆಲಸಮಾಡುವುದನ್ನು ಬಿಟ್ಟು, ನಡುವೆ ಈ ಹಿರಿಯತನವನ್ನು ನಿನಗೆ ಯಾರು ಮಾಡಹೇಳಿದರು? ಈ ಸುದ್ದಿಯು ಇಂದಿಲ್ಲ ನಾಳೆ ಹೇಗಾದರೂ ನನಗೆ ಗೊತ್ತಾಗೇ ಆಗುತ್ತಿತ್ತು, ನೀನು ಒಂದು ದಿವಸ ತಡೆದದ್ದರಿಂದ ನಿನಗೆ ನಿಯಮಿಸಿದ ಕೆಲಸವು ಕೆಟ್ಟರೆ ಮಾಡುವದೇನು? ಆದದ್ದಾಯಿತು, ಬಂದ ತಪ್ಪಿಗೆ ನಾಲ್ಕುತಾಸು ವಿಶ್ರಾಂತಿಯನ್ನು ಹೊಂದಿ, ನಸಿಕು ಹರಿಯುವದರೊಳಗೆ ಮತ್ತೆ ಹಾದಿಯನ್ನು ಹಿಡಿ. ಕಾರ್ಯದಲ್ಲಿ ಸಿದ್ಧಿಯನ್ನು ಪಡೆಯಬೇಕಾದರೆ, ಅವರವರ ತಮ್ಮ ತಮ್ಮ ಕಾರ್ಯಗಳನ್ನು ನಿಷ್ಠೆಯಿಂದ ಮಾಡಲಿಕ್ಕೆಬೇಕು. ತಮ್ಮಾ, ನಾನು ಹೀಗೆ ಸ್ಪಷ್ಟಮಾತಾಡಿದ್ದಕ್ಕಾಗಿ ಮನಸ್ಸಿಗೆ ಹಚ್ಚಿಕೊಳ್ಳಬೇಡ; ನಮ್ಮ ಶಿವಾಜಿರಾಯನು ಕೈಕೊಂಡ ಮಹತ್ಕಾರ್ಯವು ಕೊನೆಗಾಣಬೇಕಾದರೆ, ನಾವೆಲ್ಲರೂ ನಮ್ಮ ನಮ್ಮ ಕೆಲಸಗಳನ್ನು ಉತ್ತಮ ರೀತಿಯಿಂದ ಸಾಧಿಸಲಿಕ್ಕೆಬೇಕು. ನಡುವೆ ಎಲ್ಲಿಯಾದರೂ ಒಂದು ಒಳ್ಳೆಯ ಕೆಲಸದ ಕಡೆಗೆ ಮನಸ್ಸು ಹರಿದರೂ, ಅದರ ಗೊಡವಿಗೆ ಹೋಗದೆ, ಕೈಕೊಂಡ ಕೆಲಸವನ್ನು ಕಸರಿಲ್ಲದಂತೆ ಮಾಡುವದು ಬಹು ಮಹತ್ವದ ಸಂಗತಿಯು. ನೀನು ಹಿತಬುದ್ಧಿಯಿಂದಲೇ ಸುದ್ದಿಯನ್ನು ಹೇಳಲಿಕ್ಕೆ ಇಷ್ಟು ಕಷ್ಟಪಟ್ಟು ಬಂದಿರುವೆಯೆಂಬದನ್ನು ನಾನು ಬಲ್ಲೆನು; ಆದರೂ ತಿರುಗಿ ಹೀಗೆ ತಪ್ಪು ಮಾಡಬಾರದೆಂದು ಈಗ ಸಿಟ್ಟುಮಾಡಿ ಹೇಳಿದ್ದೇನೆ. ನಡೆ, ಸುಲ್ತಾನಗಡದ ಸುದ್ದಿಯು ನನಗೆ ಎಷ್ಟರಮಟ್ಟಿಗೆ ಗೊತ್ತಿರುತ್ತದೆಂಬುದನ್ನು ಪ್ರತ್ಯಕ್ಷಪ್ರಮಾಣದಿಂದ ನಿನಗೆ ತೋರಿಸಿಕೊಡುತ್ತೇನೆ. ಎಂದು ನುಡಿದು ಮೊದಲನೆಯ ಬಾವಾಜಿಯು ಗುಡಿಯ ಬಾಗಿಲನ್ನು ಇಕ್ಕಿ, ಎರಡನೆಯ ಬಾವಾಜಿಯನ್ನು ಕರಕೊಂಡು

ಗುಹೆಯೊಳಗೆ ಇಳಿದು, ಅಲ್ಲಿದ್ದ ದುರ್ಗಾದೇವಿಯ ಗುಡಿಯ ಬಾಗಿಲಿಗೆ ಹೋದನು. ಅಷ್ಟರಲ್ಲಿ ಗುಡಿಯೊಳಗೆ ನಾನಾಸಾಹೇಬನು ಎಚ್ಚತ್ತು ಎದ್ದು ಕುಳಿತು ಕಣ್ಣು ಒರಸಿಕೊಳ್ಳುತ್ತಿದ್ದನು. ಆಗ ಮೊದಲನೆಯ ಬಾವಾಜಿಯು ಹೊಸಬನಿಗೆ–ನೋಡಿದೆಯಾ ಒಳಗೆ ಕುಳಿತಿರುವ ಮನುಷ್ಯನನ್ನು? ಸುಲ್ತಾನಗಡದ ಕಿಲ್ಲೇದಾರ ನಾದ ರಂಗರಾಯನ ಮಗನು ಈತನೇ. ಈತನ ಹೆಸರು ನಾನಾಸಾಹೇಬ. ಈತನು ನಿನ್ನೆ ಇಲ್ಲಿಗೆ ಬಂದಿದ್ದಾನೆ, ಎಂದು ಹೇಳಿದನು.

ಇದನ್ನು ಕೇಳಿ ಹೊಸಬನು ಆಶ್ಚರ್ಯಬಡುತ್ತಿರಲು, ಮೊದಲಿನ ಬಾವಾಜಿಯು ಗುಡಿಯ ಬಾಗಿಲು ತೆರೆದು ಒಳಗೆ ಹೋಗಿ ನಾನಾಸಾಹೇಬನನ್ನು ಕುರಿತು–ಯಾಕೆ? ನಿದ್ರೆಯಾಯಿತೋ? ನಡೆಯಿರಿ, ಹೊರಗೆ ಹೋಗಿ ನಿಮ್ಮ ಕುದುರೆಯ ಸಮಾಚಾರವನ್ನಷ್ಟು ತಕ್ಕೊಳ್ಳಿರಿ. ನಾನು ಈಗ ಮೇವು ಹಾಕಿ ಬಂದಿದ್ದೇನೆ. ನೀವಿಷ್ಟು ಅದರ ಮೈಮೇಲೆ ಕೈಯಾಡಿಸಿ ಚಪ್ಪರಿಸಿದರೆ, ಅದಕ್ಕೆ ಸಂತೋಷವಾಗುವದು. ಅನ್ನಲು, ನಾನಾಸಾಹೇಬನು ಬಾವಾಜಿಯನ್ನು ಅನುಸರಿಸಿ ಹೊರಟನು. ಅವರು ಮೂವರೂ ಗುಹೆಯ ಮುಖದಿಂದ ಹೊರಗೆ ಹೊರಟು ಗುಡಿಯೊಳಗೆ ಬಂದರು. ನಾನಾ ಸಾಹೇಬನು ಕುದುರೆಯ ಸಮಾಚಾರವನ್ನು ತಕ್ಕೊಂಡು ಬರುವಷ್ಟರಲ್ಲಿ ಹೊಸ ಬಾವಾಜಿಯು ಹೋಗಿದ್ದನು. ನಾನಾಸಾಹೇಬನು ಗುಡಿಯೊಳಗೆ ಬಂದು ಬಾವಾಜಿಯನ್ನು ಕುರಿತು–ಬಾವಾಜಿ ಯವರೇ, ಕೆಲವು ಮಾತುಗಳನ್ನು ಕೇಳದಿದ್ದರೆ ನನ್ನ ಜೀವಕ್ಕೆ ಸಮಾಧಾನವಾಗುವ ಹಾಗಿಲ್ಲದ್ದ ರಿಂದ ಕೇಳುತ್ತೇನೆ, ಹೇಳುವ ಹಾಗಿದ್ದರೆ ದಯಮಾಡಿ ಹೇಳಬೇಕು. ಈ ಮಾರುತಿಯ ಗುಡಿಯೇನು? ಮಾರುತಿಯ ಬುಡದಲ್ಲಿರುವ ಗುಹೆಯೇನು? ಗುಹೆಯೊಳಗಿನ ದುರ್ಗಾದೇವಿಯ ಗುಡಿಯೇನು? ಗುಡಿಯೊಳಗಿನ ಪೆಟ್ಟಿಗೆಗಳು ಯಾರವು? ಅಲ್ಲಿ ಅಷ್ಟು ಶಸ್ತ್ರಗಳನ್ನು ಯಾರು ಇಟ್ಟಿದ್ದಾರೆ? ಇವನ್ನಿಷ್ಟು ದಯಮಾಡಿ ಹೇಳುವಿರೋ? ನೀವು ಗೋಸಾವಿಗಳೆಂದು ಹೇಳಿಕೊಳ್ಳುತ್ತೀರಿ; ಆದರೆ ನಿಜವಾಗಿ ನೋಡಿದರೆ ನೀವು ಗೋಸಾವಿಗಳಂತೆ ತೋರುವದಿಲ್ಲ! ಇಲ್ಲಿ ಬಹುಜನರು ಬರುತ್ತಾರೆಂಬಂತೆ ನನಗೆ ತೋರುತ್ತದೆ. ನಾನು ಬಂದಾಗ ಗುಡಿಯ ಮುಂದೆ ಎರಡು ಗೊರವಿಯ ಕಟ್ಟಿಗೆಗಳು ಉರಿಯುತ್ತಿದ್ದವು. ಬಹು ಜನರ ಹೆಜ್ಜೆಗಳು ಮೂಡಿದ್ದವು; ಆದರೆ ನಿಮ್ಮಲ್ಲಿ ಬರುವ ಆ ಜನರು ಯಾರೆಂಬುದನ್ನು ನನಗೆ ಹೇಳುವಿರೋ? ಬಾವಾಜಿಯವರೇ, ನೀವು ರಾಜಕಾರಣದಲ್ಲಿ ತೊಡಗಿದ್ದರೆ ದಯಮಾಡಿ ನನ್ನನ್ನು ಶಿಷ್ಯನನ್ನಾಗಿ ಮಾಡಿಕೊಳ್ಳಿರಿ. ನನಗೆ ಯಾರೂ ಇಲ್ಲದ್ದರಿಂದ ನಿಮ್ಮ ಸೇವೆಮಾಡಿಕೊಂಡು ಇರುತ್ತೇನೆ. ಅನ್ನಲು, ಬಾವಾಜಿಯು ಗಲ್ಲದಲ್ಲಿಯೇ ನಕ್ಕು ನಾನಾಸಾಹೇಬನಿಗೆ–ಅಂತೂ, ನಿನಗೆ ಹೆಂಡಿರುಮಕ್ಕಳು ಯಾರೂ ಇಲ್ಲದ್ದರಿಂದ ನನ್ನ ಹಾಗೆ ಬೈರಾಗಿಯಾಗಬೇಕೆನ್ನುತ್ತೀ! ನಾವು ನಿನಗೆ ಉಪದೇಶವನ್ನು ಕೊಟ್ಟೇವು, ಆಮೇಲೆ ನಿನ್ನ ಮನೆಮಾರು, ನಿನ್ನ ಪರಿವಾರವು ಎದುರಿಗೆ ಬಂದುನಿಂತರೆ ಏನುಮಾಡಬೇಕು, ಎಂದು ಕೇಳಿದನು. ಅದನ್ನು ಕೇಳಿ ನಾನಾಸಾಹೇಬನು ಗಾಬರಿಯಾಗಿ ಮುಂದುಗಾಣದೆ ಕುಳಿತುಕೊಂಡನು. ಆಗ ಬಾವಾಜಿಯು ನಾನಾಸಾಹೇಬನ ಬೆನ್ನಮೇಲೆ ಕೈಯಾಡಿಸಿ–ಏನೂ ಚಿಂತೆಯಿಲ್ಲ, ನಿನ್ನ ಬಯಕೆಯಂತೆ ಎಲ್ಲ ಕೆಲಸವಾಗುವದು. ಇಂದಿನ

ಒಂದು ರಾತ್ರಿಯನ್ನು ನಾಳಿನ ಒಂದು ಹಗಲನ್ನು ಕಳೆ; ಅಂದರೆ ನಾಳೆ ರಾತ್ರಿ ನಿನ್ನ ಬಯಕೆಯು ಪೂರ್ಣವಾಗುವದು. ಎಲೈ ತರುಣನಾದ ನಾನಾಸಾಹೇಬನೇ, ನೀನು ಶಹಾಜಿರಾಜನ ಮಗನಾದ ಶಿವಾಜಿರಾಯನನ್ನು ಕೂಡಿಕೊಳ್ಳುವದಕ್ಕಾಗಿ ಸುಲ್ತಾನಗಡವನ್ನು ಬಿಟ್ಟು ಬಂದಿರುವೆಯಷ್ಟೆ? ನಾಳೆ ಸಂಜೆಗೇ ನಿನಗೆ ಶಿವಾಜಿರಾಯನ ದರ್ಶನವಾಗುವದು. ನನ್ನ ಗುರುತು ಪರಿಚಯದ ಗೊಡವಿಗೆ ನೀನು ಹೋಗ ಬೇಡ. ನನ್ನ ಮಾತಿನಲ್ಲಿ ನಂಬಿಗೆಯಿಟ್ಟು ಸ್ವಸ್ಥವಾಗಿರು, ಎಂದು ಹೇಳಿದನು.

ಮರುದಿನ ಬೆಳಗಾಯಿತು. ನಾಲ್ಕು ತಾಸು ಹೊತ್ತು ಏರಿತು. ಕುದುರೆಯ ದಾಣೆ ಮೇವುಗಳು ಬಂದವು. ಆರುತಾಸಿನ ಸುಮಾರಕ್ಕೆ ಒಬ್ಬ ಬ್ರಾಹ್ಮಣನು ಮಾರುತಿಗೆ ನೈವೇದ್ಯ ಕೊಡುವ ನೆವದಿಂದ ಒಬ್ಬ ಮನುಷ್ಯನ ಆಹಾರವನ್ನು ಬಡಿಸಿದ ತಾಟನ್ನು ತಕ್ಕೊಂಡು ಬಂದು ನೈವೇದ್ಯಮಾಡಿ, ಅದನ್ನು ಗುಡಿಯಲ್ಲಿ ಇಟ್ಟುಹೋದನು. ಬಾವಾಜಿಯು ನಾನಾಸಾಹೇಬನಿಗೆ ಪ್ರಸಾದವನ್ನು ಸ್ವೀಕರಿಸಬೇಕೆಂದು ಹೇಳಲು, ಹೊಟ್ಟೆಹಸಿದು ಅನ್ನದ ಹಾದಿಯನ್ನೇ ನೋಡುತ್ತಿದ್ದ ಆತನು, ಸ್ವಚ್ಛ ಸ್ನಾನಮಾಡಿ ಯಥೇಚ್ಛವಾಗಿ ಊಟವನ್ನು ಮಾಡಿದನು. ತನ್ನ ಮನೆಗಿಂತ ನಾನಾಸಾಹೇಬನಿಗೆ ಇಂದು ಅನ್ನವು ಬಹಳ ರುಚಿಹತ್ತಿತು. ಬಾವಾಜಿಯು ಎಂದಿನಂತೆ ಸ್ನಾನಮಾಡುವದಕ್ಕಾಗಿ ಬಾವಿಗೆ ಹೋದನು. ಆತನ ಎಲ್ಲ ಕಾರಸ್ಥಾನವನ್ನು ನೋಡಿ ನಾನಾಸಾಹೇಬನಿಗೆ ಬಹಳ ಆಶ್ಚರ್ಯವಾಯಿತು. ಶಿವರಾಯನಿಗೆ ಹಾದಿಯನ್ನು ತೋರಿಸಿ ಸಹಾಯ ಮಾಡುವವನ ಯೋಗ್ಯತೆಯು, ಇಷ್ಟರಮಟ್ಟಿಗಿರುವದರಲ್ಲಿ ಆಶ್ಚರ್ಯವಿಲ್ಲೆಂದು ಆತನು ನೆನಿಸಿದನು. ದುರ್ಗಾದೇವಿಯ ಗುಡಿಯೊಳಗಿನ ಪೆಟ್ಟಿಗೆಗಳ, ಹಾಗು ಶಸ್ತ್ರಗಳ ಸಂಗ್ರಹದ ಕಾರಣವು ಈಗ ಆತನಿಗೆ ಸ್ಪಷ್ಟವಾಗಿ ತಿಳಿದದ್ದರಿಂದ, ಆ ತರುಣನು ಪೂಜ್ಯಬುದ್ಧಿಯಿಂದ ಶಿವಾಜಿಯ ಹಾದಿಯನ್ನು ನೋಡಹತ್ತಿದನು. ಇತ್ತ ಸ್ನಾನಕ್ಕೆ ಹೋದ ಬಾವಾಜಿಯು ಬಹಳ ಹೊತ್ತಾದರೂ ಬಾರದಿರಲು, ನಾನಾಸಾಹೇಬನ ಮನಸ್ಸಿನಲ್ಲಿ ಬಗೆ ಬಗೆಯ ಕಲ್ಪನೆಗಳು ಉತ್ಪನ್ನವಾದವು. ಬಾವಾಜಿಯು ತನ್ನನ್ನು ಠಕ್ಕಿಸಿರಬಹುದೋ? ತನ್ನನ್ನು ಪ್ರತಿಬಂಧದಲ್ಲಿರಿಸಿ ಸಂಕಟಕ್ಕೆ ಗುರಿಮಾಡಲು ಯೋಚಿಸಿರಬಹುದೋ? ನನ್ನ ವೈರಿಗಳಾದ ಮುಸಲ್ಮಾನರಿಗೆ ನನ್ನನ್ನು ಒಪ್ಪಿಸಲು ಹೊಂಚುಹಾಕಿರ ಬಹುದೋ? ನನ್ನ ಮೇಲೆ ಮೊದಲಿನಿಂದ ಕಣ್ಣಿಟ್ಟಿದ್ದ ಹೊರತು ನನ್ನ ಗುರುತು ಈತನಿಗೆ ಹೇಗೆ ಹತ್ತಬೇಕು? ಸುಲ್ತಾನಗಡದ ಸುದ್ದಿಯು ಈತನಿಗೆ ಹೇಗೆ ತಿಳಿಯಬೇಕು? ಇನ್ನು, ಈ ಮಾರುತಿಯ ದೇವಾಲಯವನ್ನೂ, ಗುಹೆಯೊಳಗಿನ ದುರ್ಗಾದೇವಿಯ ದೇವಾಲಯವನ್ನೂ, ಬಾವಾಜಿಯ ಸರಳತನವನ್ನೂ, ಇಲ್ಲಿಯ ಎಲ್ಲ ಬಗೆಯ ವ್ಯವಸ್ಥೆಯನ್ನೂ ನೋಡಿದರೆ, ಬಾವಾಜಿಗೆ ಮುಸಲ್ಮಾನರ ಸಂಬಂಧವು ಇದ್ದಂತೆ ತೋರುವದಿಲ್ಲ. ನನ್ನ ಸಂಶಯವು ವ್ಯರ್ಥವಾದದ್ದು. ಹಾಗಾದರೆ, ಬಾವಾಜಿಯು ಇಷ್ಟು ತಡಮಾಡಲಿಕ್ಕೆ ಕಾರಣವೇನಿರಬಹುದು? ಹೊತ್ತು ಮುಣುಗುತ್ತ ಬಂದಿತಲ್ಲ, ಎಂದು ನುಡಿದು ಗುಡಿಯ ಹೊರಗೆ ಹೋಗಿ ನೋಡಬಂದನು; ಬಾವಾಜಿಯು ಎಲ್ಲಿಯೂ ಕಾಣಿಸಲಿಲ್ಲ. ನಾನಾಸಾಹೇಬನ ಮನಸ್ಸಿನಲ್ಲಿ ಹೊಸದೊಂದು

ವಿಚಾರವು ಉತ್ಪನ್ನವಾಯಿತು. ಬಾವಾಜಿಗೆ ಏನಾದರೂ ಸಂಕಟ ಒದಗಿರಬಹುದೆಂದು ಆತನು ಕಲ್ಪಿಸಿದನು. ಇಂಥ ವಿಲಕ್ಷಣಸ್ಥಾನದ ಸಂರಕ್ಷಕನಾದ್ದರಿಂದ ಮುಸಲ್ಮಾನರು ಹೊಂಚು ಹಾಕಿ ಬಾವಾಜಿಯನ್ನು ಹಿಡಿದು, ಎಲ್ಲ ಗುಪ್ತ ಸಂಗತಿಗಳನ್ನು ಹೊರಗೆಡುವುದಕ್ಕಾಗಿ ಪರಿಪರಿಯಾಗಿ ಆತನನ್ನು ಪೀಡಿಸುತ್ತಿರಬಹುದೆಂಬ ಕಲ್ಪನೆಯು ನಾನಾಸಾಹೇಬನ ಮನಸ್ಸಿನಲ್ಲಿ ನೆಲೆಯೂರಿತು. ಇಂಥ ಸಂಕಟಸಮಯದಲ್ಲಿ ನೆರವಾಗದಿರುವದು ಸರಿಯ ಲ್ಲೆಂದು ಬಗೆದು ಆತನು ಚಟ್ಟನೆ ಎದ್ದು ಕುದುರೆಗೆ ಜೀನು ಏರಿಸಿ ಹತ್ತಿ, ಬಾವಾಜಿಯು ಹೋದ ನಿಟ್ಟಿನ ಕಡೆಗೆ ಕುದುರೆಯನ್ನು ಸಾಗಿಸುವವನಿದ್ದನು; ಅಷ್ಟರಲ್ಲಿ ''ಸೀತಾರಾಮ ಸೀತಾರಾಮ'' ಎಂದು ರಾಮನನ್ನು ಧ್ಯಾನಿಸುತ್ತ ಬಾವಾಜಿಯ ಸವಾರಿಯು ನಾನಾಸಾಹೇಬನ ಎದುರಿಗೆ ಬಂದು ನಿಂತಿತು!

ಈ ಮೇರೆಗೆ ಹೊರಡಲಿಕ್ಕೆ ಸಜ್ಜಾಗಿ ನಿಂತಿದ್ದ ನಾನಾಸಾಹೇಬನನ್ನು ಕುರಿತು ಬಾವಾಜಿಯು–ಯಾಕೆ? ನನ್ನ ಮಾತಿನ ಮೇಲೆ ನಿನಗೆ ವಿಶ್ವಾಸವು ಹುಟ್ಟಲಿಲ್ಲವೇ? ನನಗೆ ಗೊತ್ತಾಗದಂತೆ ಹೋಗಬೇಕೆಂದು ಮಾಡಿದ್ದೆಯಾ? ಹೊತ್ತಿಗೆ ನಾನು ಬಾರದಿದ್ದರೆ ಕೆಲಸವು ಕೆಟ್ಟುಹೋಗುತ್ತಿತ್ತು! ನಿನ್ನ ಸಲುವಾಗಿ ಎಷ್ಟು ಕಡೆಯಲ್ಲಿ ಎಷ್ಟು ಜನರು ಯಾವ ಯಾವ ಹೇತುವಿನಿಂದ ತಿರುಗುತ್ತಾರೆಂಬದರ ಕಲ್ಪನೆಯು ನಿನಗಿದ್ದರೆ, ಮೂರ್ಖಾ, ನೀನು ಗುಡಿಬಿಟ್ಟು ಹೊರಗೆ ಬರುತ್ತಿದ್ದಿಲ್ಲ! ಅವಿಚಾರಿಯೇ , ಅವಿಚಾರಿಯೇ, ಇನ್ನು ಇಳಿ ತೆಪ್ಪಗೆ ಕುದುರೆಯನ್ನು, ನಡಿ ಸುಮ್ಮನೆ ಒಳಗೆ! ಎಂದು ಸಿಟ್ಟುಮಾಡಲು, ಅದನ್ನು ಕೇಳಿ ನಾನಾಸಾಹೇಬನಿಗೆ ಬಹಳ ವಿಷಾದವಾಯಿತು. ನಾನು ಯಾವ ಉದ್ದೇಶದಿಂದ ಹೊರಟೆನು, ಬಾವಾಜಿಯ ಮನಸ್ಸಿನಲ್ಲಿ ಯಾವ ಉದ್ದೇಶವು ಬಂದಿತು; ಎಂದು ಆತನು ಮನಸ್ಸಿನಲ್ಲಿ ಬಹಳ ವ್ಯಥೆಪಟ್ಟನು. ಆತನು ಪಿಟ್ಟೆಂದು ಮಾತಾಡದೆ ಬಾವಾಜಿಯ ಅಪ್ಪಣೆಯಂತೆ ಕುದುರೆಯನ್ನು ಇಳಿದು ಆತನನ್ನು ಹಿಂಬಾಲಿಸಿ ಗುಡಿಯೊಳಗೆ ಹೋದನು. ಸ್ವಲ್ಪ ಹೊತ್ತುಸುಮ್ಮನಿದ್ದು ನಾನಾಸಾಹೇಬನು ತಾನು ಹೊರಟ ಉದ್ದೇಶವನ್ನು ಬಾವಾಜಿಗೆ ಸರಳತನದಿಂದ ಹೇಳಲು, ಅದನ್ನು ಬಾವಾಜಿಯು ಅಕ್ಷರಶಃ ನಿಜವೆಂದು ನಂಬಿದನು. ತನಗೆ ಸಹಾಯಮಾಡಲು ಹೊರಟಿದ್ದಕ್ಕಾಗಿ ನಾನಾಸಾಹೇಬನ ಮುಂದೆ ಯಾವ ಉಪಚಾರದ ಮಾತನ್ನೂ ಆಡದೆ, ಯಾವ ಬಗೆ ಯಿಂದಲೂ ಕೃತಜ್ಞತಾಭಾವವನ್ನು ವ್ಯಕ್ತಪಡಿಸದೆ ಬಾವಾಜಿಯು ಆತನಿಗೆ—ಇನ್ನು ಎಚ್ಚರದಿಂದ ಇರು. ಸ್ವಲ್ಪ ಹೊತ್ತಿನಲ್ಲಿ ಶಿವರಾಯನು ಬರಬಹುದು, ಎಂದು ಹೇಳಿದನು. ಈ ಮಾತಿಗೆ ಅರ್ಧಗಳಿಗೆಯಾಗಿರಲಿಕ್ಕಿಲ್ಲ, ಅಷ್ಟರಲ್ಲಿ ದೂರದಿಂದ ಬಹು ಜನರು ಬರುತ್ತಿರು ವಂತೆ ನಾನಾಸಾಹೇಬನಿಗೆ ತೋರಿತು. ಕೆಲವರು ಗೊರವಿಯ ಕಟ್ಟಿಗೆಗಳನ್ನು ಹಿಡಕೊಂಡು ಮುಂದೆ ಬರುತ್ತಿದ್ದರು. ಕೆಲವರು ಕುದುರೆಗಳನ್ನು ಹತ್ತಿದ್ದರು. ಬಹುಜನರು ನಡೆಯುತ್ತ ಬರುತ್ತಿದ್ದರು. ಅವರೆಲ್ಲರೂ ಗುಡಿಯ ಕಡೆಗೆ ಬರುತ್ತಿರುವ ಸುದ್ದಿಯನ್ನು ನಾನಾಸಾಹೇಬನು ಬಾವಾಜಿಗೆ ತಿಳಿಸಿ, ಅವರು ಯಾರು ಎಂದು ಕೇಳಲು, ಬಾವಾಜಿಯು ನಕ್ಕು–ಮಹಾರಾಷ್ಟ್ರ ವೀರಾ, ದೇಶಬಾಂಧವರನ್ನು ಯವನರ ಉಪದ್ರವದಿಂದ ಮುಕ್ತಮಾಡುವದಕ್ಕಾಗಿಯೂ,

ಗೋಬ್ರಾಹ್ಮಣರನ್ನು ಪರಿಪಾಲಿಸುವದಕ್ಕಾಗಿಯೂ, ತನ್ನ ದೇಹವನ್ನೇ ಅರ್ಪಿಸುವ ಶಿವರಾಯನೇ ತನ್ನ ಪರಿವಾರದೊಡನೆ ಇಲ್ಲಿಗೆ ಬರುತ್ತಿರುವನೆಂದು ತಿಳಿ, ಎಂದು ಹೇಳಿದನು. ಅಷ್ಟರಲ್ಲಿ ''ಜಯಭವಾನಿಕೀಜಯ'' ಎಂದು ಗರ್ಜಿಸುತ್ತ ಆ ಪರಿವಾರವು ಗುಡಿಯ ಪ್ರಾಕಾರದಲ್ಲಿ ಬಂದಿತು. ನಾನಾಸಾಹೇಬನು ಉತ್ಸುಕತೆಯಿಂದ ಒಬ್ಬೊಬ್ಬರನ್ನಾಗಿ ಬಂದವರನ್ನು ನೋಡುತ್ತಿರಲು, ಎಲ್ಲರು ಮಹಾರಾಷ್ಟ್ರರೇ ಇರುತ್ತಾರೆಂಬುದು ಆತನಿಗೆ ಗೊತ್ತಾಯಿತು. ಮುಂದುಗಡೆಯಲ್ಲಿ ಇಬ್ಬರು ಹುಡುಗರಂಥವರು ಗೊರವಿಯ ಕಟ್ಟಿಗೆಗಳನ್ನು ಹಿಡಕೊಂಡು ಬರುತ್ತಿದ್ದರು. ಅವರ ಹಿಂದೆ ಐದಾರು ಜನ ಪ್ರಾಯಸ್ಥರು ನಡೆಯುತ್ತ ಬರುತ್ತಿದ್ದರು. ಅವರ ಹಿಂದೆ ಸರದಾರಿಯ ರೀವಿಯ ತೀರ ತರುಣನಾದ ಹುಡುಗನಂಥವ ನೊಬ್ಬನು ಕುದುರೆಯನ್ನೇರಿ ಬರುತ್ತಿದ್ದನು. ಆತನು ಸಾದಗಪ್ಪಿನ ಮೇಲಿದ್ದು, ದೇದೀಪ್ಯ ಮಾನವಾದ ತನ್ನ ವಿಶಾಲನೇತ್ರಗಳಿಂದ ಅಲೌಕಿಕತೆಯನ್ನು ವ್ಯಕ್ತಗೊಳಿಸುತ್ತಿದ್ದನು. ಆತನು ಮೂಗು ದೊಡ್ಡದಿದ್ದು, ಗುರುಡನ ಮೂಗಿನ ಹಾಗೆ ತುದಿಯಲ್ಲಿ ಬಾಗಿತ್ತು. ಆತನು ಶರೀರದಿಂದ ವಿಶೇಷ ಭವ್ಯನಾಗಿದ್ದಿಲ್ಲ. ಮೂರ್ತಿಯು ಬಹುಮಟ್ಟಿಗೆ ಗಿಡ್ಡವಾದದ್ದೆಂದು ನೋಡುವವರಿಗೆ ಸ್ಪಷ್ಟವಾಗಿ ಕಾಣುತ್ತಿತ್ತು. ಪ್ರಾಯದ ಚಿಹ್ನಗಳು ಆ ಮೂರ್ತಿಯ ತುಟಿ-ಗದ್ದಗಳ ಮೇಲೆ ಇನ್ನೂ ವ್ಯಕ್ತವಾಗಿದ್ದಿಲ್ಲ. ಆತನ ಪೋಷಾಕು ಸರ್ವಸಾಧಾರಣ ವಾದದ್ದಿತ್ತು. ಆತನು ಕಂಠಿಯ ಕಮಾನಿನ ಒಂದು ಉದ್ದಂಗಿಯನ್ನು ಹಾಕಿಕೊಂಡು, ಕಾಲಲ್ಲಿ ಮರಾಟರ ಪದ್ಧತಿಯ ಪಾಯಜುಮೆಯನ್ನು ಹಾಕಿದ್ದನು. ಆತನ ತಲೆಯ ಮೇಲಕ್ಕೆ ಆ ಕಾಲಕ್ಕೆ ಹಾಕುತ್ತಿದ್ದ ಅರ್ಧ ಮರಾಠಿಯ ರೀವಿಯ, ಅರ್ಧಬಾದಶಾಹೀ ರೀವಿಯ ಸಣ್ಣಮುಂಡಾಸ ವಿತ್ತು. ಆತನ ಚಂಚಲವಾದ ನೇತ್ರಗಳು ನಾಲ್ಕೂ ಕಡೆಗೆ ಹೊರಳಿ, ಅಲ್ಲಿ ನಡೆದಿರುವ ಸಂಗತಿಗಳನ್ನು ಕ್ಷಣದಲ್ಲಿ ಗ್ರಹಿಸುತ್ತಿರುವಂತೆ ತೋರುತ್ತಿತ್ತು. ಅವನು ಹತ್ತಿದ ಅಚ್ಚ ಭೀಮಥಡಿಯ ಅವಲಾದಿಯ ಕುದುರೆಯು, ಮೂರುಮೂರು ಸಾರೆ ಕೆಳಗೆಮೇಲೆ-ಕೆಳಗೆ ಮೇಲೆ ಗೋಣನ್ನು ಮಾಡುತ್ತ ಬರುತ್ತಿತ್ತು. ತನ್ನನ್ನು ಹತ್ತಿದ ತನ್ನ ಯಜಮಾನನ ವಿಷಯದ ಗರ್ವದಿಂದ ಆ ಕುದುರೆಯು ಅನ್ಯರನ್ನು ತುಚ್ಛೀಕರಿಸುತ್ತಿರುವಂತೆ ತೋರುತ್ತಿತ್ತು! ಮೂರು ಮೂರು ಸಾರೆ ಕಡಿವಾಣ ಕಡಿಯುವ, ಹಾಗು ಭುರುಗುಟ್ಟುವ ಆದರೆ ಸೊಬಗನ್ನು ನೋಡಿದವರು, ಇದ್ದರೆ ಇಂಥಃ ಕುದುರೆಯೇ ಇರಬೇಕೆಂದು ಅನ್ನದೆ ಇರುತ್ತಿದ್ದಿಲ್ಲ. ಅದು ಈಗ ಮೆಲ್ಲಗೆ ಬರುತ್ತಿದ್ದು, ಮೇಲೆ ಕುಳಿತವನು ಬದಿಗೆ ಹೊರಳಿ ಬೇರೊಬ್ಬ ತರುಣನ ಸಂಗಡ ಮಾತಾಡುತ್ತಿದ್ದನು. ಆತನ ಹಿಂದುಗಡೆಯಲ್ಲಿ ಆತನ ಓರಿಗೆಯ ಬೇರೆ ಇಬ್ಬರು ತರುಣರು ಕುದುರೆಯನ್ನೇರಿ ಬರುತ್ತಿದ್ದು, ಅವರ ಹಿಂದುಗಡೆಯಲ್ಲಿ ಬೇರೆ ಐದಾರು ಜನರು ನಡೆಯುತ್ತ ಬರುತ್ತಿದ್ದರು. ಕಾಲನಡಿಗೆಯ ಜನರ ಮೈಮೇಲೆ ಬಟ್ಟೆಗಳು ಅಷ್ಟಕ್ಕಷ್ಟೇ ಇದ್ದವೆಂದು ಹೇಳಬಹುದು. ಈ ಪರಿವಾರದಲ್ಲಿ ತನ್ನ ತೇಜೋವಿಶೇಷದಿಂದ ಜನರ ಚಿತ್ತವನ್ನು ಎಳಕೊಳ್ಳುವಂಥ ಶಿವರಾಯನನ್ನು ಯಾರಾದರೂ ಸಹಜವಾಗಿ ಗೊತ್ತುಹಿಡಿಯಬಹುದಾಗಿತ್ತು. ಅದರಂತೆ, ನಾನಾಸಾಹೇಬನು ತಟ್ಟನೆ ಶಿವಾಜಿಯ ಗುರುತುಹಿಡಿದು, ಆತನನ್ನು ಕಣ್ತುಂಬ

ನೋಡಹತ್ತಿದನು. ಒಟ್ಟಿನ ಮೇಲೆ ಆ ತರುಣರೆಲ್ಲರು ಹೇಳುಕೊಳ್ಳುವ ಹಾಗೆ ಎತ್ತರವಾಗಿ ಇದ್ದಿಲ್ಲ, ಅವರು ತೀರ ಬಡಕವಾಗಿದ್ದರೆಂದು ಹೇಳುವಹಾಗಿರದಿದ್ದರೂ, ಒಟ್ಟಿನ ಮೇಲೆ ಅವರು ಸಾಧಾರಣವಾಗಿ ಪುಡಿಯಾಳೆಂತಲೇ ಹೇಳಬಹುದಾಗಿತ್ತು ಅವರು ಏನೋ ಬಹು ಜಡವಾದ ಪದಾರ್ಥವನ್ನು ಬಹು ಜಾಗ್ರತೆಯಿಂದ ರಕ್ಷಿಸುತ್ತ ಸಾಗಿಸಿಕೊಂಡು ಬಂದಿರುವಂತೆ ತೋರಿತು. ಗುಡಿಯ ಪ್ರಾಕಾರದಲ್ಲಿ ಬಂದಕೂಡಲೆ ಶಿವರಾಯನು ಚಟ್ಟನೆ ಕುದುರೆಯನ್ನು ಇಳಿಯಲು, ಕೂಡಲೆ ಆತನ ಕುದುರೆಯನ್ನು ಒಬ್ಬನು ಹಿಡಿದು ಕೊಂಡು ಹೋದನು. ಆಗ ಬೇರೆ ರಾವುತರು ತಮ್ಮ ತಮ್ಮ ಕುದುರೆಗಳನ್ನು ಇಳಿದು, ಅವನನ್ನು ಸೇವಕರ ಕೈಯಲ್ಲಿ ಕೊಟ್ಟು ಶಿವರಾಯನನ್ನು ಹಿಂಬಾಲಿಸಿ ನಡೆದರು.

ಶಿವರಾಯನು ತನ್ನನ್ನು ಹಿಂಬಾಲಿಸಿರುವ ತರುಣನೊಬ್ಬನ ಸಂಗಡ ಮಾತಾಡುತ್ತ ಗುಡಿಯ ಬಾಗಿಲಿಗೆ ಹೋಗಿ–ಶ್ರೀಧರಸ್ವಾಮಿಗಳವರು ಎಲ್ಲಿ ಇರುವರು? ಎದು ಎರಡುಸಾರೆ ಕೇಳಿದನು. ಆತನು ಈ ಪ್ರಶ್ನೆಗಳನ್ನು ಬಾಗಿಲಲ್ಲಿ ನಿಂತಿದ್ದ ನಾನಾಸಾಹೇಬನನ್ನು ಕುರಿತು ಮಾಡಿದ ಹಾಗಿದ್ದರೂ, ನಾನಾಸಾಹೇಬನು ಯಾರಿರಬಹುದೆಂಬದರ ಕಲ್ಪನೆ ಕೂಡ ಆತನ ಮನಸ್ಸಿನಲ್ಲಿ ಬಂದಂತೆ ತೋರಲಿಲ್ಲ, ಇತ್ತ ಶಿವರಾಯನನ್ನು ಕೇವಲ ಚಕಿತಮುದ್ರೆಯಿಂದ ನೋಡುತ್ತ ನಿಂತಿದ್ದ ನಾನಾಸಾಹೇಬನು, ಬಾಗಿಲಿಗೆ ಶಿವರಾಯನು ಬಂದಕೂಡಲೆ ಬದಿಗಾಗಿ ಶಿವರಾಯನನ್ನೂ, ಆತನ ಇಬ್ಬರು ಮೂವರು ಸಂಗಡಿಗರನ್ನೂ ಒಳಗೆ ಹೋಗಗೊಟ್ಟನು. ಶಿವರಾಯನು ಮಾರುತಿಯ ಬಳಿಗೆ ಹೋಗಿ ಸಾಷ್ಟಾಂಗವಾಗಿ ನಮಸ್ಕರಿಸಿ, ಮೂಲೆಯೊಳಗಿನ ನೆಲಒಲಿಯ ಕಡೆಗೆ ತಿರುಗಿದನು. ಅಲ್ಲಿ ಶ್ರೀಧರಸ್ವಾಮಿಯು ಈ ಚಮತ್ಕಾರವನ್ನು ನೋಡುತ್ತ ಸುಮ್ಮನೆ ಕುಳಿತಿದ್ದನು. ಶಿವಾಜಿಯು ಸ್ವಾಮಿಯನ್ನು ನಮಸ್ಕರಿಸಿ ನಗುತ್ತ ನಗುತ್ತ–ಇದೇನು? ಸ್ವಾಮಿಗಳು ಇಂದು ಒಳಗೇ ಕುಳಿತುಕೊಂಡಿರಿ? ನಾವು ಈ ದಿನ ಯಥಾಶಕ್ತಿ ಗುರುಸೇವೆ ಯನ್ನು ತಂದಿದ್ದೇವೆ. ಅದನ್ನಷ್ಟು ಸನ್ನಿಧಿಗೆ ಒಪ್ಪಿಸಿಬಿಟ್ಟರೆ ತೀರಿತು, ಎಂದು ನುಡಿಯುತ್ತಿರಲು, ಆ ಶಿವಾಜಿಯ ಲಕ್ಷವು ನಾನಾಸಾಹೇಬನ ಕಡೆಗೆ ಹೋಗಿ, ''ಇವರು ಯಾರು'' ಎಂಬ ಅರ್ಥದ ಸನ್ನೆಯನ್ನು ಆತನು ಮಾಡಿದನು. ಅದಕ್ಕೆ ಶ್ರೀಧರಸ್ವಾಮಿಗಳು, ನಮ್ಮ ವರ್ಗ ದೊಳಗಿನವನೇ ಒಬ್ಬನಿರುತ್ತಾನೆಂದು ಹೇಳಿ, ಶಿವಾಜಿಯನ್ನೂ, ಅವನ ಇಬ್ಬರು ಬಾಲಮಿತ್ರ ರಾದ ಏಸಾಜಿಕಂಕ, ತಾನಾಜಿಮಾಲಸುರೆ ಎಂಬವರನ್ನೂ ಕರೆದು ಅವರ ಮುಂದೆ ನಾನಾಸಾಹೇಬನ ವೃತ್ತಾಂತವನ್ನೆಲ್ಲ ಹೇಳಿದರು. ಅದನ್ನು ಕೇಳಿದಕೂಡಲೆ ಆ ಮೂವರು ಬಾಲಮಿತ್ರರು ಹಿಂದಿರುಗಿ ನಾನಾಸಾಹೇಬನನ್ನು ಒಮ್ಮೆ ದಿಟ್ಟಿಸಿ ನೋಡಿ, ಕೂಡಲೆ ಅರ್ಥಪೂರ್ಣ ದೃಷ್ಟಿಯಿಂದ ಪರಸ್ಪರರನ್ನು ನೋಡಿದರು. ಆಮೇಲೆ ಶಿವಾಜಿಯು ಶ್ರೀಧರಸ್ವಾಮಿಗಳನ್ನು ಕುರಿತು–ಮಹಾರಾಜರೇ, ಇಂಥ ಜನರ ಸಹಾಯ ದೊರೆತು ಅಂಬಾಬಾಯಿಯ ಕೃಪೆಯೂ, ತಮ್ಮ ಕೃಪೆಯೂ ಆದರೆ, ಶ್ರೀಸಮರ್ಥ ರಾಮದಾಸ ಸ್ವಾಮಿಗಳವರು ನನ್ನ ಕೈಯಿಂದ ಮಾಡಿಸಬೇಕೆಂದು ಯೋಚಿಸಿರುವ ರಾಜ್ಯಸ್ಥಾಪನೆಯ ಮಹಾಕಾರ್ಯವು ಹಾ ಹಾ ಅನ್ನುವದರೊಳಗೆ ಆದೀತು! ಆ ಕಾರ್ಯವು ಎಂದು

ಸಾಧಿಸೀತೆಂಬ ಆತುರತೆಯಿಂದ ನಾನು ಹಗಲಿರುಳು ಚಡಪಡಿಸುತ್ತೇನೆ; ಆದರೆ ಏನು ಮಾಡಲಿ? ಹಿರಿಯರಾದ ಶಹಾಜಿರಾಜರ, ಹಾಗು ಗುರುಗಳಾದ ದಾದೋಜಿಕೊಂಡ ದೇವರವರ ಅಂಜಿಕೆಯು ನನಗೆ ಬಹಳ ಬರುತ್ತದೆ. ನನ್ನ ಕೆಲಸವು ಅವರಿಗೆ ಸೇರುವದಿಲ್ಲ, ಅವರು ನನಗೆ ಬಾಯಿಗೆ ಬಂದ ಹಾಗೆ ಅನ್ನುತ್ತಾರೆ; ಕೈಗೆ ಬಂದ ಹಾಗೆ ಪತ್ರಬರೆಯುತ್ತಾರೆ. ನನಗೆ ಮನೆಯಲ್ಲಿ ಆಗುವ ತ್ರಾಸವನ್ನು ದೇವರೇ ಬಲ್ಲ. ಬೇಕಾದರೆ ಇವರನ್ನು ಕೇಳಿರಿ, ಎಲ್ಲ ಹೇಳುತ್ತಾರೆ, ಎಂದು ತನ್ನ ಇಬ್ಬರು ಮಿತ್ರರ ಕಡೆಗೆ ನೋಡಲು, ಅವರಲ್ಲಿ ತಾನಾಜಿಯು ಶ್ರೀಧರಸ್ವಾಮಿಗಳನ್ನು ಕುರಿತು–ಸ್ವಾಮಿಗಳೇ, ಆ ತ್ರಾಸವನ್ನು ಇಷ್ಟೆಂದು ಹೇಳುವಹಾಗಿಲ್ಲ. ಅವ್ವನವರೂ ಸಿಟ್ಟುಮಾಡಿ ಹೇಳುತ್ತಾರೆ. ಅವರು ಈತನಿಗೆ–ಶಿವಬಾ, ಹೀಗೆ ತುಂಟತನ ಮಾಡುವದು ಸರಿಯಲ್ಲ, ಹೀಗೆ ಮಾಡಿದರೆ ಬಾದಶಹನಿಗೆ ಸಿಟ್ಟು ಬಂದೀತು, ಹಾಗೆ ಮಾಡಿದರೆ ಹಿರಿಯರ ಕೀರ್ತಿಗೆ ಕುಂದು ಬಂದೀತು, ಪುಂಡಾಟಿಕೆಯು ಕೆಲಸದ್ದಲ್ಲ, ಹಿರಿಯರು ಹೇಳಿದ ಹಾಗೆ ಕೇಳುತ್ತ ಹೋಗು, ನಿನ್ನ ಗುರುಗಳು ನಿನಗೆ ಹಿತವನ್ನೇ ಹೇಳುತ್ತಾರೆ, ಅವರ ಮಾತು ಮೀರಬೇಡ, ಎಂದು ಯಾವಾಗಲೂ ಬೋಧಿಸುತ್ತಾರೆ. ಒಮ್ಮೊಮ್ಮೆ ಅವ್ವನವರು ನಮಗೂ ಸಿಟ್ಟುಮಾಡುವರು. ನಮ್ಮ ಸಂಗತಿಯಿಂದಲೇ ಶಿವಬಾನು ಕೆಟ್ಟನಂತೆ! ಸ್ವಾಮಿಗಳೇ, ಮೋಜು ಹೇಗಿದೆ?

ಈ ಮೇರೆಗೆ ತಾನಾಜಿಯು ನುಡಿಯುತ್ತಿರಲು, ಶಿವಾಜಿಯು ನಡುವೇ ಬಾಯಿ ಹಾಕಿ—ಗುರುಗಳೇ, ಒಟ್ಟಿನ ಮೇಲೆ ನಮಗೆ ಅನುಕೂಲ ಸಂಗತಿಗಳು ಒಂದೂ ಇಲ್ಲ. ಮನೆಯವರೂ ಹೊರಗಿನವರೂ ನಮಗೆ ಹೆಸರನ್ನೇ ಇಡುವರು. ಒಮ್ಮೆ ನನ್ನ ನಿಶ್ಚಯ ವಾಗಿರುವದರಿಂದ, ಎಲ್ಲವನ್ನು ತಾಳಿಕೊಂಡು ಹೆಜ್ಜೆಯನ್ನು ಮುಂದಕ್ಕೆ ಇಡಬೇಕಾಗಿದೆ. ಈದಿನ ಸುಲಿದು ತಂದಿರುವ ಈ ದ್ರವ್ಯವು ಬಹಳ ಇರುವದು. ದಿಲ್ಲಿಯ ಬಾದಶಹನ ಕಡೆಗೆ ಒಯ್ಯತಕ್ಕ ಈ ದ್ರವ್ಯವನ್ನು ಹಾದಿಯಲ್ಲಿ ಅಕಸ್ಮಾತ್ತಾಗಿ ಗುಂಟುಬಿದ್ದು, ಕಾವಲು ಗಾರರನ್ನು ಓಡಿಸಿ, ಮೀರಿನಿಂತವರನ್ನು ತುಂಡರಿಸಿ ತಂದಿದ್ದೇವೆ. ಇಂದಿನ ಪ್ರಸಂಗದಲ್ಲಿ ಈ ತಾನಾಜಿಯೂ, ಏಸಾಜಿಯೂ ಬಹಳ ಶೌರ್ಯವನ್ನು ತೋರಿಸಿದರು, ಎಂದು ಹೇಳಲು, ಶ್ರೀಧರಸ್ವಾಮಿಗಳು ನಗುತ್ತ–ಶಿವಬಾ, ನಿನ್ನ ವಿನಯವನ್ನೂ ಸೌಜನ್ಯವನ್ನೂ ಎಷ್ಟೆಂದು ವರ್ಣಿಸಬೇಕು? ಈ ದಿನ ಯಾರು ಯಾರು ಎಷ್ಟು ಎಷ್ಟು ಪರಾಕ್ರಮ ತೋರಿಸಿದ್ದಾರೆಂಬ ದನ್ನು ನಾನು ಬಲ್ಲೆನು. ಅಪ್ಪಾ, ಹೊತ್ತು ಬಿದ್ದಾಗೆಲ್ಲ ಹೀಗೆ ನೀನು ಮುಂದುವರಿದು ಹೋಗಬೇಡ ಕಂಡೆಯಾ! ನೀನು ಇವರೆಲ್ಲರ ನಾಯಕನು. ನೀನಿದ್ದರೆ ಇವರೆಲ್ಲರ ಆಟವು, ಹೊತ್ತು ಒಂದೇಸವನೆ ಇರುವದಿಲ್ಲ, ಏನಾದರೂ ನಿನಗೆ ಅಪಾಯವಾದರೆ, ಕೆಲಸವು ಘಾತವಾಗಿಹೋದೀತಲ್ಲ! ಎಂದು ನುಡಿಯುವಾಗ, ಶಿವಾಜಿಯ ಸದ್ಗುಣಗಳ ಸ್ಮರಣದಿಂದ ಶ್ರೀಧರಸ್ವಾಮಿಯ ಕಂಠವು ಬಿಗಿದು ಕಣ್ಣಲ್ಲಿ ಆನಂದಬಾಷ್ಪಗಳು ತೋರಿದವು. ಆತನು ಶಿವರಾಯನ ಬೆನ್ನಮೇಲೆ ಕೈಯಾಡಿಸುತ್ತ ಅತ್ಯಂತ ಪ್ರೇಮದಿಂದ ಆತನನ್ನು ನೋಡ ತೊಡಗಿದನು. ಆಗ ತಲೆತಗ್ಗಿಸಿಕೊಂಡು ವಿನಯದಿಂದ ನಿಂತಿದ್ದ ಶಿವಾಜಿಯು ಶ್ರೀಧರಸ್ವಾಮಿಯನ್ನು

ಕುರಿತು– ಸ್ವಾಮಿಮಹಾರಾಜರೇ, ಭವಾನಿಯ, ಹಾಗು ಬಲಭೀಮನ ಕೃಪೆಯೂ, ತಮ್ಮ ಆಶೀರ್ವಾದವೂ ಇರುವತನಕ ನನಗೆ ಯಾವ ವಿಪತ್ತೂ ಬರುವದಿಲ್ಲೆಂದು ನಾನು ನಂಬಿದ್ದೇನೆ. ನಾನೇ ಮುಂದುವರಿದು ಹೋಗದಿದ್ದರೆ, ಇವರನ್ನು ಮುಂದಕ್ಕೆ ಕಳಿಸಲಿಕ್ಕೆ ನನಗೆ ಅಧಿಕಾರವೆಲ್ಲಿಂದ ಬರುತ್ತದೆ? ಈ ಮಾತು ಯಾವಾಗಲೂ ನನ್ನ ಮನಸ್ಸಿನಲ್ಲಿ ಕಟೆಯುತ್ತಿರುವದರಿಂದ, ನಾನೂ ಇವರ ಸಂಗಡ ಮುಂದುವರೆದು ಹೋಗುತ್ತಿರುತ್ತೇನೆ. ಹಿಂದೆ ನಿಂತು ಹುಕುಮು ಮಾಡಲಿಕ್ಕೆ ನನ್ನ ಮನಸ್ಸಿಗೆ ನೆಟ್ಟಗಾಗುವದಿಲ್ಲ ಎಂದು ಹೇಳಿದನು. ಕೆಲಹೊತ್ತು ಯಾರೂ ಮಾತಾಡಲಿಲ್ಲ. ಆಮೇಲೆ ಶಿವಾಜಿಯ ಅಪ್ಪಣೆಯಿಂದ ಸುಲಿಗೆಯ ದ್ರವ್ಯವನ್ನು ಮಾರುತಿಯ ಪ್ರತಿಮೆಯ ಹಿಂದೆ ಇಟ್ಟು, ಎಲ್ಲರೂ ಗುಡಿಯ ಹೊರಗೆ ಹೋದರು. ಶ್ರೀಧರಸ್ವಾಮಿಗಳು, ಶಿವಾಜಿಯು, ಆತನ ಇಬ್ಬರು ಮಿತ್ರರು, ನಾನಾಸಾಹೇಬನು ಇಷ್ಟೇ ಜನರು ಗುಡಿಯಲ್ಲಿ ಉಳಿದರು. ಆಗ ಶ್ರೀಧರಸ್ವಾಮಿಗಳು ಶಿವಾಜಿಯನ್ನು ಕುರಿತು–ಶಿವಬಾ, ಇಲ್ಲಿಯವರೆಗೆ ನಿನ್ನ ಜೀವದ ಗೆಳೆಯರು ಇವರಿಬ್ಬರೇ ಇದ್ದರು. ಇಂದಿನಿಂದ ಈ ಶೂರನಾದ ನಾನಾಸಾಹೇಬನನ್ನು ಜೀವದ ಗೆಳೆಯನೆಂತಲೇ ತಿಳಿದುಕೋ. ಭರತ ಭೂಮಿಯ ಸಲುವಾಗಿ ನಿನ್ನಂತೆಯೇ ಈತನ ಅಂತಃಕರಣವೂ ತಳಮಳಿಸುತ್ತಿರುವದು. ನಿನ್ನಂತೆಯೇ ಈತನೂ ಮುಸಲ್ಮಾನರ ಕೆಟ್ಟ ಕೆಲಸಗಳಿಗಾಗಿ ಸಂತಾಪಗೊಳ್ಳುತ್ತಿರುವನು. ನಿನ್ನಂತೆಯೇ ಈತನ ಸ್ಥಿತಿಯೂ ಇರುತ್ತದೆಂದು ಹೇಳಲಿಕ್ಕೆ ಬಾಧೆಯಿಲ್ಲ. ನಿನ್ನನ್ನು ಕೂಡುವದಕಾಗಿಯೇ ಮನೆಮಾರುಗಳನ್ನು ಬಿಟ್ಟುಬಂದಿದ್ದ ಈತನು, ಹಾದಿಯನ್ನು ತಪ್ಪಿ ನನ್ನ ಬಳಿಗೆ ಬಂದಿದ್ದರಿಂದ, ಇಟ್ಟುಕೊಂಡು ಈಗ ನಿಮ್ಮಿಬ್ಬರ ಗಂಟು ಹಾಕಿಕೊಟ್ಟಿರುತ್ತೇನೆ, ಎಂದು ಹೇಳಲು, ತನ್ನ ತೀಕ್ಷ್ಣದೃಷ್ಟಿಯಿಂದ ಕ್ಷಣಮಾತ್ರದಲ್ಲಿ ನಾನಾಸಾಹೇಬನ ಹೃದಯವನ್ನು ಭೇದಿಸಿ, ಅದರ ಸ್ವರೂಪವನ್ನು ತಿಳಕೊಂಡು ಶಿವಾಜಿಯು ಶ್ರೀಧರಸ್ವಾಮಿಗಳಿಗೆ—ಸ್ವಾಮಿಗಳು ವರ್ಣಿಸಿದ ಮನುಷ್ಯನ ವಿಷಯವಾಗಿ ಇಲ್ಲದ ಸಂಶಯವನ್ನು ತಕ್ಕೊಳ್ಳುವದು ನನ್ನ ಶೀಲವಲ್ಲ; ಗುರು ವಚನವೇ ನನಗೆ ವೇದವಾಣಿಯು, ಎಂದು ನುಡಿದು ನಾನಾಸಾಹೇಬನ ಕಡೆಗೆ ತಿರುಗಿ–ಪ್ರಿಯಮಿತ್ರನೇ, ಸ್ವಾಮಿಗಳ ಅಪ್ಪಣೆಯನ್ನು ಕೇಳಿದೆಯಷ್ಟೇ? ಇವರಿಬ್ಬರು, ನೀನು, ನಾನು ಈ ನಾಲ್ವರು ಇಂದಿನಿಂದ ಏಕಜೀವವೆಂದು ತಿಳಿಯಬೇಕು; ದೇಹಮಾತ್ರ ಭಿನ್ನವಾಗಿರುವವು; ಹೆಚ್ಚಿನ ಮಾತುಗಳು ಹಿಂದುಗಡೆಗೆ; ನೀನು ಸದ್ಯಕ್ಕೆ ನನ್ನ ಸಂಗಡ ಬರತಕ್ಕದ್ದು, ಎಂದು ಹೇಳಿದನು.

ಈ ಮೇರೆಗೆ ಮಾತುಕಥೆಗಳಾದ ಬಳಿಕ ಶ್ರೀಧರಸ್ವಾಮಿಯೂ, ತಾನಾಜಿಯೂ ಮಾರುತಿಯ ಮೂರ್ತಿಯನ್ನು ಸರಿಸಿ ಗುಹೆಯ ಒಳಗೆ ಇಳಿದರು. ಬಳಿಕ ಏಸಾಜಿಯು ದ್ರವ್ಯದ ಪೆಟ್ಟಿಗೆಯನ್ನು ತಾನಾಜಿಯ ಕೈಯಲ್ಲಿಕೊಟ್ಟನು. ದ್ರವ್ಯದ ಪೆಟ್ಟಿಗೆ ಒಳಗೆ ತಕ್ಕೊಂಡದ್ದನ್ನು ಕೇಳಿದ ಬಳಿಕ ಶಿವಾಜಿಯೂ, ಆತನ ಹಿಂದೆ ಏಸಾಜಿಯೂ ಗುಹೆಯೊಳಗೆ ಇಳಿದರು. ನಾನಾಸಾಹೇಬನಿಗೆ ಮೇಲೆಯೇ ಇರಬೇಕೆಂದು ಹೇಳಿದ್ದರಿಂದ ಆತನ ಮನಸ್ಸಿಗೆ ಸ್ವಲ್ಪ ಅಸಮಾಧಾನವಾಯಿತು; ಆದರೂ ಆತನು, ಸೇನಾಪತಿಯ ಅಪ್ಪಣೆಯನ್ನು ಶಿರಸಾವಹಿಸುವ ಸಿಪಾಯಿಯಂತೆ ಒಂದು ಹೆಜ್ಜೆಯನ್ನು ಕೂಡ ಎತ್ತಿ ಮುಂದಕ್ಕೆ ಇಡದೆ, ಸಮಾಧಾನದಿಂದ ಗುಡಿಯಲ್ಲಿಯೇ ಉಳಿದನು. ಒಳಗೆ ಇಳಿದವರು ಹಣದ ಪೆಟ್ಟಿಗೆಯನ್ನು ತಕ್ಕೊಂಡು

ಗುಡಿಯೊಳಗೆ ಹೋಗಿ, ಅದನ್ನು ಭದ್ರವಾಗಿ ಇರಿಸಿದ ಬಳಿಕ, ನಾನಾಸಾಹೇಬನನ್ನು ಒಳಗೆ ಕರೆಸಿಕೊಂಡರು. ಆಗ ಶ್ರೀಧರಸ್ವಾಮಿಗಳು ಶಿವಾಜಿಗೆ–ಶಿವಬಾ, ಇಗೋ ನಾನಾಸಾಹೇಬನು ಬಂದಿದ್ದಾನೆ. ಬೇಗನೆ ನಿಮ್ಮ ಪ್ರತಿಜ್ಞೆಯ ಕಾರ್ಯವನ್ನು ನೆರವೇರಿಸಿಕೊಳ್ಳಿರಿ, ಎಂದು ಹೇಳಿದರು. ಕೂಡಲೆ ಶಿವಾಜಿಯು ಭವಾನಿಗೆ ಪ್ರದಕ್ಷಿಣೆಮಾಡಿ ಸಾಷ್ಟಾಂಗವಾಗಿ ನಮಸ್ಕರಿಸಿ ಎದ್ದು ನಿಂತುಕೊಳ್ಳಲು, ಆತನ ಮುಖದ ತೇಜಸ್ಸು ಬದಲಾಯಿತು. ಆತನಿಗೆ ಬಾಹ್ಯಸೃಷ್ಟಿಯ ಅರಿವು ಇಲ್ಲದಾಯಿತು. ಒಮ್ಮೆಲೆ ಆತನ ಮೈಯಲ್ಲಿ ಭವಾನಿಯ ಸಂಚಾರವಾಗಿ, ಆತನು ಪರವಶನಾಗಿ ಭವಾನಿಯ ಮುಂದೆ ಕೈಜೋಡಿಸಿ ನಿಂತುಕೊಂಡನು. ಅದನ್ನು ನೋಡಿ ನೆರೆಯಲ್ಲಿದ್ದವರು ಸರಿದು ದೂರ ನಿಂತುಕೊಂಡು, ವಾಣಿಯು ಏನು ಹೊರಡುವದೋ ಎಂದು ಹಾದಿಯನ್ನು ನೋಡಹತ್ತಿದರು. ಭವಾನಿಯ ಸಾಕ್ಷಾತ್ಕಾರವು ಶಿವಾಜಿಗೆ ಇದ್ದದ್ದರಿಂದ, ಹೀಗೆ ಯಾವಾಗಾದರೂ ಶಿವಾಜಿಯ ಮೈಯಲ್ಲಿ, ಭವಾನಿಯ ಸಂಚಾರವಾಗುತ್ತಿರುವದನ್ನು ಆತನ ಸಂಗಡಿಗರು ಅರಿತಿದ್ದರು. ಈ ಸಂಗತಿಯು ನಾನಾಸಾಹೇಬನಿಗೆ ಮಾತ್ರ ಹೊಸದಾಗಿ ತೋರಿ, ಆತನು ಶಿವಾಜಿಯ ವಿಷಯವಾಗಿ ಅತ್ಯಂತ ಪೂಜ್ಯಬುದ್ಧಿಯುಳ್ಳವನಾದನು. ಶಿವಾಜಿಯು ಕೆಲವು ಹೊತ್ತು ಭವಾನಿಯ ಎದುರಿಗೆ ಕೈಜೋಡಿಸಿ ನಿಂತುಕೊಂಡಬಳಿಕ, ಭವಾನಿಗೆ ಎರಡು ಮೂರುಸಾರೆ ಸಾಷ್ಟಾಂಗ ನಮಸ್ಕಾರ ಮಾಡಿ, ಭೂಮಿಯ ಮೇಲೆ ಒರಗಿರಲು, ಆತನ ಮುಖದಿಂದ—''ಸಂಕಟವು ಒದಗೀತು; ಆದರೆ ನಾಶವಾಗಲಾರದು. ಎಚ್ಚರದಿಂದ ಇರತಕ್ಕದ್ದು..... ಅವಿಂಥರು ಶ್ರೀಮಂತರ.... ಸ್ವಲ್ಪ ಬಲಿಷ್ಠರು,'' ಎಂಬ ಶಬ್ದಗಳು ಹೊರಟವು. ಅವನ್ನು ಶ್ರೀಧರಸ್ವಾಮಿಗಳೂ, ಉಳಿದವರೂ ಚೆನ್ನಾಗಿ ನೆನಪಿನ ಲ್ಲಿಟ್ಟರು. ಎಚ್ಚರಿಕೆಯಿಲ್ಲದೆ ಭೂಮಿಯಮೇಲೆ ಒರಗಿದ್ದ ಶಿವಾಜಿಯನ್ನು ಎಚ್ಚರಗೊಳಿಸಲಿಕ್ಕೆ ಯಾರೂ ಯತ್ನಿಸಲಿಲ್ಲ, ನಾಲ್ವರೂ ತಟಸ್ಥ ವೃತ್ತಿಯಿಂದ ಆತನನ್ನು ಸ್ವಸ್ಥಚಿತ್ತರಾಗಿ ನೋಡುತ್ತ ನಿಂತುಕೊಂಡಿದ್ದರು. ಬರಬರುತ್ತ ಶಿವಾಜಿಗೆ ಎಚ್ಚರವಾಗತೊಡಗಿತು! ಆತನು ಸುತ್ತುಮುತ್ತು ನೋಡಿ ನಾನಾಸಾಹೇಬನನ್ನು ಹತ್ತರ ಕರೆದು ಆತನ ಮೈಮೇಲೆ ಕೈಯಾಡಿಸಿ, ತನ್ನ ಖಡ್ಗವನ್ನು ತೆಗೆದು ಭವಾನಿಯ ಮುಂದೆ ಇಟ್ಟು, ನಾನಾಸಾಹೇಬನಿಗೆ—''ನಾನು ಭವಾನಿಯ ಸೇವೆಯಲ್ಲಿಯೂ, ಗೋಬ್ರಾಹ್ಮಣರ ಉಪದ್ರವ ದೂರಮಾಡುವದರಲ್ಲಿಯೂ ಪ್ರಾಣವನ್ನು ಅರ್ಪಿಸುವೆನೆಂದು ನುಡಿದು, ಜಗದಂಬೆಯನ್ನು ಸಾಷ್ಟಾಂಗವಾಗಿ ವಂದಿಸಿ, ಈ ಖಡ್ಗವನ್ನು ಎತ್ತು'' ಎಂದು ಹೇಳಿದನು. ನಾನಾಸಾಹೇಬನು ಶಿವಾಜಿಯ ಹೇಳಿಕೆಯಂತೆ ಅಂತಃಕರಣ ಪೂರ್ವಕವಾಗಿ ಎಲ್ಲ ಕೃತಿಯನ್ನು ಮಾಡಿ, ಖಡ್ಗವನ್ನು ಎತ್ತಿ ತನ್ನ ತಲೆಯಮೇಲೆ ಇಟ್ಟುಕೊಂಡನು. ಇಷ್ಟಾದ ಬಳಿಕ ಶಿವಾಜಿಯು ಪೂರ್ಣವಾಗಿ ಎಚ್ಚತ್ತು ಶ್ರೀಧರಸ್ವಾಮಿಗಳ ಕಡೆಗೆ ನೋಡಿ—ಸ್ವಾಮಿಗಳೇ, ಏನಾದರೂ ಹೊಸ ಸುದ್ದಿಯು ಇರುವದೇ, ಎಂದು ಕೇಳಲು, ಸ್ವಾಮಿಗಳು— ಹೌದು, ಇರುತ್ತದೆ; ''ಸಂಕಟ ಒದಗೀತು; ಆದರೆ ನಾಶವಾಗಲಾರದು.... ಅವಿಂಥರು ಶ್ರೀಮಂತರು... ಸ್ವಲ್ಪ ಬಲಿಷ್ಠರು'' ಎಂದು ಉಚ್ಚಾರವಾಯಿತು, ಎಂದು ಹೇಳಿದರು. ಅದನ್ನು ಕೇಳಿ ಶಿವಾಜಿಗೆ ಸ್ವಲ್ಪ ಅಸಮಾಧಾನವಾದರೂ, ಹೊರಗೆ ಆತನು ಅದನ್ನು ತೋರಗೊಡಲಿಲ್ಲ.

# ಸಂಕಟ ಪ್ರಾಪ್ತಿ

ಮೇಲೆ ಹೇಳಿದಂತೆ ಶಿವಾಜಿಯು ತನ್ನ ಮನಸ್ಸಿನ ಅಸಮಾಧಾನವನ್ನು ತೋರಗೊಡದೆ, ಎಲ್ಲರನ್ನುದ್ದೇಶಿಸಿ ಸ್ವಾಮಿಗಳ ಕಡೆಗೆ ನೋಡಿ—ಸ್ವಾಮಿಗಳೆ, ಲಕ್ಷಣವು ನೆಟ್ಟಗೆ ಕಾಣುವದಿಲ್ಲ. ಭವಾನಿಯು ಸೂಚಿಸಿದಂತೆ ಸಂಕಟವು ಯಾವಾಗ ಒದಗೀತೆಂಬದನ್ನು ಹೇಳಲಿಕ್ಕಾಗದು, ವಿನಾಶದ ಭಯವಂತು ಇಲ್ಲವೇ ಇಲ್ಲ. ಈ ಮಾತು ಸಿದ್ಧವಾದದ್ದು; ಆದರೂ ಎಚ್ಚರದಿಂದ ನಡೆಯಬೇಕಾಗಿರುವದು. ನಮ್ಮಿಂದ ಕಾರ್ಯವು ಸಾಧಿಸಿದರೆ, ನಮಗೆ ಆಗುವವರೂ, ಆಗುವ ಸೋಗಿನವರೂ ಸಂತೋಷಪಡುವ ಹಾಗಿದ್ದಾರೆ; ಆದರೆ ಕಾರ್ಯಸಾಧನದಲ್ಲಿ ಅಂತಃಕರಣ ಪೂರ್ವಕ ಹೆಣಗುವವರು ಅಪರೂಪವು. ಶ್ರೀ ಭವಾನಿಯ ಕೃಪೆಯಿಂದ ದ್ರವ್ಯದ ಕೊರತೆಯು ಸದ್ಯಕ್ಕೂ ಇಲ್ಲ, ಮುಂದೆಯೂ ಆಗುವಹಾಗಿಲ್ಲ. ಕೊರತೆಯೆಂದರೆ, ಮನುಷ್ಯರ ಕೊರತೆಯು. ಸ್ವದೇಶ ಬಾಂಧವರ ವಿಪತ್ತನ್ನು ದೂರಮಾಡುವದಕ್ಕಾಗಿಯೂ, ಸ್ವಧರ್ಮರಕ್ಷಣಕ್ಕಾಗಿಯೂ ಜೀವದ ಹಂಗು ಇಲ್ಲದೆ ಯತ್ನಿಸುವ ಜನರು ಬೇಕಾಗಿದ್ದಾರೆ. ಭವಾನಿಯ ಕೃಪೆಯೂ, ಸ್ವಾಮಿಮಹಾರಾಜರ ಆಶೀರ್ವಾದವು ಇರುವತನಕ, ವಿಘ್ನಕೋಟಿಗಳು ದೂರವಾಗುವದರಲ್ಲಿ ಸಂಶಯವಿಲ್ಲ; ನಿಮ್ಮಂಥ ಶೂರರ ಸಹಾಯವಿರುವ ತನಕ ಯಶಃಪ್ರಾಪ್ತಿಯಲ್ಲಿಯೂ ಸಂಶಯವಿಲ್ಲ; ಆದರೂ ಕಾರ್ಯಸಿದ್ಧಿಯು ಕೈಗೆ ನಿಲುಕದಷ್ಟು ದೂರವಾಗಿದ್ದಂತೆ ತೋರುತ್ತದೆ! ಮಿತ್ರರೇ, ಇಂದು ಯಾಕೋ ನನ್ನ ಮನಸ್ಸು ಬಹಳ ಉದಾಸೀನವಾಗಿರುವದು. ನಾನಾ ಸಾಹೇಬನಂಥ ತರುಣ ವೀರನು ನಮ್ಮನ್ನು ಕೂಡಿರಲು, ಮನಸ್ಸು ಉದಾಸವಾಗಿರಬೇಕೆ? ಈ ದುರ್ಲಕ್ಷಣದಿಂದ, ಸಂಕಟ ಒದಗುವದರಲ್ಲಿ ವಿಲಂಬವಾಗುವ ಹಾಗೆ ತೋರುವದಿಲ್ಲ!

ಈ ಮೇರೆಗೆ ಶಿವಾಜಿಯು ನುಡಿಯುತ್ತಿರಲು, ಹೊರಗೆ ಗುಡಿಯಬಾಗಿಲು ಕಾಯುವವನು ಬಾಗಿಲನ್ನು ಕಸುವಿನಿಂದ ಬಡಿಯಹತ್ತಿದನು. ಅದನ್ನು ಕೇಳಿ ಶ್ರೀಧರಸ್ವಾಮಿಗಳು—''ಯಾರಾದರೂ ಹೊರಗೆ ಹೋಗಿ ವಿಚಾರಿಸಬೇಕೆ''ಂದು ನುಡಿದ ಕೂಡಲೆ ತಾನಾಜಿಯೂ, ನಾನಾಸಾಹೇಬನೂ ಗುಹೆಯ ಮುಖದಿಂದ ಹೊರಟು ಗುಡಿಯಲ್ಲಿ ಬಂದು ಬಾಗಿಲ ತೆರೆದರು. ಅಲ್ಲಿ ಒಬ್ಬ ಗೋಸಾವಿಯು ಬಂದಿದ್ದನು. ಬಾಗಿಲುಬಡಿದ ಕಾರಣವೇನೆಂದು ತಾನಾಜಿಯು ದ್ವಾರರಕ್ಷಕನನ್ನು ಕೇಳಲು, ಗೋಸಾವಿಯು – ಒಬ್ಬ ಖಾನನು ಪರಿವಾರದೊಡನೆ ಈ ಗುಡಿಯ ಕಡೆಗೆ ಬರುತ್ತಿರುವನು, ಹೇಗೋ ಆತನಿಗೆ ಇಲ್ಲಿಯ ಸುದ್ದಿಗೊತ್ತಾದಂತೆ ಕಾಣುತ್ತದೆ. ಪರಿವಾರವು ಸಮೀಪಕ್ಕೆ ಬಂದಿರುತ್ತದೆ. ಈ ಸುದ್ದಿಯನ್ನು ಸ್ವಾಮಿಗಳಿಗೆ ಮುಟ್ಟಿಸಬೇಕು, ಎಂದು ಹೇಳಿದನು. ಇದನ್ನು ಕೇಳಿ ನಾನಾಸಾಹೇಬನು ಗಾಬರಿಯಾಗಲು, ತಾನಾಜಿಯು ಸರಿ ಸರಿ! ಇಂಥ ಸೊಟ್ಟ ಸುದ್ದಿಗೆ ಹೆದರಿದರೆ ಮುಂದೆ ಗತಿಯೇನು? ಇಂಥ ಹಲವು ಸುದ್ದಿಗಳು ದಿನಾಲು ಬರುತ್ತಿರುತ್ತವೆ. ಒಳಗೆ ನಡೆಯಿರಿ, ಈ ಸುದ್ದಿಯನ್ನು ಹೇಳಿದ ಕೂಡಲೆ ಏನು ಚಮತ್ಕಾರವಾಗುತ್ತದೆ ನೋಡಿರಿ, ಎಂದು

ನುಡಿದು, ನಾನಾಸಾಹೇಬನೊಡನೆ ಗುಹೆಯೊಳಗೆ ಇಳಿದು ಕೇಳಿದ ಸುದ್ದಿಯನ್ನು ಸ್ವಾಮಿಗಳ ಮುಂದೆ ಹೇಳಿದನು. ಅದನ್ನು ಕೇಳಿ ಶಿವಾಜಿಯು ಶ್ರೀಧರಸ್ವಾಮಿಗಳಿಗೆ–ಇದು ಎದುರಿಗೆ ನಿಲ್ಲುವ ಹೊತ್ತು ಅಲ್ಲ, ನಿಂತರೆ, ಎಲ್ಲಿಯಾದರೂ ಗುಪ್ತಸ್ಥಳದ ಗೊತ್ತುಹತ್ತೀತು; ಆದ್ದರಿಂದ ನೀವು ಮೇಲೆ ಹೋಗಿ, ''ನಾಳೆ ಸಂಜೆಯವರೆಗೆ ಸದ್ದು ಇಲ್ಲದಂತೆ. ಎಲ್ಲಿಯೋ ಅಡಗಿರಬೇಕು'' ಎಂದು ನಮ್ಮ ಎಲ್ಲರನ್ನು ಆಜ್ಞಾಪಿಸಿರಿ; ನಮ್ಮದು ನಾವು ನೋಡಿಕೊಳ್ಳುವೆವು; ಎಂದು ಹೇಳಿದನು, ಕೂಡಲೆ ಸ್ವಾಮಿಗಳು ಮೇಲೆ ಬಂದು ಶಿವಾಜಿಯ ಅಪ್ಪಣೆಯನ್ನು ಎಲ್ಲರಿಗೂ ಹೇಳಿದರು. ಅಪ್ಪಣೆಯಂತೆ ಹೊರಗಿನವರೆಲ್ಲರು ಹೊರಟುಹೋಗಲು, ಸ್ವಾಮಿಗಳು ತಾವು ಮಾರುತಿಯ ಪ್ರತಿಮೆಯನ್ನು ಅದರ ಸ್ಥಳದಲ್ಲಿ ಸರಿಯಾಗಿ ಕುಳ್ಳಿರಿಸಿ, ''ರಾಜಾರಾಮಕೀಜಯ, ಸೀತಾರಾಮಕೀಜಯ'' ಎಂದು ಭಜನೆಮಾಡುತ್ತ ಆ ನೆಲಒಲೆಯ ಬಳಿಯಲ್ಲಿ ಕುಳಿತು ಚಿಲಿಮೆಯನ್ನು ಸಿದ್ಧಮಾಡತೊಡಗಿದರು.

ಶ್ರೀಧರಸ್ವಾಮಿಗಳು ಯೋಗದಂಡದ ಮೇಲೆ ಕೈ ಊರಿ ''ದಾಶರಥೇರಾಮ! ರಾಜಾರಾಮ! ಜಯರಾಮ! ಜಯಸೀತಾರಾಮ!'' ಎಂದು ಭಜನೆಯನ್ನು ಮಾಡುತ್ತ ಭಜನೆಯಲ್ಲಿ ಮಗ್ನರಾಗಿರುವಂತೆ ಕುಳಿತುಕೊಂಡಿದ್ದರು; ಆದರೆ ಅವರ ಮನಸ್ಸು ಮಾತ್ರ ಭಜನೆಯಲ್ಲಿದ್ದಂತೆ ತೋರಲಿಲ್ಲ, ಒಬ್ಬ ಖಾನನು ಪರಿವಾರದೊಡನೆ ತಮ್ಮ ಗುಡಿಯ ಕಡೆಗೇ ಬರುತ್ತಿರುವನೆಂಬ ಸುದ್ದಿಯನ್ನು ಕೇಳಿದಾಗಿನಿಂದ, ಅವರ ಮನಸ್ಸು ಖಾನನ ಕಡೆಗೆ ಹೋಗಿತ್ತು, ಅವರು ತಮ್ಮ ಶಾಟಿಯನ್ನು ಹಿಂಡುವ ನೆವದಿಂದಲೂ, ಉಗುಳುವ ನೆವದಿಂದಲೂ ಹತ್ತಿಪ್ಪತ್ತು ಸಾರೆ ಗುಡಿಯು ಹೊರಗೆ ಬಂದು, ನಾಲ್ಕೂ ಕಡೆಗೆ ನೋಡಿಹೋದರು. ಸ್ವಲ್ಪ ಹೊತ್ತಿನಮೇಲೆ ಜನರ ಕಾಲಸಪ್ಪಳವು ಕೇಳಿಸತೊಡಗಲು, ಅವರ ಭಜನೆಯ ಧ್ವನಿಯು ದೂರದವರೆಗೆ ಕೇಳಿಸಹತ್ತಿತು. ಬರಬರುತ್ತ ಜನರು ಗುಂಪು ಕಣ್ಣಿಗೆ ಕಾಣಿಸಹತ್ತಿತು. ಆಗ ಸ್ವಾಮಿಗಳವರು, ಒಳಗೆ ಕಠಾರಿಯು ಗುಪ್ತವಾಗಿರುವ ತಮ್ಮ ಯೋಗದಂಡವನ್ನು ನೋಡಿ—ಅಮ್ಮಾ ನೀನು ಗುರುಪ್ರಸಾದವು. ಇಂದೇ ನಿನ್ನನ್ನು ಉಪಯೋಗಿಸುವ ಪ್ರಸಂಗವು ಬರುವದೋ ಏನು? ಜೀವ ಹೋದರೂ ಗುಟ್ಟನ್ನು ಹೊರಗೆಡವಲಿಕ್ಕಿಲ್ಲ, ಜೀವದಿಂದಂತು ಅವರ ಕೈಯಲ್ಲಿ ಸಿಗುವ ಹಾಗಿಲ್ಲ, ಏನು ಪ್ರಸಂಗ ಬರುತ್ತದೋ ನೋಡೋಣ, ಎಂದು ಭಜನೆಯನ್ನು ಉಚ್ಚಸ್ವರದಿಂದ ಮಾಡುತ್ತ ತಮ್ಮ ಭಜನೆಯು ಹೊರಗೆ ಬಂದವರಿಗೆ ತಾವು ಕುಳಿತಲ್ಲಿಂದಲೇ ಕೇಳಬೇಕೆಂಬ ಉದ್ದೇಶದಿಂದ, ಸ್ಥಳಬಿಟ್ಟು ಕದಲದೆ ಕಣ್ಣು ಮುಚ್ಚಿ ಕುಳಿತುಕೊಂಡರು. ಅಷ್ಟರಲ್ಲಿ ಮುಸಲ್ಮಾನರ ಪರಿವಾರವು ಗುಡಿಯ ಬಾಗಿಲಿಗೆ ಬಂದಿತು. ಅವರಲ್ಲಿ ಇಬ್ಬರು ಮುಖ್ಯರು ಬಾಗಿಲಲ್ಲಿ ಹಣಿಕಿ ನೋಡಿ ಹಿಂದುಸ್ತಾನೀ ಭಾಷೆಯಿಂದ–ಯಾವನಿದ್ದಾನೆ ಒಳಗೆ? ಗೋಸಾವ್ಯಾನೇನು? ಎಲೋ ಗೋಸಾವ್ಯಾ, ನೀನು ಯಾಕೆ ಇಲ್ಲಿ! ಎಂದು ಗದರಿಸಿದ ಶಬ್ದಗಳು ಸ್ವಾಮಿಗಳ ಕಿವಿಗೆ ಬಿದ್ದವು. ಸ್ವಾಮಿಗಳು ಅವುಗಳ ಹಾದಿಯನ್ನು ನೋಡುತ್ತಲೇ ಇದ್ದರು. ಅವರು ಕೂಡಲೆ ಮುಂದಕ್ಕೆ ಬಂದು –ಯಾರವರು? ಮಹಾರಾಜರೇ, ನೀವು ನನ್ನನ್ನು ಯಾಕೆ ಕರೆದಿರಿ? ಎಂದು ಕೇಳಿದರು. ಆಗ ಆ ಬಂದ ಇಬ್ಬರಲ್ಲಿ ಶಿವದೇವರಾಯನೆಂಬ

ಮಹಾರಾಷ್ಟ್ರ ಸರದಾರನು, ಶ್ರೀಧರಸ್ವಾಮಿಗಳನ್ನು ಕುರಿತು–ಈ ಗುಡಿಯು ಯಾರದು? ಇಲ್ಲಿ ಯಾರು ಯಾರು ಇರುತ್ತೀರಿ? ನೀನು ಇಲ್ಲಿ ಏನು ಮಾಡುತ್ತೀ? ಇಲ್ಲಿ ಇರಲಿಕ್ಕೆ ನಿನಗೆ ಯಾರು ಹೇಳಿದರು? ಎಂದು ಪ್ರಶ್ನೆಗಳ ಮಳೆ ಸುರಿಸುತ್ತಿರುವಾಗ, ಗೋಸಾವಿಯು ಉತ್ತರ ಕೊಡಲಿಕ್ಕೆ ಯತ್ನಿಸಿರಲು, ಸರ್ಜೇಖಾನನೆಂಬ ಇನ್ನೊಬ್ಬ ಮುಸಲ್ಮಾನ ಸರದಾರನು ನಡುವೇ ಬಾಯಿಹಾಕಿ–ಅ:! ಸಾಲಾ ಸುವರ! ಇವನು ಹೀಗೆ ಸುಮ್ಮನೆ ಕೇಳಿದರೆ ಹೇಳುವನೆ? ಕಟ್ಟಿರಿ ಇವನನ್ನು ಹೆಡಮುರಿಗೆ, ಏನು ನೋಡುತ್ತೀರಿ? ಇವನು ಬಹು ಘಾತಕಿ ಇದ್ದಾನೆಂಬಂತೆ ತೋರುತ್ತದೆ! ಎಲೇ ಗೋಸಾವ್ಯಾ, ಹೇಳು, ಇಲ್ಲಿ ಮತ್ತೆ ಯಾರು ಇರುತ್ತಾರೆ? ಅನ್ನಲು, ಶ್ರೀಧರಸ್ವಾಮಿಗಳು ತಮ್ಮ ಸಮಾಧಾನವೃತ್ತಿಗೆ ಭಂಗತಂದುಕೊಳ್ಳದೆ– ಮಹಾರಾಜರೇ, ಗುಡಿಯು ಮಾರುತಿಯದು; ನಾನು ಇಲ್ಲಿ ಒಬ್ಬನೇ ಇರುತ್ತೇನೆ. ನೆರೆಹೊರೆಯ ಹಳ್ಳಿಗಳಲ್ಲಿ ಬಿಕ್ಕೆಬೇಡಿ ಹೊಟ್ಟೆ ತುಂಬಿಕೊಳ್ಳುವೆನು. ರಾಜಾರಾಮನನ್ನು ಭಜಿಸುತ್ತ ಸ್ವಸ್ಥವಾಗಿ ಇರುವೆನು.''

ಶಿವದೇವರಾವ—ಇಲ್ಲಿ ಮತ್ತೆ ಯಾರು ಇರುತ್ತಾರೆ? ಹೇಳು, ಯಾರು ಇರುತ್ತಾರೆ ಮತ್ತೆ?

ಶ್ರೀಧರಸ್ವಾಮಿ—ಬೇರೆಯವರಂತು ಯಾರೂ ಇಲ್ಲಿ ಇರುವದಿಲ್ಲ, ನನ್ನಂತೆ ಮನೆಮಾರು ಗಳಿಲ್ಲದ ಘಟಿಂಗ ಗೋಸಾವಿಗಳು ಯಾವಾಗಾದರೂ ಬರುತ್ತಿರುತ್ತಾರೆ. ಒಂದೆರಡುಗಳಿಗೆ, ಬಹಳವಾದರೆ ಒಂದೆರಡು ದಿವಸ ಇರುತ್ತಾರೆ; ಮತ್ತೆ ತಮ್ಮ ಹಾದಿಯ ಹಿಡಿದುಹೋಗುತ್ತಾರೆ.

ಶಿವದೇವರಾಯ—ಅಲ್ಲ ಅಲ್ಲ; ಗೋಸಾವಿಗಳಲ್ಲ; ಮತ್ತೆ ಯಾರು ಇಲ್ಲಿ ಬರುತ್ತಾರೆ ಹೇಳು.

ಶ್ರೀಧರಸ್ವಾಮಿ—ಮತ್ತೆ ಯಾರು ಬರಬೇಕು? ಯಾರಾದರೂ ಶನಿವಾರ ದಿವಸ, ಮತ್ತು ಹನುಮಜ್ಜಯಂತಿಯ ದಿವಸ ಬಲಭೀಮನ ದರ್ಶನಕ್ಕಾಗಿ ಸುತ್ತಲಿನ ಹಳ್ಳಿಯ ಜನರು ಬರುತ್ತಿರುವರು. ಯಾರದು ಹರಿಕೆಯಿರುತ್ತದೆ; ಯಾರದು ಪ್ರಸಾದ ಕಟ್ಟುವ ದಿರುತ್ತದೆ, ಯಾರದು ಬೇಡಿಕೊಳ್ಳುವದಿರುತ್ತದೆ; ಹೀಗೆ ಯಾವದೊಂದು ಕಾರಣದಿಂದ ಜನರು ಬರುತ್ತಿರುತ್ತಾರೆ! ಉಳಿದವರಾರೂ ಬರುವದಿಲ್ಲ,

ಶಿವದೇವರಾಯ—ಯಾರು ಇಲ್ಲವೆ? ...... ಎರಡನೆಯವರಾರೂ ಬರುದಿಲ್ಲವೆ? ನಿಜವಾಗಿ ಹೇಳು ಗೋಸಾವ್ಯಾ!

ಶ್ರೀಧರಸ್ವಾಮಿ—ಮಹಾರಾಜರೇ, ನಮ್ಮಂಥ ಬಡವರನ್ನು ಗೋಸಾವ್ಯಾ–ಗೀಸಾವ್ಯಾ ಎಂದು ಸುಮ್ಮನೆ ಯಾಕೆ ಜರೆದಾಡಿ ಪೀಡಿಸುತ್ತೀರಿ? ನಾನು ಒಮ್ಮೆ ಹೇಳಿದೆನಲ್ಲವೇ ಉಳಿದವರಾರೂ ಇಲ್ಲಿಗೆ ಬರುವದಿಲ್ಲೆಂದು! ಮೇಲೆ ಹೇಳಿದ ಬಳಿಕ ದೇವಭಕ್ತರ ಹೊರತು ಮತ್ತೆ ಯಾರೂ ಇಲ್ಲಿಗೆ ಎಂದೂ ಬರುವದಿಲ್ಲ,

ಶಿವದೇವರಾಯ—ಹ! ಹ! ಇಲ್ಲಿ ರಾತ್ರಿ ಎಂದು ಜನರು ಕೂಡಿ ದಾಂಡಪಟ್ಟೆಗಳನ್ನು ತಿರುವುವದಿಲ್ಲವೆ? ಕುಸ್ತಿಗಳನ್ನು ಆಡುವದಿಲ್ಲವೆ?

ಶ್ರೀಧರಸ್ವಾಮಿ—ಮಹಾರಾಜರೇ, ನಾನು ಇಲ್ಲೆಂದು ಹೇಗೆ ಹೇಳಲಿ? ಹೇಳಿ ಕೇಳಿ ಬಲಭೀಮನ ದೇವಸ್ಥಾನವಿರುವದರಿಂದ, ಇಂಥ ಕೆಲಸಗಳು ಯಾವಾಗಾದರೂ ಅಪ್ಪಿತಪ್ಪಿ ಇಲ್ಲಿ ನಡೆಯುತ್ತಿರುತ್ತವೆ.

ಶಿವದೇವರಾಯ—ಸಾಕು ಸಾಕು! ನನಗೆ ಬ್ರಹ್ಮಜ್ಞಾನದ ಅವಶ್ಯಕತೆಯಿಲ್ಲ, ಹೀಗೆ ಕುಸ್ತಿ ಮೊದಲಾದವನ್ನು ಆಡಲಿಕ್ಕೆ ಎಲ್ಲಿಯ ಜನರು ಬರುತ್ತಾರೆ? ಈಪೊತ್ತು ಬಂದಿದ್ದರೋ ಇಲ್ಲವೋ?

ಶ್ರೀಧರಸ್ವಾಮಿ—ಇಲ್ಲಿಯೇ ನೆರೆಹೊರೆಯ ಹಳ್ಳಿಯ ಜನರು ಬರುವರು. ಎರಡನೆಯವರಾರು ಬರಬೇಕು? ಬಂದ ಜನರು ಗಳಿಗೆ ಕೂಡ್ರುವರು, ಹರಟೆಕೊಚ್ಚುವರು, ಮೋಜು ಮಾಡುವರು, ಕಾಯಿ ಒಡೆಯುವರು, ಪ್ರಸಾದ ಹಂಚುವರು ಹೋಗುವರು; ಇದರಲ್ಲಿ ವಿಶೇಷವೇನಿರುವದು? ಆದರೆ ಸರದಾರ ಸಾಹೇಬರೇ, ತಾವು ಇಷ್ಟು ಕೆದರಿ ಕೆದರಿ ಕೇಳುವದರಲ್ಲಿ ಏನು ಮಹತ್ವವಿರುವದೋ ನಾನರಿಯನು!

ಶಿದೇವರಾಯ (ಹುಬ್ಬು ಗಂಟಿಕ್ಕಿ)—ಅದರ ಗೊಡವೆ ನಿನಗೇಕೆ? ಗೋಸಾವ್ಯಾ, ನಾನು ಕೇಳಿದಷ್ಟು ಹೇಳು. ಸುಳ್ಳು ಆಡಿದರೆ ಪರಿಣಾಮ ನೆಟ್ಟಗಾಗಲಿಕ್ಕಿಲ್ಲ. ಶಹಾಜಿಯ ಮಗನಾದ ಶಿವಾಜಿಯು ಇಲ್ಲಿಗೆ ಯಾವಾಗಾದರೂ ಬರುತ್ತಾನೋ ಇಲ್ಲವೊ?.... ಮಾತಾಡು, ಇದು ಆತನು ಬರಹೋಗುವ ಸ್ಥಳವಾಗಿರುವದೊ ಇಲ್ಲವೊ? ಆತನ ಸಂಗಡ ಬೇರೆ ಯಾರಾದರೂ..... ನೋಡು ಗೋಸಾವ್ಯಾ, ನನ್ನ ಮುಂದೆ ಸುಳ್ಳು ಹೇಳಿದರೆ ಏನು ಮಾಡೇನು ಏನು ಮಾಡಲಿಕ್ಕಿಲ್ಲೆಂಬ ನಿಯಮವಿಲ್ಲ ನಾನು ಜಾತಿಯಿಂದ ಮಹಾರಾಷ್ಟ್ರನಿರುತ್ತೇನೆ, ಹೊರಗೆ ಬಂದಿರುವ ಮುಸಲ್ಮಾನರೆಲ್ಲ ಶಿವಾಜಿಯನ್ನು ಹಿಡಿಯುವದಕ್ಕಾಗಿ ಬಾದಶಹನಿಂದ ಕಳುಹಲ್ಪಟ್ಟವರಿರುತ್ತಾರೆ. ಶಿವಾಜಿಯನ್ನು ಹಿಡಕೊಂಡೇ ಬರುವೆವೆಂದು ಜಂಗುಕಟ್ಟಿಕೊಂಡು ಬಂದಿರುವವರ ಮುಂದೆ, ನಿನ್ನ ತಗಲು ತಾಟು ನಡೆಯಲಿಕ್ಕಿಲ್ಲ. ಸುಮ್ಮನೆ ಇದ್ದದ್ದನ್ನು ಇದ್ದ ಹಾಗೆ ಹೇಳು.

ಶ್ರೀಧರ ಸ್ವಾಮಿ—ಹ? ಹ? ಒಟ್ಟಿಗೆ ನೀವು ಶಿವಾಜಿಯನ್ನು ಹಿಡಿಯಲಿಕ್ಕೆ ಬಂದಿರುತ್ತೀರಿ? ಆತನಂತು ಇಲ್ಲಿ ಎಂದೂ ಬರುತ್ತಿರುವಂತೆ ತೋರುವದಿಲ್ಲ. ಇಲ್ಲಿ ದಿನಾಲು ಇಂಥವರೇ ಬರಬೇಕೆಂಬ ನಿಯಮವಿಲ್ಲ. ಅನಂತ ಜನರು ಬರುತ್ತಾರೆ, ಹೋಗುತ್ತಾರೆ. ಎಂಟೆಂಟು ದಿನ ಒಂದು ಹುಳ ಮಿಸುಕುವದಿಲ್ಲ. ನಾನು ಒಬ್ಬನೇ ಈ ಗಿಡಮೊಳಗಿನ ಗೂಗೆಗಳ, ಹಾಗು ತೊಗಲ ಬಾವುಲಿಗಳ ಸಹವಾಸದಿಂದ ಕಾಲಕಳೆಯುತ್ತಿರುತ್ತೇನೆ. ತಾವು ಮಹಾರಾಷ್ಟ್ರ ಸರದಾರರು, ಬಾದಶಹನ ಅಪ್ಪಣೆಯಿಂದ ಶಿವಾಜಿಯನ್ನು ಹಿಡಿಯುವದಕ್ಕಾಗಿ ಜಂಗುಕಟ್ಟಿಕೊಂಡು ಬಂದಿರುತ್ತೀರಿ. ಶಾಭಾಸ ಸೀತಾಪತೇ, ನಿನ್ನ ಲೀಲೆಯು ಅಗಾಧವಾದದು!

ಗೋಸಾವಿಯು ಕಡೆಯ ವಾಕ್ಯವನ್ನು ಚಮತ್ಕಾರದ ದನಿಯಿಂದ ನುಡಿದು, ಶಿವದೇವರಾಯನನ್ನು ಚಮತ್ಕಾರದ ದೃಷ್ಟಿಯಿಂದ ನೋಡಿದ್ದರಿಂದ, ಆ ಮಹಾರಾಷ್ಟ್ರ ಸರದಾರನ

ಮನಸ್ಸಿಗೆ ಒಂದು ತರವಾಯಿತು. ಆತನು ಅದನ್ನು ತೋರಗೊಡದೆ, ಗೋಸಾವಿಯ ಕಡೆಗೆ ನೋಡಿ—

ಶಿವದೇವರಾವ—ಸಾಕು-ಸಾಕು! ಬಾವಾನವರೇ, ಹೆಚ್ಚು ಮಾತು ಬಳಿಸುವದರಿಂದ ನಿಮ್ಮಂಥವರ ಮೇಲೆ ಎಂಥ ಪ್ರಸಂಗಗಳು ಬರುತ್ತಿರುವವೆಂಬದರ ಎಚ್ಚರವು ನಿಮಗಿಲ್ಲವೋ? ತೆಪ್ಪಗೆ ಕುಳಿತುಕೊಳ್ಳಿರಿ. ಇಲ್ಲದಿದ್ದರೆ ಗುಡಿಯು ನೆಲಸಮವಾಗಿ, ಮಾರುತಿಯು ರಸಾತಳಕ್ಕೆ ಹೋಗಬೇಕಾದೀತು. ನಿಮಗೇನಾದರೂ ಗೊತ್ತಿದ್ದರೆ ಸುಮ್ಮನೆ ಹೇಳಿರಿ.

ಶ್ರೀಧರಸ್ವಾಮಿ—ನನಗೆ ಗೊತ್ತಿದ್ದದ್ದನ್ನು ಮೊದಲೇ ಹೇಳಿಬಿಟ್ಟಿದ್ದೇನೆ. ನೀವು ಎಷ್ಟು ಗದ್ದರಿಸಿದರೂ, ಸಂತಾಪಗೊಂಡರೂ ಇಲ್ಲದ್ದನ್ನು ಎಲ್ಲಿಂದ ತರಲಿ? ನನಗೆ ಗೊ.........

ಶಿವದೇವರಾವ-ಸಾಕು, ಆಡಿದ ಮಾತು ಆಡುವದು ಇಲ್ಲಿಗೆ ಸಾಕು. ನಾನು ಗುಡಿಯೊಳಗೆ ಬಂದು ನೋಡುವೆನು. ನಿಮ್ಮಂಥ ಲಫಂಗ ಗೋಸಾವಿಗಳ ನೆರವೇ ಆ ತಿಪ್ಪಲ ತಿರುಕ ಕಳ್ಳ ಶಿವಾಜಿಗೆ ವಿಶೇಷವಾಗಿರುತ್ತದೆ.....

''ಆ ತಿಪ್ಪಲ ತಿರುಕ ಕಳ್ಳ ಶಿವಾಜಿ'' ಎಂಬ ಶಬ್ದವು ಕರ್ಣರಂಧ್ರವನ್ನು ಪ್ರವೇಶಿಸಿದ ಕೂಡಲೆ ಗೊಸಾವಿಯು ನಖಶಿಖಾಂತ ಉರಿಯಹತ್ತಿದನು. ಆತನ ಕಣ್ಣುಗಳು ಕೆಂಡದಂತಾದವು. ಹುಬ್ಬುಗಳು ಗಂಟಿಕ್ಕಿದವು. ಕಚ್ಚುವ ಭರದಲ್ಲಿ ಆತನ ತುಟಿಯಿಂದ ನೆತ್ತರವು ಹೊರಬಿದ್ದಿತು. ಈಗ ಈತನು ಶಿವದೇವರಾಯನ ಗಂಟಲು ಹಿಚುಕುವನೊ ಎಂಬ ಹಾಗೆ ತೋರಿತು; ಆದರೆ ಶ್ರೀಧರಸ್ವಾಮಿಯು ಅಷ್ಟರಲ್ಲಿ ಬಹು ಪ್ರಯಾಸದಿಂದ ಮನಸ್ಸನ್ನು ಬಿಗಿಹಿಡಿದನು. ಮೊದಲಿನ ಆವೇಶದಲ್ಲಿ ಆತನು ಏನಾದರೂ ಗೊಂದಲ ಹಾಕಿದ್ದರೆ, ಕೆಲಸವು ಯಾವ ಮನೆಗೆ ಬರುತ್ತಿತ್ತೋ ಬರುತ್ತಿತ್ತು! ಗೋಸಾವಿಯ ಕ್ಷಣೈಕ ಕ್ಷುದ್ರ ಮುದ್ರೆಯು ಶಿವದೇವರಾಯನ ಕಣ್ಣಿಗೆ ಬಿದ್ದಂತೆ ತೋರಲಿಲ್ಲ, ಅಂತೇ ಆ ಮಹಾರಾಷ್ಟ್ರ ಸರದಾರನು ಗೋಸಾವಿಯ ಸಂಗಡ ಸಮಾಧಾನದಿಂದ ನಡಕೊಂಡನು. ಶಿವದೇವರಾಯನು ಮುಂದಕ್ಕೆ ಸಾಗಿ ಗುಡಿಯಲ್ಲಿ ಕಾಲನ್ನಿಡಲು, ಹಿಂದೆ ನಿಂತಿದ್ದ ಸರ್ಜೇಖಾನನೂ ಮುಂದಕ್ಕೆ ಸಾಗಿದನು. ಆಗ ಗೋಸಾವಿಯು ಬಾಗಿಲಿಗೆ ನಿಂತು-ಮರಾಟನ ಹೊರತು-ಹಿಂದುವಿನ ಹೊರತು ಎರಡನೆಯವರು ಒಳಗೆ ಬರುವದಾದರೆ, ನನ್ನ ಹೆಣವನ್ನು ತುಳಿಯುತ್ತ ಬರಬೇಕಾದೀತು. ನಾನು ಬದುಕಿರುವವರೆಗೆ.... ಎಂದು ನುಡಿಯುತ್ತಿರಲು, ಶಿವ ದೇವರಾಯನು—ಬೇಷಕ್, ಬೇಷಕ್, ನಾನು ಮಹಾರಾಷ್ಟ್ರ ನಿರುವೆನೆಂತಲೇ ಒಳಗೆ ಬರುತ್ತೇನೆ, ಇವರು ಒಳಗೆ ಬರುವದಿಲ್ಲ; ಆದರೆ ನನಗೆ ಎಲ್ಲಿಯಾದರೂ ಸಂಶಯಬಂದರೆ, ನಿಮ್ಮ ಪರಿಣಾಮ ನೋಡಿಕೊಳ್ಳಿರಿ, ಎಂದು ನುಡಿಯುತ್ತಿರಲು, ಸರ್ಜೇಖಾನನಿಗೆ ಶಿವದೇವರಾಯನ ಮಾತು ಕೇಳಿಸಿದಂತೆ ತೋರಲಿಲ್ಲ, ಕೇಳಿಸಿದ್ದರೂ ಅವನ್ನು ಆತನು ಲೆಕ್ಕಿಸಲಿಲ್ಲ, ಖಾನನು ಗುಡಿಯೊಳಗೆ ಹೋಗಲುತ್ಸುಕನಾಗಿ ಗುಡಿಯಲ್ಲಿ ಕಾಲನ್ನಿಟ್ಟಕೂಡಲೆ ಶ್ರೀಧರಸ್ವಾಮಿಯು ಬಾಗಿಲಿಗೆ ಅಡ್ಡನಿಂತು—''ಅಂದರ್ ಮತ್ ಆನಾ-ಅಂದರ್ ಮತ್'' ಎಂದು ಗದ್ದರಿಸಿ ನುಡಿದು, ತನ್ನ ಬಹುಮುರಿಯಾದ ಕೈಯಿಂದ ಉಕ್ಕಿನ ಲಾಲುಂಡಿಗೆಯ ಹಾಗೆ

ಅಡ್ಡ ಗಟ್ಟಿ, ಉಲುಕಾಡದೆ ಬಾಗಿಲಿಗೆ ನಿಂತುಬಿಟ್ಟನು. ಸರ್ಜೇಖಾನನು ಶಸ್ತ್ರಪಾಣಿಯಾಗಿದ್ದರೂ, ಗೋಸಾವಿಯ ಈ ಉದ್ಧಟತನದಿಂದ ಚಕಿತನಾಗಿ ಕ್ಷಣಮಾತ್ರ ಬೆದರಿ ಹಿಂದಕ್ಕೆ ಸರಿದು ಆತನನ್ನು ನೋಡುತ್ತ ನಿಂತುಕೊಂಡನು. ಉಕ್ಕಿನ ಲಾಲುಂಡಿಗೆಯ ಹಾಗೆ ಅಡ್ಡಾಗಿದ್ದ ಗೋಸಾವಿಯ ಕೈ ಮುರಿಯನ್ನೂ ಶಕ್ತಿಸಾರವನ್ನೂ, ನೋಡಿದವರು ಯಾರಿದ್ದರೂ ಬೆದರಿ ಹಿಂದಕ್ಕೆ ಸರಿಯುವದೇ ಸರಿ!

ಹೀಗೆ ಗೊಸಾವ್ಯಾನು, ತನ್ನನ್ನು ಹಿಂದಕ್ಕೆ ಸರಿಸಿದ್ದರಿಂದ ಸರ್ಜೇಖಾನನಿಗೆ ಬಹಳ ಅಸಮಾಧಾನವಾಯಿತು. ಆತನು ಈ ಸೇಡುತೀರಿಸಿಕೊಳ್ಳುವದಕ್ಕಾಗಿ ಕತ್ತಿಯನ್ನು ಹಿರಿಯುತ್ತಿರಲು, ಶಿವದೇವರಾಯನ—ಸರದಾರ ಸಾಹೇಬರೇ, ತಾವು ಒಳಗೆ ಬರುವ ಅವಶ್ಯವಿಲ್ಲ, ನಾನು ಹೇಗೂ ಒಳಗೆ ಬಂದಿದ್ದೇನೆ. ಎಲ್ಲ ಕಡೆಗೆ ತಿರುಗಾಡಿ ಕಣ್ಣಲ್ಲಿ ಕಣ್ಣಿಟ್ಟು ಹುಡುಕುವೆನು. ಏನಾದರೂ ಸಂಶಯಬಂದರೆ... ಎಂದು ನುಡಿಯುತ್ತಿರಲು, ಸರ್ಜೇಖಾನನು ಸಂತಾಪದಿಂದ–ಸಾಕು ಸಾಕು, ನಾನು ಕೇಳುವವನಲ್ಲ ನನಗೆ ಹೇಳಲಿಕ್ಕೆ ನೀನು ಯಾರು? ನಿನ್ನ ಕೈಕೆಳಗಿನವನೆಂದು ನಿನ್ನ ಸಂಗಡ ನನ್ನನ್ನು ಕಳಿಸಿದ ಮಾತ್ರದಿಂದ ನೀನು ಸೆಟೆಯಬೇಡ. ಫಿತೂರಿಯ ಸಂಶಯಬಂದರೆ, ಯಾರು ಹೇಳಿದರೂ ನಾನು ಕೇಳುವವನಲ್ಲ ಎಂದು ಉದ್ಧಟತನದಿಂದ ಉತ್ತರಕೊಟ್ಟನು. ಅದನ್ನು ಕೇಳಿ, ಶಿವದೇವರಾಯನು ಸಂತಪ್ತನಾಗಿ, ಸಿಟ್ಟಿನಿಂದ ಕೆಂಪಾದ ತನ್ನ ಕಣ್ಣುಗಳಿಂದ, ಉರಿದುಹೋಗುವ ಹಾಗೆ ಸರ್ಜೇಖಾನನನ್ನು ನೋಡುತ್ತ—''ಏನಂದಿರಿ? ನನ್ನ ಮಾತು ಕೇಳುವದಿಲ್ಲವೆ? ಕೇಳದಿದ್ದರೆ ಕೇಳಿಸಿ ಎರಡನೆಯ ಕೆಲಸ ಮಾಡೇನು, ಎಂದು ಬಿಡಲಿಕ್ಕಿಲ್ಲ. ಸಂಶಯಬಾರದೆ ಸುಮ್ಮನೆ ನಿಮ್ಮಿಂದ ನಾನು ಗುಡಿಯ ಭ್ರಷ್ಟಾಚಾರವನ್ನು ಮಾಡಗೊಡಲಿಕ್ಕಿಲ್ಲ. ಮುಂದೆ ನನ್ನನ್ನು ಶೂಲಕ್ಕೇರಿಸಲಿ, ತೋಫಿನಬಾಯಿಗೆ ಕೊಡಲಿ. ನಾನು ಲೆಕ್ಕಿಸೆನು. ಇದರ ಮೇಲೆಯೂ ಇಲ್ಲಿಂದಿಲ್ಲಿಯೇ ನೀನು ಗುದುಮುರಿಗೆ ಹಾಕಹತ್ತಿದರೆ, ಇಲ್ಲಿಯೇ ನಿನ್ನ ಮೇಲೆ ತಿರುಗಿಬಿದ್ದೇನು. ನಿನ್ನ ಉದ್ಧಟತನವನ್ನು ಎಂದೂ ನಡೆಯಗೊಡಲಿಕ್ಕಿಲ್ಲ.'' ಎಂದು ಗುಡುಗುಹಾಕಲು, ಆ ಮುಸಲ್ಮಾನ ಸರದಾರನು ಸ್ವಲ್ಪ ಮೆತ್ತಗಾಗಿ ಮುಂಗೈಯನ್ನು ಕಡಕೊಳ್ಳುತ್ತ ಒಟಗುಟ್ಟುತ್ತ ಏನೋ ಪ್ರತಿಜ್ಞೆಯನ್ನು ಮಾಡುತ್ತ ಬಾಗಿಲಲ್ಲಿ ನಿಂತುಕೊಂಡನು. ಅದನ್ನು ಲಕ್ಷ್ಯಕ್ಕೆ ತಾರದೆ ಶಿವದೇವರಾಯನು ಗುಡಿಯೊಳಗೆ ಹೋಗಿ ನಾಲ್ಕೂ ಕಡೆಯಲ್ಲಿ ನೋಡಹತ್ತಿದನು. ಆಗ ಗೋಸಾವಿಯು ಶಿವದೇವರಾಯನಿಗೆ— ಸರದಾರಸಾಹೇಬರೇ, ತಾವಂತು ಬಾದಶಹನ ಕಾರ್ಯವನ್ನು ಸಾಧಿಸುವದಕ್ಕಾಗಿ ಬಂದಿರುತ್ತೀರಿ ಆದರೆ.... ಆದರೆ ನಾನೆರಡು ಮಾತನ್ನು ಆಡಬೇಕೆನ್ನುತ್ತೇನೆ, ಒಪ್ಪಿಗೆ ದೊರೆಯಬಹುದೋ? ಅನ್ನಲು, ಶಿವದೇವರಾಯನು–ಹೋ ಹೋ. ಬೇಶಕ್ ಮಾತಾಡಿರಿ. ನಿಮ್ಮ ಮಾತುಗಳನ್ನು ನಾನು ಮನಸ್ಸುಗೊಟ್ಟು ಕೇಳುವೆನು; ಆದರೆ ನಾನು ಕೇಳಿದ್ದಕ್ಕೆ ಮೊದಲು ಉತ್ತರಕೊಡಿರಿ; ನಿಜವನ್ನು ಹೇಳಿರಿ; ಈಗಿನ ಕಾಲದ ಕೆಲವು ತರುಣರು ಇಲ್ಲಿ ಮಸಲತ್ತು ಮಾಡುತ್ತ ಕುಳಿತುಕೊಳ್ಳುತ್ತಾರೋ ಇಲ್ಲವೋ? ನಮಗೆ ಸುದ್ದಿಯು ಹತ್ತಿರುತ್ತದೆ. ನೀವು ಮುಚ್ಚಿದರೆ ಮುಚ್ಚುವ ಹಾಗಿಲ್ಲ. ಹೇಗಿದ್ದರೂ ನಾವು ಅದನ್ನು ಬೈಲಿಗೆಳೆವೇ

ಎಳೆಯುವೆವು; ಆದರೆ ನಿಮ್ಮ ಮುಖದಿಂದ ಹೊರಬಿದ್ದರೆ ನೆಟ್ಟಗಾಗುವುದು, ಎಂದು ಹೇಳಿದನು. ಅದಕ್ಕೆ ಗೋಸಾವಿಯು ಚಕಿತಮುದ್ರೆಯಿಂದ–ಸರದಾರ ಸಾಹೇಬರೇ, ನೀವು ಏನು ಹೇಳುತ್ತೀರೆಂಬುದೇ ನನಗೆ ತಿಳಿಯಲೊಲ್ಲದು. ನಾನು ಗೊತ್ತಿದ್ದದ್ದನ್ನು ಈ ಮೊದಲೇ ಹೇಳಿಬಿಟ್ಟಿದ್ದೇನೆ. ಅದಕ್ಕೂ ಹೆಚ್ಚಿಗೆ ನಾನೇನು ಹೇಳಲಿ? ನಿಮ್ಮ ಧರ್ಮವನ್ನು ಮರೆತು ನೀವು ಮುಸಲ್ಮಾನರ ಕೈಯಿಂದ ಗುಡಿಗಳನ್ನು ಭ್ರಷ್ಟಾಚಾರ ಮಾಡಿಸುವದಿದ್ದರೆ–ಅವರ ಕೈಯಿಂದ ಗುಡಿಗಳನ್ನು ನೆಲಸಮ ಮಾಡಿಸುವದಿದ್ದರೆ–ನಿಮ್ಮ ಧರ್ಮದ ಅಭಿಮಾನವು ನಿಮಗೇ ಇರದಿದ್ದರೆ ನಿಮ್ಮ ಮನಸ್ಸಿಗೆ ಬಂದಂತೆ ಮಾಡಿರಿ. ನಾವು ಬೇಡೆಂದರೆ ನೀವು ಕೇಳುವದು ಅಷ್ಟರಲ್ಲಿಯೇ ಇರುತ್ತದೆ; ಆದರೆ ನಾನು ಬೇಡಿಕೊಳ್ಳುವದೇನಂದರೆ, ತಾವು ಹಿಂದುಗಳು, ಮಹಾರಾಷ್ಟ್ರರು; ತಮ್ಮ ಯೋಗ್ಯತೆಯನ್ನು ಮುಸಲ್ಮಾನರು ಮಚ್ಚೆಗಿಂತ ಕಡೆಯೆಂದು ತಿಳಕೊಂಡಿರುತ್ತಾರೆ ಇದು ಮಹಾರಾಷ್ಟ್ರರೆನಿಸುವ ನಿಮ್ಮ ಮನಸ್ಸಿನಲ್ಲಿಯೇ ಬರುವದಿಲ್ಲವಲ್ಲ!! ನಿಮಗೆ ನಿಮ್ಮ ಕುಲದ–ನಿಮ್ಮ ಜಾತಿಯ–ನಿಮ್ಮ ದೇಶದ ವಿಷಯವಾಗಿ ಏನೂ ಅಭಿಮಾನವಿರುವದಿಲ್ಲವೆ?

ಗೋಸಾವಿಯಂಥವನು ತನ್ನನ್ನು ಹೀಗೆ ಬೋಧಿಸಿದ್ದು ಶಿವದೇವರಾಯನಿಗೆ ತಡೆಯಲಿಲ್ಲ, ಆತನು ಒಮ್ಮೆಲೆ ಗೋಸಾವಿಯ ಕಡೆಗೆ ತಿರುಗಿ–ಗೋಸಾವಿಗಳೇ, ನಿಮ್ಮ ಈ ಮಾತುಗಳ ಮೇಲಿಂದ ನೋಡಲು, ನೀವು ನಿಜವಾದ ಗೋಸಾವಿಗಳಾಗಿರದೆ, ಆ ಶಿವಾಜಿಯ ಸಹಾಯಕರಲ್ಲಿ ಒಬ್ಬರಾಗಿರುತ್ತೀರೆಂಬ ಸಂಶಯವು ನನಗೆ ಬರತೊಡಗಿರುತ್ತದೆ. ಸರ್ವಸಂಗಪರಿತ್ಯಾಗಮಾಡಿದ ನಿಮಗೆ, ಈ ಒಣ ಉಸಾಬರಿಯೇಕೆ? ಈ ಕೌಪೀನವೂ, ಈ ಜಟಾಮಂಡಲವೂ, ಈ ಯೋಗದಂಡವೂ ಠಕ್ಕತನದವಾಗಿ ನನಗೆ ತೋರುವವು. ಬಾಯಿ ಬಿಗಿದು ಹಿಡಿಯಿರಿ; ಇಲ್ಲದಿದ್ದರೆ, ನಿಮ್ಮನ್ನೇ ಹಿಡಕೊಂಡು ಹೋಗಬೇಕಾದೀತು, ಅನ್ನಲು, ಗೋಸಾವಿಯು—ನಮಗೆ ಒಣ ಉಸಾಬರಿಯೇ? ನಾವೇಕೆ ಒಣ ಉಸಾಬರಿಗೆ ಹೋಗೋಣ? ನಮ್ಮನ್ನು ಹಿಡಕೊಂಡು ಹೋಗುವಿರಾ? ಅಗತ್ಯವಾಗಿ ಹೋಗಿರಿ ಹಿಡಕೊಂಡು ಹೋಗಿರಿ–ಶೂಲಕ್ಕೇರಿಸಿರಿ–ತೋಫಿನ ಬಾಯಿಗೆ ಕೊಡಿರಿ–ತಲೆಕೆಳಗೆ ಮಾಡಿ ಗಿಡಕ್ಕೆ ತೂಗಹಾಕಿ ಪ್ರಾಣಹರಣ ಮಾಡಿರಿ– ಬೇಕಾದರೆ ಗೋಡೆಯೊಳಗಿನ ಮಾಡದಲ್ಲಿ ತುರುಕಿ ಹೊಡೆದು ಕೊಲ್ಲಿರಿ–ಇಲ್ಲದಿದ್ದರೆ, ಇಂದು ಕಾಲು, ನಾಳೆ ಕೈ, ನಾಡದು ಮೂಗು, ಆಚೆ ನಾಡದು ಕಣ್ಣು ಹೀಗೆ ಒಂದೊಂದೇ ಅವಯವವನ್ನು ನಷ್ಟಗೊಳಿಸಿ ವಿಲಿ ವಿಲಿ ಒದ್ದಾಡಿಸಿ ಕೊಲ್ಲಿರಿ, ಅಥವಾ ಯಾವದೊಂದು ದುರ್ಗದ ಕೊತ್ತಳದ ತುದಿಗೆ ನಿಲ್ಲಿಸಿ ಒಮ್ಮೆಲೆ ಕೆಳಗೆ ದೂಡಿಬಿಡಿರಿ. ಇದರಿಂದಲೂ ನಿಮಗೆ ತೃಪ್ತಿಯಾಗದಿದ್ದರೆ, ನಿಮಗೆ ತೋರಿದ ಬೇರೆ ಯಾವದೊಂದು ಯುಕ್ತಿಯಿಂದ ಕೊಲ್ಲಿರಿ. ಏನು ಮಾಡಿದರೂ ನಮ್ಮ ಹಿಂದೆ ಅಳುವವರು ಯಾರೂ ಇಲ್ಲ; ನಿಮಗೆ ಯಾವ ಬಗೆಯ ಪ್ರಯೋಜನವೂ ಆಗಲಿಕ್ಕಿಲ್ಲ. ನಾವಂತು ಮರಣಕ್ಕೆ ಸಿದ್ಧರಾಗಿದ್ದೇವೆ. ಅಂದಬಳಿಕ ಇದಕ್ಕೂ ಹೆಚ್ಚಿಗೆ ಇನ್ನೇನು ಹೇಳಬೇಕು? ಮೋಟಮರದ ಹಾಗಿರುವ ನಮ್ಮಂಥವರಿಗೆ, ಸೆರೆಮನೆಯ ಭಯವನ್ನಾಗಲಿ, ಮರಣದ

ಭಯವನ್ನಾಗಲಿ ತೋರಿಸುವದರಿಂದೇನು ಪ್ರಯೋಜನವಾಗುವದು? ಮುಸಲ್ಮಾನರ ಚಾಕರಿಯನ್ನು ಮಾಡ ಹತ್ತಿದ್ದರಿಂದ, ಗೋ-ಬ್ರಾಹ್ಮಣರ ವಧೆಗೂ ನಿಮ್ಮ ಮನಸ್ಸು ಹೇಸದಂತಾಗಿದೆಯೆಂಬದು ಮಾತ್ರ ಇದರಿಂದ ಸ್ಪಷ್ಟವಾಗುತ್ತದೆ. ಹೊಟ್ಟೆಯ ಸಲುವಾಗಿ ನೀವು ನಿಮ್ಮನ್ನು ಕೂಡ ಮರೆತುಬಿಟ್ಟಿರೆಂದ ಬಳಿಕ, ಅನ್ಯರನ್ನು ಹೇಗೆ ನೋಡುವಿರಿ? ಎಂದನು. ಈ ಮಾತುಗಳಿಂದ ಶಿವದೇವರಾಯನ ಮನಸ್ಸು ಸ್ವಲ್ಪ ತಿರುಗಿದರೂ ಆತನು, ಅದನ್ನು ಹೊರಗೆ ತೋರಗೊಡದೆ ಗೋಸಾವಿಗೆ- ಸಾಕು-ಸಾಕು, ನಿಮ್ಮ ಪಾಂಡಿತ್ಯವನ್ನು ನನಗೆ ತೋರಿಸಬೇಡಿರಿ; ಇನ್ನು ನನ್ನ ಕೆಲಸವನ್ನು ಮಾಡಗೊಡಿರಿ, ಎಂದು ಹೇಳಿ, ಗುಡಿಯಲ್ಲೆಲ್ಲ ತಿರುಗಿ, ಎಲ್ಲಿಯಾದರೂ ಬಿರುಕು ಕಿಂಡಿಗಳು ಇರುತ್ತವೋ ಎಂಬುದನ್ನು ಸೂಕ್ಷ್ಮವಾಗಿ ಶೋಧಿಸಿದನು; ಗುಡಿಯ ನೆಲಕ್ಕೆ ಕಿವಿಯಾನಿಸಿ ಸಪ್ಪಳವನ್ನು ಕೇಳಿದನು. ಮಾರುತಿಯ ಸುತ್ತು ತಿರುಗಿ ಅಲ್ಲಲ್ಲಿ ಬಗ್ಗಿ ಎದ್ದು ನೋಡಿದನು; ಎಲ್ಲಿಯಾದರೂ "ದಬ ದಬ" ಎಂದು ಸಪ್ಪಳವಾಗುವದೋ ಎಂದು ನೆಲಕ್ಕೆ ಕಾಲು ಅಪ್ಪಳಿಸಿ ಪರೀಕ್ಷಿಸಿದನು. ಆದರೆ ಆತನಿಗೆ ಯಾವ ಮಾತಿನ ಸುಳವೂ ಹತ್ತಲೊಲ್ಲದು. ಈ ಗುಡಿಯಲ್ಲಿ ಏನಾದರೂ ಗುಪ್ತ ಸಂಗತಿಯು ಇರಲೇಬೇಕೆಂಬ ಆತನ ನಿಶ್ಚಯವಂತು ಆತನನ್ನು ಬಾಧಿಸುತ್ತಲೇ ಇತ್ತು. ಆದರೆ ವಿಚಿತ್ರ ರಚನೆಯ ಆ ಗವಿಯ ನೆಲೆಯು ಆತನಿಗೆ ಹತ್ತಲಿಲ್ಲ ಒಂದೆರಡು ಸ್ಥಳಗಳಲ್ಲಿ ಸಂಶಯ ಬರಬಹುದಾಗಿದ್ದರೂ, ಕರ್ಮ-ಧರ್ಮ ಸಂಯೋಗದಿಂದ ಆ ಸ್ಥಳಗಳು ಶಿವದೇವರಾಯನ ಶೋಧಕ್ಕೆ ಈಡಾಗಲಿಲ್ಲ! ಶಿವದೇವರಾಯನು ಬಾವಾಜಿಯ ನೆಲ ಒಲೆಯ ಬುಡದಲ್ಲಿ ಏನಾದರೂ ಮೋಸವಿರಬಹುದೆಂದು ಬಗೆದು, ಒಲೆಯನ್ನು ಕೆದರಿಸಿ ನಿರಾಶೆಪಟ್ಟನು. ಏನು ಮಾಡಿದರೂ ಶೋಧವಾಗದ್ದರಿಂದ ಆ ಮರಾಟನ ಮನಸ್ಸು ಉದಾಸವಾಯಿತು. ಆತನು ನಿರಾಶೆಯಿಂದ ಗೋಸಾವಿಗೆ-ಹಾಗಾದರೇ, ನೀವು ನಮಗೆ ಏನೂ ಸುಳವು ಹತ್ತಗೊಡುವದಿಲ್ಲೆಂದಹಾಗಾಯಿತು! ನೋಡಿರಿ, ಇಷ್ಟರಿಂದ ನೀವು ಪಾರಾದಿರೆಂದು ತಿಳಿಯಬೇಡಿರಿ. ಏನಾದರೂ ಗೊತ್ತಿದ್ದರೆ ಹೇಳಿರಿ ಅನ್ನಲು, ಗೋಸಾವಿಯು ಬುದ್ಧಿಪೂರ್ವಕವಾಗಿ ನಕ್ಕು-ಸರದಾರಸಾಹೇಬರೇ, ನೀವು ಏನು ಕೇಳುತ್ತೀರೆಂಬುದೇ ನನಗೆ ತಿಳಿಯಲೊಲ್ಲದು. ನನಗೆ ಗೊತ್ತಿದ್ದಷ್ಟನ್ನು ಈ ಮೊದಲೇ ಹೇಳಿಬಿಟ್ಟೆನು. ಇನ್ನೇನು ಹೇಳಲಿ? ಇನ್ನು ನನ್ನ ಮನಸ್ಸಿನಲ್ಲಿದ್ದದ್ದನ್ನು ಬಚ್ಚಿಡದೆ ಸ್ಪಷ್ಟವಾಗಿ ಹೇಳಿಬಿಡುತ್ತೇನೆ; ನೀವು ಈಗ ಕೇಳುವ ಶಿವಾಜಿಯ ಸಂಗತಿಯು ನನಗೆ ಗೊತ್ತಿದ್ದರೆ, ಅದನ್ನು ನಿಮಗೆ ಎಂದಿಗೂ ಹೇಳುತ್ತಿದ್ದಿಲ್ಲ; ಮತ್ತು ಶಿವಾಜಿಯನ್ನು ಇದ್ದಲ್ಲಿ ಹೋಗಿ ಕಂಡು-ಅಪ್ಪಾ, ಶಿವಬಾ, ನೀನು ಕೈಕೊಂಡ ಕೆಲಸವನ್ನು ಕೆಡಿಸುವದಕ್ಕಾಗಿ ಮಹಾರಾಷ್ಟ್ರ ಕುಲದೊಳಗಿನ ಸಿಂಹಗಳೇ ಹೊಂಚ ಹಾಕಿಕುಳಿತುಕೊಂಡು, ಬಾದಶಹನ ಪ್ರಸನ್ನತೆಯನ್ನು ಪಡೆಯಲು ಆತುರಪಡುತ್ತಲಿವೆ. ಎಂದು ಹೇಳುತ್ತಿದ್ದೆನು ಹಾಯ್ ! ಹಾಯ್! ಒಟ್ಟಿಗೆ, ಮರಾಟರು ಮುಸಲ್ಮಾನರ ಆಶ್ರಯವನ್ನು ಹೊಂದಿ, ಅವರು ಅಂದದ್ದು ಅನಿಸಿಕೊಂಡು, ಅವರು ಮಾಡಿದ ಹಾಗ ಸುಮ್ಮನಿದ್ದು ತಮ್ಮ ಯೋಗ್ಯತೆಯನ್ನು ಮರೆತುಬಿಟ್ಟಿರಲ್ಲ! ಗೋ- ಬ್ರಾಹ್ಮಣರ ರಕ್ಷಣಾಕ್ಕಾಗಿ ಯತ್ನಿಸದೇ ಅವರು

ಸುಮ್ಮನಿರ ಬಹುದೋ? ಬಡವರ ಗೋಳಾಟವನ್ನು ಅವರು ಕಿವಿಮುಟ್ಟಿ ಕೇಳಬಹುದೋ? ಅವರು ಧರ್ಮದ ಛಲವನ್ನು ಕಣ್ಣುಮುಟ್ಟಿ ನೋಡಬಹುದೋ? ತಮ್ಮಿಂದ ಪರೋಪಕಾರದ ಕೃತಿಗಳಾಗದಿದ್ದರೆ ಬಿಡಲಿ, ಪರರ ಸಂಕಟ ನಿವಾರಣಕ್ಕಾಗಿ ಯಾವನಾದರೂ ಪುಣ್ಯಾತ್ಮನು ಯತ್ನಿಸಿದರೆ, ಆತನನ್ನು ವೈರಿಗಳಿಗೆ ಒಪ್ಪಿಸಿ ಪರಿಪರಿಯಾಗಿ ಆತನನ್ನು ಪೀಡಿಸಬಹುದೋ? ಹೀಗೆ ಮಾಡುವದಕ್ಕಿಂತ, ರಜಪೂತ ವೀರರಂತೆ ರಣದಲ್ಲಿ ಮಡಿದಾಗಲಿ, ತಮ್ಮ ಹೆಂಡಿರು-ಮಕ್ಕಳ ಚಿತೆಯಲ್ಲಿ ಹಾರಿಕೊಂಡಾಗಲಿ ತಮ್ಮ ಜನ್ಮದ ಪರಿಸಮಾಪ್ತಿಯನ್ನು ಮಾಡಿಕೊಳ್ಳುವದು ನೆಟ್ಟಗಲ್ಲವೆ? ರಾಮಾ! ಸೀತಾರಾಮಾ!! ಸಚ್ಚಿದ್ಘನ ಧಾಮಾ, ನೀನೇ ನೋಡಿಕೋ?''

ಗೋಸಾವಿಯ ಈ ಮಾತುಗಳನ್ನು ಕೇಳಿ, ಶಿವದೇವರಾಯನ ಮನಸ್ಸು ತಿರುಗಿ, ಆತನ ಹೃದಯವು ಕೋಮಲವಾಯಿತು. ಆತನು ಸ್ವಲ್ಪ ನಕ್ಕು ಗೋಸಾವಿಗೆ-ಮೆಲ್ಲಗೆ, ಮೆಲ್ಲಗೆ! ಇಷ್ಟು ಗಟ್ಟಿಯಾಗಿ ಮಾತಾಡಿದರೆ, ಹೊರಗೆ ನಿಂತಿರುವ ಮುಸಲ್ಮಾನ ಸರದಾರನು ಕೇಳಿ ಅನರ್ಥವಾದೀತು! ನೀನಾಡುವ ಮಾತುಗಳು ನನ್ನ ಮನಸ್ಸಿನಲ್ಲಿ ಬರುವದಿಲ್ಲೆಂತಲ್ಲ ಆದರೆ ನಮ್ಮ ದೇನು ನಡೆಯುವಹಾಗಿದೆ? ಸದ್ಯಕ್ಕೆ ಅವರ ಉತ್ಕರ್ಷದ ಕಾಲವಿರುವದು. ಸಿಕ್ಕವರು ಸಿಕ್ಕ ಹಾಗೆ ಯತ್ನಿಸುವದರಿಂದ ಪ್ರಯೋಜನವಾಗದೆಂಬ ಮಾತನ್ನು ಲಕ್ಷದಲ್ಲಿಟ್ಟು, ಯತ್ನಿಸುವವರು ಯತ್ನಿಸತಕ್ಕದ್ದು, ಎಂದು ನುಡಿದು, ಮತ್ತೆ ಮಾತಾಡಬೇಕೆಂಬ ಗೋಸಾವಿಯ ಹವಣಿಕೆಗೆ ಲಕ್ಷ ಗೊಡದೆ, ತಟ್ಟನೆ ಆತನು ಗುಡಿಯ ಬಾಗಿಲಿಗೆ ಹೋಗಿ, ದರ್ಬಾರಿ ಭಾಷೆಯಿಂದ ಮುಸಲ್ಮಾನ ಸರದಾರನನ್ನು ಕುರಿತು-ಏನಂದರೂ ಇಲ್ಲಿ ಸಂಶಯಕ್ಕೆ ಸ್ವಲ್ಪವಾದರೂ ಸ್ಥಳವಿಲ್ಲ, ನಾನು ಬೇಕಾದಷ್ಟು ಸೂಕ್ಷ್ಮ ರೀತಿಯಿಂದ ಶೋಧಿಸಿದೆನು. ಈ ಗೋಸಾವಿಯಿಂದ ಹೆಚ್ಚಿನ ಯಾವ ಸುದ್ದಿಯೂ ತಿಳಿಯುವ ಹಾಗಿಲ್ಲ, ನಾನು ಆತನನ್ನು ಬೇಕಾದಷ್ಟು ಕೇಳಿದೆನು, ಬೆದರಿಸಿದೆನು, ಹೆದರಿಸಿದೆನು; ಆದರೆ ಪ್ರಯೋಜನವೇನೂ ಆಗಲಿಲ್ಲ; ಅಂದಬಳಿಕ ನಾವು ಇಲ್ಲಿ ಇದ್ದು ಮಾಡುವದೇ..... ಎಂದು ನುಡಿಯುತ್ತಿರಲು, ಸರ್ಜೇಖಾನನು ಹುಬ್ಬುಗಂಟಿಕ್ಕಿ ನನಗೆ ಈ ಗೋಸಾವಿಯ ಮಾತಿನಲ್ಲಿ ನಂಬಿಗೆಯಿಲ್ಲ, ಅವನು ಮಹಾ ಠಕ್ಕನಾಗಿ ತೋರುತ್ತಾನೆ. ನಾನು ಆತನ ರಟ್ಟೆಗೆ ಹಗ್ಗ ಹಚ್ಚಿ ಒಯ್ಯತಕ್ಕವನು. ಗುಡಿಯ ಸುತ್ತಲು ಕಾವಲಿಡುತ್ತೇನೆ. ನೀವು ಶೋಧಮಾಡಿದ್ದನ್ನು ನಾನು ನೋಡಿದೆನು. ಈ ಗೋಸಾವ್ಯಾನು ನಿಮ್ಮನ್ನು ಒಡಕೊಂಡಿರುವನು. ನೀವು ಹಿಂದು ಹಿಂದುಗಳೆಲ್ಲ ತತ್‌ಕ್ಷಣ ಒಂದಾಗುವಿರೆಂಬದನ್ನು ನಾನು ಬಲ್ಲೆನು. ಎಷ್ಟಾದರೂ ಮಹಾರಾಷ್ಟ್ರರು ಉಂಡುಮನೆಯಗಳ ಎಣಿಸುವ... ಎಂದು ನುಡಿಯುತ್ತಿರಲು, ಶಿವದೇವ ರಾಯನ ಕೆಂಪಡರಿದ ಕಣ್ಣುಗಳ ನೋಟ ದಿಂದ ಆ ಮುಸಲ್ಮಾನ ಸರದಾರನ ಮುಂದಿನ ಅಕ್ಷರಗಳು ಅಲ್ಲಿಯೇ ಕಮರಿದವು. ಸರ್ಜೇಖಾನನು ಗೋಸಾವಿಯ ಸಮಕ್ಷ ''ಮರಾಟರು ಉಂಡ ಮನೆ ಗಳ ಎಣಿಸುವ''ರೆಂದು ತಿರಸ್ಕರಿಸಿದ್ದರಿಂದ, ಶಿವದೇವರಾಯನಿಗೆ ಬಹಳ ವಿಷಾದವಾಯಿತು. ಆಗಿನ ಕಾಲದಲ್ಲಿ ಮುಸಲ್ಮಾನರು ಹಿಂದುಗಳೊಡನೆ ಬಹಳ ಉದ್ಧಟತನದಿಂದ ನಡಕೊಳ್ಳುತ್ತಿದ್ದರು. ಮುಸಲ್ಮಾನ ಬಾದಶಹರು ಹಿಂದೂ ಜನರಿಗೆ ಅಧಿಕಾರದ ಕೆಲಸಗಳನ್ನು ಕೊಡುತ್ತಿದ್ದರೂ, ಅವರ ಮೇಲೆ ಕಣ್ಣಿಡುವದಕ್ಕಾಗಿ, ಅವರ ಕೈಕೆಳಗಿನವನೆಂದು ಒಬ್ಬ ಮುಸಲ್ಮಾನ

ಸರದಾರನನ್ನು ಅವರ ಸಂಗಡ ಕಳಿಸುತ್ತಿದ್ದರು. ಅದೇ ರೀತಿಯಿಂದ ಸರ್ಜೇಖಾನನು ಶಿವದೇವ ರಾಯನ ಕೈಕೆಳಗಿನವನಾಗಿ ಬಂದಿದ್ದನು. ಆದರೆ ಈ ಕೈಕೆಳಗಿನವರು ಹೊತ್ತುಬಿದ್ದರೆ ತಮ್ಮ ಮೇಲಿನ ಹಿಂದೂ ಸರದಾರರ ಹಂಗು ಇಲ್ಲದೆ, ಸ್ವತಂತ್ರದಿಂದ ನಡೆಯಲಿಕ್ಕೆ ಹಿಂದೆಮುಂದ ನೋಡುತ್ತಿದ್ದಿಲ್ಲ. ಬಾದಶಹನ ಅಂಜಿಕೆಯಿಂದ ಹಿಂದೂ ಸರದಾರರು ಅದನ್ನೆಲ್ಲ ತಾಳಿಕೊಳ್ಳ ಬೇಕಾಗುತ್ತಿತ್ತು. ಶಿವದೇವರಾಯನ ಗತಿಯಾದರೂ ಹೀಗೆಯೇ ಆಯಿತು. ಶಿವದೇವರಾಯನು ಸ್ವತಃ ತೇಜೋವಂತ ಸರದಾರನಾಗಿದ್ದನಲ್ಲದೆ, ಆಗಿನ ವಿಜಾಪುರದ ದರ್ಬಾರದಲ್ಲಿ ಅತ್ಯುಚ್ಚ ಪದವಿಯನ್ನು ಹೊಂದಿದ ಮುರಾರಸಾಹೇಬನ ಚಿಕ್ಕದೊಡ್ಡಪ್ಪನ ಮಗನಾಗಿದ್ದನು. ಅಂಥವನನ್ನೂ ಲಕ್ಷಿಸದೆ, ಸರ್ಜೇಖಾನನು ಶ್ರೀಧರಸ್ವಾಮಿಯನ್ನು ಸೆರೆಹಿಡಿದೊಯ್ಯಲೇ ಬೇಕೆಂದು ಹಟಹಿಡಿದು, ಕಡೆಗೆ ಶಿವದೇವರಾಯನನ್ನು ಲಕ್ಷಿಸದೆ ಗೋಸಾವಿಯನ್ನು ಹಿಡಿಯಲು ಅಪ್ಪಣೆಮಾಡಿದನು!

## ಕಾರಾಗೃಹವಾಸ

ಮೇಲೆ ಹೇಳಿದಂತೆ ಸರ್ಜೇಖಾನನು ಗೋಸಾವಿಯನ್ನು ಹಿಡಿಯುವದಕ್ಕಾಗಿ ಆಜ್ಞಾಪಿಸಲು, ಗೋಸಾವಿಯು ತಿರಸ್ಕಾರ-ಸಂತಾಪಗಳಿಂದ ಸರ್ಜೇಖಾನನನ್ನು ನೋಡ ಹತ್ತಿದನು. ಗೋಸಾವಿಯು ಖಾನನನ್ನು ನೋಡನೋಡುತ್ತ ತನ್ನ ಕೈಯೊಳಗಿನ ಯೋಗ ದಂಡವನ್ನು ನೋಡಿದನು. ಆಮೇಲೆ ಖಾನನ ಎದೆಯನ್ನು ನೋಡಿದನು. ಬಳಿಕ ತನ್ನ ವೇಷವನ್ನು ನೋಡಿಕೊಂಡು "ಇನ್ನೂ ಹೊತ್ತು ಬಂದಿಲ್ಲ" ಎಂದು ವಟಗುಟ್ಟುತ್ತ ತನ್ನ ಸಂತಾಪವನ್ನು ಬಹು ಪ್ರಯಾಸದಿಂದ ನುಂಗಿಕೊಂಡನು. ಇತ್ತ ಸರ್ಜೇಖಾನನು ತನ್ನ ಜನರನ್ನು ಗದ್ದರಿಸಿ ಕರೆದು, ಈತನನ್ನು ಹಿಡಿಯಿರಿ, ಎಂದು ಮತ್ತೆ ಹೇಳಲು ಆ ಜನರು ಶ್ರೀಧರಸ್ವಾಮಿಯನ್ನು ಮುಟ್ಟ ಹೋದರು. ಆಗ ಶ್ರೀಧರಸ್ವಾಮಿಯು ರಾಜಪುರುಷರಿಗೆ ಒಪ್ಪಬಹುದಾದ ಉದ್ಧಟತನದಿಂದ ಬಲಗೈಯನ್ನು ಮೇಲಕ್ಕೆ ಎತ್ತಿ ಅಷ್ಟೇ ಉದ್ಧಟತನದಿಂದ ಅವರನ್ನು ನೋಡುತ್ತ-ಹಾ! ಜೋಕೆ, ನನ್ನ ಶರೀರ ಸ್ಪರ್ಶಮಾಡಿದರೆ, ನಿಮ್ಮ ಪರಿಣಾಮ ನೆಟ್ಟಗಾಗಲಿಕ್ಕಿಲ್ಲ! ಮನೆ-ಮಾರುಗಳನ್ನು ಬಿಟ್ಟು ಗುಡಿ ಗುಂಡಾರಗಳನ್ನು ಸೇರಿರುವ ಗೋಸಾವಿಗಳನ್ನು ಈ ಪರಿ ಪೀಡಿಸುವ ನೀವು ಹಾಳಾಗಿ ಹೋಗುವಿರಿ. ನಿಮ್ಮ ವಿನಾಶ ಕಾಲವು ಸಮೀಪಿಸಿದಂತೆ ತೋರುತ್ತದೆ. ನನ್ನನ್ನು ಹಿಡಿಯಲಿಕ್ಕೆ ನೀವು ಆಯಾಸಪಡುವದೇಕೆ? ನಾನಾಗಿಯೇ ನಿಮಗಧೀನನಾಗಿ ನೀವು ಕರೆದತ್ತ ಬರುವೆನು. ನಿಮ್ಮ ಕೈಯಲ್ಲಿ ಸಿಕ್ಕ ಬಳಿಕ ನಾನು ತಿರುಗಿ ಈ ಸ್ಥಳಕ್ಕೆ ಬರುವದೆಂದೋ ತಿಳಿಯದು; ಆದ್ದರಿಂದ ನಾನು ಗುಡಿಯೊಳಗೆ ಹೋಗಿ ಮಾರುತಿಗೆ ಪ್ರದಕ್ಷಿಣನಮಸ್ಕಾರಗಳನ್ನು ಮಾಡಿ ಈಗಲೆ ಬರುವೆನು, ಎಂದು ನುಡಿದು, ಆತನು ಕೂಡಲೆ ಗುಡಿಯೊಳಗೆ ನಡೆದನು. ಆತನ ಉದ್ಧಾಮತನವನ್ನು ನೋಡಿ

ಸರ್ಜೇಖಾನನೂ, ಆತನ ಅನುಯಾಯಿಗಳೂ ಬೆಪ್ಪಾಗಿ ನಿಂತುಕೊಂಡರು. ಆದದ್ದಾಗಲಿ, ಗೋಸಾವಿಯನ್ನು ಹಿಡಿದೇಬಿಡೋಣವೆಂದು ಮುಂದುವರಿದು ಹೋಗುವ ಧೈರ್ಯವು ಯಾರಿಗೂ ಆಗಲಿಲ್ಲ ''ಈತನು ಗೋಸಾವಿಯಂತೂ ಅಲ್ಲ, ಯಾವನಿರಬಹುದು? ಈತನ ನಡತೆಯನ್ನು ನೋಡಿದರೆ, ಈತನು ಉಚ್ಚಕುಲಕ್ಕೆ ಸಂಬಂಧಿಸಿದವನಿರಬೇಕೆಂದು ತೋರುತ್ತದೆ'' ಎಂದು ಸರ್ಜೇಖಾನನು ನಿರ್ಧರಿಸುತ್ತಿದ್ದನು. ಅತ್ತ ಮಹಾರಾಷ್ಟ್ರ ಸರದಾರನನ್ನಾದರೂ ಇದೇ ಬಗೆಯ ವಿಚಾರವು ಬಾಧಿಸುತ್ತಿತ್ತು, ಅವರಿಬ್ಬರು ಸರದಾರರೂ ಒಳಗೆ ಹೋದ ಗೋಸಾವಿಯನ್ನು ಬಹು ಜಾಗರೂಕತೆಯಿಂದ ನೋಡುತ್ತಿದ್ದರು. ಸರ್ಜೇಖಾನನು ಮಹಾರಾಷ್ಟ್ರ ಸರದಾರನಿಗೆ—''ಶಿವದೇವರಾಯರೆ, ಹೋಗಿರಿ, ನೀವೂ ಗೋಸಾವಿಯನ್ನು ಹಿಂಬಾಲಿಸಿ ಒಳಗೆ ಹೋಗಿ, ಆತನು ಅಲ್ಲಿ ಏನೇನು ಮಾಡುತ್ತಾನೆ ನೋಡಿರಿ. ಆತನು ತನ್ನ ಪಕ್ಷದ ಜನರಿಗೆ ಸಂಜ್ಞೆಯಿಂದ ತನ್ನ ಮನೋದಯವನ್ನು ತಿಳಿಸಲಿಕ್ಕೂ, ಹೊತ್ತು ಸಿಕ್ಕರೆ ನಮಗೆ ಮಂಕಬೂದಿಯನ್ನು ಹಚ್ಚಿ ಓಡಲಿಕ್ಕೂ ಹೇಸಲಿಕ್ಕಿಲ್ಲ ಅನ್ನಲು, ಸರ್ಜೇಖಾನನ ಉದ್ಧಟತನಕ್ಕಾಗಿ ಮನಸ್ಸು ತೆಗೆದಿದ್ದ ಶಿವದೇವರಾಯನು– ಖಾನಸಾಹೇಬರೇ, ನೀವಿರಲು–ನಾನಿರಲು ಆತನು ಹೋಗುವದೆತ್ತ? ನನ್ನ ಮೇಲೆಯಾದರೂ ನಿಮ್ಮ ನಂಬಿಗೆಯು ಎಲ್ಲಿ ಇದೆ? ಆದ್ದರಿಂದ ಇಲ್ಲಿಯೇ ನಿಂತು ನೋಡುತ್ತಿರೋಣ'' ಎಂದು ನುಡಿಯುತ್ತಿರಲು, ಅತ್ತ ಶ್ರೀಧರಸ್ವಾಮಿಯು ಮಾರುತಿಯ ಸುತ್ತಲು ಮೂರಸಾರೆ ಪ್ರದಕ್ಷಿಣೆಮಾಡಿ, ಮಾರುತಿಯ ಹಿಂದೆ ಹೋದಾಗ ಕೆಳಗೆ ಬಗ್ಗಿ ಮಾರುತಿಯ ಗದ್ದುಗೆಯ ಮೇಲೆ ಮೂರು ಮೂರು ಸಾರೆ ಚುಟುಕೆ ಹೊಡೆದನು. ಆಮೇಲೆ ಆ ಧೀರನು ನಿಶ್ಶಂಕೆಯಿಂದ ಮಾರುತಿಯ ಪ್ರತಿಮೆಯನ್ನು ಎರಡು ಬೆರಳು ಮುಂದಕ್ಕೆ ಸರಿಸಿ, ಬಿರಿಕಿನಲ್ಲಿ ಒಂದು ಗುರುತು ಒಗೆದು, ಮೊದಲಿದ್ದಂತೆ ಪ್ರತಿಮೆಯನ್ನು ಅದರ ಸ್ಥಳಕ್ಕೆ ಕುಳ್ಳಿರಿಸಿದನು. ಮೂರ್ತಿಯ ಈ ಮುಂದೆ ಹಿಂದೆ ಸರಿಸೋಣವು ಕ್ಷಣಮಾತ್ರದಲ್ಲಿ ಮಿಂಚಿನಂತೆ ಹೊಳೆದು ಹೋದಂತಾದ್ದರಿಂದ, ಸರ್ಜೇಖಾನನಿಗೆ ನೋಡಿಯೂ ನೋಡದಹಾಗಾಯಿತು; ಮೂರ್ತಿ ಉಲುಕಾಡಿದ್ದನ್ನು ಆತನು ಒಮ್ಮೆ ನೋಡಿದಂತಾದರೂ, ತಿರುಗಿ ಆತನ ಕಣ್ಣಿಗೆ ಅದು ಬೀಳದ್ದರಿಂದ, ಸುಮ್ಮನೆ ಏನಾದರೂ ಭಾಸವಾಗಿರಬಹುದೆಂದು ಆತನು ದುರ್ಲಕ್ಷಿಸಿ ಮನಸ್ಸನ್ನು ಸಮಾಧಾನಮಾಡಿಕೊಂಡನು. ಅಷ್ಟರಲ್ಲಿ ಶ್ರೀಧರಸ್ವಾಮಿಯು ಹೊರಗೆ ಬಂದು, ಶಾಂತವೃತ್ತಿಯಿಂದ–ಹಾ! ನಡೆಯಿರಿ ಇನ್ನು, ಎಲ್ಲಿಗೆ ಕರೆದೊಯ್ಯುತ್ತೀರೋ ಕರೆದೊಯ್ಯಿರಿ. ಇನ್ನೊಮ್ಮೆ ನಿಮಗೆ ಸ್ಪಷ್ಟವಾಗಿ ಹೇಳುತ್ತೇನೆ–ನಾನು ನಿರಪರಾಧಿಯಾದ ಬಡ ಗೋಸಾವಿಯಿರುತ್ತೇನೆ, ನಿರರ್ಥಕವಾಗಿ ನನ್ನನ್ನು ಪೀಡಿಸಬೇಡಿರಿ.

ಗೋಸಾವಿಯ ಈ ಮಾತನ್ನು ಯಾರು ಕೇಳಬೇಕು? ಆತನು ಹೊರಬಿದ್ದ ಕೂಡಲೆ ಖಾನನ ಜನರು ಆತನನ್ನು ಸುತ್ತುಗಟ್ಟಿದರು. ಗುಡಿಯ ಪ್ರಾಕಾರದಿಂದ ಹೊರಡುವ ಸಂಧಿಯಲ್ಲಿ ಗೋಸಾವಿಯು ಒಮ್ಮೆ ಉಸುರ್ಗರೆದು, ಖಿನ್ನಹಾಸ್ಯದಿಂದ ಹಿಂದಿರುಗಿ ಗುಡಿಯ ಕಡೆಗೆ ನೋಡಿದನು. ಸ್ತಬ್ಧವಾಗಿ ಎಲ್ಲರೂ ಹಾದಿಯನ್ನು ಹಿಡಿದರು. ಒಬ್ಬೊಬ್ಬರು

ಒಂದೊಂದು ವಿಧದಿಂದ ಪೀಡಿತರಾಗಿದ್ದರು. ತಾನು ಕೈಕೆಳಗಿನವನೆಂಬುದನ್ನು ಲಕ್ಷಿಸದೆ ಸರ್ಜೇಖಾನನು ಗೋಸಾವಿಯ ಸಮಕ್ಷ ತನ್ನ ಮಾತನ್ನು ನಿರಾಕರಿಸಿ, ಉದ್ಧಟತನದಿಂದ ಗೋಸಾವಿಯನ್ನು ಸೆರೆಹಿಡಿದು ಅಪಮಾನಗೊಳಿಸಿದ್ದಕ್ಕಾಗಿ ಶಿವದೇವರಾಯನು ನೊಂದು ಕೊಂಡು, ಕ್ಷೋಭಿಸುವ ತನ್ನ ಮನಸ್ಸನ್ನು ಪ್ರಯಾಸದಿಂದ ಜಗ್ಗಿಹಿಡಿಯುತ್ತ ಸಾಗಿದ್ದನು. ಶಿವಾಜಿಯ ಅನುಯಾಯಿಗಳಲ್ಲಿ ಒಬ್ಬನೆಂದು ತಿಳಿದು ಶಿವದೇವರಾಯನನ್ನು ಲಕ್ಷಿಸದೆ, ಗೋಸಾವಿಯನ್ನು ನಾನು ಸೆರೆಹಿಡಿದೆನು; ಆದರೆ ವಿಚಾರದ ಕಡೆಯಲ್ಲಿ ನನ್ನ ತರ್ಕವು ಸುಳ್ಳು ಆಗಿ ಎಲ್ಲಿ ತನ್ನ ಅಪಮಾನವಾಗುವದೋ ಎಂದು ಚಿಂತಿಸುತ್ತ ಸರ್ಜೇಖಾನನು ನಡೆದಿದ್ದನು. ಆದರೆ ಶ್ರೀಧರಸ್ವಾಮಿಯ ಗಂಭೀರಮುಖ ಮುದ್ರೆಯಿಂದ, ಆತನ ಮನಸ್ಸಿನೊಳಗಿನ ವಿಚಾರಗಳು ಯಾರಿಗೂ ತಿಳಿಯುವಂತೆ ಇದ್ದಿಲ್ಲ. ಆತನು ನಿತ್ಯದಲ್ಲಿ ಭಿಕ್ಷೆಗೆ ಹೋಗುವಾಗಿ ನಷ್ಟು ಶಾಂತಮುದ್ರೆಯಿಂದ ಹಾದಿಯನ್ನು ತುಳಿಯುತ್ತಿದ್ದನು. ಉಳಿದವರು ಯಾವ ಚಿಂತೆಯೂ ಇಲ್ಲದೆ, ಹಾದಿಯಲ್ಲಿ ಭೆಟ್ಟಿಯಾದ ಹಿಂದುಗಳ ಚೇಷ್ಟೆ ಮಾಡುತ್ತ ಬಾಯಿಗೆ ಬಂದ ಹಾಗೆ ಮಾತಾಡುತ್ತ ನಗುತ್ತ-ಕೆಲೆಯುತ್ತ ಹಾದಿಯ ಹಿಡಿದಿದ್ದರು. ತನ್ನನ್ನು ಸುತ್ತುಗಟ್ಟಿ ಸಾಗಿದ್ದ ಜನರ ಈ ಸೊಕ್ಕಿನ ನಡತೆಯನ್ನು ನೋಡಿ, ಶ್ರೀಧರಸ್ವಾಮಿಯು ಸಿಟ್ಟಿನಿಂದ ಬೆಂಕಿಯಾಗಿದ್ದನು. ಆತನು ಇದು ಸಿಟ್ಟು ಮಾಡುವ ಹೊತ್ತು ಅಲ್ಲೆಂದು ತಿಳಿದು, ಮನಸ್ಸು ಬಿಗಿಹಿಡಿದು ಸುಮ್ಮನೆ ಸಾಗಿದ್ದನು. ಅಷ್ಟರಲ್ಲಿ ಅವರಿಗೆ ಒಂದು ಹಳ್ಳಿಯು ಹತ್ತಿತು. ಆ ಹಳ್ಳಿಯ ಬಳಿಯ ಕೆರೆಯಿಂದ ಹೆಂಗಸರು ತಲೆಯ ಮೇಲೆ ಕೊಡ ಹೊತ್ತು ನೀರು ಒಯ್ಯುತ್ತಿದ್ದರು. ಆ ಹಳ್ಳಿಯ ಹೆಂಗಸರು ಈ ಪರಿವಾರವನ್ನು ನೋಡಿ ನಾಚಿ, ಮೈತುಂಬ ಸೆರಗು ಹೊದ್ದುಕೊಂಡು, ಇವರು ಯಾರಿರಬಹುದೆಂದು ಕಣ್ಣೆತ್ತಿ ನೋಡುತ್ತ ನಿಂತುಕೊಂಡಿದ್ದರು. ಅವರಲ್ಲಿ ಕೆಂಪನ್ನ ಒಬ್ಬ ಚಿಕ್ಕ ಹೆಣ್ಣುಮಗಳು ಕಣ್ಣು ಮೂಗಿನಿಂದ ನೆಟ್ಟಗಿದ್ದದ್ದನ್ನು ಒಬ್ಬ ಮುಸಲ್ಮಾನನು ನೋಡಿ, ತನ್ನವರಿಗೆ- ಏ ಯಾರ! ನೋಡಿರಿ, ನೋಡಿರಿ! ಮಿಂಚು ಹೇಗೆ ಹೊಳೆಯುತ್ತದದನ್ನು! ಶಾಬಾಸ್! ಬಲುಚಲುವೆಯು, ಎಂದು ನುಡಿದನು. ಆಗ ಮತ್ತೊಬ್ಬನು ಮತ್ತೊಂದು ವಿಧದ ಚೇಷ್ಟೆಯ ಮಾತುಗಳನ್ನಾಡಿದನು. ಇನ್ನೊಬ್ಬನು ಇನ್ನೊಂದು ವಿಧದ ಚೇಷ್ಟೆಯ ಮಾತುಗಳನ್ನಾಡಿದನು. ಅಷ್ಟರಲ್ಲಿ ಆ ಹೆಣ್ಣುಮಗಳು ತನ್ನ ಗೋಣು ಚಳಕುಹಿಡಿದದ್ದರಿಂದ, ಎರಡೂ ಕೈಗಳಿಂದ ಕೊಡವನ್ನು ಮೇಲಕ್ಕೆತ್ತಿಹಿಡಿದು, ಗೋಣನ್ನು ಎರಡು ಸಾರೆ ಎಡಕ್ಕೆ ಬಲಕ್ಕೆ ತಿರುಗಿಸಿ ಮತ್ತೆ ಕೊಡವನ್ನು ತಲೆಯ ಮೇಲೆ ಇಟ್ಟುಕೊಂಡಳು. ಇದನ್ನು ನೋಡಿ ಒಬ್ಬ ಮುಸಲ್ಮಾನನು-ಅಹಹಾ! ಏನು ಸೌಂದರ್ಯವಿದು! ಕೊಡದಿಂದ ಆಕೆಗೆ ಬಹಳ ತ್ರಾಸವಾಗಿರುತ್ತದೆ! ಪಾಪ, ಹೇಗೆ ಕೊಡವನ್ನು ನೆಗವಿದಳು! ತಲೆಯನ್ನು ಹೇಗೆ ಅಲ್ಲಾಡಿಸಿದಳು! ಶಾಬಾಸ್ ಚೆಲ್ವಿನ ಖನಿಯು!! ಎಂದು ನುಡಿಯಲು, ಎಲ್ಲರೂ ಕೊಳ್ಳನೆ ನಕ್ಕರು. ಅವರೊಳಗಿ ನವನೊಬ್ಬ ಉದ್ದಾಮನು ತನ್ನವರಿಗೆ-ಕೊಡದಿಂದ ಇವಳಿಗೊದಗಿರುವ ತ್ರಾಸವನ್ನು ಈಗ ತಪ್ಪಿಸುತ್ತೇನೆ ನೋಡಿರಿ, ಎಂದು, ಒಂದು ಹವಣೆಯ ಕಲ್ಲನ್ನು ತಕ್ಕೊಂಡು ಗುರಿನೋಡಿ ಕೊಡಕ್ಕೆ ಒಗೆದನು. ಆಗ ಕೊಡವು ಒಡೆಯು, ಆ ಹೆಣ್ಣು ಮಗಳ

ಸೀರೆ-ಕುಪ್ಪುಸಗಳು ತಪ್ಪನೆ ತೊಯ್ದುವು. ಇದನ್ನೆಲ್ಲ ನೋಡಿ, ಗೋಸಾವಿಯ ಸಂತಾಪವು ಹೊಟ್ಟೆಯಲ್ಲಿ ಹಿಡಿಸಲಾರದೆ ಹೊರಬಿದ್ದದ್ದರಿಂದ, ಆತನು ದಗದಗನೆ ಉರಿಯುತ್ತ ತನ್ನ ಕಾವಲುಗಾರರನ್ನು ಗಣನೆಗೆ ತಾರದೆ, ಕಲ್ಲು ಒಗೆದವನನ್ನು ನೆಲಕ್ಕೆ ಕೆಡವಿ ಅವನ ಎದೆಯ ಮೇಲೆ ಕುಳಿತು ಅವನನ್ನು ಪಕ್ಕೆ ಪಕ್ಕೆ ಗುದ್ದಹತ್ತಿದನು. ಗೋಸಾವಿಯ ಆಗಿನ ಉಗ್ರಸ್ವರೂಪವನ್ನು ನೋಡಿ, ಕಾವಲಗಾರರು ಬೆದರಿ ಸುಮ್ಮನೆ ನಿಂತುಕೊಂಡಿದ್ದರು. ನೆಲಕ್ಕೆ ಬಿದ್ದವನು ಹೊಡತವನ್ನು ತಾಳಲಾರದೆ ಒದರುತ್ತಿದ್ದನು. ಕೊಡಹೊತ್ತ ಹೆಣ್ಣು ಮಗಳು-ಆಗಲಿ, ಆ ಮೂಳನ ಸೇವೆಯು ಇನ್ನಿಷ್ಟು ನೆಟ್ಟಗಾಗಲಿ, ಎಂದು ನುಡಿಯುತ್ತ ಉಳಿದವರು ಕೊಡ ಒಡೆದದ್ದಕ್ಕಾಗಿ ಬಾಯಿಗೆ ಬಂದಹಾಗೆ ಬೈಯುತ್ತ ಗದ್ದಲ ಮಾಡ ಹತ್ತಿದರು. ಅಷ್ಟರಲ್ಲಿ ಗೋಸಾವಿಯ ಕಾವಲುಗಾರರೂ ಬಾಯಿ ಮಾಡಹತ್ತಿ ಗೋಸಾವಿಯ ಮೈಮೇಲೆ ಹೋಗಲು, ಒಬ್ಬನು ತನ್ನ ಕೈಯೊಳಗಿನ ಕಠಾರಿಯಿಂದ ಗೋಸಾವಿಯ ಕುತ್ತಿಗೆಗೆ ಹೊಡೆದನು. ಆದರೆ ದೈವ ಯೋಗದಿಂದ ಅದು ತಪ್ಪಿ ಸುಮ್ಮನೆ ಕುತ್ತಿಗೆಗೆ ತೆರೆದಂತಾಗಿ ಜಾರಿ ಹೋಯಿತು! ಉಳಿದವರು ಗೋಸಾವಿಯ ಮೇಲೆ ತಮ್ಮ ತಮ್ಮ ಶಸ್ತ್ರಗಳನ್ನು ಎತ್ತುತ್ತಿರಲು, ಯಾವ ಪಾಪವನ್ನೂ ಅರಿಯದೆ ಮುಂದೆ ಹೋಗಿದ್ದ ಆ ಇಬ್ಬರು ಸರದಾರರು ಹಿಂದಿರುಗಿ ನೋಡಿದರು. ಸರ್ಜೇಖಾನನು, ಏನು ಗದ್ದಲವೆಂದು ಕುದುರೆಯನ್ನು ಓಡಿಸುತ್ತ "ಖಬರದಾರ! ಖಬರದಾರ! ಒಂದು ಪೆಟ್ಟು ಹಾಕಿದರೆ ನಿಮ್ಮ ಗತಿ ನೆಟ್ಟಗಾಗಲಿಕ್ಕಿಲ್ಲ!" ಎಂದು ಗದ್ದರಿಸುತ್ತ ಗದ್ದಲ ನಡೆದಲ್ಲಿಗೆ ಬಂದನು. ಆತನು ತನ್ನ ಜನರನ್ನು ಕುರಿತು ಏನು ಗದ್ದಲವೆಂದು ಕೇಳಲು, ಅವರು ತಮ್ಮ ಮನಸ್ಸಿಗೆ ಬಂದಂತೆ ಗದ್ದಲದ ಕಾರಣವನ್ನು ಹೇಳಿದರು; ಆದರೆ ಹೆಣ್ಣುಮಗಳು ಕೊಡ ಒಡಕೊಂಡು ತೋಯಿಸಿಕೊಂಡು ನಿಂತಿದ್ದೂ, ಕಾವಲುಗಾರರ ಲಕ್ಷವಿಲ್ಲದೆ ಗೋಸಾವಿಯು ಕಲ್ಲು ಒಗೆದವನನ್ನು ನೆಲಕ್ಕೆ ಕೆಡವಿ ರಕ್ತಕಾರುವ ಹಾಗೆ ಗುದ್ದಿದ್ದೂ ಮುಚ್ಚುವಹಾಗಿದ್ದಿಲ್ಲ. ಹೆಣ್ಣು ಮಗಳ ಮಾತು ಅಷ್ಟೊಂದು ಮನಸ್ಸಿಗೆ ಹತ್ತದಿದ್ದರೂ, ಗೋಸಾವಿಯ ಧೈರ್ಯವು ಸರ್ಜೇಖಾನನ ಮನಸ್ಸಿನಲ್ಲಿ ಪೂರಾ ನಟ್ಟು ಆತನನ್ನು ಆಶ್ಚರ್ಯ ಗೊಳಿಸಿತು. ಗೋಸಾವಿಯ ಪಾರುಪತ್ಯ ಮಾಡಬೇಕೋ, ಆತನ ಧೈರ್ಯಕ್ಕಾಗಿ ಆಶ್ಚರ್ಯ ಪಡಬೇಕೋ ಎಂಬದು ಸರ್ಜೇಖಾನನಿಗೆ ತಿಳಿಯದಾಯಿತು. ಆತನು ಗೋಸಾವಿಗೆ—ಏನು? ಗೋಸಾವಿಯವರೇ, ನಿಜವಾದ ಸುದ್ದಿಯೇನು? ನೀವು ಹೇಳಿರಿ ನೋಡೋಣ? ಸತ್ಯವು ಹೊರಬಿದ್ದರೆ ತಪ್ಪುಗಾರರನ್ನು ಶಿಕ್ಷಿಸುವದಕ್ಕೆ ನೆಟ್ಟಗಾಗುವದು, ಅನ್ನಲು, ಗೋಸಾವಿಯು ತಿರಸ್ಕಾರದಿಂದ ನಕ್ಕು-ನನ್ನ ವಿಚಾರಣೆಯನ್ನು ಮಾಡಲಿಕ್ಕೆ ನೀನು ಯಾರು? ನನ್ನ ಪಾರುಪತ್ಯ ಮಾಡುವದಿದ್ದರೆ ಬೇಕಾದ ಹಾಗೆ ಮಾಡು, ಅನುಮಾನಿಸಬೇಡ, ಎಂದನು.

ಸರ್ಜೇಖಾನನು ಗೋಸಾವಿಯ ಈ ಉದ್ದಾಮತನವನ್ನು ನೋಡಿ ಆಶ್ಚರ್ಯ ಪಟ್ಟನಲ್ಲದೆ, ಆತನ ಶೌರ್ಯ-ಸಾಹಸಗಳಿಗಾಗಿ ಆ ಖಾನನು ಪೂಜ್ಯ ಬುದ್ಧಿಯುಳ್ಳವ ನಾದನು; ಆದರೆ ಇದು ಆಶ್ಚರ್ಯಮಗ್ನನಾಗಿ ಕುಳಿತುಕೊಳ್ಳುವ ಸಮಯವಲ್ಲದ್ದರಿಂದ, ಖಾನನು ತನ್ನವರಿಗಿಷ್ಟು ಸಿಟ್ಟು ಮಾಡಿ, ಗೋಸಾವಿಗೆರಡು ಬುದ್ಧಿಯ ಮಾತುಗಳನ್ನು ಹೇಳಿ,

ಎಲ್ಲ ಪರಿವಾರದೊಡನೆ ಹಾದಿಯನ್ನು ಹಿಡಿದನು. ಈತನು ಗೋಸಾವಿಯಾಗಿರದೆ, ಆ ಪುಂಡ ಶಿವಾಜಿಯ ಹಿಂಡಿನೊಳಗಿ ವನೊಬ್ಬನಿರುತ್ತಾನೆಂಬ ಮಾತು ಖಾನನಿಗೆ ಹೆಚ್ಚು ವಿಶ್ವಸನೀಯವಾಗಿ ತೋರಹತ್ತಿತು. ಈತನನ್ನು ತಾನು ಜುಲುಮೆಯಿಂದ ಸೆರೆಹಿಡಕೊಂಡು ಬಂದಂತೆ, ಯಾವದೊಂದು ದುರ್ಗದ ಕತ್ತಲಕೋಣೆಯಲ್ಲಿ ಇವನನ್ನು ಕೊಳೆಯಹಾಕಿ, ಹೊಟ್ಟೆತುಂಬ ಅನ್ನಹಾಕದೆ, ಪರಿಪರಿಯಾಗಿ ಪೀಡಿಸಿ, ಆ ಕಳ್ಳ ಶಿವಾಜಿಯ ಒಳಸಂಚುಗಳನ್ನು ಬೈಲಿಗೆಳೆದು ಬಾದಶಹನ ಪೂರ್ಣ ಕೃಪೆಗೆ ಪಾತ್ರನಾಗಬೇಕೆಂದು ಆತನು ನೆನಿಸಿದನು. ಈ ಕೆಲಸಕ್ಕೆ ಪುರಂದರಗಡವು ಖಾನನಿಗೆ ತಕ್ಕದ್ದಾಗಿ ತೋರಿತು. ವಿಜಾಪುರದ ಬಾದಶಹನ ಅಧಿಪತ್ಯಕ್ಕೊಳಪಟ್ಟ ಆ ಗಡದ ಅಧಿಪತಿಯು ಒಬ್ಬ ವೃದ್ಧ ಬ್ರಾಹ್ಮಣನಿದ್ದು, ಗಡವು ಸರ್ಜೇಖಾನನ ಸುಭೆಯೊಳಗಿನದಾಗಿತ್ತು. ಪುರಂದರಗಡದಿಂದ ಆ ಮಾರುತಿಯ ದೇವಲಾಯವು ಬಹಳ ದೂರವಿಲ್ಲದ್ದರಿಂದ, ಅಲ್ಲಿಯ ಹುಳುಕನ್ನು ಬೈಲಿಗೆಳೆಯಲಿಕ್ಕೂ ಖಾನನಿಗೆ ಅನುಕೂಲವಿತ್ತು. ಈ ಎಲ್ಲ ಅನುಕೂಲತೆಗಳನ್ನು ಮನಸ್ಸಿನಲ್ಲಿ ತಂದು, ಸರ್ಜೇಖಾನನು ಶ್ರೀಧರಸ್ವಾಮಿಯನ್ನು ಪುರಂದರಗಡದ ಸೆರೆಮನೆಯಲ್ಲಿಟ್ಟನು; ಮತ್ತು ಪುಂಡ ಶಿವಾಜಿಯ ಒಳಸಂಚಿನೊಳಗಿನವನೊಬ್ಬನನ್ನು ಪುರಂದರದ ದುರ್ಗದಲ್ಲಿ ಹಿಡಿದು ಹಾಕಿರುವೆನೆಂಬರ್ಥದ ಪತ್ರವನ್ನು ಬಾದಶಹನಿಗೆ ಬರೆದು ಕಳುಹಿದನು. ಇದೆಲ್ಲ ಶಿವದೇವ ರಾಯನಿಗೆ ವಿಷಪ್ರಾಯವಾಯಿತು. ತನ್ನ ಕೈಕೆಳಗಿನವನಾಗಿ ಬಂದ ಸರ್ಜೇಖಾನನು, ತನ್ನನ್ನು ಮೂಲೆಯಲ್ಲಿ ಕುಳ್ಳಿರಿಸಿ, ತಾನೇ ಸ್ವತಂತ್ರನಾಗಿ ಎಲ್ಲ ವ್ಯವಸ್ಥೆಯನ್ನೂ ಮಾಡಹತ್ತಿದ್ದರಿಂದ, ಆತನಿಗೆ ಮಿತಿಮೀರಿ ಸಂತಾಪವಾಯಿತು; ಆದರೆ ಮಾಡುವದೇನು? ಆಗಿನ ಕಾಲವೇ ಹಾಗಿತ್ತು. ಶಿವದೇವರಾಯನ ಆಟವೇನೂ ನಡೆಯುವ ಹಾಗಿದ್ದಿಲ್ಲ. ಬಹುತರ ಮುಸಲ್ಮಾನರು ಕೆಲಸವಾಗುವತನಕ ಹಿಂದುಗಳಿಗೆ ಅಪ್ಪ, ಅಣ್ಣ ಎಂದು ಕರೆದು, ಕೆಲಸ ತೀರಿದ ಕೂಡಲೆ ಅವರನ್ನು ತಿರಸ್ಕರಿಸುವದು ವಾಡಿಕೆಯ ನಿಯಮವಾಗಿತ್ತು. ಮುರಾರಿರಾಯನಂಥ ನಾಲ್ಕಾರು ಜನ ಹಿಂದೂ ಸರದಾರರ ಧೈರ್ಯ, ಶೌರ್ಯ, ದೊಡ್ಡಸ್ತಿಕೆ ಮೊದಲಾದವುಗಳ ಅನುಭವವು ಬಾದಶಹನಿಗೆ ಚನ್ನಾಗಿ ಬಂದಿದ್ದು, ಆ ತೇಜೋವಂತರ ತೇಜಸ್ಸಿನಿಂದ ರಾಜ್ಯದ ಸುರಕ್ಷಿತತೆಗೂ, ಅಭಿವೃದ್ಧಿಗೂ ಬಹುಮಟ್ಟಿಗೆ ಸಹಾಯವಾಗುತ್ತ ಬಂದದ್ದರಿಂದ ಅವರ ಗೌರವಕ್ಕೆ ಮಾತ್ರ ಯಾರಿಂದಲೂ ಬಾಧೆಬರುವಂತೆ ಇದ್ದಿಲ್ಲ. ಉಳಿದವರ ಗತಿಯು ಮೇಲೆ ಹೇಳಿದ ಶಿವದೇವರಾಯನ ಗತಿಯ ಹಾಗೆ ಆಗುತ್ತಿತ್ತೆಂದು ಹೇಳಬಹುದು. ಶಿವದೇವರಾಯನು ಆಗುವದನ್ನೆಲ್ಲ ನೋಡುತ್ತ ಸುಮ್ಮನೆ ಕುಳಿತ ಕೊಳ್ಳಬೇಕಾಯಿತು.

ಶ್ರೀಧರಸ್ವಾಮಿಗೆ ಸೆರೆಮನೆಯಲ್ಲಿ ಬಹಳ ತ್ರಾಸವಾಗಹತ್ತಿತು. ಅಲ್ಲಿ ಬೆಳಕಿನ ಸುದ್ದಿಯಿದ್ದಿಲ್ಲ. ಆತನಿಗೆ ಸರ್ವಸಾಧಾರಣ ಅನ್ನವನ್ನು ಕೂಡ ಹೊಟ್ಟೆತುಂಬ ಹಾಕುತ್ತಿದ್ದಿಲ್ಲ. ಪಂಜರದಲ್ಲಿ ಸಿಕ್ಕಿದ್ದ ಹುಲಿಯಂತೆ, ಆತನು ಇತ್ತಿಂದತ್ತ ಅತ್ತಿಂದಿತ್ತ ಸುಮ್ಮನೆ ಸೆರೆಮನೆಯಲ್ಲಿ ತಿರುಗಾಡುತ್ತಿದ್ದನು. ಜೀವದ ಗೆಳೆಯನಂತೆ ಇದ್ದ ತನ್ನ ಯೋಗದಂಡವನ್ನು ಮೂರು ಮೂರು ಸಾರೆ ಆತನು ಈ ಕೈಯಿಂದ ಆ ಕೈಗೆ, ಆ ಕೈಯಿಂದ ಈ ಕೈಗೆ ಒಗೆದುಕೊಳ್ಳುತ್ತಿದ್ದನು.

ನಡನಡುವೆ ಅರ್ಥಪೂರ್ಣದೃಷ್ಟಿಯಿಂದ ಅದನ್ನು ನೋಡುತ್ತಿದ್ದನು. ಒಮ್ಮೊಮ್ಮೆ ಸ್ವಲ್ಪ ನಗುವನು, ಒಮ್ಮೊಮ್ಮೆ ಸ್ವಲ್ಪ ಹೊತ್ತಿನವರೆಗೆ ಯೋಗದಂಡವನ್ನು ಒತ್ತಟ್ಟಿಗಿಡುವನು. ಈ ಸ್ಥಿತಿಯಲ್ಲಿ ಏನಾದರೂ ಸ್ವಲ್ಪ ಸಪ್ಪಳವಾದರೆ ಸಾಕು, ಯಾರು ಬಂದರೋ ಎಂದು ಕೂಡಲೆ ಕೈಯಲ್ಲಿ ಯೋಗದಂಡವನ್ನು ತಕ್ಕೊಂಡು, ಬಾಗಿಲದ ಕಡೆಗೆ ದಿಟ್ಟಿಸಿ ನೋಡುತ್ತ ನಿಂತುಕೊಳ್ಳುತ್ತಿದ್ದನು. ಹೀಗಿರುವಾಗ ದುರಗಮುರಗಿಯವರ ವಾದ್ಯದ ಕರ್ಕಶವಾದ ಸಪ್ಪಳವು ಅವನ ಕಿವಿಗೆ ಕೇಳಿಸಹತ್ತಿತು. ಆಗ ಗೋಸಾವಿಯು ತನ್ನ ಗುರುತಿನ ಈ ಸಪ್ಪಳವು ಇಲ್ಲಿ ಹೇಗೆ ಕೇಳಿಸಿತೆಂದು ಆತಂಕಪಟ್ಟು, ತಾನಿದ್ದ ಕೋಣೆಯ ಕಿಂಡಿಯೊಳಗಿಂದ ಹಣಿಕಿನೋಡಿದನು; ಆದರೆ ಅದರಿಂದ ಪ್ರಯೋಜನವೇನೂ ಆಗಲಿಲ್ಲ, ಸಪ್ಪಳವಂತೂ ಸಮಿಸಮೀಪಕ್ಕೆ ಕೇಳಿಸ ಹತ್ತಿತು. ಗೋಸಾವಿಯು ಉತ್ಸುಕತೆಯಿಂದ ಹಣಿಕಿಹಾಕಿ ಕಿಡಿಕಿಯಲ್ಲಿ ನೋಡುತ್ತಿರಲು, ದುರಗ ಮುರಗಿಯು ಸೆರೆಮನೆಯ ಬಾಗಿಲಿಗೆ ಬಂದನು. ಆತನು ಗೋಸಾವಿಯನ್ನು ನೋಡಿ ಗೋಣು ಅಲ್ಲಾಡಿಸಲು, ಗೋಸಾವಿಗೆ ಪರಮಾನಂದವಾಯಿತು. ತನ್ನ ಬಿಡುಗಡೆಯ ಸುಚಿಹ್ನ ಒದಗಿದ್ದರಿಂದ ಆತನು ಆನಂದದಿಂದ ಹಿಗ್ಗುತ್ತಿರಲು, ಸೆರೆಮನೆಯ ಬಾಗಿಲು ಗಟ್ಟಿಯಾಗಿ ಬಡಿಯಿತು. ಕೂಡಲೆ ಗೋಸಾವಿಯು ಯೋಗದಂಡವನ್ನು ಕೈಯಲ್ಲಿ ತಕ್ಕೊಂಡು ಬಾಗಿಲ ಕಡೆಗೆ ನೋಡುತ್ತ ನಿಂತುಕೊಂಡನು ಕಾವಲುಗಾರನು ಬಾಗಿಲನ್ನು ತೆರೆಯಲು, ಪುರಂದರಗಡದ ಒಡೆಯನು ಸೆರೆಮನೆಯ ಬಾಗಿಲಿಗೆ ಬಂದುನಿಂತನು. ಕೂಡಲೆ ಒಬ್ಬ ಸೇವಕನು ಅಲ್ಲಿ ಒಂದು ಗಾದಿಯನ್ನು ಹಾಸಿ, ಲೋಡನ್ನು ಇಟ್ಟನು. ದುರ್ಗದ ಒಡೆಯನು ಗಾದಿಯ ಮೇಲೆ ಕಾಲನ್ನಿಡಲು, ಸಣ್ಣ ಕಲಬತ್ತನ್ನು ಹಿಡಕೊಂಡಿದ್ದ ಮತ್ತೊಬ್ಬ ಸೇವಕನು, ತಾಂಬೂಲದ ಜೋರಣೆಯನ್ನು ತಂದು ಇಟ್ಟನು. ದುರ್ಗದ ಒಡೆಯನು ತೀರಾ ವೃದ್ಧ ನಾಗಿದ್ದನು. ಆತನ ವೃದ್ಧಾಪ್ಯಕ್ಕೆ ಚಿಂತೆಯು ಜೋಡಾದದ್ದರಿಂದ ಆತನು ಮತ್ತಿಷ್ಟು ಜರ್ಜರನಾಗಿದ್ದನು. ಆತನ ಕಣ್ಣುಗಳು ಮಂದವಾಗಿದ್ದವು. ಮುಖಮುದ್ರೆಯು ಸೌಮ್ಯವೂ ನಿಶ್ಚಯಾತ್ಮಕವೂ ಆಗಿತ್ತು, ಅದರಲ್ಲಿ ಕಾಪಟ್ಯಾದಿಗಳ ದುಶ್ಚಿಹ್ನಗಳು ಲೇಶವಾದರೂ ತೋರುತ್ತಿದ್ದಿಲ್ಲ. ಆತನು ತಲೆಗೆ ಬಿಳಿಯ ಮುಂಡಾಸವನ್ನು ಹಾಕಿಕೊಂಡು, ಮೈಯೊಳಗೆ ಬಗಲಕಸಿಯ ಅಂಗಿಯನ್ನು ತೊಟ್ಟುಕೊಂಡು, ಅದರ ಮೇಲೆ ದೋತರವನ್ನು ಹೊದ್ದಿದ್ದನು. ಆತನು ಲೋಡಿಗೆ ಆತು ಕುಳಿತು ಅಲ್ಲಿದ್ದ ಸೇವಕರಿಗೂ, ಕಾವಲುಗಾರರಿಗೂ ದೂರಹೋಗ ಹೇಳಿ, ಸೌಮ್ಯಸ್ವರದಿಂದ ಗೋಸಾವಿಯನ್ನು ಕುರಿತು–ಗೋಸಾವಿಯವರೇ, ನೀವು ಇವರ ಕೈಯಲ್ಲಿ ಎಲ್ಲಿ ಸಿಕ್ಕಿರಿ? ಎಂದು ಕೇಳಲು, ಗೋಸಾವಿಯು–ನಾನೇ? ನಾನೊಬ್ಬನೇ ಯಾಕೆ? ಮಹಾರಾಜರೇ, ನಮ್ಮ ಧರ್ಮವೂ, ನಮ್ಮ ದೇಶವೂ, ಯಾವತ್ತು ಗೋ–ಬ್ರಾಹ್ಮಣರೂ ಇವರ ಕೈಯಲ್ಲಿ ಸಿಕ್ಕಿರಲು, ನನ್ನೊಬ್ಬ ಬಡವನ ಪಾಡೇನು? ಇಂದಿಗೆ ಬೇಕಾದವರಿಗೆ ಬೇಕಾದಲ್ಲಿ ಶೂಲಕ್ಕೇರಿಸಲಿಕ್ಕೆ ಅವರು ಸಮರ್ಥರಿದ್ದಾರೆ! ಅವರ ಕೈಹಿಡಿಯುವವರಾರು? ಬಾದಶಾಹಿಯ ಅಮಲಿನಲ್ಲಿಯೂ, ಅಮೀರಶಾಹಿಯ ಅಮಲಿನಿಲ್ಲಯೂ ಬಡವರನ್ನು ಯಾರು ಕೇಳಬೇಕು? ಬಡವನು ಮಾರುತಿಯ ಗುಡಿಯಲ್ಲಿ ಇದ್ದೆನು. ಖಾನಸಾಹೇಬರ ಲಹರಿಯು ಬಂದದ್ದರಿಂದ ಹಿಡಕೊಂಡು ಬಂದು, ಕತ್ತಲಕೋಣೆಯಲ್ಲಿ ಹಾಕಿರುತ್ತಾರೆ.

ಗೋಸಾವಿಯು ಹೀಗೆ ಮಾತಾಡುತ್ತಿರುವಾಗ, ಆ ವೃದ್ಧನು ಗೋಸಾವಿಯ ಮೋರೆಯನ್ನು ಒಂದೇಸವನೆ ಮಿಕಿಮಿಕಿ ನೋಡುತ್ತಲಿದ್ದನು. ಗೋಸಾವಿಯ ಮಾತು ಮುಗಿದರೂ ವೃದ್ಧನ ನೋಡುವದು ತೀರಲಿಲ್ಲ. ಆತನು ಹೀಗೆ ಬಹಳ ಹೊತ್ತು ನೋಡಿ ಒಮ್ಮೆ ಉಸಿರ್ಗರೆದು. ಗೋಸಾವಿಯನ್ನು ಕುರಿತು ನಿಶ್ಯಕ್ತ ದನಿಯಿಂದ–ಬಾವಾಜಿಯವರೇ, ನಿಮ್ಮ ಮೇಲೆ ಹೊರಿಸಿರುವ ಅಪವಾದದಲ್ಲಿ ಏನಾದರೂ ತಥ್ಯಾಂಶವಿರುವದೇ? ನೀವು ವಾಸಿಸುತ್ತಿದ್ದ ದೇವಾಲಯದಲ್ಲಿ ಜನರು ನೆರೆದು ಒಳಸಂಚು ನಡಿಸುತ್ತಿದ್ದದ್ದು ನಿಜವೇ? ಎಂದು ಕೇಳಿದನು. ಆ ವೃದ್ಧನು ಸುಮ್ಮನೆ ನೆವಕ್ಕೆ ಏನಾದರೂ ಕೇಳುತ್ತಿದ್ದಂತೆ ತೋರಿತು. ಗೋಸಾವಿಯನ್ನು ನೆಟ್ಟಗೆ ನೋಡಬೇಕೆಂತಲೇ ಬಂದವನಂತೆ ಆತನು ಗೋಸಾವಿಯನ್ನು ಎವೆಯಿಕ್ಕದೆ ನೋಡುತ್ತಿದ್ದನು. ಅತ್ತ ಗೋಸಾವಿಯು ಆ ವೃದ್ಧನ ಮೋರೆಯನ್ನು ನೋಡಲಿಕ್ಕೆ ಯಾಕೋ ಸಂಕೋಚಪಟ್ಟು, ನಾಚುತ್ತಿರುವಂತೆ ತೋರಿತು. ಆದರೂ ಆ ಧೂರ್ತ ಗೋಸಾವಿಯು ದಿಟ್ಟತನವನ್ನು ಮುಂದೆಮಾಡಿ, ವೃದ್ಧನನ್ನು ಕುರಿತು ನುಡಿದನೇನಂದರೆ–ಮಹಾರಾಜರೇ, ನೆರೆಯುತ್ತಿದ್ದ ಜನರೆಂದರೆ ಯಾರು? ಬಡಮಾವಳೆ ಜನರಷ್ಟೆ? ಅವರು ಏನು ಒಳಸಂಚುಮಾಡುತ್ತಿರ ಬಹುದೆಂಬದನ್ನು ತಾವೇ ಯೋಚಿಸಬೇಕು. ಕಡ್ಡಿಯನ್ನು ಒಯ್ದು ಗುಡ್ಡಮಾಡಿದಂತೆ ಆಗಿರುತ್ತದೆ! ಆ ಹಳೆ ಮಾರುತಿಯ ಗುಡಿಯು ನಿಮಗೆ ಗೊತ್ತೇ ಇರುವದು. ಆ ಗುಡಿಯಲ್ಲಿ ನಾನು ಈಗ ಐದಾರು ವರ್ಷಗಳಿಂದ ಇರುತ್ತಿರುತ್ತೇನೆ. ಆ ಗುಡಿಯ ಮುಂದೆ ವಿಶಾಲವಾದ ಪಟಾಂಗಣವಿರುತ್ತದೆ. ನನ್ನಂಥ ಗೋಸಾವಿಗಳು ಮಾರ್ಗಸ್ತ್ವೇನ ಅಲ್ಲಿಗೆ ಬರುತ್ತಾರೆ, ಇಳಿಯುತ್ತಾರೆ, ನಾಲ್ಕು ದಿವಸ ಇರುತ್ತಾರೆ, ಬೇಡಾದರೆ ಹೊರಟು ಹೋಗುತ್ತಾರೆ. ಹೇಳಿ ಕೇಳಿ ಮಾರುತಿಯ ಗುಡಿಯು. ನಾನು ಇರಹತ್ತಿದ ಬಳಿಕ ದೀಪಹಚ್ಚಬೇಕು, ಗುಡಿಯನ್ನು ಉಡುಗಿ ಸಾರಿಸಬೇಕು, ಶನಿವಾರ ಒಂದು ದೀಪ ಹೆಚ್ಚು ಹಚ್ಚಬೇಕು, ಎಲ್ಲಿಯಾದರೂ ಭಿಕ್ಷೆಬೇಡಿ ಕಾಯಿ ತಂದು ಒಡೆದು ಬಂದವರಿಗೆ ಪ್ರಸಾದ ಹಂಚಬೇಕು. ಹೀಗೆ ಮಾಡುತ್ತ ಬಂದೆನು. ಬರಬರುತ್ತ ಸುತ್ತುಮುತ್ತಲಿನ ಹಳ್ಳಿಯ ಹುಡುಗರೂ ಕೂಡಹತ್ತಿದರು. ಅವರು ಶನಿವಾರ ಕ್ಕೊಮ್ಮೆ ಅಲ್ಲಿಗೆ ಬರುತ್ತಾರೆ. ಮಾವಳೆ ಜನರ ಯೋಗ್ಯತೆಯೇನು? ಅವರು ಮಾಡುವದೇನು? ಸುಮ್ಮನೆ ಆರ್ಭಾಟವು! ಕೂಡಿದ ಜನರು ಒಮ್ಮೊಮ್ಮೆ ಕುಸ್ತಿಯಾಡುವರು, ಸಾಮುಮಾಡುವರು, ಲೋಡು ತಿರುವುವರು, ದಾಂಡ ಪಟ್ಟೆಯನ್ನು ಆಡುವರು. ಇದಕ್ಕೂ ಹೆಚ್ಚಾಗಿ ಅಲ್ಲಿ ಇರುವದು? ನನ್ನಂಥ ಬಡಗೋಸಾವಿಯ ಸಂಗಡ ಒಳಸಂಚು ಮಾಡಲಿಕ್ಕೆ ಯಾರು ಬರುವರು? ನನ್ನ ಸಂಗಡ ಒಳಸಂಚನ್ನಾದರೂ ಯಾತರದು ಮಾಡಬೇಕು?

ಗೋಸಾವಿಯ ಮಾತುಗಳನ್ನು ಕೇಳಿ ಆ ವೃದ್ಧ ದುರ್ಗಾಧಿಪತಿಯ ಸಂಚಿತ ಮುಖ ಮುದ್ರೆಯಲ್ಲಿ ಹಾಸ್ಯರೇಖೆಯು ಕ್ಷಣಮಾತ್ರ ಮೂಡಿ ಅಸ್ತವಾಯಿತು. ಆತನು ಗೋಸಾಯನ್ನು ಹೆಚ್ಚು ಉತ್ಸುಕತೆಯಿಂದ ನೋಡಹತ್ತಿದನು. ಆತನು ನೋಡಹತ್ತಿದಂತೆ ಗೋಸಾವಿಯು ಕಣ್ಣು ತಪ್ಪಿಸಲಿಕ್ಕೆ ಯತ್ನಿಸಹತ್ತಿದನು. ಕಡೆಗೆ ಆ ವೃದ್ಧನು ಗೋಸಾವಿಯನ್ನು ಕುರಿತು—ಗೋಸಾವಿಗಳೇ, ನೀವು ಎಂದಿನಿಂದ ಗೋಸಾವಿಗಳಾದಿರಿ? ನಿಮಗೆ ಈಗ ಎಷ್ಟು ವರ್ಷಗಳು?

ನೀವು ಯಾವ ಯಾವ ದೇಶಗಳನ್ನು ಸಂಚರಿಸಿರುತ್ತೀರಿ? ನಿಮ್ಮ ಸ್ಥಿತಿಗತಿಯೇನು? ಮಾಜದೆ ಹೇಳುವಿರಾ? ಎಂದು ಕೇಳಿದನು. ಈ ಪ್ರಶ್ನೆಗಳನ್ನು ಕೇಳಿದಕೂಡಲೆ ಗೋಸಾವಿಯ ಮನಸ್ಸು ಚಂಚಲವಾಯಿತು. ತನ್ನ ಗುರುತನ್ನು ವೃದ್ಧನು ಹಿಡಿದನೋ ಏನೋ ಎಂದು ಆತನು ಗಾಬರಿಯಾದನು; ಆದರೂ ಅದನ್ನು ಹೊರಗೆಡವದೆ ಆತನು ದುರ್ಗಾಧಿಪತಿಯನ್ನು ಕುರಿತು—ಮಹಾರಾಜರೇ, ನನ್ನಂಥ ಯಃಕಶ್ಚಿತ್ ಗೋಸಾವಿಯ ವಿಷಯವಾಗಿ ತಮ್ಮಂಥವರು ಇಷ್ಟು ವಿಚಾರಣೆಯನ್ನು ಯಾಕೆ ಮಾಡಬೇಕು? ಯಾವನು ಯಾವ ಉದ್ದೇಶದಿಂದ ವೈರಾಗ್ಯತಾಳಿ ಗೋಸಾವಿಯಾಗುತ್ತಾನೆಂಬದರ ನಿಯಮವನ್ನು ಹೇಳಲಿಕ್ಕಾಗುವದಿಲ್ಲ. ಆದರೆ ನಾನು ಹಾಗೆ ವೈರಾಗ್ಯತಾಳಿ ಗೋಸಾವಿಯಾದವನಲ್ಲ. ನನ್ನ ತಾಯಿ-ತಂದೆಗಳು ಚಿಕ್ಕಂದಿನಲ್ಲಿಯೇ ತೀರಿದರು, ಮೊದಲೇ ಬಡತನ, ಮನೆಯಲ್ಲಿ ಮಾಡುವವರು ಇಲ್ಲದ ಹಾಗಾದದ್ದರಿಂದ ಒಬ್ಬ ಗೋಸಾವಿಯು, ತನ್ನವನೆಂದು ತಿಳಿದು ನನ್ನ ಸಂರಕ್ಷಣಮಾಡಿದನು. ಅಂದಿನಿಂದ ನಾನು ಹೀಗೆ ಗೋಸಾವಿಯಾಗಿದ್ದೇನೆ. ನನಗೆ ಇಷ್ಟೇ ವರ್ಷಗಳಾಗಿರುತ್ತವೆಂದು ಸಹ ನಂಬಿಕೆಯಿಂದ ನಾನು ಹೇಳಲಾರೆನು. ನನ್ನ ಪಾಲಕನಾದ ಗೋಸಾವಿಯು ತೀರಿಕೊಂಡಂದಿನಿಂದ ನಾನು ತೀರ್ಥಯಾತ್ರೆಗಳನ್ನು ಮಾಡುತ್ತ ಬೇಕಾದಲ್ಲಿ ಬೇಕಾದಷ್ಟು ದಿವಸ ಇರುತ್ತ ಸಂಚರಿಸಹತ್ತಿದ್ದೇನೆ. ನಾನು ಹೆಚ್ಚಿಗೆ ಏನು ಹೇಳಲಿ? ಮಹಾರಾಜರೇ, ನನ್ನಿಂದ ವಿಶೇಷ ಸಂಗತಿಯನ್ನು ತಿಳಕೊಳ್ಳ ಬೇಕೆಂದು ತಾವು ಕುಳಿತು ಕೊಂಡಿದ್ದರೆ, ವ್ಯರ್ಥವು. ನಿಷ್ಕಾರಣ ಬಡವನನ್ನು ಪ್ರತಿಬಂಧದಲ್ಲಿ ರಿಸಿರುತ್ತೀರಿ, ಅನ್ನಲು, ಕಿಲ್ಲೇದಾರನು ಚಮತ್ಕಾರದ ದೃಷ್ಟಿಯಿಂದ ಗೋಸಾವಿಯನ್ನು ನೋಡುತ್ತ—ಹೋ ಹೋ! ಗೋಸಾವಿಯವರೇ, ನನ್ನ ಮನಸ್ಸಿನಲ್ಲಿಯಾದರೂ ಹಾಗೆಯೇ ಇರುತ್ತದೆ. ನಿಮ್ಮನ್ನು ಬೇಗನೆ ಬಿಟ್ಟಷ್ಟು ನನಗೆ ಸಮಾಧಾನವು; ಆದರೆ ಮಾಡಲೇನು? ನನ್ನ ಕೈಯಲ್ಲಿ ಏನಿದೆ? ಸರ್ಜೀಖಾನನು ಇಲ್ಲಿರುವವರೆಗಾದರೂ ನಾನು ಪರಾಧೀನನೇ ಸರಿ, ಎಂದು ನಿಟ್ಟುಸುರುಬಿಟ್ಟನು.

ವೃದ್ಧ ಕಿಲ್ಲೇದಾರನಿಗೆ ಮೂವರು ಮಕ್ಕಳೂ, ಒಬ್ಬ ತಮ್ಮನೂ ಇದ್ದರು. ಅವರು ಸ್ವಚ್ಛಂದ ವೃತ್ತಿಯವರಾದದ್ದರಿಂದ; ಒಬ್ಬನಿಂದಲೂ ಆ ವೃದ್ಧನಿಗೆ ಸುಖವಿದ್ದಿಲ್ಲ. ಅವರಲ್ಲಿ ತಮ್ಮನು ಎಲ್ಲಿಯೋ ಹೋಗಿ ನಾಲ್ಕೈದು ವರ್ಷಗಳಾಗಿದ್ದವು. ಆ ತಮ್ಮನೇ ಗೋಸಾವಿಯಾಗಿರಬೇಕೆಂದು ಆ ವೃದ್ಧನು ತರ್ಕಿಸಿದ್ದನು. ಗೋಸಾವಿಯ ಇಂದಿನ ಸಂಭಾಷಣದಿಂದಲೂ, ದನಿಯಿಂದಲೂ, ಮುಖಮುದ್ರೆಯಲ್ಲಿ ಹಾಗು ನಡತೆಯಲ್ಲಿ ಆದ ಸ್ಥಿತ್ಯಂತರದಿಂದಲೂ ಆ ವೃದ್ಧ ಕಿಲ್ಲೇದಾರನ ತರ್ಕವು ಹೆಚ್ಚು ವಿಶ್ವಸನೀಯವಾಯಿತು. ಆತನು ಗೋಸಾವಿಯ ಬಳಿಯಲ್ಲಿ ಹೋಗಿ, ಆತನ ಕಿವಿಯೊಳಗೆ ತನಗೆ ಬಂದಿರುವ ಸಂಶಯವನ್ನು ಹೇಳಲು, ಗೋಸಾವಿಯು ಗಾಬರಿಯಾಗಿ- ಅಲ್ಲ-ಅಲ್ಲ, ನಾನು ಆತನಲ್ಲ; ನಿಮ್ಮ ತಿಳುವಳಿಕೆಯಲ್ಲಿ ತಪ್ಪಾಗಿರುತ್ತದೆ, ಎಂದು ನುಡಿಯುವಾಗ ತತ್ತರಿಸುವದನ್ನು ನೋಡಿದರೆ, ಗೋಸಾವಿಗೆ ತನ್ನ ಮಾತಿನಲ್ಲಿ ತನಗೇ ನಂಬಿಗೆಯಿದ್ದಂತೆ ತೋರಲಿಲ್ಲ. ಇದನ್ನು ನೋಡಿ ಕಿಲ್ಲೇದಾರನು ಹೆಚ್ಚಿಗೆ ಮಾತಾಡದೆ, ಅಲ್ಲಿಂದ ಎದ್ದು ಹೋಗುವಾಗ ಕಾವಲುಗಾರರನ್ನು ಕರೆದು, ಜಾಗ್ರತೆಯಿಂದ

ಕಾದಿರಲು ಅಪ್ಪಣೆಮಾಡಿದನು. ಮುಂದೆ ಸಂಜೆಯವರೆಗೆ ಯಾರೂ ಗೋಸಾವಿಯ ಬಳಿಗೆ ಬರಲಿಲ್ಲ. ಒಂದು ತಾಸು ರಾತ್ರಿಯ ಸುಮಾರಕ್ಕೆ ಕಾವಲುಗಾರರ ನಾಯಕನು ಗೋಸಾವಿಯ ಬಳಿಗೆ ಬಂದು–ಗೋಸಾವಿಯವರೇ, ನಿಮ್ಮ ಪರಿಣಾಮವು ನೆಟ್ಟಗೆ ಕಾಣುವದಿಲ್ಲ. ನಿಮಗೆ ದೊಡ್ಡ ಸಂಕಟ ಒದಗುವದು ನಿಶ್ಚಯವು, ಜಾಗರೂಕರಾಗಿರಿ. ಬೇಗನೆ ಬಿಡುಗಡೆ ಹೊಂದುವದಿದ್ದರೆ, ಇದ್ದವೆರಡು ಇಲ್ಲದವೆರಡು ಮಾತುಗಳನ್ನು ಹೇಳಿ ಬಿಡುಗಡೆಹೊಂದಿರಿ; ಎಂಬೀ ಅರ್ಥದ ಉಪದೇಶವನ್ನು ಮಾಡಿದನು. ಅದಕೆ ಗೋಸಾವಿಯು ನಕ್ಕು–ನೋಡೋಣ–ನೋಡೋಣ; ನೀನು ನಿನ್ನ ಕೆಲಸವನ್ನು ಮಾಡು, ಅನ್ನಲು, ಪಾಪ! ಆ ನಾಯಕನು ಬಾಗಿಲು ಇಕ್ಕಿಕೊಂಡು ಕಾಯುತ್ತ ಕುಳಿತುಕೊಂಡನು. ಇತ್ತ ಗೋಸಾವಿಯೂ ಹಾಗೂ ಹೀಗೂ ಕಾಲಕಳೆಯುತ್ತಿರಲು, ಮೂರುತಾಸು ರಾತ್ರಿಯಾಯಿತು ಸುಬೇದಾರನಾದ ಸರ್ಜೇಖಾನನು ಮದ್ಯಪಾನದಿಂದ ಪ್ರಮತ್ತನಾಗಿ ಗುಡುಗುಡಿಯನ್ನು ಸೇದುತ್ತಿರುವಾಗ, ಒಮ್ಮೆಲೆ ಗೋಸಾವಿಯನ್ನು ಹಿಡತರಲು ಅಪ್ಪಣೆಮಾಡಿದನು. ಅಪ್ಪಣೆಯಾಗುವ ದೊಂದೇ ತಡ, ಖಾನನ ಜನರು ಬಡಬಡ ಹೋಗಿ ಗೋಸಾವಿಯನ್ನು ಎಳತಂದು ಖಾವಿಂದರಮುಂದ ನಿಲ್ಲಿಸಿದರು. ಖಾವಿಂದರ ಮದ್ಯದ ತಾನು ಏರಿದ್ದರಿಂದ ಅವರು ಗೋಸಾವಿಯನ್ನು ನೋಡಿದ ಕೂಡಲೆ ಅಚ್ಚ ಊರ್ದೂಭಾಷೆಯಿಂದ–ಈ ಠಕ್ಕನು ಒಳ್ಳೆಯ ಮಾತಿನಿಂದ ಹೇಳುವದಿಲ್ಲ. ಇವನನ್ನ ಮೊಚ್ಚೆಯಿಂದ ಹೊಡೆಯಿರಿ, ಈಗಲೇ ಕಾಲುಗಳಲ್ಲಿ ಮಣಮಣದ ಬೇಡಿಗಳನ್ನು ಹಾಕಿ ಕತ್ತಲಕೋಣೆಯಲ್ಲಿ ಕೆಡವಿರಿ, ಎಂದು ಮೊದಲು ಅಪ್ಪಣೆ ಮಾಡಿ, ಆಮೇಲೆ ಗೋಸಾವಿಯನ್ನು ಕುರಿತು–ಏನೆಲೇ ಏ ಸಗಣೆಗಳ್ಳಾ, ನಿನ್ನ ಆ ಗುಡಿಯಲ್ಲಿ ಯಾರು ಯಾರು ನೆರೆಯುತ್ತಾರೆ ಹೇಳುವದಿಲ್ಲವೆ? ಅಲ್ಲಿ ನೀವೆಲ್ಲ ತುಂಟರು ಕೂಡಿ ಏನು ಮಾಡುತ್ತೀರಿ? ಸುಲಿದು ತಂದ ದ್ರವ್ಯವನ್ನು ಅಲ್ಲಿಯೇ ಹಂಚಿಕೊಳ್ಳುವಿರಲ್ಲವೆ? ಮಾತಾಡುವಿಯೋ ಇಲ್ಲವೊ, ಎಂದು ಖಾನನು ಬಾಯಿಗೆ ಬಂದಹಾಗೆ ಪ್ರಶ್ನೆಗಳನ್ನು ಕೇಳಹತ್ತಿದನು. ಆಗ ಗೋಸಾವಿಯು ಒಂದು ತುಟಿಯನ್ನು ಎರಡುಮಾಡದೆ, ಖಾನನು ಆಡುವದನ್ನೆಲ್ಲ ಕೇಳುತ್ತ ಸುಮ್ಮನೆ ನಿಂತುಕೊಂಡಿದ್ದನು. ಅತ್ತ ಸುಬೇದಾರನ ಬಡಬಡಿಕೆಯು ಒಂದೇಸವನೇ ನಡೆದೇ ಇತ್ತು. ಆತನ ಸುತ್ತುಮುತ್ತು ನಿಂತವರಲ್ಲಿ ಯಾವನೂ ಆಗಿನ ಕಾಲದಲ್ಲಿ ಬೈಸಿಕೊಳ್ಳದೆ ಉಳಿಯಲಿಲ್ಲ. ತಾನು ಇಷ್ಟು ಬೈದರೂ ಒಬ್ಬನೂ ತನ್ನ ಸಂಗಡ ಗುದ್ದಾಡಲಿಕ್ಕೆ ಬರಲೊಲ್ಲನೆಂಬ ಸಿಟ್ಟಿನಿಂದಲೋ ಏನೋ ಅನ್ನುವಂತೆ, ಖಾನನು ಮತ್ತಿಷ್ಟು ಬಾಯಿ ಹರಬಿಟ್ಟನು. ಆತನು ತನ್ನವರನ್ನು ಕುರಿತು ನಡೆಯಿರಿ ನಡೆಯಿರಿ, ಈ ನೀಚನನ್ನು ಎಳಕೊಂಡು ನಡೆಯಿರಿ. ಈ ಕಳ್ಳನು ಮಾತಾಡುವದಿಲ್ಲ. ಇವನನ್ನು ಈಗಲೇ ಕತ್ತಲಕೋಣೆಯಲ್ಲಿ ಹಾಕಿರಿ, ಕಾಲಲ್ಲಿ ಬೇಡಿಗಳನ್ನು ಹಾಕಿ ದುರ್ಗದ ಹಿಮ್ಮಗ್ಗಲಿನಿಂದ ಕೆಳಗೆ ದೂಡಿಬಿಡಿರಿ. ಇಲ್ಲದಿದ್ದರೆ ಹೀಗೆಯೇ ಒಯ್ದು ಹುಗಿದು ಬಿಡಿರಿ. ಬಂಡುಗಾರರ, ಹಾಗು ದರೋಡೆಖೋರರ ಹಿಂಡಿಗೆ ಹಿಂಡು ಗುಡಿಗೆ ಬರುತ್ತಿರಲು, ಈ ಕಳ್ಳನು ನನಗೆ ಏನೂ ಗೊತ್ತಿಲ್ಲವೆಂದು ಹೇಳುತ್ತಾನೆ! ಯಾಕೆ? ಎಲ್ಲರೂ ಸುಮ್ಮನೆ ನಿಂತಿರಿ? ಯಾವನೂ ಮುಂದಕ್ಕೆ ಬರುವದಿಲ್ಲವೆ? ಎಂದು ಕ್ರೋಧದಿಂದ

ತಾನೇ ಎದ್ದು ಗೋಸಾವಿಯ ಮೈಮೇಲೆ ದುಮುಕಹೋಗಲು, ಗೋಸಾವಿಯು ಸಂತಾಪದಿಂದ ಉರಿಯುತ್ತ ತಾನು ಎಲ್ಲಿ ಇದ್ದೇನೆ, ಏನು ಮಾಡುತ್ತೇನೆ ಎಂಬುದರ ಅರಿವು ಇಲ್ಲದೆ, ಒಮ್ಮೆಲೆ ಗದ್ದರಿಸಿ ಖಾನನಿಗೆ– ಖಬರದಾರ! ಖಬರದಾರ! ನನ್ನನ್ನು ಮುಟ್ಟಿದರೆ ಸತ್ತೆಯೆಂದು ತಿಳಿ. ಜೀವವು ಹೋದರೂ ಚಿಂತೆಯಿಲ್ಲ ಮುಸಲ್ಮಾನರಿಂದ ನಾನು ಎಂದೂ ಅಪಮಾನ ಮಾಡಿಸಿಕೊಳ್ಳಲಾರೆನು. ನಿನ್ನ ಕೈಯಿಂದ ಸಾಯುವದಂತು ಇರಲಿ, ನಿನ್ನನ್ನು ಮುಟ್ಟ ಗೊಡಲಿಕ್ಕಿಲ್ಲ ಎಂದು ಉದ್ಧಟತನದಿಂದ ನುಡಿದು ಆವೇಶದಿಂದ ಮುಂದುವರಿಯಲು, ಆತನ ಕ್ರೂರಮುದ್ರೆಯನ್ನೂ, ಸಂತಾಪವನ್ನೂ ನೋಡಿ ಖಾನನು ಬೆದರಿ ಹಿಂದಕ್ಕೆ ಸರಿದನು. ಗೋಸಾವಿಯು ಮಹಾಧೈರ್ಯಶಾಲಿಯೆಂಬದನ್ನು, ಹಿಂದಕ್ಕೆ ಮಾರ್ಗದಲ್ಲಿ ಒಬ್ಬ ಮುಸಲ್ಮಾನನು ಹೆಂಗಸಿನ ಕೊಡ ಒಡೆದ ಪ್ರಸಂಗದಲ್ಲಿಯೇ ಖಾನನು ಮನಗಂಡಿದ್ದನು. ಹೇಗೇ ಇರಲಿ, ಈಗ ಗೋಸಾವಿಯ ಅರ್ಭಟಕ್ಕೆ ಬೆದರಿ ಹಿಂದಕ್ಕೆ ಸರಿದಿದ್ದ ಖಾನನ ಬಾಯಿಂದ–ಈ ಉದ್ಧಟತನವನ್ನು ಈಗಲೇ ತುಂಡರಿಸಿ ಚಲ್ಲುತ್ತಿದ್ದೆನು; ಆದರೆ ಇವನನ್ನು ಪರಿಪರಿಯಾಗಿ ಪೀಡಿಸುತ್ತ ಹಲವು ಸಂಗತಿಗಳನ್ನು ಬೈಲಿಗೆಳೆಯಬೇಕಾಗಿರುವದರಿಂದ ಕೈಕಾದಿದ್ದೇನೆ. ಈತನ ಕಾಲಲ್ಲಿ ಬಹು ಭಾರವಾದ ಬೇಡಿಗಳನ್ನು ಹಾಕಿ, ಈಗಲೇ ಆ ಕತ್ತಲೆಯ ನೆಲಮನೆಯಲ್ಲಿ ಒಯ್ದು ಹಾಕಿರಿ, ಎಂಬ ಅಪ್ಪಣೆಯು ಹೊರಬಿದ್ದಿತು. ಕೂಡಲೆ ಸೇವಕರು ಗೋಸಾವಿಯನ್ನು ಎಳೆದೊಯ್ದು ನೆಲಮನೆಯಲ್ಲಿರಿಸಿದರು. ಖಾನನು ಅದನ್ನು ಕಣ್ಮುಟ್ಟಿ ನೋಡಿ, ಮುಸಲ್ಮಾನರನ್ನೇ ಕಾವಲಿಗಿಟ್ಟು ಹೊರಟುಹೋದನು. ಮರುದಿವಸ ದುರಗ ಮುರಗಿಯು ಪುರಂದರ ದುರ್ಗದ ಮೇಲೆ ಬಂದು, ಮುನ್ನಿನ ದಿನದಂತೆ ಗೋಸಾವಿಯನ್ನು ಕಾಣಲು ಹವಣಿಸಿದನು; ಆದರೆ ಗೋಸಾವಿಯ ಸ್ಥಳಾಂತರವಾದದ್ದರಿಂದ ಆತನು ಕಣ್ಣಿಗೆ ಬೀಳಲಿಲ್ಲ, ಅದರಿಂದ ದುರಗ ಮುರಗಿಯು ವ್ಯಸನಪಟ್ಟು, ಚಾತುರ್ಯದಿಂದ ಗೋಸಾವಿಯು ಇರುವ ಸ್ಥಳವನ್ನು ಕೇಳಿಕೊಂಡು, ಬಹು ಅಸಮಾಧಾನದೊಡನೆ ದುರ್ಗವನ್ನಿಳಿದು ಹೊರಟುಹೋದನು.

## ಆಲೋಚನೆ

ಗೋಸಾವಿಯು ಗುಹೆಯಲ್ಲಿ ಶಿವಾಜಿಯನ್ನೂ, ಆತನ ಇಬ್ಬರು ಗೆಳೆಯರನ್ನೂ, ನಾನಾಸಾಹೇಬನನ್ನೂ ಬಿಟ್ಟು, ಮೇಲೆ ಮಾರುತಿಯ ಗುಡಿಯಲ್ಲಿ ಬಂದದ್ದನ್ನೂ ಮುಂದೆ ಸರ್ಜೇಖಾನನೂ ಶಿವದೇವರಾಯನನ್ನು ಲಕ್ಷಿಸದೆ ಗೋಸಾವಿಯನ್ನು ಸೆರೆಹಿಡಿದದ್ದನ್ನೂ ವಾಚಕರು ಬಲ್ಲರಷ್ಟೆ? ಆಮೇಲೆ ಖಾನನು ಗೋಸಾವಿಯ ಕಾಲುಗಳಲ್ಲಿ ಭಾರವಾದ ಬೇಡಿಗಳನ್ನು ಹಾಕಿ ಅವನನ್ನು ಪುರಂದರಗಡದ ನೆಲಮನೆಯಲ್ಲಿ ಇರಿಸಿದ್ದನ್ನಾದರೂ ವಾಚಕರು ಹಿಂದಿನ ಪ್ರಕರಣದಲ್ಲಿ ಅರಿತಿರುವರು. ಶ್ರೀಧರಸ್ವಾಮಿಯು ಗುಡಿಯೊಳಗೆ ಬಂದು ಶಿವದೇವರಾಯನ, ಹಾಗು ಸರ್ಜೇಖಾನನ ಸಂಗಡ ಗುದುಮುರಿಗೆ ಹಾಕುತ್ತಿರುವಾಗ,

ಗುಹೆಯೊಳಗಿನ ಆ ನಾಲ್ವರು ಮಾತಾಡುತ್ತ ಕುಳಿತಿದ್ದರು. ಶ್ರೀಧರಸ್ವಾಮಿಯನ್ನು ವೈರಿಗಳು ಸೆರೆಹಿಡಿದು ಒಯ್ಯಾರೆಂಬದು ಅವರ ಕನಸುಮನಸುಗಳಲ್ಲಿಯೂ ಬಂದಿದ್ದಿಲ್ಲ; ಆದರೆ ಬಹಳ ಹೊತ್ತಾದರೂ ಸ್ವಾಮಿಗಳು ಬಾರದ್ದರಿಂದ ಅವರು ಚಿಂತೆಗೊಳಗಾದರು. ಸ್ವಾಮಿಗಳ ಜೀವಕ್ಕೆ ಅಪಾಯವೆಲ್ಲಿ ಒದಗುವದೋ ಎಂದು ಅವರು ಚಡಪಡಿಸಹತ್ತಿದರು. ಏಸಾಜಿಯು ಮೂರು ಸಾರೆ ಆ ಮೇಲಿನ ದ್ವಾರದವರೆಗೆ ಬಂದು ಕಿವಿಗೊಟ್ಟು ಕೇಳಿ ಹೋದನು. ಆತನಿಗೆ ಇನ್ನೂ ಏನೋ ಗದ್ದಲ ನಡೆದಿದೆಯೆಂಬದಿಷ್ಟರ ಹೊರತು ಬೇರೆಯೇನೂ ಗೊತ್ತಾಗಲಿಲ್ಲ. ನಾಲ್ಕನೆಯ ಸಾರೆ ತಾನಾಜಿಯು ಬಂದು ಕಿವಿಗೊಟ್ಟು ಕೇಳಿ ದಾಗ, ''ಹುಶ್ ಹುಶ್'' ಎಂಬ ಸಪ್ಪಳವು ಕೇಳಿಸಿತು ತಾನಾಜಿಯು ಆಶ್ಚರ್ಯಪಟ್ಟು ಸಪ್ಪಳವನ್ನು ಕಿವಿಗೊಟ್ಟು ಕೇಳುತ್ತ ಅತ್ತಿತ್ತ ನೋಡುತ್ತಿರಲು, ಮಾರುತಿಯ ಬುಡದಲ್ಲಿದ್ದ ಖಿಂಡಿಯ ಬಿರುಕಿನೊಳಗಿಂದ ಒಂದು ಕಠಾರಿಯ ತುದಿಯು ಹಾದಿದ್ದು, ಅದರ ತುದಿಗೆ ಒಂದು ಹೂವು ಚುಚ್ಚಿತ್ತು, ತಾನಾಜಿಯು ಆ ಸಂಕೇತವನ್ನು ಅರಿತು ಗಾಬರಿಯಾಗಿ ಆ ಗುರುತಿನ ಪ್ರಸಕ್ತಿಯನ್ನು ಕೂಡಲೆ ಎಲ್ಲರಿಗೂ ತಿಳಿಸಿದನು. ದಿನದ ಸರಳಮಾರ್ಗದಿಂದ ಹೋಗುವದರಿಂದ ಅಪಾಯ ಒದಗುವ ಸಂಭವವಿರುತ್ತದಾದ್ದರಿಂದ, ಗುಪ್ತಮಾರ್ಗದಿಂದ ಹೋಗಬೇಕೆಂದು ಆ ಸಂಕೇತದಿಂದ ಗೊತ್ತಾಗುತ್ತಿತ್ತು, ಕಠಾರಿಯ ತುದಿಯಲ್ಲಿ ಹೂವು ಚುಚ್ಚಿ ತೋರಿಸಿದರೆ, ಹೀಗೆಯೇ ಅರ್ಥಮಾಡಬೇಕೆಂಬುದು ಮೊದಲೇ ಗೊತ್ತಾಗಿಹೋಗಿತ್ತು, ಸಂಕೇತದಂತೆ ನಡೆಯಬೇಕೆಂದು ಈಗ ಅವರು ನಿಶ್ಚಯಿಸಿದರು. ಗುಡಿಯೊಳಗಿನ ಗದ್ದಲವು ಇಲ್ಲದಂತಾದದ್ದನ್ನು ಮನಗಂಡು, ತಾನಾಜಿಯು ಅಂಜುತ್ತಂಜುತ್ತ ಖಿಂಡಿಯಿಂದ ಮೇಲಕ್ಕೆ ಹತ್ತಿ ಗುಡಿಯೊಳಗೆ ಬಂದು, ಮುಸಲ್ಮಾನರು ಸ್ವಾಮಿಗಳನ್ನು ಸೆರೆಹಿಡಕೊಂಡು ಹೋದದ್ದನ್ನು ಮನಗಂಡು, ಮತ್ತೆ ಗುಡಿಯಲ್ಲಿಳಿದು ಆ ಸುದ್ದಿಯನ್ನು ಎಲ್ಲರಿಗೂ ಹೇಳಿದನು. ಬಳಿಕ ಮುಂದೆ ಏನು ಮಾಡ ಬೇಕೆಂಬದನ್ನು ಎಲ್ಲರೂ ಆಲೋಚಿಸಿ ಗೊತ್ತುಮಾಡಿಕೊಂಡು, ಗುಹೆಯೊಳಗಿನ ಗುಪ್ತಮಾರ್ಗ ದಿಂದ ಹೊರಟರು. ಗವಿಯಲ್ಲಿಯೇ ಅವರು ಒಂದೂವರೆ ಹರದಾರಿಯನ್ನು ಗೊರವಿಯ ಕಟ್ಟಿಗೆಯ ಬೆಳಕಿನ ಸಹಾಯದಿಂದ ನಡೆದು, ಒಂದು ನಟ್ಟಡವಿಯೊಳಗಿನ ಎರಡು ದಿನ್ನೆಗಳ ನಡುವೆ ಗುಡ್ಡದ ಓರೆಯಲ್ಲಿದ್ದ ಒಂದು ಸಣ್ಣ ಬಾಗಿಲ ಬಳಿಗೆ ಬಂದರು. ಮೊದಲು ಏಸಾಜಿಯು ಹೊರಗೆ ಬಂದನು. ಶಿವಾಜಿಯೇ ಮೊದಲಾಗಿ ಉಳಿದ ಮೂವರು ಗವಿಯೊಳಗೇ ಕುಳಿತುಕೊಂಡರು. ಆ ಗವಿಯ ಮುಖದ ನೆರೆಯಲ್ಲಿ ಎರಡು ಗುಡಿಸಲುಗಳು ಇದ್ದವು. ಸುತ್ತ ನಾಲ್ಕಾರು ಹರದಾರಿಯಂತು ಮನುಷ್ಯರ ಸಂಚಾರವಿದ್ದಿಲ್ಲ. ಏಸಾಜಿಯು ಹೊರಗೆ ಬಂದಾಗ ಇನ್ನೂ ರಾತ್ರಿಯಿತ್ತು, ಎರಡೂ ಗುಡಿಸಲುಗಳ ಬಾಗಿಲುಗಳು ಇಕ್ಕಿದ್ದವು. ಒಂದು ಗುಡಿಸಿಲೊಳಗೆ ಮನುಷ್ಯರ ಗೊರಿಕೆಯ ಸಪ್ಪಳವು ಕೇಳಿಸುತ್ತಿತ್ತು, ಇನ್ನೊಂದು ಗುಡಿಸಿಲಲ್ಲಿ ಯಾರೂ ಇದ್ದಂತೆ ತೋರಲಿಲ್ಲ. ಏಸಾಜಿಯು ಗವಿಯ ಮುಖದಲ್ಲಿರುವಾಗಲೇ ಮೆಲ್ಲಗೆ—''ಜಿವಬಾ, ಜಿವಬಾ'' ಎಂದು ಕೂಗಿದನು ಆದರೆ ಯಾರೂ ಓ ಅನ್ನಲಿಲ್ಲ, ಅವನೆಡೆಗೆ ಯಾರೂ ಬರಲಿಲ್ಲ, ಆಗ ಅವನು ಗಟ್ಟಿಯಾಗಿ—ಜೀವ್ಯಾ, ಜೀವ್ಯಾ, ಎಲೇ

ಜೀವ್ಯಾ, ಎಂದು ಕೂಗಿದನು. ಆದರೆ ಆದರಿಂದ ಪ್ರಯೋಜನವಾಗಲಿಲ್ಲ, ಆಗ ವಿಸಾಜಿಯು ಹೊರಗೆ ಬಂದು, ಒಳಗಿನವರಿಗೆ ಹೇಳಿ ಗೊರವಿಯ ಕಟ್ಟಿಗೆಯನ್ನು ನಂದಿಸಿ ಗೊರಿಕೆಯು ಕೇಳಿಬರುತ್ತಿರುವ ಗುಡಿಸಿಲಿಗೆ ಹೋಗಿ ಬಾಗಿಲ ಬಡಿದು— ಎಲೇ ಜೀವ್ಯಾ, ಜೀವ್ಯಾ, ಛೀನಿನ! ಸತ್ತೆಯೋ ಏನು? ಹೀಗೆಯೇ ಕಾಯುತ್ತೀಯಾ? ಎಂದು ಕೂಗಲು, ಜೀವ್ಯಾನ ಗೊರಿಕೆಯು ನಿಂತು, ಆತನು ಅಡಬಡಿಸಿ ಎದ್ದು ತತ್ತರಿಸುತ್ತ ಬಾಗಿಲಿಗೆ ಬಂದು ಕೂಡಲೆ— ''ಯಾರವರು ? ಯಾರವರು? ವಿಸಾಜೀ? ಎಲ ಎಲ! ಏನು ಸುಡುಗಾಡ ನಿದ್ದೆಯಿದು!'' ಎಂದು ಬಾಗಿಲು ತೆರೆದು ಲಂಗೋಟಿಯನ್ನು ಸರಿಮಾಡಿಕೊಳ್ಳುತ್ತ ಶರೀರದ ಬೇರೆ ಬೇರೆ ಅವಯವಗಳನ್ನು ಒಂದರ ಹಿಂದೊಂದರಂತೆ ಕರಬರ ಕೆರಕೊಳ್ಳುತ—''ಥೂ! ಈವೊತ್ತು ಒಳ್ಳೇ ನಿದ್ದೆ ಹತ್ತಿತು!'' ಎಂದು ಪಶ್ಚಾತ್ತಾಪಪಡುತ್ತ ಆ ಅಚ್ಚ ಕಪ್ಪು ಬಣ್ಣದ ಮನುಷ್ಯನು ವಿಸಾಜಿಯ ಎದುರಿಗೆ ನಿಂತುಕೊಂಡನು. ಆಗ ವಿಸಾಜಿಯು–ಜೀವ್ಯಾ, ನಿನಗೆ ಎಷ್ಟು ಸಾರೆ ಹೇಳಿದರೂ ನಿನ್ನ ಕೆಟ್ಟ ಚಾಳಿಯು ಹೋಗುವದಿಲ್ಲ, ಅಲ್ಲೋ, ನಿಮಗೆ ಇಲ್ಲಿ ಎರಡು ಗುಡಿಸಲುಗಳನ್ನು ಕಟ್ಟಿಕೊಟ್ಟು ಇರಹೇಳಿದ್ದು ಇದಕ್ಕೇ ಏನು? ಥೂ ಮಕ್ಕಳಿರಾ, ಇದೇ ಏನು ನಿಮ್ಮ ಪ್ರಾಮಾಣಿಕತನವು?

ಪ್ರಾಮಾಣಿಕತನವೆಂಬ ಶಬ್ದವು ಕಿವಿಗೆ ಬಿದ್ದ ಕೂಡಲೆ ಜೀವ್ಯಾನ ಪ್ರಾಣವು ಹೋದಂತಾಯಿತು. ಅವನು ನಾಚಿಕೆಯಿಂದ ತಲೆಬಾಗಿಸಿ—ಹೌದು, ತಪ್ಪಾಯಿತು ನನ್ನ ಒಡೆಯಾ! ಎಂದು ನುಡಿದನು. ಆಗ ವಿಸಾಜಿಯು—ಇರಲಿ, ಏನೂ ಚಿಂತೆಯಿಲ್ಲ; ಆದರೆ ಇನ್ನಾದರೂ ಎಚ್ಚರದಿಂದ ಇರು. ಹೋಗು, ಅಲ್ಲಿಂದ ಬೇಗನೆ ಕುದುರೆಗಳನ್ನು ತಂದು ನಿಲ್ಲಿಸು; ಇಂದು ನಾಲ್ಕು ಕುದುರೆಗಳು ಬೇಕಾಗಿವೆ. ಆ ಯಮುನ್ಯಾ ಎಲ್ಲಿ ಹೋದ ಯಮುನ್ಯಾ? ಎಂದು ಕೇಳಲು, ಜೀವ್ಯಾನು–ಯಪ್ಪಾ, ಈಗ ಬರುತ್ತೇನೆಂದು ಮಕಮಕ ಮೂರೂ ಸಂಜೆಯ ಮುಂದೆ ಹೋದವನು ಇನ್ನೂ ಬಂದಿಲ್ಲ, ಎಲ್ಲಿ ತಮಾಷೆ ಮಾಡುತ್ತ ನಿಂತನೋ ಏನೋ, ಎಂದು ಉತ್ತರಕೊಟ್ಟನು. ವಿಸಾಜಿಯು ತಿರುಗಿ ಯಾವ ಮಾತನ್ನೂ ಆಡಲಿಲ್ಲ, ಜೀವ್ಯಾನು ಮತ್ತೆ ಲಂಗೋಟಿಯನ್ನು ಸರಿಮಾಡಿಕೊಂಡು ಗುಡಿಸಲಿನಿಂದ ಹೊರಬಿದ್ದವನು ಒಮ್ಮಿಂದೊಮ್ಮೆ ಮಾಯವಾದನು. ವಿಸಾಜಿಯು ಗುಹೆಯ ಬಾಗಿಲಿಗೆ ಹೋಗಲು, ಒಳಗಿನವರು ಹೊರಗೆ ಬಂದರು. ಅವರನ್ನು ಕುರಿತು ವಿಸಾಜಿಯು–ಇಲ್ಲಿ ನಾವು ಬಹಳ ಹೊತ್ತು ಇರುವದು ನೆಟ್ಟಗಲ್ಲ, ಜೀವ್ಯಾನು ಈಗ ಕುದುರೆಗಳನ್ನು ತರುತ್ತಾನೆ. ನೀವು ಗುಡ್ಡವನ್ನು ಏರಹತ್ತಬೇಕು. ನೀವು ಮೂವರು ಮೂರು ಕುದುರೆಗಳನ್ನು ಹತ್ತಿಕೊಂಡು ಹೋಗಿರಿ. ಜೀವ್ಯಾನು ನನ್ನ ಕುದುರೆಯನ್ನು ನಿಲ್ಲಿಸಿಕೊಂಡು ನಾನು ಬರುವತನಕ ಅಲ್ಲಿಯೇ ಇರಲಿ. ಈಗ ಯಮುನ್ಯಾನು ಬಂದ ಬಳಿಕ ಮುಂದಿನ ಕೆಲಸದ ಆಲೋಚನೆ ಮಾಡಿ ಹೇಳಿಬರುವೆನು. ಆ ಕೆಲಸದ ಚಿಂತೆಬಿಡಿರಿ, ಶ್ರೀಧರಸ್ವಾಮಿಯ ಕೂದಲು ಕೊಂಕಿದರೆ ನನ್ನನ್ನು ಕೇಳಿರಿ. ಇನ್ನು ಬಿಟ್ಟದ್ದು ಬಿಟ್ಟು ನಾವು ಯಾವದೊಂದು ದುರ್ಗವನ್ನು ಕೈಸೇರಿಸಿಕೊಂಡು ಸುರಕ್ಷಿತವಾಗಲಿಕ್ಕೆ ಬೇಕು. ಇನ್ನು ಮೇಲೆ ಗುಡಿಯಲ್ಲಿರುವದು ಘಾತವೇ ಸರಿ. ಒಬ್ಬ ಗಟ್ಟಿಗನಾದ ಸರದಾರನ ಕಿವಿಗೆ

ಬಿದ್ದರೆ, ನಾವು ಪಾರಾಗುವದು ಕಠಿಣವಾದೀತು. ಗುಹೆಯ ಈ ಬಾಯನ್ನು ಮುಚ್ಚಿ ಎರಡನೆಯ ಕಡೆಗೆ ಬಾಯಿಮಾಡಬಹುದು; ಆದರೆ ಗುಡಿಯೊಳಗಿನ ಬಾಯನ್ನು ಹೇಗೆ ಬದಲುಮಾಡಲಿಕ್ಕೆ ಬಂದೀತು? ಶ್ರೀಧರಸ್ವಾಮಿಗಳನ್ನು ದುಷ್ಟ ಯವನರು ಸೆರೆಹಿಡಿದು ಒಯ್ಯದಿದ್ದರೆ, ಯಾವ ದುರ್ಗವನ್ನು ಕೈವಶಮಾಡಿಕೊಳ್ಳಬೇಕೆಂಬದು ಗೊತ್ತಾಗಿ ಹೋಗುತ್ತಿತ್ತು. ಶ್ರೀಭವಾನಿಯ ಕೃಪೆಯಿಂದ ಸಂಪಾದಿಸಿರುವ ದ್ರವ್ಯವನ್ನೂ ಶಸ್ತ್ರಗಳನ್ನೂ ಸುರಕ್ಷಿತವಾಗಿ ಕಾದುಕೊಳ್ಳಲಿಕ್ಕೆ ದುರ್ಗವಿಲ್ಲದಿದ್ದರೆ ಇನ್ನು ನಡೆಯಲಾರದು, ಎನ್ನಲು ಶಿವಾಜಿಯು ''ಮೌನವು ಅರ್ಧ ಸಮ್ಮತಿಯೆಂ''ಬಂತೆ ಯಾವ ಮಾತನ್ನೂ ಆಡದೆ ತಾನಾಜಿಯನ್ನೂ, ನಾನಾಸಾಹೇಬನನ್ನೂ ಕೂಡಿಕೊಂಡು ಗುಡ್ಡವನ್ನು ಏರಹತ್ತಿದನು

ಇತ್ತ ಕುದುರೆಗಳನ್ನು ತರಲಿಕ್ಕೆ ಹೊರಟ ಜೀವ್ಯಾನು, ಬಿದ್ದೇನು–ಎದ್ದೇನು ಎಂಬ ಭಯವಿಲ್ಲದೆ ಕಡಿದಾದ ಗುಡ್ಡವನ್ನು ಸರಸರ ಏರಹತ್ತಿದನು. ಎಂದೂ ತಪ್ಪು ಮಾಡದ ತಾನು ಇಂದು ಏಸಾಜಿಯ ಮುಂದೆ ನಿದ್ದೆ ಹತ್ತಿ ಮಲಗಿ ಇಮಾನಿತನಕ್ಕೆ ಭಂಗುತಂದುಕೊಂಡೆನೆಂದು ಮಿಡುಕುತ್ತ, ಚನ್ನಾಗಿ ಸೇವೆಮಾಡಿ ಈ ಕಲಂಕವನ್ನು ತೊಳಕೊಳ್ಳಬೇಕೆಂಬ ಉತ್ಸುಕತೆಯಿಂದ ಆತನು ಅತಿವೇಗದಿಂದ ಸಾಗಿದ್ದನು. ಜೀವ್ಯಾನು ಸಾಧಾರಣ ಕೂಲಿಕಾರನೆ; ಆದರೆ ಆತನ ದಿಟ್ಟತನವನ್ನೂ ಪ್ರಾಮಾಣಿಕತನವನ್ನೂ ನೋಡಿ, ಏಸಾಜಿಯು ಆತನನ್ನು ತಳಕೊಂಕಣದಿಂದ ಕರಕೊಂಡು ಬಂದಿದ್ದನು. ಯಮನ್ಯಾನು ಜೀವ್ಯಾನ ಕಕ್ಕನಮಗನು. ಅವನಾದರೂ ಒಳ್ಳೇ ದಿಟ್ಟನೂ ಕಷ್ಟತಾಳಿಕೊಳ್ಳುವವನೂ, ಸೋಗುಹಾಕುವಲ್ಲಿ ಕುಶಲನೂ ಇದ್ದನು. ಈ ಗುಣಗಳಿಗೆ ಮೆಚ್ಚಿ ಏಸಾಜಿಯೇ ಜೀವ್ಯಾನ ಸಂಗಡ ಇವನನ್ನೂ ಕರಕೊಂಡು ಬಂದಿದ್ದನು. ಸ್ವಲ್ಪ ದಿನಗಳ ಹಿಂದೆ ಶಿವಾಜಿಯು ಕೊಂಕಣಕ್ಕೆ ಸಾಗಿ ಹೋದಾಗ, ಇವರಿಬ್ಬರ ಗುಣಗಳು ಆತನ ಕಣ್ಣಿಗೆ ಬಿದ್ದಿದ್ದರಿಂದ, ಸಂಗ್ರಹಕ್ಕೆ ಯೋಗ್ಯ ಮನುಷ್ಯರೆಂದು ಗೊತ್ತಾಗಿ ಅವರಿಬ್ಬರಿಗೆ ಎರಡು ಗುಡಿಸಲ ಕಟ್ಟಿ ಕೊಟ್ಟು, ಮೇಲೆ ಹೇಳಿದ ಆ ಗುಹೆಯ ಮುಖದಲ್ಲಿ ಅವರನ್ನು ಆತನು ಇಟ್ಟಿದ್ದನು. ಗುಹೆಯ ಮುಖವನ್ನು ಕಾಯುವದು ಜೀವ್ಯಾನ ಕೆಲಸವು; ನೆರೆಯ ದುರ್ಗದಲ್ಲಿ ಕಟ್ಟಿಗೆ ಹೊರೆ ಮೊದಲಾದವನ್ನು ಮಾರುವ ನೆವದಿಂದಾಗಲಿ, ದುರಗಮುರಗಿ, ಬುಡಬುಡಿಕಿ, ಗೊಂದಲಿಗ ಮೊದಲಾದವರ ಸೋಗು ಹಾಕಿಕೊಂಡು ಭಿಕ್ಷೆ ಬೇಡುವ ನೆವದಿಂದಾಗಲಿ ತಿರುಗಾಡಿ, ಹೊಸ ಹೊಸ ಸುದ್ದಿಗಳನ್ನು ತಿಳಿಸುವದು ಯಮನ್ಯಾನ ಕೆಲಸವು. ಅವರಿಬ್ಬರು ತಮ್ಮ ತಮ್ಮ ಕೆಲಸಗಳನ್ನು ಅತ್ಯಂತ ನಿಷ್ಠೆಯಿಂದ ಮಾಡುತ್ತಿದ್ದರು. ಈಗ ಕುದುರೆ ತರುವದಕ್ಕಾಗಿ ಒತ್ತರದಿಂದ ಸಾಗಿದ್ದ ಜೀವ್ಯಾನು, ಗುಡ್ಡವನ್ನು ಹತ್ತಿ ಕೆಳಗೆ ಇಳಿಯಹತ್ತಿ ಗುಡ್ಡದ ಬುಡಕ್ಕೆ ಹೋಗಿ ಮೂರು ನಾಲ್ಕು ಸಾರೆ ಸಿಳ್ಳು ಹಾಕಿದನು. ಕೂಡಲೆ ಮತ್ತೊಬ್ಬ ಲಂಗೋಟಿಯ ಮನುಷ್ಯನು ಎದುರಿಗಿನ ಗುಹೆಯಂಥ ಮುಖದಿಂದ ಓಡುತ್ತೋಡುತ್ತ ಬಂದನು. ಆಗ ಜೀವ್ಯಾನು ಆತನ ಕಿವಿಗೆ ಬಾಯಿ ಆನಿಸಿ–ನಾಲ್ಕು ಕುದುರೆಗಳನ್ನು ಸಜ್ಜು ಮಾಡಿ ತಂದು ನಿಲ್ಲಿಸು. ಈಗ ಇಲ್ಲಿಗೆ ಮಂಡಲಿಯು ಬರುವದು. ಕೂತು ಪುಣೆಯ ಕಡೆಗೆ ಹೋಗುತ್ತಾರೆನ್ನುವ ಹಾಗೆ ತೋರುತ್ತದೆ, ಅನ್ನಲು, ಆ ಲಂಗೋಟಿಯುವನು ಒಂದು

ಕ್ಷಣವಾದರೂ ನಿಲ್ಲದೆ, ಇಲ್ಲದ ಪಂಚಾಯತಿಗೆ ಹೋಗದೆ, ತಾನು ಬಂದಗುಹೆಯಂಥ ಮಾರ್ಗವನ್ನು ಪ್ರವೇಶಿಸಿದನು. ಅಲ್ಲಿ ಕಗ್ಗತ್ತಲೆಯು ಮುಸುಕಿತ್ತು; ಆದರೆ ಸ್ವಲ್ಪ ಅಂತರವನ್ನು ಕ್ರಮಿಸಿದ ಕೂಡಲೆ ಅಲ್ಲಿ ನಾಲ್ಕಾರು ಮಾಡಗಳಲ್ಲಿ ಪಣತಿಗಳೊಳಗೆ ದೀಪಗಳು ಉರಿಯುತ್ತಿದ್ದವು. ಅಲ್ಲಿ ಕಟ್ಟಿ ಮೇಸಿದ ಅತ್ಯುತ್ತಮ ಕುದುರೆಗಳು ನಾಲ್ವತ್ತರಿಂದ ಐವತ್ತರವರೆಗೆ ಇದ್ದವು. ಆ ಲಂಗೋಟಿಯ ಮನುಷ್ಯನು ಒಳಗೆ ಹೋದ ಕೂಡಲೆ, ಆ ಎಲ್ಲ ಕುದುರೆಗಳು ಆತನನ್ನು ನೋಡತೊಡಗಿದವು. ಆತನು ನಾಲ್ಕು ಜನ ಮೋತದ್ದಾರರನ್ನು ಹೆಸರು ಗೊಂಡು ಕರೆದು, ಇಂಥ ಇಂಥ ಕುದುರೆಗಳಿಗೆ ಜೀನುಹಾಕಿರೆಂದು ಹೆಸರುಗೊಂಡು ಹೇಳಿ, ನಾಲ್ಕು ಕುದುರೆಗಳಿಗೆ ಜೀನು ಹಾಕಿಸಿ ಹೊರಗೆ ಹಿಡಿಸಿದನು. ಉಳಿದ ಕುದುರೆಗಳು ತಾವೂ ಹೊರಡ ಬೇಕೆಂದು ಈಸಹತ್ತಿದವು. ಮೋತದ್ದಾರರು ಕುದುರೆಗಳನ್ನು ತಕ್ಕೊಂಡು ಜೀವ್ಯಾನು ಹೇಳಿದ ಸ್ಥಳದ ಕಡೆಗೆ ಸಾಗಿದರು. ಆ ನಾಲ್ವರು ಮೋತದಾರರಲ್ಲಿ ಒಬ್ಬನು ಜೀವ್ಯಾನಿಗೆ–ಎಲೇ ಜೀವ್ಯಾ ಈದಿನ ಯಾವ ಕಡೆಗೆ ಸವಾರಿಯು? ನೋಡು, ಕುದುರೆಗಳು ಹೇಗೆ ಹೂಕರಿಸುತ್ತಿವೆ, ಅನ್ನಲು, ಜೀವ್ಯಾನು–ಮಗನೆ! ಅದನ್ನು ತಕ್ಕೊಂಡು ನೀನು ಮಾಡುವದೇನು? ಹೇಳಿದಷ್ಟು ಕೇಳುವದು ನಮ್ಮ ಕೆಲಸವು. ಇಲ್ಲದ ಒಣ ಉಸಾಬರಿಯು ಯಾತಕ್ಕೆ ನಮಗೆ? ಎಂದು ಗದ್ದರಿಸಲು, ಆ ಮೋತದ್ದಾರನು ತಿರುಗಿ ಪಿಟ್ಟೆಂದು ಮಾತಾಡದೆ ಜೀವ್ಯಾನು ಹೇಳಿದ ಸ್ಥಳಕ್ಕೆ ಉಳಿದ ಕುದುರೆಗಳೊಡನೆ ತನ್ನ ಕುದುರೆಯನ್ನು ತಕ್ಕೊಂಡು ಹೋಗಿ ನಿಲ್ಲಿಸಿದನು. ಜೀವ್ಯಾನು ಎಲ್ಲ ಪರಿವಾರದೊಡನೆ ಅಲ್ಲಿಯೇ ನಿಂತುಕೊಂಡನು. ಅವರು ನಿಂತುಕೊಂಡು ಎರಡು ಗಳಿಗೆಯಾಗುವದರೊಳಗೆ ಶಿವಾಜಿಯೇ ಮೊದಲಾದ ಮೂವರೂ ಬಡ ಬಡ ಗುಡ್ಡ ಇಳಿದು ಬರುವದು ಕಾಣಸಹತ್ತಿತು. ಅವರು ಸಮೀಪಕ್ಕೆ ಬಂದ ಕೂಡಲೆ ಮೂವರು ಮೋತದ್ದಾರರೂ ಮೂರು ಕುದುರೆಗಳನ್ನು ಮುಂದಕ್ಕೆ ಹಿಡಕೊಂಡು ಬಂದರು. ಆಗ ಶಿವಾಜಿಯು ಆ ಕುದುರೆಗಳ ಕಡೆಗೆ ನೋಡಿ, ತಾನು ಹತ್ತಬೇಕಾಗಿದ್ದ ಕುದುರೆಯನ್ನು ಕುರಿತು–ಬೇಟಾ, ನಡೆ, ನೀನೇ ಇಂದು ನನ್ನನ್ನು ಹತ್ತಿಸಿಕೊಂಡು ಹೋಗು, ಎಂದು ನುಡಿದು ಚಟ್ಟನೆ ಹಾರಿ ಕುದುರೆಯನ್ನು ಹತ್ತಿದನು. ಬಳಿಕ ಒಂದು ಕುದುರೆಯ ಕಡೆಗೆ ಬೆರಳು ಮಾಡಿ ಅದನ್ನು ಹತ್ತಬೇಕೆಂದು ನಾನಾಸಾಹೇಬನಿಗೆ ಸೂಚಿಸಿದನು, ಉಳಿದವೆರಡರಲ್ಲಿ ಒಂದನ್ನು ತಾನಾಜಿಯು ಹತ್ತಿದನು. ಬಳಿಕ ತಾನಾಜಿಯು ಜೀವ್ಯಾನನ್ನು ಕುರಿತು–ನೀನು ಈ ಕುದುರೆಯನ್ನಿಟ್ಟುಕೊಂಡು ಸ್ವಲ್ಪ ಹೊತ್ತು ಹಾದಿಯನ್ನು ನೋಡುತ್ತ ಅಲ್ಲಿಯೇ ನಿಂತರು. ಈಗ ಪಿಸಾಜಿಯು ಬರುವನು. ಇಂದಿನ ನಿನ್ನ ತಪ್ಪನ್ನು ರಾಜರು ಹೊಟ್ಟೆಯಲ್ಲಿ ಹಾಕಿಕೊಂಡಿರುತ್ತಾರೆ. ಇನ್ನೊಮ್ಮೆ ಹೀಗೆ ಎಚ್ಚರಗೇಡಿತನ ಮಾಡಿದರೆ.... ಎಂದು ನುಡಿಯುತ್ತಿರಲು, ಶಿವಾಜಿಯು ತನ್ನ ಕುದುರೆಯನ್ನು ವೇಗದಿಂದ ಓಡಿಸಿದನು. ಒಂದು ಮಗ್ಗಲಿನಿಂದ ನಾನಾಸಾಹೇಬನು, ಮತ್ತೊಂದು ಮಗ್ಗಲಿನಿಂದ ತಾನಾಜಿಯು ಕುದುರೆಗಳನ್ನು ಓಡಿಸುತ್ತ ಸಾಗಿದರು. ಜೀವ್ಯಾನೂ, ಮೋತದ್ದಾರರೂ ಬಟ್ಟು ಕಚ್ಚಿ ಆಶ್ಚರ್ಯದಿಂದ ಅವರನ್ನು ನೋಡುತ್ತ ನಿಂತುಕೊಂಡರು. ಪಾಪ! ಆ ಬಡಮಾವಳ ಜನರಿಗೆ ಒಂದೊಂದು ಪ್ರಸಂಗಗಳು ಅಪೂರ್ವವಾಗಿ ತೋರುತ್ತಿದ್ದವು.

ಇತ್ತ ವಿಸಾಜಿಯು ಗುಡಿಸಿಲಿನ ಹತ್ತರ ಯಮುನ್ಯಾನ ಹಾದಿಯನ್ನು ನೋಡುತ್ತ ಸ್ವಲ್ಪ ಸಂಚಿತಮುದ್ರೆಯಿಂದ ನಿಂತಿರಲು, ಸ್ವಲ್ಪ ಹೊತ್ತಿನಲ್ಲಿ ಯಮುನ್ಯಾನು ಬಂದನು. ವಿಸಾಜಿಯು ಯಮುನ್ಯಾನನ್ನು ಏನೋ ಕೇಳಬೇಕೆನ್ನುವಷ್ಟರಲ್ಲಿ ತಿರುಗಿ ಆ ಯಮುನ್ಯಾನೇ ವಿಸಾಜಿಗೆ– ಇದೇನು? ಸರಕಾರದ ಸವಾರಿಯು ಇಲ್ಲಿ ನಿಂತುಕೊಂಡಿದೆ? ಶಾಬಾಸ! ಈ ಕಾಲಕ್ಕೆ ತಮ್ಮ ಭೆಟ್ಟಿಯಾದದ್ದು ಬಹಳ ನೆಟ್ಟಗಾಯಿತು. ಎಲ್ಲಿ ಭೆಟ್ಟಿಯಾದೀತೆಂಬ ವಿಚಾರದಲ್ಲಿ ಮುಣುಗಿ ಹೋಗಿದ್ದೆನು.

ವಿಸಾಜಿ–ಏಕೆ? ಅದೇಕೆ? ಅಂಥ ಮಹತ್ವದ ಕೆಲಸವೇನು? ಏನಾದರೂ ಮಹತ್ವದ ಸುದ್ದಿಯಿರುವದೋ ಏನು? ಎಲ್ಲಿಗೆ? ಪುರಂದರಗಡಕ್ಕೆ ಹೋಗಿದ್ದೆಯೆಂಬಂತೆ ತೋರುತ್ತದೆ! ಪುರಂದರದ ಸುದ್ದಿಯೇನು?

ಯಮುನ್ಯಾ–ಪುರಂದರದ ಸುದ್ದಿಯಲ್ಲ; ಶಹಾಜಿರಾಜರ ಪತ್ರವು ಬಂದಿದ್ದು, ಅದರಲ್ಲಿ ನಿಮ್ಮ ಈ ಎಲ್ಲ ಪ್ರಯತ್ನಗಳ ಸಂಬಂಧದಿಂದ ಬಹಳ ಮಜಕೂರು ಇರುತ್ತದೆಂದು ಕೇಳಿದೆನು. ಸಾಧಿಸಿದರೆ, ನಿಮ್ಮ ಎಲ್ಲ ಪ್ರಯತ್ನಗಳನ್ನು ನಿಲ್ಲಿಸಬೇಕೆಂತಲೂ ಅದರಲ್ಲಿ ಬರೆದಿರುತ್ತದಂತೆ.

ವಿಸಾಜಿ–ಅಃ! ಇಷ್ಟೇಯೊ? ಅದನ್ನು ಹಿಂದುಗಡೆ ನೋಡಲಿಕ್ಕೆ ಬಂದೀತು. ನಾನು ತಿಳಿದಿದ್ದೆನು, ಯಾವನಾದರೊಬ್ಬ ವಿಜಾಪುರದ ಸರದಾರಗಿರದಾರನು ಇತ್ತಕಡೆಗೆ ಬರುವದಕ್ಕಾಗಿ ಹೊರಟಿದ್ದಾನೆಂಬ ಸುದ್ದಿಯನ್ನು ಹೇಳುವನೋ ಏನೋ ಎಂದು! ಆ ಪತ್ರದಲ್ಲಿಯ ಸಂಗತಿಯನ್ನು ಬೇಕಾದಾಗ ನಾವು ಅರಿತುಕೊಳ್ಳುವೆವು. ಬೇಕಾದರೆ ಪತ್ರವನ್ನೂ ತರುವೆವು. ಅದರಲ್ಲಿ ಏನಾದರೂ ಇದ್ದರೆ.... ಎಂದು ಮುಂದೆ ಹೆಚ್ಚಿಗೆಯೇನೂ ಮಾತಾಡದೆ, ನಾಲಿಗೆಯನ್ನು ಕಚ್ಚಿ, ತಾನು ಮಾತಾಡಬಾರದ್ದನ್ನು ಮಾತಾಡಹತ್ತಿದ್ದೆನೆಂದು ಪಶ್ಚಾತ್ತಾಪಪಟ್ಟು, ವಿಚಾರಮಗ್ನನಾಗಿ ಸ್ವಲ್ಪ ಹೊತ್ತು ಸುಮ್ಮನೆ ನಿಂತುಕೊಂಡನು. ಆಮೇಲೆ ಆತನು ಯಮುನ್ಯಾನನ್ನು ಕುರಿತು–ಯಮುನ್ಯಾ, ನೀನು ಈವೊತ್ತಿನವರೆಗೆ ಚಾಕರಿಯನ್ನು ಹೇಗೆ ಮಾಡಿರುತ್ತೀಯೆಂಬದನ್ನು ಅರಿತಿರುವೆನು. ನಿನ್ನ ಒಂದು ಹುಷಾರಿಯೂ, ಕರ್ತೃತ್ವಶಕ್ತಿಯೂ ರಾಜರಿಗೂ ಗೊತ್ತಾಗಿರುವದು. ಪ್ರಸಂಗ ಬಂದಾಗ ತಕ್ಕ ಇನಾಮೂ ನಿನಗೆ ದೊರೆಯ ತಕ್ಕದ್ದದೆ; ಆದರೆ ಇಂದು ನೀನು ಒಂದು ವಿಶೇಷತರದ ಕೆಲಸವನ್ನು ಮಾಡಬೇಕಾಗಿದೆ. ನಿನಗೆ ಆ ಮಾರುತಿಯ ಗುಡಿಯೊಳಗಿದ್ದ ಗೋಸಾವಿಯ ಗೊತ್ತು ಇರುತ್ತದಷ್ಟೇ? ಆ ಗೋಸಾವಿಯನ್ನು ಒಬ್ಬ ಮುಸಲ್ಮಾನ ಸರದಾರನೂ, ಒಬ್ಬ ಮಹಾರಾಷ್ಟ್ರ ಸರದಾರನೂ ಇಂದು ಸೆರೆಹಿಡಕೊಂಡು ಹೋಗಿದ್ದಾರೆ. ಅವರು ಪುರಂದರ ಗಡದಲ್ಲಿ ಇರಬಹುದು. ಇದ್ದಲ್ಲಿ ನೀನು ಅವರ ಗೊತ್ತು ಹಚ್ಚಿ, ಹೊತ್ತುಹೊತ್ತಿಗೆ ಅವರ ಸುದ್ದಿಯನ್ನು ನನಗೆ ತಿಳಿಸುತ್ತಿರು. ಆ ಗೋಸಾವಿಯ ಜೀವಕ್ಕೆ ಅಪಾಯ ಒದಗುವ ಸಂಭವವಿದ್ದರೆ, ಹೇಗಾದರೂ ಮಾಡಿ ಕೂಡಲೆ ನನಗೆ ಸುದ್ದಿಯನ್ನು ಮುಟ್ಟಿಸು. ಹಾಗೇನೂ ಇರದ ಪಕ್ಷದಲ್ಲಿ ಆ ಸರದಾರರ ಸುಳಿದಾಟವನ್ನು ನನಗೆ ಹೊತ್ತುಹೊತ್ತಿಗೆ ತಿಳಿಸುತ್ತಿದ್ದರಾಯಿತು. ಇನ್ನು ಮೂರುದಿವಸಗಳೊಳಗೆ ನಾವು ಗೋಸಾವಿಯನ್ನು ಬಿಡಿಸೇಬಿಡುವೆವು. ಹೋಗು ಹಾಗಾದರೆ, ಆ ನಿದ್ದೆಬಡಕ ಜೀವ್ಯಾನಿಗೆ

ಈ ಸುದ್ದಿಯನ್ನು ಹೇಳಬೇಡ. ನೀನು ಇಲ್ಲಿಂದ ಹೊರಟು ನನ್ನ ಕಣ್ಣು ಮರೆಯಾದೆಯೆಂದರೆ, ನಾನು ಗುಡ್ಡವನ್ನು ಏರಹತ್ತುವೆನು, ಅನ್ನಲು, ಯಮುನ್ಯಾನು ತಟ್ಟನೆ ತನ್ನ ಗುಡಿಸಲು ಹೊಕ್ಕು, ಕಾಲುತಾಸಿನೊಳಗೆ ದುರಗಮುರಗಿಯವರ ಸೋಗು ಹಾಕಿಕೊಂಡು, ಡೊಳ್ಳನ ಮೇಲೆ ಕೈಹಾಕುತ್ತ ಏಸಾಜಿಗೆ ರಾಮರಾಮ ಮಾಡಿ, ಮಾರುತಿಯ ದೇವಾಲಯದ ಕಡೆಗೆ ಸಾಗಿದನು. ಏಸಾಜಿಯು ನಗೆಮೊಗದಿಂದ ಅವನನ್ನು ಕ್ಷಣಮಾತ್ರ ನೋಡುತ್ತ ನಿಂತುಕೊಂಡು ಆತನು ಕಣ್ಣುಮರೆಯಾದ ಕೂಡಲೆ ಬೆಟ್ಟವನ್ನು ಏರಹತ್ತಿದನು. ಸ್ವಲ್ಪ ಏರಿಹೋಗಿ ನಡುವೆ ನಿಂತು ಸುತ್ತುಮುತ್ತು ನೋಡಿ ಉಸುರ್ಗರೆದು ನಿರ್ಹೇತುಕವಾಗಿ ಒಂದು ಸ್ಥಳವನ್ನು ದಿಟ್ಟಿಸಿ ನೋಡ ಹತ್ತಿದನು. ಆ ದಿನ ಆತನ ಮನಸ್ಸು ಅಸ್ವಸ್ಥವಾಗಿದ್ದಂತೆ ತೋರಿತು. ಆತನ ಮನಸ್ಸಿನೊಳಗಿನ ವಿಚಾರಗಳು ಗೊತ್ತಾಗಲಿಕ್ಕೆ ಏನಾದರೂ ಮಾರ್ಗವಿದ್ದರೆ, ಬಹಳ ನೆಟ್ಟಗಾಗುತ್ತಿತ್ತು. ತನ್ನ ಕಣ್ಣಿಗೆ ಬೀಳುವ ಪ್ರದೇಶವು, ಶಿವಬಾನ ಯೋಚನೆಯಂತೆ ಮುಸಲ್ಮಾನರ ದವಡೆಯೊಳಗಿಂದ ಪಾರಾಗಿ, ಮಹಾರಾಷ್ಟ್ರರದು ಮಹಾರಾಷ್ಟ್ರರಿಗೆ ಹೇಗೆ ಸಿಕ್ಕೀತೆಂಬ ವಿಚಾರದಲ್ಲಿ ಆತನ ಮನಸ್ಸು ತೊಡಗಿರುವಂತೆ ತೋರಿತು. ಶಿವಾಜಿಯ ಮೇಲೆ ಏಸಾಜಿಯನಿಷ್ಠೆ ಬಹಳ. ಶಿವಾಜಿಯು ಯೋಚಿಸಿದ ಕಾರ್ಯದಲ್ಲಿ ಏಸಾಜಿಯ ಆಸಕ್ತಿಯು ಹೆಚ್ಚು. ಆತನು ಮನಸ್ಸಿನಲ್ಲಿ—ನಮ್ಮ ಶಿವಬಾನು ಕೈಕೊಂಡ ಕಾರ್ಯವು ಸಾಧಿಸಲಿಕ್ಕಿಲ್ಲವೇ? ಸಾಧಿಸುವದು, ಸಾಧಿಸುವದು, ನಿಶ್ಚಯವಾಗಿ ಬೇಗನೆ ಸಾಧಿಸುವದು. ಶಿವಾಜಿಯ ಮೇಲೆ ಭವಾನಿಯ ಕೃಪೆಯು ಪೂರ್ಣವಾಗಿರುವದು. ತೀರ ಚಿಕ್ಕಂದಿನಿಂದ ನಾನು ನೋಡುತ್ತ ಬಂದಿದ್ದೇನೆ, ಆಟದಲ್ಲಿ ಕೂಡ ಶಿವಬಾನಿಗೆ ಸೋಲು ಇಲ್ಲ. ಈಗ ನಾಲ್ಕೈದು ವರ್ಷಗಳಿಂದಂತು ನಾವು ಪರಾಕ್ರಮದ ಕೆಲಸಗಳಲ್ಲಿಯೇ ತೊಡಗಿರುತ್ತೇವೆ. ಅದರಲ್ಲಿಯೂ ಆತನಿಗೆ ಸೋಲಿನ ಸುದ್ದಿಯಿಲ್ಲ. ಆ ಪುರುಷನು ಸೋಲಲಿಕ್ಕೆ ಹುಟ್ಟಿರುವದೇ ಇಲ್ಲ. ಜಯವನ್ನು ಸಂಪಾದಿಸುವ ದಕ್ಕಾಗಿಯೇ ಆತನು ಅವತರಿಸಿರುತ್ತಾನೆ. ಹೊಸ ರಾಜ್ಯವನ್ನು ಸ್ಥಾಪಿಸುವದಕ್ಕಾಗಿಯೇ ಭವಾನಿಯು ಆತನಿಗೆ ಜನ್ಮ ಕೊಟ್ಟಿರುವಳೆಂಬದರಲ್ಲಿ ಸಂಶಯವಿಲ್ಲ. ನಮ್ಮ ಶಿವಬಾನು ಮನುಷ್ಯನಲ್ಲ, ನಿಶ್ಚಯವಾಗಿ ಅವತಾರಿಕನು. ಈಗ ನಾವು ಕಣ್ಣಿಟ್ಟಿರುವ ದುರ್ಗವನ್ನು ವಶಮಾಡಿಕೊಳ್ಳುವಲ್ಲಿ ಜಯ ಪ್ರಾಪ್ತಿಯೇ ಆಗುವದೆಂದು ಆತನು ನಂಬಿರುವನು. ಅಪಜಯದ ಕಲ್ಪನೆ ಕೂಡ ಆತನಿಗಿರುವದಿಲ್ಲ. ಬೇಕಾದ ದುರ್ಗವನ್ನು ಕೈವಶಮಾಡಿಕೊಳ್ಳಲಿಕ್ಕೆ ಹೋದರೂ ಅದು ವಶವಾಗುವದೆಂದು ಆತನು ಹೇಳುವನು. ಸೋಲಿನ ಅಂಜಿಕೆಯು ನಮಗೆ ಮಾತ್ರ ಇರುತ್ತದೆ; ಆತನನ್ನು ಅದು ಮುಟ್ಟುವ ಹಾಗಿಲ್ಲ. ಇಷ್ಟು ಚಿಕ್ಕ ವಯಸ್ಸಿನಲ್ಲಿ ಈ ಪರಿ ಧೈರ್ಯವೂ, ಜಾಣತನವೂ ಭವಾನಿಯ ಕೃಪೆಯ ಹೊರತು ಪ್ರಾಪ್ತವಾಗುವದು ಅಸಂಭವವು.

ಈ ಬಗೆಯ ಹಲವು ವಿಚಾರಗಳಲ್ಲಿಯೇ ಮಗ್ನನಾಗಿರಬಹುದು. ಆತನ ಧೀರೋದಾ ರಾಂತಃ ಕರಣದಲ್ಲಿ ಇಂಥ ವಿಚಾರಗಳಲ್ಲದೆ ಬೇರೆ ವಿಚಾರಗಳು ಹೇಗೆ ಬರಬೇಕು? ವಿಚಾರಗಳ ಭರದಲ್ಲಿಯೇ ಆತನು ವೇಗದಿಂದ ಸಾಗಿದ್ದನು. ಸ್ವಲ್ಪ ಹೊತ್ತಿನಲ್ಲಿಯೇ ಗುಡ್ಡವನ್ನು ಹತ್ತಿ ಇಳಿದು ಎರಡನೆಯ ಮಗ್ಗಲಿಗೆ ಹೋದನು. ತನ್ನ ಕುದರೆ ನಿಂತಿದ್ದ ಸ್ಥಳಕ್ಕೆ ಹೋಗುವ

ಮೊದಲು, ಆತನು ಕುದುರೆಯ ಗುಪ್ತವಾದ ಲಾಯಕ್ಕೆ ಹೋಗಿ, ಎಲ್ಲ ಕುದುರೆಗಳನ್ನು ಕಣ್ಣು ಮುಟ್ಟಿನೋಡಿ, ಪಾಗನೀಸನನ್ನು ಕೇಳತಕ್ಕದ್ದನ್ನು ಕೇಳಿ, ಆತನಿಗೆ ಹೇಳತಕ್ಕದ್ದನ್ನು ಹೇಳಿ ತನ್ನ ಸಲುವಾಗಿ ಕುದುರೆಯನ್ನು ನಿಲ್ಲಿಸಿದ್ದಲ್ಲಿಗೆ ಬಂದನು. ಬಳಿಕ ಜೀವ್ಯಾನಿಗೆ ಎಚ್ಚರಗೆಟ್ಟು ಮಲಗಿಕೊಳ್ಳದಂತೆ ಮತ್ತೊಮ್ಮೆ ಸಿಟ್ಟು ಮಾಡಿ ಹೇಳಿದನು. ನೋಡನೋಡುತ್ತ ಆತನ ಕುದುರೆಯು, ಮುಂದೆ ಹೋದ ತರುಣರ ಕುದುರೆಗಳಂತೆಯೇ ಸಾಗಿತು. ಏಸಾಜಿಯು ಬಹಳ ಹೊತ್ತು ಕುದುರೆಯನ್ನು ಓಡಿಸುತ್ತ ಹೋದಮೇಲೆ, ಒಂದು ಕಟ್ಟಡವಿಯು ಹತ್ತಿತು. ಅಲ್ಲಿ ಸೂರ್ಯಪ್ರಕಾಶಕ್ಕೆ ಆಸ್ಪದವಿಲ್ಲದ್ದರಿಂದ, ಹಗಲೇ ಅಲ್ಲಿ ಮಬ್ಬುಗವಿದಿತ್ತೆಂದು ಹೇಳಬಹುದು. ಆ ಅರಣ್ಯದಲ್ಲಿ ನೋಡಿದತ್ತೆಲ್ಲ ಆಲ, ಅರಳಿ, ಹುಣಸಿ, ಅಶೋಕ ಮೊದಲಾದ ಉನ್ನತವಾದ ವೃಕ್ಷಗಳು ದಟ್ಟವಾಗಿ ಬೆಳೆದಿದ್ದವು. ಅಲ್ಲಿ ಹಾದಿಯನ್ನು ಗೊತ್ತುಹಚ್ಚುವದಂತು ಅಶಕ್ಯವೆಂತಲೇ ಹೇಳಬಹುದಾಗಿತ್ತು. ಪುಣೆಯಿಂದ ವಿಜಾಪುರಕ್ಕೆ ಹೋಗುವ ಹಾದಿಯಲ್ಲಿ ಪುಣೆಯಿಂದ ಸರಾಸರಿ ಮೂವತ್ತು ಹರದಾರಿಯ ಮೇಲೆ ಆ ಅರಣ್ಯವಿತ್ತು. ಅರಣ್ಯದ ವಿಸ್ತಾರವು ಸುತ್ತು ಮೂರು ನಾಲ್ಕು ಹರದಾರಿಯಾಗಬಹುದು. ಈ ಅರಣ್ಯದಲ್ಲಿ ಕೊಲೆ-ಸುಲಿಗೆಗಳು ನೆಲೆಯಿಲ್ಲದೆ ಆಗುತ್ತಿದ್ದವು. ಕಳ್ಳರು ಹಲವು ಸಾರೆ ವಿಜಾಪುರದ ಬಾದಶಹನ ಕಡೆಗೆ ಹೋಗತಕ್ಕ ಹಣವನ್ನು ಇಲ್ಲಿಯೇ ಸುಲಿದಿದ್ದರು. ಈ ಅರಣ್ಯವನ್ನು ಕಡಿಸದಿದ್ದರೆ ಪರಿಣಾಮವಾಗದೆಂದು ಎಷ್ಟೋ ಸರದಾರರು ಬಾದಶಹರ ಮುಂದೆ ಹೇಳುತ್ತ ಬಂದಿದ್ದರು; ಆದರೆ ಸೋಮಾರಿತನದಲ್ಲಿ ಮುಳುಗಿ ಹೋಗಿದ್ದ ಆ ಬಾದಶಹರ ಆಳಿಕೆಯಲ್ಲಿ ಅರಣ್ಯ ಕಡಿಸುವದು ಆಗಿದ್ದೇ ಇಲ್ಲ. ಶಿವಾಜಿಯು ತನ್ನ ಸಂಗಡಿಗರೊಡನೆ ಈ ಅರಣ್ಯದಲ್ಲಿ ವಾಸಿಸುತ್ತಿದ್ದು, ಅಲ್ಲಿ ತನ್ನ ಕಾಯಕವನ್ನು ನಡೆಸುತ್ತಿದ್ದನು. ಆತನು ಒಬ್ಬಿಬ್ಬ ಮುಸಲ್ಮಾನ ಸರದಾರರಿಗೆ ಆಕಸ್ಮಿಕವಾಗಿ ಗಂಟು ಬಿದ್ದು, ಅವರನ್ನು ನುಚ್ಚುನುಚ್ಚು ಮಾಡಿ ಕಡಿದು ಚೆಲ್ಲಿದ್ದನು. ಆ ಗಹನವಾದ ಅರಣ್ಯದ ಮಧ್ಯದಲ್ಲಿ ಕಾಲುಮೈಲು ವಿಸ್ತಾರದ ಪ್ರದೇಶದಲ್ಲಿಯ ಗಿಡಗಳನ್ನು ಕಡಿದು ಸ್ವಲ್ಪ ಬೈಲುಮಾಡಿ, ಅಲ್ಲಿ ಶಿವಾಜಿಯು ತನ್ನ ಪರಿವಾರದ ಸಂಗಡ ಮಸಲತ್ತುಗಳನ್ನು ಮಾಡುತ್ತಿದ್ದನು. ಇಂದಾದರೂ ಆತನು ಆ ಬೈಲುಪ್ರದೇಶದಲ್ಲಿಯ ಗಿಡದ ಬುಡದಲ್ಲಿ ಗಾಸೆಯನ್ನು ಹಾಕಿಕೊಂಡು ಕುಳಿತು ಕೊಂಡಿದ್ದನು. ನಾನಾಸಾಹೇಬನೂ, ತಾನಾಜಿಯೂ ಬಳಿಯಲ್ಲಿ ಕುಳಿತುಕೊಂಡಿದ್ದರು. ಅಷ್ಟರಲ್ಲಿ ಏಸಾಜಿಯೂ ಅಲ್ಲಿಗೆ ಹೋದನು. ಶಿವಾಜಿಯ ತೇಜಃಪುಂಜವಾದ ನೇತ್ರಗಳಲ್ಲಿ ಕಿಡಿಗಳು ಹಾರುತ್ತಿರುವಂತೆ ತೋರುತ್ತಿತ್ತು. ಆತನ ಮುಖ ಮುದ್ರೆಯು ಕ್ರೋಧ-ಖೇದ-ವಿಸ್ಮಯ-ತಿರಸ್ಕಾರಾದಿ ವಿಕಾರಗಳಿಂದ ಯುಕ್ತವಾಗಿತ್ತು. ಆತನ ಹುಬ್ಬುಗಳು ಗಂಟಿಕ್ಕಿದ್ದು, ಆತನು ಗಹನ ವಿಚಾರದಲ್ಲಿ ತೊಡಗಿರುವಂತೆ ತೋರುತ್ತಿತ್ತು. ಉಳಿದ ಮೂವರು ಚಿಂತಾಮಗ್ನರಾಗಿ ಕುಳಿತು ಕೊಂಡಿದ್ದರು. ಎಲ್ಲರೂ ಮೌನವ್ರತವನ್ನು ಅಂಗೀಕರಿಸಿದಂತೆ ಆಗಿತ್ತು. ಬಹಳ ಹೊತ್ತಾದರೂ ಈ ವ್ರತಕ್ಕೆ ಭಂಗಬರಲಿಲ್ಲ. ತೇಜೋಮೂರ್ತಿಯ ಮುಂದೆ ತಾಗಿ ಬಾಯಿಬಿಚ್ಚಿ ಮಾತಾಡುವ ಧೈರ್ಯವು ಯಾರಿಗೂ ಆಗಲೊಲ್ಲದು. ನಾನಾಸಾಹೇಬನ ನಾಲಿಗೆಯಂತೂ ಏನೋ ಮಾತಾಡ

ಬೇಕೆಂದು ಕುಣಿಯುತ್ತಿತ್ತು ಕಡೆಗೆ ಶಿವಾಜಿಯೇ ಮೌನವ್ರತದ ಉದ್ಯಾಪನೆಯನ್ನು ಮಾಡಿ, ತನ್ನ ನೆರೆಯಲ್ಲಿ ಕುಳಿತವರ ಕಡೆಗೆ ನೋಡಿ–ಎಂಥ ಹೇಡಿ ಕೆಲಸವಿದು! ಶ್ರೀಧರಸ್ವಾಮಿಗಳ ಕಾಲಲ್ಲಿ ಮಣಮಣದ ಬೇಡಿಗಳನ್ನು ಹಾಕಿ, ಪುರಂದರ ಗಡದಂಥ ಸಮೀಪದ ಗಡದಲ್ಲಿ ಕತ್ತಲ ಕೋಣೆಯೊಳಗೆ ಹಾಕಿರಲು, ನಾವು, ಇಲ್ಲಿ ಅಥವಾ ಮನೆಯಲ್ಲಿ ಸ್ವಸ್ಥವಾಗಿ ಕುಳಿತುಕೊಳ್ಳಬಹುದೋ? ಛೇ ಛೇ! ಇದರಂಥ ನಾಚಿಕೆಗೇಡಿ ಕೆಲಸವು ಮತ್ತೊಂದಿರಲಿಕ್ಕಿಲ್ಲ. ಹೀಗೆ ಮಾಡುವದಕ್ಕಿಂತ, ನಾವು ಕೈಯಲ್ಲಿ ಬಳೆ ಇಡಿಸಿಕೊಂಡು ಸೀರೆ ಉಟ್ಟುಕೊಂಡು ಮನೆ ಹಿಡಕೊಂಡು ಕುಳಿತರೆ ಏನು ತಪ್ಪು?

ಹೀಗೆ ಅತ್ಯಂತ ತಿರಸ್ಕಾರದಿಂದ ಆಡಿದ ಶಿವಾಜಿಯ ಮಾತುಗಳು ಎಲ್ಲರ ಮನಸ್ಸಿಗೂ ನಟ್ಟವು. ಅವರಲ್ಲಿ ಏಸಾಜಿಗಂತೂ ಜೀವಹೋದ ಹಾಗೆ ಆಗಿತ್ತು; ಯಾಕಂದರೆ ''ಇನ್ನು ಮೂರು ದಿವಸಗಳಲ್ಲಿ ಶ್ರೀಧರಸ್ವಾಮಿಗಳನ್ನು ಬಿಡಿಸಿಕೊಂಡುಬಂದರೇ ನಾನು ಏಸಾಜಿಯು'' ಎಂದು ತಟ್ಟನೆ ನುಡಿದು ಆತನು ಸುಳ್ಳುಬಿದ್ದಿದ್ದನು. ದುರಗಮುರಿಗಿಯ ಸೋಗು ಹಾಕಿಕೊಂಡು ಹೋಗಿದ್ದ ಯಮುನ್ಯಾನು, ಮೊದಲಿಗೆ ಹೇಳಿದ ಸುದ್ದಿಯನ್ನು ಕೇಳಿದಾಗ, ಏನಾದರೂ ಯುಕ್ತಿಯನ್ನು ಮಾಡಿ ಶ್ರೀಧರಸ್ವಾಮಿಯನ್ನು ಬಿಡಿಸಿಕೊಂಡು ಬರುವೆನೆಂದು ಏಸಾಜಿಯು ಹಿಗ್ಗಿದನು; ಆದರೆ ಮರುದಿವಸ ಶ್ರೀಧರಸ್ವಾಮಿಯ ಕಾಲಲ್ಲಿ ಮಣಮಣದ ಬೇಡಿಗಳನ್ನು ಹಾಕಿ, ಕತ್ತಲೆಯ ನೆಲಮನೆಯಲ್ಲಿ ಸರ್ಜೇಖಾನನು ನಿಂತು ಹಾಕಿಸಿದನೆಂದು ಯಮುನ್ಯಾನೇ ಹೇಳಿದ್ದರಿಂದ, ಆ ತರುಣ ಮರಾಟನು ನಿರಾಶೆಪಟ್ಟನು. ತನ್ನ ಅಲಸ್ಯದಿಂದಲೇ ಶ್ರೀಧರಸ್ವಾಮಿಯು ಅಸಾಧ್ಯ ಸ್ಥಳದಲ್ಲಿ ಸೆರೆಯಾಳಾಗಿ ಕೊಳೆಯಬೇಕಾಯಿತೆಂದು ಆತನು ದುಃಖಿಸುತ್ತಿದ್ದನು. ಇದೇ ಕಾರಣದಿಂದಲೇ ಶಿವಾಜಿಯ ಮಾತುಗಳನ್ನು ಕೇಳಿ ಆತನಿಗೆ ಎಲ್ಲರಿಗಿಂತ ಹೆಚ್ಚು ವ್ಯಸನವಾಯಿತು. ಆತನು ಕೆಳಗೆ ಮೋರೆಮಾಡಿಕೊಂಡು ಸುಮ್ಮನೆ ಕುಳಿತುಬಿಟ್ಟಿದ್ದನು. ಏನು ಮಾತಾಡಬೇಕೆಂಬದೇ ಆತನಿಗೆ ತಿಳಿಯದಾಯಿತು. ನಾನಾಸಾಹೇಬನ ನಾಲಿಗೆಯು ಮಾತ್ರ ಮಾತಾಡಲಿಕ್ಕೆ ಒಂದೇಸವನೆ ಕುಣಿಯುತ್ತಿತ್ತು, ಆತನು ಬಹು ಪ್ರಯಾಸದಿಂದ ನಾಲಿಗೆಯನ್ನು ಬಿಗಿಹಿಡಿದಿರುವನೆಂಬದು ಸ್ಪಷ್ಟವಾಗಿ ತೋರುತ್ತಿತ್ತು ಇದೇ ಸಮಯದಲ್ಲಿ ಶಿವಾಜಿಯು ತೀಕ್ಷ್ಣದೃಷ್ಟಿಯು ನಾನಾಸಾಹೇಬನ ಮೇಲೆ ಬಿದ್ದಿತು. ಈತನ ಮನಸ್ಸಿನಲ್ಲಿ ಯಾವದೋ ಮಹತ್ವದ ವಿವರವಿದ್ದು ''ಮಾತಾಡಲೊ–ಬೇಡವೊ'' ಎನ್ನುವ ಹಾಗೆ ಈತನಿಗೆ ಆಗಿರುತ್ತದೆಂಬದನ್ನು ಆ ಶಿವಬಾನು ಮನಗಂಡನು. ಆತನು ನಾನಾಸಾಹೇಬನನ್ನು ಕುರಿತು—''ಯಾಕೆ ಸಾಹೇಬರೇ, ನಿಮ್ಮ ಮನಸ್ಸಿನಲ್ಲಿ ಏನೋ ವಿಚಾರವು ಉತ್ಪನ್ನವಾಗಿರುವಂತೆ ತೋರುತ್ತದೆ. ಅದು ಅಂಥ ಮಹತ್ವದ ವಿಚಾರವೇನು? ಹೇಳುವ ಹಾಗಿದ್ದರೆ ಹೇಳಿಬಿಡಿರೊಮ್ಮೆ!'' ಅನ್ನಲು, ನಾನಾಸಾಹೇಬನು ಸ್ವಲ್ಪ ನಕ್ಕು— ಮಹಾರಾಜರೇ, ವಿಚಾರವೆಂದರೆ ವಿಶೇಷವೇನೂ ಇಲ್ಲ, ನನಗೆ ಅಪ್ಪಣೆಯಾದರೆ, ಮೂರು ದಿವಸಗಳಲ್ಲಿ ಶ್ರೀಧರಸ್ವಾಮಿಗಳ ಚರಣ ದರ್ಶನವನ್ನು ತಪ್ಪದೆ ಮಾಡಿಸುವೆನು, ಅನ್ನಲು, ಶಿವಾಜಿಯು–ಏನಂದಿರಿ? ನಿಮಗೆ ಈ ಪ್ರಾಂತದ ಗೊತ್ತುಗುರಿ ಏನೂ ಇಲ್ಲದಿರಲು, ನೀವು

ಹೀಗೆ ಪ್ರತಿಜ್ಞೆಯನ್ನು ಮಾಡುವಿರೋ? ಇಲ್ಲಿ ಒದಗಬಹುದಾಗಿದ್ದ ವಿಘ್ನಗಳ ಕಲ್ಪನೆಯಾದರೂ ನಿಮಗೆ ಇರುತ್ತದೆಯೋ? ಪುರಂದರದ ಕೋಟೆಯು ವಿಲಕ್ಷಣವಾದದು. ಮೊದಲು ಅದನ್ನು ಪ್ರವೇಶಿಸುವದೇ ಪರಮ ದುಸ್ತರವು. ಅಂಥ ದುರ್ಗದಲ್ಲಿ ಮಣ ಮಣದ ಬೇಡಿಗಳನ್ನು ಹಾಕಿ ಕತ್ತಲಕೋಣೆಯಲ್ಲಿ ಚೆಲ್ಲಿಕೊಟ್ಟಿದ್ದ ಶ್ರೀಧರಸ್ವಾಮಿಗಳನ್ನು ಹೇಗೆ ಬಿಡಿಸಿಕೊಂಡು ಬರುವಿರಿ? ಈ ಕೆಲಸವು ಶಕ್ಯವೊ? ಈ ಕಾರ್ಯವು ಬರಿಯ ಪರಾಕ್ರಮದಿಂದ ಸಾಧಿಸುವ ಹಾಗಿಲ್ಲ. ಅದಕ್ಕೆ ಯುಕ್ತಿಯು ಜೋಡಾಗಿರುವದು ಅತ್ಯವಶ್ಯವಿರುತ್ತದೆ. ನಮ್ಮ ಏಸಾಜಿಯಂಥ ತಳಬುಡಬಲ್ಲ ವಸ್ತಾದಿಯ ಪ್ರತಿಜ್ಞೆಯೇ ಪೂರ್ಣವಾಗಲಿಲ್ಲ; ಅಂದಬಳಿಕ ಹೊಸಬರಿಗೆ ಅದು ಹೇಗೆ ಸಾಧಿಸಬೇಕು?

ಶಿವಾಜಿಯ ಕಡೆಯಮಾತುಗಳನ್ನು ಕೇಳಿ ಏಸಾಜಿಗೆ ಬಹಳ ವ್ಯಸನವಾಯಿತು. ಆದರೆ ಆತನು ಪಿಟ್ಟೆಂದು ಮಾತಾಡದೆ ಸುಮ್ಮನೆ ಕುಳಿತುಬಿಟ್ಟಿದ್ದನು. ಅಷ್ಟರಲ್ಲಿ ನಾನಾಸಾಹೇಬನು ಶಿವಾಜಿಯು ಕಡೆಗೆ ನೋಡಿ—ತಮ್ಮ ಅಪ್ಪಣೆಯಾದರೆ, ನಾನು ಏನಾದರೂ ಮಾಡಿ ಶ್ರೀಧರಸ್ವಾಮಿಯನ್ನು ಸನ್ನಿಧಿಗೆ ಕರಕೊಂಡು ಬರುವೆನು. ಅಪ್ಪಣೆಮಾತ್ರ ಆಗಬೇಕು. ನಾನು ತಮ್ಮ ಬಳಿಗೆ ಬಂದಷ್ಟೇ ಆಗಿರುವದು, ನನ್ನಿಂದ ಯಾವ ಕೆಲಸವೂ ಆಗಿರುವದಿಲ್ಲ, ಈದಿನ ಈ ಕೆಲಸವನ್ನು ಮಾಡಬೇಕೆಂದು ಇಚ್ಛಿಸುತ್ತೇನೆ. ನನ್ನ ಇಚ್ಛೆಯು ಪೂರ್ಣವಾಗುವದು ಮಹಾರಾಜರ ಅಪ್ಪಣೆಯನ್ನೂ, ಆಶೀರ್ವಾದವನ್ನೂ ಅವಲಂಬಿಸಿರುತ್ತದೆ. ಇಂಥ ಕೆಲಸವನ್ನು ಮಾಡುತ್ತೇನೆಂದು ಮಹಾರಾಜರ ಮುಂದೆ ಒಪ್ಪಿಕೊಂಡಬಳಿಕ, ಹಿಂಜರಿಯುವೆನೆಂಬದನ್ನು ಮಹಾರಾಜರು ಮನಸ್ಸಿನಲ್ಲಿ ಕೂಡ ತರಬಾರದು. ಈ ಕಾರ್ಯವನ್ನು ಸಾಧಿಸುವೆನು; ಇಲ್ಲದಿದ್ದರೆ ಸಾಯುವೆನು; ಮೂರನೆಯ ಮಾತು ಆಗದು. ಯಾವದಕ್ಕೂ ಮಹಾರಾಜರ ಅನುಮತಿಯೂ, ಅಪ್ಪಣೆಯೂ ಬೇಕು, ಅನ್ನಲು ಶಿವಾಜಿಯು—ತಮ್ಮ ಶೌರ್ಯದ ವಿಷಯವಾಗಿಯೂ, ನಿಶ್ಚಯದ ವಿಷಯವಾಗಿಯೂ ಎಳ್ಳಷ್ಟೂ ನನ್ನಲ್ಲಿ ಸಂಶಯವಿಲ್ಲ. ಛೇ! ಛೇ! ನಾನು ತಮಗೆ ಈ ಕೆಲಸವನ್ನು ಒಪ್ಪಿಸದಿರುವದಕ್ಕೆ, ತಾವು ಈ ಪ್ರಾಂತದ ಮಟ್ಟನ್ನು ಬಲ್ಲವರಲ್ಲೆಂಬುದೇ ಕಾರಣವು. ಹಾಗಲ್ಲದಿದ್ದರೆ ನಿಮ್ಮಂಥವರ ಮನೋದಯ ಭಂಗವನ್ನು ಎಂದೂ ಮಾಡುತ್ತಿದ್ದಿಲ್ಲ. ಇಂದು ಈ ಕೆಲಸವನ್ನು ನಾನೇ ಮಾಡಬೇಕೆಂದು ನಿಶ್ಚಯಿಸಿದ್ದೇನೆ. ನಮ್ಮ ಸಲುವಾಗಿ ಸ್ವಾಮಿಗಳಂಥ ಪುಣ್ಯಪುರುಷರ ದುರ್ದಸೆಯಾಗಬೇಕೇ? ಇದಕ್ಕಿಂತಲೂ ನಾಚಿಕೆಯ ಮಾತು ಯಾವ ದಿರುವವು? ಗೋ–ಬ್ರಾಹ್ಮಣರಿಗಾಗುವ ತಾಪವನ್ನು ನಿಲ್ಲಿಸಬೇಕೆಂದು ಯತ್ನಿಸುವು ನಾವು. ಶ್ರೀಧರಸ್ವಾಮಿಯಂಥ ಪುಣ್ಯಪುರುಷ ಬ್ರಾಹ್ಮಣನನ್ನು, ಅದರಲ್ಲಿಯೂ ನಮ್ಮ ಕಾರ್ಯಕ್ಕೆ ನಿಸ್ಪೃಹತೆಯಿಂದಲೂ, ಆಸಕ್ತಿಯಿಂದಲೂ ಸಹಾಯಮಾಡುವ ಮಹಾತ್ಮನನ್ನು ಸೆರೆಮನೆಯ ಅಪಮಾನಕ್ಕೂ, ತಾಪಕ್ಕೂ ಗುರಿಮಾಡುವದು ಯೋಗ್ಯವಾಗಬಹುದೋ? ನಿನ್ನೆ ರಾತ್ರಿ ಜಗದಂಬೆಯ ದೃಷ್ಟಾಂತವು ನನಗೆ ಆಗಿರುವದು. ಶ್ರೀಧರಸ್ವಾಮಿಗಳ ಕೂದಲು ಕೊಂಕದೆ ನಿಮಗೆ ಅವರ ದರ್ಶನವಾಗುವದು; ಆದರೆ ಮಹಾಯತ್ನದಿಂದಲ್ಲದೆ, ಕಾರ್ಯವು

ಸಾಧಿಸಲಾರದು, ಎಂದು ಲೋಕಮಾತೆಯು ಅಜ್ಞಾಪಿಸಿರುವಳು. ನಾನು ಬಹಳ ಹೊತ್ತು ಯೋಚಿಸಿದೆನು; ಆದರೆ ಸುಲಭಯತ್ನದಿಂದ ಕಾರ್ಯವು ಸಾಧಿಸುವ ಹಾಗಿಲ್ಲ. ಸಾಹಸವನ್ನೇ ಮಾಡಬೇಕಾಗಿದೆ. ಯಾವ ಮಾರ್ಗದಿಂದ ಸಾಹಸಮಾಡ ಬೇಕೆಂಬದನ್ನು ನನ್ನ ಮನಸ್ಸಿನಲ್ಲಿ ಎಲ್ಲ ಗೊತ್ತುಮಾಡಿಕೊಂಡಿರುತ್ತೇನೆ. ಪುರಂದರಗಡವನ್ನು ಕೈವಶಮಾಡಿಕೊಳ್ಳುವ ಯೋಗ್ಯತೆಯು; ಸದ್ಯಕ್ಕೆ ನಮಗೆ ಇರುವದಿಲ್ಲ ಆದರೂ ಶ್ರೀಧರಸ್ವಾಮಿಗಳನ್ನಂತು ಬಿಡಿಸಲೇಬೇಕಾಗಿದೆ. ನನ್ನ ಮನಸ್ಸಿನಲ್ಲಿ ಎಲ್ಲ ಗೊತ್ತು ಮಾಡಿಕೊಂಡಿರುತ್ತೇನೆ. ಅದರಲ್ಲಿ ಒಂದು ಸಣ್ಣ ಮಾತಿನ ಕೊರತೆಯಿರುತ್ತದೆ. ದುರ್ಗದ ಗುರುತು ನನಗೆ ಚನ್ನಾಗಿರುವದಲ್ಲದೆ, ಇವರಿಬ್ಬರಿಗೂ ಇರುತ್ತದೆ. ಆದರೆ..... ಎಂದು ನುಡಿಯುತ್ತಿರಲು, ದೂರ ಯಾರೋ ಸುಳಿದಾಡಿದಂತೆ ತೋರಿತು. ತಮ್ಮ ಈ ಆಲೋಚನೆಯೊಳಗಿನ ಒಂದು ಅಕ್ಷರವು ಹೊರಬಿದ್ದರೆ, ಕಾರ್ಯ ಘಾತವಾಗಿ ಅನರ್ಥ ಒದಗೀತೆಂದು, ಶಿವಾಜಿಯು ತನ್ನ ಖಡ್ಗವನ್ನು ಹಿಡಿದು ಎದ್ದು ನಿಂತು ಸುತ್ತುಮುತ್ತು ನೋಡಿದನು. ತಮ್ಮ ಸಾಮರ್ಥ್ಯವೆಲ್ಲ ಗೌಪ್ಯದಲ್ಲಿಯೂ, ಮಸಲತ್ತಿನಲ್ಲಿಯೂ ಇರುತ್ತದೆಂದು ಆತನು ತಿಳಿದಿದ್ದನು. ಆತನು ಸುಮ್ಮನೆ ಕುಳಿತಿದ್ದ ಏಸಾಜಿಯನ್ನು ಕುರಿತು– ಏಸಾಜೀ, ಯಾಕೆ ಸುಮ್ಮನೆ ಕುಳಿತಿರುತ್ತೀ? ಪ್ರತಿಜ್ಞೆಯು ಪೂರ್ಣವಾಗಲಿಲ್ಲೆಂದು ಮನಸ್ಸಿಗೆ ಹಚ್ಚಿಕೊಂಡೆಯೋ ಏನು? ಛೀ ನಿನ! ನಾವು ಮಾಡಿದ ಸಂಕಲ್ಪಗಳೆಲ್ಲ ಈವೊತ್ತಿನವರೆಗೆ ನೆರವೇರುತ್ತಲೇ ಬಂದಿರುವವೋ? ಪರಮೇಶ್ವರನ ಸತ್ಯಸಂಕಲ್ಪಗಳಿದ್ದರೆ ಪೂರ್ಣವಾಗುವವು. ಭ್ರಷ್ಟ ಸಂಕಲ್ಪದ ನಿಮ್ಮ ನಮ್ಮಂಥ ಮನುಷ್ಯರ ಸಂಕಲ್ಪಗಳು ಪೂರ್ಣವಾಗುವದಿಲ್ಲ, ಜಗದಂಬೆಯ ದೃಷ್ಟಾಂತವು ಸತ್ಯವಾದದ್ದು. ನೀವು ಚಿಂತೆಯನ್ನು ಬಿಡಿರಿ. ನಿಮ್ಮೆಲ್ಲರಿಗೆ ಶ್ರೀಧರಸ್ವಾಮಿಗಳ ದರ್ಶನವಾಗುವದು, ಎಂದು ನುಡಿಯುತ್ತಿರಲು, ಮತ್ತೆ ಮನುಷ್ಯರ ಸುಳುವು ಕೇಳಿಸಿದಂತಾಯಿತು. ಅತ್ತ ಗಿಡದ ಮರೆಯಲ್ಲಿ ಯಾರೋ ಬರುತ್ತಿದ್ದದ್ದು ಶಿವಾಜಿಯ ಕಣ್ಣಿಗೆ ಬಿದ್ದಿತು. ಕೂಡಲೆ ಆತನು ಖಡ್ಗವನ್ನು ನೆಗಹಿ ಅತ್ತಕಡೆ ಹೋಗಲು—''ಮಹಾರಾಜರೇ, ನಾನು ಯಮನ್ಯಾನು'' ಎಂದು ಆ ಮನುಷ್ಯನು ಸಾಷ್ಟಾಂಗ ವಾಗಿ ಎರಗಿದನು. ಶಿವಾಜಿಯು ಆತುರದಿಂದ ಯಮನ್ಯಾನನ್ನು ಪುರಂದರಗಡ ವರ್ತಮಾನ ವೇನೆಂದು ಕೇಳುತ್ತಿರಲು, ಯಮನ್ಯಾನು—''ಮಹಾರಾಜರೇ, ನಾಳೆ ಮಧ್ಯರಾತ್ರಿಯಲ್ಲಿ ಶ್ರೀಧರಸ್ವಾಮಿಗಳನ್ನು ದುರ್ಗದ ಗೋಡೆಯಮೇಲಿಂದ ಕೆಳಗೆ ಮಾಡಬೇಕೆಂದು ನಿರ್ಧಾರ ವಾಗಿರುತ್ತದೆ,'' ಎಂದು ಹೇಳಿದನು. ಕೂಡಲೆ ಶಿವಾಜಿಯು ''ನಿಮಗೆ ಎಲ್ಲ ಹಾದಿಯಲ್ಲಿ ಹೇಳುತ್ತೇನೆ''. ಎಂದು ನುಡಿಯುತ್ತ, ಚಟ್ಟನೆ ಕುದುರೆಯನ್ನು ಹತ್ತಿ ಓಡಿಸುತ್ತ ನಡೆದನು. ಕೂಡಲೆ ಅವನ ಅನುಯಾಯಿಗಳೂ ತಮ್ಮ ತಮ್ಮ ಕುದುರೆಗಳನ್ನು ವೇಗದಿಂದ ಬಿಟ್ಟರು.

# ಬಂಧವಿಮೋಚನ

ಮೇಲಿನ ಪ್ರಕರಣದಲ್ಲಿ ಹೇಳಿದ ದಿವಸವೇ ಸಂಜೆಯ ಮುಂದೆ ಒಬ್ಬ ಕೊರವರ ಮುದುಕನೂ, ಮುದುಕೆಯೂ ಒಂದೊಂದು ಹುಲ್ಲುಹೊರೆಯನ್ನು ಹೊತ್ತುಕೊಂಡು ಪುರಂದರ ಗಡದ ನೆರೆಯ ಹಳ್ಳಿಯೊಳಗೆ ಮಾರುವದಕ್ಕಾಗಿ ಬಂದರು. ತಮ್ಮ ಹೊರೆಯನ್ನು ಹಾಕಿಸಿಕೊಳ್ಳರೆಂದು, ಅವರು ಒಮ್ಮೊಮ್ಮೆ ಜನರನ್ನು ಅಂಗಲಾಚಿ ಬೇಡಿಕೊಳ್ಳುವರು; ಒಮ್ಮೊಮ್ಮೆ–ನಮ್ಮ ಮುದುಕರ ಹೊರೆಗಳನ್ನು ಹಾಕಿಸಿಕೊಳ್ಳದೆ ಕಣ್ಣಿನಿಂದ ನೋಡುವಿರಾ! ಹೊತ್ತು ಮುಣುಗುತ್ತ ಬಂತು, ಬಡವರು ತಿರುಗಿ ತಿರುಗಿ ಸಾಯುತ್ತೇವೆ, ಎಂದು ಜನರ ಮೇಲೆ ಹರಿಹಾಯುವರು. ಅವರ ವೇಷಗಳು ವರ್ಣಿಸುವ ಹಾಗಿದ್ದವು. ಮುದುಕಿಯ ಹರಕಸೀರೆಯು ಸುತ್ತಿಕೊಳ್ಳಲಿಕ್ಕೇ ಸಾಲುವಹಾಗಿದ್ದಿಲ್ಲ, ಆಕೆ ಸೆರಗು ಹೊದ್ದುಕೊಳ್ಳುವದಂತು ಒತ್ತಟ್ಟಿಗೆ ಉಳಿಯಿತು. ಆಕೆಯ ಕುಪ್ಪಸವು ಹಿಮ್ಮಗ್ಗಲು ಹರಿದಿತ್ತು, ತೊಟ್ಟಿದ್ದ ಆ ಕರೇಕುಪ್ಪಸವು ಕಾಣದಷ್ಟು ಆಕೆಯು ಕಪ್ಪು ಇದ್ದಳು. ಮುದುಕನು ಒಂದು ಕೈಯಲ್ಲಿ ಕೋಲನ್ನು ಹಿಡಕೊಂಡು, ತಲೆಯಮೇಲೆ ಒಂದು ದೊಡ್ಡ ಹುಲ್ಲಹೊರೆಯನ್ನು ಹೊತ್ತಿದ್ದನು. ಆತನು ಮುಂಡೆದಿರುಗಿದ ಹುರಿಕಟ್ಟಿನ ಮನುಷ್ಯನಂತೆ ತೋರುತ್ತಿದ್ದರೂ, ಅವನು ಮುದುಕನೇ ಆಗಿದ್ದನು. ಮೈಮೇಲೆ ಲಂಗೋಟಿಯ ಹೊರತು ಉಳಿದ ವಸ್ತ್ರಗಳೇನೂ ಇದ್ದಿಲ್ಲ. ತಲೆಯು ತಕ್ಕಮಟ್ಟಿಗೆ ಚೆನ್ನಾಗಿ ಬೆಳೆದಿತ್ತು. ಮುದುಕನು ಕುತ್ತಿಗೆ ಕುಸಿಯುವಷ್ಟು ದೊಡ್ಡ ಹೊರೆಯನ್ನು ಹೊತ್ತಿದ್ದನು. ಹೊತ್ತು ಮುಣುಗಿ ಕತ್ತಲು ಬೀಳಹತ್ತಿತು; ಆದರೂ ಅವರ ಹುಲ್ಲ ಹೊರೆಗಳು ಖರ್ಚು ಆಗಲಿಲ್ಲ. ಆಗ ಮುದುಕೆಯು ತನ್ನ ಗಂಡನನ್ನು ಕುರಿತು–ನಡೆ, ದುರ್ಗದ ಮೇಲೆ ಬೇಕಾದಷ್ಟು ಹುಲ್ಲುಹಾಕಿಸಿಕೊಳ್ಳುತ್ತಾರೆ, ಅಲ್ಲಿಗೆ ಹೋಗಿ ಹಾಕೋಣ, ಅನ್ನಲು, ಮುದುಕನು ಕೂಡಲೆ ತನ್ನ ಹೊರೆಯನ್ನು ಕೆಳಗೆ ಚಲ್ಲಿಕೊಟ್ಟು ಕವಕ್ಕನೆ ಮುದುಕೆಯ ಮೈಮೇಲೆ ಹೋಗಿ—ಥೂ ರಂಡೇಮಗಳೆ, ನಾಲ್ಕು ಹಳ್ಳಿಯ ತಿರುಗಿಸಿ ಜೀವಾಹಿಂಡಿದಿ. ಈಗೇನೋ ದುರ್ಗವನ್ನು ಏರಬೇಕಂತೆ, ಅನ್ನಲು, ಆ ಗಂಡಹೆಂಡಿರಲ್ಲಿ ಜಗಳಕ್ಕೆ ಆರಂಭವಾಯಿತು. ಈ ಮೋಜನ್ನು ನೋಡುವದಕ್ಕಾಗಿ ಜನರು ನೆರೆದರು. ಮುದುಕೆಯು ದುರ್ಗವನ್ನು ಏರಬೇಕೆನ್ನುವಳು, ಮುದುಕನು ಇಲ್ಲಿಯೇ ಇರೋಣವೆನ್ನುವನು; ಕಡೆಗೆ ಮುದುಕಿಯು ತಾನೊಬ್ಬಳೇ ಹೊರೆ ಹೊತ್ತುಕೊಂಡು ದುರ್ಗವನ್ನು ಏರಹತ್ತಿದಳು. ಇತ್ತ ಮುದುಕನು ಹೆಂಡತಿಯನ್ನು ಬಾಯಿಗೆ ಬಂದಹಾಗೆ ಬೈಯುತ್ತ ಗೌಡರ ಮನೆಯ ಮುಂದೆ ಹೊರೆಯಿಟ್ಟುಕೊಂಡು ಉಶ್ಶೆಂದು ಕುಳಿತುಕೊಂಡನು. ಸಂಜೆಯ ಹೊತ್ತಿನಲ್ಲಿ ದುರ್ಗದೊಳಗೆ ಮುದುಕಿಯನ್ನು ಯಾರು ಬಿಡಬೇಕು? ಆದರೆ ಹೋಗಿಯೇ ತೀರೇನೆಂಬ ನಿಶ್ಚಯದಿಂದ ಹೊರಟಿದ್ದ ಆ ಮುದುಕಿಯು ದುರ್ಗದ ಬುಡಕ್ಕೆ ಹೋಗಲು, ಕಾವಲುಗಾರನು ಆಕೆಯನ್ನು ತಡೆದನು. ಆಗ ಮುದುಕಿಯು ತನ್ನ ಭಾಷೆಯಿಂದ ಬಾಯಿಗೆಬಂದ ಹಾಗೆ ಬೈಯುತ್ತ ಮುಂದಕ್ಕೆ ಸಾಗಹತ್ತಿದಳು. ಹೆಂಗಸು, ಮೇಲೆ ಮುದುಕಿಯು; ಇಷ್ಟಾಗಿ ಬಾಯಿ ಹಗುರು; ಅಂಥವಳನ್ನು ಯಾರು

ತಡವಬೇಕು? ಕಾವಲುಗಾರನು ಹೊರದೂಡುವದಕ್ಕೆ ಸ್ವಲ್ಪ ಸಂಕೋಚಪಡಲು, ಮುದುಕಿಯು ಮುಂದಕ್ಕೆ ಸಾಗಿಬಿಟ್ಟಳು. ಹೀಗೆ ಒಂದು ಬಾಗಿಲು ದಾಟಿದಳು; ಎರಡು ಬಾಗಿಲು ದಾಟಿದಳು; ದಾಟುತ್ತ ದಾಟುತ್ತ ಕಡೆಯ ಬಾಗಿಲಿಗೆ ಹೋಗಲು, ಅಲ್ಲಿಯ ಕಾವಲುಗಾರನು ಮುದುಕೆಯನ್ನು ರಂಡೆ-ಮುಂಡೆ ಎಂದು ಬೈಯುತ್ತ ರಟ್ಟೆಯ ಹಿಡಿದು ದೂಡಹೋದನು; ಆದರೆ ಗಟ್ಟಿಗಳಾದ ಮುದುಕಿಯು ಬೈಗಳ ಮಳೆ ಸುರಿಸಿ, ಅತ್ತು ಕರೆದು, ರಂಬಾಟಮಾಡಿ ಕಾವಲುಗಾರನನ್ನು ಗಾಬರಿಮಾಡಿಬಿಟ್ಟಳು; ಆದರೆ ಹೊರೆಯನ್ನು ಕೆಳಗೆ ಚಲ್ಲಲಿಲ್ಲ, ಮುಂದಕ್ಕೆ ಹೆಜ್ಜೆ ಇಡುವದನ್ನು ಬಿಡಲಿಲ್ಲ, ಕಾವಲುಗಾರನು ಇದೆಲ್ಲಿಯ ಅರಿಷ್ಟವೆಂದು ಆಕೆಯನ್ನು ಬಿಟ್ಟುಬಿಟ್ಟನು. ಮುದುಕಿಯು ನೆಟ್ಟಗೆ ಅಶ್ವಶಾಲೆಗೆ ಹೋಗಿ, ಅಲ್ಲಿ ತನ್ನ ಹೊರೆಯನ್ನು ಹಾಕಿ ರೊಕ್ಕ ಇಸಕೊಂಡು, ಸಂಜೆಗೆ ಎರಡು ರೊಟ್ಟಿಗಳನ್ನು ಬೇಡಿಕೊಂಡು ಅಲ್ಲಿಯೇ ಅಶ್ವಶಾಲೆಯ ಬಳಿಯ ಹುಲ್ಲಿನ ಬಣವಿಯ ಹತ್ತಿರ ಮಲಗಿಕೊಂಡಳು. ಅತ್ತ ಮುದುಕನು ಗೌಡರಿಗೆ ಹೊರೆಹಾಕಿ ಸಂಜೆಯ ಊಟಕ್ಕಾಗಿ ರೊಟ್ಟಿ ಅಂಬಲಿಯನ್ನಷ್ಟು ಇಸಕೊಂಡು, ಬೇಡಬೇಡೆಂದರೂ ಇಲ್ಲದ ಸಥಿಯಿಂದ ಗೌಡರ ಹುಲ್ಲ ಬಣಿವೆಯ ಬಳಿಯಲ್ಲಿಯೇ ಪವಡಿಸಿದನು.

ಇದೇ ದಿನ ಮಧ್ಯರಾತ್ರಿಯಲ್ಲಿ ಶ್ರೀಧರಸ್ವಾಮಿಗಳನ್ನು ದುರ್ಗದ ಮೇಲಿಂದ ದೂಡಿ ಕೊಲ್ಲಬೇಕೆಂಬ ಶಿಕ್ಷೆಯು ವಿಧಿಸಲ್ಪಟ್ಟಿತ್ತು, ಈ ಮಾತು ಬಹುಜನರಿಗೆ ಗೊತ್ತಿದ್ದಿಲ್ಲ, ರಾತ್ರಿಯಾದಂತೆ ಮುಸಲ್ಮಾನ ಕಾವಲುಗಾರರು ಗೋಸಾವಿಯನ್ನು ಪರಿಪರಿಯಾಗಿ ಪೀಡಿಸಹತ್ತಿದರು; ಬಾಯಿಗೆ ಬಂದ ಹಾಗೆ ಬೈಯಹತ್ತಿದರು. ಈತನ ಮುಖದಲ್ಲಿ ಗೋಮಾಂಸವನ್ನು ಹಾಕಿ ಕುಲಗೆಡಿಸುವ ಕಾಲವು ಸಮೀಪಿಸಿತೆಂದು ತಮ್ಮೊಳಗೆ ಮಾತಾಡಿಕೊಳ್ಳಹತ್ತಿದರು. ಇದರಿಂದ ಶ್ರೀಧರಸ್ವಾಮಿಗಳಿಗೆ ಸಂತಾಪವಾಗುತ್ತಿತ್ತು; ಆದರೆ ಅವರ ಕೈಯೊಳಗಿನ ಯೋಗದಂಡವನ್ನು ಕೂಡ ಕಸುಕೊಂಡದ್ದರಿಂದ, ಹೊತ್ತಿಗೆ ಬೇಕಾದೀತೆಂದು ಗುಪ್ತವಾಗಿ ಕಾದಿಟ್ಟಿದ್ದ ಕಠಾರಿಯೂ ಕೈಬಿಟ್ಟು ಹೋಗಲು, ಸ್ವಾಮಿಗಳಿಂದ ಯಾವ ಕಾರ್ಯವೂ ಆಗುವಹಾಗಿದ್ದಿಲ್ಲ. ಅವರು ಸುಮ್ಮನೆ ತಲೆ ಬಾಗಿಸಿಕೊಂಡು ಕುಳಿತು-ಶಿವಾಜಿಯಿಂದ ತನ್ನನ್ನು ಬಿಡಿಸಿಕೊಳ್ಳುವದರ ಸಲುವಾಗಿ ಯಾವ ಪ್ರಯತ್ನವೂ ಮಾಡಲ್ಪಡದ್ದಕ್ಕಾಗಿ ಆಶ್ಚರ್ಯಪಡುತ್ತಲಿದ್ದರು. ಕಾವಲುಗಾರರ ಮಾತುಗಳ ಕಡೆಗೆ ಅವರ ಲಕ್ಷವೇ ಇದ್ದಿಲ್ಲವೆಂದು ಹೇಳಬಹುದು. ಒಬ್ಬ ಮುಸಲ್ಮಾನ ಸಿಪಾಯಿಯು ಸ್ವಾಮಿಗಳ ಮೈಮೇಲೆ ಬೀಳುವಂತೆ ಬುದ್ಧಿಪೂರ್ವಕವಾಗಿ ಉಗುಳಿದನು; ಅದರಿಂದ ಮಹಾರಾಷ್ಟ್ರ ಸಿಪಾಯಿಗೂ, ಮುಸಲ್ಮಾನ ಸಿಪಾಯಿಗಳಿಗೂ ಬಾಯಿಹತ್ತಿ ಕೈಗೆ ಕೈಹತ್ತುವ ಪ್ರಸಂಗವೂ ಬಂದಿತು! ಆದರೆ ಬಹುಜನ ಮುಸಲ್ಮಾನ ಸಿಪಾಯಿಗಳ ಮುಂದೆ ಒಬ್ಬ ಮಹಾರಾಷ್ಟ್ರ ಸಿಪಾಯಿಯ ಆಟವೇನು ನಡೆಯಬೇಕು? ಮಧ್ಯರಾತ್ರಿಯು ಸಮೀಪಿಸಿದಂತೆ ಮುಸಲ್ಮಾನ ಸಿಪಾಯಿಗಳ ಚೇಷ್ಟೆಯು ಹೆಚ್ಚು ಆಯಿತು. ಸ್ವಲ್ಪ ಹೊತ್ತಿನ ಮೇಲೆ ವೃದ್ಧ ಕಿಲ್ಲೇದಾರನೂ, ಬೇರೆ ಇಬ್ಬರು ಮೂವರೂ, ಶ್ರೀಧರಸ್ವಾಮಿಯು ಇದ್ದ ನೆಲಮನೆಯೊಳಗಿನ ಕತ್ತಲೆಯ ಕೋಣೆಯ ಕಡೆಗೆ ಬಂದರು. ಕಿಲ್ಲೇದಾರನ ಮೋರೆಯು

ತೀರ ಬಾಡಿತ್ತು, ಆ ಮೋರೆಯ ಮೇಲೆ ಪ್ರೇತಕಳೆಯೇ ಬಂದಿತ್ತೆಂದು ಹೇಳಬಹುದು. ಆತನು ಒಂದೊಂದು ಹೆಜ್ಜೆಯನ್ನು ಇಡುತ್ತ ನಿರ್ವಾಹವಿಲ್ಲದೆ ಬರುತ್ತಿದ್ದನು. ನಡನಡುವೆ ನಿಟ್ಟುಸಿರುಗಳನ್ನು ಬಿಡುತ್ತಿದ್ದನು. ನಿಟ್ಟುಸಿರುಗಳ ಸಂಗಡ ಆತನ ಪ್ರಾಣವೇ ಹಾರುವ ಹಾಗೆ ತೋರುತ್ತಿತ್ತು, ಆತನು ತನ್ನ ನೆರೆಯವರ ಸಂಗಡ ಒಂದು ಮಾತನ್ನು ಕೂಡ ಆಡದೆ ಸುಮ್ಮನೆ ನಡೆದಿದ್ದನು! ಆದರೆ ಸೆರೆಮನೆಯು ತೀರ ಸಮೀಪಕ್ಕೆ ಬಂದು, ಕಾವಲುಗಾರನು ಬಾಗಿಲು ತೆರೆಯುತ್ತಿರಲು, ಆತನು ತನ್ನ ಸಂಗಡ ಬಂದಿದ್ದ ಕುಶಾಬನನ್ನು ಕುರಿತು—''ಕುಶಬಾ, ಗೋಸಾವಿಗೆ ಏನಾದರೂ ಹೇಳತಕ್ಕದ್ದು ಕೇಳತಕ್ಕದ್ದು ಇದ್ದರೆ ನೀನೇ ಹೇಳು, ನೀನೇ ಕೇಳು; ನನ್ನ ಕೈಯಿಂದ.... ಎಂದು ನುಡಿಯುತ್ತಿರುವಾಗ, ಆತನ ಮುಖದಿಂದ ಅಕ್ಷರಗಳು ಹೊರಡದಾದವು. ಪ್ರತ್ಯಕ್ಷಬೆನ್ನಿನಲ್ಲಿ ಬಿದ್ದ ತಮ್ಮನ ದುರ್ದಸೆಯನ್ನು ನೋಡಿ ಯಾರಿಗೆ ದುಃಖವಾಗಲಿಕ್ಕಿಲ್ಲ? ಅಷ್ಟರಲ್ಲಿ ಸೆರೆಮನೆಯ ಬಾಗಿಲು ತೆರೆಯಲು, ಕಿಲ್ಲೇದಾರನ ಸಂಗಡ ದೀವಟಿಗೆಯವನು ಒಳಗೆ ಬಂದದ್ದರಿಂದ, ಬಾಗಿಲ ಸಮೀಪದಲ್ಲಿಯೇ ಕುಳಿತಿದ್ದ ಶ್ರೀಧರ ಸ್ವಾಮಿಯ ಮೇಲೆ ಪ್ರಕಾಶವು ಬಿದ್ದಿತು. ಆಗ ಗೋಸಾವಿಯ ಮುಖವನ್ನು ನೋಡಿ ಕಿಲ್ಲೇದಾರನಿಗೆ ಹೊಟ್ಟೆಯಲ್ಲಿ ಮತ್ತಿಷ್ಟು ಕಸಿವಿಸಿಯಾಯಿತು. ತ್ರಸ್ತವೂ, ಕ್ಷುಬ್ಧವೂ, ಕಿಂಚಿತ್ ಖಿನ್ನವೂ ಆಗಿದ್ದ ಗೋಸಾವಿಯ ಮುಖಮುದ್ರೆಯು ಬೆಳಕಿನಲ್ಲಿ ಸ್ಪಷ್ಟವಾಗಿ ಕಾಣುತ್ತಿತ್ತು, ಅದನ್ನು ನೋಡನೋಡುತ್ತ ಕಿಲ್ಲೇದಾರನ ಕಣ್ಣಲ್ಲಿ ನೀರುಗಳು ಬಂದವು; ಆದರೆ ಆತನು ಅವನ್ನು ತೋರಗೊಡಲಿಲ್ಲ. ಅತ್ತ ಗೋಸಾವಿಯು ತನ್ನ ಕೋಣೆಯಲ್ಲಿ ಬಂದ ಜನರನ್ನು ನೋಡಿದನು ಮಾತ್ರ, ಪಿಟ್ಟೆಂದು ಮಾತಾಡಲಿಲ್ಲ. ಆಗ ಕುಶಾಬನು ಮುಂದಕ್ಕೆ ಬಂದು–ಯಾಕೆ ಗೋಸಾವಿಯವರೇ, ಈಗ ನಿಮಗೆ ಪ್ರಾಣಾಂತ್ಯದ ಸಮಯವು ಒದಗಿರುತ್ತದೆ. ಈಗಾದರೂ ಮಾತಾಡುವಿರೋ? ಇಲ್ಲದಿದ್ದರೆ ಸುಮ್ಮನೆ ಪ್ರಾಣವನ್ನು ಕಳಕೊಂಡೀರಿ, ಮತ್ತೆ ಏನೂ ಇಲ್ಲ ಅನ್ನಲು, ಗೋಸಾವಿಯ ಮೌನವ್ರತವು ಯಥಾಸ್ಥಿತವಾಗಿ ಇತ್ತು, ಮತ್ತೆ ಕುಶಾಬನು—ನೋಡಿರಿ, ನೀವು ಗೋಸಾವಿಗಳು. ಈ ದಿನ ತಮ್ಮ ದುರ್ಗದ ಮೇಲೆ ಸುಮ್ಮನೆ ಒಬ್ಬ ಸನ್ಯಾಸಿಯ ವಧೆಯಾಗುವದೆಂದು ಕಿಲ್ಲೇದಾರರಿಗೆ ಬಹಳ ವ್ಯಸನವಾಗಿದೆ. ಈಗ ಎರಡು ದಿನಗಳಿಂದ ಅವರಿಗೆ ನಿದ್ದೆ ಬಂದಿಲ್ಲ. ನೀವು ಏನಾದರೂ ನಿಜವಾದ ಸಂಗತಿಯನ್ನು ಹೇಳಿದರೆ, ಅವರು ಖಾನನಲ್ಲಿ ಮಧ್ಯಸ್ಥಿಯನ್ನು ಮಾಡಿ ನಿಮ್ಮನ್ನು ಬಿಡಿಸಬಹುದು. ನಿಮಗೆ ನಿಜವಾದ ಸಂಗತಿಯು ಗೊತ್ತಿಲ್ಲದಿದ್ದರೆ, ಸುಳ್ಳೇ ಯಾರದಾದರೂ ನಾಲ್ಕು ಹೆಸರುಗಳನ್ನು ಹೇಳಿ ಪಾರಾದರಾಯಿತು! ಆದರೆ ನಮ್ಮ ಪುರಂದರಗಡದಲ್ಲಿ ವ್ಯರ್ಥವಾಗಿ ನಿಮ್ಮ ವಧೆಯಾಗುವದು ಸರಿಯಲ್ಲ, ಹು! ಯಾಕೆ, ಹೇಳಿರಿ; ಏನಾದರೂ ಹೇಳಿರಿ. ಹೀಗೆ ಸುಮ್ಮನೆ ಕುಳಿತುಕೊಳ್ಳುವದರಲ್ಲಿ ಪ್ರಯೋಜನವೇನು? ನಾಳೆ ಹೇಳುವೆನು ಎಂದು ದಿವಸವನ್ನಾದರೂ ಹಾಕಿರಿ.

ಇಷ್ಟು ಮಾತಾಡಿದರೂ ಗೋಸಾವಿಯು ಸುಮ್ಮನೆ ನೋಡುತ್ತ ಕುಳಿತಿದ್ದನಲ್ಲದೆ, ಒಂದು ತುಟಿಯನ್ನು ಎರಡು ಮಾಡಲಿಲ್ಲ. ಮಧ್ಯರಾತ್ರಿಯ ಕಾಲವು ಸಮೀಪಿಸಿದಂತೆ ಅವನು

ಹೆಚ್ಚು ಹೆಚ್ಚು ಶಾಂತನಾಗುತ್ತಿರುವಂತೆ ತೋರಿತು. ಕುಶಾಬನು ತಿರುತಿರುಗಿ ಮೂರುಮೂರು ಸಾರೆ—ಗೋಸಾವಿಯವರೇ, ನೀವು ಏನೂ ಮಾತಾಡದಿದ್ದರೆ ಪರಿಣಾಮವು ನೆಟ್ಟಗಾಗುವ ಹಾಗಿಲ್ಲ; ಆದ್ದರಿಂದ ನೀವು ಏನಾದರೂ ಮಾತಾಡಿರಿ; ಇಲ್ಲದಿದ್ದರೆ ಖಾನನು ಸ್ವತಃ ಬಂದು ನಿಮ್ಮನ್ನು ದುರ್ಗದಿಂದ ಕೆಳಗೆ ದೂಡುವ ಘೋರಕರ್ಮವನ್ನು ಕೊನೆಗಾಣಿಸುವವನಿದ್ದಾನೆ, ಎಂದು ಹೇಳಿದನು. ಆದರೆ ಅದರಿಂದ ಪ್ರಯೋಜನವೇನೂ ಆಗಲಿಲ್ಲ. ಕುಶಾಬನ ಚತುರೋಪಾಯ ಗಳೆಲ್ಲ ವ್ಯರ್ಥವಾದವು. ಕಿಲ್ಲೇದಾರನು ಬಂದೊದಗಿದ್ದ ಸಂಕಟದ ಮಹತ್ವವನನ್ನು ಬೇರೆ ಬೇರೆ ಮುಖಮುದ್ರೆಗಳಿಂದ ಗೋಸಾವಿಗೆ ತಿಳಿಸಿದ್ದು ವ್ಯರ್ಥವಾಯಿತು. ಅವರಿಬ್ಬರ ಉಪಾಯಗಳೆಲ್ಲ ತೀರಿ ''ಇದರ ಮೇಲೆ ನಿಮ್ಮ ದೈವವು, ನಾವು ಮಾಡುವದೇನು'' ಎಂದು ಅವರು ಅಲ್ಲಿಂದ ಹೊರಟುಹೋಗುವವರಿದ್ದರು; ಆದರೆ ಆ ವೃದ್ಧ ಕಿಲ್ಲೇದಾರನ ಕಾಲುಗಳು ಏಳಲೊಲ್ಲವು. ಆತನ ಕಣ್ಣುಗಳೊಳಗಿಂದ ದುಃಖಾಶ್ರುಗಳ ಎರಡು ಹನಿಗಳು ಉದುರಲು, ಕೂಡಲೆ ಅವನ್ನು ಯಾರೂ ಕಾಣದಂತೆ ಆತನು ಒರಿಸಿಕೊಂಡನು. ಆದರೆ ಗೋಸಾವಿಯ ಕಣ್ಣಿಗೆ ಆ ಹನಿಗಳು ಬೀಳದೆ ಹೋಗಲಿಲ್ಲ. ಅವನ್ನು ನೋಡಿ ಆತನು ಕಣ್ಣುಗಳೊಳಗೂ ನೀರುಗಳುದುರುವಂತೆ ತೋರಿತು. ಕಿಲ್ಲೇದಾರನು ಬಹು ಕಷ್ಟದಿಂದ ಕಾಲುಗಳನ್ನು ಕಿತ್ತುತ್ತ ಹೋಗಹತ್ತಿದನು. ಸೆರೆಮನೆಯ ಬಾಗಿಲನ್ನು ದಾಟುವದರೊಳಗಾಗಿ ಆತನು ಹತ್ತು ಸಾರೆ ತಿರುತಿರುಗಿ ಗೋಸಾವಿಯ ಮುಖವನ್ನು ನೋಡಿರಬಹುದು. ಆದರೆ ಜೀವವು ನಿಲ್ಲದಹಾಗಾದದ್ದರಿಂದ ಕಿಲ್ಲೇದಾರನು ತಡೆದುನಿಂತು ಗೋಸಾವಿಯನ್ನು ಕುರಿತು—ಹಾಗಾದರೆ ಏನಂದಹಾಗಾಯಿತು? ಜೀವದ ಹಂಗು ಇಲ್ಲವೇ ಇಲ್ಲವೇನು? ಖಾನನು ಅಪ್ಪಣೆಮಾಡಿರುವನು, ಆತನಲ್ಲಿ ದಯಾದಾಕ್ಷಿಣ್ಯಗಳೇನೂ ಇಲ್ಲವಾದ್ದರಿಂದ ಹೇಳುತ್ತೇನೆ; ಹೇಳಿರಿ–ಹೇಳಿರಿ; ಬೇಕಾದರೆ ಒಂದೆರಡು ದಿವಸಗಳ ಅವಧಿಯನ್ನು ಬೇಡಿಕೊಳ್ಳುತ್ತೇನೆ. ''ಆತನು ನಾಳೆ ಎಲ್ಲ ಹೇಳುತ್ತಾನೆಂದು'' ಖಾನನ ಮುಂದೆ ಹೇಳುತ್ತೇನೆ, ಎಂದು ಮಾತಾಡು ವಷ್ಟರಲ್ಲಿ ಗೋಸಾವಿಯು ಆತನ ಕಡೆಗೆ ಮೋರೆತಿರುವಿ ತಟ್ಟನೆ ಗಟ್ಟಿಯಾಗಿ ನುಡಿದನೇ ನಂದರೆ—ಬೇಡ ಬೇಡ; ಈವೊತ್ತು ಹೇಳುವದೇ ನಾಳೆ; ನಾಳೆ ಹೇಳುವದೇ ನಾಡದು; ನಾಡದು ಹೇಳುವದೇ ಆಚೆಯ ನಾಡದು; ಆದ್ದರಿಂದ ನೀವು ಒಂದು ಅಕ್ಷರವನ್ನು ಕೂಡ ಖಾನನ ಮುಂದೆ ನುಡಿಯಬೇಡಿರಿ; ಹೇಳುವಂಥ ಸಂಗತಿಯೇ ನನಗೆ ಗೊತ್ತಿಲ್ಲದಬಳಿಕ ನಾನು ಹೇಳಲಾದರೂ ಏನು? ಇನ್ನು ತಿರುಗಿಮುರುಗಿ ಮರಣದ ಭಯವು? ಈವೊತ್ತಿನವರೆಗೆ ನನ್ನಂಥವರು ಸ್ವಲ್ಪ ಜನರು ಸತ್ತಿರುವರೆ? ಅಂದಬಳಿಕ ನನ್ನ ಮರಣದ ಹಂಗೇನು? ಆ ಖಾನನಿಗೆ ಬಂದು ಬೇಕಾದದ್ದು ಮಾಡೆಂದು ಹೇಳಿರಿ. ನಾನು ಸನ್ಯಾಸಿಯು! ಅಂದಬಳಿಕ ಮೃತ್ಯುವಿಗೆ ಹೆದರುವೆನೆ? ತಿರುಗಿ ಕೇಳಿದರೆ, ಮೃತ್ಯುವೇ ನನಗೆ ಹೆದರಬೇಕಾದೀತು!!

ಈ ಮೇರೆಗೆ ನುಡಿದು ಶ್ರೀಧರಸ್ವಾಮಿಯು ಸುಮ್ಮನಾದನು. ಕಟ್ಟ ಕಡೆಯಲ್ಲಿ ಕುಶಾಬನು ಉದ್ದುದ್ದ ಬೋಧಗಳನ್ನು ಮಾಡಿ ನಿರಾಶೆಪಟ್ಟನು. ಕಿಲ್ಲೇದಾರನು ಅರ್ಥಪೂರ್ಣ ದೃಷ್ಟಿಯಿಂದ ಮಾಡಿದ ಅಲ್ಪಶಬ್ದಗಳಬೋಧವೂ ವ್ಯರ್ಥವಾಯಿತು. ಬಳಿಕ ಉಪಾಯ

ತೋರದ್ದರಿಂದ ಅವರಿಬ್ಬರು ಹೊರಟುಹೋದರು. ಸ್ವಲ್ಪ ಹೊತ್ತಿನ ಮೇಲೆ ಸರ್ಜೇಖಾನನು ನಾಲ್ಕೈದು ಜನರೊಡನೆ ಆ ಕಿಲ್ಲೇದಾರನನ್ನೂ, ಆತನ ಸಂಗಡ ಬಂದಿದ್ದ ಇಬ್ಬರನ್ನೂ ಕೂಡಿಕೊಂಡು ಸೆರೆಮನೆಗೆ ಬಂದನು. ಖಾನಸಾಹೇಬರು ಬಂದದ್ದರಿಂದಂತು ಕಾವಲುಗಾರರ, ಹಾಗು ದೀವಟಿಗೆಯವರ ಗಡಬಿಡಿಗೆ ಕಳೆಯೇರಿತು. ತಟ್ಟನೆ ಕೋಣೆಯ ಬಾಗಿಲನ್ನು ಮತ್ತೆ ತೆಗೆದರು. ಖಾನನ ಸಲುವಾಗಿ ತಂದಿದ್ದ ಉಚ್ಚಾಸನದ ಮೇಲೆ ಆತನು ಕುಳಿತುಕೊಂಡನು. ಆತನ ಅಪ್ಪಣೆಯಾದ ಕೂಡಲೆ ಇಬ್ಬರು ಕೋಣೆಯೊಳಗೆ ಹೋಗಿ ಗೋಸಾವಿಯನ್ನು ಎಳತಂದರು. ಹೊರಗೆ ಎಳತರುವದಕ್ಕಿಂತ ಮೊದಲು ಒಬ್ಬ ಮುಸಲ್ಮಾನ ಕಾವಲು ಗಾರನು—''ಊಠವೇ ಊಠ, ಗುಸವಡ್ಯಾ'' ಎಂದು ಗೋಸಾವಿಯನ್ನು ಒದೆಯಲಿಕ್ಕೆ ಕಾಲನ್ನು ಎತ್ತಿದನು. ಆಗ ಗೋಸಾವಿಯು ಬೇಡಿಯಿಂದ ಬಿಗಿದಿದ್ದ ತನ್ನ ಕೈಯನ್ನು ಮೇಲಕ್ಕೆತ್ತಿ ಅವನ ಕಾಲಿಗೆ ಹೊಡೆದು ಎಲುಬನ್ನು ಮುರಿದುಬಿಟ್ಟನು. ಇಷ್ಟಾದಬಳಿಕ ಕೇಳುವದೇನು? ಉರಿಯುವದರಲ್ಲಿ ಹುಲ್ಲು ಹಾಕಿದ ಹಾಗಾಯಿತು; ಆದರೆ ಗೋಸಾವಿಯು ಅದನ್ನು ದರ್ದಿಗೆ ತರಲೇ ಇಲ್ಲ, ಆತನು ಧೀರವೂ, ಶಾಂತವೂ ಆದ ದೃಷ್ಟಿಯಿಂದ ನೋಡುತ್ತ ಗಾಂಭೀರ್ಯ ದಿಂದ ಹೆಜ್ಜೆಗಳನ್ನಿಕ್ಕುತ್ತ ಹೊರಗೆ ಬಂದನು. ಖಾನಸಾಹೇಬರು ಬಾಯಿಗೆ ಬಂದ ಹಾಗೆ ಆತನನ್ನು ಬೈಯಹತ್ತಿದರು; ಆದರೆ ಗೋಸಾವಿಯು ಅದನ್ನು ಲಕ್ಷಕ್ಕೇ ತರಲಿಲ್ಲ. ಆತನು ಮೇಲಿಂದಮೇಲೆ ಕಿಲ್ಲೇದಾರನನ್ನು ನೋಡುತ್ತಿದ್ದನು; ಯಾಕಂದರೆ, ಕಿಲ್ಲೇದಾರನ ಮೋರೆಯು ಈಗ ಕಪ್ಪುಬಡೆದು ಹೋಗಿತ್ತು, ಆತನ ಕಣ್ಣುಗಳು ದುಃಖಪೂರ್ಣವಾಗಿ ತೋರುತ್ತಿದ್ದವು. ತನ್ನ ಮೇಲೆ ಇಂಥ ಕಠಿಣ ಪ್ರಸಂಗ ಬಂದದ್ದಕ್ಕಾಗಿ ಈತನಿಗೆ ಇಷ್ಟು ವ್ಯಸನವಾಗಿದೆಯೆಂದು ಗೋಸಾವಿಯು ತಿಳಕೊಂಡನು. ಖಾನನು ಒಂದೇಸವನೆ ಒಟಗುಟ್ಟುತ್ತಲೇ ಇದ್ದನು. ಆತನು ''ಮಾತಾಡು ಮಾತಾಡು'' ಎಂದು ಇಪ್ಪತ್ತೈದು ಸಾರೆ ಗೋಸಾವಿಗೆ ಹೇಳಿದನು; ಆದರೆ ಗೋಸಾವಿಯ ಮುಖದಿಂದ ಒಂದು ಅಕ್ಷರವೂ ಹೊರಡಲಿಲ್ಲ. ಕಡೆಗೆ ಖಾನನು ಕೋಟೆಯ ಗೋಡೆಯತುದಿಗೆ ಗೋಸಾವಿಯನ್ನು ಎಳೆದೊಯ್ಯಲು ಅಪ್ಪಣೆಮಾಡಿದನು. ಆಗ ಇಬ್ಬರು ಮೂವರು, ಗೋಸಾವಿಯನ್ನು ಹಿಡಿದು, ಆ ಕೋಟೆಯ ತುದಿಯ ಕಡೆಗೆ ಕರೆದೊಯ್ಯ ಹತ್ತಿದರು. ಇಷ್ಟು ಹೊತ್ತಿಗೆ ಎಷ್ಟೋ ಜನರನ್ನು ಆ ಗೋಡೆಯಿಂದ ಕೆಳಗೆ ದೂಡಿಕೊಟ್ಟಿದ್ದರು. ಗೋಸಾವಿಯು ಸಮಾಧಾನದಿಂದ ನಡೆದಿದ್ದನು. ಆತನ ಮುಖ ಮುದ್ರೆಯಲ್ಲಿ ಸ್ವಲ್ಪ ವಾದರೂ ಹೆಚ್ಚುಕಡಿಮೆಯಾಗಲಿಲ್ಲ. ಆತನ ಮುಖದಿಂದ ''ಜಯ ರಘುವೀರ ಸಮರ್ಥ'' ''ಜಯ ಗುರುವರ್ಯ'' ಎಂಬ ನಾಮಘೋಷವು ಆಗುತ್ತಿತ್ತು. ಅಷ್ಟರಲ್ಲಿ ಗೋಡೆಯ ತುದಿಯಿಂದ ಎರಡು ಮೊಳದ ಮೇಲೆ ಆತನನ್ನು ನಿಲ್ಲಿಸಿದರು. ಆಗ ಖಾನನು ಮತ್ತೊಮ್ಮೆ ಗೋಸಾವಿಯ ಬಳಿಯಲ್ಲಿ ಬಂದು ತನ್ನ ಉದ್ಧಟವಾದ ವಾಣಿಯಿಂದ ನಾಲ್ಕಾರು ಉದ್ಧಟ ಮಾತುಗಳನ್ನು ಆಡಿ, ''ಹೇಳು–ಹೇಳು, ಹೇಳದಿದ್ದರೆ ಈದಿನ ನೀನು ಜೀವದಿಂದ ಉಳಿಯುವ ಹಾಗಿಲ್ಲ'' ಎಂದು ಗದರಿಸಿದನು. ಆಗ ಗೋಸಾವಿಯು ತಿರಸ್ಕಾರ ದೃಷ್ಟಿಯಿಂದ ಖಾನನನ್ನು ನೋಡಿದನು ಮಾತ್ರ; ಬಾಯಿಂದ ಒಂದು ಅಕ್ಷರವನ್ನೂ ಉಚ್ಚರಿಸಲಿಲ್ಲ. ಕಿಲ್ಲೇದಾರನು

ಖಾನನ ಬಳಿಯಲ್ಲಿಯೇ ನಿಂತುಕೊಂಡಿದ್ದನು. ಆತನ ಮನಸ್ಸಿನಲ್ಲಿ ದುಃಖದಾಯಕವಾದ ಹಲವು ವಿಚಾರಗಳು ಬರುತ್ತಿರುವಂತೆ ತೋರಿತು. ಏನಾದರೂ ಮಾತಾಡಲಿಕ್ಕೆ ಹಾತೊರೆಯುತ್ತಿದ್ದ ನಾಲಿಗೆಯನ್ನು ಆತನು ಬಹುಪ್ರಯಾಸದಿಂದ ಬಿಗಿದು ಹಿಡಿಯುತ್ತಿರುವಂತೆ ತೋರುತ್ತಿತ್ತು ಕಡೆಗೆ ಆತನಿಂದ ಸುಮ್ಮನಿರುವದು ಆಗಲೊಲ್ಲದು. ಈವರೆಗೆ ಬಿಗಿಹಿಡಿದಿದ್ದ ಮನಸ್ಸು ಒಮ್ಮೆಲೆ ಕೊಸರಿ ಏಳಲು, ಆತನು ಒಮ್ಮೆಲೆ ಸರ್ಜೀಖಾನನಿಗೆ ವಿನಯದಿಂದ ಕುರ್ನಿಸಾತನ್ನು ಮಾಡಿ ವಸ್ತ್ರದಿಂದ ಕೈಯನ್ನು ಕಟ್ಟಿಕೊಂಡು–ಹಜರತ್, ನೀವು ವ್ಯರ್ಥವಾಗಿ ಈ ಗೋಸಾವಿಯನ್ನು ಶಿಕ್ಷಿಸುತ್ತೀರಿ. ನಾನೂ, ಶಿವದೇವರಾಯರೂ, ನಮ್ಮ ಈ ಕುಶಾಬನೂ ಕೂಡಿ ಪರಿಪರಿಯಾಗಿ ವಿಚಾರಿಸಿದೆವು; ಆದರೆ ಗೋಸಾವಿಯ ಮುಖದಿಂದ ಒಂದು ಮಾತೂ ಹೊರಡಲಿಲ್ಲವು; ಆದ್ದರಿಂದ ಅರ್ಜಮಾಡಿಕೊಳ್ಳುವದೇನೆಂದರೆ, ಇಂದಿನವರೆಗೆ ಈ ಗುಡ್ಡದಲ್ಲಿ ಗೋಸಾವಿಗಳ ವಧೆಯು ಆಗದಿರುವಂತೆ, ಈ ದಿನವೂ ಆಗಬಾರದು. ಗೋಸಾವಿಯು ವೇಷಧಾರಿಯಾಗಿರದೆ, ನಿಜವಾದ ಗೋಸಾವಿಯೇ ಆಗಿರುತ್ತಾನೆಂಬಂತೆ ತೋರುತ್ತದೆ. ಇದರ ಮೇಲೆ ಸಾಹೇಬರ ಮರ್ಜಿಯು.

ಕಿಲ್ಲೇದಾರನ ಮುಖದಿಂದ ಮುಂದೆ ಶಬ್ದಗಳು ಹೊರಡದಾದವು. ಕೆಲವು ಶಬ್ದಗಳು ಹೊರಡಬೇಕೆಂದು ಅಲ್ಲಿಂದಲ್ಲಿಯೇ ಕುಗ್ಗುತ್ತಿದ್ದವು. ಆತನು ಒಂದೇಸವನೆ ಗೋಸಾವಿಯ ಮೋರೆಯನ್ನು ನೋಡುತ್ತ ನಿಂತುಕೊಂಡನು. ಸರ್ಜೀಖಾನನು ಕಿಲ್ಲೇದಾರನ ಮಾತುಗಳನ್ನು ಕೇಳಿ ತಿರಸ್ಕಾರದಿಂದ ಆತನನ್ನು ಕುರಿತು—ನೀವು ಹಿಂದುಗಳೆಲ್ಲರೂ ಒಂದೇ; ಆದರೆ ನಾನು ಇಂಥಾ ಗುಳಿಗೆಗಳಿಗೆ ಮರುಳಾಗುವವನಲ್ಲ! ನೀವೇ ಆಗಲಿ, ಈ ಶಿವದೇವರಾಯರೇ ಆಗಲಿ ಇಂಥ ಪುಂಡ ಜನರ ಬೆನ್ನು ಕಟ್ಟಲಿಕ್ಕೆ ಹವಣಿಸುವವರೇ, ನಾನು ಅದೇನು ಕೇಳುವಹಾಗಿಲ್ಲ. ಈ ಗೋಸಾವ್ಯಾನಿಗೆ ಎಲ್ಲ ಸಂಗತಿಯು ಗೊತ್ತಿದ್ದು, ಇವನು ಹೇಳುವದಿಲ್ಲೆಂದು ನಾನು ಮನಗಂಡಿದ್ದೇನೆ. ಬರೇ ಗೊತ್ತಿರುವದೇ ಯಾಕೆ? ಆ ಪುಂಡ ಶಿವಾಜಿಯು ಈತನನ್ನು ಆ ಗುಡಿಯಲ್ಲಿ ಕಾವಲುಗಾರನನ್ನಾಗಿ ಇಟ್ಟಿದ್ದಾನೆ. ಹಾಗಲ್ಲದಿದ್ದರೆ ಈತನ ಯೋಗದಂಡದಲ್ಲಿ ಕಠಾರಿಯು ಗುಪ್ತವಾಗಿ ಇರುವದಕ್ಕೆ ಕಾರಣವೇನು? ನಿಜವಾದ ಗೋಸಾವಿಗಳ ಲಕ್ಷಣವೇ ಇದು? ಈವೊತ್ತಿನ ಮಿತಿಗೆ ನೀವು ಮಹಾರಾಷ್ಟ್ರ ಸರದಾರರೂ, ಕಿಲ್ಲೇದಾರರೂ ಹಜರತ್ತರ (ಬಾದಶಹರ) ಬಳಿಯಲ್ಲಿ ನಂಬಿಗೆಯನ್ನು ಕಾಯ್ದುಕೊಂಡು, ನಮ್ಮಂಥವರನ್ನು ಸಂಬಳದ ಆಳುಗಳಂತೆ ನಡಿಸಿಕೊಳ್ಳುತ್ತ ಇಂಥ ಪುಂಡ ಜನರಿಗೆ ಬೇಕಾದ ಹಾಗೆ ಪುಂಡಾಟಿಕೆ ಮಾಡಲಿಕ್ಕೆ ಆಸ್ಪದ ಕೊಡುತ್ತೀರಿ, ಅದರ ಫಲವೇ ಇದು. ಈ ಶಿವದೇವರಾಯರು ತಾವು ಮುರಾರಿ ಸಾಹೇಬರ ಕಕ್ಕನ ಮಕ್ಕಳೆಂದು ತಿಳಿದು, ತಾವು ಮೆಟ್ಟಿದ್ದೇ ಕಡಲಿಯ ಹಗೆ ಎಂದು ತಿಳಿಯಹತ್ತಿದ್ದಾರೆ. ಇವರು ಮಾರುತಿಯ ಗುಡಿಯಲ್ಲಿ ಒಬ್ಬರೇ ಹೋಗಿ ನನ್ನನ್ನು ಹೊರಗೆ ನಿಲ್ಲಿಸಿ ಗೋಸಾವಿಯ ಸಂಗಡ ಕಿವಿಮಾತುಗಳನ್ನಾಡಿದಾಗಲೇ ಇವರ ಗುಣವನ್ನು ತಿಳಿದುಕೊಂಡೆನು; ಆದರೆ ಬಾಯಿಂದ ಮಾತಾಡಲಿಲ್ಲ, ಇಲ್ಲಿಗೆ ಬಂದಬಳಿಕ ನಿಮ್ಮೆಲ್ಲರ ಒಲವನ್ನು ನೋಡಿ ನಾನು ಮನಸ್ಸಿನಲ್ಲಿ ತಿಳಿದುಕೊಂಡು ಬಿಟ್ಟಿರುತ್ತೇನೆ. ಈ ಗೋಸಾವ್ಯಾನನ್ನು ಬಿಡಿಸುವ ವಿಷಯವಾಗಿ

ನಿಮ್ಮೆಲ್ಲರ ಹವಣಿಕೆಯು ನಡೆದಿದೆ. ಉಂಡಮನೆಯಗಳ ಎಣಿಸುವ ಗುಣವಂತು ನಿಮ್ಮ ಶರೀರದಲ್ಲಿ ಉಗುರಿನಿಂದ ನಡುನೆತ್ತಿಯವರೆಗೆ ತುಂಬಿಕೊಂಡಿರುತ್ತದೆ. ಏನೂ ಚಿಂತೆಯಿಲ್ಲ, ಈ ಎಲ್ಲ ನಿಮ್ಮ ಒಳಸಂಚನ್ನು ಮೆಲ್ಲಮೆಲ್ಲನೆ ಹೊರಗೆಡವಿದೆನೆಂದರೆ, ಒಂದೊಂದೇ ದುರ್ಗದ ಶೋಧನೆಗೆ ಆರಂಭವಾಗಿ, ಎಲ್ಲರ ಹುಳುಕು ಹೊರಬಿದ್ದು ಕಠಿಣಶಾಸನವನ್ನು ಭೋಗಿಸುವ ಪ್ರಸಂಗವು ನಿಮಗೆ ಬರುವದು. ಅದೊತ್ತಟ್ಟಿಗಿರಲಿ, ಸದ್ಯಕ್ಕೆ ನಾವು ಯಾರ ಮಾತನ್ನೂ ಕೇಳುವ ಹಾಗಿಲ್ಲ, ನೀವೆಲ್ಲರೂ ಇಲ್ಲಿಂದ ಹೊರಟುಹೋಗಿರಿ! ನಾನು ಸ್ವತಃ ಇಲ್ಲಿ ಕುಳಿತು ನನ್ನ ಕಣ್ಣುಮಟ್ಟಿ ಗೋಸಾವ್ಯಾನ ಬಾಯಲ್ಲಿ ಗೋಮಾಂಸವನ್ನು ಹಾಕಿಸಿ ಮುಸಲ್ಮಾನನನ್ನು ಮಾಡಿ ಕೋಟೆಯ ಗೋಡೆಯಮೇಲಿಂದ ಕೆಳಗೆ ದೂಡಿಸುವೆನು. ಹಾಗೆ ಮಾಡದ ಹೊರತು ಇಲ್ಲಿಂದ ನಾನು ಉಲುಕುವದಿಲ್ಲ, ನೀವು ಅದನ್ನು ನೋಡಲಾರದವರಾಗಿದ್ದರೆ, ಇಲ್ಲಿಂದ ಹೊರಟುಹೋಗಿರಿ! ನೀಚ ರಾಜದ್ರೋಹಿಗಳಿರಾ!!

ಸರ್ಜೇಖಾನನ ಈ ಮಾತುಗಳನ್ನು ಕೇಳಿ ಆ ವೃದ್ಧ ಕಿಲ್ಲೇದಾರನ ಸರ್ವಾಂಗವು ದಣಗುಟ್ಟಿ ಉರಿಯಹತ್ತಿತು. ಆತನಿಗಾದ ಸಂತಾಪವು ಹೊಟ್ಟೆಯಲ್ಲಿ ಹಿಡಿಸದಾಯಿತು. ಆತನು ಒಮ್ಮೆಲೆ ಮುಂದಕ್ಕೆ ಹೋಗಿ ಹರಕಬರಕ ಶಬ್ದಗಳಿಂದ ನುಡಿದನೇನಂದರೆ— ನೋ–ನೋಡುತ್ತೇನೆ, ಹೇ–ಹೇಗೆ ಅವನನ್ನು ದೂಡುತ್ತೀಯೋ! ದುರ್ಗವು ನನ್ನದಿರುತ್ತದೆ. ಈವೊತ್ತಿಗೆ ಈ ಕ್ಷಣದಲ್ಲಿ ಇಲ್ಲಿಯಂತು ನನ್ನ ಅಧಿಕಾರವಿರುತ್ತದೆ ನನ್ನ ಕೈಯಲ್ಲಿ ಅಧಿಕಾರವಿರುವವರೆಗೆ ನಾನು ಬೇಕಾದದ್ದು ಮಾಡುವೆನು. ಯಾವನು ಕೈಹಿಡಿಯುತ್ತಾನೆ ನೋಡೋಣ! ಖಾನಾ, ನೀನು ಎಲ್ಲಿಂದ ಬಂದೆ? ನೀನು ಇವನನ್ನು ಹೇಗೆ ದೂಡುತ್ತಿಯೋ ದೂಡು ನೋಡುತ್ತೇನೆ. ನಾನಂತು ನಿನ್ನಂಥ ಪ್ರತ್ಯಕ್ಷ ಯಮನ ದವಡೆಯೊಳಗಿಂದ ಇವನನ್ನು ಬಿಡಿಸುವೆನು. ನೋಡುತ್ತೇನೆ ತಡೆಯುವವನನ್ನು ಯಾವ ತಾಯಿಯು ಹಡೆದಿರುತ್ತಾಳೋ! ನನ್ನ ಎದುರಿಗೆ ಬಂದು ಯಾವನವಸು ದೂಡುವವನು? ಎಂದು ನುಡಿಯುವಾಗ ಆ ಮುದುಕನ ಮೈಯಲ್ಲಿ ಪ್ರತ್ಯಕ್ಷ ಜಮದಗ್ನಿಯ ಸಂಚಾರವಾದಂತಾಗಿತ್ತು, ಉಳಿದ ಜನರೆಲ್ಲ ಆತನ ಸಂತಾಪವನ್ನು ನೋಡಿ ಒಬ್ಬರನ್ನೊಬ್ಬರು ನೋಡುತ್ತ ಸುಮ್ಮನೆ ನಿಂತುಕೊಂಡರು. ಸರ್ಜೇಖಾನನಂತು ತೀರ ಆಶ್ಚರ್ಯಮಗ್ನನಾಗಿ ಬಿಟ್ಟಿದ್ದನು. ಆದರೆ ಆತನು ಬೇಗನೆ ತನ್ನೊಳಗಿನ ಆ ಆಶ್ಚರ್ಯದ ಸ್ವರೂಪವನ್ನು ನಷ್ಟಪಡಿಸಿ, ಅದರ ಸ್ಥಳದಲ್ಲಿ ಸಂತಾಪದ ಸ್ವರೂಪವನ್ನು ಪ್ರಕಟಗೊಳಿಸಿದನು. ಆತನು ಕೂಡಲೆ ಕ್ರೋಧಸಂತಪ್ತನಾಗಿ ಆ ವೃದ್ಧ ಗಡಕರಿಯ ಮೈಮೇಲಿ ಹೋಗಿ ನಿನ್ನ ಈ ಗದ್ದರಿಕೆಗೂ, ಬಡ ಬಡಿಕೆಗೂ ನಾನು ಸೊಪ್ಪು ಹಾಕುವೆನೆಂದು ತಿಳಿದಿರುವೆಯೇನು? ಹೀಗೆ ನಾವು ಅಂಜುಬುರುಕರಾಗಿದ್ದರೆ ನಮ್ಮ ರಾಜ್ಯವೇ ಇಲ್ಲಿ ಆಗುತ್ತಿದ್ದಿಲ್ಲ. ನಿನ್ನ ಈ ರಂಬಾಟವನ್ನು ಬಿಟ್ಟುಬಿಡು; ಹೋಗು; ಒಳ್ಳೆಯ ಮಾತಿನಿಂದ ಎದ್ದು ಹೋಗು; ನೀವೆಲ್ಲರೂ ಹೊರಟು ಹೋಗಿರಿ. ನನಗೆ ಈಗ ನಿಃಸಂಶಯವಾಗಿ ಗೊತ್ತಾಯಿತು. ನೀವೆಲ್ಲರೂ ಈ ಪುಂಡರ ಪುಂಡತನವನ್ನು ದುರ್ಲಕ್ಷಿಸುವಿರಲ್ಲದೆ, ಒಳಗಿಂದೊಳಗೆ ಇವರಿಗೆ ನೀವು ಸಹಾಯವನ್ನೂ ಮಾಡುತ್ತೀರಿ ಆ ಪುಂಡ ಶಿವಾಜಿಗೆ ಶಹಾಜಿರಾಜನೂ ಕೂಡ ಒಳಗಿಂದೊಳಗೆ ಅನುಕೂಲವಾಗಿರುವನೆಂಬುದು ನಮಗೆ ಗೊತ್ತಿಲ್ಲವೆಂದು ತಿಳಿದಿರುವಿರೇನು?

ಆಯಿತು, ಶಹಾಜಿರಾಜನು ರಾಜದ್ರೋಹಿ ಎಂದು ಸರ್ಜೇಖಾನನು ನುಡಿದದ್ದನ್ನು ಕೇಳಿದಕೊಡಲೆ, ಆ ವೃದ್ಧ ಕಿಲ್ಲೇದಾರನ ಮೈಮೇಲಿನ ಎಚ್ಚರವು ತಪ್ಪಿತು, ಆತನು ಕುಶಾಬನ ಕೈಯೊಳಗಿನ ಖಡ್ಗವನ್ನು ಕಸಿದುಕೊಂಡು ಹಿಂದುಮುಂದು ನೋಡದೆ ಒಮ್ಮೆಲೆ ಸರ್ಜೇಖಾನನ ಮೇಲೆ ದುಮುಕಿದನು. ಒಂದು ಕ್ಷಣವು ತಡೆದಿದ್ದರೆ, ಸರ್ಜೇಖಾನನ ಗತಿಯು ಮುಗಿದು ಹೋಗಿತ್ತು ಅಷ್ಟರಲ್ಲಿ ಶಿವದೇವರಾಯನು ಮುಂದುವರಿದು ಕಿಲ್ಲೇದಾರನನ್ನು ಹಿಂದಕ್ಕೆ ಎಳಕೊಂಡನು ಕುಶಾಬನೇ ಮೊದಲಾದವರು ಮುದುಕನನ್ನು ಹಿಡಿದು ಕುಳ್ಳಿರಿಸಿದರು. ಆಗ ಮುದುಕನು—"ಬಿಡಿರಿ, ಬಿಡಿರಿ; ಉಂಡುಮನೆಯ ಗಳ ಎಣಿಸುವವರು ಯಾರೆಂಬದನ್ನು ಇವನಿಗೆ ತೋರಿಸುತ್ತೇನೆ. ಅನುವು ಸಿಕ್ಕಲ್ಲಿ ತಳವೂರಿ ಕುಳಿತುಕೊಳ್ಳುವವರು ಹರಾಮ ಖೋರರೋ, ಪರಜಾತಿಯ ಸ್ವಾಮಿಯನ್ನೂ ಏಕನಿಷ್ಠೆಯಿಂದ ಸೇವಿಸುವವರು ಹರಾಮ ಖೋರರೋ ಎಂಬದನ್ನು ಇವನಿಗೆ ತೋರಿಸೋಣ" ಎಂದು ಈರಾಟವಾಡಲು, ನೆರೆಯವರು ಆತನನ್ನು ಬಿಡಲಿಲ್ಲ. ಆಗ ಆ ವೃದ್ಧನು ಗೋಸಾವಿಯ ಕಡೆಗೆ ನೋಡಿ—ಅಪ್ಪಾ, ಇನ್ನು ನೀನೇನು ಬದುಕುವದಿಲ್ಲ, ಬಹು ದಿವಸಗಳ ಮೇಲೆ ನಿನ್ನನ್ನು ನಾನು ಕಂಡೆನು. ನಾನು ನಿನ್ನ ಗುರುತನ್ನು ಹಿಡಿಯಲಿಲ್ಲೆಂದು ತಿಳಿಯಬೇಡ. ಬಿಡುಗಡೆ ಹೊಂದೀ ಎಂದು ತಿಳಿದಿದ್ದೆನು. ಆದರೆ ಉಳಿಯುವದಿಲ್ಲ, ಏನೂ ಚಿಂತೆಯಿಲ್ಲ, ಸಂತೋಷದಿಂದ ಮರಣಹೊಂದು! ಸತ್ಯಕ್ಕಾಗಿ ಸತ್ತ ನೀನು ಬದುಕಿದಂತೆಯೇ ಸರಿ. ನಾವು ಈ ಕೃತಘ್ನರ ಸೇವೆಯನ್ನು ಸಾಯುವ ತನಕ ಮಾಡಿ— ವಿಶ್ವಾಸಪೂರ್ವಕವಾಗಿ ಮಾಡಿ, ಕಡೆಗೆ "ಉಂಡಮನೆಯ ಗಳ ಎಣಿಸುವರೆ"ಂಬ ಬಿರುದನ್ನು ಸಂಪಾದಿಸುತ್ತೇವೆ; ಈ ಅಪವಾದದ ಮಾತನ್ನು ಆಡಿಸಿಕೊಂಡು ತಾಳಿಕೊಳ್ಳುತ್ತೇವೆ; ನಮ್ಮಂಥವರು ಬದುಕಿದ್ದರೂ ಸತ್ತ ಹಾಗೆಯೇ ಸರಿ. ಯಾತಕ್ಕೆ ನಾನು ಇಲ್ಲಿ ನಿಂತುಕೊಳ್ಳಲಿ? ಒಬ್ಬ ತಾಯಿಯ.... ಎಂದು ನುಡಿಯುತ್ತಿರಲು, ಶಿವದೇವರಾಯನೂ, ಕುಶಾಬನೂ ಆ ಮುದುಕನನ್ನು ಎಳಕೊಂಡು ಹೋಗಿಬಿಟ್ಟರು. ಆ ಮುದುಕನಾದರೂ ಅತ್ಯಂತ ದುಃಖದಿಂದ, ಆದರೆ ಕಿಂಚಿತ್ ಸ್ವೇಚ್ಛೆಯಿಂದಲೇ ಹೊರಟುಹೋದನು. ಇತ್ತ ಸರ್ಜೇಖಾನನಾದರೂ ಸಂತಾಪದಿಂದ ಎಚ್ಚರಗೆಟ್ಟಿದ್ದನು. ಆತನು ಇನ್ನು ತಡಮಾಡದೆ ಗೋಸಾವಿಯನ್ನು ದೂಡಬೇಕೆಂದು ನಿಶ್ಚಯಿಸಿ, ಗೋಸಾವಿಯ ಕೈಕಾಲುಗಳನ್ನು ಕೂಡಿಸಿ ಇನ್ನಿಷ್ಟು ಬಿಗಿದು ಕಟ್ಟುವದಕ್ಕಾಗಿ ಒಂದು ಸರಪಳಿಯನ್ನು ತರಲು ಆಜ್ಞಾಪಿಸಿದನು. ಕೂಡಲೆ ಇಬ್ಬರು ಸರಪಳಿಯನ್ನು ತರುವದಕ್ಕಾಗಿ ಹೋದರು. ಇತ್ತ ಖಾನನನ್ನು ಹಿಡಿದು ಮೂರೇ ಜನರು ಗೋಸಾವಿಯ ಬಳಿಯಲ್ಲಿ ಉಳಿದರು. ಇವರ ಹೊರತು ಇಬ್ಬರು ದೀವಟಿಗೆಯವರು ಇದ್ದರು. ಸರಿರಾತ್ರಿಯು; ಆದರೆ ಗೋಸಾವಿಯ ಗತಿಯು ಏನಾಗುತ್ತದೋ ನೋಡಬೇಕೆಂದು ಖುಷಿಮೋಜಿನ ಎಷ್ಟೋ ಜನರು ಅಂಜುತ್ತಂಜುತ್ತ ದೂರ ಬಂದು ನಿಂತುಕೊಂಡಿದ್ದರು. ಸರ್ಜೇಖಾನನ ಸಂಗಡ ಬಂದಿದ್ದ ಮುಸಲ್ಮಾನರ ಹೊರತು ಉಳಿದವರಾರೂ ಗೋಸಾವಿಯ ಕೊಲೆಯ ವಿಷಯವಾಗಿ ಉತ್ಸುಕರಾಗಿದ್ದಿಲ್ಲ. ಅಷ್ಟರಲ್ಲಿ ಸರಪಳಿಯನ್ನು ತರಹೋದವರು ಒಂದು ದೊಡ್ಡ ಸರಪಳಿಯನ್ನು ತಕ್ಕೊಂಡುಬಂದರು. ಅದನ್ನು ನೋಡಿ ಸರ್ಜೇಖಾನನು

ಕೈಕಾಲುಕಟ್ಟಲಿಕ್ಕೆ ಸಹಾಯವಮಾಡಿರೆಂದು ಅಲ್ಲಿ ನಿಂತಿದ್ದ ಮಹಾರಾಷ್ಟ್ರ ಸಿಪಾಯಿಗಳಿಗೆ ಆಜ್ಞಾಪಿಸಿದನು; ಆದರೆ ಒಬ್ಬನೂ ಮುಂದಕ್ಕೆ ಬರಲಿಲ್ಲ. ಗೋಸಾವಿಯು, ಮೇಲೆ ಬ್ರಾಹ್ಮಣನು; ಅಂಥವನ ಕೊಲೆಗೆ ಯಾವ ಹಿಂದುವು ಸಹಾಯ ಮಾಡುವನು? ದೂರ ನಿಂತ ಜನರೆಲ್ಲ ತಮ್ಮೊಳಗೆ ಮಿಡುಕುತ್ತಿದ್ದರು. ಕೆಲವರಂತೂ ಸಂತಾಪದಿಂದ ಒಳಂಗಿಂದೊಳಗ ತಳಮಳಿಸುತ್ತ ಹಲ್ಲುಕಡೆಯುತ್ತಿದ್ದರು. ಈ ಬ್ರಾಹ್ಮಣ ಗೋಸಾವಿಯ ಬಾಯಲ್ಲಿ ಗೋಮಾಂಸ ವನ್ನೊಂದು ಹಾಕಿ ಕುಲಗೆಡಿಸಲಿ, ಗೋಸಾವಿಯ ಬದಲು ಖಾನನನ್ನೇ ದುರ್ಗದ ಕೆಳಗೆ ದೂಡೋಣ ಎಂದು ನಿಶ್ಚಯಿಸುವ ಜನರೂ ಆ ನೆರೆದವರಲ್ಲಿ ಇದ್ದರು. ನೆರೆದ ಜನರು ತನಗೆ ಏನೆನ್ನುತ್ತಿರಬಹುದೆಂಬ ವಿಚಾರವನ್ನು ಸರ್ಜೇಖಾನನು ಮಾಡುತ್ತಿದ್ದಿಲ್ಲ. ಆತನು ತನ್ನ ಮೂರು ನಾಲ್ಕು ಜನ ಸಿಪಾಯಿಗಳ ಕೈಯಿಂದ ಗೋಸಾವಿಯ ಕೈಕಾಲುಗಳನ್ನು ಗಟ್ಟಿಯಾಗಿ ಕಟ್ಟಿಸಿದನು. ಗೋಸಾವಿಯು ಬಹು ಶಾಂತನಾಗಿದ್ದನು. ಆ ಪ್ರಸಂಗದಲ್ಲಿ ರವಷ್ಟಾದರೂ ಗಡಿಬಿಡಿಯನ್ನು ಮಾಡಲಿಕ್ಕಿಲ್ಲೆಂದು ಆತನು ನಿಶ್ಚಯವಮಾಡಿದಂತೆ ತೋರಿತು. ಆತನ ತನ್ನ ಉಪಾಸ್ಯ ದೇವತೆಯನ್ನೂ, ಗುರುಗಳನ್ನೂ ಸ್ಮರಿಸುತ್ತಿರಬಹುದು; ಆದರೆ ಅಲ್ಲಾಡುತ್ತಿರುವ ತುಟಿಗಳ ಹೊರಗೆ ಒಂದು ಅಕ್ಷರ ಕೂಡ ಹಾದುಬರುತ್ತಿದ್ದಿಲ್ಲ.

ಎಲ್ಲ ಸಿದ್ಧತೆಯಾದ ಬಳಿಕ ಸರ್ಜೇಖಾನನು ಮತ್ತೊಮ್ಮೆ ಗೋಸಾವಿಯನ್ನು ಕುರಿತು— ನಿನಗೆ ಏನಾದರೂ ಗೊತ್ತಿದ್ದರೆ ಹೇಳು. ಇಲ್ಲದಿದ್ದರೆ ನಿನ್ನನ್ನು ಸೈತಾನ ರಾಜ್ಯಕ್ಕೆ ಕಳಿಸುವದಂತು ನಿಶ್ಚಯವೇ. ಇದಲ್ಲದೆ, ನನಗೆ ಆ ಮಾರುತಿಯ ಗುಡಿಯ ಸಂಶಯವು ಪೂರಾ ಬಂದಿರುವದ ರಿಂದ, ಅದನ್ನು ಕೆಡವಿಸಿ ಅದರ ತಳಸೋಸಿಸದೆ ಬಿಡುವದಿಲ್ಲ. ಮಾತಾಡು— ಮಾತಾಡು; ಸುಮ್ಮನೆ ಪ್ರಾಣವನ್ನು ಕಳಕೊಳ್ಳಬೇಡ, ಎಂದನು. ಆದರೂ ಗೋಸಾವಿಯ ಮುಖದಿಂದ ಅಕ್ಷರಗಳು ಹೊರಡಲಿಲ್ಲ; ಆದರೆ ಆತನ ಕಣ್ಣೊಳಗಿಂದ ಮಾತ್ರ ಸ್ವಲ್ಪ ನೀರುಗಳು ಹೋಗುತ್ತಿರುವಂತೆ ತೋರಿತು. ಅವು ಖಾನನ ಕಣ್ಣಿಗೆ ಬೀಳಲಿಲ್ಲ. ಬಿದ್ದಿದ್ದರೆ ಅಶೆ ಬುರುಕತನ ದಿಂದ ಆತನು ಮುಂದಿನ ಅಪ್ಪಣೆಯನ್ನು ಕೆಲವು ಹೊತ್ತಾದರೂ ತಡೆದು ಕೊಡುತ್ತಿದ್ದನು. ತನ್ನ ಗದ್ದರಿಕೆಯಿಂದಲೂ, ಮಿದುವು ಮಾತುಗಳಿಂದಲೂ ಪ್ರಯೋಜನವಾಗದ್ದನ್ನು ನೋಡಿ ಖಾನನು ಕ್ರೂರತನದಿಂದ—''ಜಾನದೇವ, ಸಾಲೇಕು ಫೇಕದೇವ'' ಎಂದು ಅಪ್ಪಣೆಯನ್ನು ಮಾಡಿದನು; ಆದರೆ ಅಷ್ಟರಲ್ಲಿ ದುರ್ಗದ ಕೆಳಗೆ ಗುಜುಗುಜುಮಾತಾಡಿದಂತೆ ಕೇಳಿಸಿತು. ಆಗ ಖಾನನ ಜನರು—''ಏಕ್ಯಾ ಏಕ್ಯಾ'' ಎಂದು ಅನ್ನ ಹತ್ತಿದರು. ಆದರೆ ಮತ್ತೆ ಕಿವಿಗೊಟ್ಟು ಕೇಳುವಾಗ ಗದ್ದಲವೇನು ಕೇಳಲಿಲ್ಲ. ಸರ್ಜೇಖಾನನು ಸಿಪಾಯಿಗಳಿಗೆ ಒಳಿತಾಗಿ ಬೈದು ಬೇಗನೆ ದೂಡಿರೆಂದು ಮತ್ತೆ ಆಜ್ಞಾಪಿಸಿದನು. ಅಷ್ಟರಲ್ಲಿ ಹಿಂದೆ ಒಮ್ಮೆಲೆ ಗದ್ದಲವೆದ್ದು ಜನರು ಶಂಖವಾದ್ಯ ಮಾಡಹತ್ತಿದರು. ಇದೇನೆಂದು ಹಿಂದಿರುಗಿ ನೋಡುತ್ತಾರೆ, ಕೋಟೆಯೊಳಗಿನ ಕುಮುರೆಯ ಪಾಗಾದ ಹುಲ್ಲಿನ ಬಣಿವೆಗೂ, ಕೆಳಗಿನ ಗೌಡನ ಹುಲ್ಲುಬಣಿವೆಗೂ ಬೆಂಕಿಹತ್ತಿ ಉರಿಗಳು ಕಾಣಿಸಹತ್ತಿದವು. ಬರಬರುತ್ತ ಬೆಂಕಿಯು ಮನೆಗಳಿಗೂ ಹತ್ತಿಕೊಂಡು ಉರಿಯ ಹತ್ತಿತು. ಇದನ್ನು ನೋಡಿದ ಕೂಡಲೆ ದೂರ ನಿಂತಿದ್ದ ಖುಷಿಮೋಜಿನ ಜನರು ಒಬ್ಬರೂ

ನಿಂತುಕೊಳ್ಳಲಿಲ್ಲ; ಬೆಂಕಿ ಹತ್ತಿದ ಕಡೆಗೆ ಓಡಿದರು. ಆಗಿನ ಸಿಪಾಯಿಗಳಲ್ಲಿ ಈಗಿನಷ್ಟು ವ್ಯವಸ್ಥೆಯೂ ಕರ್ತವ್ಯ ಜಾಗ್ರತೆಯೂ ಇಲ್ಲದಾದ್ದರಿಂದ, ಕೋಟೆಯಯಾವತ್ತು ಬಾಗಿಲು ಗಳೊಳಗಿನ ಕಾವಲುಗಾರರು ಬೆಂಕಿ ಹತ್ತಿದ ಕಡಿಗೆ ನೋಡಲಿಕ್ಕೆ ಓಡಿಹೋದರು. ಕೋಟೆಯ ಮುಂಬದಿಯಲ್ಲಿಯ ಅವಸ್ಥೆಯೇ ಹೀಗಾದ ಬಳಿಕ, ಹಿಮ್ಮಗ್ಗಲ ಗತಿಯನ್ನು ಏನೆಂದು ವರ್ಣಿಸ ಬೇಕು? ಒಟ್ಟಿಗೆ, ಕೋಟೆಯ ಬಾಗಿಲುಗಳಲ್ಲಿ ಕಾವಲುಗಾರರು ಒಬ್ಬರೂ ಇಲ್ಲದಂತಾದ್ದರಿಂದ, ಬೇಕಾದವರು ಕೋಟೆಯೊಳಗೆ ಬರಬಹುದಾಗಿತ್ತು, ಬೇಡಾದವರು ಕೋಟೆಯ ಹೊರಗೆ ಹೋಗಬಹುದಾಗಿತ್ತು. ಅಷ್ಟರಲ್ಲಿ ಸರ್ಜೇಖಾನನ ಛಾವಣಿಗೆ ಬೆಂಕಿಹತ್ತಿತೆಂಬ ಸುದ್ದಿಯು ಹಬ್ಬಿತು. ಇತ್ತ ಕೋಟೆಯ ಹಿಮ್ಮಗ್ಗಲಿನಲ್ಲಿ ಕಿಲ್ಲೆಯ ಗೋಡೆಯ ಮೇಲೆ ಗೋಸಾವಿಯು, ಸರ್ಜೇಖಾನನು, ಆತನ ನಾಲ್ಕೈದುಜನ ಸಿಪಾಯಿಗಳು ಇಷ್ಟೇ ಜನರು ಉಳಿದಿದ್ದರು. ಬೆಂಕಿಯ ಗದ್ದಲದ ಕಡೆಗೆ ಖಾನನ, ಹಾಗು ಆತನ ಸಿಪಾಯಿಗಳ ಲಕ್ಷವು ಹೋಗಿರಲು, ಇತ್ತ ದುರ್ಗದ ಕೆಳಗೆ ಉರಿಯುವ ಗೊರವಿಯ ಕಟ್ಟಿಗೆಗಳು ಕಾಣಹತ್ತಿ ಇಪ್ಪತ್ತು-ಇಪ್ಪತ್ತೈದು ಜನರು ಭರಭರ ದುರ್ಗವನ್ನು ಏರಿಬರಹತ್ತಿದರು. ಬೆಂಕಿಯ ಕಡೆಯಿಂದ ಖಾನನ ಲಕ್ಷವು ಆ ಕೊಳ್ಳೆಯ ದೆವ್ವಗಳ ಹಿಂಡಿನಂತೆ ತೋರುವ ಗೊರವಿಯ ಕಟ್ಟಿಗೆಗಳ ಕಡೆಗೆ ಹೋಗಲು, ಆತನು—''ತೋಬಾ! ತೋಬಾ! ಏಕ್ಯಾ! ಏಕ್ಯಾ!'' ಎಂದು ಅನ್ನುತಿರುವದರೊಳಗೆ ಆ ಜನರು ಮೇಲಕ್ಕೇರಿಬಂದು, ಅವರೊಳಗಿನ ನಾಲ್ಕೆಂಟು ಜನರು ಖಾನನನ್ನು ಮುತ್ತಿಬಿಟ್ಟರು. ಖಾನನ ಉಳಿದ ನಾಲ್ಕಾರು ಜನರು ಶಂಖವಾದ್ಯವನ್ನು ಮಾಡುವದರೊಳಗೆ ಕೆಲವರು ಅವರನ್ನು ಹಿಡಿದು ಕೆಡವಿ ಅವರ ಬಾಯಲ್ಲಿ ಹುಲ್ಲಿನ ಚೆಂಡುಗಳನ್ನು ತುರುಕಿ ಅವರ ಕೈಕಾಲುಗಳನ್ನು ಕಟ್ಟಿದರು. ಬೇರೆ ನಾಲ್ಕೈದು ಜನರು ಗೋಸಾವಿಯ ಸರಪಳಿ ಯನ್ನು ಉಚ್ಚುವದರಲ್ಲಿಯೂ, ಬೇಡಿಗಳನ್ನು ಕಡಿಯುವದರಲ್ಲಿಯೂ ತೊಡಗಿದರು. ಬಂದವರು ಚಕಾರಶಬ್ದವನ್ನು ನುಡಿಯುತ್ತಿದ್ದಿಲ್ಲ, ನಾಲ್ವತ್ತು-ಐವತ್ತು ಇಲಿಗಳು ಬಡಬಡ ಗುದ್ದುಗಳಿಂದ ಹೊರಬಿದ್ದು ಬಂದಂತೆ. ಅವರು ದುರ್ಗವನ್ನೇರಿ ಗೋಸಾವಿಯ ಬಳಿಗೆಬಂದಿದ್ದರು. ಅವರು ಮುಂದೆ ನೋಡಿ ತಮ್ಮ ಕೆಲಸವನ್ನು ಅತಿತ್ವರೆಯಿಂದ ತೀರಿಸಿಕೊಂಡರು. ಏನೊಂದು ಅಪಾಯವಾಗದೆ ಶ್ರೀಧರಸ್ವಾಮಿಯು ಮುಕ್ತನಾದನು. ನಾಲ್ಕೈದು ಜನರು ಕೂಡಿ ಆತನನ್ನು ಎಬ್ಬಿಸಲು, ಶಿವಾಜಿಯೇ ಮೊದಲಾದವರು, ಆತನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿದರು. ಇದನ್ನೆಲ್ಲ ನೋಡಿ ಗೋಸಾವಿಯು ಬೆರಗಾಗಿ ನಿಂತನು. ಆತನು ಕೇವಲ ಪರವಶ ನಾದದ್ದರಿಂದ ಒಂದು ಅಕ್ಷರವನ್ನೂ ಕೂಡ ನುಡಿಯಲಾರದೆ, ಸುಮ್ಮನೆ ನೋಡುತ್ತ ನಿಂತು ಕೊಂಡಿದ್ದನು. ಶ್ರೀಧರಸ್ವಾಮಿಯನ್ನು ಎಲ್ಲರೂ ನಮಸ್ಕರಿಸಿದ ಬಳಿಕ ಒಬ್ಬ ಸಮರ್ಥನು ಆತನನ್ನು ಹೆಗಲ ಮೇಲೆ ಕುಳ್ಳಿಸಿಕೊಳ್ಳಲು, ಬೇರೆ ಇಬ್ಬರು ಆತನ ಸಂರಕ್ಷಣಕ್ಕಾಗಿ ಆತನ ಸಂಗಡ ನಡೆದರು. ''ಹರಹರ ಮಹಾದೇವ! ಜಯ ಅಂಬಾಭವಾನಿ'' ಎಂದು ಎಲ್ಲರೂ ಗರ್ಜಿಸುತ್ತಿರಲು, ನೋಡನೋಡುತ್ತ ಆ ಮೂವರೂ ಬಂದ ದಾರಿಯಿಂದಲೇ ಇಳಿದು ಹೋದರು. ಉಳಿದವರು ಖಾನನನ್ನು ಕೋಟೆಯ ಕೆಳಗೆ ದೂಡಿಕೊಡಬೇಕೆಂದು

ಮಾಡಿದರು. ಈ ಪ್ರಸಂಗವು ಬಂದೇಬರುವದೆಂದು ಸರ್ಜೇಖಾನನು ತಿಳಕೊಂಡಿರಬಹುದು. ತನ್ನ ಕೈಗೆ ಸಿಕ್ಕ ಬೇಟೆಯನ್ನು ಗುಡ್ಡದೊಳಗಿನ ಈ ಇಲಿಗಳು ವಿಲಕ್ಷಣ ರೀತಿಯಿಂದ ಬಿಡಿಸಿಕೊಂಡು ಹೋದಂತೆ, ತನ್ನನ್ನು ದುರ್ಗದ ಕೆಳಗೆ ದೂಡದೆ ಹೋಗವೆಂದು ಆತನು ನಿಶ್ಚಯವಾಗಿ ತಿಳಿದಿದ್ದನು. ಆದರೆ ಜೀವವು ಬೆಲ್ಲಕ್ಕಿಂತ ಸವಿಯಾದದ್ದರಿಂದ, ಅದನ್ನು ಉಳಿಸಲಿಕ್ಕೆ ಯಾರಾದರೂ ಯತ್ನಿಸಬಹುದಾದಂತೆ ಖಾನನು ಯತ್ನಿಸಿದ್ದು ಆಶ್ಚರ್ಯವಲ್ಲ. ಗದ್ದರಿಸಿ ನಾಲ್ಕು ಮಾತುಗಳನ್ನು ಆಡಿದರೆ, ಇಲ್ಲವೆ ಕೈಕಾಲು ಬಿದ್ದರೆ ತನ್ನ ಬಿಡುಗಡೆಯಾಗ ಬಹುದೆಂದು ಆತನು ತಿಳಿದನು.

ಗೋಸಾವಿಯು ಕೆಳಗೆ ಇಳಿದು ಪಾರಾದನೆಂಬದನ್ನು ಮನಗಂಡು ಆ ದುರ್ಗದ ಮೇಲಿನವರು ಖಾನನನ್ನು ಮೇಲಕ್ಕೆ ಎಬ್ಬಿಸಿ—ಎಲಾ, ಬ್ರಾಹ್ಮಣ ಗೋಸಾವಿಯನ್ನು ಪೀಡಿಸುತ್ತಿದ್ದೆಯಲ್ಲವೆ? ಈಗ ನಿನ್ನನ್ನೇ ದುರ್ಗದ ಕೆಳಗೆ ದೂಡುತ್ತೇವೆ, ಬಿಡುವದಿಲ್ಲ ಎಂದು ಆತನನ್ನು ತೀರಕೋಟೆಯ ತುದಿಗೆ ಕರೆದೊಯ್ದರು. ಆದರೆ ಆತನು ಅಂಗಲಾಚಿ ಹೇಳಿಕೊಳ್ಳ ಹತ್ತಿದ ಕೂಡಲೆ ಶಿವಾಜಿಯು ತನ್ನವರನ್ನು ಕುರಿತು–ಮೈಮರೆತು ಕುಳಿತಿದ್ದ ಮನುಷ್ಯನನ್ನು ಎಳೆದೊಯ್ದು ಕೊಲ್ಲುವದು ಹಿಂದುಗಳ ಶೀಲವಲ್ಲ; ಖಾನಾ ಹೋಗು, ನಿನಗೆ ಜೀವದಾನವನ್ನು ಕೊಡುತ್ತೇನೆ; ಆದರೆ ಯುದ್ಧದಲ್ಲಿ ಇವರೊಳಗಿನ ಯಾರೊಬ್ಬರ ಖಡ್ಗದ ತೀಕ್ಷ್ಣಧಾರೆಗೆ ಗುರಿಯಾದರೆ ಸತ್ತೆಯೆಂದು ತಿಳಿ, ಎಂದು ನುಡಿದ ಕೂಡಲೇ, ಆತನನ್ನು ಗೋಡೆಯ ತುದಿಯಿಂದ ಹಿಂದಕ್ಕೆ ಕರ ತಂದರು. ಆಮೇಲೆ ಅವರು ಗೋಸಾವಿಯನ್ನು ಕಟ್ಟಿದ ಸರಪಳಿ ಯಿಂದಲೇ ಖಾನನ ಕೈಕಾಲುಗಳನ್ನು ಗಟ್ಟಿಯಾಗಿ ಕಟ್ಟಿ, ಮತ್ತೊಮ್ಮೆ "ಹರಹರ ಮಹಾದೇವ! ಜಯಭವಾನಿ!" ಎಂದು ಗರ್ಜಿಸುತ್ತ ಎಲ್ಲರೂ ಬಂದಹಾದಿಯಿಂದ ಹೊರಟುಹೋದರು.

## ಜುಲುಮೆಯ ರಾಮ ರಾಮ

ಈ ಮೇರೆಗೆ ಕುಶಲನಾದ ಶಿವಾಜಿಯು ಶ್ರೀಧರಸ್ವಾಮಿಗಳನ್ನು ಬಿಡಿಸಿಕೊಂಡು ಸರ್ಜೇ ಖಾನನ ಕೈಕಾಲುಗಳನ್ನು ಬಿಗಿಸಿ, ಉಳಿದವರ ಬಾಯಲ್ಲಿ ಹುಲ್ಲಿನ ಚಂಡುಗಳನ್ನು ತುರುಕಿಸಿ ಬಂದ ದ್ವಾರಿಯಿಂದ ಹೊರಟುಹೋಗಲು, ಖಾನನಿಗೂ, ಆತನ ಜನರಿಗೂ ಎದ್ದೇಳೆಂದರೆ ಮಾರ್ಗವಿಲ್ಲದಾಯಿತು. ಸರ್ಜೇಖಾನನು ಸಂತಾಪದಿಂದ ತಳಮಳಿಸುತ್ತ ಬಿದ್ದುಕೊಂಡನು. ಇತ್ತ ವೃದ್ಧ ಕಿಲ್ಲೇದಾರನು ತನ್ನ ದುರ್ಗದಲ್ಲಿ ಭಯಂಕರವಾದ ಅಗ್ನಿ ಪ್ರಳಯವು ನಡೆದಿದ್ದರೂ ಎಲ್ಲಿಯೂ ಕಾಣದಾದನು. ತನ್ನ ತಮ್ಮನನ್ನು ಬಿಡಿಸಿಕೊಳ್ಳುವದಕ್ಕಾಗಿ ಮಾಡಿದ ಪ್ರಯತ್ನವೆಲ್ಲ ವ್ಯರ್ಥವಾದದ್ದರಿಂದ, ಆತನು ಖಿನ್ನನಾಗಿ ಬೆಂಕಿಯನ್ನು ಆರಿಸುವ ವಿಷಯವಾಗಿ ಕುಶಾಬಸಿಗೆ ಹೇಳಿ ತಾನು ಮನೆಗೆ ಹೋಗಿ ತನ್ನ ಪಲ್ಲಂಗದ ಮೇಲೆ ಬಿದ್ದುಕೊಂಡು ಉಸುರ್ಗರೆ ಯುತ್ತಲಿದ್ದನು. ಆತನಿಗೆ ಎಳ್ಳಷ್ಟು ಸಮಾಧಾನವಾಗಲೊಲ್ಲದು. ಇಷ್ಟು ಹೊತ್ತಿಗೆ ದುಷ್ಟ

ಖಾನನೂ ತನ್ನ ಕಾರ್ಯವನ್ನು ನೆರವೇರಿಸಿ ಹೋಗಿರಬಹುದೆಂದು ಆತನು ದುಃಖಿಸಿದನು. ಆತನಿಗೆ ಮಲಗಿದರೆ ಸಮಾಧಾನವಾಗಲೊಲ್ಲದು. ಇನ್ನೂ ತನ್ನ ತಮ್ಮನನ್ನು ದೂಡಿಸದಿದ್ದರೆ ಆತನನ್ನು ಬಿಡಿಸಲಿಕ್ಕೆ ಇನ್ನೊಮ್ಮೆ ಪ್ರಯತ್ನ ಮಾಡಿ ನೋಡೋಣವೆಂದು, ಆತನು ಮಲಗಿದವನು ತಟ್ಟನೆ ಎದ್ದು ಟೊಂಕ ಕಟ್ಟಿ ಖಡ್ಗವನ್ನು ತಕ್ಕೊಂಡು ಹೊರಟನು. ಆಗ ಆತನು ಬಹು ಕ್ರೂರನಾಗಿ ತೋರಿದನು. ಆಗಿನ ಮುದುಕನ ಆವೇಶವನ್ನು ನೋಡಿದರೆ, ತರುಣರು ನಾಚಬಹುದಾಗಿತ್ತು. ಆತನು ವೇಗದಿಂದ ದುರ್ಗದ ಹಿಂಬದಿಯ ಕಡೆಗೆ ಹೊರಟನು. ಹಾದಿಯಲ್ಲಿ ಆತನು ಖಡ್ಗದ ಹಿಡಿಕೆಯನ್ನು ಮೂರು ಮೂರು ಸಾರೆ ಮುಷ್ಟಿಯಿಂದ ಗಟ್ಟಿಯಾಗಿ ಹಿಡಿಯುತ್ತ, ಎರಡನೆಯ ಕೈಯಿಂದ ಒರಿಯನ್ನು ಹಿರಿಯಲು ಹವಣಿಸುವದನ್ನು ನೋಡಲು, ಹೊತ್ತು ಬಿದ್ದರೆ ಖಡ್ಗದ ಸಹಾಯದಿಂದಲಾದರೂ ಕಾರ್ಯಮಾಡಬೇಕೆಂದು ಆತನು ಹವಣಿಸುತ್ತಿರುವಂತೆ ತೋರುತ್ತಿತ್ತು. ಸಮೀಪಕ್ಕೆ ಹೋದಂತೆ ಗದ್ದಲವೇನೂ ಕೇಳದ್ದರಿಂದ ಆ ಮುದುಕನು ನಿರಾಶೆಪಟ್ಟನು. ಇನ್ನಿಷ್ಟು ಮುಂದಕ್ಕೆ ಹೋಗಲು, ಸರ್ಜೇಖಾನನು ಕೈಕಾಲುಗಳಿಗೆ ಕಟ್ಟಿದ್ದ ಸರಪಳಿಯನ್ನು ಎತ್ತೆತ್ತಿ ನೆಲಕ್ಕೆ ಅಪ್ಪಳಿಸುತ್ತ ''ಯಾ ಅಲ್ಲಾ! ಯಾ ಬಿಸಮಿಲ್ಲಾ'' ಎಂದು ಗಟ್ಟಿಯಾಗಿ ನೆರಳು ತ್ತಿರುವಂತೆ ಕೇಳಿಸಿತು. ಕಿಲ್ಲೇದಾರನು ಇದೇನು ಚಮತ್ಕಾರವೆಂದು ಬೆರಗಾಗಿ ಕ್ಷಣಮಾತ್ರ ಸುಮ್ಮನೆ ನಿಂತುಕೊಂಡನು. ಸರ್ಜೇಖಾನನ ದನಿಯಗುರುತು ಆತನಿಗೆ ಹತ್ತಿತು; ಆದರೆ ಸರ್ಜೇಖಾನನು ಹೀಗೆ ನೆರಳುವ ಕಾರಣವೇನೆಂಬದು ಆ ಮುದುಕನಿಗೆ ತಿಳಿಯದಾಯಿತು. ಆತನು ತನ್ನ ಖಡ್ಗವನ್ನು ಸಾವರಿಸಿಕೊಂಡು ಮತ್ತಿಷ್ಟು ಮುಂದಕ್ಕೆ ಸಾಗಿದನು. ಅಷ್ಟರಲ್ಲಿ ಸರ್ಜೇಖಾನನು ಸಂತಾಪದಿಂದ—''ಎಲೇ ಗೋಸಾವ್ಯಾ, ನಿನ್ನನ್ನು ಈಗ ಆ ಲಂಡರಾದ ಮಹಾರಾಷ್ಟ್ರ ಕಳ್ಳರು ಬಿಡಿಸಿಕೊಂಡು ಹೋದರೂ, ಮುಂದೆ ನಿನ್ನ ಪರಿಣಾಮವನ್ನು ನೋಡಿಕೊಳ್ಳು; ಮತ್ತೆ ಯಾರೂ ಅಲ್ಲ, ಸರ್ಜೇಖಾನನಿರುತ್ತೇನೆ'' ಎಂದು ನುಡಿದನು. ಅದನ್ನು ಕೇಳಿ ಕಿಲ್ಲೇದಾರನಿಗೆ ಆಶ್ಚರ್ಯವಾಯಿತು. ಸರ್ಜೇಖಾನನ ಬಯಕೆ ಕೈಗೂಡುವದು ಒತ್ತಟ್ಟಿಗೆ ಉಳಿದು, ಆತನು ತನ್ನ ಜನರೊಡನೆ ಕೈಕಾಲು ಕಟ್ಟಿಸಿಕೊಂಡು ಉರುಳಾಡುವದನ್ನು ನೋಡಿ ಆ ವೃದ್ಧನಿಗೆ ಬಹಳ ಆನಂದವಾಯಿತು. ತನ್ನ ತಮ್ಮನು ದುಷ್ಟರ ಕೈಯೊಳಗಿಂದ ಪಾರಾದದ್ದರಿಂದ ಆ ಭ್ರಾತೃವತ್ಸಲನಾದ ವೃದ್ಧನಿಗೆ ಆನಂದವಾದದ್ದರಲ್ಲಿ ವಿಶೇಷವೇನೂ ಇಲ್ಲ. ಆತನು ಪ್ರಫುಲ್ಲಿತ ಮುದ್ರೆಯಿಂದ ಮನಸ್ಸಿನಲ್ಲಿ– ಅಂತು ಆತನು ಪಾರಾದನು! ಶಾಬಾಸ್! ಬಿಡಿಸಿಕೊಂಡು ಹೋದರಲ್ಲವೆ!! ಇನ್ನು ಈ ದುಷ್ಟ ಖಾನನು, ಬೇರೆ ಯಾರಾದರೂ ಬಂದು ನೋಡುವವರೆಗೆ ಹೀಗೆಯೇ ಉರುಳಾಡುತ್ತಿರಲಿ, ನಾನು ಹೊರಟುಹೋದರಾಯಿತು, ಎಂದು ಆಲೋಚಿಸಿದನು; ಆದರೆ ಮುಪ್ಪಿನ ಕಾಲದಲ್ಲಿ ಇಂಥ ನಿರ್ದಯದ ವಿಚಾರಗಳು ಕಡೆತನಕ ನಿಲ್ಲುವದು ಅಸಂಭವವು. ಪರಾಧೀನನಾಗಿ ಉರುಳಾಡುತ್ತಿರುವ ಖಾನನನ್ನು ನೋಡಿ ಮುದುಕನ ಮನಸ್ಸು ಕರಗಲು, ಆತನು ಖಾನನ ಬಳಿಗೆ ಹೋಗಿ—ಇದೇನು? ಇದೇನು ವಿಲಕ್ಷಣ ಪ್ರಕಾರವು ಒದಗಿತು? ಎಂದು ಕೇಳಲು, ಸರ್ಜೇಖಾನನಿಗೆ ಮರಣಪ್ರಾಯವಾದ ದುಃಖವು ಆಯಿತು.

ಆತನು ವೃಥಾ ಸಂತಾಪದಿಂದ ಹಲ್ಲುಕಡಿಯುತ್ತ ತುಟಿಯನ್ನು ಕಚ್ಚುತ್ತ:— ಎಲೈ ಹರಾಮಖೋರರಿರಾ! ನಿಮ್ಮ ಲುಚ್ಚೇಗಿರಿಯು ನನಗೆ ಗೊತ್ತಿಲ್ಲವೆ? ನೀವು ಹಿಂದುಗಳೆಲ್ಲರೂ ಒಂದೇ ಇರುತ್ತೀರಿ. ನೀವೇ ಒಳಸಂಚುಮಾಡಿ ಅವರನ್ನು ಮುಂಚಿತವಾಗಿ ಕರಸಿಕೊಂಡಿರುತ್ತೀರಿ. ಹಾಗಲ್ಲದಿದ್ದರೆ ಆಯತ ಸಮಯದಲ್ಲಿ ಹುಲ್ಲಬಣಿವೆಗಳಿಗೆ ಬೆಂಕಿಯು ಹೇಗೆ ಹತ್ತಿತು? ಕ್ಷಣವೂ ವಿಲಂಬವಾಗದಂತೆ ಗೋಸಾವಿಯನ್ನು ಹೇಗೆ ಬಿಡಿಸಿಕೊಂಡು ಹೋದರು? ನನ್ನ ಕೈಕಾಲುಗಳನ್ನಷ್ಟು ಉಚ್ಚರಿ, ನಿಮ್ಮ ಸಮಾಚಾರವನ್ನು ನಾನು ತಕ್ಕೊಳ್ಳುತ್ತೇನೆ. ನಿಮ್ಮ ಕಾರಸ್ಥಾನವನ್ನೆಲ್ಲ ಬಾದಶಹರಿಗೆ ಹೇಳಿ ನಿಮ್ಮ ಪಾರಪತ್ಯ ಮಾಡಿಸುವೆನು, ಎಂದು ಬಾಯಿಗೆ ಬಂದ ಹಾಗೆ ಬೊಗಳಹತ್ತಿದನು ತಾನು ಹೀಗೆ ಸಿಟ್ಟು ಬರುವ ಮಾತುಗಳನ್ನಾಡಿದರೆ, ಕಿಲ್ಲೇದಾರನು ತನಗೆ ಕೇಡುಬಗೆದಾನೆಂದು ಸರ್ಜೇಖಾನನು ಲೆಕ್ಕಿಸಲಿಲ್ಲ ಮುಸಲ್ಮಾನರ ಮೇಲೆ ಹರಿಹಾಯುವ ಯೋಗ್ಯತೆಯು ಹಿಂದೂಜನರಲ್ಲಿಲ್ಲೆಂತಲೂ, ಯೋಗ್ಯತೆಯು ಇದ್ದರೂ ಅಂಥ ಸಾಹಸಮಾಡಲಿಕ್ಕೆ ಅವರಿಗೆ ಧೈರ್ಯವಾಗದೆಂತಲೂ ಮುಸಲ್ಮಾನರು ನಂಬಿದ್ದರು. ಇತ್ತ ಕಿಲ್ಲೇದಾರನು ತನ್ನ ತಮ್ಮನ ಬಿಡುಗಡೆಯಾಯಿತೆಂಬ ಆನಂದದಲ್ಲಿ ಸರ್ಜೇಖಾನನ ಮಾತುಗಳನ್ನು ಕಿವಿಯ ಮೇಲೆಯೇ ಹಾಕಿಕೊಳ್ಳಲಿಲ್ಲ, ಸರ್ಜೇಖಾನನ ದುರವಸ್ಥೆಗಾಗಿ ಮರುಗಿ ಆತನನ್ನೂ ಆತನ ಜನರನ್ನೂ ಬಂಧಮುಕ್ತಮಾಡುವದಕ್ಕಾಗಿ ಆ ವೃದ್ಧನು ತನ್ನ ಜನರನ್ನು ಕೂಗಿ ಕೂಗಿ ಕರೆಯಹತ್ತಿದನು. ಬಂದವರು ಕಿಲ್ಲೇದಾರನ ಅಪ್ಪಣೆ ಯಂತೆ ಎಲ್ಲರ ಬಂಧವಿಮೋಚನೆ ಮಾಡಿದರು. ಕೈಕಾಲು, ಬಿಚ್ಚಿದ ಕೂಡಲೆ ಖಾನನ ಬಾಯಿಗೆ ಹರೆಬಂದಂತಾಯಿತು. ಆತನು ಹಿಂದೂಜನರಿಗೆ ಸಿಕ್ಕಹಾಗೆ ಅಂದು, ''ಬೆಂಕಿ ಹೇಗೆ ಹತ್ತಿತು? ಗೋಸಾವಿಯನ್ನು ಯಾರು ಬಿಡಿಸಿಕೊಂಡುಹೋದರು?'' ಎಂಬದರ ವಿಚಾರದ ಗೊಡವಿಗೆ ಹೋಗದೆ, ಮೊದಲು ಆ ಮಾರುತಿಯ ದೇವಾಲಯವನ್ನು ನೆಲಸಮ ಮಾಡಿಸಬೇಕೆಂದು ಹಾತೊರೆಯಹತ್ತಿದನು. ಆದರೆ ಶಿವದೇವರಾಯನೂ, ಕಿಲ್ಲೇದಾರನೂ ಒಂದಾಗಿ ಆ ಕೆಲಸಕ್ಕೆ ಖಾನನನ್ನು ಹರಿಯಗೊಡದಾದರು. ಹಿಂದೂ ಜನರು ಎಷ್ಟು ಪುಕ್ಕರಾಗಿದ್ದರೂ, ಆ ಪುರಾತನ ವಾದ ಮಾರುತಿಯ ದೇವಾಲಯವನ್ನು ತಮ್ಮ ಕಣ್ಣುಮುಟ್ಟಿ ನೆಲಸಮ ಮಾಡಿಸುವಷ್ಟು ಹೇಡಿಗಳಿರುವದಿಲ್ಲೆಂಬದನ್ನು ಖಾನನಾದರೂ ಅರಿತಿದ್ದನು. ಈ ಪ್ರಸಂಗದಲ್ಲಿ ತನ್ನ ಆಗ್ರಹವು ನಡೆಯದ್ದರಿಂದ ಈಗ ಸುಮ್ಮನಿದ್ದು, ವಿಜಾಪುರಕ್ಕೆ ಹೋದಬಳಿಕ ಬಾದಶಹರ ಮುಂದೆ ಎಲ್ಲ ಸಂಗತಿಯನ್ನು ಉಪ್ಪುಕಾರಹಚ್ಚಿ ಹೇಳಿ, ಒಂದು ದೊಡ್ಡ ದಂಡಿನೊಡನೆ ಮತ್ತೊಮ್ಮೆ ಇಲ್ಲಿಗೆ ಬಂದಬಳಿಕ ಇವರೆಲ್ಲರ ಸಮಾಚಾರವನ್ನು ತಕ್ಕೊಳ್ಳಬೇಕೆಂದು ಮನಸ್ಸಿನಲ್ಲಿ ಆಲೋಚಿಸಿ, ಖಾನನು ಹೆಚ್ಚಿನ ಯಾವ ಉಸಾಬರಿಗೂ ಹೋಗದೆ ಶಿವದೇವರಾಯನೊಡನೆ ವಿಜಾಪುರಕ್ಕೆ ಹೊರಟನು.

ಇತ್ತ ಗೋಸಾವಿಯನ್ನು ಬಿಡಿಸಿಕೊಂಡು ಹೋದ ತರುಣ ಮರಾಟರು ಜಿಗಿದಾಡುತ್ತ ದುರ್ಗದ ಹಿಮ್ಮಗ್ಗಲಿನ ಬಿಕ್ಕಟ್ಟಾದ ದಾರಿಯಿಂದ ಸಾಗಿ ಹೋಗಿ ಪಾರಾದರು. ಅವರು ಕೆಲವು ಅಂತರವನ್ನು ಕ್ರಮಿಸಿಹೋಗಿ, ಹಿಂದೆ ಉಳಿದವರು ಬರಲೆಂದು ಒಂದು ಸ್ಥಳದಲ್ಲಿ ಕುಳಿತು

ವಿಶ್ರಾಂತಿಯನ್ನು ಹೊಂದಿದರು. ಅಷ್ಟರಲ್ಲಿ ಶಿವಾಜಿಯೇ ಮೊದಲಾದವರು ಸರ್ಜೇಖಾನನ, ಹಾಗು ಅವನ ಜನರ ಸಮಾಚಾರವನ್ನು ತಕ್ಕೊಂಡು ಅಲ್ಲಿಗೆ ಬಂದರು. ಆಗ ಶಿವಾಜಿಯು ಒಮ್ಮೆ ತನ್ನ ಯಾವತ್ತು ಜನರನ್ನು ನೋಡಿ—''ಶಾಬಾಸ್'' ಎಂದ ಒಂದೇ ಸಾರೆ ನುಡಿದು, ಆರಿಸಿದ ಮೂವರ ಕಡೆಗೆ ಬೊಟ್ಟುಮಾಡಿ—ಈ ಮೂವರು ನನ್ನ ಸಂಗಡ ಬರಲಿ; ಉಳಿದವರು ಇದೇ ಕ್ಷಣದಲ್ಲಿ ಇಲ್ಲದಂತಾಗಿ ನಾಡದು ರಾತ್ರಿ ವಾಡಿಕೆಯ ಕ್ರಮದಂತೆ ಮುರೇಗಾಂವದ ಅಡವಿಯಲ್ಲಿ ಎಲ್ಲರೂ ಒಟ್ಟುಗೂಡತಕ್ಕದ್ದು, ಎಂದು ಆಜ್ಞಾಪಿಸಿದನು. ''ಶಾಬಾಸ್'' ಎಂಬ ಮೂರಕ್ಷರದ ಶಬ್ದವು ಕಿವಿಗೆ ಬಿದ್ದಕೂಡಲೆ ಆ ಲಂಗೋಟಿಯ ಜನರ ಮುಖಗಳು ಪ್ರಫುಲ್ಲಿತವಾದವು. ಅವರ ಸ್ತೋತ್ರದಿಂದ ತುಂಬಿದ ಇಷ್ಟುದ್ದ ವ್ಯಾಖ್ಯಾನ ಕೊಟ್ಟಿದ್ದರೂ, ಆಗದಷ್ಟು ಆನಂದವು ಅವರಿಗೆ ಆ ಒಂದೇ ಶಬ್ದವನ್ನು ಕೇಳಿದ್ದರಿಂದ ಆಯಿತು! ಅಪ್ಪಣೆಯಾದ ಕೂಡಲೆ ತಾನಾಜಿ, ಏಸಾಜಿ, ನಾನಾಸಾಹೇಬ, ಹಾಗು ಶ್ರೀಧರಸ್ವಾಮಿಯನ್ನು ಹೆಗಲಮೇಲೆ ಕುಳ್ಳಿರಿಸಿಕೊಂಡು ಬಂದ ಇಬ್ಬರು, ಇವರ ಹೊರತಾಗಿ ಉಳಿದ ಯಾವತ್ತು ಜನರೂ ಕೂಡಲೆ ನಾಲ್ಕೂದಿಕ್ಕಿಗೆ ಹೊರಟು ಹೋಗಿ, ಹಾಹಾ ಅನ್ನುವದರೊಳಗಾಗಿ ಕಾಣದಂತಾದರು. ಆಗ ಶಿವಾಜಿಯು ಶ್ರೀಧರಸ್ವಾಮಿಗಳ ಚರಣಗಳ ಮೇಲೆ ಮಸ್ತಕವನ್ನಿಟ್ಟು—ಸ್ವಾಮಿಗಳ ಸಲುವಾಗಿ ಕುದುರೆಯನ್ನು ಸಜ್ಜುಮಾಡಿರುತ್ತದೆ. ಸ್ವಾಮಿಗಳಿಗೆ ಕುದುರೆಯಮೇಲೆ ಕೂಡ್ರುವಷ್ಟು ತ್ರಾಣವಿಲ್ಲದ್ದಿದರೆ, ಮೇಣೆಯು ಸಿದ್ಧವಾಗಿರುವದು. ಇಚ್ಛೆಯಂತೆ ಅವಶ್ಯವಾಗಿ ಮಾಡತಕ್ಕದ್ದು; ಈ ಸ್ಥಳದಿಂದ ಬೇಗನೆ ಹೊರಡುವದು ಹಿತಕರವು. ನಾವೆಲ್ಲರೂ ಕುದುರೆ ಹತ್ತಿದರೆ ಬೇಗನೆ ನಮ್ಮ ಸ್ಥಳಕ್ಕೆ ಮುಟ್ಟುವೆವು. ಮುಂದಿನ ವಿಚಾರಮಾಡಲಿಕ್ಕೂ ಸುಲಭವಾಗುವದು, ಎಂದು ಬೇಡಿಕೊಂಡನು. ಆಗ ಸ್ವಾಮಿಗಳು ಕೂಡಲೆ ಶಿವಾಜಿಯನ್ನು ಕುರಿತು—ಏನೂ ಚಿಂತೆಯಿಲ್ಲ, ನನಗೆ ಮೇಣೆಯು ಬೇಡ ಕುದುರೆಯನ್ನು ಹತ್ತಿಕೊಂಡೇ ನಾನು ಬರುವೆನು; ಈಗ ಆದ ಕೆಲಸದಿಂದ ಹಿತವಾಗ ಬೇಕಾಗಿದ್ದರೆ, ಅದಷ್ಟು ಬೇಗನೆ ನಾವು ನಮ್ಮ ಸ್ಥಳವನ್ನು ಮುಟ್ಟತಕ್ಕದ್ದು ಎಂದು ಮುಂದಕ್ಕೆ ಹೆಜ್ಜೆಯನ್ನಿಡಲು, ಎಲ್ಲರಿಗೂ ಸಂತೋಷವಾಯಿತು. ಅವರು ತಿರುಗಿ ಒಂದು ಶಬ್ದವನ್ನು ಕೂಡ ನುಡಿಯದೆ ಹಾದಿಯನ್ನು ನಡೆಯಹತ್ತಿದರು. ಸ್ವಲ್ಪ ದೂರ ಹೋದ ಕೂಡಲೆ ಗಿಡಗಳ ದಟ್ಟಣೆಯಿದ್ದ ಒಂದು ಸ್ಥಳದಲ್ಲಿ ಐದು ಕುದುರೆಗಳು ಸಿದ್ಧವಾಗಿ ನಿಂತಿದ್ದವು. ಒಬ್ಬೊಬ್ಬರು ಒಂದೊಂದು ಕುದುರೆಯನ್ನು ಹತ್ತಿಕೊಂಡು ವಾಯುವೇಗದಿಂದ ಸಾಗಿದರು. ಶ್ರೀಧರ ಸ್ವಾಮಿಗಳನ್ನು ಹೆಗಲಮೇಲೆ ಕುಳ್ಳಿರಿಸಿಕೊಂಡು ಬಂದಿದ್ದ ಜನರು, ಶಿವಾಜಿಯ ಅಪ್ಪಣೆಯಂತೆ ತಮ್ಮ ಹಾದಿಯನ್ನು ಹಿಡಿದು ನಡೆದರು. ಆ ತರುಣ ಮಹಾರಾಷ್ಟ್ರರು ಸುಮಾರು ಅರ್ಧತಾಸು ಮಾರ್ಗಕ್ರಮಿಸುವದ ರೊಳಗೆ ಅವರು ಯಮುನಾಜಿಯ ಗುಡಿಸಿಲುಗಳಿಗೆ ಬಂದು ಮುಟ್ಟಿದರು. ಆಗ ಅವರು ತಮ್ಮ ಕುದುರೆಗಳನ್ನು ನಿಲ್ಲಿಸಿ ಎಲ್ಲರೂ ಇಳಿಯಲು, ಯಾರಾದರೂ ಗುಪ್ತರೀತಿಯಿಂದ ನಿಂತಿರುವರೋ ಏನೋ ಎಂದು ಏಸಾಜಿಯು ನಾಲ್ಕೂ ಕಡೆಗೆ ಪರೀಕ್ಷಿಸಿನೋಡಿ, ಹಾಗೇನೂ ಇರುವದಿಲ್ಲವೆಂದು ತಿಳಿಸಿದನು. ಕೂಡಲೆ ಎಲ್ಲರೂ ಗುಹೆಯ ಆ ದ್ವಾರವನ್ನು ಪ್ರವೇಶಿಸಿ,,

ಸುಮಾರು ಒಂದೂವರೆ ಹರದಾರಿಯನ್ನು ಗೊರವಿಯ ಕಟ್ಟಿಗೆಗಳ ಬೆಳಕಿನಿಂದ ಗುಹೆಯಲ್ಲಿ ಕ್ರಮಿಸಿಹೋಗಿ, ತಮ್ಮ ಅಂಬಾಭವಾನಿಯ ಗುಡಿಯನ್ನು ಪ್ರವೇಶಿಸಿದರು. ಕೂಡಲೆ ''ಜಯ ಭವಾನೀ ಮಾತೇ'' ಎಂಬ ಧ್ವನಿಯಿಂದ ಗುಡಿಯು ತುಂಬಿಹೋಗಲು, ಶ್ರೀಧರಸ್ವಾಮಿಯೂ, ಶಿವಾಜಿಯೂ ಭವಾನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಆಗ, ಶ್ರೀಧರಸ್ವಾಮಿಯು ಎದ್ದುನಿಂತು ಕೈಜೋಡಿಸಿ–ತಾಯೇ, ನಿನ್ನ ಕೃಪೆಯಿಂದಲೇ ನಾನು ತಿರುಗಿ ನಿನ್ನ ದರ್ಶನಕ್ಕೆ ಬಂದೆನು; ನಿನ್ನ ಇಚ್ಛೆಯು; ನೀನು ಕರೆದುಕೊಂಡು ಬಂದದ್ದರಿಂದ ಇಷ್ಟೆಲ್ಲ ಆಯಿತು, ಕಣ್ಣೀರುಗಳು ಸುರಿದವು. ಆಮೇಲೆ ಉಳಿದ ಜನರೂ ಭವಾನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, ಶ್ರೀಧರಸ್ವಾಮಿಯನ್ನು ಮಧ್ಯಭಾಗದಲ್ಲಿ ತೀರ ದೇವಿಯ ಸಮೀಪದಲ್ಲಿ ಕುಳ್ಳಿರಿಸಿಕೊಂಡು ವಿಚಾರಮಾಡತೊಡಗಿದರು.

ಶ್ರೀಧರಸ್ವಾಮಿಯು ಮೊದಲು ತನ್ನ ಯಾವತ್ತು ವೃತ್ತಾಂತವನ್ನು ಹೇಳಿದನು. ಅದನ್ನು ಕೇಳುತ್ತಿರುವ ಆ ಮಹಾರಾಷ್ಟ್ರ ತರುಣರು ಸಂತಾಪದಿಂದ ಉರಿಯತೊಡಗಿದ್ದರು. ತನ್ನ ವೃತ್ತಾಂತವನ್ನೆಲ್ಲ ಹೇಳುವದಾದಮೇಲೆ ಶ್ರೀಧರಸ್ವಾಮಿಯು–ನನ್ನನ್ನು ನೀವು ಅಲ್ಲಿಂದ ಬಿಡಿಸಿಕೊಂಡು ಹೋದೀರೆಂಬ ಆಶೆಯು ನನಗಿದ್ದಿಲ್ಲ. ಮೊದಲನೆಯ ದಿವಸ ಯಮನಾಜಿಯು ದುರಗಮುರಗಿಯ ಸೋಗು ಹಾಕಿಕೊಂಡು ಬಂದದ್ದನ್ನು ನೋಡಿ, ನನ್ನಲ್ಲಿ ಆಶಾಂಕುರವು ಉತ್ಪನ್ನವಾಗಿತ್ತು; ಆದರೆ ಮರುದಿವಸ ಸರ್ಜೇಖಾನನು ನನ್ನನ್ನು ಆ ಸ್ಥಳ ಬಿಡಿಸಿ ಕತ್ತಲ ಕೋಣೆಯಲ್ಲಿ ಹಾಕಿದ್ದರಿಂದ, ನನ್ನ ಆ ಆಶಾಂಕುರವು ನಷ್ಟವಾಗಿ ಹೋಯಿತು. ನನ್ನ ಅವಸ್ಥೆ ಹೀಗಾಯಿತೆಂಬದು ನಿಮಗೆ ತಿಳಿಯುವದು ಸಹ ನನಗೆ ಅಶಕ್ಯವಾಗಿ ತೋರಿತು; ಆದರೆ ಈ ಪ್ರಸಂಗದಲ್ಲಿ ಶಿವಬಾನು ಆಕಾಶ ಪಾತಾಳಗಳನ್ನು ಒಂದುಮಾಡದೆ ಬಿಡನೆಂಬ ವಿಚಾರವೂ ಆಗಾಗ್ಗೆ ನನ್ನಲ್ಲಿ ಉತ್ಪನ್ನವಾಗುತ್ತಿತ್ತು! ಶಿವಬಾ, ನೀನು ನಿಜವಾಗಿ ಧನ್ಯನು ಕಂಡೆಯಾ! ನಿನ್ನ ಮೇಲಿರುವ ಭವಾನೀಮಾತೆಯ ಕೃಪೆಯು ವ್ಯರ್ಥವಾದದ್ದಲ್ಲ. ನಿನ್ನ ಯೋಗದಿಂದ ಮಹಾರಾಷ್ಟ್ರದಲ್ಲಿ ಒಕ್ಕಟ್ಟು ಬೆಳೆದು ಮಹಾರಾಷ್ಟ್ರರಾಜ್ಯದ ಸ್ಥಾಪನೆಯು ನಿಶ್ಚಯವಾಗಿ ಆಗುತ್ತದೆಂಬದರಲ್ಲಿ ಸಂಶಯವಿಲ್ಲ, ಎಂದು ನುಡಿದು ಶಿವಾಜಿಯ ಬೆನ್ನು ಚಪ್ಪರಿಸಿ–''ಶಾಬಾಸ್, ಶಾಬಾಸ್'' ಎಂದು ಸುಮ್ಮನಾದನು. ಆಗ ತಾನಾಜಿಯು ಶ್ರೀಧರಸ್ವಾಮಿಗಳನ್ನು ಕುರಿತು–ಮಹಾಸ್ವಾಮಿಗಳೇ, ನಾವೆಲ್ಲರು ಈಗಿನಿಂದಲೇ ಶಿವಬಾನನ್ನು ಶಿವಾಜಿರಾಜನೆಂದು ಕರೆಯುವದು ವ್ಯರ್ಥವಾದದ್ದಲ್ಲ ಈ ದಿನ ಆತನು ಯುಕ್ತಿಯನ್ನು ತೆಗೆಯದಿದ್ದರೆ, ಮಹಾ ಅನರ್ಥವು ಒದಗುತ್ತಿತ್ತೆಂಬುದರಲ್ಲಿ ಸಂಶಯವಿಲ್ಲ. ಈತನ ಯುಕ್ತಿಯು ಮೊದಮೊದಲು ನಮ್ಮೆಲ್ಲರಿಗೆ ಅಶಕ್ಯವಾಗಿ ತೋರಿತು. ಯಮನ್ಯಾನಿಗೆ ಹುಲ್ಲುಹೊರೆಯುಮಾರುವ ಮುದುಕನ ಸೋಗನ್ನೂ, ಏಸಾಜಿಗೆ ಆತನ ಹೆಂಡತಿಯಾದ ಮುದುಕಿಯ ಸೋಗನ್ನೂ ಹಾಕಿಕೊಳ್ಳಹೇಳಿ, ಅವರು ಜಗಳಾಡಿ ಗಂಡನು ದುರ್ಗದ ಕೆಳಗ ಗೌಡರ ಮನೆಯ ಹುಲ್ಲುಬಣವೆಯ ಬಳಿಯಲ್ಲಿ ಒರಗಿಕೊಳ್ಳಬೇಕೆಂತಲೂ, ಮುದುಕಿಯು ಚಂಚಿತನದಿಂದ ದುರ್ಗವನ್ನು ಏರಿಹೋಗಿ ದುರ್ಗದ ಮೇಲಿನ ಕುದುರೆಯ ಪಾಗಾದ ಬಳಿಯಲ್ಲಿದ್ದ ಬಣಿವೆಯ ಹತ್ತರ ಒರಗಿಕೊಳ್ಳ

ಬೇಕೆಂತಲೂ, ಮಧ್ಯರಾತ್ರಿಯ ಸುಮಾರಕ್ಕೆ ಅವರವರು ಅವರವರ ಬಳಿಯಲ್ಲಿಯ ಬಣಿವೆಗಳಿಗೆ ಬೆಂಕಿಯನ್ನು ಹಚ್ಚಿ ಪಾರಾಗಿಹೋಗ ಬೇಕೆಂತಲೂ ಈ ಶಿವಬಾನೇ ಕಲಿಸಿದ್ದನು. ತಾನು ನಮ್ಮೆಲ್ಲರನ್ನು ಕಟ್ಟಿಕೊಂಡು ಮೂರು ಸಂಜೆಯಾಗುವದರೊಳಗೆ ಅರ್ಧ ಗುಡ್ಡವನ್ನು ಏರಿ ಬಂದಿದ್ದನು. ನಿಮ್ಮನ್ನು ದುರ್ಗದಿಂದ ಕೆಳಗೆ ದೂಡುವ ಹೊತ್ತಿಗೆ, ಅತ್ತ ಹುಲ್ಲಬಣಿವೆಗಳಿಗೆ ಬೆಂಕಿಹತ್ತಿದ್ದರಿಂದ ಜನರ ಚಿತ್ತವೆಲ್ಲ ಅತ್ತ ತೊಡಗಿಕೊಂಡು, ಜನರ ಗುಂಪು ಅತ್ತ ಕಡೆಗೆ ಹೊರಳಲು, ಇತ್ತ ತಾನು ನಮ್ಮೆಲ್ಲರನ್ನು ಕೂಡಿಕೊಂಡು ನಿಮ್ಮನ್ನು ಬಿಡಿಸಿ ಸರ್ಜೇಖಾನನನ್ನೂ, ಆತನ ಜನರನ್ನೂ ನೆಲಕ್ಕೆ ಉರುಳಿಸಿ ಹೊರಟುಬಂದನು. ಏಸಾಜಿಯಾದರೂ ಇಂದಿನದಿನ ಒಳ್ಳೆಯ ಸಾಹಸಮಾಡಿದನೆಂಬದರಲ್ಲಿ ಸಂಶಯವಿಲ್ಲ; ಆತನು ಇಷ್ಟು ಹೊತ್ತಿಗೆ ಬರತಕ್ಕದ್ದು, ಆದರೆ ಯಾಕೆ ಬರಲಿಲ್ಲೋ ತಿಳಿಯದು, ಅನ್ನುತ್ತಿರಲು, ಅಷ್ಟರಲ್ಲಿ ಏಸಾಜಿಯೂ ಬಂದನು. ಆತನನ್ನು ನೋಡಿ ಶ್ರೀಧರಸ್ವಾಮಿಗಳು ವಿನೋದ ದಿಂದ—"ಬರಬೇಕು, ಮುಂದಿಯ ಬಣಿವೆಗೆ ಬೆಂಕಿಹಚ್ಚುವವರು ಇತ್ತ ಬರಬೇಕು" ಎಂದು ಕರೆಯಲು, ಎಲ್ಲರೂ ಕೊಳ್ಳನೆ ನಕ್ಕರು. ಶ್ರೀಧರಸ್ವಾಮಿಯು ಶಿವಬಾನ ಅಮೋಘ ವಾದ ಯುಕ್ತಿಗಾಗಿ ಆಶ್ಚರ್ಯಪಡುತ್ತ ಎಲ್ಲರೊಡನೆ ನಗುತ್ತ ಕೆಲೆಯುತ್ತ ಕೆಲವು ಕಾಲವನ್ನು ಆನಂದದಿಂದ ಕಳೆದನು. ಆಮೇಲೆ ಆತನು ಗಂಭೀರಮುದ್ರೆಯಿಂದ-ಆದದ್ದು ಉತ್ತಮು ಕೆಲಸವಾಗಿರುತ್ತದೆ. ಇನ್ನು ಮುಂದಿನ ಕಾರ್ಯಕ್ಕೆ ಕೈಹಾಕತಕ್ಕದ್ದು. ಇನ್ನು ನಾವು ಮಾಡಬೇಕಾಗಿರುವ ಕಾರ್ಯದ ನೆಲಗಟ್ಟಿನ ಮೇಲೆ ನಮ್ಮ ಭವ್ಯಮಂದಿರವು ನಿಲ್ಲಬೇಕಾಗಿದೆ. ನಾವು ಸರ್ಜೇಖಾನನಿಗೆ ಚೆನ್ನಾಗಿ ಕೈತೋರಿಸಿ, ಆತನ ಮೂಗು ಕೊಯ್ದು ಕೈಯಲ್ಲಿ ಕನ್ನಡಿಕೊಟ್ಟಂತೆ ಮಾಡಿರುವದರಿಂದ, ಆ ಕಾರಸ್ಥಾನಿಯಾದ ಯವನ ಸರದಾರನು ಸೇಡು ತೀರಿಸಿಕೊಳ್ಳದೆ ಸುಮ್ಮನೆ ಕೂಡನು. ಆದಷ್ಟು ಬೇಗನೆ ನಾವು ಒಂದೆರಡು ದುರ್ಗಗಳನ್ನು, ಅದು ಸಾಧಿಸದಿದ್ದರೆ ಒಂದಾದರೂ ದುರ್ಗವನ್ನು ಕೈವಶಮಾಡಿಕೊಳ್ಳದಿದ್ದರೆ ನಿರ್ವಾಹ ವಾಗುವಂತೆ ಇಲ್ಲ. ಮಾರುತಿಯ ದೇವಾಲಯಕ್ಕೂ ನಮಗೂ ಸಂಬಂಧವಿರುತ್ತದೆಂಬುದು ಆತನಿಗೆ ಗೊತ್ತಾಗಿ ಹೋಗಿರುವದರಿಂದ, ಆತನು ಮೊದಲು ಮಾರುತಿಯ ದೇವಾಲಯವನ್ನು ನೆಲ ಸಮಮಾಡಿಸದೆ ಬಿಡನು. ಆದ್ದರಿಂದ ನಾವು ಬಿಟ್ಟಿದ್ದು ಬಿಟ್ಟು, ಮೊದಲು ಮೊಗಲರ ಕೈಯೊಳಗಿನ ಯಾವದೊಂದು ದುರ್ಗವನ್ನು ಕೈಸೇರಿಸಿಕೊಳ್ಳಲಿಕ್ಕೆ ಬೇಕು. ಈ ಮಾತು ನಮಗೆ ಸರ್ವಥಾ ಅಶಕ್ಯವಾಗಿದ್ದರೂ, ಯತ್ನಮಾಡಿದರೆ ಕಾರ್ಯವು ಸಾಧಿಸುವದೆಂದು ನನ್ನ ಮನಸ್ಸು ನನಗೆ ಹೇಳುತ್ತದೆ. ಕೋಟೆಯನ್ನು ವಶಮಾಡಿಕೊಳ್ಳಲಿಕ್ಕೆ ನಾವು ಇಂದು ಯತ್ನಿಸದಿದ್ದರೆ, ನಾಳಿಗೆ ನಮ್ಮಿಂದ ಯಾವ ಕಾರ್ಯವೂ ಆಗುವಹಾಗಿಲ್ಲ.

ಈ ಮೇರೆಗೆ ವಿಚಾರವು ನಡೆದಿರುವಾಗ, ಶಿವಾಜಿಯು ವಿಚಾರಮಗ್ನನಾಗಿ ಸುಮ್ಮನೆ ಕುಳಿತಿದ್ದನು. ಆತನ ಮನಸ್ಸಿನಲ್ಲಿ ದಕ್ಷಿಣಮಹಾರಾಷ್ಟ್ರದೊಳಗಿನ ಕೋಟೆಗಳೆಲ್ಲ ಒಂದರ ಹಿಂದೊಂದು ಬಂದುಹೋಗುತ್ತಲಿದ್ದವು; ಆದರೆ ಒಂದರದೂ ನಿರ್ಧಾರವಾಗಲೊಲ್ಲದು. ಆತನಿಗೆ ಪುರಂದರ ದುರ್ಗವು ಎಲ್ಲ ಬಾಬುಗಳಿಂದಲೂ ಉತ್ತಮವಾಗಿ ತೋರಿತು; ಆದರೆ

ಆತನ ತಂದೆಯಾದ ಶಹಾಜಿರಾಜನಿಗೂ, ಪುರಂದರದ ವೃದ್ಧ ಕಿಲ್ಲೇದಾರನಿಗೂ ಅತ್ಯಂತ ಋಣಾನು ಬಂಧವಿದ್ದದ್ದರಿಂದ, ಒಬ್ಬ ಸ್ನೇಹಿತನ ಕೋಟೆಯನ್ನು ಮತ್ತೊಬ್ಬ ಸ್ನೇಹಿತನ ಮಗನು ಕೈವಶಮಾಡಿಕೊಳ್ಳುವದು ಅಯೋಗ್ಯವೆಂದು ತಿಳಿದು ಆತನು ಆ ಕೋಟೆಯ ಉಸಾಬರಿಯನ್ನು ಬಿಟ್ಟನು. ಇದಲ್ಲದೆ ಮೊದಲತುತ್ತಿಗೇ ಅಂಥ ದೊಡ್ಡ ದುರ್ಗವು ಗಂಟಲಲ್ಲಿ ಇಳಿಯುವದು ಅಶಕ್ಯವೆಂದು ಆ ಶಿವಬಾನ ವಿಶಾಲಬುದ್ಧಿಗೆ ತೋರಹತ್ತಿತು. ಹೀಗೆ ಆತನು ಯಾವ ಕೋಟೆಯನ್ನು ವಶಮಾಡಿಕೊಳ್ಳಬೇಕೆಂದು ಆಲೋಚಿಸುತ್ತಿರಲು, ಶ್ರೀಧರಸ್ವಾಮಿಯು ಆತನ ಬೆನ್ನು ಚಪ್ಪರಿಸಿ—"ಯಾಕೆ ಶಿವಬಾ, ಇಂಥ ಕೋಟೆಯನ್ನೇ ವಶಮಾಡಿಕೊಳ್ಳಬೇಕೆಂಬದರ ನಿರ್ಧಾರವಾಗಲೊಲ್ಲದೋ? ನನ್ನ ಮನಸ್ಸಿನಲ್ಲಿ ಒಂದು ಕೋಟೆಯು ಬಂದಿರುತ್ತದೆ. ಅದರ ಒಡೆಯನು ಇಲ್ಲಿಯೇ ಕುಳಿತು ಕೊಂಡಿರುತ್ತಾನೆ. ಆತನ ಮನಸ್ಸಿಗೆ ಈ ಮಾತು ಎಷ್ಟರ ಮಟ್ಟಿಗೆ ಬರುತ್ತದೋ ಏನೊ?" ಎಂದು ಅತ್ಯಂತ ಸಹೇತುಕ ದೃಷ್ಟಿಯಿಂದ ಮುಗುಳುನಗೆ ನಗುತ್ತ ನಾನಾಸಾಹೇಬನನ್ನು ನೋಡಹತ್ತಿದನು. ಕೂಡಲೆ ನಾನಾಸಾಹೇಬನು ಶ್ರೀಧರಸ್ವಾಮಿಗಳ ಕಡೆಗೂ, ಶಿವಾಜಿಯ ಕಡೆಗೂ ಹೊರಳಿ ನೋಡಿ–ನಾನು ಅದೇ ಮಾತನ್ನು ನಿಮ್ಮ ಮುಂದೆ ಹೇಳಬೇಕೆಂದು ಯೋಚಿಸುತ್ತಿದ್ದೆನು. ನಮ್ಮ ಸುಲ್ತಾನಗಡವನ್ನು ವಶಮಾಡಿಕೊಳ್ಳಬೇಕೆಂದು ನೀವು ನಿರ್ಧರಿಸಿದರೆ, ಹಾಹಾ ಅನ್ನುವದರೊಳಗಾಗಿ ಅದು ನಿಮ್ಮ ಕೈಸೇರಬಹುದು. ಇದಲ್ಲದೆ, ನಮಗೆ ಬೇಕಾಗಿರುವ ಅನುಕೂಲತೆಗಳನ್ನೆಲ್ಲ ಆ ದುರ್ಗದ ಮೇಲೆ ಮಾಡಿಕೊಳ್ಳಲಿಕ್ಕೆ ಬರುವಂತೆ ಅದೆ. ಭೇದೋಪಾಯವಂತು ಸಹಜವಾಗಿ ಸಾಧಿಸುವಹಾಗಿದೆ. ನಾನೂ, ಸೂರ್ಯಾಜಿಯೂ ಕೂಡಿ ಈ ಕೆಲಸವನ್ನು ನಿರಾಯಾಸ ವಾಗಿ ಕೊನೆಗಾಣಿಸುವೆವು. ಸೂರ್ಯಾಜಿಯನ್ನು ಇತ್ತಕಡೆಗೆ ಕರಕೊಂಡುಬರಬೇಕೆಂದು ಮಾಡಿದ್ದೆನು....... ಎಂದು ನುಡಿಯುತ್ತಿರಲು, ಗುಹೆಯ ಮುಖದಲ್ಲಿ ಕುದುರೆಯಮೇಲೆ ಕುಳಿತು ಕಾಯುತ್ತಿದ್ದವನು ಒಳಗೆ ಬಂದು, ತಾನಾಜಿಯ ಕಿವಿಯಲ್ಲಿ ಏನೋ ಹೇಳಿದನು. ತಾನಾಜಿಯು ತಾನು ಕೇಳಿದ್ದನ್ನು ಶ್ರೀಧರಸ್ವಾಮಿಗಳ ಕಿವಿಯಲ್ಲಿ ಹೇಳಿ, ಶಿವಾಜಿರಾಜನ ಅಪ್ಪಣೆಯಿಂದ ಗುಹೆಯ ಮುಖದ ಕಡೆಗೆ ಹೊರಟನು. ಆತನು ವೇಗದಿಂದ ಮಾರ್ಗವನ್ನು ಕ್ರಮಿಸಿ ಗುಹೆಯ ಹೊರಗೆ ಬರಲು, ಅಲ್ಲಿ ಒಬ್ಬ ಗೋಸಾವಿಯು ನಿಂತು ಕೊಂಡಿದ್ದನು. ತಾನಾಜಿಯು ಆ ಗೋಸಾವಿಯ ಬಳಿಗೆ ಹೋಗಲು, ಏನೋ ಮೆಲ್ಲಗೆ ಅವರು ಮಾತಾಡತೊಡಗಿದರು. ಗೋಸಾವಿಯ ಮಾತು ಗಳನ್ನು ತಾನಾಜಿಯು ಕೇಳಿ ಚಿಂತೆಗೊಳಗಾಗಿ, ಆತನು ಅದೇ ಕಾಲಲ್ಲಿ ಗುಹೆಯೊಳಗೆ ಹೊರಟನು; ಆದರೆ ಬರುವಾಗ ಇದ್ದ ಉಲ್ಲಾಸವು ಈಗ ಹೋಗುವಾಗ ಆತನಲ್ಲಿ ಉಳಿಯದ್ದ ರಿಂದ, ಆತನಿಗೆ ಹಾದಿಯು ಸಾಗದಾಯಿತು. ತಾನು ಕೇಳಿದ ಖೇದಕಾರಕವಾದ ವರ್ತಮಾನವನ್ನು ನಾನಾಸಾಹೇಬನ ಸಮಕ್ಷ ಹೇಗೆ ಹೇಳಬೇಕೆಂದು ಆ ತಾನಾಜಿಯು ಚಿಂತಿಸಿದನು. ಹೀಗೆ ಚಿಂತಿಸುತ್ತ ಸಾಗಿರುವಾಗ ಭವಾನಿಯ ಗುಡಿಯು ಬರಲು, ತಾನಾಜಿಯು ಶ್ರೀಧರಸ್ವಾಮಿ ಗಳನ್ನು ಒತ್ತಟ್ಟಿಗೆ ಕರೆದು, ತಾನು ಕೇಳಿದ ಸಂಗತಿಯನ್ನೆಲ್ಲ ಅವರ ಕಿವಿಯಲ್ಲಿ ಹೇಳಿದನು.

ಸುಲ್ತಾನಗಡವನ್ನು ಸ್ವಾಧೀನಪಡಿಸಿಕೊಳ್ಳುವ ಪ್ರಸಕ್ತಿಯು ಹೊರಟದ್ದರಿಂದ, ಶಿವಾಜಿಯೇ ಮೊದಲಾದವರ ಲಕ್ಷವು ಆ ಗಡದ ಕಡೆಗೆ ಹೋದಂತೆ, ವಾಚಕರ ಲಕ್ಷವಾದರೂ ಹೋಗಿರ ಬಹುದು. ನಾನಾಸಾಹೇಬನು ಹೇಳದೆ ಕೇಳದೆ ಮನೆಯಿಂದ ಹೊರಬಿದ್ದು ಬಂದಬಳಿಕ, ಆತನ ತಂದೆಯಾದ ರಂಗರಾವ ಅಪ್ಪಾನು ಏನು ಮಾಡಿದನೆಂಬ ದನ್ನೂ, ಬಾದಶಹನ ಅಪ್ಪಣೆಯಂತೆ ನಾನಾಸಾಹೇಬನು ವಿಜಾಪುರದ ದರ್ಬಾರಕ್ಕೆ ಹೋಗದ್ದರಿಂದ ಬಾದಶಹನು ಏನು ಮಾಡಿದನೆಂಬದನ್ನೂ ತಿಳಕೊಳ್ಳಲಿಕ್ಕೂ ವಾಚಕರು ಉತ್ಸುಕರಾಗಿರಬಹುದು. ನಾನಾಸಾಹೇಬನು ದರ್ಬಾರಕ್ಕೆ ಬಾರದ್ದರಿಂದ ಬಾದಶಹನು ಸಿಟ್ಟಾಗಿ ರಂಗರಾಯನನ್ನು ಕುಟುಂಬಸಹಿತವಾಗಿ ಸೆರೆಹಿಡಿದುಕೊಂಡು ಬರಬೇಕೆಂದು ಅಪ್ಪಣೆಮಾಡಿ ರಣದುಲ್ಲಾಖಾನನನ್ನು ಸೈನ್ಯದೊಡನೆ ಸುಲ್ತಾನಗಡಕ್ಕೆ ಕಳಿಸಿದನು. ಮಹಾರಾಷ್ಟ್ರದ ಸುಂದರ ಸ್ತ್ರೀಯರ ಮೇಲೆ ಮುಸಲ್ಮಾನರ ಕಣ್ಣು ವಿಶೇಷವಾಗಿರುತ್ತಿತ್ತು ಮಹಾರಾಷ್ಟ್ರ ಕಿಲ್ಲೇದಾರರ ವಿಷಯವಾಗಿ ಇಲ್ಲದ ಚಾಡಿಯನ್ನು ಬಾದಶಹನ ಮುಂದೆ ಹೇಳಿ, ಆತನ ಮನಸ್ಸು ಕೆಡಿಸಿ, ಕಿಲ್ಲೇದಾರನನ್ನು ಸೆರೆಹಿಡಕೊಂಡು ಬರಲು ಅಪ್ಪಣೆಯನ್ನು ಪಡೆಯಬೇಕು, ಹಾಗೆ ಅಪ್ಪಣೆಯನ್ನು ಪಡೆದ ಬಳಿಕ ಕಿಲ್ಲೇದಾರನನ್ನು ಬಹು ಕ್ರೂರತನದಿಂದ ನಡಿಸಿಕೊಂಡು, ಅವರ ಮನೆಯೊಳಗಿನ ಸುಂದರ ತರುಣಿಯರ ಮೇಲೆ ಬಲಾತ್ಕಾರವನ್ನು ನಡಿಸಿ, ತಮ್ಮ ದುಷ್ಟ ಕಾಮವಾಸನೆಯನ್ನು ಪೂರ್ಣಮಾಡಿಕೊಳ್ಳಬೇಕು, ಎಂಬದು ಕೆಲವು ಮುಸಲ್ಮಾನ ಸರದಾರರ ಪ್ರೀತಿಯ ಕೆಲಸವಾಗಿತ್ತು ಪರಸ್ತ್ರೀ ವಿಷಯದ ನೀಚಕೃತ್ಯದಿಂದಲೇ ಸೈಯದುಲ್ಲಾಖಾನನೆಂಬ ಸರದಾರನು ಬಾದಶಹನ ಪ್ರೀತಿಗೆ ಪಾತ್ರನಾಗಿದ್ದನು. ರಂಭಾವತಿ ಯೆಂಬ ಹೆಸರಿನ ಲೋಕಸುಂದರಿಯಾದ ಮಹಾರಾಷ್ಟ್ರ ತರುಣಿಯನ್ನು ಬಾದಶಹನ ಕೈಸೇರಿಸುವಾಗ, ಸೈಯ್ಯದುಲ್ಲಾನು ಬಹಳ ಸಾಹಸವನ್ನು ಮಾಡಿದ್ದನು. ಬಾದಶಹನು ರಂಭಾವತಿಯ ಮಾತನ್ನು ಉಗುಳುಹಾಕಿ ದಾಟುತ್ತಿದ್ದಿಲ್ಲ. ಈ ನೀಚನಾದ ಸೈಯದುಲ್ಲಾಖಾನನು ನಾನಾಸಾಹೇಬನ ಹೆಂಡತಿಯಾದ ಚಂದ್ರಾವತಿಯೆಂಬ ಸುಂದರ ತರುಣಿಯ ಮೇಲೆ ಕಣ್ಣಿಟ್ಟಿದ್ದನು. ನಾನಾಸಾಹೇಬನು ಮನೆಬಿಟ್ಟು ಓಡಿ ಹೋದದ್ದು ಖಾನನ ನೀಚಕೃತ್ಯಕ್ಕೆ ಸಹಾಯವಾದಂತಾಯಿತು. ಆತನು ರಂಗರಾವ ಅಪ್ಪಾನಮೇಲೆ ಇಲ್ಲದ ಆರೋಪಗಳನ್ನು ಹೊರಿಸಿ, ಆತನನ್ನೂ, ಆತನ ಕುಟುಂಬದವರನ್ನೂ ಸೆರೆಹಿಡಿದುಕೊಂಡು ಬರುವದಕ್ಕಾಗಿ ಬಾದಶಹನ ಹುಕುಮನ್ನು ಸಂಪಾದಿಸಿದನು. ಹುಕುಮಿನಂತೆ ರಂಗರಾಯನ ಕುಟುಂಬವನ್ನು ಸೆರೆಹಿಡಿಯುವಾಗ, ತನ್ನ ದುಷ್ಟ ವಾಸನೆಯನ್ನು ತೃಪ್ತಿಮಾಡಿಕೊಳ್ಳಬೇಕೆಂದು ಆ ನೀಚನು ಎಣಿಸಿದ್ದನು; ಆದರೆ ಆಯತ ಸಮಯದಲ್ಲಿ ಬಾದಶಹನು ಸುಲ್ತಾನಗಡಕ್ಕೆ ಸೈಯದುಲ್ಲಾ ಖಾನನನ್ನು ಕಳಿಸದೆ, ರಣದುಲ್ಲಾಖಾನನೆಂಬ ಮತ್ತೊಬ್ಬ ಸುಶೀಲ ಸರದಾರನನ್ನು ಕಳಿಸಿದನು. ಇದರಿಂದ ಸೈಯದುಲ್ಲಾಖಾನನಿಗೆ ಬಹಳ ಅಸಮಾಧಾನವಾದರೂ, ವಿಜಾಪುರದ ಸೆರೆಯಾಳಾಗಿ ಬಂದ ಬಳಿಕಾದರೂ ಚಂದ್ರಾವತಿಯನ್ನು ಕೈವಶಮಾಡಿಕೊಳ್ಳಬಹು ದೆಂದು ಆತನು ಸಮಾಧಾನ ಮಾಡಿಕೊಂಡನು. ಇತ್ತ ಚಂದ್ರಾವತಿಯು ದುಷ್ಟನಾದ

ಸೈಯದುಲ್ಲಾಖಾನನು ತಮ್ಮ ದುರ್ಗದ ಮೇಲೆ ಸಾಗಿಬರುವನೆಂಬ ಸುದ್ದಿಯನ್ನು ಕೇಳಿ, ತನ್ನ ಪಾತಿವ್ರತ್ಯವನ್ನು ರಕ್ಷಿಸಿಕೊಳ್ಳುವದಕ್ಕಾಗಿ ಪುರುಷ ವೇಷವನ್ನು ಧರಿಸಿ, ತನ್ನ ದಾಸಿಯೊಡನೆ ಮಧ್ಯರಾತ್ರಿ ದುರ್ಗವನ್ನು ಇಳಿದು ಹೊರಟು ಹೋದಳು. ರಾಜದ್ರೋಹಿಯಾದ ಮಗನು ಪುಂಡರನ್ನು ಕೂಡಿ ತನ್ನ ಮೋರೆಗೆ ಕಪ್ಪು ಹಚ್ಚುವದ ರೊಳಗೆ, ಸುಶೀಲೆಯಾದ ಸೊಸೆಯು ಒಮ್ಮಿಂದೊಮ್ಮೆ ಅರಮನೆಯಿಂದ ಇಲ್ಲದಂತಾದದ್ದನ್ನು ನೋಡಿ ರಂಗರಾಯನಿಗೆ ಬಹಳ ವ್ಯಸನವಾಯಿತು.

ಸೈಯದುಲ್ಲಾಖಾನನ ಬದಲು ಬಾದಶಹನು ರಣದುಲ್ಲಾಖಾನನನ್ನು ಸುಲ್ತಾನ ಗಡದ ಮೇಲೆ ಕಳಿಸಿದನೆಂತಲೂ, ರಣದುಲ್ಲಾಖಾನನು ಸುಶೀಲನಿದ್ದನೆಂತಲೂ ಮೇಲೆ ಬರೆದಿದೆಯಷ್ಟೇ? ಮುಸಲ್ಮಾನರಲ್ಲಿಯೇ ಆಗಲಿ, ಹಿಂದೂ ಜನರಲ್ಲಿಯೇ ಆಗಲಿ, ಬೇರೆ ಯಾವ ಧರ್ಮದವರಲ್ಲಿಯೇ ಆಗಲಿ ಎಲ್ಲರೂ ಸಜ್ಜನರೇ ಇರುತ್ತಾರೆಂದು ಹೇಳಲಿಕ್ಕಾಗುವ ದಿಲ್ಲ, ಎಲ್ಲರೂ ದುರ್ಜನರಿರುತ್ತಾರೆಂತಲೂ ಹೇಳಲಿಕ್ಕಾಗುವದಿಲ್ಲ, ಸಜ್ಜನರೂ ಇರುವರು, ದುರ್ಜನರೂ ಇರುವರು; ಆದರೆ ಸಜ್ಜನರ ಸಂಖ್ಯೆಯು ಹಚ್ಚಿದಾಗ ಯಾವದೊಂದು ಜಾತಿಯ ಉತ್ಕರ್ಷವಾಗುತ್ತದೆಂಬದನ್ನೂ, ದುರ್ಜನ ಸಂಖ್ಯೆಯು ಹೆಚ್ಚಿದಾಗ ಯಾವದೊಂದು ಜಾತಿಯು ಅಧೋಗತಿ ಹೊಂದುವ ದೆಂಬದನ್ನೂ ಮಾತ್ರ ನಾವು ಮರೆಯತಕ್ಕದ್ದಲ್ಲ. ಇರಲಿ, ಪ್ರಕೃತ ವಿಷಯವನ್ನು ಬರೆಯೋಣ. ರಣದುಲ್ಲಾಖಾನನು ವಯಸ್ಸು ಚಿಕ್ಕದಿದ್ದರೂ, ಆತನ ವಿಚಾರಗಳು ಒಳ್ಳೇ ಪರಿಪಕ್ವವಾಗಿದ್ದವು. ಆತನು ಒಳ್ಳೇ ಕರ್ತೃತ್ವಶಾಲಿಯಾದದ್ದರಿಂದ, ವಿಜಾಪುರದಲ್ಲಿ ಮುರಾರಿ–ಜಗದೇವರಾಯನಂತೆ ಪ್ರತಿಷ್ಠಿತನಾಗಿದ್ದನು. ಸ್ವಭಾವದಿಂದ ಲಾದರೂ ಖಾನನು ಬಹು ದೊಡ್ಡ ಮನುಷ್ಯನಿದ್ದನು. ಆತನು ಗುಣಲುಬ್ಧನು, ರಂಗರಾವ ಅಪ್ಪಾನು ಒಳ್ಳೇ ರಾಜನಿಷ್ಠನೆಂಬದನ್ನು ಅರಿತದ್ದರಿಂದ, ಖಾನನು ಆ ವೃದ್ಧ ಕಿಲ್ಲೇದಾರನ ವಿಷಯವಾಗಿ ಪೂಜ್ಯ ಬುದ್ಧಿಯುಳ್ಳವನಾಗಿದ್ದನು. ಖಾನನು ವಿಜಾಪುರದಿಂದ ಹೊರಟು ಮಾರ್ಗವನ್ನು ಕ್ರಮಿಸುತ್ತ, ಒಂದು ದಿನ ಒಂದು ಹಳ್ಳಿಯ ಹೊರಗಿನ ಹಾಳು ಗುಡಿಯಲ್ಲಿ ವಿಶ್ರಾಂತಿಗಾಗಿ ತಳವೂರಿದನು. ಅಷ್ಟರಲ್ಲಿ ಪುರುಷ ವೇಷದಿಂದ ದಾಸಿಯೊಡನೆ ಹೋಗುತ್ತಿದ್ದ ಚಂದ್ರಾವತಿಯು ಖಾನನ ಕಣ್ಣಿಗೆ ಬಿದ್ದಳು. ಚಂದ್ರಾವತಿಯು ಮೊದಲೇ ಸುಂದರ ತರುಣಿಯು, ಅದರಲ್ಲಿ ಪುರುಷವೇಷ, ಕೇಳುವದೇನು? ಆಕೆಯನ್ನು ನೋಡಿದ ಕೂಡಲೆ ಖಾನನ ಚಿತ್ತಹರಣವಾಗಿ ಹೋಯಿತು. ಆತನು ಸರದಾರ ವೇಷದ ಚಂದ್ರಾವತಿಯನ್ನು ಬಹುಮಾನಪೂರ್ವಕವಾಗಿ ಕರೆಸಿಕೊಂಡು ಉರ್ದುಭಾಷೆಯಿಂದ ''ಆ ಈಯೇ ಜನಾಬ! ಆವ ಬೈಠಿಯೇ ಮಹಾರಾಜ'' ಎಂದು ನುಡಿದು, ತನ್ನ ಬಳಿಯಲ್ಲಿ ಕುಳಿತುಕೊಳ್ಳುವದಕ್ಕಾಗಿ ಬೇಡಿಕೊಂಡನು. ಆಗ ವೇಷಧಾರೀ ಸರದಾರನು ಸಂಕೋಚಪಡುತ್ತ, ನಿರ್ವಾಹವಿಲ್ಲದೆ ಖಾನನಿಂದ ದೂರದಲ್ಲಿ ವಿನಯದಿಂದ ಕುಳಿತುಕೊಂಡನು. ಖಾನನಿಗೆ ಏನು ಸಂಶಯ ಬಂದಿತೊ ತಿಳಿಯದು, ಆತನು ಎವೆಯಿಕ್ಕದೆ ಒಂದೇಸವನೆ ಆ ತರುಣ ಸರದಾರನನ್ನು ನೋಡಹತ್ತಿದನು. ತನ್ನಂಥ ಕುಲೀನ ಪುರುಷನು ಹೀಗೆ ನೋಡುವದು ಮರ್ಯಾದೆಯಲ್ಲೆಂದು ತಿಳಿದು, ಖಾನನು ಆ ತರುಣ ಸರದಾರನನ್ನು ಕುರಿತು— ಆಪ ಜನಾಬ, ನಿಮ್ಮನ್ನು ಬಹಳ

ಹೊತ್ತು ಕುಳ್ಳಿರಿಸಿಕೊಂಡದ್ದಕ್ಕಾಗಿ ಕ್ಷಮಿಸಿರಿ; ಕೂಡಲೆ ನಿಮ್ಮ ಯೋಗಕ್ಷೇಮವನ್ನು ವಿಚಾರಿಸಿ ಅಪ್ಪಣೆ ಕೊಟ್ಟು ಕಳಿಸಬಹುದಾಗಿತ್ತು; ಆದರೆ ನಿಮ್ಮ ಸಂಗಡ ಸಾವಕಾಶವಾಗಿ ನಾಲ್ಕು ಮಾತುಗಳನ್ನು ಆಡುವ ಇಚ್ಛೆಯಾದದ್ದರಿಂದ ಇಷ್ಟು ಹೊತ್ತು ಕುಳ್ಳಿರಿಸಿಕೊಂಡೆನು, ಬೇಸರ ಮಾಡಬಾರದು. ನೀವು ಇರುವದು ಎಲ್ಲಿ? ಯಾವ ಕಡೆಗೆ ಹೊರಟಿರಿ? ನಿಮ್ಮ ತಾರೀಫು ಏನು? ಇತ್ಯಾದಿ ಪ್ರಶ್ನೆಗಳನ್ನು ಕೇಳಲಿಕ್ಕೆ ನನಗೆ ಪರವಾನಿಗೆಯನ್ನು ಕೊಡಬೇಕು, ಅನ್ನಲು, ಆ ಪುರುಷ ವೇಷಧಾರಿಯಾದ ಚಂದ್ರಾವತಿಯು ಗಾಬರಿಯಾಗಿ, ಇನ್ನು ಏನು ಉತ್ತರ ಕೊಡಬೇಕೆಂದು ಯೋಚಿಸತೊಡಗಿದಳು. ಖಾನನಮಾತು ಮುಗಿದಕೂಡಲೆ ಆತನ ಕಡೆಗೆ ಸರಳತನದಿಂದ ನೋಡಲು ಯತ್ನಿಸಿ ಮೆಲ್ಲನೆ ಆಕೆಯು ನುಡಿದಳೇನಂದರೆ—ಸರದಾರಸಾಹೇಬರೇ, ಯಃಕಶ್ಚಿತ್ ಮನುಷ್ಯನಾದ ನಾನು ನನ್ನ ಹೆಂಡತಿಯನ್ನು ಕರಕೊಂಡು ಎರಡನೆಯ ಊರಿಗೆ ಹೋಗುತ್ತಿರುವಾಗ, ದಣಿವಾರಿಸಿಕೊಳ್ಳುವದಕ್ಕಾಗಿ ಗುಡಿಯಲ್ಲಿ ಕುಳಿತು ಕೊಂಡಿದ್ದೆನು. ಅಷ್ಟರಲ್ಲಿ ನಿಮ್ಮ ಜನರು ಬಂದು ನನ್ನ ವೃತ್ತಾಂತವನ್ನು ಕೇಳತೊಡಗಿದರು. ನಾನು ಹೇಳತಕ್ಕ ಸಂಗತಿಯನ್ನು ಹೇಳಿದರೂ ಅವರಿಗೆ ಸಮಾಧಾನವಾಗಲಿಲ್ಲ, ಅವರು ''ಖಾನಸಾಹೇಬರು ಬರುವ ತನಕಕುಳಿತು ಕೊಳ್ಳಿರಿ, ಅವರು ಬಂದು ನಿಮ್ಮ ವೃತ್ತಾಂತವನ್ನು ಕೇಳಿದಬಳಿಕ ಅವರ ಅಪ್ಪಣೆಯಿಂದ ಬೇಕಾದಲ್ಲಿಗೆ ಹೋಗಿರಿ,'' ಎಂದು ಆಜ್ಞಾಪಿಸಿದರು. ನಾನು ಒಬ್ಬನು, ಅವರು ಬಹು ಜನರು; ಅಂದಬಳಿಕ ಅವರ ಅಪ್ಪಣೆಯಂತೆ ಕುಳಿತು ಕೊಳ್ಳದೆ ಏನು ಮಾಡಲಿ? ತಾವು ಇನ್ನು ಬೇಗನೆ ನನಗೆ ಅಪ್ಪಣೆ ಕೊಟ್ಟುಕಳಿಸುವಿರೆಂದು ನಂಬಿದ್ದೇನೆ.

ವೇಷಧಾರಿಯಾದ ಚಂದ್ರಾವತಿಯ ಈ ಮಾತುಗಳನ್ನು ಕೇಳಿ ರಣದುಲ್ಲಾಖಾನನಿಗೆ ಸ್ವಲ್ಪ ನಗೆ ಬಂದಿತು. ಆತನು ಆ ತರುಣ ಸರದಾರನನ್ನು ಕುರಿತು—ಅಹಹಾ! ತಮ್ಮ ಮಾತಿನ ಸರಣಿಯು ಎಷ್ಟು ಸುಂದರವಾಗಿದೆ! ತಮ್ಮ ಮಾತಿನಲ್ಲಿ ಸವಿಯೆಷ್ಟು-ಸ್ವಾದವೆಷ್ಟು! ತಮ್ಮ ಸ್ವರವು ಎಷ್ಟು ಮಂಜುಲವಾಗಿದೆ! ವಾಹವಾ! ವಾ! ಯಾರ! ವಾ! ಯಾರ! ಇಂಥ ಮಂಜುಲ ಸ್ವರವನ್ನು ಈ ಹೊತ್ತಿನವರೆಗೆ ಎಲ್ಲಿಯೂ ಕೇಳಿದ್ದಿಲ್ಲ, ಮಾತಾಡಿರಿ, ಇನ್ನಿಷ್ಟು ಮಾತಾಡಿರಿ, ಹೀಗೆಯೇ ಮಾತಾಡುತ್ತಲಿರ್ರಿ. ಸರದಾರರೇ, ನಮ್ಮ ಜನರು ನಿಮ್ಮನ್ನು ತಡೆದದ್ದು ಒಂದು ಬಗೆಯಿಂದ ನೆಟ್ಟಗೆ ಆಯಿತು; ನೀವು ಹೋಗಿ ಬಿಟ್ಟಿದ್ದರೆ ನಿಮ್ಮ ದರ್ಶನದ ಯೋಗವು ಎಲ್ಲಿ ಒದಗುತ್ತಿತ್ತು? ನಮ್ಮ ಜನರು ನಿಮ್ಮ ಸಂಗಡ ಹಾದಿಯ ತಪ್ಪಿ ನಡೆದಿದ್ದರೆ ಹೇಳಬೇಕು, ಅವರಿಗೆ ಶಾಸನ ಮಾಡುವೆನು, ಎಂದು ನುಡಿದು ತಮ್ಮ ಜನರ ಕಡೆಗೆ ತಿರುಗಿ ನೋಡಿ—ಕ್ಯಾ, ಕರೀಮ ಭಕ್ಷ ಅಯ, ಮಹಮ್ಮದ, ನೀವು ಇವರ ಸಂಗಡ ಅಮರ್ಯಾದೆ ಯಿಂದ ನಡಕೊಂಡಿರೊ? ಎಂದು ಕೇಳಲು, ಅವರು-ಖಾವಿಂದ, ಇಲ್ಲ, ನಾವು ಹಾಗೆ ನಡೆದಿಲ್ಲ ಎಂದು ಹೇಳಿ ಒಬ್ಬರ ಕಡೆಗೊಬ್ಬರು ನೋಡಹತ್ತಿದರು. ಇತ್ತ ಆ ತರುಣ ಮರಾಟ ಸರದಾರನು ಸಂಕೋಚಪಡುತ್ತ ಖಾನನನ್ನು ಕುರಿತು—ಇಲ್ಲ, ಖಾನಸಾಹೇಬರೇ,

ತಮ್ಮವರಾದರೂ ನನ್ನ ಅಪಮಾನವನ್ನು ಮಾಡಿರುವದಿಲ್ಲ. ದೊಡ್ಡಿಸ್ತಿಕೆಯಿಂದಲೇ ನನ್ನ ಸಂಗಡ ನಡಕೊಂಡಿರುವರು; ಆದರೆ ಅವಶ್ಯದ ಕೆಲಸವಿರುವದರಿಂದ ಬಡವನನ್ನು ಬೇಗನೆ ಹೋಗಗೊಡಿರಿ, ಎಂದು ಬೇಡಿಕೊಳ್ಳಲು, ಖಾನನು—ಎಲೈ ತರುಣನೇ, ಸಂಗಡ ನಾಲ್ಕು ಜನರನ್ನು ಕರಕೊಳ್ಳದೆ ಈಗಿನ ಪುಂಡಾಟಿಕೆಯ ದಿವಸಗಳಲ್ಲಿ ಹೆಂಗಸರನ್ನು ಹೀಗೆ ಕರಕೊಂಡು ಹೋಗುವದು ಸರಿಯಲ್ಲ. ನಾವು ಬಡವರೆಂದು ಹೇಳಿಕೊಳ್ಳುವಿರಿ; ಆದರೆ ನೀವು ನಿಜವಾಗಿ ಬಡವರಾಗಿದ್ದರೆ, ಕಡೆತನಕ ಬಡವರಾಗಿರುವದು, ಅದರಲ್ಲಿ ನನ್ನ ಭೆಟ್ಟಿಯಾದಬಳಿಕ ಬಡವರಾಗಿರುವದು ನನಗೆ ನೆಟ್ಟಗೆ ಕಾಣುವದಿಲ್ಲ. ನೀವು ಇನ್ನು ಮೇಲೆ ಎಲ್ಲಿಯೂ ಹೋಗಬೇಡಿರಿ, ನನ್ನ ಸಂಗಡ ಇದ್ದು ಬಿಡಿರಿ; ಬಾದಶಹರಿಂದ ನಿಮಗೆ ಸರದಾರಿಕೆಯನ್ನು ಕೊಡಿಸುತ್ತೇನೆ. ಇಂದಿನಿಂದ ನಾನು ನಿಮ್ಮನ್ನು ನನ್ನ ಗೆಳೆಯರೆಂದು ಭಾವಿಸುವೆನು, ನೀವಾದರೂ ನನ್ನನ್ನು ಹಾಗೆಯೇ ಭಾವಿಸಿರಿ.

ಖಾನನ ಈ ಮಾತುಗಳನ್ನು ಕೇಳಿ ಪುರುಷವೇಷಧಾರಿಯಾದ ಚಂದ್ರಾವತಿಗೆ ಏನು ಮಾತಾಡಬೇಕೆಂಬದು ತಿಳಿಯದಾಯಿತು. ತನ್ನ ನಿಜವಾದ ಸ್ವರೂಪವನ್ನು ಖಾನನು ಕಂಡು ಹಿಡಿದನೋ ಏನೋ ಎಂಬ ಸಂಶಯವು ಆಕೆಯನ್ನು ಬಾಧಿಸತೊಡಗಿತು. ಆಕೆಯು ತೀರ ಸೂಕ್ಷ್ಮ ಸ್ವರದಿಂದ—ನನಗೇತಕ್ಕೆ ಸರದಾರಿಕೆಯು? ತಾವು ಕೃಪೆ ಮಾಡುತ್ತೀರಿ, ನನ್ನನ್ನು ಸ್ನೇಹಿತನೆಂದು ಭಾವಿಸುತ್ತೀರಿ, ಇಷ್ಟೇ ನನಗೆ ಸಾಕಾಗಿರುವದು. ಸರದಾರಿಕೆಯನ್ನು ಸಂಪಾದಿಸುವ ಯೋಗ್ಯತೆಯು ನನಗಿಲ್ಲ ಎಂದು ಗುಣಗುಟ್ಟಿದಳು; ಆದರೆ ಅದರಿಂದ ಪ್ರಯೋಜನವೇನೂ ಆಗಲಿಲ್ಲ. ಮರಾಠಾ ಸರದಾರನು ಒಲ್ಲೆನೊಲ್ಲೆನೆಂಬಂತೆ, ಆತನ ವಿಷಯದ ರಣುದಲ್ಲಾಖಾನನ ಭಕ್ತಿಯು ಹೆಚ್ಚುತ್ತ ಹೆಚ್ಚುತ್ತ ಹೋಯಿತು. ತಾನು ಈ ಸಂಕಟದಿಂದ ಹೇಗೆ ಪಾರಾದೇನೆಂದು ಚಂದ್ರಾವತಿಯು ಚಿಂತೆಗೊಳಗಾದಳು. ಬಾದಶಹನ ಪೂರ್ಣ ಕೃಪೆಗೆ ಪಾತ್ರನಾದ ಸರದಾರನು, ಸರದಾರಿಕೆಯನ್ನು ಕೊಡಿಸಿ ಮಿತ್ರತ್ವವನ್ನು ಸಂಪಾದಿಸಲಿಚ್ಛಿಸಿದರೆ, ಯಾರು ಸಂತೋಷ ಪಡಲಿಕ್ಕಿಲ್ಲ? ಆದರೆ ಪುರುಷವೇಷಧಾರಿಯಾದ ಚಂದ್ರಾವತಿಗೆ ಅದೊಂದು ಮಹಾಸಂಕಟವಾಗಿ ತೋರಿದ್ದು ಆಶ್ಚರ್ಯವಲ್ಲ. ತನ್ನ ಮಾತಿಗೆ ಆನಂದದಿಂದ ತಟ್ಟನೆ ಸಮ್ಮತಿಸದೆ ಮೋರೆಕೆಳಗೆ ಮಾಡಿಕೊಂಡು ಕುಳಿತದ್ದನ್ನು ನೋಡಿ ಖಾನನು ತರುಣ ಸರದಾರನಿಗೆ—ಅಜೀ, ಸಾಹೇಬ, ನಿಮಗೆ ಅಂಥ ಸಂಕಟವೇನು ಬಂದಿದೆ? ನಾನು ಈಗ ಆಡಿದ ಮಾತುಗಳನ್ನು ಮತ್ತೊಬ್ಬರಿಗೆ ಆಡಿದರೆ, ಅವರು ತಮ್ಮನ್ನು ಧನ್ಯರೆಂದು ತಿಳಕೊಳ್ಳುತ್ತಿದ್ದರು. ಆದರೆ ನನ್ನ ಮಾತನ್ನು ಕೇಳಿ ನೀವಂತು ಖಿನ್ನರಾಗಿ ಹೋಗಿರುತ್ತೀರಿ. ಯಾಕೆ? ನನ್ನ ಮಿತ್ರತ್ವವು ನಿಮಗೆ ತಿರಸ್ಕರಣೀಯವಾಗಿ ತೋರುವದೋ? ಬಾದಶಹನ ಕೃಪೆಯು ನಿಮಗೆ ಬೇಡೆನ್ನುವ ಹಾಗೆ ಆಗಿದೆಯೇನು? ನಿಮಗೆ ಅಂಥ ಪ್ರಸಂಗವೇನು ಬಂದಿದೆ? ಸರಳಹೃದಯದಿಂದ ಅದನ್ನು ನನ್ನ ಮುಂದೆ ಹೇಳಿದರೆ, ಅದು ಮನುಷ್ಯರಿಂದ ನಿವಾರಣವಾಗುವ ಹಾಗಿದ್ದಲ್ಲಿ ನಾನು ನಿವಾರಣಮಾಡಿ ತೀರುವೆನು; ಆದರೆ ಇನ್ನು ಮೇಲೆ ನನ್ನನ್ನು ಬಿಟ್ಟು ನೀವು ಎಲ್ಲಿಯೂ ಹೋಗಲಾಗದು. ನಿಮ್ಮ ಕುಟುಂಬವನ್ನು ಎಲ್ಲಿಗಾದರೂ

ಕಳಿಸತಕ್ಕದ್ದಿದ್ದರೆ, ನಾನು ನನ್ನ ಆಳುಗಳನ್ನು ಕೊಟ್ಟು ಅಲ್ಲಿಗೆ ಕಳಿಸುವೆನು; ಬೇಕಾಗಿದ್ದರೆ ನಿನ್ನ ಸಂಗಡ ಕರಕೊಂಡುಬಂದರೂ ಸರಿಯೆ. ನಿಮ್ಮ ಮನೆಯವರಿಗೆ ಸುದ್ದಿಯನ್ನು ಕಳಿಸಬೇಕಾಗಿದ್ದರೆ, ಸಾಂಡಣಿಯ ಸವಾರನನ್ನು ಕಳಿಸುವೆನು, ಅನ್ನಲು, ಆ ವೇಷಧಾರಿಯಾದ ಚಂದ್ರಾವತಿಯು ಯಾವ ಮಾತನ್ನೂ ಆಡಲಿಲ್ಲ. ಮೌನವು ಅರ್ಧಸಮ್ಮತಿಯೆಂದು ತಿಳಿದು ರಣದುಲ್ಲಾಖಾನನು ಆ ತರುಣ ಸರದಾರನ ಯೋಗಕ್ಷೇಮವನ್ನು ಉತ್ತಮರೀತಿಯಿಂದ ನೋಡಿ ಕೊಳ್ಳುವಂತೆ ತನ್ನ ಜನರಿಗೆ ಆಜ್ಞಾಪಿಸಿ, ಆತನ ಕುಟುಂಬಕ್ಕಾಗಿ ಸ್ವತಂತ್ರವಾದ ರಾಹುಟಿಯನ್ನೂ, ಕನಾತನ್ನೂ ಕೊಡಬೇಕೆಂದು ನಿರ್ಧಾರದಿಂದ ಆಜ್ಞಾಪಿಸಿದನು. ಚಂದ್ರಾವತಿಯು ನಿರ್ವಾಹ ವಿಲ್ಲದ್ದರಿಂದ ಜುಲುಮೆಯ ರಾಮರಾಮದಂತೆ, ಒಂದು ತುಟಿ ಎರಡು ಮಾಡದೆ ಸುಮ್ಮನೆ ಇರಬೇಕಾಯಿತು!

## ಪ್ರತಿಜ್ಞೆ

ಈ ಮೇರೆಗೆ ರಣದುಲ್ಲಾಖಾನನು ಆ ತರುಣ ಮರಾಟನನ್ನು ಜುಲುಮೆಯಿಂದ ಇಟ್ಟುಕೊಂಡು, ಆತನೊಡನೆ ಮುಂದಕ್ಕೆ ಪಯಣವನ್ನು ಬೆಳೆಸಿ ಸುಲ್ತಾನಗಡವನ್ನು ಮುಟ್ಟಿದನು. ಖಾನನ ದಂಡು ಗಡದ ಕೆಳಗೇ ಬೀಡುಬಿಟ್ಟಿತು. ಮರುದಿನ ಖಾನನು ದುರ್ಗದ ಮೇಲೆ ಹೋಗುವಾಗ ತನ್ನ ಹೊಸ ಮಿತ್ರನನ್ನು ಬೇಕಾದಷ್ಟು ಕರೆದನು; ಆದರೆ ಆ ಮಿತ್ರನು ಅದಕ್ಕೆ ಸಮ್ಮತಿಸಲಿಲ್ಲ. ಖಾನನು ನಿರುಪಾಯನಾಗಿ ಒಬ್ಬನೇ ಸುಲ್ತಾನಗಡದ ಮೇಲೆ ಹೋದನು. ಕಿಲ್ಲೇದಾರನಾದ ರಂಗರಾವ ಅಪ್ಪಾನು ಪದ್ಧತಿಯಂತೆ ವಸ್ತ್ರದಿಂದ ಕೈಗಳನ್ನು ಕಟ್ಟಿಕೊಂಡು ಖಾನನ ದರ್ಶನಕ್ಕಾಗಿ ಬಂದನು. ರಂಗರಾಯರ ಸ್ವಾಮಿನಿಷ್ಠೆಗಾಗಿ ಖಾನನು ಆದರ ಬುದ್ಧಿಯವ ನಾಗಿದ್ದನೆಂದು ಹಿಂದೆ ಹೇಳಿದೆಯಷ್ಟೇ? ರಂಗರಾಯನು ತನ್ನನ್ನು ಎದುರುಗೊಳ್ಳುವದಕ್ಕಾಗಿ ಬಂದ ಕೂಡಲೆ ಖಾನನು ಮುಂದಕ್ಕೆ ಹೋಗಿ ರಂಗರಾಯನ ಎರಡೂ ಕೈಗಳನ್ನು ಹಿಡಿದು— ಕಿಲ್ಲೇದಾರರೇ, ನಾನು ಬಾದಶಹರ ಅಪ್ಪಣೆಯಿಂದ ಕಟ್ಟಲ್ಪಟ್ಟವನು; ಆದ್ದರಿಂದ ಬಾದಶಹರ ಅಪ್ಪಣೆಯಂತೆ ನಿಮ್ಮನ್ನು ಸೆರೆಹಿಡಿಯುವದಕ್ಕಾಗಿ ಬಂದಿದ್ದೇನೆ; ಆದರೆ ಯಾವ ಪ್ರಕಾರದಿಂದಲೂ ನಿಮ್ಮ ಮಾನಹಾನಿಯಾಗಲಿಕ್ಕಿಲ್ಲೆಂದು ನಿಸ್ಸಂಶಯವಾಗಿ ತಿಳಕೊಳ್ಳಿರಿ. ಬಾದಶಹರ ಅಪ್ಪಣೆಯಂತೆ ತಾವು ನನ್ನ ಸಂಗಡ ವಿಜಾಪುರಕ್ಕೆ ನಡೆಯಬೇಕು. ನಿಮ್ಮ ಮಾನಮರ್ಯಾದೆಗೆ ಸರಿಯಾಗಿ ನಿಮ್ಮನ್ನು ಕರಕೊಂಡು ಹೋಗುತ್ತೇನೆ. ಅಲ್ಲಿ ನಿಮಗೆ ಯಾವ ಬಗೆಯ ತ್ರಾಸವೂ ಆಗದಂತೆ ನಾನು ನೋಡಿಕೊಳ್ಳುವೆನು. ಎಂದು ವಿನಯದಿಂದ ನುಡಿದನು. ಅದನ್ನು ಕೇಳಿ ರಂಗರಾಯನಿಗೆ ಬಹಳ ಆಶ್ಚರ್ಯವಾಯಿತು. ತನ್ನನ್ನು ಸೆರೆಹಿಡಿದೊಯ್ಯಲಿಕ್ಕೆ ಬಂದ ಮುಸಲ್ಮಾನನು ತನ್ನ ಸಂಗಡ ಹೀಗೆ ನಡಕೊಂಡಾ ನೆಂಬದು ಆತನ ಕನಸುಮನಸುಗಳಲ್ಲಿಯೂ ಬಂದಿದ್ದಿಲ್ಲ. ಮೊದಲ ಭೆಟ್ಟಿಯಲ್ಲಿಯೇ ಖಾನನು

ರಂಗರಾಯನ ಸಂಗಡ ಹೀಗೆ ವಿನಯದಿಂದ ನಡಕೊಂಡದ್ದನ್ನು ನೋಡಿ, ಖಾನನ ಜನರು ಆಶ್ಚರ್ಯಪಟ್ಟು, ತಾವೂ ಕಿಲ್ಲೇದಾರನ ಸಂಗಡ ಮಾನಮರ್ಯಾದೆಯಿಂದ ನಡಕೊಳ್ಳ ಹತ್ತಿದರು. ಅದರಂತೆ ಖಾನನ ಸೌಮ್ಯಾಚರಣೆಯನ್ನು ನೋಡಿ ಸುಲ್ತಾನಗಡದ ಜನರೂ ಸಮಾಧಾನಪಟ್ಟರು. ಕಿಲ್ಲೇದಾರನನ್ನು ಸೆರೆಹಿಡಿಯುವಾಗ ಏನು ಅನರ್ಥ ಒದಗುವದೋ ಎಂದು ಬಾಯಲ್ಲಿ ಅಕ್ಕಿಯ ಕಾಳು ಹಾಕಿಕೊಂಡು ಕುಳಿತಿದ್ದ ಅವರ ಭಯವು ಬಹುಮಟ್ಟಿಗೆ ದೂರವಾಯಿತು. ಖಾನನೂ ಕಿಲ್ಲೇದಾರನಾದ ರಂಗರಾಯನೂ ದಿವಾಣಖಾನೆಯಲ್ಲಿ ಬಹಳ ಹೊತ್ತು ಇಬ್ಬರೇ ಮಾತಾಡುತ್ತ ಕುಳಿತಬಳಿಕ, ಎಲ್ಲರಿಗೂ ದಿವಾಣಖಾನೆಯಲ್ಲಿ ಬರುವದಕ್ಕೆ ಅಪ್ಪಣೆಯು ದೊರೆಯಿತು. ಜನರು ಒಳಗೆ ಬಂದು ನಗೆಮೊಗದಿಂದ ಒಪ್ಪುವ ಖಾನನನ್ನೂ, ಕಿಲ್ಲೇದಾರನನ್ನೂ ನೋಡಿ ಸಮಾಧಾನಪಟ್ಟರು. ರಣದುಲ್ಲಾಖಾನನು ಬಾದಶಹನ ಅಪ್ಪಣೆಯಿಂದ ಕಿಲ್ಲೇದಾರನನ್ನು ಸೆರೆಹಿಡಿದು ದುರ್ಗವನ್ನು ವಶಮಾಡಿಕೊಳ್ಳಲಿಕ್ಕೆ ಬಂದಿರುವದರಿಂದ, ದುರ್ಗದೊಳಗೆಲ್ಲ ಅನರ್ಥದ ಪ್ರಸಂಗಗಳು ಎಲ್ಲಿ ಒದಗುತ್ತವೋ ಎಂಬ ಬಗ್ಗೆ ಅವರಲ್ಲಿ ಉಂಟಾಗಿದ್ದ ಅಂಜಿಕೆಯು, ಬಹುಮಟ್ಟಿಗೆ ದೂರವಾಯಿತು. ತಮ್ಮ ಕಿಲ್ಲೇದಾರನು ಕೆಲವು ದಿವಸ ವಿಜಾಪುರಕ್ಕೆ ಹೋಗಿ ಬರುವನಲ್ಲದೆ, ಹೆಚ್ಚಿನ ಕ್ರಾಂತಿಗಳೇನು ಒದಗುವದಿಲ್ಲೆಂದು ಜನರು ತಿಳಕೊಂಡರು. ರಣದುಲ್ಲಾಖಾನನು ನಾಳೆ ತನ್ನ ಸಂಗಡ ವಿಜಾಪುರಕ್ಕೆ ಹೊರಡಬೇಕೆಂದು ರಂಗರಾಯನಿಗೆ ತಿಳಿಸಿ, ದುರ್ಗವನ್ನು ಇಳಿದುಹೋದನು. ತನ್ನ ಹೊಸ ಗೆಳೆಯನನ್ನು ಯಾವಾಗ ಕಂಡೇನೆಂಬ ಲವಲವಿಕೆಯು ಆತನಲ್ಲಿ ಉತ್ಪನ್ನವಾಗಿತ್ತು. ಖಾನನು ದುರ್ಗವನ್ನು ಇಳಿದಾಗ ಹೊತ್ತು ಮುಣುಗಿತ್ತು. ನಿಮಗೆ ಅನುಕೂಲವಿದ್ದರೆ ಭೆಟ್ಟಿಗೆ ಬರುತ್ತೇನೆ, ಎಂದು ತಮ್ಮ ಹೊಸ ಮಿತ್ರನಿಗೆ ಹೇಳಿಕಳಿಸಲು, ಆ ಪುರುಷವೇಷಧಾರಿಯಾದ ಚಂದ್ರಾವತಿಯು ತಾನೇ ಖಾನನ ದರ್ಶನಕ್ಕೆ ಹೋಗಿ ವಿನಯದಿಂದ ಬಹು ದೂರ ಕುಳಿತುಕೊಂಡಳು. ಆಗ ಖಾನನು ಮುಗುಳುನಗೆ ನಗುತ್ತ– ಸರದಾರರೇ, ನಾನು ನಿಮ್ಮನ್ನು ಜೀವದ ಗೆಳೆಯರೆಂದು ತಿಳಿಯುತ್ತಿರಲು, ನೀವು ಸಂಕೋಚದಿಂದ ದೂರದೂರ ಕುಳಿತು ಕೊಳ್ಳುತ್ತೀರಲ್ಲ! ನೀವು ನನ್ನ ಸಂಗಡ ದುರ್ಗದ ಮೇಲೆ ಬಾರದ್ದರಿಂದ, ಅಲ್ಲಿಯ ವರ್ತಮಾನ ವನ್ನು ಹೇಳುವದಕ್ಕಾಗಿ ನಿಮ್ಮ ಬಳಿಗೆ ಬರಬೇಕೆಂದು ಮಾಡಿದ್ದೆನು. ರಂಗರಾಯರು ಬಹು ಸ್ವಾಮಿನಿಷ್ಠರು. ಆದರೆ ನಾನಾಸಾಹೇಬರ ಉದ್ಧಟತನದ ನಡತೆಯ ಕಾಲಲ್ಲಿ ಅವರು ದುರ್ಗದ ಒಡೆತನವನ್ನು ಕಳಕೊಂಡು, ಬಾದಶಹರ ಸೆರೆಯಾಳಾಗಬೇಕಾಯಿತು. ಬಾದಶಹರು ಕರೆಸಿದಂತೆ ನಾನಾಸಾಹೇಬರು ದರ್ಬಾರಕ್ಕೆ ಬಂದುಬಿಟ್ಟಿದ್ದರೆ, ನಿಶ್ಚಯವಾಗಿ ಅವರ ಕಲ್ಯಾಣವಾಗುತ್ತಿತ್ತು. ಅಂಥ ಗುಣಿಜನರ ಕಲ್ಯಾಣಕ್ಕಾಗಿ ನಾನು ಆದಷ್ಟು ಯತ್ನಿಸುತ್ತಿದ್ದೆನು; ಆದರೆ ಇನ್ನು ಪಶ್ಚಾತ್ತಾಪಪಟ್ಟು ಮಾಡುವದೇನು? ಆದರೂ ನಾನು ರಂಗರಾಯರಿಗೆ ಯಾವ ಬಗೆಯ ಉಪದ್ರವವನ್ನೂ ಕೊಡುವದಿಲ್ಲ; ಅವರ ಮಾನಮರ್ಯಾದೆ ಗಳಿಗೆ ಕುಂದುಬರ ಗೊಡುವದಿಲ್ಲ; ಈ ಸಂಗತಿಯನ್ನು ಬಾಯಿಬಿಟ್ಟು ಅವರಿಗೆ ತಿಳಿಸಿ, ನಾಳೆ ನನ್ನ ಸಂಗಡ ವಿಜಾಪುರಕ್ಕೆ ಬರಬೇಕೆಂದು ಅವರಿಗೆ ಹೇಳಿದ್ದೇನೆ; ಆದರೆ ಸರದಾರರೇ, ನೀವು ನನ್ನ ಸಂಗಡ

ದುರ್ಗದ ಮೇಲೆ ಯಾಕೆ ಬರಲಿಲ್ಲ? ಎಂದು ಕೇಳಿ ಎವೆಯಿಕ್ಕದೆ ನೋಡಲು, ಚಂದ್ರಾವತಿಯು ಖಾನನ ಕಡೆಗೆ ನೋಡಲಾರದೆ ಕಣ್ಣು ತಪ್ಪಿಸಹತ್ತಿದಳು. ತನ್ನ ಪತಿಯಾದ ನಾನಾಸಾಹೇಬನ ಮಾತು ಹೊರಟ ಕೂಡಲೆ ಆಕೆಯ ಜೀವಕ್ಕೆ ಹೇಗೆಹೇಗೋ ಆಯಿತು. ಆಕೆಯು ಧೈರ್ಯತಂದುಕೊಂಡಂತೆ ಮಾಡಿ—''ಏನೋ, ಸುಮ್ಮನೆ ಬರಲಿಲ್ಲ'' ಎಂದು ಖಾನನಿಗೆ ಉತ್ತರಕೊಟ್ಟಳು. ಆಗ ಖಾನನು—ಆಗಲಿ, ನಾಳೆ ನಿಮಗೆ ರಂಗರಾಯರ ಭೆಟ್ಟಿಯನ್ನು ಮಾಡಿಸುತ್ತೇನೆ. ಹೇಗೂ ವಿಜಾಪುರಕ್ಕೆ ಹೋಗುವತನಕ ಅವರು ನಮ್ಮ ಸಂಗಡಲೇ ಇರುತ್ತಾರೆ, ಅನ್ನಲು, ಆ ಪುರುಷವೇಷಧಾರಿಯಾದ ಚಂದ್ರಾವತಿಯು ಆತುರತೆಯಿಂದ—ಬೇಡ, ಖಾನಸಾಹೇಬರೇ, ನನಗೆ ರಂಗರಾಯರ ಭೆಟ್ಟಿಯನ್ನು ಮಾಡಿಸುವದು ಸರ್ವಥಾ ಬೇಡ. ಅವರ ಗುರುತು ನನಗೆ ವಿಶೇಷವಾಗಿರುವದಿಲ್ಲ; ನನ್ನ ಮೇಲೆ ಅವರ ಲೋಭವೂ ಇರುವದಿಲ್ಲ, ನಮ್ಮಂಥ ತರುಣರ ಸಹವಾಸದಿಂದಲೇ ತಮ್ಮ ಮಗನು ಕೆಟ್ಟನೆಂಬ ಸಿಟ್ಟಿನಿಂದ ನನ್ನನ್ನು ಅವರು ನಿರಾಕರಿಸಬಹುದು. ನನ್ನನ್ನು ನನ್ನ ಊರಿಗೆ ಹೋಗಗೊಡಬೇಕೆಂದು ಬೇಕಾದಷ್ಟು ಹೇಳಿಕೊಂಡೆನು; ಆದರೆ ಅದು ತಮ್ಮ ಮನಸ್ಸಿಗೆ ಬರಲಿಲ್ಲ, ಖಾನಸಾಹೇಬರೇ, ನನ್ನನ್ನು ವಿಜಾಪುರಕ್ಕೆ ಕರಕೊಂಡು ಹೋಗುವದೇ ನಿಶ್ಚಯವಾಗಿದ್ದರೆ, ಇಷ್ಟಾದರೂ ಮಾಡಿರಿ, ರಂಗರಾಯರ ಭೆಟ್ಟಿಯು ನನಗೆ ಎಂದೂ ಆಗಬಾರದು ಎಂದು ಹೇಳಿದಳು.

ಮನೆಯಲ್ಲಿ ಹೇಳದೆ ಕೇಳದೆ, ಸಯ್ಯದುಲ್ಲಾಖಾನನ ನೀಚತನಕ್ಕಾಗಿ ಬೆದರಿ ತನ್ನ ಪಾತಿವ್ರತ್ಯವನ್ನು ರಕ್ಷಿಸಿಕೊಳ್ಳಲು ತವರುಮನೆಗೆ ಹೊರಟಿದ್ದ ಚಂದ್ರಾವತಿಯು, ತನ್ನ ಮಾವನನ್ನು ಕಾಣಲಿಕ್ಕೆ ಬೆದರಿದ್ದು ಆಶ್ಚರ್ಯವಲ್ಲ. ಖಾನನೊಡನೆ ವಿಜಾಪುರಕ್ಕೆ ಹೋದರೂ ಚಿಂತೆಯಿಲ್ಲ. ಪ್ರಸಂಗ ವಿಶೇಷದಲ್ಲಿ ನನ್ನ ಜೀವವು ನನ್ನ ಕೈಯಲ್ಲಿ ಇರುವದರಿಂದ, ನಾನು ಯಾರ ಸಂಗಡ ಹೋಗಲಿಕ್ಕೂ ಹೆದರುವ ಹಾಗಿಲ್ಲ, ಆದರೆ ಸದ್ಯಕ್ಕೆ ಮಾವನನ್ನು ಕಾಣುವ ದುರ್ಧರ ಪ್ರಸಂಗವು ತಪ್ಪಿದರೆ ಸಾಕೆಂಬ ಹಾಗೆ ಆಕೆಗೆ ಆಯಿತು. ಖಾನನು ಆಕೆಯ ಮಾತಿಗೆ ಒಡಂಬಟ್ಟನು. ಆಗ ಚಂದ್ರಾವತಿಯು, ಇನ್ನಿಷ್ಟು ಕುಳಿತುಕೊಳ್ಳಬೇಕೆಂಬ ಖಾನನ ಆಗ್ರಹಕ್ಕೆ ಲಕ್ಷಕೊಡದೆ, ಹೊತ್ತಾಯಿತೆಂದು ಹೇಳಿ ಚಟ್ಟನೆ ಎದ್ದು ತನ್ನ ಮನೆಗೆ ಹೊರಟುಹೋದಳು. ಅದರಿಂದ ಖಾನನು ಬಹಳ ಸಮಾಧಾನಪಟ್ಟು, ರಾತ್ರಿ ಊಟವನ್ನೂ ಕೂಡ ಮಾಡದೆ, ತನ್ನ ಪಲ್ಲಂಗದ ಮೇಲಿನ ಗುದ್ದು ಮೊಳದ ಗಾದಿಯ ಮೇಲೆ ಬಿದ್ದುಕೊಂಡನು. ಖಾನನು ಸದ್ಗುಣೆಯೆಂದು ಹಿಂದೆ ಹೇಳಿದೆಯಷ್ಟೇ? ಆದರೆ ''ಬಲವಾನಿಂದ್ರಿಯಗ್ರಾಮೋ ವಿದ್ವಾಂಸಮಪಿಕರ್ಷತಿ'' ಎಂಬ ದೊಡ್ಡವರ ಸಿದ್ಧಾಂತವಾದಂತೆ, ಪ್ರಾಯದ ಖಾನನ ಬಲಿಷ್ಠವಾದ ಇಂದ್ರಿಯಗಳು ಆತನ ಮನಸ್ಸನ್ನು ವಿಷಯಗಳ ಕಡೆಗೆ ಜಗ್ಗಹತ್ತಿದವು. ತನ್ನ ಹೊಸ ಮಿತ್ರನು ಒಬ್ಬ ಸುಂದರಸ್ತ್ರೀಯಿರುವಳೆಂಬದು ಖಾನನಿಗೆ ಗೊತ್ತಾಗಿತ್ತು, ಇದಲ್ಲದೆ ಆಕೆಯು ನಾನಾಸಾಹೇಬನ ಹೆಂಡತಿಯಾದ ಚಂದ್ರಾವತಿಯೆಂಬ ಸುಂದರಿಯೇ ಆಗಿರಬಹುದೆಂಬ ಸಂಶಯವು ಆತನಲ್ಲಿ ಉತ್ಪನ್ನವಾಗಿತ್ತು; ಆದರೆ ಆಕೆಯು ರಂಗರಾಯನ ಭೆಟ್ಟಿಗಾಗಿ ಅಂದೇಶಪಡುವದನ್ನು

ನೋಡಿಯಂತು, ಖಾನನ ಆ ಸಂಶಯದ ನಿವಾರಣೆಯೂ ಆಗಿಹೋಯಿತು. ನ್ಯಾಯದಿಂದ ನೋಡಿದರೆ, ಖಾನನು ಚಂದ್ರಾವತಿಯನ್ನು ಕೂಡಲೆ ರಂಗರಾಯನಿಗೆ ಒಪ್ಪಿಸಬಹುದಾಗಿತ್ತು; ಆದರೆ ಅಷ್ಟು ವಿವೇಕವೂ, ಧೈರ್ಯವೂ ಆಕಸ್ಮಾತ್ ದುಷ್ಟ ಕಾಮವಾಸನೆಯಿಂದ ಪೀಡಿತ ನಾದ ಖಾನನಲ್ಲಿ ಹೇಗೆ ಹುಟ್ಟಬೇಕು? ಸುಜನನಾದ ಖಾನನ ಹೊರತು ಚಂದ್ರಾವತಿಯು ಮತ್ತೊಬ್ಬ ಮುಸಲ್ಮಾನ ಸರದಾರನ ಕೈಸೇರಿದ್ದರೆ, ಇಷ್ಟು ಹೊತ್ತಿಗೆ ಆಕೆಯ ಪಾತಿವ್ರತ್ಯದ ಭಂಗವಾಗಲಿ, ಆಕೆಯ ಇಹಲೋಕ ಯಾತ್ರೆಯ ಪರಿಸಮಾಪ್ತಿಯಾಗಲಿ ಆಗಿಹೋಗುತ್ತಿತ್ತು. ಖಾನನು ಎಷ್ಟು ವಿಕಾರವಶನಾಗಿದ್ದರೂ, ಆತನ ಸುವಿಚಾರವು ಅನೀತಿಯ ಕೆಲಸಕ್ಕೆ ಆತನನ್ನು ಹರಿಯಗೊಡಲಿಲ್ಲ. ಪಾಪಭೀರುವೂ, ಮರ್ಯಾದಸ್ಥನೂ ಆದ ಆ ಖಾನನು ಹೆಚ್ಚಿನ ಉಸಾಬರಿಗೆ ಹೋಗದೆ. ತಳಮಳಿಸುತ್ತ ಹಾಸಿಗೆಯ ಮೇಲೆ ಮಲಗಿಕೊಂಡನು. ಏನು ಮಾಡಿದರೂ ಆತನಿಗೆ ನಿದ್ರೆಯು ಬರಲೊಲ್ಲದು. ಆತನು ಹಾಸಿಗೆಯ ಮೇಲೆ ಎದ್ದು ಕುಳಿತುಕೊಂಡನು, ರಾಹುಟಿಯಲ್ಲಿ ಅತ್ತಿತ್ತ ಓಡಾಡಿದನು, ಹೊರಗೆ ಹೋಗಿ ಚಂದ್ರಾವತಿಯ ರಾಹುಟಿಯ ಕಡೆ ಅತ್ಯಂತ ಆತುರತೆಯಿಂದ ನೋಡುತ್ತ ನಿಂತುಕೊಂಡನು. ಈ ಮೇರೆಗೆ ಆತನು ಹೊರಗಿನಿಂದ ಒಳಗೆ, ಒಳಗಿನಿಂದ ಹೊರಗೆ ಹಲವು ವೇಳೆ ಎಡತಾಕಿದನು. ಒಂಬತ್ತು ತಾಸು ರಾತ್ರಿಯ ಸುಮಾರಕ್ಕೆ ಖಾನನು ಹೀಗೆ ಚಂದ್ರಾವತಿಯ ಡೇರೆಯ ಕಡೆಗೆ ನೋಡುತ್ತ, ಮುಂದಕ್ಕೆ ನಾಲ್ಕು ಹೆಜ್ಜೆ ಹೋಗುತ್ತ ಮತ್ತೆ ಹಿಂದಿರುಗುತ್ತ ಕೇವಲ ಅಸ್ವಸ್ಥಚಿತ್ತನಾಗಿ ಹೊರಗಿನ ಪರಿವೆಯಲ್ಲದೆ ಇರಲು, ಅಹಮ್ಮದನೆಂಬವನು ಆಕಸ್ಮಾತ್ತಾಗಿ ಖಾನನ ಬಳಿಗೆ ಬಂದು—ಖಾವಿಂದ, ಬೆಳಗಾಗುತ್ತ ಬಂತಲ್ಲ, ತಮಗೆ ನಿದ್ರೆ ಬಂದಿರುವದಿಲ್ಲವೋ? ತಮ್ಮ ಇಂದಿನ ಸ್ಥಿತಿಯು ನನಗೆ ವಿಚಿತ್ರವಾಗಿ ತೋರುತ್ತದೆ! ಮುಂದಕ್ಕೆ ಹೋಗುವಿರಿ, ಹಿಂದಕ್ಕೆ ತಿರುಗುವಿರಿ; ಯಾರನ್ನಾದರೂ ಕರೆಯಬೇಕಾಗಿದ್ದರೆ, ಅಥವಾ ಎಲ್ಲಿಗಾದರೂ ಹೋಗ ಬೇಕಾಗಿದ್ದರೆ, ಮತ್ತೆ ಏನಾದರೂ ಕೆಲಸವಿದ್ದರೆ ಈ ಸೇವಕನಿಗೆ ಹೇಳಬೇಕು, ಸಂಕೋಚ ಪಡುವ ಕಾರಣವಿಲ್ಲ. ತಲಾಂತರದಿಂದ ನಾವು ಖಾವಂದರ ಮನೆತನದ ಸೇವೆಯನ್ನು ಮಾಡುತ್ತ ಬಂದಿರಲು, ನನ್ನ ವಿಷಯವಾಗಿ ಸಂಕೋಚಪಡುವದೇಕೆ? ಹೊಸ ಸರದಾರನ ಮೇಲೆ ತಮ್ಮ ಲೋಭವು ವಿಶೇಷವಾಗಿ ಕುಳಿತಂತೆ ತೋರುತ್ತದೆ; ಆದರೆ ಆತನನ್ನು ಕರೆದುತರಲೋ? ನಿಮ್ಮ ಕೈಯಲ್ಲಿರುವ ಮಾತಿಗೆ ಇಷ್ಟೊಂದು ಚಿಂತೆಯೇಕೆ? ಎಂದು ಅವಿವೇಕತನದಿಂದ ನುಡಿಯುತ್ತಿರಲು, ರಣದುಲ್ಲಾಖಾನನು ಆತನನ್ನು ತಡೆದು—ಅಹಮ್ಮದಾ, ನೀನು ಕದ್ದು ನನ್ನನ್ನು ಪರೀಕ್ಷಿಸುತ್ತಲಿರುವೆಯೋ? ಮತ್ತೊಬ್ಬನಾಗಿದ್ದರೆ ಆತನ ಈ ಅಧಿಕ ಪ್ರಸಂಗದ ನಡತೆಗಾಗಿಯೂ, ಮಾತಿಗಾಗಿಯೂ ಶಾಸನ ಮಾಡುತ್ತಿದ್ದೆನು; ಆದರೆ ಹಿರಿಯರ ಕಾಲದಿಂದ ನಿಮ್ಮ ಮನೆತನದವರು ನಮ್ಮ ಮನೆತನದ ಸೇವೆ ಮಾಡುತ್ತ ಬಂದದ್ದರಿಂದ ಈಗ ಕ್ಷಮಿಸಿದ್ದೇನೆ. ಹೋಗು ನಿನ್ನ ಕೆಲಸಕ್ಕೆ! ಯಾಕೋ ನಿದ್ರೆ ಬಾರದಿರಲು, ಸುಮ್ಮನೆ ಹೊರಗೆ ತಿರುಗಾಡುತ್ತಿರುವಾಗ ಎಷ್ಟು ಪಂಚಾಂಗವನ್ನು ಉಚ್ಚಿದೆಯಲ್ಲ! ಎಂದು ಗದ್ದರಿಸಲು, ಅಹಮ್ಮದನು ತಿರುಗಿ ಯಾವ ಮಾತನ್ನೂ ಆಡದೆ ಅಲ್ಲಿಂದ ಹೊರಟುಹೋದನು.

ಮರ್ಯಾದಾ ಶೀಲನಾದ ಖಾನನಿಗೆ ಇಷ್ಟೇ ಸಾಕಾಯಿತು. ತನ್ನ ನೀಚತನದ ನಡತೆಗಾಗಿ ಆತನಿಗೆ ಪಶ್ಚಾತ್ತಾಪವಾಯಿತು. ತನ್ನ ದುಷ್ಟವಾಸನೆಯು ಅಹಮ್ಮದನಿಗೆ ಗೊತ್ತಾಯಿತೋ ಏನೋ, ಎಂದು ಆತನು ಮನಸ್ಸಿನಲ್ಲಿ ನಾಚಿದನು. ಅಪಕೀರ್ತಿಗಾಗಿ ಆತನ ಹೃದಯವು ಗಡಗಡನೆ ನಡುಗಿತು. ಇನ್ನು ಇಂಥ ಕೆಟ್ಟವಾಸನೆಗೆ ಒಳಗಾಗಬಾರದೆಂದು ನಿಶ್ಚಯಿಸಿ, ಪಶ್ಚಾತ್ತಾಪಪಡುತ್ತ ನಿದ್ರೆ ಹತ್ತಿಯೇ ತೀರಬೇಕೆಂದು ಆತನು ಹಾಸಿಗೆಯ ಮೇಲೆ ಮಲಗಿಕೊಂಡನು; ಆದರೆ ನಿದ್ರೆಯು ಯಾರ ಕೈಯೊಳಗಿನದು? ಖಾನನು ತಳಮಳಿಸುತ್ತ ಮನಸ್ಸಿನಲ್ಲಿ—ನಾನು ಇಲ್ಲಿಯವರೆಗೆ ಪರಸ್ತ್ರೀಯರ ವಿಷಯದ ಮೋಹವು ಕೇವಲ ಕಾಲ್ಪನಿಕವಾದದ್ದೆಂದು ತಿಳಿದಿದ್ದೆನು. ಕಣ್ಣಿಗೆ ಬಿದ್ದ ಕೂಡಲೆ ನನ್ನ ಅವಸ್ಥೆ ಹೀಗಾದಬಳಿಕ, ಅತಿಸಂಘಟನದಿಂದ ನನ್ನ ಪರಿಣಾಮವೇನಾದೀತೆಂದು ಯಾರು ಹೇಳಬೇಕು?......ಆದರೆ ರಣದುಲ್ಲಾಖಾನನು ಇಂಥ ನೀಚತನಕ್ಕೆ ಎಂದೂ ಮನಸ್ಸು ಮಾಡನು. ಏನೋ ಕಣ್ಣೆದುರಿಗೆ ಇರಬೇಕು; ಸಹವಾಸವು ದೂರವಾಗಬಾರದೆಂಬದಿಷ್ಟೇ ಉದ್ದೇಶದಿಂದ ಆ ಸುಂದರಿಯನ್ನು ಇಟ್ಟುಕೊಂಡಿದ್ದೇನೆ; ಯಾವ ಸಂಶಯವೂ ಬಾರದಂತೆ ಇಲ್ಲಿಯವರೆಗೆ ಆಕೆಯ ಸಂಗಡ ನಡಕೊಂಡಿರುವೆನು, ಮುಂದಾದರೂ ನಡಕೊಳ್ಳುವೆನು. ಆದರೆ ಇದಕ್ಕೂ ಕೆಟ್ಟ ವಿಚಾರಗಳು ನನ್ನ ಮನಸ್ಸಿನಲ್ಲಿ ಉತ್ಪನ್ನವಾಗಿ ಕೆಟ್ಟ ಕೆಲಸಕ್ಕೆ ನಾನು ತೊಡಗುವ ಹಾಗೆ ಕಂಡರೆ, ಎರಡನೆಯವರನ್ನು ತುಂಡರಿಸುವದಕ್ಕಾಗಿ ಧರಿಸಿದ್ದ ಈ ಖಡ್ಗದಿಂದ ನನ್ನನ್ನೇ ತುಂಡರಿಸಿ ಕೊಳ್ಳುವೆನು. ಇದರಲ್ಲಿ ಎಳ್ಳಷ್ಟು ಸಂಶಯವಿಲ್ಲ, ಎಂದು ನುಡಿದು, ನಿಟ್ಟುಸುರು ಬಿಟ್ಟು, ಇನ್ನು ನಿದ್ರೆಯು ಹತ್ತಿಯೇ ತೀರಬೇಕೆಂದು ಮಲಗಿಕೊಂಡನು ಆತನ ಈ ನಿರ್ಧಾರಕ್ಕೆ ನಿದ್ರಾದೇವಿಯು ಪ್ರಸನ್ನಳಾದಂತೆ, ಬೆಳಗುಮುಂಜಾವಿನಲ್ಲಿ ಆತನಿಗೆ ನಿದ್ರೆಯು ಹತ್ತಿತು.

ಮರುದಿವಸ ರಣದುಲ್ಲಾಖಾನನು ರಂಗರಾಯನೊಡನೆ ವಿಜಾಪುರಕ್ಕೆ ಹೊರಟನು. ಪುರುಷವೇಷದ ಚಂದ್ರಾವತಿಯು ಬೇಡಿಕೊಂಡಂತೆ, ಆಕೆಯು ರಂಗರಾಯನ ಕಣ್ಣಿಗೆ ಬೀಳ ಬಾರದೆಂದು ರಣದುಲ್ಲಾಖಾನನು ಆಕೆಯನ್ನು ತನ್ನ ಜನರಿಗೆ ಒಪ್ಪಿಸಿ, ಒಂದು ಪಯಣವನ್ನು ಮುಂದಕ್ಕೆ ಸಾಗಿಸಿ, ರಂಗರಾಯನೊಡನೆ ತಾನು ಹಿಂದಿನಿಂದ ಹೊರಟನು. ರಕ್ಕಿಸಿ ಹೋಗದಂತೆ ಖಾನನು ತನ್ನ ಆ ಹೊಸ ಮಿತ್ರನಿಂದ ವಚನ ತಕ್ಕೊಂಡಿದ್ದನು. ಹಾದಿಯಲ್ಲಿ ವಿಶೇಷ ಸಂಗತಿಯೇನೂ ಒದಗದೆ, ಅವರೆಲ್ಲರೂ ವಿಜಾಪುರಕ್ಕೆ ಹೋದರು. ಚಂದ್ರಾವತಿಯ ಮೇಲೆ ಕಣ್ಣಿಟ್ಟಿದ್ದ ಸೈಯ್ಯದುಲ್ಲಾಖಾನನು ರಂಗರಾಯನ ವಿರುದ್ಧವಾಗಿ ಹೇಳಿ, ಬಾದಶಹನ ಮನಸ್ಸನ್ನು ಕೆಡಿಸಿಬಿಟ್ಟಿದ್ದನು. ಬಾದಶಾಹಿಯ ಅಮಲಿನ ವಿಷಯವಾಗಿ ರಂಗರಾಯನ ವಿಶ್ವಾಸ ವಿಲ್ಲದ್ದರಿಂದ, ಆತನು ತನ್ನ ಮಗನಾದ ನಾನಾಸಾಹೇಬನ ಪುಂಡಾಟಿಕೆಯನ್ನು ನಿಲ್ಲಿಸುವದಿಲ್ಲೆಂತಲೂ, ಮಗನನ್ನು ದರ್ಬಾರಕ್ಕೆ ಕಳಿಸಬೇಕೆಂದು ಬಾದಶಹರ ಆಜ್ಞಾಪತ್ರವು ಬಂದಿರಲು, ಬುದ್ಧಿಪೂರ್ವಕವಾಗಿ ಮಗನನ್ನು ಎಲ್ಲಿಯೋ ಓಡಿಸಿದನೆಂತಲೂ ಆತನು ಬಾದಶಹನ ಮನಸ್ಸಿನಲ್ಲಿ ತುಂಬಿಬಿಟ್ಟಿದ್ದನು; ಆದ್ದರಿಂದ ಬಾದಶಹನು ರಂಗರಾಯನ ಮೇಲೆ ಬಹಳ ಸಿಟ್ಟಾಗಿದ್ದನು. ಈ ಕಾಲದಲ್ಲಿ ಬಾದಶಹನ ಬಳಿಯಲ್ಲಿ ಮೂವರ ಮಾತು

ನಡೆಯುತ್ತಿತ್ತು. ರಾಜ್ಯದ ಹಿತ ಸಂಬಂಧದಲ್ಲಿ ಬಾದಶಹನು ಮುರಾರಿ ಜಗದೇವನ, ಹಾಗು ರಣದುಲ್ಲಾಖಾನನ ಮಾತು ಕೇಳುತ್ತಿದ್ದನು. ವಿಷಯವಾಸನಾತೃಪ್ತಿಯ ಸಂಬಂಧದಲ್ಲಿ ಆತನು ಸೈಯ್ಯದುಲ್ಲಾಖಾನನ ಮಾತು ಕೇಳಬೇಕಾಗುತ್ತಿತ್ತು. ಮುರಾರಿ ಜಗದೇವನ ಗುಟ್ಟೂ ರಣದುಲ್ಲಾಖಾನನ ಗುಟ್ಟೂ ಒಂದಾಗಿತ್ತು. ಅವರ ಹಿರಿಯರಿಂದಲೇ ಪರಸ್ಪರರಲ್ಲಿ ಸ್ನೇಹಭಾವವು ಬೆಳೆಯುತ್ತ ಬಂದಿತ್ತು. ಒಟ್ಟಿಗೆ ಬಾದಶಹನಿಗೆ ಮಂತ್ರಾಲೋಚನೆ ಹೇಳುವದರಲ್ಲಿ ಎರಡು ಬಣಗಳಿದ್ದವು. ಒಂದು ಮುರಾರಿ ಜಗದೇವನದು, ಮತ್ತೊಂದು ಸೈಯ್ಯದುಲ್ಲಾಖಾನನದು. ಸೈಯದುಲ್ಲಾಖಾನನು ಬಾದಶಹನ ಬಳಿಯಲ್ಲಿ ಮುರಾರಿಪಂತನ, ಹಾಗು ರಣದುಲ್ಲಾಖಾನನ ವರ್ಚಸ್ಸು ಹೇಗೆ ಕಡಿಮೆಯಾದೀತೆಂದು ಯಾವಾಗಲೂ ಚಿಂತಿಸುತ್ತಿದ್ದನು. ಮುರಾರಿ ಜಗದೇವನ ಬದಲು ತಾನು ಮುಖ್ಯ ವಜೀರನಾಗಬೇಕೆಂದು ಆ ಸೈಯದುಲ್ಲಾಖಾನನು ಯಾವಾಗಲೂ ಹವಣಿಸುತ್ತಿದ್ದನು. ಇವೆರಡು ಬಣಗಳ ಮತಗಳು ವಿರುದ್ಧವಾಗಿದ್ದವು. ಮುಸಲ್ಮಾನರಿಂದ ಹಿಂದೂ ಜನರಿಗೆ ಆಗುತ್ತಿದ್ದ ತಾಪದಿಂದಲೇ ಮಹಾರಾಷ್ಟ್ರರ ಪುಂಡಾಟಿಕೆಯು ಹುಟ್ಟಿರುವದರಿಂದ, ಹಿಂದೂ ಜನರನ್ನು ಪ್ರೀತಿಯಿಂದ ನಡೆಸಿಕೊಳ್ಳುವದೂ, ಹಿಂದೂ ಸರದಾರರ, ಹಾಗು ಕಿಲ್ಲೇದಾರರ ಮನಸ್ಸನ್ನು ನೋಯಿಸ ದಿರುವದೂ, ಸಣ್ಣ ಪುಟ್ಟ ಅಪರಾಧಗಳನ್ನು ಕ್ಷಮಿಸಿ, ತರುಣ ಮರಾಟರಿಗೆ ಬಹುಮಾನ, ಅಧಿಕಾರ, ದೊಡ್ಡ ದೊಡ್ಡ ಉದ್ಯೋಗ ಮೊದಲಾದವುಗಳನ್ನು ಕೊಟ್ಟು ಅವರನ್ನು ಕೈವಶಮಾಡಿಕೊಳ್ಳುವದೂ ಬಾದಶಹನ ರಾಜ್ಯಕ್ಕೆ ಹಿತಕರವೆಂದು ಮುರಾರಿಜಗದೇವನೂ, ರಣದುಲ್ಲಾಖಾನನೂ ತಿಳಿಯುತ್ತಿದ್ದು, ಅದರಂತೆ ನಡೆಯಬೇಕೆಂದು ಅವರು ಬಾದಶಹನನ್ನು ಬೋಧಿಸುತ್ತಿದ್ದರು. ಇದಕ್ಕೆ ವಿರುದ್ಧವಾಗಿ ಸೈಯದುಲ್ಲಾಖಾನನು, ಹಿಂದೂಜನರ ಮೇಲೆ ವಿಶ್ವಾಸವಿಡದೆ, ಅಲ್ಲಿಂದಲ್ಲಿಯೇ ಅವರನ್ನು ಜಗ್ಗುಬಡಿಯಬೇಕೆಂತಲೂ, ಹಿಂದುಗಳ ಗುಟ್ಟೆಲ್ಲ ಒಂದೇ ಇದ್ದದ್ದರಿಂದ ಮುರಾರಿಜಗದೇವನ ಆಲೋಚನೆಯು ನಂಬತಕ್ಕದ್ದಲ್ಲವೆಂತಲೂ ಬಾದಶಹನನ್ನು ಬೋಧಿಸುತ್ತಿದ್ದನು. ಪರಿಣಾಮದಲ್ಲಿ ಮುರಾರಿಜಗದೇವನ ಹಾಗು ರಣದುಲ್ಲಾ ಖಾನನ ಮಾತೇ ನಡೆಯುತ್ತಿದ್ದರೂ, ಸೈಯದುಲ್ಲಾಖಾನನು ತನ್ನ ನೀಚವಾದ ಸ್ತ್ರೀವಿಷಯದ ವ್ಯವಹಾರದಿಂದ ಬರಬರುತ್ತ ಬಾದಶಹನಿಗೆ ಪ್ರಿಯನಾಗುತ್ತ ನಡೆದಿದ್ದನು. ರಂಗರಾಯನ ಮೇಲೆ ಬಾದಶಹನು ಸಿಟ್ಟಾದದ್ದೇನೋ ನಿಜ; ಆದರೆ ರಣದುಲ್ಲಾಖಾನನ ಸದುಪದೇಶ ದಿಂದ ಬಾದಶಹನ ಸಿಟ್ಟು ಇಳಿದು. ರಂಗರಾಯನು ಕಾರಾಗೃಹವಾಸದ ದುಃಖದಿಂದ ಮುಕ್ತನಾಗಿ ರಣದುಲ್ಲಾಖಾನನ ಮಿತ್ರನಂತೆ ವಿಜಾಪುರದಲ್ಲಿ ಇರಹತ್ತಿದನು. ಅತ್ತ ಸುಲ್ತಾನ ಗಡದಲ್ಲಿ ಆತನ ಕುಟುಂಬದವರು ಯಾವ ತೊಂದರೆಯೂ ಇಲ್ಲದೆ ಇರಹತ್ತಿದರು. ರಂಗರಾಯನ ಸೊಸೆಯನ್ನು ಬಿಟ್ಟು ಬಂದದ್ದಕ್ಕಾಗಿ ಸೈಯದುಲ್ಲಾಖಾನನು ಸಂತಾಪಗೊಂಡು. ಇವನನ್ನು ಹಸು ಮಾಡಲೆಂದು ರಣದುಲ್ಲಾ ಖಾನನ ಮೇಲೆ ಹಲ್ಲುಕಚ್ಚಿಯಹತ್ತಿದನು. ಆ ಸುಂದರ ತರುಣಿಯು ಸುಲ್ತಾನಗಡ ದಲ್ಲಿಯೇ ಇರುವಳೋ, ಅಥವಾ ರಣದುಲ್ಲಾಖಾನನೇ ತನ್ನ ಸಲುವಾಗಿ ಆಕೆಯನ್ನು ಎತ್ತಿ ಹಾಕಿದನೋ ಎಂದು ತಿಳಿದು ಸೈಯದುಲ್ಲಾಖಾನನು

ನಾಲ್ವರನ್ನು ವಿಚಾರಿಸಲು, ರಣದುಲ್ಲಾ ಖಾನನು ಸುಲ್ತಾನಗಡಕ್ಕೆ ಹೋದಾಗ ಚಂದ್ರಾವತಿಯು ದುರ್ಗದ ಮೇಲೆ ಇದ್ದಿಲ್ಲೆಂತಲೂ, ಮುನ್ನಾದಿನವೇ ಆಕೆಯು ಅಕಸ್ಮಾತ್ ಇಲ್ಲದ ಹಾಗೆ ಆಗಿದ್ದಳೆಂತಲೂ ಆತನಿಗೆ ಗೊತ್ತಾಯಿತು. ಆ ಸುಂದರಿಯು ತನ್ನ ತವರಮನೆಗೆ ಹೋಗಿರಬಹು ದೆಂದು ತಿಳಿದು, ಬಾದಶಹನ ಅಪ್ಪಣೆಯಿಂದ ಆಕೆಯ ತವರಮನೆಯನ್ನು ಸುಲಿದು, ಎಲ್ಲರನ್ನೂ ಸೆರೆಹಿಡಕೊಂಡು ಬಂದ ತನ್ನ ಬಯಕೆಯನ್ನು ಪೂರ್ಣಮಾಡಿ ಕೊಳ್ಳಬೇಕೆಂದು ಆ ದುಷ್ಟನಾದ ಸೈಯದುಲ್ಲಾಖಾನನು ನಿಶ್ಚಯಿಸಿದನು; ಆದರೆ ಪುರುಷವೇಷಧಾರಿಯಾದ ಚಂದ್ರಾವತಿಯು ರಣದುಲ್ಲಾಖಾನನ ಬಳಿಯಲ್ಲಿಯೇ ಇರುತ್ತಿರುವದು ಆ ಅಧಮನಿಗೆ ಒಮ್ಮೆಲೆ ಹೇಗೆ ಗೊತ್ತಾಗಬೇಕು?

ಈ ಮೇರೆಗೆ ಸುಜನನಾದ ರಣದುಲ್ಲಾಖಾನನೂ, ದುರ್ಜನನಾದ ಸೈಯ್ಯದುಲ್ಲಾ ಖಾನನೂ ಚಂದ್ರಾವತಿಯೆಂಬ ಸುಂದರ ತರುಣಿಗೆ ಮೋಹಿತರಾಗಿ ತಮ್ಮ ತಮ್ಮ ಸ್ವಭಾವಕ್ಕನುಸರಿಸಿ ಯೋಚಿಸುತ್ತಿರಲು, ಇತ್ತ ಚಂದ್ರಾವತಿಯ ಪತಿಯಾದ ನಾನಾಸಾಹೇಬನು ಏನು ಮಾಡುತ್ತಿದ್ದನೆಂಬದನ್ನು ವಿಚಾರಿಸೋಣ. ಶಿವಾಜಿಯು ಶ್ರೀಧರಸ್ವಾಮಿಗಳನ್ನು ಬಿಡಿಸಿಕೊಂಡು ಬಂದು, ಮಾರುತಿಯ ದೇವಾಲಯದ ಬುಡದಲ್ಲಿದ್ದ ಗವಿಯೊಳಗಿನ ಭವಾನಿಯ ಗುಡಿಯಲ್ಲಿ ಕುಳಿತು, ಯಾವ ದುರ್ಗವನ್ನು ವಶಮಾಡಿಕೊಳ್ಳಬೇಕೆಂದು ವಿಚಾರಮಾಡುತ್ತಿರುವಾಗ, ತಾನಾಜಿಯು ಶ್ರೀಧರಸ್ವಾಮಿಗಳ ಕಿವಿಯಲ್ಲಿ ಏನೋ ಹೇಳಿದ್ದರಿಂದ ಸ್ವಾಮಿಗಳು ಚಿಂತೆಗೊಳಗಾದರೆಂದು ಹಿಂದೆ ಇದೇ ಪ್ರಕರಣದಲ್ಲಿ ಬರೆದದ್ದನ್ನು ವಾಚಕರು ಮರೆತಿರಲಿಕ್ಕಿಲ್ಲ. ತಾನಾಜಿಯು ಶ್ರೀಧರಸ್ವಾಮಿಗಳ ಮುಂದೆ ಹೇಳಿದ ಸುದ್ದಿಯು ಎರಡನೆಯ ದಾವದೂ ಇರದೆ, ರಣದುಲ್ಲಾಖಾನನು ರಂಗರಾವ ಅಪ್ಪಾನನ್ನು ಸುಲ್ತಾನಗಡದಿಂದ ವಿಜಾಪುರಕ್ಕೆ ಸೆರೆಹಿಡಿದೊಯ್ದದ್ದೂ ಚಂದ್ರಾವತಿಯು ಮುನ್ನಾದಿನವೇ ಅಕಸ್ಮಾತ್ತಾಗಿ ತನ್ನ ದಾಸಿಯೊಡನೆ ಇಲ್ಲದ ಹಾಗೆ ಆದದ್ದೂ ಆಗಿತ್ತು. ಈ ಸುದ್ದಿಯನ್ನು ಕೇಳಿ ಮೊದಲು ಸ್ವಾಮಿಗಳಿಗೆ ವಿಷಾದವಾದರೂ, ರಂಗರಾವ ಅಪ್ಪಾನ ಕೈಯೊಳಗಿಂದ ಸುಲ್ತಾನಗಡವನ್ನು ಕಸಿದುಕೊಳ್ಳುವದಕ್ಕಿಂತ, ರಂಗರಾಯನ ಸ್ಥಳದಲ್ಲಿ ಬಾದಶಹನು ಈಗ ಹೊಸದಾಗಿ ನಿಯಮಿಸಿದ್ದ ಮುಸಲ್ಮಾನನಿಂದ ಕಸಿದುಕೊಳ್ಳುವದು ನೆಟ್ಟಗೆಂದು ತಿಳಿದು, ಅವರು ಸಮಾಧಾನಪಟ್ಟರು; ಆದರೆ ಚಂದ್ರಾವತಿಯು ಒಮ್ಮಿಂದೊಮ್ಮೆ ಮನೆಯಿಂದ ಹೊರಟು ಹೋದದ್ದನ್ನು ಕೇಳಿ ಮಾತ್ರ ಅವರಿಗೆ ಬಹಳ ಅಸಮಾಧಾನವಾಯಿತು. ಅವರು ನಿರ್ವಾಹ ವಿಲ್ಲದೆ ಎಲ್ಲ ವರ್ತಮಾನವನ್ನು ನಾನಾಸಾಹೇಬನ ಮುಂದೆ ಹೇಳಲು, ಆತನು ಸಂತಾಪದಿಂದ ಉರಿಯಹತ್ತಿದನು. ಆ ತರುಣನು ಸಿಟ್ಟಿನ ಭರದಿಂದ—''ಈ ಹಾಡು ಆಗುವದೆಂದು ನನಗೆ ಮೊದಲೇ ಗೊತ್ತಾಗಿತ್ತು; ನಾನು ಸಾವಿರ ಸಾರೆ ಹೇಳಿದೆನು; ಬಿಕ್ಕೆಬೇಡುವ ಹೊತ್ತು ಬಂದರೂ ಚಿಂತೆಯಿಲ್ಲ, ಈ ನೀಚರ ಸೇವೆ ಮಾಡುವ ಪ್ರಸಂಗವು ಬೇಡೆಂದು; ಆದರೆ ಹಿರಿಯರ ಸ್ವಾಮಿನಿಷ್ಠೆಯು ಪ್ರಬಲವಾದದ್ದರಿಂದ, ನನ್ನ ಮಾತಿಗೆ ಕಿವಿಗೊಡುವಬದಲು ನನ್ನನ್ನೇ ಅವರು ಮನಬಂದಂತೆ ಜರೆದರು. ''ದುಷ್ಟಾ, ನೀನು ಉಂಡಮನೆಯ ಗಳ

ಎಣಿಸುವವನು, ನನ್ನ ಹೆಸರಿಗೆ ಕಲಂಕವನ್ನುಂಟುಮಾಡಲಿಕ್ಕೆ ಹುಟ್ಟಿದೆ,'' ಎಂದು ಧಿಕ್ಕರಿಸುತ್ತಿದ್ದರು. ಈಗಾದರೂ ಅವರ ಕಣ್ಣುಗಳು ತೆರೆದರೆ ನೆಟ್ಟಗಾದೀತು. ಸ್ವಾಮಿಗಳೇ ಆದದ್ದು ಬಹಳ ನೆಟ್ಟಗಾಯಿತೆಂದು ಆನಂದಪಡುವದನ್ನು ಬಿಟ್ಟು ವಿಷಾಧಪಡುವಿರಲ್ಲ! ಇನ್ನು ಸುಲ್ತಾನಗಡವನ್ನು ವಶಮಾಡಿ ಕೊಳ್ಳುವದು ಬಹಳ ಸುಲಭವಾಯಿತೆಂದು ತಿಳಿಯಿರಿ; ಹಿರಿಯರು ಕಿಲ್ಲೇದಾರರಾಗಿದ್ದರೆ, ಪ್ರಾಣ ಹೋಗುವವರೆಗೆ ಅವರು ಕಿಲ್ಲೆಯನ್ನು ಬಿಟ್ಟು ಕೊಡುತ್ತಿದ್ದಿಲ್ಲ ಅವರು ವಯಸ್ಸಿನಿಂದ ಮುದುಕರಾಗಿದ್ದರೂ ಅವರ ಸಂತಾಪವೂ, ವೀರಶ್ರೀಯೂ ಅಣುಮಾತ್ರವಾದರೂ ಕಡಿಮೆಯಾಗಿಲ್ಲೆಂಬದರ ಅನುಭವವು ಈವೊತ್ತಿನವರೆಗೆ ಬಹು ಜನರಿಗೆ ಆಗಿರುತ್ತದೆ. ಅವರ ಮುಖದಿಂದ ಒಮ್ಮೆ ಹೊರಟ ಮಾತು ವ್ಯರ್ಥವಾಗಲಾರದು. ಅವರು ಶಿವರಾಯನ ಪಕ್ಷಕ್ಕೆ ಕೂಡಿದರೆ, ಸ್ವರಾಜ್ಯ ಸ್ಥಾಪನೆಯು ಹಾಹಾ ಅನ್ನುವದರೊಳಗೆ ಆದೀತು; ಆದರೆ ಕೂಡುವದು ಮಾತ್ರ ಪರಮದುಸ್ತರವು. ಅವರ ಸ್ವಾಮಿ ನಿಷ್ಠೆಯು ಅನಿವಾರವಾದದ್ದು. ವಿಜಾಪುರಕ್ಕೆ ಹೋಗಿ ಬಾದಶಹನ ಮುಂದೆ ನಿಂತಾಗ ಬಾದಶಹನು —''ನಿಮ್ಮ ಕುತ್ತಿಗೆಯನ್ನು ಕೊಯ್ದು ಇಡಿರೆಂ''ದು ಆಜ್ಞಾಪಿಸಿದರೆ, ಆ ವೃದ್ಧ ಸ್ವಾಮಿ ಭಕ್ತನು ಹಿಂದೆ ಮುಂದೆ ನೋಡನು; ಮತ್ತು ನಿನ್ನ ಮಗನು ರಾಜದ್ರೋಹಿಯಿರುವದರಿಂದ ಇವನ ಶಿರಚ್ಛೇದಮಾಡಿರೆಂದು ಆಜ್ಞಾಪಿಸಿದರೆ, ಒಂದು ಕೈಯಿಂದ ಕಣ್ಣೀರು ಒರಿಸಿಕೊಳ್ಳುತ್ತ ಮತ್ತೊಂದು ಕೈಯಿಂದ ನನ್ನ ಶಿರಸ್ಸನ್ನು ಭೂಮಿಗಿಳಿಸಲಿಕ್ಕೆ ಹಿಂದೆಮುಂದೆ ನೋಡಲಿಕ್ಕಿಲ್ಲ! ಹಾಯ್! ಹಾಯ್! ಇಂಥ ಸ್ವಾಮಿನಿಷ್ಠನ ಅಪಮಾನವನ್ನು ದುಷ್ಟ ಯವನರು ಈ ಪರಿ ಮಾಡಿದರಲ್ಲವೆ? ಈ ನರಕದ ಸ್ಥಿತಿಯಿಂದ ನಾವು ಎಂದು ಮುಕ್ತರಾದೇವು? ಸ್ವಾಮಿಗಳೇ, ರಂಗರಾವ ಅಪ್ಪಾನಂಥ ಮಹಾರಾಷ್ಟ್ರವೀರನ ವೀರ್ಯದಿಂದ ಜನಿಸಿದ ನಾನು, ಹೆಂಡತಿಯು ಯವನರ ಕೈ ಸೇರಿದಳೆಂಬದನ್ನು ಕೇಳಿ ಸುಮ್ಮನೆ ಕುಳಿತಿರುವೆನಲ್ಲ! ಇದು ಮಹಾರಾಷ್ಟ್ರರ ಶೀಲವೇ? ನಿಮ್ಮನ್ನು ಕೂಡಿದರೆ ಏನಾದರೂ ದೇಶದ ಸೇವೆಯಾದೀತೆಂಬ ಆಶೆಯಿಂದ ಬಂದು ಕೂಡಿದೆನು; ಆದರೆ ದುರ್ದೈವದಿಂದ ಆ ಮಾತು ಸಾಧಿಸುವ ಯೋಗವಿದ್ದಂತೆ ತೋರುವದಿಲ್ಲ, ತಂದೆಯನ್ನೂ, ಹೆಂಡತಿಯನ್ನೂ ಯವನರು ಪರಿಪರಿಯಾಗಿ ಪೀಡಿಸುತ್ತಿರಲು, ಹೇಡಿಯಂತೆ ನಾನು ಸುಮ್ಮನೆ ಕುಳಿತುಕೊಳ್ಳಲಾ? ನನ್ನ ತೋಳಿನಲ್ಲಿ ಸಾಮರ್ಥ್ಯವಿರುವವರೆಗೆ, ಕಿಂಬಹುನಾ ದೇಹದಲ್ಲಿ ಪ್ರಾಣವಿರುವವರೆಗೆ ನಾನು ಸುಮ್ಮನೆ ಕುಳಿತುಕೊಳ್ಳಲಾರೆನು.''

ಈ ಮೇರೆಗೆ ನಾನಾಸಾಹೇಬನು ಆವೇಶದಿಂದ ಮಾತಾಡುತ್ತಿರುವಾಗ, ಶ್ರೀಧರಸ್ವಾಮಿಯಾಗಲಿ, ತಾನಾಜಿಯಾಗಲಿ, ಬೇರೆಯವರಾಗಲಿ ಆತನಿಗೆ ಎರಡು ಸಮಾಧಾನದ ಮಾತುಗಳನ್ನು ಹೇಳಲಿಲ್ಲ. ಕೇಳಿದ ಸುದ್ದಿಯಿಂದ ಉಂಟಾದ ಶೋಕದ ವೇಗವು ಶಬ್ದಗಳ ರೂಪದಿಂದ ಸೋರಿ ಹೋಗಿ ಅದರ ಕಸುವು ಕಡಿಮೆಯಾಗುವವರೆಗೆ, ಏನು ಹೇಳಿದರೂ ಪ್ರಯೋಜನವಾಗುವದಿಲ್ಲೆಂದು ಶ್ರೀಧರಸ್ವಾಮಿಗಳು ತಿಳಿದು ಸುಮ್ಮನೆ ಇದ್ದರು; ಆದರೆ ನಾನಾಸಾಹೇಬನು ತೀರಾ ಕಡದಿಗೆ ಹಚ್ಚಲು, ಅವರು ಆತನನ್ನು ಕುರಿತು—ಎಲೈ ಮಹಾರಾಷ್ಟ್ರ ತರುಣನೇ, ಇಂಥ ಕೆಟ್ಟ ಸುದ್ದಿಗಳನ್ನು ಹೇಳಿಬಿಡುವದಷ್ಟು ನಮ್ಮ ಕೆಲಸವೆಂದು ನೀನು ತಿಳಿದಿರುತ್ತೀಯೇನು?

ಹುಚ್ಚಾ, ನಿನ್ನ ಹೆಂಡತಿಯು ಎಷ್ಟು ಚತುರಳು! ದುರ್ಗವು ಮುಸಲ್ಮಾನರ ಕೈಸೇರಿದ ಮುನ್ನಾದಿನವೇ ಆಕೆಯು ಆ ಸುಲ್ತಾನಗಡದಿಂದ ಹೊರಟು ಹೋಗಿರುತ್ತಾಳೆಂಬದನ್ನು ಮರೆಯಬೇಡ. ಆಕೆಯು ಹತ್ತು ಪಾಲಿಗೆ ತನ್ನ ತವರಮನೆಗೆ ಹೋಗಿದ್ದಾಳು. ಆಕೆಯು ಎಲ್ಲಿರುವಳೆಂಬದರ ನಿಶ್ಚಯ ವಾಗುವವರೆಗೆ ನೀನು ಹುಚ್ಚಾಟಕ್ಕೆ ಬೀಳ ಬೇಡ. ಈಗಾಗಿರುವ ಅಪಮಾನವು ನಿನ್ನದಲ್ಲ ನಮ್ಮೆಲ್ಲರದು, ಯಾವತ್ತು ಮಹಾರಾಷ್ಟ್ರರದು ಎಂದು ನಿಶ್ಚಯವಾಗಿ ನಂಬು. ನಿನ್ನ ಕುಟುಂಬದ ಅವಸ್ಥೆಯು ಏನಾಗಿರುವದೆಂಬುದನ್ನು ಇನ್ನು ಮೂರು ದಿನದೊಳಗಾಗಿ ನಿನಗೆ ಹೇಳುವೆನು. ಇದು ಪ್ರತಿಜ್ಞೆಯೆಂದು ತಿಳಿ. ನಾನು ಮಾಡತಕ್ಕದ್ದನ್ನೆಲ್ಲ ಮಾಡಿರುತ್ತೇನೆ, ಚಿಂತೆಮಾಡಬೇಡ. ಇದಲ್ಲದೆ ಚಂದ್ರಾವತಿಯು ನಿನ್ನ ಹೆಂಡತಿಯು; ಮೇಲೆ ಜಾಧವನ ಮಗಳು! ಆಕೆಯು ಪ್ರಾಣತ್ಯಾಗವನ್ನಾದರೂ ಮಾಡಿಯಾಳು? ಶೀಲಭ್ರಷ್ಟಳಾಗಲಿಕ್ಕಿಲ್ಲ ಈ ಮಾತಿನ ನಂಬಿಗೆಯು ನಿನಗೆ ಇರುವದಿಲ್ಲವೋ? ಇರದಿದ್ದರೆ ನನ್ನ ಪ್ರತಿಜ್ಞೆಯಲ್ಲಿಯಾದರೂ ನಂಬಿಗೆಯನ್ನಿಡು.

## ದುರಾಲೋಚನೆ

ಮೂರು ದಿನಗಳಲ್ಲಿ ನಿನ್ನ ಹೆಂಡತಿಯು ಗೊತ್ತು ಹಚ್ಚಿಕೊಡುವೆನೆಂದು, ಶ್ರೀಧರಸ್ವಾಮಿಗಳು ಪ್ರತಿಜ್ಞಾಪೂರ್ವಕವಾಗಿ ಹೇಳಿದ್ದರಿಂದ, ನಾನಾಸಾಹೇಬನು ಸಮಾಧಾನ ವನ್ನು ತಾಳಿ ಸ್ವಸ್ಥವಾಗಿ ಕುಳಿತುಕೊಂಡನು. ಯಾವ ದುರ್ಗವನ್ನು ವಶಮಾಡಿಕೊಳ್ಳಬೇಕೆಂಬ ಅವರ ವಿಚಾರಕ್ಕೆ ಮತ್ತೆ ಆರಂಭವಾಯಿತು. ಸುಲ್ತಾನಗಡವನ್ನು ವಶಮಾಡಿಕೊಳ್ಳಬೇಕೆಂದು ಬಹುತರ ಎಲ್ಲರ ನಿಶ್ಚಯವಾದಂತಾಗಿತ್ತು, ಶಿವಾಜಿಗಂತು ಸುಲ್ತಾನಗಡವು ಬಹಳ ಮನಸ್ಸಿಗೆ ಬಂದಿತ್ತು, ಅದು ಆತನ ತಂದೆಯ ಪ್ರಾಂತಕ್ಕೆ ಸಮೀಪವಾಗಿದ್ದು, ವಿಜಾಪುರದಿಂದ ತಕ್ಕಮಟ್ಟಿಗೆ ದೂರವಾಗಿತ್ತು, ಇದಲ್ಲದೆ, ಯುಕ್ತಿ-ಪ್ರಯುಕ್ತಿಗಳಿಗೆ ಅನುಕೂಲವಾಗುವಂಥ ಅರಣ್ಯಗಳು ಸುಲ್ತಾನಗಡದ ಸಮೀಪದಲ್ಲಿದ್ದವು; ಆದ್ದರಿಂದ ಶಿವಾಜಿಯು ಹೇಗಾದರೂ ಮಾಡಿ ಸುಲ್ತಾನಗಡವನ್ನೇ ವಶಮಾಡಿ ಕೊಳ್ಳಬೇಕೆಂದು ನಿಶ್ಚಯಿಸಿ, ತನ್ನ ಮನೋದಯವನ್ನು ಶ್ರೀಧರಸ್ವಾಮಿಗಳಿಗೆ ತಿಳಿಸಿದನು. ಅದಕ್ಕೆ ಸ್ವಾಮಿಗಳಾದರೂ ಅಂತಃಕರಣಪೂರ್ವಕವಾಗಿ ಒಪ್ಪಿಕೊಳ್ಳಲು, ಶಿವಾಜಿಯು ತನ್ನ ಪದ್ಧತಿಯಂತೆ ಅಂಬಾಭವಾನಿಯ ಅಪ್ಪಣೆಯನ್ನು ಕೇಳಬೇಕೆಂದು ನಿಶ್ಚಯಿಸಿ, ದೇವಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಕಣ್ಣುಮುಚ್ಚಿ ಕೊಂಡು ತೀರ ದೇವಿಯ ಚರಣದ ಬಳಿಯಲ್ಲಿ ಕುಳಿತು ಕೊಂಡನು. ಬರಬರುತ್ತ ಶಿವಾಜಿಯು ಮೈಮೇಲಿನ ಎಚ್ಚರವು ತಪ್ಪಹತ್ತಿ, ಆತನು ನಿಶ್ಚೇಷ್ಟಿತನಾಗಿ ದೇವಿಯು ಚರಣದೆಡೆಯಲ್ಲಿ ದೊಪ್ಪನೆ ಬಿದ್ದನು; ಆದರೂ ಆತನನ್ನು ಓಡದೆಬ್ಬಿಸುವ ಗೋಜಿಗೆ ಒಬ್ಬರೂ ಹೋಗದೆ, ಟಕ್ಕು ಹಿಡಿದು ಆತನನ್ನು ಭಕ್ತಿಯಿಂದ ಎವೆಯಿಕ್ಕದೆ ನೋಡುತ್ತ ನಿಂತುಕೊಂಡರು. ಕೆಲಹೊತ್ತಿನ

ಮೇಲೆ ಶಿವಾಜಿಯ ತುಟಿಗಳು ಅಲ್ಲಾಡಹತ್ತಿದವು. ಕೂಡಲೆ ಶ್ರೀಧರಸ್ವಾಮಿಗಳು ತೀರ ಶಿವಾಜಿಯ ಹತ್ತಿರ ಹೋಗಿ ವಾಣಿಯು ಏನು ಹೊರಡುತ್ತದೆಂದು ಕಿವಿಗೊಟ್ಟು ಕೇಳಹತ್ತಿದರು. ಅಷ್ಟರಲ್ಲಿ ಶಿವಾಜಿಯ ಮುಖದಿಂದ—''ನಿಧಾನವಾಗಿ ಯತ್ನ ಮಾಡಿದರ ಯಶಸ್ಸು ಬರುವದು ನಿಶ್ಚಯ; ಮಂದಿರದ ತೋರಣವೇ ಕಟ್ಟುವದು'' ಎಂಬರ್ಥದ ಮಹಾರಾಷ್ಟ್ರ ಭಾಷೆಯ ಎರಡು ವಾಕ್ಯಗಳು ಹೊರಬಿದ್ದವು. ತಿರುಗಿ ಶಿವಾಜಿಯ ಮುಖದಿಂದ ಒಂದು ಅಕ್ಷರ ಕೂಡ ಹೊರಬೀಳಲಿಲ್ಲ. ಆ ದೇವಭಕ್ತನು ಮೆಲ್ಲಮೆಲ್ಲನೆ ಚೇತರಿಸಿಕೊಳ್ಳುತ್ತ, ಸ್ವಲ್ಪ ಹೊತ್ತಿನಲ್ಲಿ ಕಣ್ಣು ತೆರೆದು ಎದ್ದು ಕುಳಿತುಕೊಂಡನು. ಪೂರ್ಣ ಸ್ಮೃತಿಯು ಬಂದಮೇಲೆ ಆತನು ದೇವಿಯ ವಾಣಿಯು ಏನಾಯಿತೆಂಬದನ್ನು ತಿಳಕೊಳ್ಳುವದಕ್ಕಾಗಿ ಆತುರದಿಂದ ಶ್ರೀಧರಸ್ವಾಮಿಗಳ ಕಡೆಗೆ ನೋಡಿದನು. ಅಷ್ಟರಲ್ಲಿ ಸ್ವಾಮಿಗಳು ವಾಣಿಯ ಅರ್ಥವನ್ನು ಮನಸ್ಸಿನಲ್ಲಿ ಮಾಡಿಕೊಂಡಿದ್ದರು. ಅವರು ಶಿವಾಜಿಯನ್ನು ಕುರಿತು—''ಶಿವಬಾ ನೀನು ಮಹಾ ಬಾಗ್ಯಶಾಲಿಯು ಕಂಡೆಯಾ! ಭವಾನಿಯ ಪೂರ್ಣ ಕೃಪೆಯು ನಿನ್ನ ಮೇಲಿರುತ್ತದೆ. ಅಂತೇ ನಿನ್ನ ವಿಚಾರಕ್ಕೆ ಅನುಕೂಲವಾಗಿಯೇ ಆಕೆಯ ಆಜ್ಞೆಯನ್ನಿತ್ತಿರುವಳು. ಶ್ರೀದೇವಿಯ ಇಷ್ಟು ಸ್ಪಷ್ಟ ವಾಗಿ ಆಜ್ಞಾಪಿಸುವಳೆಂದು ನನಗೆ ತೋರಿದ್ದಿಲ್ಲ ''ನಿಧಾನವಾಗಿ ಯತ್ನಮಾಡಿದರೆ, ಯಶಸ್ಸು ಬರುವದು ನಿಶ್ಚಯವು; ಮಂದಿರದ ತೋರಣವೇ ಕಟ್ಟುವದು'' ಎಂಬ ದೇವಿಯ ಈ ಸಾಕ್ಷಾತ್ಕಾರವನ್ನು ಯೋಚಿಸಿದರೆ, ನಿನಗೆ ಸಂತೋಷವೂ, ಕಾರ್ಯೋತ್ಸಾಹವೂ ಉಂಟಾಗದೆ ಇರಲಿಕ್ಕಿಲ್ಲ; ಆದರೆ ಶಿವಬಾ, ''ಯಶಸ್ಸು ಬರುವದು ನಿಶ್ಚಯ''ವೆಂಬ ವಾಕ್ಯವನ್ನಷ್ಟೇ ಮನಸ್ಸಿನಲ್ಲಿ ತಂದು ಒಮ್ಮೆಲೆ ಧುಮುಕಿ ಹೋಗುವದು ಹಿತಕರವಲ್ಲ, ''ನಿಧಾನವಾಗಿ'' ಎಂಬ ಶಬ್ದವನ್ನು ನಾವು ಚನ್ನಾಗಿ ನೆನಪಿನಲ್ಲಿಡಬೇಕು. ಕೆಲಸವು ಮಹತ್ವದ್ದಿರುವದರಿಂದ ಅದನ್ನು ಸಮಾಧಾನದಿಂದ ಮಾಡ ಬೇಕಾಗುತ್ತದೆ. ಇಂದು ದುರ್ಗವನ್ನು ತಕ್ಕೊಂಡೆವು, ನಾಳೆ ಅದು ಕೈಬಿಟ್ಟುಹೋಯಿತು ಎನ್ನುವ ಹಾಗೆ ಕೆಲಸಮಾಡುವದರಲ್ಲಿ ಅರ್ಥವಿಲ್ಲ. ಕೈಸೇರಿದ ಸುಲ್ತಾನಗಡವು ಕೈಬಿಟ್ಟು ಹೋಗದಂತೆ ಮಾಡತಕ್ಕದ್ದು, ಎಂದು ಹೇಳಿದರು. ಬಳಿಕ ''ಮಂದಿರದ ತೋರಣವೇ ಕಟ್ಟುವದೆಂಬ'' ವಾಕ್ಯದ ಅರ್ಥದ ಬಗ್ಗೆ ವಾದವಿವಾದಗಳಾಗಿ, ಕಡೆಗೆ ಶ್ರೀಧರಸ್ವಾಮಿಗಳು ಹೇಳಿದ ಅರ್ಥದಿಂದ ಶಿವಾಜಿಯ ಸಮಾಧಾನವಾಯಿತು ಮಂದಿರದ ತೋರಣವೆಂದರೆ, ಸ್ವರಾಜ್ಯ ರೂಪವಾದ ಮಂದಿರದ ತೋರಣವೆಂದು ತಿಳಿಯಬೇಕೆಂದು ಸ್ವಾಮಿಗಳು ಹೇಳಿದರು; ಮತ್ತು ''ನಿಧಾನವಾಗಿ'' ಎಂದು ದೇವಿಯು ಆಜ್ಞಾಪಿಸಿದಂತೆ, ಇಂದಿನಿಂದ ಮೂರು ತಿಂಗಳಲ್ಲಿ ಸುಲ್ತಾನಗಡವನ್ನು ವಶ ಮಾಡಿಕೊಳ್ಳಬೇಕೆಂದು ಹೇಳಿದರು. ಅದಕ್ಕೆ ಶಿವಾಜಿಯೂ ಒಪ್ಪಿದನು.

ಈಶ್ವರೀ ಸೂತ್ರದಿಂದಲೇ ಈ ಜಗತ್ತಿನ ಸ್ಥಿತ್ಯಂತರವಾಗುತ್ತದೆಂಬ ಮಾತು ಸುಳ್ಳಲ್ಲ. ಶಿವಾಜಿಯಂಥ ಒಬ್ಬ ಸರದಾರನ ಮಗನು ಹುಡುಗತನದಿಂದ ನಾಲ್ವರನ್ನು ಕೂಡಿಕೊಂಡು ವಿಜಾಪುರದಂಥ ಬಲಾಢ್ಯ ರಾಜ್ಯದೆದುರಿಗೆ ಅದರ ಲಕ್ಷ್ಯವಿಲ್ಲದೆ ಹೊಸ ರಾಜ್ಯವನ್ನು ಸ್ಥಾಪಿಸುವದು ತೀರ ಅಸಂಭವವೆಂದು ಬರೆಯುವ ಅವಶ್ಯವಿಲ್ಲ. ಆಗಿನ ಕಾಲದಲ್ಲಿ

ವಿಜಾಪುರದ ರಾಜ್ಯವು ವೈಭವದ ಶಿಖರವನ್ನು ಮುಟ್ಟಿತ್ತು, ಗೋಲುಗುಮ್ಮಟದಂಥ ಪ್ರಚಂಡವಾದ ಮಂದಿರವು ಇನ್ನೂ ಮುಗಿದಿದ್ದಿಲ್ಲ ಹೊಸ ಹೊಸ ಪೇಟೆಗಳನ್ನೂ, ಹಲವು ಮಂದಿರವು ಇನ್ನೂ ಮುಗಿದಿದ್ದಿಲ್ಲ, ಹೊಸ ಹೊಸ ಪೇಟೆಗಳನೂ, ಹಲವು ಮಂದಿರಗಳನ್ನೂ ಕಟ್ಟಿಸುವ ಕೆಲಸದಲ್ಲಿ ಮಹಮ್ಮದಶಹನು ಮಗ್ನನಾಗಿ ಹೋಗಿದ್ದನು. ಆತನು ದಯಾಳುವೂ, ನ್ಯಾಯಿಯೂ, ಧರ್ಮಿಷ್ಠನೂ, ಸರಳ ಹೃದಯದವನೂ ಆಗಿದ್ದರೂ, ವಿಷಯಸುಖದಲ್ಲಿ ಮಗ್ನನಾಗಿ ರಾಣೀವಾಸವನ್ನು ಬಿಟ್ಟು ಹೊರಗೆ ಬರುವದನ್ನು ಕಡಿಮೆಮಾಡಿದ್ದರಿಂದ, ಆತನಲ್ಲಿದ್ದ ಸದ್ಗುಣಗಳ ಉಪಯೋಗವು ದೇಶದಲ್ಲಿದ್ದ ಪ್ರಜೆಗಳಿಗೆ ಆಗದಂತಾಯಿತು. ಆತನು ತನ್ನ ಆಳಿಕೆಯಲ್ಲಿ ವಿಜಾಪುರವನ್ನು ಬಿಟ್ಟು, ಬಹುತರ ಹೊರಗೆ ಎಂದೂ ಹೋಗಲಿಲ್ಲೆಂದು ಹೇಳಬಹುದು. ಮುಸಲ್ಮಾನ ಸರದಾರರಿಂದ ಹಾಗು ಅಧಿಕಾರಸ್ಥರಿಂದ, ಹಿಂದೂ ಜನರಿಗಾಗುತ್ತಿದ್ದ ತ್ರಾಸವು ಆತನ ಕಿವಿಗೆ ಬೀಳದಂತಾಯಿತು. ಇದರಿಂದ ಸ್ವಭಾವತಃ ಸಭ್ಯರಾದ ಹಿಂದೂ ಜನರು ಮುಸಲ್ಮಾನರ ಕಾಟವನ್ನು ತಾಳಲಾರದೆ ಖಂಗಿ ಗೆದ್ದು ಒಳಗಿಂದೊಳಗೆ ಮುಸಲ್ಮಾನರ ಮೇಲೆ ಕಲ್ಲುಕಡಿಯಹತ್ತಿದರು. ಮುರಾರಿಜಗದೇವ, ರಣದುಲ್ಲಾಖಾನರಂಥ ಸ್ವಾಮಿನಿಷ್ಠರ ಪ್ರಯತ್ನದಿಂದ, ಮಹಮ್ಮದಶಹನ ಆಳಿಕೆಯ ಆರಂಭಕ್ಕೆ ರಾಜ್ಯವು ಕೆಲಮಟ್ಟಿಗೆ ಬೆಳೆಸಲ್ಪಟ್ಟರೂ, ಮುಂದೆ ಬರಬರುತ್ತ ಬಾದಶಹನು ಸ್ತ್ರೀಲಂಪಟನಾಗಿ ದರ್ಬಾರದಲ್ಲಿ ಕ್ಷುದ್ರರ ಪ್ರತಿಷ್ಠೆಯು ಬೆಳೆಯಹತ್ತಿ ರಾಜನಿಷ್ಠರ ಅಪಮಾನವಾಗಹತ್ತಿದ್ದರಿಂದ, ರಾಜ್ಯದ ಬಿಗುವು ಕಡಿಮೆಯಾಗಹತ್ತಿತು. ಸೈಯ್ಯದುಲ್ಲಾನು ಅತ್ಯಂತ ಸಾಹಸದಿಂದ, ಸಂಪಾದಿಸಿ ಕೊಟ್ಟಿದ್ದ ರಂಭಾವತಿಯೆಂಬ ಒಬ್ಬ ರಜಪೂತ ಸುಂದರ ತರುಣಿಗೆ ಬಾದಶಹನು ಮರುಳಾಗಿ, ಆಕೆಯ ಸಹವಾಸದಲ್ಲಿ ಯಾವಾಗಲೂ ಇರಹತ್ತಿ ಪಟ್ಟದ ರಾಣಿಯನ್ನು ಕೂಡ ದುರ್ಲಕ್ಷಿಸಿದ್ದರಿಂದ, ಅಂತರ್ಗೃಹದಲ್ಲಿ ಮಾತ್ಸರ್ಯಾಗ್ನಿಯು ಉತ್ಪನ್ನವಾಯಿತು. ಸೈನಿಕರಿಗೆ ಮೈತುಂಬ ಕೆಲಸವಿಲ್ಲದಂತಾದ್ದರಿಂದಲೂ, ಸೈನ್ಯದ ಮುಖ್ಯಾಧಿಕಾರಿಗಳು ವಿಲಾಸಕ್ಕೆ ಮೆಚ್ಚಿದ್ದರಿಂದಲೂ ದಂಡಿನಲ್ಲಿ ನಿಜವಾದ ಶೌರ್ಯವು ಕಡಿಮೆಯಾಗಹತ್ತಿ ಡಾಂಭಿಕತನವು ಬೆಳೆಯಹತ್ತಿತು. ಹೀಗೆ ವಿಜಾಪುರದ ರಾಜ್ಯವು, ಘಾತಕವಾದ ಐಶ್ವರ್ಯದ ಹೊಳಪಿನಿಂದ ಹೊರಗೆ ಹೊಳೆಯುತ್ತಿದ್ದರೂ, ಅದರ ಅಂತಸ್ಸತ್ವಕ್ಕೆ ಹುಳಹತ್ತಿದ್ದರಿಂದ, ರಾಜ್ಯರೂಪವಾದ ಮಂದಿರದೊಳಗೆ ಹೆಗ್ಗಣವನ್ನು ಹೊಗಿಸಿ ಮೇಲೆ ಗಿಲಾಯಿಮಾಡಿದಂತಾಗಿತ್ತು! ಇತ್ತ ಶಿವಾಜಿಯಂಥ ಅಂತಸ್ತೇಜಸ್ಸಿನ ಮನುಷ್ಯನು, ನಿಃಸ್ವಾರ್ಥ ಬುದ್ಧಿಯಿಂದಲೂ, ತನ್ನ ಸದ್ಗುಣಗಳ ಸಮುಚ್ಚಯದಿಂದಲೂ ಮಹಾರಾಷ್ಟ್ರರಲ್ಲಿ ಒಕ್ಕಟ್ಟನ್ನುಂಟುಮಾಡುತ್ತಿರಲು, ಅತ್ತ ವಿಜಾಪುರದಲ್ಲಿ ಸೈಯ್ಯದುಲ್ಲಾನಂಥ ನೀಚ ಮನುಷ್ಯರು, ಸ್ವಾರ್ಥಪರಾಯಣರಾಗಿ ಬಾದಶಹನ ಮುಂದೆ ಬಾಲಬಡಿಯುತ್ತ ದರ್ಬಾರದ ಜನರಲ್ಲಿ ಪರಸ್ಪರ ದ್ವೇಷವನ್ನುಂಟುಮಾಡಲಿಕ್ಕೆ ನಿರ್ಧಾರದಿಂದ ಯತ್ನಿಸುತ್ತಿದ್ದರು. ಇದರಿಂದ ತಮ್ಮ ನಾಶವನ್ನು ತಮ್ಮ ಕೈಯಿಂದ ಮಾಡಿಕೊಂಡಂತಾಗುತ್ತದೆಂಬ ಅರಿವು ಆಗಿನ ಮುಸಲ್ಮಾನ ಅಧಿಕಾರಿಗಳಿಗೂ, ಬಾದಶಹನಿಗೂ ಇದ್ದಂತೆ ತೋರಲಿಲ್ಲ, ಅಂತೇ 'ಪುಂಡರ ತಂಡ'ವೆಂದು

ಮಂದಿಯಿಂದ ಜರಿದಾಡಿಸಿಕೊಂಡಿದ್ದ ಶಿವಾಜಿಯ ಚಿಕ್ಕ ಪರಿವಾರವು ದಿನದಿನಕ್ಕೆ ಬೆಳೆಯುತ್ತ ಹೋಯಿತು. ರಣದುಲ್ಲಾಖಾನನು ರಂಗರಾವ ಅಪ್ಪಾನಂಥ ರಾಜನಿಷ್ಠ ವೃದ್ಧನ ಮನಸ್ಸನ್ನು ನಿಷ್ಕಾರಣವಾಗಿ ನೋಯಿಸುವದು ತಮ್ಮ ರಾಜ್ಯಕ್ಕೆ ಹಿತಕರವಲ್ಲೆಂದು ತಿಳಿದು, ಆ ವೃದ್ಧ ಕಿಲ್ಲೇದಾರನ ಮಾನಮರ್ಯಾದೆಗಳನ್ನು ಉತ್ತಮ ರೀತಿಯಿಂದ ಕಾಯ್ದುದ್ದು ಸೈಯ್ಯದುಲ್ಲಾಖಾನನಿಗೆ ಸಹನವಾಗಲಿಲ್ಲ. ಆತನು ರಣದುಲ್ಲಾಖಾನನ ವಿರುದ್ಧವಾಗಿ ಬಾದಶಹನ ಕಿವಿಯಲ್ಲಿ ಬೇಕಾದಷ್ಟು ತುಂಬಿದನು; ಆದರೆ ಅದರಿಂದ ಪ್ರಯೋಜನವಾಗಲಿಲ್ಲ. ರಣದುಲ್ಲಾಖಾನನ ಮೇಲೆ ಬಾದಶಹನ ನಂಬಿಗೆಯು ಸಂಪೂರ್ಣವಾಗಿದ್ದದ್ದರಿಂದ, ಸೈಯದುಲ್ಲಾನ ನೀಚತನದ ಆಟವು ನಡೆಯದಾಯಿತು. ಆದರೂ ಆ ಸಾಹಸಿಯಾದ ದುಷ್ಟನು ಅಷ್ಟಕ್ಕೆ ತನ್ನ ಪ್ರಯತ್ನವನ್ನು ಬಿಟ್ಟು ಕೊಡಲಿಲ್ಲ. ರಂಗರಾಯನ ಸೊಸೆಯಾದ ಚಂದ್ರಾವತಿಯು ಪುರುಷವೇಷದಿಂದ ರಣದುಲ್ಲಾಖಾನನ ಮನೆಯಲ್ಲಿರುತ್ತಿದ್ದದ್ದು ಸೈಯ್ಯದುಲ್ಲಾಖಾನನಿಗೆ ಗೊತ್ತಾಗಿತ್ತು. ತನ್ನ ಚಾಡಿಯ ಮಾತುಗಳಿಂದ ಕೆಲಸವಾಗದ್ದನ್ನು ನೋಡಿ ಆ ನೀಚನು ಬಾದಶಹನನ್ನು ಕುರಿತು–ಖಾವಿಂದ, ರಣದುಲ್ಲಾಖಾನನ ಮನಸ್ಸು ಇತ್ತಕಡೆಗೆ ಕೆಟ್ಟಿರುತ್ತದೆಂದು ನಾನು ಎಷ್ಟು ಹೇಳಿದರೂ ಸರಕಾರಕ್ಕೆ ನಂಬಿಗೆಯಾಗಲೊಲ್ಲದು. ರಣದುಲ್ಲಾನ ಸ್ವರೂಪಗೇಡುಮಾಡದೆ ಖಾವಿಂದರನ್ನು ಎಚ್ಚರ ಗೊಳಿಸಬೇಕೆಂದು ಮಾಡಿದ ನನ್ನ ಪ್ರಯತ್ನವು ವ್ಯರ್ಥವಾಯಿತು. ಆದರೂ ಇಷ್ಟಕ್ಕೇ ಬಿಡುವದು ಸ್ವಾಮಿಭಕ್ತರ ಕೆಲಸವಲ್ಲ. ರಣದುಲ್ಲಾನು ರಂಗರಾಯನಿಗೆ ಮತ್ತೆ ಸುಲ್ತಾನಗಡವನ್ನು ಕೊಟ್ಟು ಕಳಿಸಬೇಕೆಂದು ಖಾವಂದರನ್ನು ಬೇಡಿಕೊಳ್ಳಲಿಕ್ಕೆ ಕಾರಣ ವೇನೆಂಬದನ್ನು ವಿಚಾರಿಸದೆ ಇರಬಾರದು. ಮಹಾರಾಷ್ಟ್ರರು ಬಹುಮರ್ಯಾದಸ್ಥರಂತೆ, ಪಾತಿವ್ರತ್ಯದ ರಕ್ಷಣಕ್ಕಾಗಿ ಪ್ರಾಣವನ್ನಾದರೂ ಕೊಡುವವರಂತೆ; ಆದರೆ ಇದೆಲ್ಲ ಡಾಂಭಿಕತನವೆಂದು ನಾನು ತಿಳಿಯುತ್ತೇನೆ. ರಂಗರಾಯನು ರಣದುಲ್ಲಾಖಾನನ ಮನಸ್ಸನ್ನು ಒಲಿಸಿಕೊಳ್ಳುವದಕ್ಕಾಗಿ, ತನ್ನ ಪ್ರತ್ಯಕ್ಷ ಸೊಸೆಯನ್ನು ರಣದುಲ್ಲಾಖಾನನ ಬಳಿಗೆ ಕಳಿಸಿದ ಬಳಿಕ ಉಳಿಯಿತೇನು? ತನ್ನ ಅನೀತಿಯು ಹೊರಬೀಳಬಾರದೆಂದು ರಣದುಲ್ಲಾಖಾನನು ತನ್ನ ಬಳಿಗೆ ಬಂದ ಚಂದ್ರಾವತಿ ಎಂಬ ರಂಗರಾಯನ ಸೊಸೆಯನ್ನು ಪುರುಷವೇಷದಿಂದ ತನ್ನ ಬಳಿಯಲ್ಲಿ ಇರಿಸಿಕೊಂಡುಬಿಟ್ಟ. ಬಳಿಕ ಏನನ್ನಬೇಕು? ಇದರಲ್ಲಿ ರಂಗರಾಯನ ಸಂಪನ್ನಗಿರಿಯೇನು? ರಣದುಲ್ಲಾನ ಸಂಪನ್ನಗಿರಿ ಯಾದರೂ ಏನು? ಖಾವಿಂದ, ಇಂಥ ನೀಚರನ್ನು ಪರಮಸ್ವಾಮಿ ನಿಷ್ಠರೆಂದು ನಂಬಿ, ರಾಜ್ಯಕ್ಕೆ ಅಪಾಯವನ್ನುಂಟು ಮಾಡುವದನ್ನು ನಾನು ಹೇಗೆ ಕಣ್ಣುಗಳಿಂದ ನೋಡಲಿ? ಮುರಾರಿಜಗ ದೇವನ ಗುಟ್ಟೂ, ರಣದುಲ್ಲಾನ ಗುಟ್ಟೂ ಎಂದಿನಿಂದಲೂ ಒಂದೇ ಎಂಬದನ್ನು ಸರಕಾರಕ್ಕೆ ಹೇಳುವ ಕಾರಣವಿಲ್ಲ. ಅವರಿಬ್ಬರ ಮಾತು ಸರಕಾರಕ್ಕೆ ಕುರಾಣದ ವಾಕ್ಯದಂತೆ ಮಾನ್ಯವಾಗಿ ಕುಳಿತಿದೆ! ಸರಕಾರದ ಹಿತಚಿಂತನವೇ ನನ್ನ ಕೆಲಸವಾದ್ದರಿಂದ ಯಾರ ಮುರವತ್ತನ್ನೂ ಕಾಯದೆ, ಇದ್ದದ್ದನ್ನು ಸನ್ನಿಧಿಗೆ ಅರಿಕೆಮಾಡಿಕೊಂಡಿದ್ದೇನೆ. ಇದರಮೇಲೆ ಖಾವಿಂದರ ಮನಸ್ಸಿಗೆ ಬಂದಂತೆ ಮಾಡಬಹುದು. ಗುಲಾಮನ ಮಾತಿನಲ್ಲಿ ಹೆಚ್ಚು ಕಡಿಮೆಯಾಗಿದ್ದರೆ ಕ್ಷಮಿಸಬೇಕೆಂದು ಪ್ರಾರ್ಥಿಸುವೆನು.

ಸೈಯದುಲ್ಲಾಖಾನನ ಈ ಮಾತುಗಳನ್ನು ಕೇಳಿ ಬಾದಶಹನಿಗೆ ಬಹಳ ಆಶ್ಚರ್ಯ ವಾಯಿತು. ಸೈಯದನ ನೀಚತನವನ್ನೂ ದ್ವೇಷಬುದ್ಧಿಯನ್ನೂ ಬಾದಶಹನು ಅರಿತವ ನಾದದ್ದರಿಂದ, ಸೈಯದುಲ್ಲಾನು ಏನಾದರೂ ಹುಟ್ಟಿಸಿಕೊಂಡು ಹೇಳುತ್ತಿರಬಹುದೆಂದು ಬಾದಶಹನು ತಿಳಿದು, ತಿರುಗಿ ಸೈಯದುಲ್ಲಾನನ್ನೇ ಧಿಕ್ಕರಿಸಿದನು; ಆದರೆ ಸೈಯದುಲ್ಲಾನು, ಈ ಮಾತು ಅಸತ್ಯವಾದರೆ ಮಾಡಿದ ಶಿಕ್ಷೆಗೆ ಗುರಿಯಾಗುವೆನೆಂದು ಎದೆತಟ್ಟಿ ಹೇಳಿದ್ದರಿಂದ, ಬಾದಶಹನು ಆತನನ್ನು ಕುರಿತು–ಸೈಯದುಲ್ಲಾ, ನೀನು ಬೇಕಾದದ್ದು ಹೇಳು, ರಣದುಲ್ಲಾಖಾನನು ಇಂಥ ನೀಚತನಕ್ಕೆ ಎಂದೂ ಮನಸ್ಸು ಮಾಡನು, ರಂಗರಾವ ಅಪ್ಪಾನಂಥ ತೇಜಸ್ವಿಯಾದರೂ ಇಂಥ ಹೇಡಿತನಕ್ಕೆ ಹೋಗನು. ಆದರೆ ನೀನು ಎದೆತಟ್ಟಿ ಹೇಳುತ್ತಿರುವದರಿಂದ ವಿಚಾರಮಾಡುವದು ತಕ್ಕದ್ದಾಗಿ ತೋರುತ್ತದೆ. ವಿಚಾರದ ಕೊನೆಯಲ್ಲಿ ನಿನ್ನ ಮಾತು ಸತ್ಯವಾದರೆ, ರಣದುಲ್ಲಾನ ಶಿರಚ್ಛೇದ ಮಾಡಿಸುವದರಲ್ಲಿ ಸಂಶಯವಿಲ್ಲ, ರಂಗರಾಯನಂತೂ ಕ್ರೂರ ಶಿಕ್ಷೆಗೆ ಗುರಿಯಾಗುವನೆಂದು ಹೇಳುವ ಕಾರಣವಿಲ್ಲ ಆದರೆ ನಿನ್ನ ಮಾತು ಸುಳ್ಳಾದರೆ ನಿನ್ನ ಗತಿಯೇನಾದೀತೆಂಬದನ್ನು ನೋಡಿಕೋ. ಈಗಲೇ ರಣದುಲ್ಲಾನನ್ನು ಕರೆಸಿ ನಿಜವಾದ ಸಂಗತಿಯನ್ನು ವಿಚಾರಿಸಿಬಿಡುತ್ತೇನೆ. ಅನ್ನಲು ಸೈಯದುಲ್ಲಾನು–ಖಾವಿಂದ, ನನ್ನ ಮಾತು ಸುಳ್ಳಾದರೆ, ಬೇಕಾದ ಶಿಕ್ಷೆಯನ್ನು ವಿಧಿಸಿರಿ, ಅನುಭವಿಸಲು ಸಿದ್ಧನಿದ್ದೇನೆ; ಆದರೆ ಈಗಲೇ ರಣದುಲ್ಲಾಖಾನನನ್ನು ಕರೆಸಿಕೊಳ್ಳುವುದು ಸರಿಯಲ್ಲ, ನನ್ನ ಮಾತಿನ ನಿಜತ್ವವನ್ನು ತೋರಿಸಲಿಕ್ಕೆ ನಾನು ಕೆಲವು ಆಧಾರಗಳನ್ನು ಸಿದ್ಧಮಾಡಿಕೊಳ್ಳಬೇಕಾಗುತ್ತದೆ. ಇಂದಿನಿಂದ ಹದಿನೈದು ದಿನಗಳಲ್ಲಿ ನನ್ನ ಮಾತಿನ ನಿಜತ್ವವನ್ನು ಸ್ಥಾಪಿಸದಿದ್ದರೆ, ಬೇಕಾದ ಶಿಕ್ಷೆಯನ್ನು ಮಾಡಿರಿ. ಅಲ್ಲಿಯವರೆಗೆ ಖಾವಿಂದರವರು ಯಾವ ಸುಳುವೂ ಹತ್ತದಂತೆ ಸುದ್ದಿಯನ್ನು ಗುಪ್ತವಾಗಿಡಬೇಕು, ಎಂದು ಹೇಳಿದನು. ಇದರಿಂದ ಬಾದಶಹನ ಮನಸ್ಸಿನಲ್ಲಿ ಸಂಶಯದ ಬೀಜವನ್ನು ಬಿತ್ತಿದಂತಾಯಿತು. ಆತನು ಹಾಗೆಯೇ ಆಗಲೆಂದು ಹೇಳಿ ಸೈಯದುಲ್ಲಾಖಾನನನ್ನು ಅಪ್ಪಣೆಕೊಟ್ಟು ಕಳುಹಿದನು. ಸೈಯದುಲ್ಲಾಖಾನನಿಗೆ ಈ ದಿನ ಸಮಾಧಾನವಿದ್ದಿಲ್ಲ, ತನ್ನ ಕಪಟಕೃತಿಯು ಸಫಲವಾಗುವದೋ ಇಲ್ಲವೋ ಎಂಬ ಬಗ್ಗೆ ಆತನ ಮನಸ್ಸು ಕಟಿಯುತ್ತಿತ್ತು, ಆತನು ಈ ಕಾರ್ಯದಲ್ಲಿ ರಂಭಾವತಿಯ ಸಹಾಯವನ್ನು ಪಡೆಯ ಬೇಕೆಂದು ಇಚ್ಛಿಸಿ, ಆಕೆಯ ಬಳಿಗೆ ಹೋದನು. ರಂಭಾವತಿಯು ಒಬ್ಬ ಶೂರನಾದ ಮಹಾರಾಷ್ಟ್ರ ತರುಣನ ಹೆಂಡತಿಯು. ಆ ಸುಂದರಿಯನ್ನು ಸೈಯದುಲ್ಲಾನು ಮೋಸದಿಂದ ಬಾದಶಹನ ಕಾಮವಾಸನೆಗೆ ಬಲಿಕೊಟ್ಟಿದ್ದನು. ಬಾದಶಹನಿಗೆ ರಂಭಾವತಿಯ ಹೊರತು ಸುಖವಾಗುತ್ತಿದ್ದಿಲ್ಲ. ಆತನು ಸೈಯದುಲ್ಲಾನಿಗೆ ಮನೆಗೆ ಹೋಗಲಪ್ಪಣೆಕೊಟ್ಟ ಬಳಿಕ ರಂಭಾವತಿಯನ್ನು ಕುರಿತು—''ಆಯಮೇರಿಜಾನ ರಂಬಾ, ಶರಾಬ, ಶರಾಬ'' ಎಂದು ಕೂಗಹತ್ತಿದನು. ರಂಭಾವತಿಯು ಬಾದಶಹನ ಬಳಿಗೆ ಬರುವದರೊಳಗಾಗಿ ಆಕೆಯನ್ನು ಕಂಡು ಬಾದಶಹನ ಮನಸ್ಸನ್ನು ಮತ್ತಿಷ್ಟು ಕೆಡಸಲಿಕ್ಕೆ ಹೇಳಬೇಕೆಂದು ಸೈಯದುಲ್ಲಾನು ನೆನಿಸಿದ್ದನು. ರಂಭಾ ಪತಿಯ ಹೆಸರಿನ ಹಿಂದೆ : ''ಸುಲ್ತಾನ'' ಎಂಬ ಬಹುಮಾನದ

ಪದವಿಯು ಜೋಡಿ ಸಲ್ಪಡದಿದ್ದರೂ ''ಸುಲ್ತಾನ ಬೇಗಮ'' ಎಂಬ ಪಟ್ಟದ ರಾಣಿಗಿಂತ ರಂಭಾವತಿಯ ಮೇಲೆ ಬಾದಶಹನ ಪ್ರೀತಿಯು ವಿಶೇಷವಾಗಿತ್ತು. ಇಂಥ ಬಹುಮಾನವು ರಂಭಾವತಿಗೆ ಪ್ರಾಪ್ತವಾಗಲಿಕ್ಕೆ ತಾನೇ ಕಾರಣನಾದ್ದರಿಂದ, ರಂಭಾವತಿಯು ತನ್ನ ಉಪಕಾರವನ್ನು ನೆನಿಸಿ ಕೃತಜ್ಞಳಾಗಿರುವಳೆಂದು ಸೈಯದುಲ್ಲಾನು ನೆನಿಸಿದನು; ಆದರೆ ಸೈಯದುಲ್ಲಾನನ್ನು ನೋಡಿದಕೂಡಲೆ ರಂಭಾವತಿಯ ಮೈಯೆಲ್ಲಾ ಉರಿಯುತ್ತಿತ್ತು. ಸೈಯದುಲ್ಲಾನು ತನ್ನ ಭೆಟ್ಟಿಗೆ ಬಂದದನ್ನು ಕೇಳಿ ಆಕೆಯು ಸಂತಾಪಗೊಂಡರೂ, ಅದನ್ನು ಹೊರಗೆ ತೋರಿಸಿದೆ, ಮುಗುಳುನಗೆಯಿಂದ ನಗುತ್ತ ಆತನನ್ನು ಆದರದಿಂದ ಬರಮಾಡಿ ಕೊಂಡು, ಆತನ ಮಾತುಗಳನ್ನೆಲ್ಲ ಕೇಳಿಕೊಂಡು ಅದರಂತೆ ನಡೆಯುವೆನೆಂದು ತೋರಿಕೆಗೆ ನುಡಿದಳು. ತನ್ನ ಪಾತಿವ್ರತ್ಯವನ್ನು ಭಂಗಪಡಿಸಿದ ಸೇಡನ್ನು ತೀರಿಸಿಕೊಳ್ಳುವದಕ್ಕಾಗಿ ಸೈಯದುಲ್ಲಾನ ಪ್ರಾಣವನ್ನು ಹೀರಿದಹೊರತು ಆಕೆಗೆ ಸಮಾಧಾನವಾಗುವಂತೆ ಇದ್ದಿಲ್ಲ. ಸೈಯದುಲ್ಲಾನು ತನ್ನ ಕಣ್ಣು ಮರೆ ಹೇಗಾದಾನೆಂದು ಆಕೆಯು ಚಿಂತಿಸುತ್ತಿರಲು, ಅಷ್ಟರಲ್ಲಿ ಬಾದಶಹನು ಮತ್ತೆ—''ಆಯಮೇರಿಜಾನ ರಂಭಾ, ಶರಾಬ, ಶರಾಬ'' ಎಂದು ಕೂಗಲು, ಅದನ್ನೇ ನೆವಮಾಡಿಕೊಂಡು ಆಕೆಯು ಬಾದಶಹನ ಬಳಿಗೆ ಹೊರಟುಹೋದಳು.

## ವಿಚಿತ್ರಯೋಗ

ಇತ್ತ ಸೈಯದುಲ್ಲಾಖಾನನು ಅರಮನೆಯಿಂದ ಹೊರಬಿದ್ದು ತನ್ನ ಮೇಣೆಯಲ್ಲಿ ಕಾಲು ಚಾಚಿಕೊಂಡು ಲೋಡಿಗೆ ಆತು ಕುಳಿತುಕೊಳ್ಳಲು, ಬೋಯಿಗಳು ಮುಂದಕ್ಕೆ ಸಾಗಿದರು. ಹಿಂದೆ ಇಬ್ಬರು, ಮುಂದೆ ಇಬ್ಬರು ಹಿಲಾಲು ಹಿಡಕೊಂಡು ಬರುತ್ತಲಿದ್ದರು. ಈಗಿನಂತೆ ಆಗ ಬೀದಿಗಳಲ್ಲಿ ದೀಪಗಳನ್ನು ಹಚ್ಚಿ ಬೆಳಕುಮಾಡುವ ಪ್ರಚಾರವಿಲ್ಲದ್ದರಿಂದ, ದೊಡ್ಡ ದೊಡ್ಡ ಜನರು ಹಿಲಾಲುಗಳನ್ನು ಹಿಡಿಸಿಕೊಂಡು ಹೋಗುತ್ತಲಿದ್ದರು. ಹಿಲಾಲುಗಳು ಬಹುಮಾನದ ಚಿಹ್ನಗಳೂ ಆಗಿದ್ದವು. ಹೆಚ್ಚು ಮರ್ಯಾದಸ್ತರು ಹೆಚ್ಚು ಹಿಲಾಲುಗಳನ್ನು ಹಿಡಿಸಿಕೊಂಡು ಹೋಗುತ್ತಿದ್ದರು. ಹಗಲದೀವಟಿಗೆಯು ಬಹುಮಾನದ ಲಕ್ಷಣವೆಂಬುದನ್ನು ಈಗೂ ತಿಳಿಯುತ್ತಿರುವದನ್ನು ವಾಚಕರು ಕೇಳಿರಬಹುದು. ಇರಲಿ, ಸೈಯದುಲ್ಲಾನ ಮೇಣೆಯು ಕೆಲವು ಓಣಿಗಳನ್ನು ದಾಟಿ ಒಂದು ಬೈಲ ಪ್ರದೇಶದ ಬಳಿಗೆ ಬಂದಿತು. ಅಲ್ಲಿ ಜನರ ಗದ್ದಲವು ವಿಶೇಷವಾಗಿದ್ದು, ಒಂದು ಆಕಳ ಸಲುವಾಗಿ ಹಿಂದು–ಮುಸಲ್ಮಾನರಲ್ಲಿ ಜಗಳವು ನಡೆದಿತ್ತು. ಮುಸಲ್ಮಾನರು ಆಕಳಿಗೆ ಮಾಡಿದ್ದ ಎರಡು ಮೂರು ಗಾಯಗಳಿಂದ ರಕ್ತವು ಸೋರುತ್ತಿದ್ದು, ಅದರ ತಲೆ ಹೊಡೆಯುವದಕ್ಕಾಗಿ ಅವರು ಆತುರರಾಗಿದ್ದರು; ಆದರೆ ಹಿಂದುಗಳು ಅದಕ್ಕೆ ಪ್ರತಿಬಂಧಮಾಡಿ ಮುಸಲ್ಮಾನರನ್ನು ಹಿಂದಕ್ಕೆ ಸರಿಸಿ ಆಕಳನ್ನು ಸ್ವಾಧೀನಪಡಿಸಿ ಕೊಳ್ಳುತ್ತಲಿದ್ದರು. ಮುಸಲ್ಮಾನರ ಈ ಅಪಜಯವನ್ನು ಮೇಣೆಯೊಳಗಿಂದ ಸೈಯದುಲ್ಲಾನು

ನೋಡಿ, ಮುಸಲ್ಮಾನರನ್ನು ಹುರುಪುಗೊಳಿಸಿ ಹಿಂದೂ ಜನರನ್ನು ಓಡಿಸಿ ಆಕಳನ್ನು ಕಸಕೊಳ್ಳುವಂತೆ ಮಾಡಬೇಕೆಂದು ಬೋವಿಗಳಿಗೆ ನಿಲ್ಲಹೇಳಿದನು. ಬೋವಿಗಳು ಮೇಣೆ ಯನ್ನು ಕೆಳಗಿಳಿಸಲು, ಸೈಯದುಲ್ಲಾನು ಶಸ್ತ್ರಪಾಣಿಯಾಗಿ ಜನರು ನೆರೆದಲ್ಲಿಗೆ ಹೋದನು. ಆವೇಶದಿಂದ ಬರುತ್ತಿರುವ ಈ ದುಷ್ಟನನ್ನು ಹಿಂದೂ ಜನರು ನೋಡಿ ಗಾಬರಿಯಾದರು. ಸೈಯದುಲ್ಲಾನು ಆಕಳ ಸಮೀಪಕ್ಕೆ ಹೋಗಲು, ಒಬ್ಬ ಭವ್ಯಾಕಾರದ ಕರಿಯ ಮನುಷ್ಯನು ಖಡ್ಗವನ್ನೆತ್ತಿ ಆಕಳನ್ನು ಜಗ್ಗುವ ಮುಸಲ್ಮಾನನ್ನು ಚದರಿಸುತ್ತಲಿದ್ದನು. ಆತನನ್ನು ನೋಡಿದ ಕೂಡಲೆ ಸೈಯದುಲ್ಲಾನ ಕಾಲುಗಳು ಹೋದವು. ಸೈಯದುಲ್ಲಾನನ್ನು ನೋಡಿದ ಕೂಡಲೆ ಆ ಕರಿಯ ಮನುಷ್ಯನ ಕಣ್ಣುಗಳು ಕೆಂಪಾದವು. ಇವನೆಲ್ಲಿಂದ ಬಂದನೆಂದು ಭಯಪಟ್ಟು ಕೂಡಲೆ ಸೈಯದುಲ್ಲಾಖಾನನು ತನ್ನ ಮೇಣೆಯ ಕಡೆಗೆ ತಿರುಗಿದನು. ಇನ್ನು ತಮ್ಮ ಪಕ್ಷವು ಸಮರ್ಥವಾಗುವದೆಂದು ನಂಬಿದ್ದ ಮುಸಲ್ಮಾನರು, ಸೈಯದುಲ್ಲಾನು ಹೀಗೆ ಒಮ್ಮೆಲೆ ತಿರುಗಿದ್ದನ್ನು ನೋಡಿ ಹತಾಶರಾದರು. ಕೂಡಲೆ ಹಿಂದೂ ಜನರು ಹುರುಪುಗೊಂಡು ಆಕಳನ್ನು ಬಿಡಿಸಿಕೊಂಡು ಹೊರಟುಹೋದರು. ಸೈಯದುಲ್ಲಾಖಾನನು ತನ್ನ ಮೇಣೆಯ ಕಡೆಗೆ ಹೊರಡಲು, ಆ ಕರಿಯ ಮನುಷ್ಯನೂ ಅತ್ತ ಕಡೆಗೇ ಬರತೊಡಗಿದನು. ಅದನ್ನು ನೋಡಿ ಸೈಯದುಲ್ಲಾನ ಮೋರೆಯು ಹುಚ್ಚು ಇಟ್ಟಿತು. ಸೈಯದುಲ್ಲಾನು ರಣಹೇಡಿ ಮನುಷ್ಯನು; ಆದರೆ ಸ್ತ್ರೀವಿಷಯದ ನೀಚ ಕೆಲಸದ ಸಲುವಾಗಿ ಆತನ ಮೇಲೆ ವಿಷಯಾಸಕ್ತ ಬಾದಶಹನ ಪ್ರೀತಿಯು ಕುಳಿತದ್ದರಿಂದ, ಆತನಿಗೆ ದರ್ಬಾರದಲ್ಲಿ ಕೂಡ ಇಲ್ಲದ ಪ್ರತಿಷ್ಠೆಯು ಬಂದು, ಜನರು ಮಿತಿಮೀರಿ ಆತನಿಗೆ ಹೆದರುತ್ತಿದ್ದರು. ಸೈಯ ದುಲ್ಲಾನು ಭಯದಿಂದ ಮೇಣೆಯಲ್ಲಿ ಬಿದ್ದುಕೊಂಡು ಬಾಗಿಲು ಹಾಕಿಕೊಳ್ಳುತ್ತಿರಲು, ಆ ಭವ್ಯಾಕಾರದ ಕರಿಯ ಮನುಷ್ಯನು ಮೇಣೆಯ ಕಿಡಿಕಿಯೊಳಗೆ ಗೋಣು ಹಾಕಿ ಮೆಲ್ಲಗೆ ಸೈಯದುಲ್ಲಾನಿಗೆ ಮಾತ್ರ ಸ್ಪಷ್ಟವಾಗಿ ಕೇಳುವಂತೆ—''ಎಲಾ ನೀಚಾ, ಜೋಕೆ! ಜೋಕೆ!! ನಿನ್ನ ವೈರಿಯು ಮರಣಹೊಂದಿರುವದಿಲ್ಲ, ಜೀವದಿಂದಿದ್ದಾನೆ. ಇನ್ನು ಎರಡು ತಿಂಗಳೊಳಗೆ ನಿನ್ನನ್ನು ಯಮನ ಬಳಿಗೆ ಕಳಿಸುವನು. ನೋಡು, ನನ್ನ ಕಡೆಗೆ ನೋಡು'' ಎಂದು, ಕುದಿಯುವ ಶೀಸದ ರಸದಂತೆ ಸೈಯದುಲ್ಲಾನ ಕಿವಿಯಲ್ಲಿ ವ್ಯಥೆಯನ್ನುಂಟುಮಾಡುವ ಶಬ್ದಗಳನ್ನು ಉಚ್ಚರಿಸಿದನು. ಆಮೇಲೆ ಆತನು ತನ್ನ ಕೆಂಡದಂಥ ಕಣ್ಣುಗಳಿಂದ ಸೈಯದುಲ್ಲಾನನ್ನು ಕೆಕ್ಕರಿಸಿ ನೋಡುತ್ತ ಸ್ವಲ್ಪ ಹೊತ್ತು ನಿಂತು, ತನ್ನ ಮೋರೆಯನ್ನು ಮೇಣೆಯ ಹೊರಗೆ ತಕ್ಕೊಂಡು ಬೋವಿಗಳನ್ನು ಕುರಿತು, ''ನಡೆಯಿರಿ, ಕೆಲಸವಾಯಿತು, ಯಾಕೆ ನಿಂತುಕೊಂಡಿರಿ'' ಎಂದು ನುಡಿದು, ಹಿಂದಿನ ಬೋವಿಗಳ ಹೆಗಲಮೇಲೆ ಒಂದೊಂದು ಗುದ್ದು ಹಾಕಿದನು. ಸ್ವಲ್ಪ ಹೊತ್ತಿನಲ್ಲಿಯೇ ಬೋವಿಗಳು ದೀವಟಿಗೆ ಯವರನ್ನು ಹಿಂಬಾಲಿಸಿ ಹೊರಟುಹೋದರು. ಇತ್ತ ಆ ಕರಿಯ ಮನುಷ್ಯನು ಕ್ಷಣದಲ್ಲಿ ಕತ್ತಲೆಯೊಳಗೆ ಅದೃಶ್ಯನಾದನು.

ಈ ವಿಚಿತ್ರ ವ್ಯಕ್ತಿಯು ಯಾರೆಂಬದನ್ನು ಅರಿತುಕೊಳ್ಳಲಿಕ್ಕೆ ವಾಚಕರು ಆತುರಪಡುತ್ತಿರ ಬಹುದು; ಆತನು ರಂಭಾವತಿಯ ಗಂಡನು. ಆತನ ಹೆಸರು ರಾಮದೇವ. ರಾಮದೇವನು

ಬಹು ಶೂರನು. ಮಹಮ್ಮದಶಹನ ಆಶ್ರಯದಿಂದ ದೊಡ್ಡ ಪದವಿಗೇರಬೇಕೆಂದು, ತನ್ನ ತಂದೆಯ ಒಪ್ಪಿಗೆಯಿಂದ ಆತನು ಬಾದಶಹನ ದಂಡಿನಲ್ಲಿ ಚಾಕರಿಗೆ ನಿಂತುಕೊಂಡನು. ರಾಜನಿಷ್ಠೆಯ ಬಗ್ಗೆ ರಾಮದೇವನ ಮನೆತನವು ಪ್ರಸಿದ್ಧವಾಗಿತ್ತು. ರಾಮದೇವನು ಒಂದರ ಹಿಂದೊಂದು ಪರಾಕ್ರಮದ ಕೆಲಸಗಳನ್ನು ಮಾಡುತ್ತ ಘನತೆಗೇರಿ, ಮುರಾರಿ ಜಗದೇವನ ತರುವಾಯ ಈತನೇ ಬಾದಶಹನ ವಜೀರ ಪದವಿಗೆ ಯೋಗ್ಯನೆಂದು ಜನರಿಂದ ಹೊಗಳಿಸಿ ಕೊಳ್ಳಹತ್ತಿದನು. ರಾಮದೇವನ ಹೆಂಡತಿಯು ಬಹು ಚಲುವೆಯಿದ್ದಳು. ಸೈಯದುಲ್ಲಾಖಾನ ನಂಥ ಒಬ್ಬಿಬ್ಬ ನೀಚರ ಮುಖದಿಂದ ರಂಭಾವತಿಯ ಸೌಂದರ್ಯದ ವರ್ಣನವನ್ನು ಕೇಳಿ ಬಾದಶಹನು ಮರುಳಾಗಿ, ರಂಭಾವತಿಯನ್ನು ಕಣ್ಣುಮುಟ್ಟಿ ನೋಡಬೇಕೆಂದು ಹಾತೊರೆಯ ಹತ್ತಿದನು. ಈ ಪ್ರಸಂಗದಲ್ಲಿ ಬಾದಶಹನಿಗೆ ಸಹಾಯಮಾಡಿ ಆತನ ಪ್ರೀತಿಯನ್ನು ಸಂಪಾದಿಸ ಬೇಕೆಂದು ಸೈಯುದಲ್ಲಾಖಾನನು ಯೋಚಿಸಿ, ''ಬೇಗಮ ಸಾಹೇಬರು ಭೆಟ್ಟಿಗೆ ಕರೆದಿದ್ದಾರೆಂ''ದು ಸುಳ್ಳೇ ರಂಭಾವತಿಗೆ ಹೇಳಿಕಳುಹಿದನು. ರಂಭಾವತಿಯು ಈ ವರ್ತಮಾನವನ್ನು ತನ್ನ ಗಂಡನಿಗೆ ತಿಳಿಸಲು, ಇದರಿಂದ ಬೇಗಮಸಾಹೇಬರ ಮರ್ಜಿಯು ತನ್ನ ಮೇಲೆ ಆಗಿ, ತಾನು ಬೇಗನೆ ಘನತೆಗೇರುವೆನೆಂದು ರಾಮದೇವನು ಉಬ್ಬಿ ಹೆಂಡತಿಯನ್ನು ರಾಣೀವಾಸಕ್ಕೆ ಕಳಿಸಿದನು. ಅತ್ತ ಬೇಗಮಸಾಹೇಬರಿಗೆ ''ರಂಭಾವತಿಯು ದರ್ಶನಕ್ಕೆ ಬರುವಳೆಂ''ದು ತಿಳಿಸಿದ್ದರಿಂದ, ರಂಭಾವತಿಯ ಆದರಾತಿಥ್ಯವು ಉತ್ತಮ ರೀತಿಯಿಂದ ಮಾಡಲ್ಪಟ್ಟಿತು. ಈ ಪ್ರಸಂಗದಲ್ಲಿ ಬಾದಶಹನು ರಂಭಾವತಿಯನ್ನು ಕಣ್ಣುಮುಟ್ಟಿ ನೋಡಿ, ಆಕೆಯ ರೂಪಲಾವಣ್ಯಗಳಿಗೆ ಮೋಹಿತನಾದನು. ಕಾಮಾಂಧನಾದ ಬಾದಶಹನು ರಾಮದೇವನನ್ನು ಕೊಲ್ಲಿಸಿ ರಂಭಾವತಿಯನ್ನು ಪ್ರಸಿದ್ಧ ರೀತಿಯಿಂದ ಜನಾನಖಾನೆಯಲ್ಲಿ ಸೇರಿಸಿಕೊಳ್ಳಬೇಕೆಂದು ಯೋಚಿಸಿದನು. ಬಾದಶಹನ ಯೋಚನೆಯು ಸೈಯದುಲ್ಲಾಖಾನನಿಗೆ ಸಮ್ಮತವಾಗಿದ್ದರೂ, ಹೀಗೆ ಮಾಡಿದರೆ ತನ್ನ ಮೋಟು ಮೇಲಾಗುವದಿಲ್ಲೆಂದು ತಿಳಿದು, ಈ ಯೋಚನೆಯನ್ನು ತಿರಸ್ಕರಿಸುವದಕ್ಕಾಗಿ ಆತನು ಬಾದಶಹನನ್ನು ಕುರಿತು ನುಡಿದನೇನಂದರೆ–ಖಾವಿಂದ, ಹೀಗೆ, ಪ್ರಸಿದ್ಧ ರೀತಿಯಿಂದ ಅನ್ಯಾಯಮಾಡಿದರೆ, ದರ್ಬಾರದ ಜನರ ಮನಸ್ಸು ಅಸಂತುಷ್ಟವಾಗ ಬಹುದು; ಆದ್ದರಿಂದ ಈ ಕಾರ್ಯವನ್ನು ಯುಕ್ತಿಯಿಂದಲೇ ಸಾಧಿಸಬೇಕು. ಕರ್ನಾಟಕಕ್ಕೆ ದಂಡೆತ್ತಿ ಹೋಗಿ ಇಂಥದೊಂದು ಕಾರ್ಯವನ್ನು ಅತಿ ತೀವ್ರ ಸಾಧಿಸಿಕೊಂಡು ಬಂದರೆ, ನಿನ್ನ ಉತ್ಕರ್ಷವಾದೀತೆಂದು ದರ್ಬಾರದಲ್ಲಿ ತಾವು ರಾಮದೇವನಿಗೆ ಹೇಳಬೇಕು; ಇದರಿಂದ ರಾಮದೇವನಿಗೆ ತನ್ನ ಕುಟುಂಬವನ್ನು ಸಂಗಡ ಕರೆದುಕೊಂಡು ಹೋಗಲಿಕ್ಕೆ ಅನುಕೂಲ ವಾಗುವದಿಲ್ಲ. ರಾಮದೇವನ ತಂದೆಯ ಬಳಿಗೆ ಕುಟುಂಬವನ್ನು ಕಳಿಸುವ ಜವಾಬದಾರಿಯನ್ನು ಖಾವಿಂದರು ಸ್ವತಃ ವಹಿಸಬೇಕು; ಅಂದರೆ ರಾಮದೇವನು ನಿಶ್ಚಿಂತೆಯಿಂದ ಹೊರಟು ಹೋಗುವನು. ರಂಭಾವತಿಯು ಮಾವನ ಮನೆಗೆ ಹೋದಳೆಂದು ಜನರ ನಂಬಿಗೆ ಯಾಗುವದು. ಅತ್ತ ರಾಮದೇವನ ತಂದೆಗೆ: ನಿನ್ನ ಮಗನು ಬಾದಶಹನ ಅಪ್ಪಣೆಯಿಂದ ಹೆಂಡತಿಯೊಡನೆ ಕರ್ನಾಟಕಕ್ಕೆ ದಂಡೆತ್ತಿಹೋಗಿರುವನೆಂದು ನಾನು ಪತ್ರವನ್ನು ಬರೆದು,

ರಾಮದೇವನ ಪತ್ರವು ಆತನ ತಂದೆಗೆ ಮುಟ್ಟದಂತೆ ವ್ಯವಸ್ಥೆ ಮಾಡುವೆನು. ರಂಭಾವತಿ ಯಂತು ಅನಾಯಾಸವಾಗಿ ಕೈಗೆ ಸಿಗುವದರಿಂದ ಖಾವಿಂದರ ಬಯಕೆಯು ಪೂರ್ಣ ವಾದಂತಾಗುವದು. ಮುಂದೆ ಯಾವದೊಂದು ತಪ್ಪನ್ನು ಹೊರಿಸಿ ರಾಮದೇವನಿಗೂ, ಆತನ ತಂದೆಗೂ ದೇಹಾಂತಶಿಕ್ಷೆಯನ್ನು ವಿಧಿಸಿ, ಅವರ ಮರಣದನಂತರ ರಂಭಾವತಿಯು ತಾನಾಗಿಯೇ ಸಂತೋಷದಿಂದ ಜನಾನಖಾನೆಯನ್ನು ಸೇರಿದಳೆಂದು ಪ್ರಸಿದ್ಧಗೊಳಿಸಿಬಿಟ್ಟರೆ ತೀರಿತು. ಖಾವಿಂದರ ಅಪಕೀರ್ತಿಯಾಗದೆ ಕಾರ್ಯವು ಸಾಧಿಸಿದಂತಾಗುವದು!

ಸೈಯದುಲ್ಲಾನ ಈ ಯುಕ್ತಿಯು ಬಾದಶಹನಿಗೆ ಬಹು ಸಮರ್ಪಕವಾಗಿ ತೋರಿತು. ಆತನ ಅಪ್ಪಣೆಯಂತೆ ರಾಮದೇವನು ಕರ್ನಾಟಕಕ್ಕೆ ದಂಡೆತ್ತಿ ಹೋದನು. ರಂಭಾವತಿಯು ಮೋಸದಿಂದ ಬಾದಶಹನ ಕೈಸೇರಿದಳು. ಅತ್ತ ರಾಮದೇವನ ತಂದೆಗೆ, ತನ್ನ ಮಗನು ಕುಟುಂಬ ಕರಕೊಂಡು ಯುದ್ಧಕ್ಕೆ ಹೋದದ್ದು ಯೋಗ್ಯವಾಗಿ ತೋರದಿದ್ದರೂ, ಮಗನು ಬಾದಶಹನ ಪ್ರೀತಿಗೆ ಪಾತ್ರನಾದನೆಂದು ತಿಳಿದು ಮುದುಕನು ಸಮಾಧಾನಪಟ್ಟನು. ಮಗನ ಒಂದೂ ಪತ್ರವು ಮುಟ್ಟದಂತೆ ಸೈಯದುಲ್ಲಾಖಾನನು ವ್ಯವಸ್ಥೆ ಮಾಡಿದ್ದರಿಂದ ಆ ವೃದ್ಧನಿಗೆ ನಿಜವಾದ ವರ್ತಮಾನವು ತಿಳಿಯಲಿಲ್ಲ. ಪತಿವ್ರತೆಯಾದ ರಂಭಾವತಿಯು ಬಾದಶಹನಿಗೆ ವಶವಾಗಲಿಕ್ಕೆ ಸಮ್ಮತಿಸದ್ದರಿಂದ, ಆಕೆಯು ಅನೇಕ ಯಾತನೆಗಳಿಗೆ ಗುರಿಯಾಗಬೇಕಾಯಿತು. ಪ್ರಾಣತ್ಯಾಗಕ್ಕೂ ಆಕೆಗೆ ಆಸ್ಪದವು ದೊರೆಯದಾಯಿತು. ಕಡೆಗೆ ನಿರುಪಾಯಳಾಗಿ ಮನಸ್ಸಿನಿಂದಲ್ಲದಿದ್ದರೂ ದೇಹದಿಂದಲಾದರೂ. ರಂಭಾವತಿಯು ಭ್ರಷ್ಟವಾಗಬೇಕಾಯಿತು. ಬಾದಶಹನು ಆಕೆಯ ಪತಿಯನ್ನೂ, ಮಾವನನ್ನೂ ಕೊಲ್ಲಿಸಲು ಹವಣಿಸಹತ್ತಿದ್ದರಿಂದ, ಅವರ ಜೀವವನ್ನು ಉಳಿಸುವದಕ್ಕಾಗಿ ರಂಭಾವತಿಯು ಆ ನರಕವಾಸವನ್ನು ಭೋಗಿಸುತ್ತ ಜೀವಿಸಬೇಕಾಯಿತು. ಹೀಗಿರಲು, ಸೈಯದುಲ್ಲಾನು ರಾಮದೇವನಿಗೆ ತಾನೇ ಕೈಮುಟ್ಟಿ ಪತ್ರವನ್ನು ಬರೆದು ಕರ್ನಾಟಕಕ್ಕೆ ಕಳುಹಿಸಿದನು. ರಾಮದೇವನು ಆ ಪತ್ರವನ್ನು ಒಡೆದು ನೋಡಲು, ಅದರಲ್ಲಿ—''ಮಿತ್ರನಾದ ರಾಮದೇವನೇ, ನೀನು ನನ್ನನ್ನು ಯಾವಾಗಲೂ ತಿರಸ್ಕರಿಸುತ್ತಿದ್ದರೂ, ನಿನ್ನ ಗುಣಗಳಿಗೆ ಮೆಚ್ಚಿದ್ದ ನಾನು, ನಿನ್ನನ್ನು ಮನಮುಟ್ಟಿ ಪ್ರೀತಿಸುತ್ತಿರುವೆನು. ಆ ಪ್ರೀತಿಯೇ ನನ್ನಿಂದ ಈ ಪತ್ರವನ್ನು ಬರೆಸಿರುತ್ತದೆ. ನೀಚನಾದ ಬಾದಶಹನು ನಿನ್ನ ಹೆಂಡತಿಯ ಪಾತಿವ್ರತ್ಯ ಭಂಗಮಾಡಿದನು. ಇಷ್ಟರಿಂದ ತೃಪ್ತನಾಗದೆ ಆ ದುಷ್ಟನು ನಿನ್ನ ತಲೆಹೊಡಿಸಬೇಕೆಂದು ಯೋಚಿಸಿರುತ್ತಾನೆ. ನೀನು ಈ ಪತ್ರ ಮುಟ್ಟಿದ ಕೂಡಲೇ ವೇಷಾಂತರಮಾಡಿ ಸೈನ್ಯದಿಂದ ಹೊರಟುಹೋಗಿ ಕೆಲವು ದಿನ ಅಜ್ಞಾತವಾಸ ದಿಲ್ಲದ್ದು, ಆಮೇಲೆ ಗುಪ್ತರೀತಿಯಿಂದ ವಿಜಾಪುರಕ್ಕೆ ಬಂದು ನನ್ನನ್ನು ಕಾಣು. ಇನ್ನೂ ಹೇಳತಕ್ಕ ಮಾತುಗಳು ಎಷ್ಟೋ ಇರುವವು. ಅವನ್ನು ಪತ್ರದಲ್ಲಿ ಬರೆಯುವಂತೆ ಇಲ್ಲ. ನನ್ನ ಮಾತು ಮೀರಿದರೆ ನೀನು ಭಯಂಕರಕೊಲೆಗೆ ಗುರಿಯಾಗ ಬೇಕಾಗುವದರಿಂದ, ಮುಂದಿನ ಯಾವ ಕಾರ್ಯಮಾಡಲಿಕ್ಕೂ ನಿನಗೆ ಆಸ್ಪದವು ದೊರೆಯಲಿಕ್ಕಿಲ್ಲ'' ಎಂಬರ್ಥದ ಸಂಗತಿಯು ಬರೆದಿತ್ತು. ಅದನ್ನು ಓದಿದ ಕೂಡಲೆ ಆ ತರುಣ ಮಹಾರಾಷ್ಟ್ರನು ಸಿಟ್ಟಿನಿಂದ ಹುಚ್ಚಾದನು.

ಆ ಸ್ಥಿತಿಯಲ್ಲಿ ಆತನು ವಿಜಾಪುರದಲಿದ್ದದ್ದಾಗಿದ್ದರೆ, ಕೂಡಲೆ ಬಾದಶಹನ ಖೂನು ಮಾಡುವದಕ್ಕಾಗಿ ಧುಮುಕುತ್ತಿದ್ದನು. ರಾಮದೇವನು ಸೈಯದುಲ್ಲಾನ ಪತ್ರದ ಮೇಲೆ ವಿಶ್ವಾಸವಿಟ್ಟು ದಂಡಿನಿಂದ ಹೊರಹೊರಟು ವೇಷಾಂತರದಿಂದ ಸಾಗಿದನು. ಕೆಲವು ದಿನಗಳಾದ ಮೇಲೆ ಆತನು ಸೈಯದುಲ್ಲಾನ ಸೂಚನೆಯಂತೆ ಆತನ ಭೆಟ್ಟಿಗಾಗಿ ವಿಜಾಪುರಕ್ಕೆ ಹೋಗುತ್ತಿರಲು, ಹಾದಿಯಲ್ಲಿ ಒಬ್ಬನು ರಾಮದೇವನ ಗುರುತುಹಿಡಿದು ಒಂದು ಪತ್ರವನ್ನು ಆತನ ಕೈಯಲ್ಲಿ ಕೊಟ್ಟನು. ಅದನ್ನು ಓದಿ ನೋಡಲು, ಅದರಲ್ಲಿ ಸೈಯದುಲ್ಲಾನ ನಿಜವಾದ ನೀಚತನದ ವರ್ಣನವಿತ್ತು. ಆಗ ರಾಮದೇವನ ಮನಸ್ಸು ಎರಡು ತಟ್ಟಾಯಿತು. ಸೈಯದುಲ್ಲಾನ ಪತ್ರವನ್ನು ನಂಬಬೇಕೋ ಈಗಿನ ಪತ್ರವನ್ನು ನಂಬಬೇಕೋ ಎಂಬದು ತಿಳಿಯದೆ ಆತನು ಸುಮ್ಮನೆ ನಿಂತುಕೊಂಡನು. ಆಗ ಪತ್ರಕೊಟ್ಟವನು ರಾಮದೇವನನ್ನು ಕುರಿತು–ರಾಮದೇವಾ, ಸುಮ್ಮನೆ ವಿಚಾರಮಾಡುತ್ತ ಕಾಲಹರಣ ಮಾಡಬೇಡ. ಮೊದಲು ನಿನ್ನ ತಂದೆಯನ್ನು ಕಂಡು ಆಮೇಲೆ ಮಾಡತಕ್ಕದ್ದನ್ನು ಮಾಡೆಂದು ಹೇಳಿ, ಆತನ ತಂದೆ ಇರುವ ಅರಣ್ಯದ ಗುರುತು ಹೇಳಿ ಹೊರಟುಹೋದನು.

ರಾಮದೇವನು ವಿಜಾಪುರಕ್ಕೆ ಹೋಗುವದನ್ನು ಬಿಟ್ಟು ತನ್ನ ತಂದೆಯನ್ನು ಹುಡುಕುತ್ತ ಅರಣ್ಯವನ್ನು ಸೇರಿದನು. ಬಹುಪ್ರಯಾಸಪಟ್ಟು ಹುಡುಕುತ್ತಿರಲು, ಆತನಿಗೆ ಒಂದು ಗುಡಿಸಲಲ್ಲಿ ತಂದೆಯ ಭೆಟ್ಟಿಯಾಯಿತು. ಬಾದಶಹನು ತಂದೆ–ಮಕ್ಕಳಿಬ್ಬರನ್ನೂ ಕೊಲ್ಲಿಸ ಬೇಕೆಂದು ಮಾಡಿದ ಸುದ್ದಿಯನ್ನು ರಂಭಾವತಿಯು ಬಹು ಚಾತುರ್ಯದಿಂದ ತನ್ನ ಮಾವನಿಗೆ ತಿಳಿಸಿದ್ದರಿಂದ, ಆ ವೃದ್ಧನು ಅಡವಿಯ ಸೇರಿ ಭಿಲ್ಲನ ವೇಷದಿಂದ ಗುಡಿಸಿಲಲ್ಲಿ ಇರಹತ್ತಿದ್ದನು; ಆತನೇ ತನ್ನ ಮಗನ ಬಳಿಗೆ ಪತ್ರವನ್ನು ಕೊಟ್ಟುಕಳಿಸಿದ್ದನು. ತಂದೆ–ಮಕ್ಕಳ ಭೆಟ್ಟಿಯಾದ ಬಳಿಕ ಇಬ್ಬರ ಅಂತಃಕರಣಗಳು ಉಕ್ಕಿಬಂದು ಒಬ್ಬರನ್ನೊಬ್ಬರು ಬಿಗಿಯಾಗಿ ಅಪ್ಪಿಕೊಂಡರು. ತಂದೆಯು ಸೈಯದುಲ್ಲಾನ ನೀಚತನವನ್ನೆಲ್ಲ ಹೇಳಿ, ಸೊಸೆಯ ಕಡೆಗೆ ಏನೂ ತಪ್ಪಿಲ್ಲೆಂದು ಹೇಳಿದನು; ಆದರೂ ರಾಮದೇವನಿಗೆ ಸಮಾಧಾನವಾಗಲಿಲ್ಲ, ಪ್ರಾಣತ್ಯಾಗಮಾಡಿಕೊಳ್ಳದೆ ಇಲ್ಲಿಯವರೆಗೆ ತನ್ನ ಹೆಂಡತಿಯು ಬಾದಶಹನ ಬಳಿಯಲ್ಲಿದ್ದದ್ದು ಮಹಾಪರಾಧವೆಂದು ಆತನು ಸಂತಾಪ ಗೊಂಡನು. ಬಾದಶಹನಿಂದ ಎಂಥ ಅಪರಾಧವಾದರೂ ಸೇಡುತೀರಿಸಿಕೊಳ್ಳುವದು ಸ್ವಾಮಿ ದ್ರೋಹವೆಂದು ತಂದೆಯ ಮುಖದಿಂದ ಎಷ್ಟೋ ಸಾರೇ ಕೇಳಿದ್ದರಿಂದ, ಬಾದಶಹನನ್ನು ಹೇಗೆ ಕೊಲ್ಲಲೆಂದು ಆ ರಾಮದೇವನ ಮನಸ್ಸು ಚಡಪಡಿಸುತ್ತಿತ್ತು. ಅಪರಾಧಿಯು ಬಾದಶಹನಲ್ಲದೆ ಸೈಯದುಲ್ಲಾಖಾನನೆಂದು ಈಗ ಗೊತ್ತಾದ್ದರಿಂದ, ಆತನು ಒಂದು ಪಾಪದಿಂದ ಮುಕ್ತನಾದವನಂತೆ ಸಮಾಧಾನಪಟ್ಟನು. ಆತನು ಸೈಯದುಲ್ಲಾನನ ಮೇಲಿನ ಸಿಟ್ಟಿನಿಂದ ತಂದೆಯನ್ನು ಕುರಿತು–ಪಿತಾಜಿ, ಇನ್ನು ಎರಡು ತಿಂಗಳಲ್ಲಿ ಆ ನೀಚನ ರಕ್ತದಿಂದ ನಮ್ಮ ಕುಲಕ್ಕೆ ಹತ್ತಿದ ಕಲಂಕವನ್ನು ತೊಳೆಯುವೆನು. ಹೇಗಿದ್ದರೂ ಭ್ರಷ್ಟಳಾಗಿದ್ದ ಹೆಂಡತಿಯು ಶಾಸನಾರ್ಹಳಾದದ್ದರಿಂದ, ಆಕೆಯನ್ನು ಗೊತ್ತಿಗೆ ಹಚ್ಚುವೆನು. ಆಮೇಲೆ ನಾನೂ ಆತ್ಮಹತ್ಯವನ್ನು ಮಾಡಿಕೊಳ್ಳುವೆನು; ಇದೇ ತಮ್ಮ ಕಡೆಯ ದರ್ಶನವು, ಎಂದು

ಹೇಳಿ ತಂದೆಯನ್ನು ನಮಸ್ಕರಿಸಿ ತಟ್ಟನೆ ವಿಜಾಪುರದ ಹಾದಿಯನ್ನು ಹಿಡಿದನು. ಆತನು ವಿಜಾಪುರಕ್ಕೆ ಮುಟ್ಟಿದ ಬಳಿಕ ಹಲವು ವೇಷಗಳ ಹಾಕಿಕೊಳ್ಳುವ ಕಲೆಯನ್ನು ಪ್ರಯತ್ನ ಪೂರ್ವಕವಾಗಿ ಕಲಿತು, ವಿಜಾಪುರದಲ್ಲಿ ಎಲ್ಲ ಕಡೆಗೆ ತಿರುಗಿ ರಾಜಕಾರಣಕ್ಕೆ ಸಂಬಂಧಿಸಿದ, ವಿಶೇಷವಾಗಿ ತನಗೆ ಸಂಬಂಧಿಸಿದ ಸಂಗತಿಯನ್ನು ತಿಳಕೊಂಡು, ಸೈಯದುಲ್ಲಾನ ನೀಚತನವನ್ನು ಮನಗಂಡನು. :''ಸಾಯಜೀ'' ಎಂಬ ಮುಸಲ್ಮಾನ ಸಾಧುವಿಗೆ, ಬೇಕಾದಾಗ ರಂಭಾವತಿಯು ಮಂದಿರಕ್ಕೆ ಹೋಗುವ ಪರವಾನಿಗೆಯಿತ್ತು ಈ ಸಂಗತಿಯನ್ನು ರಾಮದೇವನು ತಿಳಕೊಂಡು ತದ್ರೂಪ ಸಾಯಜಿಯ ಹಾಗೆ ವೇಷಹಾಕಿ ಕೊಳ್ಳುವದನ್ನು ಕಲಿತು, ರಂಭಾವತಿಯ ಮಂದಿರವನ್ನು ಪ್ರವೇಶಿಸಲಿಕ್ಕೆ ಹೊಂಚು ಹಾಕಿದ್ದನು.

ಒಂದು ದಿವಸ ಮಹಮ್ಮದಶಹನು ಬೇಟೆಗೆ ಹೋದ ಸಂಧಿಯನ್ನು ಸಾಧಿಸಿ, ರಾಮ ದೇವನು ರಂಭಾವತಿಯ ಮಂದಿರದ ಕಡೆಗೆ ಹೋದನು. ಆಗ ಮೇಲುಪ್ಪರಿಗೆಯಲ್ಲಿ ಪರದೆಯ ಹಿಂದೆ ಕುಳಿತಿದ್ದ ರಂಭಾವತಿಯು, ಅಕಸ್ಮಾತ್ತಾಗಿ ಆತನನ್ನು ನೋಡಿ ಬೆರಗಾದಳು. ಪತಿಯ ದರ್ಶನದಿಂದ ರಂಭಾವತಿಗೆ ಸಮಾಧಾನವಾದರೂ, ತನ್ನ ದುರವಸ್ಥೆಯನ್ನು ನೆನಿಸಿ ಆಕೆಯು ದುಃಖಪಟ್ಟಳು. ಹೇಗಾದರೂ ಮಾಡಿ ಪತಿಯು ಇರುವ ಸ್ಥಳವನ್ನು ನೋಡಿ ಆತನನ್ನು ಕಂಡು ಬರುವಂತೆ ತನ್ನ ನಂಬಿಗೆಯ ದಾಸಿಯಾದ ರಾಯಿ ಎಂಬವಳಿಗೆ ಹೇಳಿ, ಕೂಡಲೆ ಆಕೆಯನ್ನು ಪತಿಯ ಬೆನ್ನ ಹಿಂದೆ ಕಳಿಸಿದಳು. ರಂಭಾವತಿಯ ಮನಸ್ಸು ತೀರ ಅಸ್ವಸ್ಥವಾಯಿತು. ರಾಯಿಯು ಪತಿಯನ್ನು ಕಂಡುಬಂದರೆ, ಏಕಾಂತದಿಂದ ಆಕೆಯೊಡನೆ ಮಾತಾಡಲಿಕ್ಕೆ ಅನುಕೂಲವಾಗಬೇಕೆಂದು ರಂಭಾವತಿಯ ಅಂದು ಮಂದಿರದಲ್ಲಿ ಹೆಚ್ಚು ದೀಪಗಳನ್ನು ಸಹ ಹಚ್ಚಿಸದೆ, ಮಿಣುಗುಟ್ಟುವ ಒಂದೇ ದೀಪವನ್ನು ಇಟ್ಟುಕೊಂಡು, ಎಲ್ಲ ದಾಸಿಯರನ್ನು ಹೊರಗೆ ಕಳಿಸಿ, ಬಾಗಿಲು ಹಾಕಿಕೊಂಡು ರಾಯಿಯ ಹಾದಿಯನ್ನು ನೋಡುತ್ತ ಉಸುರ್ಗರೆಯುತ್ತ ಕುಳಿತುಕೊಂಡಳು. ಮೂರು ತಾಸು ರಾತ್ರಿಯ ಸುಮಾರಕ್ಕೆ ಯಾರೋ ಬಾಗಿಲನ್ನು ದೂಕಿದರು. ಆಗ ರಂಭಾವತಿಯು ರಾಯಿಯೇ ಬಂದಳೆಂದು ತಿಳಿದು–ರಾಯೀ, ಬಂದೆಯಾ, ಸುದ್ದಿ ಏನೆಂದು ಆತುರದಿಂದ ಕೇಳುತ್ತಿರಲು, ಬಾಗಿಲು ದೂಡಿದ ವ್ಯಕ್ತಿಯು ಒಳಗೆ ಬಂದು ಬಾಗಿಲು ಇಕ್ಕಿ ಚಿಲಕ ಹಾಕಿ, ರಂಭಾವತಿಯ ಬಳಿಗೆ ಬರತೊಡಗಿತು. ರಾಯಿಯ ಬದಲು ಯಾವನೋ ಗಂಡಸು ಬಂದದ್ದನ್ನು ನೋಡಿ ರಂಭಾವತಿಯು ಭಯದಿಂದ ಚೀರಿ ''ದೀಪವು, ದೀಪವು'' ಎಂದು ಗದ್ದಲಮಾಡ ತೊಡಗಿದಳು. ಆಗ ಆ ವ್ಯಕ್ತಿಯಯು ''ಚುಪ್ ಚುಪ್'' ಎಂದು ರಂಭಾವತಿಯ ಸುಕುಮಾರವಾದ ಬಾಯಮೇಲೆ ಬಡಿದು, ಬಾಯನ್ನು ಗಟ್ಟಿಯಾಗಿ ಹಿಡಿದು ಚುಪ್, ಚುಪ್! ಮಾತಾಡಬೇಡ. ಒದರಾಡುವದರಿಂದ ಚೀರಾಡುವದರಿಂದ ಏನೂ ಉಪಯೋಗವಾಗುವ ಹಾಗಿಲ್ಲ, ಎಂದು ಗಟ್ಟಿಯಾಗಿ ನುಡಿದನು. ಅದನ್ನು ಕೇಳಿ ರಂಭಾವತಿಯು ಭಯದಿಂದ ನಡಗಹತ್ತಿದಳು; ಆದರೂ ಆ ವ್ಯಕ್ತಿಯ ಗುರುತು ಆಕೆಗೆ ಹತ್ತಿದಂತಾಯಿತು. ಆ ವ್ಯಕ್ತಿಯು ರಂಭಾವತಿಯ ಬಾಯಮೇಲಿನ ಕೈಯನ್ನು ತೆಗೆದು, ಸ್ವಲ್ಪ ಹೊತ್ತು ಸುಮ್ಮನೆ ನಿಂತುಕೊಂಡು ಆಕೆಯನ್ನು ಕುರಿತು–ಮಾತಾಡು, ನಾನು ಯಾರು?

ನೀನು ನನ್ನ ಗುರುತು ಹಿಡಿದೆಯಾ, ಎಂದು ಕೇಳಲು, ರಂಭಾವತಿಯು ಗದಗದನೆ ನಡಗುತ್ತ ಬಹು ಕಷ್ಟದಿಂದ "ಹೌದು, ಗುರುತು ಹಿಡಿದೆನು" ಎಂದು ನುಡಿದಳು. ಅದಕ್ಕೆ ಆ ವ್ಯಕ್ತಿಯು ರಂಭಾವತಿಗೆ–ನಾನು ನಿನ್ನನ್ನು ಕೊಲ್ಲುವದಕ್ಕಾಗಿ ಬಂದಿದ್ದೇನೆ. ಈಗ ನಿನ್ನ ಶಿರಚ್ಛೇದಮಾಡಿ ನಾನು ಇಲ್ಲಿಂದ ಹೋಗತಕ್ಕವನು. ಇಲ್ಲಿಗೆ ಬರಲಿಕ್ಕೆ ನನಗೆ ಎಷ್ಟು ಶ್ರಮವಾಯಿತು, ಹೀಗೆ ನೀನು ಸುಖಲೋಲುಪಳಾಗಿರುವದನ್ನು ನೋಡಿ ನನ್ನ ಮನಸ್ಸಿಗೆ ಎಷ್ಟು ವ್ಯಥೆಯಾಗಿರುತ್ತದೆ. ಎಂಬದರ ಕಲ್ಪನೆಯು ನಿನಗಿದ್ದರೆ, ಚಾಂಡಾಲಳೇ, ನೀನು ಇಂದು ಜೀವವನ್ನೇ ಇಡುತ್ತಿದ್ದಿಲ್ಲ. ದುಷ್ಟೇ..... ಎಂದು ನುಡಿಯುತ್ತಿರಲು ರಾಮದೇವನ ಮುಖದಿಂದ ಮುಂದೆ ಅಕ್ಷರಗಳು ಹೊರಡದಾದವು. ಸಿಟ್ಟಿನಿಂದ ಆತನು ನಡುಗಹತ್ತಿದನು. ಸ್ವಲ್ಪ ಹೊತ್ತಿನ ಮೇಲೆ ಆತನು ಮತ್ತೆ ರಂಭಾವತಿಗೆ–ಯಾಕೆ? ಯಾಕೆ ಮಾತಾಡಲೊಲ್ಲೆ? ಮಾತಾಡು, ಕಡೆಯ ಮಾತನ್ನು ಆಡಿಕೊಂಡುಬಿಡು. ನಿನ್ನನ್ನು ಕೊಂದ ಹೊರತು ನಾನು ಇಲ್ಲಿಂದ ಹೋಗುವದಿಲ್ಲ. ಹೀಗೆ ನೀನು ಚಕ್ಕಂದದಿಂದಿರುವದನ್ನು ನೋಡುವದಕ್ಕಿಂತ ಹೆಚ್ಚಿನ ಪಾಪವು ಯಾವದಿರುವದು? ಎಂದು ನುಡಿದನು.

ರಂಭಾವತಿಯು ಆ ವ್ಯಕ್ತಿಯ ಮಾತನ್ನು ಕೇಳಹತ್ತಿದಂತೆ ಆಕೆಗೆ ಧೈರ್ಯವು ಬರತೊಡಗಿತು. ಆಕೆಯು ತನ್ನ ಮಸ್ಸಿನಲ್ಲಿದ್ದದ್ದನ್ನು ಹೇಳಲಿಕ್ಕೆ ಸಿದ್ಧಳಾಗಿ ಸ್ವಲ್ಪ ಹೊತ್ತು ವಿಚಾರಮಾಡುತ್ತ ಸುಮ್ಮನೆ ನಿಂತು ಆ ವ್ಯಕ್ತಿಯನ್ನು ಕುರಿತು–ತಮ್ಮ ಕೈಯಿಂದ ಮರಣ ಒದಗುತ್ತದೆಂದ ಬಳಿಕ ಅದಕ್ಕೂ ಹೆಚ್ಚಿನದನ್ನು ನಾನೇನು ಬಯಸಲಿ? ಆ ದುಷ್ಟನಾದ ಸೈಯದುಲ್ಲಾನು ತಮ್ಮನ್ನು ಈ ಲೋಕದಿಂದ ಇಲ್ಲದಂತೆ ಮಾಡಿದೆನೆಂದು ಹೇಳಿದನು. ನನ್ನ ಸರ್ವಸ್ವದ ಘಾತ ಮಾಡಿದ ಆ ನೀಚನ ಜೀವವನ್ನು ಹಿಂಡಿ, ಸೇಡು ತೀರಿಸಿಕೊಳ್ಳದೆ ಬಿಡಲಿಕ್ಕಿಲ್ಲೆಂದು ಆಗಲೇ ನಾನು ಪ್ರತಿಜ್ಞೆಯನ್ನು ಮಾಡಿದೆನು. ನನ್ನ ಬಳಿಯಲ್ಲಿದ್ದ ತಮ್ಮ ತಸಬೀರಿಗೆ ಆ ನೀಚನ ರಕ್ತವನ್ನು ತಿಕ್ಕಿ, ಕೂಡಲೆ ಪ್ರಾಣತ್ಯಾಗಮಾಡಿ ಕೊಳ್ಳಬೇಕೆಂದು ನಿಶ್ಚಯಿಸಿದ್ದೆನು; ಆದರೆ ಇನ್ನು ನಾನು ಪ್ರತಿಜ್ಞೆಯನ್ನು ಈಡೇರಿಸಲವಶ್ಯವಿಲ್ಲ, ನಿಶ್ಚಯದಂತೆ ಆತ್ಮಘಾತಮಾಡಿ ಕೊಳ್ಳುವ ಕಾರಣವೂ ಇಲ್ಲ, ತೆಗೆಯಿರಿ–ತೆಗೆಯಿರಿ ಆ ಖಡ್ಗವನ್ನು, ನನ್ನನ್ನು ಎರಡು ತುಂಡು ಮಾಡಿಬಿಡಿರಿ. ತಮ್ಮಿಂದ ನನ್ನಂಥ ಪಾಪಿಷ್ಠೆಯ ದೇಹವು ತುಂಡರಿಸಲ್ಪಡುವಷ್ಟು, ಪುಣ್ಯವನ್ನು ನಾನು ಮಾಡಿದ್ದೇನೆಂದು ನನಗೆ ತೋರಿದ್ದಿಲ್ಲ, ಎಂದು ನುಡಿಯುತ್ತಿರಲು, ಆಕೆಯ ಕುತ್ತಿಗೆಯ ಶಿರಗಳು ಬಿಗಿದು, ಗದ್ಗದಸ್ವರದಿಂದ–ಮಾಡಿರಿ, ನಿಜವಾಗಿಯೇ ನನ್ನ ದೇಹವನ್ನು ಎರಡು ತುಂಡುಮಾಡಿ ಬಿಡಿರಿ, ಎಂದು ನುಡಿದು, ಬಿರುಗಾಳಿಯಿಂದ ಇಳೆಗೊರೆಗುವ ಕದಳಿಯ ವೃಕ್ಷದಂತೆ ಆಕೆಯು ದೊಪ್ಪನೆ ಆ ವ್ಯಕ್ತಿಯ ಚರಣಗಳ ಮೇಲೆ ಬಿದ್ದಳು. ಇದನ್ನು ನೋಡಿ ಆ ವ್ಯಕ್ತಿಯು ಬೆರಗಾದನು. ತನ್ನ ತಿಳುವಳಿಕೆಯಂತೆ ರಂಭಾವತಿಯು ಶಾಸನಾರ್ಹಳೆಂದು ಈಗ ಆತನಿಗೆ ತೋರದ್ದರಿಂದ, ಈಕೆಯನ್ನು ಹಿಡಿದೆತ್ತಿ ಎಚ್ಚರಗೊಳಿಸ ಬೇಕೋ, ಇಲ್ಲಿಯೇ ತುಂಡರಿಸಿ ಚಲ್ಲಬೇಕೋ ಎಂಬ ವಿಚಾರದಲ್ಲಿ, ಆತನು ಮಗ್ನನಾದನು. ಮೂರು ಸಾರೆ ಆತನ ಕೈಯು ಖಡ್ಗದ ಕಡೆಗೆ ಹೋಗಿ ಮೂರು ಸಾರೆ ಹಿಂದಕ್ಕೆ ಬಂದಿತು.

ಕಡೆಗೆ ಆತನು ಆ ಸುಂದರಿಯನ್ನು ಎಚ್ಚರಗೊಳಿಸಬೇಕೆಂದು ಯೋಚಿಸುತ್ತಿರಲು, ಹೊರಗೆ ಯಾರೋ ಬಾಗಿಲು ಬಡಿಯಹತ್ತಿದರು. ಕೂಡಲೆ ಆ ವ್ಯಕ್ತಿಯು ಗಾಬರಿಯಾಗಿ ಇನ್ನು ಇಲ್ಲಿ ಇದ್ದು ಪ್ರಾಣಕಳಕೊಳ್ಳುವದರಿಂದ ನನ್ನ ಪ್ರತಿಜ್ಞೆಯು ಈಡೇರಲಿಕ್ಕಿಲ್ಲೆಂದು ತಿಳಿದು, ಮೆಲ್ಲನೆ ಹೋಗಿ ಬಾಗಿಲು ತೆರೆದು ಅದರ ಹಿಂದೆ ನಿಂತು. ಹೊರಗಿನ ಹೆಂಗಸು ಒಳಗೆ ಬಂದ ಕೂಡಲೆ ತಾನು ಹೊರಗೆ ಹೊರಟು ಪಾರಾಗಿ ಹೋದನು. ಸಾಯಿಜಿಗೆ ಪ್ರತಿಬಂಧವಿಲ್ಲದ್ದ ರಿಂದ ಆ ವೇಷಧಾರಿಯು ಕಾವಲುಗಾರರ ಯಾವ ತೊಂದರೆಗೂ ಈಡಾಗದೆ, ವೇಗದಿಂದ ನಡೆದು ವಿಜಾಪುರದ ಹೊರಗಿದ್ದ ಒಂದು ಹಾಳುಮನೆಗೆ ಹೋದನು. ಆ ವ್ಯಕ್ತಿಯು ರಂಭಾವತಿಯ ಪತಿಯಾದ ರಾಮದೇವನೆಂಬುದನ್ನು ವಾಚಕರು ಈ ಮೊದಲೇ ಕಂಡುಹಿಡಿದಿರಬಹುದು.

## ಹೊಸ ಚಿಂತೆ

ರಾಮದೇವನು ಇಳಿದುಕೊಂಡಿದ್ದ ಮನೆಯು ವಿಜಾಪುರದ ಊರ ಹೊರಗೆ ಇದ್ದು ಅದು ದೆವ್ವದ ಮನೆಯೆಂದು ಪ್ರಸಿದ್ಧವಾಗಿತ್ತು ಹಗಲಹೊತ್ತು ಸಹ ಆ ಮನೆಯ ಬಳಿಗೆ ಹೋಗಲಿಕ್ಕೆ ಜನರು ಹೆದರುತ್ತಿದ್ದರು. ಆ ಮನೆಯೊಳಗಿನ ದೆವ್ವಗಳ ಸಂಬಂಧದ ಹಲವು ಸುದ್ದಿಗಳು ಜನರಲ್ಲಿ ಸೂರೆಯಾದದ್ದರಿಂದ, ಪುಕ್ಕರು ಆ ಮನೆಯ ಕಡೆಗೆ ಹಣಿಕಿ ಸಹ ನೋಡುತ್ತಿದ್ದಿಲ್ಲ, ಆ ಮನೆಯು ನಮ್ಮ ರಾಮದೇವನಿಗೆ ವಿಶ್ರಾಂತಿಗೃಹವಾಯಿತು. ಆತನು ವೇಷಾಂತರದಿಂದ ಹಗಲೆಲ್ಲ ವಿಜಾಪುರದಲ್ಲಿ ತಿರುಗಾಡಿ, ಹೊಸ ಹೊಸ ಸಂಗತಿಗಳನ್ನು ತಿಳಕೊಂಡು ರಾತ್ರಿ ನಿದ್ದೆ ಮಾಡುವದಕ್ಕೆ ಆ ದೆವ್ವದ ಮನೆಗೆ ಬರುತ್ತಿದ್ದನು. ಮೇಲೆ ಹೇಳಿದಂತೆ ಆತನು ರಂಭಾವತಿಯನ್ನು ಕೊಲ್ಲಲಿಚ್ಛಿಸಿ ಸಾಯಜಿಯ ವೇಷದಿಂದ ಆಕೆಯ ಬಳಿಗೆ ಹೋಗಿ ಬಂದವನು, ಆ ದೆವ್ವದ ಮನೆಯಲ್ಲಿ ಸ್ವಸ್ಥವಾಗಿ ಮಲಗಿಕೊಂಡಿದ್ದನು. ಆರು ತಾಸು ರಾತ್ರಿ ಮೀರಿ ಹೋಗಿರಲು, ಆತನಿಗೆ ಅದೇ ನಿದ್ದೆ ಹತ್ತಿತ್ತು, ಅಷ್ಟರಲ್ಲಿ ಯಾರೋ ಹೊರಗಿನಿಂದ ಗಟ್ಟಿಯಾಗಿ ಬಾಗಿಲು ಬಡಿಯಹತ್ತಿದರು. ಆ ಸಪ್ಪಳದಿಂದ ರಾಮದೇವನಿಗೆ ಎಚ್ಚರವಾಯಿತು. ಈ ದೆವ್ವದ ಮನೆಗೆ ಇಷ್ಟು ರಾತ್ರಿಯಲ್ಲಿ ಯಾರು ಬಂದಿರಬಹುದೆಂದು ಆತನು ವಿಚಾರ ಕ್ಕೊಳಗಾದನು. ತನಗೆ ಯಾರು ಬಂದರೆ ಭಾಗ್ಯವೇನು, ಬಾಗಿಲು ತೆರೆಯದಿದ್ದರೆ ತೀರಿತು, ಎಂದು ಆತನು ಸುಮ್ಮನೆ ಮಲಗಿಕೊಂಡನು; ಆದರೆ ಹೊರಗಿನವರ ಗದ್ದಲವು ಕಡಿಮೆಯಾಗ ಲೊಲ್ಲದು. ಬಾಗಿಲು ತೆರೆಯದಿದ್ದರೆ ಮುರಿದು ಒಳಗೆ ಬರುತ್ತೇವೆಂದು ಹೇಳಿ ಹೊರಗಿನವರು ಟೊಂಕಕಟ್ಟಿದರು. ಇದನ್ನು ನೋಡಿ ರಾಮದೇವನು ಎದ್ದು ಹೋಗಿ ಬಾಗಿಲು ತೆಗೆದನು. ಆಗ ಹೊರಗಿನ ನಾಲ್ವರು ಕೇವಲ ತಮ್ಮ ಮನೆಯನ್ನು ಹೋಗುವಂತೆ ನಿರಾತಂಕವಾಗಿ ಆ ಮನೆಯನ್ನು ಹೊಕ್ಕು ಬಾಗಿಲು ತೆರೆದವನಿಗೆ– ಮಹಾರಾಯಾ, ನಿನ್ನ ಕೆಟ್ಟ ನಿದ್ದೆಯು

ಮಂದಿಯ ಪ್ರಾಣವನ್ನು ತಕ್ಕೊಳ್ಳತಕ್ಕದ್ದೇ ಸರಿ. ಇರಲಿ, ದಯಮಾಡಿ ನಮಗಿಷ್ಟು ಇಳಿದುಕೊಳ್ಳಲಿಕ್ಕೆ ಸ್ಥಳವನ್ನು ಕೊಡು, ಎಂದು ಕೇಳಿಕೊಂಡರು. ಅದಕ್ಕೆ ರಾಮದೇವನು– ಅಪ್ಪಗಳಿರಾ, ನಾನೂ ನಿಮ್ಮ ಹಾಗೆಯೇ ಪರಸ್ಥಳದವನು. ನಿರುಪದ್ರವ ಸ್ಥಳವೆಂದು ಇಲ್ಲಿ ರಾತ್ರಿ ಮಲಗಿಕೊಳ್ಳಹತ್ತಿದೆನು. ನೀವೂ ಒತ್ತಟ್ಟಿಗೆ ಮಲಗಿಕೊಳ್ಳಿರಿ, ನಾನೂ ಒತ್ತಟ್ಟಿಗೆ ಮಲಗಿಕೊಳ್ಳುವೆನು. ಮನೆ ಯಾರದೋ, ಮಾರು ಯಾರದೋ; ನಾನು ನಿಮಗೆ ಕೊಡುವ ದೇನು? ಎಂದು ಹೇಳಿ ಒತ್ತಟ್ಟಿಗೆ ಹಾಸಿದ್ದ ತನ್ನ ಕಂಬಳಿಯ ಮೇಲೆ ಹೋಗಿ ಮಲಗಿ ಕೊಂಡನು. ಮಂದಿರದ ಒಂದು ಮಾಡದಲ್ಲಿ ಪಣತಿಯೊಳಗೆ ದೀಪವು ಮಿಣುಗುಟ್ಟುತ್ತಿತ್ತು, ಇತ್ತ ಆ ನಾಲ್ವರು ತಮ್ಮ ಗಂಟು ಗದಡಿಗಳನ್ನು ಸರಿಯಾಗಿ ಇಟ್ಟು, ಇದ್ದದ್ದನ್ನು ಬಾಯಲ್ಲಿ ಹಾಕಿ ಕೊಂಡು ಮಲಗಿಕೊಳ್ಳಬೇಕೆಂದು ಹವಣಿಸತೊಡಗಿದರು. ಒಬ್ಬೊಬ್ಬರು ಸರತಿಯಿಂದ ಎಚ್ಚತ್ತಿದ್ದು ಅಜ್ಜುಗಾವಲು ಮಾಡಬೇಕೆಂದು ಅವರು ಗೊತ್ತು ಮಾಡಿಕೊಂಡಿದ್ದರು. ಅದರಂತೆ ಮೂವರು ಮಲಗಿದ್ದರು. ಒಬ್ಬನು ಕಾಯುತ್ತ ಕುಳಿತುಕೊಂಡನು. ದಣಿದು ಬಂದದ್ದರಿಂದ ಮಲಗಿಕೊಂಡವರಿಗೆ ಕೂಡಲೆ ನಿದ್ದೆಹತ್ತಿತು. ಸುಮಾರು ಎಂಟು ತಾಸು ರಾತ್ರಿಯಾಗಲು, ಮತ್ತೊಬ್ಬನು ಎದ್ದು ಕುಳಿತುಕೊಂಡನು; ಕುಳಿತವನು ಮಲಗಿಕೊಂಡನು. ಇವರ ಈ ರೀತಿಯನ್ನೂ, ಮಾತುಕತೆಗಳನ್ನೂ, ಜಾಗರೂಕತೆಯನ್ನೂ ನೋಡಿ ರಾಮದೇವನಿಗೆ ದಿಗಿಲುಬಿದ್ದಿತು. ಆತನ ನಿದ್ದೆ ಹಾರಿ ಕಣ್ಣುಗಳು ನಿಚ್ಚಳವಾದವು. ಆತನು ಕೌತುಕದಿಂದ ಆ ನಾಲ್ವರ ಆಟವನ್ನು ನೋಡುತ್ತ ವಿಚಾರಮಗ್ನನಾಗಿ ಮಲಗಿಕೊಂಡನು. ಈಗ ಕಾಯುತ್ತ ಕುಳಿತುಕೊಂಡಿದ್ದವನ ದನಿಯ ಗುರುತು ರಾಮದೇವನಿಗೆ ಹತ್ತಿದಂತಾಗುತ್ತಿತ್ತು, ರಾಮದೇವನು ದಿಟ್ಟಿಸಿ ನೋಡಲು, ಆ ಮಂದಪ್ರಕಾಶದಲ್ಲಿ ಮೋರೆಯ ಗುರುತೂ ಆತನಿಗೆ ಹತ್ತಿತು. ಮಲಗಿದವರು ಗೊರಿಕೆ ಹೊಡೆಹೊಡೆದು ನಿದ್ದೆ ಮಾಡುವದನ್ನು ನೋಡಿ, ರಾಮದೇವನು ಮೆಲ್ಲಗೆ ಎದ್ದು ಕಾಯುತ್ತ ಕುಳಿತಿದ್ದ ಆ ಮನುಷ್ಯನ ಬಳಿಗೆ ಹೋಗಿ–ಯಾಕೆ, ನಾನಾಸಾಹೇಬರೇ, ನೀವು ಇಲ್ಲಿ ಯಾಕೆ? ನೀವು ಸುಲ್ತಾನಗಡದ ರಂಗರಾವ ಅಪ್ಪಾ ಸಾಹೇಬರ ಮಕ್ಕಳಲ್ಲವೆ? ತಂದೆಯನ್ನು ಬಿಡಿಸುವ ಉದ್ದಿಶ್ಯವಾಗಿ ಇಲ್ಲಿಗೆ ಬಂದಿರುವಿರೇನು? ನನ್ನ ಗುರುತು ನಿಮಗೆ ಹತ್ತಿರಲಿಕ್ಕಿಲ್ಲ, ಎಂದು ನುಡಿದನು.

ತನ್ನ ಗುರುತು ತಟ್ಟನೆ ಹಿಡಿದದ್ದನ್ನು ನೋಡಿ ನಾನಾಸಾಹೇಬನು ಬೆರಗಾದನು. ತಮ್ಮ ಅಜ್ಞಾತವಾಸದ ವಿಚಾರವು ವಿಜಾಪುರದಲ್ಲಿ ಕಾಲಿಟ್ಟ ಕೂಡಲೆ ನಿಷ್ಫಲವಾದದ್ದನ್ನು ನೋಡಿ, ಆತನಲ್ಲಿ ಒಂದು ಬಗೆಯ ಭಯವೂ, ಸಂಶಯವೂ ಉತ್ಪನ್ನವಾದವು. ನಾನಾಸಾಹೇಬನು ಹೀಗೆ ಗೊಂದಲದಲ್ಲಿ ಬಿದ್ದಿರುವದನ್ನು ನೋಡಿ ರಾಮದೇವನು–ನಾನಾಸಾಹೇಬರೆ, ನೀವು ಅಂದೇಶ ಪಡುವ ಕಾರಣವಿಲ್ಲ, ನನ್ನಿಂದ ನಿಮಗೆ ವಿಪತ್ಕಾಲದಲ್ಲಿ ಉಪಕಾರವೇ ಆದೀತಲ್ಲದೆ, ಅಪಕಾರವಾಗಲಾರದು. ನಮ್ಮಿಬ್ಬರ ಕೆಲಸವೂ ಒಂದೇ ಆಗಿರುವದು. ನೀವು ನಿಮ್ಮ ತಂದೆಯನ್ನು ಸೆರೆಯಿಂದ ಬಿಡಿಸಬೇಕೆಂತಲೂ, ನಿಮ್ಮ ಹೆಂಡತಿಯನ್ನು ಗೊತ್ತು ಹಚ್ಚಬೇಕೆಂತಲೂ ಬಂದಿರುತ್ತೀರಿ. ನಾನು ನನ್ನ ಹೆಂಡತಿಯ ಸೇಡು ತೀರಿಸಿಕೊಳ್ಳಲಿಕ್ಕೆ

ಬಂದಿರುತ್ತೇನೆ. ಯಾವ ಸೈಯದುಲ್ಲಾನು ನಿಮ್ಮ ವೈರಿಯೋ, ಅದೇ ಸೈಯದುಲ್ಲಾನು ನನ್ನ ವೈರಿಯೂ ಆಗಿದ್ದಾನೆ. ಇಷ್ಟರಿಂದಲೂ ನನ್ನ ಗುರುತು ನಿಮಗೆ ಹತ್ತದಿದ್ದರೆ ಹೋಗಲಿ, ಹಿಂದಿನಿಂದ ಗುರುತು ಹತ್ತೀತು. ನಾನು ಸೈಯದುಲ್ಲಾನನ್ನು ಕೊಲ್ಲುವ ಪ್ರತಿಜ್ಞೆ ಮಾಡಿರುವೆ ನಾದ್ದರಿಂದ, ನೀವು ಆತನನ್ನು ಕೊಲ್ಲ ಬೇಡಿರಿ, ಅವನು ನನ್ನ ಪಾಲಿನವನು. ಸದ್ಯಕ್ಕೆ ನಾನು ಇದಕ್ಕೂ ಹೆಚ್ಚಿಗೆ ಏನೂ ಹೇಳುವದಿಲ್ಲ. ಈಗ ನಾನು ಇಲ್ಲಿಂದ ಹೋದವನು ಇನ್ನು ಮೂರು ದಿವಸಗಳ ಮೇಲೆ ತಿರುಗಿ ಬರುವೆನು. ಅಂದು ನನ್ನ ಯಾವದ್ವೃತ್ತವೂ ನಿಮಗೆ ಗೊತ್ತಾಗುವದು; ಆದರೆ ಈ ಯಾವ ಸಂಗತಿಯನ್ನೂ ನೀವು ಇಲ್ಲಿ ಮಲಗಿಕೊಂಡವರಿಗೆ ಹೇಳಬೇಡಿರಿ. ಕಾರ್ಯದಲ್ಲಿ ಗೌಪ್ಯವನ್ನು ಕಾಯುವದು ಬಹು ಮಹತ್ವದ್ದು; ನಿಮ್ಮ ಆಪ್ತರೊಳಗಿನವನೇ ನಾನೊಬ್ಬನಿರುತ್ತೇನೆಂದು ತಿಳಕೊಂಡು ಸಮಾಧಾನವನ್ನು ತಾಳಿರಿ, ಎಂದು ಹೇಳಿ, ರಾಮದೇವನು ತನ್ನ ಹಾಸಿಗೆಯ ಮೇಲೆ ಹೋದನು. ನಾನಾಸಾಹೇಬನಿಗೆ ಆತನ ಗುರುತು ಏನೂ ಹತ್ತಲಿಲ್ಲ. ನಾನಾಸಾಹೇಬನು ಬಗೆಬಗೆಯ ಆಲೋಚನೆಗಳಿಗೆ ಒಳಗಾದನು. ಬರಿಯ ನಾನಾಸಾಹೇಬನೊಬ್ಬನೇ ಯಾಕೆ, ಆತನಂತೆ ನಮ್ಮ ವಾಚಕರೂ ವಿಚಾರಕ್ಕೆ ಒಳಗಾಗಿರಬಹುದು. ಶ್ರೀಧರಸ್ವಾಮಿಯ ಬಳಿಯಲ್ಲಿದ್ದ ನಾನಾಸಾಹೇಬನು, ಮೂವರೊಡನೆ ಅಕಸ್ಮಾತ್ತಾಗಿ ವಿಜಾಪುರದ ಹೊರಗಿರುವ ದೆವ್ವನಮನೆಗೆ ಯಾಕೆ ಬಂದನೆಂಬ ಆಲೋಚನೆ ಯನ್ನು ಅವರು ಮಾಡುತ್ತಿರಬಹುದು; ಆದರೆ ಅವರ ಆಲೋಚನೆಯನ್ನು ಸ್ವಲ್ಪದರಲ್ಲಿ ದೂರಮಾಡಿಬಿಡುವದು ನೆಟ್ಟಗೆ. ಶಿವಾಜಿಯು ಶ್ರೀಧರಸ್ವಾಮಿಗಳ ಸೂಚನೆಯಂತೆ ಸುಲ್ತಾನಗಡವನ್ನು ಮೂರು ತಿಂಗಳುಗಳೊಳಗೆ ವಶಮಾಡಿಕೊಳ್ಳಬೇಕೆಂದು ನಿಶ್ಚಯಿಸಿದ್ದನ್ನು ವಾಚಕರು ಬಲ್ಲರಷ್ಟೇ? ನಿಶ್ಚಯಿಸಿದಂತೆ ಕಾರ್ಯವನ್ನು ಸಿದ್ಧಿಗೊಯ್ಯುವದಕ್ಕಾಗಿ ಬೇಕಾದ ಜೋಡಣೆಗಳನ್ನು ಶಿವಾಜಿಯು ಒತ್ತರದಿಂದ ಜೋಡಿಸುವದರಲ್ಲಿ ತೊಡಗಿದ್ದನು. ಅಷ್ಟರಲ್ಲಿ ವಿಜಾಪುರದಿಂದ ಕೆಟ್ಟ ಸುದ್ದಿಯು ಬಂದಿತು. ಸೈಯದುಲ್ಲಾಖಾನನ ಚಾಡಿಯಿಂದ ಮಹಮ್ಮದ ಶಹನು ರಣದುಲ್ಲಾಖಾನನ ಮೇಲೆ ಸಿಟ್ಟಾಗಿ, ರಂಗರಾವ ಅಪ್ಪಾನನ್ನು ಕಠಿಣವಾದ ಸೆರೆ ಮನೆಯಲ್ಲಿಟ್ಟು ಪರಿಪರಿಯಾಗಿ ಪೀಡಿಸಹತ್ತಿದ್ದನಂತೆ. ಬಾದಶಹನು ರಣದುಲ್ಲಾಖಾನನ ಮೇಲೆ ಸಿಟ್ಟಾಗಲಿಕ್ಕೆ ಸೈಯದುಲ್ಲಾನು ಎರಡು ಕಾರಣಗಳನ್ನು ಒಡ್ಡಿದ್ದನಂತೆ. ಖಾನನು ರಂಗರಾವ ಅಪ್ಪಾನ ಪಕ್ಷವನ್ನು ಕಟ್ಟಿದ್ದು ಒಂದು ಕಾರಣವು; ತಾನು ಸುಲ್ತಾನಗಡದಿಂದ ಬರುವಾಗ ಸಂಗಡ ಕರಕೊಂಡು ಬಂದಿದ್ದ ತರುಣ ಸರದಾರನನ್ನು (ವೇಷಧಾರಿ ಚಂದ್ರಾವತಿಯನ್ನು) ಬಾದಶಹನಿಗೆ ಹೇಳದೆ ಮನೆಯಲ್ಲಿಟ್ಟುಕೊಂಡದ್ದು ಎರಡನೆಯ ಕಾರಣವು. ತರುಣ ಸರದಾರನು ರಂಗರಾಯನ ಸೊಸೆಯಾದ ಚಂದ್ರಾವತಿಯು ಎಂಬದನ್ನು ಸೈಯದುಲ್ಲಾನು ಬಾದಶಹನಿಗೆ ಹೇಳಿದ್ದರಿಂದಂತು, ಬಾದಶಹನು ರಣದುಲ್ಲಾನ ನೀಚತನಕ್ಕಾಗಿ ಬಹಳ ಸಿಟ್ಟಾಗಿದ್ದನಂತೆ. ಈ ಎಲ್ಲ ವರ್ತಮಾನವನ್ನು ಕೇಳಿ ಶಿವಾಜಿಯೇ ಮೊದಲಾದವರಿಗೆ ಬಹಳ ಸಮಾಧಾನವಾಯಿತು. ನಾನಾಸಾಹೇಬನಂತು ಚಿಂತಾಮಗ್ನನಾದದ್ದು ಆಶ್ಚರ್ಯವಲ್ಲ. ತಂದೆಯನ್ನು ಸೆರೆಮನೆಯಲ್ಲಿ ಕೊಳೆಯಗೊಟ್ಟು, ಹೆಂಡತಿಯನ್ನು ರಣದುಲ್ಲಾಖಾನನ

ಮನೆಯಲ್ಲಿ ಮರೆಯಗೊಟ್ಟು ತಾನು ಸುಮ್ಮನೆ ಕುಳಿತುಕೊಳ್ಳುವದು ಲಾಂಛನವೆಂದು ಆ ಪಿತೃಭಕ್ತನಾದ ಸ್ವಾಭಿಮಾನಿಯು ತಿಳಿದು, ತನಗೆ ವಿಜಾಪುರಕ್ಕೆ ಹೋಗಲು ಅಪ್ಪಣೆ ಕೊಡಬೇಕೆಂದು ಶ್ರೀಧರಸ್ವಾಮಿಗಳನ್ನೂ, ಶಿವಾಜಿಯನ್ನೂ ಬೇಡಿಕೊಳ್ಳ ಹತ್ತಿದನು. ತಂದೆಯು ಸಂಕಟದಲ್ಲಿ ಮುಣುಗಿರುವಾಗ ಸುಲ್ತಾನಗಡವನ್ನು ತಕ್ಕೊಂಡರೆ, ಉರಿಯಲ್ಲಿ ಎಣ್ಣೆ ಹಾಕಿದ ಹಾಗಾಗಿ, ತಂದೆಯ ಸಂಕಟವು ಮತ್ತಿಷ್ಟು ಹೆಚ್ಚಬಹುದೆಂದು ಆತನು ವಿಜ್ಞಾಪಿಸಿದನು. ನಾನಾಸಾಹೇಬನ ವಿಚಾರಗಳು ಶ್ರೀಧರಸ್ವಾಮಿಗಳಿಗೂ, ಶಿವಾಜಿಗೂ ಯುಕ್ತವಾಗಿ ತೋರಿದ್ದರಿಂದ, ಅವರು ಮುಂದೆ ಏನು ಮಾಡಬೇಕೆಂಬ ಬಗ್ಗೆ ಚನ್ನಾಗಿ ವಿಚಾರಿಸಿ, ಆ ವಿಚಾರಗಳನ್ನು ನಾನಾ ಸಾಹೇಬನಿಗೂ, ಚೆನ್ನಾಗಿ ತಾನಾಜಿಗೂ ತಿಳಿಸಿ, ಅವರ ಸಂಗಡ ಯಮುನ್ಯಾನನ್ನೂ, ಇನ್ನೊಬ್ಬನನ್ನೂ ಕೊಟ್ಟು ಅವರನ್ನು ವಿಜಾಪುರಕ್ಕೆ ಕಳುಹಿದರು. ಅವರೇ ನಾಲ್ವರು ತಮಗೆ ದೆವ್ವನ ಮನೆಯೇ ಯೋಗ್ಯವೆಂದು ಮೊದಲಿಗೆ ಕೇಳಿಕೊಂಡು, ಮೇಲೆ ಹೇಳಿದಂತೆ ರಾತ್ರಿ ರಾಮದೇವನನ್ನು ಪೀಡಿಸಿ ಬಾಗಿಲು ತೆಗಿಸಿ ಮಲಗಿಕೊಂಡರು.

ರಾಮದೇವನ ಮಾತುಗಳನ್ನು ಕೇಳಿ ನಾನಾಸಾಹೇಬನು ವಿಚಾರಮಗ್ನನಾದನು. ನನ್ನ ಯಾವತ್ತು ವೃತ್ತಾಂತವನ್ನು ಅರಿತಿದ್ದ ಇವನು ಯಾರಾಗಿರಬಹುದು? ನನ್ನನ್ನು ಇಲ್ಲಿಯೇ ಇರಹೇಳಿ ನಾಳೆ ಒಮ್ಮೆಲೆ ನನ್ನನ್ನು ಸೆರೆ ಹಿಡಿದು ಬಾದಶಹನಿಗೆ ಒಪ್ಪಿಸಬೇಕೆಂದು ಅವನು ಯೋಚಿಸಿರಬಹುದೋ? ನಮ್ಮ ವೃತ್ತಾಂತವು ಇನ್ನೂ ಊರಲ್ಲಿ ಯಾರುಯಾರಿಗೆ ಗೊತ್ತಿರುವದೋ ಏನೋ! ಈ ಯಾವತ್ತು ಸಂಗತಿಯನ್ನು ತಾನಾಜಿಗೆ ತಿಳಿಸಿದೆ ಇರುವದು ನೆಟ್ಟಗೆ ಕಾಣುವುದಿಲ್ಲ ಎಂದು ಯೋಚಿಸಿ, ಬೆಳಗಾದ ಬಳಿಕ ರಾತ್ರಿ ನಡೆದ ಸಂಗತಿಯನ್ನೆಲ್ಲ ತಾನಾಜಿಗೆ ಹೇಳಿದನು. ಅದನ್ನು ಕೇಳಿ ತಾನಾಜಿಗೂ ಆಶ್ಚರ್ಯವಾಯಿತು. ತಾನಾಜಿಯು ಉಳಿದವರಿಬ್ಬರಿಗೂ ಆ ಸಂಗತಿಯನ್ನು ತಿಳಿಸಿ ಎಲ್ಲರೂ ಜಾಗರೂಕರಾಗಿರಬೇಕೆಂದು ಹೇಳಿದನು. ನಾಲ್ವರೂ ಎಷ್ಟು ತರ್ಕ ವಿತರ್ಕಗಳನ್ನು ಮಾಡಿದರೂ ಆ ವ್ಯಕ್ತಿಯು ಇಂಥವನೇ ಇರಬೇಕೆಂಬುದು ಯಾರಿಗೂ ಗೊತ್ತಾಗಲಿಲ್ಲ. ಇಷ್ಟು ವಿಚಾರವಾಗುವದರೊಳಗೆ ಮೂರು ತಾಸು ಹೊತ್ತು ಏರಿತು. ಸುಮ್ಮನೆ ಕುಳಿತು ಅಂದಿನ ದಿವಸವನ್ನು ಕಳೆಯುವದು ಯುಕ್ತವಲ್ಲೆಂದು ತಿಳಿದು, ತಾನಾಜಿಯು ನಾನಾ ಸಾಹೇಬನೊಡನೆ ಬಾವಾಜಿಯ ವೇಷವನ್ನು ಹಾಕಿಕೊಂಡು ಹೊರಟನು. ಶಿವಾಜಿಯ ಆಜ್ಞೆಯಂತೆ ಅವರು ಮೂರು ಕೆಲಸಗಳನ್ನು ಮಾಡಬೇಕಾಗಿತ್ತು; ಬಾದಶಹನ ದರ್ಬಾರದ ಸ್ಥಿತಿಯನ್ನು ತಿಳಕೊಳ್ಳುವದು ಒಂದನೆಯ ಕೆಲಸವು; ತಮಗೆ ಅನುಕೂಲರಾಗಿರುವ ಜನರು ಊರಲ್ಲಿ ಇರುವರೋ ಇಲ್ಲವೋ ಎಂಬುದನ್ನು ಗೊತ್ತು ಹಚ್ಚಿ, ಗುಪ್ತರೀತಿಯಿಂದ ಅವರನ್ನು ಕಾಣುವದು ಎರಡನೆಯ ಕೆಲಸವು; ರಂಗರಾಯರ ಸುದ್ದಿಯನ್ನೂ, ಅವರ ಸೊಸೆಯಾದ ಚಂದ್ರಾವತಿಯ ಸುದ್ದಿಯನ್ನೂ ಅರಿತುಕೊಳ್ಳುವದು ಮೂರನೆಯ ಕೆಲಸವು. ಇಂದು ಕೆಲಸವಾಗಲಿ, ಆಗದಿರಲಿ ಒಮ್ಮೆ ವಿಜಾಪುರವನ್ನು ಹೊಕ್ಕಾದರೂ ಬರೋಣವೆಂದು ಅವರು ನ್ಯಾರಿಯನ್ನು (ಅಲ್ಪಾಹಾರ) ತೀರಿಸಿಕೊಂಡು ಹೊರಟಿದ್ದರು. ಅವರು ಯಾರಾದರೊಬ್ಬರ ಮನೆಯ ಬಾಗಿಲಲ್ಲಿ "ಅಲಕ್" ಎಂದು ನುಡಿದು, ಅಕಸ್ಮಿತ ಯಾರ ಮನೆಗಾದರೂ ಹೋಗಿ

''ಮಾಈ, ಬಿಚ್ಛಾ'' ಎಂದು ಒದರಿ, ಭಿಕ್ಷೆ ಹಾಕುವದು ತಡವಾದರೆ ನಿಂತುಕೊಳ್ಳದೆ ಮುಂದಕ್ಕೆ ಹೊರಟುಹೋಗುತ್ತಿದ್ದರು. ಹೀಗೆ ಒಂಬತ್ತು ತಾಸಿನವರೆಗೆ ತಿರುಗಿ ತಿರುಗಿ ದಣಿದು, ಇನ್ನು ಮನೆಗೆ ಹೋಗಬೇಕೆಂದು ಅವರು ಬರುತ್ತಿರಲು ಒಂದು ಮೇಲುಪ್ಪರಿಗೆಯ ಕಿಡಿಕೆಯಲ್ಲಿ ಒಬ್ಬ ತರುಣ ಸರದಾರನು ಅವರ ಕಣ್ಣಿಗೆ ಬಿದ್ದನು. ಆತನನ್ನು ನೋಡಿ ತಾನಾಜಿಯ ಚಿತ್ತಹರಣವಾದದ್ದಲ್ಲದೆ ನಾನಾಸಾಹೇಬನು ಆಶ್ಚರ್ಯಮಗ್ನನಾಗಿ ನಿಂತುಕೊಂಡು, ಆ ಸರದಾರನನ್ನು ನೋಡಹತ್ತಿದನು. ನೋಡಿ ನೋಡಿದ ಹಾಗೆ ಮುಂದಕ್ಕೆ ಹೋಗಲಿಕ್ಕೆ ಅವರ ಕಾಲುಗಳೇ ಏಳದಾದವು. ಬಾದಶಹನಿಗೆ ತಿಳಿಸದೆ ರಣದುಲ್ಲಾಖಾನನು ಒಬ್ಬ ತರುಣ ಸರದಾರನನ್ನು ಮನೆಯಲ್ಲಿ ಇಟ್ಟು ಕೊಂಡದ್ದರಿಂದ, ಬಾದಶಹನು ಖಾನನ ಮೇಲೆ ಸಿಟ್ಟಾಗಿರುವನೆಂತಲೂ, ಆ ತರುಣ ಸರದಾರನೇ ನಾನಾಸಾಹೇಬನ ಹೆಂಡತಿಯಾದ ಚಂದ್ರಾವತಿಯೆಂತಲೂ ಚಾರನು ವಿಜಾಪುರದಿಂದ ಸುದ್ದಿ ತಂದದ್ದನ್ನು ನಾನಾಸಾಹೇಬನೂ ಕೇಳಿದ್ದನು–ತಾನಾಜಿಯೂ ಕೇಳಿದ್ದನು. ನಾನಾಸಾಹೇಬನು ತಟಸ್ಥನಾದದ್ದನ್ನೂ, ಕಿಡಿಕಿಯಲ್ಲಿ ನಿಂತಿದ್ದ ಆ ಸುಂದರ ತರುಣ ಸರದಾರನ ಮುಖದಲ್ಲಿ ಉಕ್ಕುತ್ತಿದ್ದ ಹೆಣ್ಣು ಕಳೆಯನ್ನೂ ನೋಡಿ, ತಾನಾಜಿಯು ನಾನಾಸಾಹೇಬನನ್ನು ಕುರಿತು–ಸಾಹೇಬರೇ, ಏನೋ ಎಳೆಸಿಕ್ಕ ಹಾಗೆ ಕಾಣುತ್ತದಲ್ಲವೆ? ಅನ್ನಲು, ನಾನಾಸಾಹೇಬನು ಉಸುರ್ಗರೆದು ಗೋಣು ಅಲ್ಲಾಡಿಸಿದನು. ಆಗ ತಾನಾಜಿಯು ಈವೊತ್ತಿಗೆ ಇಷ್ಟು ಸಾಕು. ನಾವು ಹೀಗೆ ನೋಡುತ್ತ ನಿಂತುಕೊಂಡರೆ, ಜನರ ಸಂಶಯಕ್ಕೆ ಕಾರಣವಾದೀತು. ನಡೆಯಿರಿ, ಮನೆಗೆ ಹೋಗೋಣ. ವಿಚಾರಾಂತದಲ್ಲಿ ಮಾಡತಕ್ಕದ್ದನ್ನು ಮಾಡುವದು ನೆಟ್ಟಗೆ, ಅನ್ನಲು, ಕೂಡಲೆ ನಾನಾಸಾಹೇಬನು ತಾನಾಜಿಯನ್ನು ಹಿಂಬಾಲಿಸಿದನು. ತಿರುಗಿ ಅವರು ಭಿಕ್ಷೆಗಾಗಿ ಯಾರ ಮನೆಯ ಬಾಗಿಲಿಗೂ ಹೋಗದೆ, ನೆಟ್ಟಗೆ ಬೀದಿಯನ್ನು ಹಿಡಿದು, ''ಅಲ್ಲಕ್ ಅಲ್ಲಕ್'' ಎಂದು ನುಡಿಯುತ್ತ ಮನೆಗೆ ಬಂದರು.

ತನ್ನ ಹೆಂಡತಿಯು ಪುರುಷವೇಷದಿಂದ ರಣದುಲ್ಲಾಖಾನನ ಮನೆಯಲ್ಲಿರುವದನ್ನು ನೋಡಿ, ನಾನಾಸಾಹೇಬನ ಮನಸ್ಸು ಅಸ್ವಸ್ಥವಾಯಿತು. ಆತನು ರಣದುಲ್ಲಾಖಾನನ ಮೇಲೆ ಸಂತಾಪಗೊಂಡನು. ಖಾನನು ತನ್ನ ತಂದೆಯ ಮಿತ್ರನಿದ್ದು, ಇಂಥ ನೀಚ ಕೆಲಸಕ್ಕೆ ಮನಸ್ಸು ಮಾಡಿದನೆಂದು ಆತನು ಖಾನನ ಮೇಲೆ ಹಲ್ಲುಕಡಿಯಹತ್ತಿದನು. ತನ್ನ ಹೆಂಡತಿಯನ್ನು ಸರಳತನದಿಂದ ತನ್ನ ತಂದೆಗೆ ಒಪ್ಪಿಸಲಿಕ್ಕೆ ಖಾನನಿಗೆ ಬರುವಹಾಗಿದ್ದು, ಆತನು ಬಾದಶಹನಿಗೆ ಸಹ ತಿಳಿಸದೆ ತನ್ನ ಮನೆಯಲ್ಲಿಟ್ಟುಕೊಳ್ಳಬೇಕಾದರೆ, ಪಾಪವಾಸನೆಯು ಕಾರಣವಿರಬೇಕೆಂದು ನಾನಾಸಾಹೇಬನು ತರ್ಕಿಸಿದನು. ಇಟ್ಟುಕೊಳ್ಳುವದೇ ಆದಬಳಿಕ ಪ್ರಸಿದ್ಧರೀತಿಯಿಂದ ಇಟ್ಟುಕೊಳ್ಳದೆ ಪುರುಷವೇಷದಿಂದ ಯಾಕೆ ಇಟ್ಟುಕೊಂಡಿರಬಹುದು? ಅಪವಾದದ ಭಯದಿಂದ ಖಾನನು ಹೀಗೆ ಮಾಡಿರಬಹುದೋ? ಈ ಮಾತು ನಿಜವಿದ್ದರೆ ನನ್ನ ಹೆಂಡತಿಯು ಸ್ವಸಂತೋಷದಿಂದ ಖಾನನ ಸ್ವಾಧೀನಳಾಗಿರುವಳೆಂದು ಹೇಳಬೇಕಾಗುವುದು. ಹಾಯ್ ಹಾಯ್! ಹೆಂಗಸಿನ ನೆಲೆಯು ಯಾರಿಗೆ ತಿಳಿಯಬೇಕು? ಚಂದ್ರಾವತಿಯು ಇಷ್ಟು ನೀಚಕೃತ್ಯಮಾಡಿದ್ದ ಪಕ್ಷದಲ್ಲಿ ನಾನು ನಿನ್ನೆ ತಾನಾಜಿಯೊಡನೆ ಬಾವಾಜಿಯ ವೇಷದಿಂದ

ಹೋದಾಗ, ಮೇಲುಪ್ಪರಿಗೆಯಲ್ಲಿ ನಿಂತು ಆತುರದಿಂದ ನನ್ನನ್ನು ನೋಡಲಿಕ್ಕೆ ಆಕೆಯು ಹೇಗೆ ಧೈರ್ಯಗೊಂಡಿರಬಹುದು? ಆಕೆಯು ಭ್ರಷ್ಟಳಾದದ್ದೇ ನಿಜವಿದ್ದರೆ, ಆಕೆಗೆ ನನ್ನನ್ನು ನೋಡುವ ಧೈರ್ಯವು ಎಂದೂ ಆಗುತ್ತಿದ್ದಿಲ್ಲ! ಏನು ಗೂಢವಿರುವುದೋ ದೇವರೇ ಬಲ್ಲ ಎಂದು ಯೋಚಿಸುತ್ತಲಿದ್ದನು. ಹೆಂಡತಿಯ ಚಿಂತೆಯಲ್ಲಿ ಮಗ್ನನಾಗಿದ್ದ ಆತನ ಮನಸ್ಸು ಬೇರೆ ಕೆಲಸಗಳಿಗೆ ಮೆಚ್ಚದಾಯಿತು. ಒಂದು ದಿವಸವಾಯಿತು. ಎರಡು ದಿವಸವಾಯಿತು; ಆದರೆ ನಾನಾಸಾಹೇಬನ ಹುಚ್ಚು ಕಡಿಮೆಯಾಗಲಿಲ್ಲ. ಆತನು ಯಾವದಾದರೊಂದು ನೆವದಿಂದ ಊರೊಳಗೆ ಹೋಗಿ ಹೆಂಡತಿಯನ್ನು ನೋಡುತ್ತ ನಿಂತುಕೊಳ್ಳುತ್ತಿದ್ದನು. ಚಂದ್ರಾವತಿ ಯಾದರೂ ಆ ಸಮಯವನ್ನು ಸಾಧಿಸಿ ಕಿಡಕಿಯಲ್ಲಿ ಬಂದು ನಿಂತುಕೊಳ್ಳುತ್ತಿದ್ದಳು ಹೀಗೆ ಅವರು ಪರಸ್ಪರರನ್ನು ನೋಡುತ್ತ ನಿಂತುಕೊಳ್ಳುವದು ಜನರಿಗೆ ವಿಚಿತ್ರವಾಗಿ ತೋರಿತು. ನಾನಾಸಾಹೇಬನ ಈ ರೀತಿಯು ತಾನಾಜಿಗೆ ಅನಿಷ್ಟಕರವಾಗಿ ತೋರಿತು; ಆದರೂ ಆತನು ದುಃಖದಿಂದ ಪೀಡಿತನಾಗಿದ್ದ ನಾನಾಸಾಹೇಬನ ಮನಸ್ಸನ್ನು ನೋಯಿಸಲು ಇಚ್ಛಿಸಲಿಲ್ಲ; ಆದರೆ ಹೀಗೆ ದಿನಾಲು ಹೋಗಿ ನೋಡುತ್ತ ನಿಂತುಕೊಳ್ಳುವದು ಸಂಶಯಕ್ಕೆ ಕಾರಣವೆಂತಲೂ, ಬೇರೆ ಹಂಚಿಕೆಯಿಂದ ನಿಜವಾದ ಸಂಗತಿಯನ್ನು ಅರಿತುಕೊಂಡು ಮುಂದಿನ ವಿಚಾರವ ಮಾಡುವದು ನೆಟ್ಟಗೆಂತಲೂ ನಾನಾ ಸಾಹೇಬನಿಗೆ ತಾನಾಜಿಯು ಹೇಳಿದನು. ಆ ಮಾತು ನಾನಾಸಾಹೇಬನಿಗೆ ಸಮರ್ಪಕವಾಗಿ ತೋರಿದ್ದರಿಂದ, ಆತನು ಮೂರನೆಯ ದಿವಸ ಮನೆಬಿಟ್ಟು ಹೊರಬೀಳದೆ, ವಿಚಾರಮಗ್ನನಾಗಿ ಮನೆಯಲ್ಲಿಯೇ ಕುಳಿತುಕೊಂಡನು. ತಂದೆಯ ವರ್ತಮಾನವು ತಿಳಿಯದ್ದರಿಂದಲೂ ಆತನ ಮನಸ್ಸಿಗೆ ಅಸಮಾಧಾನವಾಯಿತು. ಇತ್ತ ತಾನಾಜಿಯು ಯಮನ್ಯಾನನ್ನು ಸಂಗಡ ಕರಕೊಂಡು ವೇಷಾಂತರದಿಂದ ವಿಜಾಪುರವನ್ನು ಸುತ್ತಿಬರಲಿಕ್ಕೆ ಹೊರಟನು. ಒಬ್ಬ ವಿಚಿತ್ರವ್ಯಕ್ತಿಯು ''ಇಂದಿನಿಂದ ಮೂರನೆಯ ದಿವಸ ರಾತ್ರಿ ನಿಮ್ಮನ್ನು ಕಾಣುವೆನು, ಅಲ್ಲಿಯವರೆಗೆ ಈ ಮನೆಬಿಟ್ಟು ಎಲ್ಲಿಯೂ ಹೋಗ ಬಾರದೆ''ಂದು ಹೇಳಿದ್ದು ನಾನಾಸಾಹೇಬನಿಗೆ ಪಕ್ಕನೆ ನೆನಪಾಯಿತು. ಆ ವ್ಯಕ್ತಿಯು ಯಾಕೆ ಬಂದಿರಲಿಕ್ಕಿಲ್ಲೆಂಬ ವಿಚಾರದಲ್ಲಿ ಮಗ್ನನಾಗಿ, ನಾನಾಸಾಹೇಬನು ಆ ದೆವ್ವನ ಮನೆಯಲ್ಲಿ ಕುಳಿತುಕೊಂಡನು. ಹೊತ್ತು ಮುಣುಗಿ ಕತ್ತಲಾಯಿತು; ಆದರೂ ನಾನಾಸಾಹೇಬನ ವಿಚಾರವು ಮುಗಿಯಲಿಲ್ಲ. ಊರೊಳಗೆ ಹೋದ ತಾನಾಜಿಯೂ, ಅವನ ಸಂಗಡಿಗನೂ ಬರಲಿಲ್ಲ; ತಾನಾಜಿಯು ಇಷ್ಟು ತಡಮಾಡಲಿಕ್ಕೆ ಕಾರಣವೇನಿರಬೇಕೆಂದು ನಾನಾಸಾಹೇಬನು ಯೋಚಿಸ ತೊಡಗಿದನು. ''ತಾನಾಜಿಯು ಎಷ್ಟು ಕೇಳಿದರೂ ನಾನು ಸರಳತನದಿಂದ ಹೇಳದ್ದರಿಂದ ಆತನು ಸಿಟ್ಟಾಗಿ ನನ್ನನ್ನು ಬಿಟ್ಟುಹೋದನೋ ಏನೋ'' ಎಂಬ ವಿಚಾರವು ಸಹ ನಾನಾಸಾಹೇಬನ ಮನಸ್ಸಿನಲ್ಲಿ ಒಮ್ಮೆ ಬಂದುಹೋಯಿತು.

ಈ ಮೇರೆಗೆ ನಾನಾಸಾಹೇಬನು ವಿಚಾರಮಗ್ನವಾಗಿ ಕುಳಿತಿರಲು, ಹೊರಗೆ ಯಾರೋ ಬಾಗಿಲು ಬಡಿದಹಾಗಾಯಿತು. ಆಗ ತಾನಾಜಿಯೇ ಬಂದನೆಂದು ತಿಳಿದು ನಾನಾಸಾಹೇಬನ ಸಂಗಡಿಗನು ಹೋಗಿ ಬಾಗಿಲು ತೆಗೆದನು; ಆದರೆ ಹೊರಗೆ ಯಾರೂ ಕಾಣಲಿಲ್ಲ. ಆಗ

ನಾನಾಸಾಹೇಬನು ಆ ವಿಚಿತ್ರ ವ್ಯಕ್ತಿಯೇ ಬಂದನೋ ಎಂದು ತಾನೇ ಎದ್ದು ಹೋಗಿ ಮನೆಯ ಸುತ್ತುಮುತ್ತು ನೋಡಿದನು; ಆದರೆ ಯಾರೂ ಕಣ್ಣಿಗೆ ಬೀಳಲಿಲ್ಲ. ಉತ್ತರದಿಕ್ಕಿಗೆ ಹೋಗಿ ನೋಡಲು, ದೂರ ಯಾರೋ ಇಬ್ಬರು ಬರುವಂತೆ ತೋರಿತು, ತಾನಾಜಿಯೇ ಬರುತ್ತಿರಬಹು ದೆಂದು ತಿಳಿದು ನಾನಾಸಾಹೇಬನು ಮನೆಯ ಹಾದಿಯ ಹಿಡಿದನು. ಆತನು ಬಾಗಿಲಬಳಿಗೆ ಹೋಗಲು, ಬಾಗಿಲ ಹಲಗೆಯ ಬಿರುಕಿನಲ್ಲಿ ಒಂದು ಮಡಿಚಿದ ಕಾಗದವು ಅವನ ಕಣ್ಣಿಗೆ ಬಿದ್ದಿತು. ನಾನಾಸಾಹೇಬನು ಅದನ್ನು ದೀಪದ ಬೆಳಕಿಗೆ ಹಿಡಿದು ಓದಲು ಅದರಲ್ಲಿ—''ಈ ದಿನ ಮಧ್ಯರಾತ್ರಿಯಾದಬಳಿಕ ಎಲ್ಲರೂ ಮಲಗಿದ ಮೇಲೆ ಈ ಮಂದಿರದ ಉತ್ತರ ದಿಕ್ಕಿನಲ್ಲಿರುವ ಆಲದಮರದ ಬುಡದಲ್ಲಿ ಬರಬೇಕು'' ಎಂಬದಿಷ್ಟೇ ಸಂಗತಿಯನ್ನು ಬರೆದಿತ್ತು. ಕೆಳಗೆ ಸಹಿಯಿಲ್ಲ, ಸೂತ್ರವಿಲ್ಲ, ಅಕ್ಷರಗಳನ್ನು ಅವಸರದಲ್ಲಿ ಬರೆದಂತೆ ಗೀಚಿದ್ದರು. ಈ ಚೀಟಿಯಿಂದ ನಾನಾಸಾಹೇಬನು ಮತ್ತಿಷ್ಟು ವಿಚಾರಮಗ್ನನಾದನು. ಈ ಪತ್ರದ ಸಂಗತಿಯನ್ನು ತಾನಾಜಿಗೆ ತಿಳಿಸಬೇಕೋ ತಿಳಿಸಬಾರದೋ ಎಂಬ ವಿಚಾರದಲ್ಲಿ ತೊಡಗಿ, ಯಾವ ನಿರ್ಧಾರವೂ ಆಗದೆ ಪೇಚಾಡುತ್ತಿರಲು, ತಾನಾಜಿಯು ಅವನ ಬಳಿಗೆ ಬಂದು ನಾನಾಸಾಹೇಬರೇ, ಯಾಕೆ? ಒಬ್ಬರೇ ಯಾಕೆ ಹೊರಗೆ ನಿಂತಿರುತ್ತೀರಿ? ಮನೆಯ ಸುತ್ತುಮುತ್ತು ಏನು ನೋಡುತ್ತಿದ್ದೀರಿ? ಈ ದಿನ ನಿಮ್ಮ ಮುಖಚಿಹ್ನವು ಇಷ್ಟು ಉದಾಸೀನವೇಕೆ ಆಗಿದೆ? ನೀವು ಹುಚ್ಚರ ಹಾಗೆ ಯಾಕೆ ಮಾಡುತ್ತೀರಿ? ಎಂದು ಪ್ರಶ್ನೆ ಮಾಡುತ್ತಿರಲು, ಅಷ್ಟರಲ್ಲಿ ನಾನಾಸಾಹೇಬನು, ಚೀಟಿಯ ಸುದ್ದಿಯನ್ನು ತಾನಾಜಿಗೆ ತಿಳಿಸಿದರೆ, ತಾನು ಆ ವಿಚಿತ್ರವ್ಯಕ್ತಿಗೆ ''ಯಾರ ಮುಂದೆಯೂ ಹೇಳುವುದಿಲ್ಲವೆಂ''ದು ಕೊಟ್ಟ ವಚನವನ್ನು ಮುರಿದ ಹಾಗಾದೀತೆಂದು ತಿಳಿದು, ತಾನಾಜಿಯನ್ನು ಕುರಿತು—ಯಾಕೂ ಇಲ್ಲ; ನೀವು ಬರುವ ಹೊತ್ತು ಮೀರಿ ಹೋದದ್ದರಿಂದ ಮನಸ್ಸು ಅಸ್ವಸ್ಥವಾಗಲು, ಒಳಗಿನಿಂದ ಹೊರಗೆ ಹೊರಗಿನಿಂದ ಒಳಗೆ ಎಡತಾಕುತ್ತಿದ್ದೆನು. ನೀವು ಈ ದಿನ ಇಷ್ಟು ತಡವೇಕೆ ಮಾಡಿದಿರಿ? ಹೊಸ ಸುದ್ದಿಗಳೇನೇನು ಗೊತ್ತಾದವು? ಎಂದು ನುಡಿಯುತ್ತ ಕೈಯೊಳಗಿನ ಚೀಟಿಯನ್ನು ಕಚಪಚ ಮಡಿಚಿ ಹರಿದು ಚಲ್ಲಿಕೊಡುತ್ತ ತಾನಾಜಿಯೊಡನೆ ಒಳಗೆ ಹೋದನು. ಈ ದಿನ ತಾನಾಜಿಯ ಕೆಲಸವು ನೆಟ್ಟಗೆ ಆದದ್ದರಿಂದ ಆತನು ಆ ಆನಂದದಲ್ಲಿ ನಾನಾಸಾಹೇಬನನ್ನು ಹೆಚ್ಚಿಗೆ ಕೆದರಿ ಕೆದರಿ ಕೇಳದೆ, ತನಗೆ ಗೊತ್ತಾದ ಸುದ್ದಿಯನ್ನು ನಾನಾಸಾಹೇಬನ ಮುಂದೆ ಹೇಳಹತ್ತಿದನು. ತಾನಾಜಿಯು ನಾನಾಸಾಹೇಬನನ್ನು ಕುರಿತು—ಈಗ ಎರಡು ದಿನ ನೋಡದೆ ಇದ್ದ ಪೇಟೆಗಳಲ್ಲಿ ಹಲವನ್ನು ಈ ದಿನ ನೋಡಿದೆನು. ಸೈಯದುಲ್ಲಾಖಾನ, ಅಫದುಲ್ಲಾಖಾನ, ರಣದುಲ್ಲಾಖಾನನು, ಮುರಾರಿಬಾ ಮೊದಲಾದವರ ಮಂದಿರಗಳನ್ನು ನೋಡಿದೆನು. ರಂಗರಾವ ಅಪ್ಪಾಸಾಹೇಬರು ಇರುವ ಸ್ಥಳವನ್ನೂ ನೋಡಿದೆನು. ಮತ್ತು ತಮ್ಮ ಮನಸ್ಸನ್ನು ಹರಣಮಾಡಿದ್ದ ತರುಣ ಸರದಾರನ ವೃತ್ತಾಂತವನ್ನೂ ತಕ್ಕಮಟ್ಟಿಗೆ ತಿಳಿದುಕೊಂಡಿರುವೆನು. ರಣದುಲ್ಲಾಖಾನನ ರಂಗರಾವ ಅಪ್ಪಾನನ್ನು ಸೆರೆಹಿಡಿಕೊಂಡು ಬರುವದಕ್ಕಾಗಿ ಸುಲ್ತಾನಗಡಕ್ಕೆ ಹೋಗುತ್ತಿರಲು, ಆ ತರುಣ ಸರದಾರನು ಹಾದಿಯಲ್ಲಿ ಭೆಟ್ಟಿಯಾದನಂತೆ, ರಣದುಲ್ಲಾಖಾನನು ಆತನನ್ನು ನೋಡಿ ನಿನ್ನಂತೆ

ಮೋಹಿತನಾಗಿ, ಆ ತರುಣ ಸರದಾರನ ಮನಸ್ಸು ಇಲ್ಲದಿದ್ದರೂ, ''ನಿಮಗೆ ಬಾದಶಹರಿಂದ ಸರದಾರಿಕೆಯನ್ನು ಕೊಡಿಸುತ್ತೇನೆ''ಂದು ಹೇಳಿ ಒತ್ತಾಯದಿಂದ ಆತನನ್ನು ಕರತಂದಿರುವನಂತೆ. ಖಾನನು ಆ ತರುಣನ ಸುದ್ದಿಯನ್ನು ಇನ್ನೂ ಬಾದಶಹನ ಕಿವಿಯ ಮೇಲೆ ಹಾಕಿಲ್ಲವಂತೆ. ನಾನು ಸುದ್ದಿಯನ್ನು ಕೇಳಿದಂತೆ ಆ ತರುಣ ಸರದಾರನು ನಿಮ್ಮ ಕುಟುಂಬವೇ ಆಗಿದ್ದರೆ, ಅವರು ಯಾವ ತರದ ಅಪವಾದಕ್ಕೂ ಗುರಿಯಾಗಿರುವದಿಲ್ಲೆಂದು ನನಗೆ ತೋರುತ್ತದೆ. ನಾಳಿಗೆ ಎಲ್ಲ ಸುದ್ದಿಯನ್ನು ತಿಳಕೊಂಡು ಬರುವೆನು, ಎಂದು ಹೇಳಿದನು.

ರಾತ್ರಿಯು ಬಹಳವಾದದ್ದರಿಂದ ತಾನಾಜಿಯೇ ಮೊದಲಾದವರು ಊಟಕ್ಕೆ ಎದ್ದರು; ಆದರೆ ತಾನು ಮಧ್ಯರಾತ್ರಿಯಲ್ಲಿ ಬೆಟ್ಟಿಗೆ ಹೋಗಬೇಕೋ ಹೋಗಬಾರದೋ ಎಂಬ ವಿಚಾರದಲ್ಲಿ ಮಗ್ನನಾಗಿದ್ದ ನಾನಾಸಾಹೇಬನು ತನಗೆ ಹಸಿವೆಯಿಲ್ಲೆಂದು ಹೇಳಿ ಮಲಗಿ ಕೊಂಡನು. ತಾನಾಜಿಯಾದರೂ ಆತನಿಗೆ ಊಟಕ್ಕೆ ಏಳುವುದಕ್ಕಾಗಿ ಒತ್ತಾಯಮಾಡಲಿಲ್ಲ! ಮನಸ್ಸು ಅಸಮಾಧಾನದಲ್ಲಿರುವದರಿಂದ ಅಗ್ರಹಮಾಡುವದು ಸರಿಯಲ್ಲವೆಂದು, ಉಳಿದವರು ಊಟ ಮಾಡಿ ಮಲಗಿಕೊಂಡರು. ಮಲಗಿದ್ದೊಂದೇ ತಡ, ಎಲ್ಲರಿಗೂ ಗಾಢವಾದ ನಿದ್ರೆಯು ಹತ್ತಿತು. ನಾನಾಸಾಹೇಬನಿಗೆ ಮಾತ್ರ ನಿದ್ದೆ ಹತ್ತಿದ್ದಿಲ್ಲ, ಮಧ್ಯರಾತ್ರಿಯಾಗುತ್ತಲೆ ಆತನು ಹಾಸಿಗೆಯಿಂದ ಎದ್ದನು. ಕೈಯಲ್ಲಿ ಆಯುಧಾದಿಗಳನ್ನು ತಕ್ಕೊಳ್ಳದೆ, ಮಂದಿರದ ಉತ್ತರದ ಕಡೆಗೆ ಸಾಗಿದನು. ಆ ವಿಚಿತ್ರ ವ್ಯಕ್ತಿಯನ್ನು ಕಂಡು ವಿಶೇಷ ಸಂಗತಿಯನ್ನು ಅರಿತುಕೊಳ್ಳ ಬೇಕೆಂಬ ಆತುರದಲ್ಲಿ ನಾನಾಸಾಹೇಬನು ದೂರ ಲಕ್ಷಗೊಡದೆ ಬರಿಗೈಯಿಂದಲೇ ಸಾಗಿದ್ದನು. ಅಷ್ಟರಲ್ಲಿ ಮೂವರು ಹಿಂದಿನಿಂದ ಬಂದು ತೆಕ್ಕಿಬಿದ್ದು ಅವನನ್ನು ನೆಲಕ್ಕೆ ಕೆಡವಿದರು. ಮುಂದಿನಿಂದ ಬಂದ ಇಬ್ಬರು ಅವನ ಬಾಯಲ್ಲಿ ಚಂಡು ತುರುಕಿ ಒದರಾಡದ ಹಾಗೆ ಮಾಡಿದರು. ಆಮೇಲೆ ಅವರೆಲ್ಲರೂ ಕೂಡಿ ಮಿಸಿಕಾಡದಂತೆ ನಾನಾಸಾಹೇಬನ ಕೈಕಾಲು ಗಳನ್ನು ಬಿಗಿದುಕಟ್ಟಿ ಮುದ್ದೆ ಮಾಡಿ, ಮಟ್ಟೆಯನ್ನು ಹೊತ್ತಂತೆ ಆತನನ್ನು ಹೊತ್ತು ಕೊಂಡು ಊರ ಕಡೆಗೆ ಸಾಗಿದರು. ಆಗ ನಾನಾಸಾಹೇಬನಿಗೆ ಮಿಸಕಾಡಲಿಕ್ಕೆ ಕೂಡ ಬರುವಹಾಗಿದ್ದಿಲ್ಲ. ಆತನ ಮೈಮೇಲೆ ತುಂಬಾ ಎಚ್ಚರವಿದ್ದದ್ದರಿಂದ, ತನ್ನನ್ನು ಇವರು ಎಲ್ಲಿಗೋ ಹೊತ್ತುಕೊಂಡು ಹೋಗುತ್ತಾರೆಂಬದಿಷ್ಟು ಮಾತ್ರ ಆತನಿಗೆ ಗೊತ್ತಾಗುತ್ತಿತ್ತು. ತಾನು ಚೀಟಿಯನ್ನು ತಾನಾಜಿಗೆ ತೋರಿಸದೆ ಇದ್ದದ್ದು ಮೂರ್ಖತನವಾಯಿತೆಂದು ಆತನು ಪಶ್ಚಾತ್ತಾಪಪಟ್ಟನು; ಆದರೆ ಬುದ್ಧಿಯನ್ನು ಕಳಕೊಂಡು ಹುಡುಕಹತ್ತಿದರೆ ಆಗುವುದೇನು? ಕಟ್ಟುಗಳ ಬಿಗುವಿನಿಂದ ಗಾಸಿಯಾಗಿದ್ದ ನಾನಾಸಾಹೇಬನು, ತನ್ನನ್ನು ಯಾವಾಗ ಕೆಳಗೆ ಇಳಿಸಿ ಕಟ್ಟು ಸಡಲಿಸುವರೋ ಎಂದು ಆತುರದಿಂದ ಹಾದಿಯ ನೋಡುತ್ತಿರಲು, ಸುಮಾರು ಅರ್ಧತಾಸಿನ ಮೇಲೆ ಅವರು ಒಂದು ವಾಡೆಯನ್ನು ಹೊಕ್ಕು, ಅದರ ತೀರ ಹಿಮ್ಮಗ್ಗಲಿಗಿರುವ ಒಂದು ಭಯಂಕರವಾದ ನೆಲಮನೆಯಲ್ಲಿ ನಾನಾಸಾಹೇಬನನ್ನು ಇಳಿಸಿ ಕೈಕಾಲುಬಿಚ್ಚಿ ಬಾಗಿಲಿಗೆ ಕೀಲಿಯನ್ನು ಹಾಕಿಕೊಂಡು ಎಲ್ಲರೂ ಸುಮ್ಮನೆ ಹೊರಟುಹೋದರು. ನಾನಾಸಾಹೇಬನು ತಾನು ಸೆರೆಯಾಳಾದೆನೆಂದು ತಳಮಳಿಸುತ್ತ ಕುಳಿತುಕೊಂಡನು. ಇತ್ತ ತಾನಾಜಿಯೇ ಮೊದಲಾದವರು,

ನಾನಾಸಾಹೇಬನು ಅಕಸ್ಮಾತ್ತಾಗಿ ಇಲ್ಲದ ಹಾಗಾದದ್ದನ್ನು ನೋಡಿ ಅಸವಾಧಾನಪಟ್ಟು, ಆತನ ಸುರಕ್ಷಿತತೆಯ ಸಲುವಾಗಿ ಚಿಂತಿಸತೊಡಗಿದರು. ತಮಗೆ ಮನೆಯನ್ನು ಕೊಟ್ಟು ಬೆಳಗಾಗುವದರೊಳಗೆ ಹೊರಟುಹೋಗಿದ್ದ ಆ ವಿಚಿತ್ರ ವ್ಯಕ್ತಿಯಿಂದಲೇ ಈ ಅನರ್ಥವು ಒದಗಿರಬಹುದೆಂದು ಅವರು ಚಿಂತಿಸುತ್ತ ಕುಳಿತುಕೊಂಡರು!

## ದೈವಸಂಕಲ್ಪ

ವಿಜಾಪುರಕ್ಕೆ ಹೋದವರು ಹೀಗೆ ಸಂಕಟಕ್ಕೆ ಗುರಿಯಾಗಿ ಚಿಂತಾಮಗ್ನರಾಗಿರಲು, ಇತ್ತ ಶ್ರೀಧರಸ್ವಾಮಿಯೂ, ಶಿವಾಜಿಯೂ, ಏಸಾಜಿಯು ತಮ್ಮ ನಿತ್ಯದ ಆಲೋಚನೆಯ ಸ್ಥಾನವಾದ ಆ ಅರಣ್ಯದಲ್ಲಿ ತಮ್ಮ ಅನುಯಾಯಿಗಳೊಡನೆ ಕುಳಿತು ವಿಚಾರಮಾಡುತ್ತಲಿದ್ದರು. ತಾನಾಜಿಯೇ ಮೊದಲಾದವರು ವಿಜಾಪುರಕ್ಕೆ ಹೋಗಿ ಅಂದಿಗೆ ಹದಿನೈದು ದಿವಸ ಗಳಾಗಿದ್ದವು. ಈ ಅವಧಿಯಲ್ಲಿ ಏನಾದರೂ ಸುದ್ದಿಯು ಬರಬಹುದೆಂದು ತಿಳಿದು, ಮುಂದಿನ ವಿಚಾರದ ಬಗ್ಗೆ ಅವರೆಲ್ಲರೂ ಒಟ್ಟುಗೂಡಿದ್ದರು. ಇಲ್ಲಿಯವರೆಗೆ ಕಳವು–ದರೋಡೆ–ಹಾದಿಯ ಬಡಿಯುವದು ಮೊದಲಾದವುಗಳೇ ಶಿವಾಜಿಯ ಕೆಲಸಗಳಾಗಿದ್ದದ್ದರಿಂದ, ಅವುಗಳ ಯಶೋಪಯಶಗಳ ಬಗ್ಗೆ ಯಾರಿಗೂ ಅಷ್ಟು ಮಹತ್ವವು ತೋರುತ್ತಿದ್ದಿಲ್ಲ. ವಿಜಾಪುರದ ದರ್ಬಾರದೊಳಗಾಗಲಿ, ಬೇರೆ ಕಡೆಗಾಗಲಿ ಶಿವಾಜಿಯೊಬ್ಬನು ಪುಂಡನೆಂದು ತಿರಸ್ಕರಿಸಲ್ಪಡು ತ್ತಿದ್ದನಲ್ಲದೆ, ಆತನಿಗೆ ವಿಶೇಷ ಗೌರವವು ಪ್ರಾಪ್ತವಾಗಿದ್ದಿಲ್ಲ. ವಿಜಾಪುರದ ದರ್ಬಾರದವರು, ಶಿವಾಜಿಯೊಬ್ಬನು ತುಂಟನೆಂದು ತಿಳಿದು ದುರ್ಲಕ್ಷಿಸುತ್ತಿದ್ದರಲ್ಲದೆ, ಅವನೊಬ್ಬನು ಸ್ವರಾಜ್ಯ ಸ್ಥಾಪನೆಗೆ ಯತ್ನಿಸುವ ಮಹತ್ವದ ಪುರುಷನೆಂದು, ಅವನ ನಾಶಕ್ಕಾಗಿ ಮನಮುಟ್ಟಿ ಯತ್ನಿಸುತ್ತಿದ್ದಿಲ್ಲ. ತನ್ನ ಕಳ್ಳತನದ ಸ್ಥಿತಿಯನ್ನು ಬಿಟ್ಟು ತಾನೊಬ್ಬನು ಸ್ವರಾಜ್ಯ ಸ್ಥಾಪಿಸಲು ಯತ್ನಿಸುವವನಿದ್ದೇನೆಂದು, ಜಗತ್ತಿಗೆ ತೋರಿಸುವ ಹೊತ್ತು ಈಗ ಶಿವಾಜಿಗೆ ಬಂದಿತ್ತು. ಸುಲ್ತಾನಗಡವನ್ನು ವಶಮಾಡಿಕೊಂಡರೆ, ಶಿವಾಜಿಯು ಪ್ರತ್ಯಕ್ಷ ರಾಜಕಾರಣದಲ್ಲಿ ಬಿದ್ದಂತಾಗಿ ಆತನ ರಾಜದ್ರೋಹಕ್ಕಾಗಿ ವಿಜಾಪುರದವರು ಕೂಡಲೆ ಅವನನ್ನು ದಂಡಿಸುವದು ಸ್ವಾಭಾವಿಕವಾಗಿತ್ತು. ಆ ದಂಡನೆಗೆ ಅಸುಗೊಳ್ಳದಷ್ಟು ಶಿವಾಜಿಯು ಬಲಿಷ್ಠನಾಗದಿದ್ದರೆ, ಅವನ ನಾಶಕ್ಕೆ ವಿಲಂಬವಾಗುವಹಾಗಿದ್ದಿಲ್ಲ; ಆದ್ದರಿಂದ ತಾನು ಹೇಗೆ ಬಲಿಷ್ಠನಾಗಬೇಕೆಂಬ ಬಗ್ಗೆ ಆತನು ಶ್ರೀಧರಸ್ವಾಮಿಗಳನ್ನೂ, ಏಸಾಜಿಯನ್ನೂ ಕೂಡಿಕೊಂಡು ಒತ್ತಟ್ಟಿಗೆ ಕುಳಿತು ಆಲೋಚಿಸುತ್ತಲಿದ್ದನು. ಆತನ ಜನರು ದೂರ ಇನ್ನೊತ್ತಟ್ಟಿಗೆ ಕುಳಿತುಕೊಂಡಿದ್ದರು. ಶಿವಾಜಿಗೆ ದ್ರವ್ಯದ ಕೊರತೆಯಿದ್ದಿಲ್ಲ. ಶಸ್ತ್ರಾಸ್ತ್ರಗಳ ಕೊರತೆಯೂ ಇದ್ದಿಲ್ಲ; ಆತನಿಗಿರುವ ಮುಖ್ಯ ಕೊರತೆಯು ಮನುಷ್ಯರದಾಗಿತ್ತು. ಇಂದಿನವರೆಗೆ ಶಿವಾಜಿಯ ಬಳಿಯಲ್ಲಿ ಬಹಳವಾದರೆ ಐವತ್ತು ಜನರ ಸಂಗ್ರಹವಾಗಿತ್ತು. ಇಷ್ಟು ಜನರಿಂದ ಸುಲ್ತಾನಗಡದಂಥ ದುರ್ಗವನ್ನು

ಕೈವಶಮಾಡಿಕೊಳ್ಳುವದು, ಕೈವಶಮಾಡಿಕೊಂಡನಂತರ ಅದನ್ನು ಕಾಯುವದೂ ನೀಗುವ ಹಾಗಿದ್ದಿಲ್ಲ. ಆತನಿಗೆ 500 ಜನರ ಅವಶ್ಯಕತೆಯಿತ್ತು ಸದ್ಯಕ್ಕೆ 500 ಜನರು ದೊರೆಯ ದಿದ್ದರೂ, 250 ಜನರಾದರೂ ಕೂಡಲೇ ಬೇಕಾಗಿತ್ತು ವಿಶ್ವಾಸಕ್ಕೆ ಪಾತ್ರರಾದ ಇಷ್ಟು ಜನ ಶೂರರನ್ನು ಸಂಗ್ರಹಿಸುವದು ಸುಲಭವಾಗಿದ್ದಿಲ್ಲ. ಈ ಸಂಗ್ರಹದ ಬಗ್ಗೆ ಆ ಮೂವರಲ್ಲಿ ವಿಚಾರವು ನಡೆದಿರಲು, ಏಸಾಜಿಯು ನುಡಿದನೇನಂದರೆ–ಶಿವಬಾ, ಜನಸಂಗ್ರಹದ ಬಗ್ಗೆ ಇಷ್ಟು ಚಿಂತಿಯೇಕೆ? ಈಗ ನಿನ್ನ ಪದರಿನಲ್ಲಿದ್ದ ಐವತ್ತು ಜನರನ್ನು ನಿನ್ನ ಮಧುರವಾಣಿ ಯಿಂದ ಪ್ರೋತ್ಸಾಹಿಸಿ, ಇನಾಮುಕೊಟ್ಟು ಹುರುಪುಗೊಳಿಸಿ ಒಬ್ಬೊಬ್ಬರು ಐದೈದು ಜನರಂತೆ ನಂಬಿಗೆಯ ಶೂರ ಜನರನ್ನು ಕರಕೊಂಡು ಬರಬೇಕೆಂದು ಹೇಳಿದರೆ, ನಿರಾಯಾಸ ವಾಗಿ ಕೆಲಸವಾಗುವದು. ಶಿವರಾಯನು ತಮ್ಮಲ್ಲಿ ಎಷ್ಟು ನಂಬಿಗೆ ಇಟ್ಟಿರುತ್ತಾನೆಂಬ ಬಗ್ಗೆ ಆ ಐವತ್ತು ಜನರಿಗೆ ದೊಡ್ಡಿಸ್ತನವು ದೊರೆತಂತಾಗಿ, ಅವರು ಸ್ವಾಮಿಕಾರ್ಯವನ್ನು ಜೀವದ ಹಂಗು ಇಲ್ಲದೆ ಮಾಡಬಹುದು. ಇಂಥ ಕೆಲಸಕ್ಕೆ ಜನರು ಬೇಕಾಗಿರುತ್ತಾರೆಂದು ಮಾತ್ರ ಈಗ ನಾವು ಅವರಿಗೆ ಹೇಳಬಾರದು.

ಏಸಾಜಿಯ ಈ ಉಪಾಯವು ಶ್ರೀಧರಸ್ವಾಮಿಗಳಿಗೂ, ಶಿವಾಜಿಗೂ ಸಮರ್ಪಕವಾಗಿ ತೋರಿತು. ಶಿವಾಜಿಯು ತನ್ನ ಮಧುರವಾಣಿಯಿಂದ ಜನರನ್ನು ಪ್ರೋತ್ಸಾಹಿಸಿ, ಮೊದಲೇ ಗೊತ್ತುಮಾಡಿದಂತೆ ಅವರನ್ನು ಇನಾಮುಗಳಿಂದ ಹುರುಪುಗೊಳಿಸಿ ಜನರನ್ನು ಕೂಡಿಸುವ ಬಗ್ಗೆ ಹೇಳಿಕೊಳ್ಳಲು, ಒಬ್ಬೊಬ್ಬರು ಐದೈದು ಜನರನ್ನೇ ಏಕೆ, ಹತ್ತು ಹತ್ತು ಜನರನ್ನು ಕೂಡಿಸಿ ಕೊಂಡು ಬರುತ್ತೇವೆಂದು ಹೇಳಿದರು. ಶಿವಾಜಿಯು ತನ್ನ ನಿತ್ಯಕ್ರಮದಂತೆ, ಮುಸಲ್ಮಾನರಿಂದ ಹಿಂದೂ ಜನರಿಗಾಗುತ್ತಿದ್ದ ಉಪದ್ರವವನ್ನೂ ಧರ್ಮದ ಭ್ರಷ್ಟಾಚಾರವನ್ನೂ ಆವೇಶದಿಂದ ವರ್ಣಿಸಿದ್ದರಿಂದ, ಆ ಐವತ್ತು ಜನರು ಶಿವಾಜಿಯ ಸ್ವರಾಜ್ಯ ಸ್ಥಾಪನೆಗೆ ಬೇಕಾದ ಸಹಾಯ ವನ್ನು ಮಾಡಲು ಮನಸ್ಸಿನಲ್ಲಿ ನಿಶ್ಚಯಮಾಡಿಕೊಂಡರು. ಉದಾರನಾದ ಶಿವಾಜಿಯು ಅವರಿಗೆ ದೇವರಂತೆ ತೋರಹತ್ತಿದನು. ಮುಸಲ್ಮಾನರು ಭೂಮಿಕಾಣಿಕೆಗಳ ಆಶೆ ತೋರಿಸಿದರೂ, ಕುತ್ತಿಗೆಯ ಮೇಲೆ ಕತ್ತಿಯನ್ನಿಟ್ಟರೂ ಗುಟ್ಟನ್ನು ಹೊರಗೆಡವದಂಥ ಹಾಗು ಮುಸಲ್ಮಾನರನ್ನು ಕೂಡಿಕೊಳ್ಳದಂಥ ಜನರನ್ನು ಕರತರುತ್ತೇವೆಂದು ಅವರು ಶಿವಾಜಿಗೆ ಹೇಳಿದರು. ಅದನ್ನು ಕೇಳಿ ಶಿವಬಾನು ಆನಂದವನ್ನು ಪ್ರಕಟಿಸಿ, ಮತ್ತೊಮ್ಮೆ ಅವರನ್ನು ಪ್ರೋತ್ಸಾಹಿಸಿ, ಬೇಗನೆ ಕೆಲಸವಾಗ ಬೇಕೆಂದು ಹೇಳಿ ಅಪ್ಪಣೆಕೊಟ್ಟು ಕಳುಹಿಸಿದನು. ಅಲ್ಲಿ ಶ್ರೀಧರಸ್ವಾಮಿಗಳು, ಶಿವಾಜಿ, ಏಸಾಜಿ ಈ ಮೂವರೇ ಉಳಿದರು. ಶ್ರೀಧರಸ್ವಾಮಿಗಳನ್ನು ಬಿಡಿಸುವ ಮಹತ್ಕಾರ್ಯದಲ್ಲಿ ತೊಡಗಿರುವಾಗ ಶಿವಾಜಿಯು ಮೂರು ಮೂರು, ನಾಲ್ಕು ನಾಲ್ಕು ದಿನ ಮನೆ ಸೇರುತ್ತಿದ್ದಿಲ್ಲ. ಗುಪ್ತವಾದ ಆ ಮಾರುತಿಯ ಗುಡಿಯ ಗುಹೆಯಲ್ಲಾಗಲಿ, ಗುಪ್ತವಾದ ಆ ಭಯಂಕರ ಅರಣ್ಯದಲ್ಲಾಗಲಿ ತನ್ನವರೊಡನೆ ಎಣಿಕೆ ಹಾಕುತ್ತ ಕುಳಿತುಕೊಳ್ಳುತ್ತಿದ್ದನು. ಈ ಸಂಗತಿಯನ್ನು ತಿಳಿದು ಶಿವಾಜಿಯ ತಾಯಿಯಾದ ಜೀಜಾಬಾಯಿಯವರಿಗೂ, ಗುರುವಾದ ದಾದೋಜಿ ಕೊಂಡ ದೇವನಿಗೂ ಚಿಂತೆಯು ಉತ್ಪನ್ನವಾಯಿತು. ಈ ಬಡಾಳನು ನೀಗದ ಕೆಲಸಕ್ಕೆ ಕೈಹಾಕಿ,

ತನ್ನ, ಹಾಗು ತನ್ನ ಮನೆತನದ ನಾಶಕ್ಕೆ ಎಲ್ಲಿ ಗುರಿಯಾಗುವನೋ ಎಂದು ಅವರು ಯೋಚಿಸ ತೊಡಗಿದರು. ಈ ಸಂಗತಿಯನ್ನು ದಾದೋಜಿಕೊಂಡದೇವನು ಶಹಾಜಿರಾಜರಿಗೂ ತಿಳಿಸಿ, ಮಗನಿಗೆ ಸಿಟ್ಟು ಮಾಡಿ ಪತ್ರಬರೆದು ಆತನನ್ನು ಹಾದಿಗೆ ತರಬೇಕೆಂದು ಪತ್ರಮುಖದಿಂದ ಬೇಡಿಕೊಂಡಿದ್ದನು. ಅದರಂತೆ ಶಹಾಜಿರಾಜರು ಶಿವಾಜಿಗೆ ಸಿಟ್ಟು ಮಾಡಿ ಪತ್ರಬರೆದು ಅದನ್ನು ದಾದೋಜಿ ಕೊಂಡದೇವನ ಕಡೆಗೆ ಕಳಿಸಿದರು. ಆಗ ದಾದೋಜಿಯು ನಿಸ್ಪ್ರಹತೆ ಯಿಂದ ಶಿಷ್ಯನನ್ನು ಎಚ್ಚರಗೊಳಿಸಬೇಕೆಂದು ನಿಶ್ಚಯಿಸಿ, ಶಿವಾಜಿಯನ್ನು ಕರೆಸಿ, ಆತನ ಕೈಯಲ್ಲಿ ಆ ಪತ್ರವನ್ನು ಕೊಟ್ಟನು. ತಂದೆಯ ಕಠೋರ ಮಾತುಗಳಿಂದ ಅಸಮಾಧಾನಪಟ್ಟಿದ್ದ ಶಿವಾಜಿಯನ್ನು ಎಚ್ಚರಗೊಳಿಸುವದಕ್ಕಾಗಿ, ದಾದೋಜಿ ಕೊಂಡದೇವನು–ಶಿವರಾಯರೇ, ನೀವು ಕುಲಕ್ಷಯಮಾಡುತ್ತೀರೆಂಬಂತೆ ತೋರುತ್ತದೆ. ನಿಮ್ಮಿಂದ ಯಜಮಾನರಿಗೂ, ಮಾತೃಶ್ರೀಯವರಿಗೂ ಕ್ಲೇಶಮಾತ್ರ ಆಗುವದು. ನಿಮ್ಮ ನಾಶವೂ ಆಗದೆ ಹೋಗದು. ಇದು ರಾಜ್ಯ ಸ್ಥಾಪಿಸುವ ಮಾರ್ಗವೇ? ಕಳ್ಳರು, ದರವಡೆ ಚೋರರು ಎಲ್ಲಿಯಾದರೂ ರಾಜ್ಯವನ್ನು ಸ್ಥಾಪಿಸುವರೇ! ಬಡಬಗ್ಗರನ್ನು ಪೀಡಿಸಿದರೆ ಸ್ವರಾಜ್ಯ ಸ್ಥಾಪನೆಯಾಗುವದೇ, ಎಂದು ಜರಿದು ನುಡಿದರು. ಅದರಿಂದ ಶಿವಾಜಿಯ ಮನಸ್ಸು ವ್ಯಗ್ರವಾಯಿತು. ಗುರುಗಳಲ್ಲಿ ತುಂಬಾ ವಿಶ್ವಾಸ ವುಳ್ಳವನಾದ್ದರಿಂದ, ಎಂದೂ ಪ್ರತ್ಯುತ್ತರಕೊಡದ ಆತನು ಗುರುಗಳನ್ನು ಕುರಿತು–ಸ್ವಾಮೀ, ನನ್ನಂಥ ಅಧಮನನ್ನು ಹಾದಿಗೆ ತರುವದಕ್ಕಾಗಿ ನೀವೆಲ್ಲರು ಇಷ್ಟು ಯತ್ನಿಸುವದದಾದರೂ ಯಾತಕ್ಕೆ? ನನ್ನಂಥ ತುಂಟನು ಬದುಕಿ ಇರುವದಕ್ಕಿಂತ ಸತ್ತುಹೋಗುವದು ಸುರಕ್ಷಿತವಲ್ಲವೆ? ಹಿರಿಯರಿಗೆ ಕ್ಲೇಶವನ್ನು ಉಂಟುಮಾಡುತ್ತ ಮನೆಯಲ್ಲಿರುವದು ಯುಕ್ತವಾಗಿ ತೋರುವದಿಲ್ಲ, ಇನ್ನು ಈ ಶಿಷ್ಯನು ಸ್ವರಾಜ್ಯ ಸ್ಥಾಪನೆಗೆ ಯೋಗ್ಯವಾದ ಒಂದಾದರೂ ಕೆಲಸವನ್ನು ಮಾಡದೆ ಗುರುಗಳ ಕಣ್ಣಿಗೆ ಬೀಳಲಾರನು. ಮಹತ್ವದ ಕಾರ್ಯವು ನನ್ನಿಂದಾದ ಬಳಿಕ ನನ್ನನ್ನು ನೀವು ಆದರಿಸಿರಿ, ಬಿಡಿರಿ; ಅಂಥ ಕಾರ್ಯವನ್ನು ಮಾಡದೆ ನಾನು ನಾಶವನ್ನೇ ಹೊಂದಿದರೆ, ಕುಲಕಂಟಕವು ದೂರವಾಯಿತೆಂದು ಸಂತೋಷಪಡಿರಿ, ಎಂದು ಹೇಳಿ ಗುರುಗಳಿಗೆ ಸಾಷ್ಟಾಂಗ ನಮಸ್ಕಾರಮಾಡಿ ತಾಯಿಯ ಬಳಿಗೆ ಹೊರಟನು. ಶಿಷ್ಯನು ಹೀಗೆ ಪ್ರತ್ಯುತ್ತರ ಕೊಟ್ಟದ್ದಕ್ಕಾಗಿ ದಾದೋಜಿಕೊಂಡದೇವನು ಆಶ್ಚರ್ಯಪಡುತ್ತ, ಶಿಷ್ಯನು ಮನಸ್ಸಿಗೆ ಹಚ್ಚಿಕೊಂಡನೆಂದು ಅಸಮಾಧಾನಪಟ್ಟು, ಆತನನ್ನು ಸವಿಮಾತುಗಳಿಂದ ರಮಿಸಲು ಯತ್ನಿಸುತ್ತಿರಲು, ಶಿವಾಜಿಯು ತಾಯಿಯ ಬಳಿಗೆ ಹೋಗಿಬಿಟ್ಟನು. ಆತನು ತಾಯಿಯನ್ನು ನಮಸ್ಕರಿಸಿ– ಅವ್ವನವರೇ, ಇನ್ನು ನನ್ನ ನಿಮ್ಮ ದರ್ಶನವು ಎಂದೋ ತಿಳಿಯದು. ದರ್ಶನವಾದರೆ, ತಮಗೆ ಭೂಷಣವಾಗು ವಂಥ ಕಾರ್ಯವು ನನ್ನಿಂದ ಜರುಗಿದ ದಿವಸವೇ ಆಗುವದು, ಎಂದು ನುಡಿದು ತಟ್ಟನೆ ಅಲ್ಲಿಂದ ಹೊರಟುಹೋದನು.

ಯಾವ ಪಾಪವನ್ನೂ ಅರಿಯದ ಜೀಜಾಬಾಯಿಯವರು ಮಗನ ಈ ಮಾತುಗಳನ್ನು ಕೇಳಿ, ಇವನಿಗೇನು ಹುಚ್ಚುಹಿಡಿಯಿತೋ ಎಂದು ಯೋಚಿಸುತ್ತಿರಲು, ದಾದೋಜಿಕೋಂಡ ದೇವನು ಅವರ ಬಳಿಗೆ ಬಂದು ನಡೆದ ಸಂಗತಿಯನ್ನು ಹೇಳಿದನು. ಅದನ್ನು ಕೇಳಿ

ಜೀಜಾಬಾಯಿಯವರು ಮಗನಿಗೆ ತಿಳಿಯಬೇಕೆಂದು ಆತನನ್ನು ಕರತರಹೇಳಲು, ಶಿವಾಜಿಯು ಯಾರಿಗೂ ಸಿಗಲಿಲ್ಲ. ಆತನು ಪುಣೆಯಿಂದ ಹೊರಟವನು ಮಾರುತಿಯ ದೇವಾಲಯದ ಬುಡದಲ್ಲಿಯ ಗುಹೆಯಲ್ಲಿದ್ದ ಭವಾನಿಯ ಬಳಿಗೆ ಹೋಗಿ, ಆಕೆಯ ಮುಂದೆ ಧ್ಯಾನಸ್ಥನಾಗಿ ಕುಳಿತುಕೊಂಡನು. ಎರಡು ದಿನಗಳ ವರೆಗೆ ಅನ್ನನೀರುಗಳಿಲ್ಲದೆ ಆತನ ಮಾನಸ ಪೂಜೆಯು ನಡೆಯಿತು. ಎರಡನೆಯ ದಿನವು ಮುಗಿದು ಮೂರನೆಯ ದಿನ ಮಧ್ಯರಾತ್ರಿಯಾದರೂ ಆತನ ಧ್ಯಾನವು ಭಂಗವಾಗಲಿಲ್ಲ, ಒಬ್ಬನೇ ದೇವಿಯ ಮುಂದೆ ಚಲಿಸದೆ ಪ್ರಶಸ್ತವಾಗಿ ಕುಳಿತು ಬಿಟ್ಟಿದ್ದನು. ಶ್ರೀಧರಸ್ವಾಮಿಗಳು ಹೊರಗೆ ಮಾರುತಿಯ ಗುಡಿಯಲ್ಲಿ ಕುಳಿತು ಕೊಂಡಿದ್ದರು. ಮಧ್ಯರಾತ್ರಿಯಾದ ಕೂಡಲೆ ಅವರು ಗುಡಿಯ ಬಾಗಿಲು ಹಾಕಿಕೊಂಡು ಗವಿಯಲ್ಲಿಳಿದು ಶಿವಾಜಿಯ ಬಳಿಗೆ ಹೋದರು. ಆಗ ಶಿವಾಜಿಯು ಏಕಾಗ್ರಚಿತ್ತನಾಗಿ ದೇವಿಯ ಮುಂದೆ ಕುಳಿತುಬಿಟ್ಟಿದ್ದನು. ಚಿಕ್ಕ ವಯಸ್ಸಿನಲ್ಲಿ ಶಿವಾಜಿಯ ಈ ದೃಢಭಕ್ತಿಯನ್ನು ನೋಡಿ ಶ್ರೀಧರಸ್ವಾಮಿಗಳು ಆಶ್ಚರ್ಯಪಟ್ಟು, ಇಂಥ ಪುಣ್ಯಶಾಲಿಯಾದುದರಿಂದಲೇ ಸಮರ್ಥ ರಾಮದಾಸಸ್ವಾಮಿಗಳು, ದೇಶೋದ್ಧಾರಕ್ಕಾಗಿ ಈತನನ್ನು ಹುಡುಕಿ ಅನುಗ್ರಹ ಮಾಡಿದ್ದಾರೆ, ಅಂಬಾಭವಾನಿಯೂ ಈತನಿಗೆ ಪ್ರಸನ್ನಳಾಗಿದ್ದಾಳೆ; ಇಲ್ಲದಿದ್ದರೆ ಎರಡನೆಯ ವರಿಗೆ ಇದು ಶಕ್ಯವೆ? ಎಂದು ಆ ಭಗವದ್ಭಕ್ತನನ್ನು ಅಪ್ಪಿಕೊಂಡು ಆನಂದಾಶ್ರುಗಳಿಂದ ಆತನ ಸರ್ವಾಂಗವನ್ನು ತೋಯಿಸುವದಕ್ಕಾಗಿ ತೋಳುಗಳನ್ನು ಮುಂದಕ್ಕೆ ಚಾಚಿ ಶಿವಾಜಿಗೆ ಎಚ್ಚರವಾಗುವ ಹಾದಿಯನ್ನು ನೋಡುತ್ತಿದ್ದರು. ಮಧ್ಯರಾತ್ರಿಯು ಮೀರುತ್ತಿರುವ ಸಂಧಿಯಲ್ಲಿ ಶಿವಾಜಿಯ ಮುಖದಿಂದ ಶಬ್ದಗಳು ಹೊರಬೀಳಹತ್ತಿದವು, ಕೂಡಲೆ ಶ್ರೀಧರಸ್ವಾಮಿಗಳು ಅವನ್ನು ಕಿವಿಗೊಟ್ಟು ಕೇಳಿ ನೆನಪಿನಲ್ಲಿ ಇಟ್ಟುಕೊಂಡರು. ಶಿವಾಜಿಯು ಎಚ್ಚತ್ತು ಸ್ವಾಮಿಗಳನ್ನು ನಮಸ್ಕರಿಸಿ ದೇವಿಯು ಏನೆಂದು ಆಜ್ಞಾಪಿಸಿದಳು ಎಂದು ಕೇಳಲು, ಶ್ರೀಧರಸ್ವಾಮಿಗಳು ಪುಣ್ಯಾತ್ಮನಾದ ಶಿವಬಾ, ದೇವಿಯ ದಿವ್ಯವಾದ ವಾಣಿಯನ್ನು ಕೇಳು, ''ಹಿರಿಯರು ಹಿತಕ್ಕಾಗಿಯೇ ಹೇಳುತ್ತಾರೆ. ನನ್ನ ಕೃಪಾಪ್ರಸಾದವು ಗೊತ್ತಿಲ್ಲದ್ದರಿಂದ ಅವರು ಹಾಗೆ ಮಾತಾಡಿದರು. ಮನಸ್ಸಿಗೆ ಹಚ್ಚಿಕೊಳ್ಳಬಾರದು. ಕೈಯಿಂದ ಪರಾಕ್ರಮದ ಕೆಲಸಮಾಡಿ ತೋರಿಸಿದ ಮೇಲೆ ಹೀಗೆ ಮಾತಾಡರು. ಗೋಬ್ರಾಹ್ಮಣರ ರಕ್ಷಣವಾಗುವಂತೆ ಮಾಡುತ್ತ ಹೋಗೆಂದು ಉಪದೇಶ ಮಾಡುತ್ತ ಹೋದಾರು. ಪ್ರಯತ್ನವನ್ನು ಬಿಡಲಾಗದು. ಮಾಡಿದ ಪ್ರತಿಜ್ಞೆಯು ಬೇಗನೆ ಕೊನೆಗಾಣುವದು. ಸಹಾಯವನ್ನು ಸಂಪಾದಿಸುವದರಲ್ಲಿ ಅಂತರಿ ಸಲಾಗದು. ನನ್ನ ಕೃಪೆಯು ಪೂರ್ಣವಾಗಿರುವದು''

ಈ ಮೇರೆಗೆ ದೇವಿಯ ವಾಣಿಯನ್ನು ಹೇಳಿ ಶ್ರೀಧರಸ್ವಾಮಿಗಳು, ಆಸಕ್ತಿಯಿಂದ ಕಾರ್ಯವನ್ನು ಮಾಡುವದಕ್ಕೆ ಶಿವಾಜಿಯನ್ನು ಪ್ರೋತ್ಸಾಹಿಸಿದರು. ಮೂರು ದಿನ ಉಪೋಷಣ ಮಾಡಿ ದೇವಿಯನ್ನು ಆರಾಧಿಸಿದ ಫಲವು ದೊರೆತದ್ದಕ್ಕಾಗಿ ಶಿವಾಜಿಗೆ ಪರಮ ಸಂತೋಷವಾಯಿತು. ಆತನು ಸೂರ್ಯೋದಯವಾದನಂತರ ಉಪೋಷಣದ ಪಾರಣೆಯನ್ನು ದುಗ್ಧ ಪ್ರಾಶನದಿಂದ ಪೂರ್ಣ ಮಾಡಿದನು. ಏಸಾಜಿಯೇ ಮೊದಲಾದವರ ಸಹಾಯದಿಂದ

ಜನರನ್ನು ಕೂಡಿಸುವ ಕೆಲಸಕ್ಕೆ ಆರಂಭವಾಯಿತು. ಹದಿನೈದು ದಿವಸಗಳಾದರೂ ವಿಜಾಪುರದಿಂದ ಸುದ್ದಿಯು ಬಾರದ್ದೊಂದು ಚಿಂತೆಯು ಅವರನ್ನು ಬಾಧಿಸತೊಡಗಿತು. ಸುದ್ದಿಯು ಯಾಕೆ ಬಂದಿರಲಿಕ್ಕಿಲ್ಲೆಂದು ಅವರು ತರ್ಕವಿತರ್ಕಗಳನ್ನು ಮಾಡುತ್ತಿರಲು, ಅರಣ್ಯದ ಕಟ್ಟಕಡೆಯ ಕಾವಲುಗಾರನು, ಯಾವನೋ ಒಬ್ಬನು ತಮ್ಮನ್ನು ಕಾಣುವದಕ್ಕಾಗಿ ಬಂದಿರುತ್ತಾನೆಂದು ಶ್ರೀಧರಸ್ವಾಮಿಗಳಿಗೆ ಹೇಳಿದನು. ಬಂದವನು ವಿಜಾಪುರದವನೇ ಇರಬೇಕೆಂದು ತಿಳಿದು ಸ್ವಾಮಿಗಳು, ಆತನ ಗುರುತಿನ ಕಠಾರಿಯನ್ನು ನೋಡಿ ಆತನನ್ನು ಕರಕೊಂಡು ಬರಬೇಕೆಂದು ಹೇಳಿದನು. ಕೂಡಲೆ ಕಾವಲುಗಾರನು ಹೊರಟುಹೋಗಿ ಗುರುತಿನ ಕಠಾರಿಯನ್ನು ನೋಡಿ ತಮ್ಮವನೇ ಎಂದು ನಂಬಿಗೆಮಾಡಿಕೊಂಡು ಆತನನ್ನು ಸ್ವಾಮಿಗಳ ಬಳಿಗೆ ಕರತಂದನು. ಬಂದವನು ಸಾಷ್ಟಾಂಗವಾಗಿ ವಂದಿಸಿ ಪತ್ರವನ್ನು ಹಾಕಿದ್ದ ಥೈಲಿಯನ್ನು ಮುಂದೆ ಇಟ್ಟನು; ಅದನ್ನು ನೋಡಿ ಎಲ್ಲರೂ ಪತ್ರದ ಸಂಗತಿಯನ್ನು ತಿಳಕೊಳ್ಳುವ ಕೌತುಕದಿಂದ ಸುಮ್ಮನೆ ಕುಳಿತುಕೊಂಡರು. ಸ್ವಾಮಿಗಳು ಪತ್ರವನ್ನು ಒಡೆದು, ಮೊದಲು ತಾವು ಸಮುಗ್ರ ಪತ್ರವನ್ನು ಓದಿಕೊಂಡರು. ಪತ್ರವನ್ನು ಓದುತ್ತ ಹೋದಂತೆ ಸ್ವಾಮಿಗಳ ಮುಖವು ಕಳೆಗುಂದುತ್ತ ಹೋಯಿತು. ಅದನ್ನು ನೋಡಿ ಅಲ್ಲಿದ್ದವರ ಮುಖಗಳೂ ನಿಸ್ತೇಜವಾದವು. ಸ್ವಾಮಿಗಳು ತಾವು ಎಲ್ಲ ಪತ್ರವನ್ನು ಓದಿಕೊಂಡ ಬಳಿಕ ಮತ್ತೊಮ್ಮೆ ಮೊದಲಿನಿಂದ ಅದನ್ನು ಗಟ್ಟಿಯಾಗಿ ಓದಿದರು. ಅದರಲ್ಲಿ ತಾನಾಜಿಯೇ ಮೊದಲಾದವರು ವಿಜಾಪುರಕ್ಕೆ ಹೋಗಿ ದೆವ್ವನ ಮನೆಯಲ್ಲಿ ಇಳಕೊಂಡಂದಿನಿಂದ, ನಾನಾಸಾಹೇಬನು ಅಕಸ್ಮಾತ್ತಾಗಿ ಇಲ್ಲದ ಹಾಗಾದಾಗಿನವರೆಗಿನ ಯಾವತ್ತು ಸುದ್ದಿಯನ್ನು ಸಾದ್ಯಂತವಾಗಿ ಬರೆದಿತ್ತು. ಅದನ್ನು ಕೇಳಿ ಎಲ್ಲರೂ ಚಿಂತಾಮಗ್ನರಾದರು; ತಾವು ಮಾಡಿದ್ದೇನು, ಆದದ್ದೇನು? ಎಂದು ಅವರು ಬಹಳವಾಗಿ ಅಸಮಾಧಾನಪಟ್ಟರು. ವಿಜಾಪುರದ ಗುರುತು ಚೆನ್ನಾಗಿ ಇದ್ದ ನಾನಾಸಾಹೇಬನೇ ಹೋದದ್ದರಿಂದ, ಉಳಿದವರಿಗೆ ಅಡವಿಯಲ್ಲಿ ಕಣ್ಣುಕಟ್ಟಿ ಬಿಟ್ಟ ಹಾಗೆ ಆಗಿರಬಹುದೆಂದು ಅವರು ಚಿಂತಿಸಿದರು. ನಾನಾಸಾಹೇಬನು ಅಕಸ್ಮಾತ್ತಾಗಿ ಇಲ್ಲದ ಹಾಗಾದದ್ದರ ಗೂಢವು ಯಾರಿಗೂ ತಿಳಿಯದಾಯಿತು. ನಾನಾಸಾಹೇಬನ ಗೊತ್ತು ಹತ್ತದಿದ್ದರೆ. ವಿಜಾಪುರಕ್ಕೆ ಹೋದವರು ಮಾಡುವದಾದರೂ ಏನು? ಅವರಿಗೆ ಏನೆಂದು ಉತ್ತರ ಬರೆಯಬೇಕು? ಅವರ ಯಾವತ್ತು ಸ್ಥಿತಿಯು ತಿಳಿದ ಹೊರತು ಹೀಗೆಯೇ ಮಾಡಿರೆಂದು ಅವರಿಗೆ ಬರೆಯುವದಾದರೂ ಹೇಗೆ? ತಾನಾಜಿಯಂಥ ಬುದ್ಧಿಶಾಲಿಯು ಬಳಿಯಲ್ಲಿಲ್ಲದ ಬಳಿಕ ಹಂಚಿಕೆಯಾದರೂ ಹೇಗೆ ತೋಚಬೇಕು? ಎಂಬಿವೇ ಮೊದಲಾದ ವಿಚಾರಗಳು ಶಿವಾಜಿಯ ಮನಸ್ಸಿನಲ್ಲಿ ಉತ್ಪನ್ನವಾಗಿ, ಆತನು ಏನೂ ತೋಚದೆ ಕುಳಿತು ಕೊಂಡನು; ಆದರೆ ಹೀಗೆ ಮುಂದುಗಾಣದೆ ಬಹಳ ಹೊತ್ತು ಕುಳಿತುಕೊಳ್ಳುವದು ಶಿವಾಜಿಯ ಶೀಲವಾಗಿದ್ದಿಲ್ಲ, ಎಂಥ ಸಂಕಟದಲ್ಲಾದರೂ ಆತನು ಮಾರ್ಗವನ್ನು ಹುಡುಕುತ್ತಿದ್ದನು. ಕ್ಷಣಹೊತ್ತು ಏಕಾಗ್ರವಾಗಿ ಆಲೋಚಿಸಿ ಆತನು ಶ್ರೀಧರಸ್ವಾಮಿಗಳನ್ನು ಕುರಿತು–ಸ್ವಾಮಿಗಳೇ, ಯಾರೋ ಮೋಸದಿಂದ ನಾನಾಸಾಹೇಬನನ್ನು ಸಂಕಟಕ್ಕೆ

ಗುರಿಮಾಡಿದಹಾಗೆ ತೋರುತ್ತದೆ. ಇಂಥ ಪ್ರಸಂಗದಲ್ಲಿ ಇನ್ನೊಬ್ಬರಾರಾದರೂ ಅಲ್ಲಿಗೆ ಹೋಗುವದು ಅವಶ್ಯವು. ಇನ್ನು ಎರಡನೆಯವರು ಯಾರು ಹೋಗಬೇಕು? ನಾನೇ ಹೋಗುವೆನು, ಅನ್ನಲು, ಶ್ರೀಧರಸ್ವಾಮಿಗಳು–ಶಿವಬಾ, ಇದೆಲ್ಲಿಯ ವಿಚಾರವು ನಿನ್ನ ಮನಸ್ಸಿನಲ್ಲಿ ಸೇರಿತು? ನೀನಿದ್ದರೆ ನಾನಾಸಾಹೇಬನಂಥ ಹಲವು ಜನರ ಸಂಗ್ರಹವಾಗ ಬಹುದು. ನೀನೇ ಆಯತವಾಗಿ ಮುಸಲ್ಮಾನರ ಕೈಸೇರಿದರೆ ಉಳಿಯಿರ್ತೇನು? ಇಲ್ಲಿಯವರಗೆ ಮಾಡಿದ್ದೆಲ್ಲ ವ್ಯರ್ಥವಾಗುವದು. ಇನ್ನೊಂದು ಪತ್ರ ಬರುವತನಕ ಹಾದಿಯನ್ನು ನೋಡೋಣ ಎಂದರು. ಅದಕ್ಕೆ ಶಿವಾಜಿಯು–ತಿರುಗಿ ಪತ್ರಬರುವತನಕ ತಡೆಯುವದೆಂದರೆ, ಎಷ್ಟು ದಿನ ತಡೆಯ ಬೇಕಾಗುವದೋ ಏನೋ. ಅಷ್ಟರಲ್ಲಿ ಅವರ ಗತಿಯು ಏನಾಗುವದೆಂಬದನ್ನು ಯಾರು ಹೇಳಬೇಕು? ನನ್ನ ಮಿತ್ರರು ನನ್ನನ್ನು ನಂಬಿ ಸಂಕಟಕ್ಕೆ ಹೆದರದೆ ಬೇಕಾದಂಥ ಕೆಲಸಕ್ಕೆ ಕೈಹಾಕುವರು. ಹೀಗಿರುವಾಗ ಅವರು ಸಂಕಟಕ್ಕೆ ಗುರಿಯಾದ ಪ್ರಸಂಗದಲ್ಲಿ ನಾನು ಸ್ವಸ್ಥವಾಗಿ ಮನೆಯಲ್ಲಿ ಕುಳಿತುಕೊಂಡುಬಿಟ್ಟರೆ, ಹಿಡಿದ ಕಾರ್ಯವು ಕೊನೆಗಾಣುವ ಆಸೆಯನ್ನು ಬಿಡಬೇಕಾಗುವದು. ಪ್ರಸಂಗದಲ್ಲಿ ತಮ್ಮ ಮುಖ್ಯಸ್ಥನು ತಮ್ಮ ಸಲುವಾಗಿ ಪ್ರಾಣವನ್ನಾದರೂ ಕೊಟ್ಟು ಸಹಾಯಮಾಡುವನೆಂಬ ನಂಬಿಗೆಯು ಕೈಕೆಳಗಿನವರಿಗೆ ಇದ್ದ ಹೊರತು, ಹಾಗೂ ಯುದ್ಧದಲ್ಲಿ ತಾನೇ ಮುಂದಾಗುವದಕ್ಕೆ ಮುಖ್ಯನು ಎಂದೂ ಹೆದರುವದಿಲ್ಲೆಂಬ ವಿಶ್ವಾಸವು ಅವರಿಗಿದ್ದ ಹೊರತು, ಕಾರ್ಯದಲ್ಲಿ ಯಶಸ್ಸು ದೊರೆಯ ಲಾರದು. ನನ್ನ ಬೆಂಗಾವಲಿನವರು ಸಂಕಟದಲ್ಲಿ ಬಿದ್ದಿರುವಾಗ, ಅವರ ಬಳಿಗೆ ಹೋಗಿ ಧೈರ್ಯ ಹೇಳುವದು ನನ್ನ ಕರ್ತವ್ಯವಾಗಿರುವದು.

ಈ ಮೇರೆಗೆ ಶಿವಾಜಿಯು ನುಡಿಯುತ್ತಿರಲು, ಅತ್ತ ಸೆರೆಮನೆಯಲ್ಲಿ ನಾನಾ ಸಾಹೇಬನ ಗತಿಯು ಏನಾಯಿತೆಂಬದನ್ನು ವಿಚಾರಿಸೋಣ. ಹಿಂದೆ ನಾನಾಸಾಹೇಬನೂ, ತಾನಾಜಿಯೂ ಕೂಡಿ ಬಾವಾಜಿಯ ವೇಷದಿಂದ ರಣದುಲ್ಲಾಖಾನನ ಮಂದಿರದ ಬಳಿಗೆ ಬರಲು, ಉಪ್ಪರಿಗೆಯ ಕಿಡಿಕಿಯಲ್ಲಿ ನಿಂತಿದ್ದ ಪುರುಷವೇಷಧಾರಿಯಾದ ಚಂದ್ರಾವತಿಯನ್ನು ನೋಡಿ, ತನ್ನ ಹೆಂಡತಿಯೆಂದು ತಿಳಿದು ನಾನಾಸಾಹೇಬನು ಆಶ್ಚರ್ಯಪಡುತ್ತ ಮುಂದಕ್ಕೆ ಹೆಜ್ಜೆಯಿಡಲಾರದೆ ನಿಂತಲ್ಲಿ ನಿಂತು ಆಕೆಯನ್ನು ನೋಡಹತ್ತಿದನೆಂದು ಬರೆದದ್ದನ್ನು ವಾಚಕರು ಮರೆತಿರಲಿಕ್ಕಿಲ್ಲ. ಹೀಗೆ ನಾನಾಸಾಹೇಬನು ತಪ್ಪದೆ ಎರಡು ಮೂರು ದಿನ ಬಂದು ಬಂದು, ಚಂದ್ರಾವತಿಯನ್ನು ನೋಡುತ್ತ ನಿಂತುಕೊಳ್ಳುವದನ್ನು ರಣದುಲ್ಲಾಖಾನನ ಸೇವಕನಾದ ಮಹಮ್ಮದನೆಂಬವನು ನೋಡಿ, ಈತನು ನಾನಾಸಾಹೇಬನೇ ಎಂದು ಗುರುತು ಹಿಡಿದನು. ಮಹಮ್ಮದನು ಬಾಲಬಡಿಯುವ ಸ್ವಭಾವದವನು. ಅವನು ತನ್ನ ಯಜಮಾನನಾದ ರಣದುಲ್ಲಾಖಾನನು ಮನಸ್ಸನ್ನು ಒಲಿಸಿಕೊಳ್ಳುವದಕ್ಕಾಗಿ ಬೇಕಾದಂಥ ನೀಚ ಕೆಲಸ ಮಾಡುವದಕ್ಕೂ ಹಿಂದೆಮುಂದೆ ನೋಡುವಹಾಗಿದ್ದಿಲ್ಲ. ರಣದುಲ್ಲಾಖಾನನು ಪುರುಷವೇಷ ಧಾರಿಯಾದ ಚಂದ್ರಾವತಿಗೆ ಮರುಳಾಗಿ, ಆಕೆಯನ್ನು ಮನೆಯಲ್ಲಿಟ್ಟುಕೊಂಡಿರುವನೆಂಬುದನ್ನು ಆ ಮಹಮ್ಮದನು ಅರಿತಿದ್ದನು. ಈ ಸಂಬಂಧದಿಂದ ಹಿಂದಕ್ಕೆ ರಣದುಲ್ಲಾಖಾನನಿಗೂ,

ಮುಹಮ್ಮದನಿಗೂ, ಸುಲ್ತಾನಗಡದಿಂದ ವಿಜಾಪುರಕ್ಕೆ ಬರುವಾಗ ರಾತ್ರಿ ಆದ ಸಂವಾದವನ್ನು ವಾಚಕರು ನೆನಪಿನಲ್ಲಿಟ್ಟಿರಬಹುದು. ಆ ಮುಹಮ್ಮದನೇ ತನ್ನ ಯಜಮಾನನ ಮನಸ್ಸನ್ನು ಸುಪ್ರಸನ್ನ ಮಾಡಿಕೊಳ್ಳುವದಕ್ಕಾಗಿ ಆತನ ಒಪ್ಪಿಗೆಯನ್ನು ಪಡೆಯದೆ, ತನ್ನ ಸಂಗಡಿಗರೊಡನೆ ರಾತ್ರಿ ದೆವ್ವನ ಮನೆಗೆ ಬಂದು ಹಿಂದೆ ಹೇಳಿದಂತೆ ಮೋಸದಿಂದ ನಾನಾಸಾಹೇಬನ ಕೈಕಾಲು ಕಟ್ಟಿ, ಬಾಯಲ್ಲಿ ಚಂಡು ತುರುಕಿ ಹೊತ್ತುಕೊಂಡು ಬಂದು ನೆಲಮನೆಯಲ್ಲಿ ಚಲ್ಲಿಕೊಟ್ಟಿದ್ದನು. ನಾನಾಸಾಹೇಬನಿಗೆ ಕೈಕಾಲು ಅಲ್ಲಾಡಿಸಲಿಕ್ಕೆ ಸಹ ಬರುವಹಾಗಿದ್ದಿಲ್ಲ. ಮುಹಮ್ಮದನು ನೆಲಮನೆಯ ಬಾಗಿಲು ಇಕ್ಕಿಕೊಂಡು ಹೋದಬಳಿಕ, ನಾನಾಸಾಹೇಬನು ಗುದ್ದಾಡಿ ಕಟ್ಟನ್ನು ಸಡಿಲಿಸಿ ಬಿಚ್ಚಿಕೊಂಡನು. ಆ ನೆಲಮನೆಯನಲ್ಲಿ ಸೂರ್ಯಪ್ರಕಾಶಕ್ಕೆ ಆಸ್ಪದವೇ ಇದ್ದಿಲ್ಲ. ಮಧ್ಯಾಹ್ನದಲ್ಲಿಯೂ ಮಧ್ಯರಾತ್ರಿಯಾಗಿತ್ತೆಂದ ಬಳಿಕ, ಬೆಳಗಾಯಿ ತೆಂಬದೂ ನಾನಾಸಾಹೇಬನಿಗೆ ತಿಳಿಯಲಿಕ್ಕೆ ಮಾರ್ಗವಿದ್ದಿಲ್ಲ. ಆತನು ನೆಲಮನೆಯ ಗೋಡೆಯ ಮೇಲೆಲ್ಲ ಕೈಯಾಡಿಸಿ ನೋಡಿದನು; ಆದರೆ ಬಾಗಿಲ ಸುಳವು ಕೂಡ ಆತನಿಗೆ ಹತ್ತಲಿಲ್ಲ. ಬಾಗಿಲು ಅಷ್ಟು ಹೊದಿಕೆಯಾಗೆ ಕೂಡ್ರಿಸಲ್ಪಟ್ಟಿತ್ತು. ಈ ನೆಲಮನೆಗೆ ಕಿಡಿಕೆಗಳಿದ್ದಿಲ್ಲ. ಇಂಥ ಭಯಂಕರವಾದ ತಾಪದಾಯಕ ಸ್ಥಳದಲ್ಲಿ ನಾನಾಸಾಹೇಬನು ಕೊಳೆಯುತ್ತ ಬಿದ್ದಿರಲು, ಒಬ್ಬ ಸ್ತ್ರೀಯು ನೆಲಮನೆಯ ಬಾಗಿಲು ತೆರೆದು ಒಳಗೆ ಬಂದಳು. ಆಕೆಯು ನಾನಾಸಾಹೇಬನನ್ನು ಕುರಿತು—ಸಾಹೇಬರೇ, ನಿಮಗೆ ಹಸಿವೆಯಾಗಿರಬಹುದಲ್ಲವೆ? ನಾವು ಮುಸಲ್ಮಾನರಾದ್ದರಿಂದ ನಮ್ಮ ಕೈಯೊಳಗಿನ ಅನ್ನವನ್ನು ನೀವು ಉಣ್ಣುವ ಹಾಗಿಲ್ಲ. ಈಗ ಹಣ್ಣುಗಳನ್ನು ತಂದಿದ್ದೇನೆ, ಸ್ವೀಕರಿಸಿರಿ. ನೀರಡಿಕೆಯನ್ನು ಈ ಕಲ್ಲಂಗಡಿಯ ಹಣ್ಣಿನಿಂದ ದೂರಮಾಡಿಕೊಳ್ಳಿರಿ. ಸಂಜೆಯಾಗುತ್ತಲೆ, ಒಬ್ಬ ಮಹಾರಾಷ್ಟ್ರ ಜಾತಿಯ ಹೆಂಗಸಿನ ಕೈಯಿಂದ ಊಟದ ಪದಾರ್ಥಗಳನ್ನು ಸಿದ್ಧಮಾಡಿಸಿಕೊಂಡು ಬರುವೆನು, ಊಟಮಾಡಿರಿ. ನಿಮಗೆ ಪ್ರಾಣಸಂಕಟವು ಒದಗಿದಂತೆ ಆಗಿದ್ದರೂ, ನಾನಿರುವತನಕ ಅಷ್ಟು ಬೆದರಬೇಡಿರಿ, ಎಂದು ಹೇಳಿ ಹಣ್ಣುಗಳನ್ನು ನಾನಾಸಾಹೇಬನ ಮುಂದೆ ಇಟ್ಟಳು. ಅದನ್ನು ನೋಡಿ ನಾನಾಸಾಹೇಬನು ಬೆರಗಾದನು. ನನ್ನ ಮೇಲೆ ಇಷ್ಟು ಅಂತಃಕರಣಮಾಡುವ ಈ ಹೆಂಗಸು ಯಾರಾಗಿರಬಹು ದೆಂದು ಆತನು ಆಲೋಚಿಸುತ್ತ ಆಕೆಯನ್ನು ಕುರಿತು–ಅವ್ವಾ, ನೀನು ಯಾರು? ಸಂಕಟಕಾಲದಲ್ಲಿ ಈ ಪರಿ ಸಹಾಯ ಮಾಡುವ ನಿನಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ನನ್ನ ಮೇಲೆ ನಿನ್ನ ಅಂತಃಕರಣವೇ ನಿಜವಿದ್ದರೆ, ನಾನು ಹಣ್ಣು ತಿನ್ನುವದು ಒತ್ತಟ್ಟಿಗಿರಲಿ, ನಾನು ಕೇಳುವ ಪ್ರಶ್ನಗಳಿಗೆ ಮೊದಲು ಉತ್ತರವನ್ನು ಕೊಡು. ನೀನು ಯಾರು? ನನ್ನನ್ನು ಇಲ್ಲಿ ಸೆರೆಮನೆಯಲ್ಲಿರಿಸಿದವರು ಯಾರು? ಹೀಗೆ ಸೆರೆಮನೆಯಲ್ಲಿಡುವದಕ್ಕೆ ಕಾರಣವೇನು? ನಾನು ಯಾರ ಮನೆಯಲ್ಲಿದ್ದೇನೆ? ಎಂದು ಕೇಳಲು, ಆ ಹೆಂಗಸು–ಸಾಹೇಬರೇ, ಈ ಪ್ರಶ್ನಗಳ ಉತ್ತರವನ್ನು ಈಗ ನಾನು ಕೊಡಲಾರೆನು. ಇಲ್ಲಿ ನಾನು ಬಹಳ ಹೊತ್ತು ನಿಲ್ಲುವಂತೆ ಸಹ ಇಲ್ಲ. ಹೀಗೆ ನಿಮಗೆ ಸಹಾಯಮಾಡುವದನ್ನು ಆ ದುಷ್ಟನು ನೋಡಿದರೆ, ನಿಮ್ಮ ಸಂಗಡ ನನ್ನ ನಾಶವೂ ಆಗುವದರಲ್ಲಿ ಸಂಶಯವಿಲ್ಲ. ಸದ್ಯಕ್ಕೆ ನಾನು ನಿಮಗೆ ಇಷ್ಟೇ ಹೇಳುತ್ತೇನೆ, ನಾನು

ಒಬ್ಬ ಮುಸಲ್ಮಾನ ಸರದಾರನ ಮಗಳ ದಾಸಿಯು, ನನ್ನ ಹೆಸರು ಫಾತಿಮೆಯು. ನನ್ನ ಒಡತಿಯು ನಿಮ್ಮ ಮೇಲೆ ದಯೆತೋರಿದ್ದರಿಂದ, ಆಕೆಯ ಅಪ್ಪಣೆಯಂತೆ ಈ ಹಣ್ಣುಗಳನ್ನು ತಂದಿದ್ದೇನೆ. ನಾನು ಹೇಳಿದಂತೆ ನೀವು ಕೇಳಿದರೆ ಇಂಥ ಭಯಂಕರ ಸ್ಥಳದಿಂದಲೂ ನೀವು ಬಿಡುಗಡೆ ಹೊಂದಬಹುದು. ಕೇಳದಿದ್ದರೆ ಕೆಲವು ದಿನಗಳಲ್ಲಿ ನಿಶ್ಚಯವಾಗಿ ನಿಮ್ಮ ಕೊಲೆಯಾಗುವದು ಎಂದು ಹೇಳಿದಳು.

## ಹೆಣ್ಣಿನ ಹೇಸಿ ಆಸೆ

ಫಾತಿಮೆಯ ಈ ಮಾತುಗಳನ್ನು ಕೇಳಿ ನಾನಾಸಾಹೇಬನು ವಿವೇಕಿಯಾಗಿ ಹಣ್ಣುಗಳನ್ನು ತಿಂದನು. ಹೇಳಿದಂತೆ ರಾತ್ರಿ ಫಾತಿಮೆಯು ಒಬ್ಬ ಮಹಾರಾಷ್ಟ್ರ ಜಾತಿಯ ಹೆಂಗಸಿನ ಕೈಯಿಂದ ಸವಿಯುಣಿಸುಗಳನ್ನು ಬಡಿಸಿಕೊಂಡು ಬಂದಳು. ವಿಷಪ್ರಯೋಗದ ಭಯದಿಂದ ನಾನಾಸಾಹೇಬನು ಮೊದಲು ಉಣ್ಣಲಿಕ್ಕೆ ಸಂಕೋಚಪಟ್ಟರೂ, ಫಾತಿಮೆಯ ಅಂತಃಕರಣದ ಮಾತುಗಳನ್ನು ನಂಬಿ ಉಂಡನು. ಹೀಗೆ ಫಾತಿಮೆಯ ಪ್ರೇಮದ ಉಪಚಾರದಿಂದ ನಾನಾಸಾಹೇಬನು ಕಠಿಣತರವಾದ ಕಾರಾಗೃಹವಾಸದಲ್ಲಿಯೂ ಕೆಲಮಟ್ಟಿಗೆ ಸಮಾಧಾನವನ್ನು ಹೊಂದಿ, ಎರಡು ದಿನಗಳನ್ನು ಕಳೆದನು. ತನ್ನ ಮಿತ್ರರು ಎಷ್ಟು ಚಿಂತಿಸುತ್ತಿರಬಹುದೋ, ಎಂದು ಆತನು ವ್ಯಸನಪಡುತ್ತಲಿದ್ದನು. ತಾನು ಇಂಥಲ್ಲಿ ಇದ್ದೇನೆಂದು ತನ್ನವರಿಗೆ ತಿಳಿಸಲಿಕ್ಕೂ ಆತನಿಗೆ ಮಾರ್ಗವಿಲ್ಲದಾಯಿತು. ತನ್ನನ್ನು ಸೆರೆಯಲ್ಲಿಟ್ಟು ಹೋದ ಬಳಿಕ ಫಾತಿಮೆಯ ಹೊರತು ಉಳಿದವರಾರೂ ತನ್ನ ಬಳಿಗೆ ಬಾರದೆ ಇದ್ದದ್ದು ನಾನಾಸಾಹೇಬನಿಗೆ ವಿಚಿತ್ರವಾಗಿ ತೋರಿತು. ಅತ್ತ ಮಹಮ್ಮದನು ನಾನಾಸಾಹೇಬನನ್ನು ಸೆರೆಯಲ್ಲಿಟ್ಟು ಎರಡು ದಿನಗಳಾದ ಮೇಲೆ, ತನ್ನ ಮಹತ್ಕೃತ್ಯವನ್ನು ತನ್ನ ಯಜಮಾನನಾದ ರಣದುಲ್ಲಾಖಾನನ ಮುಂದೆ ಹೇಳಿ, ಆತನ ಮೆಚ್ಚಿಗೆ ಯನ್ನು ಪಡೆಯಬೇಕೆಂದು ಆತನ ಬಳಿಗೆ ಹೋದನು. ರಣದುಲ್ಲಾಖಾನನು ಜಾತ್ಯಾನೀತಿ ವಂತನೆಂಬದನ್ನು ವಾಚಕರು ಮರೆತಿರಲಿಕ್ಕಿಲ್ಲ; ಆದರೆ ನಾನಾಸಾಹೇಬನ ಹೆಂಡತಿಯಾದ ಚಂದ್ರಾವತಿಯ ರೂಪಕ್ಕೆ ಮೋಹಿತನಾಗಿ ಆತನು ಪಾಪಕೃತ್ಯಕ್ಕೆ ಮನಸ್ಸು ಮಾಡತೊಡಗಿ, ಆ ಪುರುಷವೇಷಧಾರಿಯಾದ ಚಂದ್ರಾವತಿಯನ್ನು ಮನೆಯಲ್ಲಿಟ್ಟು ಕೊಂಡಿದ್ದನು. ಮನುಷ್ಯನ ಮನಸ್ಸು ಒಮ್ಮೆ ಕೆಟ್ಟ ಕೆಲಸದಲ್ಲಿ ತೊಡಗಹತ್ತಿತೆಂದರೆ, ಅದನ್ನು ಜಗ್ಗಿಸಿಕೊಳ್ಳುವದು ದುಸ್ತರವಾಗುತ್ತದೆ. ರಣದುಲ್ಲಾಖಾನನು ಚಂದ್ರಾವತಿಯನ್ನು ಪಾಪದೃಷ್ಟಿ ಯಿಂದ ನೋಡುವದರ ಹೊರತು, ಬೇರೆ ಯಾವ ಪಾಪಕೃತ್ಯಕ್ಕೂ ಇಲ್ಲಿಯವರೆಗೆ ಮನಸ್ಸು ಮಾಡಿದ್ದಿಲ್ಲ. ಆತನು ಚಂದ್ರಾವತಿಯ ಸಂಗಡ ಬಹು ಮರ್ಯಾದೆಯಿಂದ ನಡಕೊಳ್ಳುತ್ತಿದ್ದನು. ತನ್ನ ದುಷ್ಟವಾಸನೆಯು ಸುಳುವನ್ನು ಕೂಡ ಆಕೆಗೆ ಹತ್ತಗೊಟ್ಟಿದ್ದಿಲ್ಲ. ಆದರೂ ಆತನ ಮನಸ್ಸು ಕೆಟ್ಟಿತ್ತು. ಇದನ್ನು ತಿಳಿದು ನೀಚನಾದ ಮಹಮ್ಮದನು ಖಾನನ ಬಳಿಗೆ ಹೋಗಿ

ಖಾವಿಂದ, ಈ ಗುಲಾಮನು ನಿಮ್ಮ ಮನಸ್ಸು ಹಿಗ್ಗುವಂಥ ಕಾರ್ಯವನ್ನು ಮಾಡಿರುತ್ತಾನೆ. ತಾವು ನಾನಾಸಾಹೇಬನ ಹೆಂಡತಿಯಾದ ಚಂದ್ರಾ ವತಿಯ ಮೇಲೆ ಮನಸ್ಸು ಇಟ್ಟಿದ್ದರೂ, ಆಕೆಯ ಉಪಭೋಗಕ್ಕೆ ಆಕೆಯ ಗಂಡನಾದ ನಾನಾ ಸಾಹೇಬನು ಒಂದು ದೊಡ್ಡ ಪ್ರತಿಬಂಧ ವಾಗಿದ್ದಾನೆ. ಆತನನ್ನು ನಿನ್ನೆ ಪರಮಪ್ರಯಾಸದಿಂದ ಸೆರೆಹಿಡಿದು ನೆಲಮನೆಯಲ್ಲಿ ಹಾಕಿದ್ದೇನೆ. ಖಾವಿಂದರು ಸೆರೆಮನೆಯತನಕ ಬಂದು ಕೈಮುಟ್ಟಿ ಆತನನ್ನು ಸಂಹರಿಸಿ ಕಂಟಕವನ್ನು ದೂರಮಾಡಿಕೊಳ್ಳಬೇಕು, ಇಲ್ಲವೆ ಆ ಕಂಟಕವನ್ನು ದೂರಮಾಡಲಿಕ್ಕೆ ನನಗೆ ಅಪ್ಪಣೆಯನ್ನು ಕೊಡಬೇಕು. ಖಾವಿಂದ, ನಾವು ವಂಶಪರಪರೆಯಿಂದ ಸೇವೆ ಮಾಡುತ್ತ ಬಂದವರಾದ್ದರಿಂದ, ಖಾವಿಂದಿರ ಮನಸ್ಸಿನ ತಾಪವನ್ನು ನೋಡಿ ಸೈರಿಸಲಾರದೆ, ಇಷ್ಟು ನಿರ್ಭಯದಿಂದ ಮಾತಾಡಿರುವೆನು ಈ ಅಪರಾಧಕ್ಕಾಗಿ ಕ್ಷಮಿಸಬೇಕು.

ಯಃಕಶ್ಚಿತನಾದ ಒಬ್ಬ ಸೇವಕನು ತನ್ನಂಥ ಯೋಗ್ಯತೆಯ ಸರದಾರನ ಮುಂದೆ ಇಂಥ ನೀಚ ಮಾತುಗಳನ್ನು ಹಿಂದೆ ಮುಂದೆ ನೋಡದೆ ಬಡಬಡ ಆಡಿದ್ದನ್ನು ಕೇಳಿ, ಸ್ವಭಾವತಃ ನೀತಿಗೆ ಮೆಚ್ಚಿದ್ದ ರಣದುಲ್ಲಾಖಾನನಿಗೆ ಬಹಳ ವಿಷಾದವಾಯಿತು. ಆತನು ಕೆಂಪಡರಿದ ಕಣ್ಣುಗಳಿಂದ ಮುಹಮ್ಮದನನ್ನು ನೋಡಿ ಮುಹಮ್ಮದಾ, ಇಂಥ ಅಧಿಕ ಪ್ರಸಂಗಕ್ಕೆ ಹೋಗಬೇಡೆಂದು ನಾನು ಹಿಂದೆಯೊಮ್ಮೆ ನಿನಗೆ ಹೇಳಿದ್ದನ್ನು ನೀನು ಮರೆತಂತೆ ತೋರುತ್ತದೆ. ಇಂತ ನೀಚ ಕೆಲಸವನ್ನು ಮಾಡಲಿಕ್ಕೆ ನಿನಗೆ ಯಾರು ಹೇಳಿದರು? ನಾನಾಸಾಹೇಬನು ಸಾಸವಡದ ಕಡೆಯಲ್ಲಿ ಶಿವಾಜಿಯನ್ನು ಕೂಡಿಕೊಂಡು ಪುಂಡತನವನ್ನು ನಡಿಸಿರಲು, ನೀನು ಅವನನ್ನು ಸೆರೆ ಹಿಡಿದದದ್ದಾರೂ ಹೇಗೆ? ಈ ವಿಚಾರಗೇಡಿತನಕ್ಕಾಗಿ ಈಗಲೇ ನಿನಗೆ ತಕ್ಕ ಶಾಸನ ಮಾಡತಕ್ಕದು; ಆದರೆ ನಿಮ್ಮ ಮನೆತನದವರು ವಿಸ್ವಾಸಪೂರ್ವಕವಾಗಿ ಇಲ್ಲಿಯವರೆಗೆ ನಮ್ಮ ಮನೆತನದ ಚಾಕರಿಯನ್ನು ಮಾಡುತ್ತ ಬಂದಿರುವದರಿಂದ ಕೈಕಾದಿದ್ದೇನೆ, ಎಂದು ಮುಹಮ್ಮದನನ್ನು ತಿರಸ್ಕರಿಸಿದನು; ಆದರೆ ಹೀಗೆ ಆತನು ತನ್ನ ಸೇವಕನನ್ನು ಎಷ್ಟು ತಿರಸ್ಕರಿಸಿದರೂ, ಚಂದ್ರಾವತಿಯಲ್ಲಿ ತನ್ನ ಮನಸ್ಸನ್ನು ಕಿತ್ತಿ ಕೊಳ್ಳಲಿಕ್ಕೆ ಸಮರ್ಥನಾಗಲಿಲ್ಲ. ಆತನು ತನ್ನ ನೀತಿ ತತ್ಪರತೆಗೆ ತಕ್ಕ ಕೆಲಸವನ್ನು ಮಾಡಬೇಕಾಗಿದ್ದರೆ, ಮುಹಮ್ಮದನನ್ನು ತಿರಸ್ಕರಿಸಿದಂತೆ ನಾನಾಸಾಹೇಬನ ಬಳಿಗೆ ಹೋಗಿ ಆತನನ್ನು ಸತ್ಕರಿಸಿ ಕರೆತಂದು ಗಂಡಹೆಂಡಿರನ್ನು ಕೂಡಿಸಿ ಬಾದಶಹನ ಮನಸ್ಸನ್ನು ಪ್ರಸನ್ನೀಕರಿಸಿ, ರಂಗರಾಯನ ಸುಲ್ತಾನಗಡವನ್ನು ರಂಗರಾಯನಿಗೆ ಕೊಡಿಸಬೇಕಾಗಿತ್ತು, ಹೀಗೆ ಮಾಡಿದ್ದರೆ, ಸ್ವಾಮಿ ನಿಷ್ಠೆಗೆ ಒಪ್ಪಬಹುದಾಗಿತ್ತು ಆದರೆ ಚಂದ್ರಾವತಿಗೆ ಮನಸೋತು ಪರಾಧೀನನಾಗಿದ್ದ ರಣದುಲ್ಲಾಖಾನನು ಹಾಗೇನು ಮಾಡದೆ ಮನಸ್ಸಿನಲ್ಲಿ—''ಇನ್ನೆರಡು ದಿನ ನೋಡೋಣ, ಒಮ್ಮೆಲೆ ಚಂದ್ರಾವತಿಯ ದರ್ಶನಕ್ಕೆ ಅಂತರಿಸುವದಾದರೂ ಹೇಗೆ? ಎರಡು ದಿನ ನಾನಾಸಾಹೇಬನು ಸೆರೆಯಲ್ಲಿ ಇರಲೊಲ್ಲನೇಕೆ? ಆ ಸುಂದರ ರೂಪವೂ, ಆ ಮಂಜುಲವಾಣಿಯೂ ಲಭಿಸದಂತಾದರೆ, ನನ್ನ ಮನಸ್ಸು ಸಮಾಧಾನಪಡಲಾರದು, ಎಂದು ಆಲೋಚಿಸಿ ಮುಹಮ್ಮದನಿಗೆ–ಮುಹಮ್ಮದಾ, ಇಂಥ ಕೆಟ್ಟ ಕೆಲಸವನ್ನು ಮಾಡಿ ನನ್ನ ಮನಸ್ಸನ್ನು

ನೋಯಿಸುವ ಅಪರಾಧಕ್ಕೆ ಇನ್ನು ಎಂದೂ ಮನಸ್ಸು ಮಾಡಬೇಡ. ಸದ್ಯಕ್ಕೆ ನಿನ್ನನ್ನು ಕ್ಷಮಿಸಿದ್ದೇನೆ. ನನ್ನ ಎದುರಿಗೆ ನಿಲ್ಲಬೇಡ ನಡೆ. ನನ್ನ ಮನಸ್ಸು ಸಮಾಧಾನವಾದ ಮೇಲೆ ನಿನ್ನನ್ನು ಕರೆಸುವೆನು ಎಂದು ಹೇಳಿದನು. ಇದರಿಂದ ನೀಚನಾದ ಮಹಮ್ಮದನಿಗೆ ಒಂದು ಬಗೆಯ ಉತ್ತೇಜನವೇ ದೊರೆತಂತಾಯಿತು. ಮಹಮ್ಮದನ ರಣದುಲ್ಲಾಖಾನನ ಸೌಜನ್ಯವನ್ನು ಹುಟ್ಟಾಬಲ್ಲವನಾದ್ದರಿಂದಲೇ, ನಾನಾಸಾಹೇಬನನ್ನು ಕೊಲ್ಲಲಿಕ್ಕೆ ಆತನ ಒಪ್ಪಿಗೆಯನ್ನು ಕೇಳಹೋಗಿದ್ದನು; ಮತ್ತು ಇಂಥ ನೀಚಕೃತ್ಯವನ್ನು ಮಾಡಿದರೆ ತನ್ನ ಶಿರಚ್ಛೇದವನ್ನು ಮಾಡಲಿಕ್ಕೂ ತನ್ನ ಯಜಮಾನನು ಹಿಂದೆ ಮುಂದೆ ನೋಡಲಿಕ್ಕಿಲ್ಲೆಂಬ ಭಯವೂ ಆತನಿಗೆ ಪೂರ್ಣವಾಗಿ ಇತ್ತು, ಇಲ್ಲದಿದ್ದರೆ ಆ ದುಷ್ಟನು ನಾನಾಸಾಹೇಬನನ್ನು ಕೊಂದೇ ಖಾನನಿಗೆ ಸುದ್ದಿಯನ್ನು ಹೇಳುತ್ತಿದ್ದನು. ಈ ದಿನ ಖಾನನು ಹೆಚ್ಚಿಗೆ ನಿಷ್ಠುರತನವನ್ನು ತೋರಿಸದೆ, ಸುಮ್ಮನೆ ಲೌಕಿಕಕ್ಕೆ ಸಿಟ್ಟು ಮಾಡಿದ ಹಾಗೆ ಮಾಡಿದ್ದರಿಂದ, ಮಹಮ್ಮದನು ನಾನಾಸಾಹೇಬನನ್ನು ತಾನೇ ಕೈಮುಟ್ಟಿಕೊಂದು ಯಜಮಾನನ ಪ್ರೇಮವನ್ನು ಸಂಪಾದಿಸಿಬೇಕೆಂದು ನಿಶ್ಚಯಿಸಿದನು.

ಮಹಮ್ಮದನ ದುಷ್ಟತನವನ್ನು ವರ್ಣಿಸುವ ಮೊದಲು, ವಾಚಕರಿಗೆ ರಣದುಲ್ಲಾಖಾನನ ಮನೆಯ ಕೆಲವು ಜನರ ಪರಿಚಯಮಾಡಿಕೊಡುವದು ಅವಶ್ಯವಾಗಿ ತೋರುತ್ತದೆ. ರಂಗರಾವ ಅಪ್ಪಾನಿಗೂ, ರಣದುಲ್ಲಾಖಾನನ ತಂದೆಗೂ ಅತ್ಯಂತ ಮಿತ್ರತ್ವವಿದ್ದದ್ದರಿಂದ, ರಣದುಲ್ಲಾಖಾನನ ಕುಟುಂಬದವರು ಆಗಾಗ್ಗೆ ಸುಲ್ತಾನಗಡಕ್ಕೆ ಬಂದು ರಂಗರಾಯನ ಆದರಾತಿಥ್ಯವನ್ನು ಕೈಕೊಳ್ಳುತ್ತಿದ್ದರು. ರಣದುಲ್ಲಾಖಾನನ ತಂಗಿಯಾದ ಮೇಹರ್ಜಾನ ಳೆಂಬವಳು ಅತಿ ರೂಪವತಿಯು. ಆಕೆಯು ಚಿಕ್ಕಂದಿನಿಂದ ನಾನಾಸಾಹೇಬನನ್ನು ಮನಮುಟ್ಟಿ ಪ್ರೀತಿಸುತ್ತಿದ್ದಳು. ಅಥವಾ ಆಕೆಯು ನಾನಾಸಾಹೇಬನ ಗುಣರೂಪಗಳಿಗೆ ಲುಬ್ಧಳಾಗಿದ್ದಳೆಂದು ಹೇಳಿದರೂ ಸಲ್ಲುವದು. ಆಕೆಯು ತನ್ನ ದಾಸಿಯಾದ ಫಾತಿಮೆಯ ಮುಖದಿಂದ ನಾನಾಸಾಹೇಬನು ತನ್ನ ಮನೆಯಲ್ಲಿ ಸೆರೆಯಾಳಾಗಿರುವನೆಂಬದನ್ನು ಕೇಳಿ ವಿಷಾದಪಟ್ಟು, ಆ ಫಾತಿಮೆಯ ಮುಖಾಂತರ ನಾನಾಸಾಹೇಬನ ಯೋಗಕ್ಷೇಮವನ್ನು ತಕ್ಕೊಂಡಳು. ಫಾತಿಮೆಯ ಇತಿಹಾಸವೂ ಕೇಳತಕ್ಕದ್ದಾಗಿರುವದು. ಆಕೆಯು ಮೊದಲು ರಂಗರಾವ ಅಪ್ಪಾನ ಪದರಿನೊಳಗಿನ ಒಬ್ಬ ಮಹಾರಾಷ್ಟ್ರ ಸರದಾರನ ಹೆಂಡತಿಯು. ಮಹಮ್ಮದನು ಆಕೆಯ ಗಂಡನನ್ನು ಕೊಲ್ಲಿಸಿ, ಜುಲುಮೆಯಿಂದ ಆಕೆಯ ಪಾತಿವ್ರತ್ಯ ಭಂಗಮಾಡಿದನು. ಅದರಿಂದ ಫಾತಿಮೆಯು ಕುನುಸು ಇಟ್ಟು, ಮಹಮ್ಮದನ ವಿರುದ್ಧವಾಗಿ ನಾನಾಸಾಹೇಬನಿಗೆ ಸಹಾಯ ಮಾಡಿದಳು. ಆಕೆಯು ಮಹಮ್ಮದನೊಬ್ಬನ ಶಾಸನಕ್ಕಾಗಿಯೇ ಏಕೆ, ಹಿಂದೂ ಹೆಂಗಸರ ಪಾತಿವ್ರತ್ಯ ಭಂಗಮಾಡುವ ದುಷ್ಟ ಮುಸಲ್ಮಾನರ ಶಾಸನಕ್ಕಾಗಿಯೂ ತನ್ನಿಂದಾದಷ್ಟು ಸಹಾಯ ಮಾಡಬೇಕೆಂದು ನಿಶ್ಚಯಿಸಿದಳು. ಅದರಿಂದಲೇ ಆಕೆಯು ಮೇಹರಜಾನಳ ದಾಸಿಯಾಗಿ ಕಾಲಹರಣ ಮಾಡುತ್ತಿದ್ದಳು. ಮಹಮ್ಮದನು ಫಾತಿಮೆಗೆ ತೀರ ಮರುಳಾಗಿದ್ದನು. ಆಕೆಯ ಮನಸ್ಸನ್ನು ಪ್ರಸನ್ನ ಮಾಡಿಕೊಳ್ಳಲಿಕ್ಕೆ ಬೇಕಾದಂಥ ನೀಚ ಕೆಲಸ ಮಾಡಲಿಕ್ಕೂ ಆತನು ಹಿಂದುಮುಂದು ನೋಡುವವನಾಗಿದ್ದಿಲ್ಲ; ಆತನು ಗುಟ್ಟಿನ ಮಾತುಗಳನ್ನೆಲ್ಲ ಫಾತಿಮೆಯು

ಮುಂದೆ ಹೇಳುತ್ತಿದ್ದನು. ತನ್ನ ಮೇಲೆ ಫಾತಿಮೆಯ ಪ್ರೇಮವು ಬಹಳವೆಂದು ಆತನು ಭಾವಿಸಿದ್ದನು. ನಾನಾಸಾಹೇಬನನ್ನು ಈ ದಿನ ಮಧ್ಯರಾತ್ರಿ ಸೆರೆಮನೆಯಲ್ಲಿ ಕೊಲ್ಲುತ್ತೇನೆ, ನೀನು ನನಗೆ ಸಹಾಯ ಮಾಡಬೇಕೆಂದು ಮಹಮ್ಮದನು ನುಡಿದದ್ದನ್ನು ಕೇಳಿ, ಫಾತಿಮೆಯು ಗಾಬರಿಯಾದಳು. ಆಕೆಯು ರಣದುಲ್ಲಾಖಾನನ ಸೌಜನ್ಯವನ್ನು ಅರಿತವಳಾಗಿದ್ದರೂ, ಚಂದ್ರಾವತಿಯೊಬ್ಬಳ ವಿಷಯವಾಗಿ ಆತನು ಪಾಪವಾಸನೆಯುಳ್ಳವನಾಗಿರುವದನ್ನು ನೋಡಿ, ತನ್ನ ಆ ರಣದುಲ್ಲಾಖಾನನಿಗೆ ಮಹಮ್ಮದನ ನೀಚತನವನ್ನು ತಿಳಿಸಲಿಕ್ಕೆ ಆಕೆಯು ಅಂದೇಶಪಟ್ಟಳು. ಮೇಹರಜಾನಳಿಗೂ, ತನ್ನ ಅಣ್ಣನ ಮುಂದೆ ಈ ಮಾತು ಹೇಳುವ ಧೈರ್ಯವಾಗಲಿಲ್ಲ, ಮಧ್ಯರಾತ್ರಿಯಾಗುತ್ತ ಬಂತು. ಮಹಮ್ಮದನು ಫಾತಿಮೆಯನ್ನು ಹುಡುಕ ಹತ್ತಿದನು. ನೆಲಮನೆಯ ಕೀಲಿಯ ಕೈಯು ಫಾತಿಮೆಯ ಬಳಿಯಲ್ಲಿದ್ದದ್ದರಿಂದ, ಮಹಮ್ಮದನು ನಿರುಪಾಯನಾಗಿ ಚಡಪಡಿಸಹತ್ತಿದನು. ಕಡೆಗೂ ಆ ದಿನ ಫಾತಿಮೆಯ ಮಹಮ್ಮದನಿಗೆ ಭೆಟ್ಟಿಯಾಗಲಿಲ್ಲ, ಆದ್ದರಿಂದ ಆತನು ಸಂತಾಪಗೊಂಡರೂ, ಫಾತಿಮೆಯ ಮೇಲೆ ಆತನ ಸಂತಾಪವು ನಡೆಯುವಹಾಗಿದ್ದಿಲ್ಲ, ಮರುದಿವಸ ಫಾತಿಮೆಯು ಭೆಟ್ಟಿಯಾದಾಗ, ನಿನ್ನೆ ಕೆಲಸ ಕೆಡಿಸಿಬಿಟ್ಟೆಯೆಂದು ನುಡಿದು, ಈ ದಿನ ಮಧ್ಯರಾತ್ರಿಗೆ ಸಹಾಯಮಾಡುವೆನೆಂದು ಆಕೆಯಿಂದ ವಚನವನ್ನು ತಕ್ಕೊಂಡನು. ವಚನಕೊಟ್ಟಂತೆ ಮಧ್ಯರಾತ್ರಿಯಲ್ಲಿ ಫಾತಿಮೆಯು ಕೈಯಲ್ಲಿ ಲಾಂದರವನ್ನು ಹಿಡಕೊಂಡು ಮಹಮ್ಮದನೊಡನೆ ನೆಲಮನೆಗೆ ನಡೆದಳು.

ನೆಲಮನೆಯ ಬಾಗಿಲು ತೆರದಕೂಡಲೆ ನಾನಾಸಾಹೇಬನ ಮನಸ್ಸಿನಲ್ಲಿ ಆನಂದ — ಭಯಗಳೆರಡೂ ಉತ್ಪನ್ನವಾದವು. ಫಾತಿಮೆಯು ತನಗೆ ವಚನಕೊಟ್ಟಂತೆ ತನ್ನನ್ನು ಬಂಧಮುಕ್ತಮಾಡಲಿಕ್ಕೆ ಬಂದಳೆಂದು ಕಲ್ಪಿಸಿ ಆತನು ಆನಂದಪಟ್ಟನು. ನೀಚನಾದ ಮಹಮ್ಮದನು ತನ್ನನ್ನು ಕೊಲ್ಲಲಿಕ್ಕೆ ಬಂದನೆಂದು ಕಲ್ಪಿಸಿ ಭಯಪಟ್ಟನು. ಆತನು ಹೀಗೆ ಎರಡು ವಿಕಾರಗಳಿಂದ ಜಾಗರೂಕನಾಗಿ ಅವರಿಬ್ಬರು ಒಳಗೆ ಬರುವದನ್ನು ಆತುರದಿಂದ ನೋಡುತ್ತಿರಲು, ಫಾತಿಮೆಯೂ, ಮಹಮ್ಮದನೂ ಅವನ ಕಣ್ಣಿಗೆ ಬಿದ್ದರು. ಮಹಮ್ಮದನು ಬಿಚ್ಚುಗತ್ತಿಯನ್ನು ಹಿಡಿದಿದ್ದನು. ಫಾತಿಮೆಯು ಕೈಯಲ್ಲಿ ಲಾಂದರವನ್ನು ಹಿಡಿದಿದ್ದಳು. ಮಹಮ್ಮದನು ಫಾತಿಮೆಯ ಕೈಯೊಳಗಿನ ಲಾಂದರವನ್ನು ಇಸಕೊಂಡು, ನಾನಾಸಾಹೇಬನ ಮೋರೆಯನ್ನು ನೋಡುವದಕ್ಕಾಗಿ ಅದನ್ನು ಮೇಲಕ್ಕೆತ್ತಿ ಹಿಡಿಯಲು, ನಾನಾಸಾಹೇಬನು ಲಜ್ಜೆಯಿಂದ ಮುಖವನ್ನು ಬಾಗಿಸಿದನು. ಕೊಲ್ಲುವ ಮೊದಲು ನಾನಾಸಾಹೇಬನ ಮನಸ್ಸಿನ್ನು ನೋಯಿಸಬೇಕೆಂಬ ದುಷ್ಟ ಭಾವನೆಯಿಂದ ಆತನು ನಾನಾಸಾಹೇಬನನ್ನು ಕುರಿತು–ಎಲೇ ಹೇಡಿಯೇ, ಏಳು. ನಿನ್ನನ್ನು ಇಲ್ಲಿ ತಂದು ಚಲ್ಲಿಕೊಟ್ಟಬಳಿಕ ನಿನ್ನ ಸಮಾಚಾರವನ್ನು ತಕ್ಕೊಳ್ಳುವದಕ್ಕೆ ಬರುವದು ಆಗಲಿಲ್ಲ, ಈ ದಿನ ನಿನ್ನ ಸಮಾಚಾರವನ್ನು ಪೂರ್ಣವಾಗಿ ತಕ್ಕೊಂಡು ಬಿಡುತ್ತೇನೆ. ಇಷ್ಟು ದಿವಸ ನಿನ್ನನ್ನು ಸುಮ್ಮನೆ ಹುಳದ ಹಾಗೆ ಇಲ್ಲಿ ಹೊರಳಾಡಗೊಟ್ಟೆನು. ನಾಚಿಕಗೇಡಿಯೇ, ನಿನ್ನ ಹೆಂಡತಿಯು ನಿನ್ನನ್ನೂ, ಮನೆಮಾರುಗಳನ್ನೂ ಬಿಟ್ಟುಬಂದು ರಣದುಲ್ಲಾಖಾನನ ಬಳಿಯಲ್ಲಿ ಇರುತ್ತಿರಲು, ಆ ಖಾನನು ನಿನ್ನನ್ನು ಕೊಲ್ಲಿಸದೆ ಬಿಡುವನೇ? ಏಳು, ಮರಣಕ್ಕೆ ಸಿದ್ಧನಾಗು. ಒಡೆಯರ ಅಪ್ಪಣೆಯಂತೆ ಒಂದೇ ಕಡತದಿಂದ

ನಿನ್ನನ್ನು ಸೈತಾನನ ರಾಜ್ಯಕ್ಕೆ ಕಳಿಸಿಬಿಡುತ್ತೇನೆ, ಅನ್ನಲು, ಹೆಂಡತಿಯ ಪಾತಿವ್ರತ್ಯ ಭಂಗವಾದದ್ದನ್ನು ಕೇಳಿ ನಾನಾಸಾಹೇಬನಿಗೆ ಪರಮಾವಧಿ ವ್ಯಸನವಾಯಿತು. ಆತನ ಕಣ್ಣುಗಳು ಕತ್ತಲುಗೂಡಿಸಿದವು, ಕಿವಿಗಳ ಕೇಳದಾದವು, ಕೈಕಾಲುಗಳಲ್ಲಿಯ ತ್ರಾಣವು ಕುಂದಿತು. ಆತನು ಲಜ್ಜೆಯಿಂದ ತಲೆಬಾಗಿಸಲು, ಮಹಮ್ಮದನು ಮನಸ್ಸಿನಲ್ಲಿ ಆನಂದಪಡುತ್ತ ನಾನಾಸಾಹೇಬನನ್ನು ಮತ್ತಿಷ್ಟು ವ್ಯಥೆಪಡಿಸಬೇಕೆಂದು– ಎಲ್ಲೈ ರಣಹೇಡಿಯೇ, ಚಿಕ್ಕಂದಿನಿಂದ ನಾನು ನಿನ್ನ ಖ್ಯಾತಿಯನ್ನು ಕೇಳುತ್ತ ಬಂದಿದ್ದೇನೆ. ಮುಸಲ್ಮಾನರು ಸ್ವಲ್ಪ ಅಪಮಾನ ಮಾಡಿದರೂ ನಿನಗೆ ಸಹನವಾಗುತ್ತಿದ್ದಿಲ್ಲವಂತೆ. ಮುಸಲ್ಮಾನರ ರಾಜ್ಯವನ್ನು ಕಸಿದುಕೊಳ್ಳು ವದಕ್ಕಾಗಿ ನೀನು ಆ ಲಂಡ ಶಿವಾಜಿಯನ್ನು ಕೂಡಿಕೊಂಡಿರುವೆಯಂತೆ . ಇಂಥ ನೀನು, ನಿನ್ನ ಹೆಂಡತಿಯು ಮುಸಲ್ಮಾನರ ಮನೆಯಲ್ಲಿರುವದನ್ನು ಕೇಳಿ, ಸಿಟ್ಟಿಗೆ ಸಹ ಏಳಲೊಲ್ಲೆಯಲ್ಲ! ಕೈಯಲ್ಲಿ ಬಳೆಯನ್ನಾದರೂ ಇಟ್ಟುಕೊಂಡಿದ್ದರೆ, ನಿನ್ನನ್ನು ಸೆರೆಹಿಡಕೊಂಡು ಬರುವ ಪ್ರಸಂಗವೇ ನನಗೆ ಬರುತ್ತಿದ್ದಿಲ್ಲ.

ಮಹಮ್ಮದನ ಈ ನೀಚತನದ ಮಾತುಗಳನ್ನು ಕೇಳುತ್ತ ಹೋದಂತೆ ನಾನಾಸಾಹೇಬನ ವೃತ್ತಿಯು ಭಯಂಕರವಾಗುತ್ತ ಹೋಯಿತು. ಆತನ ಮೊದಲಿನ ಹತವೀರ್ಯತನವು ಈಗ ಸಂಪೂರ್ಣ ನಷ್ಟವಾಗಿ, ಆತನು ಒಮ್ಮೆಲೆ ಮಹಮ್ಮದನನ್ನು ಕುರಿತು–ಎಲ್ಲೈ ಅಧಮಾಧಮನೇ, ನೋಡಿ ಮಾತಾಡು! ನಾನು ನಿಶ್ಶಸ್ತ್ರನಾಗಿರಲು, ಏಳು ಎಂಟು ಜನರು ಕೂಡಿ ನನ್ನನ್ನು ಮೋಸದಿಂದ ಹಿಡಿದು ಇಲ್ಲಿ ತಂದು ಹಾಕಿದೆವೆಂಬ ಇಷ್ಟೇ ಶೂರತನದಿಂದ ಉಬ್ಬಬೇಡ. ನೀನು ಯಾವ ಉದ್ದೇಶದಿಂದಲೇ ಮಾತಾಡು, ನಿನ್ನ ಮಾತಿನಿಂದ ನನಗೆ ಒಂದು ಬಗೆಯ ಸಮಾಧಾನವೇ ಆಗುತ್ತದೆ. ನನ್ನ ಶತ್ರುವೂ, ನನ್ನ ಸುಖಸರ್ವಸ್ವವನ್ನು ಮಣ್ಣುಗೂಡಿಸಿದವನೂ ಯಾವನೆಂಬದನ್ನು ನಿನ್ನ ಮುಖದಿಂದ ನಾನು ಸ್ಪಷ್ಟವಾಗಿ ಕೇಳಿದೆನು. ನೀನು ನನ್ನ ಮೇಲೆ ಉಪಕಾರಮಾಡಿ ದಂತಾಯಿತು. ಇರಲಿ, ಈಗ ನೀನಾದರೂ ನನ್ನನ್ನು ಕೊಂದು ನಿಷ್ಕಂಟಕ ನಾಗು; ಇಲ್ಲದೆ ನಾನಾದರೂ ನಿನ್ನ ಹೆಣವನ್ನು ನೆಲಕ್ಕೆ ಉರುಳಿಸಿ, ಅದನ್ನು ಕಾಲಿನಿಂದ ಮೆಟ್ಟಿ, ನಿನ್ನ ಆ ದುಷ್ಟನೂ, ಪಾಪಿಯೂ, ವಿಶ್ವಾಸಘಾತಕಿಯೂ ಆದ ರಣದುಲ್ಲಾಖಾನನ ಸೇಡು ತೀರಿಸಿಕೊಳ್ಳುವೆನು. ನನಗೆ ಆ ನೀಚನ ವಿಷಯವಾಗಿ ಮೊದಲೇ ಸಂಶಯವು ಬಂದಿತ್ತು; ಆದರೆ ನಿನ್ನ ಮಾತಿನಿಂದ ಆ ಸಂಶಯದ ನಿವಾರಣವಾಯಿತು. ದುಷ್ಟಾ, ಹೇಡಿಯು ಯಾರು ನೋಡು, ಎಂದವನೇ ಮಹಮ್ಮದನ ಮೇಲೆ ಧುಮುಕಿ ಆತನ ಟೊಂಕಕ್ಕೆ ತೆಕ್ಕೆ ಬಿದ್ದು ಆತನನ್ನು ನೆಲಕ್ಕೆ ಕೆಡವಲುದ್ಯೋಗಿಸಿದನು. ಅಷ್ಟರಲ್ಲಿ ಮಹಮ್ಮದನು ತನ್ನ ಖಡ್ಗವನ್ನು ಎತ್ತಿ ನಾನಾಸಾಹೇಬನನ್ನು ತುಂಡರಿಸುತ್ತಿರಲು, ಎತ್ತಿದ ಅವನ ಕೈ ಎತ್ತಿದ ಹಾಗೆಯೇ ನಿಂತುಬಿಟ್ಟಿತು. ಯಾರೋ ಮಹಮ್ಮದನ ಕೈಯನ್ನು ಉಲುಕಾಡದಂತೆ ಹಿಡಿದುಬಿಟ್ಟಿದ್ದರು. ಅಷ್ಟರಲ್ಲಿ ನಾನಾಸಾಹೇಬನು ಮಹಮ್ಮದನನ್ನು ನೆಲಕ್ಕೆ ಕೆಡವಿ, ಎದೆಯಮೇಲೆ ಕುಳಿತುಕೊಂಡು ಎದೆ ಎದೆ ಗುದ್ದುತ್ತ ಮಾತಾಡು–ಮಾತಾಡು, ಆಗಲಿ ಆಡಿದ ಮಾತುಗಳನ್ನು ಇನ್ನೊಮ್ಮೆ ಆಡು, ನಿನ್ನ ಯಜಮಾನನ ಸಂಬಂಧದಿಂದ ನೀನು ಆಡಿದ

ಮಾತುಗಳು ನಿಜವಷ್ಟೆ? ನೀನು ಅಂದಂತೆ ನನ್ನ ಹೆಂಡತಿಯ ಪಾತಿವ್ರತ್ಯವನ್ನು ಭಂಗ ಪಡಿಸುವಷ್ಟು ನೀಚತನವನ್ನು ಆತನು ಮಾಡಿರುವನೇ? ಮಾತಾಡು– ಮಾತಾಡು, ಎಂದು ಮಹಮ್ಮದನಿಗೆ ಉತ್ತರಕೊಡಲಿಕ್ಕೆ ಅವಕಾಶವು ದೊರೆಯದಂತೆ, ಪ್ರಶ್ನೆಗಳ ಮೇಲೆ ಪ್ರಶ್ನೆಗಳನ್ನು ಮಾಡಹತ್ತಿದನು. ಎದೆಗೆ ಗುದ್ದುವದೂ, ಮೊಣಕಾಲೂರಿ ಅವನನ್ನು ನೆಲಕ್ಕೆ ತಿಕ್ಕುವದೂ ನಡೆದೇ ಇದ್ದವು. ಅಷ್ಟರಲ್ಲಿ ಮಹಮ್ಮದನ ಕೈಯನ್ನು ಹಿಂದಿನಿಂದ ಹಿಡಿದವನು, ಮಹಮ್ಮದನ ಕೈಯೊಳಗಿನ ಖಡ್ಗವನ್ನು ಕಸಕೊಂಡಿದ್ದನು. ಮಹಮ್ಮದನು ಹೇಳಿ ಕೇಳಿ ಸಿಪಾಯಿಯು, ರಣಶೂರನಲ್ಲ. ಆತನು ನಾನಾಸಾಹೇಬನ ಕೈಕಾಲು ಬಿದ್ದು ಪ್ರಾಣವನ್ನು ಉಳಿಸಿ ಕೊಳ್ಳಬೇಕೆಂದು ಮಾಡಿದನು; ಆದರೆ ಆತನಿಗೆ ಉಲುಕಾಡಲಿಕ್ಕೂ, ಬಾಯಿ ಬಿಚ್ಚಿ ಮಾತಾಡಲಿಕ್ಕೂ ಆಸ್ಪದವೇ ದೊರೆಯಲಿಲ್ಲ. ಅವನ ಗಂಟಲು ಗೊರಗುಟ್ಟಹತ್ತಿತ್ತು. ಅದೇ ತನ್ನ ಪ್ರಶ್ನಗಳ ಉತ್ತರವೆಂದು ತಿಳಿದು ನಾನಾಸಾಹೇಬನು ಆ ಅಧಮನನ್ನು ಕೊಂದು ಅಪಕೀರ್ತಿ ಕಟ್ಟಿಕೊಳ್ಳಲಿಕ್ಕೆ ಹೇಸುತ್ತಿರಲು, ಲಾಂದರವನ್ನು ಹಿಡಕೊಂಡು ನಿಂತಿದ್ದ ಒಬ್ಬ ಕರಿಯ ಮನುಷ್ಯನು–ಅಹುದಹುದು, ಆ ನೀಚನಾದ ರಣದುಲ್ಲಾನು ನೀಚತನಕ್ಕೆ ಮನಸ್ಸು ಮಾಡಿದ್ದು ನಿಜವು, ಎಂದು ನುಡಿದನು. ಆದರಿಂದ ನಾನಾಸಾಹೇಬನ ಸಂತಾಪವು ಮತ್ತಿಷ್ಟು ಹೆಚ್ಚಿ, ಆತನು ಮಹಮ್ಮದನನ್ನು ಒಮ್ಮೆ ಕಸುವಿನಿಂದ ಗುದ್ದಿ–ಹೇಡಿಯೇ, ಸಿಪಾಯಿಯಾದ ನಿನ್ನನ್ನು ಕೊಂದು ನನ್ನ ಕೈಯನ್ನು ಅಪವಿತ್ರ ಮಾಡಿಕೊಳ್ಳುವದಿಲ್ಲ ಹೋಗು, ಜೀವದಾನವನ್ನು ಕೊಟ್ಟಿದ್ದೇನೆ ಬದುಕಿಕೋ'' ಎಂದು ಮತ್ತೊಮ್ಮೆ ಮಹಮ್ಮದನ ಎದೆಗೆ ಗುದ್ದಿ ಆತನು ನಿಶ್ಚೇಷ್ಟಿತನಾಗಿ ಬೀಳುವಂತೆ ಮಾಡಿ, ಮೇಲಕ್ಕೆದ್ದು ಆ ಕರಿಯ ಮನುಷ್ಯನೊಡನೆ ನೆಲ ಮನೆಯ ಹೊರಗೆ ಕಾಲನ್ನಿಡುತ್ತಿರಲು, ರಣದುಲ್ಲಾಖಾನನು ಆತನ ಎದುರಿಗೆ ಬಂದನು.

ಚಂದ್ರಾವತಿಗೆ ಮೋಹಿತನಾಗಿದ್ದ ರಣದುಲ್ಲಾಖಾನನು ವಿಕಾರವಶನಾಗಿ ನಾನಾ ಸಾಹೇಬನನ್ನು ಕೂಡಲೆ ಬಂಧಮುಕ್ತಮಾಡಲಿಕ್ಕೆ ತವಕಿಸದಿದ್ದರೂ, ಆತನ ವಿಕಾರದ ಕಸುವು ಕಡಿಮೆಯಾದ ಕೂಡಲೆ ಆತನು ತನ್ನ ನೀಚಕೃತ್ಯಕ್ಕಾಗಿ ಪಶ್ಚಾತ್ತಾಪಪಟ್ಟು, ಮರುದಿವಸ ಮಹಮ್ಮದನನ್ನು ಕರೆಸಿದನು. ಆದರೆ ಎಷ್ಟು ಹುಡುಕಿಸಿದರೂ ಆತನಿಗೆ ಮಹಮ್ಮದನ ಭೇಟಿಯೇ ಆಗಲಿಲ್ಲ. ನಾಲ್ಕು ತಾಸು ರಾತ್ರಿಯಾದರೂ ಭೆಟ್ಟಿಯಾಗದ್ದನ್ನು ನೋಡಿ, ರಣದುಲ್ಲಾಖಾನನು ಗಾಬರಿಯಾದನು. ದುಷ್ಟನಾದ ಮಹಮ್ಮದನು ಪಕ್ಕನೆ ನಾನಾಸಾಹೇಬನ ಕೊಲೆ ಮಾಡಿದರೆ, ಮಹತ್ಪಾಪಕ್ಕೆ ತಾನು ಗುರಿಯಾಗಬೇಕಾದೀತೆಂದು ಬೆದರಿ, ಆ ಸತ್ಯಪರಾಯಣನು ನಾನಾಸಾಹೇಬನನ್ನು ಬಂಧ ಮುಕ್ತಮಾಡಿ, ಆತನ ಹೆಂಡತಿಯನ್ನು ಆತನಿಗೆ ಒಪ್ಪಿಸಿ, ಆಕೆಯ ಯೋಗ್ಯತೆಯು ಎಷ್ಟು ದೊಡ್ಡದಿರುವದೆಂಬದನ್ನು ಪ್ರಾಂಜಲ ಮನಸ್ಸಿನಿಂದ ಆತನಿಗೆ ಹೇಳಿ, ತಾನು ನಿರ್ದೋಷಿಯಾಗಬೇಕೆಂಬ ಸದುದ್ದೇಶದಿಂದ ಅಲ್ಲಿಗೆ ಬಂದಿದ್ದನು. ರಣದುಲ್ಲಾಖಾನನು ನಾನಾಸಾಹೇಬನ ಕಣ್ಣಿಗೆ ಬಿದ್ದಕೂಡಲೆ ಆ ತರುಣ ಮಹಾರಾಷ್ಟ್ರನ ಮನಸ್ಸು ಹೇಗಾಗಿರಬಹುದೆಂಬದನ್ನು ವಾಚಕರೇ ತರ್ಕಿಸಬಹುದು. ತನ್ನ ಸುಖವನ್ನು ಹಾಳುಮಾಡಿದ ರಣುದಲ್ಲಾಖಾನನ ಸೇಡುತೀರಿಸಿಕೊಳ್ಳದೆ ಬಿಡಲಿಕ್ಕಿಲ್ಲೆಂದು ಇದೇ

ಈಗ ಪ್ರತಿಜ್ಞೆ ಮಾಡಿದ್ದ ನಾನಾಸಾಹೇಬನು, ಖಾನನನ್ನು ನೋಡಿದ ಕೂಡಲೆ ಸಂತಪ್ತನಾಗಿ "ಒಂದು ಕಡತ ಎರಡು ತುಂಡು" ಎನ್ನುವಂತೆ ಮಾಡಿಬಿಡಬೇಕೆಂದು ತನ್ನ ಸಹಾಯ ಕರ್ತೃವಾದ ಆ ಕರಿಯ ಮನುಷ್ಯನ ಕೈಯೊಳಗಿದ್ದ ಮಹಮ್ಮದನ ಖಡ್ಗಕ್ಕೆ ಕೈ ಹಾಕಿದನು; ಆದರೆ ಆ ಕರಿಯ ಮನುಷ್ಯನು ನಾನಾಸಾಹೇಬನಷ್ಟು ಸಂತಪ್ತನಾಗದೆ ಇದ್ದದ್ದರಿಂದ, ಆತನು ನಾನಾಸಾಹೇಬನಿಗೆ ಖಡ್ಗವನ್ನು ಕೊಡದೆ, ಆತನನ್ನು ಸ್ವಲ್ಪ ಹಿಂದಕ್ಕೆ ಜಗ್ಗಿಕೊಂಡು—"ಸ್ವಲ್ಪ ತಡೆ, ಇದು ತಕ್ಕ ಸ್ಥಳವಲ್ಲ, ತಕ್ಕ ಕಾಲವೂ ಅಲ್ಲ" ಎಂದು ಹೇಳಿದನು. ಇದನ್ನೆಲ್ಲ ನೋಡಿ ರಣದುಲ್ಲಾಖಾನನ ಸ್ಥಿತಿಯು ಏನಾಗಿರಬಹುದೆಂಬದನ್ನು ವಾಚಕರೇ ತರ್ಕಿಸಬಹುದು. ನಾನಾಸಾಹೇಬನು ಜೀವದಿಂದಿರುವದನ್ನು ನೋಡಿ, ತಾನು ದೊಡ್ಡ ಅಪವಾದದಿಂದಲೂ, ಪಾಪದಿಂದಲೂ ಮುಕ್ತನಾದದ್ದಕ್ಕಾಗಿ ಖಾನನು ಸಮಾಧಾನಪಟ್ಟನು. ಆತನ ಮನಸ್ಸಿನ ದೊಂದು ಚಿಂತೆಯು ದೂರವಾದಂತಾಯಿತು. ಆತನು ನಾನಾ ಸಾಹೇಬನ ಬಳಿಗೆ ಹೋಗಿ ನಾಲ್ಕು ಸವಿಮಾತುಗಳನ್ನಾಡಿ ಆತನನ್ನು ಸತ್ಕರಿಸಬೇಕೆಂದು ಯೋಚಿಸಿ, ಕೂಡಲೆ ನಾನಾಸಾಹೇಬನನ್ನು ಕರೆದು, ಸವಿಮಾತುಗಳನ್ನು ಆಡತೊಡಗಿದನು. ತನ್ನ ತಂದೆಯನ್ನು ಮೋಸಗೊಳಿಸಿ ವಿಜಾಪುರಕ್ಕೆ ಕರೆತಂದು, ತನ್ನ ಸುಖವನ್ನು ಹಾಳುಮಾಡಿ ಈಗ ಸವಿಮಾತು ಗಳನ್ನು ಆಡುತ್ತಾನೆಂದು ಸಂತಾಪದಿಂದ ನಾನಾಸಾಹೇಬನು ಒಮ್ಮೆಲೆ ರಣದುಲ್ಲಾಖಾನನ ಕುರಿತು–ಎಲೈ ಸೈತಾನನೇ, ಈಗ ಸುಮ್ಮನೆ ನನ್ನನ್ನು ಹೋಗಗೊಡು; ನಿನ್ನ ಕೆಟ್ಟ ಕೆಲಸಗಳೆಲ್ಲ ನನಗೆ ಗೊತ್ತಾಗಿವೆ. ನಿನ್ನ ಸೇವಕನಾದ ಮಹಮ್ಮದನೇ ನನಗೆ ಹೇಳಿದ್ದಾನೆ. ಈಗ ನನ್ನನ್ನು ನೀನು ಸುಮ್ಮನೆ ಹೋಗಗೊಟ್ಟರೆ, ನಾನೂ ನೀನೂ ಇನ್ನೂ ಕೆಲವು ದಿನ ಭೂಮಿಯಲ್ಲಿ ಬದುಕಿರಬಹುದು. ಇಲ್ಲದಿದ್ದರೆ ನಿನ್ನನ್ನು ನಾನು ಈಗ ಕೊಲ್ಲುವೆನು, ಆಮೇಲೆ ನಿನ್ನ ಮನೆಯಲ್ಲಿ ಸಿಕ್ಕಿರುವ ನನ್ನನ್ನು ನಿಮ್ಮವರು ಕೊಲ್ಲುವರು. ನಾನು ಒಬ್ಬನೇ ಇರುತ್ತೇನೆ. ನಿನ್ನಲ್ಲಿ ಏನಾದರೂ ಪ್ರಾಮಾಣಿಕತನವು ಇದ್ದರೆ, ಮತ್ತು ನಿನ್ನ ತಂದೆಯ ಸದ್ಗುಣಗಳು ಸ್ವಲ್ಪ ಮಟ್ಟಿಗಾದರೂ ನಿನ್ನಲ್ಲಿ ಇದ್ದರೆ ಈಗ ನನ್ನನ್ನು ಸುಮ್ಮನೆ ಹೋಗಗೊಡು. ಇಲ್ಲಿಯವರೆಗೆ ನೀನು ನನ್ನ ಅಪಮಾನ ಮಾಡಿರುವದನ್ನು ನೆನಿಸಿದರೆ, ನೀನು ಕಣ್ಣಿಗೆ ಬಿದ್ದಕೂಡಲೆ ನಿನ್ನ ರಕ್ತದಿಂದ ನಾನು ಸ್ನಾನ ಮಾಡಬೇಕಾಗಿತ್ತು; ಆದರೆ ಇದು ಹೊತ್ತು ಅಲ್ಲ. ಮಹಾರಾಷ್ಟ್ರದ ಹೆಂಡಿರೆಂದರೆ ನಿಮಗೆ ಆಟಿಕೆಯ ಸಾಮಾನುಗಳಾಗಿದ್ದಾರೆ; ಆದರೆ ಈ ಸಾರೆ ನೀನು ಯಾರ ಗೊಡವಿಗೆ ಹೋಗಿರುತ್ತೀ, ಯಾವ ಕೃಷ್ಣ ಸರ್ಪದ ಬಾಲವನ್ನು ಹಿಡಿದು ಜಗ್ಗಿರುತ್ತೀ ಎಂಬದರ ವಿಚಾರಮಾಡು. ಒಂದಿಲ್ಲೊಂದು ದಿನ ಸಮರಾಂಗಣದಲ್ಲಿ ನೀನು ನನಗೆ ಭೆಟ್ಟಿಯಾದರೆ, ದುಷ್ಟಾ, ನೀನು ಮಾಡಿದ ಮಾನಖಂಡನದ ಪರಿಮಾರ್ಜನವನ್ನು ನಿನ್ನ ಹಿಂಡದಿಂದ ಹೊರಸೂಸುವ ರಕ್ತದಿಂದ ಹೇಗೆ ಮಾಡಿಕೊಳ್ಳುತ್ತೇನೆಂಬುದರ ಪ್ರತ್ಯಕ್ಷ ಅನುಭವವು ನಿನಗೆ ಆಗದಿದ್ದರೂ ಜಗತ್ತಿಗೆ ಆಗುವದು.

ಈ ಮೇರೆಗೆ ನುಡಿದು ಸಂತಾಪದಿಂದ ನಡಗುತ್ತ ನಿಂತಿದ್ದ ನಾನಾಸಾಹೇಬನ ಶರೀರಕ್ಕೂ, ಮನಸ್ಸಿಗೂ ಆಧಾರವಾಗಿದ್ದ ಆ ಕರಿಯಮನುಷ್ಯನು ನಾನಾ ಸಾಹೇಬನನ್ನು

ಕರಕೊಂಡು ಹೋಗಲಿಕ್ಕೆ ಪ್ರಯತ್ನಪಡುತ್ತಿರಲು, ಇಷ್ಟು ಹೊತ್ತಿಗೆ ಆಗಿರುವದನ್ನೇನೂ ಅರಿಯದ ರಣದುಲ್ಲಾಖಾನನು ಚಕಿತನಾಗಿ ಸ್ವಲ್ಪ ಹೊತ್ತು ಸುಮ್ಮನೆ ನಿಂತುಕೊಂಡು ಆ ಮೇಲೆ ನಾನಾಸಾಹೇಬನನ್ನು ಕುರಿತು–ಏನು? ನಾನು, ನಿನ್ನ ಸುಖವನ್ನು ಹಾಳುಮಾಡಿದೆನೆ? ನಿನ್ನ ಮಾನ ಖಂಡನವನ್ನು ಮಾಡಿದೆನೆ? ನಿಮ್ಮ ತಂದೆಯನ್ನು ಮೋಸದಿಂದ ಇಲ್ಲಿಗೆ ಕರತಂದೆನೆನ್ನುತ್ತೀಯಾ? ಅಪ್ಪಾ, ನಾನು ನಿನ್ನ ತಂದೆಯನ್ನು ಕರಕೊಂಡುಬಾರದಿದ್ದರೆ, ಇಷ್ಟು ಹೊತ್ತಿಗೆ ಆತನ ಗತಿಯು ಏನಾಗುತ್ತಿತ್ತೆಂಬದರ ಕಲ್ಪನೆಯಾದರೂ ನಿನಗೆ ಇರುವದೋ? ನಾನು ನಿನ್ನ ಸುಖದಲ್ಲಿ ಮಣ್ಣು ಗೂಡಿಸಿದೆನೆ? ಈ ದುಷ್ಟ ಭಾವನೆಯನ್ನು ನಿನ್ನಲ್ಲಿ ಯಾರು ಉಂಟುಮಾಡಿದರು?.... ಎಂದು ನುಡಿಯುವಾಗ, ಕಡೆಯ ಮಾತಿನಲ್ಲಿ ರಣದುಲ್ಲಾಖಾನನ ನಾಲಿಗೆಯು ಕುಗ್ಗಹತ್ತಿತು. ಅದನ್ನು ನೋಡಿ ನಾನಾಸಾಹೇಬನ ಸಂತಾಪವು ಹೆಚ್ಚಿ, ಆತನ ಮುಖದಿಂದ ಅಕ್ಷರಗಳು ಹೊರಡದಾದವು. ಆತನ ತುಟಿಯು ಮಾತ್ರ ನಡಗುತ್ತಿತ್ತು. ಆತನ ಸಹಾಯಕರ್ತೃವಾದ ಪುರುಷನು ರಣುದಲ್ಲಾಖಾನನನ್ನು ಕುರಿತು–ರಣದುಲ್ಲಾಖಾನಾ, ಪಾಪಕೃತ್ಯವು ನಿನ್ನ ಮನಸ್ಸಿನಲ್ಲಿ ಕಟಿಯುತ್ತಿರುವದರಿಂದ, ನಿನ್ನ ನಾಲಿಗೆಯೂ ಕೂಡ ಕುಗ್ಗುತ್ತದಲ್ಲ! ನಿನ್ನಲ್ಲಿ ಮನುಷ್ಯತ್ವವೇನಾದರೂ ಇದ್ದರೆ, ಈತನನ್ನು ಈಗ ಸುಮ್ಮನೆ ಹೋಗಗೊಡು. ಒಬ್ಬ ದುಷ್ಟನಿಂದ ಈತನು ಸಂಸಾರಸುಖಕ್ಕೆ ಅಂತರಿಸಿರುವಂತೆ, ಮತ್ತೊಬ್ಬ ದುಷ್ಟನಿಂದ ನಾನೂ ಸಂಸಾರಸುಖಕ್ಕೆ ಅಂತರಿಸಿರುತ್ತೇನೆ. ಒಂದಿಲ್ಲೊಂದು ದಿನ ನಾವಿಬ್ಬರೂ ನಮ್ಮ ವೈರಿಗಳ ಸೇಡುತೀರಿಸಿಕೊಳ್ಳದೆ ಬಿಡುವದಿಲ್ಲ, ಎಂದು ನುಡಿದು, ತನ್ನ ಕೈಯೊಳಗಿನ ಖಡ್ಗವನ್ನು ನೆಗವಿದನು. ಅದನ್ನು ನೋಡಿ ರಣದುಲ್ಲಾಖಾನನು ಆಶ್ಚರ್ಯಪಡುತ್ತಿರಲು, ಮೇಹರಜಾನಳ ಮಂಜುಳ ಸ್ವರವು ಅವನ ಕಿವಿಗೆ ಬಿದ್ದಿತು. ಕೂಡಲೆ ಖಾನನು ಹಿಂದಿರುಗಿ ನೋಡುತ್ತಾನೆ, ತನ್ನ ತಂಗಿಯಾದ ಮೇಹರಜಾನಳು ಫಾತಿಮೆಯ ಮೇಲೆ ಮೈಭಾರವನ್ನು ಹಾಕಿ ಅಲ್ಲಿ ನಿಂತಿದ್ದಳು! ಆಕೆಯನ್ನು ನೋಡಿದ ಕೂಡಲೆ ರಣದುಲ್ಲಾಖಾನನ ಮುಖದಿಂದ— ''ಏನು! ಮೇಹೇರಜಾನ, ನೀನು ಇಲ್ಲಿ ಹೇಗೆ ಬಂದೆ?'' ಎಂದು ಪ್ರಶ್ನಮಾಡಿದನು. ತನ್ನ ಅಣ್ಣನು ಇಲ್ಲಿಗೆ ಬಂದಿದ್ದಾನೆಂಬ ಕಲ್ಪನೆ ಕೂಡ ಮೇಹೇರಜಾನಳಿಗೆ ಇದ್ದಿಲ್ಲ, ತನ್ನ ಪ್ರೀತಿಗೆ ಪಾತ್ರನಾದ ನಾನಾಸಾಹೇಬನ ಸಂಗಡ ಎರಡು ಉಪಚಾರದ ಮಾತುಗಳನ್ನಾಡಿ, ಆತನನ್ನು ಸಮಾಧಾನಗೊಳಿಸಬೇಕೆಂಬ ಪ್ರೀತಿಯಿಂದ ಆಕೆಯು ಅಲ್ಲಿಗೆ ಬಂದಿದ್ದಳು. ಮೇಹರ್ಜಾನಳೂ, ಫಾತಿಮೆಯೂ ರಣದುಲ್ಲಾಖಾನನನ್ನು ಆಕಸ್ಮಿಕವಾಗಿ ನೋಡಿ ಗಾಬರಿ ಯಾದರು. ಅವರ ಮುಖದಿಂದ ಅಕ್ಷರಗಳೇ ಹೊರಡಲೊಲ್ಲವು. ರಣದುಲ್ಲಾಖಾನನ ಪ್ರೇಮವು ಮೇಹೇರಜಾನಳ ಮೇಲೆ ವಿಶೇಷವಾಗಿ ಇತ್ತು, ಆತನು ಸ್ವಪ್ನದಲ್ಲಿ ಕೂಡ ಆಕೆಗೆ ಸಿಟ್ಟು ಮಾಡಿದ್ದಿಲ್ಲ, ಈ ದಿನ ಆತನ ಮನಸ್ಸಿನಲ್ಲಿ ವಿಚಿತ್ರವಾದ ಸಂಶಯವುಂಟಾದದ್ದರಿಂದ ಆತನು ಸ್ವಲ್ಪ ಸಿಟ್ಟಿನಿಂದ—''ಮೇಹೇರಜಾನ, ನನ್ನ ಪ್ರಶ್ನಕ್ಕೆ ನಿನ್ನಿಂದ ಉತ್ತರ ಬರಲಿಲ್ಲ'' ಅನ್ನಲು, ಅಷ್ಟೇ ಮಾತಿನಿಂದ ಬೆದರಿ ಬೆಂಡಾದ ಮೇಹೇರಜಾನಳು ಗಡಗಡನೆ ನಡಗುತ್ತ ಮೈಮರೆತು ದೊಪ್ಪನೆ ನೆಲಕ್ಕೆ ಬಿದ್ದಳು. ಅದನ್ನು ನೋಡಿ ರಣದುಲ್ಲಾಖಾನನಿಗೆ ವಿಷಾದ

ವಾಯಿತು. ಆತನು ಫಾತಿಮೆಯ ಸಹಾಯದಿಂದ ತಂಗಿಯನ್ನು ಒಳಗೆ ಕರೆದೊಯ್ದು ಮಲಗಿಸಲು, ಆಕೆಗೆ ಭಯಂಕರವಾದ ಜ್ವರಬಂದವು. ಈ ಗದ್ದಲದಲ್ಲಿ ನಾನಾಸಾಹೇಬನು ತನ್ನ ಸಹಾಯ ಕರ್ತೃವಾದ ಪುರುಷನೊಡನೆ ನಿರಾತಂಕವಾಗಿ ತನ್ನ ದೆವ್ವನ ಮನೆಗೆ ಹೋಗಿ ತನ್ನ ಮಿತ್ರರನ್ನು ಕೂಡಿಕೊಂಡನು.

## ಸೌಜನ್ಯ ಪ್ರಭಾವ

ಆ ಕರಿಯ ಮನುಷ್ಯನು ನಾನಾಸಾಹೇಬನನ್ನು ಕರಕೊಂಡು ಅಕಸ್ಮಾತ್ತಾಗಿ ಬಂದದ್ದನ್ನು ನೋಡಿ, ತಾನಾಜಿಗೆ ಪರಮಾಶ್ಚರ್ಯವಾಯಿತು. ತಾನು ಎಚ್ಚತ್ತಿರುವೆನೋ, ತನಗೆ ಸ್ವಪ್ನವು ಬಿದ್ದಿರುವದೋ ಎಂಬ ಬಗ್ಗೆ ಆತನಿಗೆ ಸಂಶಯವು ಉತ್ಪನ್ನವಾಯಿತು. ಆತನು ತನ್ನ ಎರಡೂ ಕೈಗಳನ್ನು ಮುಂದಕ್ಕೆ ಚಾಚಿ, ಅವರಿಬ್ಬರ ಕೈಗಳನ್ನು ಗಟ್ಟಿಯಾಗಿ ಹಿಡಕೊಂಡು ಆನಂದ ಭಾಷ್ಪಗಳು ಉದುರುತ್ತಿರಲು, ಅವರನ್ನು ಎವೆಯಿಕ್ಕದೆ ನೋಡತೊಡಗಿದನು. ಆ ಕರಿಯ ಮನುಷ್ಯನು ರಂಭಾವತಿಯ ಗಂಡನಾದ ರಾಮದೇವನೆಂಬದು ವಾಚಕರ ಲಕ್ಷದಲ್ಲಿ ಬಂದಿರಬಹುದು. ರಾಮದೇವನು ಇನ್ನು ಮೂರು ದಿನಗಳಲ್ಲಿ ನಿನ್ನನ್ನು ಕಾಣುತ್ತೇನೆಂದು ನಾನಾಸಾಹೇಬನಿಗೆ ಅಂದು ಹೇಳಿಹೋದವನು ತಿರುಗಿ ಬಂದಿದ್ದಿಲ್ಲ, ಅವನೇ ಬಂದನೆಂದು ತಿಳಿದು ನಾನಾಸಾಹೇಬನು ಮನೆಬಿಟ್ಟು, ಮಧ್ಯರಾತ್ರಿಯಲ್ಲಿ ಹೊರಗೆ ಹೋದದ್ದರಿಂದ, ಆತನು ಮಹಮ್ಮದನ ಸೆರೆಯಾಳಾಗಬೇಕಾಯಿತು. ಮುಂದೆ ಎರಡು ದಿನಗಳ ಮೇಲೆ ರಾಮದೇವನು ಆ ದೆವ್ವನ ಮನೆಗೆ ಬಂದು, ತಾನಾಜಿಯನ್ನು ಕಂಡು ನಾನಾಸಾಹೇಬನ ಸುದ್ದಿಯನ್ನು ಕೇಳಲು, ತಾನಾಜಿಯು ರಾಮದೇವನ ಮೇಲೆಯೇ ಸಂಶಯವನ್ನು ತೆಗೆದುಕೊಂಡು, ಆತನೊಡನೆ ಗುಟ್ಟುಕೊಟ್ಟು ಮಾತಾಡಲಿಲ್ಲ. ಆಗ ರಾಮದೇವನು ತಾನಾಜಿಗೆ–ನೀವು ಸಂಶಯಪಡುವದು ಆಶ್ಚರ್ಯವಲ್ಲ; ಆದರೆ ನಿಮಗೆ ನಾನು ಪ್ರತಿಜ್ಞೆಯಿಂದ ಹೇಳುತ್ತೇನೆ, ಇನ್ನು ಮೂರು ದಿನಗಳೊಳಗೆ ನಾನಾಸಾಹೇಬನನ್ನು ಕರಕೊಂಡು ಬರುವೆನು, ಅಲ್ಲಿಯವರೆಗೆ ನೀವು ಈ ಸ್ಥಳ ಬಿಟ್ಟು ಕದಲಲಾಗದು, ಎಂದು ಹೇಳಿ, ತಟ್ಟನೆ ಹೊರಟುಹೋಗಿದ್ದನು. ರಾಮದೇವನು ಸಾಮಾನ್ಯ ಮನುಷ್ಯನಿದ್ದಿಲ್ಲ, ಆತನು ಎರಡು ದಿನಗಳೊಳಗೆ ನಾನಾಸಾಹೇಬನು ಇರುವ ಸ್ಥಳದ ಗೊತ್ತು ಹಚ್ಚಿ, ಫಾತಿಮೆಯ ಗುರುತುಮಾಡಿಕೊಂಡನು. ಪರಸ್ತ್ರೀಲಂಪಟರಾದ ನೀಚರ ಶಾಸನಕ್ಕೆ ತನ್ನಿಂದಾದಷ್ಟು ಸಹಾಯ ಮಾಡುವೆನೆಂದು ಫಾತಿಮೆಯು ನಿಶ್ಚಯಮಾಡಿದ್ದರಿಂದ, ಆಕೆಯು ರಾಮದೇವನನ್ನು ಗುಪ್ತರೀತಿಯಿಂದ ಒಳಗೆ ಕರಕೊಂಡಿದ್ದಳು. ಅಂತೇ ನಾನಾಸಾಹೇಬನ ಮೇಲೆ ಖಡ್ಗವನ್ನು ಪ್ರಯೋಗಿಸಲಿಕ್ಕೆ ಎತ್ತಿದ ಮಹಮ್ಮದನ ಕೈಯನ್ನು ಹಿಡಿದು ನಿಲ್ಲಿಸಲಿಕ್ಕೆ ರಾಮದೇವನಿಗೆ ಅನುಕೂಲವಾಯಿತು. ರಾಮದೇವನು ತನ್ನ ಗುಪ್ತ ವೃತ್ತಾಂತವನ್ನು ತಾನಾಜಿಯೇ ಮೊದಲಾದವರಿಗೆ ಹೇಳಿದ್ದರಿಂದ, ಅವರು ಆತನನ್ನು ತಮ್ಮ

ಮಿತ್ರನೆಂದು ಭಾವಿಸಿದರು. ತಾನಾಜಿಯಂತು ರಾಮದೇವನ ಉಪಕಾರವನ್ನು ಯಾವ ಬಗೆಯಿಂದ ತೀರಿಸಬೇಕೆಂಬದನ್ನು ತಿಳಿಯದಾದನು. ನಾನಾಸಾಹೇಬನು ತನ್ನ ಸೆರೆಮನೆಯ ವೃತ್ತಾಂತವನ್ನು ಹೇಳುವಾಗ, ಅವನ ಕಣ್ಣುಗಳು ಕೆಂಡದಂತಾದವು. ಆತನು ತಾನಾಜಿಯನ್ನು ಕುರಿತು—ತಾನಾಜೀ, ಇಂಥ ನೀಚನ ಸೇಡು ತೀರಿಸಿಕೊಳ್ಳದೆ ಹೇಗೆ ಬಿಡಲಿ? ನಾನಾಗಿ ಶಿವಾಜಿಯವರ ಪದರಿಗೆ ಬಿದ್ದಿರುವದರಿಂದ, ಏನಿಲ್ಲೆಂದರೂ ಸುಲ್ತಾನಗಡವು ಅವರ ಕೈಸೇರುವವರೆಗಾದರೂ ನಾನು ಅವರ ಸೇವೆಯಲ್ಲಿರುತ್ತೇನೆ. ಆಮೇಲೆ ಆ ನೀಚ ರಣದುಲ್ಲಾಖಾನನ ಸಮಾಚಾರವನ್ನು ತಕ್ಕೊಳ್ಳುವದಕ್ಕೆ ತಿರುಗಿ ನಾನು ವಿಜಾಪುರಕ್ಕೆ ಬರುವೆನು. ಆ ದುಷ್ಟನಿಗೆ ತಕ್ಕ ಶಾಸನ ಮಾಡದಿದ್ದರೆ ನಾನು ಕುಲಾಂಗಾರನೂ, ಹೇಡಿಯೂ, ಮಹಾರಾಷ್ಟ್ರರ ಶೀಲಕ್ಕೆ ಕಲಂಕವನ್ನುಂಟುಮಾಡುವವನೂ ಆದೇನು. ನಾಳೆ ಒಂದೇದಿನ ವಿಜಾಪುರದಲ್ಲಿರುವದಕ್ಕೆ ನನಗೆ ಒಪ್ಪಿಗೆಯನ್ನು ಕೊಡಬೇಕು. ಆ ನೀಚ ರಣದುಲ್ಲಾಖಾನನ ವಿಶ್ವಾಸಘಾತದ ನಡತೆಯನ್ನು ಹಿರಿಯರ ಕಿವಿಯ ಮೇಲೆ ಹಾಕಿ ಬರುವೆನು. ಇಲ್ಲದಿದ್ದರೆ, ಆ ಸ್ವಾಮಿನಿಷ್ಠ ವೃದ್ಧನು ಆ ದುಷ್ಟನನ್ನು ನಂಬಿ ಕಡೆಗೆ ಅನರ್ಥಕ್ಕೆ ಗುರಿಯಾದನು. ರಂಗರಾವ ಅಪ್ಪಾನಂಥ ಸ್ವಾಮಿನಿಷ್ಠನು ಇಡೀ ಹಿಂದು ಸ್ಥಾನದೊಳಗಿನ ಮುಸಲ್ಮಾನ ರಾಜ್ಯದಲ್ಲಿ ಮತ್ತೊಬ್ಬನಿಲ್ಲೆಂದು ಪ್ರಸಿದ್ಧಿಯಿರುವದು. ಅಂಥ ಪವಿತ್ರ ಮೂರ್ತಿಯ ಸಂಗಡ ರಣದುಲ್ಲಾಖಾನನ ವಿಶ್ವಾಸಘಾತದ ನಡತೆಯು!! ಶಾಬಾಸ ರಣದುಲ್ಲಾ, ಇದೇ ಏನು ನಿನ್ನ ಸತ್ಯಪರಾಯಣತೆಯ ಪ್ರಸಿದ್ಧಿಯ ಮಾದರಿಯು ಎಂದು ನುಡಿದನು. ಬಳಿಕ ರಾಮದೇವನ ಕಡೆಗೆ ನೋಡಿ, ಗುಪ್ತರೀತಿಯಿಂದ ತನ್ನ ತಂದೆಯ ದರ್ಶನವನ್ನಿಷ್ಟು ಮಾಡಿಸಬೇಕೆಂದು ಆತನನ್ನು ಬೇಡಿ ಕೊಳ್ಳಲು, ರಾಮದೇವನು ನಾನಾಸಾಹೇಬನನ್ನು ನೋಡಿ ಸ್ವಲ್ಪ ನಕ್ಕನು; ಆ ನಗೆಯಲ್ಲಿ ಉತ್ಸಾಹವಿರದೆ ಖಿನ್ನತೆಯು ಮಾತ್ರ ತೋರುತ್ತಿತ್ತು.

ರಾಮದೇವನ ನಗೆಯ ಈ ರೀತಿಯನ್ನು ನೋಡಿ ನಾನಾಸಾಹೇಬನು ಸುಮ್ಮನೆ ಆತನ ಮೋರೆಯನ್ನು ನೋಡುತ್ತ ಕುಳಿತುಕೊಂಡನು. ಕೆಲವೊತ್ತಿನ ಮೇಲೆ ರಾಮದೇವನು ನಾನಾಸಾಹೇಬನಿಗೆ—ನಾನಾಸಾಹೇಬರೇ, ನಿಮ್ಮ ತಂದೆಯ ಸ್ವಭಾವವು ನಿಮಗೆ ಗೊತ್ತಿದ್ದು, ನೀವು ಈಗ ಅವರನ್ನು ಕಾಣಬೇಕೆನ್ನುತ್ತೀರಿ, ಇದರಿಂದ ನನಗೆ ಬಹಳ ಆಶ್ಚರ್ಯವಾಗುತ್ತದೆ. ನಿಮ್ಮ ಈ ಮಿತ್ರರ ಸಮಕ್ಷಮವಾಗಿ ನಾನು ನಿಮಗೆರಡು ಮಾತುಗಳನ್ನು ಹೇಳುತ್ತೇನೆ, ಕೇಳಿರಿ. ನಿಮಗೆ ಗೊತ್ತಾಗಿದ್ದ ಸಂಗತಿಯನ್ನು ನಿಮ್ಮ ಹಿರಿಯರ ಮುಂದೆ ನೀವು ಎಷ್ಟು ಮನಬಿಚ್ಚಿ ಹೇಳಿದರೂ, ಅವರ ವಿಚಾರವು ತಿರುಗಲಾರದು. ರಣದುಲ್ಲಾಖಾನನಿಗೂ, ಅವರಿಗೂ ಗೆಳೆತನ ಬಹಳ, ಖಾನನ ವಿರುದ್ಧ ನೀವು ಬೇಕಾದಷ್ಟು ಹೇಳಿದರೂ ಅಪ್ಪಾಸಾಹೇಬರಿಗೆ ನಂಬಿಗೆಯಾಗ ಲಾರದು. ಇದಲ್ಲದೆ, ನಿಮ್ಮನ್ನು ನೋಡಿದ ಕೂಡಲೆ ಗದ್ದರಿಸಿ, ನಿಮ್ಮನ್ನು ಸೆರೆಹಿಡಿದು ರಾಜದ್ರೋಹಿಯೆಂದು ಮರುದಿವಸ ಬಾದಶಹನ ಮುಂದೆ ನಿಲ್ಲಿಸಲಿಕ್ಕೂ ನಿಮ್ಮ ಹಿರಿಯರು ಹಿಂದೆ ಮುಂದೆ ನೋಡಲಿಕ್ಕಿಲ್ಲ, ಅಪ್ಪಾ ಸಾಹೇಬರಂಥ ನಿಷ್ಠುರರೂ, ಏಕವಚನಿಗಳೂ, ಏಕಮಾರ್ಗಿಗಳೂ, ಸ್ವಾಮಿನಿಷ್ಠರೂ ಮಹಾರಾಷ್ಟ್ರದಲ್ಲಿ ಮತ್ತೊಬ್ಬರಿಲ್ಲ, ಅವರ ಸ್ವಾಮಿಭಕ್ತಿಯ

ಮುಂದೆ ದಯಾ-ಮಾಯಾ ಪುತ್ರಪ್ರೇಮ ಮೊದಲಾದವುಗಳು ಸುಳಿದಾಡವು. ನಿಮಗೆ ಈ ಸಂಗತಿಯೆಲ್ಲ ಗೊತ್ತಿದ್ದೂ, ವ್ಯರ್ಥ ಸಂಕಟದಲ್ಲಿ ಯಾಕೆ ಬೀಳುತ್ತೀರಿ? ಬೇಕಾದರೆ ನಿಮಗೆ ವಿಜಾಪುರದ ದರ್ಬಾರದ ಸಂಗತಿಯನ್ನೆಲ್ಲ ನಾನು ಹೇಳುತ್ತೇನೆ. ಕ್ಷಣವಾದರೂ ವಿಲಂಬ ಮಾಡದೆ ನೀವು ಎಲ್ಲರೂ ಇಲ್ಲಿಂದ ಹೊರಟುಹೋಗಿರಿ. ಇನ್ನು ನೀವು ವಿಜಾಪುರದಲ್ಲಿರುವದು ಹಿತಕರವಲ್ಲ, ಇದ್ದರೆ, ನೀವು ಅಲ್ಲಿ ಸಾಧಿಸಬೇಕಾಗಿರುವ ಕೆಲಸಕ್ಕೆ ವಿಲಂಬ ಮಾತ್ರ ಆಗಬಹುದು. ನಿಮ್ಮ ಹಿರಿಯರು ನಿಮ್ಮ ಮಾತನ್ನು ನಂಬಿ ಬಾದಶಹನ ಪಕ್ಷವನ್ನು ಬಿಟ್ಟು, ನಿಮ್ಮ ಪಕ್ಷವನ್ನು ವಹಿಸಿದರೆ ಬಹಳ ನೆಟ್ಟಗಾಗಬಹುದು; ಆದರೆ ಆ ಮಾತು ಕಾಲತ್ರಯದಲ್ಲಿಯೂ ಆಗುವ ಹಾಗಿಲ್ಲ. ಬಾದಶಹನು ನಿಮ್ಮ ಪಕ್ಷಕ್ಕೆ ಬರುವನೆಂದು ತಿಳಿದಿರುವದರಲ್ಲಿರುವಷ್ಟು ಜಾಣತನವು, ನಿಮ್ಮ ತಂದೆಯು ನಿಮ್ಮ ಪಕ್ಷಕ್ಕೆ ಬರುವೆನೆಂದು ತಿಳಿಯುವದರಲ್ಲಿರುತ್ತದೆಂದು ನಾನು ಸ್ಪಷ್ಟವಾಗಿ ಹೇಳುತ್ತೇನೆ, ಎಂದು ನುಡಿಯಲು, ನಾನಾ ಸಾಹೇಬನಿಗೆ ಈ ಮಾತಿನೊಳಗಿನ ಪ್ರತಿಯೊಂದು ಅಕ್ಷರವೂ ನಿಜವೆಂದು ತೋರುತ್ತಿತ್ತು; ಆದರೆ ಪ್ರಾಯದವರ ವಿಚಾರದಲ್ಲಿ ಒಂದು ಪಾಲು ಸತ್ಯವಿದ್ದರೆ, ಹತ್ತುಪಾಲು ಕಲ್ಪನೆಯೂ, ಉತ್ಸಾಹವೂ ಇರುತ್ತವೆಂಬ ನಿಯಮದಂತೆ, ನಾನಾಸಾಹೇಬನು ತನ್ನ ಮನಸ್ಸಿನಲ್ಲಿ ಏನೇನೋ ಕಲ್ಪಿಸಿಕೊಂಡು, ತಂದೆಯನ್ನು ಕಾಣಲೇ ಬೇಕಾಗಿರುವದರಿಂದ, ಹೇಗಾದರೂ ಮಾಡಿ ಏಕಾಂತದಲ್ಲಿ ಅವರ ದರ್ಶನ ಮಾಡಿಸಬೇಕೆಂದು ಹಟಹಿಡಿದನು. ಆಗ ರಾಮದೇವನು ಹಾಗೇ ಆಗಲೆಂದು ಹೇಳಿ, ಊರೊಳಗೆ ಹೋಗಿ ಬಂದು, ಈ ದಿನ ಮೂರು ತಾಸು ರಾತ್ರಿಗೆ ನಿಮ್ಮ ತಂದೆಯ ಭೆಟ್ಟಿಯನ್ನು ಮಾಡಿಸುತ್ತೇನೆ, ಅಷ್ಟರಲ್ಲಿ ನೀವು ಸಿದ್ಧರಾಗಿ ಇರಬೇಕು, ಎಂದು ಹೇಳಿ ಹೊರಟು ಹೋದನು. ಇತ್ತ ನಾನಾಸಾಹೇಬನು ವಿಚಾರಕ್ಕೆ ಒಳಗಾದನು. ತಂದೆಯ ಮುಂದೆ ಹೇಗೆ ಮಾತಾಡಬೇಕು? ಯಾವ ಮಾತು ಮೊದಲು ಹೇಳಬೇಕು? ಯಾವ ಮಾತು ಹಿಂದುಗಡೆ ಹೇಳಬೇಕು? ನನ್ನ ಧೈರ್ಯವು ಕಡೆತನಕ ನಿಲ್ಲಬಹುದೋ? ಎಂದು ಆತನು ಆಲೋಚಿಸತೊಡಗಿದನು. ಈ ಆಲೋಚನೆಯಲ್ಲಿ ಎಷ್ಟೋ ಕಾಲವು ಕ್ರಮಿಸಿ ಆತನ ಮನಸ್ಸು ಉದಾಸವಾಗಿರಲು, ರಾಮದೇವನು ಮಹಾರಾಷ್ಟ್ರ ಸರದಾರರಿಗೆ ಒಪ್ಪಬಹುದಾದ ಉಡುಪು ತೊಡಪುಗಳನ್ನು ತಕ್ಕೊಂಡು ನಾನಾಸಾಹೇಬನ ಬಳಿಗೆ ಬಂದನು. ಬಾವಾ-ಬೈರಾಗಿಗಳಂಥ ಸೋಗಿನ ಆಟವು ಅಪ್ಪಾಸಾಹೇಬರ ಮುಂದೆ ನಡಿಯದೆಂದು ತಿಳಿದು, ರಾಮದೇವನು ಈ ಪೋಷಾಕನ್ನು ತಂದಿದ್ದನು. ನಾನಾಸಾಹೇಬನು ಅದನ್ನು ಹಾಕಿಕೊಂಡು ರಾಮದೇವನನ್ನು ಹಿಂಬಾಲಿಸಿ ಹೊರಟನು.

ಮೂರು ತಾಸು ರಾತ್ರಿಯಾಗಿತ್ತು, ಅಪ್ಪಾಸಾಹೇಬರು ಮಲಗುವ ಕೋಣೆಯಲ್ಲಿ ಒಬ್ಬರೇ ಕುಳಿತುಕೊಂಡಿದ್ದರು. ಒಬ್ಬ ಮಹಾರಾಷ್ಟ್ರ ಸರದಾರನು ತಮ್ಮನ್ನು ಕಾಣಲಿಕ್ಕೆ ಬಂದಿದ್ದಾನೆಂದು ಸೇವಕನು ವಿಜ್ಞಾಪಿಸಲು, ರಂಗರಾಯನು ನಾನಾಸಾಹೇಬನನ್ನು ತಾವು ಕುಳಿತಲ್ಲಿಗೇ ಬರಮಾಡಿಕೊಂಡನು. ನಾನಾಸಾಹೇಬನಿಗಾದರೂ ಏಕಾಂತವೇ ಬೇಕಾಗಿತ್ತು, ಇಷ್ಟು ರಾತ್ರಿಯಲ್ಲಿ ನನ್ನನ್ನು ಕಾಣಲಿಕ್ಕೆ ಬರುವ ಮಹಾರಾಷ್ಟ್ರ ಸರದಾರನು ಯಾರಿರಬಹು

ದೆಂದು ರಂಗರಾಯನು ಯೋಚಿಸುತ್ತಿರಲು, ನಾನಾಸಾಹೇಬನು ಹೋಗಿ ಎದುರಿಗೆ ನಿಂತು ಕೊಂಡನು. ರಂಗರಾಯನ ಕಣ್ಣುಗಳು ಸ್ವಲ್ಪ ಮಧ್ಯಮವಾಗಿದ್ದವು. ಆತನು ನಾನಾಸಾಹೇಬ ನನ್ನು ಸೂಕ್ಷ್ಮ ದೃಷ್ಟಿಯಿಂದ ನೋಡಲು, ಸಾಧಾರಣ ಗುರುತುಹತ್ತಿತು. ತನ್ನ ಮಗನೇ ಎಂಬದರ ನಿಶ್ಚಯವು ಆತನಿಗಾಗದಿದ್ದರೂ, ಬಹಳ ಮಾಡಿ ನಾನಾನೇ ಇರಬೇಕೆಂಬ ಸಂಶಯವು ಆತನಲ್ಲಿ ಉತ್ಪನ್ನವಾಯಿತು. ಕೂಡಲೆ ಆತನ ಮುಖಚರ್ಯವು ಬದಲಾಗಿ ಮನಸ್ಸು ವಿಲಕ್ಷಣವಾದ ಗೊಂದಲದಲ್ಲಿ ಬಿದ್ದಿತು. ಆತನು ನಾನಾಸಾಹೇಬನನ್ನು ಕುರಿತು–ಯಾರು ನೀವು? ಇಷ್ಟು ರಾತ್ರಿಯಲ್ಲಿ ನನ್ನ ಸಂಗಡ ಏಕಾಂತದಲ್ಲಿ ಆಡತಕ್ಕ ಮಾತು ಯಾವದು?

ನಾನಾಸಾಹೇಬ–ನಾನು, ತಮ್ಮ ಮಗನಾದ ನಾನಾನು. ಅಂಥ ಮಹತ್ವದ ವಿಚಾರವು ಹೇಳತಕ್ಕದ್ದಿದ್ದದ್ದರಿಂದಲೇ ತಮ್ಮ ಕ.......................

ಅಪ್ಪಾಸಾಹೇಬ–ನನ್ನ ಮಗನು? ನನ್ನ ಮಗನು ಸತ್ತನು! ಅವನಿಗೂ ನನಗೂ ಈಗ ಸಂಬಂಧವೇನೂ ಇರುವದಿಲ್ಲ. ನನ್ನ ಮೋರೆಗೆ ಕಪ್ಪು ಹಚ್ಚಿ ಮನೆಬಿಟ್ಟು ಹೊರಟ ದಿವಸವೇ ಆತನು ಸತ್ತಂತಾಯಿತು. ಅವನು ತಿಳಿದವನಾಗಿದ್ದರೆ, ಇನ್ನು ನನಗೆ ಮೋರೆಯನ್ನು ತೋರಿಸಬಾರದು. ಮಾತಾಡುವದಂತು ಒತ್ತಟ್ಟಿಗಿರಲಿ, ಹೋಗು, ನನ್ನ ಮನಸ್ಸಿನಲ್ಲಿ ಬೇರೆ ವಿಚಾರಗಳ ಹುಟ್ಟುವ ಮೊದಲು ನೀನು ಇಲ್ಲಿಂದ ಹೊರಟುಹೋಗು. ಇಲ್ಲದಿದ್ದರೆ ಈಗಲೇ ನಿನ್ನನ್ನು ಸೆರೆಹಿಡಿದು, ನಾಳೆ ಬಾದಶಹರ ಮುಂದೆ ರಾಜದ್ರೋಹಿಯೆಂದು ನಿಲ್ಲಿಸಿ ನಿನಗೆ ಶಾಸನ ಮಾಡಿಸುವೆನು. ಎಲೇ, ಯಾರವರು? ಯಾರಿದ್ದೀರಿ ಹೊರಗೆ............

ನಾನಾ ಸಾಹೇಬ–ತಾವು ಹೀಗೆ ಅನ್ನುವಿರೆಂದೇ ಏಕೆ , ಅಂದಂತೆ ಮಾಡುವಿರೆಂದು ತಿಳಿದೇ ನಾನು ತಮ್ಮ ಬಳಿಗೆ ಬಂದಿದ್ದೇನೆ. ಅಂಥ ಮಹತ್ವದ ವಿಚಾರವಿದ್ದ ಹೊರತು ನಾನು ಇಲ್ಲಿಗೆ ಬಂದಿರಬಹುದೇ? ಅಪ್ಪಾಸಾಹೇಬ, ಸ್ವಾಮಿಭಕ್ತಿಯು ಸದ್ಗುಣವೆಂಬದೇನೋ ನಿಜ; ಆದರೆ ಎಲ್ಲಿ? ಸ್ವಾಮಿಯು ಸೇವಕನ ಸ್ವಾಮಿಭಕ್ತಿಯ ಯೋಗ್ಯತೆಯನ್ನು ತಿಳಿಯುವ ಸ್ಥಳದಲ್ಲಿ; ಆದರೆ ಸ್ವಾಮಿಯೆನಿಸುವವನು ಅತ್ಯಂತ ಸ್ವಾಮಿನಿಷ್ಠ ಸೇವಕನನ್ನು ಕೂಡ ದನಕ್ಕಿಂತ ಕಡೆಯೆಂದು ತಿಳಿಯುವಲ್ಲಿ ಸ್ವಾಮಿನಿಷ್ಠೆಯೇ? ನೀವೇ ಹೇಳಿರಿ, ಇಂದಿನವರೆಗೆ ನೀವು ವಿಚಾರದಲ್ಲಿ, ಕೃತಿಯಲ್ಲಿ, ಸ್ವಪ್ನದಲ್ಲಾದರೂ, ಸ್ವಾಮಿದ್ರೋಹವನ್ನು ಚಿಂತಿಸಿರುವಿರಾ! ಅಂದಬಳಿಕ ನಿಮ್ಮ ಸ್ಥಿತಿಯು ಹೀಗೆ ಯಾಕಾಯಿತು?

ಅಪ್ಪಾ–ಇಂಥ ಸ್ಥಿತಿ! ನನಗೆ ಇಂಥ ಸ್ಥಿತಿಯು ಯಾಕಾಯಿತೆಂದು ಕೇಳುತ್ತೀಯಾ? ನಾಚಿಕೆಗೇಡಿಯೇ, ಸ್ವಾಮಿದ್ರೋಹೀ, ಹೀಗೆ ಪ್ರಶ್ನಮಾಡಲಿಕ್ಕೆ ನಿನಗೆ ನಾಚಿಕೆ ಬರುವದಿಲ್ಲವೆ? ನಿನ್ನ ಕಾಲಲ್ಲಿಯೇ ನನಗೆ ಈ ಸ್ಥಿತಿಯು ಪ್ರಾಪ್ತವಾಗಿರಲು, ತಿರುಗಿ ನನಗೆ ಪ್ರಶ್ನೆ ಮಾಡುತ್ತೀಯಾ? ಹೋಗು ಇಲ್ಲಿಂದ ಎದ್ದು; ನೀಚಾ, ಮಗನೆಂಬ ಮೋಹದಿಂದ ಏನೂ ಮಾಡಲಿಕ್ಕಿಲ್ಲೆಂದು ನೀನು ತಿಳಿದಿರಬಹುದು; ಆದರೆ ಅದನ್ನು ಮನಸ್ಸಿನಲ್ಲಿ ಕೂಡ ತರಬೇಡ. ಇಷ್ಟು ಹೊತ್ತಿನ ತನಕ ನಿನ್ನನ್ನು ಎದುರಿಗೆ ನಿಲ್ಲಗೊಟ್ಟಿದ್ದೇ ನನ್ನ ಅಪರಾಧವು. ನಾನು ನಿನ್ನ ಹೆಡಮುರಿಗೆ ಕಟ್ಟಿ, ಬಾದಶಹರ ಬಳಿಗೆ ಕಳಿಸಬೇಕಾಗಿತ್ತು, ಇಲ್ಲವೆ ನನ್ನ ಕೈಯಿಂದ ನಿನ್ನ

ಶಿರಚ್ಛೇದವನ್ನು ಮಾಡಿ ಶಿರಸ್ಸನ್ನು ಬಾದಶಹರ ಬಳಿಗೆ ಕಳಿಸಿ–ನೋಡಿರಿ, ಕೃತಘ್ನನಾದ ನನ್ನ ನೀಚ ಮಗನ ತಲೆಯಿದು, ಎಂದು ಹೇಳಬೇಕಾಗಿತ್ತು. ಹಾಗೆ ಮಾಡದೆಯಿದ್ದದ್ದು ನನ್ನ ಕರ್ತವ್ಯಪರಾಙ್ಮುಖತೆಯೆಂದು ನಾನು ತಿಳಿಯುತ್ತೇನೆ.

ನಾನಾಸಾಹೇಬ–ಹೋಗುತ್ತೇನೆ, ತಾತಾ, ಅಪ್ಪಾಸಾಹೇಬರೇ, ತಮ್ಮ ಕಣ್ಣೆದುರಿಗೆ ನಾನು ನಿಲ್ಲಬಾರದಾಗಿದ್ದರೆ, ನಾನು ಹೋಗುತ್ತೇನೆ; ಆದರೆ ತಮ್ಮನ್ನು ಚನ್ನಾಗಿ ಎಚ್ಚರಗೊಳಿಸುವ ಹೊರತು ನಾನು ಇಲ್ಲಿಂದ ಹೋಗಲಾರೆನು. ಯಾವನನ್ನು ನೀವು ಪರಮಮಿತ್ರನೆಂದು ಭಾವಿಸಿರುವಿರೋ, ಯಾವನು ನಿಮ್ಮ ಮಾನಮರ್ಯಾದೆಗಳನ್ನು ಉತ್ತಮ ರೀತಿಯಿಂದ ಕಾದಿರುವನೆಂದು ನೀವು ಭಾವಿಸಿರುವಿರೋ, ಆ ರಣದುಲ್ಲಾಖಾನನೇ ನಿಮ್ಮ ಭಯಂಕರ ಶತ್ರುವಾಗಿರುವನು. ಅವನೇ ನಿಮ್ಮ ಹೆಸರಿಗೆ ಕಲಂಕವನ್ನುಂಟುಮಾಡಿರುವನು, ಅವನೇ ನಿಮ್ಮ ಮರ್ಯಾದೆಯ ರಾಶಿಯನ್ನು ಹಾಳುಮಾಡಿರುವನು, ಅವನೇ ನಿಮ್ಮ ಮನೆತನದ ಕೀರ್ತಿಗೆ ಬೆಂಕಿಯನ್ನು ಹಚ್ಚಿರುವನು; ಈ ಮಾತು ನಿಮಗೆ ಗೊತ್ತಿರುವದೋ? ಆಹಾ! ಏನು ಹೇಳಲಿ! (ಹಲ್ಲುಕಡಿಯುತ್ತ) ಆ ನೀಚನು ನಿಮ್ಮ ಸರ್ವಸ್ವವನ್ನು ಮುಣುಗಿಸಿಬಿಟ್ಟಿದ್ದಾನೆ. ಇನ್ನೂ ಅವನು ಏನೇನು ಮಾಡುವನೋ ಎಂಬದರ ಕಲ್ಪನೆ ಕೂಡ ಮಾಡುವಹಾಗಿಲ್ಲ. ಅವನು ಮಾಡಿರುವ ನೀಚತನವನ್ನು ಕೇಳಿದರೆ, ಅವನ ರಕ್ತದಿಂದ ಸ್ನಾನ ಮಾಡದ ಹೊರತು ನೀವು ಅನ್ನವನ್ನು ಕೂಡ ಮುಟ್ಟಬಾರದು; ಆದರೆ ನೀವು ಆತನ ಆದರಾತಿಥ್ಯವನ್ನು ಕೈಕೊಳ್ಳುತ್ತ ಸ್ವಸ್ಥವಾಗಿರುವಿರಲ್ಲ! ನೀವು ಆತನನ್ನು ದೇವರೆಂದು ತಿಳಿಯುತ್ತೀರಿ, ತಿಳಿಯಿರಿ; ನಾನಂತು ಪ್ರತಿಜ್ಞೆಯನ್ನೇ ಮಾಡಿ ಬಿಟ್ಟಿದ್ದೇನೆ, ರಣದುಲ್ಲಾಖಾನನ ರಕ್ತದಿಂದ ನನ್ನ ಕೈಗಳನ್ನು ಕೆಂಪುಮಾಡಿಕೊಳ್ಳದೆ ತಿರುಗಿ ನಿಮಗೆ–

ಅಪ್ಪಾಸಾಹೇಬ–ಹೋಗು, ದುಷ್ಟಾ, ಇನ್ನು ಕ್ಷಣವಾದರೂ ನನ್ನೆದುರಿಗೆ ನಿಂತುಕೊಳ್ಳ ಬೇಡ. ನನ್ನ ಮಿತ್ರರು ನಿನಗೆ ಶತ್ರುಗಳಾಗಿಯೂ, ನನ್ನ ಶತ್ರುಗಳು ನಿನಗೆ ಮಿತ್ರರಾಗಿಯೂ ತೋರುವದು ಸ್ವಾಭಾವಿಕವು.

ಇದನ್ನು ಕೇಳಿ ನಾನಾಸಾಹೇಬನ ಸಂತಾಪ–ದ್ವೇಷ–ಖೇದಗಳು ಹೊಟ್ಟೆಯಲ್ಲಿ ಹಿಡಿಸಲೊಲ್ಲವು. ಆತನು ತಾನು ಹೇಳಬೇಕೆಂದು ಮನಸ್ಸಿನಲ್ಲಿ ಮಾಡಿಕೊಂಡಿದ್ದ ಮಾತು ಗಳನ್ನೆಲ್ಲ ಸ್ಪಷ್ಟವಾಗಿ ಹೇಳಿಬಿಟ್ಟನು. ಕಡೆಯ ರಾಮಬಾಣೋಪಾಯವೆಂದು ಭಾವಿಸಿದ್ದ ತನ್ನ ಹೆಂಡತಿಯ ಸಂಬಂಧದ ಮಾತು, ಬಹು ಸಂತಪ್ತವಾಣಿಯಿಂದ ಆತನ ಮುಖದಿಂದ ಹೊರಬಿದ್ದು ಹೋಯಿತು. ಅದನ್ನು ಕೇಳಿದ ಬಳಿಕ ಮಾತ್ರ ಅಪ್ಪಾಸಾಹೇಬನ ಮುದ್ರೆಯು ಒಮ್ಮೆಲೆ ಬದಲಾಗಿ, ಆತನ ಮುಖದಿಂದ ತಟ್ಟನೆ ''ಅಶಕ್ಯವು! ಅಶಕ್ಯವು!! ರಣದುಲ್ಲಾಖಾನನು ಇಂಥ ನೀಚತನಕ್ಕೆ ಎಂದೂ ಹೋಗನು!'' ಎಂದು ಗದ್ದರಿಸಿ ನುಡಿಯಲು, ನಾನಾಸಾಹೇಬನು ಹಲ್ಲು ತುಟಿಗಳನ್ನು ಕಡಿಯುತ್ತ—''ಹೋಗಿದ್ದರೆ'' ಎಂದು ಕೇಳಿದನು. ಅದಕ್ಕೆ ಅಪ್ಪಾಸಾಹೇಬನು ಏನೋ ಉತ್ತರಕೊಡುತ್ತಿರಲು, ಯಾವನೋ ಮತ್ತೊಬ್ಬನು–ಆ ರಣದುಲ್ಲಾಖಾನನು ಅಂಥ ನೀಚ ತನಕ್ಕೆ ಹೋಗಿರುವದೇ ಇಲ್ಲ! ಆ ಮಾತಿನ ಸತ್ಯತೆಯನ್ನು ಬೇಕಾದ ಹಾಗೆ ಮಾಡಿಕೊಡಲಿಕ್ಕೆ ಆತನು ಸಿದ್ಧನಿದ್ದಾನೆ'' ಎಂದು ನುಡಿದನು.

ಹೀಗೆ ನುಡಿದವನು ರಣದುಲ್ಲಾಖಾನನೇ ಎಂದು, ಧ್ವನಿಯಿಂದಲೇ ನಾನಾಸಾಹೇಬನು ಗೊತ್ತು ಹಿಡಿದನು. ಕ್ರೋಧದಿಂದ ನಾನಾನ ಸರ್ವಾಂಗವು ತಪ್ತವಾಯಿತು. ಇಲ್ಲಿಯವರೆಗೆ ಆತನಲ್ಲಿ ಉಂಟಾಗಿದ್ದ ಖೇದಯುಕ್ತ ಸಂತಾಪದಲ್ಲಿ ತಂದೆಯ ವಿಷಯದ ಆದರ ಪ್ರೇಮಗಳು ಬೆರೆತುಕೊಂಡಿದ್ದವು; ಆದರೆ ಈಗ ಆತನಲ್ಲಿ ಸಂತಾಪವೂ, ಆದರಿಂದುಂಟಾದ ಆವೇಶವೂ ಮಾತ್ರ ಪ್ರಕಟವಾದದ್ದರಿಂದ, ಅವನು ಏನು ಮಾಡಿಯಾನು ಏನು ಬಿಟ್ಟಾನೆಂಬದರ ನಿಯಮ ವಿದ್ದಿಲ್ಲ. ಆತನು ಹಿಂದಿರುಗಿ ರಣದುಲ್ಲಾಖಾನನನ್ನು ನೋಡಿ–ದುಷ್ಟಾ, ನಿನ್ನ ರಕ್ತಪಾತ ಮಾಡಲಿಕ್ಕೆ ಇದು ಸಮಯವಲ್ಲ, ಸ್ಥಳವೂ ಅಲ್ಲ. ನೀನಾಡುವ ಮಾತು ಅಕ್ಷರಶಃ ಸುಳ್ಳೆಂಬುದು ನಿನಗೇ ಗೊತ್ತಿರುತ್ತದೆ. ಇನ್ನು ನಿನ್ನ ಮೋರೆಯನ್ನು ನೋಡುತ್ತ ನಾನು ನಿಂತುಕೊಂಡರೆ, ನನ್ನ ಸಂತಾಪವು ಅನನ್ವಿತ ಕೃತ್ಯವನ್ನು ಮಾಡಿಸೀತು; ಈ ಸಾರೆಯೂ ನೀನು ನನ್ನ ಕೈಯಿಂದ ಪಾರಾದದ್ದಕ್ಕಾಗಿ ದೇವರ ಪ್ರಾರ್ಥನೆಮಾಡು; ಆದರೆ ತಿರುಗಿ ನನ್ನ ಗೊಡವಿಗೆ ಬರಬೇಡ ಎಂದು ನುಡಿದು, ರಣದುಲ್ಲಾಖಾನನು ಏನೋ ಮಾತಾಡಬೇಕೆನ್ನುತ್ತಿರುವದರ ಕಡೆಗೆ ಲಕ್ಷ್ಯವಿಡದೆ ತನ್ನ ತಂದೆಯನ್ನು ಕುರಿತು–ಒಳ್ಳೇದು. ಅಪ್ಪಾಸಾಹೇಬರೇ, ನಾನು ಮಾಡತಕ್ಕ ಕೆಲಸವನ್ನು ಮಾಡಿದೆನು, ಇದರ ಮೇಲೆಯೂ ಈ ಠಕ್ಕನ ಮಾತಿನ ಮೇಲೆಯೇ ನಿಮ್ಮ ವಿಶ್ವಾಸವಿದ್ದರೆ, ಬೇಕಾದದ್ದು ಮಾಡಿರಿ. ಜಾಗ್ರತೆಯಿಂದ ಇರಬೇಕೆಂದು ಇನ್ನೊಮ್ಮೆ ಹೇಳುತ್ತೇನೆ. ಈ ನೀಚನನ್ನು ಕೊಲ್ಲುವವರೆಗೆ ನಾನು ಸೂತಕದವನಂತೆ ಇರುವೆನು, ನಗುವದಿಲ್ಲ ಎಂದು ಹೇಳಿದವನೇ ಹೊರಟುಹೋದನು. ಇದನ್ನೆಲ್ಲ ನೋಡಿ ಅಪ್ಪಾಸಾಹೇಬನು ಬೆರಗಾಗಿ ಕುಳಿತುಕೊಂಡನು. ಇತ್ತ ರಣದುಲ್ಲಾಖಾನನು ಸುಮ್ಮನೆ ನಿಂತುಕೊಂಡಿದ್ದನು. ಒಬ್ಬರ ಬಾಯಿಂದಲೂ ಮಾತುಗಳು ಹೊರಡಲೊಲ್ಲವು. ಬಾದಶಹನ ದರ್ಬಾರದಲ್ಲಿ ಅತ್ಯಂತ ಪ್ರತಿಷ್ಠಿತನಾದ ರಣದುಲ್ಲಾಖಾನನಂಥ ಸರದಾರನು ಮನೆಗೆ ಬಂದಿರಲು, ಬನ್ನಿರಿ, ಕುಳಿತುಕೊಳ್ಳಿರಿ, ಎಂದು ಉಪಚರಿಸುವ ಪ್ರಜ್ಞೆಯು ಸಹ ಆ ವೃದ್ಧ ಸರದಾರನಲ್ಲಿ ಉಳಿದಿದ್ದಿಲ್ಲ. ಕೆಲವು ಹೊತ್ತಿನ ಮೇಲೆ ಆತನು ಎಚ್ಚತ್ತು ರಣದುಲ್ಲಾ ಖಾನನ ಸಂಗಡ ಮಾತಾಡಬೇಕೆನ್ನುತ್ತಿರುವಷ್ಟರಲ್ಲಿ ರಣದುಲ್ಲಾಖಾನನೇ ಅಪ್ಪಾಸಾಹೇಬನನ್ನು ಕುರಿತು–ಅಪ್ಪಾಸಾಹೇಬರೇ, ನಾನು ಒಂದು ಅಪರಾಧದ ಬಗ್ಗೆ ಕ್ಷಮೆಬೇಡುವದಕ್ಕಾಗಿ ಇಷ್ಟು ರಾತ್ರಿಯಲ್ಲಿ ನಿಮ್ಮ ಬಳಿಗೆ ಬಂದಿದ್ದೇನೆ. ನನ್ನಿಂದ ಅಪರಾಧವು ಆಗಿರುವದಿಲ್ಲ, ಆಗುತ್ತಿತ್ತು ಎಂದು ಹೇಳುವ ನನ್ನ ಮಾತನ್ನು ನಂಬಬೇಕು. ನಾನು ನಿಮ್ಮ ಮಗನಂತೆ ಇದ್ದೇನೆ. ಪ್ರತ್ಯಕ್ಷ ಮಗನ ಅಪರಾಧವನ್ನು ಕಂಡು ಕ್ಷಮಿಸದ ತಮ್ಮಂಥ ನಿಸ್ಪೃಹಿಗಳ ಮುಂದೆ, ಹೀಗೆ ಹೇಳಿಕೊಳ್ಳುವದು ನಿರರ್ಥಕವಾಗಿದ್ದರೂ, ಕೃತಕರ್ಮಕ್ಕಾಗಿ ಪಶ್ಚಾತ್ತಾಪಪಡುತ್ತಿರುವ ನಾನು, ಹಾಗೆ ಹೇಳಿಕೊಳ್ಳುತ್ತೇನೆ, ನಾನು ಈಗ ತಮ್ಮ ಮುಂದೆ ಹೇಳುವ ಸಂಗತಿಯನ್ನು ಪೂರ್ಣವಾಗಿ ಕೇಳಿಕೊಳ್ಳದೆ, ನಡುವೇ ಸಂತಾಪಗೊಳ್ಳಬಾರದು. ಏನಾದರೂ ಸಂಶಯ ಬಂದರೆ, ಮನಸ್ಸಿನಲ್ಲಿಟ್ಟುಕೊಂಡು ಹಿಂದುಗಡೆಯಲ್ಲಿ ನನ್ನನ್ನು ಕೇಳಿ ಸಂಶಯ ನಿವಾರಣಮಾಡಿಕೊಳ್ಳಬೇಕು ಮತ್ತು ''ಹೇಳುವದು ಮುಗಿಯಿತು'' ಎಂದು ನಾನು ಅನ್ನುವವರೆಗೆ ತಾವು ಸಮಾಧಾನವನ್ನು ತಾಳಬೇಕು.

ಯಾವತ್ತು ಸಂಗತಿಯನ್ನು ಕೇಳಿಕೊಂಡನಂತರ ತಾವು ಅಪರಾಧವನ್ನು ಕ್ಷಮಿಸದೆ ನನ್ನನ್ನು ಶಿಕ್ಷಿಸಿದರೂ ನನಗೆ ವ್ಯಸನವಾಗದು, ಪೂರ್ಣ ಸಂಗತಿಯನ್ನು ಮಾತ್ರ ಕೇಳಿಕೊಳ್ಳಬೇಕು, ಎಂದು ಹೇಳಿದನು. ರಣದುಲ್ಲಾಖಾನನಂಥ ಪ್ರತಿಷ್ಠಿತ ಮುಸಲ್ಮಾನನು, ಅಪ್ಪಾಸಾಹೇಬನಂಥ ಕಿಲ್ಲೇದಾರನನ್ನು ಕ್ಷಮೆಯ ಬಗ್ಗೆ ಪ್ರಾರ್ಥಿಸುವದು ವಾಚಕನಿಗೆ ವಿಚಿತ್ರವಾಗಿ ತೋರಬಹುದು, ಆದರೆ ರಣದುಲ್ಲಾಖಾನನು ಬಹು ಸಜ್ಜನನು, ಸತ್ಯ ಪರಾಯಣನು. ಅವನಷ್ಟು ಅಧಿಕಾರ ಸಂಪನ್ನನಾದ ಬೇರೆ ಮುಸಲ್ಮಾನನು ಆಗಿದ್ದರೆ, ಅಪ್ಪಾಸಾಹೇಬನನ್ನು ಗೊತ್ತಿಗೆ ಹಚ್ಚಿ, ನಾನಾಸಾಹೇಬನ ತಲೆ ಹೊಡಿಸಿ, ಚಂದ್ರಾವತಿಯನ್ನು ತನ್ನ ರಾಣೀವಾಸದಲ್ಲಿ ಸೇರಿಸಿ ಕೊಂಡು ಧನ್ಯನಾಗುತ್ತಿದ್ದನು; ಆದರೆ ಜಾತಿಗೆ ಭೇದವಾದರೂ ನೀತಿಗೆ ಭೇದವಿಲ್ಲೆಂಬಂತೆ, ನೀತಿವಂತನಾದ ರಣದುಲ್ಲಾಖಾನನು ತನ್ನ ನೀಚತನಕ್ಕಾಗಿ ಪಶ್ಚಾತ್ತಾಪಪಟ್ಟು ಅಪ್ಪಾಸಾಹೇಬನಿಗೆ ಹೇಳಿಕೊಳ್ಳಹತ್ತಿದನು.

ರಣದುಲ್ಲಾಖಾನನ ಈ ಪ್ರಾರ್ಥನೆಯನ್ನು ಕೇಳಿ ಅಪ್ಪಾಸಾಹೇಬನಿಗೆ, ತನ್ನ ಮಗನ ಮಾತಿನಲ್ಲಿ ಸ್ವಲ್ಪ ವಿಶ್ವಾಸವು ಉತ್ಪನ್ನವಾಗಲು, ಸಂತಾಪದಿಂದ ಆತನ ಮುಖಮುದ್ರೆಯು ಬದಲಾಯಿತು; ಆದರೆ ತನ್ನ ಮಗನ ಮಾತಿಗೆ ರಣದುಲ್ಲಾಖಾನನು ನಡುವೇ ಬಾಯಿಹಾಕಿ— 'ಅಂಥ ನೀಚತನಕ್ಕೆ ರಣದುಲ್ಲಾಖಾನನು ಹೋಗಿರುವದೇ ಇಲ್ಲ. ಈ ಮಾತಿನ ಸತ್ಯತೆಯನ್ನು ಬೇಕಾದ ಹಾಗ ಮಾಡಿಕೊಡಲಿಕ್ಕೆ ಆತನು ಸಿದ್ಧನಿದ್ದಾನೆ' ಎಂದು ನುಡಿದದ್ದು ನೆನಪಾಗಿ, ಆ ವೃದ್ಧ ಕಿಲ್ಲೇದಾರನು ಸಮಾಧಾನವನ್ನು ತಾಳಿದನು. ಆತನು ಕೆಲವು ಹೊತ್ತಿನಮೇಲೆ ತನ್ನ ಸಂತಾಪ ವನ್ನು ಬಹು ಪ್ರಯಾಸದಿಂದ ನುಂಗಿಕೊಂಡು ರಣದುಲ್ಲಾಖಾನನ್ನು ಕುರಿತು– ಖಾನಸಾಹೇಬರೇ, ನಾನಾನು ಏನೇನೋ ಬೊಗಳಿಹೋಗಿದ್ದರೂ, ಅವನ ಮಾತಿನಲ್ಲಿ ನನ್ನ ವಿಶ್ವಾಸವಿಲ್ಲ; ಆದರೂ ನೀವು ಅಪರಾಧದ ಬಗ್ಗೆ ಕ್ಷಮೆಬೇಡಿಕೊಳ್ಳುವದನ್ನು ನೋಡಿದರೆ, ಮಗನ ಮಾತಿಗೆ ಸ್ವಲ್ಪ ಮಹತ್ವವನ್ನು ಕೊಡಬೇಕಾಗಿದೆ. ಮರಾಟರಿಗೆ ಸ್ತ್ರೀಯರ ಪಾತಿವ್ರತ್ಯವು ಪ್ರಾಣಕ್ಕಿಂತಲೂ ಹೆಚ್ಚು ಇರುವದರಿಂದ, ಅದನ್ನು ರಕ್ಷಿಸುವದಕ್ಕಾಗಿ ಅವರು ತಮ್ಮನ್ನೇ ಮರೆಯುವರೆಂದಬಳಿಕ, ಅವರಿಗೆ ರಾಜ್ಯ ಕೋಶಗಳ ಪರಿವೆಯೇನು? ''ಅಪರಾಧವನ್ನು ಮಾಡಿಲ್ಲೆ''ಂದು ನಿಮ್ಮಂಥ ಸತ್ಯಪರಾಯಣರು ಹೇಳುವ ಮಾತಿನಲ್ಲಿ ವಿಶ್ವಾಸವಿಟ್ಟು ಸತ್ಯಕ್ಕಾದರೂ ನಾನು ಶಾಂತಚಿತ್ತನಾಗಿ ನೀವು ಹೇಳುವದನ್ನು ಕೇಳಲು ಯತ್ನಿಸುತ್ತೇನೆ. ನಿಮ್ಮಂಥ ಬಲಾಢ್ಯರು ನಮ್ಮಂಥ ಯಃಕಶ್ಚಿತ ಕಿಲ್ಲೇದಾರರ ಹಂಗು ಕಾಯುವ ಕಾರಣವಿಲ್ಲದಿದ್ದರೂ, ನೀವು ಈಗ ಕ್ಷಮೆ ಬೇಡುತ್ತಿರುವದರಿಂದ, ನಿಮ್ಮ ಸೌಜನ್ಯವು ವ್ಯಕ್ತವಾಗುತ್ತದೆ. ನಡೆಯುವವರು ಎಡವುವರೆನ್ನುವಂತೆ, ಸುಜನರೂ ಒಮ್ಮೊಮ್ಮೆ ಕೆಟ್ಟ ಹಾದಿಯನ್ನು ಹಿಡಿಯಲು ಮನಸ್ಸು ಮಾಡುವದುಂಟು. ಪ್ರತ್ಯಕ್ಷ ಅಪರಾಧವು ಘಟಿಸದೆಯಿದ್ದ ಪಕ್ಷದಲ್ಲಿ ನಿಮ್ಮ ಮೇಲಿನ ನನ್ನ ಆದರವು ಕಡಿಮೆಯಾಗಲಾರದು. ಹೇಳತಕ್ಕದ್ದನ್ನು ಈಶ್ವರ ಸ್ಮರಣಪೂರ್ವಕವಾಗಿ ಹೇಳತಕ್ಕದ್ದು, ಕೇಳುತ್ತೇನೆ, ಎಂದು ಹೇಳಿದನು. ಆಗ ರಣದುಲ್ಲಾ ಖಾನನು, ತನಗೆ ಮಾರ್ಗದಲ್ಲಿ ಆ ಒಬ್ಬ ವೇಷಧಾರಿ ತರುಣ ಮಹಾರಾಷ್ಟ್ರ ಸರದಾರನು

ಭೆಟ್ಟಿಯಾದಾಗಿನಿಂದ, ಆತನನ್ನು ವಿಜಾಪುರಕ್ಕೆ ಕರೆತಂದು ತನ್ನ ಮನೆಯಲ್ಲಿಟ್ಟುಕೊಂಡಿದ್ದ ವರೆಗೆ ಎಲ್ಲ ವೃತ್ತಾಂತವನ್ನು ಒಂದು ಅಕ್ಷರಬಿಡದೆ ಹೇಳಿ, ಗದ್ಗದಕಂಠದಿಂದ ಅಪ್ಪಾ ಸಾಹೇಬನನ್ನು ಕುರಿತು ಅಂಜುತ್ತಂಜುತ್ತ–ಅಪ್ಪಾಸಾಹೇಬರೇ. ಆ ತರುಣ ಮಹಾರಾಷ್ಟ್ರ ಸರದಾರನೇ ತಮ್ಮ ಸೊಸೆಯಾದ ಚಂದ್ರಾವತಿಯು; ಆಕೆಯು ನನಗೆ ತಾಯಿಯಂತೆ ಪೂಜ್ಯಳಿದ್ದಾಳೆ. ಅಂಥ ಮಹಾಪತಿವ್ರತೆಯರು ದುರ್ಲಭರು. ಆಕೆಯ ಶೀಲಕ್ಕೆ ಕಲಂಕ ವುಂಟಾಗುವಂಥ ಯಾವ ಪ್ರಸಂಗವೂ ಒದಗಿರುವದಿಲ್ಲ ನನ್ನ ದುಷ್ಟ ವಾಸನೆಗಾಗಿ ನೀವು ಈಗಲೇ ನನಗೆ ದೇಹಾಂತ ಪ್ರಾಯಶ್ಚಿತ್ತವನ್ನು ಕೊಟ್ಟರೂ ನನಗೆ ಸಂತೋಷವದೆ; ಆದರೆ ನಿಷ್ಕಾರಣವಾಗಿ ಆ ಸಾಧ್ವಿಯ ವಿಷಯವಾಗಿ ಸಂಶಯಪಡಬಾರದೆಂದು ಹೇಳಿಕೊಳ್ಳುವೆನು. ಆ ಪತಿವ್ರತೆಯ ವಿಷಯವಾಗಿ ನಾನಾಸಾಹೇಬನ ಮನಸ್ಸು ನಿಷ್ಕಾರಣ ದೂಷಿತವಾಗಿ ರುವದನ್ನು ನೋಡಿ, ನನಗೆ ಬಹಳ ದುಃಖವಾಗಿದೆ. ಹೊತ್ತಿನಲ್ಲಿ ಖುದಾನು ಎಚ್ಚರ ಗೊಳಿಸದಿದ್ದರೆ, ಅವಿವೇಕಿಯಾದ ನಾನು ನಿಶ್ಚಯವಾಗಿ ಪಾಪದಲ್ಲಿ ಬೀಳುತ್ತಿದ್ದೆನು. ನಾನಾಸಾಹೇಬನು ಇಲ್ಲಿಗೆ ಹೇಗೆ ಬಂದಿದ್ದನೋ ತಿಳಿಯದು; ಆದರೆ ನನ್ನ ನೀಚ ಸೇವಕನಾದ ಮಹಮ್ಮದನು ನನಗೆ ಗೊತ್ತಿಲ್ಲದೆ ಆತನನ್ನು ನಮ್ಮ ನೆಲಮನೆಯಲ್ಲಿ ಸೆರೆಯಿಟ್ಟು, ಆತನನ್ನು ಕೊಲ್ಲುವ ಇಚ್ಛೆಯನ್ನು ಪ್ರಕಟಮಾಡಿದನು. ಆದರೂ ನಾನು ದುರ್ಲಕ್ಷ್ಯ ಮಾಡಿದೆನು. ತಿರುಗಿ ನನಗೇ ಪಶ್ಚಾತ್ತಾಪವಾದದ್ದರಿಂದ, ನಾನು ನಾನಾಸಾಹೇಬನನ್ನು ಬಿಡಿಸಲಿಕ್ಕೆ ಹೋಗುವವರೊಳಗೆ ಬೇರೆ ರೀತಿಯಿಂದ ಆತನ ಬಿಡುಗಡೆಯಾಗಿತ್ತು! ನಾನಾಸಾಹೇಬನು ನನ್ನ ಮಾತನ್ನು ಕೇಳದೆ ನನ್ನನ್ನು ಕೊಲ್ಲುವ ಪ್ರತಿಜ್ಞೆ ಮಾಡಿ ನಮ್ಮ ಮನೆಯಿಂದ ಹೊರಟು ಹೋದನು. ಅಪ್ಪಾ ಸಾಹೇಬರೇ, ನಾನು ಪಾಪವಾಸನೆಯನ್ನು ಮಾಡಿದ್ದು ನಿಜವು; ಆದರೆ ಆ ಪತಿವ್ರತೆಯ ಮನಸ್ಸಿಗೆ ಹತ್ತುವಂತೆ ನಾನು ಎಂದೂ ನಡಕೊಂಡಿಲ್ಲ. ಇದಲ್ಲದೆ, ಆಕೆಯ ವೇಷವನ್ನು ಕಂಡ ಭಾವವನ್ನು ಕೂಡ ಆಕೆಗೆ ತೋರಿಸಿರುವದಿಲ್ಲ, ನನ್ನ ಮಾತಿನ ಮೇಲೆ ವಿಶ್ವಾಸವಿಟ್ಟು ಆ ಪತಿವ್ರತೆ ಯನ್ನು ಮೊದಲಿನಂತೆ ಪರಾಮರ್ಶಿಸಿರಿ. ನಾನು ಮುಸಲ್ಮಾನ ನೆಂಬದಿಷ್ಟೇ ಮಾತಿನ ಮೇಲೆ ಹೋಗಬೇಡಿರಿ. ಮುಸಲ್ಮಾನರಲ್ಲಿ ನೀತಿಯಿಲ್ಲೆಂದು ತಿಳಿಯಬೇಡಿರಿ. ನಾನು ಸಾವಿರಸಾರೆ ಹೇಳುತ್ತೇನೆ. ಚಂದ್ರಾವತಿಬಾಯಿಯು ನನಗೆ ಹಡೆದ ತಾಯಿಯಂತೆ ವಂದ್ಯಳಿರುತ್ತಾಳೆ.

ರಣದುಲ್ಲಾಖಾನನು ಇನ್ನೂ ಮಾತಾಡುತ್ತಿರುವಾಗ ರಂಗರಾಯನು–ಖಾನಸಾಹೇಬರೇ, ನಿಮ್ಮ ಮಾತಿನ ಮೇಲೆ ನನ್ನ ವಿಶ್ವಾಸವಿಲ್ಲೆಂತಲ್ಲ; ಆದರೆ ನಿಮ್ಮಿಂದ ಇಂಥ ಕೆಲಸವಾದದ್ದು ನೆಟ್ಟಗಾಗಲಿಲ್ಲ, ಇರಲಿ, ಅದರ ಸಂಬಂಧದಿಂದ ನಾನು ಈಗ ನಿಮಗೇನೂ ಅನ್ನುವದಿಲ್ಲ. ನೀವು ಆಕೆಯನ್ನು ತಾಯಿಯ ಸಮಾನವೆಂದು ಹೇಳುವದರಲ್ಲಿ ಎಲ್ಲವೂ ಬಂದಿತು. ಇರಲಿ, ನಾನು ಮೊದಲಿನಂತೆ ಆಕೆಯನ್ನು ಪರಾಮರ್ಶಿಸುವದರಲ್ಲಿ ಆಶ್ಚರ್ಯವಿಲ್ಲ ನಮ್ಮ ಚಂದ್ರಾವತಿಯ ಕೈಯಿಂದ ಯಾವದೊಂದು ಅಮಂಗಲಕಾರ್ಯವು ಘಟಿಸೀತೆಂಬ ಸಂಶಯವು ನನಗೆ ಎಳ್ಳಷ್ಟಾದರೂ ಬರುವಹಾಗಿಲ್ಲ, ಬಂದಿರುವದೂ ಇಲ್ಲ, ಆಕೆಯು ಇಂಥ ಸಂಕಟದಲ್ಲಿ

ಬಿದ್ದಿರುವಳೆಂಬದು ನನಗೆ ಗೊತ್ತಾಗಿದ್ದರೆ, ಜೀವದ ಹಂಗು ಇಡದೆ ಆಕೆಯನ್ನು ಬಿಡಿಸಲಿಕ್ಕೆ ಯತ್ನಿಸುತ್ತಿದ್ದೆನು. ಆಕೆಯು ತವರಮನೆಗೆ ಹೋದಳೆಂಬ ತಿಳವಳಿಕೆಯಿಂದ ನಾನು ಸುಮ್ಮನೆ ಕುಳಿತೆನು, ಏನೂ ಚಿಂತೆಯಿಲ್ಲ. ಆದ ಮಾತಿನ ಸಲುವಾಗಿ ಪಶ್ಚಾತ್ತಾಪವಾಗಿರುವದರಿಂದ, ಈಗ ಹೆಚ್ಚಿನ ಮಾತುಗಳಾಡುವದು ಯೋಗ್ಯವಲ್ಲ; ಆದರೆ ಚಂದ್ರಾವತಿಯು ಎಲ್ಲಿ ಇದ್ದಾಳೆ? ಎಂದು ಕೇಳಲು ರಣದುಲ್ಲಾಖಾನನು– ಅಪ್ಪಾಸಾಹೇಬರೇ, ಪುರುಷವೇಷದ ಚಂದ್ರಾವತೀ ಬಾಯಿಯು, ನಮ್ಮ ಮನೆಯಲ್ಲಿಯೇ ಇರುತ್ತಾಳೆ. ಮನೆಯಲ್ಲಿ ಬೇಕಾದಲ್ಲಿ ಹೋಗಲಿಕ್ಕೆ ಬರಲಿಕ್ಕೆ ಆಕೆಗೆ ಸ್ವತಂತ್ರವಿರುವದು. ಈಗೆರಡು ದಿನಗಳಿಂದ ಆ ಪ್ರತಿಬಂಧವನ್ನೂ ಇಲ್ಲದಂತೆ ಮಾಡಿಬಿಟ್ಟಿದ್ದೇನೆ. ಆಕೆಯನ್ನು ತಾವು ಕರೆಸಿಕೊಂಡು ಆದರಿಸಬೇಕೆಂಬುದೇ ನನ್ನ ಪ್ರಾರ್ಥನೆಯು. ಇನ್ನೊಂದು ಸಂತೋಷದ ಸುದ್ದಿಯನ್ನು ತಮಗೆ ನಾನು ಹೇಳುವೆನು. ಸುಲ್ತಾನಗಡದ ಒಡೆತನವನ್ನು ನಾಳೆಗೇ ಬಾದಶಹರು ನಿಮಗೆ ಕೊಡತಕ್ಕವರಿದ್ದಾರೆ. ಮೊದಲಿಗಿಂತಲೂ ನಿಮಗೆ ಹೆಚ್ಚು ಅಧಿಕಾರವೂ, ಸೀಮೆಯೂ ಕೊಡಲ್ಪಡುವವು. ತಮ್ಮನ್ನು ಕರಕೊಂಡು ಬಂದಂತೆ ತಮ್ಮ ಅಧಿಕಾರವು ತಮಗೆ ದೊರೆಯಿತು, ತಾವು ಸಂತೋಷದಿಂದ ತಮ್ಮ ದುರ್ಗಕ್ಕೆ ಹೋಗುವದನ್ನು ನೋಡಿ ನನಗೂ ಸಂತೋಷವಾಗುತ್ತದೆ. ಹೋಗುವಾಗ ಚಂದ್ರಾವತಿಯ ಸಂಗಡ ನಮ್ಮ ತಂಗಿಯಾದ ಮೆಹರ ಜಾನಳನ್ನೂ ಕರಕೊಂಡು ಹೋಗಿರಿ. ಆಕೆಯು ದಿನದಿನಕ್ಕೆ ಕ್ಷೀಣವಾಗಹತ್ತಿದ್ದು, ಸುಲ್ತಾನಗಡಕ್ಕೆ ಹೋಗಲಿಚ್ಛಿಸುತ್ತಾಳೆ. ತಾವಿಲ್ಲದೆ ಆಕೆಯನ್ನು ಕಳಿಸಲಿಕ್ಕೆ ನಾನು ಅಂದೇಶಪಡುತ್ತಿದ್ದೆನು. ಖುದಾನ ದಯದಿಂದ ತಾವೇ ಸುಲ್ತಾನಗಡದ ಅಧಿಕಾರಿಗಳಾದಿರಿ. ಮೆಹೇರಜಾನಳ ಯೋಗಕ್ಷೇಮಕ್ಕಾಗಿ ದಾಸದಾಸಿಯರನ್ನು ಕಳಿಸುವೆನು. ನೀವು ನಿಮ್ಮ ಹೊಟ್ಟೆಯ ಮಗಳೆಂದು ತಿಳಿದು ಆಕೆಯನ್ನು ರಕ್ಷಿಸತಕ್ಕದ್ದು, ಎಂದು ಹೇಳಿ, ರಣದುಲ್ಲಾಖಾನನು ಹೊರಟುಹೋದನು. ಆತನು ಹೇಳಿದಂತೆ ಮರುದಿವಸ ಬಾದಶಹನು ರಂಗರಾಯನನ್ನು ಕರೆಸಿಕೊಂಡು ಆತನ ಅಧಿಕಾರವನ್ನು ಆತನಿಗೆ ಕೊಟ್ಟು, ಮಗನ ಮೋಹಕ್ಕೆ ಬಿದ್ದು ಅಡ್ಡಹಾದಿಗೆ ಹೋಗಬಾರದೆಂದು ಉಪದೇಶಿಸಿ ಕಳುಹಿದನು. ತರುವಾಯ ರಂಗರಾಯನು ಸುಲ್ತಾನಗಡಕ್ಕೆ ಹೊರಟು ನಿಲ್ಲಲು, ಚಂದ್ರಾವತಿಯು ರಣದುಲ್ಲಾ ಖಾನನ ಮನೆಯಿಂದ ಯಾವಾಗೋ ಎಲ್ಲಿಯೋ ಹೊರಟುಹೋಗಿಬಿಟ್ಟಿದ್ದಳು! ಇದರಿಂದ ಖಾನನು ರಂಗರಾಯರಿಗೆ ಇನ್ನು ಏನು ಹೇಳಲೆಂದು ಚಿಂತಿಸತೊಡಗಿದನು.

## ಸಮರ್ಥರ ದರ್ಶನ

ಮೇಲೆ ಹೇಳಿದಂತೆ ನಾನಾಸಾಹೇಬನು ತಂದೆಯ ಬಳಿಗೆ ಹೋಗಿಯೂ ವಿಶೇಷ ಪ್ರಯೋಜನವಾಗದ್ದರಿಂದ ಅಸಮಾಧಾನಪಟ್ಟು, ರಾಮದೇವನೊಡನೆ ಮನೆಗೆ ಬಂದ ಬಳಿಕ, ರಾಮದೇವನ ಸೂಚನೆಯಂತೆ ಅವರು ತಡಮಾಡದೆ ತಿರುಗಿ ಊರಿಗೆ ಹೊರಟರು.

ರಾಮದೇವನಿಗೆ ತಮ್ಮ ಸಂಗಡ ಬರಬೇಕೆಂದು ನಾನಾಸಾಹೇಬನೇ ಮೊದಲಾದವರು ಆಗ್ರಹಮಾಡಿದರೂ, ಆತನು ಒಡಂಬಡದೆ ವಿಜಾಪುರದಲ್ಲಿಯೇ ಉಳಿದನು. ತಾನಾಜಿಯೇ ಮೊದಲಾದವರು ಆತುರದಿಂದ ಪಯಣದ ಮೇಲೆ ಪಯಣವನ್ನು ಬೆಳಿಸಿ, ತಮ್ಮ ಸಾಂಕೇತಿಕ ಸ್ಥಳದ ಸಮೀಪಕ್ಕೆ ಹೋದ ಬಳಿಕ ಅಲ್ಲಿಯ ವರ್ತಮಾನವನ್ನು ತಿಳಕೊಂಡು ಬರುವದಕ್ಕಾಗಿ ತಾನಾಜಿಯು ಯಮುನ್ಯಾನನ್ನು ಕಳಿಸಿದನು. ಯಮುನ್ಯಾನು ಹೋಗಿ ಶೋಧಮಾಡಲು, ಆ ಮಾರುತಿಯ ದೇವಾಲಯದಲ್ಲಿ ಶಿವಾಜಿಯು ಇದ್ದಿಲ್ಲ; ಶ್ರೀಧರಸ್ವಾಮಿಗಳೂ ಇದ್ದಿಲ್ಲ. ಅವರು ಎಲ್ಲಿ ಹೋಗಿರುವರೆಂಬ ವರ್ತಮಾನವೂ ಆತನಿಗೆ ಗೊತ್ತಾಗಲಿಲ್ಲ. ಶಿವಾಜಿಯ, ಹಾಗು ಶ್ರೀಧರಸ್ವಾಮಿಗಳ ಕಾರ್ಯದಲ್ಲಿಯ ಮುಖ್ಯ ಗುಣವೆಂದರೆ, ಗೌಪ್ಯವು ಒಮ್ಮೊಮ್ಮೆ ತೀರ ನಂಬಿಗೆಯ ಜನರಿಗೂ ಕೂಡ ಅವರ ಗುಟ್ಟು ಗೊತ್ತಾಗುತ್ತಿದ್ದಿಲ್ಲ. ಯಮುನ್ಯಾನು ನಿರಾಶೆಯ ಈ ವರ್ತಮಾನವನ್ನು ಹೇಳಲು, ತಾನಾಜಿಗೆ ಬಹಳ ಅಸಮಾಧಾನವಾಯಿತು. ಇಬ್ಬರಲ್ಲಿ ಒಬ್ಬರೂ ಇಲ್ಲೆಂಬ ಮಾತು ಆತನಿಗೆ ವಿಚಿತ್ರವಾಗಿ ತೋರಿತು. ಆತನು ಹಲವು ವಿವಿಧ ಆಲೋಚನೆಗಳಿಗೆ ಒಳಗಾದನು. ಹೀಗೆ ಸುಮ್ಮನೆ ಆಲೋಚಿಸುತ್ತ ಕುಳಿತುಕೊಳ್ಳುವದರಲ್ಲಿ ಪ್ರಯೋಜನವಿಲ್ಲೆಂದು ತಿಳಿದು, ಸುದ್ದಿಯನ್ನು ತಿಳಕೊಳ್ಳುವದಕ್ಕಾಗಿ ತಾನೇ ಹೋದನು. ತೀರ ಹತ್ತಿರದ ನಂಬಿಗೆಯ ಕಾವಲುಗಾರರಿಂದ ಆತನಿಗೆ ಸುದ್ದಿ ಗೊತ್ತಾಯಿತು. ತಾನಾಜಿಯೇ ಮೊದಲಾದವರು ವಿಜಾಪುರಕ್ಕೆ ಹೋಗಿ ಬಹಳ ದಿನಗಳಾದರೂ ಯಾವ ಸುದ್ದಿಯೂ ಬರಲಿಲ್ಲೆಂದು ಆಲೋಚಿಸುತ್ತ ಕುಳಿತಾಗ, ನಾನಾಸಾಹೇಬನು ಆಕಸ್ಮಿಕವಾಗಿ ಇಲ್ಲದಂತಾದನೆಂಬ ಪತ್ರವು ವಿಜಾಪುರದಿಂದ ಬಂದದ್ದರಿಂದ, ಶಿವಾಜಿಯು ಅಸಮಾಧಾನಪಟ್ಟು, ತಾನು ವಿಜಾಪುರಕ್ಕೆ ಹೋಗಿಯೇ ತೀರುವೆನೆಂದು ಹಟಹಿಡಿದದ್ದನ್ನು ವಾಚಕರು ಮರೆತಿರಲಿಕ್ಕಿಲ್ಲ ಆಗ ಶ್ರೀಧರಸ್ವಾಮಿಗಳು ಶಿವಾಜಿಯ ಮನಸ್ಸನ್ನು ತಿರುಗಿಸುವ ಬೇರೆ ಉಪಾಯವನ್ನು ಕಾಣದೆ, ಆತನನ್ನು ಸಮರ್ಥ ರಾಮದಾಸಸ್ವಾಮಿಗಳ ದರ್ಶನಕ್ಕಾಗಿ ಕರಕೊಂಡು ಹೋಗಬೇಕೆಂದು ಆಲೋಚಿಸಿದರು. ರಾಮದಾಸ ಸ್ವಾಮಿಗಳ ದರ್ಶನವಾಗಬೇಕೆಂದು ಶಿವಾಜಿಯೂ ಬಹು ದಿವಸದಿಂದ ಆತುರಪಡುತ್ತಿದ್ದನು. ಸದ್ಯಕ್ಕೆ ದರ್ಶನದ ಯೋಗವಿಲ್ಲೆಂದು ಶ್ರೀಧರಸ್ವಾಮಿಗಳು ಆತನನ್ನು ಪ್ರತಿಬಂಧಿಸಿದರು. ಆದರೆ ಶ್ರೀಧರಸ್ವಾಮಿಗಳು ಈಗ ಈ ಸುಯೋಗನನ್ನು ಒದಗಿಸಿಕೊಡಲಿಕ್ಕೆ ಒಡಂಬಡಲು, ಶಿವಾಜಿಯು ಸಂತೋಷದಿಂದ ಒಪ್ಪಿಕೊಂಡನು. ತಾನಾಜಿಯೇ ಮೊದಲಾದವರು ಬಂದರೆ, ಅವರಿಗೆ ಮಾತ್ರ ಈ ಸುದ್ದಿಯನ್ನು ತಿಳಿಸಬೇಕೆಂದು ಒಬ್ಬಿಬ್ಬ ನಂಬಿಗೆಯ ಸೇವಕರ ಮುಂದೆ ಹೇಳಿ, ಅವರು ಪರಳಿಗೆ ಹೋಗಿದ್ದರು. ಇದನ್ನು ಆ ನಂಬಿಗೆಯ ಸೇವಕರ ಮುಖದಿಂದ ಕೇಳಿ, ತಾನಾಜಿಯು ಶಿವಾಜಿಯ ಹಾದಿಯನ್ನು ನೋಡುತ್ತ ಕುಳಿತುಕೊಳ್ಳಬೇಕಾಯಿತು. ಆಗ ನಾನಾಸಾಹೇಬನು ತಾನಾಜಿಯನ್ನು ಕುರಿತು–ತಾನಾಜಿ ರಾಯರೇ, ಶಿವಾಜಿಮಹಾರಾಜರು ಬರುವತನಕ ಸುಮ್ಮನೆ ನಾನು ಇಲ್ಲಿ ಕುಳಿತು ಮಾಡುವದೇನು? ಸುಲ್ತಾನಗಡವನ್ನು ಸ್ವಾಧೀನಪಡಿಸಿಕೊಳ್ಳುವ ಕಾಲವು ಸಮೀಪಿಸಿರುವದರಿಂದ, ಆ ದುರ್ಗದಲ್ಲಿಯ ಸುದ್ದಿಯನ್ನು ತಿಳಕೊಂಡು, ಸಾಧಿಸಿದಷ್ಟು

ಜನರನ್ನು ನಮ್ಮ ಕಡೆಗೆ ಒಡಕೊಂಡು ಮುಂದಿನ ಕಾರ್ಯಕ್ಕೆ ಅನುಕೂಲಮಾಡಿ ಕೊಳ್ಳುವದಕ್ಕಾಗಿ ನಾನು ಸುಲ್ತಾನಗಡಕ್ಕೆ ಹೋಗಿಬರುತ್ತೇನೆ. ನೀವೂ ಏಸಾಜಿಯೂ ಹೊಸ ದಂಡಾಳುಗಳನ್ನು ಕೂಡಿಸುವ ಕಾರ್ಯವನ್ನು ಮಾಡಿರಿ, ಎಂದು ಹೇಳಿ ಸುಲ್ತಾನಗಡಕ್ಕೆ ಹೋದನು. ಇತ್ತ ತಾನಾಜಿಯೂ, ಏಸಾಜಿಯೂ ಜನಸಂಗ್ರಹದ ಕಾರ್ಯವನ್ನು ಆರಂಭಿಸಿದರು.

ಶ್ರೀಧರಸ್ವಾಮಿಗಳು ಶಿವಾಜಿಯನ್ನು ಕರಕೊಂಡು ಸಮರ್ಥರ ಸ್ಥಾನವಾದ ಪರಳಿಗೆ ಹೊರಟಿದ್ದರೆಂದು ಮೇಲೆ ಹೇಳಿದೆಯಷ್ಟೇ? ಹಾದಿಯ ನಡೆಯುವಾಗ ಹಲವು ಸಂಗತಿಗಳನ್ನು ಶ್ರೀಧರಸ್ವಾಮಿಗಳು ಶಿವಾಜಿಗೆ ಮನಬಿಚ್ಚಿ ಹೇಳಿದರು. ಮುಸಲ್ಮಾನರಿಂದ ಹಳ್ಳಿಪಳ್ಳಿಗಳಲ್ಲಿ ಕೂಡ ಹಿಂದೂ ಜನರಿಗಾಗುವ ಉಪದ್ರವದ ಪ್ರತ್ಯಕ್ಷ ಅನುಭವವು ಶಿವಾಜಿಗೆ ಆಯಿತು. ಈ ಪ್ರವಾಸ ದಿಂದಲೂ, ಶ್ರೀಧರಸ್ವಾಮಿಗಳ ಸದುಪದೇಶದಿಂದಲೂ ತನಗೆ ಬಹುದೊಡ್ಡ ಲಾಭವಾಯಿತೆಂದು ಶಿವಾಜಿಯು ತಿಳಕೊಂಡನು. ಅವರು ಮಾರ್ಗವನ್ನು ಕ್ರಮಿಸುತ್ತ ಕ್ರಮಿಸುತ್ತ ಒಂದು ನದೀತೀರದ ಹಳ್ಳಿಗೆ ಬಂದರು. ನದಿಯ ತೀರದಲ್ಲಿ ಒಂದು ಮಾರುತಿಯ ದೇವಾಲಯವಿದ್ದು, ಸ್ಥಾನವು ಬಹು ರಮ್ಯವಾಗಿತ್ತು. ಬಿಸಿಲೂ ಆದ್ದರಿಂದ ಆ ದೇವಾಲಯದಲ್ಲಿ ಇಳಿದು ಸ್ನಾನವನ್ನು ತೀರಿಸಿಕೊಂಡು ಹೋಗಬೇಕೆಂದು ಸ್ವಾಮಿಗಳು ಯೋಚಿಸಿ ಅಲ್ಲಿ ಇಳಿದುಕೊಂಡರು. ಹೀಗೆ ಮಾರ್ಗದಲ್ಲಿ ಎಲ್ಲಿಯಾದರೂ ಇಳಕೊಂಡರೆ, ಶ್ರೀಧರಸ್ವಾಮಿಗಳು ಸ್ಥಾನದಲ್ಲಿರಬೇಕು, ಶಿವಾಜಿಯು ಊಟದ ಸಾಮಾನು ಮೊದಲಾದವನ್ನು ಊರಲ್ಲಿ ಕೊಂಡು ಕೊಂಡು ಬರಬೇಕು. ಸಾಮಾನು ಬಂದ ಮೇಲೆ ಸ್ವಾಮಿಗಳು ಸ್ನಾನಸಂಧ್ಯೆ ತೀರಿಸಿಕೊಂಡು ಅಡಿಗೆ ಮಾಡಿ ತಾವು ಉಂಡು ಶಿವಾಜಿಗೆ ಊಟಕ್ಕೆ ಹಾಕಬೇಕು. ಈ ಕ್ರಮವಿದ್ದರೂ ಈ ದಿನ ಶಿವಾಜಿಗೆ ಜ್ವರ ಬಂದದ್ದರಿಂದ ಶ್ರೀಧರಸ್ವಾಮಿಗಳು ಆತನನ್ನು ಗುಡಿಯಲ್ಲಿ ಕುಳ್ಳಿರಿಸಿ ತಾವು ಸಾಮಾನುಗಳನ್ನು ತರಲಿಕ್ಕೆ ಊರಲ್ಲಿ ಹೋದರು. ಇತ್ತ ಶಿವಾಜಿಯು ಗಾಸೆಯ ಮೇಲೆ ಅಡ್ಡಾಗಿ, ತುಂಬಿ ಹರಿಯುವ ಹೊಳೆಯ ಶೋಭೆಯನ್ನು ನೋಡುತ್ತಲಿದ್ದನು. ಹೊಳೆಯ ಆಚೆಯ ದಂಡೆಯಲ್ಲಿಯೂ ಒಂದು ಹಳ್ಳಿಯಿದ್ದು, ಹೊಳೆಯ ದಂಡೆಯಲ್ಲಿಯ ಘಾಟಿನ ಮೇಲೆ ಒಂದು ದೇವಾಲಯವಿತ್ತು. ಆ ಘಾಟಿನ ಮೇಲೆ ಒಬ್ಬ ವೃದ್ಧ ಬ್ರಾಹ್ಮಣನು ಸ್ನಾನಮಾಡಿ ಮಧ್ಯಾಹ್ನ ಸಂಧ್ಯಾವಂದನೆಯನ್ನು ಮಾಡುತ್ತ ಕುಳಿತುಕೊಂಡಿದ್ದನು. ಅಷ್ಟರಲ್ಲಿ ಒಬ್ಬ ಕಟಕನು ಆಕಳ ಹಸಿಯ ತೊಗಲನ್ನು ತಂದು ದೊಪ್ಪನೆ ನೀರಲ್ಲಿ ಚೆಲ್ಲಿಕೊಟ್ಟನು. ಅದರಿಂದ ಬ್ರಾಹ್ಮಣನಿಗೆ ನೀರು ಸಿಡಿದು, ಆಕಳ ತೊಗಲು ಕಣ್ಣಿಗೆ ಬಿದ್ದದ್ದರಿಂದ ಬ್ರಾಹ್ಮಣನ ಮೈ ಜುಮ್ಮೆಂದು ಆತನ ಮುಖದಿಂದ "ಎಲ ಎಲಾ ಚಾಂಡಲಾ, ಈ ಪಾಪವನ್ನು ಹೇಗೆ ಕಳಕೊಂಡೀ" ಎಂಬ ಶಬ್ದಗಳು ಹೊರಟವು. ಬ್ರಾಹ್ಮಣನು ಮತ್ತೊಂದು ಕಡೆಗೆ ಹೋಗಿ ಮತ್ತೆ ಸ್ನಾನಮಾಡಿ ಘಾಟನ್ನು ಹತ್ತಹತ್ತಿದನು. ಆಗ ಆ ಚಾಂಡಾಲನು ಓಡುತ್ತ ಹೋಗಿ ಆ ಬ್ರಾಹ್ಮಣನ ಮೈಮೇಲೆ ಉಗುಳಿದನು. ಆಗ ಆ ಬ್ರಾಹ್ಮಣನು ಸಿಟ್ಟಿನಿಂದ ಎರಡು ಬೈದು ಮತ್ತೆ ಸ್ನಾನಮಾಡಿಹೊರಟನು. ಮತ್ತೆ ಕಟಕನು ಉಗುಳಿದನು. ಹೀಗೆ

ಮೂರುಸಾರೆಯಾಗಿ ನಾಲ್ಕನೆಯ ಸಾರೆ ಬ್ರಾಹ್ಮಣನು ಸ್ನಾನಮಾಡಿ ಹೋಗುತ್ತಿರಲು, ಆ ಕಟಕನು ಬ್ರಾಹ್ಮಣನ ಮೇಲೆ ಉಗುಳಿದ್ದಲ್ಲದೆ, ಆಕಳ ಚರ್ಮದ್ದೊಂದು ಚೂರನ್ನು ಬ್ರಾಹ್ಮಣನ ಮೇಲೆ ಒಗೆದನು. ಅದರಿಂದ ಬ್ರಾಹ್ಮಣನು ಗಡಗಡನೆ ನಡುಗಹತ್ತಿರಲು, ಆತನ ಕೈಯೊಳಗಿನ ತುಂಬಿದ ದೊಡ್ಡ ತಂಬಿಗೆಯು ಆತನ ಕಾಲಮೇಲೆ ಬಿದ್ದು, ಆ ಮುದುಕ ಕಣ್ಣಲ್ಲಿ ಕತ್ತಲುಗೂಡಿಸಿದಂತಾಗಿ ಆತನು ನೆಲಕ್ಕೆ ಕುಳಿತುಕೊಂಡನು. ಅದನ್ನು ನೋಡಿ ಆ ಕಟಕನಿಗೆ ಪಶ್ಚಾತ್ತಾಪವಾಗುವ ದೊತ್ತೊಟ್ಟಿಗುಳಿದು, ಆತನು ಒಮ್ಮೆ ಸಿಟ್ಟಿನಿಂದ ಒಟಗುಟ್ಟುತ್ತ ಮತ್ತೊಮ್ಮೆ ನಗುತ್ತ ನಿಂತುಕೊಂಡಿದ್ದನು. ಇದನ್ನೆಲ್ಲ ಶಿವಾಜಿಯು ನೋಡಿ ಸಂತಾಪ ಗೊಂಡನು. ಅನಾಥ ಬ್ರಾಹ್ಮಣನಿಗೆ ಸಹಾಯಮಾಡಲಿಕ್ಕೆ ಆತನ ಮನಸ್ಸು ತವಕಿಸಿತು. ಮೈಯಲ್ಲಿ ಜ್ವರ ತುಂಬಿಕೊಂಡಿರಲು, ಹೊಳೆಯಲ್ಲಿ ಹೇಗೆ ಧುಮುಕಲೆಂದು ಆ ಪುಣ್ಯವಂತನು ಶಂಕಿಸಲಿಲ್ಲ; ತನ್ನದೊಂದು ಕೈಯು ನೋವಾಗಿರಲು, ತಾನು ಈಸಿ ಪಾರಾಗುವ ಬಗೆಯೇ ನೆಂದು ಆತನು ಭಯಪಡಲಿಲ್ಲ, ಯಾವ ವಿಚಾರಕ್ಕೂ ಆಸ್ಪದಕೊಡದೆ, ಆತನು ತನ್ನ ಖಡ್ಗವನ್ನು ಬಾಯಲ್ಲಿ ಅಡ್ಡ ಹಿಡಕೊಂಡು ಈಸಬಿದ್ದು ಮಾರಗೈ ಹಾಕುತ್ತ ನೆಟ್ಟಗೆ ಸಾಗಿದನು. ನಡಹೊಳೆಯಲ್ಲಿ ಸೆಳವು ವಿಶೇಷವಾಗಿದ್ದರೂ ಆ ಸಮರ್ಥನು ಅಸುಗೊಳ್ಳದೆ ನೆಟ್ಟಗೆ ಹೋಗಿ ದಂಡೆಯನ್ನು ಮುಟ್ಟಿದನು. ಆಮೇಲೆ ಪಾವಟಿಗೆಗಳನ್ನು ಹತ್ತಿಹೋದವನೇ ಆ ಕಟುಕನನ್ನು ಜೋರಿನಿಂದ ಗುದ್ದಿ ನೆಲಕ್ಕೆ ಕೆಡವಿ ಖಡ್ಗವನ್ನು ಅವನ ಮೇಲೆ ಎತ್ತಿದನು. ಇತ್ತ ಬ್ರಾಹ್ಮಣನು ತನ್ನ ಗತಿಯೇನಾಗುತ್ತದೋ ಎಂದು ಅಂದೇಶಪಡುತ್ತ ಭಯದಿಂದ ಶಿವಾಜಿಯನ್ನು ನೋಡುತ್ತ–ಮಹಾರಾಯಾ, ನಾನು ನಿನ್ನ ಕಾಲಬೀ............ ಎಂದು ನುಡಿಯುತ್ತ ಶಿವಾಜಿಯ ಚರಣಗಳ ಮೇಲೆ ಬಿದ್ದನು. ಅತ್ತ ಕಟಕನು ಒಟಗುಟ್ಟಿ ಬೈಯುತ್ತಲಿದ್ದನು. ಶಿವಾಜಿಯು ಅತ್ತ ಲಕ್ಷಗೊಡದೆ ಬ್ರಾಹ್ಮಣನನ್ನು ಸಮಾಧಾನಗೊಳಿಸಿ, ವೃತ್ತಾಂತವೇನೆಂದು ಕೇಳಲು, ಬ್ರಾಹ್ಮಣನು ನಡೆದ ಸಂಗತಿಯನ್ನೆಲ್ಲ ಒಂದು ಅಕ್ಷರ ಸಹ ಬಿಡದಂತೆ ಹೇಳಿ, ಕಣ್ಣಲ್ಲಿ ನೀರು ತಂದು–ಮಹಾರಾಯಾ, ಈಗ ಬ್ರಾಹ್ಮಣರ ಹಾಗು ಗೋಮಾತೆಯ ರಕ್ಷಕರು ಯಾರೂ ಇಲ್ಲ, ಎಂದು ನುಡಿಯಲು, ಶಿವಾಜಿಯ ಆ ಬ್ರಾಹ್ಮಣನ ಮುಂದಿನ ಮಾತುಗಳನ್ನು ಕೇಳದಾದನು. ಆಗಿನ ಶಿವಾಜಿಯು ಮುಖಮುದ್ರೆಯನ್ನು ನೋಡಿದರೆ, ಯಾವನೋ ಸ್ವರ್ಗಸ್ಥದೇವನು ತನ್ನ ಭಕ್ತನ ಬೆನ್ನು ಹತ್ತಿದ್ದ ದೈತ್ಯನ ಶಾಸನಮಾಡಿ ಭಕ್ತನನ್ನು ರಕ್ಷಿಸುವದಕ್ಕಾಗಿ ನದಿಯೊಳಗಿಂದ ಮೇಲಕ್ಕೆ ಬಂದಂತೆ ತೋರುತ್ತಿತ್ತು! ಆತನ ತೇಜಃಪುಂಜ ವಾದ ವಿಶಾಲ ನೇತ್ರಗಳು ಕೆಂಪಗೆ ಕೆಂಡದಂತಾಗಿದ್ದವು. ಮುಸಲ್ಮಾನರಿಂದ ಹಿಂದೂ ಜನರಿಗಾಗುತ್ತಿದ್ದ ಉಪದ್ರವದ ಕಥೆಗಳು ಈವರೆಗೆ ಆತನು ಕೇಳಿದವುಗಳೆಲ್ಲ ಆತನ ಕಣ್ಣಿಗೆ ಕಟ್ಟಿದಂತಾದವು. ಈ ಭಯಂಕರ ಮೂರ್ತಿಯನ್ನು ನೋಡಿ, ದೀನನಾಗಿ ಬಿದ್ದಿದ್ದ ಆ ಕಟಕನು, ಎರಡೂ ಕೈಗಳಿಂದ ಸಲಾಮು ಮಾಡುತ್ತ ಜೀವದಾನಕೊಡಿರೆಂದು ಬೇಡಿಕೊಳ್ಳುತ್ತಿದ್ದನು. ಶಿವರಾಯನ ಕ್ಷುಬ್ಧ ನೇತ್ರಗಳು ಬಹುಕ್ರೂರವಾಗಿ ತೋರಿದವು. ಇನ್ನು ನಾನು ಈತನ ಪ್ರಭಾವದಿಂದಲೇ ಸುಟ್ಟು ಭಸ್ಮವಾಗುವೆನೋ ಏನೋ, ಎಂದು ಆ ಕಟಕನು

ನೆನಿಸುತ್ತಲಿದ್ದನು. ದುರ್ಬಲರನ್ನು ಕಾಲಲ್ಲಿ ಮೆಟ್ಟಿ, ಬಲಿಷ್ಠರ ಮುಂದೆ ಬಾಲಬಡಿಯುವ ದುಷ್ಟರ ಕೆಟ್ಟಚಾಳಿಯು ಆ ಕಟಕನಲ್ಲಿ ಸ್ಪಷ್ಟವಾಗಿ ತೋರುತ್ತಿತ್ತು. ಶರಣಾಗತರನ್ನು ರಕ್ಷಿಸುವದನ್ನು ಶಿವಾಜಿಯು ಭಾರತದ ಕಥೆಗಳಿಂದ ಕಲಿತುಕೊಂಡಿದ್ದನು! ಆದ್ದರಿಂದ ಆತನು ಕಟಕನನ್ನು ಕೊಲ್ಲುವ ವಿಚಾರವನ್ನು ಕೂಡ ಮನಸ್ಸಿನಲ್ಲಿ ತಾರದೆ, ಅವನನ್ನು ಕುರಿತು ಅಚ್ಚ ಹಿಂದೂಸ್ಥಾನಿ ಭಾಷೆಯಿಂದ —"ನೀನು ಇಷ್ಟು ಹೇಳಿಕೊಳ್ಳುವದರಿಂದ ಜೀವದಾನವನ್ನು ಕೊಡುತ್ತೇನೆ; ಆದರೆ ಇಂಥ ದುಷ್ಟ ಕೆಲಸಗಳನ್ನು ಮಾಡುವ ಈ ನಿನ್ನ ಕೆಟ್ಟ ಕೈಯನ್ನು ಮಾತ್ರ ತುಂಡರಿಸದೆ ಬಿಡುವದಿಲ್ಲ" ಎಂದು ಕಟಕನ ಬಲಗೈಯನ್ನು ತುಂಡರಿಸಿ ಬ್ರಾಹ್ಮಣನ್ನು ಕುರಿತು–ಸ್ವಾಮೀ, ನೀವು ಇನ್ನು ಮನೆಗೆ ಹೋಗಿರಿ, ಆಚೆಯ ದಂಡೆಯ ಗುಡಿಯಲ್ಲಿ ನಾನು ಇರುತ್ತೇನೆ. ನಿಮ್ಮವರಾರನ್ನಾದರೂ ಅಲ್ಲಿಗೆ ಕಳಿಸಿದರೆ, ನಾನು ಕೈಲಾದಮಟ್ಟಿಗೆ ತಮ್ಮ ಸೇವೆಮಾಡುವೆನು, ಎಂದು ಹೇಳಿ, ಬ್ರಾಹ್ಮಣನನ್ನು ನಮಸ್ಕರಿಸಿ ಮತ್ತೆ ಹೊಳೆಯಲ್ಲಿ ಬಿದ್ದು ಈಸಿ ಪಾರಾಗಿ ಮೊದಲಿನಂತೆ ತನ್ನ ಸ್ಥಳದಲ್ಲಿ ಮಲಗಿಕೊಂಡುಬಿಟ್ಟನು.

ಶೀತಬಾಧೆಯಿಂದ ಶಿವಾಜಿಯ ಜ್ವರಗಳು ಹೆಚ್ಚಾಗಿ ಆತನ ಮೋರೆಯು ಎಣ್ಣೆ ಬಸಿಯಹತ್ತಿತು; ಕಣ್ಣುಗಳು ಕೆಂಪಾದವು. ಅಷ್ಟರಲ್ಲಿ ಶ್ರೀಧರಸ್ವಾಮಿಗಳು ಬಂದು ಇದನ್ನು ನೋಡಿ ಅಂದೇಶಪಟ್ಟು, ಶಿವಾಜಿಯ ಮೈಹಿಡಿದು ನೋಡಿ–ಶಿವಬಾ, ಇದೇನು? ಜ್ವರ ಕೆಂಡವಾಗಿವೆಯಲ್ಲ! ನದಿಯಲ್ಲಿ ಸ್ನಾನಗೀನ ಮಾಡಿದೆಯೋ ಏನು, ಎಂದು ಕೇಳಿದರು. ಆಗ ಶಿವಾಜಿಯು, ಹೇಳಲಿಕ್ಕೆ ಯಾವ ಮಹತ್ಕಾರ್ಯವೆಂದು ಸುಮ್ಮನೆ ಇರಲು, ಸ್ವಾಮಿಗಳು ಅತ್ತ ಬಿದ್ದಿರುವ ಒದ್ದೆಯನ್ನು ನೋಡಿ, ಅವನು ಸ್ನಾನಮಾಡಿರುವನೆಂದು ತಿಳಿದು, ಹೀಗೆ ಮಾಡತಕ್ಕದ್ದಲ್ಲವೆಂದು ಹೇಳಿ, ಆದ ಮಾತಿನ ಸಲುವಾಗಿ ಹೆಚ್ಚಿಗೆ ಚರ್ಚೆಮಾಡದೆ, ತಮ್ಮ ಸ್ನಾನ– ಸಂಧ್ಯಾದಿ ಕರ್ಮಗಳನ್ನು ತೀರಿಸಿಕೊಂಡು ಅಡಿಗೆಯನ್ನು ಮಾಡಿ ಶಿವಾಜಿಗೆ ಮೊದಲು ಊಟಕ್ಕೆ ಹಾಕಿದರು. ಶಿವಾಜಿಗೆ ಜ್ವರಬಂದಿರುವದರಿಂದ ಆ ದಿನ ಗುಡಿಯಲ್ಲಿ ಉಳಿದುಕೊಳ್ಳಬೇಕೆಂದು ಶ್ರೀಧರಸ್ವಾಮಿಗಳು ಯೋಚಿಸಿದರು; ಆದರೆ ಇದು ಶಿವಾಜಿಯ ಮನಸ್ಸಿಗೆ ಬರಲಿಲ್ಲ. ಆತನು ಚಟ್ಟನೆ ಎದ್ದು ಗಾಸೆಯನ್ನು ಕೈಯಲ್ಲಿ ತಕ್ಕೊಂಡು ಸ್ವಾಮಿಗಳನ್ನು ಕುರಿತು–ಈಗಲೇ ಇಲ್ಲಿಂದ ಹೊರಟುಹೋಗಿ ಸಮರ್ಥರ ದರ್ಶನವನ್ನು ತಕ್ಕೊಂಡು, ಅದೇ ಕಾಲಲ್ಲಿ ತಿರುಗಿಬಂದು ನಮ್ಮ ಕಾರ್ಯವನ್ನು ಕೈಕೊಳ್ಳೋಣ. ದೀನರ ತಾಪವು ಹೆಚ್ಚಾಯಿತು. ಇನ್ನು ಸುಮ್ಮನೆ ಕುಳಿತುಕೊಳ್ಳುವದು ಸರಿಯಲ್ಲ, ಗುರುಗಳೇ, ಈ ಪೊತ್ತಿನವರೆಗೆ ಕಳೆದ ದಿವಸಗಳೇ ಬಹಳವಾದವು, ಎಂದು ಗದ್ಗದ ಕಂಠದಿಂದ ನುಡಿಯುವಾಗ, ಆತನಲ್ಲಿ ಪಶ್ಚಾತ್ತಾಪ–ಖಿನ್ನತೆಗಳು ವ್ಯಕ್ತವಾದವು. ಅದನ್ನು ಶ್ರೀಧರಸ್ವಾಮಿಗಳು ನೋಡಿ, ತಾನಿಲ್ಲದಾಗ ಶಿವಾಜಿಯ ಕಣ್ಣಿಗೆ ಯಾವದೋ ಕೆಟ್ಟ ಪ್ರಸಂಗವು ಬಿದ್ದಿರುವದೆಂದು ತರ್ಕಿಸಿ ಸಮಾಧಾನ ಪಟ್ಟು, ತಿರುಗಿ ಮಾತಾಡದೆ ಆತನೊಡನೆ ಮಾರ್ಗವನ್ನು ಕ್ರಮಿಸತೊಡಗಿದರು. ಹಾದಿಯಲ್ಲಿ ಸ್ವಾಮಿಗಳು, ಈ ದಿನ ನಿನ್ನ ಮನಸ್ಸಿನ ಸ್ಥಿತಿಯಲ್ಲಿ ಇಷ್ಟು ಅಂತರವಾಗಲಿಕ್ಕೆ ಕಾರಣವೇನೆಂದು ಕೇಳಲು, ಶಿವಾಜಿಯು ಆ ವೃದ್ಧಬ್ರಾಹ್ಮಣನ ವೃತ್ತಾಂತವನ್ನು ಹೇಳಿದನು. ಅದನ್ನು ಕೇಳಿ

ಶ್ರೀಧರಸ್ವಾಮಿಗಳು–ಶಿವಬಾ, ಬಹಳ ಒಳ್ಳೆಯ ಕೆಲಸ ಮಾಡಿದೆ; ಸಾವಿರ ಉದಾಹರಣೆಗಳನ್ನು ಕಿವಿಯಿಂದ ಕೇಳುವದಕ್ಕಿಂತ, ಒಂದು ಉದಾಹರಣೆಯನ್ನು ಕಣ್ಣು ಮುಟ್ಟ ನೋಡುವದು ಬಹಳ ಮಹತ್ವದ್ದು. ಮುಸಲ್ಮಾನರಿಂದ ಹಿಂದೂ ಜನರಿಗಾಗುತ್ತಿರುವ ತ್ರಾಸವನ್ನು ಪ್ರತ್ಯಕ್ಷ ನೋಡಿದ್ದರಿಂದ, ನಿನ್ನ ಮನಸ್ಸು ಇಷ್ಟು ನೊಂದಿತು. ನೀನಾದರೂ ಪರಾಕ್ರಮವನ್ನು ಒಳಿತಾಗಿ ತೋರಿಸಿದೆ! ಜೀವದ ಹಂಗು ಇಲ್ಲದೆ ತುಂಬಿದ ಹೊಳೆಯನ್ನು ದಾಟಿ ಹೋಗಿ ದೀನರಿಗೆ ಸಹಾಯ ಮಾಡಿದ ನಿನ್ನ ಪರಾಕ್ರಮದ ಕೆಲಸದ ಬಣತಿಯೇ ಬೇರೆಯಾಗಿರುವದು. ಈವೊತ್ತಿನ ನಿನ್ನ ಸಾಹಸದ ಕೃತ್ಯವನ್ನು ಇಂಥ ಲಕ್ಷಾವಧಿ ಕೃತ್ಯಗಳಿಗಿಂತ ಹೆಚ್ಚೆಂದು ನಾನು ತಿಳಿಯುತ್ತೇನೆ, ಎಂದು ನುಡಿದರು. ಆಮೇಲೆ ಇಬ್ಬರೂ ಪಿಟ್ಟೆಂದು ಮಾತಾಡದೆ ಹಾದಿಯನ್ನು ನಡೆಯಹತ್ತಿದರು. ಸಮರ್ಥರ ದರ್ಶನದ ವಿಷಯವಾಗಿ ಶಿವಾಜಿಯ ಮನಸ್ಸು ಭಕ್ತಿರಸಪೂರ್ಣವಾಗತೊಡಗಿತು. ಅವರಿಬ್ಬರು ಆತುರದಿಂದ ಪರಳಿಯ ಮಠಕ್ಕೆ ಬಂದು ವಿಚಾರಸಲು, ಸಮರ್ಥರು ಮಠದಲ್ಲಿದ್ದಿಲ್ಲ. ಇದಲ್ಲದೆ, ಅವರು ಎಲ್ಲಿ ಇರುತ್ತಾರೆಂಬದಾದರೂ ಯಾರಿಗೂ ಗೊತ್ತಿದ್ದಿಲ್ಲ. ಮೊದಮೊದಲಿಗೆ ಸಮರ್ಥರ ಕಾರ್ಯಕ್ರಮ ವನ್ನು ನಿಶ್ಚಯವಾಗಿ ತಿಳಕೊಳ್ಳುವದು ಅವರ ಉತ್ತಮೋತ್ತಮ ಶಿಷ್ಯರಿಗೂ ಅಶಕ್ಯವಾಗಿತ್ತು. ಯಾವ ಹೊತ್ತಿಗೆ ಅವರು ಎಲ್ಲಿ ಹೋದಾರು, ಯಾವ ಸ್ಥಳದಲ್ಲಿ ಅವರು ಎಷ್ಟು ದಿನ ಕುಳಿತುಕೊಂಡಾರು ಎಂಬುದರ ನಿಯಮವನ್ನು ಹೇಳುವ ಹಾಗಿದ್ದಿಲ್ಲ. ಇದಲ್ಲದೆ ಅವರ ಮಠಕ್ಕೆ ಇನ್ನೂ ನಿಶ್ಚಿತಸ್ವರೂಪವು ಪ್ರಾಪ್ತವಾಗಿದ್ದಿಲ್ಲ. ಅವರಿಗೆ ಶಿಷ್ಯಪರಂಪರೆಯ ಅಪೇಕ್ಷೆಯೂ ಇದ್ದಿಲ್ಲ. ಎಲ್ಲಿಯಾದರೂ ಅಡವಿಯಲ್ಲಿ ಗಿಡದ ಹೊದರುಗಳಲ್ಲಿ, ಇಲ್ಲವೆ ದರಿಕಂದರಗಳಲ್ಲಿ ಕುಳಿತು ರಾಮನಾಮ ಜಪಮಾಡಬೇಕು, ಅಥವಾ ಪುರಶ್ಚರಣ ಮಾಡಬೇಕು, ಇಲ್ಲವೆ ಗಿಡಗಂಟೆಗಳನ್ನು ಕಿತ್ತಬೇಕು. ಒಟ್ಟಿಗೆ, ಸಮರ್ಥರು ನೋಡುವವರಿಗೆ ಹುಚ್ಚರಂತೆ ಕಾಣುತ್ತಿದ್ದರು. ಅವರ ನಿರಪೇಕ್ಷ ಬುದ್ಧಿಯೂ, ನಿರಹಂಕಾರಸ್ವಭಾವವೂ ಅವರು ಹುಚ್ಚರೆಂಬ ತಿಳುವಳಿಕೆಯು ದೃಢವಾಗಲಿಕ್ಕೆ ಕಾರಣವಾಗುತ್ತಿದ್ದವು. ತಮ್ಮ ನಡತೆಯ ಮೇಲೆ ಯಾವ ಪ್ರತಿಬಂಧವಿರುವದೂ ಅವರಿಗೆ ಸೇರುತ್ತಿದ್ದಿಲ್ಲ. ಅದರಿಂದ ಮಾತಾಡುವವರ ಸಂಗಡಲೂ ಅವರು ಮಾತಾಡುತ್ತಿದ್ದಿಲ್ಲ. ಒಬ್ಬರ ಹಂಗು ಅವರಿಗಿದ್ದಿಲ್ಲ. ಅವರ ಸಂಗಡ ಮಾತಾಡಲಿಕ್ಕೆ ಯೋಗ್ಯರಾದವರು ಒಬ್ಬಿಬ್ಬರಿದ್ದರೆ ಇರಬಹುದು. ಈ ಬಗೆಯ ಅವರ ಸ್ಥಿತಿಯಿದ್ದದರಿಂದ ಶಿವಾಜಿಗೆ ಸಮರ್ಥರಿರುವ ಸ್ಥಳವು ಇಂಥದೇ ಎಂದು ಗೊತ್ತಾಗುವ ಸಂಭವವಿದ್ದಿಲ್ಲ.

ಶಿವಾಜಿಯಂತು ಸಮರ್ಥರ ದರ್ಶನಕ್ಕಾಗಿ ಚಡಪಡಿಸುತ್ತಿದ್ದನು. ಶ್ರೀಧರಸ್ವಾಮಿಗಳು ಎಷ್ಟು ಹುಡುಕಿದರೂ ಸಮರ್ಥರ ಗೊತ್ತುಹತ್ತಲಿಲ್ಲ. ಅವರು ಪರಳಿಯ ಸುತ್ತುಮುತ್ತಲಿನ ಅಡವಿಯನ್ನು ಹುಡುಕಿದರು; ಯಾವತ್ತು ದರಿಗಳನ್ನೂ ಶೋಧಿಸಿದರು; ಆದರೆ ಸ್ವಾಮಿಗಳ ಗೊತ್ತುಹತ್ತಲಿಲ್ಲ. ಅದರಿಂದಂತು ಶಿವಾಜಿಯ ದರ್ಶನೇಚ್ಛೆಯು ಅನಿವಾರ್ಯವಾಯಿತು. ಎರಡು ದಿನಗಳಾದವು, ಮೂರನೆಯ ದಿವಸವೂ ಹೋಯಿತು. ರಾಜನ ಕನಸು ಮನಸುಗಳಲ್ಲಿ

ಸಮರ್ಥರ ದರ್ಶನದ ಹೊರತು ಬೇರೆ ವಿಷಯವು ಬಾರದಾಯಿತು. ಹೀಗಿರುವಾಗ ಒಬ್ಬ ವೃದ್ಧ ಬ್ರಾಹ್ಮಣನು ಶಿವಾಜಿಯ ಕನಸಿನಲ್ಲಿ ಬಂದು—''ಅಪ್ಪಾ, ಇಷ್ಟೇಕೆ ಚಡಪಡಿಸುತ್ತೀ? ಸಮರ್ಥರು ನಿನ್ನ ಮೇಲೆ ಬಹಳ ಪ್ರೇಮ ಮಾಡುತ್ತಾರೆ; ಆದರೆ, ಇದು ನಿನ್ನ ಸಂಗಡ ಸಂಭಾಷಣಾದಿಗಳನ್ನು ಮಾಡುವ ಸಮಯವಲ್ಲ. ನಿನ್ನ ಪ್ರತಿಜ್ಞೆಯ ದಿವಸಗಳು ತುಂಬುತ್ತ ಬಂದಿವೆಯಷ್ಟೆ? ಮುಸಲ್ಮಾನರ ಕೈಯೊಳಗಿಂದ ಒಂದು ಗೇಣು ಭೂಮಿಯನ್ನಾದರೂ ತಕ್ಕೊಂಡು, ಆಮೇಲೆ ದರ್ಶನಕ್ಕೆ ಬಾ. ಈಗ ನೀನು ಬಂದುಬಿಟ್ಟಿರುವದರಿಂದ ನಿನಗೆ ದರ್ಶನ ಮಾತ್ರ ಆದೀತು. ನಿನ್ನ ಧೈರ್ಯ-ಶೌರ್ಯಗಳಿಗೆ ಯಶಸ್ಸು ಪ್ರಾಪ್ತವಾಗಬೇಕೆಂದು ಸಮರ್ಥರು, ಉತ್ತರ ದಿಕ್ಕಿಗೆ ಸುಮಾರು ಅರ್ಧ ಹರದಾರಿಯ ಮೇಲಿದ್ದ ಒಂದು ಪೆಳೆಯಲ್ಲಿ ಪುರಶ್ಚರಣಮಾಡುತ್ತ ಕುಳಿತಿರುವರು. ಅಲ್ಲಿಗೆ ನೀನೊಬ್ಬನೇ ಹೋಗು, ದರ್ಶನವಾಗುವದು. ಮಾತಾಡಬೇಕೆಂಬ ಆಶೆಯನ್ನು ಮಾತ್ರ ಹಿಡಿಯಬೇಡ'' ಎಂದು ನುಡಿದು, ಆ ವೃದ್ಧ ಬ್ರಾಹ್ಮಣನು ಗುಪ್ತನಾದನು. ಭಾವಿಕನಾದ ಶಿವಾಜಿರಾಜನು ಎಚ್ಚತ್ತು, ಸಮರ್ಥರು ಸ್ವತಃ ಬಂದು ಹೀಗೆ ಹೇಳಿದರೆಂದು ನಂಬಿ, ಮರುದಿನ ಮೂಡಲು ಕೆಂಪು ಹರಿಯುತ್ತಲೆ ಶ್ರೀಧರಸ್ವಾಮಿಗಳಿಗೂ ಹೇಳದೆ, ಉತ್ತರ ದಿಕ್ಕನ್ನು ಹಿಡಿದು ಸಾಗಿದನು. ಹಾದಿಯಲ್ಲಿ ಹತ್ತಿದ ಒಂದು ಹಳ್ಳದಲ್ಲಿ ಸ್ನಾನಾದಿಗಳನ್ನು ಮಾಡಿ ಶುಚಿರ್ಭೂತನಾಗಿ, ಸ್ವಪ್ನದಲ್ಲಿ ದೃಷ್ಟಾಂತವಾದಷ್ಟು ಅಂತರವನ್ನು ಕ್ರಮಿಸಿ ಹೋಗಿ ನಾಲ್ಕೂ ಕಡೆಗೆ ಹುಡುಕಹತ್ತಿದನು. ಅಷ್ಟರಲ್ಲಿ ಒಂದು ಆಳವಾದ ಕಂದರದೊಳಗಿಂದ ಒಂದು ಗಂಭೀರ ಧ್ವನಿಯು ಕೇಳಬರುತ್ತಿರುವಂತೆ ಭಾಸವಾಯಿತು. ಕಿವಿಗೊಟ್ಟು ಕೇಳಲು, ಬರಬರುತ್ತ ಆ ಧ್ವನಿಯು ಸ್ಪಷ್ಟವಾಗಿ ಕೇಳಿಸಹತ್ತಿತ್ತು, ಅದನ್ನು ಕೇಳಿ ಆದರಪ್ರೇರಿತವಾದ ಆನಂದದಿಂದ ಶಿವರಾಯನ ಮೈಮೇಲ ರೋಮಾಂಚಗಳೆದ್ದವು!

ಬಹು ದಿವಸದಿಂದ ಕೀರ್ತಿಯನ್ನು ಕೇಳುತ್ತಿದ್ದ ಮೂರ್ತಿಯ ದರ್ಶನವು ಇನ್ನು ಆಗುತ್ತದೆಂಬ ಉಬ್ಬಿನಿಂದ ಆ ಶಿವಾಜಿಯ ಮನಸ್ಸು ತಲ್ಲೀನವಾಯಿತು. ಆ ಧ್ವನಿಯು ಕೇಳಬರುವ ದಿಕ್ಕನ್ನೇ ಹಿಡಿದು ಮುಂದಕ್ಕೆ ಸಾಗಲು, ದಟ್ಟವಾದ ಗಿಡಗಳ ನೆರಳಿನಿಂದ ತಂಪಾದ ಪ್ರದೇಶದೊಳಗಿನ ಒಂದು ಲತಾಮಂಟಪದ ಮರೆಗೆ ಆ ಪುಣ್ಯಮೂರ್ತಿಯು ಆಸನವನ್ನು ಹಾಕಿ ಕೊಂಡು, ಯೋಗದಂಡದ ಮೇಲಿ ಕೈಯನ್ನು ಇಟ್ಟುಕೊಂಡು ರಾಮನಾಮ ಘೋಷಮಾಡುತ್ತ ಕುಳಿತುಕೊಂಡಿತ್ತು, ನಿತ್ಯದಲ್ಲಿರುತ್ತಿದ್ದ ಕಮಂಡಲುವಿನ ಹೊರತು ಹತ್ತರ ಏನೂ ಇದ್ದಿಲ್ಲ. ಆ ಪುಣ್ಯ ಪುರುಷನನ್ನು ನೋಡಿದ ಕೂಡಲೆ ರಾಜನ ಅಂತಃಕರಣವು ಭಕ್ತಿರಸಪೂರ್ಣವಾಯಿತು. ಆತನು ಏನಿಲ್ಲೆಂದರೂ ಎರಡುಗಳಿಗೆಯಾದರೂ ತನ್ನ ತೇಜಃಪುಂಜವಾದ ವಿಶಾಲ ನೇತ್ರಗಳಿಂದ ಆ ಮಹಾತ್ಮನನ್ನು ಎವೆಬಿಡದೆ ನೋಡುತ್ತ ನಿಂತುಕೊಂಡನು. ಎಷ್ಟು ನೋಡಿದರೂ ಆತನಿಗೆ ತೃಪ್ತಿಯೇ ಆಗಲೊಲ್ಲದು. ಆ ಧೀರೋದಾತ್ತಮೂರ್ತಿಯಾದರೂ ಅಲ್ಲಾಡದೆ ಕುಳಿತ ಹಾಗೆ ಕುಳಿತುಬಿಟ್ಟಿತ್ತು, ದೈವಿಕವಾದ ತೇಜೋಮಂಡಲವು ಆ ಮೂರ್ತಿಯ ಸರ್ವಾಂಗದಿಂದ ಹೊರಸೂಸುತ್ತಿತ್ತು, ಆ ತೇಜೋಮಂಡಲದ

ಹೊರಗಡೆಯಲ್ಲಿ ಪುಣ್ಯಪ್ರತಾಪದ ಒಂದು ಮಂಡಲವು ಅತ್ಯಂತ ದೇದೀಪ್ಯಮಾನವಾಗಿ ಒಪ್ಪುತ್ತಿತ್ತು, ದೃಢಭಕ್ತಿಯೂ, ಪೂರ್ಣಶ್ರದ್ಧೆಯೂ, ಸತ್ಯನಿಷ್ಠೆಯೂ ಉಳ್ಳವರಿಗೆ ಮಾತ್ರ ಆ ಪ್ರತಾಪದಿಂದಲೂ, ತೇಜಸ್ಸಿನಿಂದಲೂ ತ್ರಾಸವಾಗಲಾರದೆಂಬುದು ಸ್ಪಷ್ಟವಾಗುತ್ತಿತ್ತು. ಶುದ್ಧಾತ್ಮರಲ್ಲದವರು ಆ ಮೂರ್ತಿಯ ಸಮೀಪಕ್ಕೆ ಹೋಗುವದು ಅಶಕ್ಯವಾಗಿತ್ತು. ನಾಲ್ಕು ಪ್ರಕಾರದ ಯೋಗಗಳಿಂದ ಜ್ಞಾನವನ್ನು ಪಡೆದು ಪೂರ್ಣ ಬ್ರಹ್ಮತ್ವವನ್ನು ಹೊಂದಿದ ವ್ಯಕ್ತಿಯ ಸ್ಥಿತಿಯು, ಆ ಪುಣ್ಯ ಪುರುಷನದಾಗಿತ್ತು. ಲೇಶವಾದರೂ ದೇಹದ ಪರಿವೆಯಿಲ್ಲದಿರುವಾಗ, ದೇಹವು ಉತ್ತಮ ಸ್ಥಿತಿಯಲ್ಲಿರುವದಕ್ಕೆ, ಯೋಗಯುಕ್ತ ಅಂತಃಶುದ್ಧಿಯ ಹೊರತು ಬೇರೆ ಕಾರಣವೇನಿರಬೇಕು? ಸಮರ್ಥರ ಶರೀರವು ಜಟ್ಟಿಗಳ ಶರೀರದಂತೆ ಮುಂಡೆದಿರುಗಿದ್ದಾಗಿತ್ತು. ದೇಹ ಕಾಂತಿಯಂತು ವರ್ಣನಾತೀತವಾಗಿತ್ತು. ಮುಖಮುದ್ರೆಯು ಸರ್ವಜ್ಞಾನದ ಖನಿಯೂ, ಚಿರಂತನ ಶಾಂತಿಯ ನಿಧಿಯೂ ಆಗಿತ್ತು. ಅದರಂತೆ ನಿರಿಚ್ಛೆಯೂ, ಪರಹಿತಪರಾಯಣತೆಯೂ ಆ ಮುಖಮುದ್ರೆಯಲ್ಲಿ ಉಕ್ಕುತ್ತಿದ್ದವು. ಇಂಥ ಪುಣ್ಯಮೂರ್ತಿಯನ್ನು ನೋಡಿ ಶಿವಾಜಿಯ ಕಣ್ಣೊಳಗಿಂದ ಆನಂದಬಾಷ್ಪಗಳು ದುರುತ್ತಿರಲು, ಆತನು ಮನಸ್ಸಿನಲ್ಲಿ— ಅಹಹ! ನಾನು ಧನ್ಯನು! ಪರಮ ಧನ್ಯನು!! ಈವೊತ್ತಿನವರೆಗೆ ನಾನು ಕೇಳಿದ ಕೀರ್ತಿಯು ಎಷ್ಟು ಅಲ್ಪವಾದದ್ದು, ಎಂದು ಆಶ್ಚರ್ಯಪಡುತ್ತ, ಭಕ್ತಿಯ ಹೆಚ್ಚಳದಿಂದ ಕಣ್ಣೀರುಗಳು ಎಡೆಬಿಡದೆ ಉದುರುತ್ತಿರಲು, ಆತನು ಮೂರ್ತಿಯನ್ನು ನೋಡುತ್ತ ನಿಂತು ಕೊಂಡನು.

ರಾಜ್ಯತೃಷ್ಣೆ ಮಹತ್ವಾಕಾಂಕ್ಷೆ ಮೊದಲಾದವುಗಳ ತ್ಯಾಗಮಾಡಿ ಈ ಪುಣ್ಯ ಮೂರ್ತಿಯ ಸೇವೆಯಲ್ಲಿ ಕಾಲಹರಣಮಾಡಬೇಕೆಂಬ ಇಚ್ಛೆಯು ಶಿವರಾಯನಲ್ಲಿ ಉತ್ಪನ್ನವಾಗಿ, ಅದು ಬರಬರುತ್ತ ಬೆಳೆಯಹತ್ತಿತು. ಕಡೆಗೆ ಆತನ ಮನಸ್ಸು ತಡೆಯದೆ—'' ಮಹಾತ್ಮಾ ಗುರುವರ್ಯಾ, ದಯಾನಿಧಿಯೇ, ಶಹಾಜಿಯ ಮಗನಾದ ಶಿವಾಜಿಯು ತಮಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡುತ್ತಾನೆ, ಆತನನ್ನು ಕೃಪಾದೃಷ್ಟಿಯಿಂದ ನೋಡಬೇಕು'' ಎಂದು ಗಟ್ಟಿಯಾಗಿ ನುಡಿದವನೇ ದಂಟಿನ ಹಾಗೆ ಸಮರ್ಥರ ಮುಂದೆ ಬಿದ್ದುಬಿಟ್ಟನು! ಇತ್ತ ಸಮರ್ಥರು ಅಂತರ್ಧಾನದಿಂದ ಎಲ್ಲವನ್ನು ತಿಳಕೊಂಡಂತೆ ತೋರಿತು; ಯಾಕಂದರೆ, ಅವರ ಮುಖದಲ್ಲಿ ಮುಗುಳುನಗೆಯು ಮಿನುಗುತ್ತಿತ್ತು; ಆದರೆ ಅವರು ಕಣ್ಣು ತೆರೆದು ನೋಡುವ ಲಕ್ಷಣವೇನು ಕಾಣಲಿಲ್ಲ. ಜಪವು ಒಂದೇ ಸವನೆ ನಡೆದೇ ಇತ್ತು. ಶಿವಾಜಿಯಂತು ದಂಟಿನ ಹಾಗೆ ಬಿದ್ದವನು ಮೇಲಕ್ಕೇಳದಾದನು. ನೆಲಕ್ಕೆ ಹಣೆ ಹಚ್ಚಿ ಆತನೂ ಧ್ಯಾನಮಾಡುತ್ತಿರುವಂತೆ ತೋರಿತು. ಅಷ್ಟರಲ್ಲಿ ಅರಸನ ಕಿವಿಯಲ್ಲಿ ಮಂದವಾದ ಮಧುರವಾಣಿಯಿಂದ ಯಾರೋ ಮಾತಾಡುತ್ತಿರುವಂತೆ ಭಾಸವಾಯಿತು. ಆ ಮಾತುಗಳು ಆತನಿಗೆ ಸ್ಪಷ್ಟವಾಗಿ ಕೇಳಹತ್ತಿ, ಅವು ಹೃದಯದಲ್ಲಿ ನಟ್ಟಂತಾದವು. ಆ ಮಾತುಗಳು ಯಾವವೆಂದರೆ—''ಗೋಬ್ರಾಹ್ಮಣರ ಪ್ರತಿಪಾಲನವು, ಯವನರ ಉಪದ್ರವದಿಂದ ಗೋಬ್ರಾಹ್ಮಣರನ್ನು ರಕ್ಷಿಸುವದೂ, ಸ್ವರಾಜ್ಯವನ್ನು ಸ್ಥಾಪಿಸುವದೂ ನಿಮ್ಮ ಕರ್ತವ್ಯ; ಅದರ ಸಲುವಾಗಿಯೇ ನಿಮ್ಮ ಅವತಾರವಾಗಿರುವದು, ಅದೇ ನಿಮ್ಮ ಪುರಶ್ಚರಣವು, ಅದೇ ನಿಮ್ಮ ತಪಸ್ಸು, ಅದೇ ನಿಮ್ಮ

ಗುರುಸೇವೆಯು. ಈ ಕರ್ತವ್ಯವನ್ನು ಮಾಡುವದಕ್ಕಾಗಿ ನೀವು ತಡಮಾಡುವದೇಕೆ? ಹೋಗಿರಿ, ಅದಕ್ಕಾಗಿ ಅವಸರಪಟ್ಟಷ್ಟು ಸ್ವಲ್ಪವಿರುವದು. ಅವತಾರೀ ಪುರುಷರು ತಮ್ಮ ಅವತಾರದ ಸಾಫಲ್ಯ ಮಾಡಿಬಿಡುವದಕ್ಕಾಗಿ ಸರ್ವಥಾ ವಿಲಂಬಮಾಡಲಾಗದು. ನಾವು ನಿಮಿತ್ತಮಾತ್ರರು, ಕೆಲಸಮಾಡುವದೆಲ್ಲ ನಿಮ್ಮ ಕೈಯಲ್ಲಿರುತ್ತದೆ. ಅನ್ಯ ವಿಚಾರಗಳ ಸ್ಪರ್ಶವು ಮನಸ್ಸಿಗೆ ಆಗಗೊಡಬಾರದು. ಹೀಗೆ ಗುರುಗಳೆಂದು ನೀವು ಮನ್ನಿಸುತ್ತಿರುವದರಿಂದ, ಕಾರ್ಯಾರಂಭವಾಗುತ್ತಲೇ ಪ್ರಥಮಸಿದ್ಧಿಯ ಸಮಯದಲ್ಲಿ ದರ್ಶನ ಕೊಡಲಾಗುವುದು. ಅಲ್ಲಿಯವರೆಗೆ ದರ್ಶನ–ಸಂಭಾಷಣಗಳಿಗಾಗಿ ಅವಸರ ಮಾಡಬಾರದು, ಅವಸರ ಮಾಡುವದಾದರೆ ಕಾರ್ಯದಲ್ಲಿ ಮಾಡಬೇಕು''

ಈ ಮೇರೆಗೆ ಅಮೃತಬಿಂದುಗಳಂತೆ ಹೃದಯದಲ್ಲಿ ಸೇರಿ ಉಲ್ಲಾಸವನ್ನುಂಟು ಮಾಡುವ ವಾಣಿಯು ಕೇಳದಂತಾದಕೂಡಲೆ, ಶಿವಾಜಿಯು ಅಡಬಡಿಸಿ ಎದ್ದು ನೋಡುತ್ತಾನೆ, ಬಳಿಯಲ್ಲಿ ಯಾರೂ ಇಲ್ಲ, ಮೂರ್ತಿಯು ಅದೃಶ್ಯವಾಗಿತ್ತು, ಶಿವಾಜಿಯು ಎಷ್ಟು ಹುಡುಕಿದರೂ ಮೂರ್ತಿಯು ತಿರುಗಿ ಕಣ್ಣಿಗೆ ಬೀಳಲಿಲ್ಲ. ತನ್ನ ಸ್ವಾಭಾವಿಕ ಒಲವಿನಂತೆ ಸಮರ್ಥರ ವಾಣಿಯು ಆದದ್ದರಿಂದ, ಶಿವಾಜಿಯು ಕಾರ್ಯದಲ್ಲಿ ಉತ್ಸಾಹಗೊಂಡನು. ತನ್ನ ಜನ್ಮವು ಗೋಬ್ರಾಹ್ಮಣ ಪ್ರತಿಪಾಲನ, ಯವನರ ಉಪದ್ರವದಿಂದ ಗೋಬ್ರಾಹ್ಮಣರ ರಕ್ಷಣ, ಸ್ವರಾಜ್ಯ ಸ್ಥಾಪನ ಇವುಗಳ ಸಲುವಾಗಿಯೇ ಆಗಿವೆಯೆಂದು ಆತನು ದೃಢವಾಗಿ ನಂಬಿದನು. ಸಮರ್ಥರ ವಾಣಿಯೊಳಗಿನ ''ಅದೇ ನಿಮ್ಮ ಪುರಶ್ಚರಣವು, ಅದೇ ನಿಮ್ಮ ತಪಸ್ಸು, ಅದೇ ನಿಮ್ಮ ಗುರುಸೇವೆಯು; ಅವತಾರೀಪುರುಷರು ತಮ್ಮ ಅವತಾರದ ಸಾಫಲ್ಯ ಮಾಡಿಬಿಡುವದಕ್ಕಾಗಿ ಸರ್ವಥಾ ವಿಲಂಬ ಮಾಡಲಾಗದು'' ಮೊದಲಾದ ವಾಕ್ಯಗಳಿಂದ ಶಿವಾಜಿಯ ಮನಸ್ಸಿನೊಳಗಿನ ನಿರಾಶೆಯ ಮೂಲವೇ ಕಡಿದಂತಾಯಿತು. ಶಿವಾಜಿಯು ಮೂರ್ತಿಯ ಶೋಧದ ಗೊಡವಿಗೆ ಹೋಗದೆ, ತಟ್ಟನೆ ಊರ ಕಡೆಗೆ ತಿರುಗಿದನು. ಆತನ ಮುಖ ಮುದ್ರೆಯು ಆನಂದಭರಿತವಾಗಿತ್ತು; ಮನಸ್ಸು ತದಾಕಾರವಾಗಿ ಹೋಗಿತ್ತು, ಆ ಸ್ಥಿತಿಯಲ್ಲಿ ಆತನು ಮಠದ ಸಮೀಪಕ್ಕೆ ಬಂದನು. ಇತ್ತ ಶ್ರೀಧರಸ್ವಾಮಿಗಳೇ ಮೊದಲಾದವರು, ಶಿವಾಜೀರಾಜನು ಎತ್ತ ಹೋದನೋ ಎಂದು ಹುಡುಕಹತ್ತಿದರು. ತನ್ನನು ಬಿಟ್ಟು ಶಿವಾಜಿಯು ಒಬ್ಬನೇ ಹೋದದ್ದು ಶ್ರೀಧರಸ್ವಾಮಿಗಳಿಗೆ ಆಶ್ಚರ್ಯಕರವಾಗಿ ತೋರಿತು. ರಾಜನು ದರ್ಶನೋತ್ಕಂಠಿತನಾಗಿರುವದರಿಂದ ಎಲ್ಲಿಯೋ ಒಬ್ಬನೇ ಅರಣ್ಯದಲ್ಲಿ ಸಮರ್ಥರ ಶೋಧಕ್ಕಾಗಿ ಹೋಗಿರಬಹುದೆಂದು ತಿಳಿದು ಯಾರೂ ಅಷ್ಟು ತತ್ಪರಪತೆಯಿಂದ ಆತನ ಶೋಧಮಾಡಲಿಲ್ಲ. ಅಷ್ಟರಲ್ಲಿ ಶಿವಾಜಿಯು ಬಂದು ತನ್ನ ವೃತ್ತಾಂತವನ್ನು ಹೇಳಲು, ಎಲ್ಲರಿಗೂ ಸಂತೋಷವಾಯಿತು. ಶ್ರೀಧರಸ್ವಾಮಿಗಳ ಮುಖದಿಂದ ಒಮ್ಮೆಲೆ–ಶಿವರಾಯನೇ, ನಿನಗೆ ಸರಿಯಾದ ಭಾಗ್ಯಶಾಲಿಯು ನೀನೇ ಎಂಬ ವಾಣಿಯು ಹೊರಟಿತು.

# ಒಳಸಂಚು

"ಶಿವಾಜಿರಾಜರು ಸಮರ್ಥರ ದರ್ಶನ ಮಾಡಿಕೊಂಡು ಬರುವವರೆಗೆ ನಾನು ಸುಲ್ತಾನಗಡಕ್ಕೆ ಹೋಗಿ ಏನಾದರೂ ಕೆಲಸ ಮಾಡುತ್ತೇನೆ"ಂದು ತಾನಾಜಿಗೆ ಹೇಳಿ, ನಾನಾಸಾಹೇಬನು ಹೋದದ್ದು ವಾಚಕರ ಸ್ಮರಣದಲ್ಲಿರಬಹುದು. ಆತನು ಸುಲ್ತಾನಗಡಕ್ಕೆ ಹೋಗುತ್ತಿರುವಾಗ, ಹಾದಿಯು ತಪ್ಪಿ ಅಡವಿಯ ಬಿದ್ದನು. ಅಲ್ಲಿ ಆತನಿಗೆ ಸೂರ್ಯಾಜಿ ಯೆಂಬ ಒಬ್ಬ ತರುಣ ಮಹಾರಾಷ್ಟ್ರನು ಭೆಟ್ಟಿಯಾದನು. ಸೈಯದುಲ್ಲಾಖಾನನು ನೀಚತನ ದಿಂದ ಮಹಾರಾಷ್ಟ್ರ ಸರದಾರರ ಬೇರೆ ಎರಡು ದೊಡ್ಡ ಮನೆತನಗಳು ನೆಲಸಮವಾಗಿದ್ದವು; ಸಂತಾಜಿ ಘೋರಪಡೆಯೆಂಬ ವೃದ್ಧ ಸರದಾರನ ಮನೆತನವೊಂದು, ಧಾರೆಗಾವದ ದೇಶಮುಖನಾದ ಸೂರ್ಯಾಜಿಯ ಮನೆತನವೊಂದು, ರಂಭಾವತಿಯ ಗಂಡನಾದ ರಾಮದೇವನ ಗುರುತನ್ನು ವಾಚಕರು ಮರೆತಿರಲಿಕ್ಕಿಲ್ಲ. ಸಂತಾಜಿ ಘೋರಪಡೆಯೇ ರಾಮದೇವನ ತಂದೆಯು. ಸಂತಾಜಿಯನ್ನೂ, ರಾಮದೇವನನ್ನೂ ಕೊಲ್ಲಿಸಬೇಕೆಂದು ಬಾದಶಹನು ಯೋಚಿಸಿದ್ದನ್ನು, ರಂಭಾವತಿಯು ತನ್ನ ಮಾವನಾದ ಸಂತಾಜಿಗೆ ತಿಳಿಸಲು, ಆತನು ತನ್ನ ಹುಚ್ಚಿಯಾದ ಮಗಳೊಡನೆ ಅಡವಿಯ ಸೇರಿದನು. ಸಂತಾಜಿಯ ಆ ಮಗಳನ್ನು ಸೂರ್ಯಾಜಿಗೆ ಕೊಟ್ಟಿತ್ತು. ಸೈಯದುಲ್ಲಾನ ಹಸ್ತಕನಾದ ಒಬ್ಬ ದುಷ್ಟ ಖಾನನು ಸೂರ್ಯಾಜಿಯ ಹೆಂಡತಿಯ ಮೇಲೆ ಕಣ್ಣು ಇಟ್ಟು, ಸೂರ್ಯಾಜಿಯ ತಂದೆಯನ್ನು ಸೆರೆಹಿಡಿದು, ಸೂರ್ಯಾಜಿಯನ್ನು ಸಾಯಬಡಿದು ಆತನ ಹೆಂಡತಿಯ ಮೇಲೆ ಕೈಮಾಡಿದನು; ಆದರೆ ಸೂರ್ಯಾಜಿಯ ಅತ್ಯಂತ ವಿಶ್ವಾಸದ ಸಾವಳ್ಯಾನೆಂಬ ಒಬ್ಬ ಹನ್ನೆರಡು ವರ್ಷದ ಹುಡುಗನು, ಕಾಮಾತುರನಾದ ಖಾನನನ್ನು ಯುಕ್ತಿಯಿಂದ ಕೊಂದು, ಸೂರ್ಯಾಜಿಯ ಹೆಂಡತಿಯ ಪಾತಿವ್ರತ್ಯವನ್ನು ಕಾಯ್ದನು; ಆದರೆ ಆ ಅನರ್ಥ ವನ್ನು ನೋಡಿ ಬೆದರಿದ್ದ ಸೂರ್ಯಾಜಿಯ ಹೆಂಡತಿಗೆ ಹುಚ್ಚು ಹಿಡಿಯಿತು! ಸೂರ್ಯಾಜಿಯು ದೈವಯೋಗದಿಂದ ಮರಣ ಹೊಂದದೆ ನೆಟ್ಟಗಾಗಿ ಮುಸಲ್ಮಾನರ ಮೇಲಿನ ಸಿಟ್ಟಿನಿಂದ ಕೆಲವು ಮಾವಳೆ ಜನರನ್ನು ಕೂಡಿಸಿ, ಅರಣ್ಯವನ್ನು ಸೇರಿ ಹಾದಿಯ ಬಡಿಯಹತ್ತಿದನು, ದರವಡೆ ಮಾಡಹತ್ತಿದನು. ಆತನು ವಿಶೇಷವಾಗಿ ಹಿಂದೂ ಜನರ ಗೊಡವಿಗೆ ಹೋಗುತ್ತಿದ್ದಿಲ್ಲ; ಹೆಂಗಸರು ಹಿಂದೂ ಜನರಿರಲಿ, ಮುಸಲ್ಮಾನರಿರಲಿ ಅವರ ಮಾನಮರ್ಯಾದೆಗಳಿಗೂ, ಪಾತಿವ್ರತ್ಯಕ್ಕೂ ವ್ಯತ್ಯಾಸವನ್ನುಂಟು ಮಾಡುತ್ತಿದ್ದಿಲ್ಲ. ಆತನು ಗಹನವಾದ ಅರಣ್ಯದಲ್ಲಿದ್ದು ಶಿವಾಜಿಯಂತೆ ಗುಪ್ತಸ್ಥಳದಲ್ಲಿ ದ್ರವ್ಯ ಸಂಚಯವನ್ನೂ, ಶಸ್ತ್ರ ಸಂಗ್ರಹವನ್ನೂ ಮಾಡಿದ್ದನು. ತಾನಿರುವ ಸ್ಥಳವನ್ನು ಭದ್ರಪಡಿಸಿ, ಅದರ ಸುತ್ತಲು ಅಲ್ಲಲ್ಲಿ ತನ್ನ ಜನರ ಕಾವಲಿಟ್ಟಿದ್ದನು. ಸರ್ವಸಾಧಾರಣ ಜನರಿಗೆ ಸೂರ್ಯಾಜಿಯು ಹಣೆಯುವ ಹಾಗಿದ್ದಿಲ್ಲ. ನಾನಾಸಾಹೇಬನೂ ಸೂರ್ಯಾಜಿಯೂ ಬಾಲಮಿತ್ರರಾಗಿದ್ದರು. ನಾನಾಸಾಹೇಬನು ತನ್ನ ಆ ಬಾಲಮಿತ್ರನಿಗೆ ಶಿವಾಜಿಯ ಯೋಗ್ಯತೆಯನ್ನೂ, ಆತನ ಸದುದ್ದೇಶವನ್ನೂ ತಿಳಿಸಿ, ಶಿವಾಜಿಯು ಮಾಡುತ್ತಿರುವ

ಗೋಬ್ರಾಹ್ಮಣ ಪ್ರತಿಪಾಲನೆಯ ಕಾರ್ಯಕ್ಕೂ, ಸ್ವರಾಜ್ಯ ಸ್ಥಾಪನೆಯ ಕಾರ್ಯಕ್ಕೂ ಸಹಾಯ ಮಾಡಲಿಕ್ಕೆ ತನ್ನ ಆ ಮಿತ್ರನನ್ನು ಒಡಂಬಡಿಸಿದನು. ಆ ಮೇಲೆ ನಾನಾಸಾಹೇಬನು ಸೂರ್ಯಾಜಿಯನ್ನು ಕರಕೊಂಡು ಸುಲ್ತಾನಗಡದ ಸುತ್ತುಮುತ್ತಲಿನ ಹಳ್ಳಿಗಳಿಗೂ, ಸುಲ್ತಾನಗಡಕ್ಕೂ ಹೋಗಿ ಬಹುಜನರ ಮನಸ್ಸುಗಳನ್ನು ಶಿವಾಜಿಯ ಕಡೆಗೆ ಜಗ್ಗಿ ಕೊಂಡು, ಪ್ರಸಂಗದಲ್ಲಿ ಆತನಿಗೆ ಸಹಾಯ ಮಾಡುವೆವೆಂದು ಅವರಿಂದ ವಚನವನ್ನು ತಕ್ಕೊಂಡನು. ಅಪ್ಪಾಸಾಹೇಬರ ಅಧಿಕಾರವು ಸ್ವಲ್ಪ ಕಠೋರವಾಗಿದ್ದರೂ, ಅವರಲ್ಲಿ ಸರಳತನ, ಪರಹಿತಬುದ್ಧಿ, ನಿಸ್ಪೃಹತೆ ಮೊದಲಾದ ಸದ್ಗುಣಗಳಿದ್ದವು; ಅದರಿಂದ ಜನರು ಅವರ ಸಂಗಡ ಅಂಜಿ ನಡೆಯುತ್ತಿದ್ದಷ್ಟೇ ಅವರ ಮೇಲೆ ಪ್ರೀತಿಯನ್ನಾದರೂ ಮಾಡುತ್ತಿದ್ದರು. ನಾನಾಸಾಹೇಬನೂ, ಸೂರ್ಯಾಜಿಯೂ ಅಪ್ಪಾ ಸಾಹೇಬರ ವಿರುದ್ಧವಾಗಿ ಬೋಧಿಸಿದ್ದರೆ, ಜನರ ಮನಸ್ಸು ತಿರಗುವ ಸಂಭವವಿದ್ದಿಲ್ಲ; ಆದರೆ ಅವರು ಆ ಬೋಧವನ್ನು ಯುಕ್ತಿಯಿಂದ ಮಾಡಿದರು. ಮುಸಲ್ಮಾನರು ನಿಷ್ಕಾರಣವಾಗಿ ಅಪ್ಪಾ ಸಾಹೇಬರನ್ನು ವಿಜಾಪುರಕ್ಕೆ ಸೆರೆ ಹಿಡಿದೊಯ್ದು ಅಪಮಾನಗೊಳಿಸಿದ್ದರಿಂದ, ಅವರು ಮುಸಲ್ಮಾನರ ಮೇಲೆ ಸಿಟ್ಟಾಗಿ ಶಿವಾಜಿಯ ಕಾರ್ಯಕ್ಕೆ ಗುಪ್ತ ರೀತಿಯಿಂದ ಸಮ್ಮತಿಸುವರೆಂದು ಹೇಳಿದರಲ್ಲದೆ, ಅಪ್ಪಾಸಾಹೇಬರೇ ಹೀಗೆ ಬೋಧಿಸಲಿಕ್ಕೆ ನಮಗೆ ಹೇಳಿರುತ್ತಾರೆಂದು ನುಡಿಯಲಿಕ್ಕೂ ಆ ಕಾರ್ಯಸಾಧಕರು ಹಿಂದೆ ಮುಂದೆ ನೋಡಲಿಲ್ಲ. ಮುಸಲ್ಮಾನರ ಅನ್ಯಾಯದ ಕೃತಿಯಿಂದ ಈ ಬೋಧವು ಜನರಿಗೆ ಸತ್ಯವಾಗಿ ತೋರಿದ್ದರಿಂದ, ಅವರು ನಾನಾಸಾಹೇಬನಿಗೆ ಮೇಲೆ ಹೇಳಿದಂತೆ ವಚನಕೊಟ್ಟರು. ಅಷ್ಟರಲ್ಲಿ ವಿಜಾಪುರದಿಂದ ರಂಗರಾವ ಅಪ್ಪಾನು ಸುಲ್ತಾನಗಡದ ಒಡೆತನವನ್ನು ಪುನಃ ಸಂಪಾದಿಸಿ, ಪರಿವಾರದೊಡನೆ ಸುಲ್ತಾನಗಡಕ್ಕೆ ಬಂದನು. ಆಗ ನಾನಾಸಾಹೇಬನು ಸಾಸವಡದ ಕಡೆಗಿರುವ ಶಿವಾಜಿಯ ಬಳಿಗೆ ಹೋಗಿ, ತಾನು ಮಾಡಿದ ಕೆಲಸಗಳನ್ನು ಹೇಳಿ, ಬೇಗನೆ ಸುಲ್ತಾನಗಡವನ್ನು ವಶಮಾಡಿಕೊಳ್ಳ ಬೇಕೆಂದು ಬೇಡಿಕೊಂಡನು. ರಣದುಲ್ಲಾಖಾನನು ಅಪ್ಪಾಸಾಹೇಬರ ಮುಂದೆ ಹೇಳಿದಂತೆ, ತನ್ನ ತಂಗಿಯಾದ ಮೆಹೆರಜಾನಳನ್ನು, ಜೀವಕ್ಕೆ ಜೀವಕೊಡುವ ನೂರು ಜನ ಶೂರ ಮುಸಲ್ಮಾನ ದಂಡಾಳುಗಳ ಅಂಗರಕ್ಷಣೆಯೊಡನೆ ಸುಲ್ತಾನಗಡಕ್ಕೆ ಈ ಮೊದಲೆ ಕಳಿಸಿದ್ದನು.

ನಾನಾಸಾಹೇಬನ ಮಾತುಗಳನ್ನು ಕೇಳಿ ಶಿವಾಜಿಗೆ ಸಮಾಧಾನವಾಯಿತು. ಆತನು ತಾನು ಸ್ವತಃ ಸುಲ್ತಾನಗಡಕ್ಕೆ ಹೋಗಿ ಅಲ್ಲಿಯ ಸ್ಥಿತಿಯನ್ನು ತಿಳಕೊಳ್ಳಬೇಕೆಂದು ಬಗೆದು, ವೇಷಾಂತರದಿಂದ ಸುಲ್ತಾನಗಡಕ್ಕೆ ಸಾಗಿದನು. ಹಾದಿಯಲ್ಲಿ "ನಾಂದೇಗಾವ" ಎಂಬ ಊರಲ್ಲಿ ಆತನು ಇಳಕೊಳ್ಳಬೇಕಾಯಿತು. ಅಲ್ಲಿ ಆತನಿಗೆ ಯಾರ ಗುರುತಿದ್ದಿಲ್ಲ- ಪರಿಚಯವಿದ್ದಿಲ್ಲ. ಆತನು ಊರಹೊರಗಿನ ಮಾರುತಿಯ ಗುಡಿಯ ಮುಂದೆ ಕುದುರೆಯನ್ನು ಕಟ್ಟಿ, ಎಲ್ಲಿಯಾದರೂ ಊಟದ ಮನೆಯನ್ನು ನೋಡಬೇಕೆಂದು ಊರೊಳಗೆ ಹೋದನು. ಆತನು ಊಟಕ್ಕೆ ಅನುಕೂಲವಾಗುತ್ತದೇನೆಂದು ಮನೆಮನೆ ಕೇಳುತ್ತ ಹೋದಂತೆ, ಒಂದು ಮನೆಯಲ್ಲಿ ಹಾಗೆ ಕೇಳುತ್ತಿರುವಾಗ, ಆ ಮನೆಯಲ್ಲಿ ಇಬ್ಬರು ತರುಣಿಯರು ಮಾತ್ರ ಇದ್ದರು. ಅವರಲ್ಲಿ

ಒಬ್ಬಳು ಶಿವಾಜಿಯನ್ನು ಕುರಿತು–ಅಪ್ಪಾ, ದೇವರು ಕೊಟ್ಟಿದ್ದ ನುಚ್ಚು ಬಕ್ಕರಿ ನಿನಗೆ ಊಟಕ್ಕೆ ಹಾಕುವೆವು; ಆದರೆ ಅದಕ್ಕಾಗಿ ದುಡ್ಡು ಕೊಡುವ ವಿಚಾರವನ್ನು ಮನಸ್ಸಿನಲ್ಲಿ ತರಬೇಡ; ನಾವು ಬಡವರಿರುವದೇನೋ ನಿಜವು; ಆದರೆ ಎರಡು ದಿನ ಮನೆಗೆ ಊಟಕ್ಕೆ ಬಂದ ಅತಿಥಿಯ ಕೈಯಿಂದ ರೊಕ್ಕ ಇಸಕೊಳ್ಳುವಂಥ ಹೀನಸ್ಥಿತಿಯು ನಮ್ಮದಿರುವದಿಲ್ಲ. ನೀನಂತು ಕುಲೀನನಾದ ಆಗರ್ಭಶ್ರೀಮಂತನಿರುವಂತೆ ತೋರುತ್ತದೆ. ಅನುವು ಆಪತ್ತುಗಳಲ್ಲಿ ನಿನ್ನಂಥವನಿಗೆ ಉಣಿಸಿದ್ದು ಅಯೋಗ್ಯವಾಗದು. ಒಂದು ಗಳಿಗೆ ಕುಳಿತುಕೋ, ಈಗ ಅಡಿಗೆ ಮಾಡಿ ಹಾಕುತ್ತೇನೆ ಅನ್ನಲು, ಶಿವಾಜಿಯು ಆಶ್ಚರ್ಯಪಟ್ಟು, ಆ ಹೆಣ್ಣುಮಗಳ ಉಪಕಾರವನ್ನು ಸ್ಮರಿಸಿ, ಆಕೆಯನ್ನು ಕುರಿತು–ಅವ್ವಾ, ಊರ ಹೊರಗೆ ಮಾರುತಿಯ ಗುಡಿಯ ಮುಂದೆ ನನ್ನ ಕುದುರೆಯನ್ನು ಕಟ್ಟಿ ಬಂದಿದ್ದೇನೆ. ನಿಮ್ಮ ಅಡಿಗೆಯಾಗುವದರೊಳಗೆ ಅದಕ್ಕೆ ಮೇವು–ದಾಣಿ ತಿನಿಸಿ ಚಾಕರಿ ಮಾಡಿ ಬರುವೆನು, ಎಂದು ಹೇಳಿದನು. ಅದಕ್ಕೆ ಆ ಹೆಂಗಸು–ಅಪ್ಪಾ, ನೀನು ಯಾವನೋ ದೊಡ್ಡ ಮನುಷ್ಯನ ಹಾಗೆ ಕಾಣುತ್ತೀ; ನಿನಗೆ ಸ್ಥಳದ ಅನುಕೂಲವಿಲ್ಲದಿದ್ದರೆ, ನಮ್ಮಲ್ಲಿಯೇ ಇಳಿದುಕೋ. ಕುದುರೆಯೊತ್ತಟ್ಟಿಗೆ ನೀನೊತ್ತಟ್ಟಿಗೆ ಇರುವದು ನೆಟ್ಟಗಲ್ಲ. ನಾವಿಬ್ಬರು ಅಕ್ಕತಂಗೆಯರು, ನಮ್ಮ ಅಬಚಿಯೊಬ್ಬಳು ಹೀಗೆ ಮೂವರೇ ಮನೆಯಲ್ಲಿರುತ್ತೇವೆ. ಯಾರೇನು ಮನೆಯನ್ನು ಹೊತ್ತುಕೊಂಡು ಹೋಗುವದಿಲ್ಲ. ಬೇಕಾದರೆ ಇಲ್ಲಿಯೇ ಅಂಗಳದಲ್ಲಿ ಕುದುರೆಯನ್ನು ಕಟ್ಟಿ ಊಟಮಾಡಿ ಈ ಅಟವಾಳಿಗೆಯಲ್ಲಿ ಮಲಗಿಕೊಳ್ಳಬಹುದು ಅನ್ನಲು, ಶಿವಾಜಿಯು ಬಹು ಸಮಾಧಾನಪಟ್ಟು, ನಿಮಗೆ ತೊಂದರೆಯಾಗದಿದ್ದರೆ ಸಂತೋಷದಿಂದ ಇಳಕೊಳ್ಳುವೆನು ಎಂದು ನುಡಿದು, ಕೂಡಲೆ ಗುಡಿಗೆ ಹೋಗಿ ಕುದುರೆಯನ್ನು ತಕ್ಕೊಂಡು ಬಂದು ಕಟ್ಟಿ, ಅದರ ಯೋಗ ಕ್ಷೇಮದಲ್ಲಿ ತೊಡಗಿದನು. ಇತ್ತ ಆ ತರುಣಿಯು ತನ್ನ ಅಬಚಿಯನ್ನು ಕುರಿತು ಅಲ್ಲೇ, ನಾನು ಇದೇನು ಅವಿಚಾರದ ಕೆಲಸ ಮಾಡಿದೆನು! ನಮ್ಮ ಮನೆಯಲ್ಲಿ ಅಜ್ಞಾತವಾಸದಲ್ಲಿರುವಂತೆ ಒಬ್ಬ ತರುಣಿಯು ಇರುತ್ತಿದ್ದು, ಗುರುತು ಪರಿಚಯವಿಲ್ಲದ ಆ ತರುಣ ಮನುಷ್ಯನಿಗೆ ಮನೆಯಲ್ಲಿ ಇಳಕೊಳ್ಳಲಿಕ್ಕೆ ನಾನು ಹೇಗೆ ಅನುಮಿತಿಸಿದೆನೋ ತಿಳಿಯದು! ಆ ಮನುಷ್ಯನು ಯಾರು? ಎಲ್ಲಿಯವನು? ಎಂಬದನ್ನು ವಿಚಾರಿಸದೆ ಇಳಿಯಗೊಟ್ಟದ್ದು ಅವಿಚಾರವಾಯಿತು. ಆ ತರುಣನ ತೇಜಸ್ಸನ್ನು ನೋಡಿ ಬೆರಗಾದ ನನ್ನಿಂದ ಇಂಥ ಪ್ರಮಾದವಾಯಿತು, ಎಂದು ಪಶ್ಚಾತ್ತಾಪ ಪಟ್ಟಳು; ಆದರೆ ಹೊರಗೆ ಕುದುರೆಯ ಚಾಕರಿಯನ್ನು ಮಾಡುವ ಶಿವಾಜಿಯ ಮುಖಮುದ್ರೆ ಯನ್ನು ನೋಡಿದ ಕೂಡಲೆ, ಆಕೆಯ ಪಶ್ಚಾತ್ತಾಪವು ಇಲ್ಲದಂತಾಗಿ, ಆಕೆಯು ಸಂತೋಷದಿಂದ ಆತನನ್ನು ಉಪಚರಿಸಿ, ಅಟವಾಳಿಗೆಯಲ್ಲಿ ಕಂಬಳಿಯನ್ನು ಹಾಸಿ ಇಳಿದುಕೊಳ್ಳುವುದಕ್ಕೆ ಅನುಕೂಲ ಮಾಡಿಕೊಟ್ಟಳು. ಶಿವಾಜಿಯ ಮುಖಮುದ್ರೆಯೇ ಅಷ್ಟು ಮೋಹಕವಾಗಿತ್ತು.

ಶಿವಾಜಿಯು ಕುದುರೆಯ ಯೋಗಕ್ಷೇಮವನ್ನು ತಕ್ಕೊಂಡು ಅಡ್ಡಾಗಿರಲು, ಆತನನ್ನು ಇಳಿಸಿಕೊಂಡ ಹೆಣ್ಣು ಮಗಳು ಹೊರಗೆ ಬಂದು–ಅಡಿಗೆಯಾಗಿದೆ, ಊಟಕ್ಕೆ ಏಳಬೇಕೆಂದು ಹೇಳಿದಳು. ಶಿವಾಜಿಯು ಕೂಡಲೆ ಎದ್ದು ಮನೆಯೊಳಗೆ ಹೋಗುತ್ತಿರಲು, ಆತನ ಕಣ್ಣಿಗೆ ಎಲ್ಲಿ

ಬೀಳುವನೋ ಎಂಬ ಅಂಜಿಕೆಯಿಂದ ಒಬ್ಬ ತರುಣಿಯು ಅವಸರದಿಂದ ಕೋಣೆಯೊಳಗೆ ಹೋಗುತ್ತಿದ್ದಳು. ಆಕೆಯು ಅಕಸ್ಮಾತ್ತಾಗಿ ಶಿವಾಜಿಯ ಕಣ್ಣಿಗೆ ಬೀಳಲು, ಆತನ ಮನಸ್ಸಿನಲ್ಲಿ ಬಗೆಬಗೆಯ ವಿಚಾರಗಳು ಉತ್ಪನ್ನವಾದವು. ಈ ಹೆಣ್ಣುಮಗಳ ಉಡಿಗೆತೊಡಿಗೆಗಳು ಬಡತನದವಾಗಿದ್ದರೂ ಈಕೆಯು ದೊಡ್ಡ ಮನೆತನದವಳಿರಬೇಕೆಂದು ಆತನು ತರ್ಕಿಸಿದನು. ಆತನು ಆಗ ಹೆಚ್ಚಿಗೆ ಏನೂ ಮಾತಾಡದೆ, ಊಟಮಾಡಿ ಹೊರಗೆ ಮಲಗಿಕೊಂಡನು. ಆತನು ವಿಚಾರ ಮಾಡುತ್ತ ಅತ್ತಿತ್ತ ಹೊರಳಾಡುತ್ತ ಮಲಗಿರುವಾಗ, ಇನ್ನು ಆತನಿಗೆ ಜಂಪು ಹತ್ತುತ್ತಿರಲು, ಅಷ್ಟರಲ್ಲಿ ಒಳಗಿನ ತರುಣಿಯರಿಬ್ಬರ ಸಂಭಾಷಣದಲ್ಲಿಯ ಕೆಳಗಿನ ಮಾತುಗಳು ಶಿವಾಜಿಯ ಕಿವಿಗೆ ಬಿದ್ದವು.

ಕುಲೀನತರುಣಿ–ಇಷ್ಟು ಅಭಿಮಾನವಿದ್ದರೆ, ನನ್ನೊಬ್ಬಳನ್ನೇ ಬಿಟ್ಟು ಆ ಶಹಾಜಿಯ ಮಗನ ಟೋಳಿಯಲ್ಲಿ ಕೂಡಿಕೊಳ್ಳಲಿಕ್ಕೆ ಅವರು ಯಾಕೆ ಹೋಗಬೇಕು? ನನ್ನನ್ನೂ ಕರಕೊಂಡು ಹೋಗಬೇಕಾಗಿತ್ತು, ತಾವಿಲ್ಲದಾಗ ತಮ್ಮ ಹೆಂಡತಿಯ ಗತಿಯೇನಾದೀತು, ಆಕೆಯು ಏನು ಮಾಡಿಯಾಳು ಎಂಬ ವಿಚಾರವು ಅವರಿಗಿರಬಾರದೇನು?

ಶಿವಾಜಿಗೆ ಆಶ್ರಯಕೊಟ್ಟ ತರುಣಿ–ಇರಲೇಬೇಕು! ತನ್ನ ಹೆಂಡತಿಯ ಮರ್ಯಾದೆಯನ್ನು ರಕ್ಷಿಸುವದಕ್ಕಾಗಿ ಇಲ್ಲಿ ಇರುವದನ್ನು ಬಿಟ್ಟು, ಧರ್ಮ ರಕ್ಷಣಕ್ಕಂತೆ, ಸ್ವರಾಜ್ಯ ಸ್ಥಾಪನಕ್ಕಂತೆ! ಆ ಪುಂಡ ಶಿವಾಜಿಯ ತಂಡವನ್ನು ಕಂಡಕಂಡ ತರುಣರು ಹೋಗಿ ಸೇರುವರು! ಇದೇನು ಚಂದ!

ಕುಲೀನ ತರುಣಿ–ಇನ್ನು ಸವಾರಿಯು ಇತ್ತ ಬರಬಹುದು ನೋಡೋಣ, ಏನೇನು ಚಮತ್ಕಾರವಾಗುತ್ತದೋ ಅದನ್ನು! ತೀರ ತಿರಸ್ಕರಿಸಲ್ಪಟ್ಟ ಹೆಂಡತಿಯು, ತನ್ನ ಪಾತಿವ್ರತ್ಯವನ್ನು ಕಾಯ್ದುಕೊಂಡು ತನ್ನ ಮಗ್ಗಲಲ್ಲಿ ನಿಂತು ಯುದ್ಧ ಮಾಡುತ್ತಾಳೆಂಬದರ ಅನುಭವವನ್ನು ಅವರಿಗೆ ತಂದುಕೊಡುವೆನು.

ಇನ್ನೂ ಏನೇನೋ ಆ ತರುಣಿಯರು ಮಾತಾಡಿದರು. ಅವು ಶಿವಾಜಿಗೆ ಕೇಳಿಸಲಿಲ್ಲ. ಕೇಳಿಸಿದ ಮಾತುಗಳ ಮೇಲಿಂದಲೇ ಆ ಕುಲೀನ ತರುಣಿಯು ನಾನಾಸಾಹೇಬನ ಹೆಂಡತಿಯೆಂದು ಶಿವಾಜಿಯು ತರ್ಕಿಸಿದನು. ಅದರಂತೆ ನಮ್ಮ ವಾಚಕರಾದರೂ ತರ್ಕಿಸಿರಬಹುದು. ತರ್ಕವು ಸುಳ್ಳಲ್ಲ. ನಾನಾ ಸಾಹೇಬನು, ತನ್ನ ಹೆಂಡತಿಯ ಪಾತಿವ್ರತ್ಯವು ಭಂಗವಾಗಿರುವದೆಂದು ತಿಳಿದು, ತನ್ನ ತಂದೆಯ ಮುಂದೆ ವಿಜಾಪುರದಲ್ಲಿ ಸ್ಪಷ್ಟವಾಗಿ ನುಡಿದು, ಆ ಅಪರಾಧಕ್ಕಾಗಿ ರಣದುಲ್ಲಾಖಾನನನ್ನು ಕೊಲ್ಲುವೆನೆಂದು ಪ್ರತಿಜ್ಞೆಮಾಡಿದ್ದು ಚಂದ್ರಾವತಿಗೆ ಗೊತ್ತಾಗಿತ್ತು; ಅದರಿಂದಲೇ ಆಕೆಯು ತನ್ನ ಮಾವನಿಗೆ ಮೋರೆತೋರಿಸಲು ನಾಚಿ, ಒಮ್ಮೆಲೆ ರಣದುಲ್ಲಾಖಾನನ ಮನೆಯಿಂದ ಪುರುಷವೇಷದಿಂದಲೇ ತನ್ನ ದಾಸಿಯನ್ನು ಕರಕೊಂಡು ಹೊರಟುಹೋಗಿದ್ದಳು. ಆಕೆಯು ದಾಸಿಯೊಡನೆ ನಾಂದೇಗಾವಕ್ಕೆ ಬಂದ ಬಳಿಕ, ಪುರುಷವೇಷವನ್ನು ಬಿಟ್ಟು, ಬಡವರಿಗೆ ಒಪ್ಪಬಹುದಾದ ಉಡಿಗೆ ತೊಡಿಗೆಗಳನ್ನು ಧರಿಸಿ ಬಡವರಂತೆ ಇರತೊಡಗಿದ್ದಳು. ಶಿವಾಜಿಯು ಈ ವಿಚಿತ್ರ ಯೋಗವನ್ನು ನೋಡಿ ಸೋಜಿಗ

ಪಟ್ಟು, ಆಗ ಯಾವ ಮಾತನ್ನೂ ಆಡದೆ ಮರುದಿವಸ ಮುಂಜಾವಿನಲ್ಲಿ ಅಲ್ಪಾಹಾರ ಮಾಡಿ ಹೊರಟು, ''ನಾನು ಸಂಜೆಯವರೆಗೆ ಬರುವದಿಲ್ಲೆ''ಂದು ಮನೆಯಲ್ಲಿ ಹೇಳಿ, ಸುಲ್ತಾನಗಡವನ್ನು ಸುತ್ತುವರಿದು ನೋಡತಕ್ಕದ್ದನ್ನು ಲಕ್ಷ್ಯಪೂರ್ವಕವಾಗಿ ನೋಡಿದನು. ಸಂಜೆಗೆ ಮನೆಗೆ ಬಂದು ಊಟಮಾಡಿ ಎಲ್ಲರೂ ಮಲಗಿದ ಮೇಲೆ, ಯಾರಿಗೂ ಗೊತ್ತಾಗದಂತೆ ಮೆಲ್ಲನೆ ಹೊರಬಿದ್ದು ಮತ್ತೆ ಸುಲ್ತಾನಗಡವನ್ನು ಸುತ್ತುವರಿದು ನೋಡತಕ್ಕದ್ದನ್ನು ನೋಡಿದನು. ಹಗಲಿಗಿಂತ ರಾತ್ರಿಯ ನಿರೀಕ್ಷಣವು ಶಿವಾಜಿಗೆ ಮಹತ್ತ್ವದ್ದಾಗಿ ತೋರಿತು. ಆತನ ನೀರೀಕ್ಷಣವು ಮುಗಿದು ಆತನು ಮನೆಗೆ ಮಲಗಿಕೊಳ್ಳಲಿಕ್ಕೆ ಬರುವದರೊಳಗೆ ಮೂಡಲಕೆಂಪು ಹರಿಯಿತು. ತಾನು ವೇಷಾಂತರದಿಂದ ಬಂದ ಕೆಲಸವು ಅರ್ಧದ ಮೇಲೆ ಆದಂತಾದ್ದರಿಂದ, ಶಿವಾಜಿಗೆ ಬಹುಮಟ್ಟಿಗೆ ಸಮಾಧಾನವಾಯಿತು. ಇನ್ನು ಪ್ರತ್ಯಕ್ಷ ಸುಲ್ತಾನ ಗಡದ ಮೇಲೆ ಹೋಗಿ ನೋಡಿಕೊಂಡು ಬರುವದಷ್ಟು ಉಳಿಯಿತು. ಆತನು ತನಗೆ ಆಶ್ರಯ ಕೊಟ್ಟ ತರುಣಿಯನ್ನು ಕುರಿತು–ಅಮ್ಮಾ, ನೀವು ನನ್ನನ್ನು ಒಡಹುಟ್ಟಿದವನೆಂದು ಭಾವಿಸಿ ನನಗೆ ಸಹಾಯಮಾಡಿದ ಉಪಕಾರವನ್ನು ನಾನು ಎಂದಿಗೂ ಮರೆಯಲಾರೆನು. ನೀವು ವಿಪತ್ತಿಗೆ ಗುರಿಯಾಗಿರುವಿರೆಂಬದನ್ನು ನಾನು ಅರಿತಿರುವೆನು. ನಿಮ್ಮ ವಿಪನ್ನಿವಾರಣದ ವಿಷಯದಲ್ಲಿ ನನ್ನಿಂದ ಸಹಾಯವಾಗದೆ ಇರದು. ನಾನು ಸುಲ್ತಾನಗಡದಲ್ಲಿಯ ದೇವಿಯ ದರ್ಶನ ಮಾಡಿಕೊಂಡು ಬರಬೇಕೆಂದು ಇಚ್ಛಿಸುತ್ತೇನೆ. ನಿಮ್ಮ ಗುರುತಿನವರನ್ನಾರನ್ನಾದರೂ ಕಳಿಸಿದರೆ ನೆಟ್ಟಗಾಗುವದು, ಎಂದು ಹೇಳಲು, ಆ ತರುಣಿಯು–ಓಹೋ, ಯಾಕಾಗ ಲೊಲ್ಲದು, ಅವಶ್ಯವಾಗಿ ಒಬ್ಬನನ್ನು ನಿಮ್ಮ ಸಂಗಡ ಕಳಿಸುತ್ತೇನೆ. ಈ ದಿನವಂತು ನಿಮ್ಮ ಕೆಲಸಕ್ಕೆ ಬಹಳ ಅನುಕೂಲವಿರುತ್ತದೆ. ನಮ್ಮ ಸಾವಳ್ಯಾನು ಇಂದೇ ಬರುವವನಿದ್ದಾನೆ. ಆತನನ್ನೇ ನಿಮ್ಮ ಸಂಗಡ ಕಳಿಸುವೆನು, ಎಂದು ಹೇಳಿದಳು. ಸಾವಳ್ಯಾನ ಹೆಸರನ್ನು ಕೇಳಿದ ಕೂಡಲೆ ಶಿವಾಜಿಗೆ ಸಮಾಧಾನವಾಯಿತು. ಆ ಹುಡುಗನ ಚರಿತ್ರವನ್ನು ಆತನು ನಾನಾಸಾಹೇಬನ ಮುಖದಿಂದ ಕೇಳಿದ್ದನು. ಮುಂದೆ ಸ್ವಲ್ಪ ಹೊತ್ತಿನಲ್ಲಿಯೇ ಸಾವಳ್ಯಾನು ಬರಲು, ಶಿವಾಜಿಯು ಆತನ ಸೂಚನೆಯಂತೆ ಗೊಂಗಡಿಯ ಹುಂಬ ಮನುಷ್ಯನ ಸೋಗು ಹಾಕಿಕೊಂಡು, ಆತನೊಡನೆ ಸುಲ್ತಾನಗಡಕ್ಕೆ ಹೊರಟನು. ಆಗ ಸೂರ್ಯಾಸ್ತದ ಸಮಯ ವಾಗಿತ್ತು, ಸಾವಳ್ಯಾನು, ಸುಲ್ತಾನಗಡದೊಳಗಿನ ಎಲ್ಲರ ಪರಿಚಯದ ಉಲ್ಲಾಸವೃತ್ತಿಯ ಚಪಲಹುಡುಗನಾದ್ದರಿಂದ, ಆತನ ಧೂರ್ತತನದ ಸವಿಮಾತುಗಳಿಂದ ಶಿವಾಜಿಗೆ ಸುಲ್ತಾನಗಡದ ಪ್ರವೇಶವು ಬಹು ಸುಲಭವಾಗಿ ಆಯಿತು. ಸಾವಳ್ಯಾನು, ಇವರು ಯಾರು ಎಂದು ತನ್ನನ್ನು ಕೇಳುವ ಕೆಲವು ಜನರಿಗೆ, ಈತನು ತನ್ನ ಮಾವನೆಂತಲೂ, ಕೆಲವರಿಗೆ ತನ್ನ ಕಕ್ಕನೆಂತಲೂ, ಈತನು ಮಧ್ಯರಾತ್ರಿಯಲ್ಲಿ ದೇವಿಯ ದರ್ಶನ ಮಾಡಿಕೊಳ್ಳುವೆನೆಂದು ಬೇಡಿಕೊಂಡದ್ದರಿಂದ ಇಷ್ಟುರಾತ್ರಿಯಲ್ಲಿ ಈತನನ್ನು ಕರಕೊಂಡು ಬರಬೇಕಾಯಿತೆಂತಲೂ ಹೇಳಿದನು. ಶಿವಾಜಿಯು ಮಧ್ಯರಾತ್ರಿಯವರೆಗೆ ದುರ್ಗವನ್ನೆಲ್ಲ ತಿರುಗಿ, ನೋಡತಕ್ಕದ್ದನ್ನು ನೋಡಿದನು; ಗುರುತಿಡತಕ್ಕ ಸ್ಥಳಗಳ ಗುರುತು ಇಟ್ಟುಕೊಂಡನು. ಮಧ್ಯರಾತ್ರಿಯ ಮೇಲೆ

ದೇವಿಯ ದರ್ಶನಮಾಡಿಕೊಂಡು, ದುರ್ಗದ ಮೇಲೆ ನಿಂತುಕೊಳ್ಳದೆ, ಸಾವಳ್ಯಾನ ಸಂಗಡ ಕೂಡಲೆ ನಾಂದೇಗಾವಕ್ಕೆ ಹೋಗಿ, ಅಲ್ಲಿ ಬಹಳ ಸ್ವಲ್ಪ ಹೊತ್ತು ವಿಶ್ರಾಂತಿಯನ್ನು ತಕ್ಕೊಂಡು, ತನ್ನ ಕುದುರೆಗೆ ಜೀನು ಹಾಕಿದನು. ಆಗ ಸಾವಳ್ಯಾನು– ಮಹಾರಾಜರೇ, ತಮ್ಮ ಎಲ್ಲ ಚರಿತ್ರವನ್ನು ಕೇಳಿರುವ ನನಗೆ ತಮ್ಮ ಗುರುತು ಹತ್ತಿತು. ತಮ್ಮ ಬಳಿಯಲ್ಲಿ ಚಾಕರಿಗೆ ನಿಂತು ಕೊಳ್ಳಬೇಕೆಂದು ನಾನು ಇಚ್ಛಿಸುತ್ತೇನೆ, ದಯಮಾಡಿ ನನ್ನನ್ನು ಸಂಗಡ ಕರಕೊಂಡು ಹೋಗಬೇಕು, ಎಂದು ಬೇಡಿಕೊಳ್ಳಲು, ಶಿವಾಜಿಯು–ನನ್ನ ಮನಸ್ಸಿನಲ್ಲಿಯೂ ನಿನ್ನನ್ನು ಚಾಕರಿಗೆ ಇಟ್ಟುಕೊಳ್ಳಬೇಕೆಂದು ಬಂದಿದೆ; ಆದರೆ ಇಂದು ಸಂಗಡ ಕರಕೊಂಡು ಹೋಗುವ ಸಮಯವಲ್ಲ, ಇನ್ನು ಸ್ವಲ್ಪ ದಿವಸಗಳಲ್ಲಿಯೇ ನಿನ್ನ ಬಯಕೆಯು ಪೂರ್ಣವಾದೀತು, ಎಂದು ಹೇಳಿ, ತನಗೆ ಆಶ್ರಯ ಕೊಟ್ಟ ತರುಣೆಯ ಅನುಮತಿಯಿಂದ ಪುಣೆಯ ಕಡೆಗೆ ಹೊರಟನು.

ತಂದೆಯಾದ ಶಹಾಜಿರಾಜರ ಪತ್ರವನ್ನೂ, ಗುರುವಾದ ದಾದೋಜಿಕೊಂಡದೇವನ ಕಠೋರ ಮಾತುಗಳನ್ನೂ ಕೇಳಿ ಶಿವಾಜಿಯು ಅಸಮಾಧಾನಪಟ್ಟು, ತಾಯಿಯ ಬಳಿಗೆ ಹೋಗಿ, ಇನ್ನು ಯಾವದೊಂದು ಮಹತ್ಕೃತ್ಯ ಮಾಡಿದ ಹೊರತು ಪುಣೆಗೆ ಬಂದು ನಿಮಗೆ ಮೋರೆ ತೋರಿಸಲಿಕ್ಕಿಲ್ಲೆಂದು ಪ್ರತಿಜ್ಞೆಮಾಡಿ ಹೊರಟುಹೋದನೆಂದು, ಹಿಂದೆ ಹೇಳಿದ್ದನ್ನು ವಾಚಕರು ಮರೆತಿರಲಿಕ್ಕಿಲ್ಲ, ಅಂದಬಳಿಕ ಶಿವಾಜಿಯು ಇಂದು ಪುಣೆಯ ಕಡೆಗೆ ಹೊರಟ ನೆಂದು ಬರೆಯುವದನ್ನು ನೋಡಿ, ವಾಚಕರು ಶಂಕಿತರಾಗಬಹುದು; ಆದರೆ, ಪುತ್ರವಾತ್ಸಲ್ಯದ ಜೀಜಾಬಾಯಿಯವರು ಮಗನ ವಿಯೋಗದಿಂದ ಅಸಮಾಧಾನಪಟ್ಟು, ಆತನನ್ನು ಹುಡುಕುತ್ತ ಆತನಿರುವ ಗುಪ್ತವಾದ ಅರಣ್ಯಕ್ಕೆ ಹೋಗಿ ಆತನನ್ನು ಕಂಡು–ನೀನು ಪುಣೆಗೆ ಬರಲೇ ಬೇಕೆಂದು ಹೇಳಿದರು. ಆಗ ಮಾತೃಭಕ್ತನಾದ ಶಿವಾಜಿಯು ತಾಯಿಯ ಆಜ್ಞೆಗಿಂತಲೂ ತನ್ನ ಪ್ರತಿಜ್ಞೆಯು ಹೆಚ್ಚಿನದಲ್ಲೆಂದು ತಿಳಿದು ಪುಣೆಗೆ ಹೋದನು. ಅಂದಿನಿಂದ ಆತನು ಪುಣೆಗೆ ಹೋಗುತ್ತ ಬರುತ್ತಲಿದ್ದನು. ಈಗಂತು ಆತನು ಸುಲ್ತಾನ ಗಡವನ್ನು ವಶಮಾಡಿಕೊಳ್ಳುವ ಮಹತ್ಕೃತ್ಯಕ್ಕೆ ಕೈಹಾಕಬೇಕಾಗಿತ್ತು, ಇಂಥ ಪ್ರಸಂಗದಲ್ಲಿ ತಾಯಿಯ ಆಶೀರ್ವಾದವು ಬೇಕೆಂದು ತಿಳಿದು ಆತನು ತಾಯಿಯನ್ನೂ, ಗುರುಗಳನ್ನೂ ಕಾಣುವದಕ್ಕಾಗಿ ಪುಣೆಗೆ ಹೋಗಬೇಕೆಂದು ಹೊರಟನು. ಸುಲ್ತಾನಗಡದ ಸ್ಥಿತಿಯನ್ನು ಪ್ರತ್ಯಕ್ಷ ನೋಡಿದ ಬಳಿಕ, ಅದನ್ನು ವಶಮಾಡಿ ಕೊಳ್ಳುವದು ಆತನಿಗೆ ದುಸ್ತರವಾಗಿ ತೋರಿತು. ಅದರಿಂದ ಆತನು ಖಿನ್ನನಾಗಿದ್ದನು. ಒಮ್ಮೆಲೆ ಸುಲ್ತಾನಗಡದ ಮೇಲೆ ಸಾಗಿ ಹೋಗಲಿಕ್ಕೆ ಆತನು ಹಿಂದುಮುಂದೆ ನೋಡಹತ್ತಿದನು. ರಣದುಲ್ಲಾಖಾನನ ತಂಗಿಯಾದ–ಮೇಹೇರಜಾನಳು ಸುಲ್ತಾನಗಡದಲ್ಲಿ ಇರುತ್ತಿದ್ದು, ಆಕೆಯ ಸಂರಕ್ಷಣಕ್ಕಾಗಿ ನೂರು ಜನ ಸಿಪಾಯಿಗಳು ಬಂದಿದ್ದರು. ಇದಲ್ಲದೆ, ಸೈಯದುಲ್ಲಾನು ತನ್ನ ನೂರಾರು ಜನ ಶೂರ ಸಿಪಾಯಿಗಳನ್ನು ಸುಲ್ತಾನಗಡದ ಕೆಳಗೆ ಇಟ್ಟು, ತಾನು ದುರ್ಗದ ಮೇಲೆ ನಿಯಮಿತ ಪರಿವಾರದೊಡನೆ ಇರುತ್ತಿದ್ದನು; ರಂಗರಾವ ಅಪ್ಪಾಸಾಹೇಬನೂ ಸ್ವಲ್ಪ ದಿನಗಳ ಹಿಂದೆ ತನ್ನ ದುರ್ಗಕ್ಕೆ ಬಂದು, ಎಲ್ಲ ವ್ಯವಸ್ಥೆಯನ್ನು ಮಾಡಿದ್ದನು. ಈ ಎಲ್ಲ ವಿಘ್ನಗಳನ್ನು ನೀಗಿ ದುರ್ಗವನ್ನು ವಶಮಾಡಿಕೊಳ್ಳುವದು ಶಿವಾಜಿಗೆ ದುಸ್ತರವಾಗಿ ತೋರಿದ್ದು

ಆಶ್ಚರ್ಯವಲ್ಲ. ಶಿವಾಜಿಯು ಚಿಕ್ಕವನಾಗಿದ್ದರೂ, ಆತನ ವಿಚಾರಗಳು ಪ್ರಬುದ್ಧವಾಗಿದ್ದವು. ನಾನಾಸಾಹೇಬನೇ ಮೊದಲಾದವರು ಸುಲ್ತಾನಗಡವನ್ನು ವಶಮಾಡಿಕೊಳ್ಳುವದಕ್ಕಾಗಿ ಆತುರ ಪಡುತ್ತಿದ್ದರು; ಆದರೆ ಶಿವಾಜಿಯು ಅವಸರ ಮಾಡದೆ ''ಹೂ, ವಶಮಾಡಿಕೊಳ್ಳೋಣ'' ಎಂದು ಹೇಳುತ್ತಲಿದ್ದನು. ವಿಚಾರದ ಸ್ಥಿತಿಯಲ್ಲಿ ತಕ್ಕಷ್ಟಕ್ಕಿಂತ ಹೆಚ್ಚು ಕಾಲವು ಕ್ರಮಿಸಹತ್ತಿತು. ಹೀಗಿರುವಾಗ ಒಂದು ದಿನ ಶಹಾಜಿರಾಜರಿಂದ ಮತ್ತೊಮ್ಮೆ ಮರ್ಮೋದ್ಘಾಟಕ ಪತ್ರವು ಶಿವಾಜಿಗೆ ಬಂದಿತು. ಅದರಲ್ಲಿ ಅವರು–ಬಡಬಗ್ಗರನ್ನು ಗೋಳಾಡಿಸಿ, ಮುಸಲ್ಮಾನರು ಮೇಲೆ ಸಂತಾಪಗೊಂಡ ಮಾತ್ರದಿಂದ ಸ್ವರಾಜ್ಯವು ಸ್ಥಾಪಿಸಲ್ಪಡುತ್ತಿದ್ದರೆ, ಇಷ್ಟುಹೊತ್ತಿಗೆ ಬಹು ಜನರು ಸ್ವರಾಜ್ಯವನ್ನು ಸ್ಥಾಪಿಸುತ್ತಿದ್ದರು. ಮುಸಲ್ಮಾನರಿಗೆ ಕೈತೋರಿಸಿ ಸ್ವರಾಜ್ಯವನ್ನು ಸ್ಥಾಪಿಸುವದೇ ನಿಶ್ಚಯವಿದ್ದರೆ, ಮುಸಲ್ಮಾನರ ಎದುರಿಗೆ, ಇಲ್ಲವೆ ಅವರ ಅಧಿಕಾರಿಗಳ ಎದುರಿಗೆ ನಿಂತು ಹೋರಾಡತಕ್ಕದ್ದು. ಹಾಗೆ ಮಾಡದೆ ಬಡಬಗ್ಗರನ್ನು ಪೀಡಿಸಿದರೆ ಆಗುವದೇನು? ಮುಸಲ್ಮಾನರ ಗೊಡವಿಗೆ ಹೋಗದೆ ಬಡವರನ್ನು ಪೀಡಿಸುವದೂ, ಪಟ್ಟಣಗಳ ಸನಿಯಕ್ಕೆ ಸುಳಿಯದೆ, ಹಳ್ಳಿ ಪಳ್ಳಿಗಳನ್ನು ಸುಲಿದು ಸೂರೆ ಮಾಡುವದೂ ಹೇಡಿತನದ ಲಕ್ಷಣಗಳಾಗಿರುವವು ಎಂಬರ್ಥದ ಸಂಗತಿಯನ್ನು ಬರೆದಿದ್ದರು. ಗುರುವಾದ ದಾದೋಜಿಕೊಂಡದೇವರಾದರೂ ಇದೇ ಅರ್ಥದಿಂದ ಶಿವಾಜಿಗೆ ಸಿಟ್ಟು ಮಾಡಿದನು. ಸ್ವರಾಜ್ಯ ಸ್ಥಾಪಿಸುವುದು ಒತ್ತಟ್ಟಿಗುಳಿದು, ನೀನು ರಾಜಗಳ್ಳನು ಮಾತ್ರ ಆದೀ, ಎಂದು ಅವರು ಸ್ಪಷ್ಟವಾಗಿ ಹೇಳಿದರು. ಇದರಿಂದ ಶಿವಾಜಿಯ ಮನಸ್ಸಿಗೆ ಹತ್ತಿ ಪ್ರತಿಜ್ಞೆಯ ದಿನಗಳು ಮುಗಿಯುವದರೊಳಗೆ ಸುಲ್ತಾನಗಡವನ್ನು ವಶಮಾಡಿಕೊಳ್ಳುವದನ್ನು ನಿಶ್ಚಯಿಸಿ, ಆತನು ಸ್ವಲ್ಪ ಹೊತ್ತಿನಮೇಲೆ ಅಲ್ಲಿಂದ ಹೊರಟುಹೋದನು.

ಈ ಮೇರೆಗೆ ಪುಣೆಯಿಂದ ಹೊರಟ ಶಿವಾಜಿಯು ನೆಟ್ಟಗೆ ತನ್ನ ಮಾರುತಿಯ ದೇವಾಲಯದ ಬುಡದಲ್ಲಿರುವ ಗುಹೆಯೊಳಗಿನ ದೇವಿಯ ಬಳಿಗೆ ಹೋಗಿ, ಆಕೆಯನ್ನು ಸಾಷ್ಟಾಂಗವಾಗಿ ವಂದಿಸಿ ಧ್ಯಾನಸ್ಥನಾಗಿ ಕುಳಿತುಕೊಂಡನು. ಆ ಭಕ್ತಿಪಾರವಶ್ಯದ ಸ್ಥಿತಿಯಲ್ಲಿ ಏನು ದೃಷ್ಟಾಂತವಾಯಿತೆಂಬದನ್ನು ಶಿವಾಜಿಯೇ ಬಲ್ಲನು. ಎಚ್ಚತ್ತ ಮೇಲೆ ಶಿವಾಜಿಯ ಔದಾಸೀನ್ಯ ಭಾವವು ಪೂರ್ಣ ನಷ್ಟವಾಗಿ, ಆತನ ಮನಸ್ಸು ಉತ್ಸಾಹಪೂರ್ಣವಾಯಿತು. ಮರುದಿವಸ ಮಧ್ಯರಾತ್ರಿಯಲ್ಲಿ ಮುನ್ನೂರು ಮುನ್ನೂರಾ ಐವತ್ತು ಮಾವಳೇ ಜನರು ಸಾಸವಡದ ಅರಣ್ಯ ದೊಳಗಿನ ನಿತ್ಯದ ಸ್ಥಳದಲ್ಲಿ ಒಟ್ಟುಗೂಡಿದರು. ಆಗ ತಾನಾಜಿಯು ಅವರಿಗೆ ಹೇಳತಕ್ಕದ್ದನ್ನು ಹೇಳಿ, ಭವಾನಿಯ ಗುಡಿಯಲ್ಲಿ ಸಂಗ್ರಹಿಸಿಟ್ಟಿದ್ದ ಆಯುಧಗಳಲ್ಲಿ ಒಂದೊಂದು ಖಡ್ಗವನ್ನು ಅವರಿಗೆ ಇನಾಮಾಗಿಕೊಟ್ಟನು. ಆ ಮಾವಳರ ಗುಂಪಿನಲ್ಲಿ ಎರಡು ಭಾಗಗಳನ್ನು ಮಾಡಿ, ಅವುಗಳಲ್ಲಿ ಒಂದು ಭಾಗಕ್ಕೆ ತಾನಾಜಿಯು ತಾನು ಸ್ವತಃ ಮುಖ್ಯಸ್ಥನಾದನು. ಮತ್ತೊಂದು ಭಾಗಕ್ಕೆ ನಾನಾಸಾಹೇಬನನ್ನು ಮುಖ್ಯನನ್ನಾಗಿ ನಿಯಮಿಸಿದನು. ನಾವಿಬ್ಬರು ಮುಖ್ಯರು ನಮ್ಮ ಜನರೊಡನೆ ಸುಲ್ತಾನಗಡದಿಂದ ನಾಲ್ಕು ಹರದಾರಿಯ ಅಂತರದ ಮೇಲೆ ನಿಯಮಿತ ಸ್ಥಳಗಳಲ್ಲಿ ಅಡಗಿಕೊಂಡು ಕುಳಿತು, ಶಿವರಾಯನ

ಅಪ್ಪಣೆಯ ಹಾದಿಯನ್ನು ನೋಡುತ್ತಿರಬೇಕು, ಎಲ್ಲರು ಹಿಂಡುಗಟ್ಟಿಕೊಂಡು ಹೋಗದ, ಇಬ್ಬಿಬ್ಬರು ನಾಲ್ನಾಲ್ಕು ಮಂದಿ ಗದ್ದಲವಾಗದಂತೆ ರಾತ್ರಿ ಹೋಗಬೇಕು, ಎಂದು ಆ ಧೂರ್ತ ತಾನಾಜಿಯು ಹೇಳಿದನು. ಸೂರ್ಯಾಜಿಯ ಜನರ ಸಹಾಯವು ಬೇಕಾಗಬಹುದಾದ್ದರಿಂದ, ಆತನು ತನ್ನ ಜನರೊಡನೆ ನಿಯಮಿತ ಸ್ಥಳದಲ್ಲಿ ಸ್ವಸ್ಥವಾಗಿ ಕುಳಿತುಕೊಳ್ಳಬೇಕೆಂತಲೂ, ಶಿವರಾಯನ ಅಪ್ಪಣೆಯ ಹೊರತು ಹೆಜ್ಜೆಯನ್ನು ಕಿತ್ತಲಾಗದೆಂತಲೂ ತಾನಾಜಿಯು ಸೂರ್ಯಾಜಿಗೆ ಹೇಳಿಕಳಿಸಿದನು. ಶಿವಾಜಿಯು ಮಾತ್ರ ತನ್ನ ಮನಸ್ಸಿನ ಗುಟ್ಟನ್ನು ಯಾರಿಗೂ ಹೇಳಿದ್ದಿಲ್ಲ. ಇಂಥ ಇಂಥ ಸ್ಥಳದಲ್ಲಿ ನೀವು ಅಡಗಿಕೊಂಡು ಕುಳಿತಿರಬೇಕೆಂದು ಆತನು ಮುಖ್ಯರಿಗೆ ಹೇಳಿಕಳಿಸಿದ್ದರೂ, ಇಂಥ ದಿವಸ ನೀವು ಓಗೆ ಮಾಡಬೇಕೆಂಬದನ್ನು ಶಿವಾಜಿಯು ಯಾರಿಗೂ ಹೇಳಿದ್ದಿಲ್ಲ. ಮೊದಲ ತುತ್ತಿಗೇ ನೊಣತಿಂದ ಹಾಗಾಗಬಾರದೆಂದು ಆತನು ತನ್ನ ವಿಚಾರಗಳನ್ನು ಗೂಢವಾಗಿ ಇಟ್ಟಿದ್ದನು. ಆ ವಿಚಾರಗಳನ್ನು ಒಬ್ಬ ಶ್ರೀಧರಸ್ವಾಮಿಗಳಿಗ ಮಾತ್ರ ಹೇಳಿದ್ದನು. ನಾವು ಏನು ಮಾಡಬೇಕೆಂದು ಕೇಳುವ ಧೈರ್ಯವಂತು ಯಾರಿಗೂ ಇದ್ದಿಲ್ಲ. ಹೇಳಿದಷ್ಟು ಮಾಡತಕ್ಕದ್ದು ತಮ್ಮ ಕೆಲಸವೆಂದು ತಿಳಿದು, ಯಾರೂ ಅರೆದಾಡುವ ಗೊಡವಿಗೆ ಹೋಗದೆ, ಅಪ್ಪಣೆಯ ಹಾದಿಯನ್ನು ನೋಡತ್ತ ಸುಮ್ಮನೆ ಇರುತ್ತಿದ್ದರು. ಇತ್ತ ಶಿವಾಜಿಯು ಪುನಃ ನಾಂದೇಗಾವಕ್ಕೆ ಬಂದು, ಆ ಇಬ್ಬರು ತರುಣೆಯರ ಮನೆಗೆ ಹೋಗಿ ಸಾವಳ್ಯಾನನ್ನು ಸಂಗಡ ಕರಕೊಂಡು ಸುಲ್ತಾನಗಡದ ಕೆಳಗಿರುವ ಊರಿಗೂ, ಸುಲ್ತಾನಗಡದ ಮೇಲೆಯೂ ಹೋಗಿ, ಮನಬಿಚ್ಚಿ ಮಾತುಕತೆಗಳನ್ನು ಆಡಿ, ಜನರ ಹಾಗು ಸಿಪಾಯಿಗಳ ಮನಸ್ಸನ್ನು ಒಲಿಸಿಕೊಂಡನು.

## ಇದೇನು ಗದ್ದಲವು?

ರಣದುಲ್ಲಾಖಾನನ ತಂಗಿಯಾದ ಮೇಹೇರಜಾನಳು ನೂರು ಜನ ಅಂಗರಕ್ಷಕರೊಡನೆ ಸುಲ್ತಾನಗಡದಲ್ಲಿರುತ್ತಿದ್ದಳೆಂತಲೂ, ಸೈಯದುಲ್ಲಾಖಾನನು ತನ್ನ ನೂರು ಜನ ದಂಡಾಳು ಗಳನ್ನು ದುರ್ಗದಿಂದ ಕೆಲವು ಅಂತರದಲ್ಲಿ ಇಟ್ಟು, ಕೆಲವು ಜನರೊಡನೆ ತಾನು ಸುಲ್ತಾನಗಡ ದಲ್ಲಿರುತ್ತಿದ್ದನೆಂತಲೂ ಹಿಂದ ಹೇಳಿದೆಯಷ್ಟೇ? ಸೈಯದುಲ್ಲಾಖಾನನ ನೀಚತನವನ್ನಂತು ವಾಚಕರು ಬಲ್ಲರು. ಆತನು ಮೇಹೇರಜಾನಳನ್ನು ಬಾದಶಹನಿಗೆ ಅರ್ಪಿಸಿ, ಆತನ ಅನುಗ್ರಹ ಸಂಪಾದಿಸ ಬೇಕೆಂಬ ದುಷ್ಟವಿಚಾರದಿಂದ ಬಾದಶಹನಿಗೆ ಇಲ್ಲದ್ದೊಂದು ಹೇಳಿ, ಮೊದಲು ರಣದುಲ್ಲಾ ಖಾನನನ್ನು ಕರ್ನಾಟಕದ ಮೇಲೆ ದಂಡೆತ್ತಿ ಹೋಗುವಂತೆ ಮಾಡಿದನು. ಆಮೇಲೆ ಆತನು ಮೇಹೇರಜಾನಳನ್ನು ಬಲಾತ್ಕಾರದಿಂದ ಬಾದಶಹನ ಬಳಿಗೆ ಒಯ್ಯುವದಕ್ಕಾಗಿ ಸುಲ್ತಾನಗಡಕ್ಕೆ ಬಂದಿದ್ದನು. ಅತ್ತ ರಂಭಾವತಿಯ ಗಂಡನಾದ ರಾಮದೇವನು ಸೇಡುತೀರಿಸಿ ಕೊಳ್ಳುವದಕ್ಕಾಗಿ ಸೈಯದುಲ್ಲಾನ ಬೆನ್ನು ಹತ್ತಿ ಗುಪ್ತರೀತಿಯಿಂದ ಬಂದು, ದುರ್ಗದ ಕೆಳಗಿನ

ಊರಲ್ಲಿರುತ್ತಿದ್ದನು. ಪುಕ್ಕನಾದ ಸೈಯದುಲ್ಲಾನು ಸುಲ್ತಾನಗಡಕ್ಕೆ ಹೋದ ದಿವಸವೇ ರಂಗರಾವ ಅಪ್ಪಾನ ಮನಸ್ಸಿಗೆ ಹತ್ತುವಂತೆ ನಡಕೊಂಡನು. ತನ್ನ ಒಪ್ಪಿಗೆಯು ಹೊರತು ದುರ್ಗದಲ್ಲಿ ಯಾರೂ ಐರಲಾಗ ದೆಂತಲೂ, ಅಲ್ಲಲ್ಲಿ ಬಿದ್ದಿರುವ ದುರ್ಗದ ಭಾಗಗಳನ್ನು ಈಗಲೇ ಕಟ್ಟಿಸಬೇಕೆಂತಲೂ ಹೇಳಿ, ಅಪ್ಪಾಸಾಹೇಬನಿಗೆ ಬಾಯಿಗೆ ಬಂದ ಹಾಗೆ ಅಂದು, ದುರ್ಗದ ಮಹಾರಾಷ್ಟ್ರ ಕಾವಲುಗಾರರನ್ನೆಲ್ಲ ಕಿತ್ತುಹಾಕಿ, ಅವರ ಸ್ಥಳಗಳಲ್ಲಿ ತನ್ನ ದಂಡಿನೊಳಗಿನ ಐವತ್ತು ಜನರನ್ನು ಇಟ್ಟನು. ಇದರಿಂದ ರಂಗರಾವ ಅಪ್ಪಾನು ಸಂತಾಪದಿಂದ ಉರಿಯ ಹತ್ತಿದರೂ, ಬಾದಶಹನ ಅಂಜಿಕೆಯಿಂದ ಆತನು ಮನಸ್ಸಿನಲ್ಲಿ ತಳಮಳಿಸುತ್ತ ಸುಮ್ಮನೆ ಇರಬೇಕಾಯಿತು. ಸುಲ್ತಾನಗಡದೊಳಗಿನ ದಂಡಾಳುಗಳು ಸೈಯದುಲ್ಲಾನ ಈ ಉದ್ಧಟತನಕ್ಕಾಗಿ ಸಿಟ್ಟಾದರು. ತನ್ನ ಮನಸ್ಸಿನಂತೆ ಎಲ್ಲ ಕೆಲಸವಾದ ಮೇಲೆ ಸೈಯದುಲ್ಲಾನು ಮೇಹೇರಜಾನಳನ್ನು ಬಲಾತ್ಕಾರದಿಂದ ಹರಣಮಾಡುವ ಉಪಾಯವನ್ನು ಯೋಚಿಸಿದನು. ಶೂರರಾದ ನೂರು ಜನರಿಂದ ರಕ್ಷಿತಳಾಗಿರುವ ಮೇಹೇರಜಾನಳು ತನಗೆ ಸುಲಭಸಾಧ್ಯಳ ಲ್ಲೆಂದು ತಿಳಿದು, ಆಕೆಯ ರಕ್ಷಕರಿಗೆ ಮದ್ಯಪಾನಮಾಡಿಸಿ ಪರವಶರಾಗಿ ಬೀಳುವಂತೆ ಹಂಚಿಕೆ ಮಾಡಬೇಕೆಂದು ನಿಶ್ಚಯಿಸಿದರು. ಆತನು ತನ್ನ ನಂಬಿಗೆಯ ಮನುಷ್ಯನ ಮುಖಾಂತರ ಈ ನೀಚ ಕಾರ್ಯವನ್ನು ಕೊನೆಗಾಣಿಸುವ ಯತ್ನವನ್ನು ನಡಿಸಿದನು. ಬಳಿಕ ತನ್ನ ಸೇನಾಪತಿಯನ್ನು ಕರೆಸಿ–ನೀನು ಈ ದಿನ ಮಧ್ಯರಾತ್ರಿಯ ಹೊತ್ತಿಗೆ ಯಾವತ್ತು ದಂಡಿನೊಡನೆ ಸುಲ್ತಾನ ಗಡವನ್ನು ಏರಿಬಂದು, ಮೇಹೇರಜಾನಳ ಮಂದಿರಕ್ಕೆ ಮುತ್ತಿಗೆ ಹಾಕಿ, ಮದ್ಯಪಾನದಿಂದ ಮೈಮರೆತು ಬಿದ್ದಿದ್ದ ಜನರನ್ನು ತುಂಡರಿಸಿ ಮೇಹೇರಜಾನಳನ್ನು ಅಪಹರಿಸಬೇಕೆಂದು ಹೇಳಿದನು. ಸೈಯದುಲ್ಲಾನ ದಂಡಾಳುಗಳೇ ದುರ್ಗದ ಕಾವಲುಗಾರರಿದ್ದುದರಿಂದ, ಈ ಕಾರ್ಯವು ಸುಲಭವಾಗಿ ಸಾಧಿಸಬಹುದಾಗಿತ್ತು, ಸೈಯದುಲ್ಲಾ ಖಾನನು ಹೀಗೆ ಮೋಸಮಾಡದೆ ಡಾಣಾಡಂಗುರವಾಗಿ ತನ್ನ ದಂಡನ್ನು ದುರ್ಗದ ಮೇಲೆ ಕರೆತಂದಿದ್ದರೆ, ಯಾರೂ ಕೇಳುವಹಾಗಿದ್ದಿಲ್ಲ. ಆದರೆ ತನ್ನ ನೀಚಕೃತ್ಯದ ಅಪವಾದವನ್ನು ರಂಗರಾವ ಅಪ್ಪಾನ ಮೇಲೆ ಹೊರಿಸಿ ತಾನು ಮೇಹೇರಜಾನಳನ್ನು ಸಂಕಟದಿಂದ ಮುಕ್ತಮಾಡಿದ ಕೀರ್ತಿಯನ್ನು ಕಟ್ಟಿಕೊಂಡು, ಮೇಹೇರಜಾನಳ ಸಂಗಡ ವಿಶ್ವಾಸಘಾತದಿಂದ ನಡೆದದ್ದಕ್ಕಾಗಿ ರಂಗರಾವ ಅಪ್ಪಾನಿಗೆ ಶಾಸನ ಮಾಡಿಸಬೇಕೆಂದು ಯೋಚಿಸಿದ್ದನು. ಆದರೆ ತನ್ನ ಈ ದುರಾಲೋಚನೆಯು ತನ್ನ ಕೊರಳಿಗೇ ಉರುಳುಬಿದ್ದೀತೆಂಬುದು ಆತನಿಗೆ ಗೊತ್ತಾಗಲಿಲ್ಲ. ತಾನು ಒಳ್ಳೆಯ ಉಪಾಯವನ್ನು ಯೋಚಿಸಿದೆನೆಂಬ ಸಂತೋಷದಿಂದ ಉಬ್ಬಿ, ಮಧ್ಯರಾತ್ರಿಯ ಸಮಯವನ್ನು ನಿರೀಕ್ಷಿಸುತ್ತ ಆ ವಿಶ್ವಾಸಘಾತಕಿಯು ಕಾಲಹರಣಮಾಡುತ್ತಿದ್ದನು.

ಇತ್ತ ನಾಂದೇಗಾವದೊಳಗಿನ ಆ ಇಬ್ಬರು ತರುಣಿಯರ ಮನೆಯೊಳಗೆ ಇದ್ದ ಶಿವಾಜಿಯು, ಈ ದಿನ ಮಧ್ಯರಾತ್ರಿಯಲ್ಲಿ ಯಾವ ಮಾರ್ಗದಿಂದ ಸುಲ್ತಾನಗಡವನ್ನು ಏರಿಹೋಗಬೇಕೆಂದು ಆಲೋಚಿಸುತ್ತ ಕುಳಿತಿದ್ದನು. ಕೋಟೆಯ ಬಾಗಿಲುಗಳಿಂದ ಹೋಗುವದಂತು ಅಸಂಭವ ವಾದ್ದರಿಂದ, ಕಳ್ಳಹಾದಿಯನ್ನು ಆತನು ಹುಡುಕಬೇಕಾಗಿತ್ತು.

ಶಿವಾಜಿಯು ಬಗೆಬಗೆಯ ಆಲೋಚನೆಗಳಲ್ಲಿ ಮುಳುಗಿಹೋಗಿರಲು, ರಂಭಾವತಿಯ ಗಂಡನಾದ ರಾಮದೇವನು ಅಕಸ್ಮಾತ್ತಾಗಿ ಅಲ್ಲಿಗೆ ಬಂದನು. ಆಗ ಅರುತಾಸು ರಾತ್ರಿಯಾಗಿತ್ತು. ರಾಮದೇವನು ಕೆಲವು ಗುಪ್ತ ಸಂಗತಿಗಳನ್ನು ಹೇಳಬೇಕಾಗಿರುವದರಿಂದ, ಆತನ ಹೇಳಿಕೆಯಂತೆ ಶಿವಾಜಿಯು ಆತನೊಡನೆ ಊರಹೊರಗಿನ ಗುಡಿಗೆ ಹೋದನು. ಆಗ ರಾಮದೇವನು ಶಿವಾಜಿಯನ್ನು ಕುರಿತು–ತಮ್ಮ ಗುರುತು ನನಗೆ ಇಲ್ಲದಿದ್ದರೂ, ನಾನು ದಿಟ್ಟತನದಿಂದ ತಮ್ಮ ಬಳಿಗೆ ಬಂದು, ಗುಡಿಗೆ ಬರುವದಕ್ಕಾಗಿ ತಮ್ಮನ್ನು ಪ್ರಾರ್ಥಿಸಿದಂತೆ ತಾವು ಬಂದದ್ದರಿಂದ ಬಹಳ ಉಪಕಾರವಾಯಿತು. ತಾವು ಯಾರು, ತಮ್ಮ ಉದ್ದೇಶವೇನೆಂಬದು ನನಗೆ ಗೊತ್ತಿರುತ್ತದೆ. ಅದು ನನಗೆ ಹೇಗೆ ಗೊತ್ತಾಯಿತೆಂಬುದನ್ನು ಹೇಳುತ್ತ ಕುಳಿತುಕೊಳ್ಳಲಿಕ್ಕೆ ಇದು ಸಮಯವಲ್ಲ, ನಿಮ್ಮ ಉದ್ದೇಶವನ್ನು ಬೇಗನೆ ಸಾಧಿಸಬೇಕೆಂದು ನೀವು ಇಚ್ಛಿಸುತ್ತಿದ್ದರೆ, ಅದಕ್ಕೆ ಇಂದಿನ ರಾತ್ರಿಯು ಬಹಳ ಅನುಕೂಲವಾಗಿರುತ್ತದೆಂದು ಹೇಳಲಿಕ್ಕೆಂದು ನಾನು ಬಂದಿರುತ್ತೇನೆ. ದುರ್ಗದ ಮೇಲೆ ಸೈಯದುಲ್ಲಾಖಾನನು ಇರುವನಷ್ಟೆ? ಆತನು ಮಹಾನೀಚನು. ವಸ್ತುತಃ ವಿಜಾಪುರದ ಬಾದಶಹನು ಒಳ್ಳೆಯ ಮನುಷ್ಯನಿದ್ದರೂ, ಆ ನೀಚನ ಸಹವಾಸದಿಂದ ಕೆಟ್ಟಿರುತ್ತಾನೆ. ಬಾದಶಹನು ಸ್ತ್ರೀಲಂಪಟನಾಗಲಿಕ್ಕೆ ಈ ನೀಚನೇ ಕಾರಣನು. ವಿಜಾಪುರದ ದರ್ಬಾರದೊಳಗಿನ ಒಳ್ಳೆಯ ಮನುಷ್ಯರಲ್ಲಿ ರಣದುಲ್ಲಾಖಾನನು ಬಹಳ ಒಳ್ಳೆಯವನು; ಆದರೆ ಸೈಯದುಲ್ಲಾನು ಉಪಾಯದಿಂದ ರಣದುಲ್ಲಾಖಾನನನ್ನು ಕರ್ನಾಟಕಕ್ಕೆ ದಂಡೆತ್ತಿ ಕಳಿಸಿ, ಆತನ ಚಲುವೆಯಾದ ತಂಗಿಯನ್ನು, ಅಂದರೆ ಮೇಹೇರಜಾನಳೆಂಬ ಸಾಧ್ವಿಯನ್ನು ಅಪಹರಿಸಿ ಕೊಂಡು ಬಾದಶಹನಿಗೆ ಒಪ್ಪಿಸುವುದಕ್ಕಾಗಿಯೇ ಇಲ್ಲಿಗೆ ಬಂದಿರುತ್ತಾನೆ. ಆ ನೀಚನು ತನ್ನ ನೀಚ ಕೃತ್ಯವನ್ನು ಇಂದು ರಾತ್ರಿ ಸಾಧಿಸುವನು; ಆದರೆ ಆತನ ಕೃತ್ಯಕ್ಕೆ ವಿಘ್ನವನ್ನುಂಟುಮಾಡಿ, ಆತನ ಪಾರಪತ್ಯ ಮಾಡಲಿಕ್ಕೆ ಇದು ತಕ್ಕ ಸಮಯವಾಗಿರುವದು. ಸೈಯದುಲ್ಲಾನು ನನ್ನ ಸುಖಸರ್ವಸ್ವದ ನಾಶಮಾಡಿರುವದರಿಂದ, ನಾನು ಆತನನ್ನು ಕೊಲ್ಲಲು ಪ್ರತಿಜ್ಞೆ ಮಾಡಿ, ಬಹು ದಿವಸದಿಂದ ಹಾದಿಯ ನೋಡುತ್ತಲಿದ್ದೇನೆ. ಇಂದು ರಾತ್ರಿ ಆತನು ಮೇಹೇರಜಾನಳ ಜನರಿಗೆ ಯಾವದಾದರೂ ಅಮಲೇರುವ ಪದಾರ್ಥವನ್ನು ಕೊಡಬೇಕೆಂದು ಮಾಡಿದ್ದಾನೆ. ಜನರು ಎಚ್ಚರತಪ್ಪಿ ಬಿದ್ದರೆಂದರೆ, ಕೋಟೆಯ ಕೆಳಗೆ ಇರುವ ತನ್ನ ದಂಡಾಳುಗಳನ್ನು ಕಳವಿನಿಂದ ಮೆಲ್ಲನೆ ಕೋಟೆಯ ಮೇಲೆ ಕರಕೊಂಡು, ಮೇಹೇರಜಾನಳ ಮನೆಯ ಮೇಲೆ ಬಿದ್ದು, ತನ್ನ ನೀಚ ಕಾರ್ಯವನ್ನು ಸಾಧಿಸಿ, ಅಪರಾಧವನ್ನು ರಂಗರಾವ ಅಪ್ಪಾನ ಮೇಲೆ ಹೊರಿಸತಕ್ಕವನಿದ್ದಾನೆ. ಈ ಪ್ರಸಂಗದಲ್ಲಿ ನೀವು ಚಟುವಟಿಕೆಯಿಂದ ಯುಕ್ತಿಯನ್ನು ಸಾಧಿಸಿದರೆ, ನಿಮ್ಮ ಕಾರ್ಯವನ್ನು ಅನಾಯಾಸದಿಂದ ಸಾಧಿಸಿಕೊಂಡು, ಒಬ್ಬ ಸಾಧ್ವಿಯ ಪಾತಿವ್ರತ್ಯವನ್ನು ರಕ್ಷಿಸಿದ ಪುಣ್ಯ ಕಟ್ಟಿಕೊಂಡಂತಾಗುತ್ತದೆ. ನೀವು ಮಾಡಿರುವ ವ್ಯವಸ್ಥೆಯೆಲ್ಲ ನನಗೆ ಗೊತ್ತಿರುವದು. ಆ ವ್ಯವಸ್ಥೆಯಲ್ಲಿ ನೀವು ವಿಶೇಷ ಹೆಚ್ಚು ಕಡಿಮೆ ಮಾಡುವ ಕಾರಣವಿಲ್ಲ. ರಾತ್ರಿ ಸೈಯದುಲ್ಲಾಖಾನನ ಸೈನ್ಯದವರು ತಮ್ಮ ಸ್ಥಳಬಿಟ್ಟು, ಮುಂದಕ್ಕೆ ಬಾರದಂತೆ ತರುಬಿ

ನಿಲ್ಲಿಸಿ, ನಿಮ್ಮ ಜನರನ್ನು ಕೋಟೆಯ ಮೇಲೆ ಹೋಗುವಂತೆ ಮಾಡಿದರೆ, ನಿಮ್ಮ ಕೆಲಸವಾಗುವದು. ಇದು ನಿಮ್ಮ ಮನಸ್ಸಿಗೆ ಬಾರದಿದ್ದರೆ, ಸೈಯದುಲ್ಲಾನು ಮೇಹೇರಜಾನಳನ್ನು ಅಪಹರಿಸಿಕೊಂಡು ಹೋಗುವಾಗ, ಹಾದಿಯಲ್ಲಿ ಆತನನ್ನು ತರಬುವಂತೆ ನಿಮ್ಮ ಜನರನ್ನು ನಿಯಮಿಸಿ ನನ್ನನ್ನು ಆ ಕೆಲಸದ ಮುಖ್ಯನನ್ನಾಗಿ ಮಾಡಿರಿ, ಅಂದರೆ ನನ್ನ ಪ್ರತಿಜ್ಞೆಯನ್ನು ಪೂರ್ಣ ಮಾಡಿಕೊಳ್ಳಲಿಕ್ಕೆ ಅನುಕೂಲವಾಗುವದು.

ರಾಮದೇವನ ಈ ಮಾತುಗಳನ್ನು ಶಿವಾಜಿಯು ಮನಸ್ಸುಗೊಟ್ಟು ಕೇಳುತ್ತಿದ್ದನು. ತನ್ನ ವ್ಯೂಹವನ್ನೆಲ್ಲ ಅರಿತುಕೊಂಡಿರುವ ಈ ಮನುಷ್ಯನು ಯಾವನಿರಬಹುದೆಂಬ ಬಗ್ಗೆ ಆತನಲ್ಲಿ ವಿಚಾರವು ಉತ್ಪನ್ನವಾಯಿತು. ಅಷ್ಟರಲ್ಲಿ ತಾನಾಜಿಯ ಮುಖದಿಂದ ವಿಜಾಪುರದೊಳಗಿನ ಕರಿಯ ಮನುಷ್ಯನ ಚರಿತ್ರ ಕೇಳಿದ್ದು ನೆನಪಾದದ್ದರಿಂದ, ಅವನೇ ಈತನಿರಬಹುದೆಂದು ತಿಳಿದು ರಾಮದೇವನನ್ನು ಕುರಿತು–ನೀವು ಹೇಳಿದಂತೆ ಮಾಡಲಿಕ್ಕೆ ತೊಂದರೆಯಿಲ್ಲ; ಆದರೆ ನೀವು ಹೇಳಿದಂತೆ ಸೈಯದುಲ್ಲಾನು ಇಂದೇ ರಾತ್ರಿ ಮೇಹೇರಜಾನಳನ್ನು ಅಪಹರಿಸುವದು ನಿಶ್ಚಯವೋ? ನಿಶ್ಚಯವಿದ್ದರೂ ನೀವು ಹೇಳಿದಂತೆ ಮಾಡಿದರೆ ಕಾರ್ಯಸಿದ್ಧಿಯು ತಪ್ಪದೆ ಆಗುವದೆಂದು ಯಾರು ಹೇಳಬೇಕು? ಎಂದು ಕೇಳಲು, ರಾಮದೇವನು–ಅದರ ಚಿಂತೆ ನಿಮಗೇಕೆ? ನನ್ನ ಮೇಲೆ ನೀವು ಅಪನಂಬಿಗೆಯನ್ನು ಮಾಡಬೇಡಿರಿ. ನಾನು ನನ್ನ ಪ್ರತಿಜ್ಞೆಯನ್ನಂತು ಈ ದಿನ ಪೂರ್ಣಮಾಡಿಯೇ ತೀರುವೆನು. ನನ್ನ ಮಾತು ಕೇಳಿದರೆ ನಿಮ್ಮ ಕಾರ್ಯವು ಸುಲಭವಾಗಿ ಆಗುವದು. ರಾತ್ರಿ ಅಡ್ಡತಿಡ್ಡ ದಾರಿಯಿಂದ ದುರ್ಗವನ್ನು ಏರಿಹೋಗಿ ಆಯಾಸ ಪಡಬೇಕಾಗಿಲ್ಲ, ನನ್ನ ಯುಕ್ತಿಯು ನಿಮ್ಮ ಮನಸ್ಸಿಗೆ ಬಂದರೆ, ತನ್ನ ಜನರೊಡನೆ ಸೈಯದುಲ್ಲಾನ ದಂಡನ್ನು ಮುತ್ತುವಂತೆ ಈಗಲೆ ಸೂರ್ಯಾಜಿಗೆ ಆಜ್ಞಾಪಿಸಿರಿ. ಉಳಿದ ನಿಮ್ಮ ಮುನ್ನೂರಾ ಐವತ್ತು ಜನರು ಸುಲ್ತಾನಗಡವನ್ನು ಪ್ರವೇಶಿಸಲಿ. ಇಷ್ಟು ಮಾಡಿದರೆ ಸುಲ್ತಾನಗಡವು ಕೈಸೇರಿ ತೆಂದು ತಿಳಿಯಿರಿ. ಇನ್ನು ಸೈಯದುಲ್ಲಾಖಾನನ ಜನರು ದುರ್ಗದ ಕಾವಲುಗಾರರಾಗಿರಲು, ನಿಮ್ಮ ಜನರು ಸುಲಭವಾಗಿ ದುರ್ಗವನ್ನು ಹೇಗೆ ಏರಿ ಹೋಗಬೇಕೆಂದು ನೀವು ಕೇಳಬಹುದು. ಸೈಯದುಲ್ಲಾನು ತನ್ನ ಜನರಿಗೆ ಮಾತ್ರ ಒಂದು ಸಂಕೇತದ ಶಬ್ದವನ್ನೂ, ಕೆಲವು ಗುರುತುಗಳನ್ನೂ ಹೇಳಿರುವನು; ಆ ಸಾಂಕೇತಿಕ ಶಬ್ದವೂ, ಗುರುತುಗಳೂ ನನಗೆ ಗೊತ್ತಿರುತ್ತವೆ. ಅವನ್ನು ಉಪಯೋಗಿಸಿದವರನ್ನು ದುರ್ಗದ ಕಾವಲುಗಾರರು ನಿರಾತಂಕವಾಗಿ ಒಳಗೆ ಬಿಡುವರು. ಖಾನನು ಗೊತ್ತು ಮಾಡಿದ ಹೊತ್ತು ಆರುತಾಸು ರಾತ್ರಿಯಾಗಿರುವದು. ಸಾಧಿಸುವಂತೆ ಇದ್ದರೆ ಸಾಧಿಸಿರಿ, ಇಲ್ಲದಿದ್ದರೆ ಬಿಡಿರಿ, ನನ್ನ ಅಗ್ರಹವಿಲ್ಲ, ಆಯತಸಮಯದಲ್ಲಿ ಯಾರಾದರೂ ಏನಾದರೂ ಹೇಳಿದರೆ, ನೀವು ಮನಸ್ಸು ತಿರುಗಿಸುವವರಲ್ಲೆಂಬದನ್ನು ನಾನು ಬಲ್ಲೆನು; ಅದರಂತೆ, ಆಯತಸಮಯದಲ್ಲಿ ಗೊತ್ತಾದ ವಿಶ್ವಸನೀಯ ಸಂಗತಿಯನ್ನು ತಟ್ಟನೆ ಉಪಯೋಗಿಸಿಕೊಳ್ಳುವಷ್ಟು ಚತುರರು ನೀವಿರುತ್ತೀರೆಂಬದಾದರೂ ನನಗೆ ಗೊತ್ತಿರುತ್ತದೆ. ಆದ್ದರಿಂದ ಚೆನ್ನಾಗಿ ವಿಚಾರಮಾಡಿರಿ. ವಿಚಾರಮಾಡಲಿಕ್ಕೆ ವೇಳೆಯು ಸ್ವಲ್ಪವಿರುತ್ತದೆಂಬದನ್ನಾದರೂ ನೀವು ಲಕ್ಷ್ಯದಲ್ಲಿಡಿರಿ, ಎಂದು

ನುಡಿದು, ಸೈಯದುಲ್ಲಾಖಾನನು ತನ್ನ ದಂಡಿನವರೊಡನೆ ನುಡಿಯ ಹೇಳಿದ ಸಾಂಕೇತಿಕ ಶಬ್ದವನ್ನೂ, ಗುರುತುಗಳನ್ನೂ ಶಿವಾಜಿಯ ಕಿವಿಯಲ್ಲಿ ಹೇಳಿ, ''ನಾನು ಹೋಗಿಬರುತ್ತೇನೆ'' ಎಂದು ನುಡಿದು, ತಟ್ಟನೆ ಹೊರಟುಹೋದನು.

ಈ ಮೇರೆಗೆ ನುಡಿದು ಆ ಕರಿಯ ಮನುಷ್ಯನು ಹೋಗಲು, ಶಿವಾಜಿಯ ಮನಸ್ಸು ಇತ್ತಂಡವಾಯಿತು; ತಾನು ಮೊದಲು ಯೋಚಿಸಿದಂತೆ ಮಾಡಬೇಕೋ, ಈ ಕರಿಯ ಮನುಷ್ಯನು ಹೇಳಿದಂತೆ ಮಾಡಬೇಕೋ, ಎಂದು ಕ್ಷಣಮಾತ್ರ ಆತನು ಯೋಚಿಸಿದನು. ಕೂಡಲೆ ಆತನು ತನ್ನ ನಿತ್ಯಕ್ರಮದಂತೆ ಸ್ವಲ್ಪಕಾಲ ಅಂಬಾಭವಾನಿಯನ್ನು ಧ್ಯಾನಿಸುತ್ತ ಕುಳಿತುಕೊಳ್ಳಲು, ದೇವಿಯ ಸಾಕ್ಷಾತ್ಕಾರವಾಗಿ ಆಕೆಯು ಶಿವಾಜಿಗೆ–ಈ ಪ್ರಸಂಗದಲ್ಲಿ ನಿನಗೆ ಸುಮ್ಮನೆ ತ್ರಾಸವಾಗಬಾರದೆಂದು ನಾನೇ ಎಲ್ಲ ಯೋಗವನ್ನು ಒದಗಿಸಿಕೊಟ್ಟಿದ್ದೇನೆ. ನೀನು ಸ್ವಲ್ಪವಾದರೂ ಧೈರ್ಯಗೆಡದೆ ಕಾರ್ಯವನ್ನು ಸಾಧಿಸಿಕೋ, ಎಂದು ಸೂಚಿಸಿದಳು. ಇಷ್ಟೆಲ್ಲ ಆಗಲಿಕ್ಕೆ ಅರ್ಧಗಳಿಗೆ ಸಹ ಬೇಕಾಗಲಿಲ್ಲ. ಆಮೇಲೆ ಕೇಳುವದೇನು? ಶಿವಾಜಿಯು, ಸೈಯದುಲ್ಲಾಖಾನನ ಜನರನ್ನು ದುರ್ಗದ ಕಡೆಗೆ ಬಾರದಂತೆ ಪ್ರತಿಬಂಧಿಸಬೇಕೆಂದು ಸೂರ್ಯಾಜಿಗೆ ಹೇಳಿ ಕಳುಹಿಸಿದನು. ಇತ್ತ ತನ್ನ ಜನರಿಗೆ—''ಆರು ತಾಸು ರಾತ್ರಿಯಲ್ಲಿ ದಿಲ್ಲಿಯ ಬಾಗಿಲಿನಿಂದಲೇ ಸುಲ್ತಾನಗಡವನ್ನು ಪ್ರವೇಶಿಸಬೇಕಾಗಿರುವದರಿಂದ ಸಿದ್ಧ ರಾಗಿರಬೇಕೆಂ''ದು ಹೇಳಿಕಳಿಸಿದನು. ಶಿವಾಜಿಯ ಆಜ್ಞೆಯನ್ನು ಕೇಳಿ ಸೂರ್ಯಾಜಿಗೆ ಆಶ್ಚರ್ಯ ವಾಗಲಿಲ್ಲ; ಆದರೆ ಶಿವಾಜಿಯ ಜನರಿಗೆ ಮಾತ್ರ ಬಹಳ ಆಶ್ಚರ್ಯವಾಯಿತು. ತಾವು ಕಳ್ಳದಾರಿಯಿಂದ ಯಾರಿಗೂ ಗೊತ್ತಾಗದಂತೆ ರಾತ್ರಿ ದುರ್ಗವನ್ನು ಪ್ರವೇಶಿಸಿಬೇಕಾಗ ಬಹುದೆಂದು ಅವರು ಯೋಚಿಸಿರಲು, ಹೀಗೆ ಡಾಣಾಡಂಗುರವಾಗಿ ದಿಲ್ಲಿಯ ಬಾಗಿಲಿನಿಂದ ದುರ್ಗವನ್ನು ಪ್ರವೇಶಿಸಿಬೇಕಾಗಿರುವದೆಂದು ಅಪ್ಪಣೆಯಾದದ್ದು ಅವರಿಗೆ ಅಶಕ್ಯವಾಗಿ ತೋರಿತು. ತಾನಾಜಿಯೂ, ಇದೇನು ಆಶ್ಚರ್ಯವೆಂದು ವಿಚಾರಕ್ಕೆ ಒಳಗಾದನು. ಎದೆಗೊಟ್ಟು, ಕಾದಿ ಸುಲ್ತಾನಗಡವನ್ನು ವಶಮಾಡಿಕೊಳ್ಳುವಷ್ಟು, ಬಲವು ತಮ್ಮಲ್ಲಿಲ್ಲೆಂಬ ಮಾತು ಆತನಿಗೆ ಗೊತ್ತಿತ್ತು, ಆದರೂ ತನ್ನ ಮಿತ್ರನ ಮೇಲಿರುವ ಅಂಬಾಭವಾನಿಯ ಕೃಪೆಯನ್ನು ನೆನಿಸಿ, ಆ ಸ್ವಾಮಿನಿಷ್ಠ, ತಾನಾಜಿಯು ವಿಚಾರವನ್ನು ಬದಿಗಿಟ್ಟು, ಶಿವಾಜಿಯ ಅಪ್ಪಣೆಯಂತೆ ನಡೆಯಲಿಕ್ಕೆ ಸಿದ್ಧನಾದನು. ಇತ್ತ ಶಿವಾಜಿಯ ಮನಸ್ಸಿನಲ್ಲಿ ಒಂದು ಮಾತನ್ನು ಸಾಧಿಸುವದಿತ್ತು; ತಂದೆಯ ವಿರುದ್ಧವಾಗಿ ನಿಂತು, ತಂದೆಯ ಕೈಯಲ್ಲಿರುವ ಬಾದಶಹನ ದುರ್ಗವನ್ನು ಬಾದಶಹನ ವೈರಿಗಳ ಕೈಸೇರಿಸಿದನೆಂಬ ಅಪಕೀರ್ತಿಗೆ ಗುರಿಯಾಗುವದು ಹಿಂದೂ ಜನರ ಶೀಲಕ್ಕೆ ಸಮ್ಮತವಲ್ಲೆಂದು ತಿಳಿದು, ತಂದೆಯ ಮನಸ್ಸನ್ನು ತಿರುಗಿಸುವದಕ್ಕಾಗಿ ಇನ್ನೊಮ್ಮೆ ಪ್ರಯತ್ನ ಮಾಡಿ ನೋಡ ಬೇಕೆಂದು ಆತನು ನಾನಾಸಾಹೇಬನಿಗೆ ಹೇಳಿದನು. ಅದನ್ನು ಕೇಳಿ ನಾನಾಸಾಹೇಬನು ಮುಗುಳುನಗೆ ನಕ್ಕು, ಈ ಮಾತು ತೀರ ಅಶಕ್ಯವೆಂದು ಶಿವಾಜಿಗೆ ಬಿನ್ನಯಿಸಿದನು. ಆದರೆ ಶಿವಾಜಿಯು ಅದಕ್ಕೆ ಒಪ್ಪಲಿಲ್ಲ. ಆತನು ನಾನಾಸಾಹೇಬ ನನ್ನು ಕುರಿತು–ನಾನಾಸಾಹೇಬರೇ, ಯೋಗ್ಯ ಮಾತನ್ನು ಸಾಧಿಸುವದಕ್ಕಾಗಿ ಕಡೆತನಕ

ಪ್ರಯತ್ನವನ್ನು ಬಿಡಬಾರದು. ಶ್ರೀಕೃಷ್ಣನು ಕೌರವ ಪಾಂಡವರ ಯುದ್ಧವನ್ನು ನಿಲ್ಲಿಸುವದಕ್ಕಾಗಿ ಕಡೆತನಕ ಯತ್ನಿಸಿದನು. ಸತ್ಯ ಸಂಕಲ್ಪವಿದ್ದಂತೆ ಕಾರ್ಯವಾಗುತ್ತದೆಂಬ ಮಾತು ನಿಜವಿದ್ದರೂ ಯೋಗ್ಯ ಕೆಲಸಕ್ಕಾಗಿ ಯತ್ನಿಸಲಿಲ್ಲೆಂಬ ಅಪಕೀರ್ತಿಗೆ ತಿಳಿದವರು ಗುರಿಯಾಗಬಾರದು. ಕಾಲವು ತೀರ ಸಮೀಪಿಸಿರುವದರಿಂದ ವಿಚಾರಕ್ಕೆ ಆಸ್ಪದ ಕೊಡದೆ, ನೀವು ತಟ್ಟನೆ ದುರ್ಗವನ್ನು ಏರಿ ತಂದೆಯ ಬಳಿಗೆ ಹೋಗಿ ಅವರಿಗೆ ಎಲ್ಲ ಸಂಗತಿಯನ್ನು ತಿಳಿಸಿ, ಗೋಬ್ರಾಹ್ಮಣರ ಪ್ರತಿಪಾಲನದ ಕಾರ್ಯಕ್ಕೆ ಅನುಕೂಲಿಸಬೇಕೆಂದು ಹೇಳಿಕೊಳ್ಳಿರಿ. ಇನ್ನು ತಾಸೆರಡುತಾಸುಗಳೊಳಗೆ ದಂಡಿನೊಡನೆ ನಾನೂ ದುರ್ಗವನ್ನೇರಿ ಬರುವೆನಾದ್ದರಿಂದ, ನೀವು ತಿರುಗಿ ನನ್ನ ಬಳಿಗೆ ಬರುವ ಗೊಡವಿಗೆ ಹೋಗಬೇಡಿರಿ, ದುರ್ಗದ ಪ್ರತಿಯೊಂದು ಬಾಗಿಲಿಗೆ ಈ ಸಾಂಕೇತಿಕ ಶಬ್ದವನ್ನು ಉಚ್ಚರಿಸಲಿಕ್ಕೆ ಮರೆಯಬೇಡಿರಿ. ಮರೆತರೆ ಅನರ್ಥವಾದೀತು. ದುರ್ಗದ ಮೇಲಿನ ನಿಮ್ಮ ಜನರಿಗೆ ಶಸ್ತ್ರಹಿಡಿದು ಕಾದದಂತೆ ಬೋಧಿಸಿರಿ, ಎಂದು ಹೇಳಿದನು.

ಶಿವಾಜಿಯ ಈ ಮಾತಿಗೆ ನಾನಾಸಾಹೇಬನು ಪ್ರತ್ಯುತ್ತರ ಕೊಡದೆ, ತಂದೆಯ ಬಳಿಗೆ ಹೊರಟನು. ಮುಖ್ಯ ಕಾವಲುಗಾರನು ''ಯಾರವರು''ಎಂದು ಕೇಳುವ ಮೊದಲೇ ಆತನು ಸಾಂಕೇತಿಕ ಶಬ್ದವನ್ನು ಉಚ್ಚರಿಸಿದ್ದ ರಿಂದ ''ಗಳಗಳ'' ಎಂದು ಚಿಲಕಗಳ ಸಪ್ಪಳವಾಗುತ್ತಿರಲು, ಕಂದಕದ ಮೇಲೆ ಪೂಲು ಬಿದ್ದು ನಾನಾಸಾಹೇಬನಿಗೆ ದುರ್ಗವನ್ನು ಪ್ರವೇಶಿಸಲಿಕ್ಕೆ ಮಾರ್ಗವು ದೊರೆಯಿತು; ಆದರೆ ತಮ್ಮ ಸೈನ್ಯವು ಬಾರದೆ ಒಬ್ಬ ಮನುಷ್ಯನು ಮಾತ್ರ ಬಂದದ್ದನ್ನು ನೋಡಿ,, ಸೈಯದುಲ್ಲಾನ ಪಕ್ಷದ ಆ ಕಾವಲುಗಾರರಿಗೆ ಆಶ್ಚರ್ಯವಾಯಿತು; ಆದರೂ 'ಖಾನನನ್ನು ಏನಾದರೂ ಕೇಳಲಿಕ್ಕೆ ಈತನು ಹೋಗುತ್ತಿರಬಹುದೆಂ'ದು ಅವರು ಸಮಾಧಾನ ಮಾಡಿಕೊಂಡರು. ಹೀಗೆ ಪ್ರತಿ ಒಂದು ಬಾಗಿಲಲ್ಲಿಯೂ ನಾನಾಸಾಹೇಬನು ಸಾಂಕೇತಿಕ ಶಬ್ದವನ್ನು ಉಚ್ಚರಿಸಿ ದುರ್ಗವನ್ನು ಏರಹತ್ತಿದನು. ಒಂದು ಬಾಗಿಲಲ್ಲಿ ಕಾವಲುಗಾರರು ನಾನಾಸಾಹೇಬನಿಗೆ—''ಉಳಿದ ಜನರು ಬರಲಿಲ್ಲ?'' ಎಂದು ಕೇಳಲು, ನಾನಾಸಾಹೇಬನು ಗಾಬರಿಯಾದನು. ಏನು ಉತ್ತರಕೊಡಬೇಕೆಂದು ವಿಚಾರಿಸಹತ್ತಿದನು. ಅಷ್ಟರಲ್ಲಿ ಅವನ ಮುಖದಿಂದ—''ಈಗ ಹಿಂದೆ ಬರುವರು'' ಎಂಬ ವಾಕ್ಯವು ಹೊರಬಿದ್ದದ್ದರಿಂದ, ಕಾವಲು ಗಾರರ ಸಮಾಧಾನವಾಗಿ, ನಾನಾಸಾಹೇಬನು ಪಾರಾದನು. ಈ ಮನುಷ್ಯನು ತಮ್ಮ ಖಾನನ ಕಡೆಗೇ ಹೋಗುವನೆಂದು ಕಾವಲುಗಾರರು ತಿಳಿದಿದ್ದರು; ಆದರೆ ನಾನಾಸಾಹೇಬನು ಖಾನನ ಕಡೆಗೆ ಹೋಗದೆ, ನೆಟ್ಟಗೆ ತನ್ನ ತಂದೆಯ ವಾಡೆಯ ಕಡೆಗೆ ಹೋಗುವದನ್ನು ನೋಡಿ, ಸೈಯದುಲ್ಲಾನ ಜನರು ಸಂಶಯಪಟ್ಟು, ಕೂಡಲೆ ಅವರು ತಮ್ಮ ಖಾನನಿಗೆ ಈ ಸುದ್ದಿಯನ್ನು ತಿಳಿಸಹೋದರು. ಅತ್ತ ಸೈಯದುಲ್ಲಾನು, ತನ್ನ ಜನರು ಯಾವಾಗ ಬರುವರೋ ಎಂದು ಆತುರದಿಂದ ಹಾದಿಯನ್ನು ನೋಡುತ್ತಿದ್ದನು. ಪೂಲಿನ ಚಿಲಕಗಳ ಸಪ್ಪಳವಾದದ್ದನ್ನು ಕೇಳಿ, ತನ್ನ ಜನರೇ ಬಂದರೆಂದು ಆತನು ಸಮಾಧಾನಪಟ್ಟಿದ್ದನು. ಅಷ್ಟರಲ್ಲಿ ತನ್ನ ಜನರು ಬಂದು ಹೇಳಿದ ಸುದ್ದಿಯನ್ನು ಕೇಳಿ, ಏನೋ ಮೋಸವಾಯಿತೆಂದು ಆತನು ಗಾಬರಿಯಾಗಿ, ''ಯಾರು

ಹೋದರು ನೋಡಿಬಾರೆ''ಂದು ಒಬ್ಬ ಸೇವಕನನ್ನು ಅಪ್ಪಾಸಾಹೇಬನ ವಾಡೆಗೆ ಕಳಿಸಿದನು. ಆ ಅಂಜುಬುರುಕ ಖಾನನ ಎದೆಯು ಹಾರಹತ್ತಿದ್ದರಿಂದ, ಆ ಸೇವಕನು ಹೋಗಹೋಗುವದ ರೊಳಗೇ ಮತ್ತೊಬ್ಬ ಸೇವಕನನ್ನು ಕಳಿಸಿದನು; ಅಷ್ಟರಿಂದಲೂ ಸಮಾಧಾನವಾಗದೆ ಇನ್ನೊಬ್ಬನನ್ನು ಕಳಿಸಿದನು. ಹೀಗೆ ಒಬ್ಬನ ಮೇಲೆ ಒಬ್ಬನಂತೆ ಸೈಯದುಲ್ಲಾನು ಐದಾರು ಜನ ಸಿಪಾಯಿಗಳನ್ನು ಕಳಿಸಿದನು. ಅವರಲ್ಲೊಬ್ಬನೂ ತಿರುಗಿಬಾರದ್ದರಿಂದ, ತಾನೇ ಹೋಗಿ ನೋಡಬೇಕೆಂದು ಒಬ್ಬನೇ ವಾಡೆಯ ಕಡೆಗೆ ಹೊರಟನು. ತನ್ನ ಜನರು ಈಗ ಬಂದ ಮೇಲೆ ಅಪ್ಪಾಸಾಹೇಬನ ಪಾರಪತ್ಯಮಾಡುವೆ ನೆಂಬ ನಂಬಿಗೆಯಿಂದ ಆತನು ಅಂಜಿಕೆಯಿಲ್ಲದೆ ಒಬ್ಬನೇ ಸಾಗಿದ್ದನು. ಹೀಗೆ ಗುಪ್ತರೀತಿಯಿಂದ ಬಂದವನು ಬಹುತರ ನಾನಾಸಾಹೇಬನೇ ಇರಬೇಕೆಂದು ತರ್ಕಿಸಿ, ರಾಜದ್ರೋಹಿಗಳಾದ ತಂದೆಮಕ್ಕಳಿಬ್ಬರನ್ನೂ ಸೆರೆಹಿಡಿದು ಬಾದಶಹನ ಬಳಿಗೆ ಎಳೆದೊಯ್ಯುವೆನೆಂಬ ಮನೋರಾಜ್ಯದಲ್ಲಿ ಆತನು ಮಗ್ನನಾಗಿದ್ದನು. ಸ್ವಾಮಿನಿಷ್ಠೆಯ ಸೋಗಿನಿಂದ ಅಪ್ಪಾಸಾಹೇಬನು ಒಳಗಿಂದೊಳಗೆ ಮಗನ ಸಂಗಡ ನಡೆಸಿರುವ ಗುಪ್ತರಾಜದ್ರೋಹವನ್ನು ಮನಸ್ಸಿನಲ್ಲಿ ತಂದು, ಖಾನನು ಸಂತಾಪ ದಿಂದ ಉರಿಯಹತ್ತಿದನು. ಹೀಗೆ ಅಪ್ಪಾಸಾಹೇಬನನ್ನೂ, ಆತನ ಮಗನನ್ನೂ, ಸುಲ್ತಾನಗಡ ದೊಳಗಿನ ಹಿಂದೂ ದಂಡಾಳುಗಳನ್ನೂ ಕಃಪದಾರ್ಥವೆಂದು ಭಾವಿಸಿರುವ ಖಾನನು, ಖಡ್ಗಪಾಣಿಯಾಗಿ ನಿರಾಂತಕದಿಂದ ಒಬ್ಬನೇ ಸಾಗಿರಲು, ಆಕಸ್ಮಾತ್ತಾಗಿ ಹಿಂದಿನಿಂದ ಯಾವನೋ ಒಬ್ಬ ಕರಿಯ ಮನುಷ್ಯನು ಬಂದು, ಕಸುವಿನಿಂದ ಖಾನನ ಟೊಂಕಕ್ಕೆ ಒದ್ದನು. ಕೂಡಲೆ ಸೈಯದುಲ್ಲಾನು ನೆಲಕ್ಕೆ ಬಿದ್ದು ಖಡ್ಗವನ್ನು ನೆಗವುತ್ತಿರಲು. ಆ ಕರಿಯ ಮನುಷ್ಯನು ಶಾಂತಸ್ವರದಿಂದ–ಎಲೈ ಅಧಮಾಧಮನೇ, ನನ್ನ ಮೇಲೆ ಖಡ್ಗವನ್ನೆತ್ತಿ ನೀನು ಮಾಡುವದೇನು? ನಿನ್ನ ಆಯುಷ್ಯವು ಇನ್ನು ಒಂದುವರೆ ತಾಸುಮಾತ್ರ ಉಳಿದಿರುತ್ತದೆ. ಏನಾದರೂ ಪರಲೋಕ ಸಾಧನವನ್ನು ಮಾಡಿಕೊಳ್ಳುವಹಾಗಿದ್ದರೆ ಮಾಡಿಕೋ. ನಿನ್ನ ವೈರಿಯು ನಿನ್ನ ನೆರಳಿನಂತೆ ಬೆನ್ನು ಹತ್ತಿರುವನೆಂಬದನ್ನರಿಯದೆ, ಯಾಕೆ ಕಾಲಹರಣಮಾಡುತ್ತೀ? ಗಾಬರಿಯಾಗಬೇಡ, ಈಗ ನಾನು ನಿನ್ನನ್ನು ತಡುವುವದಿಲ್ಲ, ಎಚ್ಚರಗೊಳಿಸಿದ್ದೇನೆ, ಎಂದು ಹೇಳಿ ಆ ಕರಿಯ ಮನುಷ್ಯನು ಕ್ಷಣದಲ್ಲಿ ಮಾಯವಾದನು. ತನ್ನ ವೈರಿಯಾದ ರಾಮದೇವನು ಹೀಗೆ ಆಕಸ್ಮಿಕವಾಗಿ ಗಂಟು ಬಿದ್ದದ್ದರಿಂದ, ಸೈಯದುಲ್ಲಾನ ಎದೆಯೊಡೆದು ನೀರಾಯಿತು. ಆತನ ಕೈಯೊಳಗಿನ ಖಡ್ಗವು ತಾನೇ ಕಳಚಿ ಬಿದ್ದಿತು. ಆತನು ಭಯದಿಂದ ಕ್ಷಣಮಾತ್ರ ಮೂರ್ಛಿತನಾದನು.

ಸೈಯದುಲ್ಲಾನು ಹೀಗೆ ಬಿದ್ದಿರಲು, ಅತ್ತ ನಾನಾಸಾಹೇಬನು ತಂದೆಯ ವಾಡೆಯ ಬಾಗಿಲಿಗೆ ಹೋದನು. ತಮ್ಮ ಪ್ರೀತಿಯ ಯಜಮಾನನು ಆಕಸ್ಮಾತ್ತಾಗಿ ಬಂದದ್ದನ್ನು ನೋಡಿ, ಕಾವಲುಗಾರರು ಸಂತೋಷಪಟ್ಟು, ವಿನಯದಿಂದ ಮುಜುರೆ ಮಾಡಿ ಆತನನ್ನು ಒಳಗೆ ಬಿಟ್ಟರು. ಅಪ್ಪಾಸಾಹೇಬನ ಮಲಗುವ ಕೋಣೆಯವರೆಗೆ ನಿರಾತಂಕವಾಗಿ ನಾನಾಸಾಹೇಬನ ಪ್ರವೇಶ ವಾಯಿತು. ಕೋಣೆಯ ಕಾವಲುಗಾರನು ನಾನಾಸಾಹೇಬನ ಗುರುತು ಹಿಡಿದು ಮುಜುರೆ ಮಾಡಿದನು. ನಾನಾಸಾಹೇಬನು ಅಂಜುತ್ತಂಜುತ್ತ ಕೋಣೆಯೊಳಗೆ

ಕಾಲನ್ನಿಡುತ್ತಿರಲು, ಅಪ್ಪಾ ಸಾಹೇಬನು—''ಯಾರವರು'' ಎಂದು ಪ್ರಶ್ನೆ ಮಾಡಿದನು. ಕೂಡಲೆ ನಾನಾಸಾಹೇಬನು—''ನಾನು, ನಾನಾನು'' ಎಂದು ಕೊಟ್ಟ ಉತ್ತರವು ಅಪ್ಪಾಸಾಹೇಬನ ಕರ್ಣರಂಧ್ರವನ್ನು ಪ್ರವೇಶಿಸಿದ ಕೂಡಲೆ ಆತನು ಕುಳಿತವನು ಚಟ್ಟನೆ ಎದ್ದು ನಿಂತು–ಎಲಾ ನೀಚ, ನಿನ್ನ ಕಾಲಲ್ಲಿ ನಾನು ಈಗ ಅನುಭವಿಸುತ್ತಿರುವ ಸಂಕಟವೂ, ನನಗಾಗಿರುವ ಅಪಮಾನವೂ ನಿನಗೆ ಸಾಕಾಗಿರುವದಿಲ್ಲವೆ''. ಅಂತೇ ನೀನು ಆಗಾಗ್ಗೆ ನನ್ನ ಕಣ್ಣಿಗೆ ಬಿದ್ದು ನನಗೆ ನೋವನ್ನುಂಟು ಮಾಡುತ್ತೀಯಾ? ನನ್ನ ಪಾಲಿಗೆ ಮಗನು ಸತ್ತನೆಂದು ತಿಳಿದು ಸಮಾಧಾನದಿಂದಿರುವದೂ ನಿನಗೆ ಸಹನವಾಗಲೊಲ್ಲದೇ? ನಮ್ಮ ತಂದೆಯು ಏನೂ ಮಾಡಲಿಕ್ಕಿಲ್ಲೆಂದು ನೀನು ತಿಳಿದಿರಬಹುದು; ಮತ್ತು ವಿಜಾಪುರದಲ್ಲಿ ನನ್ನ ಕೈಯಲ್ಲಿ ಸಿಕ್ಕು ನೀನು ಸುರಕ್ಷಿತ ಪಾರಾಗಿ ಹೋದದ್ದರಿಂದ, ನಿನ್ನ ಆ ತಿಳುವಳಿಕೆಯು ದೃಢವೂ ಆಗಿರಬಹುದು; ಆದರೆ ಈಗ ನನ್ನ ಕೈಗೆ ಸಿಕ್ಕಿರುವ ನೀನು ಪಾರಾಗಿ ಹೋಗಲಾರೆ. ಈಗಲೇ ನಿನ್ನನ್ನು ಸೆರೆಯಲ್ಲಿರಿಸಿ, ನಾಳೆ ಬಾದಶಹರ ಕಡೆಗೆ ಕಳಿಸಿಕೊಡುವೆನು, ಎಲೇ, ಯಾರಿದ್ದೀರಿ? ಹೊರಗೆ, ಬನ್ನಿರಿ, ತಕ್ಕೊಂಡು ಬನ್ನಿರಿ ಬೇಡಿಯನ್ನು ಎಂದು ನುಡಿದನು. ಆಗ ಆ ಉಗ್ರಮೂರ್ತಿಯು ಪ್ರತ್ಯಕ್ಷ ಜಮದಗ್ನಿಯ ಅವತಾರವಾದಂತೆ ತೋರುತ್ತಿತ್ತು, ತಂದೆಯ ಗುಣವು ಮಗನಲ್ಲಿ ಸ್ವಲ್ಪವಾದರೂ ಇಳಿದದ್ದರಿಂದ, ನಾನಾಸಾಹೇಬನೂ ಅದಕ್ಕೆ ಸೊಪ್ಪು ಹಾಕದೆ ತಂದೆಯನ್ನು ಕುರಿತು–ಅಪ್ಪಾ ಸಾಹೇಬರೇ, ಹುಡುಗನು ಬುದ್ಧಿಯ ಹೇಳಲಿಕ್ಕೆ ಬಂದಿದ್ದಾನೆಂಬ ಸಿಟ್ಟಿನಿಂದ ನನ್ನ ಎಲ್ಲ ಮಾತುಗಳನ್ನು ದುರ್ಲಕ್ಷಿಸಬೇಡಿರಿ. ಸ್ವಾಮಿನಿಷ್ಠೆಯು ದುರ್ಗುಣವೆಂದು ನಾನು ಹೇಳುವದಿಲ್ಲ, ನಿಷ್ಠೆಯ ಹೊರತು ಯಾವ ಕಾರ್ಯವೂ ಆಗುವದಿಲ್ಲ; ಸ್ವಾಮಿನಿಷ್ಠಸೇವಕರ ಯೋಗ್ಯತೆಯನ್ನು ಸ್ವಾಮಿಯು ತಿಳಕೊಂಡು, ಸೇವಕನನ್ನು ವಾತ್ಸಲ್ಯದಿಂದ ನಡಿಸಿಕೊಳ್ಳ ಬೇಕಲ್ಲವೆ? ಒಳ್ಳೆಯ ಅರಸರ ರಾಜ್ಯದಲ್ಲಿ ನಿಮ್ಮಂಥ ರಾಜನಿಷ್ಠರು ಘನತೆಗೇ ರುವದರಲ್ಲಿ ಸಂಶಯವಿಲ್ಲ; ಆದರೆ ಕುಂಟಲಗಿತ್ತಿಯ ಕೆಲಸ ಮಾಡುವವರ ಮಾತು ಕೇಳುವ ಬಾದಶಹನ ಸೇವೆಯಲ್ಲಿ ನಿಮ್ಮ ಅವಸ್ಥೆಯು ಏನಾಗಿರುತ್ತದೆಂಬದನ್ನಿಷ್ಟು ಮನಸ್ಸಿನಲ್ಲಿ ತಂದುಕೊಳ್ಳಿರಿ, ಯಃಕಶ್ಚಿತನಾದ ಸೈಯದುಲ್ಲಾಖಾನನಂಥ ಸಿಪಾಯಿಯು ಕುಂಟಲಗಿತ್ತಿಯ ಕೆಲಸದಿಂದ ಘನತೆಗೇರಿ, ನಿಮ್ಮಂಥ ಸ್ವಾಮಿನಿಷ್ಠ ಆಗರ್ಭಶ್ರೀಮಂತ ಕುಲೀನರನ್ನು ಬಣಿವೆಯ ಮೇಲಿನ ಬೆದರನಂತೆ ದುರ್ಗದ ಮೇಲೆ ಕುಳ್ಳಿರಿಸಿ ಬಿಟ್ಟಿದ್ದಾನೆ. ಮನೆಬಿಟ್ಟು ಹೊರಬೀಳುವ ಸ್ವಾತಂತ್ರ್ಯವೂ ನಿಮಗೆ ಉಳಿದಿರುವದಿಲ್ಲ, ನಿಮ್ಮ ದೊಡ್ಡಿಸ್ತಿಕೆ ಎಷ್ಟು, ದರ್ಪವೆಷ್ಟು, ಪರಾಕ್ರಮ ವೆಷ್ಟು, ನಿರ್ಧಾರವೆಷ್ಟು! ನಿಮ್ಮಂಥ ಯೋಗ್ಯತೆಯವರು ಮನಸ್ಸಿನಮೇಲೆ ತಕ್ಕೊಂಡರೆ ಪ್ರತ್ಯಕ್ಷ ಸ್ವಾಮಿಯ ಪದವಿಗೇರಿ, ನೀವು ಹಲವು ಸ್ವಾಮಿನಿಷ್ಠ ಸೇವಕರನ್ನು ಆದರಿಸಿ, ಅವರ ಏಕನಿಷ್ಠ ಸೇವೆಯನ್ನು ಸಾರ್ಥಕವಾಗಿ ಮಾಡಬಹುದು. ಕೇವಲ ಗೋ–ಬ್ರಾಹ್ಮಣ–ಪ್ರತಿಪಾಲನೆಗಾಗಿ ದೇಹವನ್ನು ಕೂಡ ಅರ್ಪಿಸಲು ಸಿದ್ಧನಾಗಿರುವ ಶಿವಾಜಿಯಂಥ ಪುಣ್ಯವಂತನಿಗೆ, ನಿಮ್ಮಂಥ ಸ್ವಾಮಿನಿಷ್ಠ ಗುರುವಿನ ಅವಶ್ಯಕತೆಯಿರುತ್ತದೆ. ಹೇಗಿದ್ದರೂ ಶಿವಾಜಿಯು ಈಗ ಸುಲ್ತಾನಗಡವನ್ನು ಸೈಯದುಲ್ಲಾಖಾನನ ಕೈಯೊಳಗಿಂದ ಕಸಕೊಳ್ಳುವನು. ನಿಮ್ಮ ಅಧಿಕಾರವು

ಪ್ರಕೃತಕ್ಕೆ ಸುಲ್ತಾನಗಡದ ಮೇಲಿರುವ ದಿಲ್ಲಾದ್ದರಿಂದ, ಶಿವಾಜಿಯ ಈ ಕೆಲಸಕ್ಕಾಗಿ ನೀವು ಶಿವಾಜಿಯ ಮೇಲಾಗಲಿ, ಶಿವಾಜಿಗೆ ಸಹಾಯಮಾಡಿದನೆಂದು ನನ್ನ ಮೇಲಾಗಲಿ ಸಿಟ್ಟಾಗುವ ಕಾರಣವಿಲ್ಲ. ಈಗ ಶಿವಾಜಿಯು ತಾನಾಗಿ ನನ್ನನ್ನು ತಮ್ಮ ಬಳಿಗೆ ಕಳಿಸಿದ್ದಾನೆ. ನೀವು ಆತನ ಪ್ರಾರ್ಥನೆಯನ್ನು ಮನ್ನಿಸಿ ಆತನನ್ನು ಕೂಡಿ ಸ್ವರಾಜ್ಯ ಸ್ಥಾಪನೆಗೆ ಸಹಾಯ ಮಾಡಿ, ಗೋಬ್ರಾಹ್ಮಣ ಪ್ರತಿಪಾಲನದ ಪುಣ್ಯವನ್ನಾದರೂ ಕಟ್ಟಿಕೊಳ್ಳಿರಿ, ಇಲ್ಲವೆ ನನ್ನನ್ನು ಸೆರೆಯಲ್ಲಿಟ್ಟು, ಈಗ ನಿಜವಾದ ಬಾದಶಹನೆನಿಸಿಕೊಳ್ಳುತ್ತಿರುವ ಸೈಯದುಲ್ಲಾಖಾನನಂಥ ಕುಂಟಲಗಿತ್ತಿಯ ಕೈಯಿಂದ ನನ್ನ ಶಿರಚ್ಛೇದವಮಾಡಿಸಿ, ಸ್ವಾಮಿನಿಷ್ಠಾಗ್ರೇಸರರೆಂದು ಕೀರ್ತಿಯನ್ನಾದರೂ ಕಟ್ಟಿಕೊಳ್ಳಿರಿ. ಸೈಯದುಲ್ಲಾಖಾನನು ಬಾದಶಹನ ಮುಂದೆ ನಿಮ್ಮ ಈ ಸ್ವಾಮಿನಿಷ್ಠೆಯನ್ನು ವರ್ಣಿಸುವದಕ್ಕಿಂತ ಹೆಚ್ಚಿನ ಪುರುಷಾರ್ಥವೇನೂ ನಿಮಗೆ ಕಾಣದಿದ್ದರೆ, ಹಿಡಿದು ಕೊಡಿರಿ, ಅಪ್ಪಾಸಾಹೇಬರೇ, ನನ್ನನ್ನು ಹಿಡಿದುಕೊಟ್ಟು ನಿಮ್ಮ ಕೈಖಡ್ಗದಿಂದ ನನ್ನ ಶಿರಸ್ಸನ್ನು ಸೈಯದುಲ್ಲಾಖಾನನ ಕೈಯಿಂದ ತುಂಡರಿಸಿ ಕೃತಾರ್ಥರಾಗಿರಿ. ಇದ್ದ ಒಬ್ಬ ಮಗನು ಹೀಗೆ ಸತ್ತ ಬಳಿಕ, ಸುಲ್ತಾನಗಡದಂಥ ಹಲವು ಗಡಗಳನ್ನು ಬಾದಶಹನಿಂದ ಸಂಪಾದಿಸಿ, ಸೈಯದುಲ್ಲಾನಂಥ ಕುಂಟಲಗಿತ್ತಿಗಳ ಮುಂದೆ ಬಾಲವನ್ನು ಗುಂಡಾಡಿಸುತ್ತ ನೀವು ಸುಖಲೋಲರಾಗಿರಿ. ನಾನು ಇದಕ್ಕೂ ಹೆಚ್ಚಿಗೆ ನುಡಿದು ಕಾಲಹರಣಮಾಡುವದಿಲ್ಲ.

ಈ ಮೇರೆಗೆ ಆವೇಶದಿಂದ ನಿರವಕಾಶವಾಗಿ ಆಡಿದ ನಾನಾಸಾಹೇಬನ ಮಾತುಗಳನ್ನು ಕೇಳಿ ಅಪ್ಪಾಸಾಹೇಬನು ತಟಸ್ಥನಾದನು. ಆತನ ಕಣ್ಣ ರೆಪ್ಪೆಗಳೂ ಬಡಿಯದಾದವು. ಮಗನ ಮಾತುಗಳ ವಿಲಕ್ಷಣ ಪರಿಣಾಮವು ಆ ವೃದ್ಧನ ಮೇಲೆ ಆಗಿ, ಆತನು ಸುಮ್ಮನೆ ನಿಂತು ಕೊಂಡನು. ಈ ಅವಧಿಯಲ್ಲಿ ಆತನ ಕಣ್ಣುಗಳೊಳಗಿಂದ ಒಂದೆರಡು ಅಶ್ರುಬಿಂದುಗಳು ಆತನ ಸುಕ್ಕುಗಟ್ಟಿದ ಗಲ್ಲಗಳ ಮೇಲೆ ಬಿದ್ದಂತೆ ತೋರಿತು; ಆದರೆ ಆ ಗಂಭೀರವೃತ್ತಿಯ ವೃದ್ಧ ಶೂರನು ಅದನ್ನು ತೋರಗೊಡದೆ, ಮಗನ ಬಳಿಗೆ ಬಂದು ಸೌಮ್ಯ ಸ್ವರದಿಂದ–ನಡೆ, ನಡೆ; ಇನ್ನು ಮಾತಾಡುತ್ತ ಇಲ್ಲಿ ನಿಲ್ಲಬೇಡ. ನನ್ನನ್ನು ಮೋಹಜಾಲದಲ್ಲಿ ಸಿಲುಕಿಸಿ ಭಯಂಕರ ಪಾಪದಲ್ಲಿ ದೂಡಬೇಡ. ನಾಲ್ವತ್ತೆರಡು ಕುಲಗಳನ್ನು ಸ್ವಾಮಿದ್ರೋಹದ ನರಕದಲ್ಲಿ ಕೆಡವಬೇಡ. ಸ್ವಾಮಿಯು ಹೇಗಿದ್ದರೂ, ಸತ್ಪುಸ್ಸನಾದ ಸೇವಕನು ಸ್ವಾಮಿನಿಷ್ಠೆಯನ್ನು ಕಾಯ್ದು ಕೊಳ್ಳಲೇಬೇಕು. ಅದೇ ಅವನ ಅಖಂಡ ಕೀರ್ತಿಗೂ, ಶಾಶ್ವತವಾದ ಪರಲೋಕ ಸುಖಕ್ಕೂ ಕಾರಣವಾಗುವದು. ಸ್ವಾರ್ಥಾಪೇಕ್ಷಿಗಳು ನಿಜವಾದ ಸ್ವಾಮಿನಿಷ್ಠರು ಅಲ್ಲವೇ ಅಲ್ಲ. ನನ್ನ ಕೈಯಿಂದ ಸ್ವಾಮಿ ದ್ರೋಹದ ಕಾರ್ಯವು ಕಾಲತ್ರಯದಲ್ಲಿಯೂ ಆಗಲಾರದು. ನಾನು ನಿನ್ನ ಮಾತುಗಳ ಮೇಲಿಂದ ಕ್ಷಣ ಹೊತ್ತು ಕಾಲುಜಾರಿ ಬೀಳುತ್ತಿದ್ದೆನು. ಆದರೆ ಜೋಲಿಯು ಹಿಡಿದು ನಿಂತಿದ್ದೇನೆ. ನೀನಾಡುವ ಮಾತುಗಳೆಲ್ಲ ನಿಜವಿದ್ದರೂ, ಸ್ವಾಮಿದ್ರೋಹವದು ಸ್ವಾಮಿದ್ರೋಹವೇ ಆಗಿರುವದು! ಸ್ವಾಮಿದ್ರೋಹಕ್ಕೆ ಯೋಗ್ಯ ಕಾರಣವನ್ನು ತೋರಿಸಿದ ಮಾತ್ರದಿಂದ, ಸ್ವಾಮಿದ್ರೋಹದ ದೋಷವು ತಪ್ಪದೆ ಬಿಡದು. ಆ ಪಾಪಕ್ಕಾಗಿ ಪರಮೇಶ್ವರನು ದಂಡಿಸದೆ ಇರನು. ಹೋಗು, ನನ್ನಂತೆ ನೀನು ಸ್ವಾಮಿಯ ಸೇವೆಯನ್ನು

ಅಂಗೀಕರಿಸಿರುವದಿಲ್ಲ; ಆದ್ದರಿಂದ ನೀನು ಏನು ಮಾಡಿದರೂ ಸ್ವಾಮಿದ್ರೋಹದ ಪಾ..... ಎಲ ಎಲಾ! ನಾನು ಎಂಥ ನೀಚ ಮಾತುಗಳನ್ನು ಆಡುವೆನಲ್ಲ! ಈ ದುಷ್ಟ ಮಗನು ಸ್ವಾಮಿದ್ರೋಹಿಯೆಂಬನ್ನರಿತೂ, ಈತನಿಗೆ ಉತ್ತೇಜನ ಕೊಡುತ್ತಿರುವೆನಲ್ಲ! ಹಾಯ್ ಹಾಯ್! ಇದು ನಿನ್ನ ಸ್ವಾಮಿದ್ರೋಹವಲ್ಲದೆ ಮತ್ತೆಯೇನು! ಛೀ ಛೀ, ಇಂಥ ನೀಚತನಕ್ಕೆ ಮನಸ್ಸು ಮಾಡಿದ ನನ್ನನ್ನೂ, ನಿನ್ನನ್ನೂ ಕೂಡಿಯೇ ಸೆರೆಹಿಡಿದು ಖಾನನಿಗೆ ಒಪ್ಪಿಸತಕ್ಕದ್ದು. ದುಷ್ಟಾ, ತುಂಟಜನರ ಸಹವಾಸದಿಂದ ಮನಬಂದಂತೆ ನಡೆಯಹತ್ತಿದ ನೀನು, ಸ್ವರಾಜ್ಯ ಸ್ಥಾಪನೆಗೆ ಸಹಾಯ ಮಾಡುವೆಯಾ? ನಿಮ್ಮಂಥ ಮಂಗಗಳಿಂದ ಈ ಕಾರ್ಯವು ಆಗುವದೇ? ಇನ್ನು ನೀನು ಈ ಸ್ಥಳದಿಂದ ಉಲುಕಬೇಡ, ಉಲುಕಿದರೆ ಇಲ್ಲಿಯೇ ಶಸ್ತ್ರದಿಂದ ನಿನ್ನನ್ನು ತುಂಡರಿಸುವೆನು. ಮಂಗಗಳಿರಾ, ಹಳ್ಳಿ ಪಳ್ಳಿಗಳನ್ನು ಸುಲಿಯುವ ನಿಮ್ಮಂಥ ಕಳ್ಳರಿಗೆ ಸ್ವರಾಜ್ಯ ಸ್ಥಾಪನೆಯ ಸುದ್ದಿಯೇಕೆ? ಮಂಗಕ್ಕೆ ಮಾಣಿಕದ ಬೆಲೆಯೇ? ಅನ್ನಲು, ನಾನಾಸಾಹೇಬನು— ಶ್ರೀರಾಮನು ರಾವಣನ ರಾಜ್ಯವನ್ನು ಮಂಗಗಳ ಸಹಾಯದಿಂದಲೇ, ಕಸಕೊಂಡನು ಎಂದು ಉತ್ತರಕೊಟ್ಟನು. ಆದ್ದರಿಂದ ಅಪ್ಪಾ ಸಾಹೇಬನು ಸಂತಪ್ತನಾಗಿ ಕೈಯೆತ್ತಿ ಮಗನನ್ನು ಹೊಡೆಯಹೋಗಲು, ಸೈಯದುಲ್ಲಾಖಾನನೂ, ಆತನ ಬೆನ್ನ ಹಿಂದೆಯೇ ಬೇರೆ ನಾಲ್ಕಾರು ಜನ ಮುಸಲ್ಮಾನರೂ ಅಲ್ಲಿಗೆ ಬಂದು —"ಅಪ್ಪಾಸಾಹೇಬ, ಅಪ್ಪಾಸಾಹೇಬ, ಅರೇ ಮೇರಿಜಾನ! ತೋಬಾ, ತೋಬಾ, ಏಕ್ಯಾ ಏಕ್ಯಾ!" ಎಂದು ನುಡಿಯುತ್ತ ಅಪ್ಪಾಸಾಹೇಬನಿಗೆ ಶರಣುಹೋದರು. ಅವರ ನಿಜವಾದ ಅವಸ್ಥೆಯನ್ನು ಅರಿಯದೆ ತನ್ನ ಸ್ವಾಮಿ ನಿಷ್ಠೆಯ ಆವೇಶದಲ್ಲಿಯೇ ಇದ್ದ ಅಪ್ಪಾಸಾಹೇಬನು, ಸೈಯದುಲ್ಲಾಖಾನನನ್ನು ನೋಡಿದ ಕೂಡಲೆ— ಖಾನಸಾಹೇಬರೇ, ಇವನು ನನ್ನ ದುಷ್ಟನಾದ ಮಗನು, ರಾಜದ್ರೋಹಿಯು. ಇವನನ್ನು ನಿಮಗೆ ಒಪ್ಪಿಸಿದ್ದೇನೆ. ನಿಮ್ಮ ಮನಸ್ಸಿಗೆ ಬ.... ಎಂದು ನುಡಿಯುತ್ತಿರಲು, ಹೊರಗೆ ಭಯಂಕರವಾದ ಗದ್ದಲವಾಗಹತ್ತಿದ್ದರಿಂದ, ಅಪ್ಪಾಸಾಹೇಬನು ಗದ್ದಲವಿದೇನೆಂದು ನೋಡುವದಕ್ಕಾಗಿ ಹೊರಗೆ ಬಂದನು.

## ದುರ್ಗಪ್ರಾಪ್ತಿ

ಅಪ್ಪಾಸಾಹೇಬನು ಹೊರಗೆ ಬಂದಾಗ ಅವನ ಕಣ್ಣಿಗೆ ಏನು ಬಿತ್ತೆಂಬದನ್ನು ಹೇಳುವ ಮೊದಲು, ಶಿವಾಜಿಯ ವೃತ್ತಾಂತವನ್ನು ತಿಳಿಸುವದು ಅವಶ್ಯವಾಗಿದೆ. ನಾನಾಸಾಹೇಬನನ್ನು ಆತನ ತಂದೆಯ ಬಳಿಗೆ ಕಳಿಸಿದ ಬಳಿಕ ಶಿವಾಜಿಯು, ಸೂರ್ಯಾಜಿಗೆ ಸೈಯದುಲ್ಲಾಖಾನನ ದಂಡನ್ನು ತರುಬಲಿಕ್ಕೆ ಹೇಳಿಕಳಿಸಿದ್ದನ್ನೂ, ತಾನಾಜಿಗೆ ತನ್ನ ಜನರೊಡನೆ ದಿಲ್ಲಿಯ ಬಾಗಿಲಿ ನಿಂದಲೇ ಸುಲ್ತಾನಗಡವನ್ನು ಪ್ರವೇಶಿಸಬೇಕೆಂದು ಆಜ್ಞಾಪಿಸಿದ್ದನ್ನೂ ವಾಚಕರು ಮರೆತಿರಲಿಕ್ಕಿಲ್ಲ ಅಪ್ಪಣೆಯಂತೆ ಅವರವರು ತಮ್ಮ ತಮ್ಮ ಕೆಲಸಗಳನ್ನು ಮಾಡಲಿಕ್ಕೆ ಉದ್ಯುಕ್ತರಾದರು.

ಇತ್ತ ರಾಮದೇವನಿಂದ ನೆಲಕ್ಕೆ ಕೆಡವಲ್ಪಟ್ಟ ಸೈಯದುಲ್ಲಾನು ಕೆಲವು ಹೊತ್ತಿನ ಮೇಲೆ ಎಚ್ಚತ್ತು, ತನ್ನ ವೈರಿಯು ಹೋಗಿರುವನೆಂಬದನ್ನು ಮನಗಂಡು ಮೆಲ್ಲನೆ ಎದ್ದು ರಂಗರಾವ ಅಪ್ಪಾನವಾಡೆಯ ಕಡೆಗೆ ಸಾಗಿದನು. ಅಲ್ಲಿ ಅವನ ಜನರೂ, ಅಪ್ಪಾಸಾಹೇಬನ ಮನೆಯ ಕಾವಲುಗಾರರೂ ಜಗಳಾಡುತ್ತ ನಿಂತಿದ್ದರು. ಅಪ್ಪಾಸಾಹೇಬನ ಜನರು ಖಾನನ ಜನರನ್ನು ಒಳಗೆ ಬಿಡಲೊಲ್ಲರು, ಖಾನನ ಜನರು ಕೇಳಲೊಲ್ಲರು. ನಾನಾಸಾಹೇಬನು ಒಳಗೆ ಹೋಗಿರಲು, ಆತನ ಮೇಲೆ ತುಂಬಾ ಪ್ರೀತಿಯುಳ್ಳ ಕಾವಲುಗಾರರು ದುಷ್ಟನಾದ ಸೈಯದುಲ್ಲಾ ಖಾನನ ಜನರನ್ನು ಹೇಗೆ ಒಳಗೆ ಬಿಟ್ಟಾರು? ತಮ್ಮ ಪ್ರಾಣಹೋದರೂ ಚಿಂತೆಯಿಲ್ಲ, ಖಾನನ ಜನರನ್ನು ಒಳಗೆ ಬಿಡಲಿಕ್ಕಿಲ್ಲೆಂದು ಎಷ್ಟೋ ಜನರು ಟೊಂಕಕಟ್ಟಿದರು. ಅಷ್ಟರಲ್ಲಿ ಸೈಯದುಲ್ಲಾ ಖಾನನು ಅಲ್ಲಿಗೆ ಬಂದು, ಅಪ್ಪಾಸಾಹೇಬನ ಜನರ ಉದ್ಧಟತನವನ್ನು ನೋಡಿ ಸಂತಾಪಗೊಂಡನು. ಆಗ ಖಾನನ ಕಡೆಯವನೊಬ್ಬನು— ''ಒಳಗೆ ನಾನಾಸಾಹೇಬನು ಬಂದಿರುತ್ತಾನೆ'' ಂಬ ಸುದ್ದಿಯನ್ನು ಖಾನನ ಮುಂದೆ ಹೇಳಲು, ಆತನು ಮತ್ತಿಷ್ಟು ಸಿಟ್ಟಿಗೆದ್ದು ಆ ತಂದೆ– ಮಕ್ಕಳಿಬ್ಬರನ್ನೂ ಬಾಯಿಗೆ ಬಂದ ಹಾಗೆ ಬೈಯಹತ್ತಿದನು. ಇನ್ನು ಸ್ವಲ್ಪ ಹೊತ್ತಿನಲ್ಲಿ ತನ್ನ ದಂಡಾಳುಗಳು ಬಂದಮೇಲೆ ಎಲ್ಲರ ಸಮಾಚಾರವನ್ನು ತಕ್ಕೊಳ್ಳಬೇಕೆಂದು, ಆತನು ತನ್ನ ಜನರಿಗೆ ''ಸ್ವಲ್ಪ ತಡೆಯಿರೆಂ''ದು ಒದರಿ ಒದರಿ ಹೇಳಿ ಗಂಟಲ ಹರಕೊಳ್ಳಹತ್ತಿದನು; ಆದರೆ ಮೊದಲೇ ಅವ್ಯವಸ್ಥಿತರಾದ ಮುಸಲ್ಮಾನರು ಗದ್ದಲದಲ್ಲಿ ಖಾನನ ಮಾತನ್ನು ಕೇಳದಾದರು. ಅಷ್ಟರಲ್ಲಿ ಶಿವಾಜಿಯ ದಂಡಿನವರು ಸಾಂಕೇತಿಕ ಶಬ್ದವನ್ನು ನುಡಿದು, ಗುರುತನ್ನು ತೋರಿಸಲು, ಕಾವಲುಗಾರರು ಕೋಟೆಯ ಬಾಗಿಲನ್ನು ತೆರೆದು ಕಂದಕದ ಪೂಲನ್ನು ಕೆಡವಿದರು. ಕೂಡಲೇ ಶಿವಾಜಿಯ ಮಾವಳೆ ಜನರು ಒಳಗೆ ಬಂದು ಮುಸಲ್ಮಾನ ಕಾವಲುಗಾರರ ಶಸ್ತ್ರಗಳನ್ನು ಕಸಕೊಂಡು ಅವರ ಹೆಡಮುರಿಗೆ ಕಟ್ಟಿ, ಗದ್ದಲಮಾಡಿದರೆ ತುಂಡರಿಸಿ ಚಲ್ಲುವೆವೆಂದು ಬೆದರಿಕೆ ಹಾಕಿ, ಬೆದರಿಕೆಗೆ ಸೊಪ್ಪುಹಾಕ ದವರನ್ನು ತುಂಡರಿಸಿ, ಅಲ್ಲಲ್ಲಿ ಮಾವಳಿ ಜನರ ಕಾವಲಿಡುತ್ತ ಮುಂದಕ್ಕೆ ಸಾಗಿಬರಹತ್ತಿದರು. ಹೀಗೆ ಬರುವವರನ್ನು ತನ್ನ ಜನರೇ ಎಂದು ತಿಳಿದು ಖಾನನು ಉಬ್ಬಿ, ಅವರನ್ನು ಎದುರುಗೊಂಡು ಉಪಚರಿಸುವದಕ್ಕಾಗಿ ಅವರ ಎದುರಿಗೆ ಹೋದನು. ಆತನು ತನ್ನ ಜನರೊಳಗಿನ ಮುಕ್ಕಾಲುಪಾಲು ಜನರನ್ನು ಮೇಹೇರಜಾನಳ ಮಂದಿರವನ್ನು ಮುತ್ತಲಿಕ್ಕೆ ಕಳಿಸಿ, ಕಾಲುಪಾಲು ಜನರಿಂದ ಅಪ್ಪಾಸಾಹೇಬನ ಸಮಾಚಾರವನ್ನು ತಕ್ಕೊಳ್ಳಬೇಕೆಂದು ಮಾಡಿದ್ದನು. ರಾಜದ್ರೋಹಿಯಾದ ಮಗನೊಡನೆ ಅಪ್ಪಾಸಾಹೇಬನು ಸಿಗುವದರಿಂದ, ಬಾದಶಹನ ಮುಂದೆ ಇಲ್ಲದ್ದೊಂದು ಹೇಳಿ, ಅಪ್ಪಾಸಾಹೇಬನನ್ನೂ, ಆತನ ಮಿತ್ರನಾದ ರಣದುಲ್ಲಾಖಾನನನ್ನೂ ಶಾಸನಕ್ಕೆ ಗುರಿಮಾಡಬೇಕು, ಅಂದರೆ ಬಾದಶಹನನ್ನು ತನ್ನ ಮನಸ್ಸಿಗೆ ಬಂದಂತೆ ಕುಣಿಸಲಿಕ್ಕೆ ತನಗೆ ನೆಟ್ಟಗಾಗುವದು, ಎಂದು ಆತನು ಉಬ್ಬಿದನು. ಈ ಉಬ್ಬಿನೊಳಗೆ ತನ್ನ ವೈರಿಯಾದ ರಾಮದೇವನ ಭಯವನ್ನೂ, ಈಗ ಸ್ವಲ್ಪ ವೇಳೆಯ ಹಿಂದೆ ರಾಮದೇವನು ತನ್ನನ್ನು ನೆಲಕ್ಕೆ ಕೆಡವಿದ್ದನ್ನೂ ಖಾನನು ಮರೆತನು. ಖಾನನು ಮುಂದಕ್ಕೆ ಸಾಗಿಹೋಗಿ ತನ್ನ

ಸೈನ್ಯದ ಮುಖ್ಯಸ್ಥನನ್ನು ಕೂಗಿ ಕರೆಯಹತ್ತಲು, ಆತನ ಮುಖ್ಯಸ್ಥನು ಬರುವದರ ಬದಲು ಸಾವಳ್ಯಾನು ಖಾನನ ಎದುರಿಗೆ ಬಂದು ಗಹಗಹಿಸಿ ನಗುತ್ತ— ''ಕ್ಯಾಜೀ ಖಾನಸಾಹೇಬ, ಮುಝೀಕು ಕಾಯಕು ಬುಲಾತೇ'' ಎಂದು ಹರಕ ಮುರಕ ಹಿಂದುಸ್ಥಾನೀ ಭಾಷೆಯಿಂದ ನುಡಿದು ಗಟ್ಟಿಯಾಗಿ ನಗಹತ್ತಿದನು. ಅದನ್ನು ನೋಡಿ ಖಾನನು ಸಂತಪ್ತನಾದನು. ನಾನು ಮುಖ್ಯಸ್ಥನನ್ನು ಕರೆಯುತ್ತಿರಲು, ನಮ್ಮ ದಂಡಿನೊಳಗಿನ ಯಾವನೋ ಒಬ್ಬ ಸಿಪಾಯಿಯ ಮಗನು ಹೀಗೆ ಹುಡುಗಾಟಿಕೆ ಮಾಡುತ್ತಾನೆಂದು ತಿಳಿದು, ಆತನು ಸಾವಳ್ಯಾನನ್ನು ಬಾಯಿಗೆ ಬಂದ ಹಾಗೆ ಬೈಯಹತ್ತಿದನು. ಅದನ್ನು ನೋಡಿ ಸಾವಳ್ಯಾನು ಮತ್ತಿಷ್ಟು ನಗಹತ್ತಿದನಲ್ಲದೆ, ಉಳಿದವರೂ ಗಟ್ಟಿಯಾಗಿ ನಗಹತ್ತಿದರು. ಆಗ ಶಿವಾಜಿಯು ಗಂಭೀರಸ್ವರದಿಂದ ತನ್ನ ಜನರನ್ನು ಕುರಿತು— ಹಾ, ಇದು ನಗುವ ಹೊತ್ತಲ್ಲ, ಗೂರವೆಯ ಕಟ್ಟಿಗೆಗಳನ್ನು ಹೊತ್ತಿಸಿ ಮುಂದಕ್ಕೆ ಸಾಗಿರಿ, ಎಂದು ಆಜ್ಞಾಪಿಸಿದನು. ಆಗ ಐವತ್ತು ಅರವತ್ತು ಜನರು ಗೊರವೆಯ ಕಟ್ಟಿಗೆಗಳನ್ನು ಹೊತ್ತಿಸಲು, ಅವರ ಸ್ವರೂಪವನ್ನು ನೋಡಿ ಸೈಯದುಲ್ಲಾಖಾನನು, ಇದು ಬಂಡುಗಾರರ ಮೋಸವೆಂದು ಗಾಬರಿಯಾಗಿ ಹಿಂದಕ್ಕೆ ಸರಿಯಹತ್ತಿದನು. ಅವರ ಮೈಮೇಲೆ ಕಂಬಳಿಯ ಹೊರತು ಬೇರೆ ವಸ್ತ್ರವಿದ್ದಿಲ್ಲ. ಅವರ ಕೈಯಲ್ಲಿ ಬರ್ಚಿ, ಟೊಂಕದಲ್ಲೊಂದು ಖಡ್ಗ, ಕೆಲವರ ಕೈಯಲ್ಲಿ ಉದ್ದವಾದ ತುಬಾಕಿ ಇಷ್ಟು ಯುದ್ಧೋಪಕರಣಗಳು ಮಾತ್ರ ಇದ್ದವು. ಸಿಪಾಯಿಗಳ ಉಳಿದ ಡೌಲು ಅವರಲ್ಲಿ ಕಂಡುಬರುತ್ತಿದ್ದಿಲ್ಲ. ಇವರು ಯಾರು, ಎಲ್ಲಿಂದ ಬಂದರು ಎಂಬದನ್ನು ವಿಚಾರಿಸಲಿಕ್ಕೂ ಕೂಡ ಖಾನನು ನಿಂತುಕೊಳ್ಳದೆ, ಅಪ್ಪಾಸಾಹೇಬನ ಮಂದಿರದ ಕಡೆಗೆ ಸಾಗಿದನು. ಶಿವಾಜಿಯ ಜನರೂ ಆತನನ್ನು ಹಿಂಬಾಲಿಸಿದರು. ''ದೀನ ದೀನ'' ಎಂಬ ಶಬ್ದದ ಬದಲು ''ಹರಹರ ಮಹಾದೇವ'' ಎಂಬ ಶಬ್ದವು ಖಾನನ ಕಿವಿಗೆ ಬೀಳಹತ್ತಿತು. ಶಿವಾಜಿಯ ಈ ದಂಡನ್ನು ನೋಡಿ ಇವರೆಲ್ಲಿಂದ ಬಂದರೆಂದು ಅಪ್ಪಾಸಾಹೇಬನ ಕಾವಲುಗಾರರೂ ಆಶ್ಚರ್ಯಪಟ್ಟು, ಜಗಳಾಡುವದನ್ನು ಬಿಟ್ಟು ನೋಡುತ್ತ ಸುಮ್ಮನೆ ನಿಂತು ಕೊಂಡರು. ಆಗ ಖಾನನೂ ಆತನಜನರೂ ಅಂಜಿ, ಹಿಂದಿನ ಪ್ರಕರಣದ ಕೊನೆಯಲ್ಲಿ ಹೇಳಿದಂತೆ ಅಪ್ಪಾಸಾಹೇಬನ ಕಡೆಗೆ ಬಂದಿದ್ದರು.

ಹೀಗೆ ಸೈಯದುಲ್ಲಾಖಾನನು ಆಕಸ್ಮಿಕ ಶರಣುಬಂದದ್ದರ ಗೂಢವೇ ಅಪ್ಪಾಸಾಹೇಬನಿಗೆ ತಿಳಿಯದಾಯಿತು. ಆತನು ಹೊರಗೆ ಬಂದು ನೋಡುತ್ತಾನೆ, ಜನರು ನೆರೆದಿದ್ದು ಕೆಲವರು ''ಹರಹರ ಮಹಾದೇವ'' ಎಂದೂ, ಕೆಲವರು ''ಜಯ ಅಂಬಾಭವಾನಿ!'' ಎಂದೂ ಗರ್ಜಿಸುತ್ತಾರೆ. ಕೆಲವರು ಸೈಯದುಲ್ಲಾಖಾನನನ್ನು ನಮಗೆ ಒಪ್ಪಿಸಿರೆಂದು ಒದರಹತ್ತಿದ್ದಾರೆ. ಇದನ್ನು ನೋಡಿ ಅಪ್ಪಾಸಾಹೇಬನು ಸಂತಾಪಗೊಂಡನು. ಆತನು ಹೊರಗೆ ಬಂದು ನೆರೆದ ಜನರಿಗೆ ಬಾಯಿಗೆಬಂದ ಹಾಗೆ ಬೈಯಹತ್ತಿದನು. ಆಗ ಶಿವಾಜಿಯ ಕಡೆಯ ಒಬ್ಬನು ಸಿಟ್ಟಿಗೆದ್ದು ಅಪ್ಪಾಸಾಹೇಬನ ಮೈಮೇಲೆ ಹೋಗಲು, ಶಿವಾಜಿಯು ಧೀರ ಗಂಭೀರ ವಾಣಿಯಿಂದ— ಹಾ! ಅವರು ಎಷ್ಟು ಬೈದರೂ ಅವರ ಮೈಮೇಲೆ ಹೋಗತಕ್ಕದ್ದಲ್ಲ. ಅವರ ಕೂದಲು ಕೊಂಕಲಾಗದು. ಮೊಟ್ಟಮೊದಲು ಸೈಯದುಲ್ಲಾನನ್ನು ಹಿಡಿಯಿರಿ, ಆಮೇಲೆ

ಆತನ ಜನರನ್ನು ಹಿಡಿಯಿರಿ. ಒಳ್ಳೆಯ ಮಾತಿನಿಂದ ಅವರು ನಮಗೆ ಅಧೀನರಾಗದಿದ್ದರೆ, ಹೊಡೆದು ಕೆಡವಿರಿ. ದುರ್ಗದ ಮೇಲಿರುವ ಹಿಂದೂ ಜನರು ತಾವಾಗಿ ಗದ್ದಲ ಮಾಡ ಹತ್ತಿದರೆ ಅವರ ಗೊಡವಿಗೆ ಹೋಗಿರಿ; ನಮ್ಮ ಮಾತು ಕೇಳಿ ಅವರು ಶಸ್ತ್ರವಿಟ್ಟು ಸುಮ್ಮನೆ ಕುಳಿತರೆ ಅವರ ಉಸಾಬರಿಗೆ ಹೋಗಬೇಡಿರಿ. ಅಪ್ಪಾಸಾಹೇಬರೇ, ನೀವು ಒತ್ತಟ್ಟಿಗಾಗಿ ನಮಗೆ ಹಾದಿಯನ್ನು ಕೊಡುವದು ನೆಟ್ಟಗೆ. ಆ ದುಷ್ಟ ಸೈಯದುಲ್ಲಾಖಾನನ ಬೆನ್ನು ಕಟ್ಟುವದರಿಂದ ಎಂದಿಗೂ ಕಲ್ಯಾಣವಾಗದು. ಆತನ ಕೆಟ್ಟ ಗುಣಗಳು ನಿಮಗೆ ಗೊತ್ತಿಲ್ಲವೆಂತಲ್ಲ; ಆತನು ವಿಜಾಪುರದ ದರ್ಬಾರದಲ್ಲಿರದಿದ್ದರೆ, ಬಾದಶಹನ ಸ್ಥಿತಿಯು ಇಷ್ಟು ಕೆಡುತ್ತಿತ್ತೋ? ಎಂದು ನುಡಿದನು. ಈ ಧೀರಗಂಭೀರವಾಣಿಯನ್ನು ಕೇಳಿ, ಏನು ಚಮತ್ಕಾರವಾಯಿತೋ ತಿಳಿಯದು, ಅಪ್ಪಾಸಾಹೇಬನ ಸ್ಥಿತಿಯು ವಿಚಿತ್ರವಾಯಿತು. ಹೀಗೆ ಮಾತಾಡುವ ಪುರುಷನು ಯಾವನಿರುತ್ತಾನೆಂಬದನ್ನು ನೋಡಲಿಕ್ಕೆ ಆತನ ನೇತ್ರಗಳು ಉತ್ಸುಕವಾಗಿರುವಂತೆ ತೋರಿತು. ಕ್ಷಣಮಾತ್ರ ಆತನು ವಿಚಾರಮಾಡಿ, ಆಮೇಲೆ—''ಶಹಾಜಿರಾಜರ ಶುಭ್ರಕೀರ್ತಿಗೆ ಕಲಂಕವನ್ನು ಉಂಟುಮಾಡುವ, ಹಾಗು ಅವರ ಸ್ವಾಮಿಭಕ್ತಿಯನ್ನು ದೂಷಿತವಾಗಿಮಾಡುವ ಕುಲಕಂಟಕನು ನೀನೇ ಅನ್ನುವ ಹಾಗೆ ಕಾಣುತ್ತದೆ! ನೀನು ಇಲ್ಲಿಗೆ ಹೇಗೆ ಬಂದೆ? ನನ್ನ ದುಷ್ಟನಾದ ಮಗನು ನೀಚತನದಿಂದ ನಿನ್ನನ್ನು ಕೂಡಿದ್ದರಿಂದಷ್ಟೇ? ಆದರೆ ಶಿವಬಾ, ಚನ್ನಾಗಿ ನೆನಪಿನಲ್ಲಿಡು; ನಮ್ಮ ದುಷ್ಟನು ನಿನ್ನನ್ನು ಕೂಡಿದ್ದರೂ, ನನ್ನ ಮನಸ್ಸನ್ನು ಒಲಿಸಿಕೊಳ್ಳುವದಕ್ಕಾಗಿ ನೀನು ಆತನನ್ನು ನನ್ನ ಕಡೆಗೆ ಕಳಿಸಿದ್ದರೂ ಪ್ರಯೋಜನವನ್ನು ಪಡೆಯಲಾರೆ. ನೀನು ಇಲ್ಲಿದ್ದ ಸುಲ್ತಾನಗಡವನ್ನು ಅತ್ತಕಡೆಗೆ ಎತ್ತಿಡುವದು ಶಕ್ಯವೆಂದು ಭಾವಿಸು; ಆದರೆ ನಾನು ನಿನ್ನ ಕಡೆಗಾಗುವೆನೆಂದು ಆಶೆಯನ್ನು ಹಿಡಿಯಬೇಡ. ನನ್ನ ಮಗನಂಥ ನಾಲ್ಕುಜನ ಪುಂಡರನ್ನು ನೆರಿಸಿ, ನೀನು ಸ್ವರಾಜ್ಯವನ್ನು ಸ್ಥಾಪಿಸುವವನಲ್ಲವೇ? ಇದೊಂದು ದುರ್ಗವನ್ನು ಕೈವಶಮಾಡಿಕೊಂಡರೆ, ಸ್ವರಾಜ್ಯ ಸ್ಥಾಪನೆಯಾದಂತಾಯಿತೇನು? ನೀನು ಸೈಯದುಲ್ಲಾಖಾನನನ್ನು ನನಗೆ ಒಪ್ಪಿಸೆಂದು ಹೇಳುತ್ತೀ; ನಿನ್ನ ಮಾತಿನಂತೆ ಆತನು ನೀಚನೂ ಇರಬಹುದು; ಆದರೆ ಆತನು ರಾಜದರ್ಬಾರದಿಂದ ನನ್ನ ಮನೆಗೆ ಅತಿಥಿಯಾಗಿ ಬಂದಿದ್ದಾನೆ. ನನ್ನ ಈ ಜರ್ಜರವಾದ ದೇಹದೊಳಗಿಂದ ಪ್ರಾಣವು ಹೋಗುವವರೆಗೆ ಆತನು ನಿಮ್ಮ ಕೈಸೇರ ಲಾರನು. ಪೋರಾ, ನೀನು ಏನೆಂದು ತಿಳಿದಿರುತ್ತೀ?''ಎಂದು ನುಡಿಯುತ್ತಿರಲು, ಶಿವಾಜಿಯು ಬೇರೆ ಕಡೆಗೆ ಹೋದದ್ದರಿಂದ ಮುದುಕನು ಸುಮ್ಮನಾದನು. ಅಷ್ಟರಲ್ಲಿ ಅಪ್ಪಾಸಾಹೇಬನ ಜನರು ಅಲ್ಲಿಗೆ ಬಂದು—ಅಪ್ಪಾಸಾಹೇಬರೇ, ಈ ಪುಂಡರು ಆಕಸ್ಮಿಕವಾಗಿ ಮೋಸದಿಂದ ದುರ್ಗ ದೊಳಗೆ ಬಂದು, ಮೊದಲಿನ ಕಾವಲುಗಾರರನ್ನೆಲ್ಲ ಕೊಂದು ಎಲ್ಲ ಆಯಕಟ್ಟಿನ ಸ್ಥಳಗಳಲ್ಲಿ ತಮ್ಮ ಕಾವಲುಗಾರರನ್ನು ಇಟ್ಟಿದ್ದಾರೆ. ನಮ್ಮ ಆಯುಧಗಳೆಲ್ಲ ಒಳಗೆ ಸಿಕ್ಕಿವೆ. ಆಯುಧಗಳನ್ನು ಹಿಡಿವವರಿಗೆ— ''ನೀವು ಆಯುಧಗಳನ್ನಿಟ್ಟು ಸುಮ್ಮನೆ ಕುಳಿತರೆ ನಿಮ್ಮ ಗೊಡವಿಗೆ ಬರುವದಿಲ್ಲೆಂ''ದು ಹೇಳಿ, ಅವರು ಆಯುಧಗಳನ್ನು ಕಸಕೊಂಡು ಜನರನ್ನು ಸುಮ್ಮನೆ ಕುಳ್ಳಿರಿಸ ಹತ್ತಿದ್ದಾರೆ, ಎಂದು ಹೇಳಲು, ಅಪ್ಪಾಸಾಹೇಬನು ಸಿಟ್ಟಿನಿಂದ ಉರಿಯುತ್ತ—ಆಹಾ,

ರಂಡೆಮಕ್ಕಳಿರಾ, ಮೋರೆಗೆ ಸೆರಗುಹಾಕಿಕೊಂಡು ಅಳಿರಿ; ಕೈಯಲ್ಲಿ ಬಳೆಯಿಟ್ಟುಕೊಂಡು ಸೀರೆಯನ್ನು ಉಟ್ಟುಕೊಳ್ಳಿರಿ. ನನ್ನ ದುಷ್ಟ ಮಗನ ಉಪದೇಶಕ್ಕೆ ಕಿವಿಗೊಟ್ಟು ಹಾಳುಮಾಡಿ ಬಿಟ್ಟಿರಿ. ತಾಯಿಯಗಂಡರಿರಾ, ಲಂಚಬೊಕ್ಕರಿಸಿ, ಎಲ್ಲವನ್ನು ಅವರಿಗೆ ಒಪ್ಪಿಸಿ ನನ್ನ ಮುಂದೆ ಅಳಲಿಕ್ಕ ಬಂದಿರುತ್ತೀರಾ? ಇದೆಲ್ಲ ಆ ದುಷ್ಟ ನಾನಾನ ಕೆಲಸವು. ಇರಲಿ, ನೋಡುತ್ತೇನೆ, ಎಂದು ಮತ್ತೆ ಮನೆಯನ್ನು ಸೇರಿ ದಿವಾನಖಾನೆಯೊಳಗೆ ಹೋದನು. ಅಲ್ಲಿ ಸೈಯದುಲ್ಲಾಖಾನನು ರಾವು ಹೊಡೆದು ಕುಳಿತುಕೊಂಡಿದ್ದನು. ಹೊರಗಿನ ಜನರು ತನ್ನನ್ನು ಒಪ್ಪಿಸಬೇಕೆಂದು ಒದರಾಡುವದನ್ನು ಕೇಳಿ, ಅವನ ಎದೆಯೊಡೆದು ನೀರಾಗಿತ್ತು ಆತನು ಅಪ್ಪಾಸಾಹೇಬನ ಕಾಲನ್ನು ಗಟ್ಟಿಯಾಗಿ ಹಿಡಕೊಂಡು—ಅಪ್ಪಾಸಾಹೇಬರೇ, ನಾನು ಹಲವು ಬಗೆಯಾಗಿ ನಿಮಗೆ ಕೇಡು ಬಗೆದಿದ್ದೇನೆ. ಅವನ್ನೆಲ್ಲ ಹೊಟ್ಟೆಯಲ್ಲಿ ಹಾಕಿಕೊಂಡು, ಈಗ ಹೇಗಾದರೂ ಮಾಡಿ, ರಣದುಲ್ಲಾಖಾನನ ಸೈನ್ಯದ ಸಹಾಯದಿಂದ ನನ್ನನ್ನು ದುರ್ಗದ ಕೆಳಗೆ ಕರಕೊಂಡು ಹೋಗಿ ನನ್ನ ಜನರನ್ನು ಕೂಡಿಸಿರಿ. ನಾನು ಒಂದು ಕ್ಷಣವಾದರೂ ಇಲ್ಲಿ ನಿಂತುಕೊಳ್ಳದೆ ವಿಜಾಪುರಕ್ಕೆ ಹೋಗುತ್ತೇನೆ. ನಿಮ್ಮಿಂದ ನನಗಾದ ಸಹಾಯವನ್ನು ಬಾದಶಹರ ಮುಂದೆ ಹೇಳಿ, ನಿಮ್ಮ ಕಲ್ಯಾಣಮಾಡದೆ ಇರೆನು. ಈ ಸಾರೆ ನನ್ನ ಮಾತಿನ ಪರೀಕ್ಷೆಯ ನ್ನಾದರೂ ಮಾಡಿರಿ. ನೀವು ಮನಸ್ಸು ಮಾಡಿದರೆ, ನಾನು ಪಾರಾಗುವ ಹಾಗಿದ್ದೇನೆ. ಇಲ್ಲದಿದ್ದರೆ ನನ್ನ ಆ ವೈರಿಯು—ಸೈತಾನನು ನನ್ನನ್ನು ತುಂಡರಿಸಿ ಚಲ್ಲುವನು. ಆಗಲೇ ಆತನು ನನಗೆ ಗುರುತಿಟ್ಟು ಹೇಳಿಹೋಗಿದ್ದಾನೆ, ಎಂದು ಅಂಗಲಾಚಿ ಬೇಡಿಕೊಳ್ಳುತ್ತ ಅಪ್ಪಾಸಾಹೇಬನ ಕಾಲನ್ನು ಹಿಡಕೊಂಡು ಕುಳಿತನು.

ಸೈಯದುಲ್ಲಾನ ಈ ದೈನ್ಯವೃತ್ತಿಯನ್ನು ನೋಡಿ, ಅಪ್ಪಾಸಾಹೇಬನು ಕನಿಕರಪಟ್ಟು ಖಾನನಿಗೆ ಅಭಯವನ್ನು ಕೊಟ್ಟು ತನ್ನ ಯುದ್ಧದ ಉಡುಪು ತೊಡುಪುಗಳನ್ನು ಧರಿಸಿದನು. ಬಲಗೈಯಲ್ಲಿ ಖಡ್ಗವನ್ನು ಹಿಡಿದು, ಎಡಗೈಯಿಂದ ಸೈಯದುಲ್ಲಾನ ರಟ್ಟೆಯನ್ನು ಹಿಡಿಕೊಂಡು, ಆತನು ಸೈಯದುಲ್ಲಾನನ್ನು ಕುರಿತು—ಖಾನಸಾಹೇಬರೇ, ಬೆದರಬೇಡಿರಿ. ನನ್ನ ಪ್ರಾಣವು ಹೋಗುವವರೆಗೆ ನಿಮ್ಮ ಸಂರಕ್ಷಣವನ್ನು ಮಾಡುತ್ತೇನೆ, ನಡೆಯಿರಿ, ಎಂದು ಖಾನನನ್ನೂ, ಅವನ ಜನರನ್ನೂ ಕೂಡಿಕೊಂಡು ಮನೆಯ ಹೊರಗೆ ಬಂದು, ಬಾಗಿಲ ಬಳಿಯಲ್ಲಿರುವ ಜನರನ್ನು ತಿರಸ್ಕಾರದಿಂದ ನೋಡಿ—ಎಲೇ, ನೋಡಿರಿ, ಈತನು ಸೈಯದುಲ್ಲಾಖಾನನು, ಈತನನ್ನು ಕರಕೊಂಡು ನಾನು ದುರ್ಗವನ್ನು ಇಳಿದು ಹೋಗುತ್ತೇನೆ. ಈತನನ್ನು ಕಳಿಸಿ, ಆಮೇಲೆ ನಿಮ್ಮ ಸಂಗಡ ಯುದ್ಧಕ್ಕೆ ಬರುವೆನು. ತಾಯಿಯ ಮಕ್ಕಳಾದವರು ನನ್ನ ಮೇಲೆ ಕೈಮಾಡಿ ಮೊದಲು ನನ್ನನ್ನು ಕೊಂದು, ಆಮೇಲೆ ಸೈಯದುಲ್ಲಾಖಾನನನ್ನು ಮುಟ್ಟಿರಿ. ಈಗ ಈತನನ್ನು ಕರಕೊಂಡು ಹೊರಟೆನು. ಎದೆಗಾರರಾದವರು ಮುಂದಕ್ಕೆ ಬರಬಹುದು, ಎಂದು ನುಡಿದನು. ಅದನ್ನು ಕೇಳಿ ಮೂವರು ಸೈಯದುಲ್ಲಾಖಾನನ ಮೇಲಿನ ರೊಚ್ಚಿನಿಂದ ಅಪ್ಪಾಸಾಹೇಬನ ಮೇಲೆ ಹರಿ ಹೋದರು. ಉಳಿದವರು ಸೈಯದುಲ್ಲಾಖಾನನ ಹೆಸರಿನಿಂದ ಒಂದೇಸಮನೆ ಕೂಗಹತ್ತಿದರು. ಅಷ್ಟರಲ್ಲಿ ಶಿವಾಜಿಯು ಗಂಭೀರವಾಣಿಯಿಂದ

ತನ್ನ ಜನರನ್ನು ಕುರಿತು—ಹಾ! ಸ್ವಾಮಿನಿಷ್ಠರ ಮೇಲೆ ಕೈಮಾಡಲಾಗದು. ತಟ್ಟನೆ ಹಿಂದಕ್ಕೆ ಸರಿದು, ಅವರಿಗೆ ಹೋಗಲಿಕ್ಕೆ ಹಾದಿಯ ಬಿಡಿರಿ, ಎಂದು ಆಜ್ಞಾಪಿಸಲು, ಅಪ್ಪಾಸಾಹೇಬನಿಗೆ ಮಾರ್ಗವು ದೊರೆಯಿತು. ಮರಾಟರು ಸೈಯದುಲ್ಲಾ ಖಾನನ ಜನರ ಶಸ್ತ್ರಗಳನ್ನಿಡಿಸಿಕೊಂಡು, ಅವರನ್ನೂ ಆಗ್ರಹದಿಂದ ಖಾನನ ಸಂಗಡ ಕೆಳಗೆ ಕಳಿಸಿಬಿಟ್ಟರು. ಆಗ ಖಾನನ ಜನರು ''ನಾವು ಅನಾಯಾಸವಾಗಿ ಪಾರಾದೆವೆಂ''ದು ಆನಂದ ಪಟ್ಟರು ಪಾಪ! ಕೆಳಗೆ ಬಡಿಸಿಟ್ಟಿದ್ದ ಎಲೆಯನ್ನು ಅವರೇನು ಬಲ್ಲರು? ಯಾವ ತೊಂದರೆಯೂ ಇಲ್ಲದೆ ಅಪ್ಪಾಸಾಹೇಬನು ಸೈಯದುಲ್ಲಾಖಾನನನ್ನೂ, ಆತನ ಜನರನ್ನೂ ಕೋಟೆಯ ಕೆಳಗೆ ಇಳಿಸಿ, ಆತನ ಸಮ್ಮತಿಯಿಂದ ದುರ್ಗವನ್ನು ಏರಿಬಂದನು. ಅಷ್ಟರಲ್ಲಿ ಮೇಹೇರಜಾನಳಿದ್ದ ಮಂದಿರದ ಬಳಿಯಲ್ಲಿ ಜನರು ಕೂಗಹತ್ತಿ ಗದ್ದಲವಾಗತೊಡಗಿತ್ತು, ತಾನಾಜಿಯು ಮೇಹೇರಜಾನಳ ಕಾವಲುಗಾರರನ್ನು ಕುರಿತು—ಮಿತ್ರರೇ, ನಿಮ್ಮ ಜನರನ್ನೆಲ್ಲ ಎಬ್ಬಿಸಿ ಜಾಗರೂಕರಾಗಿರಿ. ಸೈಯದುಲ್ಲಾನ ಜನರು ಈಗ ನಿಮ್ಮ ಮೇಲೆ ಬೀಳುವದಕ್ಕಾಗಿ ಬರುವರು. ಅವರು ಸದ್ಯಕ್ಕೆ ಅಪ್ಪಾಸಾಹೇಬರ ಸೊಸೆಯ ಸಲುವಾಗಿ ಅಪ್ಪಾಸಾಹೇಬರ ಮನೆಯನ್ನು ಮುತ್ತಿರುತ್ತಾರೆ. ಮೇಹೇರಜಾನಳ ಮೇಲೆ ಸೈಯದುಲ್ಲಾನ ಕಣ್ಣು ಬಹುದಿವಸದಿಂದ ಇರುತ್ತದೆಂಬದನ್ನು ನೀವು ಬಲ್ಲಿರಿ. ಎಂದು ನುಡಿಯುವಾಗ, ಮೇಹೇರಜಾನಳ ಜನರು ಶಂಕಿತರಾಗಲು, ಅವರೊಳಗಿನವನೊಬ್ಬನು—ಅಹುದಹುದು. ಈ ಮಾತು ಸುಳ್ಳಲ್ಲ, ನಿನ್ನೆ ಸೈಯದುಲ್ಲಾನು ನಿಮ್ಮೆಲ್ಲರಿಗೆ ಸೆರೆಗುಡಿಸಿ ಎಚ್ಚರಗೆಡುವಂತೆ ಮಾಡಿದರೆ, ಬಹು ದೊಡ್ಡ ಇನಾಮು ಕೊಡುವೆನೆಂದು ನನಗೆ ಆಶೆ ತೋರಿಸಿದ್ದನು; ಆದರೆ ಆತನ ಮಾತನ್ನು ನಾನು ಅಂತರಂಗದಲ್ಲಿ ಧಿಕ್ಕರಿಸಿ, ಹೊರಗೆ ಸಮ್ಮತಿಯನ್ನು ತೋರಿಸಿದ್ದೆನು; ಈ ಮಾತುಗಳನ್ನು ನಿಮ್ಮ ಮುಂದೆ ಈ ಮೊದಲೇ ಹೇಳತಕ್ಕದ್ದಿತ್ತು; ಆದರೆ ಅದರಲ್ಲೇನು ಮಹತ್ವವಿರುತ್ತದೆಂದು ತಿಳಿದು ನಿಮಗೆ ಹೇಳಲಿಲ್ಲ, ಎಂದು ನುಡಿದನು. ಆಗ ಆ ಶೂರ ಮುಸಲ್ಮಾನರು ಸಂಶಯಪಟ್ಟು ನಿಜವಾದ ಸಂಗತಿಯನ್ನು ಅರಿತುಕೊಂಡು ಬರಲಿಕ್ಕೆ ತಮ್ಮೊಳಗಿನವನೊಬ್ಬನನ್ನು ಅಪ್ಪಾಸಾಹೇಬರ ಮಂದಿರದ ಕಡೆಗೆ ಕಳಿಸಿದರು. ಆತನು ಆ ಗೊಂಗಡಿಯ ಮಂದಿಯನ್ನು ನೋಡಿ ಆಶ್ಚರ್ಯ ಪಟ್ಟು, ಆ ಸಂಗತಿಯನ್ನು ತಮ್ಮ ಜನರಿಗೆ ಹೇಳಲು, ಅವರು—ದುಷ್ಟ ಸೈಯದುಲ್ಲಾಖಾನನು ಬೇಕಾದ ಹಾಗೆ ಮೋಸಗೊಳಿಸಬಹುದೆಂದು ತಮ್ಮೊಳಗೆ ಅಂದುಕೊಂಡರು. ಸ್ವಲ್ಪ ಹೊತ್ತಿನಲ್ಲಿ ಅಪ್ಪಾಸಾಹೇಬರ ಮನೆಯ ಕಡೆಯಿಂದ ಜನಸಮೂಹವು ತಮ್ಮಕಡೆಗೆ ಬರಲು, ಅವರಿಗೆ ತಾನಾಜಿಯ ಮಾತು ವಿಶ್ವಾಸನೀಯವಾಗಿ ತೋರಿತು.

ಮೇಹೇರಜಾನಳ ಮನೆಯ ಮೇಲೆ ಸಾಗಿಬರುತ್ತಲಿದ್ದ ದಂಡಾಳುಗಳ ಮುಂದುಗಡೆಯಲ್ಲಿ ನಾನಾಸಾಹೇಬನು ಇದ್ದನು. ಆತನು ಮೇಹೇರಜಾನಳ ಜನರನ್ನು ಕುರಿತು—ಮಿತ್ರರೇ, ನೀವು ನಿಮ್ಮ ಎಲ್ಲ ಪರಿವಾರವನ್ನು ಕಟ್ಟಿಕೊಂಡು ಹೋಗುತ್ತಿದ್ದರೆ, ಈಗಲೇ ಹೊರಟುಹೋಗಿರಿ; ನಿಮಗೆ ಯಾವ ತೊಂದರೆಯೂ ಆಗಲಾರದು. ಸುಮ್ಮನೆ ನಮ್ಮ ಸಂಗಡ ಜಗಳತೋಟೆ ಗಳನ್ನಾಡಿದರೆ ನಿಷ್ಕಾರಣ ಜೀವಕ್ಕೆ ಎರವಾದೀರಿ. ಸದ್ಯಕ್ಕೆ ಈ

ದುರ್ಗವು ಅಪ್ಪಾಸಾಹೇಬರ ಅಧೀನದಲ್ಲಿರುವದಿಲ್ಲ, ಇಲ್ಲಿ ಈಗ ಹೊಸ ಅಮಲು ಆಗಿರುತ್ತದೆ. ರಣದುಲ್ಲಾಖಾನನು ಒಳ್ಳೆಯ ವನಾದದ್ದರಿಂದ ಆತನ ಜನರಿಗೆ, ವಿಶೇಷವಾಗಿ ಹೆಣ್ಣುಮಕ್ಕಳಿಗೆ ನಮ್ಮಿಂದ ಎಷ್ಟು ಮಾತ್ರವೂ ತ್ರಾಸವಾಗಲಾರದು. ನಿಮಗೆ ನಾನು ಒಂದು ತಾಸಿನ ಅವಧಿಯನ್ನು ಕೊಡುತ್ತೇನೆ. ಅಷ್ಟರಲ್ಲಿ ಇಲ್ಲಿಂದ ನೀವೆಲ್ಲರು ಹೊರಟಾದರೂ ಹೋಗಿರಿ; ಹಾಗೆ ಹೋಗಲಿಕ್ಕೆ ಅನುಕೂಲವಿಲ್ಲದಿದ್ದರೆ, ಆಯುಧಗಳನ್ನು ಕೆಳಗಿಟ್ಟು ಸ್ವಸ್ಥವಾಗಿಯಾದರೂ ಕುಳಿತುಕೊಳ್ಳಿರಿ; ನಿಮಗೆ ಅನುಕೂಲ ಕಂಡಾಗ ಹೋಗಬಹುದು; ಆದರೆ ಈಗ ದುರ್ಗದ ಮೇಲೆ ವಿಜಾಪುರದವರ ಅಮಲು ಇಲ್ಲೆಂಬದನ್ನು ಮಾತ್ರ ಚನ್ನಾಗಿ ನೆನಪಿನಲ್ಲಿಡಿರಿ, ಎಂದನು ನಾನಾಸಾಹೇಬನ ಈ ಮಾತಿನ ಅರ್ಥವು ಯಾರಿಗೂ ತಿಳಿಯಲಿಲ್ಲ, ರಣದುಲ್ಲಾಖಾನನನ್ನು ಸ್ತೋತ್ರಮಾಡಿ, ದುರ್ಗದಿಂದ ಹೊರಟು ಹೋಗ ಹೇಳುವವನಾ ರೆಂಬದು ಕಾವಲುಗಾರರಿಗೆ ತಿಳಿಯದ ಹಾಗಾಯಿತು. ಅವರಲ್ಲಿ ಮೂರು ನಾಲ್ಕು ಜನ ತುಂಟರು ಮುಂದುವರಿದು ನಾನಾಸಾಹೇಬನಿಗೆ — ನಾವು ದುರ್ಗದಿಂದ ಹೊರಟೂ ಹೋಗುವದಿಲ್ಲ, ಶಸ್ತ್ರಗಳನ್ನು ಕೆಳಗೂ ಇಡುವದಿಲ್ಲ ಎಂದು ಹೇಳಿದರು. ಅವರಲ್ಲಿ ಮಹಮ್ಮದನು ಆಗ್ರೇಸರನಾಗಿದ್ದದ್ದನ್ನು ಕಂಡು, ಸಂತಾಪದಿಂದ ನಾನಾಸಾಹೇಬನ ಮೈಮೇಲಿನ ಎಚ್ಚರವು ತಪ್ಪಿ, ಆತನು ಮಹಮ್ಮದನ ಮೇಲೆ ಶಸ್ತ್ರವನ್ನೆತ್ತಿದನು. ಕೂಡಲೆ ಎರಡೂ ಪಕ್ಷದಲ್ಲಿ ಯುದ್ಧವು ಆರಂಭವಾಯಿತು. ಹೀಗೆ ಯುದ್ಧದ ಪ್ರಸಂಗವು ಒದಗೀತೆಂದು ನಾನಾಸಾಹೇಬನಿಗೆ ತೋರಿದ್ದಿಲ್ಲ, ದುರ್ಗವು ತಮ್ಮ ಕೈಸೇರಿತೆಂದು ಅವನು ಸಮಾಧಾನ ಪಟ್ಟಿದ್ದನು. ಅಷ್ಟರಲ್ಲಿ ಅಪ್ಪಾಸಾಹೇಬನು ಸೈಯದುಲ್ಲಾಖಾನನನ್ನು ದುರ್ಗದ ಕೆಳಗೆ ಇಳಿಸಿ, ಯುದ್ಧ ನಡೆದಲ್ಲಿಗೆ ಬಂದನು. ರಣದುಲ್ಲಾಖಾನನ ಜನರು ಸುಮ್ಮನೆ ಕೂಡ್ರುವವರಲ್ಲೆಂದು ಆತನು ತರ್ಕಿಸಿದ್ದನು. ತನ್ನ ತರ್ಕದಂತೆ ಯುದ್ಧವು ಆರಂಭವಾದದ್ದನ್ನು ನೋಡಿ, ಅಪ್ಪಾಸಾಹೇಬನಿಗೆ ಬಹಳ ಸಮಾಧಾನವಾಯಿತು. ಆತನು ''ಶಾಬಾಸ'' ಎಂದು ರಣದುಲ್ಲಾಖಾನನ ಜನರನ್ನು ಶ್ಲಾಘಿಸಿ, ತಾನೂ ಯುದ್ಧದಲ್ಲಿ ಆವೇಶದಿಂದ ಸೇರಿದನು. ಅನಾಯಾಸದಿಂದ ದುರ್ಗವು ಕೈಸೇರುವದು ಒತ್ತಟ್ಟಿಗುಳಿದು, ಪ್ರತ್ಯಕ್ಷ ತಂದೆಮಕ್ಕಳ ನಡುವೆ ಯುದ್ಧವು ಆರಂಭವಾಯಿತು. ತನ್ನ ತಂದೆಯು ಯುದ್ಧದಲ್ಲಿ ಪ್ರವೇಶಿಸಿದ್ದನ್ನು ನೋಡಿ ನಾನಾಸಾಹೇಬನ ಕೈಕಾಲುಗಳು ಹೋದವು. ಆತನ ಯುದ್ಧೋತ್ಸಾಹವು ಕುಗ್ಗಿತು. ಪ್ರತ್ಯಕ್ಷ ತನ್ನ ತಂದೆಯ ವಿರುದ್ಧ ಕಾದಾಡಿ ದುರ್ಗವನ್ನು ಕೈಸೇರಿಸಿ ಕೊಳ್ಳಲಿಕ್ಕೆ ಅವನ ಮನಸ್ಸು ಹಿಂಜರಿಯಹತ್ತಿತು. ಅತ್ತ ಅಪ್ಪಾಸಾಹೇಬನು ಮಹಾರಾಷ್ಟ್ರರಿಗೆ— ''ನೀವು ಸ್ವಾಮಿದ್ರೋಹಿಗಳು, ಮಾತೃದ್ರೋಹಿಗಳು, ಪಿತೃದ್ರೋಹಿಗಳು, ವಿಶ್ವಾಸಘಾತಕಿಗಳು, ನನ್ನ ನೀಚ ಮಗನಂತು ಮಹಾದುಷ್ಟನು, ಅವನ ನಾಶವಾದರೆ ನನಗೆ ಸಂತೋಷವಾದೀತು, ಎಂದು ಬಾಯಿಗೆ ಬಂದಹಾಗೆ ಬೈದು ಶಪಿಸಹತ್ತಿದನು. ಇದನ್ನು ಕೇಳಿ ನಾನಾಸಾಹೇಬನು ಅಸಮಾಧಾನಪಟ್ಟು, ಇಂಥ ಕೆಲಸಕ್ಕೆ ನಾನು ಯಾಕೆ ಹೋಗಿರಬಹುದೆಂದು ಪಶ್ಚಾತ್ತಾಪ ಪಡಹತ್ತಿದನು. ಆತನು ಸಮರಭೂಮಿಯಲ್ಲಿ ನಿಲ್ಲಲಾರದೆ ಹಿಂದಕ್ಕೆ ಸರಿಯುತ್ತ ಜನಸಮೂಹ

ವನ್ನು ಬಿಟ್ಟು ಒಬ್ಬನೇ ದೂರಹೋದನು. ಇದನ್ನು ಹೊಂಚುಹಾಕಿ ನೋಡುತ್ತಿದ್ದ ಮಹಮ್ಮದನು ಮೋಸದಿಂದ ನಾನಾಸಾಹೇಬನನ್ನು ಕೊಲ್ಲಲುದ್ಯೋಗಿಸಿ, ವಿಚಾರಮಾಡುತ್ತ ಮೈಮರೆತು ನಿಂತಿರುವ ನಾನಾಸಾಹೇಬನ ಮೇಲೆ ಖಡ್ಗವನ್ನು ಪ್ರಯೋಗಿಸಿದನು. ಕಡತವು ಮರ್ಮಸ್ಥಾನಕ್ಕೆ ಬಿದ್ದದ್ದರಿಂದ, ಕೂಡಲೆ ನಾನಾಸಾಹೇಬನು ಮೂರ್ಛಿತನಾಗಿ ನೆಲಕ್ಕೆ ಬಿದ್ದನು. ಆಗ ಮಹಮ್ಮದನು ಸಂತೋಷದಿಂದ ನಾನಾಸಾಹೇಬನ ಎದೆಯ ಮೇಲೆ ಕುಳಿತು—ಏ ಕಾಫರ, ಹೇಗಿದೆ ಮಹಮ್ಮದನ ಕೈ! ಹಿಂದಕ್ಕೆ ಸೆರೆಮನೆಯಲ್ಲಿ ನೀನು ನನ್ನ ಎದೆಯ ಮೇಲೆ ಹೀಗೆಯೇ ಕುಳಿತು ನನ್ನನ್ನು ಗುದ್ದಿ ಗುದ್ದಿ ನೆಲಕ್ಕೆ ತಿಕ್ಕಿದ್ದಿಯಲ್ಲವೆ! ಅದರ ಫಲವನ್ನು ಈಗ ಉಣ್ಣು, ದುಷ್ಟಾ, ನನ್ನ ಫಾತಿಮೆಯ ಮನಸ್ಸನ್ನು ತಿರುಗಿಸಿ, ಆಕೆಯ ಸಹಾಯದಿಂದ ಆ ದುಷ್ಟ ರಾಮದೇವನನ್ನು ನೀನೇ ಸೆರೆಮನೆಯಲ್ಲಿ ಕರೆಸಿಕೊಂಡೆಯಲ್ಲವೆ? ಎಂದು ನಾನಾಸಾಹೇಬನ ಪ್ರಾಣವನ್ನು ಹೀರುವದಕ್ಕಾಗಿ ಅವನ ಎದೆಯಲ್ಲಿ ಕಠಾರಿಯನ್ನು ಚುಚ್ಚಲಿಕ್ಕೆ ಕೈಯನ್ನು ಎತ್ತಿದ್ದನು. ಒಂದು ಕ್ಷಣ ತಡೆದಿದ್ದರೆ ನಾನಾಸಾಹೇಬನ ಇಹಲೋಕದ ಯಾತ್ರೆಯು ಪೂರ್ಣವಾಗಿ ಹೋಗುತ್ತಿತ್ತು; ಆದರೆ ಅಷ್ಟರಲ್ಲಿ ಶಿವಾಜಿಯು ಎತ್ತಲಿಂದ ಬಂದನೋ ಏನೋ, ಆತನು ಮಹಮ್ಮದನು ಎತ್ತಿದ ಕೈಯನ್ನು ತನ್ನ ಖಡ್ಗದಿಂದ ತುಂಡರಿಸಿ ಚಲ್ಲಿದನು. ಮತ್ತೊಂದು ಕಡತವು ಮಹ್ಮಮದನ ಕುತ್ತಿಗೆಗೆ ಬಿದ್ದದ್ದರಿಂದ, ಆತನು ''ಅಲ್ಲಾ ಅಲ್ಲಾ''ಎಂದು ಹಿಂದಕ್ಕೆ ಬಿದ್ದನು. ಆಗ ಶಿವಾಜಿಯು ಆತನನ್ನು ದರದರ ಎಳೆದು ದೂರಚೆಲ್ಲಿ ಕೊಟ್ಟು, ನಾನಾಸಾಹೇಬನ ಸಮಾಚಾರಕ್ಕಾಗಿ ಬಂದು, ಆತನು ಜೀವದಿಂದಿರುವದನ್ನು ನೋಡಿ ಸಮಾಧಾನಪಟ್ಟನು. ಶಿವಾಜಿಯು ನಾನಾಸಾಹೇಬನನ್ನು ಎತ್ತಿಕೊಂಡು ಹೋಗುವದಕ್ಕಾಗಿ ಜನರನ್ನು ಕರಕೊಂಡು ಬರಲಿಕ್ಕೆ ಹೋಗುತ್ತಿರಲು, ಯಾರೋ ಹೆಂಗಸರು ದುರ್ಗವನ್ನು ಏರಿಬರುತ್ತಿರುವದು, ಅವರ ಬಳೆಗಳ ಸಪ್ಪಳದ ಮೇಲಿಂದ ಆತನಿಗೆ ಗೊತ್ತಾಯಿತು. ಇಷ್ಟು ರಾತ್ರಿಯಲ್ಲಿ ಕಳ್ಳದಾರಿಯಿಂದ ಯಾವ ಹೆಂಗಸರು ಬರುತ್ತಿರಬಹು ದೆಂದು ಆಶ್ಚರ್ಯದಿಂದ ನೋಡುತ್ತಿರುವಾಗ, ಇಬ್ಬರು ಹೆಂಗಸರು ಆತನ ಕಡೆಗೆ ಬರತೊಡಗಿದರು.

ಹಿಂದಕ್ಕೆ ನಾಂದೇಗಾವದಲ್ಲಿ ಶಿವಾಜಿಯನ್ನು ತಮ್ಮ ಮನೆಯಲ್ಲಿಟ್ಟುಕೊಂಡು ಉಪಚರಿಸಿದ ಚಂದ್ರಾವತಿಯ ದಾಸಿಯು, ತನ್ನ ಒಡೆಯಳ ಆಗ್ರಹದಿಂದ ಅವಳೊಡನೆ ಈ ದಿನ ಅಷ್ಟು ರಾತ್ರಿಯಲ್ಲಿ ದುರ್ಗವನ್ನೇರಿ ಬರುತ್ತಿದ್ದಳು. ಸಂಕಟಸಮಯದಲ್ಲಿ ತನ್ನಪತಿಗೆ ಸಹಾಯ ವನ್ನು ಮಾಡಿ, ತನ್ನ ಪವಿತ್ರಾಚರಣೆಯನ್ನು ಆತನ ಅನುಭವಕ್ಕೆ ತಂದುಕೊಟ್ಟು, ಆತನ ಪೂರ್ವದ ಪ್ರೇಮವನ್ನು ಸಂಪಾದಿಸಬೇಕೆಂದು ಚಂದ್ರಾವತಿಯು ನಿಶ್ಚಯಿಸಿ, ಅಲ್ಲಿಗೆ ತನ್ನ ದಾಸಿಯನ್ನು ಕರಕೊಂಡು ಬಂದಿದ್ದಳು. ಹಿಂದಕ್ಕೆ ಸುಲ್ತಾನಗಡದಿಂದ ಚಂದ್ರಾವತಿಯು ತನ್ನ ದಾಸಿಯ ಸಹಾಯದಿಂದ ಇದೇ ಮಾರ್ಗವಾಗಿ ತನ್ನ ತವರಮನೆಗೆ ಹೋಗಬೇಕೆಂದು ಪುರುಷವೇಷದಿಂದ ಹೊರಟು, ಹಾದಿಯಲ್ಲಿ ರಣದುಲ್ಲಾಖಾನನ ಕೈಯಲ್ಲಿ ಸಿಕ್ಕು ಪೇಚಾಡಿದ್ದಳು. ಧೂರ್ತನಾದ ಶಿವಾಜಿಯು ತಟ್ಟನೆ ಅವರ ಗುರುತು ಹಿಡಿದು, ಅವರನ್ನು

ಕುರಿತು—ಅಮ್ಮಾ, ನಿಮ್ಮ ಗುರುತು ನನಗೆ ಸಿಕ್ಕಿತು. ಇದು ವಿಚಾರಮಾಡುತ್ತ ಕುಳಿತುಕೊಳ್ಳುವ ಸಮಯವಲ್ಲ, ನಾನಾಸಾಹೇಬನು ಗಾಯಪಟ್ಟು ಇಲ್ಲಿ ಬಿದ್ದುಕೊಂಡಿದ್ದಾನೆ. ನೀವು ಈತನ ಬಳಿಯಲ್ಲಿ ಕುಳಿತುಕೊಂಡು ಉಪಚರಿಸುತ್ತಲಿರಬೇಕು. ನಾನು ಈಗ ಜನರನ್ನು ಕರತರುತ್ತೇನೆ. ಆಮೇಲೆ ಈತನನ್ನು ಮನೆಗೆ ಕರಕೊಂಡು ಹೋಗಲಿಕ್ಕೆ ಅನುಕೂಲವಾಗುವದು, ಎಂದು ಹೇಳಿದನು. ದನಿಯ ಮೇಲಿಂದ ಆ ಹೆಣ್ಣುಮಕ್ಕಳಿಗೂ ಶಿವಾಜಿಯ ಗುರುತು ಹತ್ತಿತು. ಅವರು ತಮ್ಮ ದುಃಖವನ್ನು ಹತ್ತಿಕ್ಕಿಕೊಂಡು ಚಿಂತಾಕ್ರಾಂತರಾಗಿ ನಾನಾಸಾಹೇಬನ ಬಳಿಯಲ್ಲಿ ಕುಳಿತುಕೊಂಡರು. ಗಾಯದ ವ್ಯಥೆಯಿಂದ ನಾನಾಸಾಹೇಬನು ನರಳುತ್ತಿದ್ದನು. ವ್ಯಥೆಯನ್ನು ತಾಳಲಾರದೆ ಆತನು ಅತ್ತಿತ್ತ ಕೈಕಾಲು ಚೆಲ್ಲುತ್ತಿದ್ದದ್ದು ಬೆಳದಿಂಗಳಲ್ಲಿ ಕಾಣುತ್ತಿತ್ತು, ಅದನ್ನು ನೋಡಿ ಚಂದ್ರಾವತಿಯ ದುಃಖವು ಒತ್ತರಿಸಿತು. ಆಕೆಯ ಕಣ್ಣೀರುಗಳು ಸುರಿಯಹತ್ತಿದವು. ತಾನು ಬಂದದ್ದು ಯಾತಕ್ಕೆ ಆದದ್ದು ಏನು ಎಂದು ಆಕೆಯು ಬಹಳವಾಗಿ ದುಃಖಿಸಿದಳು. ಆಕೆಯ ಜೀವವು ತಳಮಳಿಸಹತ್ತಿತು. ಜನರನ್ನು ಕರೆತರಲಿಕ್ಕೆ ಹೋದ ಶಿವಾಜಿಯು ಎಷ್ಟು ಹೊತ್ತಾದರೂ ಬರಲಿಲ್ಲೆಂದು ತಿಳಿದು,ಆಕೆಯು ನೀರನ್ನೂ, ದೀಪವನ್ನೂ ತಕ್ಕೊಂಡು ಬರಲಿಕ್ಕೆ ತನ್ನ ದಾಸಿಯನ್ನು ಕಳಿಸಿದಳು ದಾಸಿಯು ಒಡೆಯಳನ್ನು ಬಿಟ್ಟು ಹೋಗಲಾರದೆ ಕಷ್ಟದಿಂದ ಹೋಗಲು, ನಾನಾಸಾಹೇಬನು ನರಳುವದು ಹೆಚ್ಚಾಯಿತು. ಒಮ್ಮೆ ಆತನು ''ಯಾರವರು? ಅಪ್ಪಾ ಸಾಹೇಬರೇನು?'' ಎಂದು ಕ್ಷೀಣಸ್ವರದಿಂದ ನುಡಿದನು. ಅದನ್ನು ಕೇಳಿ ಚಂದ್ರಾವತಿಗೆ ಬಹಳ ವ್ಯಥೆಯಾಯಿತು. ಅಷ್ಟರಲ್ಲಿ ಆಕೆಗೆ ಸಮೀಪದಲ್ಲಿ ನೀರಿದ್ದದ್ದು ನೆನಪಾಗಲು, ಕೂಡಲೆ ಆಕೆಯು ಅಲ್ಲಿಗೆ ಹೋಗಿ, ನೀರಿನಿಂದ ತನ್ನ ಸೆರಗನ್ನು ತೋಯಿಸಿಕೊಂಡು, ಬೊಗಸೆಯಲ್ಲಿ ನೀರನ್ನು ತಕ್ಕೊಂಡು ಸಾವಕಾಶವಾಗಿ ನಡೆಯುತ್ತ ಪತಿಯ ಬಳಿಗೆ ಬಂದಳು. ಅದೇ ಸಂಧಿಯಲ್ಲಿ ನಾನಾಸಾಹೇಬನು ''ನೀರು ನೀರು, ಯಾರಾದರೂ ನೀರು ಕೊಡಿರಿ'' ಎಂದು ಕೂಗುವದನ್ನು ಕೇಳಿ, ಚಂದ್ರಾವತಿಗೆ ಬಹಳ ಸಮಾಧಾನವಾಯಿತು. ಆಕೆಯು ತನ್ನ ಬೊಗಸೆಯೊಳಗಿನ ನೀರನ್ನು ಪತಿಯ ಬಾಯಲ್ಲಿ ಹಾಕಿ, ತೋಯಿಸಿ ತಂದ ತನ್ನ ಸೀರೆಯ ಸೆರಗಿನಿಂದ ಪತಿಯ ಕಣ್ಣುಗಳನ್ನು ಒರಸಿ, ಒದ್ದೆಯನ್ನು ಆತನ ನೆತ್ತಿಯ ಮೇಲೆ ಇಟ್ಟಳು. ಅದರಿಂದ ನಾನಾಸಾಹೇಬನ ಜೀವಕ್ಕೆ ಸ್ವಲ್ಪ ಸುಖವಾಗಿ, ಆತನು ''ಅಹಹ'' ಎಂದು ಉಚ್ಚರಿಸಿದನು. ಅದನ್ನು ಕೇಳಿ ಚಂದ್ರಾವತಿಗೆ ಹೊಸ ಜೀವಬಂದಂತಾಗಿ, ಆಕೆಯು ಪರಮಾನಂದಪಟ್ಟಳು. ಅಷ್ಟರಲ್ಲಿ ಆಕೆಯ ದಾಸಿಯೂ, ಶಿವಾಜಿಯೂ ನಾಲ್ಕು ಜನರನ್ನು ಕರಕೊಂಡು ಗೊರವಿಯ ಕಟ್ಟಿಗೆಯ ಬೆಳಕಿನಲ್ಲಿ ಬರಲು, ಶಿವಾಜಿಯು ನಾನಾಸಾಹೇಬನನ್ನು ಸುರಕ್ಷಿತವಾಗಿ ಆತನ ಮನೆಗೆ ಕಳಿಸಿಕೊಟ್ಟನು. ಆತನ ಉಪಚಾರಕ್ಕಾಗಿ ಆತನ ಹೆಂಡತಿಯು ತನ್ನ ದಾಸಿಯೊಡನೆ ಆಕಸ್ಮಿಕವಾಗಿ ಬಂದದ್ದರಿಂದ, ಶಿವಾಜಿಗೆ ಬಹಳ ಸಮಾಧಾನವಾಯಿತು.

ತನ್ನ ಸಂಗಡಿಗರು ನಾನಾಸಾಹೇಬನನ್ನು ಅತ್ತ ಕರೆದೊಯ್ಯಲು,ಇತ್ತ ಜೀವ್ಯಾನು ಮರಣೋನ್ಮುಖನಾಗಿ ಬಿದ್ದುಕೊಂಡಿದ್ದ ಮಹಮ್ಮದನ ಬಳಿಗೆ ಹೋಗಿ—ಏ ಸುವ್ವರ, ಹೋಗು ಹೋಗು. ಒಮ್ಮೆ ಅಲ್ಲಾನ ಕಡೆಗೆ ಹೋಗಿಬಿಡು. ನಿನ್ನಿಂದ ಹೋಗುವದು

ಆಗದ್ದಿದರೆ, ನಾನು ತಟ್ಟನೆ ಕಳಿಸುತ್ತೇನೆ, ಎಂದು ನುಡಿದು, ಮಹಮ್ಮದನನ್ನು ಒದೆಯಲಿಕ್ಕೆ ಕಾಲನ್ನೆತ್ತಿದನು. ಅದನ್ನು ನೋಡಿ ಶಿವಾಜಿಯು—ಜೀವ್ಯಾ, ಈ ನೀಚತನವು ನನಗೆ ತಡೆಯಲಿಕ್ಕಿಲ್ಲ; ಮುಸಲ್ಮಾನನೇನು, ಹಿಂದುವೇನು? ಮರಣಕಾಲವು ಸಮೀಪಿಸಿದಾಗ ಎಲ್ಲರೂ ಸಮಾನರೆಂದು ತಿಳಿಯಬೇಕು. ಆ ಕಾಲದಲ್ಲಿ ಪವಿತ್ರತೆಯೂ, ಶಾಂತಿಯೂ ಎಲ್ಲರಿಗೂ ಸರಿಯಾಗಿಯೇ ಇರಬೇಕಾಗುವದು. ನೀನು ಹೀಗೆ ಬಿದ್ದಾಗ ಯಾವನಾದರೂ ಮುಸಲ್ಮಾನನು ನಿನ್ನನ್ನು ಒದ್ದರೆ, ನಿನಗೆ ಹೇಗಾದೀತು? ನಡೆ, ಆತನ ಬಳಿಯಲ್ಲಿ ಕುಳಿತುಕೋ, ನಾನೂ ಕುಳಿತುಕೊಳ್ಳುತ್ತೇನೆ, ಸಮಾಧಾನದಿಂದ ಜೀವವು ಹೋಗುವ ಹಾಗೆ ನಮ್ಮಿಂದಾದಷ್ಟು ಯತ್ನಿಸೋಣ, ಎಂದು ನಿಜವಾಗಿಯೇ ಆತನು ಮಹಮ್ಮದನ ಬಳಿಯಲ್ಲಿ ಕುಳಿತುಕೊಂಡನು. ಅದನ್ನು ನೋಡಿ ಜೀವ್ಯಾನಿಗೆ ಆಶ್ಚರ್ಯವಾಯಿತು. ಆತನು ಒಡೆಯನ ಅಪ್ಪಣೆಯಂತೆ ನೀರುತಂದನು. ಶಿವಾಜಿಯು ಮಹಮ್ಮದನ ಬಾಯಲ್ಲಿ ನೀರು ಹಾಕಿ, ಆತನ ಕಣ್ಣುಗಳು ತೆರದಿರಬಾರದೆಂದು ಅವನ್ನು ತನ್ನ ಕೈಗಳಿಂದ ಮುಚ್ಚಿ, ಜೀವ್ಯಾನಿಗೆ—ಅಪ್ಪಾ ಜೀವ್ಯಾ, ಮರಣವು ಯಾರಿಗೂ ಬಿಟ್ಟದ್ದಲ್ಲ. ದ್ವೇಷವು ಎಲ್ಲಿಯವರೆಗೆ? ವೈರಿಯು ಎದುರಿಗೆ ನಿಂತು ಯುದ್ಧಮಾಡುವವರೆಗೆ. ಮರಣಕಾಲದಲ್ಲಿ ಎಲ್ಲರ ಗತಿಯು ಒಂದೇ ಆಗಿರುವದು. ಆಗ ಭೇದಭಾವವನ್ನು ಎಣಿಸಲಾಗದು, ಎಂದು ಉಪದೇಶಿಸುತ್ತಿರಲು, ಮಹಮ್ಮದನ ಪ್ರಾಣವು ಹೊರಟುಹೋಯಿತು. ಅಷ್ಟರಲ್ಲಿ ಕೆಲವು ಮಾವಳರು ಅಲ್ಲಿಗೆ ಬಂದು, ಶಿವಾಜಿಯನ್ನು ಕುರಿತು–ಮಹಾರಾಜರೇ, ದುರ್ಗವು ನಮ್ಮ ಕೈಸೇರಿ ತಾನಾಜಿಯವರು ಪೂರ್ಣಜಯ ಶಾಲಿಗಳಾದರು. ಬೇಗಮೆಯ ಜನರು ಪೂರ್ಣವಾಗಿ ಸೋತು ಶಸ್ತ್ರಗಳನ್ನಿಟ್ಟು ಸ್ವಸ್ಥವಾಗಿ ಕುಳಿತುಕೊಂಡಿರುತ್ತಾರೆ. ಈ ಯುದ್ಧದಲ್ಲಿ ತಾನಾಜಿಗೆ ಸೂರ್ಯಾಜಿಯಿಂದ ಒಳಿತಾಗಿ ಸಹಾಯವಾಯಿತು. ನಮ್ಮವರನ್ನು ಅಪ್ಪಾ ಸಾಹೇಬರನ್ನು ಪ್ರತಿಬಂಧದಲ್ಲಿರಿಸಿರುತ್ತಾರೆ. ಈ ಎಲ್ಲ ಸಂಗತಿಯನ್ನು ಅರಿಕೆಮಾಡಲಿಕ್ಕೆ ತಾನಾಜಿಯವರ ಅಪ್ಪಣೆಯಾದದ್ದರಿಂದ ಬಿನ್ನಯಿಸಿರುವೆವು, ಮುಂದೆ ಏನು ಮಾಡಬೇಕೆಂಬ ಬಗ್ಗೆ ಅಪ್ಪಣೆಯಾಗಬೇಕು, ಎಂದು ಬೇಡಿಕೊಳ್ಳಲು, ಶಿವಾಜಿಯು ಅದರ ವಿಚಾರವನ್ನು ಹಿಂದುಗಡೆಯಲ್ಲಿ ಮಾಡೋಣವಂತೆ. ಸದ್ಯಕ್ಕೆ ಅವರಲ್ಲಿಯ ನಾಲ್ಕುಜನ ಮುಸಲ್ಮಾನರನ್ನು ಕರತಂದು, ಈ ಶವಕ್ಕೆ ಮಣ್ಣುಕೊಡಿಸಿರಿ. ಎಂದು ಹೇಳಲು, ಕೂಡಲೆ ಆ ಮಾವಳರು ನಾಲ್ಕಾರುಜನ ಮುಸಲ್ಮಾನರನ್ನು ಕರತಂದರು. ಆಗ ಶಿವಾಜಿಯು ಅವರ ಕೈಯಿಂದ ಮಹಮ್ಮದನ ಶವವನ್ನು ದುರ್ಗದ ಕೆಳಗಿರುವ ಹಳ್ಳಿಯ ಸ್ಮಶಾನ ಭೂಮಿಯಲ್ಲಿ ಹುಗಿಸಿದನು. ಯುದ್ಧದಲ್ಲಿ ಮರಣಹೊಂದಿದ ಬೇರೆ ಮುಸಲ್ಮಾನರ ಶವಗಳ ವ್ಯವಸ್ಥೆಯನ್ನಾದರೂ ಆ ಉದಾರ ಪುರುಷನು ಇದರಂತೆಯೇ ಮಾಡಿಸಿದನು.

# ಸೌಶೀಲ್ಯ

ಅಪ್ಪಾಸಾಹೇಬನು ಸೈಯದುಲ್ಲಾಖಾನನನ್ನು ದುರ್ಗದ ಕೆಳತನಕ ಇಳಿಸಿ, ದುರ್ಗದಲ್ಲಿ ಪುಂಡಾಟಿಕೆ ನಡಿಸಿದವರ ಪಾರಪತ್ಯ ಮಾಡುವದಕ್ಕಾಗಿ ತಿರುಗಿ ತಾನು ದುರ್ಗದ ಮೇಲೆ ಬಂದನೆಂದು ಹಿಂದೆ ಹೇಳಿದೆಯಷ್ಟೆ? ಸೈಯದುಲ್ಲಾನು ತನ್ನ ದಂಡಿನವರನ್ನಷ್ಟು ಕೂಡಿದರೆ ಪಾರಾದೆನೆಂದು ತಿಳಿದು, ತನ್ನ ಸೈನ್ಯವು ಬೀಡುಬಿಟ್ಟಿರುವಲ್ಲಿಗೆ ತನ್ನ ಜನರೊಡನೆ ಒತ್ತರದಿಂದ ಸಾಗಿದ್ದನು. ತನ್ನ ದಂಡಿನವರು ದುರ್ಗವನ್ನು ಏರಿ ಬಾರದೆ ಬೇರೆ ಜನರು ಬಂದದ್ದರಿಂದ, ಏನೋ ಘಾತವಾಗಿದೆಯೆಂಬ ವಿಚಾರವು ಖಾನನ ಮನಸ್ಸಿನಲ್ಲಿ ಬಂದಿದ್ದರೂ, ಆಗ ಅಂಥ ಯಾವ ಸಂಗತಿಯನ್ನೂ ಮನಸ್ಸಿನಲ್ಲಿ ತರುವದರಿಂದ ಪ್ರಯೋಜನವಾಗುವಂತೆ ಇದ್ದಿಲ್ಲ, ಬೇರೆ ಉಪಾಯವನ್ನು ಕಾಣದೆ ಕೇವಲ ಪರಾಧೀನನಂತೆ ಖಾನನು ಸಾಗಿರಲು, ಆತನ ವೈರಿಯಾದ ರಾಮದೇವನೆಂಬ ಆ ಕರಿಯ ಮನುಷ್ಯನು ಹಾದಿಯಲ್ಲಿ ಅವನನ್ನು ತರುಬಿ— ಏ, ದುಷ್ಮನ್, ಎಲ್ಲಿಗೆ ಹೊರಟೆ? ನಿನ್ನ ಸೈನ್ಯವನ್ನು ಮಹಾರಾಷ್ಟ್ರರು ಮುತ್ತಿದ್ದಾರೆ. ನಿನ್ನ ಆಯುಷ್ಯವು ತುಂಬಿದಂತಾಯಿತು. ನಿನ್ನನ್ನು ನಾನು ಮೋಸದಿಂದ ಕೊಲ್ಲುವದಿಲ್ಲ. ನೀನು ನಿನ್ನ ಸೈನ್ಯವನ್ನು ಸೇರಿ ಮಹಾರಾಷ್ಟ್ರರೊಡನೆ ಯುದ್ಧಕ್ಕೆ ನಿಲ್ಲು; ನಾನು ಮಹಾರಾಷ್ಟ್ರ ಕಡೆಗೆ ಆಗಿ ನಿನ್ನೆದುರಿಗೆ ಯುದ್ಧಕ್ಕೆ ನಿಲ್ಲುತ್ತೇನೆ. ಯುದ್ಧದಲ್ಲಿ ನೀನಾದರೂ ನನ್ನನ್ನು ಕೊಲ್ಲು; ನಾನಾದರೂ ನಿನ್ನನ್ನು ಕೊಲ್ಲುತ್ತೇನೆ. ಯಾರು ಸತ್ತರೂ ಶೂರರಿಗೆ ಉಚಿತವಾದ ಮರಣವು ಪ್ರಾಪ್ತವಾಗುವದರಿಂದ, ಸತ್ತವರು ಧನ್ಯರೆಂತಲೇ ಹೇಳಬೇಕಾಗುವದು. ನೀನು ಅಂಜುಬುರುಕತನದಿಂದ ಓಡಿಹೋದರೆ ಪಾರಾಗುವ ಆಶೆ ಮಾತ್ರ ಇಲ್ಲ, ಮಹಾರಾಷ್ಟ್ರರು ಅರಣ್ಯವನ್ನೆಲ್ಲ ಮುತ್ತಿದ್ದಾರೆ, ಎಂದು ಹೇಳಿ, ರಾಮದೇವನು ಬೇರೆಕಡೆಗೆ ಹೊರಟುಹೋದನು. ಇತ್ತ ಸೈಯದುಲ್ಲಾಖಾನನು ಗದಗುಟ್ಟಿ ನಡುಗಹತ್ತಿದನು. ಆತನು ಹೇಳಿಕೇಳಿ ಕ್ಷುದ್ರನು; "ಹೌದು ದೇವರು," ಎಂದು ನುಡಿಯುತ್ತ ಬಾದಶಹನ ಲೋಳೆಬಳೆಯುವದರಲ್ಲಿ ಕಾಲಕಳೆದ ಸಿಪಾಯಿಯು, ಶೌರ್ಯದ ಗಂಧವು ಕೂಡ ಅವನಲ್ಲಿದ್ದಿಲ್ಲ. ಅವನು ಕೇವಲ ಕುಂಟಲಗಿತ್ತಿತನದಿಂದ ದೊಡ್ಡ ಪದವಿಗೇರಿದನು; ಅಂದಬಳಿಕ ಅವನಿಗೆ ಯುದ್ಧೋತ್ಸಾಹವು ಎಲ್ಲಿಂದ ಬರಬೇಕು? ಅಷ್ಟರಲ್ಲಿ ತನ್ನ ಠಾಣ್ಯದ ಕಡೆಯಿಂದ "ದೀನ-ದೀನ" "ಹರಹರ ಮಹಾದೇವ" "ಜಯ ಅಂಬಾಭವಾನಿ" ಎಂಬ ಶಬ್ದಗಳು ಗಟ್ಟಿಯಾಗಿ ಕೇಳಬರಹತ್ತಿದ್ದರಿಂದಂತು, ಆ ದುರುಳ ಖಾನನು ಎತ್ತ ಕಡೆಗಾದರೂ ಓಡಿಹೋಗಬೇಕೆಂದು ಹವಣಿಸಹತ್ತಿದನು. ಅಷ್ಟರಲ್ಲಿ ಮಹಾರಾಷ್ಟ್ರರದೊಂದು ಗುಂಪು ಅವನ ಕಡೆಗೆ ಬಂದು, ಅವನನ್ನು ಸೆರೆಹಿಡಿದು ಸೂರ್ಯಾಜಿಯ ಬಳಿಗೆ ಕರೆದೊಯ್ದಿತು. ಸೂರ್ಯಾಜಿಯು ಸೈಯದುಲ್ಲಾನ ಸೈನ್ಯವನ್ನು ದಿಕ್ಕುಪಾಲಾಗಿ ಅದೇ ಓಡಿಸಿ, ವಿಶ್ರಮಿಸಬೇಕೆಂದು ಯೋಚಿಸುತ್ತಲಿದ್ದನು. ಅಷ್ಟರಲ್ಲಿ ಸೈಯದುಲ್ಲಾಖಾನನನ್ನು ಹಿಡತಂದಿರುತ್ತಾರೆಂಬ ಸುದ್ದಿಯನ್ನು ಕೇಳಿದ ಕೂಡಲೆ, ಸಂತಾಪದಿಂದ ಆತನ ಸರ್ವಾಂಗವು ಉರಿಯಹತ್ತಿತು. ಆತನು ಎದುರಿಗೆ ನಿಂತಿದ್ದ ಸೈಯದುಲ್ಲಾಖಾನನನ್ನು ಕುರಿತು— ಎಲೈ

ಅಧಮಾಧಮನೇ, ರಾಜನಿಷ್ಠ ಮನೆತಗಳೆಂದು ಪ್ರಸಿದ್ಧಿಯನ್ನು ಪಡೆದಿದ್ದ ಮಹಾರಾಷ್ಟ್ರರ ಮೂರು ಮನೆತನಗಳು ನಿನ್ನ ಯೋಗದಿಂದ ನೆಲಸಮವಾದವು. ಒಬ್ಬ ಮಹಾರಾಷ್ಟ್ರ ಪತಿವ್ರತೆಯು, ಅಂದರೆ, ರಂಭಾವತಿಯು ಬಾದಶಹನಿಂದ ಭ್ರಷ್ಟಳಾದಳು. ಇನ್ನೊಬ್ಬಳಿಗೆ, ಅಂದರೆ ನನ್ನ ಹೆಂಡತಿಗೆ ಹುಚ್ಚು ಹಿಡಿಯಿತು. ಮತ್ತೊಬ್ಬಳು, ಅಂದರೆ ನಾನಾಸಾಹೇಬನ ಹೆಂಡತಿಯು ಪುರುಷವೇಷದಿಂದ ರಣದುಲ್ಲಾನ ಮನೆಯಲ್ಲಿದ್ದು ಅಪಕೀರ್ತಿಗೆ ಗುರಿಯಾದಳು! ಇವರ ಹೊರತು ಎಷ್ಟೋ ಮಹಾರಾಷ್ಟ್ರ ತರುಣ ಸುಂದರಿಯರ ಪಾತಿವ್ರತ್ಯವು ನಿನ್ನ ಯೋಗದಿಂದ ನಷ್ಟವಾಯಿತು. ನಿನ್ನ ಸಹವಾಸದಿಂದಲೇ ಬಾದಶಹನು ಅಡ್ಡದಾರಿಯನ್ನು ಹಿಡಿದನು. ಕುಂಟಲಗಿತ್ತಿಯ ಕೆಲಸ ಮಾಡುವ ನಿನ್ನಂಥ ಅಧಮನ ಕೊಲೆಯಿಂದ ನನ್ನ ಖಡ್ಗವು ದೂಷಿತವಾಗಬಹುದಾಗಿದ್ದರೂ, ಬಹು ಜನರ ಅಂತಃಕರಣದಲ್ಲಿ ಮುಳ್ಳಿನಂತೆ ಅಳುಕುತ್ತಿರುವ ನಿನ್ನನ್ನು ಇನ್ನು ಭೂಮಿಯ ಮೇಲೆ ಇರಗೊಡುವದು ಹಿತಕರವಲ್ಲ. ಇರಗೊಟ್ಟರೆ ಪರಪೀಡೆಯ ದೋಷಕ್ಕೆ ಪರ್ಯಾಯದಿಂದ ನಾನು ಗುರಿಯಾಗಬೇಕಾದೀತು. ಯುದ್ಧದ ಸುದ್ದಿಯನ್ನು ಅರಿಯದ ಹೇಡಿಯಾದ ನಿನ್ನಂಥ ಅಧಮಾಧಮನನ್ನು, ಹಸಿದ ತೋಳಗಳಿಂದ ಹರಿಸಿಹರಿಸಿಯಾಗಲಿ, ಗಿಡಕ್ಕೆ ಉರುಲು ಹಾಕಿಸಿ ಯಾಗಲಿ ಕೊಲ್ಲಿಸತಕ್ಕದ್ದು; ಆದರೆ ಅಷ್ಟು ಅವಕಾಶಕೊಡಲಿಕ್ಕೂ ನನ್ನ ಮನಸ್ಸು ಒಡಂ ಬಡದ್ದರಿಂದ, ಇಗೋ, ಈ ಖಡ್ಗದ ಒಂದ ಕಡತದಿಂದ ನಿನ್ನ ರುಂಡವನ್ನು ತುಂಡರಿಸುತ್ತೇನೆ'' ಎಂದು ಖಡ್ಗವನ್ನು ಎತ್ತಲು, ರಾಮದೇವನು ಆತನನ್ನು ತಡೆದು—ಸೂರ್ಯಾಜಿ, ಇದು ನಿನ್ನ ಕೆಲಸವಲ್ಲ, ನನ್ನದು. ನನ್ನ ಖಡ್ಗವನ್ನು ಈತನ ಕೈಯಲ್ಲಿ ಕೊಡುತ್ತೇನೆ, ನಿನ್ನ ಖಡ್ಗವನ್ನು ನನ್ನ ಕೈಯಲ್ಲಿ ತಾ. ಇಬ್ಬರೂ ನಿನ್ನ ಸಮಕ್ಷ ದ್ವಂದ್ವಯುದ್ಧ ಮಾಡುವೆವು. ಯುದ್ಧದಲ್ಲಿ ಯಾರು ಸತ್ತರೂ ಅನ್ಯಾಯವಿಲ್ಲ, ಎಂದು ಹೇಳಿ, ತನ್ನ ಖಡ್ಗವನ್ನು ಸೈಯದುಲ್ಲಾನ ಕೈಯಲ್ಲಿ ಕೊಡಹೋದನು; ಆದರೆ ಹೇಡಿಯಾದ ಸೈಯದುಲ್ಲಾನು ಕೈಕಾಲುಬಿದ್ದು, ಬಾಯಿಯಲ್ಲಿ ಕಡ್ಡಿಯನ್ನು ಕಚ್ಚಿ ಜೀವದಾನ ಕೊಡಿರೆಂದು ಹೇಳಿಕೊಳ್ಳಹತ್ತಿದನು. ಇಂಥ ದುಷ್ಟನನ್ನು ಇರಗೊಡುವದು ಹಿತಕರವಲ್ಲೆಂದು ತಿಳಿದು, ರಾಮದೇವನು ತನ್ನ ಖಡ್ಗದಿಂದ ಮೆಲ್ಲಗೆ ಸೈಯದುಲ್ಲಾನ ಮೈಯಲ್ಲಿ ಗಾಯವನ್ನುಂಟು ಮಾಡಿ, ಆತನ ರಕ್ತದಲ್ಲಿ ಬೆರಳು ಎದ್ದಿ ಹಣೆಗಿಟ್ಟುಕೊಂಡು ಪ್ರತಿಜ್ಞೆ ಪೂರ್ಣಮಾಡಿಕೊಂಡು, ಖಾನನನ್ನು ಗಿಡಕ್ಕೆ ಉರುಲು ಹಾಕಿಸಿಕೊಲ್ಲಿಸಿದನು. ಹುಟ್ಟಾಯುದ್ಧದ ಸುದ್ದಿಯನ್ನರಿಯದ, ಕುಂಟಲಗಿತ್ತಿಯ ಕೆಲಸದಿಂದ ಪದವಿಗೇರಿದ ಸೈಯದುಲ್ಲಾನಂಥ ಅಧಮರಿಗೆ, ವೀರಸ್ವರ್ಗ ವಾದರೂ ಹೇಗೆ ದೊರೆಯಬೇಕು?

ಈ ಮೇರೆಗೆ ಸೈಯದುಲ್ಲಾನ ಪ್ರಾಣಹರಣ ಮಾಡಿದ ನಂತರ, ರಾಮದೇವನ ಲಕ್ಷ್ಯವು ತನ್ನ ಹೆಂಡತಿಯಾದ ರಂಭಾವತಿಯ ಕಡೆಗೆ ತಿರುಗಿತು. ಹಿಂದಕ್ಕೆ ಮುಸಲ್ಮಾನ ಸಾಧುವಿನ ವೇಷದಿಂದ ಹೆಂಡತಿಯ ಬಳಿಗೆ ಹೋದಾಗಲೇ, ಆತನು ಹೆಂಡತಿಯನ್ನು ತುಂಡರಿಸತಕ್ಕವ ನಿದ್ದನು. ಹಾಗೆ ಮಾಡಿದರೆ ತಾನು ಅರಮನೆಯಲ್ಲಿ ಸಿಕ್ಕು ಪ್ರಾಣಕಳಕೊಳ್ಳಬೇಕಾಗುವದ ರಿಂದ, ಸೈಯದುಲ್ಲಾನನ್ನು ಕೊಂದು, ಪ್ರತಿಜ್ಞೆಯನ್ನು ಪೂರ್ಣಮಾಡಿಕೊಳ್ಳುವ ಕೆಲಸವುಹಾಗೇ

ಉಳಿಯುವದೆಂದು ತಿಳಿದು, ಆತನು ರಂಭಾವತಿಯನ್ನು ಆಗ ಕೊಲ್ಲದೆ, ಎರಡು ತಿಂಗಳು ಇರಗೊಟ್ಟನು. ಸೈಯದುಲ್ಲಾನ ನಾಶವಾದ ಬಳಿಕ ಹೆಂಡತಿಯನ್ನು ಗೊತ್ತಿಗೆ ಹಚ್ಚುವ ಕೆಲಸವಷ್ಟು, ಎಲ್ಲ ತೊರೆದು ಕುಳಿತಿದ್ದ ಆ ರಾಮದೇವನ ಪಾಲಿಗೆ ಉಳಿದಂತಾಯಿತು. ಆತನು ಒಂದು ಕ್ಷಣವಾದರೂ ಸುಲ್ತಾನಗಡದಲ್ಲಿ ನಿಂತುಕೊಳ್ಳದೆ ವಿಜಾಪುರಕ್ಕೆ ಹೊರಟನು. ಆತನು ಎಲ್ಲಿಯೂ ಹಾದಿಯಲ್ಲಿ ವಿಶ್ರಮಿಸದೆ ವಿಜಾಪುರಕ್ಕೆ ಹೋಗಿ, ಹಿಂದಕ್ಕೆ ಹಾಕಿಕೊಂಡ ''ಸಾಯಿಜಿಯ'' ವೇಷದಿಂದಲೇ ರಂಭಾವತಿಯ ಮಂದಿರವನ್ನು ಮೂರುಸಂಜೆಯ ಹೊತ್ತಿನಲ್ಲಿ ಹೊಕ್ಕನು. ಕರ್ಮಧರ್ಮ ಸಂಯೋಗದಿಂದ ಬಾದಶಹನು ಆಗ ಮಿತಿಮೀರಿ ಮದ್ಯಪಾನ ಮಾಡಿ ಎಚ್ಚರಗೆಟ್ಟು ಬಿದ್ದದ್ದರಿಂದ, ರಂಭಾವತಿಯನ್ನು ಕಾಣಲಿಕ್ಕೆ ರಾಮದೇವನಿಗೆ ಅನುಕೂಲ ವಾಯಿತು. ರಂಭಾವತಿಯು ಸಾಯಿಜಿಯನ್ನು ನೋಡಿದ ಕೂಡಲೆ ಗುರುತು ಹಿಡಿದಳು. ರಾಮದೇವನು ಸಮಾಧಾನದಿಂದ ರಂಭಾವತಿಯನ್ನು ಕುರಿತು— ''ನೀನು ತೋಟದಲ್ಲಿ ಒತ್ತಟ್ಟಿಗೆ ನಡೆ, ನಿನ್ನ ಸಂಗಡ ನಾನು ಕೆಲವು ಮಾತುಗಳನ್ನು ಆಡಬೇಕಾಗಿದೆ'' ಎಂದು ಹೇಳಿದನು. ಆತನು ಎಷ್ಟು ಸಮಾಧಾನದಿಂದ ಮಾತಾಡಿದರೂ, ಆತನ ಮನಸ್ಸು ಕ್ಷೋಭಿಸಿದ್ದು ರಂಭಾವತಿಗೆ ಗೊತ್ತಾಗದೆ ಹೋಗಲಿಲ್ಲ. ಸ್ವಲ್ಪ ಹೊತ್ತು ಆಕೆಯು ಸುಮ್ಮನೆ ನಿಂತು, ಆಮೇಲೆ ತಟ್ಟನೆ— ''ಬರುತ್ತೇನೆ, ತಾವು ಆ ಕಡೆಗಿದ್ದ ಪುಷ್ಕರಣಿಯ ಬಳಿಯಲ್ಲಿ ನಿಂತುಕೊಂಡಿರ ಬೇಕು''ಎಂದು ಹೇಳಿ, ಕಾಲು ಗಳಿಗೆಯನಂತರ ಆಕೆಯು ಪತಿಯ ಬಳಿಗೆ ಹೋದಳು. ಆಗ ಆಕೆಯ ಮುಖಲಕ್ಷಣವು ವಿಲಕ್ಷಣವಾಗಿತ್ತು, ಆಕೆಯನ್ನು ನೋಡಿದ ಕೂಡಲೆ ರಾಮದೇವನ ನಾಲಿಗೆಯು ಅಂಗಳಕ್ಕೆ ಅಂಟಿಕೊಂಡಂತೆ ಆಗಿ, ಆತನ ಕೈಗಳಂತು ಎತ್ತದಂತಾದವು. ಆತನು ಸುಮ್ಮನೆ ನಿಂತಲ್ಲಿ ನಿಂತುಬಿಟ್ಟನು. ಆತನ ಮನಸ್ಸಿನ ವಿಚಾರಗಳನ್ನು ರಂಭಾವತಿಯು ಅರಿತಿದ್ದಳು. ಆಕೆಯು ದಿಟ್ಟತನದಿಂದ ನುಡಿದಳೇನಂದರೆ– ನಾನು ಈಗ ಆಡುವ ಮಾತುಗಳು ನಾಚಿಕೆಗೇಡಿತನದವೆಂಬದು ನಿಜವು; ಆದರೆ ಆಡಲೇಬೇಕಾಗಿರುವದರಿಂದ ಅವನ್ನು ಬಾಯಿಬಿಚ್ಚಿ ಆಡಿಬಿಡುವೆನು. ನೀವು ಯಾಕೆ ಬಂದಿರುವಿರೆಂಬುದನ್ನು ನಾನು ಅರಿತಿರುವೆನು; ಮತ್ತು ನಿಮ್ಮ ಮನಸ್ಸಿನಲ್ಲಿದ್ದಂತೆ ನಡೆಯಲಿಕ್ಕೆ ನಾನು ಸಿದ್ಧಳಾಗಿಯೇ ಬಂದಿದ್ದೇನೆ; ಆದರೆ ಆ ಕಾರ್ಯವನ್ನು ಕೈಮುಟ್ಟಿಮಾಡಿ ತಾವು ಪಾಪಕ್ಕೆ ಗುರಿಯಾಗಬಾರದು. ನನ್ನ ಪಾಪದ ಪ್ರಾಯಶ್ಚಿತ್ತವನ್ನು ನಾನೇ ಅನುಭೋಗಿಸುವೆನು. ಇಗೋ, ಈ ವಿಷದ ಕುಪ್ಪಿಯನ್ನು ಬಳಿಯಲ್ಲಿಟ್ಟುಕೊಂಡು ಎಷ್ಟೋ ದಿನಗಳಾಗಿರುವವು. ತಮ್ಮ ಅಪ್ಪಣೆಯನ್ನು ಕೇಳಿಕೊಂಡು ಇದನ್ನು ಕುಡಿಯಬೇಕೆಂದು ಬಿಟ್ಟಿದ್ದೆನು. ತಾವು ಮೊದಲನೆಯ ಸಾರೆ ನನಗೆ ಭೆಟ್ಟಿಯಾದ ದಿವಸದಿಂದಲೇ ಈ ಕುಪ್ಪಿಯನ್ನು ಬಳಿಯಲ್ಲಿ ಇಟ್ಟುಕೊಳ್ಳಹತ್ತಿದ್ದೇನೆ. ತಮ್ಮ ಸುದ್ದಿಯನ್ನು ತಿಳಕೊಂಡು ಪ್ರಾಣಕೂಡಬೇಕೆಂದು ಮಾಡಿದ್ದೆನು. ಈ ಚಾಂಡಾಲರು ಬಹಿರಂಗದಲ್ಲಿ ನನ್ನನ್ನು ಭ್ರಷ್ಟಗೊಳಿಸಿದ್ದಾರೆ. ಅಂತರಂಗದಿಂದ ನಾನು ಶುದ್ಧಳಾಗಿದ್ದದ್ದು ದೇವರಿಗೆ ಗೊತ್ತಿರ ಬಹುದು. ಬಹಿರಂಗದಲ್ಲಿ ನನ್ನನ್ನು ಭ್ರಷ್ಟಗೊಳಿಸಲಿಕ್ಕೆ ಸಹ ಅವರು ಎಷ್ಟು ಕಷ್ಟಪಡ ಬೇಕಾಯಿತು! ನನ್ನ ಜೀವಕ್ಕೆ ಅಪಾಯಮಾಡಿಕೊಳ್ಳಲಿಕ್ಕೆ ಸಹ ನನಗೆ ಬಾರದಂತಹ

ಬಿಗಿಯಾದ ಕಾವಲಿನಲ್ಲಿ ಎಷ್ಟೋ ದಿನ ನನ್ನನ್ನು ಇಟ್ಟಿದ್ದರು! ಇಲ್ಲದ ಅಂಜಿಕೆಯನ್ನು ನನಗೆ ತೋರಿಸಿದರು! ಅದಕ್ಕೂ ನಾನು ಸೊಪ್ಪುಹಾಕುತ್ತಿದ್ದಿಲ್ಲ; ಆದರೆ ತಮ್ಮ ಜೀವಕ್ಕೂ, ಮಾವನವರ ಜೀವಕ್ಕೂ ಕೇಡುಬಗೆಯುವ ಗುಪ್ತವಾದ ಆಲೋಚನೆಗಳು ನಡೆಯಹತ್ತಿದ್ದರಿಂದ, ನಾನು ಗಾಬರಿಯಾಗಿ ಬಾಹ್ಯಭ್ರಷ್ಟತೆಯನ್ನು ಹೊಂದಿ, ತಮ್ಮಿಬ್ಬರ ಜೀವವನ್ನು ಉಳಿಸಿಕೊಳ್ಳಲಿಕ್ಕೆ ಆದಷ್ಟು ಯತ್ನಿಸಿದೆನು. ನಾನು ಈಶ್ವರ ಸ್ಮರಣಪೂರ್ವಕವಾಗಿ ಚರಣದೆಡೆಯಲ್ಲಿ ವಿಜ್ಞಾಪಿಸುತ್ತೇನೆ; ನನ್ನ ಬಾಹ್ಯಭ್ರಷ್ಟತೆಯನ್ನು ನೋಡಿ ನನ್ನ ಅಂತರಂಗವೂ ಭ್ರಷ್ಟವಾಗಿರುವದೆಂದು ಮಾತ್ರ ಭಾವಿಸಬೇಡಿರಿ. ನನ್ನ ಅಂತಃಕರಣವು ನಿರ್ಮಲವಾಗಿಯೇ ಇರುತ್ತದೆ. ಆ ದುಷ್ಟನಾದ ಸೈಯದುಲ್ಲಾನ ಪ್ರಾಣಹರಣಮಾಡಿದನೆಂದಿಷ್ಟು ಹೇಳಿರಿ; ಅಂದರೆ ಈ ವಿಷವನ್ನು ಕುಡಿದು ಈಗಲೆ ಪ್ರಾಣವನ್ನು ಬಿಡುತ್ತೇನೆ. ಪರಮೇಶ್ವರನು ನನ್ನ ಅಂತಃಕರಣವನ್ನು ಅರಿತವನಾದದ್ದರಿಂದ, ಮುಂದಿನ ಜನ್ಮದಲ್ಲಿ ನನಗೆ ನೀವೇ ಪತಿಯಾಗುವ ಯೋಗವನ್ನು ಆತನು ನಿಶ್ಚಯವಾಗಿ ಒದಗಿಸಿಕೊಡುವನು. ಹೂ, ತಡಮಾಡಬೇಡಿರಿ. ಆ ದುಷ್ಟನ ಪ್ರಾಣವನ್ನು ಹಿಂಡಿದೆನೆಂದು ಹೇಳಿರಿ; ಅಂದರೆ ಕ್ಷಣವಾದರೂ ವಿಲಂಬಮಾಡದೆ ತಮ್ಮ ಚರಣಕ್ಕೆ ನನ್ನ ಜೀವದ ಬಲಿಯನ್ನು ಕೊಡುವೆನು.

ರಾಮದೇವನು ರಂಭಾವತಿಯ ಈ ಮಾತುಗಳನ್ನು ಕೇಳುತ್ತ ಸುಮ್ಮನೆ ನಿಂತುಕೊಂಡಿದ್ದನು. ಆತನಿಗೆ ಹೆಂಡತಿಯ ಮಾತುಗಳು ಸತ್ಯವಾಗಿ ತೋರಿದವೋ, ಅಸತ್ಯವಾಗಿ ತೋರಿದವೋ ಎಂಬದನ್ನು ಆತನ ಮುಖಲಕ್ಷಣದ ಮೇಲಿಂದ ಗೊತ್ತುಹಿಡಿಯುವ ಹಾಗಿದ್ದಿಲ್ಲ. ಹೆಂಡತಿಯ ಮಾತು ಮುಗಿದ ಕೂಡಲೆ ಆತನು ಕುನಸಿಟ್ಟು ಮಾತಾಡುವವನಂತೆ ಆಕೆಯನ್ನು ಕುರಿತು— ''ಕುಡಿ ಹಾಗಾದರೆ ಆ ಕುಪ್ಪಿಯೊಳಗಿನ ವಿಷವನ್ನು, ನಾನು ಆ ದುಷ್ಟ ಸೈಯದುಲ್ಲಾನನ್ನು ಕೊಂದಿದ್ದೇನೆ. ನಿನ್ನ ಭ್ರಷ್ಟವಾದ ದೇಹವನ್ನು ನನ್ನ ಕಣ್ಣೆದುರಿಗೆ ಭೂಮಿಯಲ್ಲಿ ಇಲ್ಲದಂತೆ ಮಾಡಿಬಿಡು'' ಎಂದು ಹೇಳಿದನು. ಅದನ್ನು ಕೇಳಿ ರಂಭಾವತಿಯು ಕ್ಷಣಮಾತ್ರ ಸಮಾಧಾನದಿಂದ ನಿಂತುಕೊಂಡು, ಆಮೇಲೆ ಪತಿಯನ್ನು ಕುರಿತು–''ಈ ಮಾತು ನಿಜವೇ?'' ಎಂದು ಒಂದೇ ಸಾರೆ ಪ್ರಶ್ನಮಾಡಲು, ರಾಮದೇವನು ಕುನುಸಿನ ಮಾತಿನಿಂದ— ಅಹುದಹುದು, ನಿಜವಾಗಿಯೇ ಆ ದುಷ್ಟನನ್ನು ಕೊಂದೆನು. ಯಾಕೆ, ಅವರಿಂದ ನಿನಗೆ ದುಃಖವಾಗುವದೇನು? ಎಂದು ಕೇಳಿದನು. ಆಗ ರಂಭಾವತಿಯು ತನ್ನ ತೀಕ್ಷ್ಣವಾದ ವಿಷದ ಕುಪ್ಪಿಯ ಬಾಯಬಿಣೆಯನ್ನು ತೆಗೆದು, ಕುಪ್ಪಿಯನ್ನು ತನ್ನ ಬಾಯಿಗೆ ಹಿಡಿದು— ಅಹುದು, ನನಗೆ ದುಃಖವಾಗಿದೆಯೋ, ನಿಮಗೆ ನನ್ನ ಪರೀಕ್ಷೆಯೇ ಆಗಿರುವದಿಲ್ಲವೋ ಎಂಬದು ಈಗ ತಾನೇ ತಿಳಿಯುವದು, ಎಂದು ನುಡಿದು ಒಂದೇ ಉಸಲಿಗೆ ಕುಪ್ಪಿಯೊಳಗಿನ ವಿಷವನ್ನೆಲ್ಲ ಕುಡಿದುಬಿಟ್ಟಳು. ಮರುದಿನ ಮುಂಜಾವಿನಲ್ಲಿ ತೋಟದೊಳಗೆ ರಂಭಾವತಿಯ ಶವವೂ, ರಾಮದೇವನ ಶವವೂ ಬಿದ್ದಿದ್ದವು. ರಾಮದೇವನು ಆತ್ಮಹತ್ಯಮಾಡಿಕೊಂಡನೆಂಬದೂ ತಿಳಿಯಲಿಲ್ಲ; ಎರಡನೆಯವರಾರಾದರೂ ಆತನನ್ನು ಕೊಂದರೆಂಬದೂ ತಿಳಿಯಲಿಲ್ಲ.

ಹೀಗೆ ರಾಮದೇವನು ತನ್ನ ಪ್ರತಿಜ್ಞೆಯನ್ನು ಪೂರ್ಣಮಾಡಿಕೊಳ್ಳಲು, ಆತನೊಡನೆ ಪ್ರತಿಜ್ಞೆಯನ್ನು ಮಾಡಿದ್ದ ನಾನಾಸಾಹೇಬನು ಅತ್ತ ಸುಲ್ತಾನಗಡದಲ್ಲಿ ಏನುಮಾಡುತ್ತಿದ್ದನೆಂಬ ದನ್ನು ವಿಚಾರಿಸೋಣ. ನಾನಾಸಾಹೇಬನು ತನ್ನ ಹೆಂಡತಿಯ ಪಾತಿವ್ರತ್ಯಭಂಗಮಾಡಿದ ಕಲ್ಪನೆಯಿಂದ ರಣದುಲ್ಲಾಖಾನನ ಸೇಡು ತೀರಿಸಿಕೊಳ್ಳುವೆನೆಂದು ರಾಮದೇವನ ಸಮಕ್ಷ ಪ್ರತಿಜ್ಞೆ ಮಾಡಿದ್ದನ್ನು ವಾಚಕರು ಮರೆತಿರಲಿಕ್ಕಿಲ್ಲ. ನಾನಾಸಾಹೇಬನು ಮುಹಮ್ಮದನಿಂದ ಗಾಯಪಟ್ಟು ಬಿದ್ದವನು ಸತ್ತುಸತ್ತು ಉಳಿದನು. ಆತನ ಹೆಂಡತಿಯಾದ ಚಂದ್ರಾವತಿಯ ಅವಿಶ್ರಾಂತಶ್ರಮದ ಆರೈಕೆಯಿಂದಲೇ ಆತನು ಜೀವದಿಂದ ಉಳಿದನೆಂದು ಹೇಳಬಹುದು. ಎಷ್ಟೋ ದಿನಗಳವರೆಗೆ ಅವನ ಮೈಮೇಲೆ ಎಚ್ಚರವಿದ್ದಿಲ್ಲ. ಒಂದು ದಿನವಂತು ಆತನು ಬದುಕುವ ಆಶೆಯನ್ನು ಎಲ್ಲರೂ ಬಿಟ್ಟಿದ್ದರು. ನಾನಾಸಾಹೇಬನ ವಿಷಯವಾಗಿ ಅಂತಃಕರಣ ಪೂರ್ವಕ ದುಃಖಪಡುವವರೆಂದರೆ, ಆತನ ಹೆಂಡತಿಯಾದ ಚಂದ್ರಾವತಿಯೊಬ್ಬಳು, ರಣದುಲ್ಲಾಖಾನನ ತಂಗಿಯಾದ ಮೋಹೇರಜಾನಳು ಒಬ್ಬಳು. ಶಿವಾಜಿಯು ಮೋಹೇರ ಜಾನಳಿಗೆ ವಿಜಾಪುರಕ್ಕೆ ಹೋಗಲಿಕ್ಕೆ ಅಪ್ಪಣೆ ಕೊಟ್ಟಿದ್ದರೂ, ಆಕೆಯು ನಾನಾಸಾಹೇಬನ ಸಲುವಾಗಿ ಸುಲ್ತಾನಗಡದಲ್ಲಿ ನಿಂತಿದ್ದಳು. ಆ ಮರ್ಯಾದಾಶೀಲಳು ನಾನಾಸಾಹೇಬನ ಮೇಲಿದ್ದ ತನ್ನ ಗುಪ್ತಪ್ರೇಮವನ್ನು ಯಾರಿಗೂ ತಿಳಿಯಗೊಟ್ಟಿದ್ದಿಲ್ಲ. ಆಕೆಯ ದಾಸಿಯಾದ ಫಾತಿಮೆಯೊಬ್ಬಳು ಅದನ್ನು ಅರಿತಿದ್ದಳು. ಚಿಕ್ಕಂದಿನಿಂದ ನಾನಾಸಾಹೇಬನ ಮೇಲೆ ಆಕೆಯ ಪ್ರೇಮವು ಕುಳಿತಿದ್ದರೂ, ಅತನೊಡನೆ ಲಗ್ನವಾಗುವದು ಅಸಂಭವವಾದದ್ದರಿಂದ, ಆ ಅಚ್ಚಮೊಗಲ ರಕ್ತದ ಸುಂದರಿಯು ಆ ಜನ್ಮ ಬ್ರಹ್ಮಚರ್ಯದಿಂದಲೇ ಇರಬೇಕೆಂದು ನಿಶ್ಚಯಿಸಿ, ತಾನು ಲಗ್ನವನ್ನೇ ಮಾಡಿಕೊಳ್ಳುವದಿಲ್ಲೆಂಬ ಮಾತನ್ನು ತನ್ನ ಅಣ್ಣನಾದ ರಣದುಲ್ಲಾಖಾನನ ಮುಂದೆ ಆಡಿ ತೋರಿಸಿದ್ದಳು. ಸತ್ವಶೀಲರಾದ ಸ್ತ್ರೀಯರು ಒಮ್ಮೆ ಒಬ್ಬರಲ್ಲಿ ಮನಸ್ಸನ್ನಿಟ್ಟರೆಂದರೆ, ಮತ್ತೊಬ್ಬರನ್ನು ಲಗ್ನವಾಗಲಾರರು. ನಾನಾಸಾಹೇಬನಿಗೆ ಬರಬರುತ್ತ ಗುಣವಾಗುತ್ತಿ ಆತನ ಮೈಮೇಲೆ ಎಚ್ಚರಹುಟ್ಟಲು, ತನ್ನ ಹೆಂಡತಿಯು ತನ್ನ ಸೇವೆಮಾಡುವದು ಆತನಿಗೆ ಸೇರದಾಯಿತು. ಆತನು ಹೊರಗೆ ಬಾಯಿಬಿಚ್ಚಿ ಮಾತಾಡದೆ, ಯಾವಾಗಲೂ ಹುಬ್ಬುಗಂಟಿಕ್ಕಿಕೊಂಡು ಹೆಂಡತಿಯನ್ನು ಕಂಡಕೂಡಲೆ ಅಸಹ್ಯಪಡುತ್ತಿದ್ದನು. ಇದರಿಂದ ಆತನ ಬೇನೆಯು ಬೇಗನೆ ನೆಟ್ಟಗಾಗದಾಯಿತು. ನಾನಾಸಾಹೇಬನ ಈ ಅಸಮಾಧಾನದ ಕಾರಣವನ್ನು ಚಂದ್ರಾವತಿಯೂ, ಆಕೆಯ ದಾಸಿಯೂ ಮಾತ್ರ ಅರಿತಿದ್ದರು. ಚಂದ್ರಾವತಿಯ ದಾಸಿಯೂ ಈ ಬಗ್ಗೆ ನಾನಾಸಾಹೇಬನನ್ನು ಸ್ಪಷ್ಟವಾಗಿ ಕೇಳಬೇಕೆಂದು ಮಾಡಿದಳು; ಆದರೆ ಬರಿಯ ಸ್ಪಷ್ಟ ಮಾತಾಡುವದರಿಂದಾಗಲಿ, ವಾದವಿವಾದ ನಡಿಸುವದರಿಂದಾಗಲಿ ನಾನಾಸಾಹೇಬನ ಮನಸ್ಸಿನೊಳಗಿನ ಸಂಶಯವು ಹೋಗುವ ಹಾಗಿದ್ದಿಲ್ಲ. ಈ ಸಂಶಯವನ್ನು ದೂರಮಾಡಲಿಕ್ಕೆ ಮೋಹೇರಜಾನಳೊಬ್ಬಳು ಸಮರ್ಥಳಾಗಿರುವಳೆಂದು ಚಂದ್ರಾವತಿಯು ಅರಿತಿದ್ದಳು. ತನ್ನ ಗಂಡನ ಮನಸ್ಸಿನ ಸಂಶಯವನ್ನು ದೂರಮಾಡುವದಕ್ಕಾಗಿ ಮೋಹೇರಜಾನಳನ್ನೇ ಪ್ರಾರ್ಥಿಸಬೇಕೆಂದು ತಿಳಿದು, ಆಕೆಯು ಒಮ್ಮೆ ಮೋಹೇರಜಾನಳ ಬಳಿಗೆ ಹೋಗಿ, ಯಾವತ್ತು

ಸಂಗತಿಯನ್ನು ತಿಳಿಸಿ, ತನ್ನ ಗಂಡನ ಮನಸ್ಸಿನೊಳಗಿನ ಸಂಶಯವನ್ನಷ್ಟು ದೂರಮಾಡಿ ಪುಣ್ಯಕಟ್ಟಿಕೊಳ್ಳಬೇಕೆಂದು ಆಕೆಯನ್ನು ಪ್ರಾರ್ಥಿಸಿದಳು.

ಮೇಹೇರಜಾನಳಿಗೆ ಚಂದ್ರಾವತಿಯ ವಿಷಯವಾಗಿ ಅಂತಃಕರಣವು ಉತ್ಪನ್ನವಾಗಿ, ಆಕೆಯು—''ನಿನ್ನ ಪತಿಯ ಮನಸ್ಸಿನೊಳಗಿನ ಸಂಶಯವನ್ನು ದೂರಮಾಡುವೆನೆಂ''ದು ಚಂದ್ರಾವತಿಗೆ ವಚನವನ್ನು ಕೊಟ್ಟಳು. ಆದರೆ ನಾನಾಸಾಹೇಬನ ಸಂಗಡ ಬಾಯಿಬಿಚ್ಚಿ ಮಾತಾಡುವದೆಂದರೆ, ಆ ಸುಶೀಲೆಯ ಜೀವದ ಸುತ್ತುಬಂದ ಹಾಗಾಯಿತು; ಆದರೂ ಉಪಾಯಗಾಣದೆ ಆಕೆಯು ತನ್ನ ದಾಸಿಯಾದ ಫಾತಿಮೆಯನ್ನು ಕಳಿಸಿ ಪರದೆಯ ಹಿಂದುಗಡೆಯಲ್ಲಿ ಕುಳಿತು ನಾನಾಸಾಹೇಬನ ಸಂಗಡ ಮಾತಾಡಲಿಕ್ಕೆ ಅನುಕೂಲವಾಗುವಂತೆ ವ್ಯವಸ್ಥೆಮಾಡಿಸಿದಳು. ನಾನಾಸಾಹೇಬನ ಬಳಿಗೆ ಹೋದಬಳಿಕ ಸುಶೀಲೆಯಾದ ಮೇಹೇರಜಾನಳ ಬಾಯಿಂದ ಮಾತುಗಳೇ ಹೊರಡದಾದವು. ಚಿಕ್ಕಂದಿನಲ್ಲಿ ಒಂದು ದಿನ ನಾನಾಸಾಹೇಬನ ಸಂಗಡ ಪ್ರೀತಿಯಿಂದ ಆಡಿದ ಮಾತು, ಆ ಅಚ್ಚ ಮೊಗಲ ರಕ್ತದ ತರುಣಿಯ ಮನಸ್ಸಿನಲ್ಲಿ ಉಳಿದುಬಿಟ್ಟಿದ್ದರಿಂದ ಬಾರಿಬಾರಿಗೆ ಅದು ನೆನಪಾಗಿ, ಆಕೆಯು ಲಜ್ಜಿತಳಾಗುತ್ತಿದ್ದಳು. ಹೀಗೆ ಮೇಹೇರಜಾನಳು ಸುಮ್ಮನೆ ಕುಳಿತಿರುವದನ್ನು ನೋಡಿ ಫಾತಿಮೆಯು–''ಮಾತಾಡಿರಿ,'' ಎಂದು ಸೂಚಿಸತೊಡಗಿದಳು. ಕಡೆಗೆ ಮೇಹೇರಜಾನಳು ಪರದೆಯ ಮರೆಯಲ್ಲಿ ಕುಳಿತು ಗದ್ಗದ ಸ್ವರದಿಂದ ನಾನಾಸಾಹೇಬನನ್ನು ಕುರಿತು–ನಾನಾಸಾಹೇಬರೇ, ಪತಿವ್ರತೆಯಾದ ಚಂದ್ರಾವತಿಯ ವಿಷಯವಾಗಿ ವ್ಯರ್ಥ ಸಂಶಯಪಟ್ಟು ನಿಮ್ಮ ಬೇನೆಯನ್ನು ಹೆಚ್ಚುಮಾಡಿಕೊಳ್ಳುತ್ತೀರಿ. ನಿಮ್ಮ ಸಂಶಯವು ತೀರ ಅಪ್ರಯೋಜನವೂ, ಅಸತ್ಯವೂ ಆಗಿರುತ್ತದೆಂಬ ಬಗ್ಗೆ, ಎಳ್ಳಷ್ಟಾದರೂ ಸಂಶಯಪಡಬೇಡಿರಿ. ನನ್ನ ಮಾತಿಗೆ ಸ್ವಲ್ಪಮಟ್ಟಿಗಾದರೂ ಬೆಲೆಯಿರುತ್ತದೆಂದು ನೀವು ಭಾವಿಸುತ್ತಿದ್ದರೆ, ಅದರ ಮೇಲೆ ನೀವು ಪೂರ್ಣ ವಿಶ್ವಾಸವಿಡಿರಿ. ನಿಮ್ಮ ಹೆಂಡತಿಯು ತೀರ ನಿಷ್ಕಳಂಕ ಸಾಧ್ವಿಯಿರುತ್ತಾಳೆ. ಇದಕ್ಕೂ ಹೆಚ್ಚಿಗೆ ನಾನು ನಿಮಗೇನು ಹೇಳಲಿ? ಅಪ್ರಯೋಜಕವಾದ ಸಂಶಯದಿಂದ ನೀವು ನಿಮ್ಮ ಬೇನೆಯನ್ನು ಹೆಚ್ಚು ಮಾಡಿಕೊಳ್ಳುವಿರಲ್ಲದೆ, ನಿಮ್ಮ ಹೆಂಡತಿಯನ್ನು ವ್ಯರ್ಥವಾಗಿ ದುಃಖ ಪಡಿಸುತ್ತೀರಿ; ಮತ್ತು ನನ್ನ.........

ಮುಂದೆ ಮೇಹೇರಜಾನಳು, ''ನನ್ನನ್ನೂ ದುಃಖಪಡಿಸುತ್ತೀರಿ''ಎಂದು ನುಡಿದು ಬಿಡತಕ್ಕವಳಿದ್ದಳು; ಆದರೆ ಆ ಮರ್ಯಾದಶೀಲಳು ಹಾಗೆ ನುಡಿಯದೆ ಸುಮ್ಮನೆ ಕುಳಿತುಬಿಟ್ಟಳು, ತಿರುಗಿ ಪಿಟ್ಟೆಂದು ಮಾತಾಡಲಿಲ್ಲ. ಈ ಮೇರೆಗೆ ಗದ್ಗದ ಸ್ವರದಿಂದ ಆ ತರುಣಿಯು ಆಡಿದ ಮಾತುಗಳನ್ನು ಕೇಳಲು, ತನ್ನ ವಿಷಯವಾಗಿ ಆಕೆಯಲ್ಲಿ ವಾಸಿಸುತ್ತಿರುವ ಪ್ರೇಮವು ಮನಸ್ಸಿಗೆ ಹೊಳೆದದ್ದರಿಂದ, ನಾನಾಸಾಹೇಬನ ಮೈಮೇಲಿನ ಕೂದಲುಗಳು ನೆಟ್ಟಗಾದವು. ಆತನೂ ಸುಮ್ಮನೆ ಕುಳಿತುಬಿಟ್ಟನು. ಮೇಹೇರಜಾನಳು ಸ್ವತಃ ಬಾಯಿಬಿಚ್ಚಿ ಹೀಗೆ ಹೇಳಿದಬಳಿಕ, ನಾನಾಸಾಹೇಬನ ಮನಸ್ಸಿನ ಸಂಶಯವು ಉಳಿಯುವದಾದರೂ ಹೇಗೆ? ಬಹಳ ಹೊತ್ತು ಸ್ತಬ್ಧವಾಗಿ ಕುಳಿತ ಮೇಲೆ ನಾನಾಸಾಹೇಬನು ಮೇಹೇರಜಾನಳನ್ನು

ಕುರಿತು—ನನ್ನ ಸಂಶಯ ನಿವಾರಣಕ್ಕೆ ತಮ್ಮ ಮಾತು ಸಾಕಾಗಿರುವದು. ಇಷ್ಟು ದಿವಸ ನಾನು ಸುಮ್ಮನೆ ದುಃಖಪಟ್ಟು ಎರಡನೆಯವರನ್ನು ದುಃಖಪಡಿಸಿದ್ದಕ್ಕಾಗಿ ನನ್ನನ್ನು ಕ್ಷಮಿಸಿರಿ, ಎಂದು ನುಡಿದು ಆತನು ಸುಮ್ಮನೆ ಕುಳಿತನು. ಇತ್ತ ಮೇಹೇರಜಾನಳ ಚಿತ್ತವು ಅನಿವಾರ್ಯ ವಾಯಿತು. ತಾವು ಚಿಕ್ಕವರಿರುವಾಗ ಒಂದು ದಿವಸ ಆಟದ ಭರದಲ್ಲಿ ಆಡಿದ ಪ್ರೇಮದ ಮಾತನ್ನು ನೆನಪುಮಾಡಿಕೊಡಬೇಕೆಂದು ಆಕೆಯು ಆತುರಪಟ್ಟಳು. ಅದನ್ನು ನೆನಪುಮಾಡಿ ಕೊಡುವದರಿಂದಾಗಲಿ, ಅದನ್ನು ನಾನಾಸಾಹೇಬನು ತಾನಾಗಿ ನೆನಪಿನಲ್ಲಿಟ್ಟು ಕೊಂಡದ್ದ ರಿಂದಾಗಲಿ ಪ್ರಯೋಜನವೇನೂ ಆಗುವ ಹಾಗಿಲ್ಲೆಂಬದು ಆಕೆಗೆ ಗೊತ್ತಿದ್ದರೂ, ಒಮ್ಮೆ ನಾನಾಸಾಹೇಬನಿಗೆ ತಾನೇ ಬಾಯಿಬಿಟ್ಟು, ಅದನ್ನು ನೆನಪುಮಾಡಿಕೊಡಬೇಕೆಂತಲೂ, ಆಕೆಯು ಆತರುಪಟ್ಟಳು. ಪರದೆಯನ್ನು ಸರಿಸಲಿಕ್ಕೆ ಆಕೆಯ ಕೈಯು ಮುಂದಾಯಿತು, ಮಾತಾಡಲಿಕ್ಕೆ ಆಕೆಯ ನಾಲಿಗೆಯು ಕುಣಿಯಲಿಕ್ಕೆ ಹತ್ತಿತು; ಆದರೆ ಆಕೆಯ ಹುಟ್ಟು ಗುಣವಾದ ಶಾಲೀನತೆಯು ವಿಘ್ನವನ್ನುಂಟುಮಾಡಲು, ಆಕೆಯು— "ಹೀಗೆ ಮಾಡುವದು ನನ್ನ ಶೀಲವಲ್ಲ" ಎಂದು ತಿಳಿದು, ಚಟ್ಟನೆ ಅಲ್ಲಿಂದ ಎದ್ದು ಮನೆಗೆ ಹೊರಟು ಹೋದಳು. ಇನ್ನು ಇಲ್ಲಿ ಇದ್ದರೆ ಚಂಚಲ ಮನಸ್ಸು ಅಡ್ಡಹಾದಿಗೆ ಹೋದೀತೆಂದು ತಿಳಿದು, ವಿಜಾಪುರಕ್ಕೆ ಹೊರಡಬೇಕೆಂದು, ಆ ಸುಶೀಲೆಯು ತನ್ನವರಿಗೆ ಆಜ್ಞಾಪಿಸಿ ತಟ್ಟನೆ ಹೊರಟುಬಿಟ್ಟಳು!

## ಸತ್ಸಮಾಗಮ ಪ್ರಭಾವ

ಪ್ರತಿಜ್ಞೆಯಂತೆ ಸುಲ್ತಾನಗಡವನ್ನು ಸ್ವಾಧೀನಪಡಿಸಿಕೊಂಡದ್ದರಿಂದ ಶಿವಾಜಿಯೇ ಮೊದಲಾದ ಮಹಾರಾಷ್ಟ್ರ ತರುಣರಿಗೆ ಸಮಾಧಾನವಾದರೂ, ಅದನ್ನು ಕಾಯ್ದುಕೊಳ್ಳು ವದಕ್ಕಾಗಿ ಅವರೆಲ್ಲರು ಎಚ್ಚರಪಡಬೇಕಾಯಿತು. ಶಿವಾಜಿಯು ಶ್ರೀಧರಸ್ವಾಮಿಗಳ ವಿಚಾರ ದಂತೆ ಜಾಗರೂಕತೆಯಿಂದ ಮುಂದಿನ ಎಲ್ಲ ವ್ಯವಸ್ಥೆಯನ್ನು ಮಾಡಿದನು. ಆತನ ಮೊದಲು ವಿಜಾಪುರದ ಬಾದಶಹನ ಕಡೆಗೆ ಒಂದು ಗೌರವದ ವಿಜ್ಞಾಪನಾಪತ್ರವನ್ನು ಕಳಿಸಿದನು. ಅದರಲ್ಲಿ ಆತನು—"ಖಾವಿಂದ, ತಮ್ಮವನಾದ ನಾನು ತಮ್ಮ ಸೇವಕನ ಮಗನಾದ್ದರಿಂದ, ನಾನೂ ತಮ್ಮ ಸೇವಕನೇ ಸರಿ. ತಮ್ಮ ಅಧಿಕಾರದೊಳಗಿನ ಇತ್ತ ಕಡೆಯ ಪ್ರಾಂತದಲ್ಲಿ ಸುವ್ಯವಸ್ಥೆಯನ್ನು ಕಾಯ್ದುಕೊಳ್ಳುವದಕ್ಕಾಗಿಯೇ ಸುಲ್ತಾನಗಡದ ಮೇಲೆ ಬಂದು ನಿಂತಿರುವೆನು. ಇದಕ್ಕೂ ಹೆಚ್ಚಿನ ಯಾವ ಉದ್ದೇಶವೂ ಇರುವದಿಲ್ಲ" ಎಂಬರ್ಥದ ಸಂಗತಿಯನ್ನು ಬರೆದಿದ್ದನು. ಶಿವಾಜಿಯಂಥ ಯಃಕಶ್ಚಿತನು ಸುಲ್ತಾನಗಡದಂಥ ಒಂದು ದುರ್ಗವನ್ನು ತಕ್ಕೊಂಡರೆ ಆಗುವದೇನೆಂದು ಬಾದಶಹನು ಮೊದಲೇ ದುರ್ಲಕ್ಷ ಮಾಡಿದ್ದನು. ಅದರಲ್ಲಿ ಶಿವಾಜಿಯ ವಿಜ್ಞಾಪನಾಪತ್ರವು ಹೋದಮೇಲಂತು ಆತನು ಯಾವ ಬಗೆಯ ವೈಷಮ್ಯವನ್ನು ಮನಸ್ಸಿನಲ್ಲಿ ತರಲಿಲ್ಲ, ಮಾರುತಿಯ ದೇವಾಲಯದ ಬುಡದ

ಗವಿಯಲ್ಲಿದ್ದ ಭವಾನಿಯ ಗುಡಿಯೊಳಗಿನ ದ್ರವ್ಯನಿಧಿಯೂ, ಶಸ್ತ್ರಾಸ್ತ್ರಗಳೂ ಸುಲ್ತಾನಗಡಕ್ಕೆ ತರಲ್ಪಟ್ಟವು. ಶಿವಾಜಿಯು ರಂಗರಾವ ಅಪ್ಪಾನ ಬಳಿಗೆ ಹೋಗಿ, ಆತನು ತನ್ನ ಪಕ್ಷಕ್ಕೆ ಒಲಿದರೆ ನೋಡಬೇಕೆಂದು ನಾಲ್ಕು ಮಾತುಗಳನ್ನಾಡಿದನು; ಮತ್ತು ಕೇವಲ ಮರಣೋನ್ಮುಖನಾಗಿ ಮಲಗಿರುವ ಮಗನಿಗೆ ಭೆಟ್ಟಿಯಾಗಬೇಕೆಂತಲೂ ಹೇಳಿದನು. ಅದಕ್ಕೆ ಏಕವಚನಿಯೂ, ಏಕನಿಷ್ಠನೂ ಆದ ಅಪ್ಪಾಸಾಹೇಬನು—ನಿನ್ನಂಥ ಲಕ್ಷಣಗೇಡಿ ಮನುಷ್ಯನ ಸಹವಾಸದಿಂದ ನಮ್ಮಂಥ ಸ್ವಾಮಿನಿಷ್ಠ ಸೇವಕರ ಮಕ್ಕಳು ಕೆಡುತ್ತಲಿದ್ದಾರೆ. ನನ್ನ ಮಗನು ಕೇವಲ ನಿನ್ನ ಸಹವಾಸದಿಂದಲೇ ಕೆಟ್ಟನು. ನಿನ್ನ ಯೋಗದಿಂದಲೇ ನಾನು ಅವನಿಗೂ, ಅವನು ನನಗೂ ವೈರಿಗಳಾದೆವು; ಇನ್ನು ಆ ನೀಚನ ಮುಖಾವಲೋಕನವನ್ನು ನಾನು ಮಾಡಲಿಕ್ಕಿಲ್ಲ. ನನ್ನ ಮನಸ್ಸನ್ನು ಒಲಿಸಿಕೊಳ್ಳುವ ಹವ್ಯಾಸವನ್ನು ನೀನು ಬಿಟ್ಟುಬಿಡು. ನಿನ್ನಲ್ಲಿ ಒಳ್ಳೆಯತನವೇ ನಾದರೂ ಇದ್ದರೆ, ಮನಬಂದತ್ತ ನನ್ನನ್ನು ಹೋಗಗೊಡು. ನನ್ನ ಮಗನು ನನ್ನ ವಿರುದ್ಧವಾಗಿ ನಡೆದು ನನಗೆ ತಾಪವನ್ನು ಕೊಟ್ಟಷ್ಟು, ಮುಂದೆ ನಿನ್ನ ಮಗನು ನಿನಗೆ ತಾಪ ಕೊಡ ಬೇಡೆಂದರಾಯಿತು! ಫಿತೂರಿಯ ಮಾತುಗಳನ್ನು ನನ್ನ ಮುಂದೆ ಆಡಿ ನನ್ನ ಕಿವಿಗಳನ್ನು ಹೊಲಸುಮಾಡಬೇಡ ಹೋಗು; ನನ್ನ ಮಗನು ನಿನ್ನನ್ನು ಕೂಡಿದ್ದಾನೆ, ಅಷ್ಟೇ ಸಾಕು, ಎಂದು ನುಡಿದು ಮುದುಕನು ಸಿಟ್ಟಿನಿಂದ ಎದ್ದನು; ಆದರೆ ಶಿವಾಜಿಯ ಮನಸ್ಸಿನಲ್ಲಿದ್ದ ಆತನ ವಿಷಯದ ಪೂಜ್ಯಬುದ್ಧಿಯು ರತಿಮಾತ್ರವೂ ಕಡಿಮೆಯಾಗಲಿಲ್ಲ. ಮಗನು ಮರಣೋನ್ಮುಖವಾಗಿ ಬಿದ್ದಿರಲು, ಮೋರೆ ನೋಡಲಿಕ್ಕೆ ಸಹ ಬಾರದ ಈ ಮುದುಕನು ಎಂಥ ಕಟಕನೆಂದು ಸಾಧಾರಣ ಜನರು ಮುದುಕನನ್ನು ಸ್ವಲ್ಪ ತಿರಸ್ಕರಿಸಿದರೂ, ಶಿವಾಜಿಯು ಮುದುಕನ ಸ್ವಾಮಿನಿಷ್ಠೆಗಾಗಿ ಆತನನ್ನು ಮನಃಪೂರ್ವಕವಾಗಿ ಕೊಂಡಾಡಿದನು. ಯಾವನೊಬ್ಬ ಸ್ವಾಮಿಗೆ ಸೇವಕರಿದ್ದರೆ ಇಂಥವರೇ ಇರಬೇಕು. ಅಂದರೇ ಸ್ವಾಮಿ ಕಾರ್ಯವು ಸಾಧಿಸುವದೆಂದು ಆತನು ಮನಸ್ಸಿನಲ್ಲಿ ಅಂದುಕೊಂಡನು. ಆತನು ಪೂಜ್ಯಬುದ್ಧಿಯಿಂದ ಅಪ್ಪಾಸಾಹೇಬನನ್ನು ಕುರಿತು–ಅಪ್ಪಾ ಸಾಹೇಬರೇ, ನನ್ನ ಯಾವತ್ತೂ ಕಾರ್ಯಗಳ ಹೇತುವು ನಿಮಗೆ ಚೆನ್ನಾಗಿ ತಿಳಿದಿರುವದಿಲ್ಲ. ಇರಲಿ, ತಮ್ಮನ್ನು ಇನ್ನು ಅರಕ್ಷಣವಾದರೂ ಪ್ರತಿಬಂಧದಲ್ಲಿಡಲು ಇಚ್ಛಿಸುವದಿಲ್ಲ, ತಾವು ಮನಬಂದತ್ತ ಹೋಗಬೇಕು ಎಂದು ಹೇಳಲು, ಮುದುಕನು ಅದೇ ದಿನ ಅಲ್ಲಿಂದ ಹೊರಟು ಹೋದನು. ಹಿಂದಕ್ಕೆ ಶಿವಾಜಿಯು ರಾಮದಾಸಸ್ವಾಮಿಗಳ ದರ್ಶನಕ್ಕೆ ಹೋದಾಗ ಸ್ವಾಮಿಗಳು–ನಿನಗೆ ಪ್ರಥಮ ಸಿದ್ಧಿಯು ಪ್ರಾಪ್ತವಾದಾಗ ದರ್ಶನ ಕೊಡುವೆವೆಂದು ಹೇಳಿದ್ದರು. ಅದರಂತೆ ಸ್ವಾಮಿಗಳ ಚರಣಧೂಲಿಯನ್ನು ಸುಲ್ತಾನಗಡದಲ್ಲಿ ಕೆಡವಬೇಕೆಂದು, ಅವರನ್ನು ಕರಕೊಂಡು ಬರಲಿಕ್ಕೆ ಶ್ರೀಧರ ಸ್ವಾಮಿಗಳನ್ನು ಶಿವಾಜಿಯು ಈ ಮೊದಲೇ ಕಳಿಸಿದ್ದರಿಂದ, ಈಗ ಆತನ ಎಲ್ಲ ಲಕ್ಷವು ಸಮರ್ಥರ ಕಡೆಗೆ ಹೋಗಿತ್ತು.

ತಾನು ಸಂಪಾದಿಸಿದ ಈ ಅಲ್ಪವಾದ ಜಯದಿಂದ ಶಿವಾಜಿಗೆ ಅಷ್ಟು ಸಮಾಧಾನ ವಾಗಿದ್ದಿಲ್ಲ. ಮುಸಲ್ಮಾನರಿಂದ ಗೋಬ್ರಾಹ್ಮಣರಿಗಾಗುತ್ತಿದ್ದ ಉಪದ್ರವವನ್ನು ದೂರಮಾಡ ಬೇಕಾದರೆ, ತನ್ನ ಬಲವೂ, ಸಂಪಾದನವೂ ಬಹು ದೊಡ್ಡ ಪ್ರಮಾಣದಿಂದ ಹೆಚ್ಚಬೇಕೆಂದು

ಆತನು ಭಾವಿಸಿದ್ದನು. ಸುಲ್ತಾನಗಡದಲ್ಲಿಯ ಮೂರಕಳಿಗೆ ಬಂದಿದ್ದ ಭಾಗವನ್ನು ಗಟ್ಟಿಮುಟ್ಟಿಯಾಗಿ ಕಟ್ಟಿಸಿ, ದುರ್ಗವು ಅಭೇದ್ಯವಾಗುವಂತೆ ಮಾಡುವ ಉಪಾಯದಲ್ಲಿ ಆತನು ತೊಡಗಿದನು. ಶಿವಾಜಿಯು ತಾನು ಮಾಡತಕ್ಕ ಕೆಲಸವನ್ನು ಬಹು ವಿಚಾರಪೂರ್ವಕವಾಗಿ ಮಾಡುತ್ತಿದ್ದನು. ಯಾವದೊಂದು ಮಾತಿನ ಸಲುವಾಗಿ ಸುಮ್ಮನೆ ಹತ್ತೆಂಟು ಜನರ ವಿಚಾರವನ್ನು ಕೇಳುತ್ತ ಕುಳಿತುಕೊಳ್ಳದೆ, ತನ್ನ ಮನಸ್ಸಿಗೆ ಸರಿದೋರಿದಂತೆ ಮಾಡಲು ನಿಶ್ಚಯಿಸಿ, ಅದರಂತೆ ಕಾರ್ಯವನ್ನು ಸಾಧಿಸಲಿಕ್ಕೆ ಮಾತ್ರ ಜನರ ಸಹಾಯವನ್ನು ಪಡೆಯುತ್ತಿದ್ದನು. ಒಮ್ಮೆ ಹೀಗೆ ಮಾಡಬೇಕೆಂದು ಗೊತ್ತಾಗ್ಗಿ, ತನ್ನ ಮನಸ್ಸಿಗೆ ಸರಿದೋರಿದಂತೆ ಆ ಕಾರ್ಯವನ್ನು ಸಾಧಿಸಲಿಕ್ಕೆ ಯೋಗ್ಯ ಮನುಷ್ಯನನ್ನು ನಿಯಮಿಸಿ ಅಪ್ಪಣೆಕೊಟ್ಟ ಬಳಿಕ, ಆ ಮನುಷ್ಯನು ಏನಾದರೂ ತನ್ನ ಹಿರಿಯತನ ಮಾಡಿದರೆ ಶಿವಾಜಿಗೆ ಎಷ್ಟು ಮಾತ್ರವೂ ತಡೆಯುತ್ತಿದ್ದಿಲ್ಲ. ಇದು ಶಿವಾಜಿಯ ಹುಟ್ಟುಗುಣವಾಗಿತ್ತು. ಇಂಥ ವ್ಯಕ್ತಿಗಳು ರಾಷ್ಟ್ರದಲ್ಲಿ ಆಗಬೇಕೆಂದರೆ ಆಗುವದಿಲ್ಲ. ದೇಶ-ಕಾಲ-ಪರಿಸ್ಥಿತಿಗನುಸರಿಸಿ ಈಶ್ವರೇಚ್ಛೆಯಿಂದ ಅವು ಯಾವಾಗಾದರೊಮ್ಮೆ ರಾಷ್ಟ್ರದಲ್ಲಿ ಹುಟ್ಟುತ್ತಿರುತ್ತವೆ. ಸುಲ್ತಾನಗಡವನ್ನು ಸ್ವಾಧೀನಪಡಿಸಿಕೊಳ್ಳುವಾಗ ತನಗೆ ಸಹಾಯ ಮಾಡಿದವರ ಯೋಗ್ಯತೆಯನ್ನರಿತು, ಶಿವಾಜಿಯು ಅವರವರಿಗೆ ತಕ್ಕ ಇನಾಮುಗಳನ್ನು ಕೊಟ್ಟನು. ನಾನಾಸಾಹೇಬನಿಗೆ ಆತನ ತಂದೆಯ ಕೆಲಸ ಕೊಡುವದನ್ನು ನಿಶ್ಚಯಿಸಿದನು. ಸೂರ್ಯಾಜಿಗೆ ಯಾವಾಗಲೂ ತನ್ನ ಬಳಿಯಲ್ಲಿರಬೇಕೆಂದು ಹೇಳಿದನು. ಹೀಗೆ ಮೆಲ್ಲಮೆಲ್ಲನೆ ಎಲ ವ್ಯವಸ್ಥೆಯನ್ನು ಮಾಡುತ್ತಿರಲು , ತಾನು ಸ್ವಾಧೀನಪಡಿಸಿಕೊಂಡ ದುರ್ಗವು ಸ್ಥಿರವಾಗಿ ಉಳಿಯುವದೋ ಇಲ್ಲವೋ ಎಂಬ ಬಗ್ಗೆ ಆತನಲ್ಲಿ ವಿಚಾರವು ಉತ್ಪನ್ನವಾಗುತ್ತಿತ್ತು; ಆದರೆ ಪ್ರತ್ಯಕ್ಷ ಸಂಕಟ ಒದಗದಿರುವಾಗ ಅದರ ಬಗ್ಗೆ ಇಲ್ಲದ ಕಲ್ಪನೆ ಹಾಕುತ್ತ ಕುಳಿತುಕೊಳ್ಳುವದು ಶಿವಾಜಿಯ ಸ್ವಭಾವವಾಗಿದ್ದಿಲ್ಲ. ಪ್ರಸಂಗ ಬಂದಾಗ ಅಂಬಾಭವಾನಿಯ, ಹಾಗು ಗುರು ಮಹಾರಾಜರ ಕೃಪೆಯಿಂದ ನೋಡಿಕೊಳ್ಳಲಿಕ್ಕೆ ಬಂದೀತೆಂಬ ಸ್ವಾವಲಂಬನದಿಂದ ಆತನು ಸಮಾಧಾನ ಮಾಡಿಕೊಳ್ಳುತ್ತಿದ್ದನು.

ಶ್ರೀಸಮರ್ಥ ರಾಮದಾಸಸ್ವಾಮಿಗಳು ಬರುವ ದಿವಸಗಳು ಸಮೀಪಿಸಿದಂತೆ, ಶಿವರಾಯನ ಚಿತ್ತವು ಹೆಚ್ಚುಹೆಚ್ಚು ಅಸ್ವಸ್ಥವಾಯಿತು. ಇಂಥ ದಿವಸ ಗುರುಗಳು ಬರಬಹುದೆಂದು ಸಾಧಾರಣವಾಗಿ ತರ್ಕಿಸಿದ್ದ ದಿವಸ, ಶಿವಾಜಿಯು ಒಂದೇಸವನೆ ಅವರ ಮಾರ್ಗವನ್ನು ನೋಡಹತ್ತಿದನು. ಆತನು ದುರ್ಗದ ಗೋಡೆಗಳ ಮೇಲೆ ತಿರುಗಾಡುತ್ತ ಗುರುಗಳು ಬರುವ ಮಾರ್ಗದ ಕಡೆಗೆ ನೋಡತೊಡಗಿದನು. ಗುರುಗಳು ದೂರ ಬರುತ್ತಿರುವದು ಗೊತ್ತಾದರೆ, ತಾನು ದುರ್ಗವನ್ನು ಇಳಿದು ಹೋಗಿ ಉತ್ಸಾಹದಿಂದ ಅವರನ್ನು ಎದುರ್ಗೊಂಡು ಕರಕೊಂಡು ಬರಬೇಕೆಂದು ಆತನು ಮಾಡಿದ್ದನು. ಶಿವಾಜಿಯು ಹೀಗೆ ಆತುರದಿಂದ ಹಾದಿಯು ನೋಡುತ್ತಿರುವಾಗ, ದುರ್ಗದ ವಾಯವ್ಯ ದಿಕ್ಕಿನಲ್ಲಿ ಯಾರೋ ಬರುತ್ತಿರುವದು ಆತನ ಕಣ್ಣಿಗೆ ಬಿತ್ತು. ಮುಂದೆ ಸ್ವಲ್ಪ ಹೊತ್ತಿನಲ್ಲಿ ಗುರುಮಹಾರಾಜರ ಸವಾರಿಯೇ ದಯಮಾಡಿಸಿತೆಂಬುದು ನಿಶ್ಚಯವಾಗಲು, ಆತನು ತಕ್ಕಷ್ಟು ಜನಸಮೂಹದೊಡನೆ ಅವರನ್ನು ಎದುರ್ಗೊಂಡು

ಕರಕೊಂಡು ಬರುವ ವಿಚಾರವನ್ನು ನಡಿಸಿದನು. ಕೂಡಲೆ ಜನ ಸಮೂಹವು ದುರ್ಗವನ್ನು ಇಳಿದು ಹೊರಟಿತು. ದುರ್ಗದ ಕೆಳಗೆ ಪಲ್ಲಕ್ಕಿ ಮೊದಲಾದವುಗಳ ವ್ಯವಸ್ಥೆಯನ್ನು ಮಾಡಿದರು. ಜನರು ಅರ್ಧ ಹರದಾರಿಯನ್ನು ನಡೆದು ಹೋಗಲು, ನಿಜವಾಗಿಯೇ ದಿವ್ಯಮೂರ್ತಿಯ ದರ್ಶನವಾಗಿ, ಎಲ್ಲರಿಗೂ ಶುದ್ಧಾನಂದದ ಅನುಭವವಾಯಿತು. ಎಲ್ಲರೂ ಶ್ರೀಗುರುಚರಣಕ್ಕೆ ಎರಗಿದ ಬಳಿಕ, ಸಮರ್ಥರು ಮುಗುಳುನಗೆಯಿಂದ ಶಿವಾಜಿಯನ್ನು ನೋಡಿ—''ನಿಯಮದಂತೆ ಕಾರ್ಯಸಿದ್ಧಿಯಾಯಿತು. ಆ ಮಾರುತಿಯ, ಹಾಗು ಅಂಬಾಭವಾನಿಯ ಪ್ರಸಾದವು ಪ್ರಾಪ್ತವಾಯಿತು. ಅದು ಪ್ರಾಪ್ತವಾದಂತೆ ಸ್ಥಿರವಾಗಿಯೂ ಉಳಿಯುವದು. ಅಪ್ಪಾ, ಉದ್ಯೋಗವನ್ನು ಹೀಗೆಯೇ ಮುಂದಕ್ಕೆ ಸಾಗಿಸು, ಸಂಕಟ ಬಂದರೂ ಹೆದರಬೇಡ'' ಎಂದು ಇಷ್ಟೇ ಮಾತಾಡಿದರು. ಆಗ ಶಿವಾಜಿಯು ಪಲ್ಲಕ್ಕಿಯಲ್ಲಿ ಕುಳಿತುಕೊಳ್ಳುವದಕ್ಕಾಗಿ ಸಮರ್ಥರನ್ನು ಬೇಡಿಕೊಂಡನು. ಅದಕ್ಕೆ ಸಮರ್ಥರು–ಪಲ್ಲಕ್ಕಿಯಲ್ಲಿ ಕುಳಿತುಕೊಳ್ಳುವ ಪ್ರಸಂಗವು ಇನ್ನೂ ದೂರ ಇರುತ್ತದೆ. ಸದ್ಯಕ್ಕೆ ಆ ಪ್ರಭುವಾದ ಶ್ರೀರಾಮಚಂದ್ರನ ಭಕ್ತನು ಕೊಟ್ಟಿದ್ದ ಕಾಲುಗಳ ಬಲದಿಂದಲೇ ದುರ್ಗವನ್ನು ಏರಿಹೋಗೋಣ, ಎಂದು ಅರ್ಥಪೂರ್ಣದೃಷ್ಟಿಯಿಂದ ಶಿವಾಜಿಯನ್ನು ನೋಡುತ್ತ ನುಡಿದನು. ಶಿವಾಜಿಯು ಅದರೊಳಗಿನ ಅರ್ಥವನ್ನು ಕೂಡಲೆ ತಿಳಕೊಂಡು, ಪಲ್ಲಕ್ಕಿಯಲ್ಲಿ ಕುಳಿತುಕೊಳ್ಳುವದಕ್ಕಾಗಿ ತಿರುಗಿ ಆಗ್ರಹವನ್ನು ಮಾಡಲಿಲ್ಲ. ಎಲ್ಲರೂ ದುರ್ಗವನ್ನು ಏರಹತ್ತಿದರು. ಅಷ್ಟರಲ್ಲಿ ಸೂರ್ಯಾಜಿಯ ಹುಚ್ಚ ಹೆಂಡತಿಯು ಹಾಡುತ್ತ ಕುಣಿಯುತ್ತ ದೂರದಿಂದ ಬರಹತ್ತಿದಳು. ಅದನ್ನು ನೋಡಿ ಸೂರ್ಯಾಜಿಯು ಮುಂದು ವರಿದು ಹೋಗಿ ಆಕೆಯನ್ನು ಒತ್ತಟ್ಟಿಗೆ ಕರೆದೊಯ್ಯಹತ್ತಿದನು! ಆಗ ಸಮರ್ಥರು— ಆ ಸ್ತ್ರೀಯು ಯಾರು? ನನ್ನ ಬಳಿಗೆ ಕರಕೊಂಡು ಬರಬೇಕು, ಎಂದು ಹೇಳಲು, ನೆರೆಯಲ್ಲಿದ್ದವರು–ಆಕೆಯು ಹುಚ್ಚಿಯು, ತಮ್ಮ ಮುಂದೆ ವಿನಯದಿಂದ ವರ್ತಿಸುವ ಜ್ಞಾನವು ಅವಳಿಗಿರುವದಿಲ್ಲ, ಎಂದು ಹೇಳುತ್ತಿರಲು, ಸಮರ್ಥರು–ಅವಳಿಗೆ ಜ್ಞಾನವಿರುವದಿಲ್ಲವೊ ನಮಗೆ ಜ್ಞಾನವಿರುವದಿಲ್ಲವೊ, ಯಾರಿಗೆ ಗೊತ್ತು! ಎಂದು ನಗುತ್ತ ನುಡಿದರು. ಅಷ್ಟರಲ್ಲಿ ಹುಚ್ಚಿಯು ಹಾಡುತ್ತ ಕುಣಿಯುತ್ತ ಸಮರ್ಥರ ಬಳಿಗೆ ಬರಲು, ಅವರು ಆಕೆಯ ತಲೆಯ ಮೇಲೆ ತಮ್ಮ ವರದಹಸ್ತವನ್ನು ಇಟ್ಟು, ಕೃಪಾದೃಷ್ಟಿಯಿಂದ ಆಕೆಯನ್ನು ನೋಡಿ—''ಹೋಗು; ಸುಖದಿಂದ ಇರು'' ಎಂದು ಆಶೀರ್ವದಿಸಿ, ಹೋಗಲಪ್ಪಣೆ ಕೊಟ್ಟರು.

ಈ ಮೇರೆಗೆ ಸಮರ್ಥರ ಆಶೀರ್ವಾದವು ದೊರೆತ ಕೂಡಲೆ ಆ ಹುಚ್ಚಿಯು ನಗುವದನ್ನೂ, ಕುಣಿಯುವದನ್ನೂ ಬಿಟ್ಟು, ಪೂರ್ಣ ಜಾಗರೂಕಳಾಗಿ ಕುಲೀನಸ್ತ್ರೀಯರಿಗೆ ಒಪ್ಪುವ ಲಜ್ಜಾವಿನಯ ಸಂಪನ್ನತೆಯಿಂದ ಲಗುಲಗು ನಡೆಯುತ್ತ, ಆ ಕಡೆಯ ಗಿಡಗಳ ಗುಂಪನ್ನು ಸೇರಿ, ಒಂದು ಗಿಡದ ಮರೆಗೆ ಕುಳಿತುಕೊಂಡಳು. ದೊಡ್ಡವರ ಪುಣ್ಯದಿಂದ ಸೂರ್ಯಾಜಿಯ ಹೆಂಡತಿಯ ಹುಚ್ಚು ಹಾಳಾಗಿ ಹೋಗಿ, ಆತನಿಗೆ ಮೊದಲಿದ್ದಂತೆ ಹೆಂಡತಿಯು ದೊರೆತಳು. ಈ ಅದ್ಭುತವನ್ನು ನೋಡಿ ಜನರ ಭಕ್ತಿ–ವಿಶ್ವಾಸಗಳು ಹೆಚ್ಚಿದವು. ಸ್ವಾಮಿಗಳ ಮನಸ್ಸಿನೊಳಗಿನ ಈ ಅಲೌಕಿಕ ಸಂಗತಿಯು ಕ್ಷಣದಲ್ಲಿ ಅವರಿಗೆ

ಮರೆತುಹೋಯಿತು. ಅವರು ನಿರಾಲೋಚನೆಯಿಂದ ಮುಂದಕ್ಕೆ ಸಾಗಿದ್ದರು. ದುರ್ಗದ ಮೇಲೆ ಹೋದ ಬಳಿಕ ದರ್ಶನಕ್ಕೆ ಬರುವವರ ದಟ್ಟಣೆಯು ಹೆಚ್ಚಿತು. ಪ್ರತಿ ಒಬ್ಬರು ತಮ್ಮಿಂದ ಏನಾದರೂ ದೊಡ್ಡವರ ಸೇವೆಯು ಘಟಿಸಬೇಕೆಂದು ಆತುರಪಡಹತ್ತಿದ್ದರು. ನೆರೆದವರೆಲ್ಲರೂ ಯಥೇಚ್ಛ ದರ್ಶನ ಸೌಖ್ಯವನ್ನೂ, ವಂದನ ಸೌಖ್ಯವನ್ನೂ ಪಡೆದು, ಆಶೀರ್ವಾದದಿಂದ ಆನಂದಿತರಾಗಿ ಮೆಲ್ಲಮೆಲ್ಲನೆ ಮನೆಗೆ ಹೋಗ ಹತ್ತಿದ್ದರು. ಮುಖ್ಯ ಮನುಷ್ಯರು ಮಾತ್ರ ಸ್ವಾಮಿಗಳ ಬಳಿಯಲ್ಲಿ ಉಳಿದರು. ಆಗ ಶ್ರೀಧರಸ್ವಾಮಿಗಳು ಸ್ನಾನ–ಸಂಧ್ಯಾದಿ ವಿಧಿಗಳನ್ನು ತೀರಿಸುವದಕ್ಕಾಗಿ ಸಮರ್ಥರನ್ನು ಪ್ರಾರ್ಥಿಸಿದರು. ಸಮರ್ಥರ ಸ್ನಾನ–ಸಂಧ್ಯಾದಿಕರ್ಮಗಳು ಮುಗಿಯುವದರೊಳಗೆ ಒಂದು ಪ್ರಹರಕಾಲವು ಕ್ರಮಿಸಿತು. ಉಪಾಹಾರವನ್ನು ತೀರಿಸಿಕೊಂಡು ಸ್ವಾಮಿಗಳು ವಿಶ್ರಮಿಸಿರಲು, ಪುನಃ ಪಾದವಂದನಕ್ಕಾಗಿ ಶಿವಾಜಿಯು ಬಂದನು. ನಾನಾಸಾಹೇಬನಿಗೆ ದುರ್ಗವನ್ನು ಇಳಿದು ಹತ್ತುವಷ್ಟು ಶಕ್ತಿಯು ಇನ್ನೂ ಬಾರದ್ದರಿಂದ, ಆತನು ದುರ್ಗದ ಕೆಳಗೆ ಸ್ವಾಮಿಗಳ ದರ್ಶನಕ್ಕೆ ಹೋಗಿದ್ದಿಲ್ಲ. ಜನರ ಗದ್ದಲವು ವಿಶೇಷವಾಗಿ ಇದ್ದದ್ದರಿಂದ, ಸ್ವಾಮಿಗಳು ದುರ್ಗದ ಮೇಲೆ ಬಂದ ಕೂಡಲೆಯೂ ಆತನು ದರ್ಶನಕ್ಕೆ ಹೋಗಿದ್ದಿಲ್ಲ. ಆ ನಾನಾಸಾಹೇಬನೂ ಈಗ ಸ್ವಾಮಿಗಳ ಪಾದವಂದನಕ್ಕಾಗಿ ಬಂದನು. ಆತನು ನಮಸ್ಕರಿಸಿದ ಕೂಡಲೆ ಸ್ವಾಮಿಗಳು ಆತನ ಮಸ್ತಕದ ಮೇಲೆ ತಮ್ಮ ವರದಹಸ್ತವನ್ನಿಟ್ಟು "ನೀನು ಮಾಡಿದ ಕೆಲಸವು ಬಹು ಉತ್ತಮವಾದದ್ದು; ಆದರೆ ಇದಕ್ಕೂ ಹೆಚ್ಚಿನ ಕೆಲಸಗಳು ಮಾಡತಕ್ಕವು ಎಷ್ಟೊಂದು ಇರುತ್ತವೆ! ಆದರೆ ಆ ಸಾಧ್ವಿಯ ವಿಷಯವಾಗಿ ಇಲ್ಲದ ತರ್ಕಕುತರ್ಕಗಳನ್ನು ಮನಸ್ಸಿನಲ್ಲಿ ತರಬೇಡ, ತಂದರೆ ಎಂದಿಗೂ ಕಲ್ಯಾಣವಾಗದು." ಎಂದು ಹೇಳಿದರು. ಈ ಮಾತುಗಳನ್ನು ಕೇಳಿದ ಕೂಡಲೆ ನಾನಾಸಾಹೇಬನು ಕಕ್ಕಾಬಿಕ್ಕಿಯಾಗಿ, ಸಮರ್ಥರನ್ನು ನೋಡಹತ್ತಿದನು. ಈ ಮಾತು ಇವರಿಗೆ ಹೇಗೆ ಗೊತ್ತಾಯಿತೆಂದು ಆತನು ಆಶ್ಚರ್ಯಪಟ್ಟನು. ಆದರೆ ಸಮರ್ಥರಿಗೆ ತಿಳಿಯದ್ದು ಒಂದೂ ಇಲ್ಲೆಂಬ ದೃಢವಿಶ್ವಾಸವು ಆತನಲ್ಲಿ ಇದ್ದದ್ದರಿಂದ, ಆತನು ಲೀನತೆಯಿಂದ ಸಮರ್ಥರನ್ನು ಕುರಿತು—"ಸಮರ್ಥರ ಅಪ್ಪಣೆಯು ಶಿರಸಾವಂದ್ಯವಾಗಿರುತ್ತದೆ" ಬದೊಂದೇ ವಾಕ್ಯವನ್ನು ನುಡಿದು, ತಲೆಬಾಗಿಸಿ ಸುಮ್ಮನೆ ಕುಳಿತುಕೊಂಡನು. ಒಂಬತ್ತು ತಾಸಿನ ಸುಮಾರಕ್ಕೆ ದುರ್ಗದ ನೆರೆಯ ಹಳ್ಳಿಯೊಳಗಿನ ಹೆಣ್ಣುಮಕ್ಕಳ ಹಿಂಡಿಗೆ ಹಿಂಡು ಸ್ವಾಮಿಗಳ ದರ್ಶನಕ್ಕಾಗಿ ಬಂದಿತು. ಆಗ ನಾನಾಸಾಹೇಬನ ಹೆಂಡತಿಯಾದ ಚಂದ್ರಾವತಿಯೂ ಬಂದಿದ್ದಳು. ಆಕೆಯನ್ನು ಸ್ವಾಮಿಗಳು ಉತ್ತಮರೀತಿಯಿಂದ ಆಶೀರ್ವದಿಸಿದರು. ಸಂಜೆಯಾಗಲು, ಸ್ವಾಮಿಗಳು ಸಂಧ್ಯಾವಂದನಕ್ಕಾಗಿ ಹೋದರು. ಅವರ ನಿತ್ಯಕರ್ಮಗಳು ಮುಗಿದು ಸಮಾಧಿಯ ವಿಧಿಯು ಆದ ಮೇಲೆ ಅವರ ಬಳಿಯಲ್ಲಿ ಮುಖ್ಯಮುಖ್ಯ ಜನರು, ಅಂದರೆ ಶಿವಾಜಿರಾಜನು, ಸೂರ್ಯಾಜಿಯು, ನಾನಾಸಾಹೇಬನು, ತಾನಾಜಿಯು, ಏಸಾಜಿಯು, ಕಲ್ಯಾಣಸ್ವಾಮಿಯು, ಶ್ರೀಧರಸ್ವಾಮಿಯು ಇಷ್ಟೇ ಜನರು ಇದ್ದರು. ಆಗ ಶಿವಾಜಿಯು ಎದ್ದು ನಿಂತು ಕೈಮುಗಿದು ಸಮರ್ಥರನ್ನು ಕುರಿತು—ಮಹಾಸ್ವಾಮಿ, ತಮ್ಮ ಹಾಗು ಜಗದಂಬೆಯ,

ಕೃಪೆಯಿಂದ ಇಲ್ಲಿಯವರೆಗೆ ಎಲ್ಲ ಕೆಲಸಗಳೂ ಉತ್ತಮ ರೀತಿಯಿಂದ ಸಾಧಿಸಿದವು. ಇನ್ನು ಮುಂದೆ ಇದೇ ಕ್ರಮವನ್ನು ಅನುಸರಿಸಿ ಕಾರ್ಯವನ್ನು ಸಾಧಿಸುವದು ತಮ್ಮ ಆಜ್ಞೆಯನ್ನೂ, ಅನುಗ್ರಹವನ್ನೂ ಅವಲಂಬಿಸಿರುತ್ತದೆ. ತಮ್ಮ ಕೃಪಾಪ್ರಸಾದ ವಿಲ್ಲದಿದ್ದರೆ ಯಾವ ಕಾರ್ಯವೂ ಸಾಧಿಸುತ್ತಿದ್ದಿಲ್ಲ. ನಾನು ತಮ್ಮ ಸೇವಕನಾದದ್ದರಿಂದ ನನ್ನಿಂದ ಸದ್ಯಕ್ಕೆ ಆಗಿರುವ, ಮುಂದೆ ಆಗುವ ಕಾರ್ಯವೆಲ್ಲ ಗುರುಚರಣಕ್ಕೆ ಅರ್ಪಿತವಾಗದದ್ದಿರುತ್ತದೆ. ಮುಂದಾಗುವದರ ಜ್ಞಾನವು ನನಗಿರುವದಿಲ್ಲ; ಆದರೆ ಇಂದಿನ ಪ್ರಥಮ ಸಿದ್ಧಿಯನ್ನು ಗುರುದಕ್ಷಿಣೆಯೆಂದು ಚರಣಕ್ಕೆ ಅರ್ಪಿಸಲು ಇಚ್ಛಿಸುತ್ತೇನೆ. ಈ ದುರ್ಗವು ಇಂದಿನಿಂದ ನನ್ನದಲ್ಲ, ತಮ್ಮದು; ಮತ್ತು ಈ ದುರ್ಗದ ಸುತ್ತುಮುತ್ತಲಿನ ಊರುಗಳೂ ತಮ್ಮವೇ ಆಗಿರುವವು, ಸ್ವೀಕರಿಸಿ ನನ್ನನ್ನು ಆಶೀರ್ವದಿಸಬೇಕೆಂಬದೇ ನನ್ನ ಪ್ರಾರ್ಥನೆಯು.

ಶಿವಾಜಿಯ ಈ ಮಾತುಗಳನ್ನು ಕೇಳಿ ಸಮರ್ಥರು ಗಹಗಹಿಸಿ ನಕ್ಕು— ಶಿವಬಾ, ಇನ್ನು ನಮ್ಮ ಈ ಕೆಂಪುಶಾಟಿಯ ಸುತ್ತು ಬಂದಿತು. ಕೋಟೆಯೂ, ರಾಜ್ಯವೂ ಕೆಂಪುಶಾಟಿಯ ನಮಗೆ ಚನ್ನಾಗಿ ಒಪ್ಪಬಹುದಲ್ಲವೆ? ಅಪ್ಪಾ, ಈ ದುರ್ಗವೂ ಮುಂದೆ ಸಂಪಾದಿಸಲ್ಪ ಡುತ್ತಿರುವ ರಾಜ್ಯವೂ ನಿನ್ನದೂ ಅಲ್ಲ—ನನ್ನದೂ ಅಲ್ಲ "ಈ ರಾಜ್ಯವು ನನ್ನದು ಅಥವಾ ಇನ್ನೊಬ್ಬರದು" ಎಂಬ ಭಾವನೆಯಿಂದ ಪ್ರೇರಿತನಾಗಿ ರಾಜ್ಯಸ್ಥಾಪಿಸುವದಕ್ಕಿಂತ, ಅದನ್ನು ಸಂಪಾದಿಸದೆ ಇರುವದೇ ನೆಟ್ಟಗೆ. ಈ ಅಹಂಭಾವನೆಯಿಂದ ನೀನು ಕೀರ್ತಿಶಾಲಿಯಾದರೂ ವ್ಯರ್ಥವೆಂದು ನಾವು ತಿಳಿಯುತ್ತೇವೆ. ಅಭಿಮಾನದಿಂದ ಕಾರ್ಯಮಾಡಿದರೆ, ಕೆಲಸ ಕೆಟ್ಟೀತು. ಈ ರಾಜ್ಯವು ನಿನ್ನದಲ್ಲ, ನನ್ನದೂ ಅಲ್ಲ; ಅಜ್ಞಾನಿಗಳೂ, ದುರ್ಬಲರೂ ಆದದ್ದರಿಂದ, ಬಲಿಷ್ಠರೂ, ಕ್ರೂರರೂ ಆದ ಮುಸಲ್ಮಾನರು ಮಾಡುವ ಉಪದ್ರವಗಳನ್ನು ಸಹಿಸುವ ಅನಾಥರದು ಈ ರಾಜ್ಯವೆಂಬದನ್ನು ನೆನಪಿನಲ್ಲಿಡು. ನೀನು ಕೇವಲ ಸೂತ್ರಧಾರಿಯು, ಸೂತ್ರಚಾಲಕನು ಪರಮೇಶ್ವರನು, ಎಂಬ ಈ ಬುದ್ಧಿಯಿಂದ ನೀನು ವರ್ತಿಸಿದರೆ ಜಯಶಾಲಿ ಯಾದೀ; ನಿನ್ನ ಕಾರ್ಯವೂ ಪ್ರಶಂಸನೀಯವಾದೀತು!! ಎಂದು ನುಡಿಯಲು, ಶಿವಬಾನು ಅದನ್ನು ಕೇಳಿ ಕ್ಷಣಹೊತ್ತು ಸುಮ್ಮನೆ ಕುಳಿತನು. ಸ್ವಾಮಿಗಳ ಉಪದೇಶವು ಪೂರ್ಣವಾಗಿ ಆತನ ಮನಸ್ಸಿನಲ್ಲಿ ಬಿಂಬಿಸಿದ್ದರಿಂದ ಆತನು ಸ್ವಾಮಿಗಳನ್ನು ವಂದಿಸಿ—"ಮಹಾಸ್ವಾಮೀ, ಇದನ್ನು ನಾನು ಮಾಡಿದೆನು, ಇದನ್ನು ಅವರು ಮಾಡಿದರು ಎಂಬ ಬುದ್ಧಿಯು ನನ್ನಲಿಲ್ಲ; ಇದ್ದರೂ ಈಗಿನ ಸದ್ಗುರು ಬೋಧದಿಂದ ಅದನ್ನು ಬಿಟ್ಟುಕೊಡುತ್ತೇನೆ. ಈ ಚರಣದ, ಹಾಗು ಅಂಬಾಭವಾನಿಯ ಕೃಪೆಯಿದ್ದರೆಯೇ ಕಾರ್ಯವು ಸಾಧಿಸುವದು; ಆದರೂ ವ್ಯವಹಾರದೃಷ್ಟಿಯಿಂದ ಮಾತಾಡುವಂತೆ ಮಾತಾಡಿದೆನು. ಅದನ್ನು ಕ್ಷಮಿಸಿ, ಅಜ್ಞರೂ, ದುರ್ಬಲರೂ ಆದವರ ಸಲುವಾಗಿಯೇ ಆಗಲೊಲ್ಲದೇಕೆ, ತಮ್ಮ ಚರಣಕ್ಕೆ ಈ ಗುರುದಕ್ಷಿಣೆ ಯನ್ನು ಅರ್ಪಿಸುತ್ತೇನೆ. ಅದನ್ನು ಮನಃಪೂರ್ವಕವಾಗಿ ಸ್ವೀಕರಿಸುವ ಕೃಪೆ ಮಾಡಬೇಕು; ಮತ್ತು ಇನ್ನು ಮುಂದೆ ಸಂಪಾದಿಸಲ್ಪಡತಕ್ಕದ್ದೆಲ್ಲ ತಮ್ಮ ಕೃಪಾದೃಷ್ಟಿಯ ಫಲವೆಂದು ಗೊತ್ತಾಗು ವದಕ್ಕಾಗಿ ಏನಾದರೂ ಗುರುತುಕೊಟ್ಟು ಅನುಗ್ರಹಿಸಬೇಕು, ಎಂದು ಪ್ರಾರ್ಥಿಸಿದನು.

ಆದಕ್ಕೆ ಸಮರ್ಥರು ಹೊರಹಾದಿಯನ್ನು ಹಚ್ಚಲಿಕ್ಕೆ ಬೇಕಾದಷ್ಟು ಯತ್ನಿಸಿದರು; ಆದರೆ ಶಿವಾಜಿಯು ಕೇಳಲಿಲ್ಲ ಅಲ್ಲಿ ಕುಳಿತ ಜನರೂ ಸಮ್ಮತಿಸಲಿಲ್ಲ; ಆದ್ದರಿಂದ ಸಮರ್ಥರು ಅತ್ತ ಒಣಹಾಕಿದ್ದ ತಮ್ಮ ಕೆಂಪು ಶಾಟಿಯನ್ನು ತಕ್ಕೊಂಡು ಶಿವಾಜಿಯ ಕೈಯಲ್ಲಿ ಕೊಟ್ಟು– ‘ಇಗೋ, ಹಿಡಿ ನನ್ನ ಈ ಗುರುತನ್ನು, ‘ಇದರ ನಿಶಾನೆಯನ್ನು ಮಾಡು; ಹಾಗು ಈ ಹೇಳುವ ಅಕ್ಷರಗಳನ್ನು ದುರ್ಗದ ಮೇಲೆ ಕೊರಿಸು. ಕಾಗದಪತ್ರಗಳಲ್ಲಿ ಈ ಮುದ್ರೆಯನ್ನು ಬಳಸುತ್ತ ಹೋಗು.

ವಿಕ್ರಮೈರ್ವರ್ಧಿತಾ ವಿಷ್ಣೋಃ ।<br>
ಸಾ ಮೂರ್ತಿರಿವವಾಮನಾ ॥<br>
ಶಾಹಾಸುತಸ್ಯ ಮುದ್ರೇಯಂ ।<br>
ಶಿವರಾಜಸ್ಯ ರಾಜತೇ ॥ 1 ॥

ಶ್ರೀಧರಸ್ವಾಮಿಗಳು ಈ ಅಕ್ಷರಗಳನ್ನು ಸರಸರ ಬರೆದುಕೊಂಡರು. ಶಿವಾಜಿಯು ಶಾಟಿಯನ್ನು ತನ್ನ ಮಸ್ತಕದ ಮೇಲೆ ಇಟ್ಟುಕೊಂಡು ಅತ್ಯಾನಂದದಿಂದ ಅದನ್ನು ಸ್ವೀಕರಿಸಿದನು. ಆ ಶಾಟಿಯ ನಿಶಾನೆಯೇ ಭಗವಾಝೇಂಡೆಯು.''

**ಸಂಪೂರ್ಣ**

# ಗಳಗನಾಥ ಸುರಸ ಗ್ರಂಥಮಾಲೆ

೧) ಶ್ರೀ ಸದ್ಗುರು ಕೃಪೆಯಿಂದ ನಮಗೊದಗಿದ ವಿಲಕ್ಷಣ ಕಾಲದಲ್ಲಿ ಎರಡು ಕಾದಂಬರಿಗಳು ಮುಗಿದಂತಾದವು. ಅವುಗಳಲ್ಲಿ ಒಂದನೆಯದು ''ಶಿವಪ್ರಭುವಿನ ಪುಣ್ಯ''ವು; ಎರಡನೆಯದು ''ಮರಾಟರ ಅಭ್ಯುದಯ''ವೆಂಬುದು. ಇವೆರಡು ಕಾದಂಬರಿಗಳು ಪಾಠಶಾಲೆಯ ಸ್ಥಿತಿಗೆ ಸಂಬಂಧಿಸಿದವಾಗಿ ಪರಿಣಮಿಸಿರುವದರಿಂದ, ಅವನ್ನು ನಿರರ್ಥಕ ವಾದವುಗಳೆಂದು ಭಾವಿಸುವದಿಲ್ಲ. ನಮ್ಮ ''ಶ್ರೀ ಶೇಷಾಚಲ ವೇದ ಮತ್ತು ಸಂಸ್ಕೃತ ಪಾಠಶಾಲೆ''ಯ ಸ್ಥಳಾಂತರದ ಭವಿಷ್ಯವನ್ನು ವರ್ಣಿಸುವದಕ್ಕಾಗಿಯೇ ಅನ್ನುವಂತೆ ಶ್ರೀ ಗುರುವು ''ಶಿವಪ್ರಭುವಿನ ಪುಣ್ಯ''ವೆಂಬ ಒಂದನೆಯ ಕಾದಂಬರಿಯನ್ನು ನಮ್ಮ ಕೈಯಿಂದ ಬರೆಸಿದನು; ಮತ್ತು ಅಫಜುಲಖಾನನ ಮರಣದ ತರುವಾಯದಲ್ಲಿ ಮಹಾರಾಷ್ಟ್ರರ ರಾಜ್ಯದ ಅಭ್ಯುದಯಕ್ಕೆ ಆರಂಭವಾದಂತೆ, ಪಾಠಶಾಲೆಯು ಅಗಡಿಯನ್ನು ಬಿಟ್ಟಬಳಿಕೇ ಅದರ ನಿಜವಾದ ಅಭ್ಯುದಯಕ್ಕೆ ಆರಂಭವಾಗುವದೆಂಬದನ್ನು ತೋರಿಸುವ ದಕ್ಕಾಗಿ ''ಮರಾಟರ ಅಭ್ಯುದಯ''ವೆಂಬ ಈ ಎರಡನೆಯ ಕಾದಂಬರಿಯನ್ನು ಅದೇ ಶ್ರೀಗುರುವು ನಮ್ಮ ಕೈಯಿಂದ ಬರೆಸಿರುವನು. ವೃಕ್ಷಗಳ ಸಸಿಗಳನ್ನು ಕಿತ್ತಿ ಹಚ್ಚುವದರಿಂದ ಅವು ಕಸುವಿನಿಂದ ಬೆಳೆಯುವವು; ಅದರಿಂದಲೇ ಪಾಠಶಾಲಾ ವೃಕ್ಷದ ಹನ್ನೊಂದು ವರ್ಷದ ಸಸಿಯನ್ನು ಕಿತ್ತು ಹಾವೇರಿಯ ಶ್ರೀರಾಮ ಮಂದಿರದಲ್ಲಿ ಊರುವ ಪ್ರಸಂಗವು ಬಂದಿರಬಹುದು. ವಿಪತ್ಕಾಲದಲ್ಲಿ ಚಂದ್ರಹಾರವನ್ನು ಗೂಟವು ನುಂಗಿ, ವಿಕ್ರಮರಾಜ ನಂಥವನಿಗೆ ಕಳವಿನ ಆರೋಪವು ಬಂದದ್ದನ್ನು ವಾಚಕರು ಬಲ್ಲರಷ್ಟೆ? ಅದರಂತೆ ನಮಗೊದಗಿದ ಈ ವಿಲಕ್ಷಣ ಕಾಲದಲ್ಲಿ ನಮ್ಮ ಮೇಲೆ ಇಲ್ಲದ ಆರೋಪಗಳು ಬಂದವು; ಆದರೆ ಆ ಆರೋಪರೂಪವಾದ ಕಳಿತ ಗೊಬ್ಬರವು, ನಮ್ಮ ಶ್ರೀ ಗುರುವಿನ ಪಾಠಶಾಲಾ ವೃಕ್ಷದ ಬೆಳವಣಿಗೆಗೆ ಸತ್ವವನ್ನು ಒದಗಿಸಿಕೊಟ್ಟು, ಆ ವೃಕ್ಷವನ್ನು ಪ್ರಸವ–ಪುಷ್ಪ–ಫಲಭಾರಗಳಿಂದ ಸುಶೋಭಿತವಾಗಿ ಮಾಡುವದೆಂದು ನಾವು ತಿಳಿದಿರುತ್ತೇವೆ.

೨) ಈ ಪಾಠಶಾಲಾ ವೃಕ್ಷದ ಸಂಗೋಪನಕ್ಕಾಗಿಯೇ ನಮ್ಮ ಭಾಷಾ ಸೇವಾ ಸುಂದರಿಯು, ಈಗ ಹನ್ನೊಂದು ವರ್ಷಗಳ ಹಿಂದೆ ಶ್ರೀ ಗುರು ಪ್ರಭಾವದಿಂದ ಆನಂದವನ ದಲ್ಲಿ ಪ್ರಕಟವಾದಳಷ್ಟೇ? ಆಕೆಯು ತನ್ನ ವಾಗ್ವಿಲಾಸವೆಂಬ ಸುವರ್ಣ ಕುಂಭದೊಳಗಿನ

ನವರಸಗಳನ್ನು ಆ ವಿದ್ಯಾ ವೃಕ್ಷದ ಮಡಿಯಲ್ಲಿ ತುಂಬುತ್ತ ಬಂದಳು; ಆದರೆ ಮಹಾಯುದ್ಧದ ತೊಂದರೆಯ ಮೂಲಕ ಮಾಸಮಾಸಕ್ಕೆ ಮಡಿಯನ್ನು ಜಲದಿಂದ ತುಂಬಲಿಕ್ಕೆ ಅನುಕೂಲ ವಾಗದಾಯಿತು; ಆದ್ದರಿಂದ ಆ ಸುಂದರಿಯು ತನ್ನ "ಸದ್ಬೋಧ ಚಂದ್ರಿಕೆ"ಯೆಂಬ ಹೆಸರನ್ನು ಬಿಟ್ಟುಕೊಟ್ಟು ಆ ಹೆಸರಿಗೆ ಒಪ್ಪುವ ರೂಪವನ್ನು ಕಳಿಚಿಬಿಟ್ಟು "ಸುರಸ ಗ್ರಂಥಮಾಲೆ"ಯೆಂಬ ಹೆಸರನ್ನೂ, ಆ ಹೆಸರಿಗೆ ಒಪ್ಪುವ ಮನೋಹರ ರೂಪವನ್ನೂ ಧರಿಸಿ ವಾಚಕರನ್ನು ತೃಪ್ತಿಪಡಿಸಲು ಸಿದ್ಧವಾಗುತ್ತಿರುವಳು; ಆದರೆ ನಮ್ಮ ಪ್ರಿಯ ಚಂದ್ರಿಕೆಯ ಅಭಿಮಾನಿಗಳಾದ ಎಷ್ಟೋ ಜನ ಸಹೃದಯ ವಾಚಕರು—"ಚಂದ್ರಿಕೆಯು ನಿಮ್ಮ ಕೈಬಿಟ್ಟು ಪರದೇಶಿಯಾದಳು, ಆಕೆಯು ಕಲಾಹೀನಳಾದಳು, ಆಕೆಯ ಗೌರವವು ನಷ್ಟವಾಯಿತು, ನಿಮ್ಮ ಚಂದ್ರಿಕೆಯೆಂದು ತಿಳಿದು ನಾವು ಚಂದಾದಾರರಾಗಿ ಮೋಸಹೋದೆವು" ಇತ್ಯಾದಿ ವಾತ್ಸಲ್ಯಪೂರ್ಣವಾದ ಉದ್ಗಾರಗಳನ್ನು ಹೊರಗೆಡವಿ ವ್ಯಸನಬಡುವದನ್ನು ನೋಡಿ ನಮಗೂ ಬಹಳ ವ್ಯಸನವಾಗುತ್ತದೆ. ಈ ಪ್ರಸಂಗದಲ್ಲಿ ನಾವು ಎಲ್ಲ ಕನ್ನಡಿಗರಿಗೆ ವಿಜ್ಞಾಪಿಸುವುದೇನಂದರೆ—ನಮ್ಮ ಪ್ರಿಯ ಚಂದ್ರಿಕೆಯು, ನಮ್ಮ ಪೂಜ್ಯ ಗುರುಪುತ್ರಿಯಾದ ಚಂದ್ರಿಕೆಯು, ನಮ್ಮನ್ನು ಬಿಟ್ಟು ಸರ್ವಥಾ ಹೋಗಲಾರಳು. ಮೇಲೆ ಹೇಳಿದಂತೆ ಆಕೆಯೇ "ಸುರಸ ಗ್ರಂಥಮಾಲೆ"ಯ ರೂಪದಿಂದ ಪ್ರಕಟವಾಗಿರುವಳು. ಶ್ರೀಗುರು ಪ್ರೇರಣೆಯಿಂದ ಗಳಗನಾಥ ಇವರ ಲೇಖನಿಯ ದ್ವಾರವಾಗಿ ಹೊರಬೀಳುವ ಅವರ ವಿಚಾರ ಪರಂಪರೆಗಳನ್ನು "ಸದ್ಬೋಧ ಚಂದ್ರಿಕೆ" ಯೆಂದು ಕರೆಯಬಹುದು. ಅಥವಾ "ಸುರಸ ಗ್ರಂಥಮಾಲೆ"ಯೆಂದು ಕರೆಯಬಹುದು! ಇಲ್ಲವೆ ಅದಕ್ಕೆ ಬೇರೆ ಹೆಸರುಗಳನ್ನು ಇಡಬಹುದು. ಹೀಗೆ ಹೆಸರು ಬೇರೆಯಾದ ಮಾತ್ರದಿಂದ ಕನ್ನಡಿಗರಿಗಿರುವ ಗಳಗನಾಥರ ಸೇವಾಸಂಬಂಧವು ಸರ್ವಥಾ ಕಡಿಯಲಾರದು. ಗಳಗನಾಥ ಇವರ ಲೇಖನಿಯೊಳಗಿಂದ ಹನ್ನೊಂದು ವರ್ಷ ಎಡೆಬಿಡದೆ ಹೊರಟು ಕರ್ನಾಟಕದ ದೃಷ್ಟಿಗಳನ್ನು ತನ್ನ ಕಡೆಗೆ ಎಳೆದುಕೊಂಡಿದ್ದ ಲೇಖ ಪರಂಪರೆಗಳನ್ನು ಗರ್ಭೀಕರಿಸಿಕೊಂಡಿದ್ದ ಚಂದ್ರಿಕೆಯನ್ನು ತನ್ನದೆಂದು ಹೇಳುವವನು ಅದಾವನವನು? ಗಳಗನಾಥರ ಲೇಖನಗಳಿಲ್ಲದ ಚಂದ್ರಿಕೆಯು ಗಳಗನಾಥರದೆ? ಈಗ ಹೊರಟಿದ್ದ ಚಂದ್ರಿಕೆಯು ಗಳಗನಾಥರದೇ ಆಗಿದ್ದರೆ, ಅದು ತನ್ನ ಜನ್ಮದಾತೃವನ್ನೂ, ಪರಿಪೋಷಕನನ್ನೂ, ಉದ್ಧಾರ ಕರ್ತೃವನ್ನೂ ಮನಸೋಕ್ತವಾಗಿ ನಿಂದಿಸುವ ಲೇಖವನ್ನೇ ಮಂಗಲಾಚರಣದ ಪ್ರಥಮ ಲೇಖವಾಗಿ ಇಟ್ಟುಕೊಂಡು ತೇಜೋಹೀನವಾಗಿಯೂ, ಬೀಭತ್ಸವಾಗಿಯೂ ಹೊರಡುಬಹುದೆ? ದಿಗಂತ ಕೀರ್ತಿಯನ್ನು ಪಡೆದಿದ್ದ ಗಳಗನಾಥ ಇವರ ಚಂದ್ರಿಕೆಯ ವೈಭವದ ಆಶೆಯಿಂದ ಚಂದ್ರಿಕಾ ವೇಷಧಾರಿ ಯಾದ ಕಾಮುಕ ರಕ್ಕಸಿಯು ಉತ್ಪನ್ನವಾದರೆ, ಆಕೆಗೂ ಗಳಗನಾಥ ಇವರ ಚಂದ್ರಿಕೆಗೂ ಸಂಬಂಧವೇನು? ಗಳಗನಾಥ ಇವರ ಚಂದ್ರಿಕೆಯು "ಗಳಗನಾಥ ಸುರಸ ಗ್ರಂಥಮಾಲೆ" ಯೆಂಬ ನಾಮವನ್ನು ಧರಿಸಿ, ತನ್ನ ನೂಪುರಗಳ ಮಂಜುಳ ಧ್ವನಿಯು ದಿಕ್ಕು ದಿಕ್ಕುಗಳಲ್ಲಿ ಇಂಪಾಗಿ ಕೇಳುತ್ತಿರಲು ಶ್ರೀಗುರು ಕೃಪಾಛತ್ರಚ್ಛಾಯೆಯಲ್ಲಿ ತನ್ನ ಮನೋಹರ ರೂಪದಿಂದ

ಕರ್ನಾಟಕ ದೊಳಗೆ ಇನ್ನು ಹ್ಯಾಗೆ ನರ್ತನ ಮಾಡುವಳೆಂಬದನ್ನು ನಾವೆಲ್ಲರು ಅನುಭವ ದಿಂದ ಮನಗಾಣಬಹುದು!

೩) ಒಟ್ಟಿಗೆ ನಾವು ಸ್ಪಷ್ಟವಾಗಿ ಕನ್ನಡಿಗರಿಗೆ ತಿಳಿಸುವೆವೇನೆಂದರೆ—ಅಗಡಿಯ ಚಂದ್ರಿಕೆಯು ನಮ್ಮ ಚಂದ್ರಿಕೆಯಲ್ಲ; ನಮ್ಮ ಚಂದ್ರಿಕೆಯು 'ಸುರಸ ಗ್ರಂಥಮಾಲೆ'ಯ ರೂಪದಿಂದ ಪ್ರಕಟವಾಗಿರುವಳೆಂಬದನ್ನು ಚನ್ನಾಗಿ ನೆನಪಿನಲ್ಲಿಡಬೇಕು. ವೃದ್ಧಾಪ್ಯದ ಪಾವಟಿಗೆಗಳನ್ನು ಹತ್ತತೊಡಗಿರುವ ನಮಗೆ, ಲೇಖನ ವ್ಯವಸಾಯವು ಊರಗೋಲಿನಂತೆ ಆಧಾರವಾಗಿರುವದು. ಆ ಊರುಗೋಲಿಲ್ಲದೆ ನಮ್ಮ ಆಯುರ್ಮರ್ಯಾದಾಕ್ರಮಣವು ನಿರಾತಂಕವಾಗಿಯೂ, ಆನಂದದಾಯಕವಾಗಿಯೂ ಸಾಗದು. ಈ ಪರಿಕ್ರಮಣದಲ್ಲಿ ಕನ್ನಡಿಗರಿಂದ ಪ್ರಾಪ್ತವಾಗುವ ಪ್ರತಿಫಲರೂಪಧನವನ್ನು ನಮ್ಮ ಶ್ರೀ ಗುರುವಿನ ಪಾಠಶಾಲೆಗೆ ವಿನಿಯೋಗಿಸಿ ಯಥಾಶಕ್ತಿ ಗುರುಸೇವೆಯನ್ನು ಮಾಡುವದು ನಮ್ಮ ಕೃತಸಂಕಲ್ಪವಾಗಿರುತ್ತದೆ. ಪ್ರೀಯ ಕನ್ನಡಿಗರೇ, ನಾವು ನಮ್ಮ ಕೆಲಸಬೊಗಸೆಗಳನ್ನೆಲ್ಲ ಬಿಟ್ಟು ನಿಮ್ಮ ಸೇವೆಗಾಗಿಯೇ, ನಿಂತಿರುತ್ತೇವೆ. ಮತ್ತು ಹನ್ನೊಂದು ವರ್ಷ ನಿಮ್ಮನ್ನು ಸೇವಿಸಿ, ನಿಮ್ಮ ಅಭಿರುಚಿಯ ಪರಿಜ್ಞಾನ ವನ್ನೂ, ನಿಮ್ಮ ಕೊಡಗೈಯ ಪ್ರಭಾವವನ್ನು ಅರಿತುಕೊಂಡಿರುತ್ತೇವೆ. ನೀವಾದರೂ ನಮ್ಮ ಲೇಖಗಳ ಪಡಿಕಟ್ಟನ್ನು ಅರಿತಿರುತ್ತೀರಿ. ಇನ್ನು ಮೇಲೆ ನಮ್ಮಿಬ್ಬರ ಪ್ರೇಮ–ವಿಶ್ವಾಸಗಳಿಂದ ಕನ್ನಡದ ವಿವಿಧ ಗ್ರಂಥಗಳು ಹೊರಬೀಳುವುದು ಹಿತಕರವಲ್ಲವೆ? ಕನ್ನಡಿಗರ ಅಭಿಮಾನವನ್ನು ಹೆಚ್ಚಿಸುವಂಥ ಕನ್ನಡ ವೀರರ ಕಾದಂಬರಿಗಳು, ಕನ್ನಡ ಸತ್ಪುರುಷರ ಚರಿತ್ರಗಳು, ಕನ್ನಡ ತತ್ವಜ್ಞಾನಿಗಳ ವೃತ್ತಾಂತಗಳು, ಕನ್ನಡ ಶಾಸ್ತ್ರಜ್ಞರ ಸುದ್ದಿಗಳು ಮೊದಲಾದ ವಿಷಯಗಳನ್ನು ಕುರಿತು ಬರೆದ ಗ್ರಂಥಗಳ ಕೊರತೆಯು ವಿಶೇಷವಾಗಿರುವ ದೆಂಬದನ್ನು ನಾವು ಬಲ್ಲೆವು. ಚಾಲುಕ್ಯರು, ಕದಂಬರು, ಹೊಯಸಾಲರು, ವಿಜಯನಗರದವರು ಮೊದಲಾದವರ ದಿವ್ಯ ಚಾರಿತ್ರ್ಯ ಗಳಾದರೂ ನಮ್ಮ ಕಣ್ಣಿಗೆ ಕಟ್ಟಿರುತ್ತವೆ; ಆದರೆ ಬಹುದಿವಸದ ಹಿಂದಿನ ಆ ನಮ್ಮ ಪೂರ್ವಜರ ದಿವ್ಯ ಚಾರಿತ್ರ್ಯಗಳ ಮೇಲೆ ರಜಪೂತರ, ಮುಸಲ್ಮಾನರ, ಮರಾಟರ ಉಜ್ವಲ ಚಾರಿತ್ರ್ಯಗಳ ರಾಶಿಗೆ ರಾಶಿಯು ಬಿದ್ದು, ನಮ್ಮವರ ಆ ದಿವ್ಯ ಚಾರಿತ್ರ್ಯಗಳು ಮರೆಯಾಗಿವೆ; ಈ ಪರಕೀಯರ ಚರಿತ್ರಗಳ ಅಬ್ಬರದಲ್ಲಿ ಕನ್ನಡಿಗರೆನಿಸಿಕೊಳ್ಳುವ ನಮ್ಮ ಸ್ವಾಭಿಮಾನವು ನಷ್ಟವಾಗಿ, ಕನ್ನಡ ಗ್ರಂಥಗಳನ್ನು, ಕನ್ನಡ ಗ್ರಂಥಕಾರರನ್ನು, ಕನ್ನಡ ನುಡಿಯನ್ನು, ಕನ್ನಡ ಬರೆಯುವದನ್ನು ಕೂಡ ನಾವು ಬಿಟ್ಟುಕೊಟ್ಟು, ಭ್ರಾಂತಿಯಿಂದ ಅನ್ಯಭಾಷೆಗಳ ಬೆನ್ನುಹತ್ತಿ, ಅದನ್ನೇ ಪ್ರತಿಷ್ಠೆಯ ಲಕ್ಷಣವೆಂದು ಭಾವಿಸುತ್ತಲಿದ್ದೆವು !

ಇನ್ನು ಮೇಲೆ ಮೊದಲು ವಿಜಯನಗರದ ಪ್ರತಿಷ್ಠಾಪನೆಯ ಕಾದಂಬರಿಯನ್ನು ಬರೆದು, ಆ ರಾಜ್ಯಕ್ಕೆ ಸಂಬಂಧಿಸಿದ ಕೆಲವು ಸುರಸ ಕಾದಂಬರಿಗಳನ್ನು ಬರೆಯುವದಾದ ಮೇಲೆ ಚಾಲುಕ್ಯರೇ ಮೊದಲಾದ ಪ್ರಸಿದ್ಧ ಕನ್ನಡ ರಾಜರ ವಂಶಗಳಲ್ಲಿಯ ಉಜ್ವಲ ಪ್ರಸಂಗಗಳನ್ನು

ಕುರಿತು ಕಾದಂಬರಿಗಳನ್ನು ಬರೆಯಬೇಕೆಂದು ಸಂಕಲ್ಪ ಮಾಡಿರುವೆವು. ಈ ಕೆಲಸಕ್ಕೆ ಸಾಧನ ಸಾಮಗ್ರಿಗಳು ಕಡಿಮೆಯಾಗಿರುವದರಿಂದ ಕನ್ನಡಿಗರು ಅವಸರ ಮಾಡಿದರೆ ಕೆಲಸವಾಗದು. ಸಂಬಾಳಿಸಿ ನಮ್ಮಿಂದ ಕೆಲಸ ಮಾಡಿಸಿಕೊಳ್ಳಬೇಕು. ಇದೇ ನನ್ನ ಕಟ್ಟಿಕಡೆಯ ಪ್ರಾರ್ಥನೆಯು.

ಸುರಸ ಗ್ರಂಥಮಾಲಾ
ಆಫೀಸ, ಹಾವೇರಿ
೧೬-೯-೧೮

ಕನ್ನಡಿಗರ ಸೇವಕ,
**ವೇ. ತಿ. ಕುಲಕರ್ಣಿ ಗಳಗನಾಥ**
ಶ್ರೀ ಶೇಷಾಚಲ ಸಂಸ್ಕೃತ ಪಾಠಶಾಲಾ ಚಾಲಕ

## ಖಾನನ ಉಬ್ಬಾಳುತನ !

ಶಿವಾಜಿಯು ಸುಲ್ತಾನಗಡವನ್ನು ತಕ್ಕೊಂಡ ವೃತ್ತವು, ನಮ್ಮ ''ಈಶ್ವರೀ ಸೂತ್ರ''ವೆಂಬ ಕಾದಂಬರಿಯನ್ನು ಓದಿದ ವಾಚಕರಿಗೆ ಗೊತ್ತಾಗಿರಬಹುದು. ಓದದೇ ಇದ್ದವರು ಅವಶ್ಯವಾಗಿ ಆ ಸುರಸ ಕಾದಂಬರಿಯನ್ನು ಓದಬೇಕೆಂದು ನಾವು ಸೂಚಿಸುವೆವು; ಯಾಕಂದರೆ, ಅದರಿಂದ ಮರಾಟರ ಇತಿಹಾಸವು ಸುಸಂಗತವಾಗಿಯೂ, ಸುರಸವಾಗಿಯೂ ತಿಳಿಯಲಿಕ್ಕೆ ಅನುಕೂಲವಾಗುವದು. ತಂದೆಗೆ ಸೇರದೆ ಇದ್ದ ಒಬ್ಬ ಉಡಾಳ ಹುಡುಗನು, ಛತ್ರಪತಿಯೆಂಬ ಬಿರುದನ್ನು, ಔರಂಗಜೇಬ ಬಾದಶಹನಿಂದ ಸಂಪಾದಿಸಿ, ರಾಯಗಡದಲ್ಲಿ ಪಟ್ಟಾಭಿಷಿಕ್ತನಾಗಿ, ಮರಾಟರ ರಾಜ್ಯವನ್ನು ಸ್ಥಾಪಿಸಿದ್ದು ಕೌತುಕದ ಸಂಗತಿಯಷ್ಟೇ ಅಲ್ಲ ಆಶ್ಚರ್ಯಪಡತಕ್ಕ ಸಂಗತಿಯೂ ಆಗಿರುವದು. ಶಿವಾಜಿಯ ಅಭ್ಯುದಯವನ್ನು ಕುಗ್ಗಿಸಲಿಕ್ಕೆ ವಿಜಾಪುರದ ಬಾದಶಹನೂ, ದಿಲ್ಲಿಯ ಬಾದಶಹನೂ ಕೂಡಿಯೇ ಪ್ರಯತ್ನಮಾಡಿದರು; ಆದರೆ ಅವರಿಬ್ಬರ ಪ್ರಯತ್ನವನ್ನು ಬಗ್ಗುಬಡಿದು, ಶಿವಾಜಿಯು ತನ್ನ ಸ್ವರಾಜ್ಯ ಸ್ಥಾಪನೆಯ ಕಾರ್ಯವನ್ನು ನೆರವೇರಿಸಿದನು. ಶಿವಾಜಿಗೆ ವಿಜಾಪುರದ ಬಾದಶಹನು ನೆರೆಯ ಪ್ರಬಲ ಶತ್ರುವಾಗಿದ್ದನು. ಮೊದಮೊದಲು ಆ ಬಾದಶಹನು ಶಿವಾಜಿಯನ್ನು ಕ್ಷುದ್ರನೆಂದು ತಿಳಿದು ಲೆಕ್ಕಿಸಲಿಲ್ಲ, ಶಿವಾಜಿಯ ತಂದೆಯಾದ ಶಹಾಜಿರಾಜನು ಬಾದಶಹನ ನೌಕರನಾಗಿದ್ದನು. ಶಹಾಜಿಗೆ ಹೇಳಿ, ಆತನ ತುಂಟ ಹುಡುಗನ ಸದ್ದು ಅಡಗಿಸಬಹುದೆಂದು ಬಾದಶಹನು ತಿಳಿದಿದ್ದನು; ಆದರೆ ಮಗನ ಮುಂದೆ ತಂದೆಯ ಆಟವೂ ನಡೆಯದಾಯಿತು. ಮೊದಮೊದಲು ಬಾದಶಹನು ಶಿವಾಜಿಯ ವಿಷಯವಾಗಿ ವಿಪರೀತ ಭಾವವನ್ನು ತಾಳಿದನು; ತಂದೆಯು ಅಂತರಂಗದಲ್ಲಿ ಮಗನಿಗೆ ಅನುಕೂಲನಾಗಿರುವನೆಂಬ ಸಂಶಯವೂ ಬಾದಶಹನನ್ನು ಬಾಧಿಸುತ್ತಲಿತ್ತು ಮುಂದೆ ಬಾದಶಹನ ಈ ಸಂಶಯದ ನಿವಾರಣವಾಗಿ, ಶಿವಾಜಿಯು ತನ್ನ ತಂದೆಯನ್ನು ಮೀರಿರುವನೆಂಬ ನಂಬಿಗೆಯು ಬಾದಶಹನಿಗಾಯಿತು.

ಬರಬರುತ್ತ ಶಿವಾಜಿಯು ಬಾದಶಹನನ್ನು ಪ್ರಸಿದ್ಧವಾಗಿ ಮೀರಿನಿಂತು, ಪಾರುಪತ್ಯ ಮಾಡಲಿಕ್ಕೆಂದು ಬಂದ ವಿಜಾಪುರದ ಒಬ್ಬೊಬ್ಬ ಸರದಾರರನ್ನು ಹಣಿಯಹತ್ತಿದ್ದನು. ಇದನ್ನು ನೋಡಿ ಬಾದಶಹನ ಕಣ್ಣುಗಳು ಚೆನ್ನಾಗಿ ತೆರೆದವು. ಸುಲ್ತಾನಗಡವು ಮೊದಲಾಗಿ ಬಾದಶಹನ ವಶದಲ್ಲಿದ್ದ ಒಂದೊಂದೇ ಕೋಟೆಗಳು ಕೈವಶವಾಗಹತ್ತಿದವು. ದರ್ಬಾರದಲ್ಲಿ ಶಿವಾಜಿಯ ವಿಜಯದ ಸುದ್ದಿಗಳು ಬಾದಶಹನ ಕಿವಿಗೆ ದಿನಾಲು ಬೀಳಹತ್ತಿದವು. ಇದನ್ನು ನೋಡಿ

ಬಾದಶಹನು ಸೈರಿಸಲಾರದೆ ಒಂದು ದಿನ ದರ್ಬಾರದಲ್ಲಿ ತನ್ನ ಸರದಾರರನ್ನು ಕುರಿತು—''ಈ ಪುಂಡ ಶಿವಾಜಿಯನ್ನು ದಂಡಿಸುವವರು ನಮ್ಮ ದರ್ಬಾರದಲ್ಲಿ ಯಾರೂ ಇಲ್ಲವೇ ಇಲ್ಲವೆ? ಒಬ್ಬ ಸರದಾರನ ಮಗನೆಂದರೇನು? ಅವನ ಪುಂಡಾಟಿಗೆಯೆಷ್ಟು? ಏನೋ ಒಬ್ಬ ಯಃಕಶ್ಚಿತ ಪೋರನೆಂದು ನಾವು ದುರ್ಲಕ್ಷಿಸುತ್ತ ಬಂದದ್ದು ಈ ಮನೆಗೆ ಬಂದಿತು.'' ಎಂದು ನುಡಿಯಲು, ಅಫಜುಲಖಾನನೆಂಬ ಬಲಿಷ್ಠ ಸರದಾರನು ಎದ್ದು ನಿಂತು ಬಾದಶಹನನ್ನು ಕುರಿತು—''ಹಜರತ್, ನಾನು ಶಿವಾಜಿಯನ್ನು ಹಿಡಕೊಂಡು ದರ್ಬಾರಕ್ಕೆ ಎಳತರುವೆನು, ಇಲ್ಲವೆ ಅವನನ್ನು ಹೊಡಕೊಂಡಾದರೂ ಬರುವೆನು. ಗುಡ್ಡಗಾಡಿನ ಇಲಿಯನ್ನು ಹಿಡಿಯಲಿಕ್ಕೆ ಅಥವಾ ಹೊಡೆಯಲಿಕ್ಕೆ ಅಷ್ಟೊಂದು ವಿಚಾರವೇಕೆ? ನನ್ನ ಮುಂದೆ ಶಿವಾಜಿಯು ಎಷ್ಟರವನು? ಅವನ ಪುಂಡಾಟಿಕೆಗಳು ಯಾವ ಗಿಡದ ತೊಪ್ಪಲ?'' ಎಂದು ಗರ್ವದಿಂದ ನುಡಿದು ಶಿವಾಜಿಯ ಮೇಲೆ ದಂಡೆತ್ತಿ ಹೋಗಲು ಬಾದಶಹನ ಅಪ್ಪಣೆಯನ್ನು ಪಡೆದನು.

ಅಫಜುಲಖಾನನು ಸಾಮಾನ್ಯನಲ್ಲ; ಆಗಿನ ವಿಜಾಪುರದ ದರ್ಬಾರದೊಳಗಿನ ಸರದಾರರಲ್ಲಿ ಆತನು ಅತ್ಯಂತ ಬಲಿಷ್ಠನಾಗಿದ್ದನು. ಆತನ ಆಕೃತಿಯು ಭವ್ಯವಾದದ್ದು, ಶರೀರ ಸಾಮರ್ಥ್ಯವು ಅತುಲವಾದದ್ದು. ನಾವು ಬಹು ಸಮರ್ಥರೆಂದು ಹೆಮ್ಮೆಪಡುವವರು ಕೂಡ ಅಫಜುಲಖಾನನ ಗೊಡವಿಗೆ ಹೋಗುತ್ತಿದ್ದಿಲ್ಲ. ಶರೀರ ಬಲದಂತೆ ಸೈನ್ಯದ ಬಲದಿಂದಲೂ ಅಫಜುಲಖಾನನು ಎಲ್ಲರನ್ನು ಮೀರಿದವನಾಗಿದ್ದನು. ಮಧ್ಯಪ್ರಾಯ, ಆ ಮಧ್ಯಪ್ರಾಯಕ್ಕೆ ಒಪ್ಪುವ ಭವ್ಯ ಶರೀರ, ಆ ಭವ್ಯ ಶರೀರವನ್ನು ಶೃಂಗರಿಸುವ ಅತುಲಬಲ, ಆ ಅತುಲ ಬಲವನ್ನು ಹೆಚ್ಚಿಸುವ ಅಪಾರ ಸೈನ್ಯ; ಇವೆಲ್ಲವುಗಳ ಅನುಕೂಲವಿದ್ದ ಬಳಿಕ ಅಫಜುಲಖಾನನು ಗರ್ವಿಷ್ಠನಾಗಿದ್ದರಲ್ಲಿ ಆಶ್ಚರ್ಯವೇನು? ಅತಿ ಗರ್ವವು ರಾವಣನ ನಾಶಕ್ಕೆ ಕಾರಣವಾದಂತೆ ಅಫಜುಲಖಾನನ ಅತಿ ಗರ್ವವು ಅವನ ನಾಶಕ್ಕೆ ಕಾರಣವಾಯಿತೆಂದು ಹೇಳಬಹುದು. ಆ ಗರ್ವಿಷ್ಠಖಾನನು ಶಿವಾಜಿಯನ್ನು ಕ್ಷುದ್ರ ಜಂತುವೆಂದು ಭಾವಿಸುತ್ತಿದ್ದನು; ಕ್ಷುದ್ರ ಜಂತುವನ್ನು ಹಿಚಿಕಿ ಕೊಲ್ಲುವಂತೆ, ಶಿವಾಜಿಯನ್ನು ಹಿಚಿಕಿ ಕೊಲ್ಲಬಹುದೆಂದು ಆತನು ನಂಬಿದ್ದನು. ಶಿವಾಜಿಯ ಪ್ರಕರಣವು ಆತನಿಗೆ ತೀರ ಕ್ಷುದ್ರವಾಗಿ ತೋರುತ್ತಿತ್ತು. ಹಾಹಾ ಅನ್ನುವದರೊಳಗೆ ನಾನು ಶಿವಾಜಿಯನ್ನು ಹಿಡತರುವೆನೆಂದು ಹೆಮ್ಮೆಯಿಂದ ಆತನು ವಿಜಾಪುರದಿಂದ ಹೊರಟನು. ಹಾದಿಯಲ್ಲಿ ಕಂಡ ದೇವಾಲಯಗಳೊಳಗಿನ ಮೂರ್ತಿಯನ್ನು ಒಡೆದು, ದೇವಸ್ಥಾನಗಳನ್ನು ಮಸೀದೆಗಳಾಗಿ ಮಾಡಹತ್ತಿದನು. ಇಷ್ಟರಿಂದ ಖಾನನು ಸಮಾಧಾನವಾಗಲಿಲ್ಲ. ತುಳಜಾಪುರದ ಭವಾನಿಯ ಮೂರ್ತಿಯನ್ನೂ, ಪಂಢರಪುರದ ವಿಠೋಬ ಮೂರ್ತಿಯನ್ನೂ ಒಡೆದು ಪುಡಿಮಾಡಿ, ಅವುಗಳ ಸ್ಥಳದಲ್ಲಿ ಮಸೀದೆಗಳನ್ನು ಕಟ್ಟಿಸಬೇಕೆಂದು ಆತನು ಇಚ್ಛಿಸುತ್ತಿದ್ದನು; ಆದರೆ ಆತನ ಈ ಇಚ್ಛೆಯು ಎಂದೂ ಪೂರ್ಣವಾಗಲಿಲ್ಲ. ಆತನು ತುಳಜಾಪುರಕ್ಕೆ ಬರುವದರೊಳಗಾಗಿ ಪೂಜಾರರು ಮೂರ್ತಿಯು ಸ್ಥಳಾಂತರ ಮಾಡಿದ್ದರು. ಅದರಂತೆ, ಪಂಢರಪುರದ ಬಡವೆಯರೂ ಮೂರ್ತಿಯನ್ನು ಎರಡನೆಯ ಕಡೆಗೆ ಕಾಣಿಸಿದ್ದರು.

ಹೀಗೆ ಅಫಜುಲಖಾನನು ಮದೋನ್ಮತ್ತನಾಗಿ ಮನಬಂದಂತೆ ದೇವಸ್ಥಾನಗಳನ್ನು ಭ್ರಷ್ಟ ಗೊಳಿಸುತ್ತ, ಹಿಂದೂ ಜನರನ್ನು ಗೋಳಾಡಿಸುತ್ತ ಪುಣೆಯ ಕಡೆಗೆ ಸಾಗಿದನು. ಪುಣೆಯ ಬಳಿಯಲ್ಲಿರುವ ರಾಯಗಡದಲ್ಲಿ ಶಿವಾಜಿಯು ಇರುವನೆಂತಲೂ, ತನ್ನ ಪ್ರಚಂಡ ಸೈನ್ಯದೊಡನೆ ಬೈಲಲ್ಲಿ ಆತನನ್ನು ಗಂಟುಬಿದ್ದು ಧೂಳಹಾರಿಸಿ ಕ್ಷಣದಲ್ಲಿ ಆತನನ್ನು ಸೆರೆಹಿಡಿಯ ಬಹುದೆಂತಲೂ ಆ ಉನ್ಮತ್ತಖಾನನು ಉಬ್ಬಿದನು; ಆದರೆ ಶಿವಾಜಿಯು ಇಂಥ ಖಾನಗೀನರಿಗೆ ಸಹಜವಾಗಿ ಹಣೆಯುವಂಥ ಅರಿವು ಗೇಡಿಯಿದ್ದಿಲ್ಲ, ತನ್ನ ಪುಂಡಾಟಿಕೆಯು ಮಿತಿಮೀರಿದ್ದರಿಂದ, ವಿಜಾಪುರದ ಬಲಿಷ್ಠ ಬಾದಶಹನು ತನ್ನ ಶಾಸನವಾಡದೆ ಬಿಡನೆಂಬ ಎಚ್ಚರದಿಂದ ಆತನು ಯಾವಾಗಲೂ ರಾಯಗಡದಲ್ಲಿ ಇರದೆ, ದುರ್ಗದಿಂದ ದುರ್ಗಕ್ಕೆ ಅಲೆದಾಡುತ್ತಲಿದ್ದನು. ಶಿವಾಜಿಯು ಇಂಥ ದುರ್ಗದಲ್ಲಿಯೇ ಇರುವನೆಂಬುದನ್ನೂ, ಆತನು ಇಂಥ ತಂತ್ರವನ್ನೇ ಒಡ್ಡುವನೆಂಬುದನ್ನೂ ನಿರ್ಧರಿಸುವದು ಯಾವ ಮುಸಲ್ಮಾನ ಸರದಾರರಿಗೂ ಶಕ್ಯವಾಗಿದ್ದಿಲ್ಲ, ಶಿವಾಜಿಯು ಶಕ್ತಿವಂತನಿದ್ದಂತೆ ಯುಕ್ತಿವಂತನೂ ಆಗಿದ್ದನು. ಆದ್ದರಿಂದಲೇ ಇಬ್ಬರು ಬಲಿಷ್ಠ ಬಾದಶಹರ ಉಬ್ಬಾಳುತನಕ್ಕೆ ಈಡಾಗಿ ನುಗ್ಗಾಗದೆ, ಶ್ರಮದಿಂದ ಬೆಳವಣಿಗೆಯನ್ನು ಹೊಂದಿ ಬಲಿಷ್ಠನಾಗುತ್ತ ನಡೆದಿದ್ದನು. ಆತನ ಮಸ್ತಕದ ಮೇಲೆ ಭವಾನಿಯ ವರದಹಸ್ತವು ಅಬಾಧಿತವಾಗಿ ಇತ್ತು ಶ್ರೀ ಸಮರ್ಥ ರಾಮದಾಸರಂಥ ಮಹಾತ್ಮರ ಪರಮಾನುಗ್ರಹಕ್ಕೆ ಆತನು ಪಾತ್ರನಾಗಿದ್ದನು. ಹೀಗೆ ದೈವಬಲ–ಗುರುಬಲ ಗಳಿಂದ ಪರಿಪುಷ್ಟನಾಗಿದ್ದ ಶಿವಬಾನು ತನ್ನ ವೈರಿಗಳನ್ನು ದಂಗುಬಡಿದು, ಅವರ ಕೆಚ್ಚೆದೆಗಳನ್ನು ಒಡೆದು ನೀರು ಮಾಡಿ, ತನ್ನ ಅಳವಿನೊಳಗೆ ಸಿಕ್ಕವರನ್ನು ನೆಲಕ್ಕೊರಿಸಿ ನುಗ್ಗು ಮಾಡಿದನು. ಆದ್ದರಿಂದ ಮೊಗಲ ಸರದಾರರು ಶಿವಾಜಿಯ ವಿರುದ್ಧವಾಗಿ ಹೊರಗೆ ಎಷ್ಟು ಉಬ್ಬಾಳುತನವನ್ನು ತೋರಿಸಿದರೂ, ಶಿವಾಜಿಯ ಯುಕ್ತಿಪ್ರಯುಕ್ತಿಗಳ ಇರುಕಿನೊಳಗೆ ಸಿಕ್ಕು ಎಲ್ಲಿ ಜಿಬ್ಬಿಯಾಗುವೆವೋ ಎಂದು ಅಂತರಂಗದಲ್ಲಿ ಬಹಳವಾಗಿ ಅಂಜುತ್ತಲಿದ್ದರು.

ಇಂಥ ಯಾವ ಅಂಜಿಕೆಗೂ ಸೊಪ್ಪು ಹಾಕದವನಂತೆ ಅಫಜುಲಖಾನನು ಪುಣೆಯ ಕಡೆಗೆ ಸಾಗಿರಲು, ಒಬ್ಬ ತರುಣ ಮಹಾರಾಷ್ಟ್ರ ಸರದಾರನು ಅಶ್ವಾರೂಢನಾಗಿ ಒತ್ತರದಿಂದ ರಾಯಗಡದ ಕಡೆಗೆ ಸಾಗಿದ್ದನು. ಆತನು ಇಪ್ಪತ್ತೈದು ವರ್ಷದ ತರುಣನಿದ್ದು, ಸಾದಗಪ್ಪಿನ ಮೇಲಿದ್ದನು. ಅದರಲ್ಲಿ ಮಧ್ಯಾಹ್ನದ ಬಿಸಿಲಿನಿಂದ ಅವನ ಕೃಷ್ಣವರ್ಣಕ್ಕೆ ಕಳೆಯೇರಿ ದಂತಾಗಿತ್ತು, ಹಸಿವೆ ನೀರಡಿಕೆಗಳ ಪರಿವೆಯಿಲ್ಲದೆ ಆತನು ಒಂದೇಸವನೆ ಮಾರ್ಗಕ್ರಮಣ ಮಾಡಿದ್ದರಿಂದ ಮೋರೆಯು ಬಾಡಿದಂತೆ ತೋರುತ್ತಿತ್ತು, ಸರ್ವಾಂಗದಲ್ಲಿ ಧೂಳಿಯು ಮುಸುಕಿತ್ತು; ಆದರೂ ಆತನ ತೇಜಃಪುಂಜವಾದ ಚಂಚಲ ನೇತ್ರಗಳ ಕಾಂತಿಯಿಂದ ಆತನಲ್ಲಿಯ ಮಾಲಿನ್ಯವೆಲ್ಲ ಅಳಿದುಹೋಗಿ, ಮೂರು ಲೋಕಗಳನ್ನು ಜಯಿಸುವ ಉಬ್ಬಾಳುತನವು ಆತನಲ್ಲಿ ಒಡೆದು ಕಾಣುತ್ತಿತ್ತು, ಆತನು ಬರ್ಚಿ, ಖಡ್ಗ, ಧನಸ್ಸುಗಳೆಂಬ ಮೂರು ಶಸ್ತ್ರಗಳಿಂದ ಸಜ್ಜಾಗಿದ್ದನು. ಆತನ ಕುದುರೆಯು ತನಗಾಗಿದ್ದ ಶ್ರಮವನ್ನು ಎಣಿಸದೆ, ಗಾಂಭೀರ್ಯದಿಂದ ಸಾಗಿತ್ತು, ಅದರ ಮೇಲೆ ನಮ್ಮ ತರುಣ ಸರದಾರನು ಚಿತ್ರದಲ್ಲಿ

ಬರೆಯುವಂತೆ ಐಟಿನಿಂದ ಕುಳಿತುಕೊಂಡಿದ್ದನು. ಆತನ ಮನಸ್ಸಿನಲ್ಲಿ ನಾನಾ ಪ್ರಕಾರದ ವಿಚಾರಗಳು ಉತ್ಪನ್ನವಾಗಿದ್ದುವು. ಆತನು ತನ್ನೊಳಗೆ—''ಅಫಜುಲಖಾನನು ಅಕಸ್ಮಾತ್ತಾಗಿ ಮಹಾರಾಜರನ್ನು ಮುತ್ತಿದರೆ, ಅವರು ಮೈಮರೆತಿರ ಬಾರದೆಂದು ನಾನು ಇಷ್ಟು ಒತ್ತರದಿಂದ ಸುದ್ದಿಯನ್ನು ಹೇಳಲಿಕ್ಕೆ ಬಂದೆನು. ಖಾನನು ಸ್ವಲ್ಪವಾದರೂ ವಿಲಂಬ ಮಾಡದೆ ಸಾಗಿಬರುತ್ತಿರುವನು. ಆತನು ಅತ್ಯಂತ ಬಲಿಷ್ಠನೆಂಬದೇನೋ ನಿಜ; ಆದರೆ ಪ್ರತ್ಯಕ್ಷ ಶಿವಾವತಾರವಾಗಿದ್ದ ನಮ್ಮ ಮಹಾರಾಜರಿಗೆ ಆತನು ಈಡಾಗಲಾರ ನೆಂಬುದು ನಿಶ್ಚಯವು. ಇಂಥ ಕಠಿಣ ಪ್ರಸಂಗದಲ್ಲಿಯೇ ನಮ್ಮ ಸ್ವಾಮಿಭಕ್ತಿಯು ಪ್ರಕಟವಾಗಲಿಕ್ಕೆ ಆಸ್ಪದವು ದೊರೆಯುತ್ತದೆ! ನನ್ನನ್ನು ಮಹಾರಾಜರು ಖಾನನ ಮೇಲೆ ಬಿಟ್ಟು ನೋಡಲಿ, ಮಗ್ಗಲು ಮುರಿಯುವೆನು. ಮಹಾರಾಜರು ಚಿಕ್ಕಂದಿನಿಂದ ನನ್ನ ಸಂರಕ್ಷಣ ಮಾಡಿರುವರು. ಅವರಿಗೊದಗಿದ ಇಂಥ ಕಠಿಣ ಪ್ರಸಂಗಗಳಲ್ಲಿ ನಮ್ಮಂಥವರ ಉಪಯೋಗವಾದರೆ, ನಮ್ಮನ್ನು ಸಾಕಿ ಸಲಹಿದ್ದು ಸಾರ್ಥಕವಾಗುವದು! ಮಹಾರಾಜರೇನು ತಮ್ಮ ಹೆಂಡಿರು–ಮಕ್ಕಳ ಸಲುವಾಗಿ ಪೇಚಾಡುವರೆ? ಸ್ವಧರ್ಮ–ಸ್ವರಾಜ್ಯಗಳ ರಕ್ಷಣಕ್ಕಾಗಿ ಅವರು ಒಂದೇಸವನೆ ಸುಯಿಯುತ್ತಿರುವರು. ಇಂಥ ದಿವ್ಯವಾದ ವಿಭೂತಿಯ ಸನ್ನಿಧಿಯಲ್ಲಿದ್ದವರಿಗೇ ಪರೋಪಕಾರವು ಅಲ್ಪ ಸ್ವಲ್ಪ ಘಟಿಸಿದರೆ ಘಟಿಸಬೇಕು.''

ಈ ಮೇರೆಗೆ ನಮ್ಮ ತರುಣ ಸರದಾರನು ಆಲೋಚಿಸುತ್ತ ರಾಯಗಡವನ್ನೇರಿ ಹೋದನು. ಆಗ ಮಹಾರಾಜರ ಸವಾರಿಯು ಅಲ್ಲಿಯೇ ಇತ್ತು ರೀತಿಯಂತೆ ಸರದಾರನು ತಾನು ಬಂದ ವರ್ತಮಾನವನ್ನು ಮಹಾರಾಜರಿಗೆ ತಿಳಿಸಲು, ದರ್ಶನಕ್ಕೆ ಬರುವದಕ್ಕಾಗಿ ಮಹಾರಾಜರಿಂದ ಅಪ್ಪಣೆಯು ದೊರೆಯಿತು. ಸರದಾರನು ಒಳಗೆ ಹೋಗಿ ಬಹು ವಿನಯದಿಂದ ಬಾಗಿ ಮಹಾರಾಜರಿಗೆ ರಾಮರಾಮ ಮಾಡಿ ಕೈಜೋಡಿಸಿ ನಿಂತುಕೊಂಡನು. ಆಗ ಮಹಾರಾಜರ ಬಳಿಯಲ್ಲಿ ಅವರ ನಿತ್ಯದ ಪರಿವಾರದ ಜನರಲ್ಲಿ ಕೆಲವರು ತಮ್ಮ ತಮ್ಮ ಸ್ಥಳದಲ್ಲಿ ಕುಳಿತುಕೊಂಡಿದ್ದರು, ಕೆಲವರು ನಿಂತುಕೊಂಡಿದ್ದರು. ಜೀಜಾಬಾಯಿ ಸಾಹೇಬರು ಮಹಾರಾಜರ ಬಳಿಯಲ್ಲಿಯೇ ಕುಳಿತುಕೊಂಡಿದ್ದರು. ಅವರು ಆ ಸರದಾರರನ್ನು ದಿಟ್ಟಿಸಿ ನೋಡಿ ಮುಗುಳುನಗೆ ನಕ್ಕು—''ಯಾರು? ಸಾವಳ್ಯಾನೇನು'' ಎಂದು ಕೇಳಲು, ಸರದಾರನು—''ಹೌದು, ಅಪ್ಪನವರೇ, ನಾನು ತಮ್ಮ ಸಾವಳ್ಯಾನು'' ಎಂದು ಉತ್ತರ ಕೊಟ್ಟನು. ಅಷ್ಟರಲ್ಲಿ ಮಹಾರಾಜರು ಆಯೀಸಾಹೇಬ ರವರ ಕಡೆಗೆ ನೋಡಿ ನಗುತ್ತ—''ಆಯೀಸಾಹೇಬ, ಇದೇನು? 'ಸಾವಳ್ಯಾ, ಸಾವಳ್ಯಾ' ಎಂದು ಒಂಟಿ ಹೆಸರಿನಿಂದ ಕರೆಯಬೇಡಿರಿ, 'ಸರ್ಜೇರಾವ' ಎಂದು ಕರೆಯಿರಿ, ಎಂದು ನೀವು ನಮ್ಮೆಲ್ಲರನ್ನು ಆಜ್ಞಾಪಿಸಿದ್ದಿಲ್ಲವೆ?'' ಎಂದು ಕೇಳಲು, ಜೀಜಾಬಾಯಿ ಸಾಹೇಬರು—''ಹೌದು, ಒಂಟಿ ಹೆಸರಿನಿಂದ ಕರೆಯುವುದು ಸರಿಯಲ್ಲ, ನಾನು ಮರೆತೆನು. ಚಿಕ್ಕಂದಿನಿಂದ ಒಂಟಿ ಹೆಸರಿನಿಂದ ಕರೆಕರೆದು ಅಭ್ಯಾಸವಿದ್ದದ್ದರಿಂದ ನನ್ನ ಬಾಯಿಗೆ 'ಸಾವಳ್ಯಾ' ಎಂದೇ ಬರುತ್ತದೆ. ನೀನು ಸುಲ್ತಾನಗಡವನ್ನು ತಕ್ಕೊಂಡು ಬರುವಾಗ ಈತನನ್ನು ಕರಕೊಂಡು ಬಂದೆಯಲ್ಲ; ಆಗ ಈತನು ತೀರ ಸಣ್ಣವನಿದ್ದನು. ಈಗ ಎಷ್ಟು ದೊಡ್ಡವ

ನಾಗಿದ್ದಾನೆ. ಆಗಿನ ಸಾವಳ್ಯಾನ ಮೂರ್ತಿಯು ಈಗಲೂ ನನ್ನ ಕಣ್ಣಿಗೆ ಕಟ್ಟಿರುತ್ತದೆ. ಈಗ ಮೂರು ವರ್ಷಗಳಿಂದ ಈತನು ವಿಜಾಪುರದಲ್ಲಿರುವದರಿಂದ ಈತನನ್ನು ನಾನು ನೋಡಿಯೇ ಇಲ್ಲ. ಯಾಕೆ ಸರ್ಜೇರಾವ, ನಿಮ್ಮ ಮೈಗೆ ರಕ್ತದ ಹನಿಗಳು ಸಿಡಿದಿರುವವಲ್ಲ! ಹಾದಿಯಲ್ಲಿ ಯಾವದಾದರೂ ಬೇಟೆಯನ್ನು ಹೊಡೆದಂತೆ ಕಾಣುತ್ತದೆ. ನೀವು ಸುಮ್ಮನೆಯೆಲ್ಲಿ ಬರುವಿರಿ? ಏನಾದರೂ ಕಿಡಿಗೇಡಿತನ ಮಾಡುವವರೇ ಸರಿ.''

ಜೀಜಾಬಾಯಿ ಸಾಹೇಬರು ಈ ಪರಿಯಾಗಿ ತನ್ನನ್ನು ಆದರಿಸಿದ್ದನ್ನು ನೋಡಿ ಸರ್ಜೇರಾಯನ ಮೈಯುಬ್ಬಿತು. ಆತನು ಅತಿ ವಿನಯದಿಂದ ಜೀಜಾಬಾಯಿಯನ್ನು ಕುರಿತು—''ಬಾಯಿಸಾಹೇಬ, ಅಂಥ ಬೇಟೆಯೇನು ಸಿಕ್ಕಿಲ್ಲ. ಹಾದಿಯಲ್ಲಿ ಎರಡು ಹುಲಿಗಳು ಒಂದಕ್ಕೊಂದು ಕಡಿದಾಡುತ್ತಿದ್ದವು ಅವನ್ನು ನೋಡಿ ನನ್ನ ಕುದುರೆಯು ಮುಂದಕ್ಕೆ ಸಾಗದಾಯಿತು. ಮಹಾರಾಜರಿಗೆ ಅತಿ ಮಹತ್ವದ ಸುದ್ದಿಯನ್ನು ಹೇಳಲಿಕ್ಕೆಂದು ಅವಸರ ದಿಂದ ಹೊರಟು ಬರುತ್ತಿರುವ ನನಗೆ ವಿಘ್ನ ಮಾಡುವದನ್ನು ನೋಡಿ, ನಾನು ಆ ಹುಲಿಗಳನ್ನು ಕೊಂದೆನು. ಮಹಾರಾಜರ, ಹಾಗು ಬಾಯಿಸಾಹೇಬರ ಚರಣದೆಡೆಯಲ್ಲಿ ಹೇಳತಕ್ಕ ಒಂದು ಮಹತ್ವದ ಸುದ್ದಿಯಿರುವದು, ಅನ್ನಲು, ''ಅದೇನು ಮಹತ್ವದ ಸುದ್ದಿಯು'' ಎಂದು ಮಹಾರಾಜರೂ, ಜೀಜಾಬಾಯೀ ಸಾಹೇಬರೂ ಒಮ್ಮೆಲೆ ಕೇಳಿದರು. ಅದಕ್ಕೆ ಸರ್ಜೇರಾಯನು—

ಸರ್ಜೇರಾವ—ಈವರೆಗೆ ಮಾಡಿದ ಯತ್ನವೆಲ್ಲ ವ್ಯರ್ಥವಾದದ್ದರಿಂದ ಬಾದಶಹನು ಅಫಜುಲಖಾನನನ್ನು ಕಳಿಸಿಕೊಟ್ಟಿರುವನು.

ಮಹಾರಾಜರು—(ಆಶ್ಚರ್ಯದಿಂದ) ಯಾರನ್ನು? ಅಫಜುಲಖಾನನನ್ನು ಕಳಿಸಿ ಕೊಟ್ಟಿರುವನೆ?

ಸರ್ಜೇರಾವ—ಹೌದು ಸರಕಾರ. ಖಾನನು ದರ್ಬಾರದಲ್ಲಿ ಪ್ರತಿಜ್ಞೆ ಮಾಡಿರುವನು. ಆತನು ಮಹಾರಾಜರನ್ನು ಹಿಡಕೊಂಡು ಹೋಗಿ ಬಾದಶಹನ ಎದುರಿಗೆ ನಿಲ್ಲಿಸುವನಂತೆ, ಇಲ್ಲವೆ ಮಹಾರಾಜರನ್ನು ಕೊ.........

ಮಹಾರಾಜರು—ಕೊಲ್ಲುವೆನೆಂದು ಪ್ರತಿಜ್ಞೆ ಮಾಡಿರುವನೇನು? ಏನೂ ಚಿಂತೆಯಿಲ್ಲ; ಈವರೆಗೆ ಇಂಥವರು ಎಷ್ಟೋ ಜನರು ಬಂದರು, ಎಷ್ಟೋ ಜನರು ಹೋದರು. ಆತನೂ ಬರಲಿ. ಅಂತು, ಈಗ ಅಫಜುಲಖಾನನು ಬರುವನು? ಎಂದು ಹೊರಡುವನು?

ಸರ್ಜೇರಾವ—ಎಂದು ಹೊರಡುವದೇನು ಸರಕಾರ, ಇಷ್ಟು ಹೊತ್ತಿಗೆ ಖಾನನು ಪಂಡರ ಪುರವನ್ನು ದಾಟಿ ಸಹ ಬಂದಿರಬಹುದು.

ಮಹಾರಾಜರು—ಒಳ್ಳೇದು ಬರಲಿ! ಮತ್ತೇನು ವಿಶೇಷ ಸುದ್ದಿಯು? ಆದರೆ ನಿನ್ನ ಊಟವಾಗಿರುವದೆಯೆ? ಮಾತಿನಲ್ಲಿಯೇ ಹೊತ್ತು ಹೋಯಿತಲ್ಲ!

ಮಹಾರಾಜರ ಈ ಪ್ರಶ್ನೆಗೆ ಸರ್ಜೇರಾಯನು ಉತ್ತರವನ್ನು ಕೊಡಲಿಲ್ಲ. ಮಹಾರಾಜರು ಆತನ ಊಟದ ವ್ಯವಸ್ಥೆಯನ್ನು ಮಾಡಹೇಳಿ, ತಾವು ಮುತ್ಸದ್ದಿಗಳೊಡನೆ

ಆಲೋಚನೆ ಮಾಡತೊಡಗಿದರು. ಮಹಾರಾಜರು ತಮ್ಮ ಗುಪ್ತಚಾರರ ಮುಖದಿಂದ ಸಾಧಾರಣವಾಗಿ ಅಫಜುಲ ಖಾನನು ಬರುವ ಸುದ್ದಿಯನ್ನು ಕೇಳಿದ್ದರು; ಆದರೆ ಆತನು ಇಷ್ಟು ಬೇಗನೆ ಹೊರಟುಬರುವೆನೆಂದು ಅವರು ಭಾವಿಸಿದ್ದಿಲ್ಲ. ಸರ್ಜೇರಾಯನ ಹೇಳಿಕೆಯಿಂದ ಅವರು ನಿಶ್ಚಿತವಾದ ವ್ಯವಸ್ಥೆಯನ್ನು ಬೇಗನೆ ಮಾಡಬೇಕಾಯಿತು. ಅಫಜುಲ ಖಾನನ ಕೀರ್ತಿಯನ್ನು ಮಹಾರಾಜರು ಕೇಳಿದ್ದರು. ಈವರೆಗೆ ಬಂದ ಪ್ರಸಂಗಗಳಿಗಿಂತ ಈಗೊದಗಿದ ಪ್ರಸಂಗವು ಕಠಿಣವಾದದ್ದೆಂದು ಅವರ ಮನಸ್ಸಿಗೆ ಹೊಳೆಯಿತು. ಅವರು ಮಹಾದೂರದರ್ಶಿಗಳು. ಮೇಲಾಗಿ ಜೀಜಾಬಾಯಿ ಯವರಂಥ ಧೀರ–ಗಂಭೀರ ಸ್ವಭಾವದ ಸಾಧ್ವಿಯ ಆಲೋಚನೆಯ ಸಹಾಯವು ಅವರಿಗಿತ್ತು. ಅಂತೇ ಈವರೆಗೆ ಹಲವು ಕುತ್ತುಗಳಿಂದ ಅವರು ಪಾರಾಗಿದ್ದರು.

ಸರ್ಜೇರಾಯನ ಊಟ–ಉಡಿಗೆಗಳಾದವು. ಮಹಾರಾಜರು ಆತನಿಂದ ಕೇಳತಕ್ಕ ಸುದ್ದಿಗಳನ್ನು ಕೇಳಿಕೊಂಡು, ನೀನು ಈಗಲೇ ನೆಟ್ಟಗೆ ವಿಜಾಪುರಕ್ಕೆ ಹೋಗಿ ಅಲ್ಲಿಯೇ ಇದ್ದು, ಅಲ್ಲಿಯ ಸುದ್ದಿಗಳನ್ನು ತಿಳಿಸುತ್ತಿರಬೇಕೆಂದು ಆಜ್ಞಾಪಿಸಿದರು; ಆದರೆ ಮಹಾರಾಜರ ವಿಪತ್ಕಾಲದಲ್ಲಿ ತಾನು ಜೀವದ ಹಂಗುದೊರೆದು ಸಹಾಯಮಾಡಬೇಕೆಂತಲೂ, ಸ್ವಾಮಿ ಕಾರ್ಯದಲ್ಲಿ ದೇಹಪಾತವಾದರೆ ಜನ್ಮದ ಸಾರ್ಥಕತೆಯಾಗುವದೆಂತಲೂ ಎಣಿಕೆ ಹಾಕುತ್ತಿದ್ದ ಸರ್ಜೇರಾಯನಿಗೆ, ಇದರಿಂದ ಸಮಾಧಾನವಾಗಲಿಲ್ಲ. ಮಹಾರಾಜರ ಆಜ್ಞೆಗೆ ವಿರುದ್ಧವಾಗಿ ಚಕಾರ ಶಬ್ದವನ್ನು ನುಡಿಯುವ ಧೈರ್ಯವು ಆತನಿಗಿದ್ದಿಲ್ಲ. ಒಬ್ಬ ಸರ್ಜೇರಾಯನಿಗೇ ಏಕೆ, ಎಂಥ ಎದೆಗಾರನಿಗಾದರೂ ಮಹಾರಾಜರ ವಿರುದ್ಧ ಮಾತಾಡಲಿಕ್ಕೆ ಧೈರ್ಯವಾಗುತ್ತಿದ್ದಿಲ್ಲ. ಅಪ್ಪಣೆಯಂತೆ ಸರ್ಜೇರಾಯನು ವಿಜಾಪುರದ ಹಾದಿಯನ್ನು ಹಿಡಿದನು. ಬರುವಾಗಿದ್ದಷ್ಟು ಆತುರವು ಆತನಿಗೆ ಹೋಗುವಾಗ ಇದ್ದಿಲ್ಲ. ಔದಾಸೀನ್ಯದಿಂದ ಆತನು ಮೆಲ್ಲಗೆ ಕುದುರೆಯನ್ನು ಬಿಟ್ಟಿದ್ದನು. ಹೀಗೆ ಕೆಲಕಾಲ ಮಾರ್ಗವನ್ನು ಕ್ರಮಿಸಿ ಹೋಗುತ್ತಿರಲು, ಎದುರಿನಲ್ಲಿ ಒಂದು ಕುದುರೆಯು ಬೆದರಿ, ತನ್ನ ಮೇಲೆ ಕುಳಿತುಕೊಂಡಿದ್ದ ತರುಣ ಸ್ತ್ರೀಯನ್ನು ಲೆಕ್ಕಿಸದೆ ವಾಯು ವೇಗದಿಂದ ಸಾಗಿಬರುತ್ತಿತ್ತು. ಸರ್ಜೇರಾಯನ ದೃಷ್ಟಿಯು ಭಯಭೀತಳಾದ ಆ ಸ್ತ್ರೀಯಳ ಕಡೆಗೆ ಹೋಯಿತು. ಕುದುರೆಯು ಅಸುಗೊಳ್ಳದೆ ಬಂದಿರುವುದರಿಂದ ಈ ಸ್ತ್ರೀಯು ಬೆದರಿದ್ದಾಳೆ. ಈಗ ನಾನು ಕುದುರೆಯನ್ನು ತರುಬದಿದ್ದರೆ ಈಕೆಯ ಗತಿಯು ನೆಟ್ಟಗಾಗುವದಿಲ್ಲ ಎಂದು ಯೋಚಿಸಿ, ಒಂದು ಕ್ಷಣವಾದರೂ ವಿಲಂಬಮಾಡದೆ ಸರ್ಜೇರಾಯನು ಆ ಸ್ತ್ರೀಯ ಕುದುರೆಯನ್ನು ತರುಬಿದನು. ಕುದುರೆಯು ತಡೆದು ನಿಂತುಕೊಂಡರೂ ಅದು ಲಗಾಮದಲ್ಲಿ ಸರ್ಜೇರಾಯನ ಕೈಹಾಕಗೊಡಲೊಲ್ಲದು. ಅಷ್ಟರಲ್ಲಿ ಆ ಸ್ತ್ರೀಯು ಚಟ್ಟನೆ ಕರುದುರೆಯಿಂದ ಇಳಿದು ಅದರ ಲಗಾಮನ್ನು ಹಿಡಿದು, ಕೂಡಲೆ ಅದನ್ನು ಕುರಿತು—"ಖೋಡಿ, ಒಳ್ಳೇ ಹೊತ್ತಿನಲ್ಲಿ ನನ್ನೊಬ್ಬಳನ್ನೇ ಕಟ್ಟಿಕೊಂಡು ಇತ್ತ ಬಂದೆಯಲ್ಲ, ಅವರ ಗತಿಯೇನಾಗಿರುವ ದೆಂಬುವದರ ಎಚ್ಚರವು ನಿನಗೆ ಉಳಿಯಲೇ ಇಲ್ಲವೆ?" ಎಂದು ನುಡಿದು, ಆಕೆಯು ಸುಮ್ಮನೆ ನಿಂತುಕೊಂಡಳು. ಪರಪುರುಷರ ಮುಂದೆ ಹೀಗೆ ಒಬ್ಬಳೇ ನಿಂತುಕೊಳ್ಳುವ ಪ್ರಸಂಗವು ಆಕೆಗೆ

ಇದೇ ಮೊದಲನೆಯದು. ಆಕೆಯು ಒಮ್ಮೆ ನೆಲವನ್ನು, ಒಮ್ಮೆ ಕುದುರೆಯ ಖುರಗಳನ್ನು ನೋಡುತ್ತ ತಲೆಬಾಗಿ ನಿಂತುಕೊಂಡಿದ್ದಳು. ಪರಪುರುಷರಿಂದ ತನಗಾಗಿದ್ದ ಮಹದುಪಕಾರಕ್ಕಾಗಿ ಕೃತಜ್ಞತೆಯನ್ನು ತೋರಿಸಲು ಆಕೆಯು ಆತುರಪಡುತ್ತಿದ್ದರೂ, ಆಕೆಯ ಮುಖದಿಂದ ಅಕ್ಷರಗಳೇ ಹೊರಡಲೊಲ್ಲವು; ಅಂದ ಬಳಿಕ ಮಾತಾಡುವ ಧೈರ್ಯವಾಗುವ ಬಗೆ ಹ್ಯಾಗೆ? ಸರ್ಜೇರಾಯನಿಗಾದರೂ ಹೀಗೆ ಏಕಾಂತದಲ್ಲಿ ಪರಸ್ತ್ರೀಯ ಸಮ್ಮುಖದಲ್ಲಿ ನಿಂತುಕೊಳ್ಳುವ ಪ್ರಸಂಗವು ಈವರೆಗೆ ಬಂದಿದ್ದಿಲ್ಲ. ಆತನೂ ಆ ಸ್ತ್ರೀಯೊಡನೆ ಮಾತಾಡಲು ಸಂಕೋಚ ಪಡಹತ್ತಿದನು. ಹೀಗೆ ಅವರಿಬ್ಬರು ಮೌನವ್ರತವನ್ನು ಧರಿಸಿದವರಂತೆ ಕೆಲಹೊತ್ತು ಸುಮ್ಮನೆ ನಿಂತುಕೊಂಡರು.

ಕೆಲಹೊತ್ತಿನ ಮೇಲೆ ಸರ್ಜೇರಾಯನು ವಿವೇಕವನ್ನು ತಾಳಿ ಧೈರ್ಯದಿಂದ ಆ ಸ್ತ್ರೀಯನ್ನು ಕುರಿತು—''ಅಮ್ಮಾ, ಅಕಸ್ಮಾತ್ತಾಗಿ ನಿಮ್ಮ ಕುದುರೆಯು ಬೆದರಿ ಅದು ನಿಮ್ಮನ್ನು ಸಿಕ್ಕ ಕಡೆಗೆ ಸಾಗಿಸಿಕೊಂಡುಬಂದಂತೆ ಕಾಣುತ್ತದೆ. ನಿಮ್ಮವರು ಇರುವ ಸ್ಥಳದ ಗುರುತು ಹೇಳಿದರೆ, ನಾನು ಅವರ ಬಳಿಗೆ ನಿಮ್ಮನ್ನು ಕಳಿಸುವೆನು'' ಎಂದು ಹೇಳಿದನು. ಆಗ ಆ ಸ್ತ್ರೀಯು ತನ್ನ ಮನಸ್ಸಿನಲ್ಲಿ—''ನಾನು ಏನೂ ಮಾತಾಡದೆ ಹೀಗೆ ಸುಮ್ಮನೆ ನಿಂತುಕೊಂಡರೆ ಆಗುವ ಪ್ರಯೋಜನವೇನು? ನನ್ನ ಪತಿಯು ಇರುವ ಸ್ಥಳದ ಗುರುತಾದರೂ ಈತನಿಗೆ ಹ್ಯಾಗಾಗ ಬೇಕು? ಎಂದು ಯೋಚಿಸಿ, ತನ್ನಲ್ಲಿದ್ದ ಬಿದ್ದ ಧೈರ್ಯವನ್ನು ಒಟ್ಟುಗೂಡಿಸಿ ಸರ್ಜೇರಾಯನನ್ನು ಕುರಿತು—''ನಾವು ವಿಜಾಪುರದಿಂದ ಹೊರಟೆವು. ತುಳಜಾಪುರದಿಂದ ಕೆಲವು ಅಂತರದ ಮೇಲಿದ್ದ ಮಾವಿನ ತೋಪಿನಲ್ಲಿ ಇಳಿದುಕೊಂಡಿದ್ದೆವು. ಅಷ್ಟರಲ್ಲಿ ಸುಲಿಗೆಗಾರರಾದ ಪಠಾಣರು ನಮ್ಮ ಮೇಲೆ ಅಕಸ್ಮಾತ್ತಾಗಿ ಬೀಳಲು, ಗದ್ದಲವಾಯಿತು. ನಮ್ಮ ಗಂಡಸರು ಪಠಾಣರೊಡನೆ ಕಾದಹತ್ತಿದರು. ಆಗ ಹೆಂಗಸರು ನಾವು ಹೌಹಾರಿ ಕುಳಿತುಕೊಂಡೆವು. ಅಷ್ಟರಲ್ಲಿ ನಮ್ಮ ಈ ಕುದುರೆಯು ಜೀನು ಹಾಕಿ ಸಿದ್ಧವಾಗಿ ನಾವಿದ್ದಲ್ಲಿಗೆ ಬಂದಿತು. ನಾನು ಚಿಕ್ಕಂದಿನಲ್ಲಿಯೇ ಕುದುರೆಯನ್ನು ಹತ್ತಲಿಕ್ಕೆ ಕಲಿತವಳು; ಯುದ್ಧಕಲೆಯನ್ನು ಅಭ್ಯಾಸಿಸಿದವಳು; ಆದ್ದರಿಂದ ಪತಿಗೆ ಸಮರದಲ್ಲಿ ಸಹಾಯಮಾಡುವ ಉತ್ಸುಕತೆಯಿಂದ ನಾನು ಕುದುರೆಯನ್ನು ಹತ್ತಿದೆನು; ಆದರೆ ಈ ಖೋಡಿ ಕುದುರೆಗೆ ಏನಾಯಿತೋ ತಿಳಿಯದು. ಅದು ಒಮ್ಮೆಲೆ ಬೆದರಿ ಅಸುಗೊಳ್ಳದೆ ಮನಬಂದಂತೆ ಓಡುತ್ತ ನನ್ನನ್ನು ಇಲ್ಲಿಗೆ ತಂದು ಬಿಟ್ಟಿತು. ನಾನು ನಮ್ಮ ಇಳಿದ ಸ್ಥಳದಿಂದ ಎಷ್ಟು ದೂರ ಬಂದೆನೆಂಬದನ್ನೂ, ಯಾವ ದಿಕ್ಕಿಗೆ ಬಂದೆನೆಂಬದನ್ನೂ, ಹೇಳಲಾರೆನು.

ಈ ಮೇರೆಗೆ ಆ ಸ್ತ್ರೀಯು ಹೇಳುತ್ತಿರಲು, ಪಠಾಣೀ ಭಾಷೆಯಿಂದ ಗಟ್ಟಿಯಾಗಿ ಉಚ್ಚರಿಸುವ ಶಬ್ದಗಳು ಆ ಸ್ತ್ರೀಯ ಕಿವಿಗೂ, ಸರ್ಜೇರಾಯನ ಕಿವಿಗೂ ಬಿದ್ದವು. ಧ್ವನಿಯು ಕೇಳಬರುವ ದಿಕ್ಕಿಗೆ ಅವರಿಬ್ಬರು ತಿರುಗಿ ನೋಡಲು ಒಬ್ಬ ಪಠಾಣನು ಕುದುರೆಯನ್ನು ಓಡಿಸುತ್ತ ತಮ್ಮ ಬಳಿಗೆ ಬರುವದು ಅವರ ಕಣ್ಣಿಗೆ ಕಾಣಿಸಿತು. ಪಠಾಣನು ಕೂಡಲೆ ಕುದುರೆ ಯನ್ನು ಇಳಿದು ಆ ಸ್ತ್ರೀಯನ್ನು ತರಬುವ ಉದ್ದೇಶದಿಂದ ಆಕೆಯ ಬಳಿಗೆ ಹೋಗಿ

ಉರ್ದೂ ಭಾಷೆಯಿಂದ—''ಆಯ ಬಿಜಲಿ, ನೀನು ಹಾಹಾ ಅನ್ನುವುದರೊಳಗಾಗಿ ಎಷ್ಟು ದೂರ ಬಂದೆಯಲ್ಲ! ನೀನು ಇತ್ತ ಕಡೆಗೆ ಬಂದದ್ದನ್ನು ನೋಡಿದಕೂಡಲೆ ನಮ್ಮ ಹಿಂಡನ್ನು ಬಿಟ್ಟು ನಾನೊಬ್ಬನೇ ನಿನ್ನನ್ನು ಬೆನ್ನಟ್ಟಿ ಬಂದೆನು. ನನ್ನನ್ನು ಬಿಟ್ಟು ನೀನೊಬ್ಬಳೇ ಇಷ್ಟು ಒತ್ತರದಿಂದ ಯಾಕೆ ಬಂದೆ? ಇವನು ನಿನಗೆಲ್ಲಿ ಭೆಟ್ಟಿಯಾದನು?'' ಎಂದು ಕೇಳುತ್ತ ಮುಂದುಮುಂದಕ್ಕೆ ಬರಹತ್ತಿದನು. ಕೇವಲ ಮೊದಲಿನಿಂದ ಗುರುತು ಇದ್ದವನಂತೆ ಪಠಾಣನು ಠಕ್ಕತನದಿಂದ ಆಡುವ ಮಾತುಗಳನ್ನು ಕೇಳಿ, ಆ ಮರ್ಯಾದಶೀಲಳಾದ ಸ್ತ್ರೀಯು ಪಠಾಣನ ಸೊಂಕಿಗೆ ಹೆದರಿ ಹಿಂದಹಿಂದಕ್ಕೆ ಸರಿಯುವು ದನ್ನು ನೋಡಿ ಸರ್ಜೇರಾಯನು ಸಂತಾಪದಿಂದ ಪಠಾಣನನ್ನು ಹಿಂದಕ್ಕೆ ದೂಡಿ—''ಏ ಪಾಗಲ, ಸರಿ ಹಿಂದಕ್ಕೆ. ನಮ್ಮ ಹೆಂಗಸರ ಮಾನಭಂಗ ಮಾಡುವ ಪಠಾಣರನ್ನು ಹಣಿಯದಷ್ಟು ಹೇಡಿಗಳು ಎಲ್ಲ ಮರಾಟರು ಇರುತ್ತಾರೆಂದು ನೀನು ತಿಳಿದಿರುತ್ತೀಯೇನು? ನೀವು ಮುಸಲ್ಮಾನರು ಹೀಗೆಯೇ ಎಷ್ಟು ದಿವಸ ಲಂಡತನದಿಂದ ನಡೆಯುವಿರಿ? ಮುಂದಕ್ಕೆ ಒಂದು ಹೆಜ್ಜೆಯನ್ನಿಟ್ಟರೆ ನಿನ್ನ ಪರಿಣಾಮ ವಾಗಲಿಕ್ಕಿಲ್ಲ. ಜೀವವು ಬೇಕಾಗಿದ್ದರೆ ಬಂದ ಹಾದಿಯಿಂದ ತಿರುಗಿ ಹೋಗು'' ಎಂದು ಗದ್ದರಿಸಿ, ತನ್ನ ಖಡ್ಗವನ್ನು ಹಿರಿದನು. ಆಗ ಪಠಾಣನು ಸಿಟ್ಟಿನಿಂದ ತನ್ನ ಖಡ್ಗವನ್ನು ಹಿರಿದು ಉಪಹಾಸದಿಂದ ನಗುತ್ತ—''ನಿಮ್ಮ ಬಾಯಿಬಡಕತನವನ್ನು ನಾವು ಎಷ್ಟೋ ದಿವಸಗಳಿಂದ ಕೇಳುತ್ತ ಬಂದಿದ್ದೇವೆ. ನಿಮ್ಮ ಕೈಯಿಂದ ಯಾವ ಕೆಲಸವೂ ಆಗುವದಿಲ್ಲ. ನಮ್ಮ ಟೋಳಿಯವರು ಈಕೆಯ ಗಂಡನನ್ನೂ, ಅವನ ಪರಿವಾರದ ಬೇರೆ ಮರಾಟರನ್ನೂ ತುಂಡರಿಸಿ, ಅವರ ಸೊತ್ತನ್ನೆಲ್ಲ ಅಪಹರಿಸಿ ಇಷ್ಟು ಹೊತ್ತಿಗೆ ತಮ್ಮ ಸ್ಥಳಕ್ಕೆ ಹೋಗಿರಬಹುದು. ಇದೊಂದು ಉತ್ತಮ ಪದಾರ್ಥವು ಇತ್ತ ಕಡೆಗೆ ಬಂದದ್ದರಿಂದ ನಾನು ಇದರ ಬೆನ್ನುಹತ್ತಿ ಬಂದೆನು,'' ಎಂದು ನುಡಿದು, ಸರ್ಜೇರಾಯನೊಡನೆ ಕಾದಹತ್ತಿದನು. ಮರಾಟರ ಹಂಗೇನೆಂದು ಸೊಕ್ಕಿನಿಂದ ಕಾದುವ ಪಠಾಣನನ್ನು ಸರ್ಜೇರಾಯನು ಚನ್ನಾಗಿ ಹಣ್ಣುಮಾಡಿದನು. ಆಗ ಪಠಾಣನ ಮೈಸೊಕ್ಕು ಇಳಿದು, ಅವನು ಎಚ್ಚರದಿಂದ ಕಾದಹತ್ತಿದನು.

ಇಬ್ಬರೂ ಸಮಾನ ಬಲದ ವೀರರಾಗಿದ್ದರು. ಬಹಳ ಹೊತ್ತು ಕಾದಿದರೂ ಒಬ್ಬನೂ ಹಿಂಜರಿಯಲಿಲ್ಲ. ಇಬ್ಬರಿಗೂ ಹಲವು ಗಾಯಗಳಾದವು. ಅವರಿಬ್ಬರ ಕಾಳಗವನ್ನು ಆ ಸ್ತ್ರೀಯು ನೋಡುತ್ತ ನಿಂತುಕೊಂಡಿದ್ದಳು; ಆದರೆ ಆಕೆಯ ಚಿತ್ತವು ಸ್ವಸ್ಥವಾಗಿದ್ದಿಲ್ಲ. ಪಠಾಣರು ತನ್ನ ಗಂಡನನ್ನೂ, ಉಳಿದ ಪರಿವಾರವನ್ನೂ ತುಂಡರಿಸಿದರೆಂಬ ಸುದ್ದಿಯನ್ನು ಕೇಳಿದಾಗಿನಿಂದಂತು ಆಕೆಯು ಶೋಕದಿಂದ ಪೀಡಿತಳಾಗಿದ್ದಳು. ಈ ಸುದ್ದಿಯು ನಿಜವಾಗಿದ್ದ ಪಕ್ಷದಲ್ಲಿ ತಾನು ಏನು ಮಾಡಬೇಕೆಂದು ಆಕೆಯು ಯೋಚಿಸಹತ್ತಿದಳು. ಅಷ್ಟರಲ್ಲಿ ಸರ್ಜೇರಾಯನು ಜೋಲಿ ಹೋಗಿ ನೆಲಕ್ಕೆ ಬೀಳುತ್ತಿದ್ದನು. ಆತನು ಜೋಲಿಯನ್ನು ಸಂಬಾಳಿಸಿಕೊಂಡು ನಿಲ್ಲುವಷ್ಟರಲ್ಲಿ ಪಠಾಣನು ಅವನನ್ನು ನೂಕಿ ನೆಲಕ್ಕೆ ಕೆಡವಿ ಎದೆಯ ಮೇಲೆ ಕುಳಿತನು. ಇನ್ನು ಆತನು ಖಡ್ಗವೆತ್ತಿ ಸರ್ಜೇರಾಯನನ್ನು ಹೊಯ್ಯುತಕ್ಕವನು. ಅಷ್ಟರಲ್ಲಿ ಆ ಶೂರ ಸ್ತ್ರೀಯು ತನ್ನಲ್ಲಿದ್ದ ಕಠಾರಿಯಿಂದ ಪಠಾಣನ ಬೆನ್ನಿಗೆ ಕಸುವಿನಿಂದ ಇರಿದಳು. ಆಕೆಯ ಇರಿತದಿಂದ ಪಠಾಣನ

ಬೆನ್ನುಹುರಿಯ ಮಣಿಗಳು ತುಂಡಿರಿಸಿದಂತೆ ತೋರಿತು; ಯಾಕಂದರೆ,ಪಠಾಣನು ವ್ಯಥೆಪಟ್ಟು ಹಿಂದಕ್ಕೆ ಉರುಳಿದನು. ಆತನಿಗೆ ಮೇಲಕ್ಕೆ ಏಳಲಿಕ್ಕೆ ಬರಲೊಲ್ಲದು. ಬಿದ್ದಲ್ಲಿಯೇ ಬಿದ್ದು ಬಾಯಿಗೆ ಬಂದಂತೆ ಬಯ್ಯಹತ್ತಿದನು. ನಮ್ಮ ಜನರು ಇಲ್ಲಿಯೇ ಸಮೀಪದಲ್ಲಿ ಇದ್ದು ನನ್ನನ್ನು ಹುಡುಕುತ್ತ ಇಲ್ಲಿಗೆ ಬಂದು ನಿಮ್ಮ ಸಮಾಚಾರವನ್ನು ತಕ್ಕೊಳ್ಳುವರೆಂದು ಬೆದರಿಕೆ ಹಾಕಹತ್ತಿದನು. ಸರ್ಜೀರಾಯನು ಆ ಶೂರ ಸ್ತ್ರೀಯ ಉಪಕಾರವನ್ನು ಸ್ಮರಿಸಿ, ಪಠಾಣನ ಬೊಗಳುವಿಕೆಯಕಡೆಗೆ ಲಕ್ಷ್ಯಗೊಡದೆ, ಪಠಾಣರ ಹಿಂಡು ಬಂದರೆ ತಮ್ಮ ಪರಿಣಾಮವಾಗ ದೆಂದು ತಿಳಿದು ನೆರೆಯ ಹಳ್ಳಿಗೆ ಆ ಸ್ತ್ರೀಯನ್ನು ಕರಕೊಂಡ ಹೋದನು.

ಮಹಾರಾಜರ ಅಪ್ಪಣೆಗೆ ವಿರುದ್ಧವಾಗಿ ಸರ್ಜೀರಾಯನು ವಿಜಾಪುರಕ್ಕೆ ಹೋಗದೆ ಬೇರೆಕಡೆಯಲ್ಲಿ ನಿಲ್ಲುವ ಹಾಗಿದ್ದಿಲ್ಲ; ಆದ್ದರಿಂದ ಆತನು ಆ ಸ್ತ್ರೀಯನ್ನು ಆ ಊರ ದೇಶ ಮುಖರ ಮನೆಯಲ್ಲಿ ಬಿಟ್ಟು ತಾನು ವಿಜಾಪುರದ ಹಾದಿಯನ್ನು ಹಿಡಿದನು. ದೇಶಮುಖನು ಬಹು ದೊಡ್ಡ ಮನುಷ್ಯನಿದ್ದನು. ಆ ಸ್ತ್ರೀಯನ್ನು ಯಥೋಚಿತವಾಗಿ ಉಪಚರಿಸಿ, ಆಕೆಯ ಗಂಡನ ಶೋಧಕ್ಕಾಗಿ ತುಳಜಾಪುರದ ಕಡೆಗೆ ಆಳುಗಳನ್ನು ಕಳಿಸಿದನು. ಆ ಸ್ತ್ರೀಯು ತಾನು ಸ್ವತಃ ತನ್ನಪತಿಯ ಶೋಧಕ್ಕಾಗಿ ಹೋಗುವೆನೆಂದು ಹೇಳಿದಳು. ಆದರೆ ದೊಡ್ಡಮನುಷ್ಯಳಾದ ದೇಶಮುಖನ ಹೆಂಡತಿಯು ಆಕೆಯನ್ನು ಹೋಗಗೊಡದೆ. ನಿನ್ನ ಗಂಡನ ಶೋಧವಾಗು ವವರೆಗೆ ನಮ್ಮಲ್ಲಿಯೇ ಇರಬೇಕೆಂದು ಆಗ್ರಹದಿಂದ ಇಟ್ಟುಕೊಂಡಳು. ಆ ಸ್ತ್ರೀಗೆ ಪರಗೃಹ ವಾಸವು ಅಸಹ್ಯವಾಯಿತು; ಆದರೂ ಆಕೆಯು ತನ್ನ ಪರಾಧೀನ ಸ್ಥಿತಿಯನ್ನು ಮನಸ್ಸಿನಲ್ಲಿ ತಂದು, ನಿರ್ವಾಹವಿಲ್ಲದೆ, ದೇಶಮುಖನ ಹೆಡಂತಿಯ ಮಾತಿಗೆ ಒಪ್ಪಿಕೊಂಡು ಆಕೆಯ ಮನೆಯಲ್ಲಿ ಇರಹತ್ತಿದಳು.

## ಕಳ್ಳನ ಜೀವವು ಹುಳ್ಳಹುಳ್ಳಗೆ

ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಅಫಜುಲಖಾನನು ಮಹಾಉನ್ಮತ್ತನಾಗಿ ದೇವಸ್ಥಾನ ಗಳನ್ನು ನಾಶಗೊಳಿಸುತ್ತ ಮೂರ್ತಿಗಳನ್ನು ಒಡೆಯುತ್ತ ಹಾಹಾ ಅನ್ನುವದರೊಳಗಾಗಿ ಶಿವಾಜಿಯನ್ನು ಹಿಡಿಯುವೆನೆಂಬ ಉಬ್ಬಿನಿಂದ ಪುಣೆಗೆ ಬಂದನು! ಆದರೆ ಶಿವಾಜಿಯು ಪುಣೆಯಲ್ಲಿಯೂ ಇದ್ದಿಲ್ಲ; ಪುಣೆಯ ಬಳಿಯಲ್ಲಿದ್ದ ರಾಯಗಡದಲ್ಲಿಯೂ ಇದ್ದಿಲ್ಲ; ಆದ್ದರಿಂದ ಖಾನನ ಮನಸ್ಸಿಗೆ ಬಹಳ ಅಸಮಾಧಾನವಾಯಿತು. ತಾನು ಖಾನನ ಪ್ರಚಂಡ ಸೈನ್ಯದೊಡನೆ ಬೈಲಲ್ಲಿ ನಿಂತು ಯುದ್ಧಮಾಡಿದರೆ ಯಶಸ್ಸು ದೊರೆಯುವದೆಂದು ತಿಳಿದು, ಶಿವಾಜಿಯು ಪ್ರತಾಪಗಡಕ್ಕೆ ಹೋಗಿದ್ದನು. ಪ್ರತಾಪಗಡವು ಮಹಾಬಳೇಶ್ವರದ ಬಳಿಯಲ್ಲಿರುವದು. ಹೀಗಾದದ್ದನ್ನು ನೋಡಿ ಅಫಜುಲಖಾನನು ಪರಮಾವಧಿ ಅಸಮಾಧಾನಪಟ್ಟು ಪ್ರತಾಪಗಡದ ಕಡೆಗೆ ಸಾಗಿದನು. ತನ್ನ ಸೈನ್ಯದ ಮುಂದೆ ಶಿವಾಜಿಯ ಆಟವೇನೂ ನಡೆಯದು, ನಾನು

ಪ್ರತಾಪಗಡವನ್ನು ಮುತ್ತಿ, ಅಲ್ಲಿಂದಲೇ ಶಿವಾಜಿಯನ್ನು ಸೆರೆ ಹಿಡಕೊಂಡು ಹೋಗುವೆನು, ಎಂಬ ದಮ್ಮಿನಿಂದ ಆತನು ಹೊರಟಿದ್ದನು; ಆದರೆ ಆ ದುರ್ಗಮವಾದ ದುರ್ಗವನ್ನು ಹತ್ತು ವರ್ಷ ಮುತ್ತಿದರೂ ಕೈವಶವಾಗದೆಂಬದನ್ನು ಕೇಳಿ ಆತನು ಉದಾಸೀನನಾದನು. ವಾಯಿಯ ಭಯಂಕರ ವಾದ ಕಂದರವನ್ನು ನೋಡಿ ಆತನು, ವಿಚಾರಮಗ್ನನಾದನು. ಆ ಕಂದರದಲ್ಲಿಯೇ ಕೆಲವು ದಿನ ತಳಊರಿ, ಶಿವಾಜಿಯನ್ನು ಹಿಡಿಯುವ ಯುಕ್ತಿಯನ್ನು ಕಂಡುಹಿಡಿಯ ಬೇಕೆಂತಲೂ,ಇಲ್ಲಿಂದಲೇ ಶಿವಾಜಿಯ ಚಲನವಲನಗಳನ್ನರಿತು ಕೊಳ್ಳಬೇಕೆಂತಲೂ ಯೋಚಿಸಿ, ಅಲ್ಲಿ ಸೈನ್ಯದ ತಳ ಊರಿದನು. ಆತನ ಗುಪ್ತಹೇರರು ಸುದ್ದಿಯನ್ನು ತಿಳಕೊಳ್ಳುವದಕ್ಕಾಗಿ ಅಲ್ಲಲ್ಲಿ ಹರಿಬಿದ್ದರು. ಹೇರರು ತಂದ ಸುದ್ದಿಗಳಿಂದ ಖಾನನ ಉತ್ಸಾಹ ಭಂಗವಾಗತೊಡಗಿತು. ಪ್ರತಾಪಗಡವು ಬಹು ಭದ್ರವಾದದ್ದೆಂತಲೂ,ಅದನ್ನು ಮುತ್ತಿ ವಶಮಾಡಿಕೊಳ್ಳಲಿಕ್ಕೆ ಹತ್ತು ವರ್ಷಗಳಾದರೂ ಸಾಲವೆಂತಲೂ, ಅದಕ್ಕೆ ಹಲವು ಗುಪ್ತದ್ವಾರಗಳು ಇದ್ದು, ಪ್ರಸಂಗದಲ್ಲಿ ಒಳಗಿನವರು ಸದ್ದಿಲ್ಲದೆ ಹೊರಟು ಹೋಗಬಹುದಾದ್ದರಿಂದ ಬರಿಯ ಕೋಟೆಯನ್ನು ವಶಮಾಡಿಕೊಳ್ಳುವದು ಸೈನ್ಯದ ವ್ಯರ್ಥವಾದ ಆಯಾಸಕ್ಕೆ ಮಾತ್ರ ಕಾರಣವೆಂತಲೂ ಸುದ್ದಿಗಾರರು ಹೇಳಹತ್ತಿದರು; ಆದ್ದರಿಂದ, ಖಾನನು ಚಿಂತಾಕ್ರಾಂತನಾಗಿ, ಶಿವಾಜಿಯನ್ನು ಶಕ್ತಿಯಿಂದ ಹಿಡಿಯುವದು ಅಸಾಧ್ಯವಾದದ್ದರಿಂದ, ಆತನನ್ನು ಯುಕ್ತಿಯಿಂದ ಹಿಡಿಯುವ ಯತ್ನ ಮಾಡಬೇಕೆಂದು ಎಣಿಕೆ ಹಾಕಹತ್ತಿದನು. ಹ್ಯಾಗಾದರೂ ಮಾಡಿ ತನ್ನ ಪ್ರತಿಜ್ಞೆಯನ್ನು ನೆರವೇರಿಸುವದು ಆತನಿಗೆ ಅವಶ್ಯವಾಗಿತ್ತು ಆತನು ಮನಸ್ಸಿನಲ್ಲಿ— "ನಾನು ಗುಡ್ಡದೊಳಗಿನ ಇಲಿಯನ್ನು ಖಡ್ಗದಿಂದ ತುಂಡರಿಸುವ ಯೋಚನೆ ಮಾಡಿದ್ದು ತಪ್ಪು. ಯಾಕಂದರೆ, ಇಲಿಯನ್ನು ಹೊಡೆಯಲಿಕ್ಕೆ ಖಡ್ಗವೇತಕ್ಕೆ? ಅದನ್ನು ಯುಕ್ತಿಯಿಂದ ಬಲೆಯಲ್ಲಿ ಹಿಡಿಯುವುದು ಯೋಗ್ಯವು."

ಹೀಗೆ ಖಾನನು ತನ್ನ ಸಮಾಧಾನ ಮಾಡಿಕೊಂಡರೂ ನಿಜವಾದ ಸಮಾಧಾನವು ಆತನಿಗಿರಲಿಲ್ಲ, ವಿಜಾಪುರದ ದರ್ಬಾರಿನಲ್ಲಿ ಪ್ರತಿಜ್ಞೆ ಮಾಡಲಿಕ್ಕೆ ಸುಲಭವಾದಷ್ಟು ಆ ಪ್ರತಿಜ್ಞೆಯನ್ನು ಸಾಧಿಸುವದು ಸುಲಭವಲ್ಲವೆಂಬದು ಆತನ ಮನಸ್ಸಿಗೆ ಹತ್ತಿತು. ತಾನು ಸಿಕ್ಕಹಾಗೆ ಹರಿದಾಡಿದರೆ ಶಿವಾಜಿಯು ಏನಾದರೂ ಮೋಸಮಾಡಿ ತನ್ನನ್ನು ನಾಶಗೊಳಿಸಬಹುದೆಂಬ ಭಯವೂ ಆತನನ್ನು ಬಾಧಿಸಹತ್ತಿತು. ಎಷ್ಟೋ ಮಂದಿ ಸರದಾರರು ಶಿವಾಜಿಯ ಬಲೆಗೆ ಸಿಕ್ಕು ಒದ್ದ್ಯಾಡಿ ಹೋದದ್ದನ್ನು ಖಾನನು ಅರಿತಿದ್ದನು; ಆದ್ದರಿಂದ ಶಿವಾಜಿಗೆ ತಕ್ಕಂತೆ ತಾನೂ ವಿಶ್ವಾಸ ಘಾತ ಮಾಡಿಯೇ ಕಾರ್ಯವನ್ನು ಸಾಧಿಸಿಕೊಳ್ಳಬೇಕೆಂದು ನಿಶ್ಚಯಿಸಿದನು. ಹೀಗೆ ಖಾನನು ಹಲವು ವಿಚಾರಗಳ ಗಲಿಬಿಲಿಯಿಂದ ಗಾಸಿಯಾಗುತ್ತಿರಲು, ಆತನ ಹುಜರೆಯು ಬಂದು— "ಪ್ರತಾಪಗಡದಿಂದ ಯಾವನೋ ಒಬ್ಬ ಬ್ರಾಹ್ಮಣನು ಶಿವಾಜಿಯ ಪತ್ರವನ್ನು ತಕ್ಕೊಂಡು ಬಂದಿದ್ದಾನೆ; ಆತನು ಖಾವಿಂದರ ಸಂಗಡ ಏನೋ ಮಾತಾಡಬೇಕಾಗಿದೆ ಯಂತೆ"ಎಂದು ಹೇಳಿದನು. ಶಿವಾಜಿಯ ಕಡೆಯಿಂದ ಬ್ರಾಹ್ಮಣನು ಬಂದದ್ದನ್ನು ಕೇಳಿ ಖಾನನಿಗೆ ಬಹಳ ಆಶ್ಚರ್ಯ ವಾಯಿತು. ಶಿವಾಜಿಯನ್ನು ಹಿಡಕೊಂಡು ಹೋಗಲಿಕ್ಕೆ ನಾವು

ಬಂದಿರಲು, ಆತನು ನನಗೆ ಪತ್ರ ಬರೆಯುವದೇನು? ಆದರೂ ಪತ್ರದಲ್ಲಿ ಏನು ಬರೆದಿರುವ ನೆಂಬದನ್ನು ನೋಡುವದು ಯೋಗ್ಯವು; ಎಂದು ಯೋಚಿಸಿ, ಆ ಬ್ರಾಹ್ಮಣನನ್ನು ಒಳಗೆ ಬಿಡಲು ಆಜ್ಞಾಪಿಸಿದನು. ಬ್ರಾಹ್ಮಣನು ನಮ್ರತೆಯಿಂದ ಒಳಗೆ ಬಂದನು. ಆತನು ಆಗಿನ ಪದ್ಧತಿಯಂತೆ ಕುರ್ನಿಸಾತು ಮಾಡಲು, ಖಾನನು ಬೆರಳು ತೋರಿಸಿ ಕೂಡಲು ಬ್ರಾಹ್ಮಣನಿಗೆ ಸೂಚಿಸಿದನು. ಬ್ರಾಹ್ಮಣನು ಖಾನನ ಹುಜರೆಯ ಕೈಯಲ್ಲಿ ಪತ್ರವನ್ನು ಕೊಟ್ಟು ತನ್ನ ಸ್ಥಳದಲ್ಲಿ ಕುಳಿತುಕೊಂಡನು. ಖಾನನು ಥೈಲಿಯನ್ನು ತಕ್ಕೊಂಡು ಚೀಟನೀಸನಿಗೆ ಅದನ್ನು ಓದಹೇಳಲು, ಚೀಟನೀಸನು ಪತ್ರವನ್ನು ಓದಹತ್ತಿದನು.

ಆಗಿನ ಪದ್ಧತಿಯಂತೆ ಪತ್ರವು ಪಾರಸೀ ಭಾಷೆಯಲ್ಲಿ ಬರೆದಿತ್ತು ಆ ಪತ್ರದ ಸಾರಾಂಶ ವೇನೆಂದರೆ— ಹಜರತ್ತರವರು (ಬಾದಶಹರು)ನನ್ನನ್ನು ಹಿಡತರುವದಕ್ಕಾಗಿ ಖಾವಂದರವರನ್ನು ಕಳಿಸಿರುವರೆಂದು ಕೇಳುತ್ತೇನೆ; ಅದರಂತೆ ಪ್ರತಿಜ್ಞೆ ಮಾಡಿ ಖಾವಂದರವರು ಬಂದಿರುವಿ ರೆಂತಲೂ ಸುದ್ದಿಯದೆ. ಇದನ್ನೆಲ್ಲ ಕೇಳಿ ನನಗೆ ಬಹಳ ಆಶ್ಚರ್ಯವಾಗಿದೆ. ಹಜರತಿಯ ಸೇವಕನಾದ ನಾನು ಹಜರತಿಯ ರಾಜ್ಯದೊಳಗಿನ ಪುಂಡು ಬಂಡಾಯಗಳೆಲ್ಲ ಅಳಿದು ಹೋಗಿ, ರಾಜ್ಯದಲ್ಲಿ ಸುವ್ಯವಸ್ಥೆಯೂ ಶಾಂತತೆಯೂ ನೆಲೆಗೊಳ್ಳಬೇಕೆಂದು ಪ್ರಯತ್ನ ಮಾಡುತ್ತಲಿರುವೆನು. ಇದರಿಂದ ಹಜರತಿಯ ಹಿತವೇ ಅಲ್ಲದೆ ಅಹಿತವೇನಾಗುವದು? ಹೀಗಿದ್ದು ಹಜರತಿಯ ಮನಸ್ಸಿನಲ್ಲಿ ನನ್ನ ವಿಷಯದ ದ್ವೇಷವು ಉತ್ಪನ್ನವಾಗಿರುವದು ಪರಮಾಶ್ಚರ್ಯದ ಸಂಗತಿಯಾಗಿರುವದು; ಆದರೆ ಎರಡನೆಯವರಾರೂ ಬಾರದೆ ಖಾವಂದರವರು ಬಂದಿರುವದರಿಂದ ನನಗೆ ಸ್ವಲ್ಪ ಆಶೆಯು ಉತ್ಪನ್ನವಾಗಿದೆ. ಯಾಕಂದರೆ, ನನ್ನ ನಿಜವಾದ ಸಂಗತಿಯು ಖಾವಂದರವರಿಗೆ ತಿಳಿದರೆ ನನ್ನ ಸಂರಕ್ಷಣವಾಗುವದೆಂಬದರಲ್ಲಿ ಸಂಶಯವಿಲ್ಲ, ಅದರಂತೆ ಹಜರತ್ತರ ಮನಸ್ಸಿನಲ್ಲಿ ಉತ್ಪನ್ನವಾಗಿದ್ದ ನನ್ನ ಸಂಬಂಧದ ದ್ವೇಷವೂ ಇಲ್ಲದಂತಾಗುವದು. ಇದನ್ನೆಲ್ಲ ಮನಸ್ಸಿನಲ್ಲಿ ತಂದೇ ಪತ್ರವನ್ನು ಬರೆದಿದ್ದೇನೆ. ನಮ್ಮ ಮನಸ್ಸಿನಲ್ಲಿದ್ದದ್ದನ್ನು ತಿಳಿಸುವದಕ್ಕಾಗಿ ತಿಳುವಳಿಕೆಯ ಹಾಗು ವಿಶ್ವಾಸದ ಪುರುಷರಾದ ಕೃಷ್ಣಾಜಿ ಭಾಸ್ಕರಯೆಂಬುವರನ್ನು ಸನ್ನಿಧಿಗೆ ಕಳಿಸಿದ್ದೇನೆ. ಅವರಿಂದ ಎಲ್ಲ ಸಂಗತಿಯನ್ನು ತಿಳಿದುಕೊಂಡು, ಹೀಗೆಮಾಡೆಂದು ನನ್ನನ್ನು ಖಾವಂದರವರು ಆಜ್ಞಾಪಿಸಿದರೆ ಅದರಂತೆ ಮಾಡುವೆನು; ರಾಜ್ಯವನ್ನು ಬಿಟ್ಟು ಹೋಗೆಂದರೂ ಹೋಗಲಿಕ್ಕೆ ಸಿದ್ಧನಿದ್ದೇನೆ; ಆದರೆ ದೇಶದಲ್ಲಿಯ ಪುಂಡಾಟಿಕೆಯನ್ನು ಮುರಿದು ಸ್ವಾಸ್ಥ್ಯವನ್ನುಂಟುಮಾಡಿ ಹಜರತಿಯ ಚಾಕರಿ ಮಾಡಿದ್ದನ್ನು ಮಾತ್ರ ಮನಸ್ಸಿನಲ್ಲಿ ತರಬೇಕು. ಇಷ್ಟೆ ನನ್ನ ಪ್ರಾರ್ಥನೆಯು.

ಈ ಸಂಗತಿಯ ಪತ್ರವು ಬಹು ಉದ್ದವಾಗಿ ಬರೆಯಲ್ಪಟ್ಟಿತ್ತು ಅದನ್ನು ಓದುವದೆಲ್ಲ ಆದಮೇಲೆ ಖಾನನು ಗಟ್ಟಿಯಾಗಿ ನಕ್ಕು— ''ಇನ್ನು ಇಂಥ ಪತ್ರಗಳಿಗೆ ಯಾರೂ ಮರುಳಾಗುವ ಹಾಗಿಲ್ಲ 'ನಾನು ಹಜರತಿಯ ಬಂದಾಗುಲಾಮನೆ'ಂದು ಪತ್ರ ಬರೆದು ವಕೀಲನ ಮುಖಾಂತರ ಕಳಿಸಬೇಕು, ಹಜರತಿಯು ಸಾವಿರಾರು ಸಾರೆ ಹೇಳಿಕಳಿಸಿದರೂ, ನೂರಾರು ಸಾರೆ ಹುಕುಮುಗಳನ್ನು ಬರೆದರೂ, ಹಲವುಸಾರೆ ಬೆದರಿಕೆ ಹಾಕಿದರೂ ಈತನು

ಅದನ್ನು ಲಕ್ಷಕ್ಕೆ ತರಬಾರದು! ಶಾಹಿಸ್ತೆಖಾನನಂಥ ಸರದಾರನನ್ನು ಕಳಿಸಿದರೂ ಆತನನ್ನು ಗಣನೆಗೆ ತರಲಿಲ್ಲ!! ನಾವು ಇತ್ತ ಬಂದಕೂಡಲೆ ಹೀಗೆ ಮೋಸದ ಬಲೆಯೊಡ್ಡುವನೆಂಬುದನ್ನು ನಾವು ತಿಳಿದೇ ಇದ್ದೆವು; ಆದರೂ ರುಮಾಲದಿಂದ ಕೈಕಟ್ಟಿಕೊಂಡು ನಮ್ಮ ಮುಂದೆ ಬಂದು ನಿಂತಹೊರತು ನಾವು ಆತನ ಯಾವ ಮಾತನ್ನೂ ನಿಜವೆಂದು ನಂಬುವಹಾಗಿಲ್ಲ. ಶಿವಾಜಿಯು ತಗಲನಿದ್ದರೆ, ನಾನು ಮಹಾತಗಲ ನಿರುತ್ತೇನೆ. ಸೇರಿಗೆ ಸವ್ವಾಸೇರು ಗಂಟುಬಿದ್ದರೇ ಏನಾದರೂ ಆಗುವದು. ಇಂಥ ಸಾವಿರಾರು ಪತ್ರಗಳಿಗೆ ನಾನು ಮರಳಾಗುವ ಹಾಗಿಲ್ಲ. "ಚೀನೀಸ, ಈ ಪತ್ರಕ್ಕೆ ಉತ್ತರ ಹಾಕುವಕಾರಣವಿಲ್ಲ. ಈ ಪತ್ರದಲ್ಲಿಯ ಸಂಗತಿಯು ನಿಜವೋ ಸುಳ್ಳೋ ಎಂಬದನ್ನು ಅರಿತುಕೊಳ್ಳಲಿಕ್ಕೆ ನಾವು ಬೇರೆ ಉಪಾಯ ಮಾಡುವವರಿದ್ದೇವೆ. ಅಲ್ಲಿಯವರೆಗೆ ಈ ವಕೀಲರು ನಮ್ಮಲ್ಲಿಯೇ ಇರಲಿ. ಇವರ ವ್ಯವಸ್ಥೆಯನ್ನು ಸರಿಯಾಗಿ ಇಡಿಸಿರಿ." ಎಂದು ಹೇಳಿ ಖಾನನು ವಕೀಲನನ್ನು ಹೊರಗೆ ಕಳಿಸಿಕೊಟ್ಟು, ತಾನೊಬ್ಬನೇ ವಿಚಾರಮಾಡತೊಡಗಿನು. ಶಿವಾಜಿಯ ಪತ್ರದಲ್ಲಿ ಕುಟಿಲತನ ವಿರುತ್ತದೆಂದು ಆತನು ಭಾವಿಸಿದ್ದನು; ಆದರೂ ತನ್ನ ಸಾಮರ್ಥ್ಯಕ್ಕೆ ಶಿವಾಜಿಯು ಅಂಜಿರುವನೆಂತಲೂ, ಏನಾದರೂ ಹಂಚಿಕೆಮಾಡಿ ಪಾರಾಗಲೂ ಆತನು ಹವಣಿಸುತ್ತಿರುವನೆಂತಲೂ ಖಾನನು ತಿಳಿದುಕೊಂಡಿದ್ದನು. ಶಿವಾಜಿಯ ವಕೀಲನಿಂದ ನಿಜವಾದ ಸಂಗತಿಯನ್ನು ಹೊರಗೆಡವಿ ತಿಳಕೊಳ್ಳುವ ಇಚ್ಛೆಯಿಂದ ಖಾನನು ತನ್ನ ನಂಬಿಗೆಯ ವಕೀಲನಾದ ಪಂತಾಜಿ ಗೋಪಿನಾಥನನ್ನು ಕರೆಯ ಕಳುಹಿಸಿದನು.

ಪಂತಾಜಿ ಗೋಪಿನಾಥನ ಮೇಲೆ ಖಾನನ ವಿಶ್ವಾಸ ಬಹಳ. ಯಾವದೊಂದು ಕಾರ್ಯದಲ್ಲಿ ಆತನ ವಿಚಾರವನ್ನು ಕೇಳಿಕೊಳ್ಳುವದು ಖಾನನ ಸಾಂಪ್ರದಾಯವಾಗಿತ್ತು. ಗೋಪಿನಾಥ ಪಂತನಾದರೂ ವಿಶ್ವಾಸಕ್ಕೆಪಾತ್ರನಾದ ಮನುಷ್ಯನೇ ಆಗಿದ್ದನು. ಖಾನನ ಬಳಿಗೆ ಶಿವಾಜಿಯ ವಕೀಲನು ಬಂದ ಸಂಗತಿಯು ಗೋಪಿನಾಥ ಪಂಥನಿಗೆ ಗೊತ್ತಾಗಿತ್ತು; ಆದ್ದರಿಂದ ಖಾನನು ತನ್ನನ್ನು ಯಾಕೆ ಕರೆಕಳುಹಿರಬಹುದೆಂಬ ಬಗ್ಗೆ ಆತನಿಗೆ ಸಂಶಯ ಬರಲಿಲ್ಲ. ಶಿವಾಜಿಯ ತಂದೆಯಾದ ಶಹಜೀರಾಜನು ವಿಜಾಪುರದ ಬಾದಶಹನ ಸರದಾರನಾಗಿದ್ದು, ಗೋಪಿನಾಥಪಂತನ ಸ್ನೇಹಿತನಾಗಿದ್ದನು; ಆದ್ದರಿಂದ ಶಿವಾಜಿಯ ಹಿತವನ್ನು ಗೋಪಿನಾಥ ಪಂತನು ಮನಮುಟ್ಟಿ ಬಯಸುತ್ತಿದ್ದನು; ಆದರೆ ಬಾದಶಹನಿಗೆ ಅನುಕೂಲವಾಗಿ ನಡೆಯುವದರಿಂದ ಹಿತವಾಗ ಬಹುದಲ್ಲದೆ, ಬಾದಶಹನ ವಿರುದ್ಧವಾಗಿ ನಡೆಯುವದರಿಂದ ಪ್ರಯೋಜನವಾಗದೆಂಬ ಮಾತನ್ನು ಶಿವಾಜಿಗೆ ಹೇಳಬೇಕೆಂದು ಆತನು ಬಹುದಿವಸಗಳಿಂದ ಯೋಚಿಸಿದ್ದನು; ಆದರೆ ಅಂಥ ಪ್ರಸಂಗವೇನೂ ಬಾರದೆ, ಅಥವಾ ತನ್ನನ್ನು ಕೇಳದೆ ತಾನಾಗಿ ಹೇಳುವದು ಮುತ್ಸದ್ದಿತನ ವಲ್ಲೆಂದು ತಿಳಿದು, ಗೋಪಿನಾಥ ಪಂತನು ಈವರೆಗೆ ಸುಮ್ಮನಿದ್ದನು. ಈಗ ಅಂಥ ಸಂಧಿಯು ಸಾಧಿಸಿದ್ದರಿಂದ ಗೋಪಿನಾಥ ಪಂತನಿಗೆ ಬಹಳ ಸಂತೋಷ ವಾಯಿತು. ಆತನು ಆ ಖಾನನ ಬಳಿಗೆಹೋಗಿ ವಿನಯದಿಂದ ಮುಜುರೆಮಾಡಿ ಏನಪ್ಪಣೆ ಯೆಂದು ಕೇಳಲು, ಖಾನನು ನಗುತ್ತ — ಯಂವ್ ಪಂತ, ನಮ್ಮ ಮನಸ್ಸಿನಲ್ಲಿದ್ದಂತೆಯೇ ಪ್ರಸಂಗವು ಒದಗಿಬಂದಿರುತ್ತದೆ. ನಮ್ಮ ಶತ್ರುವು ನಮಗೆ ಶರಣು ಬರುತ್ತಾನೆ. ಆತನ

ವಕೀಲನು ಆತನ ಪತ್ರವನ್ನು ತಕ್ಕೊಂಡು ಬಂದಿರುವನು. ಆ ಪತ್ರವನ್ನು ನೀವು ಓದಿ ನೋಡಬೇಕು; ಆದರೆ ಇಷ್ಟರ ಮೇಲಿಂದ ಆತನ ವಿಶ್ವಾಸವನ್ನು ಮಾತ್ರ ಹಿಡಿಯಬಾರದು. ಶಿವಾಜಿಯ ನಡತೆಯಲ್ಲಿ ಹೊರಗೊಂದು ಒಳಗೊಂದು ಇರುವ ಸಂಭವವು ವಿಶೇಷವಾಗಿರುತ್ತದೆ. ನಾನು ಆತನ ವಕೀಲನನ್ನು ಇಟ್ಟುಕೊಂಡಿರುವೆನು. ಏನಾದರೂ ನೆವಮಾಡಿ ಆ ವಕೀಲನನ್ನು ಬಹಳ ದಿವಸ ಇಟ್ಟು ಕೊಳ್ಳುವೆನು. ನೀವು ಆತನ ಸ್ನೇಹವನ್ನು ಬೆಳಿಸಿ ಅವನ ಹೊಟ್ಟೆಯೊಳಗಿನ ಮಾತನ್ನು ಹೊರಗೆಡವಿರಿ. ನೀವೇ ಆತನ ಯೋಗಕ್ಷೇಮವನ್ನು ವಿಚಾರಿಸಿದರೆ, ಸಟ್ಟುಕೊಡುವ ಸಂಭವವಿರುತ್ತದೆ; ಆದ್ದರಿಂದ ಹಾಗೆ ಮಾಡಿರಿ. ಯಾರಿಗೆ ಗೊತ್ತು? ಶಿವಾಜಿಯು ಅಂಜಿ ನಿಜವಾಗಿಯೇ ನಮ್ರನಾಗಿ ಪತ್ರ ಕಳಿಸಿರಬಹುದು. ಅವನು ಅಂಜಿರಲೇಬೇಕು, ನಮ್ಮ ದರ್ಪವೇ ಹಾಗಿರುತ್ತದೆ; ಎಲ್ಲರಂತೆ ನಾವಲ್ಲವೆಂಬದನ್ನು ಶಿವಾಜಿಯು ಅರಿತಿರಲೇಬೇಕು.

ಗೋಪಿನಾಥಪಂತನು ಖಾನನ ಎಲ್ಲ ಮಾತುಗಳನ್ನು ಕೇಳಿಕೊಂಡು ಆತನನ್ನು ಕುರಿತು— "ತಾವು ಹೇಳುವಂತೆ ಶಿವಾಜಿಯು ತಮಗೆ ಅಂಜಿ ನಿಜವಾಗಿಯೇ ಪತ್ರವನ್ನು ಬರೆದಿರಬಹುದು; ಯಾಕಂದರೆ ಶಿವಾಜಿಯು ಮಹಾ ದೂರ್ತನು; ತನ್ನಿಂದಾಗದ ಕೆಲಸಕ್ಕೆ ಹುಂಬತನದಿಂದ ಕೈಹಾಕುವವನಲ್ಲ, ಆತನು ನಿಜವಾಗಿಯೇ ವಿನಯವನ್ನು ತೋರಿಸಿದ್ದರೆ, ಆತನನ್ನು ದುರ್ಲಕ್ಷಿಸುವವದು ಹಿತಕರವಲ್ಲ; ಆತನು ಮೋಸದಿಂದ ಪತ್ರ ಬರೆದಿದ್ದ ಪಕ್ಷದಲ್ಲಿ, ನಾವು ಹ್ಯಾಗೂ ಆತನ ಪಾರುಪತ್ಯ ಮಾಡಲಿಕ್ಕೆ ಬಂದೇ ಇರುವೆವು, ಮಾಡಿದರಾಯಿತು. ನಿಜವಾದ ಸಂಗತಿಯನ್ನು ತಿಳುದುಕೊಳ್ಳವದು ನನಗೆ ಕೂಡಿತು, ಎಂದು ಹೇಳಿ ಖಾನನ ಅಪ್ಪಣೆಯನ್ನು ಪಡೆದು ಅಲ್ಲಿಂದ ಕೃಷ್ಣಾಜಿ ಭಾಸ್ಕರನ ಬಳಿಗೆ ಹೋದನು. ನಡೆದ ಪ್ರಸಂಗದಿಂದ ಆತನ ಮನಸ್ಸಿಗೆ ನಿಜವಾಗಿ ಸಮಾಧಾನವಾಗಿತ್ತು. ಆತನು ವಕೀಲನ ಯೋಗಕ್ಷೇಮವನ್ನು ವಿಚಾರಿಸಿ, ಈಗ ನಿಮ್ಮ ಊಟವಾಗುವದರೊಳಗೆ ನಾನು ಬರುವೆನು, ಎಂದು ಹೇಳಿ ಮನೆಗೆ ಹೋದನು. ಮುಂದೆ ಸ್ವಲ್ಪ ವೇಳೆಯಲ್ಲಿಯೇ ಆತನು ಪುನಃ ಕೃಷ್ಣಾಜಿ ಭಾಸ್ಕರನ ಬಳಿಗೆ ಬಂದನು. ಅವರಿಬ್ಬರ ಸಂಭಾಷಣವು ಬಹಳ ಹೊತ್ತಿನವರೆಗೆ ನಡೆಯಿತು. ಮಾತು ನಡೆದು ಏನಿಲ್ಲೆಂದರೂ ಒಂದು ಪ್ರಹರವಾದರೂ ಆಗಿರಬಹುದು. ಅವರ ಸಂಭಾಷಣವನ್ನೆಲ್ಲ ಈಗ ಹೇಳುವ ಪ್ರಯೋಜನವಿಲ್ಲ. ಹೀಗೆಯೇ ಕೆಲವು ದಿನ ಅವರ ಸಂಭಾಷಣಗಳು ನಡೆದವು. ಕೃಷ್ಣಾಜಿ ಭಾಸ್ಕರನು ತನ್ನ ಒಡೆಯನನ್ನು ವಿಶಿಷ್ಟ ರೀತಿಯಿಂದ ನಡೆಯುವಂತೆ ಮಾಡಿದರೆ, ಗೋಪಿನಾಥ ಪಂತನು ತನ್ನ ಒಡೆಯನನ್ನು ವಿಶಿಷ್ಟ ರೀತಿಯಿಂದ ನಡೆಸುವಂತೆ ಮಾಡಬೇಕೆಂದು ಅವರಿಬ್ಬರು ಗೊತ್ತುಮಾಡಿಕೊಂಡರು. ಹೀಗೆ ಪರಸ್ಪರರ ಸಂಭಾಷಣಗಳೂ, ವಾಗ್ವಾದಗಳೂ ಆಗಿ, ಪರಸ್ಪರರು ತಮ್ಮ ಹೊಟ್ಟೆಯೊಳಗಿನ ನಿಜವಾದ ಮಾತುಗಳನ್ನು ಹೇಳಿದಂತೆ ಒಬ್ಬರ ಮುಂದೊಬ್ಬರು ಹೇಳಿ, ತಾವು ಹೀಗೆ ಹೀಗೆ ನಡೆಯಬೇಕೆಂದು ನಿರ್ಧರಿಸಿಕೊಂಡರು.

ಅಫಜುಲಖಾನನು ದಿನಾಲು ಗೋಪಿನಾಥ ಪಂತನನ್ನು ಕರೆಸಿ ನಡೆದ ಸಂಗತಿಯನ್ನು ವಿಚಾರಿಸುತ್ತಲಿದ್ದನು. ಒಂದು ದಿನ ಗೋಪಿನಾಥ ಪಂತನು ವಕೀಲನ ಹೊಟ್ಟೆಯೊಳಗಿನ ನಿಜವಾದ ಮಾತೆಂದು ಖಾನನ ಮುಂದೆ ಹೇಳಿದ ಸಂಗತಿಯು ಮೋಜಿನದಿರುವದು. ಆತನು

ಹೇಳಿದ್ದೇನಂದರೆ— ಖಾನಸಾಹೇಬ, ತಮಗೆ ಈ ಪ್ರಸಂಗದಲ್ಲಿ ವಿಲಕ್ಷಣವಾದ ಯಶಸ್ಸು ಪ್ರಾಪ್ತವಾಗುವ ಸಂಭವವಿರುತ್ತದೆ. ಶಿವಾಜಿಯು ವಿಜಾಪುರದವರೊಡನೆ ವಿರೋಧವನ್ನು ಬಳಿಸಲು ಎಷ್ಟು ಮಾತ್ರವೂ ಇಚ್ಛಿಸುವದಿಲ್ಲ. ಆತನು ಖಾನಸಾಹೇಬರನ್ನು ಕಂಡು, ಅವರೊಡನೆ ನಾಲ್ಕು ಮಾತುಗಳನ್ನಾಡಿ, ಅವರು ಹೇಳಿದಂತೆ ಕೇಳುತ್ತೇನೆಂದು ಅನ್ನುತ್ತಾನಂತೆ. ವಿಜಾಪುರದ ಸಾಮರ್ಥ್ಯವೆಷ್ಟೆಂಬದು ಆತನಿಗೆ ಒಡೆದು ಕಾಣುತ್ತದೆ; ಅಂದ ಬಳಿಕ ಆತನು ವಿರೋಧವನ್ನು ಯಾಕೆ ಬಳಿಸುವನು? ತಮ್ಮ ಸಾಮರ್ಥ್ಯವನ್ನೂ, ತಮ್ಮ ಪ್ರಚಂಡವಾದ ಸೈನ್ಯವನ್ನೂ ನೋಡಿ ಆತನು ಅಂಜಿ ನಿಜವಾಗಿಯೇ ಶರಣು ಬಂದಿರುವನು. ಇಂಥ ಪ್ರಸಂಗದಲ್ಲಿ ತಾವು ದೊಡ್ಡಿಸ್ತನ ದಿಂದ ಆತನನ್ನು ವಶಮಾಡಿಕೊಂಡರೆ ಬಹಳ ಹಿತವಾಗುವದು. ಇದರಿಂದ ಪ್ರಬಲನಾಗುತ್ತ ನಡೆದಿದ್ದ ಒಬ್ಬ ಶತ್ರುವನ್ನು ತಾವು ಇಲ್ಲದಂತೆ ಮಾಡಿದ ಹಾಗಾಗುವದು. ದಿಲ್ಲಿಯ ಔರಂಗಜೇಬ ಬಾದಶಹನು ವಿಜಾಪುರದ ಬಾದಶಾಹಿಯನ್ನು ಮುಣುಗಿಸಬೇಕೆಂದು ಎಣಿಕೆ ಹಾಕುತ್ತಿರುವನು. ಇಂಥ ಪ್ರಸಂಗದಲ್ಲಿ ಶಿವಾಜಿಯೊಬ್ಬನನ್ನು ನಮ್ಮ ಶತ್ರುವಾಗಿ ಮಾಡಿಕೊಂಡರೆ, ಬಹಳ ತ್ರಾಸವಾದೀತು. ಇಂಥ ಪ್ರಸಂಗದಲ್ಲಿ ಬಹು ದೂರ ಲಕ್ಷ್ಯಕೊಟ್ಟು ಯೋಗ್ಯವಿಚಾರ ಮಾಡಲಿಕ್ಕೆ ತಮ್ಮಂಥ ಮುತ್ಸದ್ದಿಗಳು ಸದ್ಯಕ್ಕೆ ವಿಜಾಪುರದ ದರ್ಬಾರಿನಲ್ಲಿ ಬೇರೊಬ್ಬರಿಲ್ಲ. ಆದ್ದರಿಂದ ನೀವು ಬಾದಶಹರಿಗೇನೂ ತಿಳಿಸದೆ, ಶಿವಾಜಿಯೊಡನೆ ಸಖ್ಯಬೆಳಿಸಿ ಬಾದಶಾಹಿಯ ನಿಜವಾದ ಹಿತವನ್ನು ಸಾಧಿಸಿರಿ; ಬಾದಶಹರಿಗೆ ಹಿಂದಿನಿಂದ ತಮ್ಮ ದೂರದರ್ಶಿತ್ವದ ಕಾರ್ಯವು ಮನಸ್ಸಿಗೆ ಬಂದು, ಅವರೂ ನಿಮ್ಮನ್ನು ಶ್ಲಾಘಿಸಿಬಹುದು.

ಗೋಪಿನಾಥ ಪಂತನ ಈ ಮಾತುಗಳನ್ನು ಕೇಳಿ ಅಫಜುಲಖಾನನು ಆನಂದಭರಿತ ನಾದನು. ತನ್ನ ಕೀರ್ತಿಯನ್ನು ದೂರದಿಂದಲೇ ಕೇಳಿ ಶಿವಾಜಿಯು ಹೆದರಿ ಹೋಗಿರುವದ ರಿಂದ, ಆತನು ನನ್ನೊಡನೆ ಪ್ರತ್ಯಕ್ಷ ಯುದ್ಧ ಮಾಡಲಾರನೆಂದು ಭಾವಿಸಿದನು. ಆದರೂ ತಾನು ಒಮ್ಮೆಲೆ ಶಿವಾಜಿಯೊಡನೆ ಸಖ್ಯಬೆಳೆಸುವ ಗೊಡವಿಗೆ ಹೋಗದೆ, ಸ್ವಲ್ಪ ಬಿಗಿಹಿಡಿದು ಅವನು ಹಣ್ಣಿಗೆ ಬರುವಂತೆ ಮಾಡಬೇಕು ಎಂದು ಯೋಚಿಸಿ ಗೋಪಿನಾಥ ಪಂತನನ್ನು ಕುರಿತು—ಪಂತ,ನಾನು ನಿಮ್ಮನ್ನು ದೊಡ್ಡ ಮುತ್ಸದ್ದಿಗಳೆಂದು ತಿಳಿಯುವೆನು. ಆದರೆ ಒಮ್ಮೊಮ್ಮೆ ನಿಮ್ಮ ಮುತ್ಸದ್ದಿಗಿರಿಯು ತಪ್ಪುವದು, ಶಿವಾಜಿಯು ಸಂಭಾವಿತನಲ್ಲ. ಆತನು ತನ್ನ ವಕೀಲನ ಮುಖಾಂತರ ನಿಮ್ಮನ್ನು ಮರುಳುಮಾಡಿದ ಹಾಗೆ ತೋರುತ್ತದೆ. ಈಗ ನಮ್ಮನ್ನು ಮಬ್ಬಿಗೆ ಹಾಕಿ, ನಮ್ಮ ಮೋರೆಯು ವಿಜಾಪುರದ ಕಡೆಗೆ ತಿರುಗಿದ ಕೂಡಲೆ ಆ ಪುಂಡನು ತನ್ನ ಕಾಯಕವನ್ನು ನಡಿಸದೆ ಬಿಡನು. ಆತನು ಬಾದಶಾಹಿಯ ಒಂದೊಂದೇ ಕೋಟೆಯನ್ನು ಕೈವಶಮಾಡಿಕೊಳ್ಳದೆ ಇರನು. ಆತನು ತನ್ನ ವಕೀಲನಿಗೆ ಕಲಿಸತಕ್ಕದ್ದನ್ನು ಚೆನ್ನಾಗಿ ಕಲಿಸಿದ ಹಾಗೆತೋರುತ್ತದೆ. ನಿಮ್ಮಂಥವರು ಇಷ್ಟು ಮರುಳಾಗಬೇಕಾದರೆ, ವಕೀಲನಾದರೂ ಮಾತಿನಲ್ಲಿ ಪಟಾಯಿತನಿದ್ದಂತೆ ತೋರುತ್ತದೆ. ಪಂತ, ನೀವು ಹೇಳುವಂತೆ ಔರಂಗಜೇಬ ಬಾದಶಹನು ಸದ್ಯಕ್ಕೆ ನಮ್ಮ ಮೇಲೆ ಸಾಗಿಬರುವ ಸಂಭವವಿಲ್ಲ; ಯಾಕಂದರೆ, ಅವನ ಸಿಂಹಾಸನವೇ ಅವನಿಗೆ

ಇನ್ನೂ ಸ್ಥಿರವಾಗಿರುವದಿಲ್ಲ, ಗೃಹಕಲಹದಿಂದ ಅವನು ಹೊಯ್ದಾಡುತ್ತಿರುವನು. ಆತನು ತನ್ನ ಮನೆಯಲ್ಲಿ ತಾನು ನಿಶ್ಚಿಂತನಾಗಿರಲಿಕ್ಕೆ ಸ್ವಲ್ಪವಾದರೂ ಅವಕಾಶವಿರುವದು. ಇಂಥ ಸ್ಥಿತಿಯಲ್ಲಿ ವಿಜಾಪುರದ ಕಡೆಗೆ ಆತನು ಸಾಗಿ ಬರಲಾರನು. ಅದರಲ್ಲಿ ಶಿವಾಜಿಯೊಡನೆ ಸಖ್ಯ ಬೆಳಿಸಿ, ಆತನ ತಂತ್ರದಂತೆ ವಿಜಾಪುರದ ರಾಜಕಾರಣವನ್ನು ಆಲಮಗೀರನು ನಡಿಸುವದಂತು ತೀರ ಅಸಂಭವವು.

ಖಾನನ ಈ ಮಾತುಗಳನ್ನು ಕೇಳಿ ಗೋಪೀನಾಥ ಪಂತನು — ಖಾನಸಾಹೇಬ, ಶಿವಾಜಿಗೆ ಆಲಮಗೀರನು ಬರೆದ ಸಖ್ಯದ ಪತ್ರಗಳಿರುವವು. ಒಂದು ಪತ್ರದಲ್ಲಂತು ಶಿವಾಜಿಗೆ ಆ ಧೂರ್ತ ಬಾದಶಹನು ಸ್ಪಷ್ಟವಾಗಿ ಬರೆದಿರುವುದೇನೆಂದರೆ— ''ನೀನು ನಮ್ಮ ಮಾಂಡಲೀಕನೆನಿಸಿ ಅತ್ತಕಡೆಯ ಕಾರಭಾರವನ್ನು ನಡೆಸಿದರೆ, ನಾವು ನಿನಗೆ ಎಷ್ಟು ಮಾತ್ರವೂ ಪ್ರತಿಬಂಧ ಮಾಡಲಾರೆವು; ಆದರೆ ನೀನು ಸ್ವತಂತ್ರ ರಾಜ್ಯವನ್ನು ಸ್ಥಾಪಿಸುವ ಉಸಾಬರಿಗೆ ಹೋದರೆ ಮಾತ್ರ ಅದನ್ನು ನಾವು ನಡೆಯಗೊಡಲಿಕ್ಕಿಲ್ಲ.'' ಖಾನಸಾಹೇಬ, ತಾವು ಔರಂಗಜೇಬನ ತಂತ್ರಗಾರಿಕೆಯನ್ನು ಚನ್ನಾಗಿ ಅರಿತಂತೆ ತೋರುವದಿಲ್ಲ. ಸದ್ಯಕ್ಕೆ ಶಿವಾಜಿಯು ಸುಳ್ಳೇ ಹೆದರಿದ ಹಾಗೆ ತೋರಿಸುತ್ತಿದ್ದರೂ, ಅದನ್ನು ನಿಜವೆಂದು ತಿಳಿದು ನೀವು ನಡೆಯುವದು ನನಗೆ ಯೋಗ್ಯವಾಗಿ ತೋರುತ್ತದೆ. ಶಿವಾಜಿಯ ಮನಸ್ಸಿನಲ್ಲಿ ವಿಜಾಪುರ ದವರ ಸಂಗಡ ಸ್ನೇಹದಿಂದಿರಬೇಕೆಂದು ಇರುತ್ತದೆಂದು ನಾನು ಹೇಳುವದಿಲ್ಲ; ಅದರಂತೆ ಆತನು ದಿಲ್ಲಿಯ ಬಾದಶಹನ ಸಂಗಡಲಾದರೂ ಸ್ನೇಹದಿಂದ ನಡೆಯಬೇಕೆಂದಿರುತ್ತಾನೆಂತಲೂ ನಾನು ಹೇಳುವದಿಲ್ಲ; ಆದರೆ ಸದ್ಯಕ್ಕೆ ತಾನು ದುರ್ಬಲನಿರುವದರಿಂದ ಯಾರಾದರೊಬ್ಬರ ಸ್ನೇಹವನ್ನು ಬೆಳಿಸಿ ತನ್ನ ಸಂರಕ್ಷಣ ಮಾಡಿಕೊಳ್ಳಬೇಕೆಂದು ಆತನು ಹೆಣಗುವನು. ಇಂಥ ಪ್ರಸಂಗದಲ್ಲಿ ನಾವು ಅವನ ಸ್ನೇಹವನ್ನು ಸಂಪಾದಿಸಿ, ಯುಕ್ತಿಯಿಂದ ನಮ್ಮ ಕಾರ್ಯವನ್ನು ಸಾಧಿಸುವದು ಯೋಗ್ಯವಾಗಿ ತೋರುತ್ತದೆ. ಈಗ ಆತನ ಇಚ್ಛೆಯಂತೆ ಆತನ ಸಂಗಡ ಸ್ನೇಹವನ್ನು ಬಳಿಸಿ ಆತನನ್ನು ಕೈಯಲ್ಲಿ ತಕ್ಕೊಳ್ಳಿರಿ; ಹಿಂದಿನಿಂದ ಬೇಕಾದರೆ ಅವನನ್ನು ಸುಬೇದಾರ ನನ್ನಾಗಿಯಾದರೂ ನಿಯಮಿಸಿರಿ; ಇಲ್ಲವೆ ವಿಜಾಪುರಕ್ಕೆ ಬಾದಶಹನನ್ನು ಕಾಣಲಿಕ್ಕೆಂದು ಆತನನ್ನು ಕರಕೊಂಡುಹೋಗಿ ಅಲ್ಲಿಯೇ ಯಾವದೊಂದು ಕೆಲಸವನ್ನು ಕೊಟ್ಟಾದರೂ ಇಟ್ಟುಕೊಳ್ಳಿರಿ; ಆದರೆ ಈಗಲೇ ಆತನಿಗೆ—''ನಾವು ನಿನ್ನನ್ನು ಸೆರೆ ಹಿಡಿಯತಕ್ಕವರು, ವಿಜಾಪುರಕ್ಕೆ ಹಿಡಕೊಂಡು ಹೋಗತಕ್ಕವರು'' ಎಂದು ಹೇಳಿಕಳಿಸಿ ಮನಸ್ಸು ನೋಯಿಸಬೇಡಿರಿ. ಇದಕ್ಕಿಂತ ಹೆಚ್ಚಿಗೆ ನಾನೇನು ಹೇಳುವದಿಲ್ಲ, ಶಿವಾಜಿಯು ತನ್ನ ವಕೀಲನನ್ನು ಇಷ್ಟು ಮಾತು ಹೇಳುವದಕ್ಕಾಗಿಯೇ ಕಳಿಸಿರುತ್ತಾನೆ; ಎರಡನೆಯದೇನೂ ಇಲ್ಲ ಆತನ ಇಚ್ಛೆಗೆ ವಿರುದ್ಧವಾಗಿ ನಡೆದರೆ ಕೆಲಸ ಕೆಡುವ ಹಾಗಿದೆ. ಇದರ ಮೇಲೆ ತಮ್ಮ ಇಚ್ಛೆಗೆ ಬಂದಂತೆ ಮಾಡಬಹುದು. ತಮ್ಮ ದರ್ಪಕ್ಕೆ ಶಿವಾಜಿಯು ಹೆದರಿರುವದೇನೋ ನಿಜವು.

ಅಫಜುಲಖಾನ—ನಾನು ತಮ್ಮ ಮಾತಿಗೆ ಹೊರತಾಗಿರುವದಿಲ್ಲ, ತಮ್ಮ ವಿಚಾರಗಳು ಯಾವಾಗಲೂ ಉದಾತ್ತವಾಗಿರುತ್ತವೆಂಬದನ್ನು ನಾನು ಬಲ್ಲೆನು. ತಮ್ಮ ಆಲೋಚನೆಯ

ವಿಷಯವಾಗಿ ನನಗೆ ಎಂದೂ ಸಂಶಯ ಬರುವ ಹಾಗಿಲ್ಲ. ತಮ್ಮ ಮೇಲೆ ನನ್ನ ವಿಶ್ವಾಸ ಹೆಚ್ಚಿರುತ್ತದೆಂಬದನ್ನು ನಾನು ಬಾಯಿಬಿಚ್ಚಿ ಹೇಳುವ ಕಾರಣವಿಲ್ಲ; ಆದರೆ, ನಾವು ಒಮ್ಮೆಲೆ ಶಿವಾಜಿಗೆ ಅನುಕೂಲವಾಗಿ ನಡೆಯುವದು ಸರಿಯಲ್ಲ. ಹಾಗೆ ನಡೆದರೆ, ನಮ್ಮ ಸಾಮರ್ಥ್ಯದ, ಹಾಗು ಸಿದ್ಧತೆಯ ವಿಷಯವಾಗಿ ಆತನಲ್ಲಿ ಸಂಶಯವು ಉತ್ಪನ್ನವಾಗಬಹುದು. ನಾವು ಅಪೂರ್ಣ ಸಿದ್ಧತೆಯಿಂದ ಬಂದಿರುವೆವೆಂದು ಆತನು ಭಾವಿಸಬಹುದು. ನಿಜವಾಗಿ ಆತನು ನಮ್ರನಾಗಿದ್ದರೆ ನಾವೂ ಆತನನ್ನು ಕ್ಷಮಿಸಬಹುದು. ಆದರೆ ಇಲ್ಲಿಯೇ ಯಾವ ಮಾತಿನ ನಿರ್ಣಯವನ್ನೂ ಮಾಡುವ ಹಾಗಿಲ್ಲ. ಆತನು ಹಜರತ್ತರವರಿಗೆ ಮುಜುರೆ ಮಾಡುವದಕ್ಕಾಗಿ ನಮ್ಮ ಸಂಗಡ ವಿಜಾಪುರಕ್ಕೆ ಬರಲೇಬೇಕು. ಈ ಮಾತನ್ನು ಆತನ ವಕೀಲನಿಗೆ ತಿಳಿಸಿರಿ. ಅದಕ್ಕೆ ಒಪ್ಪಿಕೊಂಡರೆ ಮುಂದಿನ ಮಾತು. ಇದು ಮುಖ್ಯವಾದ ನಮ್ಮ ಹೊಟ್ಟೆಯೊಳಗಿನ ಗುಟ್ಟು ಇರುತ್ತದೆ. ಪಂತ, ನಿಮಗೆ ಹ್ಯಾಗೆ ಕಾಣುತ್ತದೆ? ಹೀಗೆ ಯುಕ್ತಿಯಿಂದ ಆತನನ್ನು ಇಲ್ಲಿಂದ ಹೊರಡಿಸಿಕೊಂಡು ಹೋಗದಿದ್ದರೆ ನಮ್ಮ ಪ್ರತಿಜ್ಞೆಯು ಹ್ಯಾಗೆ ನೆರವೇರಬೇಕು? ನನ್ನ ಮನಸ್ಸಿನ ಮುಖ್ಯ ವಿಚಾರವೆಂದರೆ, ಶಿವಾಜಿಯನ್ನು ಇಲ್ಲದಂತೆ ಮಾಡುವದು. ಆತನು ನಮ್ಮ ಬಾದಶಾಹಿಯ ಶತ್ರುವಾಗಿರುವನು. ಇಂದಲ್ಲ ನಾಳೆಯಾದರೂ ಪ್ರಬಲನಾಗಿ ನಮ್ಮ ಗಂಟಲಿಗೆ ಗಾಣವಾಗತಕ್ಕವನೇ! ಠಕ್ಕರಿಗೆ ಮಹಾ ಠಕ್ಕರಾಗಿ ನಾವೂ ಶಿವಾಜಿಯೊಡನೆ ಹೊರಗೆ ವಿಶ್ವಾಸದಿಂದ ನಡೆದು, ವಿಶ್ವಾಸಘಾತದಿಂದ ಅವನನ್ನು ನಾಶಗೊಳಿಸಲೇಬೇಕು. ಇಲ್ಲಿ ಆ ಕಾರ್ಯವು ಸಾಧಿಸದಿದ್ದರೆ, ವಿಜಾಪುರಕ್ಕೆ ಅವನನ್ನು ಕರಕೊಂಡು ಹೋಗಿ ಕಾರ್ಯವನ್ನು ಸಾಧಿಸಬೇಕು. ನಾಶಮಾಡದಿದ್ದರೂ ವಿಜಾಪುರದಲ್ಲಿ ಅವನನ್ನು ಸೆರೆಯಲ್ಲಾದರೂ ಇರಿಸಬೇಕು.

ಖಾನನ ಈ ಮಾತುಗಳನ್ನು ಕೇಳಿ, ವಿಶೇಷವಾಗಿ ಖಾನನ ವಿಶ್ವಾಸಘಾತದ ವಿಚಾರವನ್ನು ಕೇಳಿ, ಗೋಪಿನಾಥಪಂತನು ಚಕಿತನಾದನು. ಆತನು ಏನೂ ಮಾತನಾಡದೆ ಸುಮ್ಮನೆ ಕುಳಿತುಕೊಂಡನು. ತನ್ನ ಮಾತು ಪಂತರಿಗೆ ಸೇರಲಿಲ್ಲೆಂಬದನ್ನು ಖಾನನು ಸ್ಪಷ್ಟವಾಗಿ ಅರಿತುಕೊಂಡನು. ಆತನು ಪಂತರನ್ನು ಕುರಿತು—ಪಂತ,ಯಾಕೆ? ನನ್ನ ಮಾತು ತಮ್ಮ ಮನಸ್ಸಿಗೆ ಬರಲಿಲ್ಲೆಂಬಂತೆ ಕಾಣುತ್ತದೆ; ಹಾಗಿದ್ದರೆ ಸ್ಪಷ್ಟವಾಗಿ ಹೇಳಬೇಕು. ನಿಮ್ಮ ಮುಂದೆ ಯಾವ ಮಾತನ್ನೂ ಮುಚ್ಚಿಡುವ ಸಾಂಪ್ರದಾಯವಿಲ್ಲದ್ದರಿಂದ ನಾನು ಎಲ್ಲವನ್ನೂ ಆಡಿಬಿಟ್ಟಿದ್ದೇನೆ. ಹೇಳುವದನ್ನು ಸ್ಪಷ್ಟವಾಗಿ ನೀವೂ ಹೇಳಿಬಿಡಬೇಕು, ಅನ್ನಲು, ಗೋಪಿನಾಥ ಪಂತನು ಸ್ವಲ್ಪ ಹೊತ್ತು ಸುಮ್ಮನಿದ್ದು ಆಮೇಲೆ ಒಮ್ಮೆಲೆ ಖಾನನನ್ನು ಕುರಿತು—ಖಾನಸಾಹೇಬ, ನಾನು ನಿಮ್ಮ ಹಾಗು ಹಜರತ್ತರ ಅನ್ನದಿಂದ ದೊಡ್ಡವನಾಗಿರುವೆನು. ಈವೊತ್ತಿಗೂ ಉಣ್ಣುವದು ನಿಮ್ಮ ಅನ್ನ. ಹಚ್ಚುವದು ನಿಮ್ಮ ದೀಪ. ನಾನು ನಿಮ್ಮ ಸೇವಕನು. ನನ್ನನ್ನು ಸನ್ಮಾನಪೂರ್ವಕ ವಾಗಿ ನೀವು ನಡಿಸಿಕೊಳ್ಳುವಿರಿ; ಬೇಕಾದಾಗ ನಿಸ್ಸಂಕೋಚದಿಂದ ಸ್ಪಷ್ಟವಾಗಿ ಮಾತಾಡುತ್ತೇನೆ. ಅದರಂತೆ ಈಗಲೂ ಮಾತಾಡುವೆನು. ಒಳಗೊಂದು ಹೊರಗೊಂದು ನನಗೆ ಗೊತ್ತಿಲ್ಲ; ಈ ಮಾತು ತಮಗೂ ಗೊತ್ತಿರುವದರಿಂದ, ನಾನು ಈಗ ಸ್ಪಷ್ಟ ಮಾತಾಡುವದಕ್ಕಾಗಿ ಕ್ಷಮಿಸಬೇಕು.

ಶಿವಾಜಿಯೊಡನೆ ಮರೆಮೋಸಮಾಡುವದು ನನ್ನ ಮನಸ್ಸಿಗೆ ಬರುವದಿಲ್ಲ. ಎದುರಿಗೆ ನಿಂತು ಶಿವಾಜಿಯ ಶಾಸನಮಾಡುವ ಯೋಗ್ಯತೆಯು ನಮ್ಮಲ್ಲಿಲ್ಲವೆಂತಲ್ಲ. ಅಂದಬಳಿಕ ಮೋಸ ಮಾಡುವದೇಕೆ? ''ನೀನು ನಮಗೆ ಶರಣು ಬರಲೇಬೇಕೆಂದು'' ಹೇಳಿದರಾಯಿತು. ''ನಿನ್ನ ವಿಶ್ವಾಸವು ನಮಗಿಲ್ಲ. ನೀನು ಶರಣು ಬಾ. ನಮ್ಮ ಮನಸ್ಸಿಗೆ ಬಂದಂತೆ ವ್ಯವಸ್ಥೆ ಮಾಡುವೆವು.'' ಎಂದು ಸ್ಪಷ್ಟವಾಗಿ ಈಗ ಹೇಳಿ ಕಳಿಸಿಬಿಡಿರಿ. ಆತನನ್ನು ಮೋಸಗೊಳಿಸ ಬೇಡಿರಿ. ಈ ಮೋಸಗೊಳಿಸುವ ಪ್ರಸಂಗದಲ್ಲಿ ನನ್ನನ್ನಾದರೂ ಸೇರಿಸಿಕೊಳ್ಳ ಬೇಡಿರಿ. ಮುತ್ಸದ್ದಿಗಿರಿಯ ಕೆಲಸವನ್ನು ನಾನು ಮಾಡುವೆನು; ಆದರೆ ಸರಳತನದಿಂದಾಗುವದನ್ನು ಮಾತ್ರ ಮಾಡುವೆನು. ಶಿವಾಜಿಗೆ ಇಲ್ಲಿ ಅಭಯವನ್ನು ಕೊಟ್ಟು, ವಿಜಾಪುರದಲ್ಲಿ ಆತನ ಕುತ್ತಿಗೆಯ ಮೇಲೆ ಖಡ್ಗವಿಡುವದು ನನ್ನ ಮನಸ್ಸಿಗೆ ಬರುವದಿಲ್ಲ! ಈಗಲೇ ಆತನ ಪಾರಿಪತ್ಯ ಮಾಡಲಿಕ್ಕೆ ನಿಮ್ಮಲ್ಲೇನು ಶಕ್ತಿಯಿಲ್ಲವೆ? ಅಂದಬಳಿಕ ಮೋಸವೇಕೆ? ಶಹಾಜಿರಾಜರು ಹಜರತಿಯ ಏಕನಿಷ್ಠ ನೌಕರರು; ಶಿವಾಜಿಯು ಅವರ ಮಗನು. ಆದ ತಪ್ಪನ್ನು ಕ್ಷಮಿಸಿ ಆತನನ್ನು ನಮ್ಮವನನ್ನಾಗಿ ಮಾಡಿಕೊಳ್ಳಲಿಕ್ಕೆ ಉತ್ತಮ ಸಂಧಿಯು ಈಗ ಪ್ರಾಪ್ತವಾಗಿರುವದು; ಒಟ್ಟಿಗೆ ವಿಶ್ವಾಸಘಾತಕ್ಕೆ ನನ್ನ ಒಪ್ಪಿಗೆಯಿಲ್ಲವು.

ಗೋಪಿನಾಥಪಂತನ ಈ ನಿರ್ಧಾರದ ಮಾತುಗಳನ್ನು ಕೇಳಿ ಖಾನನನಿಗೂ ಕೂಡ ಕ್ಷಣಹೊತ್ತು ಆಶ್ಚರ್ಯವಾಯಿತು. ಗೋಪಿನಾಥಪಂತನು ಕೇವಲ ನಿಸ್ಪೃಹಿಯೂ, ತನ್ನ ನಿಜವಾದ ಹಿತಕರ್ತೃವೂ ಎಂದು ಬಹುದಿವಸದಿಂದ ಖಾನನು ನಂಬಿದ್ದರಿಂದ, ಆತನ ವಿರುದ್ಧ ಮಾತಾಡಲಿಕ್ಕೆ ಖಾನನಿಗೆ ಧೈರ್ಯವಾಗಲಿಲ್ಲ. ಆತನು ಗೋಪಿನಾಥಪಂತನನ್ನು ಕುರಿತು— ಪಂತ, ಈಗ ಮೋಸ ಮಾಡಲಿಕ್ಕೆ ಪ್ರತ್ಯಕ್ಷ ಇನ್ನೂ ನಾನು ನಿಂತಿರುವದಿಲವಷ್ಟೆ? ಸುಮ್ಮನೆ ನನ್ನದೊಂದು ಕಡೆಯ ವಿಚಾರವೆಂದು ನಾನು ನಿಮ್ಮ ಮುಂದೆ ಹೇಳಿದೆನಿಷ್ಟೆ. ಆತನನ್ನು ಸೆರೆಯಲ್ಲಿರಿಸಬೇಕೆಂದು ನನ್ನ ಮನಸ್ಸಿನಲ್ಲಿರುವದಿಲ್ಲ; ಆದರೆ ''ಆತನನ್ನು ಹಿಡತರುವೆನು, ಇಲ್ಲವೆ ಹೊಡೆದು ತರುವೆನು'' ಎಂದು ಮಾಡಿದ ನನ್ನ ಪ್ರತಿಜ್ಞೆಯನ್ನು ಪೂರ್ಣ ಮಾಡಿಕೊಳ್ಳ ಬಾರದೇನು? ಇಲ್ಲಿಯೇ ನಾವು ಏನಾದರೂ ವ್ಯವಸ್ಥೆ ಮಾಡಿದರೆ, ಹಜರತ್ತರು ಏನು ತಿಳಿದು ಕೊಂಡಾರು? ಜನರು ಏನು ಅಂದಾರು? ''ಇವನಿಗೂ ಶಿವಾಜಿಯು ಮಂಕುಬೂದಿ ಹಚ್ಚಿ ಕಳಿಸಿದನು'' ಎಂದು ಜನರು ಅನ್ನಲಿಕ್ಕಿಲ್ಲವೆ? ಹೀಗೆ ಎಷ್ಟು ಜನರು ಹೋಗಿ ಹಿಂದಿರುಗಿ ಬಂದಿರುವದಿಲ್ಲ? ನಾನೂ ಅವರೊಳಗಿನವನೊಬ್ಬನು ಆಗಲಿಯಾ? ನಾನು ಶಿವಾಜಿಯನ್ನು ಕರಕೊಂಡು ಹೋದೆನು ಅನ್ನುವ ಹಾಗೆ ಆದರಾಯಿತು. ಬೇರೆ ನನ್ನಿಂದ ಮರೆಯಾಗುವ ಹಾಗಿಲ್ಲ. ಮೋಸವಾಗುವ ಹಾಗಿಲ್ಲ.

ತಾನು ಇಷ್ಟು ನಿಷ್ಠುರವಾಗಿ ಮಾತಾಡಿದರೂ ಖಾನನು ಸಮಾಧಾನದಿಂದ ಮಾತಾಡುವದನ್ನು ನೋಡಿ ಗೋಪಿನಾಥ ಪಂತನಿಗೆ ಆಶ್ಚರ್ಯವಾದದ್ದಲ್ಲದೆ, ಆನಂದವೂ ಆಯಿತು. ತಾನು ಬ್ರಾಹ್ಮಣನು, ಶಿವಾಜಿಯು ಬ್ರಾಹ್ಮಣ ಪಕ್ಷಪಾತಿಯು. ಹೀಗಿದ್ದು ತಾನು ಶಿವಾಜಿಯ ಪಕ್ಷವನ್ನು ವಹಿಸಿ ಮಾತಾಡಿದ್ದಕ್ಕಾಗಿ ಖಾನನು ಸಿಟ್ಟಾಗಬಹುದೆಂದು ತಿಳಿದು

ಕೊಂಡಿದ್ದನು. ಆದರೆ ಗೋಪಿನಾಥಪಂತನು ಹೀಗೆ ತಿಳಿದುಕೊಳ್ಳುವ ಕಾರಣವಿದ್ದಿಲ್ಲ; ಯಾಕಂದರೆ ಎಷ್ಟೋ ಸಾರೆ ಹೀಗೆ ಖಾನನಿಗೆ ಆತನು ನಿಷ್ಠುರವಾಗಿ ಹೇಳಿ, ತನ್ನ ಮಾತಿನಂತೆ ಆತನನ್ನು ನಡಿಸಿಕೊಂಡಿದ್ದನು. ಹೀಗಿದ್ದು ಈ ದಿನ ಖಾನನು ಏನನ್ನುವನೋ ಎಂಬ ವಿಕಲ್ಪವು ಗೋಪಿನಾಥ ಪಂತನ ಮನಸ್ಸಿನಲ್ಲಿ ಉತ್ಪನ್ನವಾಗಲಿಕ್ಕೆ ಕಾರಣವೇನಿರ ಬಹುದು? ಬೇರೆ ಕಾರಣವೇನೂ ಇದ್ದಿಲ್ಲ. ಖಾನನನ್ನು ಈದಿನ ನಾನು ಸ್ವಲ್ಪವಾದರು ವಂಚಿಸುವೆನೆಂದು ಆ ಬ್ರಾಹ್ಮಣನ ಮನಸ್ಸೇ ಅವನಿಗೆ ಹೇಳುತ್ತಿತ್ತು. ಕಳ್ಳನ ಜೀವವು ಹುಳ್ಳಹುಳ್ಳಗೆಯೆನ್ನುವದು ಸುಳ್ಳಲ್ಲ.

## ಮಹಾರಾಜರ ನಿಶ್ಚಯವು

ಗೋಪಿನಾಥಪಂತನು ಬಹುಪ್ರಾಮಾಣಿಕನು; ಸ್ವಾಮಿನಿಷ್ಠನು; ಉಂಡಮನೆಗಳ ಎಣಿಸಲಿಕ್ಕೆ ಆತನು ಸರ್ವಥಾ ಮನಸ್ಸು ಮಾಡತಕ್ಕವನಲ್ಲ. ಅಫಜುಲಖಾನನು ವೈದಿಕ ಧರ್ಮದ ದ್ವೇಷಿಯಾಗಿದ್ದು ಆತನು ಮೂರ್ತಿಗಳನ್ನು ಒಡೆದು ಹಿಂದೂ ಜನರನ್ನು ಪರಿಪರಿಯಾಗಿ ಪೀಡಿಸುವದನ್ನು ನೋಡಿ ಆ ಸ್ವಧರ್ಮನಿಷ್ಠ ಬ್ರಾಹ್ಮಣನಿಗೆ ಬಹಳ ದುಃಖವಾಗುತ್ತಿತ್ತು. ಇಂಥ ದುಷ್ಟನ ಸೇವಕನಾಗುವದು ಲಾಂಛನಾಸ್ಪದವೆಂಬ ಸಂಗತಿಯೂ ಮೇಲೆ ಮೇಲೆ ಆತನ ಮನಸ್ಸಿನಲ್ಲಿ ಬರುತ್ತಿತ್ತು; ಆದರೆ ಒಬ್ಬರ ಸೇವಕರಾಗಿರುವವರೆಗೆ ಅವರ ದ್ರೋಹಚಿಂತನ ಮಾಡುವದು ಪಾಪವೆಂದು ಆತನು ತಿಳಿಯುತ್ತಿದ್ದನು. ಆಗಿನ ಮುಸಲ್ಮಾನರಲ್ಲಿ ಬಹುಜನರು ಧನಮದ-ಅಧಿಕಾರ ಮದಗಳಿಂದ ಅಂಧರಾಗಿ ಅವಿವೇಕತನ ದಿಂದ ವರ್ತಿಸಹತ್ತಿ ನಾಶದ ಪಂಥವನ್ನು ಹಿಡಿದಿದ್ದರು. ಇದನ್ನು ನೋಡಿ ಗೋಪಿನಾಥ ಪಂತನಿಗೆ ಬಹಳ ಅಸಮಾಧಾನವಾಗುತ್ತಿತ್ತು; ಆದರೂ ಬಹು ದಿವಸಗಳಿಂದ ಆತನು ಖಾನನ ಹಾಗು ಬಾದಶಹನ ಅನ್ನವನ್ನು ಉಣ್ಣುತ್ತ ಬಂದದ್ದರಿಂದಲೂ, ತನ್ನೊಡನೆ ಖಾನನು ಗೌರವದಿಂದ ನಡಕೊಳ್ಳುತ್ತಿದ್ದದ್ದರಿಂದಲೂ, ಒಮ್ಮೆಲೆ ಮುಸಲ್ಮಾನರ ನೌಕರಿಯನ್ನು ಬಿಡಲಿಕ್ಕೆ ಆತನ ಮನಸ್ಸು ಒಪ್ಪುತ್ತಿದ್ದಿಲ್ಲ. ಹೀಗಿರುವಾಗ ಒಮ್ಮೆ ಆತನಿಗೆ ಶಿವಾಜಿಯ ಭೆಟ್ಟಿಯಾಯಿತು. ಶಿವಾಜಿಯು ಸ್ವಧರ್ಮರಕ್ಷಣಕ್ಕಾಗಿ ಪರಿಪರಿಯಾಗಿ ಕಷ್ಟಪಡುತ್ತಿರುವನೆಂಬ ಸಂಗತಿಯು ಗೋಪಿನಾಥ ಪಂತನಿಗೆ ಕೇಳಿಗೊತ್ತಿತ್ತು; ಮತ್ತು ಶಿವಾಜಿಯ ಶೌರ್ಯ-ಸಾಹಸಗಳ ಹಲವು ಸುದ್ದಿಗಳು ಆತನ ಕಿವಿಗೆ ಮುಟ್ಟಿದ್ದವು. ಆದ್ದರಿಂದ ಶಿವಾಜಿಯ ವಿಷಯವಾಗಿ ಆ ಬ್ರಾಹ್ಮಣನಲ್ಲಿ ಪೂಜ್ಯಬುದ್ಧಿಯು ಮೊದಲಿನಿಂದ ವಾಸಿಸುತ್ತಿತ್ತು. ಅದರಲ್ಲಿ ಶಿವಾಜಿಯಂಥ ತೇಜಸ್ವಿಯ ಪ್ರತ್ಯಕ್ಷ ದರ್ಶನವಾದದ್ದರಿಂದ ಆತನ ಪೂಜ್ಯ ಬುದ್ಧಿಯು ಮತ್ತಿಷ್ಟು ಹೆಚ್ಚಿತು. ಹೀಗೆ ಶಿವಾಜಿಯ ವಿಷಯವಾಗಿ ಪರಮ ಆದರವನ್ನು ಹೊಂದಿದ ಆ ಬ್ರಾಹ್ಮಣನು, ಶಿವಾಜಿಗೆ ತಾನಾಗಿ ಕೇಡುಬಗೆಯದೆ, ತನ್ನ ಸ್ವಾಮಿನಿಷ್ಠೆಗೆ ಬಾಧೆಬಾರದಂತೆ ಆತನಿಗೆ ಸಹಾಯ

ಮಾಡಲಿಕ್ಕೆ ಬರುವಹಾಗಿದ್ದರೆ ಆದಷ್ಟು ಸಹಾಯವನ್ನೇ ಮಾಡಬೇಕೆಂದು ನಿಶ್ಚಯಿಸಿದನು. ಹಿಂದೂ ಜನರಿಗೆ ಧರ್ಮವು ಅತ್ಯಂತ ಪ್ರಿಯವಾದದ್ದು. ಅವರ ಧರ್ಮಕ್ಕೆ ಬಾಧೆಬರುವ ಕಾರ್ಯಗಳನ್ನು ಮುಸಲ್ಮಾನರು ಮಾಡಹತ್ತಿದ್ದರಿಂದ, ಒಮ್ಮೊಮ್ಮೆ ಎಂಥ ಸ್ವಾಮಿನಿಷ್ಠನ ಮನಸ್ಸಾದರೂ ತಿರುಗುತ್ತಿತ್ತು ಅದರಂತೆಯೇ ಈಗ ಗೋಪೀನಾಥ ಪಂತನಂಥ ಪಾಪಭೀರುವಿನ ಮನಸ್ಸಾದರೂ ಅಂಜುತ್ತಂಜುತ್ತ ಶಿವಾಜಿಯ ಕಡೆಗೆ ತಿರುಗಹತ್ತಿತ್ತು; ಆದರೆ ತನ್ನ ಸ್ವಾಮಿಯಾದ ಖಾನನ ಅಹಿತಚಿಂತನವನ್ನು ಆತನು ಎಂದಿಗೂ ಮಾಡುವ ಹಾಗಿದ್ದಿಲ್ಲ, ಹೀಗಾಗಿ ಇತ್ತ ಸ್ವಾಮಿದ್ರೋಹವಾಗಬಾರದು, ಅತ್ತ ಶಿವಾಜಿಯ ಧರ್ಮಕಾರ್ಯಕ್ಕೆ ವಿಘ್ನವನ್ನುಂಟು ಮಾಡಿದ ಪಾತಕಕ್ಕೆ ತಾನು ಗುರಿಯಾಗಬಾರದು, ಎಂಬ ಇತ್ತಡಕಿನಲ್ಲಿ ಸಿಕ್ಕು ಆ ಬ್ರಾಹ್ಮಣನು ಗಾಸಿಯಾಗ ಹತ್ತಿದನು.

ಗೋಪೀನಾಥ ಪಂತನ ಮನಸ್ಸು ಖಾನನ ನಡತೆಯ ವಿಷಯವಾಗಿ ಸಂಶಯಗ್ರಸ್ತವಾಗಿತ್ತು ಯಾಕಂದರೆ ಖಾನನು ಒಮ್ಮೆ ಶಿವಾಜಿಯೊಡನೆ ಅವಿಶ್ವಾಸದಿಂದ ನಡೆಯಬೇಕೆಂದು ಹೇಳಿ, ಮತ್ತೊಮ್ಮೆ ಹಾಗೇನು ನನ್ನ ಮನಸ್ಸಿನಲ್ಲಿಲ್ಲ ಸುಮ್ಮನೆ ಕಡೆಯ ಮಾತೆಂದು ನಿಮ್ಮ ಮುಂದೆ ಆಡಿದೆನು. ಎಂದು ಹೇಳಿದ್ದನು; ಆದ್ದರಿಂದ ಶಿವಾಜಿಗೆ ಖಾನನ ಸಂಗಡ ವಿಶ್ವಾಸದಿಂದ ನಡೆಯುವ ಬಗ್ಗೆ ತಾನು ಜವಾಬುದಾರಿಯಿಂದ ಮೈಮೇಲೆ ತಕ್ಕೊಂಡು ಹೇಳಲಿಕ್ಕೆ ಗೋಪಿನಾಥ ಪಂತನು ಹಿಂದೆಮುಂದೆ ನೋಡಹತ್ತಿದನು. ಈಗ ಖಾನನು ವಿಶ್ವಾಸದ ಮಾತುಗಳನ್ನು ಹೇಳುತ್ತಿದ್ದರೂ, ವಿಜಾಪುರಕ್ಕೆ ಹೋದಬಳಿಕ ತಿರುಗಿ ಬೀಳಲಿಕ್ಕಿಲ್ಲೆಂದು ಯಾರು ಹೇಳಬೇಕು? ಆದ್ದರಿಂದ ಶಿವಾಜಿಯನ್ನು ಬೋಧಿಸುವ ಪಂಚಾಯತಿಗೆ ಹೋಗಬಾರದು. ನೀನು ಹೀಗೆ ಮಾಡೆಂದೂ ಹೇಳಬಾರದು, ಹಾಗೆ ಮಾಡೆಂದೂ ಹೇಳಬಾರದು. ಶಿವಾಜಿಯು ಖಾನನ ವಿಷಯವಾಗಿ ವಿಶ್ವಾಸವನ್ನು ನನ್ನ ಮಾತಿನ ಮೇಲಿಂದಲೇ ಹಿಡಿದರೆ ಹಿಡಿಯುವನು. ಅಷ್ಟು ಮೈಮೇಲೆ ತಕ್ಕೊಳ್ಳುವದು ಹಿತಕರವಾಗಿ ತೋರುವದಿಲ್ಲ. ನನ್ನ ಕೈಯಲ್ಲಿದ್ದಷ್ಟನ್ನು ನಾನು ಮಾಡಬೇಕು, ಇಬ್ಬರ ಭೆಟ್ಟಿಯ ಯೋಗವನ್ನು ಒದಗಿಸಿಕೊಡುವದು ನನ್ನ ಕೆಲಸವು. ಅವರಿಬ್ಬರ ಭೆಟ್ಟಿಯಾದಾಗ ಪರಸ್ಪರರ ಸಮಕ್ಷಮದಲ್ಲಿ ಆಗುವದು ಆದೀತು. ಎಂದು ಯೋಚಿಸಿ, ಕೃಷ್ಣಾಜಿ ಭಾಸ್ಕರನಿಗೆ ನಡೆದ ಸಂಭಾಷಣದ ಸಂಗತಿಯನ್ನು ತಿಳಿಸಿದನು. ಅದನ್ನೆಲ್ಲ ಕೇಳಿಕೊಂಡು ಕೃಷ್ಣಾಜಿ ಭಾಸ್ಕರನು ಗೋಪೀನಾಥ ಪಂತನಿಗೆ—ತಾವು ಹೇಳುವದೆಲ್ಲ ಸರಿಯಾದದ್ದು; ಆದರೆ ಖಾನನ ಮನಸ್ಸಿನಲ್ಲಿದ್ದದ್ದು ಮೇಲೆಯೇ ಕಾಣುತ್ತದೆ. ಹೊತ್ತುಸಿಕ್ಕರೆ ಆತನು ಮಹಾರಾಜರನ್ನು ಘಾತಿಸಲಿಕ್ಕೆ ಹಿಂದೆ ಮುಂದೆ ನೋಡುವಹಾಗಿಲ್ಲ, ಆದ್ದರಿಂದ ನಾವೂ ನಮ್ಮ ಎಚ್ಚರದಿಂದ ಇರಬೇಕಾಗುವದು, ಎಂದು ಹೇಳಿದನು. ಅದಕ್ಕೆ ಪ್ರತಿಯಾಗಿ ಗೋಪೀನಾಥಪಂತನು ಹೆಚ್ಚಿಗೆ ಮಾತಾಡಲಿಲ್ಲ, ಆತನಿಗೆ ಕೃಷ್ಣಾಜಿಪಂತನ ವಿಚಾರವು ಸಮರ್ಪಕವಾಗಿ ತೋರಿದ್ದೇ ಇದಕ್ಕೆ ಕಾರಣವು. ಕೃಷ್ಣಾಜಿಪಂತನು ಸ್ವಲ್ಪ ಉತಾವಳಿಯ ಸ್ವಭಾವದವನಾಗಿದ್ದನು. ಗೋಪಿನಾಥ ಪಂತನು ತನ್ನ ಒಡೆಯನಿಗೆ ವಿಶ್ವಾಸಘಾತ ಮಾಡಿ ತಮಗೆ ಸಹಾಯ ಮಾಡಬೇಕೆಂದು ಇಚ್ಛಿಸುತ್ತಿದ್ದನು. ಮೊಗಲರ ಚಾಕರಿಯನ್ನು ಮಾಡುವಾಗ,

ವಿಶ್ವಾಸಘಾತ ಮಾಡುವದರಿಂದ ಒಂದೂ ಧರ್ಮದ ಸಂರಕ್ಷಣವಾಗುವಂತೆ ಇದ್ದರೆ ವಿಶ್ವಾಸಘಾತ ಮಾಡಲಿಕ್ಕೆ ಚಿಂತೆಯಿಲ್ಲೆಂದು ಕೃಷ್ಣಾಜಿಪಂತನು ತಿಳಿದುಕೊಂಡನು; ಆದರ ಗೋಪೀನಾಥ ಪಂತನು ಹಾಗೆ ತಿಳಿದುಕೊಂಡಿದ್ದಿಲ್ಲ. ತನ್ನ ಒಡೆಯನು ಏನಾದರೂ ವಿಶ್ವಾಸಘಾತ ಮಾಡುವ ಸಂಭವ ತೋರಿದರೇ, ಮಹಾರಾಜರಿಗೆ ಆ ಸುದ್ದಿಯನ್ನು ತಿಳಿಸಿ ಜಾಗ್ರತಗೊಳಿಸುವಲ್ಲಿ ದ್ರೋಹವಾಗದೆಂದು ತಿಳಿದುಕೊಂಡಿದ್ದನು.

ಹೀಗೆ ಅಫಜುಲಖಾನನು ಗೋಪಿನಾಥ ಪಂತನೊಡನೆ ಆಲೋಚನೆಮಾಡಿ ತಾನೊಬ್ಬನೇ ಏಕಾಂತದಲ್ಲಿ ಆಲೋಚಿಸಿ ಕೃಷ್ಣಾಜಿ ಭಾಸ್ಕರನನ್ನು ತನ್ನ ಬಳಿಗೆ ಕರಿಸಿಕೊಂಡು ಶಿವಾಜಿಯ ಮನೋದಯವನ್ನು ಸ್ಪಷ್ಟವಾಗಿ ತಿಳಿಸಬೇಕೆಂದು ಹೇಳಿದನು. ಅದಕ್ಕೆ ಕೃಷ್ಣಾಜಿ ಪಂತನು—ಮಹಾರಾಜರು ತಮ್ಮನ್ನು ಕಾಣಲು ಸಿದ್ಧರಿದ್ದಾರೆ. ಆದರೆ ವಾಯಿಯ ಕಂದರ ವನ್ನಿಳಿದು ಅಲ್ಲಿರುವ ತಮ್ಮ ಛಾವಣಿಯಲ್ಲಿ ಬಂದು ತಮ್ಮನ್ನು ಕಾಣಲಿಕ್ಕೆ ಅವರು ಭಯ ಪಡುವರು; ಅಷ್ಟು ಧೈರ್ಯವು ಅವರಿಗೆ ಸಾಲದು. ಈವರೆಗೆ ಅವರು ಬಾದಶಹ ರಾಜ್ಯದಲ್ಲಿಯ ಪುಂಡಾಟಿಕೆ ಯನ್ನು ಮುರಿದು ಶಾಂತತೆಯನ್ನುಂಟು ಮಾಡುವದಕ್ಕಾಗಿಯೇ ಯತ್ನಿಸಿರುವರು. ತಾವು ಸ್ವತಂತ್ರವಾಗಿ ರಾಜ್ಯವನ್ನು ಸ್ಥಾಪಿಸಬೇಕೆಂದು ಯಾವ ಉದ್ಯೋಗವನ್ನು ಮಾಡಿರುವದಿಲ್ಲ. ಹೀಗಿದ್ದು ಹಜರತ್ತರವರು ವಿಕಲ್ಪವನ್ನು ಭಾವಿಸಿ ನಮ್ಮನ್ನು ಹಿಡಿಯಲಿಕ್ಕೆ ಅಥವಾ ಹೊಡೆಯಲಿಕ್ಕೆ ಮೇಲೆ ಮೇಲೆ ಸರದಾರರನ್ನು ಸೈನ್ಯದೊಡನೆ ಕಳಿಸುತ್ತಿರುವದರಿಂದ ಮಹಾರಾಜರು ಅಂಜಿರುವರು. ಈ ಅಂಜಿಕೆಯು ಒಂದೆರಡು ಸಾರೆ ಒಬ್ಬರನ್ನೊಬ್ಬರು ಕಾಣುವದರಿಂದಲೇ ದೂರವಾಗುವ ಹಾಗಿದೆ; ಆದ್ದರಿಂದ ಖಾವಂದರವರು ದರ್ಶನದ ಯೋಗವನ್ನು ಒದಗಿಸಿ ಕೊಡಬೇಕು. ತಾವು ಪ್ರತಾಪಗಡದ ಬುಡದವರೆಗೆ ಬರಬೇಕು. ಮಾರ್ಗದಲ್ಲಿ ತಮ್ಮ ಸರಬರಾಯಿ ವ್ಯವಸ್ಥೆಯನ್ನು ಉತ್ತಮ ರೀತಿಯಿಂದ ಇಡಲಾಗುವದು; ತಮಗೆ ಬರುವದಕ್ಕಾಗಿ ಹಾದಿಯನ್ನು ಪ್ರಶಸ್ತವಾಗಿ ಮಾಡಲಾಗುವದು; ಆದ್ದರಿಂದ ತಾವು ಅತ್ತಕಡೆಗೆ ಬರುವಂತೆ ಮಾಡಬೇಕು. ಇಲ್ಲದಿದ್ದರೆ ಯೋಗವಿದ್ದಂತೆ ಆಗೇ ಆಗುತ್ತದೆ. ಇದು ಮಹಾರಾಜರ ಮನಸ್ಸಿ ನೊಳಗಿನ ಹೇತುವಾಗಿರುತ್ತದೆ. ತಾವು ದರ್ಶನದ ಯೋಗವನ್ನು ಒದಗಿಸಿಕೊಟ್ಟರೆ, ಎಲ್ಲವೂ ಸುಸೂತ್ರವಾಗಿ ನಡೆದು, ಮಹಾರಾಜರ ನಿಜವಾದ ಹೃದ್ಗತವು ತಮಗೂ ತಿಳಿಯುವದು.

ಅಫಜುಲಖಾನನು ವಕೀಲನ ಈ ಮಾತುಗಳನ್ನೆಲ್ಲ ಕೇಳಿಕೊಂಡು ಮನಸ್ಸಿನಲ್ಲಿ— "ಶಿವಾಜಿಯು ನನಗೆ ಹೆದರಿದ್ದೇ ನಿಜವಾಗಿ ತೋರುತ್ತದೆ. ಇಲ್ಲದಿದ್ದರೆ ಹೀಗೆ ನನ್ನ ಸಲುವಾಗಿ ಬುದ್ಧಿಪೂರ್ವಕವಾಗಿ ಹಾದಿಯನ್ನು ಮಾಡಿಸಿ, ಸರಬರಾಯಿಯ ವ್ಯವಸ್ಥೆಯಿಡಿಸುವ ಕಾರಣವೇನು? ಒಂದು ಪಕ್ಷದಲ್ಲಿ ಅವನು ಹೆದರದಿದ್ದರೂ ಇರಲಿ, ಭೆಟ್ಟಿಯ ಕಾಲದಲ್ಲಿ ನಾನು ಕಾರ್ಯವನ್ನು ಸಾಧಿಸಿಕೊಂಡರೆ ತೀರಿತು. ಎಂದು ಯೋಚಿಸಿ, ವಕೀಲನ ಮಾತಿಗೆ ಒಪ್ಪಿಗೆಯನ್ನಿತ್ತನು. ಆಗ ವಕೀಲನು ಖಾನನನ್ನು ಕುರಿತು— ಖಾವಿಂದ, ತಾವು ಒಪ್ಪಿಕೊಂಡ ಸಂಗತಿಯನ್ನು ನಾನು ಮಹಾರಾಜರಿಗೆ ಹೇಳುವೆನು. ತಮಗೆ ಬರುವದಕ್ಕಾಗಿ ಪ್ರಶಸ್ತ ಮಾರ್ಗವನ್ನು ಮಾಡಿಸಿ, ಸರಬರಾಯಿಯ ವ್ಯವಸ್ಥೆಯನ್ನು ಉತ್ತಮ ರೀತಿಯಿಂದ ಇಡಿಸಿ ತಮಗೆ

ಸುದ್ದಿಯನ್ನು ಮುಟ್ಟಿಸುವೆನು; ಅಂದರೆ ತಮ್ಮ ಸೈನ್ಯದ ತಳಕಿತ್ತಲಿಕ್ಕೆ ನೆಟ್ಟಗಾಗುವದು; ಮತ್ತು ತಮಗೆ ಮಾರ್ಗಾಯಾಸವೂ ಆಗಲಿಕ್ಕಿಲ್ಲ ಎಂದು ಹೇಳಲು, ವಕೀಲನು ಶಿವಾಜಿಯನ್ನು ''ಮಹಾರಾಜರು'' ಎಂದು ಬಹುಮಾನದಿಂದ ಮೇಲೆ ಮೇಲೆ ಕರೆಯುವದನ್ನು ಕೇಳಿ ಖಾನನು ಸಂತಾಪಗೊಂಡನು. ಆತನು ವಕೀಲನನ್ನು ಕುರಿತು— ''ಮಹಾರಾಜರಿಗೆ?'' ಯಾವ ಮಹಾರಾಜರಿಗೆ? ಮಹಾರಾಜರು ಯಾರು? ಶಿವಾಜಿಗೆ ಮಹಾರಾಜನೆಂದು ಯಾರು ಕರೆದಿರುವರು? ಮಹಾರಾಜನೆಂಬ ಬಿರುದು ಸುಮ್ಮನೆ ಸಿಗುವದಿಲ್ಲ. ಇನ್ನು ಮೇಲೆ ಶಿವಾಜಿ ಯೆಂದು ಕರೆಯುತ್ತ ಹೋಗು. ನನ್ನ ಸಂಗಡ ಮತಾಡುವಾಗಾದರೂ ಇಂಥ ಹುಡುಗಾಟಿಗೆ ಮಾಡಬೇಡ ಹೋಗು, ನಿಮ್ಮ ಶಿವಾಜಿಗೆ ಸ್ಪಷ್ಟವಾಗಿ ಹೀಗೆ ಹೇಳು— ನಾವು ನಿನ್ನ ಪ್ರತಾಪಗಡದ ಬುಡದವರಿಗೇ ಏಕೆ, ಪ್ರತಾಪಗಡದ ಮೇಲೆ, ನಿನ್ನ ಅಂತರ್ಗೃಹದಲ್ಲಿ ಸಹ ನಿನ್ನನ್ನು ಕಾಣಲಿಕ್ಕೆ ಬರುವೆವು. ನಿನ್ನ ಭಯವು ನಮಗೆ ಎಷ್ಟು ಮಾತ್ರವೂ ಇರುವದಿಲ್ಲ, ನಿನ್ನದಂತೂ ಇರಲಿ, ಪ್ರತ್ಯಕ್ಷ ಮೃತ್ಯುವಿನ ಭಯವು ಸಹ ನಮಗೆ ಇರುವದಿಲ್ಲ ನಾವು ನಿನ್ನನ್ನು ನಿಶ್ಚಯವಾಗಿ ಸೆರೆಹಿಡಿಯುವೆವು ಅಥವಾ ಕೊಲ್ಲುವೆವು ಎಂಬ ಭಯದಿಂದಲೇ ನೀನು ನಮಗೆ ಶರಣು ಬರುತ್ತೀಯೆಂಬುದನ್ನು ನಾವು ಅರಿತಿರುವೆವು. ನೀನು ನಮಗೆ ಬರೇ ಶರಣು ಬರುವದರಿಂದ ಕಾರ್ಯವಾಗದು, ಹಜರತ್ತರಿಗೆ ಸಾಷ್ಟಾಂಗವಾಗಿ ಎರಗಲಿಕ್ಕೆ ವಿಜಾಪುರಕ್ಕೆ ಬರಲೇಬೇಕು. ಅಂದರೆ ನಿನ್ನ ಬಿಡುಗಡೆಯಾಗುವದು.

ಕೃಷ್ಣಾಜಿ ಭಾಸ್ಕರ—ನಾವೇನು, ತಾವು ಹೇಳಿದ್ದನ್ನು ನಮ್ಮ ಒಡೆಯನ ಮುಂದೆ ಹೇಳತಕ್ಕವರು. ಇಬ್ಬರ ಭೆಟ್ಟಿಯಾದನಂತರ ಎಲ್ಲ ವ್ಯವಸ್ಥೆಯು ಸರಿಯಾಗಿ ಆಗುವದೆಂಬ ವಿಷಯದಲ್ಲಿ ನನಗೆ ಸಂಶಯವಿಲ್ಲ.

ಈ ಮೇರೆಗೆ ನುಡಿದು, ಕೃಷ್ಣಾಜಿ ಭಾಸ್ಕರನು ಅಫಜುಲಖಾನನ ಅಪ್ಪಣೆಯನ್ನು ಪಡೆದು ಪುನಃ ಪಂತಾಜಿ ಗೋಪೀನಾಥನನ್ನು ಕಂಡು ಮಹಾರಾಜರ ಬಳಿಗೆ ಬಂದನು. ಮಹಾರಾಜರು ಯಾವತ್ತು ವೃತ್ತಾಂತವನ್ನು ಕೇಳಿ, ಊಹಿಸತಕ್ಕದ್ದನ್ನು ಊಹಿಸಿದರು. ಇನ್ನು ಮುಂದೆ ಏನು ಮಾಡಬೇಕೆಂಬದನ್ನು ನಿಶ್ಚಯಿಸುವ ಪ್ರಸಂಗವು ಬಂದಿತು. ಇಂಥ ಮಹತ್ವದ ಪ್ರಸಂಗವನ್ನು ಕುರಿತು ನಿಶ್ಚಯಿಸುವಾಗ ಮನಸ್ಸು ಹೊಯ್ದಾಡ ಹತ್ತಿದರೆ, ಭವಾನೀ ಮಾತೆಯನ್ನು ಕೇಳುವ ಸಾಂಪ್ರದಾಯವಿತ್ತು ಆದರಂತೆ ಈ ಪ್ರಸಂಗದಲ್ಲಿಯೂ ಮಹಾರಾಜರು ಭವಾನಿ ಮಾತೆಯನ್ನು ಕೇಳಲು ನಿಶ್ಚಯಿಸಿದರು. ನಿತ್ಯಕ್ರಮದಂತೆ ಭವಾನಿಯ ಪೂಜೆ ಪುನಸ್ಕಾರಗಳನ್ನು ತೀರಿಸಿ, ಧೂಪ-ದೀಪಾದಿಗಳನ್ನು ಸಮರ್ಪಿಸಿ, ಒಂದು ಬದಿಯಲ್ಲಿ ಜೀಜಾಬಾಯಿಯ ವರನ್ನೂ, ಮತ್ತೊಂದು ಬದಿಯಲ್ಲಿ ಚೀಟನೀಸನಾದ ಬಾಳಾಜಿ ಆವಜಿಯನ್ನೂ ಕುಳ್ಳಿರಿಸಿ ಕೊಂಡು, ತಮ್ಮ ಮೈಯಲ್ಲಿ ಜಗದಂಬೆಯ ಸಂಚಾರವಾಗುವದಕ್ಕಾಗಿ ಏಕಾಗ್ರಚಿತ್ತದಿಂದ ಕುಳಿತುಕೊಂಡರು. ಸ್ವಲ್ಪ ವೇಳೆಯಲ್ಲಿಯೇ ಮಹಾರಾಜರು ತನ್ಮಯರಾಗಲು, ಅವರ ಮುಖ ದಿಂದ ಮುಂದಿನ ಶಬ್ದಗಳು ಹೊರಟವು—''ವತ್ಸಾ, ಹೆದರಬೇಡ. ಈ ಸಂಕಟವು ನಿನ್ನ

ಚಾತುರ್ಯದಿಂದಲೂ, ಪ್ರಸಂಗಾವ ಧಾನದಿಂದಲೂ ದೂರವಾಗುವದು!!'' ಈ ಶಬ್ದಗಳನ್ನು ಚೀಟನೀಸನು ಬರೆದುಕೊಂಡನು. ಮಹಾರಾಜರು ಎಚ್ಚತ್ತ ಮೇಲೆ ಆತನು ದೇವಿಯ ವಾಣಿಯನ್ನು ಅವರಿಗೆ ನಿರ್ವೇದಿಸಲು, ಅದನ್ನು ಕೇಳಿ ಮಹಾರಾಜರೂ ಬೇರೆಯವರೂ ಆನಂದಪಟ್ಟು, ಅವರೆಲ್ಲರು ಉತ್ಸಾಹಗೊಂಡರು. ಆಮೇಲೆ ಮಹಾರಾಜರು ''ಮುಸೆ'' ಎಂಬ ಕಂದರದಿಂದ ಪ್ರತಾಪಗಡದವರೆಗೆ ಮಾರ್ಗವನ್ನು ಮಾಡಿಸಲು ನಿಶ್ಚಯಿಸಿದರು. ಈ ಕೆಲಸಕ್ಕಾಗಿ ಜಾವಳಿಯ ಅರಣ್ಯವನ್ನು ನೋಡಿ ಎತ್ತಕಡೆಯಿಂದ ಮಾರ್ಗ ಮಾಡಿಸಬೇಕೆಂಬದನ್ನು ನಿಶ್ಚಯಿಸುವದಕ್ಕಾಗಿ, ತಮ್ಮ ಬಾಲಮಿತ್ರನಾದ ಏಸಾಜಿ ಕಂಕನನ್ನೂ, ಖಂಡೇರಾವನೆಂಬವನನ್ನೂ ಕಳಿಸಿದರು.

ಜಾವಳಿಯ ಅರಣ್ಯವು ಬಹು ಗಹನವಾದದ್ದು. ಜಾವಳಿಯ ಸುಬೇದಾರನಾದ ಚಂದ್ರರಾವ ಮೋರೆಯನ್ನು ಮಹಾರಾಜರು ತಮ್ಮ ಕಡೆಗೆ ಒಲಿಸಿಕೊಳ್ಳುವದಕ್ಕಾಗಿ ಬಹಳವಾಗಿ ಯತ್ನಿಸಿದರು. ಮೋರೆಯು ಬಹು ಬಲಾಢ್ಯನಿದ್ದನು. ಮಹಾರಾಜರು ಎಷ್ಟು ಯತ್ನಿಸಿದರೂ ಆತನು ಬಾದಶಹನ ಪಕ್ಷವನ್ನು ಬಿಡಲಿಲ್ಲ. ಈ ಕೆಲಸದಲ್ಲಿ ಮಹಾರಾಜರಿಂದ ದೊಡ್ಡ ಪ್ರಮಾದವಾಗಿ ಅವರು ಲೋಕಾಪವಾದಕ್ಕೆ ಗುರಿಯಾಗಬೇಕಾಯಿತು. ತಮ್ಮ ಸ್ವರಾಜ್ಯ ಸ್ಥಾಪನೆಗೆ ಚಂದ್ರರಾವ ಮೋರೆಯು ವಿಘ್ನಕಾರಿಯಾದ್ದರಿಂದ ಆತನನ್ನು ಒಲಿಸಿಕೊಳ್ಳುವ ದಕ್ಕಾಗಿ ತನ್ನ ನಂಬಿಗೆಯ ಜನರನ್ನು ಅವರ ಬಳಿಗೆ ಕಳಿಸಿದರು. ಸ್ವಧರ್ಮದ ಜನರನ್ನು ಒಲಿಸಿಕೊಳ್ಳುವಾಗ ಮಹಾರಾಜರು ಸಾಮೋಪಚಾರದಿಂದ ಕಾರ್ಯವನ್ನು ಸಾಧಿಸುತ್ತಿದ್ದರಲ್ಲದೆ, ಸ್ವಜನಘಾತಕ್ಕೆ ಮನಸ್ಸು ಮಾಡುತ್ತಿದ್ದಿಲ್ಲ. ಸಾಮೋಪಚಾರವು ಸಾಧಿಸದಿದ್ದರೆ ಯುಕ್ತಿ ಪ್ರಯುಕ್ತಿಯಿಂದಾಗಲಿ, ಪ್ರತ್ಯಕ್ಷ ಯುದ್ಧ ಮಾಡಿಯಾಗಲಿ ಅವರನ್ನು ಹಣ್ಣಿಗೆ ತಂದು ತಮ್ಮ ಕಡೆಗೆ ಮಾಡಿಕೊಳ್ಳುತ್ತಿದ್ದರು. ಒಟ್ಟಿಗೆ ಯಾವ ಉಪಾಯದಿಂದಲೇ ಆಗಲಿ, ತಮ್ಮ ಸ್ವಧರ್ಮೋದ್ಧಾರದ ಕಾರ್ಯಕ್ಕೆ ಅನುಕೂಲ ಸ್ಥಿತಿಯನ್ನು ಒದಗಿಸಿಕೊಳ್ಳುವದು ಅವರ ಮುಖ್ಯೋದ್ದೇಶವಾಗಿತ್ತು. ಈ ಕ್ರಮದಂತೆ ಚಂದ್ರರಾವ ಮೋರೆಯೆಂಬ ಜಾವಳಿಯ ಬಲಾಢ್ಯ ಸುಬೇದಾರನನ್ನು ಸಾಮೋಪಚಾರದಿಂದ ಶಿವಾಜಿಯ ಜನರು ಒಲಿಸಿಕೊಳ್ಳುವಾಗ ಆ ಸರದಾರನು ಅದಕ್ಕೆ ಒಪ್ಪಿಕೊಳ್ಳದಿರಲು, ಅವರು ಮಹಾರಾಜರು ಹೇಳದಿದ್ದರೂ ಮೋಸದಿಂದ ಚಂದ್ರರಾಯನ ಖೂನು ಮಾಡಿದರು. ವಾಲಿಯ ಸಂಹಾರದಿಂದ ಶ್ರೀರಾಮಚಂದ್ರನ ಚರಿತ್ರಕ್ಕೆ ಒಂದು ಪ್ರಕಾರದ ಕಲಂಕವುಂಟಾಯಿತೆಂದು, ನಿಜವಾದ ಸಂಗತಿಯನ್ನು ಅರಿಯದವರು ಎಣಿಸಹತ್ತಿದರು. ಈ ಪ್ರಸಂಗದಲ್ಲಿ ಚಂದ್ರರಾಯನ ಇಬ್ಬರು ಗಂಡುಮಕ್ಕಳು. ಒಬ್ಬ ಚಿಕ್ಕ ಹೆಣ್ಣುಮಗಳು, ಒಬ್ಬ ತಮ್ಮನು, ಒಬ್ಬ ಸೋದರಳಿಯನು ಮಾತ್ರ ಜೀವದಿಂದ ಉಳಿದು, ಉಳಿದವರೆಲ್ಲ ನಾಶಹೊಂದಿದರು. ಇಬ್ಬರು ಗಂಡುಮಕ್ಕಳನ್ನು ಮಹಾ ರಾಜರು ಪುಣೆಯಲ್ಲಿ ಸೆರೆಯಲ್ಲಿಟ್ಟರು. ತಮ್ಮನೂ ಹೆಣ್ಣು ಹುಡುಗಿಯೂ ಎತ್ತೋ ಹೋದರು. ಸೋದರಳಿಯನ ಗೊತ್ತುಹತ್ತಲಿಲ್ಲ. ಈ ಉಳಿದ ಜನರು ಮಹಾರಾಜರ ಮೇಲಿನ ಸಿಟ್ಟಿನಿಂದ ಅವರ ಸೇಡು ತೀರಿಸಿಕೊಳ್ಳಲು ಮನಸ್ಸಿನಲ್ಲಿ ಕುದಿಯುತ್ತಿದ್ದರು. ಈ ಅಲ್ಪ ಪರಿವಾರವು

ಮಹಾ ರಾಜರ ಧರ್ಮೋದ್ಧಾರದ ಕಾರ್ಯಕ್ಕೆ ದೊಡ್ಡ ಕಂಟಕಪ್ರಾಯವಾಯಿತೆಂಬದನ್ನು ಮುಂದೆ ವಾಚಕರು ಪ್ರಸಂಗವಶಾತ್ ಅರಿತುಕೊಳ್ಳಬಹುದು.

ವಿಸಾಜಿಯೂ, ಖಂಡೇರಾಯನೂ ಮಹಾರಾಜರ ಅಪ್ಪಣೆಯಂತೆ ಜಾವಳಿಯ ಅರಣ್ಯವನ್ನು ಪ್ರವೇಶಿಸಿದರು. ಜಾವಳಿಯ ಅರಣ್ಯವು ಬಹು ಗಹನವಾದದ್ದೆಂದು ಮೇಲೆ ಹೇಳಿರುತ್ತದಷ್ಟೆ? ಅಲ್ಲಿ ಹಿಂಸ್ರ ಪಶುಗಳು ಬಹಳ. ಹುಲಿಗಳು ಅಲ್ಲಿ ವಿಪುಲವಾಗಿದ್ದವು. ಅದು ಹಾವುಗಳ ಆಗರವೆಂದರೂ ಸಲ್ಲುವುದು. ಗಿಡಗಳ ದಟ್ಟಣೆಯಿಷ್ಟೆಂದು ಹೇಳುವ ಹಾಗಿದ್ದಿಲ್ಲ ಎಂಥ ಗೊತ್ತಿನವರಾದರೂ ಅಲ್ಲಿ ಹಾದಿಯ ತಪ್ಪಿ ಪೇಚಾಡುವ ಪ್ರಸಂಗವು ವಿಶೇಷವಾಗಿತ್ತು. ಮಹಾರಾಜರು ಪ್ರತಾಪಗಡವನ್ನು ಕಟ್ಟಿಸಿದ ಬಳಿಕ ಈ ಅರಣ್ಯದೊಳಗಿಂದ ಆ ದುರ್ಗದವರೆಗೆ ಸಾಧಾರಣ ಮಾರ್ಗವನ್ನು ಮಾಡಿಸಿದ್ದರು. ವೈರಿಗಳಿಗೆ ದುರ್ಗಮಯವಾಗ ಬೇಕೆಂತಲೇ ಅವರು ಪ್ರಶಸ್ತವಾದ ಮಾರ್ಗವನ್ನು ಮಾಡಿಸಿದ್ದಿಲ್ಲ ಆದರೆ ಅಫಜುಲಖಾನನ ಸಲುವಾಗಿ ಆತನಿಗೆ ಸಮಾಧಾನವಾಗಬೇಕೆಂದು ಈಗ ಪ್ರಶಸ್ತ ಮಾರ್ಗವನ್ನು ಮಾಡಿಸ ಬೇಕಾಗಿತ್ತು ಮೇಲೆ ಹೇಳಿದ ಮಹಾರಾಜರ ಇಬ್ಬರು ಸರದಾರರು ಅರಣ್ಯದಲ್ಲಿ ಮಾರ್ಗವನ್ನು ಹುಡುಕುತ್ತಿರಲು, ಅವರಿಬ್ಬರ ತಪ್ಪುಗಂಟಾಯಿತು. ಖಂಡೇರಾಯನು ಅಲ್ಲಲ್ಲಿ ಅಲೆದಾಡುತ್ತ ಹೋಗುತ್ತಿರಲು, ಆ ಗಹನಾರಣ್ಯದಲ್ಲಿ ಕಟ್ಟಿಗೆ ಕಡೆಯುತ್ತಿದ್ದ ಲಮ್ಮಾಣಿಯ ಜನರ ತಾಂಡೆಯು ಆತನ ಕಣ್ಣಿಗೆ ಬಿದ್ದಿತು. ಖಂಡೇರಾಯನು ಲಮ್ಮಾಣಿ ಜನರ ಮುಖ್ಯಸ್ಥನನ್ನು ಕುರಿತು—ಎಲಾ, ನಾನು ಶಿವಾಜಿ ಮಹಾರಾಜರ ಕಡೆಯಿಂದ ಬಂದಿದ್ದೇನೆ. ಮಹಾರಾಜರು ಈ ಅರಣ್ಯದೊಳಗಿಂದ ಹಾದಿಯನ್ನು ಮಾಡಿಸಬೇಕಾಗಿದೆ. ನೀವು ಹ್ಯಾಗೂ ಇಲ್ಲಿ ಕೆಲಸವನ್ನು ಮಾಡತ್ತಿರುವಿರಿ, ಆದ್ದರಿಂದ, ನಿಮ್ಮನ್ನು ಬಿಟ್ಟಿಯ ಹಿಡಿದು ಕೆಲಸ ಮಾಡಿಸಬೇಕೆಂದು ಮಹಾರಾಜರ ಅಪ್ಪಣೆಯಾಗಿದೆ. ಹೇಳಿರಿ, ನೀವು ಕೆಲಸ ಮಾಡುವಿರೋ ಇಲ್ಲವೋ? ನಿಮ್ಮ ಹಿಂಡಿ ರೊಟ್ಟಿಯ ವ್ಯವಸ್ಥೆ ಮಾಡುವ ಕೆಲಸವು ನಮ್ಮನ್ನು ಕೂಡಿತು, ಆದರೆ ನೀವು ಹಗಲುರಾತ್ರಿ ಶ್ರಮಪಟ್ಟು ಹಾದಿಯನ್ನು ಮಾಡಬೇಕಾಗುವದು. ವಿಜಾಪುರದ ದೊಡ್ಡ ಸೈನ್ಯವು ಈ ಮಾರ್ಗದಿಂದ ಹೋಗಬೇಕಾಗಿದೆ ನೋಡಿರಿ, ನೆಟ್ಟಗೆ ಕೆಲಸಮಾಡಿದರೆ ಮಹಾರಾಜರ ಬಳಿಯಲ್ಲಿ ನಿಮ್ಮ ಶಿಫಾರಸು ಮಾಡುವೆವು, ಅನ್ನುತ್ತ ಆ ಸರದಾರನು ತೀರ ಹತ್ತಿರಬರಹತ್ತಿದನು. ಲಮಾಣಿಯ ಮುಖ್ಯನಿಗೆ ಆ ಸರದಾರನ ಗುರುತು ಹತ್ತಿದ ಹಾಗಾಗುತ್ತಿತ್ತು ಗುರುತಿನ ಮನುಷ್ಯನ ಸಂಗಡ ಮಾತಾಡಲಿಕ್ಕೆ ಆ ಮುಖ್ಯನು ಯಾಕೋ ಸಂಕೋಚಪಡಹತ್ತಿದನು. ಆತನ ಮೋರೆಯು ಹುಚ್ಚಿಟ್ಟಿತ್ತು ಇತ್ತ ಆ ಸರದಾರನಿಗೂ ಆ ಮುಖ್ಯನ ಮೋರೆಯ ಗುರುತು ಹತ್ತಿದಹಾಗಾಗುತ್ತಿತ್ತು ಮುಖ್ಯನು ತನ್ನ ಮನೋ ವಿಕಾರವನ್ನು ಮುಚ್ಚಿಕೊಳ್ಳುತ್ತ ಸರದಾರನನ್ನು ಕುರಿತು ''ಸರಕಾರ, ಮಹಾರಾಜರ ಚಾಕರಿಯನ್ನು ಮಾಡಲಿಕ್ಕೆ ನಾವೆಲ್ಲಿ ಒಲ್ಲೆವೆನ್ನುವೆವು? ಇಂಥ ಸುಪ್ರಸಂಗವನ್ನು ನಾವು ವ್ಯರ್ಥ ಹೋಗಗೊಡಬಹುದೆ? ನಮ್ಮ ತಾಂಡೆಯ ಜನರೆಲ್ಲರು ಸಿದ್ಧರಿರುವರು. ನಾಲ್ಕು ದಿವಸಗಳಲ್ಲೆಂದರೆ, ನಾಲ್ಕೇ ದಿವಸಗಳಲ್ಲಿ ಹಾದಿಯನ್ನು ಸಿದ್ಧಮಾಡಿಕೊಡುವೆವು. ನಮ್ಮ ತಾಂಡೆಯ ಜನರು ಸಮೀಪದಲ್ಲಿಯೇ ಇರುವರು, ಅವರನ್ನು ಕರಿಸಿಕೊಳ್ಳುವೆನು.

ಆ ನಾಯಕನ ದನಿಯನ್ನು ಕೇಳಿದ ಕೂಡಲೆ ಸರದಾರನಿಗೆ ಅವನ ಗುರುತು ಮತ್ತಿಷ್ಟು ಹತ್ತಿದಂತಾಯಿತು. ಆತನು ನಾಯಕನನ್ನು ಕುರಿತು— ಏನಲೇ, ನಾನು ನಿನ್ನನ್ನು ಈ ಮೊದಲು ಎಲ್ಲಿಯೋ ನೋಡಿದ ಹಾಗೆ ಕಾಣುತ್ತದೆ. ಎಲ್ಲಿ ನೋಡಿರುವೆನು ಹೇಳು ನೋಡೋಣ?

ನಾಯಕ—ಸರಕಾರ, ನಾವು ಲಮಾಣಿ ಜನರು, ನಾವು ಒಂದು ಸ್ಥಳದಲ್ಲಿರುವವರೆ? ಎಲ್ಲಿಯಾದರೂ ತಾವು ನನ್ನನ್ನು ನೋಡಿರಬಹುದು. ಇಂಥ ಸ್ಥಳದಲ್ಲಿಯೇ ನೋಡಿದಿರೆಂದು ನಾನು ಹ್ಯಾಗೆ ಹೇಳಲಿ? ಆದರೆ ನಾನು ಮಾತ್ರಾ ತಮ್ಮನ್ನು ಎಲ್ಲಿಯೂ ನೋಡಿದಂತೆ ಕಾಣುವದಿಲ್ಲ, ನಮಗೆಲ್ಲಿ ನೆನಪು ಉಳಿಯಬೇಕು ಸರಕಾರ! ತಾವು ನೆನಪು ಮಾಡಿಕೊಟ್ಟರೆ ಹೌದೆಂದು ಹೇಳೇನು.

ಖಂಡೇರಾವ—ಇರಲಿ ಬಿಡು; ಏನೋ ನಾಯಕಾ, ಈ ಅರಣ್ಯದೊಳಗಿಂದ ಪ್ರತಾಪಗಡದವರೆಗೆ ಹಾದಿಯನ್ನು ಮಾಡಲಿಕ್ಕೆ ಬರಬಹುದೆ? ಅಫಜುಲಖಾನನ ಸೈನ್ಯವು ಇಲ್ಲಿಂದ ಹೋಗಬೇಕಾಗಿದೆ; ಏನು ಗಹನ ಅರಣ್ಯವಿದು! ನನಗಂತೂ ಒಬ್ಬನಿಗೆ ಹೋಗಲಿಕ್ಕೆ ಧೈರ್ಯವಾಗಲೊಲ್ಲದು. ಆ ಜಾವಳಿಯ ಚಂದ್ರರಾವ ಮೋರೆಯು ಇಂಥ ಘೋರಾರಣ್ಯ ವನ್ನು ಯಾಕೆ ಕಾದಿಟ್ಟನೋ ತಿಳಿಯದು. ಇಂಥ ಅರಣ್ಯದಲ್ಲಿ ಆತನು ಹ್ಯಾಗೆ ಓಡಾಡುತ್ತಿರ ಬಹುದು?

ನಾಯಕ—ಸರಕಾರ, ನಿಮ್ಮ ಮಾತು ನಿಜವು. ಆ ಚಂದ್ರರಾಯನಿಗೆ ಈ ಅರಣ್ಯ ದೊಳಗಿಂದ ಓಡಾಡಲಿಕ್ಕೆ ಅಂಜಿಕೆಯೇ ಬರುತ್ತಿದ್ದಿಲ್ಲೆಂಬಂತೆ ಕಾಣುತ್ತದೆ. ಇಲ್ಲಿ ಹುಲಿ ಗಳೆಷ್ಟು, ಹಾವುಗಳೆಷ್ಟು! ಈಗ ತಿಂಗಳಲ್ಲಿ ನಮ್ಮ ನಾಲ್ಕು ಜನರು ಹಾವು ಕಡಿದು ಸತ್ತರು. ಏನು ಮಾಡ ಬೇಕು? ಕೆಟ್ಟ ಹೊಟ್ಟೆಯನ್ನಂತು ಹ್ಯಾಗಾದರೂ ತುಂಬಬೇಕಷ್ಟೆ?

ಖಂಡೇರಾವ— ಅಲ್ಲೋ? ಆ ಚಂದ್ರರಾಯನ ವೃತ್ತಾಂತವು ನಿನಗೇನಾದರೂ ಗೊತ್ತಿರುವದೆ?

ನಾಯಕ—ಅವರ ವೃತ್ತಾಂತವೇನು ಗೊತ್ತಿರಬೇಕು ಸರಕಾರ, ಅವರ ನಿರ್ವಂಶವಾಗಿ ಹೋಯಿತು!

ಖಂಡೇರಾವ—ಅವರ ಆಪ್ತರು ಯಾರೋ ಇರುತ್ತಾರೆಂದು ಜನರು ಹೇಳುತ್ತಾರಲ್ಲ?

ನಾಯಕ—ಅದು ಶುದ್ಧ ಸುಳ್ಳು.

ಖಂಡೇರಾವ—ಇಲ್ಲಿ ಯಾರೋ ಒಬ್ಬರು ಸಾಧುಗಳು ಇರುತ್ತಾರೆಂದು ಕೇಳುತ್ತೇವೆ. ನಿಜವೆ?

ನಾಯಕ—ಹೌದು, ಅಲ್ಲಿ ಹಳ್ಳದ ದಂಡೆಯ ಮೇಲೆ ಒಬ್ಬರು ಸಾಧುಗಳು ಇರುತ್ತಾರೆ. ನಾನು ಒಮ್ಮೆ ಅವರ ಬಳಿಗೆ ಹೋಗಿದ್ದೆನು. ಅವರು ಮಾತಾಡುವದಿಲ್ಲ, ಕಥೆಯಾಡುವದಿಲ್ಲ; ಅವರ ಬಳಿಗೆ ಹೋಗುವದರಲ್ಲೇನೂ ಅರ್ಥವಿಲ್ಲ.

ಖಂಡೇರಾವ—ನಾಯಕಾ, ನನ್ನ ಮುಂದೆ ಸುಳ್ಳಾಡಬೇಡ. ನೀನು ನಿಜವಾಗಿ ಲಮಾಣಿಯೇ ಇರುವೆಯಾ?

ನಾಯಕ—ಲಮಾಣಿಯಲ್ಲದೆ ನಾನೇನು ಅರಸನಿರುವೆನೆ? ನನ್ನನ್ನೇಕೆ ಇಷ್ಟು ಕೆದರಿ ಕೆದರಿ ಕೇಳುವುದು ಸರಕಾರ!

ಖಂಡೇರಾವ—ನಿನ್ನ ನಿಜವಾದ ಸಂಗತಿಯನ್ನು ಹೊರಗೆಡುವುದಕ್ಕಾಗಿಯೇ ನಾನು ಇಲ್ಲಿಗೆ ಬಂದಿರುವೆನು. ನೀನು ಚಂದ್ರರಾವ ಮೋರೆಯ ಆಶ್ರಿತನಾದ ತುಳಾಜಿರಾಯನಲ್ಲವೆ? ಹೇಳು ಕಳ್ಳತನವೇಕೆ?

ಇದನ್ನು ಕೇಳಿ ಆ ನಾಯಕನು ಬೆದರಿದನು. ಆದರೂ ಅದನ್ನು ತೋರಗೊಡದೆ ಖಂಡೇರಾಯನನ್ನು ದಿಟ್ಟಿಸಿ ನೋಡುತ್ತ—ನೀನು ಇನ್ನು ಇಲ್ಲಿಂದ ಪಾರಾಗಿ ಹೋಗಲಾರೆ! ನಿನ್ನನ್ನು ಹೊಡೆದು ಇಲ್ಲಿಯೇ ಹುಗಿದು ಮುಚ್ಚುವೆನು.

ಖಂಡೇರಾವ—ಅದಾವನು ನನ್ನ ಕೂದಲನ್ನು ಕೊಂಕಿಸುವನು ನೋಡುತ್ತೇನೆ. ತುಳಾಜಿರಾವ, ನನ್ನ ಸಂಗಡಲೂ ಹುಡುಗಾಟಿಕೆಯೇ?

ಖಂಡೇರಾಯನ ಈ ಮಾತುಗಳನ್ನು ಕೇಳಿ ತುಳಾಜಿರಾಯನು ಒಂದು ಸಿಳ್ಳು ಹಾಕಿದನು. ಅದನ್ನು ನೋಡಿ ಖಂಡೇರಾಯನು ನಕ್ಕು— ''ತುಳಾಜಿರಾವ, ನನ್ನ ಗುರುತು ನಿಮಗೆ ಸಿಗಲಿಲ್ಲವೆ? ನಾನು ಚಂದ್ರರಾವ ಮೋರೆಯ ಸೋದರಳಿಯನು. ನಿಮ್ಮ ವೈರಿಯಾದ ಶಿವಾಜಿಯೇ ನನ್ನ ವೈರಿಯು. ನಮ್ಮ ಮಾವನನ್ನು ಶಿವಾಜಿಯು ಮೋಸದಿಂದ ಕೊಂದಿರುವ ನಷ್ಟೆ? ಅದರ ಸೇಡನ್ನು ತೀರಿಸಿಕೊಳ್ಳುವದಕ್ಕಾಗಿ ನಾನು ಈಗ ಶಿವಾಜಿಯ ಆಶ್ರಯವನ್ನು ಮಾಡಿರುವೆನು. ಶಿವಾಜಿಯು ನನ್ನನ್ನೂ, ತನ್ನ ಬಾಲ ಮಿತ್ರನಾದ ಏಸಾಜಿ ಕಂಕನನ್ನೂ ಈ ಅರಣ್ಯಕ್ಕೆ ಮಾರ್ಗವನ್ನು ನೋಡಲಿಕ್ಕೆ ಕಳಿಸಿರುತ್ತಾನೆ. ನೀವೆಲ್ಲರೂ ನಡಿಸಿರುವ ಗುಪ್ತತಂತ್ರವೆಲ್ಲ ನನಗೆ ಗೊತ್ತಿದೆ. ನಿಮ್ಮ ಕೆಲಸವು ಸನಿಯಕ್ಕೆ ಬಂದಿರಬಹುದು. ವೈರಿಯನ್ನು ನಾಶಗೊಳಿಸುವದಕ್ಕೆ ವಿಲಂಬ ಮಾಡಬಾರದು. ಈಗ ಅಫಜುಲಖಾನನ ಗದ್ದಲವೆದ್ದಿರುವದರಿಂದ, ಈ ಗದ್ದಲ ದಲ್ಲಿಯೇ ನಾವು ನಮ್ಮ ಸೇಡನ್ನು ತೀರಿಸಿಕೊಳ್ಳಬೇಕು. ಹಿಂದಿನಿಂದ ಆ ವಿಶ್ವಾಸಘಾತಕಿಯಾದ ಶಿವಾಜಿಯನ್ನು ಕೊಲ್ಲುವದು ನಮ್ಮಿಂದಾಗದು. ಹೋಗು, ನಾನು ಇನ್ನೊಮ್ಮೆ ಸಾವಕಾಶವಾಗಿ ಬಂದು ನಿಮ್ಮೆಲ್ಲರನ್ನು ಕಾಣುವೆನು. ಆ ಏಸಾಜಿಯೂ ಎಲ್ಲಿಯಾದರೂ ಇತ್ತ ಕಡೆಗೆ ಬಂದ ಗಿಂದಾನು. ನಮ್ಮ ಗೂಢವು ಹೊರಬಿದ್ದರೆ, ಇಷ್ಟು ದಿನ ಕಷ್ಟಪಟ್ಟಿದ್ದೆಲ್ಲ ವ್ಯರ್ಥವಾದೀತು. ನಾನು ಅಫಜುಲಖಾನನನ್ನು ನನ್ನ ಕಡೆಗೆ ಮಾಡಿಕೊಂಡಿದ್ದೇನೆ. ನಮ್ಮಿಬ್ಬರ ಕಾರ್ಯವು ಒಂದೇ ಆಗಿರುವದರಿಂದ ನಮ್ಮಿಬ್ಬರ ಸ್ನೇಹವು ಸಹಜವಾಗಿ ಕೂಡಿದೆ. ಒಟ್ಟಿಗೆ ಒಂದಿಲ್ಲೊಂದು ಬಗೆಯಿಂದ ಶಿವಾಜಿಯನ್ನು ನಾಶಗೊಳಿಸ ತಕ್ಕದ್ದು. ನಾನು ಈಗ ಹೋಗುವೆನು. ನೀವೆಲ್ಲರೂ ಬಹು ಜಾಗರೂಕರಾಗಿರತಕ್ಕದ್ದು. ಇನ್ನು ಆದಷ್ಟು ಬೇಗನೆ ಕಾರ್ಯವನ್ನು ಸಾಧಿಸಿಬಿಡಿರಿ.

ಈ ಮೇರೆಗೆ ನುಡಿದು ಖಂಡೇರಾಯನು ತನ್ನ ಕುದುರೆಯನ್ನು ಒತ್ತರದಿಂದ ಓಡಿಸುತ್ತ ನಡೆದನು. ತುಳಾಜಿರಾಯನು ಬೆರಗಾಗಿ ಚಿತ್ರದ ಗೊಂಬೆಯಂತೆ ನಿಂತುಕೊಂಡನು. ಖಂಡೇ ರಾಯನು ಏಸಾಜಿಯನ್ನು ಕಂಡು, ಆತನನ್ನು ಇತ್ತ ಕಡೆಯಿಂದ ಬೇರೆ ಕಡೆಗೆ ಕರೆದುಕೊಂಡು ಹೋಗಬೇಕಾಗಿತ್ತು, ಆತನು ಕುದುರೆಯನ್ನು ಓಡಿಸುತ್ತ ಹೋಗುತ್ತಿರಲು, ಏಸಾಜಿಯ

ಭೆಟ್ಟಿಯು ಆತನಿಗಾಯಿತು. ಆಗ ವಿಸಾಜಿಯು ಖಂಡೇರಾಯನನ್ನು ಕುರಿತು— ಇಷ್ಟು ಹೊತ್ತು ನೀವು ಎತ್ತ ಕಡೆಗೆ ಹೋಗಿದ್ದಿರಿ? ನೀವು ನೋಡಿದ ಸ್ಥಳವು ಮಾರ್ಗ ಮಾಡಲಿಕ್ಕೆ ಅನುಕೂಲವಾಗಿರುವದೆ? ಎಂದು ಕೇಳಲು, ಖಂಡೇರಾಯನು–ಇತ್ತಕಡೆಯ ಈ ಅರಣ್ಯವು ಬಹು ಗಹನವಾದದ್ದದೆ. ಗಿಡಗಳ ದಟ್ಟಣೆ ಬಹಳ. ಅಲ್ಲಿಂದ ಮಾರ್ಗ ಮಾಡುವದು ಬಹು ದುಸ್ತರವು. ಮಾರ್ಗದ ಎಡ ಬಲದಲ್ಲಿ ಅಲ್ಲಲ್ಲಿಗೆ ಪ್ರಾಂತಸ್ಥರಿಗೆ ಅನುಕೂಲವಾದ ವ್ಯವಸ್ಥೆಯನ್ನು ಮಹಾರಾಜರು ಮಾಡಬೇಕಾಗಿರುವದರಿಂದ, ಈ ಭಾಗವು ಮಾರ್ಗ ಮಾಡಲಿಕ್ಕೆ ಸರ್ವಥಾ ಯೋಗ್ಯವಲ್ಲ; ಆದ್ದರಿಂದ ನಾವು ಎರಡನೆಯ ಕಡೆಗೆ ನೋಡೋಣ. ಮಾರ್ಗವನ್ನು ಎಲ್ಲಿಂದ ಒಯ್ಯಬೇಕೆಂಬದು ನಿಶ್ಚಯವಾದ ಬಳಿಕ, ಈ ಅರಣ್ಯದಲ್ಲಿರುವ ಆ ಲಮಾಣಿ ಜನರ ಉಪಯೋಗವನ್ನು ನಮ್ಮ ಕೆಲಸಕ್ಕೆ ಮಾಡಿಕೊಳ್ಳಬಹುದು. ಅವರ ನಾಯಕನನ್ನು ನಾನು ಇದೇ ಈಗ ಕಂಡೆನು. ಮಹಾರಾಜರ ಕೆಲಸವನ್ನು ಮಾಡಲಿಕ್ಕೆ ಆತನ ಉತ್ಸುಕತೆ ಯೆಷ್ಟು! ಮಹಾರಾಜರು ಈ ಕಾರ್ಯವನ್ನು ಮಾಡಲಿಕ್ಕೆ ನನಗೆ ಆಜ್ಞಾಪಿಸಿದರೆ ನಾನು ಸಿದ್ಧನಾಗಿರುವೆನು, ಎಂದು ಆ ನಾಯಕನು ಹೇಳಿದನು. ವಿನು ವಿಸಾಜೀ, ಸಣ್ಣ ಜನರಿಂದ ದೊಡ್ಡವರವರೆಗೆ ಮಹಾರಾಜರ ಮೇಲೆ ಜರನ ಭಕ್ತಿಯೆಷ್ಟು? ಅದನ್ನು ನೋಡಿದರೆ ನನಗ ಪರಮಾಶ್ಚರ್ಯವಾಗುತ್ತದೆ. ಮಹಾರಾಜರ ಕೆಲಸವೆಂದರೆ ತಮ್ಮ ಪ್ರಾಣಕೊಡಲಿಕ್ಕೆ ಕೂಡ ಜನರು ಸಿದ್ಧರಿರುವರೆಂದ ಬಳಿಕ, ಇದಕ್ಕೂ ಆಶ್ಚರ್ಯದ ಸಂಗತಿಯೇನು? ಆ ಲಮಾಣಿಯ ನಾಯಕನ ಸಂಗಡ ನಾನು ಮಾತಾಡುವಾಗ ನೀವು ಇದ್ದರೆ ನಿಮಗೂ ಆಶ್ಚರ್ಯವಾಗುತ್ತಿತ್ತು, ಆತನು ನನಗೆ—''ಸರಕಾರ, ಇದೇ ಅಡವಿಯನ್ನೇಯೇಕೆ, ಮಹಾ ರಾಜರ ಸಲುವಾಗಿ ನಾವು ಬೇಕಾದ ಅಡವಿಯನ್ನು ಕಡಿದು ಹದಿನೈದು ದಿವಸಗಳಲ್ಲಿ ಹಾದಿಯನ್ನು ಮಾಡಿಕೊಡುವೆವು. ನಡೆಯಿರಿ ಯಾವ ಅಡವಿಯನ್ನು ಕಡಿಯಬೇಕು ಹೇಳಿರಿ. ಬರಿಯ ಅಡವಿಯನ್ನೇ ಏಕೆ ಮಹಾರಾಜರು ನಮ್ಮ ಅವಯವಗಳನ್ನು ಕಡಿದು ಕೊಡಹೇಳಿದರೆ ಕಡಿದುಕೊಡುವೆವು'' ಎಂದು ಹೇಳಿದನು. ಲಮಾಣಿಯ ಯೋಗ್ಯತೆಯೇನು, ಅವನ ಭಕ್ತಿಯೆಷ್ಟು! ಮಹಾರಾಜರು ಅವತಾರಿಕರೆನ್ನಲಿಕ್ಕೆ ಬೇರೆ ಸಾಕ್ಷಿಯೇನು ಬೇಕಾಗಿದೆ? ನನ್ನ ಸುದೈವದಿಂದಲೆ ಮಹಾರಾಜರು ನನಗೆ ಆಶ್ರಯ ಕೊಟ್ಟಿರುವರು. ಅವರ ಸೇವೆಯಲ್ಲಿ ನಾನು ನನ್ನ ದೇಹವನ್ನು ಸವಿಸಲು ನಿಶ್ಚಯಿಸಿದ್ದೇನೆ. ನಡೆಯಿರಿ, ಇತ್ತಕಡೆಯ ಅರಣ್ಯಭಾಗವು ಮಾರ್ಗವನ್ನು ಮಾಡಲಿಕ್ಕೆ ಅನುಕೂಲವಾದದ್ದಲ್ಲ. ಬೇರೊಂದು ಕಡೆಗೆ ಯೋಗ್ಯಸ್ಥಳ ನೋಡಿ ಲಮಾಣಿಗಳ ಕಡೆಯಿಂದ ಬೇಗನೆ ಮಾರ್ಗವನ್ನು ಮಾಡಿಸಿಕೊಳ್ಳೋಣ, ಎಂದು ಹೇಳಿ ಆತನು ತನ್ನಕುದುರೆಯನ್ನು ಬೇರೆ ಕಡೆಗೆ ಹೊರಳಿಸಿ ಮುಂದಕ್ಕೆ ಸಾಗಿದನು; ಆದರೆ ವಿಸಾಜಿಯು ಆತನನ್ನು ಹಿಂಬಾಲಿಸದೆ ಆತನನ್ನು ಕುರಿತು— ಖಂಡೇರಾವ, ನಾನೂ ಒಮ್ಮೆ ಕಣ್ಣಿಮುಟ್ಟಿ ಈ ಅಡವಿಯನ್ನು ನೋಡಿ ಬರುತ್ತೇನೆ. ನಾಲ್ಕು ವರ್ಷಗಳ ಹಿಂದೆ ನಾನು ಈ ಅಡವಿಯನ್ನು ನೋಡಿರುವೆನು. ಇಷ್ಟರಲ್ಲಿ ಗಿಡಗಳು ಅಷ್ಟು ದಟ್ಟವಾಗಿ ಹ್ಯಾಗೆ ಬೆಳೆದವು? ಇತ್ತ ಕಡೆಯಿಂದಲೇ ಮಾರ್ಗವನ್ನು ಮಾಡಿಸಿದರೆ, ಒಳಕ್ಕೆ ಆಗಿ ಮಾರ್ಗವು ಬೇಗನೆ ಸಿದ್ಧವಾಗುವದು. ನೀವು ಆ ಲಮಾಣಿಯ ಜನರ ಮಾತಿನ

ಮೇಲೆ ಹೋಗಬಾರದು. ಅರಣ್ಯವನ್ನು ನೋಡುವ ಅವರ ದೃಷ್ಟಿಯು ಬೇರೆ, ನಮ್ಮ ದೃಷ್ಟಿಯು ಬೇರೆ, ಎಂದು ನುಡಿಯುತ್ತ ಖಂಡೇರಾಯನು ಬೇಡೆನ್ನುವ ದಿಕ್ಕಿಗೇ, ಆತನು ಕುದರೆಯನ್ನು ಹೊರಳಿಸಿದನು. ಆಗ ಖಂಡೇರಾಯನು ಅಸಹ್ಯಪಟ್ಟುಕೊಳ್ಳುತ್ತ—ಏಸಾಜೀ, ನಿಮ್ಮಂತೆ ನಾನೂ ಈ ಅರಣ್ಯವನ್ನು ನೋಡಿದ್ದೇನೆ. ನನ್ನ ಆಯುಷ್ಯವು ಬಹುದಿವಸ ಇದೇ ಪ್ರಾಂತದಲ್ಲಿ ಹೋಗಿರುತ್ತದೆ. ಆದ್ದರಿಂದ ನನ್ನ ಅಭಿಪ್ರಾಯಕ್ಕೂ ಬೆಲೆಯಿರುವದು. ಇತ್ತ ಕಡೆಯಿಂದ ಮಾರ್ಗವನ್ನು ಮಾಡಲಿಕ್ಕೆ ಅನುಕೂಲವಿಲ್ಲದಿರಲು, ಇತ್ತ ಕಡೆಯಿಂದಲೇ ಮಾರ್ಗ ಮಾಡಬೇಕೆಂದು ನಿಮ್ಮ ಹಟವೇಕೆ? ಒಮ್ಮೆ ನನ್ನ ಮಾತನ್ನು ಕೇಳಿನೋಡಿರಿ. ನಾನು ಪೂರ್ಣವಿಚಾರಮಾಡಿ ಹೇಳುತ್ತೇನೆ. ಇತ್ತ ಕಡೆಯಿಂದ ಮಾರ್ಗ ಮಾಡುವದು ಸರಿಯಲ್ಲ ಎಂದು ಹೇಳಿದನು; ಆದರೆ ಏಸಾಜಿಯು ಅವನ ಮಾತನ್ನು ಲೆಕ್ಕಿಸಲಿಲ್ಲ, ನಾನೂ ಒಂದು ಸಾರೆ ಕಣ್ಣುಮುಟ್ಟಿ ನೋಡಿಬರುತ್ತೇನೆ, ಎಂದು ಹೇಳಿ, ತನ್ನ ಕುದುರೆಯನ್ನು ಒತ್ತರದಿಂದ ನೂಕಿದನು. ಆಗ ಖಂಡೇರಾಯನೂ ನಿರ್ವಾಹವಿಲ್ಲದೆ, ಏನೋ ಯೋಚಿಸಿ, ಆ ಲಮಾಣಿಯ ಮುಖ್ಯನನ್ನು ಎಚ್ಚರಗೊಳಿಸುವ ಉದ್ದೇಶದಿಂದ ಏಸಾಜಿಯ ಬೆನ್ನಹತ್ತಿ ತಾನೂ ನಡೆದನು.

## ಏಸಾಜಿಯ ಸಾಹಸವು

ಹೀಗೆ ಖಂಡೇರಾಯನ ಮಾತನ್ನು ಕೇಳದೆ ಕುದುರೆಯನ್ನು ಓಡಿಸುತ್ತ ಸಾಗಿದ ಏಸಾಜಿಯು ಒಂದೇಸವನೆ ಮುಂದಕ್ಕೆ ಭರದಿಂದ ಸಾಗಿಬಿಟ್ಟನು. ನೋಡ ನೋಡುತ್ತ ಆತನ ಕುದುರೆಯು ಖಂಡೇರಾಯನಿಗೆ ಕಾಣದಾಯಿತು. ಏಸಾಜಿಯು ತನ್ನ ಕುದುರೆಯನ್ನು ಓಡಿಸುತ್ತ ಕೆಲವು ದೂರದವರೆಗೆ ಹೋದಬಳಿಕ, ಕುದುರೆಯನ್ನು ಸಾವಕಾಶವಾಗಿ ಬಿಟ್ಟನು. ಆತನು ಮಾರ್ಗವನ್ನು ಕ್ರಮಿಸುತ್ತಿರುವಾಗ ಯಾರೋ ಮೆಲ್ಲಗೆ ಮಾತಾಡಿದಂತೆ ಕೇಳಿಸಿತು. ಆತನು ಕುದುರೆಯನ್ನು ನಿಲ್ಲಿಸಿ ಕಿವಿಗೊಟ್ಟು ಕೇಳಹತ್ತಿದನು; ಆದರೆ ಮಾತಿನ ಸುಳುವು ಕೇಳದಾಯಿತು. ಇಂಥ ಕೆಟ್ಟಡವಿಯಲ್ಲಿ ಜನರು ಯಾರು ಮಾತಾಡುತ್ತಿರಬಹುದೆಂಬದನ್ನು ತಿಳಕೊಳ್ಳುವ ಇಚ್ಛೆಯು ಏಸಾಜಿಗೆ ಉತ್ಪನ್ನವಾಯಿತು. ಆತನು ಕುದುರೆಯನ್ನು ಒಂದು ಗಿಡಕ್ಕೆ ಕಟ್ಟಿ, ಮಾತಿನ ಸುಳವನ್ನು ಕಿವಿಗೊಟ್ಟು ಕೇಳಹತ್ತಿದನು. ಸ್ವಲ್ಪ ಹೊತ್ತಿನ ಮೇಲೆ ಎಲ್ಲಿಯೋ ನೆಲದಲ್ಲಿ ಮಾತಾಡಿದಂತೆ ಆತನಿಗೆ ಕೇಳಿಸಿತು. ಎಲ್ಲ ಶಬ್ದಗಳು ಸ್ಪಷ್ಟವಾಗಿ ಕೇಳಿಸಲಿಲ್ಲ. ''ಇನ್ನೂ ಎಷ್ಟು ದಿವಸ'' ಎಂಬ ಶಬ್ದಗಳು ಮಾತ್ರ ಸ್ಪಷ್ಟವಾಗಿ ಕೇಳಿಸಿದವು. ಇವನ್ನು ಕೇಳಿ ಬಳಿಕಂತು ಏಸಾಜಿಯ ಕುತೂಹಲವು ಹೆಚ್ಚಾಯಿತು. ನೆಲದೊಳಗಿನ ಗುಹೆಯಲ್ಲಿ ಮಾತಾಡಿದಂತೆ, ಆತನಿಗೆ ಭಾಸವಾಗಹತ್ತಿತು. ಇಂಥ ಅರಣ್ಯದಲ್ಲಿ ಗುಹೆಯು ಎಲ್ಲಿ ಇರಬಹುದು? ಆ ಗುಹೆಯಲ್ಲಿ ಯಾರು ವಾಸಿಸುತ್ತಿರಬಹುದು? ಅವರು ಕಳ್ಳರಿರಬಹುದೆ?

ಕಳ್ಳರ ತಂಡಗಳು ತಮ್ಮ ಸುಲಿಗೆಯನ್ನು ಇಂಥ ಗುಹೆಗಳಲ್ಲಿ ಇಡುತ್ತಿರಬಹುದೇನು? ಮಹಾರಾಜರು ದಕ್ಷಿಣದೊಳಗಿನ ಕಳ್ಳರ ತಂಡಗಳನ್ನೆಲ್ಲ ಉಪದೇಶದಿಂದ ತಮ್ಮ ದಂಡಿನಲ್ಲಿ ಸೇರಿಸಿಕೊಂಡು, ಸ್ವಧರ್ಮೋದ್ಧಾರದ ಕಾರ್ಯಕ್ಕೆ ಸಹಾಯಕರನ್ನಾಗಿ ಮಾಡಿಕೊಂಡಿರುವರು. ಹೀಗಿರಲು, ಈ ಕಳ್ಳರ ತಂಡವು ಎಲ್ಲಿ ತಪ್ಪಿ ಉಳಿದಿರಬಹುದು? ಈ ಗುಹೆಯಲ್ಲಿ ಸಂಚಿತ ಧನವು ಸಿಕ್ಕರೆ, ಮಹಾರಾಜರ ಸ್ವದೇಶೋದ್ಧಾರದ, ಹಾಗು ಸ್ವಧರ್ಮೋದ್ಧಾರದ ಕಾರ್ಯಕ್ಕೆ ಸಹಾಯವಾಗಲಿಕ್ಕಿಲ್ಲವೆ? ಹ್ಯಾಗಿದ್ದರೂ ನಾನು ಈ ಗುಹೆಯ ಗೊತ್ತು ಹಚ್ಚಲೇಬೇಕು, ಬಬಿಎಂದು ನಿಶ್ಚಯಿಸಿ, ಆತನು ಗುಹೆಯ ಮುಖವನ್ನು ಹುಡುಕಹತ್ತಿದನು.

ಏಸಾಜಿಯು ಗುಹೆಯ ಮುಖವನ್ನು ಲಕ್ಷಪೂರ್ವಕವಾಗಿ ಶೋಧಿಸುತ್ತಿರುವಾಗ ಒಂದು ಹೊದರು ಆತನ ಕಣ್ಣಿಗೆ ಬಿದ್ದಿತು. ಅದರಲ್ಲಿ ಒಬ್ಬ ಮನುಷ್ಯನು ಬಹು ಪ್ರಯಾಸ ದಿಂದ ಹೋಗ ಬಹುದಾಗಿತ್ತು ಏಸಾಜಿಯು ತನ್ನ ಉಡಿಗೆ–ತೊಡಿಗೆಗಳನ್ನು ಸಾವರಿಸಿಕೊಂಡು, ಬಿಲವನ್ನು ಪ್ರವೇಶಿಸಿದನು. ಆತನು ಮೊದಲು ಹೊಟ್ಟೆಹೊಸೆಯುತ್ತ ಆಮೇಲೆ ಕುಳಿತುಕೊಂಡು ಸರಿಯುತ್ತ 8–10 ಮೊಳ ಮುಂದಕ್ಕೆ ಸಾಗಿದನು; ಆದರೆ ಮುಂದೆ ಆತನಿಗೆ ಹಾದಿಯು ಸಿಗಲಿಲ್ಲ. ಹೀಗೆ ಅಪೂರ್ಣವಾದ ಗುಹೆಯನ್ನು ಯಾಕೆ ಮಾಡಿರಬಹುದೆಂಬದರ ಕಾರಣವು ಆತನಿಗೆ ತಿಳಿಯ ದಾಯಿತು. ಏಸಾಜಿಯು ನಿರುಪಾಯನಾಗಿ ಹಿಂದಕ್ಕೆ ತಿರುಗಿಬಂದು, ಮತ್ತೆ ಗುಹೆಯ ಮುಖವನ್ನು ಹುಡುಕಹತ್ತಿದನು. ಆತನು ಒಂದರ ಹಿಂದೆ ಒಂದರಂತೆ ಬೇಸರಿಯದೆ ಐದು ಮುಖಗಳನ್ನು ಹೊಕ್ಕು ನೋಡಿದನು; ಆದರೆ ಅವೆಲ್ಲವು ಮೊದಲನೆಯ ಮುಖದಂತೆ ಅಪೂರ್ಣವಾಗಿಯೇ ಇದ್ದವು. ಹೀಗೆ ಐದು ಗುಹೆಗಳನ್ನು ಅಪೂರ್ಣವಾಗಿ ತೋಡುವದರ ಉದ್ದೇಶವೇನಿರಬಹುದು? ತಮ್ಮ ಗುಹೆಯ ನಿಜವಾದ ಮುಖವು ಬೇಗನೆ ಸಿಗಬಾರದೆಂತಲೂ ಶೋಧಕರು ಬೇಸತ್ತು ಗುಹೆಯನ್ನು ಶೋಧಿಸುವ ಗೊಡವಿಗೆ ಹೋಗಬಾರದೆಂತಲೂ ಈ ಯುಕ್ತಿಯನ್ನು ಮಾಡಿರಬಹುದೇನು? ನಾನು ಗುಹೆಯ ಶೋಧದ ಹಂಬಲವನ್ನು ಬಿಟ್ಟು ಬಿಡಲಾ? ಇಷ್ಟು ಹೊತ್ತು ಪಟ್ಟ ಶ್ರಮವು ವ್ಯರ್ಥವಾಯಿತಲ್ಲ! ನಾನು ಬಂದ ಕೆಲಸವೇನು, ಮಾಡುವ ಕೆಲಸವೇನು? ಈ ಗುಹೆಯ ಶೋಧದಿಂದ ಮಹಾರಾಜರ ಕಾರ್ಯಕ್ಕೆ ಪ್ರಯೋಜನ ವಾಗಬಹುದೇ? ಯಾರಿಗೆ ಗೊತ್ತು, ಇದರಿಂದಲೇ ದೊಡ್ಡ ಪ್ರಯೋಜನವಾಗುತ್ತಿರ ಬಹುದು. ಈಗ ನಿರರ್ಥಕ ಶ್ರಮದಿಂದ ನನಗೆ ಬೇಸರವಾಗಿದ್ದರೂ, ನಾನು ಇಷ್ಟಕ್ಕೆ ಬಿಡದೆ ಹಿಡಿದ ಕೆಲಸವನ್ನು ಕೊನೆಗಾಣಿಸಲೇಬೇಕು. ನನ್ನ ಕುದುರೆ ಕಟ್ಟಿದ ಗಿಡವು ಯಾವ ಕಡೆಗೆ ಉಳಿದಿರಬಹುದು? ನನ್ನ ಬೆನ್ನ ಮೇಲೆಯೇ ಬಂದ ಖಂಡೇರಾಯನು ಎತ್ತ ಕಡೆಗೆ ಹೋಗಿರ ಬಹುದು? ಆಗಲಿ, ಗುಹೆಯ ಶೋಧವನ್ನಂತು ಮಾಡಿಯೇ ತೀರವೆನು. ಗುಹೆಯಲ್ಲಿ ಏನೋ ಗೂಢವಿದ್ದಂತೆ ತೋರುತ್ತದೆ. ಅದರ ದ್ವಾರವು ಇಲ್ಲಿಯೇ ಎಲ್ಲಿಯಾದರೂ ಇರಬಹುದು.

ಈ ಮೇರೆಗೆ ನಿಶ್ಚಯಿಸಿ ಏಸಾಜಿಯು ಗುಹೆಯ ದ್ವಾರವನ್ನು ಹುಡುಕುತ್ತ ಸಾಗಿದನು. ಕೆಲವು ಅಂತರವನ್ನು ಕ್ರಮಿಸಿ ಹೋದಬಳಿಕ ಗಿಡದ ಬುಡದಲ್ಲಿ ಒಂದು ಗುಡಿಸಲವು ಅವನ ಕಣ್ಣಿಗೆ ಬಿದ್ದಿತು. ಆ ಗುಡಿಸಲಿನ ಬಾಗಿಲಲ್ಲಿ ಒಬ್ಬ ಭಯಂಕರ ಪುರುಷನು

ಕುಳಿತುಕೊಂಡು ಹಾಡುತ್ತಲಿದ್ದನು. ಇವನು ಯಾರು? ಇಲ್ಲಿ ಯಾಕೆ ಕುಳಿತುಕೊಂಡಿರುವನು? ಎಂಬದನ್ನು ಕೇಳುವದಕ್ಕಾಗಿ ಆತನು ಮುಂದಕ್ಕೆ ಹೋಗಲು, ಆ ಮನುಷ್ಯನ ಉಗ್ರರೂಪವು ಚನ್ನಾಗಿ ವ್ಯಕ್ತವಾಯಿತು. ಅವನ ಮೈಬಣ್ಣ ಇದ್ದಲಿಗಿಂತ ಕಪ್ಪು. ಕಣ್ಣು, ಒಂದು ಕಾಶಿಯ ಕಡೆಗಿದ್ದರೆ ಒಂದು ರಾಮೇಶ್ವರದ ಕಡೆಗೆ. ಕೂದಲುಗಳು ಬಹುಬಿರಸು. ಮೇಲೆ ಹೇಳಿದಂತೆ ವಿಲಕ್ಷಣವಾಗಿದ್ದ ಅವನ ಮೆಳ್ಳಗಣ್ಣುಗಳು ಕೆಂಪಗೆ ಗುಲಗಂಜಿಯ ಹಾಗೆ ಇದ್ದವು. ಅವುಗಳೊಳಗಿಂದ ಒಂದೇಸವನೆ ನೀರುಗಳು ಸೋರುತ್ತಿದ್ದವು. ಮೇಲಿನ ತುಟಿಯು ಕತ್ತರಿಸಿದ ಹಾಗೆ ಇದ್ದು ಅದರೊಳಗಿಂದ ಮುಂದಿನ ಹಲ್ಲುಗಳು ಹೊರಗೆ ಹಾದುಬಂದಿದ್ದವು. ಅವನನ್ನು ನೋಡಿದ ಕೂಡಲೆ ಏಸಾಜಿಗೆ ಪ್ರಾಚೀನ ಕಾಲದ ರಾಕ್ಷಸರ ಸ್ಮರಣವಾಯಿತು. ಆ ಕ್ರೂರ ಮನುಷ್ಯನ ಧ್ವನಿಯು ಬಹು ಭಯಪ್ರದ. ಅರಣ್ಯದ ಕ್ರೂರ ಪ್ರಾಣಿಗಳ ಧ್ವನಿಗಳ ಮಿಶ್ರಣದಿಂದ ಅದು ಉಂಟಾಗಿತ್ತೆಂದು ಹೇಳಬಹುದು. ಏಸಾಜಿಯು ಅವನ ಬಳಿಗೆ ಹೋಗಿ "ಯಾಕೋ ಏ ನೀನು ಯಾವನು? ಒಬ್ಬನೆ ಈ ಅರಣ್ಯದಲ್ಲಿ ಕುಳಿತು ಏನು ಮಾಡುತ್ತಿ?" ಎಂದು ಕೇಳಿದನು; ಆದರೆ ಅದು ಆ ಮನುಷ್ಯನ ಲಕ್ಷ್ಯದಲ್ಲಿಯೇ ಬಂದಂತೆ ತೋರಲಿಲ್ಲ, ಆತನ ಭಯಂಕರ ಗಾಯನವು ಒಂದೇಸವನೆ ನಡೆದಿತ್ತು ಏನು ಮಾಡಿದರೂ ಅದು ಕಡಿಮೆಯಾಗಲೊಲ್ಲದು. ಆಗ ಏಸಾಜಿಯು ಅವನನ್ನು ಅಲ್ಲಾಡಿಸಿ ಎಚ್ಚರಗೊಳಿಸಬೇಕೆಂದು ಆತನ ಹೆಗಲಮೇಲೆ ಕೈಯಿಟ್ಟು ಅಲ್ಲಾಡಿಸಿ ಗಟ್ಟಿಯಾಗಿ ಮಾತಾಡಿಸಿದನು. ಆಗ ಆ ಭಯಂಕರ ಮನುಷ್ಯನು ನೊಣ ಜಾಡಿಸಿಕೊಂಡಂತೆ ಏಸಾಜಿಯ ಕೈಯ್ಯನ್ನು ಕೊಸರಿ ಒಗೆದನು. ಬರಬರುತ್ತ ಗಾಯನದೊಡನೆ ಅಭಿನಯಕ್ಕೆ ಆರಂಭವಾಯಿತು. ಆ ಭಯಂಕರ ಮನುಷ್ಯನು ಗಹಗಹಿಸಿ ನಗುತ್ತ, ಗುಡಿಸಿಲದ ಹತ್ತರದಲ್ಲಿದ್ದ ಒಂದು ಹೊದರಿ ನೊಳಗಿಂದ ಒಂದು ಭಯಂಕರವಾದ ನಾಗರಹಾವನ್ನು ತಕ್ಕೊಂಡು, ಅದನ್ನು ಒಮ್ಮೆ ಕೊರಳಿಗೆ ಸುತ್ತಿಕೊಳ್ಳುತ್ತ ಒಮ್ಮೆ ಹೆಗಲ ಮೇಲೆ ಹಾಕಿಕೊಳ್ಳುತ್ತ ಅದರೊಡನೆ ಆಟವಾಡುತ್ತ ಕುಣಿಯಹತ್ತಿದನು. ಇದನ್ನು ನೋಡಿ ಆ ಕೆಚ್ಚೆದೆಯ ಏಸಾಜಿಯು ಸ್ವಲ್ಪ ಅಂಜಿದನು. ಏನು ಮಾಡಿದರೂ ಆ ಮನುಷ್ಯನು ಮಾತಾಡಲೊಲ್ಲನು. ಅವನ ಮಾತುಗಳಾದರೂ ಏಸಾಜಿಗೆ ತಿಳಿಯುತ್ತಿದ್ದವೋ ಇಲ್ಲವೋ ಎಂಬದನ್ನು ಹೇಳಲಿಕ್ಕಾಗುವಂತೆ ಇದ್ದಿಲ್ಲ; ಯಾಕಂದರೆ ಅವನ ಹಾಡಿನೊಳಗಿನ ಒಂದು ಶಬ್ದವು ಕೂಡ ಏಸಾಜಿಗೆ ತಿಳಿಯಲಿಲ್ಲ.

ಈ ಕ್ರೂರ ಮನುಷ್ಯನು ಹುಚ್ಚನಿರಬಹುದೊ? ಅಥವಾ ಬುದ್ಧಿಪೂರ್ವಕವಾಗಿ ಇವನು ಹೀಗೆ ಮಾಡುತ್ತಿರಬಹುದೋ ಎಂಬದನ್ನು ಏಸಾಜಿಯು ನಿಶ್ಚಯಿಸಲು ಅಸಮರ್ಥನಾದನು. ಕಡೆಗೆ ಏಸಾಜಿಯು ಈ ಮನುಷ್ಯನ ಗೊಡವೆಯೇನು? ಗುಡಿಸಿಲೊಳಗೆ ಹೊಕ್ಕು ಒಳಗೆ ಏನಿರುತ್ತದೆಂಬದನ್ನಾದರೂ ನೋಡೋಣ, ಎಂದು ಗುಡಿಸಿಲೊಳಗೆ ಹಣಕಿ ನೋಡಿದನು. ಆತನು ಒಳಗೆ ಹೋಗಿಯೇ ತೀರಬೇಕೆಂದು ನಿಶ್ಚಯಿಸಿದನು. ಏಸಾಜಿಯು ವಿಲಕ್ಷಣ ಧೈರ್ಯಶಾಲಿಯು. ಮತ್ತೊಬ್ಬನಾಗಿದ್ದರೆ ಆ ಕ್ರೂರ ಮನುಷ್ಯನ ರೂಪವನ್ನು ನೋಡಿದ ಕೂಡಲೆ ಅಂಜಿ ಹಿಂದಿರುಗಿ ಹೋಗಬಹುದಾಗಿತ್ತು, ಏಸಾಜಿಗಿಂತ ಆ ಕ್ರೂರ ಮನುಷ್ಯನು ಬಹು ಬಲಾಢ್ಯನಿದ್ದನು. ಎದ್ದು ನಿಂತರೆ ಏಸಾಜಿಯು ಆತನ ಎದೆಗಾದರೂ ಬರುತ್ತಿದ್ದನೋ ಇಲ್ಲವೋ

ಸಂಶಯವು. ಆ ಕ್ರೂರನ ಪುಷ್ಟವಾದ ರಟ್ಟೆಗಳು ಮುಂಡೆದಿರುಗಿ ಕಲ್ಲಿನ ಹಾಗೆ ಬಿರುಸಾಗಿದ್ದವು. ಇದನ್ನಾವದನ್ನೂ ಲಕ್ಷ್ಯಕ್ಕೆ ತಾರದ ಏಸಾಜಿಯು ಗುಡಿಸಲೊಳಗೆ ಹೊಕ್ಕನು. ಕೂಡಲೆ ಆ ಕ್ರೂರ ಮನುಷ್ಯನು ಭಯಂಕರವಾಗಿ ಗರ್ಜಿಸಿ, ಏಸಾಜಿಯ ಮೇಲೆ ದುಮುಕಿ ಅವನನ್ನು ನೂಕಿದನು. ಏಸಾಜಿಯು ಆ ಕ್ರೂರ ಮನುಷ್ಯನ ಸಮಾಚಾರ ತಕ್ಕೊಳ್ಳಬೇಕೆನ್ನು ವಷ್ಟರಲ್ಲಿ ಜೋಲಿ ಹೋಗಿ ನೆಲಕ್ಕೆ ಬಿದ್ದನು. ಆಗ ಆ ಕ್ರೂರ ಮನುಷ್ಯನು ತನ್ನ ಬಳಿಯಲ್ಲಿದ್ದ ನೂಲಿನ ಹಗ್ಗದಿಂದ ಏಸಾಜಿಯ ಎರಡೂ ಕೈಗಳನ್ನು ಬೆನ್ನ ಹಿಂದೆ ತಿರುವಿ ಕಟ್ಟಿ ಅವನನ್ನು ಒಂದು ಹೊದರಿನೊಳಗೆ ಸೇರಿಸಿ ಹಿಂದಿನಿಂದ ನೂಕುತ್ತ ಗುದ್ದುತ್ತ ''ಸಾಗು, ಈ ಮೊದಲೆ ಗವಿಗಳಲ್ಲಿ ಹೊಟ್ಟೆ ಹೊಸೆಯುತ್ತ ಸಾಗಿದಂತೆ ಈಗಲೂ ಸಾಗು'' ಎಂದು ನುಡಿಯುತ್ತ ಏಸಾಜಿಯನ್ನು ಹಿಂದಿನಿಂದ ಕೊಸೆಯಹತ್ತಿದನು. ಆಗ ಏಸಾಜಿಯು ಉಪಾಯವಿಲ್ಲದೆ ಒದಗಿದ ಕಷ್ಟವನ್ನು ಸಹಿಸಬೇಕಾಯಿತು. ಆ ಕ್ರೂರ ಮನುಷ್ಯನ ಗುದ್ದು ಮುರಿಗೆಯಿಂದ ಏಸಾಜಿಯು ವ್ಯಥೆಪಡಹತ್ತಿದನು. ಅಷ್ಟರಲ್ಲಿ ಏನಾಯಿತೋ ದೇವರಿಗೇ ಗೊತ್ತು ಆ ಕ್ರೂರ ಮನುಷ್ಯನು ಕೆಟ್ಟ ಧ್ವನಿಯಿಂದ ಒದರುತ್ತ ಹಿಂದಕ್ಕೆ ಬಿದ್ದನು. ಅದರಿಂದ ಏಸಾಜಿಯ ಕಷ್ಟವು ಕಡಿಮೆಯಾಯಿತು. ಬರಬರುತ್ತ ಆ ಕ್ರೂರ ಮನುಷ್ಯನು ಉರುಲು ಬಿದ್ದವರಂತೆ ಗೊರಗುಟ್ಟಹತ್ತಲು, ಏಸಾಜಿಯು ಹಿಂದಿರುಗಿ ಹೊರಗೆ ಬರಲು ಯತ್ನಿಸಹತ್ತಿದನು; ಆದರೆ ಆ ಕ್ರೂರ ಮನುಷ್ಯನು ಗವಿಯ ಬಾಗಿಲಿಗೇ ಬಿದ್ದದ್ದರಿಂದ ಹೊರಗೆ ಬರಲಿಕ್ಕೆ ಬರಲೊಲ್ಲದು. ಆಗ ಆ ಮಹಾರಾಷ್ಟ್ರ ವೀರನು ಕಸುವಿನಿಂದ ಒದೆದನು. ಆಗ ಆ ಕ್ರೂರ ಮನುಷ್ಯನ ದೇಹವು ಬದಿಗಾಗಿ ಏಸಾಜಿಯು ಹೊರಗೆ ಬಂದನು. ಆಗ ಭಯಂಕರ ಸ್ಥಿತಿಯು ಅವನ ಕಣ್ಣಿಗೆ ಬಿದ್ದಿತು. ಆ ಭಯಂಕರ ಸರ್ಪವು ಆ ಕ್ರೂರ ಮನುಷ್ಯನ ಕೊರಳಿಗೆ ಸುತ್ತುಹಾಕಿ ಅವನ ಪ್ರಾಣವನ್ನು ಹೀರತೊಡಗಿತ್ತು, ಏಸಾಜಿಯು ಕೈಗಳನ್ನು ಕಟ್ಟಿಬಿಟ್ಟಿದ್ದರಿಂದ ಅವನ ಆಟವೇನು ನಡೆಯುವ ಹಾಗಿದ್ದಿಲ್ಲ. ಆ ಕ್ರೂರ ಮನುಷ್ಯನು ಕೈಗಳನ್ನು ಒಳಿತಾಗಿ ಬಿಗಿದುಬಿಟ್ಟಿದ್ದನು. ಏಸಾಜಿಯು ಅಲ್ಲಿಯೇ ಬಿದ್ದಿರುವ ತನ್ನ ಖಡ್ಗವನ್ನು ಕಾಲಿನಿಂದ ತಕ್ಕೊಂಡು, ಉಪಾಯದಿಂದ ಹಗ್ಗವನ್ನು ಕೊಯ್ದುಕೊಂಡು ಕೈಗಳನ್ನು ಬಿಚ್ಚಿಕೊಂಡನು. ಕೂಡಲೆ ಆತನು ಕ್ರೂರ ಮನುಷ್ಯನ ಕೊರಳಿಗೆ ಸುತ್ತುಹಾಕಿದ್ದ ಹಾವನ್ನು ತನ್ನ ಖಡ್ಗದಿಂದ ತುಂಡು ತುಂಡಾಗಿ ಮಾಡಿದನು; ಆದರೆ ಅಷ್ಟರಲ್ಲಿ ಕ್ರೂರ ಮನುಷ್ಯನ ಪ್ರಾಣವು ಹಾರಿಹೋಗಿತ್ತು. ತಾನು ದೇವರ ದಯದಿಂದಲೇ ಪಾರಾಗಿ ಮಹಾರಾಜರ ಸೇವೆ ಮಾಡಲಿಕ್ಕೆ ಉಳಿದದ್ದಕ್ಕಾಗಿ ಏಸಾಜಿಗೆ ಬಹಳ ಸಂತೋಷವಾಯಿತು. ಆ ಕ್ರೂರ ಮನುಷ್ಯನು ಸಾಕಿದ ಹಾವೇ ಈ ಪ್ರಸಂಗದಲ್ಲಿ ಅವನ ಪ್ರಾಣಹರಣ ಮಾಡಿತು.

ಹೀಗೆ ಗಂಡಾಂತರದೊಳಗಿಂದ ಪಾರಾದ ಬಳಿಕ, ಇನ್ನು ಮುಂದೆ ಏನು ಮಾಡಬೇಕೆಂದು ಏಸಾಜಿಯು ಯೋಚಿಸತೊಡಗಿದನು. ಈ ಗವಿಯು ಕಳ್ಳರದಾಗಿದ್ದು, ಒಳಗೆ ದ್ರವ್ಯ ಸಂಚಯ ವಿರಬಹುದಾದ್ದರಿಂದ ಅದನ್ನು ಕಾಯುವದಕ್ಕಾಗಿಯೇ ಇಂಥ ಕ್ರೂರ ಮನುಷ್ಯನನ್ನು ಕಳ್ಳರು ಗವಿಯ ಬಾಗಿಲಲ್ಲಿ ಕಾವಲಿಟ್ಟಿರುವರೆಂದು ಆತನು ತರ್ಕಿಸಿದನು. ದ್ರವ್ಯನಿಧಿಯು ಸಿಕ್ಕರೆ ಮಹಾರಾಜರ ಕಾರ್ಯಕ್ಕೆ ಅನುಕೂಲವಾಗಬಹುದೆಂದು ತಿಳಿದು, ಆತನು ಧೈರ್ಯದಿಂದ

ಗವಿಯನ್ನು ಹೊಕ್ಕನು. ಮೊದಮೊದಲು ಗವಿಯಲ್ಲಿ ಪ್ರಯಾಸದಿಂದ ಹೋಗಬೇಕಾಯಿತು; ಆದರೆ ಮುಂದೆ ಬರಬರುತ್ತ ಗವಿಯು ವಿಶಾಲವಾಗುತ್ತ ಹೋದದ್ದರಿಂದಲೂ, ಗಾಳಿ ಬರುವದಕ್ಕಾಗಿ ಬೆಳಕಿಂಡಿಗಳನ್ನು ಬಿಟ್ಟಿದ್ದರಿಂದಲೂ ಏಸಾಜಿಗೆ ಒಳಗೆ ಹೋಗುವಾಗ ಉಬ್ಬಗುಬ್ಬಿಲ್ಲ. ಆತನು ಮುಂದಕ್ಕೆ ಸಾಗುತ್ತಿರಲು, ಹೊಸದಾಗಿ ಗವಿಯನ್ನು ತೋಡಿರುವಂತೆ ಒಗರ ಹಸಿಯ ಮಣ್ಣು ಅವನ ಕಾಲಿಗೆ ಹತ್ತಹತ್ತಿತು. ಹೀಗೆ ಹೊಸ ಗವಿಯನ್ನು ಯಾರು ತೋಡುತ್ತಿರಬಹುದು? ತೋಡುವವರ ಉದ್ದೇಶವಾದರೂ ಏನಿರಬಹುದು? ಗವಿಯನ್ನು ತೋಡುವ ಕೆಲಸವು ಇನ್ನೂ ನಡೆದಿರಬಹುದೋ? ಹೀಗೆಯೇ ನಾನು ಮುಂದಕ್ಕೆ ಹೋದರೆ, ತೋಡುವವರ ಭೆಟ್ಟಿಯಾಗಬಹುದೇನು? ನನ್ನನ್ನು ಅವರು ನೋಡಿದರೆ ಏನು ಮಾಡ ಬಹುದು? ಮಹಾರಾಜರಿಗೆ ಆಗದವರುಕೆಲವರಿರಬಹುದು, ಅವರೇನಾದರೂ ದುರಾಲೋಚನೆ ಯಿಂದ ಈ ಗವಿಯನ್ನು ತೋಡಿಸುತ್ತಿರಬಹುದೇ? ಅಫಜುಲಖಾನನ ಅಂಗವು ಇದರಲ್ಲಿ ಇರಬಹುದೇ? ಎಂದು ಆಲೋಚಿಸುತ್ತ ಏಸಾಜಿಯು ಹಾಗೆಯೇ ಮುಂದಕ್ಕೆ ಸಾಗಿದನು. ಅಷ್ಟರಲ್ಲಿ ಆತನ ಕಿವಿಗೆ, ಗವಿಯನ್ನು ತೋಡುವ ಸಪ್ಪಳವು ಕೇಳಿಸಹತ್ತಿತು. ಆಗ ಏಸಾಜಿಯು ಅಲ್ಲಿಯೇ ನಿಂತುಕೊಂಡನು. ಇದು ಕಳ್ಳರು ದುಡ್ಡು ಇಡುವ ಗವಿಯಲ್ಲ, ತಪಸ್ವಿಗಳು ವಾಸಿಸುವ ಗವಿಯೂ ಅಲ್ಲ, ಯಾವದೋ ಒಂದು ವಿಶೇಷ ಕಾರಣದಿಂದ ಇದನ್ನು ಪ್ರಯತ್ನಪೂರ್ವಕವಾಗಿ ತೋಡುತ್ತಿರುವರು. ಈಗಲೇ ನಾನು ತೋಡುವವರ ಬಳಿಗೆ ಹೋಗುವದಕ್ಕಿಂತ, ಗುಪ್ತರೀತಿ ಯಿಂದ ಕಾರಣವನ್ನು ಶೋಧಿಸುವುದು ತಕ್ಕದ್ದು; ಯಾರಿಗೆ ಗೊತ್ತು ಈ ಗವಿಯು ಮಹಾರಾಜರ ಕಾರ್ಯಕ್ಕೆ ವಿಘಾತಕವಾಗಿದ್ದರೂ ಇರಬಹುದು. ಇತ್ತ ಕಡೆಗೆ ಮಾರ್ಗ ಮಾಡಲಿಕ್ಕೆ ಅನುಕೂಲ ವಿಲ್ಲೆಂದು ಖಂಡೇರಾಯನು ಇದಕ್ಕಾಗಿಯೇ ನನ್ನ ಮುಂದೆ ಹೇಳಿರಬಹುದೇನು? ಅವನೂ ಈ ಗುಪ್ತ ಕಾರಸ್ಥಾನದಲ್ಲಿ ಸೇರಿರಬಹುದೋ? ಏನಿರಬಹುದು? ಆ ಕ್ರೂರ ಮನುಷ್ಯನನ್ನು ನಾನು ಮೊದಲು ಹುಚ್ಚನೆಂದು ತಿಳಿದಿದ್ದೆನು; ಆದರೆ ಅವನು ಹುಚ್ಚನಲ್ಲೆಂಬದು ನನ್ನನ್ನು ಗವಿಯಲ್ಲಿ ತುರುಕಿ ಗುದ್ದಿದಾಗಲೇ ಗೊತ್ತಾಯಿತು. ನಾನು ಬಂದ ಹಾದಿಯಿಂದ ತಿರುಗಿ ಹೋಗುವ ದರೊಳಗೆ ಸಂಚುಗಾರರಾರಾದರೂ ಗವಿಯ ಮೋರೆಗೆ ಬಂದಿದ್ದರೆ ಹ್ಯಾಗೆ? ತಮ್ಮ ಕಾರಸ್ಥಾನ ವನ್ನು ನಾನು ಹೊರಗೆಡುವುವೆನೆಂದು ತಿಳಿದು, ಅವರು ನಿಶ್ಚಯವಾಗಿ ನನ್ನನ್ನು ಗೊತ್ತಿಗೆ ಹಚ್ಚುವರು. ಆದ್ದರಿಂದ ಇತ್ತ ಮುಂದಕ್ಕೂ ಹೋಗುವ ಹಾಗಿಲ್ಲ, ಅತ್ತ ಹಿಂದಕ್ಕೂ ಹೋಗುವ ಹಾಗಿಲ್ಲ. ಅಂದಬಳಿಕ ನಾನು ಗವಿಯಿಂದ ಹೊರಗೆ ಹೋಗುವ ಬಗೆ ಹ್ಯಾಗೆ? ಈ ಗುಹೆಯ ಸಂಗತಿಯನ್ನಂತು ನಾನು ಮಹಾರಾಜರಿಗೆ ತಿಳಿಸಲೇಬೇಕು. ಇಲ್ಲದಿದ್ದರೆ ಅನರ್ಥವಾದೀತು.

ಈ ಮೋರೆಗೆ ಆಲೋಚಿಸುತ್ತ ಏಸಾಜಿಯು ಸ್ವಲ್ಪ ಹೊತ್ತು ನಿಂತಬಳಿಕ ಆತನಿ ಗೊಂದು ಯುಕ್ತಿಯು ತೋಚಿತು. ಗಾಳಿ ಬರುವದಕ್ಕಾಗಿ ಬಿಟ್ಟಿದ್ದ ಬೆಳಕಿಂಡಿಯಲ್ಲಿ ಹೋಗಲಿಕ್ಕೆ ಬಂದರೆ ನೋಡಬೇಕೆಂದು ಆತನು ಯೋಚಿಸಿ, ದೊಡ್ಡ ಬೆಳಕಿಂಡಿಯನ್ನು ಹುಡುಕಹತ್ತಿದನು. ಕರ್ಮಧರ್ಮ ಸಂಯೋಗದಿಂದ ಆತನಿಗೆ ಅಂಥದೊಂದು ಬೆಳಕಿಂಡಿಯೂ ಸಿಕ್ಕಿತು. ಏಸಾಜಿಯು ಗಂಡುಗಚ್ಚೆ ಹಾಕಿ, ಗವಿಯಲ್ಲಿ ಬಿದ್ದಿದ್ದ ಕಲ್ಲುಗಳನ್ನು ಆರಿಸಿ ಒಟ್ಟಿ,

ಅದರ ಮೇಲೆ ನಿಂತುಕೊಂಡು ಬೆಳಕಿಂಡಿಯೊಳಗೆ ತಲೆಹಾಕಿ ಹೊರಗೆ ಹಣಿಕಿ ನೋಡಿದನು. ಆಗ ರಾತ್ರಿಯ ಸಮಯವಾಗಿತ್ತು, ಬೆಳದಿಂಗಳ ದಿವಸವಲ್ಲದಿದ್ದರೂ, ನಿರಭ್ರವಾದ ಆಕಾಶದಲ್ಲಿ ಸ್ವಚ್ಛವಾಗಿ ಮಿನುಗುತ್ತಿರುವ ನಕ್ಷತ್ರಗಳ ಮಂದಕಾಂತಿಯು ಬಿದ್ದಿತು. ಆಗ ವಿಸಾಜಿಯು ಅತಿ ಸಾಹಸಪಟ್ಟು, ತನಗೆ ಹೊರಗೆ ಹೋಗಲಿಕ್ಕೆ ಬರುವಷ್ಟು ಬೆಳಕಿಂಡಿಯನ್ನು ದೊಡ್ಡದು ಮಾಡಿಕೊಂಡು ಮೆಲ್ಲಗೆ ಹೊರಗೆ ಬಂದನು. ತಾನು ಯಾವ ಕಡೆಗೆ ಬಂದೆನು, ತನ್ನ ಕುದುರೆಯು ಯಾವ ಕಡೆಗೆ ಉಳಿಯಿತು, ಗವಿಯ ಮೋರೆಯು ಯಾವ ಮಗ್ಗಲಿಗಿರುವದು ಎಂಬದೇನು ಆತನಿಗೆ ತಿಳಿಯದಾಯಿತು. ಆತನು ಸುತ್ತುಮುತ್ತ ನೋಡಲು, ಜುಳುಜುಳು ಹರಿಯುವ ಹಳ್ಳದ ಸಪ್ಪಳವು ಆತನಿಗೆ ಕೇಳಿಸಿತು. ಜಾವಳಿಯ ಅರಣ್ಯದಲ್ಲಿ ಇಂಥ ಹಳ್ಳ-ಹೊಳೆಗಳಿಗೆ ಕೊರತೆಯಿದ್ದಿಲ್ಲ. ವಿಸಾಜಿಯು ಮತ್ತೆ ನಾಲ್ಕೂ ಕಡೆಗೆ ನೋಡುತ್ತಿರಲು, ಸ್ವಲ್ಪ ಅಂತರದಲ್ಲಿ ಉರಿಯ ಬೆಳಕು ಆತನ ಕಣ್ಣಿಗೆ ಬಿದ್ದಿತು. ಇಂಥ ಕಟ್ಟಡವಿಯಲ್ಲಿ ರಾತ್ರಿ ಉರಿ ಹಾಕಿಕೊಂಡು ಯಾರು ಕುಳಿತಿರಬಹುದು? ಅವರು ಕಳ್ಳರಿರಬಹುದೋ, ಬೈರಾಗಿಗಳಿರ ಬಹುದೋ? ಅಥವಾ ಈ ಗುಪ್ತ ಕಾರಸ್ಥಾನಕ್ಕೆ ಸಂಬಂಧಿಸಿದ ಜನರಿರಬಹುದೋ? ಯಾರಿದ್ದರೂ ಅದನ್ನು ಪರೀಕ್ಷಿಸಲೇಬೇಕು ಎಂದು ನಿಶ್ಚಯಿಸಿ, ಆ ಬೆಳಕಿನ ಕಡೆಗೆ ನಡೆದನು. ಸ್ವಲ್ಪದೂರ ಹೋಗುವದರೊಳಗಾಗಿ ಮನುಷ್ಯರ ದನಿಯು ಆತನಿಗೆ ಕೇಳಿಸಹತ್ತಿತು. ವಿಸಾಜಿಯು ಒಮ್ಮೆಲೆ ಅಲ್ಲಿಯ ಜನರ ಮುಂದೆ ನಿಂತುಕೊಳ್ಳಲು ಇಚ್ಛಿಸಲಿಲ್ಲ. ಹಾಗೆ ಮಾಡಿದರೆ ಪ್ರಸಂಗ ವಿಶೇಷದಲ್ಲಿ ತನ್ನ ಪ್ರಾಣ ಉಳಿಯಲಿಕ್ಕಿಲ್ಲವೆಂದು ಆತನು ತಿಳಿದು ಕೊಂಡಿದ್ದನು. ಆತನು ಮೆಲ್ಲನೆ ಗಿಡಗಳ ಮರೆಯಿಂದ ಹೋಗಿ ಉರಿಯಿದ್ದ ಸ್ಥಳವನ್ನು ಮುಟ್ಟಿದನು. ಅಲ್ಲಿಯೊಂದು ಗುಡಿಸಲು ಇತ್ತು. ಗುಡಿಸಲಿನ ಹೊರಗೆ ಒಬ್ಬ ಜಟಾಧಾರಿಯಾದ ಪುರುಷನೂ, ಒಬ್ಬ ಹದಿನೈದು ಹದಿನಾರು ವರ್ಷದ ತರುಣ ಶಿಷ್ಯನೂ ಉರಿಯ ಬಳಿಯಲ್ಲಿ ಕುಳಿತುಕೊಂಡಿದ್ದರು. ಅವರನ್ನು ನೋಡಿ ವಿಸಾಜಿಗೆ ಪರಮಾಶ್ಚರ್ಯವಾಯಿತು. ಹದಿನಾರು ವರ್ಷದ ಸುಂದರ ತರುಣನು ವೈರಾಗ್ಯಶಾಲಿಯಾದದ್ದಂತು ಆತನಿಗೆ ವಿಲಕ್ಷಣವಾಗಿ ತೋರಿತು. ಆತನು ಬಹಳ ಹೊತ್ತು ಪರೀಕ್ಷಿಸುತ್ತ ನಿಂತುಕೊಂಡನು. ಆ ಗುರುಶಿಷ್ಯರು ಏನೋ ವಿಚಾರಮಾಡುತ್ತ ಸುಮ್ಮನೆ ಕುಳಿತುಕೊಂಡಿದ್ದರು. ತಂಗಾಳಿ ಬಡಿದು ವಿಸಾಜಿಗೆ ಚಳಿಯಾಗ ಹತ್ತಿದ್ದರಿಂದ ಆತನಿಗೆ ಉರಿ ಕಾಸಿಕೊಳ್ಳುವ ಇಚ್ಛೆಯಾಯಿತು. ಇಂಥ ಬೈರಾಗಿಗಳು ಒಳಸಂಚಿನಲ್ಲಿ ಸೇರುವ ಸಂಭವವಿಲ್ಲವಾದ್ದರಿಂದ, ಇವರ ಬಳಿಗೆ ಹೋಗುವ ವಿಷಯವಾಗಿ ಸಂಶಯತಕ್ಕೊಳ್ಳುವ ಕಾರಣವಿಲ್ಲೆಂದು ಯೋಚಿಸಿ ಆತನು ಆ ಗುರುಶಿಷ್ಯರ ಬಳಿಗೆ ಹೋದನು. ಹೀಗೆ ಆಕಾಶದಿಂದ ಇಳಿದುಬಂದಂತೆ, ಅಥವಾ ಭೂಮಿಯಿಂದ ಮೇಲಕ್ಕೆದ್ದಂತೆ ವಿಸಾಜಿಯು ಅಕಸ್ಮಾತ್ತಾಗಿ ಅವರ ಬಳಿಗೆ ಹೋಗಲು, ಆ ಗುರುಶಿಷ್ಯರು ಸ್ವಲ್ಪ ಬೆದರಿದರು. ಎಷ್ಟೋ ಜನ ಹಾದಿಕಾರರು ಬರುತ್ತಿದ್ದರು. ಹೋಗುತ್ತಿದ್ದರು; ಆದರೆ ಇಂಥ ಮಧ್ಯರಾತ್ರಿಯಲ್ಲಿ ಈವರೆಗೆ ಒಬ್ಬನೂ ಬಂದಿದ್ದಿಲ್ಲ. ಆಶ್ಚರ್ಯದ ಭರವು ಕುಗ್ಗಿದ ಬಳಿಕ ಆ ಗೋಸಾವಿಯು ಸಿಟ್ಟಿನಿಂದ ವಿಸಾಜಿಯನ್ನು ಕುರಿತು—''ಯಾವನೋ ನೀನು? ಮಧ್ಯರಾತ್ರಿಯಲ್ಲಿ ನಮಗೆ ತ್ರಾಸ ಕೊಡುವದಕ್ಕೆ ಯಾಕೆ ಬಂದೆ? ನಾವು ಸರ್ವಸಂಗ

ಪರಿತ್ಯಾಗಮಾಡಿ ಈ ಘೋರಾರಣ್ಯದಲ್ಲಿ ಬಂದು ನಿಂತಿದ್ದರೂ, ಸಾಂಸಾರಿಕರಾದ ನಿಮ್ಮ ತ್ರಾಸವು ತಪ್ಪಲೊಲ್ಲದಲ್ಲ? ನಡೆಯಿಲ್ಲಿಂದ, ಕ್ಷಣವಾದರೂ ಇಲ್ಲಿ ನಿಂತುಕೊಳ್ಳಬೇಡ!'' ಎಂದು ಗದ್ದರಿಸಿದನು.

ಗೋಸಾವಿಯ ಈ ರೀತಿಯನ್ನು ನೋಡಿ ಏಸಾಜಿಗೆ ಬಹಳ ಆಶ್ಚರ್ಯವಾಯಿತು. ಗೋಸಾವಿಗಳು ಸಿಟ್ಟಿನವರಿರುತ್ತಾರೆಂಬುದು ಆತನಿಗೆ ಗೊತ್ತಿತ್ತು; ಆದರೆ ಮಧ್ಯರಾತ್ರಿಯಲ್ಲಿ ಬಂದವರಿಗೆ ಒಳ್ಳೆಯವೆರಡು ಮಾತುಗಳನ್ನಾಡಿ ಕಳಿಸದಂಥ ವಿಲಕ್ಷಣ ಸಿಟ್ಟಿನವರಾದರೂ ಅಪರೂಪವೆಂದು ಏಸಾಜಿಯು ಭಾವಿಸಿದ್ದನು; ಆತನು ಬೈರಾಗಿಯನ್ನು ಕುರಿತು— ''ನಾನು ಬೇಕೆಂತ ನಿಮ್ಮ ಬಳಿಗೆ ಬಂದವನಲ್ಲ, ಸಹಜವಾಗಿ ಈ ಅರಣ್ಯದಲ್ಲಿ ಸಂಚರಿಸುತ್ತಿರಲು, ಹಾದಿಯ ತಪ್ಪಿ ಬಂದೆನು'' ಎಂದು ಹೇಳಿದನು; ಆದರೆ ಅವನ ಮಾತನ್ನು ಯಾರು ಕೇಳಬೇಕು? ಬೈರಾಗಿಯು ಕ್ಷಣವಾದರೂ ಸುಮ್ಮನಿರದೆ—'ನಡೆಯಿಲ್ಲಿಂದ, ಕ್ಷಣವಾದರೂ ನಿಲ್ಲಬೇಡ' ಎಂದು ಒಂದೇಸವನೆ ಬೆನ್ನಹತ್ತಿದ್ದನು. ಪ್ರತ್ಯಕ್ಷ ವೈರಿಯು ಬಂದರೂ ಅದು ಹೊರಗೆ ಹಾಕುವ ಸಮಯವಲ್ಲ, ಹೀಗಿದ್ದು ಬೈರಾಗಿಯು ಈ ಪರಿಯಾಗಿ ತನ್ನನ್ನು ಹೊರಗೆ ಹಾಕಲು ಯತ್ನಿಸುವದನ್ನು ನೋಡಿ ಏಸಾಜಿಯು ದಂಗುಬಡಿದು ನಿಂತುಕೊಂಡನು. ಆತನು ಮಧ್ಯರಾತ್ರಿಯಲ್ಲಿ ಎಲ್ಲಿಗೂ ಹೋಗುವಹಾಗಿದ್ದಿಲ್ಲ; ಆದ್ದರಿಂದ ಮುಂಡತನವಾಡಿ ಆತನು ಬೆಂಕಿಯ ಹತ್ತರ ಹೋಗಿ ಕುಳಿತುಕೊಂಡನು. ಆಗಂತೂ ಬೈರಾಗಿಯ ಪಿತ್ತವು ತಲೆಗೇರಿತು. ಅವನು ಕವಕ್ಕನೆ ಏಸಾಜಿಯ ಮೈಮೇಲೆ ಹೋಗಿ 'ಎಂಥ ಮುಂಡನೋ, ನೀನು? ಹೋಗೆಂದರೆ ಹೋಗಲೊಲ್ಲೆ ಏಳು, ನಮ್ಮ ಬಳಿಯಲ್ಲಿ ನೀನು ಕುಳಿತುಕೊಳ್ಳಬೇಡ, ಎತ್ತಾದರೂ ಹೋಗು' ಎಂದು ಗರ್ಜಿಸಿ ಮಾತಾಡಹತ್ತಿದನು. ಆತನು ಎದ್ದು ಏಸಾಜಿಯನ್ನು ಹೊಡೆಯುವದೊಂದು ಉಳಿದಿತ್ತು, ಗೋಸಾವಿಯ ಈ ರೀತಿಯನ್ನು ನೋಡಿ ಏಸಾಜಿಗೂ ಸ್ವಲ್ಪ ಸಿಟ್ಟು ಬಂದಿತು. ಆತನು ಗೋಸಾವಿಗೆ— 'ಮಹಾರಾಜ, ಸ್ವಲ್ಪ ತಾಳಿರಿ, ಹೀಗೆ ಯಾಕೆ ಸಿಟ್ಟಿಗೇಳುವಿರಿ? ನಾನು ಈಗ ರಾತ್ರಿ ಎರಡನೆಯ ಕಡೆಗೆ ಹೋಗವದಾದರೂ ಎತ್ತ? ಬೆಳಗಾದ ಬಳಿಕ ಕ್ಷಣವಾದರೂ ನಿಮ್ಮ ಬಳಿಯಲ್ಲಿ ನಿಂತುಕೊಳ್ಳುವದಿಲ್ಲ, ಸರ್ವಸಂಗ ಪರಿತ್ಯಾಗ ಮಾಡಿದ ನಿಮಗೆ ಇಷ್ಟು ಸಿಟ್ಟು ಏಕೆ? ಎಂಥವರಾದರೂ, ಮನೆಗೆ ಬಂದವರನ್ನು ಉಪಚರಿಸುವ ದುಂಟು. ಸಾಧು ಸತ್ಪುರುಷರೆನಿಸಿಕೊಳ್ಳುವ ನಿಮ್ಮ ಈ ರೀತಿಯು ಯಾವ ಕಡೆಯದು? ಬೇಕಾದದ್ದು ಮಾಡಿರಿ, ಬೆಳಗಾಗುವ ತನಕ ನಾನು ಇಲ್ಲಿಂದ ಉಲುಕುವದಿಲ್ಲ, ಎಂದು ಸ್ಪಷ್ಟವಾಗಿ ಹೇಳಿದನು. ಅದನ್ನು ಕೇಳಿ ಆ ಗೋಸಾವಿಯು ಹಾಗೂ ಆತನ ಶಿಷ್ಯನ ಕಣ್ಣುಗಳು ಕೆಂಪಾದವು. ಅವರಿಬ್ಬರೂ ಕೂಡಿ ಇನ್ನು ಏಸಾಜಿಯ ಮೈಮೇಲೆ ಹೋಗತಕ್ಕವರು, ಅಷ್ಟರಲ್ಲಿ ಗುಡಿಸಿಲಿನಿಂದ ಸ್ವಲ್ಪ ದೂರದಲ್ಲಿ ಭೂಮಿಯನ್ನು ಬಗೆದು ನಾಲ್ಕಾರು ಜನರು ಕೈಯಲ್ಲಿ ಪಿಲಾಲುಗಳನ್ನು ಹಿಡಕೊಂಡು ಬಂದರು. ಏಸಾಜಿಯು ಅತ್ತಕಡೆಗೆ ಆಶ್ಚರ್ಯದಿಂದ ನೋಡಲು, ಭೂಮಿಯೊಳಗಿಂದ ಮಾರ್ಗ ಮಾಡಿಕೊಂಡು ಈ ಜನರು ಬಂದಿದ್ದರು! ಬಂದವರು ಆನಂದದಿಂದ ಗರ್ಜಿಸುತ್ತ ಗೋಸಾವಿಯ ಎದುರಿಗೆ ನಿಂತುಕೊಂಡರು. ಅವರನ್ನು ನೋಡಿ ಗೋಸಾವಿಗೂ

ಅವನ ಶಿಷ್ಯನಿಗೂ ಪರಮಾನಂದ ವಾದಂತೆ ತೋರಿತು. ಅವರು ಗೋಸಾವಿಯನ್ನು ಕುರಿತು—''ನೋಡಿರಿ, ನಾವು ಹೇಳಿದ್ದಕ್ಕಿಂತ ನಾಲ್ಕು ದಿನ ಮುಂದಾಗಿಯೇ ನಿಮ್ಮ ಮುಂದೆ ಬಂದು ನಿಂತೆವೋ ಇಲ್ಲವೋ? ಇನ್ನು ಮದ್ದು ತುಂಬಿ ಇಡುವ ಕೆಲಸವಷ್ಟು ಉಳಿಯಿತು'' ಎಂದು ನುಡಿದರು. ಇನ್ನೂ ಅವರು ಏನೇನೋ ಹೇಳತಕ್ಕವರಿದ್ದರು. ಅಷ್ಟರಲ್ಲಿ ಗೋಸಾವಿಯು ಸುಮ್ಮನಿರಲು ಸನ್ನೆ ಮಾಡಿದ್ದರಿಂದ ಅವರು 'ಯಾಕರಿ? ಯಾಕರಿ?' ಎಂದು ಪ್ರಶ್ನೆ ಮಾಡಹತ್ತಿದರು. ಅದಕ್ಕೆ ಗೋಸಾವಿಯು—''ಮೊದಲು ಇಲ್ಲಿಗೆ ಬಂದಿರುವ ಈ ಠಕ್ಕನನ್ನು ಹೊರಗೆ ಹಾಕಿರಿ; ಆಮೇಲೆ ಮುಂದೆ ಏನು ಮಾಡಬೇಕೆಂಬದನ್ನು ಕುರಿತು ವಿಚಾರ ಮಾಡೋಣ; ಮತ್ತು ಮಾತಾಡುವದನ್ನು ಮಾತಾಡೋಣ.''

ಈ ಮೇರೆಗೆ ಗೋಸಾವಿಯು ನುಡಿಯಲು, ಎಲ್ಲರು ಏಸಾಜಿಯನ್ನು ನೋಡಹತ್ತಿದರು. ಏಸಾಜಿಯು ಅವರನ್ನು ಕೆಕ್ಕರಿಸಿ ನೋಡಹತ್ತಿದನು. ''ಈ ಜನರು ಭೂಮಿಯೊಳಗಿಂದ ಬರುತ್ತಾರೇನು, ಮದ್ದು ತುಂಬಬೇಕೆಂದು ಹೇಳುತ್ತಾರೇನು, ಇದರ ಗೂಢವು ಏನಿರಬಹುದು,'' ಎಂದು ಏಸಾಜಿಯು ಯೋಚಿಸಹತ್ತಿದನು. ಅಷ್ಟರಲ್ಲಿ ಒಬ್ಬನು ಏಸಾಜಿಯನ್ನು ಕುರಿತು—''ನೀನು ಯಾರು? ಇಲ್ಲಿಗೆ ಯಾಕೆ ಬಂದೆ? ಕಳ್ಳನಿರುವಿಯೋ ಚಾಡಿಕೋರನಿರುವಿಯೋ ಹೇಳು. ನಿಜವಾದ ಸಂಗತಿಯನ್ನು ಹೇಳದಿದ್ದರೆ ನಿನ್ನ ನೂರು ವರ್ಷಗಳು ತುಂಬಿದವೆಂದು ತಿಳಿ; ಯಾಕೆ? ಬಾಯಿಂದ ಮಾತುಗಳು ಹೊರಡಲೊಲ್ಲವು? ನೀನು ಮೊದಲು ಇಲ್ಲಿಗೆ ಹ್ಯಾಗೆ ಬಂದೆ ಹೇಳು. ನಮ್ಮ ಗುಪ್ತ ಸಂಗತಿಗಳನ್ನು ನೋಡುವದಕ್ಕಾಗಿ ಯಾರಾದರೂ ನಿನ್ನನ್ನು ಇಲ್ಲಿಗೆ ಕಳಿಸಿರ ಬಹುದು; ಹಾಗಿದ್ದರೆ ಮೊದಲು ನಿನ್ನ ಕಣ್ಣುಗಳನ್ನು ಈ ಹಿಲಾಲಿನಿಂದ ಸುಟ್ಟು ಕಳೆದುಬಿಡುತ್ತೇನೆ. ನಿಲ್ಲು,ಹೇಳು, ಸುದ್ದಿಯನ್ನು ತಿಳಕೊಂಡು ಬರುವದಕ್ಕೆ ನಿನ್ನನ್ನು ಯಾರು ಕಳಿಸಿರುವರು ಬೇಗನೆ ಹೇಳು. ಏನು, ಅಫಜುಲಖಾನನು ಕಳಿಸಿರುವನೋ? ಅಥವಾ ಗುಡ್ಡಗಾಡಿನೊಳಗಿನ ಮೋಸಗಾರ ನಾದ ಆ ದುಷ್ಟ ಶಿವಾಜಿಯು ನಿನ್ನನ್ನು ಕಳಿಸಿರುವನೋ?'' ಎಂದು ಕೇಳಿದನು. ಶಿವಾಜಿಯ ಹೆಸರನ್ನು ಉಚ್ಚರಿಸಿದ ಕೂಡಲೆ, ಅದರಲ್ಲಿಯೂ ''ಮೋಸಗಾರನು'' ''ದುಷ್ಟನು'' ಎಂಬ ವಿಶೇಷಣಗಳನ್ನು ಶಿವಾಜಿಗೆ ಹಚ್ಚಿದ ಕೂಡಲೆ ಏಸಾಜಿಯು ಸಂತಾಪಗೊಂಡನು. ಆ ಕಾಲದಲ್ಲಿ ಅವನ ಬಳಿಯಲ್ಲಿ ಶಸ್ತ್ರಗಳಿದ್ದರೆ, ಅವನು ಆ ಜನರ ಮೇಲೆ ದುಮುಕಿಬಿಡುತ್ತಿದ್ದನು. ಬರಿಯ ದುಮುಕುವದೇ ಏಕೆ? ಐದಾರು ಜನರಲ್ಲಿ ಒಬ್ಬಿಬ್ಬರನ್ನಾದರೂ ನೆಲಕ್ಕೆ ಉರುಳಿಸುತ್ತಿದ್ದನು; ಆದರೆ ಮಾಡಬೇಕೇನು? ಅತನ ಬಳಿಯಲ್ಲಿ ಶಸ್ತ್ರಗಳಿದ್ದಿಲ್ಲ, ಆ ಜನರಂತು ಒಂದೇಸವನೆ— ''ನೀನು ಯಾರು? ಇಲ್ಲಿಗೆ ಯಾಕೆ ಬಂದೆ'' ಎಂದು ಕೆಣಕಿ ಕೆಣಕಿ ಕೇಳುತ್ತಲಿದ್ದರು. ಅವರಿಗೆ ಏಸಾಜಿಯು— ''ಹೀಗೆಯೇ ನಾನೊಬ್ಬ ಹಾದಿಕಾರನು. ದಾರಿಯನ್ನು ತಪ್ಪಿ ಇತ್ತ ಕಡೆಗೆ ಬಂದಿರುವೆನಲ್ಲದೆ ಎರಡನೆಯದೇನೂ ಇಲ್ಲ'' ಎಂದು ಹೇಳಿದನು; ಆದರೆ ಅವನ ಮಾತು ಒಬ್ಬರಿಗೂ ನಂಬಿಗೆ ಯಾಗಲಿಲ್ಲ, ಇವನು ಬುದ್ಧಿಪೂರ್ವಕವಾಗಿ ನಮ್ಮ ಗುಪ್ತ ಸಂಗತಿಯನ್ನು ಅರಿತುಕೊಳ್ಳುವ ದಕ್ಕಾಗಿಯೇ ಬಂದಿರುತ್ತಾನೆಂದು ತಿಳಿದುಕೊಂಡು, ಏಸಾಜಿಯನ್ನು ಪರಿಪರಿಯಾಗಿ ಪೀಡಿಸಹತ್ತಿದರು

# ಗುಪ್ತ ಕಾರಸ್ಥಾನ

ವಿಸಾಜಿಯು ತನಗೊದಗಿದ ಪ್ರಸಂಗವನ್ನು ಕುರಿತು ಆಲೋಚಿಸುತ್ತಿರುವಾಗ, ತಾನು ಜೀವದಿಂದ ಪಾರಾಗುವದು ಕಠಿಣವೆಂಬ ಸಂಗತಿಯು ಅವನಿಗೆ ಸ್ಪಷ್ಟವಾಗಿ ತೋರಹತ್ತಿತು. ಮರಣಕ್ಕಾಗಿ ಆತನು ಹೆದರುತ್ತಿದ್ದಿಲ್ಲ; ತನ್ನ ಸ್ವಾಮಿಯ ವಿರುದ್ಧವಾಗಿ ಇವರು ಒಳಸಂಚು ನಡೆಸಿದ್ದು, ಈ ವರ್ತಮಾನವು ತನ್ನ ಸ್ವಾಮಿಗೆ ತಿಳಿಯದಿದ್ದರೆ, ಎಲ್ಲಿ ಅನರ್ಥ ಒದಗುವದೋ ಎಂದು ಆ ಸ್ವಾಮಿಭಕ್ತನು ವ್ಯಸನಪಡುತ್ತಿದ್ದನು. ಅಷ್ಟರಲ್ಲಿ ಒಬ್ಬನು ವಿಸಾಜಿಯನ್ನು ಕುರಿತು— "ಎಲಾ, ನೀನು ಹಾದಿಕಾರನೆಂದು ಹೇಳುವೆಯಲ್ಲ ಆದರೆ ನೀನು ಯಾವ ಊರವನು? ಎಲ್ಲಿಗೆ ಹೋಗುವೆ ಹೇಳು ನೋಡೋಣ? ನಿನ್ನ ತಗಲತನದಿಂದ ನಾವು ಮೋಸಹೋಗುವವರಲ್ಲ, ಹೇಳು, ನೀನು ಎಲ್ಲಿಯವನು, ಎಲ್ಲಿಗೆ ಹೋಗುತ್ತೀ."

ವಿಸಾಜಿ—ನಾನು ಎಲ್ಲಿಯವನೇ ಇರಲಿ, ಎಲ್ಲಿಗೆ ಹೋಗಲಿ, ಅದನ್ನು ಕೇಳುವದರಿಂದ ನಿಮಗೆ ಪ್ರಯೋಜನವೇನು? ಸ್ವಲ್ಪ ಮೂಡಲು ಕೆಂಪಾದ ಕೂಡಲೆ ನಾನು ಹೊರಟು ಹೋಗುವೆನು.

ಮತ್ತೊಬ್ಬನು—ಇಲ್ಲಿಂದ ಹೋಗುವದು ನಿನ್ನ ಕೈಯೊಳಗಿರುವದಿಲ್ಲ, ನೀನು ನಮ್ಮ ಕೈಯಲ್ಲಿ ಸಿಕ್ಕಿರುತ್ತೀ, ನೀನು ನಿಜವಾಗಿ ಹಾದಿಕಾರನಿರುವೆಯೆಂದು ನಮ್ಮ ನಂಬಿಗೆ ಮಾಡಿ ಕೊಟ್ಟ ಹೊರತು ನಿನ್ನ ಬಿಡುಗಡೆಯಾಗಲಾರದು.

ವಿಸಾಜಿ (ಉದ್ಧಾಮತನದಿಂದ)—ಅದೇಕೆ? ನಾನೇನು ಅಂಥ ಅಪರಾಧ ಮಾಡಿರುತ್ತೇನೆ?

ತರುಣ ಶಿಷ್ಯ (ಸಿಟ್ಟಿನಿಂದ)—ಏಕೆಂದರೆ, ನಮ್ಮ ವೈರಿಯ ಕಡೆಯಿಂದ ನೀನು ನಮ್ಮ ಗುಪ್ತ ಒಳಸಂಚನ್ನು ತಿಳಕೊಂಡು ಹೋಗಲಿಕ್ಕೆ ಬಂದಿರುತ್ತೀಯೆಂದು? ನೀನು ಇಲ್ಲಿಗೆ ಬಂದಾಗಿನಿಂದ ಇಲ್ಲಿಂದ ಹೊರಟುಹೋಗೆಂದು ನಾವು ಹೇಳುತ್ತಿದ್ದರೂ ನೀನು ಹೋಗದೆ ಯಿರುವದು ಅಪರಾಧವಲ್ಲವೆ? ಈಗ ನಮ್ಮ ಗುಪ್ತ ಸಂಚನ್ನು ನೀನು ಕಣ್ಣುಮುಟ್ಟಿ ನೋಡಿರುವದರಿಂದ ನಿನ್ನನ್ನು ನಾವು ಇಲ್ಲಿಂದ ಹೋಗಗೊಡಲಾರೆವು.

ಶಿಷ್ಯನ ಕೋಮಲ ಧ್ವನಿಯನ್ನು ಕೇಳಿದ ಕೂಡಲೆ ವಿಸಾಜಿಗೆ ಅವನ ವಿಷಯವಾಗಿ ಸಂಶಯವು ಉತ್ಪನ್ನವಾಯಿತು. ಇವನು ಪುರುಷನಲ್ಲ ಸ್ತ್ರೀಯು ಎಂದು ಆತನು ತರ್ಕಿಸಿದನು. ಈ ಎಲ್ಲ ವಿಲಕ್ಷಣ ಪ್ರಕಾರದ ಗೂಢವು ಅವನಿಗೆ ತಿಳಿಯದಾಯಿತು. ಇಂಥ ತರುಣ ಸ್ತ್ರೀಯು ಪುರುಷ ವೇಷವನ್ನು ಧರಿಸಿ ಈ ಗೋಸಾವಿಯ ಶಿಷ್ಯವೃತ್ತಿಯನ್ನು ಯಾಕೆ ಕೈಕೊಂಡಿರಬಹುದು? ಈ ಗುಹೆಯ ಸಂಬಂಧವು ಇವರಿಗೇನಿರಬಹುದು?ಇವರ ವೈರಿಯು ಯಾರಾಗಿರಬಹುದು? ಮಹಾರಾಜರನ್ನು ಇವರು ತಿರಸ್ಕರಿಸುವ ಕಾರಣವೇನಿರಬಹುದು? ಇವೇ ಮೊದಲಾದ ಪ್ರಶ್ನೆಗಳು ಅವನ ಮನಸ್ಸಿನಲ್ಲಿ ಉತ್ಪನ್ನವಾಗಿ ಅವನು ತರುಣ ಶಿಷ್ಯನನ್ನು ಕುರಿತು— "ನಿಮ್ಮ ವೈರಿಯು ಯಾರೆಂಬುದನ್ನು ಹೇಳಿದರೆ, ನಾನು ಅವನ ಕಡೆಯವನೋ ಬೇರೆಯವರ ಕಡೆಯವನೋ ಎಂಬದನ್ನಾದರೂ ಹೇಳೇನು.

ಶಿಷ್ಯ— ನಮ್ಮ ವೈರಿ ಯಾರೆಂದು ಕೇಳುವಿಯಾ? ನಮ್ಮ ವೈರಿಯು ಆ ಶಿವಾಜಿಯು! ಯಾವನು ನಮ್ಮ ತಂದೆಯ........

ಏಸಾಜಿ— ಏನಂದಿರಿ? ನಿಮ್ಮ ವೈರಿಯು ಶಿವಾಜಿ ಮಹಾರಾಜರೆ? ನಿಮ್ಮ ಈ ಮಾತುಗಳನ್ನು ಕೇಳಿ ನನಗೆ ಬಹಳ ಆಶ್ಚರ್ಯವಾಗುತ್ತದೆ. ಒಬ್ಬ ಮುಸಲ್ಮಾನರು ಮಾತ್ರ ಶಿವಾಜಿ ಮಹಾರಾಜರನ್ನು ವೈರಿಗಳೆಂದು ತಿಳಿಯುತ್ತಾರೆ. ಅವರ ಹೊರತು ಹಿಂದಪದ ಬಾದಶಾಹಿಯನ್ನು ಸ್ಥಾಪಿಸಬೇಕೆಂದು ಯತ್ನಿಸುವ ಮಹಾರಾಜರಿಗೆ, ಬೇರೆ ವೈರಿಗಳಿರುವದಿಲ್ಲ, ಅದರಂತೆ ಮಹಾರಾಜರು ಬೇರೆಯವರಿಗೆ ವೈರಿಗಳಾಗಿರುವದಿಲ್ಲ.

ಗೋಸಾವಿ—ಸಾಕು, ಸಾಕು. ಇಷ್ಟರಿಂದಲೇ ನೀನು ಶಿವಾಜಿಯ ಪಕ್ಷಪಾತಿಯೆಂಬದೂ, ಆತನ ನೌಕರನೆಂಬದೂ ನಮಗೆ ಸ್ಪಷ್ಟವಾಗಿ ಗೊತ್ತಾಯಿತು. ನಮ್ಮ ಗೊತ್ತು ಹಚ್ಚುವದಕ್ಕಾಗಿಯೇ ಆತನು ನಿನ್ನನ್ನು ಕಳಿಸಿರುತ್ತಾನೆ; ಆದರೆ ನಿನ್ನ ಶ್ರಮವು ವ್ಯರ್ಥವಾಯಿತೆಂದು ತಿಳಿದುಕೊ. ನೀನು ಇಲ್ಲಿಂದ ಪಾರಾಗಿ ಹೋಗಲಾರೆ.

ಹೀಗೆ ಗೋಸಾವಿಯು ನುಡಿಯುತ್ತಿರಲು, ಒಬ್ಬನು ಆತನನ್ನು ಕುರಿತು—'' ನಮ್ಮ ಕೆಲಸವು ಇಂದಿಗೆ ಪೂರ್ಣವಾದದ್ದರಿಂದ ಭೂಮಾತೆಯ ಶಾಂತ್ಯರ್ಥವಾಗಿ ಬಲಿಕೊಡುವದು ಅವಶ್ಯ ವಾಗಿದೆ. ಈಗ ಈ ನರಬಲಿಯು ತಾನಾಗಿ ನಡೆದು ಬಂದಿರುತ್ತದೆ. ಇದನ್ನೇ ಬಲಿ ಕೊಟ್ಟು ಬಿಟ್ಟರಾಯಿತು,''ಎಂದು ಹೇಳಲು, ಬಲಿಯನ್ನು ಹ್ಯಾಗೆ ಕೊಡಬೇಕೆಂಬ ಬಗ್ಗೆ ಅವರಲ್ಲಿ ಶಾಸ್ತ್ರಾರ್ಥ ವಿಚಾರವು ನಡೆಯಿತು, ಒಬ್ಬ ಪಂಚಾಕ್ಷರಿಯನ್ನು ಕರೆಸಿ ಯಥಾವಿಧಿ ಪೂಜೆ ಪುನಸ್ಕಾರಾದಿಗಳನ್ನು ಮಾಡಿಸಿ ಶಾಸ್ತ್ರದಂತೆ ಬಲಿಕೊಡಬೇಕು, ಇಲ್ಲದಿದ್ದರೆ ಧರ್ಮ ಮಾಡವದರೊಳಗೆ ಕರ್ಮವು ಮುಂದೆ ಬಂದು ನಿಂತಿತು,'' ಎಂದು ಒಬ್ಬನು ಹೇಳಿದನು. ಅದಕ್ಕೆ ಮತ್ತೊಬ್ಬನು, ''ಈಗ ಇದೆಲ್ಲ ಹ್ಯಾಗೆ ಆದೀತು? ಬಲಿಯ ಉಸಾಬರಿಯು ಈಗ ಬೇಡ. ಇವನನ್ನು ಭೂಮಿಯಲ್ಲಿ ಜೀವದಿಂದ ಹುಗಿದುಬಿಟ್ಟರಾಯಿತು,'' ಎಂದು ಹೇಳಿದನು. ಇನ್ನೊಬ್ಬನು— ''ಕುರಿ ಕಡಿದಹಾಗೆ ಕಡಿದು ರಕ್ತವನ್ನು ಭೂಮಿಯಲ್ಲಿ ಸಿಂಪಡಿಸಿ ಇವನ ಶವವನ್ನು ಹುಗಿದುಬಿಡಬೇಕು,'' ಎಂದು ಹೇಳಿದನು. ಹೀಗೆ ತಮ್ಮ ತಮ್ಮೊಳಗೆ ವಾದಿಸುವದನ್ನು ನೋಡಿ ಬಾಲಶಿಷ್ಯನು ಸಂತಾಪದಿಂದ— ''ಏ, ಕತ್ತೆಗಳಿರಾ, ನಿಮ್ಮ ವಾದಗಳು ಇಲ್ಲಿಗೆ ಮುಗಿಯಲಿ. ನೀವು ಯಾರ ಮುಂದೆ ವಾದಿಸಿಯಾಡುವಿರೆಂಬದರ ಎಚ್ಚರವು ನಿಮಗಿರು ವದೆಯೆ? ನಾವು ಬೇಗನೆ ಗವಿಯ ಕೆಲಸವನ್ನು ಮುಗಿಸಿದೆವೆಂಬ ಉಬ್ಬಿನಿಂದ ನೀವು ಹೀಗೆ ನನ್ನ ಮುಂದೆ ವಾದ ವಿವಾದವನ್ನು ನಡೆಸಿರುವಿರೋ ಏನು? ನಾನು ಹೇಳಿದಂತೆ ನೀವು ಮಾಡಿರಿ. ಈಗ ಅವನನ್ನುಹಿಡಿದು ಹೆಡಮುರಿಗೆ ಕಟ್ಟಿರಿ. ಈ ಗುಹೆಯ ಮುಂದೆ ಒಂದು ತಗ್ಗು ತೋಡಿ ಅದರಲ್ಲಿ ಇವನನ್ನು ಹಾಕಿ ಮೇಲೆ ಮಣ್ಣು ಮುಚ್ಚಿಬಿಡಿರಿ. ಇವನನ್ನು ಹುಗಿದ ಸ್ಥಳದಲ್ಲಿಯೇ ಇವನ ಒಡೆಯನಾದ ಶಿವಾಜಿ ಯನ್ನು ಕುಳ್ಳಿರಿಸಿ, ಗುಹೆಯೊಳಗಿನ ಮದ್ದಿಗೆ ಬೆಂಕಿ ಹಚ್ಚಿ ಹಾರಿಸಿಬಿಡೋಣ. ಹು, ಏಳಿರಿ, ಇನ್ನು ತಡಮಾಡಬೇಡಿರಿ, ತಗ್ಗು ತೋಡಿರಿ.

ಬಾಲ ಶಿಷ್ಯನ ಈ ದರ್ಪೋಕ್ತಿಗಳನ್ನು ಕೇಳಿ ಏಸಾಜಿಗೆ ಪರಮಾಶ್ಚರ್ಯವಾಯಿತು. ಗುರುವಾದ ಗೋಸಾವಿಯೂ ಈ ಬಾಲ ಶಿಷ್ಯನ ಆಜ್ಞಾಧಾರಕನಾಗಿರುವಂತೆ ಆತನಿಗೆ ತೋರಿತು. ಇದೇನು ಸೋಜಿಗವೆಂದು ಏಸಾಜಿಯು ಯೋಚಿಸತೊಡಗಿದನು. ಅತ್ತ ಕೆಲವರು ಕೂಡಲೆ ತಗ್ಗು ತೋಡಹತ್ತಿದರು. ಅದನ್ನು ನೋಡಿ, ಇನ್ನು ತನಗೆ ಯಾವ ಬಗೆಯ ಮರಣವು ಒದಗುವದೆಂಬದರ ಚಿತ್ರವು ಏಸಾಜಿಯ ಎದುರಿಗೆ ಸ್ಪಷ್ಟವಾಗಿ ಕಾಣಿಸಹತ್ತಿತು. ಮಹಾರಾಜರ ಪ್ರಾಣಹರಣ ಮಾಡಲಿಕ್ಕೆ ಈ ದುಷ್ಟರು ಇಷ್ಟೆಲ್ಲ ಮಾಡಿರುವರೆಂಬದು ಏಸಾಜಿಗೆ ಸ್ಪಷ್ಟವಾಗಿ ಗೊತ್ತಾಯಿತು. ಈ ಸಂಗತಿಯು ಮಹಾರಾಜರಿಗೆ ಹ್ಯಾಗೆ ತಿಳಿದೀತು? ನಾನಂತು ಇನ್ನು ಜೀವದಿಂದ ಉಳಿಯುವ ಹಾಗಿಲ್ಲ; ಆದರೆ ನನ್ನ ಜೀವದ ಚಿಂತೆ ನನಗಿಲ್ಲ, ಮಹಾರಾಜರಿಗೆ ಕ್ಷೇಮವು ಹ್ಯಾಗಾದೀತು? ಎಂದು ಯೋಚಿಸುತ್ತ ಮತ್ತೆ ಧೈರ್ಯ ಮಾಡಿಕೊಂಡು— "ನಾನೇಕೆ ಚಿಂತೆ ಮಾಡಬೇಕು? ಮಹಾರಾಜರ ಚಿಂತೆಯು ಅಂಬಾಭವಾನಿಗೆ ಇರುವದು, ಮತ್ತು ಸಮರ್ಥ ರಾಮದಾಸ ಸ್ವಾಮಿಗಳಿಗಿರುವದು! ಹಾಗಿಲ್ಲದಿದ್ದರೆ ಮಹಾರಾಜರು ಈವರೆಗೆ ಇಷ್ಟು ಸಂಕಟಗಳೊಳಗಿಂದ ಪಾರಾಗುತ್ತಿದ್ದರೆ? ಇಷ್ಟು ದಿನ ಕಾದ ಭವಾನಿಯು ಈಗಾದರೂ ಮಹಾರಾಜರನ್ನು ಕಾಯುವಳು. ಮಹಾರಾಜರ ಪುಣ್ಯವು ಬಲವತ್ತರವಾಗಿರುವದು. ಅವರ ಪುಣ್ಯದಿಂದಲೇ ನಾನು ಈ ಸಂಕಟದೊಳಗಿಂದಲೂ ಪಾರಾಗಿ ಮಹಾರಾಜರಿಗೆ ಸಹಾಯಮಾಡುವ ಯೋಗವು ಯಾಕೆ ಒದಗಬಾರದು? ಅದಕ್ಕಾಗಿಯೇ ಭವಾನೀ ಮಾತೆಯು ನನ್ನನ್ನು ಇಲ್ಲಿಗೆ ಬರಮಾಡಿರಬಹುದು.

ಈ ಮೇರೆಗೆ ಏಸಾಜಿಯು ವಿಚಾರಮಾಡುತ್ತಿರಲು, ಆ ಬಾಲ ಶಿಷ್ಯನು ಸಂತಾಪದಿಂದ ತನ್ನ ಜನರ ಮೈಮೇಲೆ ಹೋಗಿ— "ಎಷ್ಟು ಹೊತ್ತು! ಇನ್ನೂ ನಿಮ್ಮ ಕೆಲಸವಾಗಲಿಲ್ಲವೆ? ಮೊದಲು ಇವನ ಹೆಡಮುರಿಗೆ ಕಟ್ಟಿರಿ, ಎಂದು ಗದ್ದರಿಸಲು, ನಾಲ್ಕಾರು ಜನರು ಏಸಾಜಿಯ ಬಳಿಗೆ ಹೋದರು. ಆಗ ಏಸಾಜಿಯು ತನ್ನಿಂದಾದಷ್ಟು ಅವರೊಡನೆ ಗುದುಮುರಿಗೆ ಹಾಕಿದನು; ಆದರೆ ನಾಲ್ಕಾರು ಜನ ಲಠ್ಠರ ಮುಂದೆ ಒಬ್ಬನ ಆಟವೇನು ನಡೆಯಬೇಕು? ಆ ಜನರು ಏಸಾಜಿಯ ಹೆಡಮುರಿಗೆ ಕಟ್ಟಿದರು. ಅಷ್ಟರಲ್ಲಿ ತಗ್ಗೂ ಮುಗಿಯುತ್ತ ಬಂದಿತ್ತು ತಗ್ಗು ತೋಡುವವರು ಪಿಲಾಲ ಹಿಡಿದು, ತಗ್ಗು ಇಷ್ಟು ಸಾಕೋ ಹೇಗೆಂಬದನ್ನು ಗೋಸಾವಿಗೆ ತೋರಿಸಿದರು. ಗೋಸಾವಿಯು ಸಾಕೆಂದು ಹೇಳಲು, ಎಲ್ಲರೂ ಮೇಲಕ್ಕೆ ಬಂದು ಏಸಾಜಿಯನ್ನು ತಗ್ಗಿನಲ್ಲಿ ಒಗೆಯುವದಕ್ಕಾಗಿ ಅವನನ್ನು ಎತ್ತಿಕೊಂಡು ಹೋಗಲಿಕ್ಕೆ ಅವನ ಬಳಿಗೆ ಬಂದರು. ಹೆಡಮುರಿಗೆ ಕಟ್ಟಿದ್ದರಿಂದ ಏಸಾಜಿಯು ಉಲುಕಾಡುವಂತೆಯಿದ್ದಿಲ್ಲ. ಆ ಬಲಿಷ್ಠರು ಏಸಾಜಿಯನ್ನು ಎತ್ತಿಕೊಂಡು ಹೋಗಿ ತಗ್ಗಿನ ದಂಡೆಗೆ ಒಯ್ದು ಇಟ್ಟರು. ಆಗ ಬಾಲ ಶಿಷ್ಯನು ಅವರಿಗೆ— "ಎಲೇ, ನಿಲ್ಲಿರಿ ನಿಲ್ಲಿರಿ; ಹೀಗೆ ಒಮ್ಮೆಲೆ ಇವನನ್ನು ಒಗೆಯಬೇಡಿರಿ. ಇವನನ್ನು ತಗ್ಗಿನೊಳಗೆ ಇಳಿಸಿ, ಇವನ ಹೆಡಮುರಿಗೆಯನ್ನು ಉಚ್ಚಿ, ಮೇಲಿಂದ ಮಣ್ಣು ದೂಕಿರಿ. ಆಗ ಇವನು ಒದ್ದಾಡುವದನ್ನು ನೋಡಿದರೆ ನನಗೆ ಬಹಳ ಸಂತೋಷವಾಗುವದು," ಎಂದು ಹೇಳಿದನು. ಈ ಕ್ರೂರತನವನ್ನು ನೋಡಿ ಗೋಸಾವಿಯೂ ಅಸಹ್ಯಪಟ್ಟನು; ಅವನ

ಅನುಯಾಯಿಗಳೂ ಅಸಹ್ಯಪಟ್ಟರು. ಆದರೂ ಆ ಶಿಷ್ಯನ ಆಜ್ಞೆಯಂತೆ ಅವರು ಪಿಸಾಜಿಯನ್ನು ತಗ್ಗಿನಲ್ಲಿ ಇಳಿಸಿ, ಅವನ ಹೆಡಮುರಿಗೆ ಬಿಚ್ಚಿ ತಾವು ಮೇಲಕ್ಕೆ ಬಂದಕೂಡಲೆ ಮಣ್ಣು ದೂಕಹತ್ತಿದರು. ಪಿಸಾಜಿಯು ಒದ್ದಾಡುವದನ್ನು ನೋಡಿ ಬಾಲ ಶಿಷ್ಯನು ಗಹಗಹಿಸಿ ನಗಹತ್ತಿದನು. ಅಷ್ಟರಲ್ಲಿ ಗವಿಯ ಮುಂಭಾಗವು ಅಕಸ್ಮಾತ್ತಾಗಿ ಕಡಕೊಂಡು ಬಿದ್ದು ಅರ್ಧ ತಗ್ಗು ಮುಚ್ಚಿಹೋಯಿತು. ಈ ಮನುಷ್ಯನು ಮಣ್ಣಲ್ಲಿ ಹುಗಿದುಹೋದನೆಂತಲೂ, ಮಣ್ಣು ಎಳೆಯುವ ತಮ್ಮ ದಾವತಿಯು ತಾನಾಗಿ ಉಳಿಯಿತೆಂತಲೂ, ಆಳುಗಳು ಸಮಾಧಾನಪಟ್ಟರು. ''ಪಾಪ! ಮಣ್ಣಲ್ಲಿ ಹುಗಿದುಹೋದನು''ಎಂದು ಗೋಸಾವಿಯು ಮರುಗಿದನು. ''ಗವಿಯ ಮುಂಭಾಗವು ಬೀಳದಿದ್ದರೆ ಇನ್ನೂ ಮೋಜು ಆಗುತ್ತಿತ್ತು''ಎಂದು ಬಾಲ ಶಿಷ್ಯನು ಚಡಪಡಿಸಿದನು. ಹೀಗೆ ಎಲ್ಲರೂ ಪ್ರವಾಸಿಯ ಕಥೆ ಮುಗಿಯಿತೆಂತಲೂ, ಬೆಳಗಾದ ಬಳಿಕ ತಗ್ಗನ್ನು ಪೂರ್ಣವಾಗಿ ಮುಚ್ಚೋಣವೆಂತಲೂ, ಮಾತಾಡಿಕೊಂಡು ಬೆಂಕಿಯ ಬಳಿಯಲ್ಲಿ ಬಂದು ಗುಂಪಾಗಿ ಕುಳಿತುಕೊಂಡರು. ಆಳುಗಳು ಕೆಲಸಮಾಡಿ ಬಹಳ ದಣಿದಿದ್ದರಿಂದ, ಈಗಲೇ ತಗ್ಗು ಮುಚ್ಚಿಬಿಡಿರೆಂದು ಗೋಸಾವಿಯಾಗಲಿ, ಬಾಲ ಶಿಷ್ಯನಾಗಲಿ ಆಗ್ರಹ ಮಾಡಲಿಲ್ಲ, ಮುಂಜಾನೆ ಮುಚ್ಚಲೊಲ್ಲರೇಕೆ, ಎಂದು ಅಂದುಕೊಂಡು ಅವರೊಡನೆ ಮಾತಾಡುತ್ತ ಕುಳಿತುಕೊಂಡರು.

ಎಲ್ಲರೂ ಬೆಂಕಿಯನ್ನು ಕಾಸುತ್ತ ಕುಳಿತುಕೊಂಡಿರುವಾಗ ಗೋಸಾವಿಯು ತಮ್ಮ ಜನರನ್ನು ಕುರಿತು— ''ಆ ಮನುಷ್ಯನು ಮಣ್ಣಲ್ಲಿ ಮುಚ್ಚಿಹೋದನು. ಈಗ ಅವನಿಗೆ ಕೈಕಾಲು ಅಲ್ಲಾಡಿಸಲಿಕ್ಕೆ ಸಹ ಶಕ್ತಿಯಿರಲಿಕ್ಕಿಲ್ಲ, ಈಗ ಅವನು ಹಾಗೆಯೇ ಇರಲಿ, ತನ್ನ ಕುಲದೇವತೆಯ ಸ್ಮರಣ ಮಾಡಲಿ. ಬೆಳಗಾದ ಬಳಿಕ ತಗ್ಗನ್ನು ಪೂರ್ಣವಾಗಿ ಮುಚ್ಚಿರಿ. ಆಮೇಲೆ ಆ ಗವಿಯಲ್ಲಿ ಹೋಗಿ ಒಮ್ಮೆ ಎಲ್ಲ ನೋಡಿಕೊಂಡು ಬಂದು ಮಾಡುವ ವ್ಯವಸ್ಥೆಯನ್ನು ಮಾಡೋಣ. ನೀವು ಬಹಳವಾಗಿ ದಣಿದಿರುವಿರಿ. ನಿಮ್ಮೆಲ್ಲರ ಶ್ರಮದಿಂದಲೇ ಕೆಲಸವು ಇಷ್ಟು ಬೇಗನೆ ಪೂರ್ಣವಾಯಿತು. ನಿಮ್ಮ ಮುಖ್ಯನಾದ ತುಳಾಜಿಯನ್ನು ಕಂಡು ನಿಮಗೆ ತಕ್ಕ ಉಚಿತವನ್ನು ಕೊಡುತ್ತೇನೆ. ಸದ್ಯಕ್ಕೆ ಇಷ್ಟು ಹಿಡಿಯಿರಿ,'' ಎಂದು, ಒಂದು ಬಂಗಾರದ ಗಟ್ಟಿಯನ್ನು ಬೆಂಕಿಯೊಳಗಿಂದ ತೆಗೆದು ಅವರ ಮುಂದೆ ಚಲ್ಲಿದನು. ಅದನ್ನು ನೋಡಿ ಅವರಿಗೆ ಆಶ್ಚರ್ಯ ವಾಯಿತು. ಗೋಸಾವಿಯು ಕಬ್ಬಿಣವನ್ನು ಬಂಗಾರ ಮಾಡಿ ಕೊಟ್ಟನೆಂದು ಅವರು ತಿಳಕೊಂಡರು. ಬೈರಾಗಿಯು ಮೊದಲೆ ಬಂಗಾರದ ಗಟ್ಟಿಯನ್ನು ಬೆಂಕಿಯಲ್ಲಿ ಚಲ್ಲಿ ಕೊಟ್ಟಿರಬಹುದೆಂದು ತರ್ಕಿಸುವಷ್ಟು ಅವರು ವಿಚಾರವಂತರಿದ್ದಿಲ್ಲ. ಕಿಮಿಯಾ ಸಿದ್ಧಿಯಿಂದ ನಮ್ಮ ಬೈರಾಗಿಗಳು ಬೇಕಾದಷ್ಟು ಬಂಗಾರವನ್ನು ಮಾಡಬಲ್ಲರೆಂದು ಆ ಭಾವಿಕ ಜನರು ತಿಳಕೊಂಡಿದ್ದರು. ಅವರು ಒಬ್ಬರನ್ನೊಬ್ಬರು ಆಶ್ಚರ್ಯದಿಂದ ನೋಡುತ್ತ ಗೋಸಾವಿಯ ವಿಷಯವಾಗಿ ಪೂಜ್ಯ ಬುದ್ಧಿಯುಳ್ಳವರಾದರು. ಗೋಸಾವಿಯ ನಿಜವಾದ ವೃತ್ತಾಂತವು ಅವರಿಗೆ ಗೊತ್ತಿದ್ದಿಲ್ಲ. ಅದು ಗೊತ್ತಾಗಬಾರದೆಂದು ಗೋಸಾವಿಯು ಬಹಳ ಎಚ್ಚರಪಡುತ್ತಿದ್ದನು. ಆ ಜನರು ಬಂಗಾರದ ಗಟ್ಟಿಯನ್ನು ತಕ್ಕೊಂಡು ಪರಮಾನಂದ

ಪಟ್ಟಿರುವದನ್ನು ನೋಡಿ ಮತ್ತೆ ಗೋಸಾವಿಯು ಅವರಿಗೆ— ''ಇಷ್ಟರಿಂದಲೇ ಆಯಿತೆಂದು ತಿಳಿಯಬೇಡಿರಿ. ನಮ್ಮ ಕೆಲಸವು ನಮ್ಮ ಮನಸ್ಸಿನಂತೆ ಆಯಿತೆಂದರೆ ನಿಮಗೆ ದೊಡ್ಡ ಇನಾಮು ಕೊಡುವೆವು. ನಿಮ್ಮ ಲಾಭವೆಲ್ಲ ಮುಂದಿನ ಕೆಲಸವನ್ನು ಅವಲಂಬಿಸಿರುವದು,'' ಎಂದು ಹೇಳುತ್ತಿರಲು, ಶಿಷ್ಯನು ಆ ಜನರನ್ನು ಕುರಿತು— ''ಇನ್ನು ಮುಂದಿನ ಸಿದ್ಧತೆಯನ್ನು ಬೇಗನೆ ಮಾಡಬೇಕು. ಮೊದಲು ತಗ್ಗನ್ನು ಮುಚ್ಚಿರಿ. ಭೂಮಾತೆಗೆ ಉತ್ತಮ ಬಲಿಯು ಸಿಕ್ಕಿತು. ಆ ದುಷ್ಟನು—ನನ್ನ ತಂದೆಯ ಖೂನು.......'' ಎಂದು ಏನೋ ನುಡಿಯುತ್ತಿರಲು, ಅವನ ಮುಖದೊಳಗಿನ ಶಬ್ದಗಳು ಮುಖದಲ್ಲಿಯೇ ಉಳಿದವು. ಸಂತಾಪದ ಭರದಿಂದ, ಅಥವಾ ಎದುರಿಗೆ ಏನೋ ಭಯಂಕರವಾದ ಚಿತ್ರವು ತೋರಿದ್ದರಿಂದ ಆ ಬಾಲ ಶಿಷ್ಯನು ದಪ್ಪನೆ ನೆಲಕ್ಕೆ ಬೀಳತಕ್ಕವನು, ಅಷ್ಟರಲ್ಲಿ ಬೈರಾಗಿಯು ಅವನನ್ನು ಎತ್ತಿ ಹಿಡಿದನು. ಹಾಗೆ ಹಿಡಿಯದಿದ್ದರೆ, ಅಂದು ಶಿಷ್ಯನ ಪ್ರಾಣವು ಉಳಿಯುತ್ತಿದ್ದಿಲ್ಲ. ಅವನ ತಲೆಯು ಬೆಂಕಿಯಲ್ಲಿ ಬೀಳುತ್ತಿತ್ತು. ಬೈರಾಗಿಯು ಅವನನ್ನು ಸಾವರಿಸಿ ಹಿಡಿಯುವಾಗ ಅವನ ಕಫನಿಯು ಅಸ್ತವ್ಯಸ್ತವಾಗಿ ಶಿಷ್ಯನ ಅವಯವಗಳು ಹೊರಬಿದ್ದವು. ಶಿಷ್ಯನ ನಿಜವಾದ ಸ್ಥಿತಿಯು ಹೊರಬೀಳಬಾರದೆಂದು ಎಚ್ಚರಪಡುತ್ತಿದ್ದ ಬೈರಾಗಿಯು, ಶಿಷ್ಯನನ್ನು ಎತ್ತಿಕೊಂಡು ಹೋಗಿ ಗುಡಿಸಿಲೊಳಗಿನ ಹೊರಸಿನ ಮೇಲೆ ಮಲಗಿಸಿ ಅವನ ಕಣ್ಣಿಗೆ ನೀರು ಹಚ್ಚಿ, ನೆತ್ತಿಗೆ ನೀರು ತಟ್ಟಿದನು. ಬಹಳ ಹೊತ್ತಾದರೂ ಶಿಷ್ಯನಿಗೆ ಎಚ್ಚರವಾಗಲಿಲ್ಲ. ಹೊರಗಿನವರು ಹೊರಗೇ ಬೆಂಕಿಯ ಕಾಸುತ್ತ ಕುಳಿತು ಕುಳಿತು ಬೇಸತ್ತರು. ಕಡೆಗೆ ಅವರು ಎದ್ದುಹೋಗಿ ತಗ್ಗನ್ನು ಪೂರ್ಣವಾಗಿ ಮುಚ್ಚಿ, ಗವಿಯ ಮುಖವನ್ನು ಸರಿಯಾಗಿ ಮಾಡಿದರು.

ಇತ್ತ ಶಿಷ್ಯನಿಗೆ ಎಚ್ಚರವಾಗಬೇಕೆಂದು ಗೋಸಾವಿಯು ಯತ್ನಿಸುತ್ತಿರಲು, ಶಿಷ್ಯನು ಎಚ್ಚತ್ತು ಕಣ್ದೆರೆದು ಕುಳಿತುಕೊಂಡು ಅತ್ತಿತ್ತ ನೋಡಹತ್ತಿದನು. ಆಗ ಗುರುವು ಶಿಷ್ಯನಿಗೆ— ''ಬೇಟಾ, ಒಂದು ದಿನ ನೀನು ಸಂತಾಪದ ಭರದಲ್ಲಿ ಗುಪ್ತ ಸಂಗತಿಯನ್ನೆಲ್ಲ ಹೊರಗೆಡವಿ ಕೆಲಸವನ್ನು ಕೆಡಿಸುವೆಯೆಂಬ ಅಂಜಿಕೆಯು ನನಗೆ ಬಹಳ ಇರುತ್ತದೆ. ಒತ್ತಟ್ಟಿಗೆ ಸುಮ್ಮನೆ ಕುಳಿತುಕೊಳ್ಳೆಂದು ನಾನು ನಿನಗೆ ಸಾವಿರ ಸಾರೆ ಹೇಳಿದ್ದೇನೆ, ಆದರೆ ನೀನು ಕೇಳುವದಿಲ್ಲ. ನಿನಗೆ ನನ್ನ ಮಾತಿನಲ್ಲಿ ವಿಶ್ವಾಸವಿಲ್ಲ, ಮತ್ತು ಮನಸ್ಸು ಬಿಗಿ ಹಿಡಿಯುವ ಧೈರ್ಯವಿಲ್ಲ. ನಿನ್ನ ಮನಸ್ಸಿನಲ್ಲಿದ್ದದ್ದನ್ನೆಲ್ಲ ನಾನು ಸಾಧಿಸುತ್ತೇನೆ, ಚಿಂತೆ ಮಾಡಬೇಡ. ನಿನಗೊದಗಿದ ದುಃಖವನ್ನು ನೋಡಿ ನಾನು ಹೆಚ್ಚಿಗೆ ಮಾತಾಡದೆ ನಿನ್ನ ಮನಸ್ಸಿನಂತೆ ಹೋಗುತ್ತೇನೆ; ಆದರೆ ನೀನು ಎಷ್ಟು ತಿಳಿಗೇಡಿಯು! ನಿನ್ನ ಮಾತಿನಂತೆ ನಡೆದರೆ ರಾಜಕಾರಣವು ಸಾಧಿಸಬಹುದೋ, ನೀನೇ ಹೇಳು. ನೀನು ಇನ್ನು ನನ್ನ ಮಾತನ್ನು ಕೇಳು, ಮಿಾರಬೇಡ. ನೀನು ಸ್ವಸ್ಥವಾಗಿ ಕುಳಿತ ಸ್ಥಳದಲ್ಲಿ ಕುಳಿತು ಬಿಡು. ಯಾವ ಕೆಲಸದಲ್ಲಿಯೂ ಬಾಯಿ ಹಾಕಬೇಡ; ಯಾರಿಗೂ ಏನೂ ಹೇಳಬೇಡ. ನಾನು ಆ ಜನರ ಸಂಗಡ ಹೋಗಿ ಒಮ್ಮೆ ಎಲ್ಲ ಗವಿಯನ್ನು ನೋಡಿ ಬರುತ್ತೇನೆ. ಅವರು ಐದಾರು ಅಪೂರ್ಣ ಗವಿಗಳನ್ನು ಅಲ್ಲಲ್ಲಿ ತೋಡಿರುವರಂತೆ. ಗವಿಯ ಮೋರೆಯಲ್ಲಿ ಭೋಲಾನನ್ನು ಕಾವಲಿಟ್ಟಿರುವರಂತೆ. ಇದನ್ನೆಲ್ಲ ತುಳಾಜಿಯು ನನಗೆ ಹೇಳಿರುತ್ತಾನೆ. ಆದರಿಂದ ಇದೆಲ್ಲವನ್ನು

ಕಣ್ಣುಮುಟ್ಟಿ ನೋಡಿ, ನಮ್ಮ ಆ ವೈರಿಗೆ ಎಲ್ಲಿಯೂ ಸಂಶಯವು ಬಾರದಂತೆ ವ್ಯವಸ್ಥೆ ಮಾಡಬೇಕಾಗಿರುವದು. ಒಮ್ಮೆ ಆತನಿಗೆ ಎಲ್ಲಿಯಾದರೂ ನಮ್ಮ ವಿಷಯವಾಗಿ ಸಂಶಯವು ಉತ್ಪನ್ನವಾದರೆ, ಕೆಲಸವೇ ಮುಗಿಯಿತು. ನಮ್ಮೆಲ್ಲರ ನಾಶವಾಯಿತೆಂದು ತಿಳಿದುಕೋ. ನಾವು ಎಚ್ಚರದಿಂದ ಇದ್ದಷ್ಟು ಹಿತವು. ಇನ್ನು ನಾನು ಹೇಳಿದಂತೆ ಕೇಳು. ಸುಮ್ಮನೆ ಹಟಮಾರಿತನ ಮಾಡಬೇಡ, ಎಂದು ಹೇಳಿ, ಗೋಸಾವಿಯು ತಟ್ಟನೆ ಗುಡಿಸಿಲಿನಿಂದ ಹೊರಗೆ ಹೊರಟುಹೋದನು. ಶಿಷ್ಯನೂ ಆತನ ಬೆನ್ನ ಹಿಂದೆ ಎದ್ದು ಹೋಗಬೇಕೆಂದು ಮಾಡಿದನು; ಆದರೆ ಆತನಿಗೆ ಏಳಲಿಕ್ಕೇ ಬರಲೊಲ್ಲದು! ಅವನ ಶಕ್ತಿಯೆಲ್ಲ ಕ್ಷೀಣವಾದಂತಾಗಿತ್ತು; ಆದ್ದರಿಂದ ಅವನು ಹುಚ್ಚು ಹಿಡಿದವನಂತೆ ಅತ್ತಿತ್ತ ನೋಡಹತ್ತಿ ತನ್ನೊಳಗೇ ಏನೋ ಒಟಗುಟ್ಟಿದನು.

ಇತ್ತ ಗೋಸಾವಿಯು ಹೊರಗೆ ಬಂದನು. ಬೆಳ್ಳಗೆ ಬೆಳಗಾಗಿ ಸೂರ್ಯಪ್ರಕಾಶವು ಸ್ವಚ್ಛವಾಗಿ ಬಿದ್ದಿತ್ತು. ಆತನು ತನ್ನ ಜನರನ್ನು ಕರಕೊಂಡು ಗವಿಯನ್ನು ಹೊಕ್ಕನು. ಇಬ್ಬರು ಗೋಸಾವಿಯ ಮುಂದೆ ಸಾಗಿದ್ದರು. ಉಳಿದವರು ಹಿಂದಿನಿಂದ ನಡೆದಿದ್ದರು. ಗೋಸಾವಿಯು ಗುಹೆಯನ್ನು ಪರೀಕ್ಷಿಸುತ್ತ ಮನಸ್ಸಿನಲ್ಲಿ ಸಮಾಧಾನಪಡುತ್ತ ಗವಿಯ ಮುಖಕ್ಕೆ ಬಂದನು. ಅಲ್ಲಿ ಭಯಂಕರ ಸ್ಥಿತಿಯು ಅವನ ಕಣ್ಣಿಗೆ ಬಿದ್ದಿತು. ಭೋಲ್ಯಾನು ಮರಣ ಹೊಂದಿ ಅಸ್ತವ್ಯಸ್ತವಾಗಿ ಬಿದ್ದಿದ್ದನು. ತುಳಾಜಿಯು ವಿಚಾರಮಾಡುತ್ತಾ ನಿಂತುಕೊಂಡಿದ್ದನು. ಇದನ್ನೆಲ್ಲ ನೋಡಿ ಗೋಸಾವಿಯು ಆಶ್ಚರ್ಯಪಟ್ಟು ತುಳಾಜಿಯನ್ನು ಕುರಿತು— ''ತುಳಾಜೀ, ಇದೇನು ಅನರ್ಥವು? ಭೋಲ್ಯಾನ ಗತಿಯು ಹೀಗಾದದ್ದು ಆಶ್ಚರ್ಯವಷ್ಟೇ ಅಲ್ಲ, ನಮಗೆ ಅಶುಭಕರವೂ ಆಗಿರುವದು. ಈ ಪ್ರಸಂಗವು ಹ್ಯಾಗೆ ಒದಗಿರಿಬಹುದು? ಭೋಲ್ಯಾನು ದೈತ್ಯನಂಥವನು, ಅಷ್ಟಿಕ್ಕಿಷ್ಟಕ್ಕೆ ಒಬ್ಬರಿಬ್ಬರಿಗೆ ಮಣಿಯತಕ್ಕವನಲ್ಲ; ಅಂದಬಳಿಕ ನಮ್ಮ ಈ ಗವಿಯ ಸುದ್ದಿಯು ಷಟ್ಕರ್ಣ ವಾಗಿರಬಹುದೇನು? ಹಾಗಾದರೆ, ನಮ್ಮ ಶ್ರಮವೆಲ್ಲ ವ್ಯರ್ಥವಾಗ ಬಹುದಲ್ಲ. ಏನೊ! ಹೀಗೆ ಯಾಕಾಗಿರಬಹುದು?'' ಎಂದುಕೇಳಲು, ತುಳಾಜಿಯು— ನಾನೂ, ಅದನ್ನೇ ಕುರಿತು ವಿಚಾರ ಮಾಡುತ್ತಲಿದ್ದೇನೆ. ಭೋಲ್ಯಾನಿಗೆ ಗಾಯಗಳೆಲ್ಲಿಯೂ ಆಗಿಲ್ಲ. ಅವನನ್ನು ಕುತ್ತಿಗೆ ಹಿಸುಕಿ ಕೊಂದಿರುವರೆಂತಲೂ ಹೇಳಲಿಕ್ಕೆ ಬರುವ ಹಾಗಿಲ್ಲ; ಅಂದಬಳಿಕ ಇವನು ಏನಾಗಿ ಸತ್ತಿರ ಬಹುದು? ಆದರೆ ಇಲ್ಲಿ ಶಸ್ತ್ರಗಳು ಬಿದ್ದಿರುವದರಿಂದಲೂ, ಮನುಷ್ಯರು ಗುದುಮುರಿಗೆ ಹಾಕಿದ ಚಿಹ್ನಗಳು ತೋರುತ್ತಿರುವದರಿಂದಲೂ, ಯಾರೋ ಇಲ್ಲಿಗೆ ಬಂದಿರುವದೇನೋ ನಿಜ. ಇವರನ್ನು ಗವಿಯಲ್ಲಿ ಕೆಲಸಮಾಡಲಿಕ್ಕೆ ಕಳಿಸಿದಾಗ ಭೋಲ್ಯಾನು ಹೊರಗೆ ಕುಳಿತಿದ್ದನು; ಆದ್ದರಿಂದ ಭೋಲ್ಯಾನು ಸತ್ತು ಬಹಳ ಹೊತ್ತು ಆಗಿಲ್ಲ, ನಿನ್ನೆ ರಾತ್ರಿಯಲ್ಲಿಯೇ ಇವನು ಮರಣ ಹೊಂದಿರುವನು. ಇಲ್ಲಿ ಈ ಶಸ್ತ್ರಕ್ಕೆ ಮಾತ್ರ ರಕ್ತ ಹತ್ತಿದೆ. ಭೋಲ್ಯಾನ ಮೈಗೆಲ್ಲಿಯೂ ರಕ್ತ ಹತ್ತಿರುವದಿಲ್ಲ; ಅಂದಬಳಿಕ ರಕ್ತವೇಕ್ಕಿರುವುದು? ಇತ್ತ ನೋಡಿರಿ, ಹಾವಿನ ತುಂಡು! ಭೋಲ್ಯಾನು ಸಾಕಿದ ಹಾವೇ ಅವನನ್ನು ಕಚ್ಚಿ ಕೊಂದಿರ ಬಹುದೇನು? ಭೋಲ್ಯಾನು ಆ ಹಾವಿನ ಸಂಗಡ ಆಡುತ್ತಿರುವಾಗ ಅದು ಸಿಟ್ಟಿಗೆದ್ದು ಕಚ್ಚಲು, ಅವನೇ ಅದನ್ನು ತುಂಡರಿಸಿರಬಹುದೇನು? ಹಾಗಿದ್ದರೆ ಈ ಹಗ್ಗದ ತುಂಡುಗಳು ಇಲ್ಲಿ

ಯಾಕೆ ಬಿದ್ದಿವೆ? ಇವನ್ನೆಲ್ಲ ನೋಡಿ ನನ್ನ ಮನಸ್ಸಿಗೆ ಏನೂ ಗೊತ್ತಾಗದಾಗಿದೆ! ಈ ಶಸ್ತ್ರಗಳು ಭೋಲ್ಯಾನವಲ್ಲವಾದ್ದರಿಂದ ಯಾರೋ ಇಲ್ಲಿಗೆ ಬಂದಿರಬಹುದಾಗಿ ತೋರುತ್ತದೆ. ನಿಜವಾದ ಸಂಗತಿಯನ್ನು ದೇವರೇ ಬಲ್ಲನು! ಶಿವಾಜಿಯ ಸರದಾರರು ಅರಣ್ಯವನ್ನು ಶೋಧಿಸುತ್ತಿರುವರೆಂದು ಕೇಳಿದ್ದೇನೆ. ಅವರಲ್ಲಿ ಯಾರಾದರೂ ಇಲ್ಲಿಗೆ ಬಂದಿರಬಹುದೇನು?

ತುಳಾಜಿಯ ಈ ಮಾತುಗನ್ನು ಕೇಳಿ ಗೋಸಾವಿಯು ಸ್ವಲ್ಪ ಹೊತ್ತು ಆಲೋಚಿಸಿ ತುಳಾಜಿ ಯನ್ನು ಕುರಿತು— ''ತುಳಾಜೀ, ನಿನ್ನೆ ರಾತ್ರಿ ನಮ್ಮ ಗುಡಿಸಿಲಿಗೆ ಒಬ್ಬನು ಬಂದಿದ್ದನು. ಅವನನ್ನು ನಾವು ಗೊತ್ತಿಗೆ ಹಚ್ಚಿದ್ದೇವೆ. ಅವನೇ ಈ ಭೋಲ್ಯಾನ ಸಂಗಡ ಬಡಿದಾಡಿದವನಾಗಿದ್ದರೆ ನಮ್ಮ ಗುಹೆಯ ವರ್ತಮಾನವು ಹೊರಗೆ ಗೊತ್ತಾಗುವ ಸಂಭವವಿಲ್ಲ, ಅವನಲ್ಲದೆ ಬೇರೊಬ್ಬನಾಗಿದ್ದರೆ ಮಾತ್ರ ಕೆಲಸವು ಕೆಡುವದು. ಶಿವಾಜಿಗೆ ಸುದ್ದಿ ಹತ್ತುವದೊಂದೇ ತಡವು; ಆತನು ಎಳೆ ಸಿಕ್ಕರೆ ಹಚ್ಚಡ ನುಂಗುವವನು. ಸ್ವಲ್ಪ ಸುದ್ದಿ ಹತ್ತಿದರೆ ಸಾಕು, ಅಷ್ಟರಿಂದ ಆಕಾಶಪಾತಾಳ ಒಂದು ಮಾಡಿ ನಮ್ಮ ಗುಪ್ತ ಕಾರಸ್ಥಾನದ ಮೂಲವನ್ನು ಗೊತ್ತುಹಚ್ಚುವನು. ಜನರನ್ನು ವಶಮಾಡಿಕೊಳ್ಳುವ ಅವನ ಶಕ್ತಿಯು ಅಗಾಧವಾದದ್ದು. ನೂರರಲ್ಲಿ ತೊಂಬತ್ತರೊಂಬತ್ತು ಜನರೇ ಅಲ್ಲ, ಸಾವಿರದಲ್ಲಿ ಒಂಬೈನೂರಾತೊಂಬತ್ತ ರೊಂಬತ್ತು ಅವನ ಮಾತಿಗೆ ಮರುಳಾಗಿ ಅವನವರಾಗುವರು! ಅಂದಬಳಿಕ ನಮ್ಮ ಗುಪ್ತ ಸಂಗತಿಯು ಹೊರಬೀಳದೆ ಹ್ಯಾಗೆ ಉಳಿಯುವದು? ಈ ಮಾತಿನ ಶೋಧವನ್ನು ನಾವು ವಿಲಂಬ ಮಾಡದೆ ಮಾಡಲೇಬೇಕು. ಶಿವಾಜಿಗೆ ನಮ್ಮ ಕಾರಸ್ಥಾನದ ಸುಳವು ಹತ್ತಿದ್ದೇ ನಿಜವಿದ್ದರೆ, ನಾವು ಈ ಸ್ಥಳವನ್ನು ಬಿಟ್ಟು ಬೇರೆ ಕಡೆಗೆ ಹೋಗಿಬಿಡಬೇಕು, ಅಂದರೆ ಈ ಉಪಾಯದಿಂದ ಸಾಧಿಸದೆ ಇದ್ದ ನಮ್ಮ ಕೆಲಸವನ್ನು, ಸಮಯನೋಡಿ ಬೇರೊಂದು ಉಪಾಯ ದಿಂದ ಸಾಧಿಸಿಕೊಳ್ಳಲಿಕ್ಕೆ ಮಾರ್ಗವಾದರೂ ಉಳಿಯುವದು. ನಾನು ಈ ಮಾತಿನ ಶೋಧವನ್ನು ಮಾಡಿ ತೀರುವೆನು. ನನ್ನ ವೇಷವು ಈ ಕೆಲಸಕ್ಕೆ ಅನುಕೂಲವಾಗಿದೆ. ನಾನು ಈ ಗೋಸಾವಿಯ ಸೋಗಿನಿಂದ ಹೋದರೆ ನನ್ನ ಗುರುತನ್ನು ಯಾರೂ ಹಿಡಿಯಲಿಕ್ಕಿಲ್ಲ. ಸದ್ಯದ ಪ್ರಸಂಗವೂ ನನಗೆ ಅನುಕೂಲವಾಗಿರುತ್ತದೆ. ಈಗ ಶಿವಾಜಿಯು ಅಫಜುಲಖಾನನಿಗೆ ಮಂಕುಬೂದಿ ಹಚ್ಚಿ ಕಳಿಸಲು ಯತ್ನ ನಡಿಸಿರುತ್ತಾನಂತೆ. ಆತನ ಈ ಪ್ರಯತ್ನಕ್ಕೆ ಬಹು ಜನರಿಂದ ಸಹಾಯವಾಗುವ ಸಂಭವವಿರುತ್ತದೆ. ಕೆಂಜಳದ ಆನಂದಭಾರತಿಯವರೇನೋ ಆತನಿಗೆ ಸಹಾಯ ಮಾಡುವವರಿ ದ್ದಾರಂತೆ. ಅವರಿಬ್ಬರ ಭೆಟ್ಟಿಯ ಯೋಗವು ಮೂಲತಃ ಇನ್ನೂ ಒದಗಿರುವುದಿಲ್ಲ; ಆದ್ದರಿಂದ ನಾನೇ ಅವರಾಗಿ, ಇಲ್ಲವೆ ಅವರ ಕಡೆಯಿಂದ ಹೋದ ಒಬ್ಬ ಶಿಷ್ಯನಾಗಿ ಶಿವಾಜಿಯ ದರ್ಬಾರಕ್ಕೆ ಹೋಗುತ್ತೇನೆ; ಇದರಿಂದ ನನ್ನ ಆದರೋಪಚಾರಗಳು ಸರಿಯಾಗಿ ಆಗಿ, ಅವನ ಮನಸ್ಸಿನೊಳಗಿನ ಸಂಗತಿಯನ್ನು ತಿಳಕೊಳ್ಳಲಿಕ್ಕೂ ಆಸ್ಪದವು ದೊರೆಯುವದು. ನೀವು ಗುಡಿಸಲಿನ ಕಡೆಗೆ ಲಕ್ಷ್ಯವಿಡಿರಿ. ಇನ್ನು ನಾನು ತಿರುಗಿ ಗುಡಿಸಲಿಗೆ ಹೋಗುವದಿಲ್ಲ ನಾನು ಇಂಥ ಕೆಲಸಕ್ಕೆ ಹೋಗಿರುವೆನೆಂದು ಹೇಳಿದರೆ, ಶಿಷ್ಯನು ಸಮಾಧಾನಪಡುವನು, ಎಂದು ಹೇಳಿ ಗೋಸಾವಿಯು ಹೊರಟುಬಿಟ್ಟನು. ಇಷ್ಟು ಅವಸರದಿಂದ ಹೋಗುವದು ತುಳಾಜಿಯ ಮನಸ್ಸಿಗೆ ಬರಲಿಲ್ಲ; ಆದರೆ ಗೋಸಾವಿಯ ಆತುರವನ್ನು ನೋಡಿ, ಈಗ ತನ್ನ ಮಾತು

ನಡೆಯಲಿಕ್ಕಿಲ್ಲೆಂದು ತಿಳಿದು ತುಳಾಜಿಯು ಸುಮ್ಮನಿದ್ದನು. ಅಷ್ಟು ಸ್ಪಷ್ಟವಾಗಿ ಹೇಳುವಷ್ಟು ಅಧಿಕಾರವೂ ಆತನಿಗಿದ್ದಿಲ್ಲ, ಮುಂದೆ ಏನು ಮಾಡಬೇಕೆಂಬದೂ ತುಳಾಜಿಗೆ ತಿಳಿಯ ದಾಯಿತು. ಮೊದಲು ಗೊತ್ತಾದಂತೆ ನಾನು ಗವಿಯಲ್ಲಿ ಎಲ್ಲ ವ್ಯವಸ್ಥೆಯನ್ನು ಮಾಡಿ ಇಡಬಹುದೆ? ಅದನ್ನಾದರೂ ಕೇಳಿಕೊಳ್ಳಲಿಲ್ಲವಲ್ಲ ಇನ್ನು ನಾನು ಏನು ಮಾಡಬೇಕು? ನೆಲದಲ್ಲಿ ಹುಗಿದ ಆ ಮನುಷ್ಯನು ಯಾರೆಂಬದು ಗೊತ್ತು ಹತ್ತಿದರೆ ನೋಡೋಣ, ಎಂದು ಯೋಚಿಸಿ ತನ್ನ ಜನರನ್ನು ಕರೆದು ನಮ್ಮಲ್ಲಿ ಇಬ್ಬರು ಈ ಭೋಲ್ಯಾನ ಶವವನ್ನು ಹಳ್ಳದ ದಂಡೆಗೆ ಒಯ್ದು ಎಲ್ಲಿಯಾದರೂ ಸುಟ್ಟುಬಿಡಿರಿ. ಅವನ ಋಣಾನುಬಂಧವು ಇಲ್ಲಿಗೆ ತೀರಿತು, ಉಳಿದವರು ಕಟ್ಟಿಗೆ ಕಡಿಯುವ ಕೆಲಸಕ್ಕೆ ಹೋಗಿರಿ, ಎಂದು ಹೇಳಿ, ತಾನು ಗವಿಯ ಕಡೆಗೆ ನಡೆದನು. ಆತನು ಗುಹೆಯನ್ನು ಪ್ರವೇಶಿಸಿ, ಎಲ್ಲ ಕಡೆಗೂ ಸೂಕ್ಷ್ಮ ರೀತಿಯಿಂದ ಪರೀಕ್ಷಿಸ ಹತ್ತಿದನು; ಆದರೆ ಏನೂ ಗೊತ್ತಾಗಲಿಲ್ಲ, ಅಷ್ಟರಲ್ಲಿ ಅವನ ಮನಸ್ಸಿನಲ್ಲಿ ಒಂದು ವಿಚಾರವು ಉತ್ಪನ್ನವಾಯಿತು. ಆ ನೆಲದಲ್ಲಿ ಹುಗಿದ ಮನುಷ್ಯನು ಶಿವಾಜಿಯ ಕಡೆಯ ಸರದಾರನೇ ಆಗಿದ್ದರೆ, ಅವನ ಕುದುರೆಯು ಈ ಅಡವಿಯಲ್ಲಿ ಎಲ್ಲಿಯಾದರೂ ಇರಬಹುದು, ಶೋಧ ಮಾಡಿಸಬೇಕು, ಎಂದು ಯೋಚಿಸಿ ಪುನಃ ತನ್ನ ಜನರ ಬಳಿಗೆ ಹೋಗಿ ನಾಲ್ಕಾರು ಜನರನ್ನು ಕುದರೆಯ ಶೋಧಕ್ಕಾಗಿ ಕಳಿಸಿ, ತಾನು ಪುನಃ ಗವಿಯನ್ನು ಪ್ರವೇಶಿಸಿದನು. ಆತನು ಅತ್ತಿತ್ತ ಶೋಧ ಮಾಡುತ್ತಿರಲು, ತಾವು ಗಾಳಿ ಬರುವದಕ್ಕಾಗಿ ಬಿಟ್ಟಿದ್ದ ಬೆಳಕಿಂಡಿಯೊಂದು ದೊಡ್ಡದಾಗಿ ಹೆಚ್ಚು ಪ್ರಕಾಶ ಬಿದ್ದದ್ದನ್ನು ನೋಡಿ ಅಲ್ಲಿ ನಿಂತುಕೊಂಡು ಪರೀಕ್ಷಿಸಹತ್ತಿದನು. ಇದೇ ದ್ವಾರದಿಂದಲೇ ಆ ಮನುಷ್ಯನು ಹೊರಗೆ ಹೋಗಿರುವನೆಂಬ ನಿಶ್ಚಯವು ಆತನಿ ಗಾಯಿತು. ಆತನು ಸ್ವತಃ ಆ ಬಿಲದೊಳಗಿಂದ ಹೊರಗೆ ಬಂದು ನೋಡಿದನು. ಆ ಮನುಷ್ಯನು ಗುಹೆಯ ದ್ವಾರದಲ್ಲಿದ್ದ ಭೋಲ್ಯಾನನ್ನು ಗೊತ್ತಿಗೆ ಹಚ್ಚಿ, ಅಲ್ಲಿಂದಲೇ ಈ ಗವಿಯನ್ನು ಪ್ರವೇಶಿಸಿರುವನೆಂತಲೂ, ಗವಿಯನ್ನು ತೋಡುವ ಜನರು ಒಳಗೆ ಕೆಲಸ ಮಾಡುತ್ತಿದ್ದದ್ದನ್ನು ಅರಿತು ಇದೇ ಮಾರ್ಗದಿಂದ ಆತನು ಹೊರಗೆ ಹೋಗಿರುವನೆಂತಲೂ ತಿಳಿದುಕೊಂಡನು. ಆ ಮನುಷ್ಯನನ್ನು ಗೊತ್ತಿಗೆ ಹಚ್ಚಿಬಿಟ್ಟಿದ್ದರಿಂದ ಗೋಸಾವಿಯವರು ಸುಮ್ಮನೆ ಅವಸರ ಮಾಡಿದರೆಂದು ಆತನಿಗೆ ಅಸಮಾಧಾನವಾಯಿತು. ಅವರು ಇನ್ನೂ ದೂರ ಹೋಗಿರಲಿಕ್ಕಿಲ್ಲ, ಯಾರನ್ನಾದರೂ ಓಡಿಸಿ ಅವರನ್ನು ಕರಿಸಿಕೊಳ್ಳಬೇಕೆಂದು ಗವಿಯಿಂದ ಹೊರಗೆ ಬಂದು ತನ್ನ ಜನರ ಬಳಿಗೆ ಹೋಗುತ್ತಿದ್ದನು. ಅಷ್ಟರಲ್ಲಿ ಕುದುರೆಯನ್ನು ನೋಡಲಿಕ್ಕೆ ಹೋಗಿದ್ದ ಜನರು, ಒಂದು ಗಿಡಕ್ಕೆ ಕುದುರೆಯು ಕಟ್ಟಿರುವದೆಂದು ಬಂದು ಹೇಳಲು, ಅವನ ಸಂಶಯದ ನಿವಾರಣವಾಯಿತು. ಆತನು ಗೋಸಾವಿಯವರ ಕಡೆಗೆ ಆಳನ್ನು ಕಳಿಸಲಾ, ಅಥವಾ ಮೊದಲು ಗೊತ್ತಾಗಿದ್ದಂತೆ ಗುಹೆಯಲ್ಲಿ ಎಲ್ಲ ವ್ಯವಸ್ಥೆಯನ್ನು ಮಾಡಿಬಿಡಲಾ, ಎಂದು ಆಲೋಚಿಸುತ್ತ ಈ ಪ್ರಸಂಗದಲ್ಲಿ ನಮ್ಮ ಆ ತರುಣ ಶಿಷ್ಯನ ಅಭಿಪ್ರಾಯವನ್ನು ಕೇಳಿಕೊಳ್ಳಬೇಕೆಂದು ಗುಡಿಸಿಲಿನ ಕಡೆಗೆ ಹೊರಟನು.

# ಬೈರಾಗಿಣಿಯ ದೀಕ್ಷೆಯು

ತುಳಾಜಿಯು ಹೋದಾಗ ಬಾಲಗೋಸಾವಿಯು ಗುಡಿಸಲಿನ ಹೊರಗೆ ವಿಚಾರಮಾಡುತ್ತ ಕುಳಿತುಕೊಂಡಿದ್ದನು. ಆತನು ತುಳಾಜಿಯನ್ನು ನೋಡಿ ಆತುರದಿಂದ— ''ಎಲ್ಲಿ? ಗುರುಗಳು ಬರಲಿಲ್ಲ? ನೀನೊಬ್ಬನೇ ಬಂದೆಯಲ್ಲ'' ಎಂದು ಕೇಳಿದನು. ಆಗ ತುಳಾಜಿಯು ಆತನ ಬಳಿಯಲ್ಲಿ ಕುಳಿತುಕೊಂಡು ನಡೆದ ವರ್ತಮಾನವನ್ನೆಲ್ಲ ಹೇಳಿದನು. ಅದನ್ನು ಕೇಳಿ ಬಾಲಗೋಸಾವಿಯು ಚಿಂತೆಯಲ್ಲಿ ಮುಣುಗಿದನು. ಇಷ್ಟು ದಿವಸ ಪರಮ ಸಾಹಸಪಟ್ಟು, ಇಷ್ಟು ಜನರನ್ನು ಒಂದೇ ಸವನೆ ದುಡಿಸಿ ಮಾಡಿದ ಕಾರ್ಯದ ಹಾನಿಯು ಎಲ್ಲಿ ಆಗುವದೋ ಎಂದು ಆತನು ವ್ಯಸನ ಪಡಹತ್ತಿದನು. ಆಮೇಲೆ ಬಹಳ ಹೊತ್ತಿನವರೆಗೆ ಅವರಿಬ್ಬರು ಮಾತಾಡಿದರು. ಅವರು ತಮ್ಮ ಮನಸ್ಸಿನಲ್ಲಿ ಏನು ನಿರ್ಧರಿಸಿಕೊಂಡರೆಂಬುದನ್ನು ಅವರೇ ಬಲ್ಲರು. ಕೆಲವು ಹೊತ್ತಿನ ಮೇಲೆ ತುಳಾಜಿಯು ಬಾಲಗೋಸಾವಿಯ ಸಮ್ಮತಿಯಿಂದ ಹೊರಟುಹೋದನು. ಬಾಲಗೋಸಾವಿಯು ಮನಸ್ಸಿನಲ್ಲಿ ಸಮಾಧಾನವಿಲ್ಲದೆ ಗುಡಿಸಲಿನ ಮುಂದೆ ಇತ್ತಿಂದತ್ತ ಅತ್ತಿಂದಿತ್ತ ಎಡತಾಕಹತ್ತಿದನು. ಎಷ್ಟು ಹೊತ್ತಾದರೂ ಅವನ ಎಡತಾಕೋಣವು ಮುಗಿಯಲೊಲ್ಲದು. ಹೀಗೆ ಆತನು ಯಾವ ಉದ್ದೇಶವೂ ಇಲ್ಲದೆ ವಿಚಾರಮಗ್ನನಾಗಿ ಎಡತಾಕುತ್ತಿರಲು, ಒಬ್ಬ ತರುಣನಾದ ಮರಾಟನು ಒಬ್ಬ ತರುಣಿಯನ್ನು ಕರಕೊಂಡು ಅಲ್ಲಿಗೆ ಬಂದನು. ಅವರನ್ನು ನೋಡಿದ ಕೂಡಲೆ ಬಾಲಗೋಸಾವಿಯು ಮೆಟ್ಟಿ ಬಿದ್ದನು. ಸ್ವಲ್ಪ ಹೊತ್ತಿನಲ್ಲಿ ತನ್ನ ವೃತ್ತಿಯನ್ನು ಸಮಾಧಾನಪಡಿಸಿ ಕೊಂಡು ಅವನು ಆ ಬಂದ ತರುಣ–ತರುಣಿಯರನ್ನು ಕುರಿತು— ''ಯಾರು ನೀವು?ಇಲ್ಲಿಗೆ ಹ್ಯಾಗೆ ಬಂದಿರಿ? ಛೀ ಛೀ, ಏನು ತ್ರಾಸವಪ್ಪಾ ಇದು! ಸರ್ವಸಂಗ ಪರಿತ್ಯಾಗಮಾಡಿ ಈ ಘೋರಾರಣ್ಯದಲ್ಲಿ ಬಂದು ಕುಳಿತರೂ ಈ ಜನರು ನಮ್ಮನ್ನು ಸಮಾಧಾನದಿಂದ ಕೂಡಗೊಡ ಲೊಲ್ಲರು! ಇದಕ್ಕೇನು ಮಾಡಬೇಕಾದೀತು! ಹೋಗಿರಿ! ಹೋಗಿರಿ! ನಿಮ್ಮ ಹಾದಿಯ ಹಿಡಿದು ನೀವು ಹೋಗಿರಿ! ಅಪ್ಪಗಳಿರಾ, ನಮ್ಮಂಥ ತಪಸ್ವಿಗಳ ತಪಶ್ಚರ್ಯದ ಭಂಗಮಾಡಬೇಡಿರಿ. ಅದರಿಂದ ನಿಮಗೆ ಯಾವ ಲಾಭವೂ ಇಲ್ಲ, ನಮಗೆ ಮಾತ್ರ ಹಾನಿಯಾಗುತ್ತದೆ.'' ಎಂದು ಹೇಳಿದನು; ಆದರೆ ಏನು ಚಮತ್ಕಾರವೋ ಏನೋ! ಆ ಬಾಲಗೋಸಾವಿಯನ್ನು ನೋಡಿದಾಗಿನಿಂದ, ವಿಶೇಷವಾಗಿ ಆತನ ಮಂಜುಲ ಧ್ವನಿಯನ್ನು ಕೇಳಿದಾಗಿನಿಂದ ಆ ಹಾದಿ ಕಾರಳಾದ ತರುಣಿಯು ಮೋಹಿತಳಾದಳು! ಒಮ್ಮೆಲೆ ಆಕೆಯು ತನ್ನ ಸಂಗಡಿಗನಾದ ತರುಣನಿಗೆ— ''ಇನ್ನು ನಾನು ಇವರ ಚರಣವನ್ನು ಬಿಟ್ಟು ಎಲ್ಲಿಯೂ ಹೋಗಬಾರದೆಂದು ನಿರ್ಧರಿಸಿದ್ದೇನೆ. ಜನ್ಮವಿರುವವರೆಗೆ ಇವರ ಸೇವೆಯನ್ನು ಮಾಡುವೆನು. ಇಂಥ ವೈರಾಗ್ಯ ಮೂರ್ತಿಯು ಸಿಕ್ಕಬಳಿಕ ನನಗೇನು ಬೇಕಾಗಿದೆ? ಹ್ಯಾಗೂ ನಾನು ಸಂಸಾರಿಕ ಪರಿತಾಪದಿಂದ ತಪ್ತಳಾಗಿದ್ದೇನೆ. ನನಗೆ ಯಾತರ ಆಶೆಯೂ ಇಲ್ಲ, ನೀವು ನನ್ನನ್ನು ಸಂಕಟದಿಂದ ಮುಕ್ತಮಾಡದಿದ್ದರೆ, ಇಷ್ಟುಹೊತ್ತಿಗೆ ನಾನು ಇಹಲೋಕದ ಯಾತನೆಯಿಂದ ಮುಕ್ತಳಾಗುತ್ತಿದ್ದೆನು; ಆದರೂ ನನ್ನ ಸಂರಕ್ಷಣ ಮಾಡಿ, ಈ

ಸ್ಥಾನದವರೆಗೆ ನನ್ನನ್ನು ಕರಕೊಂಡು ಬಂದು ಬಿಟ್ಟದ್ದಕ್ಕಾಗಿ ನಾನು ಜನ್ಮಜನ್ಮಾಂತರದಲ್ಲಿಯೂ ನಿಮ್ಮ ಉಪಕಾರವನ್ನು ಮರೆಯಲಾರೆನು. ಇನ್ನು ನನ್ನನ್ನು ಇಲ್ಲಿಯೇ ಬಿಟ್ಟುಬಿಡಿರಿ. ಮಹಾರಾಜರ ಬಳಿಗೆ ನಾನು ಬರುವದಿಲ್ಲ. ಜೀಜಾಬಾಯಿ ಸಾಹೇಬರಿಗಿಂತ ಇವರ ಚರಣಸೇವೆ ಮಾಡಿಕೊಂಡಿರುವದು ನನಗೆ ಇಷ್ಟವಾಗಿರುತ್ತದೆ.

ಈ ಮೇರೆಗೆ ಆ ಸ್ತ್ರೀಯು ಗಟ್ಟಿಗಟ್ಟಿಸಿ ಮಾತಾಡುವದನ್ನು ಕೇಳಿ ಬಾಲಗೋಸಾವಿಯು ಚಕಿತನಾಗಿ ಎವೆಯಿಕ್ಕದೆ ಆಕೆಯನ್ನು ನೋಡಹತ್ತಿದನು. ಬಹಳ ಹೊತ್ತಿನವರೆಗೆ ಹೀಗೆ ದಿಟ್ಟಿಸಿ ನೋಡಿ, ಕಡೆಗೆ ಕವಕ್ಕನೆ ಆ ಸ್ತ್ರೀಯು ಮೈಮೇಲೆ ಹೋಗಿ— "ನೀನು ನನ್ನ ಸೇವೆಯನ್ನು ಮಾಡುವೆಯಾ? ನನ್ನ ಬಳಿಯಲ್ಲಿರುವೆಯಾ? ನನ್ನ ಸೇವೆಯನ್ನು ಮಾಡಲಿಕ್ಕೆ ಯಾರೂ ಬೇಡ. ನನಗೆ ಯಾರೂ ಬೇಡವೆಂತಲೇ ಈ ಘೋರಾರಣ್ಯವನ್ನು ಸೇರಿಕೊಂಡಿರುವಾಗ, ನಿನ್ನ ಉಪಾಧಿಯನ್ನು ನಾನು ಹಚ್ಚಿಕೊಳ್ಳುವೆನೆ? ಹೋಗು ಹೋಗು, ಪುನಃ ನೀನು ನನಗೆ ಮೋರೆಯನ್ನು ಕೂಡ ತೋರಿಸಬೇಡ. ಇಂಥ ಕಟ್ಟಡವಿಯನ್ನು ಸೇರಿದ್ದು, ನಿಮ್ಮಂಥವರ ಸೇವೆಯನ್ನು ಕೈಕೊಳ್ಳಬೇಕೆಂದು, ಅಥವಾ ನಿಮ್ಮ ಮೋಹದಲ್ಲಿ ಸಿಗಬೇಕೆಂದು ಅಲ್ಲವೆಂಬದನ್ನು ಚನ್ನಾಗಿ ನೆನಪಿನಲ್ಲಿಡು. ನಾವು ಬಾಲವೈರಾಗಿಗಳು, ಸ್ವಚ್ಛಂದಿಗಳು. ನಮಗೆ ಯಾರ ಹಂಗೂ ಇಲ್ಲ, ನಡೆ, ನಡೆ, ನಡೆ! ಇಲ್ಲಿ ನಿಲ್ಲಬೇಡ" ಎಂದು ತಿರಸ್ಕರಿಸಿ ನುಡಿದನು; ಆದರೆ ಅದಕ್ಕೆ ಆ ಸ್ತ್ರೀಯು ಮಣಿಯಲಿಲ್ಲ. ಬಾಲಗೋಸಾವಿಯು ತಿರಸ್ಕರಿಸಿದಂತೆ, ಆತನ ಸೇವೆ ಮಾಡಿ ಕೊಂಡಿರುವ ವಿಷಯವಾಗಿ ಆ ಸ್ತ್ರೀಯು ಮನಸ್ಸು ಗಟ್ಟಿಯಾಗುತ್ತಾ ಹೋಯಿತು. ಈತನು ಎಷ್ಟು ತಿರಸ್ಕರಿಸಿದರೂ, ಎಷ್ಟು ತ್ರಾಸ ಕೊಟ್ಟರೂ ಈ ಸ್ಥಾನವನ್ನು ಬಿಟ್ಟು ಹೋಗಲಿಕ್ಕಿಲ್ಲೆಂದು ಆಕೆಯು ನಿಶ್ಚಯಿಸಿದಳು. ಬಾಲಗೋಸಾವಿಯ ತಿರಸ್ಕಾರದ ಮಾತನ್ನು ಆಕೆಯು ಸ್ವಲ್ಪವಾದರೂ ಲೆಕ್ಕಿಸದೆ, ತನ್ನ ಆ ಸಂಗಡಿಗನನ್ನು ಕುರಿತು— " ನೀವು ಇನ್ನು ಇಲ್ಲಿ ನಿಲ್ಲಬೇಡಿರಿ; ಹೊರಟು ಹೋಗಿಬಿಡಿರಿ. ನಿಮ್ಮ ಸಂಗಡ ನಾನು ಬರುವದಿಲ್ಲ; ಇಲ್ಲಿಯೇ ಇರುವೆನು. ನನಗೆ ವೈರಾಗ್ಯವು ಉತ್ಪನ್ನವಾಗಿರುವದು. ನನಗೆ ಸಂಸಾರವಿಲ್ಲ, ಮನೆಯಿಲ್ಲ, ಇವರು ನನ್ನನ್ನು ಇಲ್ಲಿ ಇಟ್ಟು ಕೊಳ್ಳದಿದ್ದರೆ, ಅಷ್ಟರಮಟ್ಟಿಗೆ ಇವರ ಮಾತನ್ನು ಮೀರಿ ಹಟದಿಂದ ನಾನು ಇಲ್ಲಿ ಇರುವೆನು, ಇವರು ಹೊಡೆಯಲಿ,ಬಡೆಯಲಿ ಬೇಕಾದದ್ದು ಮಾಡಲಿ, ಇಲ್ಲಿಂದ ಉಲುಕುವದಿಲ್ಲ. ನಾನು ಇವರ ಸೇವೆಯನ್ನು ಮಾಡಿ ಗುರುಪದೇಶವನ್ನು ಹೊಂದುವೆನು; ದೀಕ್ಷೆಯನ್ನು ಪಡೆಯುವೆನು. ಇವರು ಈಗ ನನ್ನನ್ನು ತಿರಸ್ಕರಿಸುತ್ತಿದ್ದರೂ ಬೇಗನೆ ನನ್ನನ್ನು ಶಿಷ್ಯಳನ್ನಾಗಿ ಮಾಡಿಕೊಳ್ಳುವರು" ಎಂದು ಹೇಳಿದಳು. ಆಕೆಯ ಈ ನಿರ್ಧಾರದ ಮಾತುಗಳನ್ನು ಕೇಳಿ ಬಾಲಗೋಸಾವಿಯು ಚಕಿತನಾಗಿ ಏನೂ ಮಾತಾಡದೆ ಸುಮ್ಮನೆ ಆಕೆಯನ್ನು ದಿಟ್ಟಿಸಿ ನೋಡುತ್ತ ಕುಳಿತುಕೊಂಡನು. ಒಂದು ಶಬ್ದವಾದರೂ ಆತನ ಮುಖದಿಂದ ಹೊರಡಲೊಲ್ಲದು. ಆಗ ಆ ಸ್ತ್ರೀಯು ತನ್ನ ಕಾರ್ಯವಾಯಿತೆಂದು ತಿಳಿದು— ಗೋಸಾವಿಯವರೇ, ತಮ್ಮ ಸುಕುಮಾರ ದೇಹವನ್ನು ನೋಡಿದರೆ ತಮ್ಮ ಈ ಘೋರ ತಪೋವೃತ್ತಿಯಲ್ಲಿ ತಮ್ಮ ಸೇವೆಯನ್ನು ಮಾಡಲಿಕ್ಕೆ ಯಾರಾದರೂ ನನ್ನಂಥವರು ಇರುವದು ಅವಶ್ಯವಾಗಿರುತ್ತದೆ. ನನ್ನ ಸಂಸಾರವು

ಗೊತ್ತಿಗೆ ಹತ್ತಿಹೋಗಿರುವದು. ನಾನೊಬ್ಬಳೇ ಅಕಸ್ಮಾತ್ತಾಗಿ ಈ ತರುಣ ಬಂಧುವಿಗೆ ಅರಣ್ಯದಲ್ಲಿ ಭೆಟ್ಟಿಯಾದೆನು. ಈ ಪುಣ್ಯವಂತನು ನನ್ನನ್ನು ಪ್ರಾಣಸಂಕಟದಿಂದ ಮುಕ್ತಮಾಡಿದಾಗಲೇ ನನಗೆ ವೈರಾಗ್ಯವು ಉತ್ಪನ್ನವಾಯಿತು. ಆಗೇ ನಾನು ಬೈರಾಗಿಯಾಗತಕ್ಕವಳು; ಆದರೆ ಸದ್ಗುರುವಿನ ಸಮಾಗಮವಾದ ಹೊರತು ವೈರಾಗ್ಯವು ವ್ಯರ್ಥವಲ್ಲವೆ? ಆದ್ದರಿಂದಲೇ ಶ್ರೀ ಶಂಕರನು ತಮ್ಮ ದರ್ಶನವನ್ನು ಮಾಡಿಸಿರುತ್ತಾನೆ. ಅಹಹ! ಉಮಾಪತೇ, ತಪೋಮಯನಾದ ನೀನು ಧನ್ಯನು. ನಿನಗೆ ನನ್ನ ಅನಂತ ಪ್ರಣಾಮಗಳಿರಲಿ!

ತನ್ನ ಸಂಗಡಿಗನು ಚಕಿತಮುದ್ರೆಯಿಂದ ನೋಡುತ್ತ ಸುಮ್ಮನೆ ನಿಂತುಕೊಂಡಿರುವದನ್ನು ನೋಡಿ ಆ ಸ್ತ್ರೀಯು— "ಅಣ್ಣಾ, ಯಾಕೆ ನಿಂತುಕೊಳ್ಳುತ್ತೀರಿ? ಹೋಗಿರಿ, ನನ್ನ ಸಲುವಾಗಿ ನೀವು ಚಿಂತೆಯನ್ನು ಮಾಡಬೇಡಿರಿ. ಇವರು ನನ್ನನ್ನು ಹೊರಗೆ ಹಾಕುವದಿಲ್ಲ; ನನ್ನ ಸೇವೆಯನ್ನು ಕೈಕೊಳ್ಳುವರು; ಕೈಕೊಳ್ಳದಿದ್ದರೆ ಕೈಕೊಳ್ಳುವಹಾಗೆ ನಾನು ಮಾಡುವೆನು. ನನ್ನಂಥ ಅನಾಥಳ ಮೇಲೆ ಅನುಗ್ರಹ ಮಾಡದೆ, ಮತ್ತೆ ಯಾರ ಮೇಲೆ ಅನುಗ್ರಹ ಮಾಡುವರು? ನಾನು ಇವರ ಗುರುಪದೇಶಕ್ಕೆ ಪಾತ್ರಳಿಲ್ಲದಿದ್ದರೆ ಬೇರೆ ಯಾರು ಪಾತ್ರರಿರುವರು? ಹೋಗಿರಿ, ನೀವು ಇಲ್ಲಿ ಇರುವತನಕ ಇವರು ನನ್ನನ್ನು ಕೃಪಾದೃಷ್ಟಿಯಿಂದ ನೋಡರು" ಎಂದು ಹೇಳಲು, ಆ ತರುಣನು ನಿರುಪಾಯನಾಗಿ ಅಲ್ಲಿಂದ ಹೊರಟು ಹೋದನು. ಆತನು ಹೋದಬಳಿಕ ಆ ಸ್ತ್ರೀಯು ಬಾಲ ಗೋಸಾವಿಯ ಬಳಿಗೆ ಹೋಗಿ ಆತನ ಕಿವಿಯಲ್ಲಿ ಏನೋ ಹೇಳಿದಳು; ಅದನ್ನು ಕೇಳಿದಕೂಡಲೆ ಬಾಲಗೋಸಾವಿಯ ಮುಖಲಕ್ಷಣವು ವಿಲಕ್ಷಣವಾಯಿತು. ಕ್ಷಣಹೊತ್ತು ಆತನು ಭೂಮಿಯನ್ನು ನೋಡುತ್ತ ಸುಮ್ಮನೆ ಕುಳಿತುಕೊಂಡನು. ಆ ಸ್ತ್ರೀಯ ಮುಖವನ್ನು ಕೂಡ ಆತನು ನೋಡದಾದನು. ಯಾವದೋ ಗಹನ ವಿಚಾರದಲ್ಲಿ ಆತನು ಮಗ್ನವಾದಂತೆ ತೋರಿತು. ಸ್ವಲ್ಪ ಹೊತ್ತಿನ ಮೇಲೆ ಆತನು ಆ ಸ್ತ್ರೀಯನ್ನು ಕುರಿತು—

ಬಾಲಗೋಸಾವಿ—ಅದಕ್ಕಾಗಿಯೇ ನಾವು ಜನವಸತಿಯಿಂದ ಇಷ್ಟು ದೂರದಲ್ಲಿ ವಾಸಿಸುತ್ತೇವೆ; ಆದರೂ ನಿಮ್ಮಂಥವರ ತ್ರಾಸವು ನಮಗೆ ತಪ್ಪಲೊಲ್ಲದು.

ಸ್ತ್ರೀಯು—ಮಹಾರಾಜ, ನನ್ನನ್ನು ತ್ರಾಸಕೊಡುವವರಲ್ಲಿ ಯಾಕೆ ಎಣಿಸುತ್ತೀರಿ? ಸೇವಕರಲ್ಲಿ ಎಣಿಸಿರಿ. ಸಂಸಾರದಲ್ಲಿ ನನಗೆ ಒದಗಿರುವ ವಿಪತ್ತುಗಳನ್ನು ತಾವು ಕೇಳಿದರೆ, ನಾನು ತಮ್ಮ ಅನುಗ್ರಹವನ್ನು ಬಯಸುವದು ಅಯೋಗ್ಯವಲ್ಲೆಂದು ತಮಗೇ ತೋರಬಹುದು. ತಾವು ನನಗೆ ಈಶ್ವರ ಸ್ವರೂಪವಾಗಿ ತೋರುವಿರಿ. ನನ್ನನ್ನು ಹೊರಗೈಯಿಂದ ಹೊಡೆಯ ಬೇಡಿರಿ; ಅನುಗ್ರಹಿಸಿರಿ.

ಆ ಸ್ತ್ರೀಯು ಹೀಗೆ ಮಾತಾಡುವಾಗ ಬಾಲಗೋಸಾವಿಯು ಸುಮ್ಮನೆ ಕುಳಿತು ಕೊಂಡಿದ್ದನು. ಆಕೆಯ ಮಾತಿನ ಕಡೆಗೆ ಅವನ ಲಕ್ಷವಿದ್ದಂತೆ ತೋರಲಿಲ್ಲ. ಈ ಸ್ತ್ರೀಯಂತೂ ಇಲ್ಲಿಂದ ಹೋಗುವಹಾಗೆ ತೋರುವದಿಲ್ಲ. ಈಕೆಯನ್ನು ಇಟ್ಟುಕೊಳ್ಳುವದು ನಮಗೆ ಇಷ್ಟವಾಗಿಲ್ಲ, ನಮ್ಮ ಕಾರ್ಯಕ್ಕೆ ಈಕೆಯಿಂದ ವಿಘ್ನವೇ ಆದೀತು. ಇನ್ನು ಈಕೆಯನ್ನು ಹೊರಗೆ ಹಾಕಲಿಕ್ಕೆ ಏನು ಉಪಾಯವನ್ನು ಮಾಡಬೇಕಾದೀತು? ಎಂದು ಗೋಸಾವಿಯು

ಆಲೋಚಿಸುತ್ತಿರಲು, ಆ ಸ್ತ್ರೀಯು ಮತ್ತೆ ಆತನನ್ನು ಕುರಿತು— "ಮಹಾರಾಜ, ಬೇಕಾದರೆ ನನ್ನ ಮನಸ್ಸನ್ನು ಬೇಕಾದ ಹಾಗೆ ಪರೀಕ್ಷಿಸಬೇಕು. ನಾನು ತಮ್ಮನ್ನು ಬಿಟ್ಟು ಹೋಗುವಹಾಗಿಲ್ಲ. ನನ್ನನ್ನು ಕೊಂದರೂ ಚಿಂತೆಯಿಲ್ಲ. ನಿಮ್ಮನ್ನು ಬಿಟ್ಟು ಹೋಗುವದಿಲ್ಲ. ಸಂಸಾರ ತಾಪದಿಂದ ನಾನು ಜರ್ಜರ ಳಾಗಿದ್ದೇನೆ. ನನಗೆ ಶಾಂತಿಯನ್ನು ಕೊಡಿರಿ. ಹರಿಸ್ಮರಣ ಮಾಡುತ್ತ ತಮ್ಮ ಸೇವೆಯಲ್ಲಿ ಸಮಾಧಾನದಿಂದ ಶೇಷಾಯುಷ್ಯವನ್ನು ಕಳೆಯುವೆನು; ಎಂದು ಇನ್ನೂ ಏನೇನೋ ಮಾತಾಡುತ್ತಿದ್ದಳು. ಅಷ್ಟರಲ್ಲಿ ಬಾಲಗೋಸಾವಿಯು—

ಬಾಲಗೋಸಾವಿ—ನಾನು ನಿನ್ನನ್ನು ಇಟ್ಟುಕೊಳ್ಳದಿದ್ದರೆ, ನನ್ನ ಕಿವಿಯಲ್ಲಿ ನೀನು ಹೇಳಿದ ಮಾತನ್ನು ನೀನು ಮಂದಿಯ ಮುಂದೆ ಹೇಳಬಹುದು. ಆದರೆ ಹೇಳುವದರಿಂದ ಆಗುವದೇನು? ನಾವು ಮನುಷ್ಯರಿರುವಲ್ಲಿ ಇರುವಹಾಗೆಯೇ ಇಲ್ಲ. ಸುತ್ತು ಹತ್ತೆಂಟು ಹರದಾರಿ ಮನುಷ್ಯರ ಸುಳುವು ಸಹ ಇರದ ಅರಣ್ಯದಲ್ಲಿ ನಾವು ವಾಸಿಸುವವರು; ಅಂದಬಳಿಕ ನಿನ್ನ ಬೆದರಿಕೆಯಿಂದ ನನಗಾಗುವದೇನು?

ಸ್ತ್ರೀಯು— ಮಹಾರಾಜ, ತಮಗೆ ಬೆದರಿಕೆ ತೋರಿಸಬೇಕೆಂದು ನಾನು ತಮ್ಮ ಮುಂದೆ ಆ ಮಾತನ್ನು ಆಡಿರುವದಿಲ್ಲ. ನನ್ನ ಸೇವೆಯನ್ನು ಸ್ವೀಕರಿಸಲಿಕ್ಕೆ ತಾವು ಯೋಗ್ಯರಿರುತ್ತೀರೆಂಬದನ್ನೂ, ತಮ್ಮನ್ನು ಸೇವಿಸಲಿಕ್ಕೆ ನಾನು ಯೋಗ್ಯಳಿರುತ್ತೇನೆಂಬದನ್ನೂ ತೋರಿಸುವದಕ್ಕಾಗಿ ನಾನು ಆ ಮಾತನ್ನು ತಮ್ಮ ಕಿವಿಯಲ್ಲಿ ಹೇಳಿದ್ದೇನೆ; ಬೇರೆ ಉದ್ದೇಶವೂ ಇರುವದಿಲ್ಲ. ಇನ್ನು ಮೇಲೆ ತಮ್ಮ ಕಿವಿಯಲ್ಲಿ ಹೇಳಿದ ಮಾತನ್ನು ತಿರುಗಿ ತಮ್ಮ ಮುಂದೆ ಸಹ ಎಂದೂ ಉಚ್ಚರಿಸಲಿಕ್ಕಿಲ್ಲೆಂದು ತಮ್ಮ ಪಾದಸಾಕ್ಷಿಯಿಂದ ಹೇಳುತ್ತೇನೆ. ನನಗೆ ಯೋಗ್ಯ ಗುರುವು ದೊರೆತನೆಂಬ ಆನಂದದ ಭರದಲ್ಲಿ ಆ ಮಾತನ್ನು ತಮ್ಮ ಕಿವಿಯಲ್ಲಿ ಹೇಳಿದೆನು. ನನ್ನನ್ನು ಕ್ಷಮಿಸಿ ಉಡಿಯಲ್ಲಿ ಹಾಕಿಕೊಳ್ಳಬೇಕು. ತಮ್ಮ ಅನುಗ್ರಹವೊಂದನ್ನಲ್ಲದೆ ನಾನು ಬೇರೆ ಯಾವದನ್ನೂ ಇಚ್ಛಿಸುವದಿಲ್ಲ. ನಿಮ್ಮ ಕಾಲು ಬೀಳುವೆನು. ಏನು ಮಾಡಿದರೆ ನನ್ನ ಶುದ್ಧ ಹೃದಯವು ತಮಗ ತೋರೀತೆಂಬುದನ್ನು ಹೇಳಿದರೆ ನಾನು ಹಾಗೆ ಮಾಡುವೆನು.

ಬಾಲಗೋಸಾವಿ—ಇಷ್ಟು ದೃಢ ನಿಶ್ಚಯವಿದ್ದರೆ, ಅಥವಾ ಇಂಥ ದೃಢ ಶ್ರದ್ಧೆಯು, ನಮ್ಮ ಮೇಲೆ ಇದ್ದರೆ, ನಾವಾದರೂ ನಿನ್ನನ್ನು ಹ್ಯಾಗೆ ಹೊರಗೆ ಹಾಕಬೇಕು? ನಮ್ಮ ನಿನ್ನ ಪೂರ್ವದ ಋಣಾನುಬಂಧವಿದ್ದದ್ದರಿಂದಲೇ ನೀನು ಇಲ್ಲಿಯವರೆಗೆ—ಮನುಷ್ಯ ಸಂಚಾರವಿಲ್ಲದ ನಮ್ಮ ಬಳಿಗೆ ಬಂದಿರುತ್ತೀ. ಒಳಿತಾಯಿತು. ಇಷ್ಟು ನಿನ್ನ ನಿಶ್ಚಯವಿದ್ದರೆ ಬಿಚ್ಚು ನಿನ್ನ ಹೆರಳನ್ನು. ತೆಗೆದುಕೋ ಅಗ್ನಿಕುಂಡದ ಬಳಿಯಲ್ಲಿಯ ಬೂದಿಯನ್ನು. ಆಮೇಲೆ ಅಗೋ, ಅಲ್ಲಿ ಹರಿಯುತ್ತಿರುವ ಕೃಷ್ಣಾ ನದಿಯಲ್ಲಿ ಸ್ನಾನಮಾಡಿ ಕೂದಲುಗಳಿಗೆ ಬೂದಿಯನ್ನು. ತೊಡೆದು, ಉಳಿದ ಬೂದಿಯನ್ನು ಮೈತುಂಬ ಹಚ್ಚಿಕೊಂಡು ನನ್ನ ಬಳಿಗೆ ಬಾ. ನಿನ್ನ ಈ ಉಟ್ಟುಕೊಂಡ ಸೀರೆಯನ್ನು ಕೃಷ್ಣಾಬಾಯಿಗೆ ಅರ್ಪಿಸು. ನನ್ನ ತಲೆಗಿಂಬಿಗಿರುವ ಇನ್ನೊಂದು ಕಫನಿಯನ್ನು ತೊಟ್ಟುಕೊಂಡು ಲಂಗೋಟಿಯನ್ನು ಹಾಕಿಕೊ. ಆಮೇಲೆ ನಿನಗೆ ಗುರೂಪದೇಶ ಮಾಡುವೆನು. ಆಗುವದನ್ನು ಯಾರೂ ತಪ್ಪಿಸಲಾರರು. ನೀನು ನಮ್ಮ ಹಿತವನ್ನೇ

ಬಯಸುವವಳಾದ ಬಳಿಕ ನಾವಾದರೂ ಏಕೆ ಚಿಂತಿಸಬೇಕು? ಜಯ ಶಂಕರ! ಜಯ ಶಂಕರ! ಜಯ ಗಿರಿಜಾರಮಣ! ಜಯ ಗಿರಿಜಾರಮಣ!!

ಬಾಲಗೋಸಾವಿಯ ಮುಖದಿಂದ ಇಷ್ಟು ಮಾತುಗಳು ಹೊರಡುವದೊಂದೇ ತಡ, ಆ ಸ್ತ್ರೀಯು ಹೆರಳು ಬಿಚ್ಚಿ ತಟ್ಟನೆ ಎದ್ದುಹೋಗಿ ಕುಂಡದ ಬಳಿಯಲ್ಲಿದ್ದ ಬೂದಿಯ ರಾಶಿಯೊಳಗಿಂದ ಮತ್ತಿಷ್ಟು ಬೂದಿಯನ್ನು ಉಡಿಯಲ್ಲಿ ಕಟ್ಟಿಕೊಂಡಳು. ಗೋಸಾವಿಯನ್ನು ತಿರುಗಿ ಏನೂ ಕೇಳದೆ, ಗುಡಿಸಿಲೊಳಗಿನ ಬಿಳಿಯ ಕಫನಿಯನ್ನೂ, ಲಂಗೋಟಿಯನ್ನೂ ತಕ್ಕೊಂಡು ನದಿಯ ಹಾದಿಯನ್ನು ಹಿಡಿದಳು. ಆಕೆಯು ಕೃಷ್ಣೆಯಲ್ಲಿ ಮೂರುಸಾರೆ ಮುಣುಗುಹಾಕಿ, ಬಹಳ ಬೂದಿಯನ್ನು ತನ್ನ ತಲೆಗೂದಲುಗಳಿಗೆ ಚನ್ನಾಗಿ ಬಳಿದು, ಉಳಿದದ್ದನ್ನು ಮೈಗೆ ಹಚ್ಚಿಕೊಂಡು, ಕೌಪೀನ ಹಾಕಿಕೊಂಡು ನಿಜವಾಗಿಯೇ ತನ್ನ ಸೀರೆಯನ್ನು ಕೃಷ್ಣಾಬಾಯಿಗೆ ಅರ್ಪಿಸಿದಳು. ಬಳಿಕ ಬಿಳಿಯ ಕಫನಿಯನ್ನು ತೊಟ್ಟುಕೊಂಡು, ''ಜಯ ಶಂಕರ! ಜಯ ಶಂಕರ! ಜಯ ಗಿರಿಜಾರಮಣ, ಜಯ ಗಿರಿಜಾರಮಣ!'' ಎಂದು ಆಕೆಯು ನಾಮಘೋಷ ಮಾಡುತ್ತ ತನ್ನ ಗುರುವಾದ ಬಾಲಗೋಸಾವಿಯ ಬಳಿಗೆ ಬಂದಳು. ಆಕೆಯ ಚಾಪಲ್ಯವನ್ನೂ, ಆಜ್ಞಾಪಾಲನದ ನಿಷ್ಕಲಂಕವಾದ ರೀತಿಯನ್ನೂ ನೋಡಿ, ಬಾಲಗೋಸಾವಿಯು ಬೆರಗಾದನು. ಆತನು ಆ ಸ್ತ್ರೀಯನ್ನು ಕುರಿತು— ಒಳಿತಾಯಿತು. ಇನ್ನು ನಾಳೆ ನಾನು ನಿನಗೆ ಮಂತ್ರವನ್ನು ಉಪ ದೇಶಿಸುವೆನು; ಆದರೆ ಅದಕ್ಕೂ ಮೊದಲು ನೀನು ಒಂದೆರಡು ಕೆಲಸಗಳನ್ನು ಮಾಡಬೇಕಾಗಿದೆ, ಮಾಡುವೆಯಾ?

ಸ್ತ್ರೀಯು—ಅವಶ್ಯವಾಗಿ ಮಾಡುವೆನು. ತಮ್ಮ ಅಪ್ಪಣೆಗೆ ನಾನು ಹೊರಗಾದವಳಲ್ಲ, ತಾವು ನನ್ನ ಮನಸ್ಸನ್ನು ಪರೀಕ್ಷಿಸುವದಿದ್ದರೆ ಪರೀಕ್ಷಿಸಿರಿ. ತಮ್ಮ ಆಜ್ಞೆಯೇ ನನಗೆ ವೇದವಾಕ್ಯವು.

ಬಾಲಗೋಸಾವಿ—ನಾವು ಆಜ್ಞಾಪಿಸುವೆವು; ಆದರೆ ನಮ್ಮ ಆಜ್ಞೆಯನ್ನು ಅಕ್ಷರಶಃ ಪಾಲಿಸುವ ಬಗ್ಗೆ ನೀನು ಪ್ರತಿಜ್ಞೆ ಮಾಡಬೇಕು.

ಸ್ತ್ರೀಯು—ಅಕ್ಷರಶಃ ಪಾಲಿಸುವೆನು; ಒಂದು ಅಕ್ಷರ ಬಿಡದೆ ಪಾಲಿಸುವೆನು.

ಬಾಲಗೋಸಾವಿ—ನೀನು ನನ್ನನು ನೋಡಿ ಇನ್ನೂ ಎರಡು ತಾಸು ಸಹ ಪೂರಾ ಆಗಿಲ್ಲ; ಇಷ್ಟರಲ್ಲಿ ನನ್ನ ಮೇಲೆ ಈ ಪರಿ ವಿಶ್ವಾಸ ಮಾಡುವದು ವಿಚಿತ್ರ ಸಂಗತಿಯೇ ಸರಿ.

ಸ್ತ್ರೀಯು—ತಮಗೆ ವಿಚಿತ್ರವಾಗಿ ತೋರಿರಬಹುದು; ಆದರೆ ನಾನು ಸಂಸಾರದ ವಿಷಯವಾಗಿ ತಿರಸ್ಕಾರ ಬುದ್ಧಿಯನ್ನು ತಾಳಿ, ಸ್ವತಃ ಸಿದ್ಧ ಬೈರಾಗಿಯಾಗಿ ತೀರ್ಥಯಾತ್ರೆಗಳನ್ನು ಮಾಡುತ್ತ ಸಂಚರಿಸಬೇಕೆಂದು ಇಚ್ಛಿಸುತ್ತಿದ್ದೆನು. ಅಷ್ಟರಲ್ಲಿ ತಮ್ಮ ವೈರಾಗ್ಯಪೂರ್ಣವಾದ ಈ ಸುಂದರ ಮೂರ್ತಿಯ ದರ್ಶನವಾದದ್ದರಿಂದ, ತಮ್ಮ ಮೇಲೆ ಈ ಪರಿಯ ನನ್ನ ವಿಶ್ವಾಸವು ಕುಳಿತರಬಹುದು; ಅಥವಾ ತಮ್ಮ ಮೇಲೆ ಶ್ರೀ ಶಂಕರನ ಕೃಪೆಯು ಪೂರ್ಣವಾಗಿದ್ದದ್ದು ನನ್ನ ಅನುಭವಕ್ಕೆ ಬಂದಿರಬಹುದು. ಏನೇ ಕಾರಣವಿರಲಿ, ತಮ್ಮ ಮೇಲೆ ನನ್ನ ದೃಢಶ್ರದ್ಧೆಯು

ಕುಳಿತಿ ರುವದೇನೋ ನಿಜ. ನೀವು ಈ ಗುಡ್ಡದಿಂದ ಕೆಳಗೆ ಹಾರಿಕೊಳ್ಳೆಂದರೆ ನಾನು ಹಾರಿಕೊಳ್ಳಲಿಕ್ಕೆ ಸಿದ್ಧಳಿದ್ದೇನೆ.

ಬಾಲಗೋಸಾವಿ— ಛೀ, ಛೀ, ಛೀ! ಹೀಗೆ ವ್ಯರ್ಥವಾದ ಮಾತುಗಳನ್ನು ಆಡಬೇಡ. ಬಾಯಿಂದ ಅಂದಂತೆ ಕೈಯಿಂದ ಮಾಡುವದು ಕಠಿಣವು! ಸಾಧಾರಣವಾದ ನಮ್ಮ ಆಜ್ಞೆಗಳನ್ನು ಪಾಲಿಸುವದೇ ಕಠಣವಾಗಿರಲು, ಪ್ರಾಣವನ್ನರ್ಪಿಸುವ ಮಾತೇಕೆ?

ಸ್ತ್ರೀಯು— ಮಹಾರಾಜ, ಅಪ್ಪಣೆಯನ್ನಾದರೂ ಮಾಡಿ ನೋಡಿರಿ. ನಾನು ಪಾಲಿಸುವೆನೋ ಇಲ್ಲವೋ ಎಂಬುದರ ಪರೀಕ್ಷೆಯು ತಾನೇ ಆಗುವದು.

ಬಾಲಗೋಸಾವಿ— ಆಗಲಿ, ನಾವು ನಿನ್ನನ್ನು ಆಜ್ಞಾಪಿಸುವೆವು. ಮೊದಲು ನೀನು ನಮ್ಮ ಚರಣಗಳ ಮೇಲೆ ಹಸ್ತವನ್ನಿಡು.

ಕೂಡಲೆ ಆ ಸ್ತ್ರೀಯು ತನ್ನವೆರಡೂ ಹಸ್ತಗಳನ್ನು ಗೋಸಾವಿಯ ಪಾದಗಳ ಮೇಲೆ ಇಟ್ಟಳು; ಮತ್ತು ಸದ್ಗುರುವು ತನ್ನನ್ನು ಏನೆಂದು ಆಜ್ಞಾಪಿಸುವನೆಂಬದನ್ನು ತತ್ಪರತೆಯಿಂದ ನಿರೀಕ್ಷಿಸುವಂತೆ, ತನ್ನ ಗುರುವಿನ ಮುಖವನ್ನು ಎವೆಯಿಕ್ಕದೆ ನೋಡುತ್ತ ಕುಳಿತುಕೊಂಡಳು. ಬಾಲಗೋಸಾವಿಯು ಕೆಲಹೊತ್ತು ಸುಮ್ಮನೆ ಕುಳಿತುಕೊಂಡನು. ಆಮೇಲೆ ಆ ಸ್ತ್ರೀಯನ್ನು ಕುರಿತುಃ— ಮೊದಲನೆಯ ನನ್ನ ಆಜ್ಞೆಯನ್ನು ಕೇಳು; ಅದರಂತೆ ನಡೆಯುವೆನೆಂದು ಆಣೆಮಾಡಿ ಹೇಳು— ''ಈ ಸ್ಥಳದಲ್ಲಿ ನನ್ನ ಕಣ್ಣಿಗೆ ಬೀಳುವ ಸಂಗತಿಗಳು ಎಷ್ಟೇ ಅಘೋರವಾಗಿರಲಿ, ಎಷ್ಟೇ ಕ್ರೂರವಾಗಿರಲಿ, ಅವನ್ನು ಎಲ್ಲಿಯೂ ಬಾಯಿಂದ ಉಚ್ಚರಿಸುವದಿಲ್ಲ; ಮತ್ತು ಹೀಗೇಕೆ? ಹಾಗೇಕೆಯೆಂದು ಪ್ರಶ್ನವನ್ನು ಮಾಡುವದಿಲ್ಲ.''

ಈ ಆಜ್ಞೆಯನ್ನು ಕೇಳಿ ಆ ಸ್ತ್ರೀಯು ಸ್ವಲ್ಪ ಬೆದರಿದಳು; ಆದರೆ ಒಂದು ಕ್ಷಣವಾದರೂ ವಿಲಂಬಮಾಡದೆ ಅದರಂತೆ ನಡೆಯುವ ಬಗ್ಗೆ ಆಕೆಯು ಪ್ರತಿಜ್ಞೆ ಮಾಡಿದಳು. ಆಮೇಲೆ ಗೋಸಾವಿಯು ಮತ್ತೆ ಆ ಸ್ತ್ರೀಯನ್ನು ಕುರಿತು— ಇಷ್ಟಕ್ಕೆ ತೀರಲಿಲ್ಲ. ಇನ್ನೊಂದು ಪ್ರತಿಜ್ಞೆಯನ್ನು ನೀನು ಮಾಡಬೇಕು; ಅದೇನಂದರೆ— ''ಈ ಸ್ಥಳದಲ್ಲಿ ನನ್ನ ಕಿವಿಗೆ ಏನೇ ಬೀಳಲಿ, ಅದು ಎಷ್ಟೇ ಅಘೋರವಾದದ್ದೂ–ಕ್ರೂರವಾದದ್ದೂ ಇರಲಿ, ಅದನ್ನು ಎಲ್ಲಿಯೂ ಉಚ್ಚರಿಸಲಿಕ್ಕಿಲ್ಲ; ಮತ್ತು ಹೀಗೆಯೇಕೆ? ಹಾಗೆಯೇಕೆ? ಎಂದು ಪ್ರಶ್ನ ಮಾಡಲಿಕ್ಕಿಲ್ಲ'' ಅದರಂತೆಯೂ ಆ ಸ್ತ್ರೀಯು ಉಚ್ಚರಿಸಿ ಪ್ರತಿಜ್ಞೆ ಮಾಡಿದಳು. ಆಮೇಲೆ ಆ ಬಾಲಗೋಸಾವಿಯು ಆ ಸ್ತ್ರೀಯನ್ನು ಕುರಿತು— ನೀನು ಎರಡು ಪ್ರತಿಜ್ಞೆಗಳನ್ನು ಮಾಡಿದೆ. ಇನ್ನೊಂದು ಕಡೆಯ ಪ್ರತಿಜ್ಞೆಯನ್ನು ಮಾಡತಕ್ಕದ್ದು. ಇದನ್ನು ಹೇಳುವೆನು ಕೇಳು— ''ಈ ಸ್ಥಳದಲ್ಲಿ ಯಾವ ಕೆಲಸವನ್ನು ಮಾಡೆಂದು ನೀವು ಆಜ್ಞಾಪಿಸುವಿರಿ, ಆ ಕೆಲಸವು ಎಷ್ಟೇ ಅಘೋರವಾಗಿರಲಿ, ಎಷ್ಟೇ ಕ್ರೂರವಾಗಿರಲಿ ಅದನ್ನು ನಾನು ಮಾಡುವೆನು; ಹೀಗೆ ಯಾಕೆ? ಹಾಗೆ ಯಾಕೆ ಎಂದು ಪ್ರಶ್ನೆ ಮಾಡಲಿಕ್ಕಿಲ್ಲ.''

ಈ ಪ್ರತಿಜ್ಞೆಯನ್ನು ಮಾಡುವ ಪೂರ್ವದಲ್ಲಿ ಮಾತ್ರ ಆ ಸ್ತ್ರೀಯು ಬಹಳ ಹೊತ್ತು ವಿಚಾರ ಮಾಡುತ್ತ ಸುಮ್ಮನೆ ಕುಳಿತುಕೊಂಡಳು. ಆ ವಾಕ್ಯಗಳ ಅರ್ಥವೇ ಆಕೆಗೆ ತಿಳಿದಂತೆ

ತೋರಲಿಲ್ಲ. ಆಕೆಯು ಹೀಗೆ ಸುಮ್ಮನೆ ಇರುವದನ್ನು ನೋಡಿ ಬಾಲಗೋಸಾವಿಯು ಆ ಸ್ತ್ರೀಯನ್ನು ಕುರಿತು— ''ಇಷ್ಟರಲ್ಲಿಯೇ ನನ್ನ ಮೇಲಿನ ನಿನ್ನ ಶ್ರದ್ಧೆಯು ಕಡಿಮೆಯಾಯಿತೇನು? ಯಾಕೆ ಸುಮ್ಮನಾದೆ? ನಾನು ನಿನಗೆ ಅನ್ಯರ ಪ್ರಾಣಹರಣ ಮಾಡಲಿಕ್ಕೆ ಆಜ್ಞಾಪಿಸುವೆನೆಂದು ತಿಳಿದೆಯೋ?'' ಎಂದು ಕೇಳಿದನು; ಆದರೆ ಆತನ ಮಾತಿನ ಕಡೆಗೆ ಲಕ್ಷಗೊಡದೆ ಆ ಸ್ತ್ರೀಯು ಮೇಲೆ ಹೇಳಿದಂತೆ ಗಟ್ಟಿಯಾಗಿ ನುಡಿದು ಪ್ರತಿಜ್ಞೆ ಮಾಡಿದಳು. ಅದನ್ನು ಕೇಳಿ ಬಾಲಗೋಸಾವಿಗೆ ಬಹಳ ಸಮಾಧಾನವಾಯಿತು. ಆಗ ಆತನು ಆ ಸ್ತ್ರೀಯನ್ನು ನೋಡಿ ಆಕೆಯನ್ನು ಕುರಿತು— ನೀನು ಪ್ರತಿಜ್ಞೆಯನ್ನೇನೋ ಮಾಡಿದೆ; ಆದರೆ ಅವನ್ನು ಪಾಲಿಸಲು ಶಕ್ಯವಿರುವದೋ ಇಲ್ಲವೋ ಎಂಬದನ್ನು ಕುರಿತು ಇನ್ನೊಮ್ಮೆ ಶಾಂತಚಿತ್ತದಿಂದ ವಿಚಾರ ಮಾಡು. ಅಶಕ್ಯವೆಂದು ತೋರಿದರೆ ನಿನ್ನ ಪ್ರತಿಜ್ಞೆಗಳನ್ನು ನೀನು ತಿರುಗಿ ತಕ್ಕೊಳ್ಳಬಹುದು. ನಿನಗೆ ನಾನು ಇಲ್ಲಿಂದ ಹೊರಟು ಹೋಗಲಿಕ್ಕೆ, ಬೇಕಾದ ಕಡೆಗೆ ಹೋಗಲಿಕ್ಕೆ ಒಪ್ಪಿಗೆಯನ್ನು ಕೊಡುವೆನು, ಎಂದು ಹೇಳಿದನು; ಆದರೆ ಅದಕ್ಕೆ ಆ ಸ್ತ್ರೀಯು ಸ್ವಲ್ಪ ಸಿಟ್ಟಿನಿಂದ— ''ಇನ್ನು ಮೇಲೆ ನನ್ನ ವಿಷಯವಾಗಿ ನೀವು ಸ್ವಲ್ಪವಾದರೂ ಸಂಶಯಪಡಬೇಡಿರಿ. ಇನ್ನು ಸಂಶಯವೇಕೆ? ಏನಾಗುವ ಫಲಭೋಗವನ್ನು ಭೋಗಿಸಲಿಕ್ಕೆ ನಾನು ಸಿದ್ಧಳೇ ಇರುತ್ತೇನೆ. ಇನ್ನು ಎರಡನೆಯ ಮಾತೇಕೆ?

ಸ್ತ್ರೀಯ ಈ ಮಾತುಗಳನ್ನು ಕೇಳಿ ಬಾಲಗೋಸಾವಿಯು ನಿಶ್ಚಿಂತನಾದನು. ಈ ಸುಂದರಿಯು ಸಾಮಾನ್ಯ ಕುಲದಲ್ಲಿ ಉತ್ಪನ್ನಳಾದವಳಿರಲಿಕ್ಕಿಲ್ಲ. ಇಂಥವಳಿಗೆ ಇಂಥ ತಾರುಣ್ಯದಲ್ಲಿ ವೈರಾಗ್ಯವು ಯಾಕೆ ಉತ್ಪನ್ನವಾಗಿರಬಹುದು? ನನ್ನ ಮೇಲೆ ಈಕೆಯ ಶ್ರದ್ಧೆಯು ಈ ಪರಿ ಕೂಡಲಿಕ್ಕೆ ಅಂಥ ಕಾರಣವೇನಿರುತ್ತದೆಂಬದು, ಈಕೆಯ ಚರಿತ್ರ ಶ್ರವಣದಿಂದ ಗೊತ್ತಾಗಬಹುದು; ಆದ್ದರಿಂದ ಈಕೆಯ ವೃತ್ತಾಂತವನ್ನು ಮೊದಲು ತಿಳಿದು ಕೊಳ್ಳೋಣ, ಎಂದು ಯೋಚಿಸಿ, ಆ ಸ್ತ್ರೀಯನ್ನು ಕುರಿತು— 'ಭದ್ರೇ' ಇನ್ನು ನೀನು ನನ್ನ ಶಿಷ್ಯಪ್ರಕೋಟಿಯಲ್ಲಿ ಸೇರಿದೆ. ನಿನ್ನ ಗುರುವಿನ ಮುಂದೆ, ಆತನು ಮಂತ್ರೋಪದೇಶ ಮಾಡುವ ಮೊದಲು ನಿನ್ನ ನಿಜವಾದ ವೃತ್ತಾಂತವನ್ನು ಹೇಳು, ಎಂದು ನುಡಿಯಲು, ಆ ಭಾವಿಕಳಾದ ಸ್ತ್ರೀಯು ನಿಶ್ಶಂಕೆಯಿಂದ ತನ್ನ ಗುರುವನ್ನು ಕುರಿತು— ''ಮಹಾತ್ಮರೇ, ತಮ್ಮ ಆಜ್ಞೆಯಂತೆ ನನ್ನ ವೃತ್ತಾಂತವನ್ನು ಹೇಳುವೆನು ಕೇಳಿರಿ,'' ಎಂದು ನುಡಿದು, ತನ್ನ ವೃತ್ತಾಂತವನ್ನು ಹೇಳತೊಡಗಿದಳು. ಆ ಸ್ತ್ರೀಯು ಬಾಲಗೋಸಾವಿಗೆ ಅಪರಿಚಿತಳಾಗಿದ್ದರೂ, ವಾಚಕರಿಗೆ ಅಪರಿಚಿತಳಲ್ಲ. ಹಿಂದಕ್ಕೆ ಪಠಾಣರ ಕೈಯಲ್ಲಿ ಸಿಕ್ಕು, ಸರ್ಜೇರಾಯನಿಂದ ಬಿಡುಗಡೆ ಹೊಂದಿ, ಒಬ್ಬ ದೇಶಮುಖನ ಆಶ್ರಯವನ್ನು ಹೊಂದಿದ ಸ್ತ್ರೀಯು ಈಕೆಯೇ, ಈ ಸ್ತ್ರೀಯು ದೇಶಮುಖನ ಮನೆಯಲ್ಲಿದ್ದಾಗ ಪಠಾಣರು ಸಿಟ್ಟಿನಿಂದ ಅವನ ಊರ ಮೇಲೆ ದಾಳಿ ಮಾಡಿದರು. ಆಗ ಊರವರು ಪಠಾಣರೊಡನೆ ಒಕ್ಕಟ್ಟಿನಿಂದ ಕಾದಿದರೂ ಕಡೆಗೆ ಸೋಲಬೇಕಾಯಿತು. ಪಠಾಣರು ಆ ಸ್ತ್ರೀಯನ್ನು ನಮಗೆ ಒಪ್ಪಿಸಿರೆಂದು ಹಟ ಹಿಡಿದರು.

ಊರವರು ತಮ್ಮ ಆಶ್ರಿತಳನ್ನು ಒಪ್ಪಿಸಲು ಒಡಂಬಡಲೊಲ್ಲರು. ಹೀಗೆ ಅರೆದಾಟವು ನಡೆದಿರುವಾಗ ಆ ಸ್ತ್ರೀಯು— "ನನ್ನಿಂದ ಮಂದಿಗೆ ಸುಮ್ಮನೆ ತ್ರಾಸವೇಕೆ? ನಾನಿದ್ದಲ್ಲಿ ಕಷ್ಟಗಳು ಒದಗುವ ಯೋಗವಿದ್ದಂತೆ ತೋರುತ್ತದೆ. ನಾನೇ ಎಲ್ಲಿಗಾದರೂ ಹೋಗಿಬಿಡಬೇಕು," ಎಂದು ಯೋಚಿಸಿ ಯಾರಿಗೂ ಹೇಳದೆ ಕೇಳದೆ ದೇಶಮುಖನ ಮನೆಯೊಳಗಿಂದ ರಾತ್ರಿ ಹೊರಬಿದ್ದು ನಡೆದಳು. ಹಾದಿಯಲ್ಲಿ ಆಕೆಯು ಪರಿಪರಿಯ ಕಷ್ಟಗಳನ್ನು ಅನುಭೋಗಿಸ ಬೇಕಾಯಿತು; ಹೊಟ್ಟೆಗಿಲ್ಲದೆ ಬಳಲಬೇಕಾಯಿತು. ಆಕೆಯು ಮಾರ್ಗಾಯಾ ಸದಿಂದಲೂ, ಉಪೋಷಣದ ಕಷ್ಟದಿಂದಲೂ ಹಾದಿಯಲ್ಲಿ ಮೂರ್ಛಿತಳಾಗಿ ಬಿದ್ದಿದ್ದಳು. ಅಷ್ಟರಲ್ಲಿ ಶಿವಾಜಿಯ ಅನುಯಾಯಿಯಾದ ಒಬ್ಬ ತರುಣ ಸರದಾರನು ಅಕಸ್ಮಾತ್ತಾಗಿ ಅಲ್ಲಿಗೆ ಬಂದು ಆಕೆಯನ್ನು ಉಪಚರಿಸಿ ಎಚ್ಚರಗೊಳಿಸಿದನು. ಪೌಷ್ಟಿಕವೂ, ಸ್ವಾದಿಷ್ಟವೂ ಆದ ಗಡ್ಡೆಗಳನ್ನು ಆಕೆಗೆ ತಿನ್ನಲಿಕ್ಕೆ ಕೊಟ್ಟನು.ಇಂಥ ಕಂದ ಮೂಲಗಳು ಶಿವಾಜಿಯ ಜನರಿಗೆ ಹಲವು ಗೊತ್ತಿದ್ದವು. ಆ ಸ್ತ್ರೀಯು ವಿಶ್ರಮಿಸಿಕೊಂಡ ಬಳಿಕ ವಿರಕ್ತಿಯನ್ನು ತಾಳಿದಳು! ಈ ಉದಾರಾಂತಃಕರಣದ ತರುಣನು ತನ್ನನ್ನು ಬದುಕಿಸದಿದ್ದರೆ ಅನಾಯಾಸವಾಗಿಯೇ ತಾನು ಸಾಂಸಾರಿಕ ಯಾತನೆಯಿಂದ ಮುಕ್ತಳಾಗುತ್ತಿದ್ದೆನೆಂದು ಪಶ್ಚಾತ್ತಾಪಪಟ್ಟಳು. ಆಕೆಗೆ ತನ್ನ ಜೀವವು ಬೇಡಾಗಿತ್ತು, ತನ್ನ ಪತಿಯು ಮರಣ ಹೊಂದಿದನೆಂಬ ಸುದ್ದಿಯನ್ನು ಪಠಾಣರ ಮುಖದಿಂದ ಕೇಳಿದಾಗಿನಿಂದಲೇ ಆಕೆಯು ಉದಾಸೀನಳಾಗಿದ್ದಳು. ಈಗ ಒಂದರ ಹಿಂದೊಂದು ಕಷ್ಟಗಳು ಒದಗಿ, ತನ್ನಿಂದ ಜನರಿಗೆ ತೊಂದರೆಯಾಗಹತ್ತಿದ ಬಳಿಕಂತಲೂ, ಆಕೆಗೆ ವೈರಾಗ್ಯವು ಮತ್ತಿಷ್ಟು ಉತ್ಪನ್ನವಾಯಿತು. ಆಕೆಯು ಆ ತರುಣನ ಉಪಕಾರವನ್ನು ಸ್ಮರಿಸಿ, ಇನ್ನು ತಾನು ಬೈರಾಗಿಯಾಗಿ ತೀರ್ಥ–ಯಾತ್ರೆಗಳನ್ನು ಮಾಡುತ್ತ ಸಂಚರಿಸುವೆನೆಂದು ಹೇಳಿದಳು. ಅದಕ್ಕೆ ಆ ತರುಣನು ಒಪ್ಪದೆ, ನೀವು ಮಹಾರಾಜರ ಬಳಿಗೆ ಬರಬೇಕೆಂತಲೂ, ಜೀಜಾಬಾಯಿ ಸಾಹೇಬರವರು ನಿಮ್ಮ ಪರಾಮರ್ಶವನ್ನು ಮಾಡಿ ನಿಮ್ಮ ಪತಿಯ ಶೋಧವನ್ನು ಮಾಡಿಸುವರೆಂತಲೂ ಪರಿಪರಿಯಾಗಿ ಹೇಳಿ, ನನ್ನ ಸಂಗಡಲೇ ಬರಬೇಕೆಂದು ಆಗ್ರಹ ಹಿಡಿದನು. ಆಗ ಆ ಸ್ತ್ರೀಯು ಆ ತರುಣನ ಸಂಗಡ ಜಾವಳಿಯ ಅರಣ್ಯವನ್ನು ಸೇರಿ, ಮೇಲೆ ಹೇಳಿದಂತೆ ಬಾಲಗೋಸಾಮಿಯ ಆಶ್ರಮಕ್ಕೆ ಬಂದಿದ್ದಳು. ಈ ಎಲ್ಲ ವೃತ್ತಾಂತವನ್ನು ಆ ಸ್ತ್ರೀಯು ತನ್ನ ಗುರುವಾದ ಬಾಲಗೋಸಾವಿಗೆ ಹೇಳಲು, ಗೋಸಾವಿಯು ಶಂಕೆಗೆ ಒಳಗಾದನು. ಶಿವಾಜಿಯ ಪ್ರಾಣಹರಣ ಮಾಡಬೇಕೆಂದು ಯತ್ನಿಸುತ್ತಿದ್ದ ನಮಗೆ, ಶಿವಾಜಿಯ ಪಕ್ಷಪಾತಿಯಾದ ಈ ಸ್ತ್ರೀಯಿಂದ ತೊಂದರೆಯಲ್ಲಿ ಆಗುವದೋ, ಎಂದು ಆತನು ಚಿಂತಿಸಿದನು. ಆದರೆ ಪ್ರತಿಜ್ಞೆ ಮಾಡಿರುವಳಲ್ಲ, ಎಂಬ ಸಮಾಧಾನದಿಂದ ಯಾವ ಮಾತನ್ನೂ ಆಡದೆ ಆ ಬಾಲಗೋಸಾವಿಯು ಸುಮ್ಮನಿದ್ದನು.

# ಅಪಘಾತದ ಸುಳುವು

ಜಾವಳಿಯ ಅರಣ್ಯದಲ್ಲಿ ಮಾರ್ಗವನ್ನು ನೋಡಿ ಬರುವದಕ್ಕಾಗಿ ಏಸಾಜಿಯನ್ನೂ, ಖಂಡೇರಾಯನನ್ನೂ ಮಹಾರಾಜರು ಕಳಿಸಿ ಕೊಟ್ಟಿದ್ದರಷ್ಟೇ? ಆದರೆ ನಾಲ್ಕು ದಿವಸ ಗಳಾದರೂ ಅವರ ವರ್ತಮಾನವೇ ಇಲ್ಲದ್ದರಿಂದ ಮಹಾರಾಜರಿಗೆ ಅಸಮಾಧಾನವಾಯಿತು. ಖಂಡೇರಾಯನು ಜಾವಳಿಯ ಸುಭೆಯಲ್ಲಿಯೇ ದೊಡ್ಡವನಾಗಿದ್ದನು. ಮೇಲಾಗಿ ಚಿಕ್ಕಂದಿ ನಿಂದಲೇ ಅವನು ಜಾವಳಿಯ ಅರಣ್ಯದಲ್ಲಿ ಓಡಾಡಿದವನಾಗಿದ್ದನು. ಆದ್ದರಿಂದ ಅರಣ್ಯದ ಸಂದಿಗೊಂದಿಗಳು ಕೂಡ ಆತನಿಗೆ ಗೊತ್ತಿದ್ದವು. ಇದನ್ನರಿತೇ ಮಹಾರಾಜರು ಏಸಾಜಿಯ ಸಂಗಡ ಆತನನ್ನು ಕಳಿಸಿದ್ದರು. ತಮಗೆ ಅನುಕೂಲವಾದ ಮಾರ್ಗ ಯಾವ ಬಗೆಯದಿರ ಬೇಕೆಂಬದನ್ನು ಏಸಾಜಿಯ ಮುಂದೆ ಅವರು ಗುಪ್ತವಾಗಿ ಹೇಳಿದ್ದರು. ಅದರಂತೆ ತಕ್ಕ ಮಾರ್ಗವನ್ನು ಗೊತ್ತುಪಡಿಸುವದು ಏಸಾಜಿಯ ಕೆಲಸವಾಗಿತ್ತು; ಹಾಗೆಯೇ ಅರಣ್ಯದ ಬೇರೆ ಬೇರೆ ಭಾಗಗಳನ್ನು ಏಸಾಜಿಯ ಕಣ್ಣಿಗೆ ಹಾಕಿ, ಅವನಿಗೆ ಯೋಗ್ಯಸಹಾಯ ಮಾಡುವದು ಖಂಡೇರಾಯನ ಕೆಲಸವಾಗಿತ್ತು. ಮಹಾರಾಜರ ಸ್ವರಾಜ್ಯ ಸ್ಥಾಪನೆಯ ಕಾರ್ಯದಲ್ಲಿ ಅವರ ಅನುಯಾಯಿಗಳು ಅವರ ಅವಯವಗಳಂತೆ ಸಹಾಯಕರಾಗಿದ್ದರು. ಅವರಲ್ಲಿ ತಾನಾಜಿ, ಏಸಾಜಿ, ಬಾಜಿ ಇವರು ಒಂದನೆಯ ತರಗತಿಯವರಾಗಿದ್ದರು. ಇವರನ್ನು ಪ್ರತಿ ಶಿವಾಜಿ ಯಂತಲೇ ಕರೆಯಬಹುದಾಗಿತ್ತು. ಮಹಾರಾಜರ ಬಾಲ ಮಿತ್ರರಾದ ಇವರು ಮಹಾರಾಜರ ಆಜ್ಞೆಯಂತೆ ಕಾರ್ಯವನ್ನು ಸಾಧಿಸಿಕೊಂಡೇ ಬರತಕ್ಕವರು. ದುರ್ದೈವದಿಂದ ಕಾರ್ಯವು ಸಾಧಿಸದಿದ್ದರೆ ಪ್ರಾಣವನ್ನಾದರೂ ಕೊಟ್ಟಾರಲ್ಲದೆ, ಜೋಲುಮಾರಿ ಹಾಕಿಕೊಂಡು ಕೈ ಅಲ್ಲಾಡಿಸುತ್ತ ಬರುವವರಲ್ಲ! ಇದರಂತೆ ಎರಡನೆಯ ತರಗತಿಯ ಜನರೂ ಮಹಾರಾಜರ ಪ್ರಾಣಕ್ಕೆ ಪ್ರಾಣವನ್ನು ಕೊಡತಕ್ಕವರಿದ್ದರು. ಒಟ್ಟಿಗೆ, ಮಹಾರಾಜರ ಆಶ್ರಯವನ್ನು ಪಡೆದವರು ಸ್ವಾಮಿನಿಷ್ಠರೂ, ಆಜ್ಞಾಧಾರಕರೂ, ಕಾರ್ಯತತ್ಪರರೂ ಆಗಿದ್ದರು. ಮಹಾರಾಜ ರಾದರೂ ತಮ್ಮವರನ್ನು ತಮ್ಮಂತೆ ನೋಡುತ್ತಿದ್ದರು. ಕಾರ್ಯವನ್ನು ಸಾಧಿಸುವದಕ್ಕಾಗಿ ಹೋದವರು ಹೊತ್ತಿಗೆ ಸರಿಯಾಗಿ ಬಾರದಿದ್ದರೆ, ಅವರ ಯೋಗಕ್ಷೇಮವನ್ನು ವಿಚಾರಿ ಸುವದಕ್ಕಾಗಿ ಮಹಾರಾಜರು ಸ್ವತಃ ಹೊರಟರೆಂತಲೇ ತಿಳಿಯಬೇಕು. ಅವರು ಅತ್ಯಂತ ಭೃತ್ಯ ವತ್ಸಲರು. ತಮ್ಮ ಸೇವಕರನ್ನು ಸಂಕಟದಿಂದ ಮುಕ್ತ ಮಾಡುವದಕ್ಕಾಗಿ ಅವರು ತಮ್ಮ ಜೀವದ ಪರಿವೆಯಿಡುತ್ತಿದ್ದಿಲ್ಲ. ಅವರ ಈ ಗುಣಕ್ಕಾಗಿಯೇ ಸೇವಕರು ಅವರ ಸಲುವಾಗಿ ಪ್ರಾಣವನ್ನು ಅರ್ಪಿಸಲಿಕ್ಕೆ ಸಿದ್ಧರಿರುತ್ತಿದ್ದರು. ಈ ಬಗೆಯ ಸೇವ್ಯ-ಸೇವಕ ಭಾವವಿದ್ದದ್ದರಿಂದಲೇ ಸ್ವಧರ್ಮೋದ್ಧಾರದ ಕಾರ್ಯವು ಮಹಾರಾಜರಿಂದ ಸಾಧಿಸಿತು; ಮತ್ತು ಅವರೊಡನೆ ಸ್ವರಾಜ್ಯದ ಸ್ಥಾಪನೆಯೂ ಆಯಿತು.

ಖಂಡೇರಾಯನು ಹೊಸದಾಗಿಯೇ ಮಹಾರಾಜರ ಆಶ್ರಯವನ್ನು ಪಡೆದದ್ದರಿಂದ, ಅವನು ನಂಬಿಗೆಗೆ ಅಷ್ಟು ಪಾತ್ರನಾಗಿದ್ದಿಲ್ಲ. ಆತನನ್ನು ಇಟ್ಟುಕೊಳ್ಳುವಾಗಲೇ ಏಷ್ಟೋ

ಜನರು ವಿಚಾರದಿಂದ ಇಟ್ಟುಕೊಳ್ಳಬೇಕೆಂದು ಮಹಾರಾಜರಿಗೆ ಸೂಚಿಸಿದ್ದರು. ಮಹಾರಾಜರು ಮನುಷ್ಯರ ಅಂತರಂಗವನ್ನು ಪರೀಕ್ಷಿಸುವಲ್ಲಿ ಒಳ್ಳೇ ನಿಷ್ಣಾತರು. ತಮ್ಮ ಆಶ್ರಯಕ್ಕಾಗಿ ಬಂದವರ ಪೂರ್ವಾಪರ ಸಂಗತಿಗಳನ್ನು ವಿಚಾರಿಸಿ, ವಿಲಕ್ಷಣ ತರ್ಕಶಕ್ತಿಯಿಂದ ಅವರ ಅಂತರಂಗವನ್ನು ಪರೀಕ್ಷಿಸಿ ಆಶ್ರಯ ಕೊಡುತ್ತಿದ್ದರು. ಒಂದು ಪಕ್ಷದಲ್ಲಿ ವಿಶ್ವಾಸಕ್ಕೆ ಪಾತ್ರರಲ್ಲದ ಜನರು ಆಶ್ರಯಕ್ಕಾಗಿ ಬಂದರೆ, ತಮ್ಮ ಉದಾತ್ತ ಉದ್ದೇಶವನ್ನೂ, ತಮ್ಮನ್ನೂ ನೋಡಿ ಇವರು ವಿಶ್ವಾಸವುಳ್ಳ ವರಾಗುವರೆಂದು ಮಹಾರಾಜರು ದೃಢವಾಗಿ ನಂಬಿದ್ದರು. ಅಂತೇ ಕಳ್ಳರು–ಕಾಕರನ್ನು ಕೂಡ ಅವರು ಸನ್ಮಾರ್ಗಕ್ಕೆ ಹಚ್ಚಿ, ತಮ್ಮ ಸ್ವಧರ್ಮೋದ್ಧಾರದ ಕಾರ್ಯಕ್ಕೆ ಅವರನ್ನು ಸಹಾಯಕರಾಗ ಮಾಡಿಕೊಂಡಿದ್ದರು; ಆದರೂ ಬುದ್ಧಿಪೂರ್ವಕ ಮಹಾರಾಜರ ಕೇಡು ಬಗೆಯುವದಕ್ಕಾಗಿ ಬಂದವರಿಂದ ಒಮ್ಮೊಮ್ಮೆ ಮಹಾರಾಜರಿಗೆ ಅಪಾಯವಾಗುವ ಸಂಭವವಿರುತ್ತಿತ್ತು. ಅದರಂತೆ ಈಗ ಖಂಡೇರಾಯನ ಸ್ಥಿತಿಯಾಗಿತ್ತು. ಖಂಡೇರಾಯನು ಹೊತ್ತು ಸಾಧಿಸಿ ಮಹಾರಾಜರ ಸೇಡು ತೀರಿಸಿಕೊಳ್ಳುವ ಉದ್ದೇಶದಿಂದಲೇ ಅವರನ್ನು ಆಶ್ರಯಿಸಿದ್ದನು. ಇದನ್ನು ಮಹಾರಾಜರು ತಮ್ಮ ತರ್ಕ ಶಕ್ತಿಯಿಂದ ಸಾಧಾರಣವಾಗಿ ಈ ಮೊದಲೇ ಊಹಿಸಿದ್ದರಿಂದ, ಏಸಾಜಿಯು ಬಾರದೆಯಿದ್ದದ್ದಕ್ಕಾಗಿ ಅವರು ಅಸಮಾಧಾನ ಪಡುತ್ತಿದ್ದರು. ಅವರು ಸುಮ್ಮನೆ ಆಲೋಚಿಸುತ್ತ ಕುಳಿತುಕೊಳ್ಳಲಾರದೆ, ಸಂಗಡ ಮೂವರನ್ನು ಕರಕೊಂಡು ಅಶ್ವಾರೂಢರಾಗಿ ಜಾವಳಿಯ ಅರಣ್ಯಕ್ಕೆ ನಡೆದರು. ಅವರು ಪ್ರತಾಪಗಡವನ್ನು ಇಳಿದು ಬರುತ್ತಿರಲು, ಖಂಡೇರಾಯನು ಒಬ್ಬನೇ ಎದುರಿಗೆ ಬರುತ್ತಿದ್ದನು. ಅವನೊಬ್ಬನನ್ನೇ ನೋಡಿ ಮಹಾರಾಜರಿಗೆ ಬಹಳ ಅಸಮಾಧಾನ ವಾಯಿತು. ತಾವು ಯೋಚಿಸಿದಂತೆ ಏಸಾಜಿಯು ಹುಲಿಯಬಾಯಿಗೆ ತುತ್ತಾಗಿರಬಹುದೇ, ಎಂದು ಅವರು ಚಿಂತಿಸುತ್ತ, ತಮ್ಮ ಕುದುರೆಯನ್ನು ನಿಲ್ಲಿಸಿದರು.

ಮಹಾರಾಜರು ಎದುರಿಗೆ ಬರುವದನ್ನು ನೋಡಿ, ಖಂಡೇರಾಯನ ಎದೆಯು ದಸಕ್ಕೆಂದಿತು. ಆತನು ಹೊಯ್ದಾಡುವ ತನ್ನ ಮನಸ್ಸನ್ನು ಸ್ಥಿರಗೊಳಿಸಿಕೊಳ್ಳುತ್ತ ತನ್ನ ಕುದುರೆಯನ್ನು ಒತ್ತರದಿಂದ ಬಿಟ್ಟನು. ಆತನು ಮಹಾರಾಜರ ಬಳಿಗೆ ಹೋಗಿ ಪದ್ಧತಿಯಂತೆ ವಂದನ ಮಾಡಿ ಕೈಜೋಡಿಸಿ ನಿಂತುಕೊಂಡನು. ಕೈ ಮೀರಿ ಬಹು ದೊಡ್ಡ ಅನರ್ಥವು ಒದಗಿತೆಂಬ ಭಾವವು ಅವನ ಮುಖಲಕ್ಷಣದಿಂದ ವ್ಯಕ್ತವಾಗುತ್ತಿತ್ತು. ಮಹಾರಾಜರು ಒಮ್ಮೆ ಖಂಡೇರಾಯನ ಕಡೆಗೆ ನೋಡಿ ಕೂಡಲೆ ಆತನನ್ನು ಕುರಿತು —''ಖಂಡೇರಾವ, ನಿನ್ನ ಸಂಗಡ ನಮ್ಮ ಏಸಾಜಿಯು ಕಾಣುವದಿಲ್ಲ? ನೀವಿಬ್ಬರೂ ಮಾರ್ಗವನ್ನು ನೋಡಲಿಕ್ಕೆ ಹೋಗಿದ್ದಿರಲ್ಲ, ಅದರದೇನಾಯಿತು? ಏಸಾಜಿಯನ್ನು ಬಿಟ್ಟು ನೀನು ಒಬ್ಬನೇ ಹ್ಯಾಗೆ ಹೊರಟು ಬಂದೆ?'' ಎಂದು ಕೇಳಲು ಖಂಡೇರಾಯನು ಮುಖದಲ್ಲಿ ಮತ್ತಿಷ್ಟು ಶೋಕಮುದ್ರೆಯನ್ನು ತಾಳಿ—''ಏಸಾಜಿಯು ಹುಲಿಯ ಬಾಯಿಗೆ ತುತ್ತಾದನು; ನಾನು ಎಷ್ಟು ಯತ್ನಿಸಿದರೂ ಆತನನ್ನು ಉಳಿಸಿಕೊಳ್ಳುವದು ಆಗಲಿಲ್ಲ. ಇದು ಆತನ ಸೆಲ್ಲೆಯು'' ಎಂದು ನುಡಿದು ಏಸಾಜಿಯ ಸೆಲ್ಲೆಯನ್ನು ತೋರಿಸಿದನು. ಹೀಗೆ ನುಡಿಯುತ್ತಿರುವಾಗ ಮಹಾರಾಜರು

ತಮ್ಮ ತೀಕ್ಷ್ಣವಾದ ದೃಷ್ಟಿಗಳಿಂದ ಖಂಡೇರಾಯ ನನ್ನು ಎವೆಯಿಕ್ಕದೆ ನೋಡುತ್ತಲಿದ್ದರು. ನಾನು ಸುಳ್ಳು ಹೇಳುವೆನೆಂಬ ಭಾವವು ಆತನ ಮನಸ್ಸಿಗೆ ಹೊಳೆಯಲೆಂದು ಮಹಾರಾಜರು ಹೀಗೆ ನೋಡುತ್ತಿದ್ದರು. ಖಂಡೇರಾಯನ ಮುಖಲಕ್ಷಣದ ಮೇಲಿಂದಲೇ ಆತನು ಸುಳ್ಳು ಹೇಳುವನೆಂಬದನ್ನು ಮಹಾರಾಜರು ಕಂಡು ಹಿಡಿದಿದ್ದರು. ಅವರು ಖಂಡೇರಾಯನನ್ನು ಕುರಿತು–ನೀವು ಜಾವಳಿಯ ಅಡವಿಯೊಳಗಿನದೊಂದು ಹುಲಿಯಿದ್ದ ಹಾಗೆ; ಹೀಗಿದ್ದು ಹುಲಿಯ ಸಂಬಂಧದಿಂದ ಮೊದಲೇ ಯಾಕೆ ಎಚ್ಚರಪಡಲಿಲ್ಲ? ಹುಲಿಯು ಎಲ್ಲಿ ಇರುವದು, ಎಲ್ಲಿ ಇರುವದಿಲ್ಲ, ಎಂಬದನ್ನು ಮೊದಲೇ ತಿಳಕೊಳ್ಳ ಬಾರದೇನು? ನಿಮ್ಮಂತ ಗೊತ್ತಿನ ಮನುಷ್ಯರನ್ನು ನಾನೇಕೆ ಕಳಿಸಿದ್ದೇನು? ಆತನನ್ನು ಬಿಟ್ಟು ನೀವೊಬ್ಬರೇ ನನಗೆ ಮೋರೆಯನ್ನು ತೋರಿಸಲಿಕ್ಕೆ ಬಂದದ್ದು ಬಹಳ ಆಶ್ಚರ್ಯದ ಮಾತು! ನೀವು ಆ ಹುಲಿಯನ್ನು ಹೊಡೆದು ಕೊಂಡಾದರೂ ಬರಬೇಕಾಗಿತ್ತು; ಇಲ್ಲವೆ ಏಸಾಜಿಯ ಸಂಗಡ ನೀವೂ ಹುಲಿಗೆ ಬಲಿಯಾದರೂ ಆಗಬೇಕಾಗಿತ್ತು, ನಿಯಮಿಸಿದ ಕೆಲಸವನ್ನು ಮಾಡದೆ ಹೀಗೆ ಕರೀ ಮೋರೆಯಿಂದ ನನ್ನ ಬಳಿಗೆ ಬಂದವರಲ್ಲಿ ನೀನೇ ಮೊದಲನೆಯವನು. ಹೇಳು, ಯಾವ ಸ್ಥಳದಲ್ಲಿ ಏಸಾಜಿಯನ್ನು ಕೊಂದು ಬಂದೆ?

ಮೊದ ಮೊದಲು ಮಾತಾಡುವಾಗ ಮಹಾರಾಜರು ಸೌಮ್ಯವಾಗಿದ್ದರು; ಆದರೆ ಮಾತಾಡುತ್ತಾ ಹೋದಂತೆ ಅವರ ಸಿಟ್ಟು ಸ್ಪಷ್ಟವಾಗಿ ತೋರಹತ್ತಿತ್ತು. ಅದನ್ನು ನೋಡಿ ಖಂಡೇರಾಯನು ಬೆದರಿದನು; ಆದರೆ ಆ ಮೋಸಗಾರನು ತನ್ನ ಬೆದರಿಕೆಯ ಲಕ್ಷಣವನ್ನೇನು ತೋರಗೊಡದೆ, ತಾನು ನಿರಪರಾಧಿಯೆಂದು ತೋರಿಸಲು ಹೆಣಗಹತ್ತಿದನು. ಅದರಿಂದಂತು ಮಹಾರಾಜರ ಸಂಶಯವು ಮತ್ತಿಷ್ಟು ಹೆಚ್ಚಿ, ಅವರು ಇನ್ನಿಷ್ಟು ನಿಷ್ಠುರವಾಗಿ ಮಾತಾಡತಕ್ಕ ವರಿದ್ದರು; ಆದರೆ ಅಷ್ಟರಲ್ಲಿ ಮನಸ್ಸಿನೊಳಗೆ ಏನೋ ಯೋಚಿಸಿ, ಅವರು ಸೌಮ್ಯ ಮುದ್ರೆಯನ್ನು ತಾಳಿ ಖಂಡೇರಾಯನನ್ನು ಕುರಿತು –''ಎಲಾ, ನೀನು ಏಸಾಜಿಯನ್ನು ಉಳಿಸುವದಕ್ಕಾಗಿ ಏನೂ ಪ್ರಯತ್ನ ಮಾಡಿರುವದಿಲ್ಲೆಂದು, ಅಥವಾ ನೀನಾಗಿಯೇ ಏಸಾಜಿಯನ್ನು ಹುಲಿಯ ಬಾಯಿಗೆ ಕೊಟ್ಟೆಯೆಂದು ನಾನು ಅನ್ನುವದಿಲ್ಲ. ನೀನು ಅರಣ್ಯದ ಮಟ್ಟು ಬಲ್ಲವನಿದ್ದು ಇಂಥ ಅನರ್ಥವು ಯಾಕಾಯಿತೆಂದು ಕೇಳಿದೆನು. ಜಾವಳಿಯ ಅರಣ್ಯದಲ್ಲಿ ಹುಲಿಗಳು ಯಥೇಚ್ಛವೆಂಬುದನ್ನು ಎಲ್ಲರೂ ಬಲ್ಲರು; ಆದರೆ ಹುಲಿಯು ನಿಮ್ಮೊಳಗಿನವ ನೊಬ್ಬನನ್ನು ಮುರಿದು ತಿನ್ನುವಾಗ ನೀನು ಸುಮ್ಮನೆ ಹ್ಯಾಗೆಯಿದ್ದಿಯೆಂದು ನಾನು ಕೇಳಿದೆನು. ಇರಲಿ, ಆದದ್ದಾಗಿ ಹೋಯಿತು. ಏಸಾಜಿಯಂಥ ನರರತ್ನದ ಅವಶ್ಯಕತೆಯು ನಮಗೆ ವಿಶೇಷವಾಗಿಯಿತ್ತು, ಆದರೆ ಅದನ್ನು ಉಳಿಸಿಕೊಡುವದು ಅಂಬಾಬಾಯಿಯ ಮನಸ್ಸಿನಲ್ಲಿ ಇದ್ದಂತೆ ತೋರುವದಿಲ್ಲ, ಉಪಾಯವಿಲ್ಲ, ಇನ್ನು ಮಿಂಚಿ ಹೋದ ಮಾತಿಗೆ ಚಿಂತಿಸಿ ಫಲವೇನು? ಏಸಾಜಿಯನ್ನು ಹುಲಿಯು ಮುರಿದಿರುವ ಸ್ಥಳಕ್ಕೆ ನನ್ನನ್ನು ಕರಕೊಂಡು ನಡೆ. ಹುಲಿಗಳು ಇಷ್ಟು ವಿಪುಲವಾಗಿರುವ ಅರಣ್ಯವನ್ನು ಒಮ್ಮೆ ಕಣ್ಣುಮುಟ್ಟ ನಾವು ನೋಡೋಣ. ನಡೆ, ಹೀಗೆಯೇ ಹಿಂದಿರುಗು. ನಾವು ಸಾವಕಾಶವಾಗಿ ಹೋಗುತ್ತಿದ್ದೆವು, ಈಗ ಒತ್ತರದಿಂದ

ಹೋಗೋಣ. ಹುಲಿಯು ಏಸಾಜಿಯನ್ನು ಮುರಿದ ಸ್ಥಳಕ್ಕೆ ತಪ್ಪದೆ ನಮ್ಮನ್ನು ಕರೆದುಕೊಂಡು ಹೋಗು.'' ಎಂದು ಹೇಳಿದರು. ಇನ್ನು ವಿಶೇಷ ಮಾತಾಡುವದರಿಂದ ಪ್ರಯೋಜನವಿಲ್ಲೆಂದು ತಿಳಿದು ಖಂಡೇರಾಯನು ಹಿಂದಿರುಗಿ ಒಂದೊಂದೇ ಹೆಜ್ಜೆಯನ್ನು ಇಡಹತ್ತಿದನು. ಆಗ ಮಹಾರಾಜರು ಕಣ್ಣು ಸನ್ನೆ ಮಾಡಲು, ಅವರ ಸಂಗಡಿಗರಲ್ಲಿ ಇಬ್ಬರು ಖಂಡೇರಾಯ ನನ್ನನುಸರಿಸಿ, ಅವನ ಮೇಲೆ ಕಣ್ಣಿಟ್ಟು ನಡೆಯಹತ್ತಿದರು. ಈ ಸಂಗತಿಯು ಖಂಡೇರಾಯನ ಮನಸ್ಸಿಗೆ ಹೊಳೆದರೂ ಆತನು ಹೊಳೆದಂತೆ ಹೊರಗೆ ತೋರಗೊಡಲಿಲ್ಲ. ಆತನು ತನ್ನನ್ನು ಅನುಸರಿಸಿ ಬರುವ ಒಬ್ಬ ತರುಣ ಸರದಾರನನ್ನು ಕುರಿತು—''ನಾನು ಮಹಾರಾಜರ ಕೆಲಸವನ್ನು ಉತ್ತಮ ರೀತಿಯಿಂದ ಮಾಡಬೇಕೆಂದು ಎಷ್ಟು ಉತ್ಸಾಹ ದಿಂದ ಹೋಗಿದ್ದೆನು; ಆದರೆ ನನ್ನ ದುರ್ದೈವವು ಅನರ್ಥವನ್ನುಂಟುಮಾಡಿತು.ಏಸಾಜಿಗೆ ನಾನು—''ಆ ಪೆಳೆಯ ಕಡೆಗೆ ಹೋಗಬೇಡ, ಅಲ್ಲಿ ಹುಲಿಯು ಇರುವದು'' ಎಂದು ಎಷ್ಟು ಹೇಳಿದೆನು; ಆದರೆ ಆತನು ಕೇಳಲಿಲ್ಲ; ಹಟದಿಂದ ಹೋದನು. ಆಗ ಆ ಹುಲಿಯು ಟಣ್ಣನೆ ಹಾರಿ ಏಸಾಜಿಯ ಗಂಟಲನ್ನು ಹಿಡಿಯಿತು. ನಾನು ಎಷ್ಟು ಎತ್ನಿಸಿದರೂ ರಕ್ತದ ಸವಿಗಂಡ ಆ ಹುಲಿಯು ಏಸಾಜಿಯನ್ನು ಬಿಡದೆ ಅವನನ್ನು ಹೆಗಲಮೇಲೆ ಒಗೆದುಕೊಂಡು ತನ್ನ ಪೆಳೆಯನ್ನು ಸೇರಿತು; ಅಂದಬಳಿಕ ನಾನಾದರೂ ಏನು ಮಾಡಬೇಕು? ಈ ಸಂಗತಿಯು ಮೊನ್ನೆಯೇ ಒದಗಿತು. ಆದರೆ ಮಹಾರಾಜರ ಮುಂದೆ ಏನು ಹೇಳಲೆಂದು ನಾನು ಅಡವಿಯಲ್ಲಿ ಸುಮ್ಮನೆ ಕುಳಿತುಕೊಂಡೆನು; ಆದರೆ ಎಷ್ಟು ದಿವಸ ಕುಳಿತುಕೊಂಡರೇನು? ಹೇಳುವದು ಬಿಡುವದೆ? ಈಗೊದಗಿದ ದುಃಖದ ಪ್ರಸಂಗದಿಂದ ಮಹಾರಾಜರ ಮನಸ್ಸು ನೋಯುವದು ಆಶ್ಚರ್ಯ ವಲ್ಲ. ಅವರು ನನ್ನ ಮೇಲಿನ ಮನಸ್ಸು ತೆಗೆಯುವ ಪ್ರಸಂಗದಲ್ಲಿ ನೀವು ಅವರಿಗೆ ಹೇಳಿ ನನಗೆ ಸಹಾಯ ಮಾಡಬೇಕು.'' ಎಂದು ಹೇಳಿಕೊಂಡನು.

ಈ ಮೇರೆಗೆ ಖಂಡೇರಾಯನು ಆ ತರುಣ ಮರಾಟನಿಗೆ ವಿಶ್ವಾಸವನ್ನು ಹುಟ್ಟಿಸುವ ಧ್ವನಿಯಿಂದ ಹೇಳಿಕೊಳ್ಳುತ್ತ ನಡೆದಿದ್ದನು; ಆ ತರುಣ ಸರದಾರನು ಅದನ್ನೆಲ್ಲ ಸುಮ್ಮನೆ ಕೇಳುತ್ತ ಸಾಗಿದ್ದನು. ಅತ್ತ ಮಹಾರಾಜರು ತಮ್ಮೊಳಗೆ ಏನೋ ವಿಚಾರಮಾಡುತ್ತ ನಡೆದಿದ್ದರು. ''ಏಸಾಜಿಯು ಹುಲಿಯ ಬಾಯಿಗೆ ಬಿದ್ದು ಸತ್ತಿರುವದಿಲ್ಲೆಂಬದು ನಿಶ್ಚಯವು. ಇನ್ನು ಬೇರೆ ವಿಧದಿಂದ ಅವನ ಅಪಘಾತವಾಗಿದ್ದರೆ ಆಗಿರಬಹುದು. ಈಗ ಖಂಡೇರಾಯನನ್ನು ಯುಕ್ತಿಯಿಂದ ಇರಕಿನಲ್ಲಿ ಹಿಡಿದು ಆತನನ್ನು ಮರುಳುಗೊಳಿಸಿದರೆ ನಿಜವಾದ ಸಂಗತಿಯು ಹೊರಬಿದ್ದರೆ ಹೊರಬೀಳಬಹುದು; ಅದರಂತೆ, ಈ ಮನುಷ್ಯನು ನನ್ನ ಆಶ್ರಯಕ್ಕೆ ಬಂದಿದ್ದರ ಮೂಲ ಕಾರಣವು ಗೊತ್ತಾದರೆ ಗೊತ್ತಾಗಬಹುದು'' ಹೀಗೆ ಅವರು ವಿಚಾರಮಾಡುತ್ತ ತಮ್ಮ ಪರಿವಾರದೊಡನೆ ಬೈಲು ಪ್ರದೇಶಕ್ಕೆ ಬಂದರು. ಇನ್ನು ಅವರು ಏಸಾಜಿಯು ಹುಲಿಯ ಬಾಯಿಗೆ ಸಿಕ್ಕ ಸ್ಥಳದ ಕಡೆಗೆ ತಿರುಗತಕ್ಕವರು, ಅಷ್ಟರಲ್ಲಿ ಒಬ್ಬ ಗೋಸಾವಿಯು ಅವರ ಮುಂದೆ ಬಂದು ಘಟ್ಟಿಯಾಗಿ ಆಶೀರ್ವದಿಸಿದನು. ಆ ಆಶೀರ್ವಾದದ ಧ್ವನಿಯನ್ನು ಕೇಳಿದ ಕೂಡಲೆ ಮಹಾರಾಜರು ಗೋಸಾವಿಯನ್ನು ಬಹು ವಿನಯದಿಂದ ವಂದಿಸಿದರು. ಸಾಧುಗಳು,

ಬೈರಾಗಿಗಳು ಮೊದಲಾದವರನ್ನು ನೋಡಿದ ಕೂಡಲೆ ಮಹಾರಾಜರಿಗೆ ಬಹಳ ಸಂತೋಷ ವಾಗುತ್ತಿತ್ತು. ಈ ವೈರಾಗ್ಯಶಾಲಿಗಳಾದ ಪುರುಷರ ಪುಣ್ಯದಿಂದಲೇ ಯಾವತ್ತೂ ಸೃಷ್ಟಿಯು ಸುಸೂತ್ರವಾಗಿ ನಡೆದಿರುತ್ತದೆ; ಅವರ ನಿರಪೇಕ್ಷವಾದ ಪರಮೇಶ್ವರ ಭಕ್ತಿಯಿಂದಲೇ ಜಗತ್ತಿನಲ್ಲಿ ಪಾಪದ ವರ್ಚಸ್ಸು ಕಡಿಮೆಯಾಗುವದು, ಎಂದು ಮಹಾರಾಜರ ತಿಳುವಳಿಕೆಯಿತ್ತು. ಅನುಭವದಂತೆ ಶ್ರದ್ಧೆಯು ಉತ್ಪನ್ನವಾಗುತ್ತದೆಂಬ ಮಾತು ಸುಳ್ಳಲ್ಲ. ಆಗಿನ ಕಾಲದಲ್ಲಿ ಮಹಾರಾಷ್ಟ್ರದೊಳಗೆ ಇಬ್ಬರು ದೊಡ್ಡ ಸತ್ಪುರುಷರು ಆಗಿ ಹೋದರು. ಅವರ ವೈರಾಗ್ಯವನ್ನು ಎಷ್ಟು ವರ್ಣಿಸಿದರೂ ಸ್ವಲ್ಪವೇ ಇರುವದು. ಶ್ರೀ ರಾಮದಾಸ ಸ್ವಾಮಿಗಳ ಚರಣಕ್ಕೆ ಮಹಾರಾಜರು ತಮ್ಮ ರಾಜ್ಯವನ್ನೆಲ್ಲ ಒಪ್ಪಿಸಿದರೂ, ಅದರೊಳಗಿನದೊಂದು ರಿಂಬಿಯನ್ನು ಕೂಡ ಸ್ವಾಮಿಗಳು ಇಚ್ಛಿಸಲಿಲ್ಲ. ಅದರಂತೆ, ಶ್ರೀ ತುಕಾರಾಮ ಮಹಾರಾಜರ ಮುಂದೆ ಮುತ್ತು ರತ್ನಗಳಿಂದ ತುಂಬಿದ ತಾಟನ್ನು ಇಟ್ಟರೆ, ಅವರು—''ಇದು ಮಣ್ಣಿಗೆ ಸಮಾನ'' ಎಂದು ಹೇಳಿದರು! ಮಹಾರಾಜರಿಗೆ ಸತ್ಪುರುಷರ ಸಂಬಂಧದ ಈ ಬಗೆಯ ಅನುಭವವಿದ್ದದ್ದರಿಂದ, ಬೇರೆ ಯಾವ ಸತ್ಪುರುಷರನ್ನು ನೋಡಿದರೂ ಮಹಾರಾಜರು ಅವರನ್ನು ಬಹಳವಾಗಿ ಮನ್ನಿಸುತ್ತಿದ್ದರು. ಅವರು ಸತ್ಪುರುಷರ ಅವಮಾನವನ್ನು ಎಂದೂ ಮಾಡಲಿಲ್ಲ. ಅದರಂತೆ ಈಗಾದರೂ ಮಹಾರಾಜರು ಬೈರಾಗಿಯನ್ನು ಕಂಡಕೂಡಲೆ ಕುದುರೆಯಿಂದ ಇಳಿದು, ಬೈರಾಗಿಯ ಚರಣಕ್ಕೆರಗಿದರು. ಬೈರಾಗಿಯು ಮತ್ತೆ ಆಶೀರ್ವಾದ ಮಾಡಿದನು. ಆಮೇಲೆ ಮಹಾರಾಜರು ಬೈರಾಗಿಯನ್ನು ಕುರಿತು—'' ಬೋಲಅ ಸಾಹೇಬ, ತಮ್ಮ ಇಚ್ಛೆಯೇನಿರುವದು? ನಾನು ಒಂದು ಕಾರ್ಯದ ಸಲುವಾಗಿ ಹೊರಟಿರುತ್ತೇನೆ. ನನ್ನ ಸಂಗಡಿಗರಲ್ಲಿ ಒಬ್ಬರನ್ನು ತಮ್ಮೊಡನೆ ಕಳಿಸುವೆನು. ತಾವು ಪ್ರತಾಪಗಡಕ್ಕೆ ಹೋಗಬೇಕು. ಅಲ್ಲಿ ಆಯೀಸಾಹೇಬರು ಇರುವರು. ಅವರು ತಮ್ಮ ಯೋಗಕ್ಷೇಮವನ್ನು ಉತ್ತಮ ರೀತಿಯಿಂದ ನೋಡುವರು'' ಎಂದು ಬೈರಾಗಿಯನ್ನು ಪ್ರಾರ್ಥಿಸಿದರು. ಬೈರಾಗಿಯು ಅದನ್ನೆಲ್ಲ ಕೇಳಿ ಪುನಃ ಮಹಾರಾಜರನ್ನು ಆಶೀರ್ವದಿಸಿದಂತೆ ಕೈಗಳನ್ನು ಮೇಲಕ್ಕೆತ್ತಿದನು. ಆಮೇಲೆ ಸ್ವಲ್ಪಹೊತ್ತು ಸುಮ್ಮನೆ ಇದ್ದು, ಆತನು ಪುನಃ ಕೈಗಳನ್ನು ಮೇಲಕ್ಕೆತ್ತಿ ಮಹಾರಾಜರನ್ನು ಕುರಿತು—''ರಾಜನೆ, ನಿನ್ನ ದುರ್ಗದ ಮೇಲೆ ಹೋಗಿ ಆದರೋಪಚಾರಗಳನ್ನು ಸ್ವೀಕರಿಸಲು ನಾವು ಇಚ್ಛಿಸುವದಿಲ್ಲ. ಈ ನಿನ್ನ ಜಾವಳಿಯ ಅರಣ್ಯದಲ್ಲಿ ಪರಮಾನಂದಗಿರಿಯೆಂಬ ಮಹಾ ಸತ್ಪುರುಷರೊಬ್ಬರು ಬಂದಿದ್ದಾರೆ. ಅವರು ಇಲ್ಲಿಗೆ ಬಂದು ಸುಮಾರು ಒಂದು ತಿಂಗಳು ಆಯಿತು. ಈ ಸುದ್ದಿಯನ್ನು ನಿನಗೆ ಯಾರೂ ಹೇಳಿಲ್ಲೆಂಬಂತೆ ತೋರುತ್ತದೆ. ಹೇಳಿದ್ದರೂ ಅವರ ದರ್ಶನದ ವಿಷಯವಾಗಿ ನೀನು ದುರ್ಲಕ್ಷ್ಯ ಮಾಡಿದಹಾಗೆ ಕಾಣುತ್ತದೆ. ಆ ಮಹಾ ಸಾಧುಗಳು ನಿನ್ನನ್ನು ಕಾಣಲು ಇಚ್ಛಿಸುವರು. ಈಗ ನೀನು ನನ್ನ ಸಂಗಡ ಬಂದರೆ ಅವರ ದರ್ಶನವಾಗುವದು, ಇಲ್ಲದಿದ್ದರೆ ಅವರು ನಾಳೆ ಇಲ್ಲಿಂದ ಹೊರಟುಹೋಗುವರು.''

ಈ ಮೇರೆಗೆ ನುಡಿಯುವಾಗ ಗೋಸಾವಿಯು ಮಹಾರಾಜರನ್ನಂತು ನೋಡೇ ನೋಡುತ್ತಿದ್ದನು; ಆತನು ಮಹಾರಾಜರಿಗಿಂತ ಖಂಡೇರಾಯನನ್ನು ವಿಶೇಷ ಉತ್ಸುಕತೆಯಿಂದ

ನೋಡುತ್ತಿದ್ದನು. ಮುಂದೆ ಅವರಿಬ್ಬರು ಪರಸ್ಪರರನ್ನು ನೋಡಲಿಕ್ಕೆ ಸಂಕೋಚಪಡಹತ್ತಿದರು. ಈ ಮಾತು ಭಕ್ತಿ ಪರವಶರಾದ ಮಹಾರಾಜರ ಲಕ್ಷದಲ್ಲಿ ಬಂದಂತೆ ತೋರಲಿಲ್ಲ. ಅವರು ಗೋಸಾವಿಯನ್ನು ಕುರಿತು—"ನಾನು ಜಾವಳಿಯ ಅರಣ್ಯದಲ್ಲಿ ಹೋಗುವದಕ್ಕಾಗಿಯೇ ಹೊರಟಿರುತ್ತೇನೆ; ಆ ಸ್ವಾಮಿಗಳವರು ಅಲ್ಲಿ ಇದ್ದ ಸುದ್ದಿಯನ್ನು ನನಗೆ ಯಾರೂ ಹೇಳಿರುವದಿಲ್ಲ. ನಮ್ಮವನೊಬ್ಬನು ಮೊನ್ನೆ ಈ ಅರಣ್ಯದಲ್ಲಿ ಹುಲಿಯ ಬಾಯಿಗೆ ಬಿದ್ದನೆಂದು ಅವನ ಸಂಗಡ ಹೋದವನು ಹೇಳಿದನು; ಆದ್ದರಿಂದ ಆ ಮನುಷ್ಯನ ಶೋಧಕ್ಕಾಗಿ ನಾನು ಹೊರಟಿರುತ್ತೇನೆ. ಈಗ ನಮ್ಮೊಳಗಿನವನೊಬ್ಬನನ್ನು ಕುದುರೆಯ ಮೇಲಿಂದ ಇಳಿಸಿ ಆತನಿಗೆ ನಡೆದು ಬರುವಂತೆ ಹೇಳುವೆನು. ತಾವು ಆ ಕುದುರೆಯನ್ನು ಹತ್ತಿಕೊಂಡು ನನ್ನ ಸಂಗಡ ಬರಬೇಕು. ಮಹಾಪುರುಷರು ನನ್ನನ್ನು ಅನುಗ್ರಹಿಸಲು ಇಚ್ಛಿಸುತ್ತಿರುವಾಗ, ನಾನು ಅದನ್ನು ಹ್ಯಾಗೆ ನಿರಾಕರಿಸಲಿ? ದೊಡ್ಡವರ ಅನುಗ್ರಹದಿಂದಲೇ ನಮ್ಮ ಮನುಷ್ಯನ ಗೊತ್ತು ಹತ್ತಬಹುದು. ನಾವು ಬೇಗನೆ ಹೋಗಬೇಕಾಗಿದೆ, ಮಹಾರಾಜರು ಕುದುರೆಯನ್ನು ಹತ್ತಬೇಕು," ಎಂದು ಹೇಳಿದರು; ಆದರೆ ಇಷ್ಟು ಬೇಗನೆ ಹೊರಡುವದು ಗೋಸಾವಿಯ ಮನಸ್ಸಿನಲ್ಲಿ ಇದ್ದಂತೆ ತೋರಲಿಲ್ಲ. ಆತನು ಮಹಾರಾಜರನ್ನು ಕುರಿತು—"ಶಾಬಾಸ, ರಾಜಾ, ನಾವು ಈವರೆಗೆ ನಿನ್ನ ಕೀರ್ತಿಯನ್ನು ಕೇಳುತ್ತಿರುವಂತೆ ನೀನು ನಿಜವಾಗಿ ಸಾಧು–ಸತ್ಪುರುಷರ ಯೋಗಕ್ಷೇಮವನ್ನು ವಿಚಾರಿಸುವವನಿರುತ್ತೀ; ಆದರೆ ನಮ್ಮಂಥ ಅತಿಥಿಗಳು ಬಂದರೆ, ಮೊದಲು ಅವರ ಯೋಗಕ್ಷೇಮವ ವಿಚಾರಿಸುವದನ್ನು ಬಿಟ್ಟು "ಮೊದಲು ನನ್ನ ಸಂಗಡ ನಡೆಯಿರಿ" ಎಂದು ಹೇಳುವೆಯಲ್ಲ! ನಾನು ಬಹಳ ದಣಿದು ಬಂದಿರುತ್ತೇನೆ. ನಾನು ಪ್ರತಾಪಗಡದಮೇಲೆ ನಿನ್ನನ್ನು ಕಂಡು, ಅಲ್ಲಿ ಒಂದೆರಡು ದಿನ ವಿಶ್ರಾಂತಿಯನ್ನು ಹೊಂದಿ ಆಮೇಲೆ ನಿನ್ನನ್ನು ಕರಕೊಂಡು ಹೋಗಬೇಕೆಂದಿದ್ದೆನು; ಆದರೆ ನೀನು ಹಾದಿಯಲ್ಲಿಯೇ ಭೆಟ್ಟಿಯಾದೆ. ಏನೂ ಚಿಂತೆಯಿಲ್ಲ, ಸೆಟ್ಟಿ ಇಳಿದಲ್ಲಿ ಪಟ್ಟಣವೆಂಬಂತೆ, ನೀನು ಇದ್ದಲ್ಲಿ ಯಾವ ಕೊರತೆಯೂ ಆಗದು. ನಾನು ಬಹಳ ಹಸಿದಿರುವೆನು. ಇಲ್ಲಿ ಒಂದು ದಿವಸವಾದರೂ ವಿಶ್ರಾಂತಿಯನ್ನು ಹೊಂದಿ ಮುಂದಕ್ಕೆ ಹೋಗೋಣ, ನನ್ನ ಅಂತರಾತ್ಮನನ್ನು ಸಮಾಧಾನ ಗೊಳಿಸು. ನಿನ್ನ ಮನುಷ್ಯನ ಚಿಂತೆಯನ್ನು ಬಿಡು. ಆತನನ್ನು ನಮ್ಮ ಗುರುಗಳು ಹುಲಿಯ ಬಾಯಿಯೊಳಗಿಂದಲೇ ಏಕೆ, ಯಮನ ದವಡೆಯೊಳಗಿಂದಾದರೂ ಬಿಡಿಸಿಕೊಂಡು ತಂದು ಕೊಡುವರು" ಎಂದು ಹೇಳಿದನು. ಗೋಸಾವಿಯ ಈ ಮಾತುಗಳು ಮಹಾರಾಜರಿಗೆ ಬಹು ಚಮತ್ಕಾರದವಾಗಿ ತೋರಿದವು; ಆದರೂ ಭಾವಿಕ ಸ್ವಭಾವದ ಅವರು ಅಸಮ್ಮತಿಯನ್ನು ತೋರಿಸದೆ ಗೋಸಾವಿಗೆ–ಭೋಆ, ನಾನು ಮುಂದಕ್ಕೆ ಹೋಗುತ್ತೇನೆ. ನಿಮ್ಮ ಸಲುವಾಗಿ ಒಂದು ಕುದುರೆಯನ್ನೂ, ಒಬ್ಬ ಮನುಷ್ಯನನ್ನೂ ಇಡುವೆನು. ತಮಗೆ ಬೇಕಾದ ಪದಾರ್ಥ ಗಳನ್ನು ಆ ಮನುಷ್ಯನು ತಂದು ಕೊಡುವನು; ಮತ್ತು ತಮಗೆ ಬೇಕಾದ ಅನುಕೂಲತೆ ಗಳನ್ನೂ ಆತನು ಮಾಡಿಕೊಡುವನು. ನಾನು ನಮ್ಮ ಮನುಷ್ಯನನ್ನು ಶೋಧಿಸಿ ಬರುವೆನು. ಅಲ್ಲಿಯವರೆಗೆ ನನಗೆ ಸಮಾಧಾನ ವಾಗಲರಿಯದು. ತಾವು ಇಲ್ಲಿ ಇರುವವರೊಳಗಾಗಿಯೇ

ನಾನು ತಮ್ಮ ಬಳಿಗೆ ಬರುವೆನು. ಆಮೇಲೆ ಇಬ್ಬರೂ ಕೂಡಿಯೇ ಮಹಾಪುರುಷರ ಬಳಿಗೆ ಹೋಗೋಣ, ಇಲ್ಲವೆ ತಾವು ಎಲ್ಲಿಯಾದರೂ ನನಗೆ ಕೂಡ್ರುಹೇಳಿದರೆ, ತಮ್ಮ ಹಾದಿಯ ನೋಡುತ್ತ ಅಲ್ಲಿ ಕುಳಿತುಕೊಳ್ಳುವೆನು; ಆದರೆ ಈಗ ನಿಮ್ಮ ಸಲುವಾಗಿ ನಿಂತುಕೊಳ್ಳಲಿಕ್ಕೆ, ಅಥವಾ ನಿಮ್ಮ ಸಂಗಡ ಎಲ್ಲಿಗಾದರೂ ಬಂದು ನಿಮ್ಮ ಊಟ-ಉಡಿಗೆಗಳಾಗುವವರೆಗೆ ಹಾದಿಯ ನೋಡಲಿಕ್ಕೆ ನನಗೆ ಬರುವಹಾಗಿಲ್ಲ'' ಎಂದು ಹೇಳಲು, ಗೋಸಾವಿಯು— ''ರಾಜಾ, ನೀನು ನಮ್ಮ ವಿಷಯವಾಗಿ ಹೀಗೆ ಉದಾಸೀನ ಭಾವವನ್ನು ತಾಳಬೇಡ. ದೇವರು ಯಾವ ಕಾಲಕ್ಕೆ ಯಾವ ರೂಪದಿಂದ ಬರುತ್ತಾನೆಂಬದರ ನಿಯಮವನ್ನು ಹೇಳಲಿಕ್ಕೆ ಬರುವದಿಲ್ಲ, ಸಿರಿಯಾಳ ರಾಜನ ಮನೆಗೆ ಶ್ರೀ ಶಂಕರನು ಯಾವ ರೂಪದಿಂದ ಹೋಗಿದ್ದನೆಂಬದನ್ನು ವಿಚಾರದಿಂದ ತಿಳಿದುಕೋ. ನಿಮ್ಮವನ ಚಿಂತೆಯನ್ನು ಮಾಡಬೇಡವೆಂದು ಆಗಲೆ ನಾನು ನಿನಗೆ ಹೇಳಲಿಲ್ಲವೆ? ನನ್ನ ಅಂತರಾತ್ಮನು ಸಂತುಷ್ಟ ನಾಗುವವರೆಗೆ ನೀನು ಇಲ್ಲಿಂದ ಹೋದರೆ ನಿನಗೆ ಹಿತವಾಗದು. ನಿನ್ನ ಹಿತವನ್ನು ಮನಮುಟ್ಟಿ ಬಯಸುತ್ತಿದ್ದ ನಾನು, ನಿನ್ನನ್ನು ಹೋಗಗೊಡುವದಿಲ್ಲ ''ಎಂದು ನುಡಿದು, ಆತನು ಮಹಾರಾಜರ ಕುದುರೆಯ ಮುಂದೆ ಬಂದು ನಿಂತುಕೊಡನು. ವೈರಾಗಿಯನ್ನು ಹಿಂದಕ್ಕೆ ಸರಿಸಿ ಮುಂದಕ್ಕೆ ಹೋಗಲಿಕ್ಕೆ ಮಹಾರಾಜರ ಮನಸ್ಸು ಮೆಚ್ಚದಾಯಿತು. ಅವರು ಅತ್ಯಂತ ಶ್ರದ್ಧಾಳು ಸ್ವಭಾವದವರು. ಅವರು ತಿರುಗಿ ಮಾತಾಡದೆ ಕುದುರೆಯನ್ನು ಇಳಿದರು. ಅಷ್ಟರಲ್ಲಿ ಗೋಸಾವಿಯು ಒಂದು ಗಿಡದ ಬುಡದಲ್ಲಿ ತನ್ನ ಕೃಷ್ಣಾಂಜಿನವನ್ನು ಹಾಸಿದ್ದನು; ಆಗ ಮಹಾರಾಜರು ಖಂಡೇರಾಯನನ್ನು ಕುರಿತು—''ನೀನು ಏಸಾಜಿಯನ್ನು ಬಿಟ್ಟು ಬಂದದ್ದು ಬಹಳ ಹೇಡಿತನವು; ಆದರೆ ಈಗ ನೀನು ಹೋಗಿ ಆ ಸ್ಥಳವನ್ನು ನೋಡಿಬಾ. ಸಂಗಡ ಯಾರನ್ನಾದರೂ ಕರೆದುಕೊಂಡು ಹೋಗು'' ಎಂದು ಹೇಳಿದರು. ಖಂಡೇರಾಯನಿಗೂ ಅಷ್ಟೇ ಬೇಕಾಗಿತ್ತು ಆತನು ತಟ್ಟನೆ ಮಹಾರಾಜರನ್ನು ಕುರಿತು—''ಯಾತಕ್ಕೆ, ಮತ್ತೊಬ್ಬರು ಯಾತಕ್ಕೆ? ನಾನೊಬ್ಬನೇ ಈಗ ನೋಡಿಕೊಂಡು ಬರುವೆನು'' ಎಂದು ಹೇಳಿ, ಮಹಾರಾಜರು ಏನೋ ಹೇಳುತ್ತಿರುವದನ್ನು ಕೇಳಿಕೊಳ್ಳದೆ, ಹೊರಟು ನಡೆದನು. ಆಗ ಗೋಸಾವಿಯು ಖಂಡೇರಾಯನಿಗೆ ಏನೋ ಸನ್ನೆ ಮಾಡಿದ ಹಾಗೆ ತೋರಿತು. ಅದನ್ನು ಮಹಾರಾಜರು ನೋಡಿದರೋ ಇಲ್ಲವೋ ತಿಳಿಯದು. ಖಂಡೇರಾಯನು ಹೊರಟುಹೋದ ಕೂಡಲೆ ಗೋಸಾವಿಯು ಮಹಾರಾಜರನ್ನು ಕುರಿತು—''ನೀನು ಇತ್ತ ಕುಳಿತುಕೊಳ್ಳಬೇಕು. ಆ ಮನುಷ್ಯನು ಎಲ್ಲ ನೋಡಿಕೊಂಡು ಬರುವನು. ನಿಮ್ಮ ಸತ್ತ ಮನುಷ್ಯನ ವಿಷಯವಾಗಿ ನೀನು ನಿಶ್ಚಿಂತನಾಗಿರಬೇಕು. ನಿಮ್ಮವನ ಸುದ್ದಿಯನ್ನು ತರುವವರೆಗೆ ನಮ್ಮೊಡನೆ ನೀನು ವಿಶ್ರಮಿಸು. ನಿಮ್ಮವನ ಜೀವಕ್ಕೆ ಭಯವಿಲ್ಲೆಂದು ನಾನು ನಂಬಿಕೆ ಕೊಡುವೆನು. ರಾಜಾ, ''ಹರ ಮುನಿದರೆ ಗುರು ಕಾಯುವನೆಂದು'' ದೊಡ್ಡವರು ಹೇಳುತ್ತಿರಲು, ಸಜ್ಜನರ ಸೇವೆಯಲ್ಲಿ, ಹಾಗು ಅವರ ಮನಸ್ಸನ್ನು ಸಂತೋಷಪಡಿಸುವುದರಲ್ಲಿ ತತ್ಪರನಾಗಿರುವ ನಿನಗೆ ನಿನ್ನ ಮನುಷ್ಯನ ಚಿಂತೆಯೇಕೆ?''

ಗೋಸಾವಿಯ ಮುಂಗಾಲ ಪುಟಿಗೆಯ ಈ ಮಾತುಗಳನ್ನು ಕೇಳಿ ಮಹಾರಾಜರಂಥ ಶ್ರದ್ಧಾಳುಗಳಿಗೂ ಸಂಶಯವು ಉತ್ಪನ್ನವಾಯಿತು. ಖಂಡೇರಾಯನ ಮೇಲಂತೂ ಅವರ ವಿಶ್ವಾಸವು ಇದ್ದೇ ಇಲ್ಲ. ಗೋಸಾವಿಯ ಈ ವಿಲಕ್ಷಣ ಸ್ಥಿತಿಯನ್ನು ನೋಡಿ ಅವರಿಗೆ ಒಂದು ಪ್ರಕಾರದ ಅಪನಂಬಿಗೆಯು ಹುಟ್ಟಿತು. ಅದನ್ನು ಅವರು ಹೊರಗೆ ತೋರಗೊಡಲಿಲ್ಲ. ಇಲ್ಲಿ ಏನೋ ಕಾರಸ್ಥಾನವಿದ್ದಂತೆ ತೋರುತ್ತದೆ. ಏಸಾಜಿಯು ಹುಲಿಯ ಬಾಯಿಗೆ ಬಿದ್ದಿರುವದಿಲ್ಲ. ಆತನು ಈ ಕಾರಸ್ಥಾನಕ್ಕೆ ಬಲಿಯಾಗಿರಬಹುದು. ಖಂಡೇರಾಯನ ಅಂಗವು ಈ ಕಾರಸ್ಥಾನ ದಲ್ಲಿರುವುದು ನಿಶ್ಚಯವು. ಇವನು ನಿಜವಾದ ಗೋಸಾವಿಯೇ ಆಗಿರಬಹುದೇನು? ಈಗ ಯಾವ ಮಾತನ್ನೂ ಆಡದೆ, ಇವರ ತಂತ್ರವಾದರೂ ಏನಿರುತ್ತದೆಂಬುದನ್ನು ನೋಡೋಣ. ಏಸಾಜಿಯ ಶೋಧಕ್ಕಾಗಿ ನಾನು ಮನೆಯಿಂದ ಹೊರಟಿರುತ್ತೇನೆ; ಆತನ ಶೋಧವಾದ ಹೊರತು ನಾನು ತಿರುಗಿ ಹೋಗುವ ಹಾಗಿಲ್ಲ. ಅಂಬಾಬಾಯಿಯ ಇಚ್ಛೆಯಿದ್ದಂತೆ ಆಗಲಿ, ಎಂದು ಮನಸ್ಸಿನಲ್ಲಿ ಆಲೋಚಿಸಿ, ಹೊರಗೆ ಆ ವಿಚಾರದ ಸುಳವು ಸಹ ಹತ್ತದಂತೆ ಗಾಂಭೀರ್ಯದಿಂದ ಗೋಸಾವಿಯ ಯೋಗಕ್ಷೇಮದಲ್ಲಿರು ವಂತೆ ನಟಿಸಹತ್ತಿದರು. ಮೊದಲಿ ನಂತೆ ಮನಬಿಚ್ಚಿ ಮಾತಾಡುವ ಧೈರ್ಯವು ಗೋಸಾವಿಗೆ ಆಗಲೊಲ್ಲದು. ತಮ್ಮ ಗಂಭೀರ ವೃತ್ತಿಯ ಪರಿಣಾಮವು ಗೋಸಾವಿಯ ಮನಸ್ಸಿನ ಮೇಲೆ ಆದದ್ದನ್ನು ಚಾಣಾಕ್ಷರಾದ ಮಹಾರಾಜರು ತಿಳಿದುಕೊಂಡು, ಗೋಸಾವಿಯ ಮನಸ್ಸಿನಲ್ಲಿ ಯಾವ ಬಗೆಯ ಸಂಶಯವೂ ಉತ್ಪನ್ನವಾಗಬಾರದೆಂದು ಅವರು ಗೋಸಾವಿಯನ್ನು ಕುರಿತು—''ಮಹಾರಾಜ, ತಮ್ಮ ಚರಣದರ್ಶನದಿಂದ ನನ್ನ ಮನಸ್ಸಿಗೆ ಬಹಳ ಸಂತೋಷವಾಗಿದೆ. ಸತ್ಸಮಾಗಮದಿಂದ ಸಾಂಸಾರಿಕ ತಾಪಗಳು ಅಳಿದುಹೋಗುತ್ತವೆಂಬುದು ಸುಳ್ಳಲ್ಲ, ನನಗೆ ಈಗ ಸಂಪೂರ್ಣ ಶಾಂತಿಯು ಪ್ರಾಪ್ತವಾಗಿರುವದು. ಪರಮಾನಂದಗಿರಿ ಮಹಾರಾಜರ ದರ್ಶನವು ಯಾವಾಗಾ ದೀತೆಂದು ಮನಸ್ಸು ಚಡಪಡಿಸುತ್ತಲಿದೆ'', ಎಂದು ನುಡಿದರು. ಅದನ್ನು ಕೇಳಿ ಗೋಸಾವಿಗೆ ಸ್ವಲ್ಪ ಸಮಾಧಾನವಾಯಿತು. ತಾನು ಮೊದಲಿನಂತೆ ಅಧಿಕಾರ ಧ್ವನಿಯಿಂದ ಮಾತಾಡದಿದ್ದರೆ, ಮಹಾರಾಜರಿಗೆ ಸಂಶಯ ಬಂದೀತೆಂದು ತಿಳಿದು ಆತನು ''ರಾಜಾ, ವಿಶ್ವಾಸಃ ಫಲದಾಯಕಃ'' ನಿನ್ನ ವಿಶ್ವಾಸದಂತೆ ನಿನಗೆ ಫಲವಾಗುವದು. ಅಫಜುಲಖಾನನ ವಿಷಯದ ದೊಡ್ಡ ಚಿಂತೆಯು ನಿನ್ನ ಮನಸ್ಸಿನಲ್ಲಿರುತ್ತದೆ; ಆದರೆ ಅದು ದೂರವಾಯಿತೆಂದು ತಿಳಿದುಕೋ. ನಿನಗೆ ಅಂಬಾಬಾಯಿ ಸಹಾಯವಿರುವದಲ್ಲದೆ, ಸತ್ಪುರುಷರ ಸಹಾಯವೂ ಇರುವದು. ಸ್ವಧರ್ಮದ, ಹಾಗು ಸ್ವದೇಶದ ಉದ್ಧಾರಕ್ಕಾಗಿ ಹಗಲಿರುಳು ಸವೆಯುತ್ತಿರುವ ನಿನ್ನಂಥವನಿಗೆ ಸಹಾಯ ಮಾಡದೆ, ಸತ್ಪುರುಷರು ಬೇರೆ ಯಾರಿಗೆ ಸಹಾಯ ಮಾಡಬೇಕು? ಅಫಜುಲಖಾನನೆಂಬ ವಿಷವೃಕ್ಷವನ್ನು ಸಮೂಲವಾಗಿ ಕಿತ್ತಿ ಒಗೆಯಬೇಕೆಂದು ನಿನ್ನ ಮನಸ್ಸಿನಲ್ಲಿರುವದಷ್ಟೇ? ಆದರೆ ಖಾನನು ನಿನ್ನನ್ನು ಘಾತಿಸಲು ಉದ್ಯುಕ್ತನಾದಾಗಲೇ ನೀನು ಅವನನ್ನು ಘಾತಿಸುತ್ತೀ. ಈ ಕಾರ್ಯವನ್ನು ನೀನು ಸ್ವಂತ ಕೈಮುಟ್ಟಿ ಸಾಧಿಸಬೇಕಾಗಿರುವದು. ಇದರಲ್ಲಿ ನಿನಗೆ ಸಂಪೂರ್ಣ ವಾದ ಯಶಸ್ಸು ಪ್ರಾಪ್ತವಾಗುತ್ತದೆ ಎಂದು ಹೇಳಿದನು. ಅದನ್ನು ಕೇಳಿ ಮಹಾರಾಜರಿಗೆ

ಸಮಾಧಾನವಾಯಿತೋ ಅಸಮಾಧಾನ ವಾಯಿತೋ ತಿಳಿಯದು. ಅವರು ''ಭವಾನಿಯ ಇಚ್ಛೆಯಿದ್ದಂತೆ ಆಗಲಿ'' ಎಂದು ನುಡಿದು ಸುಮ್ಮನಾದರು. ಅವರ ಮನಸ್ಸು ವಿಚಾರಮಗ್ನ ವಾಯಿತು. ಇವರು ನನಗೆ ಅಹಿತವನ್ನು ಚಿಂತಿಸುತ್ತಿರಬಹುದೋ, ಹಿತವನ್ನು ಚಿಂತಿಸುತ್ತಿರ ಬಹುದೋ? ನನ್ನನ್ನು ಬುದ್ಧಿಪೂರ್ವಕವಾಗಿ ದರ್ಶನಕ್ಕೆ ಕರೆದೊಯ್ಯುವ ಉದ್ದೇಶವೇನಿರ ಬಹುದು? ಜಗತ್ತಿನಲ್ಲಿ ನಿಜವಾದ ಸತ್ಪುರುಷರು ಅಪರೂಪವೆಂದು ಸಮರ್ಥರು ಮೇಲೆ ಮೇಲೆ ಹೇಳುವರು. ಕಾರ್ಯಸಾಧಕರು ಸಾಧುಗಳ ವೇಷದಿಂದ ಬೇಕಾದಂಥ ನೀಚತನವನ್ನು ಮಾಡಲಿಕ್ಕೆ ಹೇಸುವದಿಲ್ಲ, ಡಾಂಭಿಕತನವು ಜಗತ್ತನ್ನು ಮುಸುಕಿರುವದು. ಡಾಂಭಿಕತನಕ್ಕೆ ಲೋಕವು ಮರುಳಾಗುವದು. ಈ ಗೋಸಾವಿಯು ತನ್ನ ಗುರುಗಳ ಮಹಾಮಹಿಮೆಯನ್ನು ವರ್ಣಿಸುವಲ್ಲಿ ಡಾಂಭಿಕತನವು ಎಷ್ಟಿರುವದು! ಅಲೌಕಿಕ ಕಾರ್ಯಗಳನ್ನು ಮಾಡಿ ತೋರಿಸು ವೆವೆಂದು ಹೇಳುವವರು ಡಾಂಭಿಕರಿರುತ್ತಾರೆಂದು ಸಮರ್ಥರ ಮುಖದಿಂದಲೇ ಕೇಳಿದ್ದೇನೆ. ನೋಡೋಣ, ಈ ಗೋಸಾವಿಯು ಯಾವ ತಂತ್ರವ ಒಡ್ಡಿರುತ್ತಾನೆಂಬುದನ್ನು! ಆದರೆ ಈ ಗೋಸಾವಿಯಾದರೂ ನನ್ನ ಅಹಿತವನ್ನು ಯಾಕೆ ಚಿಂತಿಸಬೇಕು? ಗೋಸಾವಿಯು ಡಾಂಭಿಕನಿರ ಬಹುದು; ಆದರೆ ನನ್ನ ಘಾತವನ್ನು ಮಾಡಲಿಕ್ಕೆ ನಿಂತಿರುವನೆಂದು ಹ್ಯಾಗೆ ಹೇಳಬೇಕು? ನನ್ನಿಂದ ಈತನ ಅಹಿತವೇನು ಆಗಿರಬಹುದು? ಈಗಲೇ ಯಾವದನ್ನೂ ನಿರ್ಧರಿಸದೆ, ನಾವು ಜಾಗರೂಕರಾಗಿದ್ದರಾಯಿತು.

## ಹೈಮವತಿಯ ಸಾಹಸ

ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಖಂಡೇರಾಯನು ಮಹಾರಾಜರ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳದೆ, ಅಥವಾ ಅವರ ಕಟ್ಟಕಡೆಯ ಅಪ್ಪಣೆಯ ಹಾದಿಯನ್ನು ನೋಡದೆ, ಕುದುರೆಯನ್ನು ಓಡಿಸುತ್ತ ಹೊರಟವನು, ನೆಟ್ಟಗೆ ಬಾಲಗೋಸಾವಿಯ ಆಶ್ರಮಕ್ಕೆ ಬಂದನು. ಆಗ ಮೂರು ಸಂಜೆ ಸಮಯವಾಗಿತ್ತು, ಬಾಲಗೋಸಾವಿಯು ಆ ಸ್ತ್ರೀಯ ಕಡೆಯಿಂದ ತನ್ನ ಮೂರು ಮಾತುಗಳನ್ನು ನಡೆಸುವ ಬಗ್ಗೆ ಅದೇ ಪ್ರತಿಜ್ಞೆಮಾಡಿಸಿಕೊಂಡು, ಸ್ವಲ್ಪ ಸಮಾಧಾನದಿಂದ ಕುಳಿತುಕೊಂಡಿದ್ದನು. ಆ ಸ್ತ್ರೀಯೂ ಬಾಲಗೋಸಾವಿಯ ಬಳಿಯಲ್ಲಿಯೇ ಕುಳಿತು ಕೊಂಡಿದ್ದಳು. ಅಷ್ಟರಲ್ಲಿ ಖಂಡೇರಾಯನು—''ಕೆಲಸವಾಯಿತು, ಕೆಲಸವಾಯಿತು ತಂ....'' ಎಂದು ಒದರುತ್ತ ಬಾಲಗೋಸಾವಿಯ ಬಳಿಗೆ ಬಂದನು; ಆದರೆ ಬಾಲಗೋಸಾವಿಯ ಬಳಿಯಲ್ಲಿ ಯಾವಳೋ ಒಬ್ಬ ಹೊಸ ಬೈರಾಗಿಣಿಯು ಕುಳಿತುಕೊಂಡದ್ದನ್ನು ನೋಡಿ, ಆತನು ಬೆದರಿ ಬಿದ್ದು ಅಷ್ಟಕ್ಕೇ ಸುಮ್ಮನಾದನು. ಈ ಹೊಸಬಳಾದ ಸ್ತ್ರೀಯ ಸಮಕ್ಷಮ ತಾನು ಮಾತಾಡಬಹುದೇ? ಎಂದು ಆತನು ಶಂಕಿಸುತ್ತಿರಲು, ಬಾಲಗೋಸಾವಿಯು —''ಖಂಡೇರಾವ, ಹೇಳು–ಹೇಳು. ಶಂಕಿಸಬೇಡ; ಇಲ್ಲಿ ಯಾರೂ ಹೊರಗಿನವರಿಲ್ಲ, ಈ ಸ್ತ್ರೀಯು ನನ್ನ

ಶಿಷ್ಯಳಿರುವಳು, ಪರಕೀಯಳಲ್ಲ ''ಕೆಲಸವಾಯಿತು, ಕೆಲಸವಾಯಿತು'' ಎಂದು ಹೇಳಿದೆ ಯಲ್ಲ, ಯಾವ ಕೆಲಸವಾಯಿತು? ನಮ್ಮ ಕೆಲಸವಾಯಿತೆಂದು ನೀನು ಹೇಳುತ್ತಿದ್ದರೆ, ನಿನ್ನ ಬಾಯಲ್ಲಿ ಸಕ್ಕರೆಯನ್ನು ಹಾಕತಕ್ಕದ್ದು. ಹೇಳು, ನನ್ನ ಮುಂದೆ ಏನು ಹೇಳಲಿಕ್ಕೆ ಬಂದಿರುತ್ತೀ ತಟ್ಟನೆ ಹೇಳು. ಕಕ್ಕಂದಿರು ಎಲ್ಲಿರುವರು? ಅವರು ಏನು ಮಾಡಿದರು? ಹೇಳು ಹೇಳು, ಸುಮ್ಮನಿರಬೇಡ'' ಎಂದು ಆತುರದಿಂದ ಕೇಳಲು, ಖಂಡೇರಾಯನು ನಿಶ್ಶಂಕೆಯಿಂದ—''ಕಕ್ಕಂದಿರು ಪ್ರತಾಪ ಗಡಕ್ಕೆ ಬರುತ್ತಿರಲು, ಹಾದಿಯಲ್ಲಿ ಅವರಿಗೂ ಶಿವಾಜಿಗೂ ಭೆಟ್ಟಿಯಾಯಿತು. ಕಕ್ಕಂದಿರು ಯುಕ್ತಿಪ್ರಯುಕ್ತಿಯಿಂದ ಶಿವಾಜಿಯನ್ನು ಒಂದೆರಡು ದಿನ ತರುಬ ಹಾಕಿ ಇಲ್ಲಿಗೆ ಕರಕೊಂಡು ಬರುವರು. ಅಷ್ಟರಲ್ಲಿ ನೀನು ಇಲ್ಲಿ ಎಲ್ಲ ಸಿದ್ಧತೆಯನ್ನು ಮಾಡಿಡತಕ್ಕದ್ದು. ಶಿವಾಜಿಯ ಅತ್ಯಂತ ವಿಶ್ವಾಸದ ಒಬ್ಬ ಮನುಷ್ಯನು ಇಲ್ಲದ ಹಾಗಾದ್ದರಿಂದ, ಆತನನ್ನು ಹುಡುಕಲಿಕ್ಕೆ ಶಿವಾಜಿಯ ಬಂದಿರುವನು; ಆ ಮನುಷ್ಯನು ಹುಲಿಯ ಬಾಯಿಗೆ ಬಿದ್ದನೆಂದು ನಾನು ಸುಳ್ಳೇ ಹೇಳಿದ್ದು ಶಿವಾಜಿಗೆ ನಂಬಿಗೆಯಾಗಿರುವದಿಲ್ಲ. ಆದಷ್ಟು ತ್ವರೆಯಿಂದ ಆತನು ನಿನ್ನ ದರ್ಶನಕ್ಕಾಗಿ ಇಲ್ಲಿಗೆ ಬರುವನು. ಕಕ್ಕಂದಿರು ನಿನ್ನ ಮಹಿಮೆಯನ್ನು ಬಹಳವಾಗಿ ವರ್ಣಿಸಿ, ಶಿವಾಜಿಯ ಮನಸ್ಸಿನಲ್ಲಿ ಒಳಿತಾಗಿ ಭಕ್ತಿಯನ್ನು ಹುಟ್ಟಿಸಿರುತ್ತಾರೆ. ನೀನು ಕ್ಷಣವಾದರೂ ವಿಲಂಬ ಮಾಡದೆ, ಮಾಡತಕ್ಕ ಸಿದ್ಧತೆಯನ್ನು ಮಾಡತಕ್ಕದ್ದು. ಆ ದುಷ್ಟ ಶಿವಾಜಿಯು ಬಂದಕೂಡಲೆ ಅವನ ಕಥೆ ಮುಗಿದು ಹೋಗಬೇಕು ನೋಡು!

ಈ ಮೇರೆಗೆ ನುಡಿಯಲು, ಬಾಲಗೋಸಾವಿಯ ಮನಸ್ಸಿಗೆ ಏನು ಹೊಳೆಯಿತೋ ಏನೋ, ಆತನು ಖಂಡೇರಾಯನನ್ನು ಒತ್ತಟ್ಟಿಗೆ ಕರಕೊಂಡು ಹೋದನು. ಅವರಿಬ್ಬರು ಬಹಳ ಹೊತ್ತಿನವರೆಗೆ ಕಿವಿಮಾತು ಆಡಿದರು. ಇತ್ತ ಆ ಸ್ತ್ರೀಯು ಸುಮ್ಮನೆ ಕುಳಿತು ಕೊಂಡಿದ್ದಳು. ಮಹಾರಾಜರ ಮೇಲೆ ಆಕೆಯ ಭಕ್ತಿಯು ಬಹಳ. ಅವರು ಇಲ್ಲಿಗೆ ಬರುವರೆಂಬ ಸುದ್ದಿಯನ್ನು ಕೇಳಿ, ಆಕೆಗೆ ಬಹಳ ಸಂತೋಷವಾಯಿತು; ಆದರೆ ಮಹಾರಾಜರನ್ನು ಒಂಟಿ ಹೆಸರಿನಿಂದ ಕರೆದು, ಅವರ ವಿಷಯದ ತಿರಸ್ಕಾರವ ಪ್ರಕಟಿಸುವದನ್ನೂ, ''ಅವರ ಕಥೆ ಮುಗಿದು ಹೋಗಬೇಕೆಂ''ದು ಖಂಡೇರಾಯನು ನುಡಿದದ್ದನ್ನೂ ಕೇಳಿ ಆಕೆಗೆ ಬಹಳ ಆಶ್ಚರ್ಯವಾಯಿತು. ಮಹಾರಾಜರನ್ನು ತಿರಸ್ಕರಿಸುವ ಇವರು ಯಾರು ಇರಬಹುದೆಂದು ಆಕೆಯು ಆಲೋಚಿಸತೊಡಗಿದಳು. ಮಹಾರಾಜರ ಉತ್ಕರ್ಷವನ್ನು ಸಹಿಸದ ಈ ದುಷ್ಟರ ಬಳಿಯಲ್ಲಿ ನಾನು ನಿಂತುಕೊಂಡದ್ದು ನೆಟ್ಟಗಾಗಲಿಲ್ಲೆಂದು ಆಕೆಗೆ ಪಶ್ಚಾತ್ತಾಪವಾಯಿತು; ಆದರೆ ಸುಮ್ಮನಿದ್ದು ಆಗುವದನ್ನೆಲ್ಲ ನೋಡುವದೇ ಶ್ರೇಯಸ್ಕರವೆಂದು ತಿಳಿದು ಆಕೆಯು ಒಂದು ತುಟಿ ಎರಡು ಮಾಡದೆ, ಮೂಢಳಂತೆ ಎಲ್ಲವನ್ನೂ ನೋಡುತ್ತ ಕುಳಿತುಕೊಂಡಳು. ಬಾಲಗೋಸಾವಿಯೂ ಖಂಡೇ ರಾಯನೂ ಬಹಳ ಹೊತ್ತು ಏಕಾಂತವಾಡಿದ ಬಳಿಕ ಅವರಿಬ್ಬರು ಗುಹೆಯೊಳಗೆ ಹೋದರು. ಕೆಲವು ಹೊತ್ತಿನಮೇಲೆ ಹೊರಗೆ ಬಂದರು, ಮತ್ತೆ ಗುಹೆಯೊಳಗೆ ಹೋದರು. ಈ ವರೆಗೂ ಆ ಸ್ತ್ರೀಯ ಲಕ್ಷವು ಗುಹೆಯ ಕಡೆಗೆ ಹೋಗಿದ್ದಿಲ್ಲ. ಈ ಎಲ್ಲ ವಿಲಕ್ಷಣ ಪ್ರಕಾರವನ್ನು ನೋಡಿ ಆ ಹೊಸ ಬೈರಾಗಿಣಿಗೆ ದಿಗಿಲು ಬಿದ್ದಿತು. ಇವರು

ಮಹಾರಾಜರ ಜೀವಕ್ಕೆ ಅಪಾಯವನ್ನುಂಟು ಮಾಡಲು ಹೆಣಗುತ್ತಿರುವಂತೆ ಆಕೆಗೆ ತೋರಿತು. ಈ ಪ್ರಸಂಗದಲ್ಲಿ ಮಹಾರಾಜರಿಗೆ ತನ್ನಿಂದೇನಾದರೂ ಸಹಾಯವಾದರೆ ತನ್ನ ಜನ್ಮದ ಸಾರ್ಥಕತೆಯಾಗುವದೆಂದು ಆಕೆಯು ಭಾವಿಸಿದಳು. ''ಮಹಾರಾಜರ ಸಂಗಡ ಇವರ ವಿರೋಧವೆ? ಇವರು ಎಂಥ ದುಷ್ಟರು, ಎಂಥ ಧರ್ಮದ್ರೋಹಿಗಳು! ಇಂಥ ಧರ್ಮದ್ರೋಹಿಗಳೊಡನೆ ಮಾಡಿದ ನನ್ನ ಪ್ರತಿಜ್ಞೆಗಳು ಪಾಲಿಸತಕ್ಕವೆ? ಲೋಕಕಲ್ಯಾಣೇಚ್ಛೆಯಿಂದ ಹಗಲಿರುಳು ದೇಹವನ್ನು ಸವಿಸುತ್ತಿರುವ, ಮತ್ತು ಶಿವಾವತಾರವೆನಿಸುವ ಮಹಾರಾಜರ ಸೇವೆಗಿಂತ ಹೆಚ್ಚಿನ ಕೆಲಸವಾವದಿರುವದು? ನನ್ನ ಪತಿಯು ಮಹಾರಾಜರ ಸೇವೆಗಾಗಿ ಮನೆಮಾರುಗಳನ್ನು ಬಿಟ್ಟು, ಹಿರಿಯರ ಮಾತನ್ನು ಮೀರಿ, ಬಾದಶಹನ ಕ್ರೋಧವನ್ನು ಧಿಕ್ಕರಿಸಿ ವಿಜಾಪುರದಿಂದ ಪ್ರತಾಪಗಡಕ್ಕೆ ಹೊರಟಿದ್ದನು; ಅವನನ್ನನುಸರಿಸಿ ನಾನೂ ಹೊರಟಿದ್ದೆನು; ಆದರೆ ದುರ್ದೈವದಿಂದ ನನ್ನ ಪತಿಯ ಅವಸ್ಥೆಯನ್ನು ಪಠಾಣರು ಏನು ಮಾಡಿದರೆಂಬುದು ನನಗೆ ತಿಳಿಯದಾಗಿದೆ; ನಾನು ಇಂಥ ದುಷ್ಟರ ಬಲೆಯಲ್ಲಿ ಸಿಕ್ಕಿಬಿದ್ದುಕೊಂಡೆನು; ಆದರೂ ಚಿಂತೆಯಿಲ್ಲ ಈ ಸ್ಥಿತಿಯಲ್ಲಿಯೇ ನಾನು ಮಹಾರಾಜರ ಹಿತವನ್ನು ಸಾಧಿಸಲು ಹೆಣಗುವೆನು. ಇನ್ನು ನನ್ನದೇನಾಗಬೇಕಾಗಿದೆ? ಮಹಾರಾಜರ ಸೇವೆಯಲ್ಲಿ ನನ್ನ ದೇಹಪಾತವಾದರೆ ಧನ್ಯಳಾದೇನಲ್ಲ! ಇನ್ನು ಈ ಕೆಟ್ಟ ದೇಹವನ್ನು ಇಟ್ಟು ಮಾಡುವದಾದರೂ ಏನು? ಈ ದುಷ್ಟರೊಡನೆ ನಾನು ಅನುಕೂಲಳಾಗಿ ನಡೆದು, ಇವರಿಗೆ ಅತ್ಯಂತ ವಿಶ್ವಾಸವನ್ನು ತೋರಿಸಿ, ಇವರ ಹೊಟ್ಟೆಯಲ್ಲಿ ಹೊಕ್ಕು ಬೆನ್ನಲ್ಲಿ ಬಿರಿದು ನಿಜವಾದ ಸಂಗತಿಯನ್ನು ತಿಳಿದುಕೊಳ್ಳುವೆನು. ಅಂತ ಪ್ರಸಂಸಗವೊದಗಿದರೆ, ಮಹಾರಾಜರ ಮೇಲೆ ನನ್ನ ದೇಹವನ್ನು ಈಡಾಡಿ ಅವರ ಸಂಕಟ ವನ್ನು ನಿವಾರಿಸುವೆನು. ಅದು ಆಗದಿದ್ದರೆ ಮಹಾರಾಜರ ಕಾರ್ಯಸಾಧನದಲ್ಲಿ ನನ್ನ ದೇಹ ವನ್ನಾದರೂ ಅರ್ಪಿಸುವೆನು. ಬಹಳ ಹೇಳುವದರಿಂದೇನು? ಈ ವಿಶ್ವಾಸಘಾತಕಿಗಳೊಡನೆ, ಸೇರಿಗೆ ಸವ್ವಾಸೇರಾಗಿ ವರ್ತಿಸಿ, ಮಹಾರಾಜರ ಕಾರ್ಯವನ್ನು ಸಾಧಿಸಿದರೇ ನಾನು ಜಾಧವರಾಯನ ಹೆಂಡತಿಯು!''

ಈ ಮೇರೆಗೆ ಆ ಸ್ತ್ರೀಯು ವಿಚಾರವಮಾಡುತ್ತ, ತನ್ನ ಮನಸ್ಸಿನಲ್ಲಿ ನಿರ್ಧರಿಸಿಕೊಳ್ಳುತ್ತಿರಲು, ಬಾಲಗೋಸಾವಿಯು ಖಂಡೇರಾಯನನ್ನು ಕಳಿಸಿ ಗುಡಿಸಿಲಿಗೆ ಬಂದನು. ಆಗ ಆ ಸ್ತ್ರೀಯು ಗೋಸಾವಿಯನ್ನು ಕುರಿತು—''ಮಹಾರಾಜ, ನಾನು ತಮ್ಮಿಂದ ಉಪದೇಶವನ್ನು ಪಡೆಯಬೇಕೆಂದು ಮಾಡಿದ್ದೇನೆ; ಅದ್ದರಿಂದ ತಮ್ಮ ಸೇವೆಯನ್ನು ಮಾಡಿಕೊಂಡು ತಾವು ಹೇಳಿದ ಹಾಗೆ ಕೇಳಿಕೊಂಡು ಇರುವೆನು. ನನ್ನ ವಿಷಯವಾಗಿ ತಾವು ಅವಿಶ್ವಾಸಪಡಬಾರದು. ಶಿವಾಜಿಯ ವಿಷಯವಾಗಿ ತಾವು ತಿರಸ್ಕಾರಪಡುವದನ್ನು ನೋಡಿ ನನಗೆ ಬಹಳ ಸಮಾಧಾನವಾಗಿರುತ್ತದೆ. ನನ್ನ ಸಂಸಾರಗೇಡು ಆಗಲಿಕ್ಕೆ ಶಿವಾಜಿಯೇ ಕಾರಣನು. ಆತನ ಯೋಗದಿಂದ ಎಷ್ಟೋ ಜನ ತರುಣಿಯರು ಹೀಗೆಯೇ ಸಂಸ್ಕಾರಕ್ಕೆ ಎರವಾಗಿದ್ದಾರೆ. ವಿಜಾಪುರದ ದರ್ಬಾರದಲ್ಲಿ ಜಾಧವ ಮನೆತನದ ಸರದಾರರು ಸುಪ್ರಸಿದ್ಧರು, ಅವರು ಬಾದಶಹನ ಏಕನಿಷ್ಠ ಸೇವಕರು; ಆದರೆ ನನ್ನ ಪರಿಯು ಮನೆಯಲ್ಲಿ ಹಿರಿಯರ ಮಾತನ್ನು ಕೇಳದೇ, ಬಾದಶಹನನ್ನು ಲೆಕ್ಕಿಸದೆ ಶಿವಾಜಿಯನ್ನು ಕೂಡಿಕೊಳ್ಳಲಿಕ್ಕೆ ಬಂದು, ನನ್ನನ್ನು ಈ

ಗತಿಗೆ ತಂದರು. ಈಗ ನನ್ನ ಹೊಟ್ಟೆಯೊಳಗಿನ ಮಾತನ್ನು ಹೇಳುತ್ತೇನೆ. ಒಟ್ಟಿಗೆ, ಶಿವಾಜಿಯ ಬಂಡು ಮುರಿಯದಿದ್ದರೆ ನಮ್ಮಂಥ ತರುಣಿಯರ ಪರಿಣಾಮವು ಆಗದು; ಮತ್ತು ದೇಶಕ್ಕೆ ಕ್ಷೇಮವಾಗದು. ಈ ಮಾತನ್ನು ಆಡುವಾಗ ಸ್ವಲ್ಪ ಹಿಂದೆಮುಂದೆ ನೋಡಬೇಕಾಗುತ್ತದೆ; ಯಾಕಂದರೆ, ಶಿವಾಜಿಯ ಮೇಲೆ ಮರಾಟರ ಭಕ್ತಿಯು ದಿನದಿನಕ್ಕೆ ಹೆಚ್ಚುತ್ತ ನಡೆದಿದೆ. ಶಿವಾಜಿಯ ವಿಷಯವಾಗಿ ನಿಮ್ಮ ಮಾತಿನಲ್ಲಿ ತಿರಸ್ಕಾರವು ತೋರಿದ್ದರಿಂದ, ನಿಮ್ಮ ಮುಂದೆ ಈ ಮಾತನ್ನು ಆಡಿದ್ದೇನೆ. ಶಿವಾಜಿಯು ಎಂಥ ಮೋಸಗಾರನೆಂಬುದು ಚಂದ್ರರಾವ ಮೋರೆಯ ಪ್ರಕರಣದಲ್ಲಿ ಜಗತ್ತಿಗೆ ಗೊತ್ತಾಗಿದೆ. ಚಂದ್ರರಾಯನಂಥ ಸ್ವಾಮಿನಿಷ್ಠನೂ, ಶೂರನೂ, ತೇಜಸ್ವಿಯೂ ಆದ ಮರಾಠಾ ಸರದಾರನು ಮತ್ತೊಬ್ಬನಿಲ್ಲ. ಅಂಥವನ ಖೂನನ್ನು ಶಿವಾಜಿಯು ಅನ್ಯಾಯದಿಂದ ಮಾಡಿಸಿದನೆಂದ ಬಳಿಕ, ಶಿವಾಜಿಯ ನೀಚತನವನನ್ನೇನು ವರ್ಣಿಸಬೇಕು! ಚಂದ್ರರಾಯನನ್ನು ಹಣ್ಣಿಗೆ ತರಬೇಕಾಗಿದ್ದರೆ, ಶಿವಾಜಿಯು ಅವನ ಎದುರಿಗೆ ನಿಂತು ಯುದ್ಧ ಮಾಡಬೇಕಾಗಿತ್ತು. ಮಹಾರಾಜ, ಶಿವಾಜಿಯ ಇಂಥ ಹಲವು ದೋಷಗಳನ್ನು ನಾನು ಬಲ್ಲೆನು; ಆದರೆ ಅವನ್ನು ತಮ್ಮ ಮುಂದೆ ಹೇಳುವದಾದರೂ ಉಚಿತವೋ ಉಚಿತವಲ್ಲವೋ ಎಂದು ಸುಮ್ಮನಿರಬೇಕಾಗಿದೆ.

ಹೀಗೆ ತನ್ನ ಶಿಷ್ಯಳು ಶಿವಾಜಿಗೆ ದೋಷವಿಡುವದನ್ನು ನೋಡಿ ಬಾಲಗೋಸಾವಿಗೆ ಆಶ್ಚರ್ಯವಾಯಿತು. ಈಕೆಯ ಮಾತಿನಲ್ಲಿ ಮೋಸವಿರಲಿಕ್ಕಿಲ್ಲವಷ್ಟೆ, ಎಂದು ಆತನು ಒಮ್ಮೆ ಶಂಕಿಸಿದನು; ಆದರೆ ಆ ಶಂಕೆಯು ಬಹಳ ಹೊತ್ತು ಅವನ ಮನಸ್ಸಿನಲ್ಲಿ ಉಳಿಯಲಿಲ್ಲ; ಯಾಕಂದರೆ, ಶಿವಾಜಿಯ ಸೇಡನ್ನು ತೀರಿಸಿಕೊಳ್ಳಲಿಕ್ಕೆ ತುಂಬಾ ಆತುರಪಡುತ್ತಿದ್ದ ಅವನಿಗೆ, ಶಿವಾಜಿಯ ನಿಂದೆಯ ಇವಿಷ್ಟೇ ಮಾತುಗಳಿಂದ ಸಮಾಧಾನವಾಯಿತು; ಮತ್ತು ತನ್ನ ಶಿಷ್ಯಳ ಮೇಲಿನ ಸಿಟ್ಟು ಕಡಿಮೆಯಾಗಿ ಅವನ ವಿಶ್ವಾಸವು ಹೆಚ್ಚಿತು. ಅವನು ಆ ಸ್ತ್ರೀಯನ್ನು ಕುರಿತು–

ಬಾಲಗೋಸಾವಿ–ಶಿಷ್ಯೋತ್ತಮಳೇ, ನಿನ್ನ ಮಾತನ್ನು ಕೇಳಿ ನನಗೆ ಬಹಳ ಸಮಾಧಾನ ವಾಯಿತು. ನೀನು ಶಿವಾಜಿಯ ನಿಜವಾದ ಗುಣಗಳನ್ನು ವರ್ಣಿಸಿದೆ. ನಮ್ಮ ಮರುಳು ಜನರು ಶಿವಾಜಿಯೆಂದರೆ ಹುಚ್ಚೆದ್ದು ಹರಿಯುವರು; ಅವನು ಅವತಾರಿಕನಂತೆ, ಧರ್ಮೋದ್ಧಾರಕ ನಂತೆ, ಸ್ವರಾಜ್ಯ ಸ್ಥಾಪಕನಂತೆ! ನೀನು ಹೇಳಿದಂತೆ ಚಂದ್ರರಾವ ಮೋರೆಯ ಮನೆತನವನ್ನು ಆತನು ಮಣ್ಣುಗೂಡಿಸಿಬಿಟ್ಟನು. ಚಂದ್ರರಾಯನ ಮನೆತನದವರಾರಾದರೂ ಇದ್ದರೆ ಅವರು ಶೋಕ ಸಂತಪ್ತರಾಗಿರಲಿಕ್ಕಿಲ್ಲವೆ?

ಸ್ತ್ರೀಯು–ಬರಿಯ ಶೋಕಸಂತಪ್ತರಾಗುವದೇ ಏಕೆ? ಜೀವದ ಹಂಗುದೊರೆದು ಅವರು ಶಿವಾಜಿಯ ಸೇಡು ತೀರಿಸಿಕೊಳ್ಳಲಿಕ್ಕೆ ಯತ್ನಿಸತಕ್ಕದ್ದು. ನನ್ನಂಥ ಪರಕೀಯಳಿಗೇ ಚಂದ್ರರಾಯನ ವೃತ್ತಾಂತದಿಂದ ಸಂತಾಪವಾಗುತ್ತದೆಂದ ಬಳಿಕ, ಅವರಿಗೆ ಎಷ್ಟು ಸಂತಾಪವಾಗುತ್ತಿರಬಹುದು? ''ಮರುಳು ಕಂಡು ಮರುಳು ರೆರೇ'' ಅನ್ನುವಂತೆ ಒಬ್ಬರನ್ನು ಕಂಡು ಒಬ್ಬರು ಅಂಧಶ್ರದ್ಧೆ ಯಿಂದ ಶಿವಾಜಿಯ ಪ್ರಸ್ಥವನ್ನು ಬೆಳಿಸದೆ, ವಿಚಾರವಂತರು ಅವನನ್ನು ಬಗ್ಗು ಬಡಿಯುವದು ಅವಶ್ಯವೆಂದು ನಾನಂತು ತಿಳಿಯುತ್ತೇನೆ.

ಬಾಲಗೋಸಾವಿ–ಸರಿ ಸರಿ! ನಿನ್ನ ತಿಳುವಳಿಕೆಯು ನನ್ನ ಮತದಿಂದ ನ್ಯಾಯವಾದದ್ದೇ ಸರಿ; ಆದರೆ ಶಿವಾಜಿಯ ಕೇಡು ಬಗೆಯುವವರಿಗೆ ನಿನ್ನಿಂದೇನು ಸಹಾಯವಾದೀತು?

ಸ್ತ್ರೀಯು–ಬೇಕಾದ ಸಹಾಯವಾದೀತು. ಈ ಕಾರ್ಯದಲ್ಲಿ ಮುಂದಾಳುಗಳಾದವರಂತು ಮುಂದಕ್ಕೆ ಬರಲಿ! ಅವರು ಹೇಳಿದ ಸಹಾಯವನ್ನು ನಾನು ಮಾಡುವೆನು.

ಹೀಗೆ ಆ ಸ್ತ್ರೀಯು ಮಾತಾಡಿದ್ದನ್ನು ಕೇಳಿ ಬಾಲಗೋಸಾವಿಯು ಆಶ್ಚರ್ಯಪಟ್ಟನು. ಇವಳನ್ನು ತನ್ನ ಕಾರ್ಯದಲ್ಲಿ ಸಹಾಯಕಳನ್ನಾಗಿ ಮಾಡಿಕೊಳ್ಳಬಹುದೆ? ಈಕೆಯಲ್ಲಿ ಮೋಸವಿರಲಿಕ್ಕಿಲ್ಲವೆ? ಯಾರಿಗೆ ಗೊತ್ತು, ನನ್ನ ಹೊಟ್ಟೆಯೊಳಗಿನ ಮಾತನ್ನು ಹೊರಗೆಡುವುದಕ್ಕಾಗಿ ಈಕೆಯು ಹೀಗೆ ಮಾತಾಡುತ್ತಿದ್ದರೂ ಆಡುತ್ತಿರಬಹುದು; ಒಳ್ಳೇದು, ಹಾಗೆಯೇ ಆಡಲೊಲ್ಲಳೇಕೆ, ನನ್ನ ಹೊಟ್ಟೆಯೊಳಗಿನ ಮಾತುಗಳನ್ನು ಕೇಳಿ ಈಕೆ ಮಾಡುವದಾದರೂ ಏನು? ಈಕೆಯು ಸಂಪೂರ್ಣವಾಗಿ ನನ್ನ ಕೈಯಲ್ಲಿ ಸಿಕ್ಕು ಹೋಗಿರುತ್ತಾಳೆ. ಇಂಥವಳನ್ನು ಉಪಾಯದಿಂದ ನಮ್ಮ ಕಾರ್ಯಕ್ಕೆ ಅನುಕೂಲಳನ್ನಾಗಿ ಮಾಡಿಕೊಳ್ಳುವದೇ ಜಾಣತನವು. ನಮ್ಮ ತಂದೆಯಲ್ಲಿ ಈಕೆಯ ವಿಶ್ವಾಸವು ಇಷ್ಟು ಇದ್ದ ಬಳಿಕ, ನಾನು ಈಕೆಗೆ ನನ್ನ ನಿಜವಾದ ವೃತ್ತಾಂತವನ್ನು ಯಾಕೆ ಹೇಳಬಾರದು? ಆದರಿಂದಲೇ ನಮ್ಮ ಕಾರ್ಯಕ್ಕೆ ಈಕೆಯಿಂದ ಸಹಾಯವಾಗುವ ಸಂಭವವಿದೆ, ಎಂದು ಯೋಚಿಸಿ ಆ ಸ್ತ್ರೀಯನ್ನು ಕುರಿತು–

ಬಾಲಗೋಸಾವಿ–ಶಿಷ್ಯಳೇ, ನಿನ್ನಿಂದ ನನ್ನ ಕಾರ್ಯಕ್ಕೆ ಸಹಾಯವಾಗಬೇಕೆಂತಲೇ ದೇವರು ನಮ್ಮಿಬ್ಬರ ಸಮ್ಮೇಳನದ ಯೋಗವನ್ನು ಒದಗಿಸಿಕೊಟ್ಟಿರುತ್ತಾನೆ; ಹಾಗಲ್ಲದಿದ್ದರೆ ನಮ್ಮಿಬ್ಬರ ಸಂಬಂಧವಾಗಲಿಕ್ಕೆ ಬೇರೆ ಪ್ರಬಲ ಕಾರಣವೇನಿರಬೇಕು? ನಿನ್ನ ಮುಂದೆ ನಾನು ಯಾವ ಮಾತನ್ನೂ ಮುಚ್ಚಿ ಇಡುವದಿಲ್ಲ. ನಾನು ಚಂದ್ರರಾವ ಮೋರೆಯ ಮಗಳು. ನನ್ನ ಹೆಸರು ತಾರೆಯು. ನನ್ನ ತಂದೆಯನ್ನು ಶಿವಾಜಿಯು ಮೋಸದಿಂದ ಕೊಲ್ಲಿಸಿದ್ದರಿಂದ, ಅದರ ಸೇಡು ತೀರಿಸಿಕೊಳ್ಳಲಿಕ್ಕೆ ನಾನು ಗೋಸಾವಿಯ ವೇಷವನ್ನು ಧರಿಸಿರುತ್ತೇನೆ. ನನ್ನ ಕಕ್ಕನೂ, ನಮ್ಮ ತಂದೆಯ ಸೋದರಳಿಯನೂ ನನ್ನ ಕಾರ್ಯಕ್ಕೆ ಸಹಾಯಕರಾಗಿದ್ದಾರೆ. ನನ್ನ ಕಕ್ಕನು ಶಿವಾಜಿಯನ್ನು ಕರತರುವದಕ್ಕಾಗಿ ಹೋಗಿದ್ದಾನೆ. ಆಗಲೇ ಬಂದವನು ನನ್ನ ತಂದೆಯ ಸೋದರಳಿಯನಾದ ಖಂಡೇರಾಯನು. ಇವರಲ್ಲದೆ, ನಮ್ಮ ಇಬ್ಬರು ಅಣ್ಣಂದಿರನ್ನು ಶಿವಾಜಿಯು ಪುಣೆಯಲ್ಲಿ ಪ್ರತಿಬಂಧದಲ್ಲಿರಿಸಿದ್ದಾನೆ. ನನ್ನ ತಂದೆಯ ಮರಣದ ಸೇಡು ತೀರಿಸಿಕೊಳ್ಳುವದೊಂದೇ ನನ್ನ ಕೆಲಸವಾಗಿರುತ್ತದೆ. ಅದಕ್ಕಾಗಿಯೇ ನಾನು ಇಲ್ಲಿಯವರೆಗೆ ಜೀವದಿಂದ ಇದ್ದೇನೆ. ಇಲ್ಲಿದ್ದರೆ ನನ್ನ ಮೋಹದ ತಂದೆಯನ್ನು ಕಳಕೊಂಡು ನಾನು ಒಂದು ಅರಗಳಿಗೆ ಜೀವಿಸುತ್ತಿದ್ದಿಲ್ಲ, ಶಿಷ್ಯಳೇ, ಇನ್ನು ನೀನು ನನ್ನನ್ನು ಗುರುವೆಂದು ತಿಳಿಯದೆ, ಸಖಿಯೆಂದು ತಿಳಿ. ಸಖೀ, ನಿನ್ನ ಹೆಸರೇನು ಹೇಳು. ನಿನ್ನ ವೃತ್ತಾಂತವನ್ನರಿಯದೇ ನಾನು ಮನಸ್ಸಿಗೆ ಬಂದಂತೆ ನಿನಗೆ ಮಾತಾಡಿದೆನು. ನಿನ್ನ ಕಡೆಯಿಂದ ಸಿಕ್ಕಹಾಗೆ ಪ್ರತಿಜ್ಞೆ ಮಾಡಿಸಿ ಕೊಂಡೆನು. ಅದಕ್ಕಾಗಿ ನನ್ನನ್ನು ಕ್ಷಮಿಸು. ನಡೆ, ನಾವು ಶಿವಾಜಿಯ ಪ್ರಾಣಹರಣಕ್ಕಾಗಿ ಮಾಡಿದ ಸಾಹಸದ ಕಾರ್ಯವನ್ನು ನಿನಗೆ ತೋರಿಸುವೆನು.

ತಾರಾಬಾಯಿಯ ಈ ಮಾತುಗಳನ್ನು ಕೇಳಿ ಆ ಸ್ತ್ರೀಯು ಬೆದರಿದ್ದಳು. ಮಹಾರಾಜರ ಪ್ರಾಣಹರಣ ಮಾಡುವದಕ್ಕಾಗಿ ಈ ನೀಚರು ಎಂಥ ಸಾಹಸದ ಕಾರ್ಯವನ್ನು ಮಾಡಿರುವರೋ, ಎಂದು ಆಕೆಯು ಮನಸ್ಸಿನಲ್ಲಿ ಬಹಳವಾಗಿ ಚಿಂತಿಸಿದಳು. ಈ ಘಾತಕರ ಗುಪ್ತಾಲೋಚನೆಯು ಹೊರಬಿದ್ದದ್ದು ಒಂದು ಪಕ್ಷದಲ್ಲಿ ನೆಟ್ಟಗಾಯಿತೆಂದು ಆಕೆಯು ತಿಳಿದಳು; ಯಾಕಂದರೆ, ಅದರ ಪ್ರತಿಕಾರೋಪಾಯವನ್ನು ಯೋಚಿಸಲಿಕ್ಕೆ ಆಕೆಗೆ ಅವಕಾಶವು ದೊರೆತಂತಾಯಿತು. ಆಕೆಯು ಅತ್ಯಂತ ಕೃತಜ್ಞತಾಭಾವವನ್ನು ನಟಿಸುತ್ತ—''ತಾರಾಬಾಯಿ, ನಿನ್ನಂಥ ಚಿಕ್ಕ ಹೆಣ್ಣುಮಗಳು ತಂದೆಯ ಮರಣದ ಸೇಡು ತೀರಿಸಿಕೊಳ್ಳುವದಕ್ಕಾಗಿ ಈ ಪರಿ ಕಷ್ಟಪಡುವದನ್ನು ನೋಡಿ ನನಗೆ ಬಹಳ ಸಂತೋಷವಾಗುತ್ತದೆ; ನಿನ್ನ ಕುಲೀನತೆಗೂ, ಕ್ಷಾತ್ರತೇಜಕ್ಕೂ, ಇದು ಪರಮ ಭೂಷಣವು. ನನ್ನ ಮೇಲೆ ವಿಶ್ವಾಸವಿಟ್ಟು, ನಿನ್ನ ಕಾರ್ಯದಲ್ಲಿ ನನ್ನನ್ನು ಸಹಾಯಕಳನ್ನಾಗಿ ಮಾಡಿಕೊಳ್ಳುವದನ್ನು ನೋಡಿ ನಾನು, ಅತ್ಯಂತ ಕೃತಜ್ಞಳಾಗಿರುವೆನು. ನನ್ನ ಹೆಸರು ಹೈಮವತಿಯು. ನನ್ನನ್ನು ನೀನು ಪ್ರಿಯ ಸಖಿಯೆಂದು ಭಾವಿಸುವದಕ್ಕಿಂತ, ಶಿಷ್ಯಳೆಂದೇ ಭಾವಿಸು; ಯಾಕಂದರೆ, ಸಾಹಸ ಕಾರ್ಯವನ್ನು ಜರುಗಿಸುವಲ್ಲಿ ನೀನು ನನಗೆ ಗುರುವಾಗಿರುತ್ತೀ, ಎಂದು ನುಡಿದಳು. ಅದನ್ನು ಕೇಳಿ ತಾರಾಬಾಯಿಗೆ ಸಂತೋಷವಾಯಿತು. ಖಂಡೇರಾಯನ ಮುಖಾಂತರವಾಗಿ ತುಳಾಜಿಯ ಕೈಯಿಂದ ಗುಹೆಯಲ್ಲಿ ಮಾಡಿಸತಕ್ಕ ಸಿದ್ಧತೆಯನ್ನು ಆಕೆಯು ಮಾಡಿಸಿದ್ದಳು. ಸಿದ್ಧತೆಯು ಪೂರ್ಣವಾಗಿರುವದೋ ಎಂಬುದನ್ನು ನೋಡುವದಕ್ಕಾಗಿ ಆಕೆಯು ಹೈಮವತಿಯೊಡನೆ ಗುಹೆಯನ್ನು ಪ್ರವೇಶಿಸಿದಳು. ಗುಹೆಯಲ್ಲಿ ಕಗ್ಗತ್ತಲೆಯು ಮುಸುಕಿದ್ದರಿಂದ, ತಾರಾಬಾಯಿಯು ಕೈಯಲ್ಲಿ ಕಕ್ಕಡವನ್ನು ತಕ್ಕೊಂಡಿದ್ದಳು. ಆ ಭಯಂಕರವಾದ ಗುಹೆಯಲ್ಲಿ ಮದ್ದಿನ ಚೀಲಗಳನ್ನೂ, ಬೇರೆ ಜ್ವಾಲಾಗ್ರಾಹಿ ಪದಾರ್ಥಗಳ ಚೀಲಗಳನ್ನೂ ವಿಪುಲವಾಗಿ ತುಂಬಿ ಇಟ್ಟಿದ್ದರು. ಅದನ್ನು ನೋಡಿ ಹೈಮವತಿಯ ಮೈಮೇಲಿನ ಕೂದಲುಗಳು ನೆಟ್ಟಗಾದವು. ಈ ಕುತ್ತಿನೊಳಗಿಂದ ಮಹಾರಾಜರು ಹ್ಯಾಗೆ ಪಾರಾದಾರೆಂದು ಆಕೆಯು ಚಿಂತಿಸತೊಡಗಿದಳು. ಅವರಿಬ್ಬರು ಸಖಿಯರು ಗುಹೆಯನ್ನೆಲ್ಲ ತಿರುಗಿ, ನೋಡತಕ್ಕದ್ದನ್ನೆಲ್ಲ ನೋಡಿದರು. ಅದರಿಂದ ತಾರಾಬಾಯಿಗೆ ಸಂತೋಷವೂ, ಹೈಮವತಿಗೆ ದುಃಖವೂ ಆದವು; ಆದರೆ ಹೈಮವತಿಯು ತನ್ನ ಮನಸ್ಸಿನೊಳಗಿನ ದುಃಖವನ್ನು ಹೊರಗೆಡವದೆ ಸಂತೋಷವನ್ನು ಪ್ರಕಟಿಸಿ ತಾರಾಬಾಯಿಯ ವಿಲಕ್ಷಣ ಸಾಹಸಕ್ಕಾಗಿ ಆಕೆಯನ್ನು ಹೊಗಳಿದಳು. ಗುಹೆಯನ್ನು ನೋಡುವದಾದ ಮೇಲೆ ತಾರಾಬಾಯಿಯು ಹೊರಗೆ ಬರುವದಕ್ಕಾಗಿ ಹೊರಟಳು. ಆಕೆಯನ್ನು ಹಿಂಬಾಲಿಸಿ ಹೈಮವತಿಯೂ ಬರುತ್ತಲಿದ್ದಳು. ತಾರಾಬಾಯಿಯು ಕಕ್ಕಡವನ್ನು ಹಿಡಕೊಂಡು ಮೇಲಕ್ಕೆ ಹತ್ತುವದನ್ನು ನೋಡಿ ಹೈಮವತಿಯು—''ಸಖೀ, ಕಕ್ಕಡವನ್ನು ಹಿಡಕೊಂಡು ಮೇಲಕ್ಕೆ ಹೇಗೆ ಹತ್ತುವೆ? ನನ್ನ ಕೈಯಲ್ಲಿ ಅದನ್ನು ತಾ. ನೀನು ಮೇಲಕ್ಕೆ ಹತ್ತಿದ ಬಳಿಕ ಕಕ್ಕಡವನ್ನು ನಿನ್ನ ಕೈಯಲ್ಲಿ ಕೊಟ್ಟು, ನಾನು ಮೇಲಕ್ಕೆ ಹತ್ತಿಬರುವೆನು'' ಎಂದು ಹೇಳಿದಳು.

ಹೈಮವತಿಯ ಮಾತಿಗೆ ತಾರಾಬಾಯಿ ಒಪ್ಪಿಕೊಂಡು, ಕಕ್ಕಡವನ್ನು ಆಕೆಯ ಕೈಯಲ್ಲಿ ಕೊಟ್ಟು, ತಾನು ಮೇಲಕ್ಕೆ ಹತ್ತಿದಳು; ಆದರೆ ಹೈಮವತಿಯು ಕಕ್ಕಡವನ್ನು ತಾರಾಬಾಯಿಯ ಕೈಯಲ್ಲಿ ಕೊಟ್ಟು, ತಾನು ಮೇಲಕ್ಕೆ ಹತ್ತುವದರ ಬದಲು ಕಕ್ಕಡವನ್ನು ತಕ್ಕೊಂಡು ಗುಹೆಯೊಳಗೆ ನಡೆದಳು. ಇದನ್ನು ನೋಡಿ ತಾರಾಬಾಯಿಯು—''ಸಖೀ, ಹೈಮವತಿ, ತಾ, ಕಕ್ಕಡವನ್ನು. ಇನ್ನು ಬೇಗನೆ ನೀನು ಮೇಲಕ್ಕೆ ಹತ್ತಿ ಬಾ. ಇನ್ನೂ ಮಾಡತಕ್ಕ ಸಿದ್ಧತೆಗಳು ಬಹಳ ಇರುವವು. ನಾಳೆ ಬೆಳಗಿನಲ್ಲಿ ನನ್ನ ವೈರಿಯಾದ ಶಿವಾಜಿಯು ಇಲ್ಲಿಗೆ ಬರುವನು. ಆಗ ನಾನೂ ನೀನೂ ಕೂಡಿಯೇ ಈ ಮದ್ದಿಗೆ ಕೊಳ್ಳಿಯ ಕೊಟ್ಟು, ಆತನನ್ನು ಅಗ್ನಿಗೆ ಆಹುತಿಯಾಗಿ ಕೊಡೋಣ. ಈ ಕಾರ್ಯದಲ್ಲಿ ನಮ್ಮಿಬ್ಬರ ಪ್ರಾಣಹಾನಿಯಾದರೂ ಆಗಲಿ'' ಎಂದು ನುಡಿಯಲು, ಹೈಮವತಿಯು ಸಿಟ್ಟಿನಿಂದ—''ದುಷ್ಟೇ, ನಿನ್ನ ಆ ವೈರಿಯು ಜಗತ್ತಿನ ಹಿತಕರ್ತೃವಾಗಿರುವನು. ಆತನನ್ನು ಬದುಕಿಸುವುದಕ್ಕಾಗಿ ನನ್ನ ನಿನ್ನ ಇಬ್ಬರ ಪ್ರಾಣಗಳೇ ಏಕೆ, ಇನ್ನು ಐನೂರು ಜನರ ಪ್ರಾಣಗಳು ಹೋದರೂ ಚಿಂತೆಯಿಲ್ಲ, ಮಹಾರಾಜರು ಇನ್ನು ಮೂರು ತಾಸುಗಳು ಮೇಲೆ ಬರುವರು; ಆದರೆ ಈಗಲೇ ಕಕ್ಕಡವನ್ನು ಮದ್ದಿಗೆ ಹಚ್ಚಿ, ಈ ಗುಹೆಯನ್ನು ಹಾರಿಸಿಬಿಡುವೆನು,'' ಎಂದು ನುಡಿದಳು. ಅದನ್ನು ಕೇಳಿದಕೂಡಲೆ ತಾರೆಯ ಮೋರೆಯು ಕಪ್ಪಿಟ್ಟಿತು. ಆಕೆಯ ಮನಸ್ಸಿನಲ್ಲಿ—''ಇಷ್ಟು ದಿವಸ ಮಾಡಿದ ಪ್ರಯತ್ನವು ಈ ದುಷ್ಟ ಸ್ತ್ರೀಯಿಂದ ವ್ಯರ್ಥವಾಗುವ ಪ್ರಸಂಗವು ಒದಗಿತಲ್ಲ! ಈಕೆಯು ಮೋಸದಿಂದ ನನ್ನನ್ನು ವಂಚಿಸಿದಳು. ಈಗಲೇ ಈಕೆಯನ್ನು ಇಲ್ಲಿ ಹುಗಿಸಲಾ, ಸುಡಿಸಲಾ? ಏನು ಮಾಡಲಿ? ನಮ್ಮವರು ಯಾರೂ ಇಲ್ಲಿ ಇಲ್ಲವಲ್ಲ! ನಾನು ಮೂರ್ಖತನದಿಂದ ಹೊಟ್ಟೆಯೊಳಗಿನ ಮಾತನ್ನೆಲ್ಲ ಈಕೆಗೆ ಹೇಳಿಬಿಟ್ಟೆನು. ಎಂತ ಅನರ್ಥ ವಾಯಿತಿದು! ಈಗ ಹ್ಯಾಗೆ ಮಾಡಲಿ, ಏನು ಮಾಡಲಿ, ಎಂದು ಚಡಪಡಿಸುತ್ತ ಸಂತಾಪದಿಂದ ಹೈಮವತಿಯನ್ನು ಕುರಿತು—'' ಹೈಮವತೀ, ಹೀಗೆ ವಿಶ್ವಾಸಘಾತವನ್ನು ಮಾಡಬಹುದೆ? ನನ್ನ ತಂದೆಯು ಖೂನು ಮಾಡಿದವನ ಸೇಡು ತೀರಿಸಿಕೊಳ್ಳವದಕ್ಕಾಗಿ ನಾನು ಯತ್ನಿಸುತ್ತಿರಲು, ನನ್ನ ಯತ್ನವನ್ನೆಲ್ಲ ನಿಷ್ಫಲವಾಗಮಾಡಿ, ತಿರುಗಿ ನನ್ನ ಪ್ರಾಣಹರಣ ಮಾಡಲು ನೀನು ಯತ್ನಿಸುವೆಯಾ? ಆದರೆ ನಿನ್ನ ಪ್ರಾಣದ ಗತಿಯೇನಾದೀತೆಂಬದನ್ನು ಮೊದಲು ವಿಚಾರ ಮಾಡು. ಗವಿಯಲ್ಲಿಯ ಮದ್ದಿಗೆ ಕೊಳ್ಳಿಯ ಕೊಡುವದರಿಂದ ಮೊದಲು ನಿನ್ನ ಪ್ರಾಣಹಾನಿ ಯಾಗಿ, ಆಮೇಲೆ ಹೊರಗಿವರ ಪ್ರಾಣಹಾನಿ ಯಾಗುವದು, ಎಂದು ನುಡಿಯಲು, ಹೈಮವತಿಯು—''ತಾರೇ, ದುಷ್ಟ ಸ್ತ್ರೀಯೇ, ಮಹಾ ರಾಜರಂಥ ಪವಿತ್ರ ಪುರುಷರ ಪ್ರಾಣವನ್ನುಳಿಸುವಾಗ ನನಗೆ ಮೃತ್ಯುವು ಒದಗಿದರೆ ನಾನು ಧನ್ಯಳಾಗುವೆನು. ಇಡಿಯ ಮಹಾರಾಷ್ಟ್ರವನ್ನು ಶತ್ರುಗಳ ಕಾಟದಿಂದ ಮುಕ್ತಮಾಡುವ ಮಹಾಪುರುಷನ ಜೀವ ಉಳಿಯುವಾಗ ನನ್ನಂಥ ಕ್ಷುದ್ರಳ ಜೀವವು ಹೋದರೆ ಅನ್ಯಾಯ ವಾಗುವದೆ? ನೋಡು, ಈ ಕಕ್ಕಡವು ತನ್ನ ಕೈಗೆ ಹತ್ತುವವರೆಗೆ ನಾನು ಸುಮ್ಮನಿದ್ದು, ಆಮೇಲೆ ಇದರಿಂದ ಎಲ್ಲ ಮದ್ದಿನ ಚೀಲಗಳಿಗೆ ಬೆಂಕಿಯನ್ನು ಹಚ್ಚುವೆನು. ನಿನಗೆ ಜೀವವು ಬೇಕಾಗಿದ್ದರೆ ಬೇಗನೆ ಇಲ್ಲಿಂದ ಹೊರಟುಹೋಗು. ನಿನ್ನಂಥ ದುಷ್ಟ ಸ್ತ್ರೀಯನ್ನು ಕೊಲ್ಲುವ ಇಚ್ಛೆಯು ನನಗಿಲ್ಲ, ಮಹಾರಾಜರ ಪ್ರಾಣವನ್ನು ಉಳಿಸುವದಕ್ಕಾಗಿ ನನ್ನ ಜೀವದ ಬಲಿ ಕೊಡುವೆನು.

ಇದಕ್ಕೆ ಏನು ಉತ್ತರ ಕೊಡಬೇಕೆಂಬುದು ತಾರೆಗೆ ತಿಳಿಯಲೊಲ್ಲದು. ''ಈಗ ನಾನು ರಚಿಸಿದ್ದ ವ್ಯೂಹವೆಲ್ಲ ವ್ಯರ್ಥವಾಯಿತು. ಜೀವದ ಹಂಗುದೊರೆದಿದ್ದ ಈ ಸ್ತ್ರೀಯು, ನುಡಿದಂತೆ ನಡಿಯದೆ ಬಿಡುವದಿಲ್ಲ; ಆದರಿಂದ ನನ್ನ ತಂದೆಯ ಖೂನು ಮಾಡಿಸಿದ ಶಿವಾಜಿಯು ಹಾಗೇ ಉಳಿದು, ನನ್ನ ಪ್ರಾಣವು ಮಾತ್ರ ಹೋಗುವದು. ಇದಕ್ಕೆ ಯುಕ್ತಿ ಏನು? ಆಹಾ! ಇದಕ್ಕೇನು ಯುಕ್ತಿ ಮಾಡಬೇಕಾದೀತು? ಎಂದು ಯೋಚಿಸುತ್ತಿರಲು, ಹೈಮವತಿಯು—''ತಾರಾಬಾಯಿ, ಯಾಕೆ? ಬಹಳ ಯೋಚನೆ ಮಾಡಹತ್ತಿರುವೆ? ನೋಡು, ಕಕ್ಕಡವು ತೀರ ಸ್ವಲ್ಪ ಉಳಿಯಿತು. ವ್ಯರ್ಥ ಪ್ರಾಣವನ್ನು ಕಳಕೊಳ್ಳಬೇಡ. ಅನ್ಯರ ಪ್ರಾಣಹರಣ ಮಾಡುವ ಕ್ರೂರತನವು ನನಗೆ ಸರ್ವಥಾ ಸೇರುವದಿಲ್ಲ. ಮಹಾರಾಜರು ಸುಸೂತ್ರವಾಗಿ ಈ ಗಂಡಾಂತರದಿಂದ ಪಾರಾಗಿ, ಅವರಿಗೆ ನಿಮ್ಮ ವ್ಯೂಹವು ತಿಳಿದು, ಅವರು ನಿಮ್ಮಿಂದ ತಿರುಗಿ ಇಂಥ ಗಂಡಾಂತರಕ್ಕೆ ಈಡಾಗ ದಂತೆ ವ್ಯವಸ್ಥೆ ಮಾಡಿಕೊಂಡರೆ ಸಾಕು. ನಿನ್ನ ಜೀವ ಉಳಿಯಬೇಕೆಂದು ನೀನು ಇಚ್ಛಿಸುತ್ತಿದ್ದರೆ ಇನ್ನೊಂದು ಯುಕ್ತಿಯನ್ನು ಹೇಳುತ್ತೇನೆ ಕೇಳು. ನೀನು ಗುಹೆಯೊಳಗೆ ಇಳಿದು ಬಂದು, ನಾನು ಹೇಳಿದಲ್ಲಿ ಸ್ವಸ್ಥವಾಗಿ ಕುಳಿತುಕೋ. ಮಹಾರಾಜರು ಇಲ್ಲಿಗೆ ಬಂದು ಹೋಗುವವರೆಗೆ ನೀನು ಇಲ್ಲಿಂದ ಉಲುಕಲಾಗದು. ಈ ಮದ್ದಿನ ಚೀಲಗಳ ಸನಿಯಕ್ಕೆ ನೀನು ಸುಳಿಯತಕ್ಕದ್ದಲ್ಲ, ಎಂದು ಹೇಳಲು, ತಾರೆಯ ಮನಸ್ಸಿನಲ್ಲಿ ಒಂದು ವಿಚಾರವು ಹೊಳೆದು—''ಹು, ಹಾಗೇ, ಆಗಲಿ, ನೀನು ಹೇಳಿದಲ್ಲಿ ಕುಳಿತುಕೊಳ್ಳುವೆನು, ಹೇಳಿದಹಾಗೆ ಕೇಳುವೆನು; ಆದರೆ ಮದ್ದಿಗೆ ಬೆಂಕಿಯನ್ನು ಮಾತ್ರ ಹಚ್ಚಬೇಡ; ವ್ಯರ್ಥ ನನ್ನ ಪ್ರಾಣವನ್ನು ಕಳೆಯಬೇಡ ಎಂದು ಹೇಳಿ, ಮತ್ತೆ ಗುಹೆಯಲ್ಲಿ ಹಾರಿಕೊಂಡಳು. ಆಗ ಹೈಮವತಿಯು ಕಕ್ಕಡವನ್ನು ಗಟ್ಟಿಯಾಗಿ ಹಿಡಿದುಕೊಂಡಿದ್ದಳು. ಅಷ್ಟರೊಳಗೆ ಗುಹೆಯಲ್ಲಿ ಇಳಿದ ತಾರೆಯು ಒಮ್ಮೆಲೆ ಹೈಮವತಿಗೆ ತೆಕ್ಕೆಬಿದ್ದು, ಕಕ್ಕಡವನ್ನು ಕಸಿದುಕೊಳ್ಳಬೇಕೆಂದು ಗುದುಮುರಿಗೆ ಹಾಕಹತ್ತಿದಳು, ಆದರೆ ಶಿವಾಜಿ ಮಹಾರಾಜರ ಮೇಲಿನ ಅತ್ಯುತ್ಕಟ ಭಕ್ತಿಯಿಂದ ಸತ್ವಸಂಪನ್ನೆಯಾಗಿದ್ದ ಹೈಮವತಿಯು, ತಾರೆಗೆ ಅಸುಗೊಳ್ಳದೆ ತನ್ನ ಟೊಕೆಂಕ್ಕೆ ಸುತ್ತು ಹಾಕಿದ್ದ ಆಕೆಯನ್ನು ದರದರ ಎಳಕೊಂಡು ಮದ್ದಿನ ಚೀಲಗಳ ಕಡೆಗೆ ಹೋಗಿ—''ನೋಡು, ತಾರೇ, ಈ ಕಕ್ಕಡದ ಕಿಡಿಗಳನ್ನು ಈ ಮದ್ದಿನ ಚೀಲಗಳ ಮೇಲೆ ಸುರಿಸುತ್ತ ಹೋಗುವೆನು,'' ಎಂದು ಹೇಳಿದಳು. ಆಗ ತಾರೆಯು ನಿರುಪಾಯಳಾಗಿ— ''ಹೈಮವತೀ, ನನ್ನ ಅಪರಾಧವನ್ನು ಕ್ಷಮಿಸು; ನನ್ನ ಪ್ರಾಣಹರಣ ಮಾಡಬೇಡ; ನೀನು ಹೇಳಿದಲ್ಲಿ ಕುಳಿತುಕೊಳ್ಳುವೆನು; ಹೇಳಿದಹಾಗೆ ಕೇಳುವೆನು'' ಎಂದು ಪ್ರಾರ್ಥಿಸಹತ್ತಿದಳು. ಅದಕ್ಕೆ ಹೈಮವತಿಯು ಸಮ್ಮತಿಸದೆ—''ಸರಿ, ದುಷ್ಟೇ, ಹಿಂದಕ್ಕೆ ಸರಿ. ನೀನು ಹೀಗೆ ಹೇಳಿದರೂ, ಹೇಳಿದಂತೆ ಸುಮ್ಮನೆ ನೀನು ಕುಳಿತರೂ ನಿನ್ನ ಅನುಯಾಯಿಗಳು ನನ್ನ ಹಂಗು ಇಲ್ಲದೆ ಮದ್ದಿನ ಚೀಲಗಳಿಗೆ ಬೆಂಕಿ ಹಚ್ಚಿ ಮಹಾರಾಜರ ಪ್ರಾಣವನ್ನು ಹರಣಮಾಡದೆ ಬಿಡರು. ಆದ್ದರಿಂದ ಮಹಾರಾಜರ ಪ್ರಾಣಹಾರಕವಾದ ಈ ಸಾಧನವನ್ನೇ ನಾನು ಇಲ್ಲದಂತೆ ಮಾಡುವೆನು. ಈ ಪ್ರಸಂಗದಲ್ಲಿ ನಮ್ಮಿಬ್ಬರ ಪ್ರಾಣಹರಣವಾದರೆ ಆಗಲಿ; ಮುಖ್ಯವಾಗಿ ಜಗತ್ಕಲ್ಯಾಣಕರ್ತೃಗಳಾದ ಮಹಾರಾಜರ ಪ್ರಾಣವುಳಿದರೆ ಸಾಕು. ವೈದಿಕ ಧರ್ಮದ್ವೇಷಿಯೂ,

ವೈದಿಕ ಧರ್ಮದ್ವೇಷಿಯಾದ ಬಾದಶಹನ ನೌಕರನೂ ಆದ ನಿಮ್ಮ ತಂದೆಯನ್ನು, ಧರ್ಮ ಸಂರಕ್ಷಕರಾದ ಮಹಾರಾಜರು ಕೊಂದದ್ದರಲ್ಲಿ ಅನ್ಯಾಯವೇನು? ಧರ್ಮದ್ವೇಷಿಗಳು ದೈತ್ಯರಾದ್ದರಿಂದ, ನಿನ್ನನ್ನು ದೈತ್ಯ ಕುಲೋತ್ಪನ್ನಳೆಂದು ತಿಳಿಯತಕ್ಕದ್ದು. ನೀನು ತಾಟಕಾ, ಶೂರ್ಪನಖೀ ಮೊದಲಾದ ಕ್ರೂರ ದೈತ್ಯ ಸ್ತ್ರೀಯರ ಪಂಗ್ತಿಯಲ್ಲಿ ಸೇರಲು ತಕ್ಕವಳಾಗಿರುತ್ತೀ''.

ಹೀಗೆ ನುಡಿದು, ಹೈಮವತಿಯು ಕಕ್ಕಡವನ್ನು ಇನ್ನು ಮದ್ದಿನ ಚೀಲದಲ್ಲಿ ಇಡತಕ್ಕವಳು; ಅಷ್ಟರಲ್ಲಿ ಒಂದು ಚಮತ್ಕಾರದ ಸಂಗತಿಯು ಒದಗಿತು. ಯಾರೋ ಹೈಮವತಿಯ ಕಕ್ಕಡದ ಕೈಯನ್ನು ಗಟ್ಟಿಯಾಗಿ ಹಿಡಿದು, ಆಕೆಯನ್ನು ಹಿಂದಕ್ಕೆ ಜಗ್ಗಿದರು. ಆಗ ಹೈಮವತಿಯು ಬಹಳವಾಗಿ ಬೆದರಿದಳು. ಆಕೆಯು ತನ್ನಿಂದಾದಷ್ಟು ಕಸುವಿನಿಂದ ಮುಂದಕ್ಕೆ ಹೋಗಿ ಮದ್ದಿಗೆ ಬೆಂಕಿ ಹಚ್ಚಲು ಯತ್ನಿಸಿದಳು; ಆದರೆ ಕೈಯನ್ನು ಹಿಡಿದವರು ಒಳ್ಳೇ ಬಲಿಷ್ಠರಾದ್ದರಿಂದ ಹೈಮವತಿಯನ್ನು ದರದರ ದೂರ ಎಳಕೊಂಡು ಹೋಗಿ ಕಕ್ಕಡವನ್ನು ಕಸಿದುಕೊಂಡು ನಂದಿಸಿ ಮಾಯವಾದರು. ಇದನ್ನು ನೋಡಿ ಹೈಮವತಿಯು ಆಶ್ಚರ್ಯಪಟ್ಟಳು. ಗುಹೆಯಲ್ಲಿ ತನ್ನ, ಹಾಗು ತಾರೆಯ ಹೊರತು ಬೇರೆ ಯಾರೂ ಇರಲಿಕ್ಕಿಲ್ಲೆಂದು ಆಕೆಯು ತಿಳಿದಿದ್ದಳು. ಈಗ ನನ್ನನ್ನು ಹಿಡಿದೆಳೆದವರು ಮಹಾರಾಜರ ವಿರೋಧಿಗಳಲ್ಲಿ ಒಬ್ಬನಾಗಿರಬಹುದೆಂದು ಆಕೆಯು ತರ್ಕಿಸಿದಳು; ಆದರೆ ಅವರು ತಾರೆಯನ್ನು ಸಮಾಧಾನಪಡಿಸದೆ ಮಾಯವಾದದ್ದರಿಂದ ಹೈಮವತಿಯ ಮನಸ್ಸಿನಲ್ಲಿ ಮತ್ತೆ ಶಂಕೆಯು ಉತ್ಪನ್ನವಾಯಿತು. ತನ್ನ ಕೈಯನ್ನು ಹಿಡಿದವನು ಗಂಡಸೆಂಬದು ಹಿಡಿತದ ರೀತಿಯ ಮೇಲಿಂದ ಆಕೆಗೆ ಸ್ಪಷ್ಟವಾಗಿ ತಿಳಿಯಿತು. ಆಕೆಯು ಸಂತಾಪದಿಂದ—''ಯಾವ ದುಷ್ಟನು ನನ್ನ ಕೈಯನ್ನು ಹಿಡಿದನೋ, ಅವನ ಕೈಗೆ ಹುಳಬೀಳಲಿ. ಒಂದು ಮಹಾಕಾರ್ಯಕ್ಕಾಗಿ ನನ್ನ ಪ್ರಾಣವನ್ನರ್ಪಿಸಲಿಕ್ಕೆ ನಾನು ಸಿದ್ಧರಾಗಿರಲು, ನಡುವೇ ವಿಘ್ನ ಮಾಡಿದನು,'' ಎಂದು ನುಡಿದಳು; ಆದರೆ ಅದಕ್ಕೆ ಯಾರೂ ಉತ್ತರವನ್ನು ಕೊಡಲಿಲ್ಲ; ಮನುಷ್ಯರ ಸುಳವೂ ಅಲ್ಲಿ ಕಾಣಿಸಲಿಲ್ಲ.

ಈ ಆಕಸ್ಮಿಕ ಪ್ರಸಂಗವನ್ನು ನೋಡಿ ಅತ್ತ ತಾರೆಗೆ ಬಹಳ ಸಂತೋಷವಾಯಿತು. ಕಕ್ಕಡವನ್ನು ಕಸಿದುಕೊಂಡವನು, ನಮ್ಮೊಳಗಿನವನೊಬ್ಬನಾಗಿರಬಹುದೆಂದು ಆಕೆಯು ತರ್ಕಿಸಿದಳು. ಆಕೆಯು ಮನಸ್ಸಿನಲ್ಲಿ—''ಇನ್ನು ನಾನು ಗುಹೆಯ ಹೊರಗೆ ಹೋಗಿ, ಅಲ್ಲಿ ಯಾರು ಯಾರು ಬಂದಿರುವರೆಂಬದನ್ನು ನೋಡಿ, ಮುಂದಿನ ಕಾರ್ಯವನ್ನು ಕೈಕೊಳ್ಳಬೇಕು. ಈ ದುಷ್ಟ ಹೈಮವತಿಗೆ ಗುಹೆಯಿಂದ ಪಾರಾಗುವ ಬೇರೆ ಮಾರ್ಗವು ಗೊತ್ತಿರದ್ದರಿಂದ ಇಲ್ಲಿಯೇ ಆಕೆಯು ಕುಳಿತಿರುವಳು. ಪ್ರಸಂಗವರಿತು ನಾನು ಕೊಳ್ಳಿಯನ್ನು ಕೊಟ್ಟೆನೆಂದರೆ ಶಿವಾಜಿ ಯೊಡನೆ ಈಕೆಯ ಅಂತವೂ ಆಗುವದು. ಈಕೆಯ ಗೊಡವಿಗೆ ಈಗ ಹೋಗುವ ಕಾರಣವಿಲ್ಲ'' ಎಂದು ಆಲೋಚಿಸಿ, ಆಕೆಯು ತಟ್ಟನೆ ಗುಹೆಯಿಂದ ಹೊರಗೆ ಹೋದಳು. ಇತ್ತ ಹೈಮವತಿಯು ಸುಮ್ಮನೆ ಕುಳಿತುಕೊಂಡು, ಮುಂದೆ ಏನು ಮಾಡಬೇಕೆಂದು ಆಲೋಚಿಸ ತೊಡಗಿದಳು. ಮಹಾರಾಜರು ಹ್ಯಾಗೆ ಪಾರಾದಾರೆಂಬ ಚಿಂತೆಯಲ್ಲಿ, ಗುಹೆಯಿಂದ ಹೊರಗೆ ಹೋಗುವ ವಿಚಾರವೇ ಆಕೆಯ ಮನಸ್ಸಿನಲ್ಲಿ ಬರಲಿಲ್ಲ. ಮನಸ್ಸಿದ್ದಲ್ಲಿ ಮಾರ್ಗವುಂಟೆಂಬ

ನಿಯುವುದಂತೆ, ಅಂಥ ಸ್ಥಿತಿಯಲ್ಲಿಯೂ ಮಹಾರಾಜರಿಗೆ ಹಿತಕರವಾದಂಥ ಒಂದು ಯುಕ್ತಿಯನ್ನು ಹೈಮವತಿಯು ಹುಡುಕಿದಳು. ಆ ವೀರಪತ್ನಿಯು, ಗುಹೆಯ ನೆಲದ ಮಣ್ಣು ಹಸಿಯಿರುವದನ್ನು ನೋಡಿ ಸಮಾಧಾನಪಟ್ಟು, ಅದನ್ನು ಪ್ರತಿ ಒಂದು ಮದ್ದಿನ ಚೀಲದ ಮೇಲೆ ಒಂದೊಂದು ಗೇಣು ಎತ್ತರವಾಗಿ ಹಾಕಿದರೆ ಮದ್ದು ತೇವು ಏರಿ, ಅದಕ್ಕೆ ಬೆಂಕಿ ಹತ್ತಲಿಕ್ಕಿಲ್ಲವೆಂದು ತಿಳಿದುಕೊಂಡಳು. ಆಗ ಆಕೆಗೆ ಬಹಳ ಸಂತೋಷವಾಯಿತು. ಆಕೆಗೆ ತೋಡಲಿಕ್ಕೆ ಯಾವ ಸಾಧನವೂ ಇದ್ದಿಲ್ಲ; ಮಣ್ಣು ತುಂಬಲಿಕ್ಕೆ ಬುಟ್ಟಿಯೂ ಇದ್ದಿಲ್ಲ; ಆದರೂ ಆಕೆಯು ಉಗುರು ಬೆರಳುಗಳಿಂದ ಮಣ್ಣನ್ನು ತೋಡಿ, ಅದನ್ನು ಉಡಿಯಲ್ಲಿ ತುಂಬಿಕೊಂಡು ಚೀಲದ ಬಾಯಿಗೆ ಹಾಕುವ ಝಪಾಟಿಯನ್ನು ನಡಿಸಿದಳು. ಆಗರ್ಭ ಶ್ರೀಮಂತಳಿಗೆ ಮನೆಯ ಕಸ ಬಳಿದು ಗೊತ್ತಿದ್ದಿಲ್ಲ; ಅಂಥವಳ ತನ್ನ ಉಗುರು ಬೆರಳುಗಳ ನೋವಿನ ಕಡೆಗೆ ಲಕ್ಷಗೊಡದೆ, ತನ್ನ ಕಾರ್ಯವನ್ನು ಎಡಬಿಡದೆ ನಡಿಸಿದಳು. ಕೆಲಸವು ಪೂರ್ಣವಾಗುವವರೆಗೆ ನಡುವೆ ವಿಶ್ರಾಂತಿಯನ್ನೇ ಹೊಂದಲಿಲ್ಲ. ಆಕೆಯು ತಡಮಾಡಿದರೆ ಕೆಲಸವು ಘಾತವಾಗುವಂತೆಯಿತ್ತು, ಇನ್ನು ಮೂರುನಾಲ್ಕು ತಾಸುಗಳೊಳಗೆ ಮಹಾರಾಜರು ಅಲ್ಲಿಗೆ ಬರತಕ್ಕವರಿದ್ದದ್ದರಿಂದ, ಅಷ್ಟರೊಳಗೆ ಆಕೆಯು ತನ್ನ ಕೆಲಸವನ್ನು ಮುಗಿಸಬೇಕಾಗಿತ್ತು, ಅದರಂತೆ ಆ ಸಾಹಸಿಯಾದ ಸ್ತ್ರೀಯು ಒಂದೆರಡು ತಾಸುಗಳಲ್ಲಿಯೇ ಕೆಲಸವನ್ನು ಮುಗಿಸಿಕೊಂಡು ಸಮಾಧಾನಪಟ್ಟಳು. ಎಂಥ ಪ್ರಸಂಗ ಒದಗಿದರೂ ಮಹಾರಾಜರ ಘಾತವಾಗಗೊಡಲಿಕ್ಕಿಲ್ಲವೆಂದು ಆಕೆಯು ನಿಶ್ಚಯಿಸಿ, ಗಂಡುಗಚ್ಚೆ ಹಾಕಿಕೊಂಡು, ಅಡ್ಡಸೆರಗು ಕಟ್ಟಿಕೊಂಡು ಸಿದ್ಧವಾಗಿ ನಿಂತುಕೊಂಡಳು. ಭಕ್ತಿಯ ಪಾರವಶ್ಯದಿಂದ ಜೀವದ ಹಂಗುದೊರೆದವರು ಏನು ಮಾಡಿಯಾರು, ಏನು ಮಾಡಲಿಕ್ಕಿಲ್ಲ?

## ಗಂಡಾಂತರ ನಿವಾರಣ

ಹೈಮವತಿಯನ್ನು ಗುಹೆಯಲ್ಲಿ ಬಿಟ್ಟು ಹೊರಗೆ ಬಂದ ತಾರೆಯು, ಶಿವಾಜಿಯು ಬರುವದರೊಳಗಾಗಿ ತಾನು ಎಲ್ಲ ವ್ಯವಸ್ಥೆಯನ್ನು ಸರಿಯಾಗಿ ಮಾಡದಿದ್ದರೆ ಕೆಲಸವು ಕೆಟ್ಟೀತೆಂದು ತಿಳಿದು ಅವಸರದಿಂದ ಕೆಲಸ ಮಾಡಹತ್ತಿದಳು. ಆಕೆಯು ಅಗ್ನಿ ಕುಂಡದ ಸುತ್ತಮುತ್ತಲಿನ ಕಸ ತೆಗೆದು, ಸಾರಿಸಿ ರಂಗವಲ್ಲಿಯನ್ನು ಹಾಕಿದಳು. ಕೃಷ್ಣಾಜಿನವನ್ನು ಸ್ವಚ್ಛ ಝಾಡಿಸಿ ಹಾಸಿ ಅಗ್ನಿ ಕುಂಡದಲ್ಲಿ ಎರಡು ಕೊರಡುಗಳನ್ನು ಚಲ್ಲಿದಳು. ಆಮೇಲೆ ತನ್ನ ವೇಷವನ್ನು ಝಾಡಿಸಿಕೊಂಡು ಜಡೆಗಳನ್ನು ಸರಿಯಾಗಿ ಕಟ್ಟಿಕೊಂಡಳು. ತರುವಾಯ ಆ ಬಾಲಗೋಸಾವಿಯ ಸುಂದರ ಮೂರ್ತಿಯು ಹೊರಗೆ ಹಾಕಿದ್ದ ಕೃಷ್ಣಾಜಿನದ ಮೇಲೆ ಬಂದು ಕುಳಿತು ಜಪ ಮಾಡಹತ್ತಿತು. ಸುಳ್ಳಿಗೆ ಆಡಂಬರವು ಬಹಳ ಬೇಕಾಗುವದಲ್ಲವೆ? ನಟನೆಯಿಂದ ಪ್ರತ್ಯಕ್ಷ ಶುಕ್ರಾಚಾರ್ಯರನ್ನು ಹೋಲುತ್ತಿದ್ದ ತಾರೆಯ ಹೃದಯವು. ಶುಕ್ರಾಚಾರ್ಯರಂಥ

ವೈರಾಗ್ಯ ಮೂರ್ತಿಯ ನಿರ್ಮಲ ಹೃದಯಕ್ಕಿಂತ ತೀರ ಭಿನ್ನವಾಗಿತ್ತೆಂದು ನಾವು ವಾಚಕರಿಗೆ ತಿಳಿಸಲವಶ್ಯವಿಲ್ಲ. ವೇಷಧಾರಿ ಸತ್ಪುರುಷರ ಆಡಂಬರದ ಅಬ್ಬರದಲ್ಲಿ ನಿಜವಾದ ಸತ್ಪುರುಷರು ಎಲ್ಲಿಯೋ ಅಡಗಿ ಹೋಗುವರು! ಮಹಾರಾಜರ ಮುಂದೆ ಆ ವೇಷಧಾರಿ ಗೋಸಾವಿಯು ಕಠೋರ ಹೃದಯದ ಹಠಮಾರಿಯಾದ ತಾರೆಯನ್ನು "ಪರಮಾನಂದ ಗಿರಿ" ಯೆಂದು ಕರೆದು, ಆ ವೈರಾಗ್ಯ ಮೂರ್ತಿಯು ತನ್ನ ಗುರುವೆಂದು ಹೇಳಿ, ಆತನ ವಿಷಯದ ಇಲ್ಲದ ಅಲೌಕಿಕ ಮಹತ್ವವನ್ನು ವರ್ಣಿಸಿದನು. ಶಿವಾಜಿಯಂಥ ಚಾಣಾಕ್ಷರು ಕೂಡ ಮಬ್ಬಿಗೆ ಬಿದ್ದರೆಂದ ಬಳಿಕ, ಸಾಮಾನ್ಯರಾದ ಭಾವಿಕಜನರು, ಈ ದುಷ್ಟ ವೇಷಧಾರಿಗಳ ಬಲೆಗೆ ಬಿದ್ದು, ಎಂಥ ಎಂಥ ಕಷ್ಟಗಳನ್ನು ಭೋಗಿಸಬೇಕಾಗುವದೆಂಬದನ್ನು ನಾವು ಅನುಭವದಿಂದ ಚನ್ನಾಗಿ ಅರಿತಿರುವೆವು. ಇರಲಿ, ತಾರೆಯು ಜಪಕ್ಕೆ ಕುಳಿತಿದ್ದರೂ ಆಕೆ ಲಕ್ಷವು ಶಿವಾಜಿಯು ಬರುವ ಹಾದಿಯ ಕಡೆಗೆ ಇತ್ತು. ತನ್ನ ತಂದೆಯ ಕೊಲೆ ಮಾಡಿದವನು ಯಾವಾಗ ಬಂದಾನು, ಅವನ ಪ್ರಾಣವನ್ನು ಯಾವಾಗ ತಕ್ಕೊಂಡೇನು! ಎಂದು ಆಕೆಯು ಆತುರಪಡುತ್ತಿದ್ದಳು. ಹೀಗೆಯೇ ವೇಷಧಾರಿ ಸತ್ಪುರುಷರು ತಮ್ಮ ತಮ್ಮ ಹೇತುವನ್ನು ಸಾಧಿಸಿಕೊಳ್ಳುವದಕ್ಕಾಗಿ ಆಡಂಬರವನ್ನು ಜಗತ್ತಿಗೆ ತೋರಿಸಿರುತ್ತಾರೆ. ತಾರೆಗೆ ಜಪವೆಲ್ಲಿ ಬೇಕಾಗಿತ್ತು ತಪವೆಲ್ಲಿ ಬೇಕಾಗಿತ್ತು, ಆಕೆಯು ಆಸನದ ಮೇಲೆ ಕುಳಿತು ಕುಳಿತು ಬೇಸತ್ತಳು. ಆಕೆಗೆ ಸಂತಾಪವಾಗಹತ್ತಿತ್ತು. ಸಂತಾಪದ ಭರದಲ್ಲಿ ಆಕೆಯು ತನ್ನ ಕಕ್ಕನನ್ನು ಬೈದಳು. ಹೀಗೆ ಆಕೆಯು ಚಡಪಡಿಸಿ ಚಾಟಿಯ ಹೊಡೆಯುತ್ತಿರಲು, ಒಬ್ಬನು ಓಡುತ್ತ ಬಂದು— "ಕೆಲಸವಾಯಿತು, ಮುಂದಿನ ವ್ಯವಸ್ಥೆಯನ್ನು ಬೇಗನೆ ಮಾಡಿರಿ; ನೀವು ಒಳಗೆ ಹೋಗಿ ಕುಳಿತುಕೊಂಡು ಬಾಗಿಲು ಇಕ್ಕಿಕೊಳ್ಳಬೇಕಂತೆ" ಎಂದು ಹೇಳಿದನು. ಅದನ್ನು ಕೇಳಿ ತಾರೆಗೆ ಪರಮಾನಂದವಾಯಿತು. ಆಕೆಯು ತಟ್ಟನೆ ಎದ್ದು ತನ್ನ ಗುಡಿಸಿಲೊಳಗೆ ಹೋಗಿ ಬಾಗಿಲು ಇಕ್ಕಿಕೊಂಡು ಕುಳಿತಳು.

ಇತ್ತ ಆ ಗೋಸಾವಿಯು ಮಹಾರಾಜರನ್ನೂ, ಅವರ ಅಂಗರಕ್ಷಕರನ್ನೂ ಕರಕೊಂಡು ಬಂದನು. ಆತನು ಗುಡಿಸಿಲ ಬಳಿಗೆ ಬಂದು, ಪರಮಾನಂದಗಿರಿಯವರು ಅಗ್ನಿಕುಂಡದ ಬಳಿಯಲ್ಲಿ ಇಲ್ಲದಿರುವದನ್ನು ನೋಡಿ ತನ್ನ ಬಳಿಯಲ್ಲಿದ್ದವರಿಗೆ— "ನೋಡಿದಿರಾ, ನಾನು ಹೇಳಿದಂತೆ ಗುರುಗಳು ಹೊರಗೆಯಿರುವದಿಲ್ಲ. ಇದು ಹೊರಗೆ ಇರುವ ಸಮಯವಲ್ಲ; ಅವರು ಯೋಗಾರೂಢರಾಗಿರುವ ಸಮಯವು. ಅವರು ಇನ್ನು ಸಮಾಧಿಯನ್ನು ಇಳಿಸಿದ ಬಳಿಕ ತಮಗೆ ಅವರ ದರ್ಶನವಾಗುವದು. ನಾನು ಸ್ವಲ್ಪ ಒಳಗೆ ಹೋಗಿ ನೋಡಿಬರುತ್ತೇನೆ, ನೀವು ಇಲ್ಲಿಯೇ ಕುಳಿತುಕೊಳ್ಳಿರಿ. ಮಹಾರಾಜಾ, ಶಿವಪ್ರಭೂ, ಈ ಕುಂಡದೊಳಗಿನ ಭಸ್ಮವನ್ನು ಹಚ್ಚಿಕೊಳ್ಳುವ ಯೋಗವು ನಿನ್ನಂಥ ಪುಣ್ಯವಂತನಿಗಲ್ಲದೆ ಅನ್ಯರಿಗೆ ಲಭಿಸದು. ಈ ಮಂತ್ರ ಪೂತ ಭಸ್ಮ ಲೇಪನದಿಂದ ನಿನ್ನ ಗಂಡಾಂತರಗಳೆಲ್ಲ ದೂರವಾಗುವವು. ದೇಹವು ಪವಿತ್ರ ವಾಗುವದು, ಎಂದು ಹೇಳಿ, ಗುಡಿಸಲೊಳಗೆ ಹೋದನು. ಕೂಡಲೆ ಆತನು ತಿರುಗಿಬಂದು— "ರಾಜಾ, ನೀನು ಬಹು ಭಾಗ್ಯಶಾಲಿಯೆಂಬದರಲ್ಲಿ ಸಂಶಯವಿಲ್ಲ, ಇನ್ನು ಸ್ವಲ್ಪ ಹೊತ್ತಿನಲ್ಲಿಯೇ ಗುರುಗಳು ಹೊರಗೆ ಬರಬಹುದಾಗಿ ತೋರುತ್ತದೆ. ಅವರ ಮುಖಮುದ್ರೆಯು ಉಲ್ಲಸಿತ

ವಾಗಿರುವದು. ನಾವೆಲ್ಲರೂ ಇಲ್ಲಿ ಸ್ವಲ್ಪ ಹೊತ್ತು ಸುಖ-ದುಃಖದ ಮಾತುಗಳನ್ನಾಡುತ್ತಾ ಕುಳಿತುಕೊಳ್ಳೋಣ. ಸಾಂಸಾರಿಕರಂತೆ ನಮಗಾದರೂ ಸುಖ-ದುಃಖಗಳು ಎಲ್ಲಿ ಬಿಟ್ಟವೆ? ಆದರೆ ಸಾಂಸಾರಿಕರು ಸ್ವಾರ್ಥಕ್ಕಾಗಿ ಸುಖ-ದುಃಖಗಳನ್ನು ಭೋಗಿಸುವರು; ನಮ್ಮಂಥವರು ಪರಾರ್ಥಕ್ಕಾಗಿ ಸುಖ-ದುಃಖಗಳನ್ನು ಸಹಿಸುವೆವು, ಇಷ್ಟೇ ಭೇದವು. ಸಾಂಸಾರಿಕ ಚೇಳು ಕಡಿದರೆ ಅವರು ಬಡಬಡಕೊಂಡು ಅಳಬಹುದು; ಆದರೆ ನಮ್ಮಂಥವರು ಸಹನ ಮಾಡಿಕೊಂಡು ಸುಮ್ಮನಿರಬಹುದು; ಇಷ್ಟೇ ಭೇದವು. ಇನ್ನು ಸ್ವಪರಭಾವವಿಲ್ಲದೆ ಏಕೋಭಾವದ ನಮ್ಮ ಗುರುಗಳಂಥ ಮಹಾತ್ಮರು ಮಾತ್ರ ಸುಖ-ದುಃಖಗಳನ್ನು ಮೀರಿರಬಹುದು; ಆದರೆ ಅವರ ಅನುಭವವು ನಮ್ಮಂಥ ಪಾಮರರಿಗೆ ಹ್ಯಾಗೆ ಆಗಬೇಕು? ಖಂಡೇರಾವ, ನಿನ್ನ ಜತೆಗಾರನನ್ನು ಹುಲಿಯು ಕೊಂದಿತೆಂದು ನೀನು ಹೇಳುವೆಯಲ್ಲವೆ? ಇನ್ನು ಸ್ವಲ್ಪ ಹೊತ್ತು ನಿಲ್ಲು, ಆತನು ಶ್ರೀ ಗುರುಪ್ರಭಾವದಿಂದ ಇದೇ ಗುಡಿಸಿಲಿನಿಂದ ಹೊರಬಿದ್ದು, ನಿಮ್ಮ ಮಹಾರಾಜರನ್ನು ಕಾಣುವನು. ಹುಲಿಯ ಬಾಯೊಳಗಿಂದಲೇ ಏಕೆ, ಪ್ರತ್ಯಕ್ಷ ಯಮನ ಬಾಯೊಳಗಿಂದಲೂ ಆತನನ್ನು ನಮ್ಮ ಗುರುಗಳು ಬಿಡಿಸಿಕೊಡಬಹುದೆಂದು ನಾನು ಮತ್ತೆ ಮತ್ತೆ ಯಾಕೆ ಹೇಳಬೇಕು? ನಾನು ಇನ್ನೊಮ್ಮೆ ಗುಡಿಸಲೊಳಗೆ ಹೋಗಿಬರುವೆನು. ಗುರುಗಳ ಸಮಾಧಿಯು ಇಳಿಯತೊಡಗಿರುವದೋ ಹ್ಯಾಗೆ ನೋಡಿ ಬರುತ್ತೇನೆ.

ಈ ಮೇರೆಗೆ ನುಡಿದು ಗೋಸಾವಿಯು ಗುಡಿಸಿಲೊಳಗೆ ಹೋಗಿ ಬಾಗಿಲು ಇಕ್ಕಿಕೊಂಡನು. ಆತನು ತಾರೆಯನ್ನು ಕುರಿತು— "ತಂಗೀ, ಹಂಚಿಕೆ ಹಾಕಿದಂತೆ ಬೇಟೆಯನ್ನಂತು ಬಲೆಯಲ್ಲಿ ತಂದು ಹಾಕಿದೆನು. ಇನ್ನು ನೀನು ಹೊರಗೆ ಬಂದು ಸತ್ಪುರುಷ ವೇಷದ ಮೋಹಜಾಲವನ್ನು ಬೀಸಿ, ಬೇಟೆಯನ್ನು ಗಟ್ಟಿಯಾಗಿ ಬಿಗಿ. ಅಂದರೆ ನಮ್ಮ ಬಹುದಿವಸದ ಶ್ರಮದ ಫಲವು ಸಾಧಿಸುವದು," ಎಂದು ಹೇಳಲು ತಾರೆಯು— "ಕಕ್ಕಾ ನೀನು ಹೋದ ಬಳಿಕ ಇಲ್ಲಿ ಎಂಥ ಅನರ್ಥದ ಪ್ರಸಂಗಗಳು ಒದಗಿದವು! ಅವನ್ನು ನೆನಸಿದರೆ ಈಗಲೂ ನನ್ನ ಮೈಯು ಗದಗುಟ್ಟಿ ನಡುಗುತ್ತದೆ; ಆದರೆ ಅವನ್ನೆಲ್ಲ ಹೇಳುತ್ತ ಕುಳಿತುಕೊಳ್ಳಲಿಕ್ಕೆ ಇದು ಸಮಯವಲ್ಲ. ನಮ್ಮ ಇಷ್ಟಾರ್ಥವು ಕೈಗೂಡಿದ ಬಳಿಕ ನಾನು ಅವನ್ನೆಲ್ಲ ನಿಮಗೆ ಹೇಳುವೆನು. ಇನ್ನು ನಾನು ಗುಹೆಯಲ್ಲಿ ಇಳಿದುಹೋಗಿ ಮದ್ದಿಗೆ ಕೊಳ್ಳಿಕೊಡುತ್ತೇನೆ. ನನಗೆ ಜೀವದಾಶೆಯಿಲ್ಲ. ಅಪ್ಪನ ವೈರಿಯ ಸೇಡು ತೀರಿಸಿಕೊಳ್ಳುವದಕ್ಕಾಗಿಯೇ ನಾನು ಇಲ್ಲಿಯವರೆಗೆ ಬದುಕಿ ಉಳಿದಿರುವೆನು; ಇಲ್ಲದಿದ್ದರೆ ನನ್ನ ಮೋಹದ ತಂದೆಯನ್ನು ಕಳಕೊಂಡು ನಾನು ಜೀವಿಸುವ ಸಂಭವವೇ ಇದ್ದಿಲ್ಲ. ನಿಮಗೆ ಜೀವದ ಆಶೆಯಿದ್ದರೆ, ಏನಾದರೂ ನೆವ ತೆಗೆದು ನೀವು ಗುಡಿಸಿಲಿನ ಬಳಿಯಿಂದ ದೂರ ಹೋಗಿಬಿಡಿರಿ; ಇಲ್ಲದಿದ್ದರೆ ಶಿವಾಜಿಯ ಹತ್ತರವೇ ಕುಳಿತು, ಅಪ್ಪನ ಸ್ಮರಣ ಮಾಡುತ್ತಾ, ಸಾವಿಗೆ ಈಡಾಗಿರಿ. ನಾನು ಇನ್ನು ಒಂದು ಕ್ಷಣವಾದರೂ ತಡೆಯಲಾರೆನು. ನಿಮ್ಮ ಯೋಗಕ್ಷೇಮದ ವಿಚಾರವನ್ನೂ ನಾನು ಮಾಡುವದಿಲ್ಲ. ನಿಮ್ಮದನ್ನು ನೀವು ನೋಡಿಕೊಳ್ಳಬೇಕು. ಹೂ, ನಡೆಯಿರಿ ನೀವು ಇಲ್ಲಿಂದ. ಇಷ್ಟು ವಿಲಂಬವಾದದ್ದೇ ಸಾಕಾಗಿರುವದು. ಇನ್ನು ಪುನಃ ವಿಲಂಬ ಬೇಡ. ವಿಲಂಬ ಮಾಡಿದರೆ ಆ ಚಾಣಾಕ್ಷನಾದ ಶಿವಾಜಿಯು ಕೈಮೀರಿ

ಹೋದಾನು,'' ಎಂದು ಹೇಳಿ, ಗುಹೆಯಲ್ಲಿ ಇಳಿಯುವದಕ್ಕಾಗಿ ಎದ್ದು ನಿಂತಳು. ಆ ಗುಡಿಸಿಲೊಳಗಿಂದಲೇ ಗವಿಯಲ್ಲಿ ಹೋಗಲಿಕ್ಕೆ ಮಾರ್ಗವಿತ್ತು. ತಾರೆಯ ಈ ಆತುರವನ್ನೂ, ಆಕೆಯ ಹಟಮಾರಿತನವನ್ನೂ, ನಿಶ್ಚಯವನ್ನೂ ಬಲ್ಲವನಾದ ಆಕೆಯ ಕಕ್ಕನು ಬೆದರಿದನು. ತನ್ನ ಪ್ರಾಣವನ್ನು ಕೊಡಲಿಕ್ಕೆ ಆತನ ಮನಸ್ಸು ಮೆಚ್ಚಲಿಲ್ಲ, ಆತನ ಮೋರೆಯು ಹುಚ್ಚಿಟ್ಟಿತು. ಆತನು ಕೂಡಲೆ ಗುಡಿಸಲಿನ ಹೊರಗೆ ಬಂದು ಶಿವಾಜಿಯನ್ನು ಕುರಿತು— ''ರಾಜಾ, ಒಂದು ವನಸ್ಪತಿಯನ್ನು ತರಲಿಕ್ಕೆ ಗುರುಗಳು ಹೇಳಿದ್ದಾರೆ, ಈಗ ನಾನು ಓಡಿಹೋಗಿ ತರುವೆನು; ನೀನು ಸ್ವಲ್ಪ ಹೊತ್ತು ಕುಳಿತುಕೋ,'' ಎಂದು ಹೇಳಿ, ಸಮ್ಮತಿಯ ಹಾದಿಯನ್ನು ನೋಡದೆ, ತನ್ನ ಕಾಲದಲ್ಲಿ ಕಸುವಿದ್ದಷ್ಟು ಓಡಹತ್ತಿದನು. ಅದನ್ನು ನೋಡಿ ಖಂಡೇರಾಯನೂ ಅವನ ಬೆನ್ನಹತ್ತಿ ನಡೆದನು. ಹೀಗಾಗಿ ಗುಡಸಿಲಿನ ಹತ್ತರ ಮಹಾರಾಜರು, ಅವರ ಅನುಯಾಯಿಗಳು ಮೂವರು ಹೀಗೆ ನಾಲ್ಕು ಜನರು ಮಾತ್ರ ಉಳಿದರು.

ಈ ವಿಲಕ್ಷಣ ಪ್ರಕಾರವನ್ನು ನೋಡಿ ಮಹಾರಾಜರು ವಿಚಾರಮಗ್ನರಾದರು. ಗೋಸಾವಿಯ ವಿಷಯವಾಗಿ ಮೊದಲೇ ಅವರ ಮನಸ್ಸಿನಲ್ಲಿ ಸಂಶಯವು ಉತ್ಪನ್ನವಾಗಿತ್ತು. ಅದರಲ್ಲಿ ಈ ಗೋಸಾವಿಯು ಎಡತಾಕೋಣ, ಆತನ ಓಡೋಣ, ಆತನ ಬೆನ್ನಹತ್ತಿ ಖಂಡೇರಾಯನು ಓಡಿಹೋಗೋಣ ಇವನ್ನೆಲ್ಲ ನೋಡಿ ಅವರಿಗೆ ಪೂರ್ಣ ಸಂಶಯವು ಉತ್ಪನ್ನವಾಯಿತು. ನಮ್ಮ ಘಾತಕ್ಕಾಗಿ ಇಲ್ಲಿ ಏನೋ ಯತ್ನವು ನಡೆದಂತೆ ಕಾಣುತ್ತದೆ, ಎಂದು ಅವರು ತರ್ಕಿಸಿದರು; ಆದರೆ ಯಾವ ಬಗೆಯ ಯತ್ನವು ನಡೆದಿರುವದೆಂಬದರ ಗಂಧವು ಕೂಡ ಅವರಿಗೆ ಹತ್ತಿದ್ದಿಲ್ಲ. ಅವರು ಸಂಕಟಕ್ಕೆ ಹೆದರಿ ಒಮ್ಮೆಲೆ ಓಡಿಹೋಗುವಂಥ ಅಳ್ಳೆದೆಯ ವರಿದ್ದಿಲ್ಲ. ಸಂಕಟಕ್ಕೆ ಎದುರಾಗುವ ವಿಷಯದಲ್ಲಿಯೂ, ಸಂಕಟದಲ್ಲಿ ಚಿತ್ತಕ್ಷೋಭವಾಗದಂತೆ ಮನೋನಿಗ್ರಹ ಮಾಡುವ ವಿಷಯದಲ್ಲಿಯೂ ಅವರು ಸುಪ್ರಸಿದ್ಧರಿದ್ದರು. ಈ ಗುಣಗಳು ಮಹಾಪುರುಷರಲ್ಲಿಯಲ್ಲದೆ ಸಾಮಾನ್ಯ ಜನರಲ್ಲಿ ಇರಲಾರವು. ಮಹಾರಾಜರ ಮುಖಮುದ್ರೆಯು ಗಂಭೀರವಾಯಿತು.ಅವರು ತಮ್ಮ ಅಂಗರಕ್ಷಕರಲ್ಲಿ ಒಬ್ಬನಾದ ನಾನಾಸಾಹೇಬನನ್ನು ಕುರಿತು— ''ನಾನಾಸಾಹೇಬ, ಹೊತ್ತು ಬಹಳವಾಯಿತಲ್ಲವೆ? ನಮ್ಮ ಮುಖ್ಯ ಕೆಲಸವನ್ನು ಬಿಟ್ಟು, ಈ ಗೋಸಾವಿಗಳ ಗೊಂದಲದಲ್ಲಿ ಸೇರಿದ್ದು ಅನುಚಿತವೇ ಸರಿ. ಅನುಗ್ರಹದ ಗೊಡವಿಗೆ ನಾವು ಹೋಗತಕ್ಕದ್ದಿದ್ದಿಲ್ಲ. ನಮ್ಮ ಬಾಲಮಿತ್ರ ಏಸಾಜಿಯ ಶೋಧವನ್ನು ಬಿಟ್ಟು ಈ ಉಸಾಬರಿಗೆ ಹೋಗಲಿಕ್ಕೆ ಪ್ರೇರಿಸುವಲ್ಲಿ ಅಂಬಾ ಬಾಯಿಯ ಉದ್ದೇಶವೇನಿರಬಹುದು? ಆಕೆಯ ಇಚ್ಛೆಯಿದ್ದಂತೆ ಆಗಲಿ! ಬಂದಬಳಿಕ ಎಷ್ಟು ಹೊತ್ತಾದರೂ ಕಾರ್ಯ ಮಾಡಿಕೊಂಡೇ ಹೋಗಬೇಕು; ಆದರೆ ಈ ವನವು ಎಷ್ಟು ಮನೋಹರವದೆ ನೋಡಿದೆಯೇನು? ಈಶ್ವರನ ಚಿಂತನ ಮಾಡಿಕೊಂಡಿರುವವರಿಗೆ ಇದು ಬಹು ಯೋಗ್ಯವಾದದ್ದು! ಹಿಂದಕ್ಕೆ ತುಕಾರಾಮ ಮಹಾರಾಜರು ''ಲೋಹಗಾವ್'' ಎಂಬ ಊರಲ್ಲಿ ಕೀರ್ತನ ಮಾಡಿದಾಗ ನನ್ನಲ್ಲಿ ಉತ್ಪನ್ನವಾಗಿದ್ದ ವೈರಾಗ್ಯವನ್ನು ಸ್ಥಿರಗೊಳಿಸಲಿಕ್ಕೆ ಅಪ್ಪಣೆಯಾಗಿದ್ದರೆ, ನಾನು ಇದೇ ವನದಲ್ಲಿ ತಪಶ್ಚರ್ಯವನ್ನು ಮಾಡುತ್ತಿದ್ದೆನು; ಆದರೆ ಅವರೂ, ಶ್ರೀ ಸಮರ್ಥ ರಾಮದಾಸರವರೂ

ನನಗೆ — ''ಶಿವಬಾ, ನೀನು ತಪಶ್ಚರ್ಯ ಮಾಡುವದಕ್ಕೋಸ್ಕರ ಜನ್ಮ ತಾಳಿರುವದಿಲ್ಲ; ಆದ್ದರಿಂದ ನಮ್ಮ ಹೇಳಿಕೆಯಂತೆ ರಾಜಕಾರ್ಯದಲ್ಲಿ ನೀನು ತೊಡಗು'' ಎಂದು ಆಜ್ಞಾಪಿಸಿದರು. ಅವರ ಆಜ್ಞೆಯನ್ನು ಮೀರಲು ಯಾರು ಸಮರ್ಥರು?

ಮಹಾರಾಜರು ಈ ಮೇರೆಗೆ ತನ್ನೊಡನೆ ಸಲಿಗೆಯಿಂದ ಮಾತಾಡುವದನ್ನು ಕೇಳಿ ನಾನಾಸಾಹೇಬನಿಗೆ ಬಹಳ ಆಶ್ಚರ್ಯವಾಯಿತು. ಯಾವದೊಂದು ಕಾರ್ಯದಲ್ಲಿ ತೊಡಗಿರುವಾಗ, ಕಾರ್ಯಕ್ಕೆ ಸಂಬಂಧವಿಲ್ಲದ ಮಾತನ್ನು ಆಡುವದು, ಅವರ ಸ್ವಭಾವ ವಾಗಿದ್ದಿಲ್ಲ; ಮತ್ತು, ಏನೂ ಉದ್ಯೋಗವಿಲ್ಲೆಂದು ವ್ಯರ್ಥ ಹರಟೆ ಕೊಚ್ಚುವವರೂ ಅವರು ಇದ್ದಿಲ್ಲ. ಹೀಗಿದ್ದು, ಮಹಾರಾಜರು ಹೀಗೆ ಯಾಕೆ ಮಾತಾಡಿರಬಹುದೆಂದು ಆತನು ಯೋಚಿಸ ತೊಡಗಿದನು. ಆತನು ಪ್ರತಿಯಾಗಿ ಏನೂ ಮಾತಾಡದೆ ನಯಭಯಯುಕ್ತನಾಗಿ ಅತ್ಯಂತ ಭಕ್ತಿಯಿಂದ ಮಹಾರಾಜರನ್ನು ನೋಡಿದನು ಮಾತ್ರ. ಆತನಿಗೂ ಗೋಸಾವಿಯ ವಿಷಯವಾಗಿ ಸಂಶಯವು ಉತ್ಪನ್ನವಾಗಿತ್ತು. ಆ ಸಂಬಂಧದಿಂದ ಆತನು ಮಹಾರಾಜರನ್ನು ಕುರಿತು— ''ಸನ್ನಿಧಿಯಲ್ಲಿ ಮಾತಾಡುವ ಯೋಗ್ಯತೆಯು ನನ್ನದಲ್ಲ; ಆದರೂ ಈ ಪ್ರಸಂಗದಲ್ಲಿ ನನ್ನಿಂದ ಸುಮ್ಮನೆಯಿರುವದು ಆಗದು. ಈ ಗೋಸಾವಿಯು ಮೂಲತಃ ಗೋಸಾವಿಯೇ ಅಲ್ಲ; ಅಂದಬಳಿಕ ಇವನ ಗುರುವೂ ಗುರುವಲ್ಲ, ಇವನ ತಪಶ್ಚರ್ಯವೂ ತಪಶ್ಚರ್ಯವಲ್ಲ. ಮಹಾರಾಜರ ಪ್ರಾಣಹರಣ ಮಾಡುವದಕ್ಕಾಗಿ ಯಾರೋ ದುಷ್ಟರು ಈ ತಂತ್ರವನ್ನು ಒಡ್ಡಿರುವಂತೆ ತೋರುತ್ತದೆ. ಸೇವಕನಾದ ನಾನು ಈಗ ಆಗ್ರಹದಿಂದ ಹೇಳಿಕೊಳ್ಳುವು ದೇನಂದರೆ, ಮಹಾರಾಜರು ಈಗಲೆ ಇಲ್ಲಿಂದ ಹೊರಟು ಹೋಗ ತಕ್ಕದ್ದು'' ಅನ್ನಲು, ಮಹಾರಾಜರು—''ನಾನಾಸಾಹೇಬ, ನಿಮ್ಮ ಮಾತಿನಲ್ಲಿ ಅರ್ಥವಿರುವದು; ಆದರೆ ಇಲ್ಲಿಂದ ತಟ್ಟನೆ ಹೊರಟುಹೋಗುವದರಲ್ಲಿ ಅರ್ಥವೇನು? ಇಂಥ ವ್ಯೂಹವನ್ನು ರಚಿಸಿದವರು, ಓಡಿಹೋಗುವ ನಮ್ಮನ್ನು ಸುಮ್ಮನೆ ಓಡಿಹೋಗಗೊಡಬಹುದೆ? ನಾನು ದುರ್ಭಾವನೆ ಯಿಂದ ಇಲ್ಲಿಗೆ ಬಂದಿರುವದಿಲ್ಲ. ಗೋಸಾವಿಯೂ ಅವನ ಗುರುವೂ ಸತ್ಪುರುಷರಿರಲಿ- ಅಸತ್ಪುರುಷರಿರಲಿ, ನಾನಂತು ಸತ್ಪುರುಷರೆಂಬ ಭಾವದಿಂದಲೇ ಇಲ್ಲಿಗೆ ಬಂದಿದ್ದೇನೆ. ಭಾವವೇ ಬಲವೆಂದು ಹೇಳಿರುವದರಿಂದ, ನನ್ನ ಸದ್ಭಾವನೆಯ ಬಲವು ನನ್ನನು ರಕ್ಷಿಸ ಬಹುದು; ಆದರೆ ಪ್ರಸಂಗದಲ್ಲಿ ಹೀಗೆ ಒಮ್ಮೆಲೆ ಪುಕ್ಕತನ ತೋರಿಸುವದು ಯೋಗ್ಯವಲ್ಲ. ಇಂಥ ಎಷ್ಟು ಗಂಡಾಂತರಗಳೊಳಗಿಂದ ಅಂಬಾಭವಾನಿಯು ನಮ್ಮನ್ನು ರಕ್ಷಿಸಿರುವದಿಲ್ಲ? ಈಗಾದರೂ ಆಕೆಯೇ ನಮ್ಮನ್ನು ರಕ್ಷಿಸುವಳು!

ಈ ಮೇರೆಗೆ ಮಹಾರಾಜರು ನುಡಿಯುತ್ತಿರಲು, ನೆಲದೊಳಗೆ ಏನೋ ಗದ್ದಲವಾದಂತೆ ಮಂದಧ್ವನಿಯು ಕೇಳಿಸಹತ್ತಿತು. ಜನರ ಸುಳಿವಂತು ಎಲ್ಲಿಯೂ ಕಾಣಿಸಲಿಲ್ಲ. ಅಷ್ಟರಲ್ಲಿ ಸ್ವಲ್ಪ ಅಂತರವ ಮೇಲೆ ನೆಲದೊಳಗಿಂದ ಒಬ್ಬನು ಹೊರಬಿದ್ದನು. ಆತನು ಕೂಡಲೆ ಒಬ್ಬನ ಕೈಹಿಡಿದು ಮೇಲಕ್ಕೆ ಜಗ್ಗಹತ್ತಿದನು; ಆದರೆ ನೆಲದೊಳಗಿನ ಮನುಷ್ಯನು ಮೇಲಕ್ಕೆ ಬರಲೊಲ್ಲನು. ಅದನ್ನು ನೋಡಿ ಮಹಾರಾಜರು— ''ಅದೇನು ನೋಡಿ ಬಾ''ರೆಂದು

ತಮ್ಮೊಳಗಿನವನೊಬ್ಬನನ್ನು ಕಳಿಸಿದರು. ಅವನು ಅಲ್ಲಿಗೆ ಹೋಗಿ ನೋಡಲು ಏಸಾಜಿಯು ಒಬ್ಬ ಬಾಲ ಬೈರಾಗಿಯನ್ನು ಜಗ್ಗುತ್ತಲಿದ್ದನು. ಒಳಗಿನಿಂದ ಯಾವಳೋ ಒಬ್ಬ ಸ್ತ್ರೀಯು— 'ಉಹೂ ಜಗ್ಗಿರಿ ಬೇಗನೆ ಜಗ್ಗಿರಿ' ಎನ್ನುತ್ತ, ಆ ಬಾಲಗೋಸಾವಿಯನ್ನು ಮೇಲಕ್ಕೆ ಎತ್ತುತ್ತಿದ್ದಳು. ಆಗ ಇಬ್ಬರೂ ಕೂಡಿ ಜಗ್ಗಲು, ಬಾಲಗೋಸಾವಿಯ ವೇಷಧಾರಿಯಾದ ತಾರೆಯು ಮೇಲಕ್ಕೆ ಬಂದಳು. ಆಗ ಆಕೆಯ ಮೈಯಲ್ಲಿ ಅಷ್ಟು ಬಲವು ಎಲ್ಲಿಂದ ಬಂದಿತ್ತೋ ತಿಳಿಯದು. ಏಸಾಜಿಯು ಎಲ್ಲರೊಡನೆ ಮಹಾರಾಜರ ಬಳಿಗೆ ಬಂದು ನಮಸ್ಕರಿಸಲು, ಮಹಾರಾಜರು ಆನಂದದ ಭರದಲ್ಲಿ ''ಏಸಾಜೀ ಇದೇನು? ನೀನು ಹೋದ ಕೆಲಸವಾವುದು? ಈಗ ನೆಲದೊಳಗಿಂದ ಹೊರಬೀಳುವ ಕಾರಣವೇನು? ನೀನು ಹುಲಿಯ ಬಾಯಿಗೆ ಬಿದ್ದೆಯೆಂದು ಖಂಡೇರಾಯನು ಹೇಳಿದನಲ್ಲ!'' ಎಂದು ಕೇಳಲು, ಏಸಾಜಿಯು— ''ಮಹಾರಾಜ, ತಮ್ಮ ಚರಣಕೃಪೆಯಿಂದಲೇ ನಾನು ಜೀವದಿಂದ ಉಳಿದು ಪುನಃ ತಮ್ಮ ಸೇವೆಗೆ ಸಿದ್ಧನಾಗಿ ಬಂದಿದ್ದೇನೆ. ಖಂಡೇರಾಯನು ಮೋಸಗಾರನಾಗಿ ತೋರಿದ್ದರಿಂದಲೇ ನಾನು ಆತನ ಮಾತನ್ನು ನಂಬಲಿಲ್ಲ, ಆತನು ಜಾವಳಿ ಅರಣ್ಯದಲ್ಲಿ ತಿರುಗಾಡಿ ಬಂದು, ಈ ನಿಟ್ಟಿನಲ್ಲಿ ಮಾರ್ಗ ಮಾಡಲಿಕ್ಕೆ ಅನುಕೂಲವಿಲ್ಲೆಂದು ಹೇಳಿದನು; ಆದರೆ ಆತನ ಮಾತಿನಲ್ಲಿ ವಿಶ್ವಾಸವಿಡದೆ ನಾನು ಅದೇ ನಿಟ್ಟಿನಲ್ಲಿ ನೋಡಲಿಕ್ಕೆ ಹೋಗಲು, ಈ ಗುಪ್ತಗುಹೆಯ ಗೊತ್ತು ನನಗಾಯಿತು. ಈ ಗುಹೆಯನ್ನು ಹೊಸದಾಗಿ ಯಾರು ತೋಡಿರಬಹುದೆಂದು ವಿಚಾರ ಮಾಡುತ್ತ ಈ ಗುಡಿಸಿಲಿಗೆ ಬಂದೆನು. ಆ ಗೋಸಾವಿಯು ದುಷ್ಟನಾದ ಚಂದ್ರರಾವ ಮೋರೆಯ ತಮ್ಮನು; ಈ ವೇಷಧಾರಿಯಾದ ಬಾಲಗೋಸಾವಿಯು ಅದೇ ಚಂದ್ರರಾವ ಮೋರೆಯ ಮಗಳು. ಈ ಕಠಿಣ ಹೃದಯಳ ಹೆಸರು ತಾರಾಬಾಯಿಯು. ಇವರು ನನ್ನನ್ನು ಈ ಗುಹೆಯ ಮುಂದಿನ ತಗ್ಗಿನಲ್ಲಿ ಹಾಕಿ ಹುಗಿದುಬಿಟ್ಟರು; ಆದರೆ ಆಕಸ್ಮಾತ್ತಾಗಿ ಗುಹೆಯ ಮುಂಭಾಗವು ಕಳಚಿಬಿದ್ದು, ನನಗೆ ಗುಹೆಯಲ್ಲಿ ಹೋಗುವ ಒಂದು ಮಾರ್ಗವು ಸಿಕ್ಕಿತು. ಆಗ ರಾತ್ರಿ ಸಮಯವಾಗಿರಲು ಇವರಿಗೆ ಕಾಣದಂತೆ ಗುಹೆಯಲ್ಲಿ ಹೋಗಲಿಕ್ಕೆ ನನಗೆ ಆಸ್ಪದವು ದೊರೆಯಿತು. ಆ ಮಾರ್ಗದಿಂದ ನಾನು ಗುಹೆಯನ್ನು ಪ್ರವೇಶಿಸಿದೆನು. ಅಂದಿನಿಂದ ಈ ಗುಹೆಯೇ ನನ್ನ ವಸತಿ ಸ್ಥಾನವಾಯಿತು. ಈ ಗುಹೆಯಲ್ಲಿ ಮದ್ದಿನ ಚೀಲಗಳನ್ನೂ, ಬೇರೆ ಜ್ವಾಲಾಗ್ರಾಹಿ ಪದಾರ್ಥಗಳ ಚೀಲಗಳನ್ನೂ ಇಟ್ಟಿದ್ದರು. ತಮ್ಮನ್ನು ಉಪಾಯದಿಂದ ಇಲ್ಲಿಗೆ ಬರಮಾಡಿ, ಅಗ್ನಿಕುಂಡದ ಬಳಿಯಲ್ಲಿ ನೀವು ಕುಳಿತಿರಲು, ಬುಡದಲ್ಲಿಯ ಮದ್ದಿನ ಚೀಲಗಳಿಗೆ ಕೊಳ್ಳಿಕೊಟ್ಟು, ನಿಮ್ಮ ಪ್ರಾಣಹರಣ ಮಾಡಲು ಈ ಚಂಡಾಲರು ನಿಶ್ಚಯಿಸಿದ್ದರು. ಈ ಪುಣ್ಯಾತ್ಮಳಾದ ಸಾಧ್ವಿಯ ಸಾಹಸದಿಂದಲೇ ಮಹಾರಾಜರು ಪ್ರಾಣಸಂಕಟ ದಿಂದ ಮುಕ್ತರಾದಿರೆಂದು ನಾನು ಹೇಳುತ್ತೇನೆ. ಈಕೆಯ ಹೆಸರು ಹೈಮವತಿಯು. ಈ ದುಷ್ಟ ತಾರೆಯು ತನ್ನ ಶಿಷ್ಯಳನ್ನಾಗಿ ಮಾಡಿಕೊಂಡಿದ್ದ ಈ ಹೈಮವತಿಯನ್ನು ಕರಕೊಂಡು ಗುಹೆಯನ್ನು ನೋಡಲಿಕ್ಕೆ ಬಂದಾಗ ಈ ಪುಣ್ಯಾತ್ಮಳು ತಮ್ಮ ಮೇಲಿನ ಭಕ್ತಿಯಿಂದ ತಾವು ಬರುವುದರೊಳಗಾಗಿ ಗುಹೆಯ ನಾಶವಾಗಬೇಕೆಂದು, ಮದ್ದಿನ ಚೀಲಗಳಿಗೆ ಕೊಳ್ಳಿಕೊಟ್ಟು ತಾನು ಸಾಯಲಿಕ್ಕೆ ಸಿದ್ಧಳಾದಳು.

ಆಗ ಗುಹೆಯಲ್ಲಿದ್ದ ನಾನು ಈಕೆಯ ಕೈಯೊಳಗಿನ ಕಕ್ಕಡವನ್ನು ಗುಪ್ತರೀತಿಯಿಂದ ಕಸಿದುಕೊಂಡೆನು. ಆಗ ಈ ಸಜ್ಜನಳು ದುಃಖಪಟ್ಟು, ಮಹಾರಾಜರ ಪ್ರಾಣ ಉಳಿಸಲಿಕ್ಕೆ ಬೇರೆ ಉಪಾಯವೇನು ಮಾಡಬೇಕೆಂದು ಚಿಂತಿಸುತ್ತ, ಕಡೆಗೆ ಗುಹೆಯೊಳಗಿನ ಹಸಿಮಣ್ಣನ್ನು ಉಗುರು ಬೆರಳುಗಳಿಂದ ಕೆದರಿ, ಉಡಿಯಲ್ಲಿ ತುಂಬಿಕೊಂಡು ಪ್ರತಿ ಒಂದು ಮದ್ದಿನ ಚೀಲದ ಬಾಯಿ ಮೇಲೆ ಒಂದೊಂದು ಗೇಣು ಎತ್ತರವಾಗಿ ಅದನ್ನು ಹಾಕಿದಳು. ಈ ತಾರೆಯು ಮಹಾ ದುಷ್ಟಳು. ಈಕೆಯ ಶಾಸನವನ್ನು ಮಹಾರಾಜರು ಈಗಲೇ ಮಾಡಬೇಕು. ಇಲ್ಲದಿದ್ದರೆ ನನಗೆ ಅಪ್ಪಣೆ ಕೊಟ್ಟರೆ ನಾನು ಯೋಗ್ಯ ಶಾಸನ ಮಾಡುವೆನು. ಇಂದಿನ ಮಹಾರಾಜರ ಪ್ರಾಣರಕ್ಷಣದ ಶ್ರೇಯಸ್ಸೆಲ್ಲ ಈ ಹೈಮವತೀ ದೇವಿಯ ಪಾಲಿಗೆ ಹೋಗತಕ್ಕದ್ದೇ ಸರಿ. ತಮ್ಮ ಪ್ರಾಣಸಂಕಟದ ಕಾಲದಲ್ಲಿ ಸಹಾಯ ಮಾಡುವ ಉದ್ದೇಶದಿಂದ ಈ ಗುಹೆಯಲ್ಲಿ ನಾನು ಇದ್ದೆನು. ಇಂದು ಈ ತಾರೆಯು ನಿಮ್ಮನ್ನು ಮೇಲೆ ಕುಳ್ಳಿರಿಸಿ ಮದ್ದಿಗೆ ಕೊಳ್ಳಿಕೊಡಲು ಬಂದದ್ದರಿಂದ, ನಾನೂ, ಹೈಮವತೀದೇವಿಯವರೂ ಕೂಡಿ ಈಕೆಯನ್ನು ಹೊರಗೆ ಎಳೆತಂದಿರುತ್ತೇವೆ. ಮೊದಲು ಈ ಡಾಕಿನಿಗೆ ಶಾಸನ ಮಾಡತಕ್ಕದ್ದು.

ಈ ಮೇರೆಗೆ ನುಡಿಯುವ ಏಸಾಜಿಯನ್ನು ಕುರಿತು ತಾರಾಬಾಯಿಯು—"ನೀಚಾ, ಈಗ ನಾನು ನಿನ್ನ ಕೈಯಲ್ಲಿ ಸಿಕ್ಕಿರುವೆನೆಂದು ತಿಳಿದು ನನ್ನ ಮುಂದೆ ನನ್ನ ತಂದೆಯನ್ನು ಆತನು ಪಶ್ಚಾತ್ ದುಷ್ಟನೆಂದು ಹಳಿಯುವೆಯಾ? ನಮ್ಮ ತಂದೆಯನ್ನು ಮೋಸದಿಂದ ಕೊಲ್ಲಿಸಿದ ನಿನ್ನ ಮಹಾ ರಾಜನನ್ನು ನೀನು ಏನೆಂದು ಕರೆಯುವೆ, ನಾನು ಏನೆಂದು ಕರೆಯಲಿ ಹೇಳು! ನಾವು ಒಡ್ಡಿದ ಬಲೆಯು ಹರಿದದ್ದರಿಂದ ಉಪಾಯವಿಲ್ಲದಾಗಿದೆ; ಆದರೆ ನಮ್ಮ ಆ ಉರುಲಿನ ಬಲೆಯಲ್ಲಿ ನಿನ್ನ ಈ ದುಷ್ಟ ಶಿವಾಜಿಯು ಬಿದ್ದು ಸತ್ತಿದ್ದರೆ, ಮುಯ್ಯಕ್ಕೆ ಮುಯ್ಯ ತೀರಿಸಿಕೊಂಡಂತೆ ಆಗುತ್ತಿತ್ತು! ಆದರೆ ಮಾಡುವದೇನು? ದೈವಬಲವು ನಿಮಗೆ ಅನುಕೂಲವಾಗಿರುತ್ತದೆ, ನಮಗೆ ಪ್ರತಿಕೂಲವಾಗಿರುತ್ತದೆ. ಈ ವಿಶ್ವಾಸಘಾತಕಿಯಾದ ಹೈಮವತಿಯನ್ನು ಇಟ್ಟುಕೊಳ್ಳುವ ಇಚ್ಛೆಯು ನನಗೆ ಯಾಕೆ ಆಯಿತೋ ತಿಳಿಯದು," ಎಂದು ನುಡಿದು ಮಹಾರಾಜರನ್ನು ಕುರಿತು—"ಶಿವಾಜೀ, ಈಗ ನಾನು ನಿನ್ನ ಕೈಯಲ್ಲಿ ಸಿಕ್ಕಿದ್ದೇನೆ; ಕಡಿದು ಎರಡು ತುಂಡುಮಾಡು, ಬೇಡೆನ್ನುವದಿಲ್ಲ. ಈ ಕರಿಗಾಲ ಹೈಮವತಿಯಿಂದ ನನ್ನ ಕೆಲಸವು ಕೆಟ್ಟುಹೋಯಿತು. ಈಕೆಯು ನಿನಗೆ ಮರುಳಾಗಿದ್ದಾಳೆ. ಈಕೆಯನ್ನು ಇಟ್ಟುಕೋ. ಈಕೆಯು ನಿನ್ನ ಪ್ರಾಣವನ್ನು ಉಳಿಸಿರುವಳು. ಈಕೆಯ ಗಂಡನು ಈವರೆಗೆ ವಿಜಾಪುರದ ಬಾದಶಹನ ಅನ್ನವನ್ನು ತಿಂದು, ಆತನ ಮೇಲೆ ತಿರುಗಿಬಿದ್ದು, ಈಕೆಯನ್ನು ಕಟ್ಟಿಕೊಂಡು ನಿನಗೆ ಸಹಾಯ ಮಾಡುವದಕ್ಕಾಗಿ ವಿಜಾಪುರದಿಂದ ಬರುತ್ತಿದ್ದನು; ಆದರೆ ಉಂಡಮನೆ ಗಳ ಎಣಿಸುವ ಈ ಕೆಟ್ಟ ಗುಣವು ದೇವರ ಮನಸ್ಸಿಗೆ ಹ್ಯಾಗೆ ಬರಬೇಕು? ಆತನು ಪಠಾಣರ ಕೈಯಿಂದ ಈಕೆಯ ಗಂಡನನ್ನು ಹಾದಿಯಲ್ಲಿಯೇ ಕೊಲ್ಲಿಸಿದನು. ನಿನ್ನ ಹೊರತು ಬೇರೆ ಯಾರೂ ಈಕೆಗೆ ಗತಿಯಿಲ್ಲ. ಈಕೆಯನ್ನು ನೀನು ಸ್ವೀಕರಿಸು. ನನ್ನನ್ನು ಕೊಂದು ನಿಶ್ಚಿಂತನಾಗು." ಅಂದಳು. ಮಹಾರಾಜರು ಆಕೆಯ ಕಠೋರ ಮಾತಗಳನ್ನು ಕೇಳಿ ಕ್ಷಣಮಾತ್ರ ಸುಮ್ಮನಿದ್ದು—"ನನ್ನ

ಪ್ರಾಣರಕ್ಷಣ ಮಾಡಿದ ಈ ಸಾಧ್ವಿಯು ನನಗೆ ತಾಯಿ ಸಮಾನಳು, ಈಕೆಯ ಸಂರಕ್ಷಣವನ್ನು ನಾನು ಮಾಡಿಯೇ ಮಾಡುವೆನು; ಆದರೆ ನೀನು ಇನ್ನು ಮೇಲೆ ನನ್ನ ತಂಗಿಯಂತೆ ನನ್ನ ಬಳಿಯಲ್ಲಿರು. ನಿನ್ನ ತಂದೆಯ ಮೇಲೆ ಇಷ್ಟು ಭಕ್ತಿಯನ್ನಿಟ್ಟಿರುವ ನೀನು, ನನ್ನನ್ನು ಅಣ್ಣನೆಂದು ತಿಳಿದರೆ ನನ್ನ ಮೇಲೆಯೂ ಅಷ್ಟೇ ಭಕ್ತಿಯನ್ನು ಇಡುವೆಯೆಂಬದರಲ್ಲಿ ಸಂಶಯವಿಲ್ಲ; ಆದ್ದರಿಂದ ನೀನು ನನ್ನನ್ನು ಅಣ್ಣನೆಂದು ತಿಳಿ'' ಎಂದು ಹೇಳಿದನು. ಅದಕ್ಕೆ ತಾರೆಯು— ಏನು? ನಿನ್ನನ್ನು ನಾನು ಅಣ್ಣನೆಂದು ತಿಳಿಯಲಾ? ನನ್ನ ತಂದೆಯ ಪ್ರಾಣಹರಣ ಮಾಡಿದಾತನು ನನ್ನ ಅಣ್ಣನಾಗಬಹುದೆ? ಈ ಮಾತು ಕಾಲತ್ರಯದಲ್ಲಿಯೂ ಆಗುವಹಾಗಿಲ್ಲ, ಶಿವಾಜೀ, ನಿನ್ನ ಶತ್ರುಗಳಲ್ಲಿ ಒಬ್ಬರು ಕಡಿಮೆಯಾಗಬೇಕೆಂದು ನೀನು ಇಚ್ಛಿಸುತ್ತಿದ್ದರೆ, ಈಗಲೇ ನನ್ನನ್ನು ಕೊಂದುಬಿಡು. ನೀನು ಎಷ್ಟು ದೊಡ್ಡ ಮನಸ್ಸು ಮಾಡಿ ನನ್ನನ್ನು ಬಿಟ್ಟರೂ, ನನ್ನ ದ್ವೇಷ ಬುದ್ಧಿಯು ಹೋಗಲಾರದು. ಶ್ರೀ ರಾಮನು ತಾಟಕೆಯನ್ನು ಲಕ್ಷ್ಮಣನಿಂದ ಕೊಲ್ಲಿಸಿದಂತೆ, ನೀನು ನನ್ನನ್ನು ಈ ಪಿಸಾಜಿಯಿಂದಾದರೂ ಕೊಲ್ಲಿಸು. ನಾನು ಹೆಂಗಸೆಂದು ನನ್ನ ಮೇಲೆ ಅಂತಃಕರಣ ವನ್ನು ಮಾಡಬೇಡ. ಹೆಂಗಸಾದದ್ದಕ್ಕಾಗಿ ನನಗೆ ಬಹಳ ಪಶ್ಚಾತ್ತಾಪವಾಗುತ್ತದೆ. ದೇವರು ನನ್ನನ್ನು ಗಂಡಸಾಗಿ ಹುಟ್ಟಿಸಿದ್ದರೆ, ಎಷ್ಟು ವಿಧದಿಂದ ನಾನು ನಿನ್ನನ್ನು ಗೋಳಾಡಿಸು ತ್ತಿದ್ದೆನೆಂಬದನ್ನು ಈಗೇನು ಹೇಳಲಿ? ತಂದೆಯ ಖೂನಿನ ಸೇಡನ್ನು ತೀರಿಸಿಕೊಳ್ಳದೆಯಂತು ನಾನು ಎಂದೂ ಬಿಡುತ್ತಿದ್ದಿಲ್ಲ!

ತಾರೆಯ ಈ ಮಾತುಗಳನ್ನು ಕೇಳಿ ಮಹಾರಾಜರು ನಕ್ಕರು. ಆ ಮೇಲೆ ಅವರು ಆಕೆಗೆ—''ತಂಗೀ, ಸದ್ಯಕ್ಕೆ ನಾನು ನಿಮ್ಮಿಬ್ಬರನ್ನು ಆಯಿಾ ಸಾಹೇಬರ ಬಳಿಗೆ ಕರಕೊಂಡು ಹೋಗುವೆನು. ಆಮೇಲೆ ಅವರ ಅಪ್ಪಣೆ ಏನಾಗುತ್ತದೆಂಬದನ್ನು ನೋಡೋಣ,'' ಎಂದು ನುಡಿದು, ಅವರು ಪ್ರತಾಪಗಡಕ್ಕೆ ಹೋಗುವದಕ್ಕಾಗಿ ಮೇಲಕ್ಕೆ ಏಳತೊಡಗಿದರು; ಆದರೆ ಅಷ್ಟರಲ್ಲಿ ತಾರಾಬಾಯಿಯ ಲಮಾಣಿ ಜನರು ಅವರನ್ನು ಮುತ್ತಿದರು. ಅದನ್ನು ನೋಡಿದ ಕೂಡಲೆ ತಾರಾಬಾಯಿಯ ಮೋರೆಯು ಹಿಗ್ಗಿ ಇಷ್ಟಗಲವಾಯಿತು! ಈಕೆಯು ಆ ಲಮಾಣಿ ಗಳನ್ನು ಕುರಿತು ''ಎಲೇ, ನಾವು ಬಹುದಿವಸ ಪಟ್ಟ ಶ್ರಮವು ದುರ್ದೈವದಿಂದ ವ್ಯರ್ಥವಾಯಿತು; ಆದರೂ ಚಂದ್ರರಾವ ಮೋರೆಯ ಉಪ್ಪನ್ನು ಉಂಡ ಸರದಾರರು ನೀವು. ಈಗಿನ ಲಮಾಣೆಗಳ ವೇಷದಿಂದಲೇ, ನಿಮ್ಮ ಸ್ವಾಮಿಯ ಕೊಲ್ಲಿಸಿದ ಈ ದುಷ್ಟನನ್ನು ತುಂಡರಿಸಿ ಚಲ್ಲಿರಿ, ಕ್ಷಣವಾದರೂ ವಿಲಂಬ ಮಾಡಬೇಡಿರಿ, ಹು, ಹಿರಿಯಿರಿ ಕತ್ತಿಗಳನ್ನು. ನಿಮ್ಮ ವೈರಿಗಳು ಐದೇ ಜನರಿರುವರು, ಇವರಲ್ಲಿ ಒಬ್ಬಳು ಹೆಂಗಸಿರುವಳು; ಯಾವನು ನನ್ನ ತಂದೆಯ ಕೊಲೆಯ ಸೇಡನ್ನು ಕೈಮುಟ್ಟಿ ತೀರಿಸುವನೋ, ಅವನಿಗೆ ಹತ್ತು ಊರುಗಳ ಇನಾಮು, ಈ ಖಂಡ್ಯಾನು ಬಂದನು. ಖಂಡ್ಯಾ ಖಂಡೇರಾವ, ನಿನ್ನ ಪ್ರತಿಜ್ಞೆಯು ಎತ್ತಹೋಯಿತು?'' ಎಂದು ಕೇಳಲು, ಒಬ್ಬರೂ ಆಕೆಗೆ ಉತ್ತರವನ್ನು ಕೊಡಲಿಲ್ಲ, ಮಹಾರಾಜರ ಪ್ರತ್ಯಕ್ಷ ಮೂರ್ತಿಯನ್ನು ನೋಡಿದ ಕೂಡಲೇ ಅವರ ಕೈಕಾಲುಗಳೇ ಏಳದಾದವು. ಒಬ್ಬರೂ ಮುಂದಕ್ಕೆ ಹೆಜ್ಜೆಗಳನ್ನು ಇಡದೆ ಚಿತ್ರದಲ್ಲಿಯ ಗೊಂಬೆ ಗಳಂತೆ ನಿಂತಲ್ಲಿ ನಿಂತುಬಿಟ್ಟರು. ಆ ಮಹಾಪುರುಷನ ದಿವ್ಯ ತೇಜಸ್ಸನ್ನು

ಭೇದಿಸಿ ಹೋಗುವ ತ್ರಾಣವು ಒಬ್ಬನಿಗೂ ಆಗಲಿಲ್ಲ; ಖಂಡೇರಾಯನು ಸ್ವಲ್ಪ ಮುಂದಕ್ಕೆ ಹೋಗಲು ಯತ್ನಿಸಿದಾಗ, ಯಾರೋ ಆತನನ್ನು ಹಿಂದಕ್ಕೆ ಜಗ್ಗಿದಂತೆ ಆಗುತ್ತಿತ್ತು. ಮಹಾರಾಜರು ತಾವು ಕುಳಿತಲ್ಲಿ ಸ್ವಸ್ಥವಾಗಿ ಕುಳಿತುಬಿಟ್ಟಿದ್ದರು. ಕೆಲವು ಸರದಾರರ ಮೋರೆಗಳನ್ನು ನೋಡಿ ಅವರಿಗೆ ನಗೆ ಬಂದಿತು; ಆದರೆ ಅದನ್ನು ಅವರು ಹೊರಗೆಡವಲಿಲ್ಲ. ಅವರು ಆ ಲಮಾಣಿಗಳನ್ನು ಕುರಿತು—''ಏಕೆ? ನಿಮ್ಮ ಒಡೆಯಳು ಹೇಳಿದಂತೆ ನೀವು ಏಕೆ ಮಾಡಲೊಲ್ಲಿರಿ? ನೀವು ಹಾಗೆ ಮಾಡದೆಯಿರುವದು ವಾಸ್ತವವೇ ಸರಿ. ಮೊಗಲರು ನಮ್ಮನ್ನೂ, ನಿಮ್ಮನ್ನೂ ಕೂಡಿಯೇ ಪೀಡಿಸಿರುವರು. ಅವರು ನಮ್ಮೆಲ್ಲರಿಗೂ ಮೂಲವಾಗಿದ್ದಾರೆ. ಅವರ ಉಪದ್ರವವನ್ನು ತಪ್ಪಿಸುವದೇ ನನ್ನ ಪ್ರಯತ್ನದ ಉದ್ದೇಶವಾಗಿರುತ್ತದೆ. ಇದರ ಮೇಲೆ ನಿಮ್ಮ ಮನಸ್ಸಿಗೆ ಬಂದಂತೆ ಮಾಡಬಹ್ರಿ. ಕೆಲವರು ಮನೆಯನ್ನು ಕಟ್ಟುತ್ತಿರುವರು, ಕೆಲವರು ಅದನ್ನು ಕೆಡವುವರು. ಈಗ ಅಫಜುಲಖಾನನು ಬಂದಿರುವನು; ಹೇಳಿರಿ. ಅವನಿಗೆ ಈ ಮಹಾರಾಷ್ಟ್ರವನ್ನೂ ಈ ನಮ್ಮ ಸ್ವರಾಜ್ಯವನ್ನೂ ಒಪ್ಪಿಸಲಾ? ಹೇಳಿರಿ.... ಮಹಾರಾಜರ ಮುಖವನ್ನು ನೋಡಿದ ಕೂಡಲೆ ಜನರ ಚಿತ್ತಹರಣ ವಾಗುತ್ತಿತ್ತು; ಅದರಲ್ಲಿ ಅವರ ಸರಳವಾಣಿಯನ್ನು ಕೇಳಿದ ಬಳಿಕಂತೂ ಜನವು ಅವರಿಗೆ ವಶವಾಗಿ ಹೋಗುತ್ತಿತ್ತು. ಅದರಂತೆ ಈಗ ಲಮಾಣಿಗಳ ವೇಷವನ್ನು ಧರಿಸಿದ್ದ ಚಂದ್ರರಾವ ಮೋರೆಯ ಸರದಾರರ ಸ್ಥಿತಿಯಾಯಿತು. ಅವರ ಮುಖ್ಯನಾದ ತುಳಾಜಿಯು ಮಹಾರಾಜರನ್ನು ಕುರಿತು—''ಮಹಾರಾಜ, ಮಿಂಚಿ ಹೋದ ಮಾತಿಗೆ ಚಿಂತಿಸಿ ಫಲವಿಲ್ಲ, ನಾವು ಯೋಚಿಸಿದಂತೆ ತಮ್ಮ ಘಾತವಾಗದೆಯಿದ್ದದ್ದೊಂದು ದೊಡ್ಡ ಲಾಭವೇ ಆಯಿತು. ಇನ್ನು ಮೇಲಂತು ನಾವು ತಮ್ಮ ಕೂದಲು ಕೊಂಕಿಸಲಾರೆವು. ದಯಮಾಡಿ ನಮಗೆ ತಮ್ಮ ಪದರಿನಲ್ಲಿ ಆಶ್ರಯ ಕೊಟ್ಟು, ನಾವು ಮಾಡುವ ಸೇವೆಯನ್ನು ಪರೀಕ್ಷಿಸತಕ್ಕದ್ದು'' ಎನ್ನಲು, ಮಹಾರಾಜರು ''ಸರಿಸರಿ! ನನ್ನಿಂದ ಸ್ವರಾಜ್ಯವು ಗಟ್ಟಿಮುಟ್ಟಿಯಾಗಿ ಸ್ಥಾಪಿಸಲ್ಪಡಬೇಕೆಂದು ದೇವರ ಮನಸ್ಸಿನಲ್ಲಿದ್ದಂತೆ ತೋರುತ್ತದೆ; ಇಲ್ಲದಿದ್ದರೆ ನಾನು ಈ ವರೆಗೆ ಬಂದಿದ್ದ ಹಲವು ಸಂಕಟಗಳೊಳಗಿಂದ ಪಾರಾಗಬಹುದೆ? ಅದರಂತೆ, ಶತ್ರುಗಳು ಕೂಡ ನನಗೆ ಮಿತ್ರರಾಗಬಹುದೆ? ಏನೂ ಚಿಂತೆಯಿಲ್ಲ; ಈವರೆಗೆ ನೀವು ಮಾಡಿದ್ದನ್ನು ನಾನು ಮರೆಯುವೆನು; ಹೀಗೆ ಮಾಡದಿದ್ದರೆ ನೆಟ್ಟಗಾಗುತ್ತಿತ್ತೆಂದು ತೋರುವ ವಿಷಯವನ್ನು ನೀವೂ ಮರೆತುಬಿಡಿರಿ. ಇನ್ನು ನಮಗೆ ಅವಶ್ಯಕವಾಗಿರುವ ಉದ್ಯೋಗವನ್ನು ಈಗ ನಾವು ಕೈಕೊಳ್ಳೋಣ. ನೀವು ಹ್ಯಾಗೂ ಲಮಾಣಿಯ ಜನರ ಸೋಗನ್ನು ಹಾಕಿಕೊಂಡಿರುವಿರಷ್ಟೇ? ನೆಟ್ಟಗಾಯಿತು. ಅದೇ ಸೋಗನ್ನು ಇನ್ನು ಕೆಲವು ದಿವಸ ಹಾಕಿಕೊಳ್ಳಿರಿ. ಅಫಜುಲಖಾನನು ಇತ್ತಕಡೆಗೆ ಬರತಕ್ಕವನಿದ್ದಾನೆ. ಆತನಿಗಾಗಿ ವಾಯಿಯಿಂದ ಪ್ರತಾಪಗಡದವರೆಗೆ ಸುಖಕರವಾದ ಪ್ರಶಸ್ತ ಮಾರ್ಗವನ್ನು ಮಾಡಬೇಕಾಗಿದೆ. ಈ ಕೆಲಸವನ್ನು ನೀವೇ ಮಾಡಿರಿ. ಈ ಅರಣ್ಯದ ಗೊತ್ತು ನಿಮಗೆ ಚನ್ನಾಗಿ ಇರುತ್ತದೆ. ಅದರ ಉಪಯೋಗವನ್ನು ಈಗ ಸ್ವಧರ್ಮೋದ್ಧಾರದ ಕಾರ್ಯದಲ್ಲಿ ಮಾಡಿಕೊಡಿರಿ. ಅಫಜುಲಖಾನನು ಸರಳತನದಿಂದ ನಡೆದುಕೊಂಡರೆ ನಾನೂ ಆತನೊಡನೆ ಸರಳತನದಿಂದ ನಡಕೊಳ್ಳುವೆನು; ಅವನು ಏನಾದರೂ ಮೋಸಮಾಡಲು ಯತ್ನಿಸಿದರೆ, ಅದಕ್ಕೆ

ತಕ್ಕ ಆಟವನ್ನು ನಾನೂ ಹೂಡುವೆನು. ಅದಕ್ಕೆ ಅನುಕೂಲವಾಗುವಂತೆ ನೀವು ಮಾರ್ಗವನ್ನು ಮಾಡಿರಿ. ಈ ವಿಸಾಜಿಯನ್ನು ನಿಮ್ಮ ಮೇಲೆ ನಿಯಮಿಸುತ್ತೇನೆ. ನಿಮಗೆ ಬೇಕಾಗಿರುವ ಅನುಕೂಲತೆಗಳನ್ನು ಈತನ ಮುಖಾಂತರ ಒದಗಿಸಿಕೊಂಡು ಕೆಲಸವನ್ನು ಪೂರ್ಣಮಾಡಿರಿ, ಎಂದು ಹೇಳಿದರು. ಮಹಾರಾಜರ ಈ ಉದಾರ ಮನಸ್ಸನ್ನು ನೋಡಿ, ತುಳಾಜಿಯು ಬೆರಗಾಗಿ ಮಹಾರಾಜರಿಗೆ ಸಾಷ್ಟಾಂಗವಾಗಿ ವಂದಿಸಿ, ಕೈಜೋಡಿಸಿ ಎದ್ದು ನಿಂತುಕೊಂಡು – ಶಿವಾಜಿರಾಜನೇ, ನಿನ್ನನ್ನು ಶಿವಾವತಾರವೆಂದು ಜನರು ಕರೆಯುವುದು ಯಥಾರ್ಥವೇ ಸರಿ! ಯಾಕಂದರೆ, ನೀನು ಶಿವನಂತೆ ಭೋಲಾನಾಥನಾಗಿರುತ್ತಿ. ಒಳ್ಳೇದು, ಇಂದಿನಿಂದ ನಾವು ನಿನ್ನ ನೌಕರರಾದೆವು. ನಿನ್ನ ಮನಸ್ಸು ಪ್ರಸನ್ನವಾಗುವಂತೆ ಮಾರ್ಗವನ್ನು ಬೇಗನೆ ಮಾಡುವೆವು. ಖಾನನು ಸಂತುಷ್ಟನಾಗುವಂತೆ ಮಾರ್ಗದಲ್ಲಿ ಉತ್ತಮವಾದ ವ್ಯವಸ್ಥೆಯನ್ನು ಇಡುವೆವು. ಖಾನನು ಕುಟಿಲ ತನದಿಂದ ನಡೆದರೆ ಅದರ ವಿಚಾರವನ್ನೂ ಮಾಡುವೆವು. ಆದರೆ ಅಫಜುಲ ಖಾನನು ಮೋಸಗಾರನೆಂದು ತಿಳಿದೇ ನೀವು ನಡೆದುಕೊಳ್ಳಬೇಕೆಂದು ನಾನು ಪ್ರಾರ್ಥಿಸುತ್ತೇನೆ.

ಈ ಮೇರೆಗೆ ತನ್ನ ಶತ್ರುಗಳು ಮಿತ್ರರಾಗಿ ತನ್ನ ಹಿತವ ಚಿಂತಿಸುವದನ್ನು ನೋಡಿ ಶಿವರಾಯನು ಬಹು ಸಮಾಧಾನಪಟ್ಟು, ಮನಸ್ಸಿನಲ್ಲಿ ಭವಾನೀ ಮಾತೆಯನ್ನು ಕೊಂಡಾಡಿದನು. ಹೈಮವತಿಯ ವಿಷಯವಾಗಿಯಂತು ಆತನು ಅತ್ಯಂತ ಕೃತಜ್ಞನಾಗಿದ್ದನು. ಆತನು ವಿಸಾಜಿಯನ್ನು ಕುರಿತು—''ವಿಸಾಜೀ, ಈ ಸಾಧ್ವಿಯ ಯೋಗ್ಯತೆಯು ಬಹು ದೊಡ್ಡದು. ಈಕೆಯನ್ನು ಪಡೆದ ತಾಯಿ–ತಂದೆಗಳು ಬಹು ಪುಣ್ಯವಂತರು. ಈಕೆಯ ಪಾಣಿಗ್ರಹಣ ಮಾಡಿದ ಪುರುಷ ಶ್ರೇಷ್ಠನೂ ಪುಣ್ಯವಂತನೇ ಸರಿ. ನಾನಂತು ಈಕೆಯನ್ನು ಹಡೆದ ತಾಯಿಗೆ ಸಮಾನವೆಂದು ಭಾವಿಸುವೆನು. ಹಡೆದ ತಾಯಿಯಾದರೂ ತನ್ನ ಒಬ್ಬನೇ ಒಬ್ಬ ಮಗನ ಪ್ರಾಣರಕ್ಷಣದ ವಿಷಯಲ್ಲಿ ಸಹ ಇಷ್ಟು ಸ್ವಾರ್ಥತ್ಯಾಗವನ್ನು ಮಾಡುವಳೋ ಇಲ್ಲವೋ ಎಂಬ ಬಗ್ಗೆ ನಿಶ್ಚಯದಿಂದ ಹೇಳಲಾಗುವದಿಲ್ಲ. ವಿಸಾಜೀ, ನನಗೆ ಇಂಥ ಪುಣ್ಯಶಾಲಿಗಳ ಸಹಾಯವಿದ್ದದ್ದರಿಂದಲೇ ನಾನು ಹಲವು ಸಂಕಟಗಳಿಂದ ಮುಕ್ತನಾಗುತ್ತ ಬಂದಿದ್ದೇನೆ. ಮತ್ತು ಹಿಡಿದ ಕೆಲಸಗಳು ಕೈಗೂಡುತ್ತ ಬಂದಿವೆ. ಈ ಲಮಾಣೆಗಳನ್ನೇ ನೋಡು, ಅವರು ಮೊದಲು ನನ್ನ ಶತ್ರುಗಳಾಗಿದ್ದವರು ಈಗ ಮಿತ್ರರಾಗಿದ್ದಾರೆ. ಅವರ ಮೇಲೆ ವಿಶ್ವಾಸವಿಟ್ಟು ನಾನು ಅವರ ಕಡೆಗೆ ಮಾರ್ಗ ಮಾಡುವ ಕೆಲಸವನ್ನು ಒಪ್ಪಿಸಿದ್ದನ್ನು ನೋಡಿ ನಿನಗೆ ಸಂಶಯವು ಉತ್ಪನ್ನವಾಗಿರಬಹುದು; ಆದರೆ ಹಾಗೆ ಸಂಶಯಪಡುವ ಕಾರಣವಿಲ್ಲ. ಈ ಬಲಿಷ್ಠರಿಗೆ ಈಗ ನಮ್ಮ ನಾಲ್ಕು ಜನರನ್ನು ಕೊಲ್ಲಲಿಕ್ಕೆ ತಡವಾಗುತ್ತಿತ್ತೆ? ಅವರು ಸೌಮ್ಯರಾಗಿ ಮಿತ್ರಭಾವವನ್ನು ವಹಿಸಿದ ಬಳಿಕ ನಾವೂ ದೊಡ್ಡ ಮನಸ್ಸು ಮಾಡಬೇಕು. ಇದೆಲ್ಲ ಶ್ರೀ ಸಮರ್ಥರ ಕೃಪಾಪ್ರಭಾವವೆಂದು ನೀನು ತಿಳಿದುಕೋ!

# ಸಂಶಯ ಪಿಶಾಚಿಯು

ಮಹಾರಾಜರು ಹೈಮವತಿಯನ್ನು ಬಹುಮಾನಪೂರ್ವಕವಾದ ಆದರಿಂದ ಸಂಗಡ ಕರಕೊಂಡು, ಎಲ್ಲ ಪರಿವಾರದೊಡನೆ ಪ್ರತಾಪಗಡಕ್ಕೆ ಬಂದರು. ಅವರು ತಾರಾಬಾಯಿಯನ್ನೂ ಆದರದಿಂದ ಸಂಗಡ ಕರಕೊಂಡು ಬರತಕ್ಕವರಿದ್ದರು; ಆದರೆ ಆಕೆಗ ಸಂತಾಪವಾಯುವಾದಂತಾಗಿ ಆಕೆಯು ಒಮ್ಮಿಂದೊಮ್ಮೆ ಓಡಿಹೋದವಳು, ಯಾರ ಕೈಗೂ ಸಿಗಲಿಲ್ಲ; ಆದ್ದರಿಂದ ಅವರು ನಿರುಪಾಯರಾಗಿ ಆಕೆಯ ಶೋಧಕ್ಕೋಸ್ಕರ ತುಳಾಜಿಗೆ ಹೇಳಿ ಬಂದಿದ್ದರು. ಮಹಾರಾಜರು ದುರ್ಗವನ್ನು ಮುಟ್ಟಿದ ಕೂಡಲೆ ಹೈಮವತಿಯನ್ನು ಜೀಜಾಬಾಯಿ ಸಾಹೇಬರವರ ಕಡೆಗೆ ಕಳಿಸಿ, ಸ್ವಲ್ಪ ಹೊತ್ತಿನ ಮೇಲೆ ತಾವು ಸ್ವತಃ ತಾಯಿಯ ದರ್ಶನಕ್ಕೆ ಹೋದರು. ಮಹಾರಾಜರು ದೊಡ್ಡ ಗಂಡಾಂತರಕ್ಕೆ ಗುರಿಯಾಗಿದ್ದರೆಂತಲೂ, ಪರಮೇಶ್ವರ ಕೃಪರೆಯಿಂದಲೇ ಈ ಗಂಡಾಂತರದಿಂದ ಪಾರಾದರೆಂತಲೂ, ಜೀಜಾಬಾಯಿ ಯವರು ಕೇಳಿದ್ದರಿಂದ, ಮಗನನ್ನು ಯಾವಾಗ ನೋಡೇನೆನ್ನುವ ಹಾಗೆ ಅವರಿಗೆ ಆಗಿತ್ತು, ಮಗನ ಪುನರ್ಜನ್ಮವಾಯಿತೆಂದು ಅವರು ತಿಳಿದರು. ಮಹಾರಾಜರನ್ನು ಕರಿಯಲಿಕ್ಕೆ ಮನುಷ್ಯರ ಮೇಲೆ ಮನುಷ್ಯರು ಬರತೊಡಗಿದರು. ತಮಗೊದಗಿದ ಗಂಡಾಂತರದ ವರ್ತಮಾನವು ತಾಯಿಗೆ ತಿಳಿದಿರುವದರಿಂದ ತಮ್ಮನ್ನು ನೋಡಲಿಕ್ಕೆ ಅವರು ಆತುರಪಡುತ್ತಿರುವರೆಂಬುದು ಮಹಾರಾಜರಿಗೆ ಗೊತ್ತಿತ್ತು; ಆದ್ದರಿಂದ ಅವರು ತಡಮಾಡದೆ ತಾಯಿಯ ದರ್ಶನಕ್ಕೆ ಹೋಗಿದ್ದರು. ಮಗನನ್ನು ನೋಡಿದ ಕೂಡಲೆ ಜೀಜಾಬಾಯಿ ಯವರ ಕಣ್ಣುಗಳೊಳಗಿಂದ ಆನಂದಭಾಷ್ಪಗಳು ಉದುರಿದವು. ಅವರು ಚರಣಕ್ಕೆರಗಿ ಮೇಲಕ್ಕೆದ್ದ ಮಗನ ಮೇಲೆ ಎಷ್ಟೋ ಪದಾರ್ಥಗಳನ್ನು ಇಳಿದೆಗೆದು ಒಗೆದರು. ತಮ್ಮ ಮಗನು ಈದಿನ ತಮ್ಮ ಹೊಟ್ಟೆಯಿಂದ ಹೊಸದಾಗಿ ಹುಟ್ಟಿ ಬಂದಹಾಗೆ ಅವರಿಗಾಗಿತ್ತು; ಆದರೆ ಮಗನನ್ನು ಬದುಕಿಸಲಿಕ್ಕೆ ಮುಖ್ಯ ಕಾರಣರಾರಾದರೆಂಬದು ಇನ್ನೂ ಅವರಿಗೆ ಗೊತ್ತಾಗಿದ್ದಿಲ್ಲ; ಮಹಾರಾಜರು ಬಂದಬಳಿಕ ಯಾವತ್ತು ವೃತ್ತಾಂತವನ್ನು ಹೇಳಲು, ಹೈಮವತಿಯ ವಿಷಯವಾಗಿ ಜೀಜಾಬಾಯಿವರ ಮನಸ್ಸಿನಲ್ಲಿ ವಿಲಕ್ಷಣ ಕೌತುಕವು ಉತ್ಪನ್ನವಾಯಿತು. ಆ ಕೌತುಕದ ಭರದಲ್ಲಿ ಜೀಜಾಬಾಯಿ ಯವರ ಮೈಮೇಲಿನ ಎಚ್ಚರವು ತಪ್ಪಿದಂತಾಗಿ, ಅವರು ತ್ವರೆಯಿಂದ ಹೈಮವತಿಯ ಬಳಿಗೆ ಹೋಗಿ ಆಕೆಯನ್ನು ಬಿಗಿಯಾಗಿ ಅಪ್ಪಿಕೊಂಡರು. ಕಣ್ಣಲ್ಲಿ ನೀರುಗಳು ತುಂಬಿರಲು, ಅವರು ಹೈಮವತಿಯನ್ನು ಕುರಿತು—''ಅಮ್ಮಾ, ನಾನು ಶಿವಬಾನುವನ್ನು ಹಡೆದೆನು; ಆದರೆ ನೀನು ಆತನಿಗೆ ಇಂದು ಜೀವದಾನವನ್ನು ಕೊಟ್ಟೆ! ಇಂದು ನೀನು ಆತನನ್ನು ನನ್ನ ಉಡಿಯಲ್ಲಿ ಹಾಕಿರುತ್ತೀ, ಆದ್ದರಿಂದ ನೀನೇ ಆತನ ನಿಜವಾದ ತಾಯಿಯು......'' ಎಂಬಿವೇ ಮೊದಲಾದ ಅಂತಃಕರಣದ ಶಬ್ದಗಳಿಂದ ಆಕೆಯನ್ನು ಗೌರವಿಸಿದರು. ಆಮೇಲೆ ಅವರು ಬಹಳ ಹೊತ್ತು ಸುಮ್ಮನೆ ಕುಳಿತುಕೊಂಡರು. ಮತ್ತೆ ಹೈಮವತಿಯನ್ನು ಕುರಿತು—''ಒಟ್ಟಿಗೆ ಆ ಚಂದ್ರರಾವ ಮೋರೆಯ ಮಗಳು ಇಂಥ ಘಾತಕ ತಂತ್ರವನ್ನು ಒಡ್ಡಿದಳಲ್ಲವೆ? ಆಕೆಯ ಮನಸ್ಸಿನಲ್ಲಿ ಏನು

ವಿಕಲ್ಪಭಾವವು ಉತ್ಪನ್ನವಾಗಿತ್ತೋ ಏನೋ? ಆದರೆ ನಮ್ಮ ಶಿವಬಾನು ಆಕೆಯನ್ನು ಶಿಕ್ಷಿಸಲಿಲ್ಲವಷ್ಟೇ? ಈಗ ಆಕೆಯು ಎಲ್ಲಿ ಇರುವಳು? ಆಕೆಯ ಗತಿ ಏನಾಯಿತು? ಆಕೆಯನ್ನು ಇಲ್ಲಿಗೆ ಕರಕೊಂಡು ಬರಬೇಕಾಗಿತ್ತು, ಪಾಪ! ತಂದೆಯ ಮರಣದಿಂದ ಆ ಹುಡಿಗಿಗೆ ಎಷ್ಟು ವ್ಯಸನವಾಗಿರಬಹುದಲ್ಲ! ಹಾಗಿಲ್ಲದಿದ್ದರೆ ಆಕೆಯು ತನ್ನ ಜೀವದ ಹಂಗು ಇಲ್ಲದೆ, ಪರಿಪರಿಯ ಕಷ್ಟಗಳನ್ನು ಭೋಗಿಸಿ, ಸೇಡು ತೀರಿಸಿಕೊಳ್ಳುವ ಸಾಹಸಕ್ಕೆ ಯಾಕೆ ಹೋಗುತ್ತಿದ್ದಳು? ದೃಢನಿಶ್ಚಯದ ಆ ವೀರಪುತ್ರಿಯನ್ನು ಇಲ್ಲಿಗೆ ಕರಕೊಂಡು ಬಂದಿದ್ದರೆ, ಸ್ವಲ್ಪ ದಿವಸಗಳಲ್ಲಿ ಆಕೆಯ ಮನಸ್ಸು ತಿರುಗಬಹುದಾಗಿತ್ತು''

ಈ ಮೇರೆಗೆ ನುಡಿದು ಜೀಜಾಬಾಯಿಸಾಹೇಬರು ಮಹಾರಾಜರ ಬಳಿಗೆ ಬಂದು, ತಾರೆಯ ವಿಷಯವಾಗಿ ಪ್ರಶ್ನಮಾಡಿದರು. ಅದಕ್ಕೆ ಮಹಾರಾಜರು ಆಕೆಯ ಶೋಧದ ಬಗ್ಗೆ ತುಳಾಜಿಗೆ ಹೇಳಿ ಬಂದಿರುವ ಸಂಗತಿಯನ್ನು ತಿಳಿಸಿದರು. ಆದರೆ ಅಷ್ಟರಿಂದ ಆ ಉದಾರಾಂತಃಕರಣದ ಸಾಧ್ವಿಗೆ ಸಮಾಧಾನವಾಗಲಿಲ್ಲ, ಅವರ ಸ್ವಜನಾಭಿಮಾನವೂ, ಗುಣಗ್ರಹಣ ಶಕ್ತಿಯೂ ವಿಲಕ್ಷಣವಾದಂಥವು. ಅವರು ಕೂಡಲೆ ಮಗನಿಗೆ—''ಮತ್ತೆ ಯಾರನ್ನಾದರೂ ನೋಡಲಿಕ್ಕೆ ಕಳಿಸು. ಬುದ್ಧಿಭ್ರಂಶವಾಗಿ ಆ ಹುಡುಗಿಯು ಸಿಕ್ಕಕಡೆಗೆ ಓಡಿಹೋದರೆ ಎಷ್ಟು ಅನರ್ಥವಾದೀತಲ್ಲ! ಆಕೆಯನ್ನು ಹುಡುಕಿಸಿ ಇಲ್ಲಿಗೆ ಕರಕೊಂಡು ಬಾ. ನಾನು ಆಕೆಯ ಶುಶ್ರೂಷೆಯನ್ನು ಮಾಡುವೆನು. ನಿನ್ನಿಂದಲೇ ತನ್ನ ತಂದೆಯ ಕೊಲೆಯಾಯಿತೆಂದು ಆ ಹುಡುಗೆಯು ತಿಳಿದುಕೊಂಡಿರುವದರಿಂದ, ಅದು ನಿನ್ನ ಮೇಲೆ ಸಿಟ್ಟಾಗತಕ್ಕದ್ದೇ ಸರಿ. ಹು, ಕಳಿಸು ಕಳಿಸು. ಇನ್ನು ನಾಲ್ಕು ಜನರನ್ನು ನಾಲ್ಕೂ ದಿಕ್ಕಿಗೆ ಕಳಿಸು. ಹಾಗೆ ಮಾಡದಿದ್ದರೆ ಆಕೆಯ ಗೊತ್ತು ಹತ್ತಲಿಕ್ಕಿಲ್ಲ. ಈಗ ಆಕೆಯು ನಿನ್ನ ರಾಜ್ಯದಲ್ಲಿರುವಳು. ಆಕೆಯ ಪ್ರಾಣಕ್ಕೆ ಅಪಾಯವು ಒದಗಿದರೆ, ನಿನಗೆ ಸ್ತ್ರೀ ಹತ್ಯೆಯ ದೋಷವು ಬರುವದು. ಶಿವಬಾ, ಏನೇ ಆಗಲಿ, ಸ್ತ್ರೀ ಹತ್ಯೆಯ ಪಾತಕವು ನಿನ್ನ ಪಾಲಿಗೆ ಬರುವದು ಬೇಡ. ನಡೆ, ಏಳು; ನಮ್ಮ ಆ ತಿಳಿಗೇಡಿ ತಾರೆಯನ್ನು ಹುಡುಕಲಿಕ್ಕೆ ಯಾರನ್ನು ಕಳಿಸುತ್ತೀ ಕಳಿಸು,'' ಎಂದು ಒಂದೇ ಸವನೆ ದುಂಬಾಲು ಬಿದ್ದರು. ತಮ್ಮ ತಾಯಿಯ ಈ ಗಡಿಬಿಡಿಯನ್ನು ನೋಡಿ ಮಹಾರಾಜರಿಗೆ ಸ್ವಲ್ಪ ನಗೆ ಬಂದಿತು. ಅವರು ತಾಯಿಯನ್ನು ಕುರಿತು—''ಅವ್ವಾ, ನನ್ನ ಪ್ರಾಣಹರಣ ಮಾಡಲಿಕ್ಕೆ ಟೊಂಕ ಕಟ್ಟಿ ನಿಂತುಕೊಂಡಿದ್ದ ಆ ಹೆಣ್ಣುಮಗಳ ಮೇಲೆಯೂ ಇಷ್ಟು ನಿನ್ನ ಪ್ರೇಮವೇ? ಹೋಗಲೊಲ್ಲಳೇಕೆ, ಆಕೆಗೇನಾದರೂ ಅಪಾಯವಾದರೆ ಅದಕ್ಕೆ ನಾವು ಮಾಡುವದೇನು? ತನ್ನ ದುಷ್ಕರ್ಮದ ಫಲವನ್ನು ಆಕೆಯು ಭೋಗಿಸುವಳು. ಆಕೆಯು ಬದುಕಿಯಿದ್ದರೆ ಮತ್ತೆ ಏನಾದರೂ ದುರಾಲೋಚನೆ ಮಾಡಿ ನನಗೆ ಕೇಡು ಬಗೆಯುವವಳೇ. ಅಂದಬಳಿಕ ಹೊರಗಿನ ಅರಿಷ್ಟವು ಹೊರಗೆ ಹೋಗಲೊಲ್ಲದೇಕೆ. ನಾವೇನು ಆಕೆಗೆ ಕೇಡು ಬಗೆದಿರುವದಿಲ್ಲ, ಬುದ್ಧಿಭ್ರಂಶವಾಗಿ ಆಕೆಯು ಅರಣ್ಯದಲ್ಲಿ ಓಡಿಹೋಗಿರುವದರಿಂದ, ಯಾವಾದರೂ ದುಷ್ಟ ಶ್ವಾಪದಗಳ ಭಕ್ಷ್ಯಸ್ಥಾನದಲ್ಲಿ ಆಕೆಯು ಬೀಳಬಹುದು; ಇಲ್ಲವೆ ಮತ್ತೆ ಯಾವದಾದರೂ ಅಪಘಾತವಾಗಿ ಆಕೆಯು ತನ್ನ ಪ್ರಾಣಕ್ಕೆ ಎರವಾಗಬಹದು; ಆದರೆ ನಾವು ಆಕೆಯನ್ನು ಹುಡುಕಿಕೊಂಡು ಬರುವ ಅವಶ್ಯವೇನು?''

ಮಹಾರಾಜರು ಯಾವ ಭಾವದಿಂದಲೇ ಈ ಮಾತುಗಳನ್ನು ಆಡಿರಲೊಲ್ಲರೇಕೆ, ಅವನ್ನು ಕೇಳಿ ಜೀಜಾಬಾಯಿಸಾಹೇಬರಿಗೆ ಬಹಳ ಆಶ್ಚರ್ಯವಾಯಿತು. ಅವರು ಚಕಿತಮುದ್ರೆಯಿಂದ ತಮ್ಮ ಮಗನನ್ನು ನೋಡಿ—''ಶಿವಬಾ, ನೀನೇ ಈ ಮಾತುಗಳನ್ನು ಆಡುವೆಯೇನು? ನೀನೇ ಆಡುತ್ತಿದ್ದರೆ ನನ್ನ ಮನಸ್ಸನ್ನು ಪರೀಕ್ಷಿಸುವದಕ್ಕಾಗಿ ಆಡುತ್ತೀಯೆಂದು ತಿಳಿಯುತ್ತೇನೆ. ನೀನು ಯಾವ ಭಾವನೆಯಿಂದಲೇ ಆಡಿರಲೊಲ್ಲೆಯೇಕೆ, ಆ ಹುಡುಗೆಯನ್ನು ಹುಡಿಕಿಸಿ ನನಗೆ ಒಪ್ಪಿಸು. ಆಮೇಲೆ ನನಗೆ ಸರಿದೋರಿದಂತೆ ಆಕೆಯ ವ್ಯವಸ್ಥೆಯನ್ನು ನಾನೇ ಮಾಡುವೆನು. ಅಲ್ಲೋ ಹುಚ್ಚಾ, ಆ ಹುಡುಗೆಯು ಕ್ರೂರ ಶ್ವಾಪದಗಳ ಬಾಯಿಗೆ ಬೀಳುವದಂತು ಇರಲಿ, ಹೊತ್ತು ಹೇಳಿಕೇಳಿ ಬರುವದಿಲ್ಲ, ಯಾವ ಕಾಲಕ್ಕೆ ಯಾರು ಆಕೆಗೆ ಭೆಟ್ಟಿಯಾದಾರು, ಆಕೆಯ ಮೇಲೆ ಎಂಥ ಪ್ರಸಂಗವು ಬಂದೀತೆಂಬದನ್ನು ಯಾರು ಹೇಳಬೇಕು? ಆದ್ದರಿಂದ ಸುಮ್ಮನೆ ಏನಾದರೂ ಮಾತಾಡುತ್ತ ಕಾಲಹರಣ ಮಾಡಬೇಡ. ಆಕೆಯನ್ನು ಹುಡುಕಿಸಿ ಇತ್ತಕಡೆಗೆ ಕಳಿಸು. ಏಷ್ಟಾದರೂ ಆಕೆಯು ಜಾವಳಿಯ ಮೋರೆಯ ಮಗಳು. ಆಕೆಯು ಏನು ಮಾಡಿದಳೆಂಬದರ ಕಡೆಗೆ ನಾನೂ ನೋಡುವದಿಲ್ಲ; ನೀನೂ ನೋಡಬೇಡ. ಕ್ಷಣವಾದರೂ ವಿಲಂಬಮಾಡದೆ ಯಾರನ್ನಾದರೂ ಕಳಿಸಿ ಅರಣ್ಯವನ್ನೆಲ್ಲ ಶೋಧಿಸು. ಇನ್ನು ನೀನು ಏನು ಹೇಳಿದರೂ ನಾನು ಕೇಳುವದಿಲ್ಲ'' ಎಂದು ನುಡಿದರು. ತಾಯಿಯ ಮಾತಿಗೆ ಪ್ರತಿಯಾಗಿ ಮಹಾರಾಜರು ಏನೂ ಮಾತಾಡುವ ಹಾಗಿದ್ದಿಲ್ಲ. ಈಗ ಮಾತಾಡಿದ್ದಾದರೂ ಸುಮ್ಮನೆ ಸಲಿಗೆಯಿಂದ ಮಾತಾಡಿದ್ದರು. ತಮ್ಮ ತಾಯಿಯು ಎಷ್ಟು ದಯಾಳುವು, ಎಷ್ಟು ಕನಿಕರದವಳು ! ತನ್ನ ಪ್ರಾಣಹರಣಮಾಡಲಿಕ್ಕೆ ನಿಂತವರ ಮೇಲೆಯೂ ಆಕೆಯ ಅಂತಃಕರಣವೆಷ್ಟು! ಅವರ ಯೋಗಕ್ಷೇಮದ ವಿಷಯದ ಆಸಕ್ತಿಯೆಷ್ಟು! ಇಂಥ ತಾಯಿಯ ಹೊಟ್ಟೆಯಲ್ಲಿ ಹುಟ್ಟಿ ಬಂದ ನಾನು ಧನ್ಯನೇ ಸರಿ! ಎಂಬ ವಿಚಾರಗಳು ಅವರ ಮನಸ್ಸಿನಲ್ಲಿ ಉತ್ಪನ್ನವಾಗಲು, ಅವರು ಅತ್ಯಂತ ಭಕ್ತಿಯಿಂದಲೂ, ಆದರದಿಂದಲೂ, ಅಭಿಮಾನದಿಂದಲೂ ತಾಯಿಯನ್ನು ನೋಡಹತ್ತಿದರು. ಆಮೇಲೆ ಅವರು ನಾಲ್ಕೈದು ಜನರನ್ನು ತಾರಾಬಾಯಿಯ ಶೋಧಕ್ಕಾಗಿ ಜಾವಳಿಯ ಅರಣ್ಯಕ್ಕೆ ಕಳಿಸಿ, ತಾವು ತಾಯಿಯ ಅನುಮತಿಯನ್ನು ಪಡೆದು ಹೊರಟುಹೋದರು.

ಅಫಜುಲಖಾನನು ಭೆಟ್ಟಿಗೆ ಬರುತ್ತೇನೆಂದು ಹೇಳಿಕಳಿಸಿದಾಗಿನಿಂದ ಮಹಾರಾಜರಿಗೆ ಒಂದು ಪ್ರಕಾರದ ಚಿಂತೆಯು ಉತ್ಪನ್ನವಾಗಿತ್ತು. ಅವನೇನು ಸರಳ ಮನಸ್ಸಿನಿಂದ ಬರುವನೋ, ವಕ್ರ ಮನಸ್ಸಿನಿಂದ ಬರುವನೋ ಎಂಬುದು ಗೊತ್ತಾಗದ್ದರಿಂದ, ತಾವು ಅವನೊಡನೆ ಹ್ಯಾಗೆ ವರ್ತಿಸಬೇಕೆಂಬುದನ್ನು ಅವರು ನಿರ್ಧರಿಸಲಾರದವರಾಗಿದ್ದರು. ಅವರು ಠಕ್ಕತನದಿಂದ ಬರುತ್ತಿದ್ದರೆ, ಠಕ್ಕನಿಗೆ ತಾವು ಮಹಾಠಕ್ಕರಾಗಿ ಅವನ ಸಮಾಚಾರವನ್ನು ತೆಗೆದುಕೊಳ್ಳಬೇಕೆಂತಲೂ, ಆತನು ಸರಳತನದಿಂದ ಬಂದು ಒಡಂಬಡಿಕೆಯ ಮಾತುಗಳನ್ನು ಆಡಿಕೊಂಡು, ನಮ್ಮ ಸ್ವರಾಜ್ಯದ ಉಪಭೋಗಕ್ಕೆ ಆಸ್ಪದಕೊಟ್ಟರೆ, ತಾವೂ ಅವನೊಡನೆ ಸರಳತನದಿಂದ ನಡೆದು ಅವನ ಯೋಗ್ಯ ಕರಾರುಗಳನ್ನು ಒಪ್ಪಿಕೊಂಡು ಅವನನ್ನು ಸುರಕ್ಷಿತವಾಗಿ ವಿಜಾಪುರಕ್ಕೆ

ಕಳಿಸಬೇಕೆಂತಲೂ ಅವರು ನಿಶ್ಚಯಿಸಿದ್ದರು; ಆದರೆ ಖಾನನ ಮನಸ್ಸಿನೊಳಗಿದ್ದದ್ದೇ ಅವರಿಗೆ ತಿಳಿಯದಾಗಿತ್ತು, ಸಾಧಾರಣ ವಾಗಿ ನೋಡಿದರೆ, ಖಾನನ ಪ್ರಯತ್ನವು ಸರಳತನದ್ದಲ್ಲ ವೆಂಬ ಹಾಗೆ ಅವರಿಗೆ ತೋರುತ್ತಿತ್ತು, ಈ ಸಂದೇಹ ಸ್ಥಿತಿಯೇ ಮಹಾರಾಜರ ಚಿಂತೆಗೆ ಕಾರಣವಾಗಿತ್ತೆಂದು ಹೇಳಬಹುದು; ಆದರೆ ಬಹಳ ಹೊತ್ತು ಚಿಂತೆಮಾಡುತ್ತ ಕುಳಿತು ಕೊಳ್ಳುವದು ಅವರ ಸ್ವಭಾವವಾಗಿದ್ದಿಲ್ಲ. ಅವರು ಸ್ವನಿಷ್ಠೆಯು ಬಹು ಬಲವತ್ತರವಾದದ್ದರಿಂದ, ಚಿಂತನದ ವಿಚಾರದ ನಂತರ ಸ್ವಲ್ಪ ಹೊತ್ತಿನಲ್ಲಿಯೇ ಅವರಿಗೆ ಒಮ್ಮೆಲೇ ಸಮಾಧಾನವು ಆಗುತ್ತಿತ್ತು, ತಮ್ಮ ಕೈಯಿಂದ ಒಂದಿಲ್ಲೊಂದು ದೇಶಕಾರ್ಯವಾಗಲಿ, ಧರ್ಮಕಾರ್ಯವಾಗಲಿ ಆಗುವದೆಂದು ಅವರು ದೃಢವಾಗಿ ನಂಬಿದ್ದರು. ಪರಮೇಶ್ವರನು ತಮ್ಮನ್ನು ಗಂಡಾಂತರ ಗಳಿಂದ ಪಾರುಮಾಡುತ್ತ ಬಂದಿದ್ದು, ಕಡೆಗೆ ಅಫಜುಲಖಾನನ ಕೈಯಿಂದ ತಾವು ನಾಶಹೊಂದು ವದಕ್ಕಾಗಿಯೇ ಅಲ್ಲವೆಂದು ಅವರು ತಿಳಿದುಕೊಂಡಿದ್ದರು. ಈ ಬಗೆಯ ವಿಚಾರಗಳು ಅವರ ಮನಸ್ಸಿನಲ್ಲಿ ಅಲೆದಾಡುತ್ತಿರಲು, ಒಬ್ಬ ಹುಜರೆಯು ಬಂದು—''ಮಹಾರಾಜ, ಹೊರಗೆ ಒಬ್ಬ ಹೇಜೀಬನು ಬಂದಿದ್ದಾನೆ. ಅವನು ಅಫಜುಲಖಾನನ ಕಡೆಯಿಂದ ಬಂದಿರುವನಂತೆ. ತಾನು ಹೇಳುವ ಮಾತುಗಳನ್ನು ಮಹಾರಾಜರ ಮುಂದೆಯೇ ಹೇಳಬೇಕೆಂದು ಖಾನನ ಅಪ್ಪಣೆಯಾಗಿರುವದಂತೆ''ಎಂದು ಹೇಳಿದನು. ಅದನ್ನು ಕೇಳಿ ಮಹಾರಾಜರು ವಿಚಾರಮಗ್ನ ರಾದರು. ಪರಸ್ಪರರ ವಕೀಲರು ಒಬ್ಬರ ಬಳಿಗೊಬ್ಬರು ಹೋಗುತ್ತ ಬರುತ್ತಲಿದ್ದು, ಮತ್ತೆ ನಡುವೆ ಹೇಜೀಬರು ಯಾಕೆ ಬಂದಿರಬಹುದೆಂದು ಅವರು ಆಲೋಚಿಸತೊಡಗಿದರು. ವಿಚಾರಾಂತದಲ್ಲಿ ಹೇಜೀಬನನ್ನು ಕಾಣುವದು ಯೋಗ್ಯವೆಂದು ನಿರ್ಧರಿಸಿ ಆತನನ್ನು ಕರೆತರುವ ಬಗ್ಗೆ ಹುಜರೆಯನ್ನು ಆಜ್ಞಾಪಿಸಿದರು. ಆಗ ಹುಜರೆಯೂ ಅಲ್ಲಿ ಕೂಡಿದ ಮಹಾರಾಜರ ಹಿತಚಿಂತಕ ಜನರೂ ಕೂಡಿ, ಪದ್ಧತಿಯಂತೆ ಹೇಜೀಬನನ್ನು ಶೋಧಿಸಿದರು. ಯಾರಿಗೆ ಗೊತ್ತು, ಯಾವದಾದರೂ ವೈರಿಯ ಕಡೆಯಿಂದ ಬಂದವನು ಮಹಾರಾಜರ ಅಪಘಾತ ಮಾಡಿಯಾ ನೆಂದು ತಿಳಿದು ಅರಿಯದವರನ್ನೂ, ಸಂಶಯ ಬರುವವರನ್ನೂ ಶೋಧಿಸಿಬಿಡುವ ಸಾಂಪ್ರದಾಯವಿತ್ತು, ಹೇಜೀಬನ ಬಳಿಯಲ್ಲಿ ಶಸ್ತ್ರಗಳಂತು ಇದ್ದೇ ಇಲ್ಲ, ಅವನ ಬಳಿಯಲ್ಲಿ ಖಾನನು ಕಳಿಸಿದ್ದ ಪತ್ರವು ಕೂಡ ಇದ್ದಿಲ್ಲ, ಆಗ ಅವರು ಹೇಜೀಬನನ್ನು ಕುರಿತು—''ನೀನು ಖಾನನ ಕಡೆಯಿಂದಲೇ ಬಂದಿರುವೆಯೆಂಬದಕ್ಕೆ ಆಧಾರವೇನು?'' ಎಂದು ಕೇಳಿದರು. ಅದಕ್ಕೆ ಹೇಜೀಬನು—''ನಾನು ಹೇಳುವದೇ ಆಧಾರವು,'' ಎಂದು ಉತ್ತರಕೊಟ್ಟನು; ಆದರೆ ಒಳಗೆ ಬಿಡಲು ಮಹಾರಾಜರ ಅಪ್ಪಣೆಯಾದದ್ದರಿಂದ, ಯಾರೂ ಹೆಚ್ಚಿಗೆ ಮಾತಾಡದೆ ಹೇಜೀಬನನ್ನು ಕರಕೊಂಡು ಹೋಗಿ ಮಹಾರಾಜರ ಮುಂದೆ ನಿಲ್ಲಿಸಿದರು. ಆಗ ಮಹಾರಾಜರು ಆತನನ್ನು ಒಮ್ಮೆ ನೋಡಲು, ಆ ಹೇಜೀಬನು—''ಮಹಾರಾಜ, ನಾನು ತಮ್ಮ ಶತ್ರುವಲ್ಲ, ಶತ್ರುವಿನ ಕಡೆಯಿಂದಲೂ ಬಂದಿರುವದಿಲ್ಲ, ನಾನು ನಿಮ್ಮ ಭಕ್ತನಿರುತ್ತೇನೆ. ನಿಮ್ಮ ಮೇಲಿನ ಭಕ್ತಿಯಿಂದ ಖಾನನ ಕಡೆಯ ಗುಪ್ತಸಂಗತಿಯನ್ನು ತಿಳಕೊಂಡು ನಿಮಗೆ ಹೇಳಲಿಕ್ಕೆ ಬಂದಿದ್ದೇನೆ. ತಮ್ಮ ಹೊರತು ಬೇರೆಯವರ ಕಿವಿಗೆ ಮುಟ್ಟಲಾಗದು. ಏಕಾಂತವಿದ್ದ ಹೊರತು ನಾನು ಒಂದು

ಅಕ್ಷರವನ್ನೂ ಉಚ್ಚರಿಸುವ ಹಾಗಿಲ್ಲ; ಆದ್ದರಿಂದ ಈ ಜನರನ್ನು ಬೇರೆ ಕಡೆಗಾದರೂ ಕಳಿಸಿರಿ, ಇಲ್ಲವೆ ನನ್ನನ್ನಾದರೂ ಬೇರೆ ಏಕಾಂತದ ಸ್ಥಳಕ್ಕೆ ಕರಕೊಂಡು ಹೋಗಿರಿ.

ಈ ಮೇರೆಗೆ ನುಡಿದು ಹೇಜೀಬನು ಒಮ್ಮೆ ಎಲ್ಲಾ ಜನರ ಕಡೆಗೆ ನೋಡಿದನು. ಇಷ್ಟರ ಮೇಲೆ ಸನ್ನೆ ತಿಳಿದು ನಾವು ಹೊರಟುಹೋಗಬೇಕೋ ಮಹಾರಾಜರು ಹೋಗಿರೆನ್ನುವವರೆಗೆ ನಿಂತುಕೊಳ್ಳಬೇಕೋ ಎಂದು ಮಹಾರಾಜರ ಪರಿವಾರದ ಜನರು ವಿಚಾರಮಾಡಹತ್ತಿದರು. ಆಗ ಮಹಾರಾಜರ ಬಳಿಯಲ್ಲಿ ಅವರ ನಂಬಿಗೆಯ ಸ್ವಲ್ಪ ಜನರೇ ಇದ್ದರು. ಅವರಲ್ಲಿ ಮೋರೋಪಂತ ಪೇಶವೆಯ ಮನಸ್ಸಿನಲ್ಲಿ ಒಂದು ವಿಚಾರವು ಹೊಳೆದದ್ದರಿಂದ ಆತನು ಮಹಾರಾಜರನ್ನು ಕುರಿತು—"ಮಹಾರಾಜ, ತಾವು ಇದೇ ಈಗ ಒಂದು ಮಹತ್ಸಂಕಟದಿಂದ ಪಾರಾದದ್ದು, ಅಂಬಾಬಾಯಿಯ ಕೃಪೆಯಿಂದಲ್ಲದೆ ಬೇರೆಯಿಲ್ಲ. ಹೀಗಿದ್ದು, ಅಪರಿಚಿತನಾದ ಒಬ್ಬ ಮನುಷ್ಯನ ಏಕಾಂತದ ಯೋಗವನ್ನು ತಂದುಕೊಂಡು, ನಿಷ್ಕಾರಣವಾಗಿ ಸಂಕಟದ ಕಲ್ಪನೆಯನ್ನು ಉಂಟುಮಾಡಬಾರದೆಂದು ನಾನು ಪ್ರಾರ್ಥಿಸುವೆನು. ಯಾರು ಯಾವ ರೂಪದಿಂದ ಮಹಾರಾಜರ ಅಹಿತವನ್ನು ಚಿಂತಿಸಬಹುದೆಂಬುದನ್ನು ಹೇಳಲಾಗುವದಿಲ್ಲ. ತಾವು ಏಸಾಜಿಯ ಶೋಧಕ್ಕೆ ಹೊರಟಿರಲು, ಭಯಂಕರವಾದ ಸಂಕಟವು ಪ್ರಾಪ್ತವಾಯಿತು. ಶ್ರೀ ಭವಾನೀ ಮಾತೆಯು ಆ ಸಂಕಟದಿಂದ ಪಾರುಮಾಡದಿದ್ದರೆ ಸ್ವರಾಜ್ಯದ ಗತಿಯೇನಾಗುತ್ತಿತ್ತು! ನಮ್ಮಂತ ನೌಕರರು ಇರುತ್ತಿರಲು, ಸಣ್ಣ ಪುಟ್ಟ ಕೆಲಸಗಳಿಗೆ ಮಹಾರಾಜರು ಮುಂದುವರಿಯುವದೇಕೆ? ಇಂಥ ಹೇಜೀಬ ಗೀಜೀಬರ ವಿಶ್ವಾಸವನ್ನು ಮಹಾರಾಜರು ಹಿಡಿಯತಕ್ಕದ್ದಲ್ಲ. ಇವರು ಶತ್ರುಗಳ ಕಡೆಯಿಂದ ಬಂದ ಗುಪ್ತಚಾರರು ಇರಬಹುದು" ಎಂದು ನುಡಿಯುತ್ತಿರಲು, ಮಹಾರಾಜರು ನಕ್ಕು ಪೇಶವೆಯನ್ನು ಕುರಿತು—"ಪೇಶವೇ, ನಿಮ್ಮ ಮಾತಿನಲ್ಲಿ ಅರ್ಥವಿರುವದಿಲ್ಲೆಂದು ಹೇಳಲಾಗುವದಿಲ್ಲ ; ಆದರೆ ಯಾವಾಗಲೂ ನೌಕರರನ್ನೇ ಮುಂದೆಮಾಡಿ ತಾನು ಹಿಂದೆ ಉಳಿಯುವ ಯಜಮಾನನು, ಎಷ್ಟು ದಿನ ತನ್ನ ಯಜಮಾನ್ಯವನ್ನು ಕಾಯ್ದುಕೊಳ್ಳುವನೋ ನಾವು ಅರಿಯೆವು. ತನ್ನ ಸೇವಕನು ಸಂಕಟಕ್ಕೆ ಗುರಿಯಾದಾಗಾದರೂ ಯಜಮಾನನು ಅವನನ್ನು ಬಿಡಿಸಲು ಯತ್ನಿಸಬೇಕಾಗುವದು; ಆದರೆ ಅದಿರಲಿ, ಜಾವಳಿಯ ಅರಣ್ಯದಲ್ಲಿ ನಮ್ಮ ವೈರಿಗಳು ಇಂತ ಭಯಂಕರವಾದ ಗುಹೆಯನ್ನುಂಟು ಮಾಡಿದರು; ಅದರಲ್ಲಿ ಮದ್ದಿನ ಚೀಲಗಳನ್ನು ತುಂಬಿ ಇಟ್ಟರು; ನನ್ನನ್ನು ಯುಕ್ತಿಯಿಂದ ಅಲ್ಲಿಗೆ ಕರೆದುಕೊಂಡು ಹೋಗಿ ಕೂಡ್ರಿಸುವ ಸ್ಥಳದಲ್ಲಿ ಕೂಡ್ರಿಸಿದರು; ಆದರೆ ನಿಮ್ಮಲ್ಲಿ ಒಬ್ಬನಿಗಾದರೂ ಅದರ ಗಂಧವು ಹತ್ತಬೇಕು! ಹೀಗೆಯೇ ಏನು ಎಲ್ಲ ಕಾರ್ಯಗಳಲ್ಲಿ ನೀವು ದಕ್ಷತೆಯನ್ನು ಕಾಯ್ದುಕೊಳ್ಳುವುದು? ಈವರೆಗೆ ನಾನು ಈ ಮಾತನ್ನು ಬಾಯಿ ಬಿಟ್ಟು ಆಡಿದ್ದಿಲ್ಲ. ಇಂಥ ಗುಪ್ತವಾದ ಒಳಸಂಚು ಇಷ್ಟು ದಿವಸ ಹೊರಬೀಳದೆ ಇರಲಿಕ್ಕೆ ನಮ್ಮ ಅಜಾಗರೂಕತೆಯೇ ಕಾರಣವಲ್ಲವೆ? ಬೇಕೆಂತ ಸಂಕಟವನ್ನು ತಂದುಕೊಳ್ಳಬಾರದೆಂಬ ನಿಮ್ಮ ಮಾತನ್ನು ನಾನೂ ಒಪ್ಪಿಕೊಳ್ಳುತ್ತೇನೆ; ಆದರೆ ನನಗೆ ಸಂಕಟಗಳು ಒದಗದಂತೆ, ಅಥವಾ ಯಾರಾದರೂ ಸಂಕಟವನ್ನು ತಂದಾಗ ಅದರ ನಿವಾರಣ ಮಾಡಲಿಕ್ಕೆ, ಅಥವಾ ಅದರ ಸುದ್ದಿಯನ್ನು

ತಿಳಕೊಳ್ಳಲಿಕ್ಕೆ, ಈವರೆಗೆ ನೀವೇನು ಉಪಾಯಗಳನ್ನು ಯೋಚಿಸುತ್ತ ಬಂದಿರುವಿರಿ? ಹೆಚ್ಚು ಮಾತಾಡುವದು ನಮ್ಮ ಪದ್ಧತಿಯಲ್ಲ. ಇಷ್ಟರ ಮೇಲಿಂದ ನೀವು ತಿಳಿದುಕೊಳ್ಳತಕ್ಕದ್ದನ್ನು ತಿಳಿದುಕೊಳ್ಳಿರಿ. ಹೇಜೀಬನ ವೇಷದಿಂದ ಬಂದ ಮನುಷ್ಯನು ಪ್ರಾಮಾಣಿಕನಿರುತ್ತಾನೆ; ಆತನ ಮೋರೆಯ ಲಕ್ಷಣದ ಮೇಲಿಂದ ನಮ್ಮ ನಂಬಿಕೆಯಾಗಿದೆ; ಆದ್ದರಿಂದ ನಾವು ಏಕಾಂತದಲ್ಲಿ ಆತನ ಭೆಟ್ಟಿಯನ್ನು ತಕ್ಕೊಳ್ಳುವೆವು. ಆತನಿಂದ ಘಾತವಾಗುವ ಸಂಭವವಿಲ್ಲ; ಒಂದು ಪಕ್ಷದಲ್ಲಿ ಸಂಭವಿಸಿದರೆ ನಮ್ಮ ಸಂರಕ್ಷಣವನ್ನು ನಾವು ಮಾಡಿಕೊಳ್ಳುವೆವೆಂಬ ನಂಬಿಗೆಯು ಮೋರೋಪಂತ ಪೇಶವೆಯವರಿಗಾದರೂ ನಿಶ್ಚಯದಿಂದ ಇರಲೇಬೇಕು.

ಮಹಾರಾಜರು ಬಹಳಮಾಡಿ ಸಿಟ್ಟಿಗೇಳುವದು ಕಡಿಮೆ. ಸಿಟ್ಟು ಬಂದರೆ ಅವರು ಯಾವ ಹಂಗು ಇಡುತ್ತಿದ್ದಿಲ್ಲ. ಕರಿಸದೆ ಬರುವುದು, ಕೇಳದೆ ಏನಾದರೂ ಹೇಳುವದು, ತಾವು ಸ್ವಬುದ್ಧಿಯಿಂದ ನಡೆಯದೆ ಹೇಳಿಕೆಯ ಮಾತಿನಂತೆ ನಡೆಯುವೆವೆನಿಸಿಕೊಳ್ಳುವುದು ಮಹಾರಾಜರಿಗೆ ಸರ್ವಥಾ ಸೇರುತ್ತಿದ್ದಿಲ್ಲ. ಖಾನನ ಕಡೆಯಿಂದ ಹೇಜೀಬನು ಬಂದಿರುವನೆಂಬದನ್ನು ಕೇಳಿ, ಪೇಶವೆ ಮೊದಲಾದವರು ಮಹಾರಾಜರ ಬಳಿಗೆ ಕರಿಸದೆ ಬಂದಿದ್ದರು; ತಾವು ಏನೂ ಪ್ರಶ್ನೆ ಮಾಡದಿದ್ದರೂ ಮೋರೋಪಂತನು ಹಿರಿಯತನ ತೋರಿಸಿ ನಡುವೆ ಮಾತಾಡಿದನು; ಮತ್ತು ಆತನ ಮಾತುಗಳ ಮೇಲಿಂದ ಮಹಾರಾಜರು ಹೇಳಿಕೆಯ ಮಾತು ಕೇಳುತ್ತಾರೆಂಬ ಸಂಶಯ ಬರುವ ಸಂಭವವಿತ್ತು. ಈ ಎಲ್ಲ ಅಪರಾಧಗಳಿಗಾಗಿ ಪೇಶವೆಯು ಮಹಾರಾಜರಿಂದ ಹೀಗೆ ಸಿಟ್ಟು ಮಾಡಿಸಿಕೊಳ್ಳ ಬೇಕಾಯಿತು. ಇದಲ್ಲದೆ, ಶುದ್ಧಾಂತಃಕರಣದಿಂದ ತನ್ನ ಬಳಿಗೆ ಬಂದವರ ಮನಸ್ಸನ್ನು ನೋಯಿಸುವದು ಮಹಾರಾಜರ ಮನಸ್ಸಿಗೆ ಬರುತ್ತಿದ್ದಿಲ್ಲ. ಮಹಾರಾಜರು ಹೀಗೆ ಸಿಟ್ಟಿಗೆದ್ದಾಗ ಅವರೆದುರಿಗೆ ಮಾತಾಡುವ ಧೈರ್ಯವು ಯಾರಿಗೂ ಆಗುತ್ತಿದ್ದಿಲ್ಲ. ಇನ್ನು ತಮ್ಮ ಮಾತು ನಡೆಯದೆಂದು ತಿಳಿದು ಪೇಶವೆಯೇ ಮೊದಲಾದವರು ಹೊರಟುಹೋದರು. ಅವರು ತಮ್ಮ ಕಡೆಗೆ ಬೆನ್ನು ಮಾಡಿದಕೂಡಲೆ ಮಹಾರಾಜರು ನಕ್ಕು ಹೇಜೀಬನನ್ನು ಕುರಿತು—''ಹು, ಹೇಳು; ಇನ್ನು ನಿನ್ನ ಗುಪ್ತ ಮಾತು ಯಾವದದನ್ನು? ನಮ್ಮ ನಂಬಿಗೆಯ ಜನರನ್ನೂ ಕೂಡ ಅವರ ಮನಸ್ಸು ನೊಂದೀತೆಂಬದರ ಕಡೆಗೆ ಲಕ್ಷ ಕೊಡದೆ ಹೊರಗೆ ಹಾಕಿದೆವು. ಇನ್ನು ನಿನ್ನ ಗುಪ್ತ ಸಂಗತಿಯನ್ನು ಕೇಳಲಿಕ್ಕೆ ಒಂದು ಹುಳುವು ಕೂಡ ಇಲ್ಲಿ ಸುಳಿಯದೆಂಬದನ್ನು ಚನ್ನಾಗಿ ಲಕ್ಷದಲ್ಲಿಡು. ಮೊದಲು ನೀನು ಯಾರೆಂಬದನ್ನು ಹೇಳು.

ಹೇಜೀಬ–ಮಹಾರಾಜ, ಅದೊಂದು ಮಾತನ್ನು ಬಿಟ್ಟು ಉಳಿದ ಬೇಕಾದ ಮಾತನ್ನು ಕೇಳಿರಿ. ನಾನು ಯಾವನೇ ಯಾಕೆ ಇರಲೊಲ್ಲೆನು; ತಮ್ಮ ಏಕನಿಷ್ಠೆಯ ದಾಸಾನುದಾಸನಿರುತ್ತೇನೆಂಬದನ್ನು ಮಾತ್ರ ಅರಿಕೆ ಮಾಡಿಕೊಳ್ಳುವೆನು. ನಾನು ಹಿಡಿದ ಕೆಲಸವು ಮುಗಿಯುವವರೆಗೆ ನನ್ನ ವೃತ್ತಾಂತವನ್ನು ಹೇಳಿದರೆ ಹಿತವಾಗದು. ತಮ್ಮ ಪ್ರಾಣ ರಕ್ಷಣದ ವಿಷಯವಾಗಿ ನನ್ನ ಪ್ರಾಣವನ್ನು ಅರ್ಪಿಸಲಿಕ್ಕೆ ಹಿಂದೆ ಮುಂದೆ ನೋಡೆನು. ನಾನು ಅಂಥ ಭಯಂಕರ ಸಾಹಸವನ್ನು ಮಾಡಿ ಅಫಜುಲಖಾನನನ್ನು ಕಂಡು ಅವನ ಹೊಟ್ಟೆಯೊಳಗಿನ ಮಾತು

ತಿಳಕೊಂಡು ಬಂದಿದ್ದೇನೆ. ನಮ್ಮಿಬ್ಬರ ಹೊರತು ಮೂರನೆಯವರಿಗೆ ಆ ಮಾತು ಗೊತ್ತಿರುವದಿಲ್ಲ. ದರ್ಶನ ಕೊಡುವುದಕ್ಕಾಗಿ ತಾವು ಖಾನನನ್ನು ಕರೆದಿರುತ್ತೀರಿ. ಆತನು ಅದಕ್ಕೆ ಒಂಡಬಟ್ಟು ತಮಗೆ ಅನುಕೂಲವಾಗಿ ನಡೆಯುವಂತೆ ತೋರಿಸುತ್ತಾನೆ; ಆದರೆ ಅದೆಲ್ಲ ಅವನ ನಟನೆಯು. ಅಂತರಂಗದಲ್ಲಿ ನಿಮ್ಮನ್ನು ನಾಶಗೊಳಿಸಬೇಕೆಂದು ಆತನು ನಿಶ್ಚಯಿಸಿರುತ್ತಾನೆ. ತಾವು ಎಚ್ಚರದಿಂದ ಇರಬೇಕು.

ಶಿವಾಜಿ–ಯಾತರಮೇಲಿಂದ? ನೀನು ಹೇಳುವ ಮಾತು ನಿಜವೆಂದು ಯಾತರಮೇಲಿಂದ ತಿಳಿದುಕೊಳ್ಳಬೇಕು? ಇದಕ್ಕೆ ಏನಾದರೂ ಆಧಾರ ಬೇಕಲ್ಲವೆ?

ಹೇಜೀಬ–ಮಹಾರಾಜ, ಇದಕ್ಕಾಗಿ ನಾನು ಬೇರೆ ಆಧಾರವೇನು ಕೊಡಲಿ? ಈವರೆಗೆ ನಾಲ್ಕು ಕಡೆಗೆ ಹಬ್ಬಿರುವ ಖಾನನ ಕುಟಿಲ ತಂತ್ರದ ಕೀರ್ತಿಯು ಒಂದನೆಯ ಆಧಾರವು; ನನ್ನ ಶುದ್ಧಾಂತಕರಣವು ಎರಡನೆಯ ಆಧಾರವು; ಇದಕ್ಕೂ ಹೆಚ್ಚಿನ ಆಧಾರವು ಬೇಕಾಗಿದ್ದರೆ, ತಮ್ಮ ಅಗಾಧವಾದ ತರ್ಕಶಕ್ತಿಯು ಮೂರನೆಯ ಆಧಾರವು. ಮಹಾರಾಜ ಇದಕ್ಕೂ ಹೆಚ್ಚಿನ ಆಧಾರ ಗಳನ್ನು ಈ ಮಾತಿನಲ್ಲಿ ಕೊಡಲು ನಾನು ಶಕ್ತನಲ್ಲ. ಖಾನನು ತಮ್ಮ ದರ್ಶನಕ್ಕಾಗಿ ಸೈನ್ಯವಿಲ್ಲದೆ ಬರುತ್ತೇನೆಂದು ಒಡಂಬಟ್ಟಿದ್ದರೂ, ಆತನು 1500 ಜನ ಕುದುರೆಯ ಸವಾರರನ್ನು ಸಂಗಡ ಕರೆದುಕೊಂಡು ಬರಬೇಕೆಂದು ಯೋಚಿಸಿರುತ್ತಾನೆ. ಅವನ ಈ ಯೋಚನೆಯು ನನ್ನ ಹೊರತು ಬೇರೆ ಯಾರಿಗೂ ಗೊತ್ತಿರುವದಿಲ್ಲ.

ಶಿವಾಜಿ–ನಿನಗೆ ಆ ಸಂಗತಿಯು ಹ್ಯಾಗೆ ಗೊತ್ತಾಯಿತು ಹೇಳಬಾರದೇ?

ಮಹಾರಾಜರ ಈ ನಿರ್ಧಾರದ ಮಾತುಗಳನ್ನು ಕೇಳಿ ಹೇಜೀಬನು ಸುಮ್ಮನೆ ಕುಳಿತನು. ಕೆಲವು ಹೊತ್ತಿನ ಮೇಲೆ ಆತನು ಮಹಾರಾಜರನ್ನು ಕುರಿತು—''ತಮ್ಮ ಆಗ್ರಹವೇ ಇದ್ದರೆ ಹೇಳುತ್ತೇನೆ. ಆದರೆ ಮಹಾರಾಜ ತಾವು ಈ ಮಾತಿನ ವಿಷಯವಾಗಿ ಆಗ್ರಹಪಡಬಾರದು, ಆತಂಕವಿಲ್ಲದೆ ನನ್ನ ಮಾತಿನಲ್ಲಿ ವಿಶ್ವಾಸವಿಡಬೇಕು. ನನ್ನ ಮಾತಿನಲ್ಲಿ ವಿಶ್ವಾಸವಿಟ್ಟರೆ ತಮಗೆ ಹಾನಿಯಿಲ್ಲ, ಲಾಭವೇ ಇರುವದು. ನಾನೇನು ಖಾನನ ಮಾತಿನಲ್ಲಿ ವಿಶ್ವಾಸವಿಡಿರೆಂದು ತಮಗೆ ಹೇಳುವದಿಲ್ಲ; ಜಾಗರೂಕರಾಗಿರಬೇಕೆಂದು ಹೇಳುತ್ತೇನೆ. ಜಾಗರೂಕರಾಗಿರುವಾಗ ತಮಗೆ ಖಾನನ ಅಂಜಿಕೆಯೇನು?

ಹೇಜೀಬನ ಈ ಮಾತು ಮಹಾರಾಜರಿಗೆ ಅಯೋಗ್ಯವಾಗಿ ತೋರಲಿಲ್ಲ. ಸಧ್ಯಕ್ಕೆ ಇದಕ್ಕೂ ಹೆಚ್ಚು ಆಗ್ರಹಪಡುವದು ಯೋಗ್ಯವಲ್ಲವೆಂದು ಅವರು ತಿಳಿದುಕೊಂಡರು. ಅವರು ಹೇಜೀಬನಿಗೆ—''ಒಳ್ಳೇದು, ಹಾಗೇ ಆಗಲಿ. ಇನ್ನು ನಾನು ನಿನಗೆ ಹೆಚ್ಚು ಆಗ್ರಹಮಾಡುವದಿಲ್ಲ; ನಿನ್ನ ಮನಸ್ಸಿಗೆ ಪ್ರಶಸ್ತ ಕಂಡಾಗ ಹೇಳಲೊಲ್ಲೆಯೇಕೆ. ನೀನು ನನ್ನ ಸೇವೆಯನ್ನು ಮಾಡುವೆನೆಂದು ಹೇಳುವೆಯಲ್ಲ. ಆದರೆ ನನ್ನ ಸೇವೆಯನ್ನು ಮಾಡುವದು ಸುಲಭವೆಂದು ಮಾತ್ರ ಭಾವಿಸಬೇಡ. ನನ್ನ ಸೇವೆಯೆಂದರೆ ಸ್ವಧರ್ಮದ, ಸ್ವರಾಜ್ಯದ, ಸ್ವಜನರ ಸೇವೆಯೆಂದು ತಿಳಿ. ಬಹುಜನರ ಹಿತವನ್ನು ಸಾಧಿಸಹೋಗುವವರಿಗೆ ಎಂದಿಗೂ ಸುಖ ವಾಗುವದಿಲ್ಲವೆಂಬುದನ್ನು ಚನ್ನಾಗಿ ನೆನಪಿನಲ್ಲಿಡು. ಸುಖವನ್ನಪೇಕ್ಷಿಸುವವನು ಈ ಉಸಾಬರಿಗ

ಹೋಗತಕ್ಕದ್ದಲ್ಲ. ನಿನ್ನ ಮಾತಿನಲ್ಲಿ ನಾನು ವಿಶ್ವಾಸವಿಟ್ಟು ನಿನ್ನನ್ನು ಈಗ ಹೋಗಗೊಡುವೆನು. ನೋಡೋಣ, ಬಾಯಿಂದ ಅಂದಂತೆ ಕೈ ಮುಟ್ಟಿ ನನ್ನ ಸೇವೆಯನ್ನು ಎಷ್ಟು ಮಾಡುತ್ತೀಯೆಂಬುದನ್ನು'' ಎಂದು ನುಡಿದು, ಮಹಾರಾಜರು ಹೇಜೀಬನನ್ನು ಕಳಿಸಿ ತಾವು ಒಬ್ಬರೇ ಕುಳಿತುಕೊಂಡು ಆಲೋಚಿಸಹತ್ತಿದರು.

ಮಹಾರಾಜರು ತನ್ನ ಮೇಲೆ ಇಷ್ಟು ವಿಶ್ವಾಸವಿಟ್ಟು ಮನ್ನಿಸಿದ್ದರಿಂದ ವೇಷಧಾರಿ ಹೇಜೀಬನಿಗೆ ಪರಮಾನಂದವಾಯಿತು. ಆತನು ನಿಜವಾಗಿಯೇ ಮಹಾರಾಜರ ಭಕ್ತನಾಗಿದ್ದನು. ಈವರೆಗೆ ಆತನು ಮಹಾರಾಜರನ್ನು ಪ್ರತ್ಯಕ್ಷವಾಗಿ ನೋಡಿದ್ದಿಲ್ಲ. ಈಗ ಪ್ರತ್ಯಕ್ಷ ಅವರ ದರ್ಶನವಾದದ್ದರಿಂದಂತು ಹೇಜೀಬನ ಭಕ್ತಿಯು ಮತ್ತಿಷ್ಟು ಹೆಚ್ಚಾಯಿತು. ಇಂಥ ಪುಣ್ಯಶಾಲಿ ಪುರುಷನ ಹಿತವನ್ನು ಯಾವ ಉಪಾಯದಿಂದ ಸಾಧಿಸಬೇಕೆಂದು ಆತನು ವಿಚಾರಿಸುತ್ತ ತನ್ನ ಕುದುರೆಯನ್ನು ಹತ್ತಿ ಮುಂದಕ್ಕೆ ಸಾಗಿದನು. ಅವನು ಮಾರ್ಗವನ್ನು ಕ್ರಮಿಸುತ್ತಾ ಜಾವಳಿಯ ಅರಣ್ಯವನ್ನು ಹೊಕ್ಕನು. ಆ ಅರಣ್ಯದೊಳಗಿನ ಹಾದಿಯಿಂದ ಹೋಗುವವರು ಬಹು ಎಚ್ಚರಿಂದ ಹೋಗಬೇಕಾಗುತ್ತಿತ್ತು; ಸ್ವಲ್ಪ ಎಚ್ಚರ ತಪ್ಪಿದರೆ ಹಾದೀ ತಪ್ಪುವದೇ ನಿಶ್ಚಯವು. ಹೇಜೀಬನು ಗಹನ ವಿಚಾರದಲ್ಲಿ ಮಗ್ನನಾದದ್ದರಿಂದ ಹಾದಿಯ ಕಡೆಗೆ ಲಕ್ಷಗೊಡಲಿಲ್ಲ. ಅವನ ಕುದುರೆಗೂ ಆ ಹಾದಿಯು ಹೊಸದಾಗಿತ್ತು. ಬರುವಾಗ ಬಂದಿದ್ದ ಹಾದಿಯಿಂದ ಈಗ ಆತನು ಹೊರಟಿದ್ದಿಲ್ಲ. ಈ ಸ್ಥಿತಿಯಲ್ಲಿ ಮಾರ್ಗವನ್ನು ಕ್ರಮಿಸುತ್ತಿರುವಾಗ ಅವನು ಯಾವಾಗೋ ಹಾದಿಯನ್ನು ತಪ್ಪಿಬಿಟ್ಟನು. ಕುದುರೆಯು ತನ್ನ ಮನಸ್ಸಿಗೆ ಬಂದಂತೆ ಸಾಗಿತ್ತು. ಹೀಗೆ ಬಹಳ ಹೊತ್ತು ಮಾರ್ಗವನ್ನು ಕ್ರಮಿಸಿದ ಬಳಿಕ ಅವನ ಕುದುರೆಯು ಭಯಂಕರವಾದ ಅರಣ್ಯದ ಭಾಗವನ್ನು ಹೊಕ್ಕಿತು. ಆ ಮೇಲೆಯೂ ಕೆಲವು ಹೊತ್ತು ಹೇಜೀಬನು ಪರಾಧೀನನಾಗಿ ಕುದುರೆ ಒಯ್ದತ್ತ ಸಾಗಿದನು. ಅಷ್ಟರಲ್ಲಿ ಆತನ ಕಿವಿಗೆ ''ಹರ ಓಂ, ಹರ ಓಂ, ಹರ ಓಂ ಹರಹರಹರ'' ಎಂಬ ಶಬ್ದವು ಬಿದ್ದಿತು. ಕೂಡಲೆ ಆತನು ಬೆಚ್ಚಿಬಿದ್ದು ಎದುರಿಗೆ ನೋಡಲು, ಒಂದು ಗಿಡದ ಬುಡದಲ್ಲಿ ತೇಜಃಪುಂಜನಾದ ಒಬ್ಬ ಬಾಲಗೋಸಾವಿಯು ಕುಳಿತಿದ್ದನು. ಆ ಬಾಲಗೋಸಾವಿಯು ನಮ್ಮ ವಾಚಕರಿಗೆ ಪರಿಚಿತನಲ್ಲ. ಆ ವೇಷಧಾರಿಯಾದ ಗೋಸಾವಿಯು ಚಂದ್ರರಾವ ಮೋರೆಯ ಮಗಳಾದ ತಾರೆಯೆಂದು ನಾವು ವಾಚಕರಿಗೆ ನೆನೆಪು ಮಾಡಿಕೊಡುವೆವು. ಮಹಾರಾಜರ ಬಳಿಯಿಂದ ಓಡಿಹೋದ ಆಕೆಯು ಆ ಘೋರಾರಣ್ಯದಲ್ಲಿ ಒಂದು ಗಿಡದ ಹೊದರಿನಲ್ಲಿ ಇರುತ್ತಿದ್ದಳು. ಆ ವಿಲಕ್ಷಣ ಹುಡಿಗೆಯ ಚಾರಿತ್ರ್ಯವು ಆಶ್ಚರ್ಯಕರವೇ ಸರಿ. ಆಕೆಯನ್ನು ನೋಡಿ ಹೇಜೀಬನಿಗೆ ಭಕ್ತಿಯು ಉತ್ಪನ್ನವಾಯಿತು. ಆತನು ಗೋಸಾವಿಯನ್ನು ಭಕ್ತಿಯಿಂದ ನಮಸ್ಕರಿಸಲು ಆತನು—''ಬೇಟಾ, ನೀನು, ಈ ಘೋರಾರಣ್ಯದಲ್ಲಿ ಯಾಕೆ ಬಂದೆ? ನೀನು ಯಾರು? ಎಲ್ಲಿಯವನು? ನಿಜವಾದ ಸಂಗತಿಯನ್ನು ಹೇಳು; ನನ್ನ ಮುಂದೆ ಏನೂ ಮುಚ್ಚಬೇಡ. ಮುಚ್ಚಿದರೆ ಹಿತವಾಗಲಾರದು. ಮನಸ್ಸಿನಲ್ಲಿ ಯಾವ ವಿಧದ ಸಂಕೋಚವನ್ನೂ ಎಣಿಸದೆ ನಿಜವಾದ ವೃತ್ತಾಂತವನ್ನು ಹೇಳು,'' ಎಂದು ಕೇಳಿದನು.

ಗೋಸವಿಯ ತೇಜಃಪುಂಜ ಮೂರ್ತಿಯನ್ನು ನೋಡಿ ಹೇಜೀಬನಿಗೆ ಭಕ್ತಿಯು ಉತ್ಪನ್ನವಾಗಿತ್ತೆಂದು ಮೇಲೆ ಹೇಳಿದೆಯಷ್ಟೇ? ಇಂಥ ತಪಸ್ವಿಗಳ ಅನುಗ್ರಹವನ್ನು ಸಂಪಾದಿಸುವದರಿಂದ ಜನ್ಮವು ಸಫಲವಾಗುವದೆಂದು ತಿಳಿದು ಹೇಜೀಬನು ತನ್ನ ವೃತ್ತಾಂತವನ್ನು ಸಾದ್ಯಂತವಾಗಿ ಹೇಳಿದನು. ಅದನ್ನು ಕೇಳಿದ ಕೂಡಲೆ ಗೋಸಾವಿಗೆ ಆಶ್ಚರ್ಯವಾಯಿತು; ಯಾಕಂದರೆ ಆತನ ವೃತ್ತಾಂತವು ಹೈಮವತಿಯ ವೃತ್ತಾಂತವನ್ನು ಅಚ್ಚಳಿಯದೆ ಹೋಲುತ್ತಿತ್ತು. ಆದ್ದರಿಂದ ಈತನು ಹೈಮವತಿಯ ಗಂಡನೆಂದು ತಾರೆಯು ನಿಶ್ಚಯಿಸಿದಳು. ಹೈಮವತಿಯ ಮೇಲೆ ತಾರೆಯ ಸಿಟ್ಟು ಎಷ್ಟಿತ್ತೆಂಬದನ್ನು ವಾಚಕರು ಬಲ್ಲರು. ಶಿವಾಜಿ ಮಹಾರಾಜರಂತು ತಾರೆಯ ಶತ್ರುವಾಗಿದ್ದರು. ಮಹಾರಾಜರ ವಿಷಯದ ತಾರೆಯ ಶತ್ರುಭಾವವು ರವಷ್ಟಾದರೂ ಕಡಿಮೆಯಾಗಿದ್ದಿಲ್ಲ. ಶಿವಾಜಿಯು ಹೈಮವತಿಯನ್ನು ಕರಕೊಂಡು ಹೋದದ್ದು ತಾರೆಗೆ ಗೊತ್ತಿತ್ತು. ಈ ಪ್ರಸಂಗವನ್ನು ಶಿವಾಜಿಯ ಸೇಡು ತೀರಿಸಿಕೊಳ್ಳುವ ಕಾರ್ಯಕ್ಕೆ ಉಪಯೋಗಿಸಿದರೆ ಉಪಯೋಗಿಸಿಕೊಳ್ಳಬೇಕೆಂದು ತಿಳಿದು ಆಕೆಯು ಹೇಜೀಬನನ್ನು ಕುರಿತು—

ಗೋಸಾವಿ–ನಿನ್ನ ವೃತ್ತಾಂತವನ್ನು ಸರಳ ಮನಸ್ಸಿನಿಂದ ಹೇಳಿದ್ದಕ್ಕಾಗಿ ನಮ್ಮ ಅಂತರಾತ್ಮನು ಸಂತುಷ್ಟನಾಗಿರುತ್ತಾನೆ; ಆದರೆ ನಿನ್ನ ಹೆಂಡತಿಯು ಕುದುರೆಯನ್ನು ಹತ್ತಿಕೊಂಡು ಎತ್ತೋ ಹೋದಳೆಂದು ನೀನು ಹೇಳಿದೆಯಲ್ಲ; ಇಷ್ಟು ಹೊತ್ತಿಗೆ ಆಕೆಯ ಗತಿಯು ಏನಾಗಿರಬಹುದು?

ಹೇಜೀಬ–ಎರಡನೆಯ ಗತಿಯೇನಾಗಬೇಕು? ಆಕೆಯು ನಿಶ್ಚಯವಾಗಿ ಆತ್ಮಹತ್ಯವನ್ನು ಮಾಡಿಕೊಂಡಿರಬಹುದು.

ಗೋಸಾವಿ–ಇದು ನಿನ್ನ ತಪ್ಪು ತಿಳುವಳಿಕೆಯು. ಪತಿಯ ಮರಣಕ್ಕಾಗಿ ಸ್ತ್ರೀಯರು ಹೀಗೆ ಪ್ರಾಣ ಕೊಡಹತ್ತಿದರೆ ಜಗತ್ತಿನಲ್ಲಿ ವಿಧವೆಯರ ಸಂಖ್ಯೆಯು ಇಷ್ಟು ಹೆಚ್ಚುತ್ತಿದ್ದಿಲ್ಲ; ಆದ್ದರಿಂದ ನಿನ್ನ ಹೆಂಡತಿಯು ನೀನು ಸತ್ತೆಯೆಂದು ತಿಳಿದು, ಒಂದು ಆಶ್ರಯ ಸ್ಥಾನವನ್ನು ಹುಡುಕಿಕೊಂಡಿರ ಬಹುದು.

ಹೇಜೀಬ–ನಿಮ್ಮ ಈ ತರ್ಕವು ನನ್ನ ಹೆಂಡತಿಯ ಸಂಬಂಧದಿಂದ ಎಂದೂ ನಿಜವಾಗದು.

ಗೋಸಾವಿ–ಇದು ನಿನ್ನ ಮರುಳತನವು; ಗಂಡಸರು ಮರುಳರೆಂಬುದು ಸುಳ್ಳಲ್ಲ. ಶಿವಾಜಿಯು ಮಹಾಪುರುಷನೆಂದು ತಿಳಿದು ನೀನು ಈಗ ಆತನ ಆಶ್ರಯವನ್ನು ಸಂಪಾದಿ ಸುವದಕ್ಕೆ ಹೊರಟಿರುವೆಯಷ್ಟೆ? ಅದರಂತೆಯೇ ನಿನ್ನ ಹೆಂಡತಿಯೂ ಆತನ ಆಶ್ರಯವನ್ನು ಪಡೆದಿರುವಳು; ಇದನ್ನು ನನ್ನ ಜ್ಞಾನದೃಷ್ಟಿಯಿಂದ ಹೇಳುವೆನು.

ಹೇಜೀಬ–ಮಹಾರಾಜರು ಪರನಾರೀ ಸೋದರರೆಂಬುದು ಪ್ರಸಿದ್ಧವಿರುವದು. ಇದಲ್ಲದೆ ಅವರು ಎಂಥ ಉದಾರರು, ಎಂಥ ಮುತ್ಸದ್ದಿಗಳು! ಪ್ರತ್ಯಕ್ಷ ದರ್ಶನವಾದದ್ದರಿಂದ ನನಗೆ ಈ

ಮಾತಿನ ಅನುಭವವಾಗಿದೆ. ಅಂಥವರ ಆಶ್ರಯವನ್ನು ನನ್ನ ಹೆಂಡತಿಯು ಪಡೆದಿದ್ದರೆ ಅದರಲ್ಲಿ ವ್ಯತ್ಯಾಸವಾದರೂ ಏನು?

ಗೋಸಾವಿ–ನೀನು ವ್ಯತ್ಯಾಸವನ್ನು ಎಣಿಸೆಂದು ನಾನಾದರೂ ನಿನಗೆಲ್ಲಿ ಹೇಳುತ್ತೇನೆ? ಪತಿಯ ಮರಣದ ಕಲ್ಪನೆಯಿಂದ ಪ್ರಾಣ ಕೊಡಬಹುದಾಗಿದ್ದ ಹೈಮವತಿಯು, ಪರಪುರುಷನ ಮನೆಯಲ್ಲಿ ಆನಂದದಿಂದ ಇರುವಳೆಂದು ನಾನು ನಿನಗೆ ಹೇಳಿದೆನು. ಇಗೋ, ಇವೇ ಆಕೆಯ ಸೀರೆ ಕುಪ್ಪಸಗಳು. ಇದು ಆಕೆಯ ಕಠಾರಿಯು. ಇವೇ ನೋಡು, ಆಕೆಯ ಸಣ್ಣ ಪುಟ್ಟ ವಸ್ತುಗಳು. ಆಕೆಯು ನನ್ನ ಬಳಿಯಲ್ಲಿ ಕೆಲವು ದಿವಸ ಇದ್ದಳು. ನನ್ನ ಬಳಿಯಿಂದಲೇ ಶಿವಾಜಿಯು ಆಕೆಯನ್ನು ಕರೆದುಕೊಂಡು ಹೋದನು. ನನ್ನಂಥ ವಿರಕ್ತಳ ಸಹವಾಸಕ್ಕಿಂತ ಶಿವಾಜಿಯ ಸಹವಾಸವು ನಿನ್ನ ಹೆಂಡತಿಗೆ ಪ್ರಿಯವಾಯಿತು! ಆಗಿನ ಪ್ರಸಂಗದಲ್ಲಿಯ ಅವರಿಬ್ಬರ ಮನಸ್ಸಿನ ಸ್ಥಿತಿಯನ್ನು ಪ್ರತ್ಯಕ್ಷ ನೋಡಿದ ನಾನು, ಶಿವಾಜಿಯು ಮಹಾನೀಚನೆಂದು ಸ್ಪಷ್ಟವಾಗಿ ಹೇಳುವೆನು. ಆತನು ಎಷ್ಟು ಮಾತ್ರವೂ ವಿಶ್ವಾಸಕ್ಕೆ ಪಾತ್ರನಲ್ಲ. ಅವನ ಮೋಸದ ಕೆಲಸಗಳು ಒಂದೇ ಎರಡೇ, ಹಲವು ಇರುವವು. ಅವನು ಚಂದ್ರರಾವ ಮೋರೆಯನ್ನು ಮೋಸದಿಂದ ಕೊಲ್ಲಿಸಿದನು. ವಿಜಾಪುರದ ಸರದಾರರನ್ನು ಕುಯುಕ್ತಿಯಿಂದ ನಾಶ ಮಾಡಿದನು. ಹಾದಿಯ ಬಡಿದನು; ಕಳವು ಮಾಡಿದನು; ದರೋಡೆ ಹಾಕಿದನು! ಇದಕ್ಕೂ ಹೆಚ್ಚಿನ ಮೋಸವೇನು ಬೇಕು? ಇಂಥ ಮೋಸಾಗರನು ಅನಾಥರಾದ ಸುಂದರ ತರುಣಿಯರನ್ನು ಮೋಸಗೊಳಿಸಿದರೆ ಆಶ್ಚರ್ಯವೇನು? ಎಂದು ನುಡಿಯಲು, ಹೇಜೀಬ ವೇಷಧಾರಿಯಾದ ಜಾಧವರಾಯನನ್ನು ಸಂಶಯ ಪಿಶಾಚವು ತಟ್ಟನೆ ಬಡಕೊಂಡಿತು! ಪ್ರಿಯ ವಾಚಕರೆ, ಹೆಂಡತಿಯ ವಿಷಯದ ಸಂಶಯ ಪಿಶಾಚಿಯು ಬಡಿದುಕೊಳ್ಳದೆಯಿದ್ದ ಗಂಡಸರು ಅಪರೂಪವಲ್ಲವೆ?

## ಹಾದಿಯ ಹುಂಬ ಒಕ್ಕಲಿಗನು

ಹಿಂದಕ್ಕೆ ಮಹಾರಾಜರು, ತುಳಾಜಿಯೇ ಮೊದಲಾದ ಲಮಾಣಿಗಳ ವೇಷ ಹಾಕಿಕೊಂಡಿದ್ದ ಜಾವಳಿಯ ಮರಾಟರಿಗೆ, ಮುಸೆ–ಕಂದರದಿಂದ ಪ್ರತಾಪಗಡದವರೆಗೆ ಪ್ರಶಸ್ತವಾದ ಹಾದಿಯನ್ನು ಮಾಡಲಿಕ್ಕೂ, ಅಲ್ಲಿಯ ವಸತಿ ಮಾಡತಕ್ಕ ಸ್ಥಳಗಳಲ್ಲಿ ಮೇವು–ದಾಣೆ–ಅನ್ನ–ನೀರುಗಳ ವ್ಯವಸ್ಥೆಯನ್ನು ಇಡಲಿಕ್ಕೂ ಆಜ್ಞಾಪಿಸಿ, ಅವರ ಮೇಲೆ ಏಸಾಜಿಯ ನಿಯಮಿಸಿದ್ದನ್ನು ವಾಚಕರು ಮರೆತಿರಲಿಕ್ಕಿಲ್ಲ. ಆ ಕೆಲಸವನ್ನು ಲಮಾಣಿಗಳು ಅತ್ಯಂತ ಉತ್ಸಾಹದಿಂದ ಮಾಡತೊಡಗಿದ್ದರು. ಮಹಾರಾಜರ ಮನಸ್ಸನ್ನು ಒಲಿಸಿಕೊಳ್ಳುವ ಉಬ್ಬು ಅವರಿಗೆ ವಿಶೇಷವಾಗಿ ಇದ್ದಿತು. ಸ್ವಲ್ಪ ದಿವಸಗಳಲ್ಲಿಯೇ ಮಹಾರಾಜರ ಇಚ್ಛೆಯಂತೆ ಪ್ರಶಸ್ತವಾದ ಮಾರ್ಗವು ಸಿದ್ಧವಾಯಿತು. ಅಲ್ಲಲ್ಲಿ ಸರಬರಾಯಿಯ ವ್ಯವಸ್ಥೆಯೂ ಉತ್ತಮ ರೀತಿಯಿಂದ

ಮಾಡಲ್ಪಟ್ಟಿತು. ಈ ಸಂಗತಿಯನ್ನು ತಿಳಿಸುವದಕ್ಕಾಗಿ ಮಹಾರಾಜರು ಕೃಷ್ಣಾಜಿ ಭಾಸ್ಕರನನ್ನು ಖಾನನ ಕಡೆಗೆ ಕಳಿಸಿದರು. ಆ ಬ್ರಾಹ್ಮಣನು ಖಾನನ ಬಳಿಗೆ ಹೋಗಿ ಮಹಾರಾಜರ ಅಪ್ಪಣೆಯಂತೆ ಆತನನ್ನು ಕುರಿತು—''ಖಾವಿಂದ, ಮಾರ್ಗದ ವ್ಯವಸ್ಥೆಯು ಉತ್ತಮ ರೀತಿಯಿಂದ ಮಾಡಲ್ಪಟ್ಟಿರುವದು. ಸರಬರಾಯಿಯ ವ್ಯವಸ್ಥೆಯೂ ಸರಿಯಾಗಿ ಆಗಿರುವದು. ತಮ್ಮ ಮಾರ್ಗಕ್ರಮಣದ ಈ ಅನುಕೂಲತೆಯು ಎಷ್ಟು ಆಸ್ಥೆಯಿಂದ ಮಾಡಲ್ಪಟ್ಟಿರುವದೆಂಬದನ್ನು ಖಾವಂದರವರು ಅನುಭವದಿಂದ ಮನಗಾಣಬಹುದು. ಇನ್ನು ಪಯಣವನ್ನು ಬಳಿಸಲಿಕ್ಕೆ ವಿಲಂಬ ಮಾಡಬಾರದೆಂದು ಮಹಾರಾಜರು ವಿಜ್ಞಾಪಿಸಿಕೊಳ್ಳುವರು'' ಎಂದು ಹೇಳಿದನು. ಖಾನನಾದರೂ ಬೇಗನೆ ಶಿವಾಜಿಯ ಪ್ರಕರಣವನ್ನು ಮುಗಿಸಲು ಇಚ್ಛಿಸುತ್ತಿದ್ದನು. ಹೊರಗೆ ಆತನು ಶಿವಾಜಿಯ ವಿಷಯವಾಗಿ ನಿರ್ಭಯದಿಂದ ಇದ್ದಂತೆ ತೋರಿಸುತ್ತಿದ್ದರೂ, ಅಂತರಂಗದಲ್ಲಿ ಆತನು ಶಿವಾಜಿಗೆ ಬಹಳವಾಗಿ ಅಂಜುತ್ತಿದ್ದನು. ಶಿವಾಜಿಯು ತನ್ನ ಪಯಣದ ಸಲುವಾಗಿ ನಿಜವಾಗಿಯೇ ಉತ್ತಮ ವ್ಯವಸ್ಥೆಯನ್ನು ಮಾಡಿಸುತ್ತಿರುವನೋ, ಅದರಲ್ಲಿ ಮೋಸವೇನಾದರೂ ಇರುವದೊ, ಎಂಬುದರ ಶೋಧವನ್ನು ತನ್ನ ಗುಪ್ತಚಾರರ ಮುಖಾಂತರ ಖಾನನು ಮಾಡಿಸಿದ್ದನು. ಈ ಕೆಲಸವನ್ನು ಶಿವಾಜಿಯು ಮನಃಪೂರ್ವಕವಾಗಿ ಮಾಡಿಸುತ್ತಿರುವನೆಂಬ ನಂಬಿಗೆಯು ಆತನಿಗೆ ಆದದ್ದರಿಂದ, ಆ ಡೌಲಿನ ಖಾನನು ''ಶಿವಾಜಿಯು ತನಗೆ ನಿಜವಾಗಿಯೇ ಹೆದರಿದ್ದು ತನ್ನ ಮನಸ್ಸನ್ನು ಒಲಿಸಿಕೊಳ್ಳಲಿಕ್ಕೆ ಇಷ್ಟು ಪೇಚಾಡುವನೆಂ''ದು ತಿಳಿದುಕೊಂಡಿದ್ದನು; ಆದ್ದರಿಂದ ಕೃಷ್ಣಾಜಿ ಭಾಸ್ಕರನು ವಿಜ್ಞಾಪಿಸಿದ ಮರುದಿವಸವೇ ಖಾನನು ಸೈನ್ಯದ ತಳಕಿತ್ತಿದನು. ಖಾನನ ಸೈನ್ಯವೆಂದರೆ ಬಂಡುಪುಂಡಾಟಿಕೆಗಳಿಗೆ ಮೆಚ್ಚಿದ ಜನರ ತಂಡವೆಂತಲೇ ಹೇಳಬಹುದು; ಅವರು ಊರುಗಳನ್ನು ಸುಲಿಯಲಿಕ್ಕೂ, ಸುಡಲಿಕ್ಕೂ, ಜನರನ್ನು ಕೊಲ್ಲಲಿಕ್ಕೂ ಮೆಚ್ಚಿದವರಾಗಿದ್ದರು; ಆದರೆ ಮಾರ್ಗದಲ್ಲಿ ಮಹಾರಾಜರು ಸರಬರಾಯಿಯ ಅತ್ಯುತ್ತಮ ವ್ಯವಸ್ಥೆಯನ್ನು ಇಡಿಸಿದ್ದರಿಂದಲೂ, ಹಾದಿಯ ಹಳ್ಳಿಗಳ ಜನರ ಉಸಾಬರಿಗೆ ಹೋಗದಂತೆ ಖಾನನು ಆಜ್ಞಾಪಿಸಿದ್ದರಿಂದಲೂ ದಂಡಾಳುಗಳ ಪುಂಡಾಟಿಕೆಗಳಿಗೆ ಆಸ್ಪದವು ಉಳಿದಿದ್ದಿಲ್ಲ. ಪ್ರಜೆಗಳಿಗೆ ನಿಷ್ಕಾರಣ ಉಪದ್ರವ ಕೊಡುವದರಿಂದ ಶಿವಾಜಿಯ ಮನಸ್ಸು ತಿರುಗಿ, ಈ ವರೆಗೆ ಮಾಡಿದ ಯತ್ನವೆಲ್ಲ ವ್ಯರ್ಥವಾದೀತೆಂದು ತಿಳಿದು, ಖಾನನು ಸುಮ್ಮನೆ ಹಾದಿಹಿಡಿದು ಹೋಗುವಂತೆ ತನ್ನ ದಂಡಾಳುಗಳನ್ನು ಆಜ್ಞಾಪಿಸಿರಬಹುದು; ಅಥವಾ ಪಂಥಾಜಿ ಗೋಪೀನಾಥನು ಈ ಮಾತನ್ನು ಖಾನನಿಗೆ ಸೂಚಿಸಿದ್ದರೂ ಸೂಚಿಸಿರಬಹುದು.

ಮೇಲೆ ಹೇಳಿದಂತೆ ಖಾನನು ತನ್ನ ಸೈನ್ಯದ ತಳವನ್ನು ಕಿತ್ತಿ, ಮಾರ್ಗದಲ್ಲಿ ಶಿವಾಜಿಯು ಸಿದ್ಧಗೊಳಿಸಿದ್ದ ಸರಬರಾಯಿಯ ಸಾಮಾನುಗಳನ್ನು ಯಥೇಚ್ಛವಾಗಿ ಉಪಯೋಗಿಸುತ್ತ, ಪಯಣದ ಮೇಲೆ ಪಯಣವನ್ನು ಬೆಳೆಸಿ, ನಿಯಮಿತ ಸ್ಥಳವು ಇನ್ನು ಒಂದು ದಿನದ ಹಾದಿಯಿರುವಾಗ ತನ್ನ ಸೈನ್ಯದ ಬೀಡುಬಿಟ್ಟನು. ಅಲ್ಲಿ ಎರಡು ದಿನ ವಿಶ್ರಾಂತಿಯನ್ನು ಹೊಂದಬೇಕೆಂದು ಆತನು ಯೋಚಿಸಿದನು. ಒಂದು ದಿನ ಖಾನನು ಬೆಳಗಿನ ಎರಡು ತಾಸು ಹೊತ್ತು ಏರಿರುವಾಗ ತನ್ನ ಬೆಟ್ಟದಂಥ ಕುದುರೆಯನ್ನು ಹತ್ತಿಕೊಂಡು ಹಾದಿಯ ಹಿಡಿದು

ಹೊರಟಿದ್ದನು. ಆತನ ಸಂಗಡ ಪಂತಾಜಿ ಗೋಪೀನಾಥನು ಕುದುರೆಯನ್ನು ಹತ್ತಿಕೊಂಡು ಸಾಗಿದ್ದನು. ಬೇರೆ ಮೂರುನಾಲ್ಕು ಜನ ಸರದಾರರು ಖಾನನನ್ನು ಅನುಸರಿಸಿ ನಡೆದಿದ್ದರು. ಈಗಿನ ಖಾನನ ಪೋಷಾಕು ತೀರ ಸಾಧಾರಣ ತರದ್ದಿತ್ತು. ಆತನು ಒಂದು ಖಡ್ಗದ ಹೊರತು ಬೇರೆ ಆಯುಧಗಳನ್ನು ತೆಗೆದುಕೊಂಡಿದ್ದಿಲ್ಲ. ಆತನು ಅನ್ಯರ ಲಕ್ಷವಿಲ್ಲದವನಾಗಿದ್ದನು. ತನ್ನ ಶೌರ್ಯದಲ್ಲಿ ಆತನ ನಂಬಿಗೆ ಬಹಳ. ತನ್ನ ಕೂದಲು ಕೊಂಕಿಸುವ ಯೋಗ್ಯತೆಯು ಕೂಡ ಯಾರಿಗೂ ಇಲ್ಲೆಂದು ಆತನು ನಂಬಿದ್ದನು. ಆತನ ನಂಬಿಗೆಗೆ ತಕ್ಕ ಕಾರಣಗಳೂ ಇದ್ದವು. ಶರೀರದಿಂದ ಆತನು ಬಲು ಬಲಿಷ್ಠನು. ಜೋಡು ಎಲುಬಿನ ಆತನ ಮೈಕಟ್ಟು ಅಚ್ಚ ಉಕ್ಕಿನಿಂದ ಮಾಡಿದಂತೆ ವಿಲಕ್ಷಣದಾರ್ಢ್ಯವುಳ್ಳದ್ದಾಗಿತ್ತು. ಆತನ ನಿಲುವಿಕೆ ಬಹು ಎತ್ತರ, ಅದಕ್ಕೆ ತಕ್ಕಂತೆ ಆತನ ಕೈಕಾಲುಗಳು ಉದ್ದವಾಗಿಯೂ, ಗಡುತರವಾಗಿಯೂ ಇದ್ದವು. ನೋಡುವವರಿಗೆ ಈತನು ಸಹಜವಾಗಿ ಎಂಟು–ಹತ್ತು ಜನರನ್ನು ಹೊಡೆದು ಉರುಳಿಸ ಬಹುದೆನ್ನುವ ಹಾಗೆ ತೋರುತ್ತಿತ್ತು. ಹೀಗೆ ಶರೀರ ಮಾನದಿಂದ ಆತನು ಅಪ್ರತಿಮನಾಗಿದ್ದಂತೆ, ಎದೆಗಾರಿಕೆಯಲ್ಲಿಯೂ ಅದ್ವಿತೀಯನಾಗಿದ್ದನು. ಆತನು ಶಸ್ತ್ರವಿದ್ಯೆಯಲ್ಲಿ ಅತ್ಯಂತ ನಿಪುಣನು. ಆತನ ಖಡ್ಗದ, ಹಾಗು ತುಬಾಕಿಯ ಗುರಿಗಳು ಎಂದೂ ತಪ್ಪುವಹಾಗಿಲ್ಲ. ಆತನ ಹೊಡತ ಬಿದ್ದವನು ನೆಲಕ್ಕುರುಳಿದನೆಂತಲೇ ತಿಳಿಯಬೇಕು. ಆತನು ತನ್ನ ಭಯಂಕರವಾದ ಹಸ್ತದಿಂದ ಯಾವನೊಬ್ಬನ ಮುಂಗೈಯನ್ನು ಹಿಡಿದರೆ, ಅಥವಾ ಯಾವನೊಬ್ಬನನ್ನು ಹಿಟಿಕಿದರೆ ಯಮನ ದವಡೆಯೊಳಗೆ ಸಿಕ್ಕು ಒದ್ದಾಡಿದ ಹಾಗೆ ಒದ್ದಾಡುವನೇ ಸರಿ. ತನ್ನ ಈ ಸಾಮರ್ಥ್ಯದ ಬಗ್ಗೆ ಆತನು ವಿಲಕ್ಷಣ ಗರ್ವವನ್ನು ವಹಿಸಿದ್ದನು. ಆದ್ದರಿಂದ ಆತನು ಎಲ್ಲಿಗಾದರೂ ಶಸ್ತ್ರರಹಿತನಾಗಿಯೂ, ಒಬ್ಬಂಟಿಗನಾಗಿಯೂ ಹೋಗಲಿಕ್ಕೆ ಎಷ್ಟು ಮಾತ್ರವೂ ಅಂಜುತ್ತಿದ್ದಿಲ್ಲ. ಸಿಕ್ಕಲ್ಲಿ ಹೀಗೆ ಹೋಗಬಾರದೆಂದು ಯಾರಾದರೂ ಹೇಳಿದರೆ, ಆತನು ಹೇಳುವವರಿಗೆ ಚೇಷ್ಟೆ ಮಾಡಿ ತಾನು ಹೋಗುವ ಹಾಗೆ ಹೋಗಿಬಿಡುತ್ತಿದ್ದನು. ಆತನ ಈ ಸಾಹಸ ಗುಣಕ್ಕಾಗಿ ಜನರು ಅವನೊಡನೆ ಅಂಜಿ ನಡೆಯುತ್ತಿದ್ದರು.

ಇಂಥ ಮಹಾ ಬಲಿಶಾಲಿಯೂ, ಸಾಹಸಿಯೂ, ಗರ್ವಿಷ್ಠನೂ ಆದ ಖಾನನು ಕುದುರೆ ಹತ್ತಿಕೊಂಡು ಮುಂದಕ್ಕೆ ಸಾಗಿರುವಾಗ, ಒಬ್ಬ ಹುಂಬನಾದ ಬಡ ಒಕ್ಕಲಿಗನು ಒಂದು ಸಣ್ಣ ಬುಟ್ಟಿಯಲ್ಲಿ ಗೆಣಸುಗಳನ್ನೂ, ಬೇರೆ ಕಾಯಿಪಲ್ಲೆಯನ್ನೂ ತುಂಬಿಕೊಂಡು ಸಾಗಿದ್ದನು. ಆತನು ಸಹಜವಾಗಿ ಖಾನನನ್ನು ನೋಡಲಿಕ್ಕೆ ನಿಂತುಕೊಂಡನು. ಆ ಒಕ್ಕಲಿಗನ ಮೈತುಂಬ ಬಟ್ಟೆಗಳಿದ್ದಿಲ್ಲ. ಆತನು ಲಂಗೋಟಿಯನ್ನು ಹಾಕಿಕೊಂಡು, ತಲೆಯ ಮೇಲೆ ಕಂಬಳಿಯ ಕೊಪ್ಪಿಯನ್ನು ಹೊತ್ತು ಕೊಂಡು, ಅದರ ಮೇಲೆ ಬುಟ್ಟಿಯನ್ನು ಇಟ್ಟುಕೊಂಡಿದ್ದನು. ಒಕ್ಕಲಿಗನು ತೀರ ಗಿಡ್ಡನು, ಕಪ್ಪು ಬಣ್ಣದವನು; ನೋಡುವವರಿಗೆ ಆತನು ತೀರ ಅರವನಾಗಿ ತೋರುತ್ತಿದ್ದನು. ಆತನು ಗಾಬರಿಯಾಗಿ ಖಾನನ ಕಡೆಗೆ ನೋಡುವ ರೀತಿಯನ್ನೂ ವಿಚಾರಿಸಿದರೆ, ಈ ಹಳ್ಳಿಗಾಡಿನ ಕಗ್ಗನು ಬಿಳಿಯಂಗಿಯ ಜನರನ್ನೇ ನೋಡಿಲ್ಲೆನ್ನುವ ಹಾಗೆ ತೋರುತ್ತಿತ್ತು. ಅವನ ಬುಟ್ಟಿಯು ಸಣ್ಣದು; ಆದರೆ ಅದರಲ್ಲಿ ಕಾಯಿಪಲ್ಲೆಯನ್ನು ಹೊರಚಲ್ಲುವ ಹಾಗೆ ತುಂಬಿದ್ದನು. ಕುದುರೆಯ

ಸವಾರರು ಹತ್ತರ ಬರುತ್ತಲೆ ಅವನು ಗಾಬರಿಯಾಗಿ ತನ್ನ ಎರಡೂ ಕೈಗಳಿಂದ ಬುಟ್ಟಿಯನ್ನು ಹಿಡಿದುಕೊಂಡು ಮೋರೆಯನ್ನು ಮೇಲಕ್ಕೆತ್ತಿದನು. ಅಫಜುಲಖಾನನು ಮೊದಲೇ ಎತ್ತರದ ಆಳು; ಅದರಲ್ಲಿ ಆತನು ಬೆಟ್ಟದಂಥ ಕುದುರೆಯನ್ನು ಏರಿದ್ದನು; ಅಂದಬಳಿಕ ಆ ಗಿಡ್ಡನಾದ ಹುಂಬ ಒಕ್ಕಲಿಗನು ಗೋಣು ಎತ್ತರಿಸದಿದ್ದರೆ ಖಾನನ ಭವ್ಯ ಮೂರ್ತಿಯು ಆತನ ಕಣ್ಣಿಗೆ ಹ್ಯಾಗೆ ಬೀಳಬೇಕು! ಗೋಣು ಎತ್ತರಿಸಿದ ಕೂಡಲೆ ಬುಟ್ಟಿಯು ಒಪ್ಪರೆಯಾಯಿತು; ಬುಟ್ಟಿ ಒಪ್ಪರೆಯಾದ ಕೂಡಲೆ ಅದರಲ್ಲಿದ್ದ ಗೆಣಸು ಮುಂತಾದ ಪದಾರ್ಥಗಳು ಬಡಬಡ ಕೆಳಗೆ ಬೀಳಹತ್ತಿದವು; ಆದರೆ ಆ ಹುಂಬ ಒಕ್ಕಲಿಗನಿಗೆ ಅದರ ಸುದ್ದಿಯೇ ಇದ್ದಿಲ್ಲ; ಆತನು ಬೆಪ್ಪನಾಗಿ ತೆರಬಾಯಿಂದ ಖಾನನನ್ನು ನೋಡುತ್ತ ನಿಂತುಕೊಂಡಿದ್ದನು. ಒಕ್ಕಲಿಗನ ಆ ತೆರಬಾಯಿ, ಬುಟ್ಟಯಿಂದ ಬೀಳುತ್ತಿದ್ದ ಅವನ ಕಾಯಿಪಲ್ಲೆಗಳು, ಅವನ ಕಗ್ಗ ಉಡಿಗೆ– ತೊಡಿಗೆಗಳು ಇವನ್ನೆಲ್ಲ ನೋಡಿ ಖಾನನು ನಗುತ್ತ ಒಕ್ಕಲಿಗನ ಕಡೆಗೆ ಕೈ ಮಾಡಿ ಪಂತಾಜಿ ಗೋಪೀನಾಥನ ಕಡೆಗೆ ಮೋರೆ ತಿರುವಿ—''ಪಂತ, ಈ ನಿಮ್ಮ ಜನರು ಎಷ್ಟು ಕಗ್ಗರು, ಎಷ್ಟು ಪುಕ್ಕರು! ಇವರಿಗೆ ಸ್ವಲ್ಪವಾದರೂ ಜ್ಞಾನವಿಲ್ಲ, ಅಂತೇ ತೈಮೂರಲಿಂಗನಿಂದ ಹಿಡಿದು ಎಲ್ಲರು ನಿಮ್ಮ ಮೇಲೆ ದಾಳಿಮಾಡಿ ನಿಮ್ಮನ್ನು ಹಣ್ಣು ಮಾಡುತ್ತಾ ಬಂದರು, ಎಂದು ಉಪಹಾಸದಿಂದ ನುಡಿಯಲು, ಪಂತಾಜಿ ಗೋಪೀನಾಥನು ಒಕ್ಕಲಿಗನ ಕಡೆಗೆ ನೋಡಿದನು; ಆದರೆ ಅಫಜುಲಖಾನನಂತೆ ಆತನು ನಗಲಿಲ್ಲ, ತನ್ನನ್ನು ನೊಡಿ ಅಫಜುಲಖಾನನು ಉಪಹಾಸ ಮಾಡಿ ನಕ್ಕನೆಂಬ ಅರವೇ ಆ ಒಕ್ಕಲಿಗನಿಗೆ ಇದ್ದಿಲ್ಲ, ಆತನು ಒಬ್ಬ ಕುದುರೆಯ ಸವಾರನನ್ನು ಕುರಿತು—''ಏನರಿ, ಅಫಜುಲಖಾನನೆಂಬ ಸುಬೇದಾರನು ಶಿವಾಜಿ ಮಹಾರಾಜರನ್ನು ಹಿಡಿಕೊಂಡು ಹೋಗಲಿಕ್ಕೆ ವಿಜಾಪುರದಿಂದ ಬಂದಿರುತ್ತಾನಂತೆ, ಅವನೇ ಏನು ಈತನು?'' ಎಂದು ಕೇಳಿದನು. ಅದಕ್ಕೆ ಒಬ್ಬ ಸರದಾರನು ಆ ಒಕ್ಕಲಿಗನ ಮೈಮೇಲೆ ಹೋಗಿ— ''ಅಹುದಹುದು; ಇವನೇ ನಿಮ್ಮ ಚಿಗಪ್ಪನಾದ ಅಫಜುಲಖಾನನು! ಅದನ್ನು ತಕ್ಕೊಂಡು ನೀನೇನು ಮಾಡುವೆ? ಅಫಜುಲಖಾನನಿರಲಿ, ಬೇರೆ ಮತ್ತೆ ಯಾವನಾದರೂ ಇರಲಿ; ನೀನು ಸುಮ್ಮನೆ ಹಾದಿಯ ಹಿಡಿದು ಹೋದರಾಯಿತು'' ಎಂದು ಅವನನ್ನು ಗದ್ದರಿಸಿದನು. ಮತ್ತೊಬ್ಬನು ಆ ಒಕ್ಕಲಿಗನ ಬುಟ್ಟಿಯೊಳಗಿನ ಗೆಣಸುಗಳನ್ನು ತಿನ್ನಹತ್ತಿದನು; ಆದರೆ ಆ ಒಕ್ಕಲಿಗನು ಯಾವ ಮಾತನ್ನೂ ಆಡದೆ ಹುಚ್ಚನ ಹಾಗೆ ಸುಮ್ಮನೆ ನಿಂತು ಕೊಂಡಿದ್ದನು. ಕೆಲವರು ಅವನಿಗೆ ಚೇಷ್ಟೆ ಮಾಡಹತ್ತಿದರು; ಕೆಲವರು ಅವನ ಬುಟ್ಟಿಯನ್ನು ಹಾರಿಸಬೇಕೆಂದು ಮಾಡಿದ್ದರು. ಹೀಗಿರುವಾಗ ಆ ಒಕ್ಕಲಿಗನು ತನ್ನ ಬುಟ್ಟಿಯನ್ನು ಅಲ್ಲಿಯೇ ಚೆಲ್ಲಿಕೊಟ್ಟು, ಹೊರಟುಹೋದನು. ಆ ಸವಾರರು ಉಳಿದ ಗೆಣಸು ಮೊದಲಾದವುಗಳನ್ನು ತಿಂದು, ಅವನ ಬುಟ್ಟಿಯನ್ನು ಅತ್ತಿಂದಿತ್ತ ಇತ್ತಿಂದತ್ತ ಒಗೆದಾಡುತ್ತ ಮೋಜು ಮಾಡಹತ್ತಿದರು.

ಇತ್ತ ಆ ಹುಂಬ ಒಕ್ಕಲಿಗನು ಗಿಡದ ಗುಂಪನ್ನು ಹೊಕ್ಕು ಸುಮಾರು ಕಾಲು ಮೈಲು ಹೋದ ಮೇಲೆ ಒಂದು ಸಿಳ್ಳು ಹಾಕಿದನು. ಕೂಡಲೆ ಒಬ್ಬ ಮೋತದ್ದಾರನು ಒಂದು ಕುದುರೆಯನ್ನು ಹಿಡಕೊಂಡು ಬಂದು ನಿಂತುಕೊಂಡನು. ಆ ಒಕ್ಕಲಿಗನು ಅವನ ಕಿವಿಯಲ್ಲಿ

ಏನೋ ಹೇಳಲು, ಆ ಮೋತದ್ದಾರನು ಕುದುರೆಯನ್ನು ಒಂದು ಗಿಡಕ್ಕೆ ಕಟ್ಟಿ ಹೊರಟು ಹೋದನು. ಆ ಒಕ್ಕಲಿಗನು ಸ್ವಲ್ಪ ಹೊತ್ತು ನಿಂತುಕೊಂಡಬಳಿಕ ಕುದುರೆಯನ್ನು ಹತ್ತಿಕೊಂಡು ಸುಮಾರು ಅರ್ಧಮೈಲು ಮತ್ತೆ ಮುಂದಕ್ಕೆ ಹೋದನು. ಅಲ್ಲಿ ಮತ್ತೆ ಮೂರು ನಾಲ್ಕು ಜನರು ನಿಂತುಕೊಂಡಿದ್ದರು. ಒಕ್ಕಲಿಗನು ಅವರ ಬಳಿಗೆ ಹೋದಕೂಡಲೆ ಅವರು ಬಹು ವಿನಯದಿಂದ ರಾಮರಾಮ ಮುಜುರೆಯನ್ನು ಮಾಡಿದರು. ಆಗ ಆ ಒಕ್ಕಲಿಗನು ತನ್ನ ಮೈಮೇಲಿನ ಕಂಬಳಿಯನ್ನು ಚಲ್ಲಿಕೊಟ್ಟು ನಗುತ್ತ ಅವರನ್ನು ಕುರಿತು—''ಏನು ಹೇಳಲಿ, ಬಹಳ ಮೋಜು ಆಯಿತು. ನೀವು ಆಗ ಅಲ್ಲಿ ಇದ್ದಿಲ್ಲ. ನೀವಾದರೂ ದೂರಿನಿಂದ ನನ್ನ ಗುರುತು ಹಿಡಿಯುತ್ತಿದ್ದಿರೋ ಇಲ್ಲವೋ? ನನಗೆ ಸಾಧಿಸಬೇಕಾದದ್ದು ಕಸರಿಲ್ಲದೆ ಸಾಧಿಸಿತು. ತೀರ ಹತ್ತರ ನಿಂತು ಅವನನ್ನು ನೆಟ್ಟಗೆ ನೋಡಿಕೊಂಡೆನು. ಖಾನನು ಕೀರ್ತಿಗೆ ತಕ್ಕಂತೆ ಬಲಾಢ್ಯನಿದ್ದಾನೆ. ಪ್ರತ್ಯಕ್ಷ ನೋಡಿದ ಹೊರತು ಪ್ರಸಂಗ ಒದಗಿದಾಗ ಅವನ ಸಮಾಚಾರವನ್ನು ಹ್ಯಾಗೆ ತೆಗೆದುಕೊಳ್ಳಬೇಕೆಂಬು ದಾದರೂ ನನಗೆ ಹ್ಯಾಗೆ ಗೊತ್ತಾಗಬೇಕು? ಅಂತೆ ನಾನು ನಿಮ್ಮೆಲ್ಲರ ಮಾತು ಮೀರಿ ಈ ಒಕ್ಕಲಿಗರ ಸೋಗಿನಿಂದ ಖಾನನ ಕಡೆಗೆ ಹೋಗಿದ್ದೆನು'' ಎಂದು ಹೇಳಿದನು. ಅದನ್ನು ಕೇಳಿ ತಾನಾಜಿಯು—''ಸರಕಾರ, ಯಾರಾದರೂ ತಮ್ಮ ಗುರುತು ಹಿಡಿದು ಖಾನನಿಗೆ ಹೇಳಿದ್ದರೆ, ಎಂಥ ಕಠಿಣ ಪ್ರಸಂಗವು ಒದಗುತ್ತಿತ್ತಲ್ಲ! ಈ ಮಾತನ್ನು ತಮಗೆ ನಾವು ಹೇಳಬೇಕೆನ್ನುವ ಹಾಗಿಲ್ಲ; ಒಮ್ಮೊಮ್ಮೆ ತಾವು ನಿಷ್ಕಾರಣವಾಗಿ ಪ್ರಾಣಸಂಕಟವನ್ನು ತಂದುಕೊಳ್ಳುತ್ತೀರಿ. ಹೀಗಾದ ಬಳಿಕ ನಮ್ಮಂಥವರಿಂದ ತಮಗೆ ಉಪಯೋಗವು ಯಾವಾಗಾಗಬೇಕು? ನಿಮ್ಮ ಸಲುವಾಗಿ ನಾವು ನಮ್ಮ ದೇಹವನ್ನು ಅರ್ಪಿಸಿರುವೆವಲ್ಲವೆ? ಮಹಾರಾಜ, ತಾವು ಉತ್ತಮಾಂಗವಾದ ಶಿರಸ್ಸಿನಂತೆ ಇರುತ್ತೀರಿ; ನಾವು ಶಿರಸ್ಸಿನ ಅಧೀನದಲ್ಲಿರುವ ಕೈಕಾಲುಗಳಂತೆ ಇರುತ್ತೇವೆ. ತಾವು ನಮ್ಮನ್ನು ಆಜ್ಞಾಪಿಸಬೇಕು. ತಮ್ಮ ಆ ಆಜ್ಞೆಯಂತೆ ನಾವು ಕಾರ್ಯಗಳನ್ನು ಮಾಡಬೇಕು. ಹೀಗಿದ್ದು, ಗಂಡಾಂತರದ ಪ್ರಸಂಗಗಳಲ್ಲೆಲ್ಲ ನೀವೇ ಮುಂದುವರಿದು ಹೋಗುತ್ತೀರಿ. ಕೈಕಾಲಗಳು ಮುರಿದರೆ ನಡೆಯಬಹುದು; ಆದರೆ ತಲೆ ಹೋದರೆ ಹ್ಯಾಗೆ ನಡೆಯಬೇಕು? ಎಷ್ಟು ಬೇಡಿಕೊಂಡರೂ ನಮ್ಮ ವಿನಂತಿಯನ್ನು ತಾವು ಲಕ್ಷಿಸುವದೇ ಇಲ್ಲ'' ಎಂದು ನುಡಿಯಲು ಮಹಾರಾಜರು—''ತಾನಾಜೀ, ನೀನು ತೀರ ಮರುಳನಿರುತ್ತೀ. ಅಲ್ಲೋ, ನನಗೂ ಅಫಜುಲಖಾನನಿಗೂ ಗಂಟು ಬೀಳತಕ್ಕದ್ದದೆ; ಅಂದ ಬಳಿಕ ನೀವು ಹೋಗಿ ಖಾನನನ್ನು ನೋಡಿದರೆ ಆಗುವ ಪ್ರಯೋಜನವೇನು ನೀನೇ ಹೇಳು. ಖಾನನ ಸಾಮರ್ಥ್ಯವೆಷ್ಟು, ಅವನೊಡನೆ ಹೋರಾಡುವಾಗ ಯಾವ ಯುಕ್ತಿಯನ್ನು ಮಾಡಬೇಕು, ನನಗೆ ಜಯಪ್ರಾಪ್ತಿಯಾಗಲಿಕ್ಕೆ ವಿಶೇಷತರದ ವ್ಯವಸ್ಥೆಯನ್ನೇನು ಮಾಡ ಬೇಕಾಗುವದು; ಮುಂತಾದ ಸಂಗತಿಗಳನ್ನು ಕುರಿತು ನಾನೇ ಆಲೋಚಿಸಬೇಕಾಗುವುದಲ್ಲವೆ? ಅಂತೇ ನಾನು ಖಾನನನ್ನು ಪ್ರತ್ಯಕ್ಷ ನೋಡಿಬರುವುದು ಅವಶ್ಯವಾಗಿತ್ತು, ಏನೇ ಇರಲಿ, ಕೆಲಸವಾಗಿದೆ, ವಿಘ್ನಗಳೇನು ಒದಗಿರುವದಿಲ್ಲ; ಅಂದ ಬಳಿಕ ಸುಮ್ಮನೆ ಇನ್ನು ಆ ಮಾತಿನ ಅರೆದಾಟವೇಕೆ? ಇನ್ನು ಇಂಥ ಪ್ರಸಂಗ ಒದಗಿದಲ್ಲಿ ವಿಚಾರ ಮಾಡೋಣವಂತೆ; ಈಗ ಮುಂದಿನ ವಿಚಾರವನ್ನು ಮಾಡೋಣ;

ಆದರೆ, ತಾನಾಜೀ, ನಿನ್ನ ಮಾತನ್ನು ನಾನು ನಿರರ್ಥಕವೆಂದು ತಿಳಿಯುವದಿಲ್ಲ. ನಾನೇನೋ ಒಕ್ಕಲಿಗನ ಸೋಗನ್ನು ಉತ್ತಮ ರೀತಿಯಿಂದ ಹಾಕಿಕೊಂಡಿದ್ದೆನು; ಆದರೆ ಆ ಪಂತಾಜಿ ಗೋಪೀನಾಥನು ನನ್ನ ಗುರುತು ಹಿಡಿದ ಹಾಗೆ ತೋರಿತು. ಆತನು, ಬಹು ಚಮತ್ಕಾರದ ದೃಷ್ಟಿಯಿಂದ ನನ್ನನ್ನು ಎವೆಯಿಕ್ಕದೆ ನೋಡುತ್ತಿದ್ದನು; ಆದರೆ ಗುರುತು ಹಿಡಿದದ್ದು ತೋರಗೊಡಲಿಲ್ಲ. ಆತನು ಬಹು ಧೂರ್ತನೆಂದು ಹೇಳಬೇಕಾಗುವದು; ಎರಡನೆಯವನಾ ವನಾದರೂ ಆಗಿದ್ದರೆ ತನಗಾದ ಆಶ್ಚರ್ಯವನ್ನು ಮುಚ್ಚಿಕೊಳ್ಳುವದು ಅವನಿಂದ ಆಗುತ್ತಿದ್ದಿಲ್ಲ. ಅವನ ಮುಖದಿಂದ ಏನಾದರೂ ಆಶ್ಚರ್ಯದ ಉದ್ಗಾರಗಳು ಹೊರಡುತ್ತಿದ್ದವು. ಅವನ್ನು ಕೇಳಿ ಖಾನನು ಪ್ರಶ್ನೆಮಾಡಲು, ಇದ್ದ ಸಂಗತಿಯನ್ನು ಅವನು ಹೇಳಬೇಕಾಗುತ್ತಿತ್ತು; ಆದರೆ ಇಂಥ ಪ್ರಸಂಗವನ್ನೇನೂ ಗೋಪೀನಾಥಪಂತನು ತಂದುಕೊಳ್ಳಲಿಲ್ಲ. ಇದೊಂದು ಅಂಬಾಭವಾನಿಯ ಕೃಪೆಯೆಂತಲೇ ಹೇಳಬೇಕಾಗುವದು. ಗೋಪೀನಾಥಪಂತನು ಸಜ್ಜನನೆಂಬದರಲ್ಲಿ ಸಂಶಯವಿಲ್ಲ. ಲಂಚ ರುಸವತ್ತುಗಳ ಆಶೆಯಿಂದ ಆತನು ತನ್ನ ಒಡೆಯನಿಗೆ ಕೇಡನ್ನು ಬಗೆಯಲಾರನು. ತಮ್ಮ ವೈರಿಯಾದರೂ ಮರೆಮೋಸಮಾಡಲಿಕ್ಕೆ ಆತನು ಒಡಂಬಡುವದಿಲ್ಲ. ಆತನು ನನಗೆ ಹೇಳಿರುವದೇನೆಂದರೆ—''ಖಾನನ ಮನಸ್ಸಿನಲ್ಲಿ ಏನಾದರೂ ದುರ್ವಿಚಾರಗಳು ಬಂದರೆ ನಿಮಗೆ ತಿಳಿಸುವೆನು; ಹಾಗಿಲ್ಲದೆ ಖಾನನು ಸರಳತದಿಂದ ನಿಮ್ಮೊಡನೆ ವ್ಯವಹರಿಸಿದರೆ ನೀವೂ ದುರಾಲೋಚನೆಗೆ ಒಳಗಾಗಬಾರದು.'' ಗೋಪೀನಾಥ ಪಂತನ ಈ ವಿಚಾರವನ್ನು ನಾನು ಸಂಪೂರ್ಣವಾಗಿ ಒಪ್ಪಿಕೊಳ್ಳುತ್ತೇನೆ. ಖಾನನು ಸರಳತನದಿಂದ ನಡೆದರೆ, ನಾನು ಮರೆಮೋಸ ಮಾಡುವ ಗೊಡವೆಗೆ ಹೋಗುವದಿಲ್ಲ. ಆತನು ದುರಾಲೋಚನೆಗೆ ಒಳಗಾದರೆ, ನಾನೂ ಅದಕ್ಕೆ ತಕ್ಕ ಆಟವನ್ನು ಹೂಡುವೆನು. ಈಗ ನಾನು ಆತನನ್ನು ಪ್ರತ್ಯಕ್ಷವಾಗಿ ನೋಡಿ ಬಂದಿದ್ದೇನೆ. ನಾನು ಎಚ್ಚರದಿಂದಿರುವಾಗ ಆತನು ಬೇಕಾದಂಥ ಮೋಸ ಮಾಡಲಿ, ಆತನನ್ನು ನಾನು ಬೊಕ್ಕ ಬೋರಲು ಹಾಕುವೆನು. ಆತನು ಮೋಸ ಮಾಡುವನೆಂತಲೇ ತಿಳಿದು ನಾವು ನಡೆಯಬೇಕು. ಅದೇ ದೃಷ್ಟಿಯಿಂದ ನಾವು ಎಲ್ಲ ಸಿದ್ಧತೆಯನ್ನು ಮಾಡಿಕೊಂಡಿರಬೇಕು. ಪ್ರಸಂಗವರಿತು ಆ ಸಿದ್ಧತೆಯನ್ನು ಉಪಯೋಗಿಸಿಕೊಳ್ಳಬಹುದು, ಬಿಡಬಹುದು. ಮಾರ್ಗದ ಬಳಿಯ ಅರಣ್ಯದಲ್ಲಿ ಸೈನ್ಯವನ್ನು ಗುಪ್ತವಾಗಿ ಇಟ್ಟಿರಬೇಕು. ಇವೆಲ್ಲ ಕೆಲಸಗಳನ್ನು ಬಹು ಗುಪ್ತರೀತಿಯಿಂದ ಮಾಡಬೇಕಾಗಿದೆ. ನಡೆಯಿರಿ, ನಾವು ಇಲ್ಲಿ ಬಹಳ ಹೊತ್ತು ನಿಂತುಕೊಳ್ಳುವದು ಸರಿಯಲ್ಲ.

ಈ ಮೇರೆಗೆ ನುಡಿದು ಎಲ್ಲರ ಅಲ್ಲಿಂದ ಹೊರಟುಹೋದರು. ಅವರು ಪ್ರತಾಪಗಡಕ್ಕೆ ಹೋದಬಳಿಕ ಮುಂದಿನ ಸಿದ್ಧತೆಯಲ್ಲಿ ತೊಡಗಿಸಿದರು. ಇತ್ತ ಖಾನನ ಸರಬರಾಯಿಯ ವ್ಯವಸ್ಥೆಯನ್ನು ಉತ್ತಮ ರೀತಿಯಿಂದ ಇಟ್ಟಿದ್ದರಿಂದ ಆತನು ಸಂತುಷ್ಟನಾಗಿದ್ದನು. ಅದರಂತೆ ಖಾನನು ಪಂತಾಜಿ ಗೋಪೀನಾಥನ ಮುಂದೆ ಆಡಿ ತೋರಿಸಿದನು. ಖಾನನ ಇಂಗಿತವನ್ನು ತಿಳಿದುಕೊಳ್ಳಲು ಗೋಪೀನಾಥಪಂತನು ಅತ್ಯಂತ ತತ್ಪರನಾಗಿದ್ದನು; ಯಾಕಂದರೆ ಮೋಸದಿಂದ ಶಿವಾಜಿಗೆ ಕೇಡು ಬಗೆಯಗೊಡಲಿಕ್ಕಿಲ್ಲವೆಂದು ಆತನು ತನ್ನ ಮನಸ್ಸಿನಲ್ಲಿ ನಿಶ್ಚಯಿಸಿಕೊಂಡಿದ್ದನು.

ಹೀಗಿರುವಾಗ ಖಾನನು ಗೋಪೀನಾಥಪಂತನನ್ನು ಕುರಿತು—''ಪಂತ, ಶಿವಾಜಿಯ ಮನಸ್ಸಿನಲ್ಲಿ ನನ್ನೊಡನೆ ಸಖ್ಯ ಮಾಡಿಕೊಳ್ಳುವದು ನಿಜವಾಗಿಯಿದ್ದಂತೆ ತೋರುತ್ತದೆ. ಆತನು ನಮ್ಮ ಪಯಣದ ಅನುಕೂಲತೆಯನ್ನು ಉತ್ತಮ ರೀತಿಯಿಂದ ಮಾಡಿರುತ್ತಾನೆ. ಆತನು ವಿಜಾಪುರಕ್ಕೆ ನನ್ನೊಡನೆ ಬಂದು, ಬಾದಶಹರ ದರ್ಶನ ಮಾಡಿಕೊಂಡು, ಮುಜುರೆಮಾಡಿ ಅವರ ಅಪ್ಪಣೆ ಪಡೆದು ದಕ್ಷಿಣದ ಸುಬೇದಾರಿಕೆಯನ್ನು ಭೋಗಿಸಲೊಲ್ಲನೇಕೆ? ನಾನು ಅತ್ಯುತ್ತಮ ರೀತಿಯಿಂದ ಆತನ ಶಿಫಾರಸು ಮಾಡುವೆನು. ನನ್ನ ಪ್ರತಿಜ್ಞೆಯಂತೆ ಆತನು ವಿಜಾಪುರಕ್ಕೆ ಬರಲೇಬೇಕು. ಇಲ್ಲಿಯೇ ಯಾವ ಕೆಲಸವನ್ನೂ ಮಾಡಲಿಕ್ಕೆ ಬರುವದಿಲ್ಲ. ಅಲ್ಲಿಗೆ ಹೋದಬಳಿಕ ಎಲ್ಲ ವ್ಯವಸ್ಥೆಯನ್ನು ಉತ್ತಮ ರೀತಿಯಿಂದ ಮಾಡಿಸುವೆನು. ನೀವು ಇನ್ನೊಮ್ಮೆ ಹೋಗಿ ಶಿವಾಜಿಗೆ ಈ ಮಾತನ್ನು ತಿಳಿಸಿರಿ. ಸಮಕ್ಷ ಭೆಟ್ಟಿಯಾದಾಗ ನಾನೂ ಇದೇ ಮಾತನ್ನು ಆತನಿಗೆ ಹೇಳುವೆನು. ಇಷ್ಟರಲ್ಲಿ ಆತನಿಗೆ ಈ ಮಾತನ್ನು ನೀವು ತಿಳಿಸಿ ಒಡಂಬಡಿಸಿ ಇಟ್ಟಿದ್ದರೆ ನೆಟ್ಟಗಾಗುವದು ಎಂದು ಹೇಳಿ, ಗೋಪೀನಾಥಪಂತನನ್ನು ಪುನಃ ಶಿವಾಜಿ ಮಹಾರಾಜರ ಬಳಿಗೆ ಕಳಿಸಿದನು. ಅದರಂತೆ ಗೋಪೀನಾಥಪಂತನು ಪ್ರತಾಪಗಡಕ್ಕೆ ಹೋಗಿ, ಮೊದಲು ಕೃಷ್ಣಜಿಭಾಸ್ಕರನನ್ನು ಕಂಡು, ಆ ಮೇಲೆ ಮಹಾರಾಜರ ಕಡೆಗೆ ಹೋದನು. ಏಕಾಂತದಲ್ಲಿ ಅವರಿಬ್ಬರ ಸಂಭಾಷಣವು ಬಹಳ ಹೊತ್ತಿನವರೆಗೆ ನಡೆಯಿತು. ಆಗ ಹಲವು ಸಂಗತಿಗಳ ಸ್ಪಷ್ಟೀಕರಣವಾಯಿತು. ಗೋಪೀನಾಥಪಂತನು ಮಹಾರಾಜರಿಗೆ ತಿಳಿಸತಕ್ಕದ್ದನ್ನು ತಿಳಿಸಿದನು. ಮತ್ತು ''ಖಾನನ ಮನಸ್ಸಿನಲ್ಲಿ ಇನ್ನೂ ದುರಾಲೋಚನೆಯು ಉತ್ಪನ್ನವಾದಂತೆ ಕಂಡು ಬರುವದಿಲ್ಲ; ನನಗೆ ಸಂಶಯ ಬಂದಕೂಡಲೆ ನಿಮಗೆ ತಿಳಿಸುವೆನು'' ಎದು ಮಹಾರಾಜರಿಗೆ ಹೇಳಿ ಆತನು ಹೊರಟು ಹೋದನು.

ಮಹಾರಾಜರ ವರ್ಚಸ್ಸು ವಿಲಕ್ಷಣವಾದದ್ದು; ಅವರ ಸವಿಮಾತಿನ ಶೈಲಿಯು ಅಪೂರ್ವವಾದದ್ದು. ಅವರ ಬಳಿಯಲ್ಲಿ ಬಂದ ಮನುಷ್ಯನ ಮನಸ್ಸು ತಿರುಗದೆ ಹೋಗುತ್ತಿದ್ದಿಲ್ಲ. ಗೋಪೀನಾಥಪಂತನಂತ ನಿಸ್ಪೃಹಿಯಾದ ವಕೀಲನ ಮನಸ್ಸು ಕೂಡ ಚಂಚಲವಾಯಿತು. ತಾನು ಮುಸಲ್ಮಾನರ ಚಾಕರಿಯನ್ನು ಮಾಡುವದೇ ಅನ್ಯಾಯವೆಂದು ಗೋಪೀನಾಥಪಂತನು ಎಣಿಸಹತ್ತಿದನು. ತಾನು ಖಾನನ ನೌಕರಿಯನ್ನು ಬಿಟ್ಟು ಮಹಾರಾಜರ ನೌಕರಿಯನ್ನು ಮಾಡಬೇಕೆಂದು ಸಹ ಒಮ್ಮೆ ಆ ವಕೀಲನ ಮನಸ್ಸಿನಲ್ಲಿ ಉತ್ಪನ್ನವಾಯಿತು; ಆದರೆ ಇಂಥ ಪ್ರಸಂಗದಲ್ಲಿ ತಾನು ಖಾನನ ನೌಕರಿಯನ್ನು ಬಿಡುವದು ಹಿತಕರವಲ್ಲೆಂಬುದು ಉತ್ತರ ಕ್ಷಣದಲ್ಲಿಯೇ ಆತನ ಮನಸ್ಸಿಗೆ ಹೊಳೆಯಿತು. ಆದರೆ ಆತನ ಮನಸ್ಸು ಒಮ್ಮೆ ತಿರುಗಿದ್ದು ತಿರುಗಿಹೋಯಿತು. ಗೋ-ಬ್ರಾಹ್ಮಣ ಪ್ರತಿಪಾಲನಕ್ಕೋಸ್ಕರ ತ್ರಿಕರಣಪೂರ್ವಕವಾಗಿ ಯತ್ನಿಸುತ್ತಿರುವ, ಹಾಗು ಸ್ವರಾಜ್ಯ ಸ್ಥಾಪನೆಯ ವ್ರತವನ್ನು ಸ್ವೀಕರಿಸಿರುವ ಮಹಾರಾಜರನ್ನು ಸೆರೆ ಹಿಡಕೊಂಡು, ಇಲ್ಲವೆ ಅವರ ರುಂಡವನ್ನು ತುಂಡರಿಸಿಕೊಂಡು ಹೋಗುವೆನೆಂದು ಪ್ರತಿಜ್ಞೆ ಮಾಡಿರುವ ಖಾನನ ಸೇವೆಯನ್ನು ಮಾಡುವುದು ತನಗೆ ಪರಮಲಾಂಛನವೆಂಬ ಮಾತು ಆ ವಕೀಲನ ಮನಸ್ಸಿನಲ್ಲಿ ಮೇಲೆ ಮೇಲೆ ಬರತೊಡಗಿತು. ಈಗ ಖಾನನ

ಚಾಕರಿಯನ್ನು ಬಿಡುವದು ಅಶಕ್ಯವಾಗಿರುವದರಿಂದ, ಆತನ ಚಾಕರಿಯಲ್ಲಿರುವಾಗಲೇ ನ್ಯಾಯವಾಗಿ ಮಹಾರಾಜರ ಹಿತವನ್ನು ಆದಷ್ಟು ಮಟ್ಟಿಗೆ ಸಾಧಿಸಬೇಕೆಂದು ಆತನು ಮನಸ್ಸಿನಲ್ಲಿ ಆಲೋಚಿಸಿದ್ದನು. ಆ ಆಲೋಚನೆಯಿಂದ ಆತನ ಮನಸ್ಸಿನ ಸ್ಥಿತಿಯು ಬದಲಾಯಿತು. ಆತನು ಖಾನನ ಮನೋದಯವನ್ನು ತಿಳಿದುಕೊಳ್ಳಲು ಅತ್ಯಂತ ಜಾಗರೂಕನಾಗಿರತೊಡಗಿದನು. ಸ್ವಾಮಿದ್ರೋಹವು ಅತ್ಯಂತ ಪಾಪವೆಂದು ತಿಳಿದು, ಖಾನನ ದ್ರೋಹವನ್ನು ಚಿಂತಿಸದೆ, ಖಾನನು ಅನ್ಯಾಯದ ಮಾರ್ಗವನ್ನು ಕೈಕೊಂಡರೆ ಮಾತ್ರ ಅದನ್ನಷ್ಟು ಮಹಾರಾಜರಿಗೆ ತಿಳಿಸಬೇಕೆಂದು ಆತನು ಮಾಡಿದ್ದನು. ಗೋಪೀನಾಥಪಂತನ ಯೋಗ್ಯತೆಯನ್ನು ಮಹಾರಾಜರೂ ಅರಿತಿದ್ದರಿಂದ ಆ ವಕೀಲನ ಮೇಲೆ ಅವರ ವಿಶ್ವಾಸವು ವಿಶೇಷವಾಗಿತ್ತು, ಅವರು ಆ ಬ್ರಾಹ್ಮಣನ ವಿಷಯವಾಗಿ ಎಂದೂ ವಿಕಲ್ಪ ಭಾವವನ್ನು ತಾಳಲಿಲ್ಲೆಂದು ಹೇಳಬಹುದು. ಈ ಮಾತು ಸಂತಾಜಿ ಗೋಪೀನಾಥನಿಗೆ ಗೊತ್ತಿದ್ದದ್ದರಿಂದ, ಮಹಾರಾಜರು ಖಾನನಿಂದ ಮೋಸಹೋಗದಂತೆ ಮಾಡಲು ಆತನು ಬಹು ಜಾಗರೂಕತೆಯಿಂದ ಯತ್ನಿಸುತ್ತಿದ್ದನು. ಮಹಾರಾಜರ ವಿರುದ್ಧವಾಗಿ ಬೇರೆ ಬೇರೆ ಜನರೊಡನೆ ನಡೆಯುವ ಖಾನನ ಗುಪ್ತಾಲೋಚನೆಗಳನ್ನು ಆತನು ಬಹು ಚಾತುರ್ಯದಿಂದ ಗೊತ್ತು ಹಚ್ಚಿ, ಅವುಗಳ ನಿಜವಾದ ಮಥಿತಾರ್ಥವನ್ನು ಮಹಾರಾಜರಿಗೆ ತಿಳಿಸುತ್ತಿದ್ದನು.

ಗೋಪೀನಾಥ ಪಂತನು ಹೋದ ಬಳಿಕ ಮಹಾರಾಜರು ತಮ್ಮ ಮುತ್ಸದ್ದಿಗಳೊಡನೆ ಆಲೋಚಿಸತೊಡಗಿದರು; ಅವರು ಒಳ್ಳೇ ದೂರದರ್ಶಿಗಳೂ, ದೊಡ್ಡ ಮುತ್ಸದ್ದಿಗಳೂ, ಪರಮ ಸಾಹಸಿಗಳೂ ಆಗಿದ್ದರು. ಅವರು ಬಹು ವಿಚಾರಪೂರ್ವಕವಾಗಿ ಒಮ್ಮೆ ಒಂದು ಮಾತಿನ ನಿಶ್ಚಯ ಮಾಡಿದನಂತರ ಅದನ್ನು ಸಹಸಾ ಬದಲಿಸುತ್ತಿದ್ದಿಲ್ಲ. ಅವರು ತಮ್ಮ ಪರಿವಾರವನ್ನು ಕುರಿತು—''ನಾನು ಖಾನನ ಮಾತಿನ ಮೇಲೆ ವಿಶ್ವಾಸವಿಟ್ಟು, ಅವನೊಡನೆ ವಿಜಾಪುರಕ್ಕೆ ಹೋಗುವ ಗೊಂದಲದಲ್ಲಿಯಂತು ಬೀಳಲೇಬಾರದು. ಇಲ್ಲಿಯೇ ಏನಾದರೂ ಖಾನನಿಗೆ ಹೇಳಿ ಆತನನ್ನು ವಿಜಾಪುರಕ್ಕೆ ಬಂದ ಹಾದಿಯಿಂದ ತಿರುಗಿ ಕಳಿಸಬೇಕು. ಅದು ಸಾಧಿಸದಿದ್ದರೆ ಅವನೊಡನೆ ಯುದ್ಧಕ್ಕೆ ನಿಲ್ಲಬೇಕು. ನಾನು ಖಾನನನ್ನು ಪ್ರತ್ಯಕ್ಷ ಕಂಡು ಅವನ ಯೋಗ್ಯತೆಯನ್ನು ಅರಿತುಕೊಂಡಿದ್ದೇನೆ. ಇದಲ್ಲದೆ ಆ ಗರ್ವಿಷ್ಠ ಖಾನನ ಸೈನ್ಯದ ಯೋಗ್ಯತೆಯಾದರೂ ಸಾಧಾರಣ ವಾಗಿ ಗುಪ್ತಚಾರರ ಮುಖಾಂತರವಾಗಿ ನನಗೆ ಗೊತ್ತಾಗಿದೆ; ಆದ್ದರಿಂದ ಮೇಲಿನ ಎರಡು ಮಾತುಗಳಲ್ಲಿ ಸಾಧಿಸಿದ ಒಂದು ಮಾತಿನಂತೆ ಮಾಡುವುದು ನಿಶ್ಚಯವು. ಇನ್ನು ಮೇಲೆ ಅದರಲ್ಲಿ ಅಂತರವಾಗಲಿಕ್ಕಿಲ್ಲ. ಮಾಡತಕ್ಕದ್ದನ್ನು ಬಹು ಗುಪ್ತರೀತಿಯಿಂದ ಮಾಡಬೇಕು. ಗದ್ದಲವು ಕೆಲಸದ್ದಲ್ಲ. ಮೋಸಕ್ಕೆ ಮೋಸವು, ಸುಳ್ಳಿಗೆ ಸುಳ್ಳು, ಸರಳತನಕ್ಕೆ ಸರಳತನ; ಎಂಬ ಮಾರ್ಗವನ್ನು ಹಿಡಿದು ನಡೆಯತಕ್ಕದ್ದು. ಹೀಗೆ ನಡೆಯದಿದ್ದರೆ ಈವರೆಗೆ ಪಟ್ಟ ಶ್ರಮವೆಲ್ಲ ವ್ಯರ್ಥವಾಗಿ, ಪಶ್ಚಾತ್ತಾಪ ಪಡಬೇಕಾದೀತು. ನಾವು ಕಟ್ಟಿರುವ ಸ್ವರಾಜ್ಯ ರೂಪ ಮಂದಿರವನ್ನು ಇನ್ನು ಒಂದು ಅಂತಸ್ತಾದರೂ ಏರಿಸಬೇಕಲ್ಲದೆ, ಅದನ್ನು ನೆಲಸಮವಾಗಿ, ಇಲ್ಲವೆ ಕಟ್ಟಿದ ಒಂದು ಅಂತಸ್ತು ಕುಕ್ಕರಿಸುವಂತೆ ಮಾಡುವುದು ಸರಿಯಲ್ಲ. ಈ ಮಾತನ್ನು ಲಕ್ಷದಲ್ಲಿಟ್ಟೇ ಎಲ್ಲ

ವ್ಯವಸ್ಥೆಯನ್ನು ಮಾಡತಕ್ಕದ್ದು. ಖಾನನು ದುರಾಲೋಚನೆಯಿಂದ ನಡೆದು ನಮ್ಮನ್ನು ಘಾತಿಸುವ ಆಲೋಚನೆ ಯನ್ನು ಮಾಡುತ್ತಿರುವಾಗ, ಸರಳತನದಿಂದ ನಡೆದರೆ ನಾವು ಬದುಕಿ ಉಳಿಯುವದಾದರೂ ಹ್ಯಾಗೆ? ನಮ್ಮ ಈಗಿನ ಅತಂತ್ರ ಸ್ಥಿತಿಯಲ್ಲಿ ಬೈಲಿಗೆ ನಿಂತು ಖಾನನೊಡನೆ ಕಾದುವದು ನೆಟ್ಟಗಲ್ಲವೆಂಬದೇನೋ ನಿಜ; ಆದರೆ ಪ್ರಸಂಗ ಬಂದ ಬಳಿಕ ಸಾಹಸವನ್ನು ಮಾಡಲೇಬೇಕು. ಖಾನನ ಮನಸ್ಸಿನಲ್ಲಿ ವಿಶ್ವಾಸಘಾತ ಮಾಡುವದಿರುತ್ತದೆಂಬದರ ನಂಬಿಗೆಯಾದ ಹೊರತು ನಾವು ವಿಶ್ವಾಸಘಾತ ಮಾಡಬಾರದು. ಒಮ್ಮೆ ವಿಶ್ವಾಸಘಾತದಿಂದ ಕಾರ್ಯವು ಸಾಧಿಸಬಹುದು; ಆದರೆ ಮುಂದೆ ಅದರಿಂದ ಕಾರ್ಯ ಹಾನಿಯಾಗದೆ ಇರದು. ಅದರಂತೆ, ವಿಶ್ವಾಸಘಾತ ಮಾಡುವವನೊಡನೆ ಸರಳತನದಿಂದ ನಡೆಯುವದರ ಪರಿಣಾಮವೂ ಕೆಡಕೇ ಆಗುವದು. ಒಬ್ಬನು ಖಡ್ಗವೆತ್ತಿ ಹೊಡೆಯುವಾಗ ನಾವು ಅವನನ್ನು ಗುದ್ದಿ ನೆಲಕ್ಕೆ ಕೆಡವುತ್ತೇವೆಂದು ಏರಿಹೋದರೆ ಏನು ಪರಿಣಾಮವಾಗಬಹುದು? ವಿಶ್ವಾಸಘಾತವೆಂಬುದೊಂದು ಶಸ್ತ್ರವಿರುತ್ತದೆ; ಅನ್ಯಶಸ್ತ್ರಗಳಿಂದ ಪ್ರಯೋಜನವಾಗದೆ ಇದ್ದಾಗ ಬಹುಜನರ ಕಲ್ಯಾಣೇಚ್ಛೆಯಿಂದ ನಿರ್ವಾಹವಿಲ್ಲದೆ ಆ ಶಸ್ತ್ರವನ್ನು ಉಪಯೋಗಿಸಿದರೆ ಉಪಯೋಗಿಸಬಹುದು; ಆದರೆ ಸ್ವಾರ್ಥವು ಮಾತ್ರ ಅದರಲ್ಲಿ ಸರ್ವಥಾ ಇರಕೂಡದು; ಅದರಂತೆ, ಸೇರಿಗೆ ಸವ್ವಾಸೇರಾಗಿ ತೋರಿಸುವ ಪ್ರಸಂಗದಲ್ಲಿಯೂ ಈ ಶಸ್ತ್ರವನ್ನು ಉಪಯೋಗಿಸಬಹುದು.

## ಖಾನನ ಮನೋದಯವು

ಪಂತಾಜಿ ಗೋಪೀನಾಥನು ಪ್ರತಾಪಗಡದಿಂದ ಬಂದಬಳಿಕ ಪದ್ಧತಿಯಂತೆ ಖಾನನನ್ನು ಕಾಣಲಿಕ್ಕೆ ಹೋದನು. ಖಾನನ ಬಳಿಗೆ ಬೇಕಾದಾಗ ಹೋಗಲಿಕ್ಕೆ ಆತನಿಗೆ ಪ್ರತಿಬಂಧ ವಿದ್ದಿಲ್ಲ. ಏನಾದರೂ ಮಹತ್ವದ ಸಂಗತಿಯಿದ್ದ ಹೊರತು ತನ್ನ ವಕೀಲನು ನಿರರ್ಥಕ ಬರುವವನಲ್ಲವೆಂದು ತಿಳಿದು ಖಾನನು ಆತನ ಭೆಟ್ಟಿಯನ್ನು ಉತ್ಸುಕತೆಯಿಂದ ತಕ್ಕೊಳ್ಳುತ್ತಿದ್ದನು. ಈಗಂತೂ ಪಂತನು ಪ್ರತಾಪಗಡದಿಂದ ಬಂದಿದ್ದನೆಂದಬಳಿಕ ಖಾನನು ಆತನನ್ನು ಉತ್ಸುಕತೆಯಿಂದ ಬರಮಾಡಿಕೊಂಡಿದ್ದರಲ್ಲಿ ಆಶ್ಚರ್ಯವೇನು? ಶಿಷ್ಟಾಚಾರದಂತೆ ಮುಜರೆ ಮುರವತ್ತುಗಳು ಆದಬಳಿಕ ಖಾನನು ಪಂತನನ್ನು ಕುರಿತು—

ಖಾನ–ಯಾಕೆ ಪಂತ, ಶಿವಾಜಿಯು ನಮಗೆ ಅನುಕೂಲವಾದನೋ ಇಲ್ಲವೋ? ನಮ್ಮ ಮಾತನ್ನು ಆತನು ಸಹಜವಾಗಿ ಒಪ್ಪಿಕೊಂಡಿರಬಹುದು. ಒಪ್ಪಿಕೊಳ್ಳದೆಯೇನು ಮಾಡುವನು? ಆತನು ನಮ್ಮನ್ನು ನೋಡಿ ನಿಜವಾಗಿ ಅಂಜಿಹೋಗಿರುತ್ತಾನೆ. ಹಾಗಿಲ್ಲದಿದ್ದರೆ ಆತನು ಇಷ್ಟು ಪ್ರಶಸ್ತವಾದ ಮಾರ್ಗವನ್ನು ನಮ್ಮ ಸಲುವಾಗಿಯೇ ಮಾಡಿಸಬಹುದಾಗಿತ್ತೇ? ನಮ್ಮ ಸರಬರಾಯಿಯ ವ್ಯವಸ್ಥೆಯನ್ನು ಇಷ್ಟು ಉತ್ತಮ ರೀತಿಯಿಂದ ಇಡಿಸಬಹುದಾಗಿತ್ತೇ? ನಮ್ಮ ಮನಸ್ಸನ್ನು ಒಲಿಸಿಕೊಳ್ಳುವದಕ್ಕಾಗಿ ಆತನು ಇಷ್ಟು ಉತ್ತಮ ವ್ಯವಸ್ಥೆಯನ್ನು ಮಾಡಿದ್ದಾನೆ.

ಪಂತ–ಖಾವಿಂದ, ಶಿವಾಜಿಯನ್ನು ಜನರು ಉತ್ತಮ ಮುತ್ಸದ್ದಿಯೆಂದು ಹೇಳುವದೇನು ಸುಳ್ಳಲ್ಲ. ತಮ್ಮ ಮುಂದೆ ತನ್ನ ಆಟವೇನು ನಡೆಯದೆಂದು ಆತನಿಗೆ ತೋರಿದ್ದರಿಂದ ಆತನು ಹಿಂದಕ್ಕೆ ಸರಿದನು. ಮತ್ತೊಬ್ಬನಾವನಾದರೂ ತಿಳಿಗೇಡಿಯಾಗಿದ್ದರೆ, ತಮ್ಮ ಸೈನ್ಯಕ್ಕೆ ಎದುರಾಗಿ ತನ್ನ ಸರ್ವಸ್ವದ ನಾಶಮಾಡಿಕೊಳ್ಳುತ್ತಿದ್ದನು. ಶಿವಾಜಿಯು ಅಂಥ ಮೂರ್ಖನಿರುವದಿಲ್ಲ. ನನ್ನನ್ನು ಆತನು ಆದರಿಸಿದನು; ವಿಶೇಷವಾಗಿ ಉಪಚರಿಸಿದನು. ತಮ್ಮ ಮಾತನ್ನು ಆತನು ಮೀರುವಹಾಗಿಲ್ಲ. ತಾವು ಹೇಳಿದ ಹಾಗೆ ಕೇಳಲಿಕ್ಕೆ ಆತನು ಒಡಂಬಡುತ್ತಾನೆ; ಆದರೆ ವಿಜಾಪುರಕ್ಕೆ ತಮ್ಮ ಸಂಗಡ ಬರಲಿಕ್ಕೆ ಮಾತ್ರ ಆತನು ಒಪ್ಪಿಕೊಳ್ಳುವದಿಲ್ಲ; ಇದೊಂದು ಮಾತನ್ನು ಬಿಟ್ಟು, ತಾವು ಬೇಕಾದದ್ದು ಹೇಳಿದರೂ ಆತನು ಕೇಳುವನು.

ಖಾನ (ಗಟ್ಟಿಯಾಗಿ ನಕ್ಕು) – ಪಂತ, ನೀವು ಒಳ್ಳೆಯ ಮುತ್ಸದ್ದಿಗಳು, ಬಹು ದೂರದರ್ಶಿಗಳು. ನಿಮ್ಮಂಥವರು ಹೀಗೆಂದರೆ ನಾನೇನು ಹೇಳಲಿ? ಆತನು ನಮಗೆ ಅಂಜಿ ಶರಣು ಬಂದಿರಲು ''ನಾನು ಹೀಗೆ ಮಾಡುವುದಿಲ್ಲ–ಹಾಗೆ ಮಾಡುವುದಿಲ್ಲ, ಅಲ್ಲಿಗೆ ಬರುವುದಿಲ್ಲ–ಇಲ್ಲಿಗೆ ಬರುವುದಿಲ್ಲ'' ಎಂದರೆ ಯಾರು ಕೇಳಬೇಕು? ಇನ್ನು ಈ ಮಾತಿನ ವಿಷಯವಾಗಿ ಅರೆದಾಡುವ ಇಚ್ಛೆಯ ನನಗಿಲ್ಲ. ಈಗ ಶಿವಾಜಿಯು ಹೇಳುವ ಕರಾರುಗಳಿಗೆ ನಾವು ಒಪ್ಪಿಕೊಂಡು ನಮ್ಮ ಅರೆದಾಡುವ ಇಚ್ಛೆಯು ನನಗಿಲ್ಲ. ಈಗ ಸೈನ್ಯ ಸಹಿತವಾಗಿ ನಾವು ಆತನ ಬಳಿಗಂತೂ ಹೋಗೋಣ; ಅಲ್ಲಿ ನಮ್ಮಿಬ್ಬರ ಭೆಟ್ಟಿಯಂತು ಆಗಲಿ. ಆಗ ನಾನು ಶಿವಾಜಿಯ ಗೋಣು ಮುರಿದೆನೆಂದು ನೀವು ತಿಳಿಯಿರಿ. ಶಿವಾಜಿಯು ಒಮ್ಮೆ ನಮ್ಮ ಕೈಯಲ್ಲಿ ಪೂರ್ಣವಾಗಿ ಸಿಕ್ಕನೆಂದರೆ, ಬೇಕಾದರೆ ಅವನ ಗೋಣು ಮುರಿದು ಚಲ್ಲೋಣ, ಬೇಡಾದರೆ ಆತನನ್ನು ವಿಜಾಪುರಕ್ಕೆ ಸೆರೆ ಹಿಡಕೊಂಡು ಹೋಗೋಣ. ಅದು ನಮ್ಮ ಕೈಯೊಳಗಿನ ಮಾತು. ಪಂತ ನಮ್ಮ ಪ್ರತಿಜ್ಞೆಯ ಭಂಗವಾಗಬಾರದಲ್ಲವೆ?

ಪಂತ–ತಮ್ಮ ಪ್ರತಿಜ್ಞೆಯು ಭಂಗವಾಗಬೇಕೆಂದು ನಾನಾದರೂ ಎಲ್ಲಿ ಹೇಳುವೆನು? ಆದರೆ ಇಷ್ಟು ದಿನ ನಮ್ಮ ಶತ್ರುವೆಂದು ಸಿಕ್ಕಹಾಗೆ ಪುಂಡಾಟಿಕೆ ಮಾಡುತ್ತಿದ್ದ ಶಿವಾಜಿಯು, ಈಗ ನಮ್ಮ ನೌಕರನೆಂದು ಶರಣು ಬಂದು ಹೇಳಿಕೊಳ್ಳುತ್ತಿರುವದರಿಂದ, ತಮ್ಮ ಪ್ರತಿಜ್ಞೆಯು ಭಂಗವಾದಲ್ಲಿ ವ್ಯತ್ಯಾಸವೇನು ನನಗೆ ತೋರುವದಿಲ್ಲ. ಸ್ವತಂತ್ರನಾಗಿದ್ದ ಶಿವಾಜಿಯು ನೌಕರನಾದ ಬಳಿಕ ಒಂದು ಬಗೆಯಿಂದ ಅವನನ್ನು ತಾವು ನಾಶಗೊಳಿಸಿದ ಹಾಗಾಗಲಿಲ್ಲವೆ? ಪ್ರತ್ಯಕ್ಷ ಆತನನ್ನು ವಿಜಾಪುರಕ್ಕೆ ಹಿಡಿದುಕೊಂಡು ಹೋಗುವದರಿಂದಲೇ ಮಹತ್ವವೇನು? ''ಪ್ರತಿಜ್ಞೆ ಪ್ರತಿಜ್ಞೆ'' ಎಂದು, ಹರಿಯುವತನಕ ಜಗ್ಗುವಾಗ ಮುಂದೆ ಏನಾದರೂ ವಿಪರೀತ ಪ್ರಸಂಗ ಒದಗಿದರೆ ಹ್ಯಾಗೆ?

ಖಾನ–ನಿಮ್ಮ ಮಾತು ಕೇಳಿ ನನಗೆ ನಗೆ ಬರುತ್ತದೆ. ಶಿವಾಜಿಯ ಕಳ್ಳತನದ, ಹಾಗು ಸುಳ್ಳತನದ ಸುದ್ದಿಗಳನ್ನು ನೀವು ಎಷ್ಟು ಕೇಳಿರುವುದಿಲ್ಲ ? ಇಂದು ನಮ್ಮ ನೌಕರನೆಂದು ಹೇಳುವ ಆತನು, ನಾಳೆ ನಾವು ವಿಜಾಪುರಕ್ಕೆ ಹೋದಕೂಡಲೆ ಯಥಾಸ್ಥಿತವಾಗಿ ತನ್ನ ಪುಂಡಾಟಿಕೆಯ ಕಾಯಕವನ್ನು ನಡಿಸಿಯೇ ನಡೆಸುವನು. ಅಂದಬಳಿಕ ಅವನು ಶರಣು

ಬರುವದರಲ್ಲಿ ತಾತ್ಪರ್ಯವೇನು? ಈ ಪ್ರಸಂಗದಲ್ಲಿ ನಾನು ಎರಡರಲ್ಲಿ ಒಂದು ಮಾಡಬೇಕು. ಅಂದರೆ, ಶಿವಾಜಿಯನ್ನು ಹೊಡೆದಾದರೂ ಕೆಡವಬೇಕು, ಇಲ್ಲವೆ ಅವನನ್ನು ವಿಜಾಪುರಕ್ಕೆ ಸೆರೆ ಹಿಡಿದಾದರೂ ಒಯ್ಯಬೇಕು. ಪ್ರಸಂಗ ಒದಗಿದಲ್ಲಿ ನಾನು ಅವನನ್ನು ಕೊಂದೇಬಿಡುವೆನು. ಅವನು ಬಹಳ ಹೇಳಿಕೊಂಡು ಕಾಲುಬಿದ್ದರೆ ಸೆರೆ ಹಿಡಿದೊಯ್ಯಬಹುದು. ಇದು ನಿಶ್ಚಯವು!

ಪಂತ–ಅಂದಬಳಿಕ ನೀವು ಹೀಗೆ ಆತನಿಗೆ ಸ್ಪಷ್ಟವಾಗಿ ಹೇಳಿ ಕಳಿಸಿಬಿಡುವುದು ನೆಟ್ಟಗಲ್ಲವೆ? ಇದರಿಂದ ವ್ಯರ್ಥ ಕಾಲಹರಣವಾಗುವದಾದರೂ ತಪ್ಪೀತು. ನೀವು ಅವನಿಗೆ— ''ಅಪ್ಪಾ, ನೀನು ವಿಜಾಪುರಕ್ಕೆ ಬರಲೇಬೇಕು; ಅದು ತಪ್ಪುವುದಿಲ್ಲ. ಒಳ್ಳೆಯ ಮಾತಿನಿಂದ ಬಂದರೆ ನೆಟ್ಟಗಾಯಿತು; ಇಲ್ಲದಿದ್ದರೆ ನಿನ್ನನ್ನು ನಾವು ಒತ್ತಾಯದಿಂದ ಕರಕೊಂಡು ಹೋಗುವೆವು'' ಎಂದು ಹೇಳಿ ಕಳಿಸಿಬಿಡಿರಿ.

ಖಾನ–ಇಲ್ಲ ಇಲ್ಲ; ನಾನು ಹಾಗೆ ಹೇಳಿಕಳಿಸುವದಿಲ್ಲ. ಅವನಿದ್ದಲ್ಲಿಗೆ ಹೋಗಿ ಅವನನ್ನು ಚಂಡು ಹಿಡಿದು ಬಗ್ಗಿಸಿದರೇ ನಾನು ನಿಜವಾದ ಅಫಜುಲಖಾನನು! ಅವನು ಬೇಕಾದ ಕುಯುಕ್ತಿಗಳನ್ನು ಯೋಚಿಸಲಿ, ಬೇಕಾದ ಹಾಗೆ ಹಾರಾಡಲಿ! ಅವನು ಶೀರ ಗಿಡ್ಡನಿರುವನೆಂದು ಕೇಳಿದ್ದೇನೆ. ಅವನು ನಮ್ಮ ಟೊಂಕಕ್ಕೆ ಸಹ ಬರಲಿಕ್ಕಿಲ್ಲ; ಅವನನ್ನು ಬಾಗಿಸುವದು ಎಷ್ಟು ಹೊತ್ತು? ಸುಮ್ಮನೆ ನಮ್ಮ ಕೈಯನ್ನು ಅವನ ತಲೆಯ ಮೇಲೆ ಇಟ್ಟರೆ ಸಾಕು, ಅವನು ನೆಲಕ್ಕೆ ಕುಸಿಬೀಳುವನು.

ಈ ಮೇರೆಗೆ ನುಡಿದು ಖಾನನು ಗಹಗಹಿಸಿ ನಗುತ್ತ ತನ್ನ ಕೈಯನ್ನು ಗೋಪೀನಾಥ ಪಂತನ ಹೆಗಲ ಮೇಲೆ ಇಟ್ಟು, ಅದರ ಭಾರವು ಪಂತನ ಅನುಭವಕ್ಕೆ ಬರುವದಕ್ಕಾಗಿ ತನ್ನ ಕಸುವು ಹಾಕಿ ಒತ್ತಿದನು. ಅದಕ್ಕೆ ಗೋಪೀನಾಥ ಪಂತನು ಏನೂ ಮಾತಾಡಲಿಲ್ಲ. ಅವನ ಹುಬ್ಬಗಳು ಮಾತ್ರ, ಗಂಟಿಕ್ಕಿದವು. ಆತನು ಮನಸ್ಸಿನಲ್ಲಿ—''ಇವನು ಎಷ್ಟು ಉನ್ಮತ್ತನಾಗಿರುವನು! ಸೌಜನ್ಯದ ಗಂಧವು ಕೂಡ ಇವನಲ್ಲಿ ಇಲ್ಲವಲ್ಲ! ಇವನ ಉನ್ಮತ್ತತನಕ್ಕೆ ತಕ್ಕ ಪೆಟ್ಟು ಬಿದ್ದಾಗ ಇವನ ಗತಿಯೇನಾದೀತು! ಇವನು ಮಹಾರಾಜರನ್ನು ಸೆರೆ ಹಿಡಿದೊಯ್ಯುವದರ ಬದಲು, ಮಹಾರಾಜರೇ ಇವನನ್ನು ಸೆರೆ ಹಿಡಿದೊಯ್ದರೆ ಇವನ ಸೊಂಡೆಯೊಣಗೀತಲ್ಲ! ಇಂಥ ಉನ್ಮತ್ತರು ಹಿತದ ಮಾತುಗಳನ್ನು ಕೇಳುವರೆ? ಇಂಥವರ ದುಷ್ಟ ಮಾರ್ಗಗಳೇ ಇವರನ್ನು ನಾಶಗೊಳಿಸುವಾಗ, ಯಾವ ಹಿತಕರ್ತರು ಏನು ಮಾಡುವರು? ಮಹಾರಾಜರು ಒಳ್ಳೇ ಕರ್ತೃತ್ವಶಾಲಿಗಳಿರುವರೆಂಬುದರ ಗಂಧವು ಕೂಡ ಇವನಿಗೆ ಹತ್ತಿರುವದಿಲ್ಲ. ಇಂಥ ಪ್ರಸಂಗದಲ್ಲಿ ಇವನನ್ನು ಎಚ್ಚರಗೊಳಿಸುವದು ಅವಶ್ಯವಿದ್ದರೂ, ಇವನು ನನ್ನ ಮಾತು ಕೇಳಿದರಷ್ಟೇ ಎಚ್ಚರಗೊಳಿಸುವದು. ಇವನು ತನ್ನ ಗರ್ವದ ಹಾಗು ಡೌಲಿನ ಫಲವನ್ನು ಭೋಗಿಸಲೊಲ್ಲನೇಕೆ? ಮಹಾರಾಜರು ಇವನನ್ನು ತಮ್ಮ ಬಲೆಯಲ್ಲಿ ಹಿಡಿದು, ಇವನ ಸೈನ್ಯವನ್ನು ನಾಶಗೊಳಿಸಿದಾಗ ಇವನ ಕಣ್ಣುಗಳು ತಾವೇ ತೆರೆಯುವವು'' ಎಂದು ಅಂದುಕೊಂಡು ಖಾನನನ್ನು ಕುರಿತು—

ಪಂತ—ಖಾವಿಂದ, ಶಿವಾಜಿಯು ತಮಗಿಂತ ಶಕ್ತಿಯಲ್ಲಿ ಕಡಿಮೆಯಾಗಿದ್ದರೂ, ಯುಕ್ತಿಯಲ್ಲಿ ಆವನ ಪ್ರಸಿದ್ಧಿಯು ವಿಶೇಷವಾಗಿರುತ್ತದೆ; ಆದ್ದರಿಂದ ಆವನೊಡನೆ ಎಚ್ಚರದಿಂದ ವ್ಯವಹರಿಸಬೇಕಾಗುವದು.

ಖಾನ–ಶಿವಾಜಿಯ ಬುದ್ಧಿವಂತಿಕೆಯು ನನಗೆ ಗೊತ್ತಾಗಿದೆ ಬಿಡಿರಿ. ಅವನ ಕಡೆಯಿಂದ ಗುಪ್ತಸಂಗತಿಗಳನ್ನು ಅರಿತುಕೊಳ್ಳುವದಕ್ಕಾಗಿ ನಮ್ಮ ಬಳಿಯಿಂದ ಹೋದವರಿಬ್ಬರನ್ನು ಆ ಮೂಢನು ಹಿಂದು ಮುಂದಿನ ವಿಚಾರವಿಲ್ಲದೆ ಚಾಕರಿಗೆ ಇಟ್ಟುಕೊಂಡನು.

ಪಂತ–ನೀವು ಹೀಗೆ ಶಿವಾಜಿಯನ್ನು ಮೂಢನೆಂದು ಎಣಿಸಿ ಮೋಸಹೋಗಬಾರದು. ನಾನು ಮೂರು–ನಾಲ್ಕು ಸಾರೆ ಆತನ ಬಳಿಗೆ ಹೋಗಿ ಬಂದಿದ್ದೇನೆ. ಒಮ್ಮೆಯಾದರೂ ಆತನ ಮೂಢತನವು ನನ್ನ ಅನುಭವಕ್ಕೆ ಬಂದಿರುವದಿಲ್ಲ. ನೀವು ನಮ್ಮ ಕಡೆಯವರೆಂದು ತಿಳಿದು ಇಬ್ಬರನ್ನು ಶಿವಾಜಿಯ ಕಡೆಗೆ ಕಳಿಸಿರಬಹುದು; ಆದರೆ ಶಿವಾಜಿಯು ಅವರನ್ನು ತನ್ನ ಕಡೆಗೆ ಮಾಡಿಕೊಂಡಿರಲಿಕ್ಕಿಲ್ಲವೆಂದು ಯಾರು ಹೇಳಬೇಕು? ಶಿವಾಜಿಯು ಬಲು ಸವಿಮಾತಿನವನು. ಅವನ ಮಾತಿಗೆ ಮರುಳಾಗದವರು ಅಪರೂಪವೆಂತಲೇ ಹೇಳಬಹುದು. ಅಂದಬಳಿಕ ನಿಮ್ಮ ಮಂತ್ರವೇ ನಿಮಗೆ ತಿರುಗಿದಂತಾಗಿ, ನಿಮ್ಮ ಗುಪ್ತಚಾರರು ಶಿವಾಜಿಯ ಗುಪ್ತಚಾರರಾಗಿರಬಹುದು. ಹೋಗುವಾಗ ನಿಮ್ಮ ಗುಪ್ತಚಾರರಿದ್ದು ಬರುವಾಗ ಶಿವಾಜಿಯ ಗುಪ್ತಚಾರರಾಗಿ ಬಂದರೆ ಮಾಡುವದೇನು? ಈವರೆಗೆ ಬಹುಜನರಿಗೆ ಮಂಕುಬೂದಿಯನ್ನು ಹಚ್ಚಿದ್ದ ಶಿವಾಜಿಯನ್ನು ನೀವು ಮೂಢನೆಂದು ತಿಳಿಯುವಿರಾ?

ಖಾನ–ಯಾಕೆ ಪಂತರೇ, ಶಿವಾಜಿಯ ಸ್ತುತಿಯನ್ನು ಬಹಳ ಮಾಡಹತ್ತಿದ್ದೀರಿ? ನಿಮ್ಮ ಮೇಲೆಯೂ ಮಂತ್ರಪ್ರಯೋಗವಾದಂತೆ ತೋರುತ್ತದೆ. ಇಲ್ಲದಿದ್ದರೆ, ಶಿವಾಜಿಯನ್ನು ಇಷ್ಟು ವರ್ಣಿಸಲಾರಿರಿ.

ಪಂತ–ಮಂತ್ರಪ್ರಯೋಗ ಮಾಡುವದು ಆತನ ಕೈಯೊಳಗಿನದಾದ್ದರಿಂದ, ಆತನು ನಮ್ಮ ಮೇಲೆ ಮಂತ್ರವನ್ನು ಪ್ರಯೋಗಿಸಬಹುದು. ಆದರೆ ಆ ಮಂತ್ರಕ್ಕೆ ನಮ್ಮನ್ನು ಒಳಪಡಿಸಿ ಕೊಳ್ಳುವದು ಆತನ ಕೈಯೊಳಗಿರುವದಿಲ್ಲ; ಮಂತ್ರಕ್ಕೆ ಒಳಗಾಗುವದು ಬಿಡುವದು ನಮ್ಮ ಕೈಯೊಳಗಿರುತ್ತದೆ; ಅಂದಬಳಿಕ ಆತನು ನಮ್ಮ ಮೇಲೆ ಮಂತ್ರವನ್ನು ಪ್ರಯೋಗಿಸಿದ್ದರೂ ಅದರಿಂದಾಗುವ ಪ್ರಯೋಜನವೇನು? ಎಳಿಯ ಗಿಡವು ಮಣಿಸಿದ ಹಾಗೆ ಮಣಿಯಬಹುದು; ಆದರೆ ಬಲಿತ ಬಹುದಿವಸದ ಗಿಡವನ್ನು ಮಣಿಸಹೋದರೆ ಮಣಿಯಬಹುದೆ? ಮಣಿಸುವವನು ಹೆಚ್ಚು ಮಣಿಸಹೋದರೆ ಗಿಡವು ಚೂರುಚೂರಾಗಬಹುದಲ್ಲದೆ ಮಣಿಯಲಾರದು. ಇದೇ ಮಾತು ನಮ್ಮಂಥ ಹಳೆಯ ಮಂದಿಗೂ ಹತ್ತುವದು. ನಾವು ಒಮ್ಮೆ ಒಂದು ದಿಕ್ಕು ಹಿಡಿದು, ಅಥವಾ ಒಂದು ನಿಟ್ಟು ಹಿಡಿದು ನಡೆಯಹತ್ತಿದೆವೆಂದರೆ ಕಡೆತನಕ ನಮ್ಮ ನಡತೆಯಲ್ಲಿ ಅಂತರ ವಾಗಲಿಕ್ಕಿಲ್ಲೆಂಬದನ್ನು ತಾವು ನೆನಪಿನಲ್ಲಿಡಬೇಕು. ನನ್ನ ಈ ಸ್ಥಿತಿಯನ್ನು ಶಿವಾಜಿಯು ಚನ್ನಾಗಿ ಬಲ್ಲವನಾದ್ದರಿಂದ, ನನ್ನ ವಿಷಯದ ಒಗ ಉಸಾಬರಿಗೆ ಆತನು ಬರಲಾರನು. ಬಂದರೆ ಅದರಿಂದ ಪ್ರಯೋಜನವೂ ಆಗದು.

ಖಾನ–ಪಂತ, ಆ ಶಿವಾಜಿಯ ತಂತ್ರಗಳು ನಮ್ಮ ಮೇಲೆ ನಡೆಯವು. ನಮ್ಮ ಪ್ರಚಂಡ ಸೈನ್ಯಕ್ಕೆ ಆತನು ಎಂದೂ ಈಡಾಗನು. ಆತನು ನಮ್ಮನ್ನು ಸೈನ್ಯ ಸಹಿತವಾಗಿ ತನ್ನ ಮನೆಯೊಳಗೆ ಕರೆದುಕೊಂಡು ಹೋಗಿ, ನಮ್ಮ ಕೈಯಲ್ಲಿ ಹ್ಯಾಗೆ ಸಿಗದೆಯಿರುವನೋ ನಾವಂತು ಅರಿಯೆವು. ಇನ್ನು ಈ ಅರೆದಾಟವು ಸಾಕು, ನೀವು ಈಗಾಗಲೇ ಇನ್ನೊಮ್ಮೆ ಶಿವಾಜಿಯ ಬಳಿಗೆ ಹೋಗಿ

ಆತನಿಗೆ ಸ್ಪಷ್ಟವಾಗಿ ಹೇಳಿರಿ. ನಾವು ಆತನ ಯಾವ ಕರಾರುಗಳನ್ನೂ ಪಾಲಿಸುವದಿಲ್ಲ, ಆತನು ಯಾವ ಕರಾರುಗಳನ್ನೂ ಮುಂದೆ ಮಾಡದೆ ನಮಗೆ ಶರಣು ಬರಬೇಕು; ಆ ಮೇಲೆ ನಮ್ಮ ಮನಸ್ಸಿಗೆ ಬಂದಂತೆ ನಾವು ಮಾಡುವೆವು. ಆತನು ತಾನಾಗಿ ಶರಣು ಬಾರದಿದ್ದರೆ ನಾವು ಶರಣು ಬರುವಂತೆ ಮಾಡುವೆವು. ಹು, ಹೋಗಿರಿ, ಇನ್ನು ಎರಡನೆಯ ಮಾತು ಆಡಬೇಡಿರಿ!

ಪಂತ–ನಾನು ತಮ್ಮ ಸೌಕರನು. ತಮ್ಮ ಅಪ್ಪಣೆಯನ್ನು ಮನ್ನಿಸಿ ಅದರಂತೆ ಮಾಡುವುದು ನನ್ನ ಧರ್ಮವು; ಆದರೆ ನಾನು ತಮ್ಮ ಸಾಮಾನ್ಯ ನೌಕರನಲ್ಲ ವಕೀಲನಿರುತ್ತೇನೆ. ನನಗೆ ಯೋಗ್ಯ ತೋರಿದ ಮಾರ್ಗವನ್ನು ತಮಗೆ ಸೂಚಿಸುವದು ನನ್ನ ಕರ್ತವ್ಯವಾಗಿರುತ್ತದೆ. ಅಂದಬಳಿಕ ನಾನು ಹೆಚ್ಚುಕಡಿಮೆ ಮಾತಾಡಿದರೂ ತಾವು ನನ್ನನ್ನು ಕ್ಷಮಿಸುವಿರೆಂಬ ನಂಬಿಕೆಯು ನನಗಿರುವದು. ಖಾವಿಂದ, ತಾವು ಹ್ಯಾಗಿದ್ದರೂ ಶಿವಾಜಿಯನ್ನು ಸ್ವಾಧೀನಪಡಿಸಿ ಕೊಳ್ಳದೆ ಬಿಡುವ ಹಾಗಿಲ್ಲವಷ್ಟೆ? ಅಂದಬಳಿಕ ಸುಮ್ಮನೆ ಅವನನ್ನು ಬೆದರಿಸಿ ಕಾರ್ಯಕ್ಕೆ ವಿಘ್ನವನ್ನು ಯಾಕೆ ಉಂಟುಮಾಡಿಕೊಳ್ಳುತ್ತೀರಿ? ಈಗ ಅವನು ಹೇಳಿದ ಹಾಗೆ ಕೇಳಿ, ಭೆಟ್ಟಿಯ ನೆವದಿಂದ ಅವನು ನಿಮ್ಮ ಅಳವಿನೊಳಗೆ ಬರುವಂತೆ ಮಾಡಿರಿ. ಆಮೇಲೆ ನಿಮ್ಮ ಮನಸ್ಸಿಗೆ ಬಂದಂತೆ ಕಾರ್ಯವನ್ನು ಸಾಧಿಸಿಕೊಂಡರಾಯಿತು. ಹೀಗೆ ಮಾಡದೆ ಅವನನ್ನು ನೀವು ಬೆದರಿಸಿಬಿಟ್ಟರೆ, ಆತನು ಹಾಹಾ ಅನ್ನವದರೊಳಗಾಗಿ ಇನ್ನೂರು ಹರದಾರಿಯ ಮೇಲೆ ಎಲ್ಲಿಗಾದರೂ ಹೋಗಿಬಿಡಬಹುದು. ನಾಲ್ಕು ದಿಕ್ಕಿಗೆ ನಾಲ್ಕು ಗುಂಪುಗಳು ಹೋಗಿಬಿಟ್ಟರೆ, ಶಿವಾಜಿಯು ಯಾವ ಗುಂಪಿನಲ್ಲಿರು ವನೆಂಬುದರ ಗೊತ್ತು ಸಹ ನಮಗೆ ಆಗಲಿಕ್ಕಿಲ್ಲ; ಆದ್ದರಿಂದ ನೀವು ಆತನು ಹೇಳಿದ ಹಾಗೆ ಕೇಳಬೇಕು. ಆತನು ಸ್ವಲ್ಪ ಸೈನ್ಯವನ್ನು ತಕ್ಕೊಂಡು ಬರಹೇಳಿದರೆ ಸ್ವಲ್ಪ ಸೈನ್ಯವನ್ನು ತಕ್ಕೊಂಡು ಹೋಗಬೇಕು. ಸೈನ್ಯದ ಸಂಬಂಧದಿಂದ ಮೊನ್ನೆ ಮಾತು ಹೊರಟಿತು. ''ನೀವು ಬಹಳ ಸೈನ್ಯವನ್ನು ತಕ್ಕೊಂಡು ಬಂದರೆ, ನೀವು ನಮಗೆ ಕೇಡು ಬಗೆಯುವ ಯೋಚನೆ ಮಾಡಿರಬಹುದೆಂದು ನಮಗೆ ಸಂಶಯ ಉತ್ಪನ್ನವಾಗುವದು; ಅಂದಬಳಿಕ ನಾವು ಖಾನಸಾಹೇಬರನ್ನು ಕಾಣಲಿಕ್ಕೆ ಹೋಗಿ ಸಂಕಟವನ್ನುಂಟುಮಾಡಿಕೊಳ್ಳುವ ದಾದರೂ ಯಾತಕ್ಕೆ? ಖಾನಸಾಹೇಬರು ತಮ್ಮ ಸೈನ್ಯವನ್ನು ತಕ್ಕೊಂಡು ಬಂದರೂ, ಅದನ್ನು ನಮ್ಮ ಭೆಟ್ಟಿಯ ಸ್ಥಳದಿಂದ ಐದು ಹರದಾರಿಯ ಅಂತರದಲ್ಲಿ ಇಟ್ಟು ಬರಬೇಕು. ಅವರು ತಮ್ಮ ಸಂಗಡ ಸ್ವಲ್ಪ ಜನರನ್ನು ಕರಕೊಂಡು ಬರತಕ್ಕದ್ದು.'' ಎಂದು ಶಿವಾಜಿಯು ಹೇಳಿರುವನು. ಅವನು ಏನೇ ಹೇಳಲಿ, ನಾವು ಯುಕ್ತಿಯಿಂದ ಅವನ ಮಾತು ನಡಿಸಿದಹಾಗೆ ತೋರಿಸಿ ಭೆಟ್ಟಿಯ ಯೋಗವನ್ನು ಮೊದಲು ತಂದುಕೊಳ್ಳತಕ್ಕದ್ದು. ಆತನು ಹೇಳಿದ್ದಕ್ಕೆಲ್ಲ ತಾವು ಈಗ ಒಡಂಬಡಬೇಕು. ಅವನ ತಂತ್ರಕ್ಕೆ ಸರಿಯಾಗಿ ನಾವೂ ತಂತ್ರವನ್ನು ಒಡ್ಡಬೇಕು.; ಆದರೆ ಅದರ ಸದ್ದು ಶಿವಾಜಿಗೆ ಹತ್ತಲಾಗದು. ನಾವು ತಂತ್ರಗಾರಿಕೆಗೆ ಮನಸ್ಸು ಮಾಡಿರುವೆವೆಂಬದು ಕೂಡ ಆತನಿಗೆ ತಿಳಿಯಕೂಡದು. ಖಾವಿಂದ ನನ್ನ ಮನಸ್ಸಿಗೆ ಸರಿಯಾಗಿ ತೋರಿದ್ದನ್ನು ನಾನು ಸೂಚಿಸಿದ್ದೇನೆ. ತಮ್ಮ ಮನಸ್ಸಿಗೆ ಸರಿದೋರಿದಂತೆ ಮಾಡಲು ಖಾವಿಂದರವರು ಸಮರ್ಥ

ರಿರುತ್ತೀರಿ. ನಾನು ಹೇಳಿದ್ದನ್ನು ತಾವು ಪೂರ್ಣವಾಗಿ ವಿಚಾರಿಸಬೇಕು. ವಿಚಾರಾಂತದಲ್ಲಿ ಸರಿದೋರಿದಂತೆ ಮಾಡಬೇಕು.

ಗೋಪೀನಾಥಪಂತನ ಮೇಲೆ ಖಾನನ ವಿಶ್ವಾಸ ಬಹಳ; ಆದರೆ ಈಗ ತನ್ನ ಆ ವಕೀಲನ ಮಾತಿನಂತೆ ನಡೆದರೆ ತನಗೆ ಯಶಸ್ಸು ಬರಲಾರದೆಂಬ ಸಂಶಯವು ಆತನಲ್ಲಿ ಉತ್ಪನ್ನವಾಯಿತು. ತನ್ನ ಪ್ರತಿಜ್ಞೆಯು ಪೂರ್ಣವಾಗಬೇಕಾದರೆ, ಗೋಪೀನಾಥಪಂತನ ಆಲೋಚನೆಯಂತೆ ನಡೆಯುವದಕ್ಕಿಂತ, ತನ್ನ ಸಾಮರ್ಥ್ಯದ ಮೇಲೆ, ಹಾಗು ತನ್ನ ಸೈನ್ಯದ ಸಾಮರ್ಥ್ಯದ ಮೇಲೆ ವಿಶ್ವಾಸವಿಟ್ಟು ನಡೆಯುವದು ಯೋಗ್ಯವೆಂದು ಆತನಿಗೆ ತೋರಹತ್ತಿತು. ''ಶಿವಾಜಿಯ ಮಾತು ಕೇಳದಿದ್ದರೆ ಅವನು ಕೈಗೆ ಸಿಗಲಿಕ್ಕಿಲ್ಲ, ಈ ಪ್ರಾಂತದಲ್ಲಿ ಬಹಳ ದಿವಸ ನಾನು ಕೊಳೆಯ ಬೇಕಾದೀತು'' ಎಂಬ ವಿಚಾರಕ್ಕೆ ಒಳಗಾಗಿ, ಶಿವಾಜಿಯು ಹೇಳಿದಹಾಗೆ ನಾನು ಕೇಳುತ್ತ ಹೋಗುವದು ಯೋಗ್ಯವಾಗಿ ತೋರುವದಿಲ್ಲ. ಶರಣು ಬರುವವನ ಕರಾರುಗಳನ್ನು ಶರಣು ಮಾಡಿಕೊಳ್ಳುವವನು ನಡಿಸಬೇಕೆಂದು ಎಲ್ಲಿಯ ನ್ಯಾಯವು? ನಿಜವಾಗಿಯೆಂದರೆ, ಶಿವಾಜಿಯೇ ನಾನಿದ್ದಲ್ಲಿಗೆ ಬರಬೇಕಾಗಿದ್ದು, ನಾನು ಈಗ ಅವನಿದ್ದಲ್ಲಿಗೆ ಹೋಗುವದೇ ಹೆಚ್ಚಿನ ಮಾತಾಗಿರುವುದು. ಹೀಗಿದ್ದು ಈಗ ಮತ್ತೆ ಶಿವಾಜಿಯ ರಗಳೆಗಳನ್ನು ನಾನು ಕೇಳಬೇಕೆನ್ನುವುದು ಎಲ್ಲಿಯ ನ್ಯಾಯವು? ಏನೋ ಸೈನ್ಯವನ್ನು ದೂರ ಬಿಟ್ಟು ಬರಬೇಕಂತೆ, ಸ್ವಲ್ಪ ಜನರನ್ನು ಸಂಗಡ ಕರಕೊಂಡು ಬರಬೇಕಂತೆ, ಶರಣು ಬರುವವನ ಒಗರು ಎಷ್ಟು? ಅದನ್ನು ನಡಿಸಿಕೊಡುತ್ತ ಹೋಗುವದು ನನಗೆ ಕುಂದು ತರುವ ಮಾತಲ್ಲವೆ? ಶಿವಾಜಿಯು ನಾನಿದ್ದಲ್ಲಿಗೆ ಬಂದು, ರುಮಾಲದಿಂದ ಕೈಕಟ್ಟಿಕೊಂಡು ನಿಂತು—''ನಾನು ತಮ್ಮ ಬಂದಾ ಗುಲಾನಿದ್ದೇನೆಂದು'' ಪ್ರಾರ್ಥಿಸಬೇಕಾಗಿತ್ತು, ಅದೊತ್ತಟ್ಟಿಗುಳಿದು ಶಿವಾಜಿಯು ಹೇಳಿದ ಹಾಗೆ ನಾನು ಕೇಳ ಬೇಕಾಯಿತಲ್ಲ! ಇದೆಲ್ಲಿಯ ರೀತಿಯು? ಇದು ಒಂದು ಬಗೆಯಿಂದ ನನಗೆ ಅಪಮಾನ ಕರವಲ್ಲವೆ? ಈಗ ನಾನು ಸ್ವಚ್ಛವಾಗಿ ಶಿವಾಜಿಗೆ—''ನಾನು ಬೇಕಾದಷ್ಟು ಜನ ದಂಡಾಳು ಗಳನ್ನು ಸಂಗಡ ಕರಕೊಂಡು ಬರುವೆನು'' ಎಂದು ಹೇಳಿಕಳಿಸಿದರೆ, ಅವನು ಮಾಡುವದೇನು? ಇನ್ನು ಅವನು ಅಂಜಿ ಓಡಿಹೋಗುವನು; ಆದರೆ ಎಲ್ಲಿಗೆ ಓಡಿ ಹೋಗುವನು? ಎಷ್ಟು ದಿವಸ ಓಡಿಹೋಗುವನು? ನಾನು ಈ ಪ್ರಾಂತದಲ್ಲಿ ಸ್ಥಿರವಾಗಿ ಇದ್ದು, ಅವನ ಸುತ್ತು ಕೈತೊಳಕೊಂಡು ಬೆನ್ನಹತ್ತುವೆನು; ಅಂದಬಳಿಕ ನನ್ನ ಉಪಟಲಕ್ಕೆ ಆತನು ಎಷ್ಟು ದಿವಸ ತಡೆಯುವನು ನೋಡೋಣ! ಎಂದು ಆಲೋಚಿಸಿ, ಗೋಪೀನಾಥಪಂತನನ್ನು ಕುರಿತು— ''ಪಂತ, ನಿಮ್ಮ ಮಾತು ನಮ್ಮ ಮನಸ್ಸಿಗೆ ಬರುವದಿಲ್ಲ. ನಾನು ನಮ್ಮ ಇಡಿಯ ದಂಡಿನ ಛಾವಣಿಯನ್ನೇ ಸಂಗಡ ಕರಕೊಂಡು ಹೋಗುವೆನು. ''ಇಷ್ಟು ಜನರನ್ನು ಕರಕೊಂಡು ಬರ್ರಿ, ಅಷ್ಟು ಜನರನ್ನು ಕರಕೊಂಡು ಬರ್ರಿ'' ಅನ್ನುವದರಲ್ಲಿ ಏನೋ ಮೋಸವಿದ್ದಂತೆ ತೋರುತ್ತದೆ.''

ಈ ಮೇರೆಗೆ ಖಾನನು ಆಡಿದ ಮಾತುಗಳನ್ನು ಕೇಳಿ ಗೋಪೀನಾಥಪಂತನು—''ಏನು? ಶಿವಾಜಿಯು ಮೋಸ ಮಾಡುವನೆ? ನಿಮ್ಮೊಡನೆ ಮೋಸ ಮಾಡಿ ಅವನು ಪಾರಾಗಬಹುದೆ? ಈ ಮಾತು ನನಗೆ ತೀರ ಅಸಂಭವವಾಗಿ ತೋರುತ್ತದೆ. ನೀವು ಇತ್ತಕಡೆಗೆ ದಂಡೆತ್ತಿ ಬಂದದ್ದರಿಂದ

ಆತನು ತೀರ ಹೆದರಿಹೋಗಿರುವನು. ನಾನು ಅವನ ಬಳಿಗೆ ಹೋದಾಗೆಲ್ಲ ಅವನು ಅಂಜಿಕೊಂಡಿದ್ದ ಲಕ್ಷಣಗಳು ನನ್ನ ಕಣ್ಣಿಗೆ ಬಿದ್ದಿವೆ. ಇಂಥವನು ಮೋಸವೇನು ಮಾಡುವನು? ಒಂದು ವೇಳೆ ಅವನು ಮೋಸ ಮಾಡಿದರಾದರೂ ಆಗುವದೇನು? ನೀವು ಕೆಲವು ಸೈನ್ಯವನ್ನು ಸಂಗಡ ಕರಕೊಂಡು ಹೋಗಿ ಸ್ವಲ್ಪ ಅಂತರದಲ್ಲಿ ಅದನ್ನು ಗುಪ್ತರೀತಿಯಿಂದ ಇಟ್ಟು,ಬಿಟ್ಟಿದ್ದರಾಯಿತು. ಪ್ರಸಂಗದಲ್ಲಿ ಶಿವಾಜಿಯ ಸಮಾಚಾರವನ್ನು ತಕ್ಕೊಳ್ಳಲು ಅನುಕೂಲವಾಗುವದು. ಒಟ್ಟಿಗೆ ಶಿವಾಜಿಯನ್ನು ಪ್ರತಾಪ ಗಡದಿಂದ ಹೊರಗೆ ಹೋಗಗೊಡದೆ, ಉಪಾಯದಿಂದ ಅವನನ್ನು ಹಿಡಿಯಬೇಕು. ತಮ್ಮ ಅಂಜಿಕೆಯಿಂದ ಶಿವಾಜಿಗೆ ಏನೂ ತೋಚದ್ದರಿಂದ, ಅವನು ಭ್ರಮಿಷ್ಟನ ಹಾಗೆ ಮಾಡುತ್ತಿರುವನು. ತಾವೇ ನೋಡಿರಿ, ವೈರಿಯನ್ನು ಸೈನ್ಯಸಹಿತವಾಗಿ ಯಾವನಾದರೂ ತನ್ನ ಮನೆಯಲ್ಲಿ ಕರೆದುಕೊಂಡು ಹೋಗಬಹುದೋ? ಶತ್ರುವನ್ನು ಸಾಮ–ದಾನ–ಭೇದ–ದಂಡಗಳಿಂದ ಸ್ವಾಧೀನ ಪಡಿಸಿಕೊಳ್ಳ ಬೇಕಾಗುತ್ತದೆ. ಈ ಚತುರೋಪಾಯಗಳನ್ನು ತಮ್ಮ ಹಾಗೆ ಅರಿತವರು ಬಹು ಸ್ವಲ್ಪ ಜನರು ಇರಬಹುದು; ಆದರೆ ಈ ಸಂಬಂಧದಿಂದ ಶಿವಾಜಿಯ ರೀತಿಯನ್ನು ತಾವು ನೋಡಿದರೆ, ಅವನು ಅಂಜಿಕೆಯಿಂದ ವಿವೇಕಭ್ರಷ್ಟನಾಗಿರುವನೆಂಬ ನನ್ನ ಮಾತು ತಮಗೂ ನಿಜವಾಗಿ ತೋರಬಹುದು. ತಮ್ಮಂಥ ಸರದಾರರು ಬಂದಬಳಿಕ ಯಾರ ಎದೆ ಒಡೆದು ನೀರಾಗಲಿಕ್ಕಿಲ್ಲ? ತಮ್ಮ ಬಲವೆಷ್ಟು, ಶಿವಾಜಿಯ ಬಲವೆಷ್ಟು? ತಮ್ಮ ಪಾಸಂಗಕ್ಕೆ ಆತನು ಹತ್ತಲಿಕ್ಕಿಲ್ಲ. ಆದ್ದರಿಂದ ತಾವು ನಿಶ್ಶಂಕೆಯಿಂದ ಶಿವಾಜಿಗೆ ''ನಾವು ಸ್ವಲ್ಪ ದಂಡಾಳುಗಳನ್ನು ಸಂಗಡ ಕರಕೊಂಡು ಬರುವೆವೆಂದು'' ಹೇಳಿ ಕಳಿಸಬೇಕು; ಮತ್ತು ಈಗ ಕರಕೊಂಡು ಬಂದಿರುವ ದಂಡಿನಲ್ಲಿ ಸಹ ಕೆಲವು ದಂಡನ್ನು ಹಿಂದಕ್ಕೆ ಕಳಿಸುವೆವೆಂತಲೂ ತಾವು ಹೇಳಿ ಕಳಿಸಬಹುದು.

ಸ್ತೋತ್ರ ಪ್ರಿಯನಾದ ಖಾನನು ಗೋಪೀನಾಥಪಂತನ ಈ ಮಾತುಗಳನ್ನು ಕೇಳಿ— ''ಪಂತ, ನಿಮ್ಮ ಮಾತು ನಿಜವಾಗಿ ತೋರುತ್ತದೆ. ನೀವು ಆಗಲೇ ತೀರ ವಿರುದ್ಧ ರೀತಿಯಿಂದ ಮಾತಾಡಿದಿರಿ. ''ಶಿವಾಜಿಯು ಅಂಜುಬುರುಕನಲ್ಲ; ಅಂಥವನಿದ್ದಾನೆ ಇಂಥವನಿದ್ದಾನೆ. ಇಂಥ ಇಂಥ ಸರದಾರರನ್ನು ಗೊತ್ತಿಗೆ ಹಚ್ಚಿದನು. ಜನರನ್ನು ಒಲಿಸಿಕೊಳ್ಳುವಲ್ಲಿ ಅವನನ್ನು ಸರಿಗಟ್ಟುವವರು ಮತ್ತೊಬ್ಬರಿಲ್ಲ'' ಇತ್ಯಾದಿ ರೀತಿಯಿಂದ ಅವನನ್ನು ಬಣ್ಣಿಸಿದಿರಿ. ಅದು ನನ್ನ ಮನಸ್ಸಿಗೆ ಸರ್ವಥಾ ಬರಲಿಲ್ಲ. ನನ್ನ ಮನಸ್ಸನ್ನು ಪರೀಕ್ಷಿಸುವದಕ್ಕೆ ನೀವು ಹಾಗೆ ಅವನ ಸ್ತೋತ್ರ ಮಾಡಿದಿರೆಂಬಂತೆ ಕಾಣುತ್ತದೆ. ಅದಿರಲಿ ಇಂಥ ಹೇಡಿಯ ಸಂಗಡ ಯುಕ್ತಿಗಿಕ್ತಿಗಳ ಗೊಂದಲಕ್ಕೆ ಹೋಗದೆ, ಒಂದು ಹೊಡತ ಎರಡು ತುಂಡು ಅನ್ನುವಂತೆ, ತಟ್ಟನೆ ಏನು ಮಾಡುವದನ್ನು ಮಾಡಿಬಿಡಬೇಕು. ಈವರೆಗೆ ನಮ್ಮವರು ಆತನ ಯುಕ್ತಿಗಳಿಗೆ ಮಹತ್ವ ಕೊಡುತ್ತ ಬಂದದ್ದರಿಂದಲೇ ಆತನು ತಲೆಯ ಮೇಲೆ ಏರಿ ಕುಳಿತುಕೊಂಡಿರುತ್ತಾನೆ, ಎರಡನೆಯದೇನೂ ಇಲ್ಲ, ಅವನನ್ನು ಹಿಡಿದು ಚನ್ನಾಗಿ ತಳಿಸಬೇಕು. ಅನ್ನಲು ಪಂತರು—''ಖಾವಿಂದ, ಸ್ಪಷ್ಟ ಮಾತಾಡುವದಕ್ಕಾಗಿ ನನ್ನನ್ನು ಕ್ಷಮಿಸಬೇಕು. ನನ್ನ ವಿಚಾರಗಳು ತಮ್ಮ ವಿಚಾರಕ್ಕೆ ತೀರ ವಿರುದ್ಧವಾಗಿರುತ್ತವೆ. ಶಿವಾಜಿಯ ಯುಕ್ತಿಗಳಿಗೆ ತಕ್ಕ ಯುಕ್ತಿಗಳನ್ನು ಜೋಡಿಸದೆ ಹುಂಬಗುತ್ತಿಗೆ

ಮಾಡಿದ್ದರಿಂದಲೇ ಹಿಂದಿನವರು ಕೇಡಿಗೊಳಗಾದರು. ಈಗ ಅಂಥ ಪ್ರಸಂಗವನ್ನು ತಂದು ಕೊಳ್ಳಬಾರದೆಂದು ನಾನು ತಮಗೆ ಸೂಚಿಸುವೆನು. ಕಾರ್ಯಸಾಧನದಲ್ಲಿ ಶಕ್ತಿಗಿಂತ ಯುಕ್ತಿಯು ಬಹು ಉಪಯುಕ್ತವಾದದ್ದಿರುತ್ತದೆ. ಯುಕ್ತಿಗೆ ಯುಕ್ತಿಯನ್ನು ಜೋಡಿಸಿಯೇ ಕಾರ್ಯವನ್ನು ಸಾಧಿಸಿಕೊಳ್ಳಬೇಕು. ಒಟ್ಟಿಗೆ ಆವನನ್ನು ಬೆದರಿಸಿ ಅಗಡು ಮಾಡಿ, ಕಾರ್ಯಸಾಧನದಲ್ಲಿ ವಿಲಂಬವನ್ನುಂಟು ಮಾಡಬೇಡಿರಿ. ದಿಲ್ಲಿಯ ಬಾದಶಹನು ಶಿವಾಜಿಯನ್ನು ಗುಡ್ಡದ ಇಲಿಯೆಂದು ಕರೆದದ್ದು ಯಥಾರ್ಥವು. ಇಲಿಯು ಕ್ಷುದ್ರ ಪ್ರಾಣಿಯಾದರೂ, ಹೋರಿನಿಂದ ಹೋರಿಗೆ ಅಲೆದಾಡುವ ಅದನ್ನು ಹಿಡಿಯುವದು ಸುಲಭವಲ್ಲ. ತಾವು ತಪಗಟ್ಟಿಲೆ ಈ ಪ್ರಾಂತದಲ್ಲಿ ವಾಸಿಸಿದರೂ, ಶಿವಾಜಿಯು ನಿಮ್ಮ ಕೈಗೆ ಸಿಗುವದು ಕಠಿಣವಾದೀತು; ಅವನ ಪುಂಡಾಟಿಕೆಯೂ ನಿಲ್ಲಲಿಕ್ಕಿಲ್ಲ. ಖಾವಿಂದ, ಹೇಳತಕ್ಕದ್ದನ್ನು ನಾನು ಹೇಳಿಬಿಟ್ಟಿದ್ದೇನೆ. ಇನ್ನು ಮೇಲೆ ತಮ್ಮ ಮನಸ್ಸಿಗೆ ಬಂದಂತೆ ಮಾಡಬಹುದು. ಇನ್ನು ನಾನು ಹೇಳುವದೇನು ಉಳಿದಿರುವದಿಲ್ಲ.

ಈ ಮೇರೆಗೆ ಗೋಪಿನಾಥ ಪಂತನು ತನ್ನ ಒಡೆಯನ ಹಿತಚಿಂತನದ ಉದ್ದೇಶ ದಿಂದಾಗಲಿ, ಶಿವಾಜಿಯ ಹಿತಚಿಂತನದ ಉದ್ದೇಶದಿಂದಾಗಲಿ ಆಡಿದ ಮಾತಿನಲ್ಲಿ ತನ್ನ ಸ್ತೋತ್ರವಿದ್ದದ್ದರಿಂದ ಖಾನನು ಉಬ್ಬಿದನು. ಆಗ ಪಂತನ ವಿಚಾರಗಳು ಆತನಿಗೆ ಸಮರ್ಪಕವಾಗಿ ತೋರಹತ್ತಿದವು. ತಾನು ಯುಕ್ತಿಯಿಂದಲೇ ಶಿವಾಜಿಯನ್ನು ಗೊತ್ತಿಗೆ ಹಚ್ಚಬೇಕೆಂದು ಆತನು ನಿಶ್ಚಯಿಸಿದನು. ಈಗ ಯುಕ್ತಿಗೆ ಅನುಕೂಲವಾದ ವಿಚಾರಗಳು ಖಾನನ ಮನಸ್ಸಿನಲ್ಲಿ ಬರತೊಡಗಿದವು. ಮನಸ್ಸಿನ ಧರ್ಮವು ವಿಲಕ್ಷಣವಾಗಿರುವದು. ಅದಕ್ಕೆ ಒಮ್ಮೆ ಸೇರಿದ್ದು ಮತ್ತೊಮ್ಮೆ ಸೇರದಾಗುತ್ತದೆ. ಅದು ತನ್ನ ಸೇರಿಕೆಗೆ ಅನುಕೂಲವಾದ ಸಂಗತಿಗಳನ್ನೇ ಹುಡುಕಿಕೊಂಡು ತನ್ನ ಸೇರಿಕೆಯನ್ನು ಪರಿಪುಷ್ಟ ಮಾಡಿಕೊಳ್ಳುವದು. ಉದಾಹರಣಾರ್ಥ, ಒಬ್ಬ ಮನುಷ್ಯನು ಒಮ್ಮೆ ನಮ್ಮ ಮನಸ್ಸಿಗೆ ಬಂದನೆಂದರೆ, ಅವನಲ್ಲಿಯ ಚಲೋ ಗುಣಗಳೇ ನಮ್ಮ ಮನಸ್ಸಿನ ಮುಂದೆ ಬಂದು ನಿಲ್ಲುತ್ತವೆ; ಅದೇ ಮನುಷ್ಯನು ನಮ್ಮ ಮನಸ್ಸಿಗೆ ಬಾರದಾದರೆ ಅವನ ಕೆಟ್ಟಗುಣಗಳೇ ನಮ್ಮ ಮನಸ್ಸಿನ ಮುಂದೆ ಬಂದು ನಿಲ್ಲುತ್ತವೆ. ಖಾನನ ಸ್ಥಿತಿಯಾದರೂ ಹೀಗೆಯೇ ಆಯಿತು. ಆತನಿಗೆ ಮೊದಲು ಶಿವಾಜಿಯ ಪಾರುಪತ್ಯ ಮಾಡಲಿಕ್ಕೆ ಶಕ್ತಿಯು ಅನುಕೂಲವಾಗಿ ತೋರಿತು; ಹಿಂದುಗಡೆ ಗೋಪೀನಾಥ ಪಂತನು ಆತನ ಮನಸ್ಸನ್ನು ತಿರುಗಿಸಿ, ಅದಕ್ಕೆ ಯುಕ್ತಿಯು ಸೇರುವಂತೆ ಮಾಡಿದ್ದರಿಂದ ಖಾನನ ಯುಕ್ತಿಯು ಬೆನ್ನಹತ್ತಿದನು. ಈಗ ಯುಕ್ತಿಯಿಂದಲೇ ಆತನ ಪ್ರತಿಜ್ಞೆಯು ಪೂರ್ಣವಾಗುವಂತೆ ಅವನಿಗೆ ತೋರಿತು. ಆತನು ಮನಸ್ಸಿನಲ್ಲಿ—"ಪಂತರು ಹೇಳುವದು ಯಥಾರ್ಥವಾಗಿ ತೋರುತ್ತದೆ. ಸುಮ್ಮನೆ ಹುಂಬತನದಿಂದ ಶಕ್ತಿಯನ್ನು ಉಪಯೋಗಿಸಿ, ಮೈ ನುಗ್ಗು ಮಾಡಿ ಕೊಳ್ಳುವದಕ್ಕಿಂತ, ಯುಕ್ತಿಯಿಂದ ಹಗುರಾಗಿ ಕಾರ್ಯವನ್ನು ಸಾಧಿಸುವದು ನೆಟ್ಟಗೆ ಕಾಣುತ್ತದೆ. ಶಿವಾಜಿಯನ್ನು ಮೊದಲು ಬಲೆಬೀಸಿ ಹಿಡಿದುಕೊಳ್ಳೋಣ; ಆ ಮೇಲೆ ಪಂಜರದಲ್ಲಿ ಹುಲಿಯನ್ನು ಹಿಡಿದುಕೊಂಡು ಹೋಗುವಂತೆ ಆತನನ್ನು ವಿಜಾಪುರಕ್ಕೆ ಹಿಡಿದುಕೊಂಡು

ಹೋಗೋಣ; ಆದರೆ ಇದಕ್ಕೆ ಯಾವ ಯುಕ್ತಿಯನ್ನು ಯೋಚಿಸತಕ್ಕದ್ದೆಂಬದನ್ನು ಕುರಿತು ಆಲೋಚಿಸಬೇಕಾಗಿದೆ. ಆ ಯುಕ್ತಿಯು ಅತ್ಯಂತ ಗೂಢವಾಗಿ ಇರತಕ್ಕದ್ದು. ಅದನ್ನು ಈ ಗೋಪೀನಾಥ ಪಂತನಿಗೂ ತಿಳಿಸತಕ್ಕದ್ದಲ್ಲ, ಸದ್ಯಕ್ಕೆ ನಾನು ನಮ್ಮ ಈ ವಕೀಲನ ವಿಶ್ವಾಸವನ್ನೂ ವಿಶೇಷವಾಗಿ ಹಿಡಿಯದೆ, ಅವನ ಮೇಲೆ ತೀರ ಅವಿಶ್ವಾಸವನ್ನೂ ತಾಳದೆ ಎಚ್ಚರದಿಂದ ವ್ಯವಹರಿಸತಕ್ಕದ್ದು'' ಎಂದು ಆಲೋಚಿಸಿ, ಗೋಪೀನಾಥಪಂತನನ್ನು ಕುರಿತು—''ಪಂತ, ನಿಮ್ಮ ಮಾತುಗಳ ರಹಸ್ಯವನ್ನು ಕುರಿತು ನಾನು ಬಹಳವಾಗಿ ವಿಚಾರಮಾಡಿದೆನು. ನಿಮ್ಮ ವಿಚಾರವು ಸಮಂಜಸವಾದದ್ದು, ನೀವು ಹೇಳಿದಂತೆ ಮಾಡುವದೇ ಯೋಗ್ಯವು. ಇನ್ನು ಮೇಲೆ ಶಿವಾಜಿಯ ಸಂಗಡ ನಾನು ತೀರ ಸರಳತನದಿಂದ ನಡೆಯಬೇಕೆಂದು ನಿಶ್ಚಯಿಸಿದ್ದೇನೆ. ತೀರ ಅಂಜಿದವನ ಸಂಗಡ, ಅಂದರೆ ತೀರ ದುರ್ಬಲನಾಗಿರುವವನ ಸಂಗಡ ಮರೆಮೋಸವಾದರೂ ಯಾತಕ್ಕೆ? ಹ್ಯಾಗೇ ಇರಲಿ, ಶಿವಾಜಿಯು ತೇಜಸ್ವಿಯಾಗಿರುವನು. ಇಂಥವನನ್ನು ನಾಶಗೊಳಿಸುವದಕ್ಕಿಂತ, ಪದರಿನಲ್ಲಿಟ್ಟುಕೊಳ್ಳುವದು ಲಾಭಕರವು. ದಿಲ್ಲಿಯ ಬಾದಶಹನು ನಮ್ಮ ಮೇಲೆ ಕಣ್ಣು ಇಟ್ಟಿರುತ್ತಾನೆ. ಇಂಥ ಪ್ರಸಂಗದಲ್ಲಿ ಶಿವಾಜಿಯಂಥ ಚತುರನನ್ನು ನಾಶಗೊಳಿಸುವದು ಯೋಗ್ಯವಲ್ಲ. ಈಗ ನಡಿಸಿ ಹೋಗಿದ್ದ ಪುಂಡಾಟಿಕೆಯ ಸಂಬಂಧದಿಂದ ಆತನು ಬಾದಶಹರ ಸಮ್ಮುಖದಲ್ಲಿ ಕ್ಷಮೆಬೇಡಿ ಇಲ್ಲಿ ಸುಬೇದಾರಿಕೆಯನ್ನು ಸಂಪಾದಿಸಿಕೊಂಡು ಬಾದಶಹರ ಅಂಕಿತನಾಗಿ ರಾಜ್ಯದಾಡಳಿತವನ್ನು ನಡಿಸಲೊಲ್ಲನೇಕೆ. ಈತನು, ಬಾದಶಾಹಿಯ ವಂಶ ಪರಂಪರೆಯ ನೌಕರನಾಗಿದ್ದ ಶಹಾಜಿರಾಜರ ಮಗನಾಗಿದ್ದದ್ದನ್ನೂ ನಾವು ಮನಸ್ಸಿನಲ್ಲಿ ತರಬೇಕಾಗಿದೆ. ಹೆಚ್ಚಿಗೇನೂ ಬೇಡ, ನಾನು ವಿಜಾಪುರದ ಬಾದಶಾಹಿಯ ನೌಕರನೆಂದು ಆತನು ಆಣೆಮಾಡಿ ಬರಲಿ, ಅಂದರೆ ನಾವು ಆತನನ್ನು ಸೆರೆಹಿಡಿದು ಒಯ್ಯುವದಿಲ್ಲ; ಕೊಲ್ಲುವದೂ ಇಲ್ಲ. ಮುಖ್ಯವಾಗಿ ಆತನು ನನ್ನವೆರಡು ಮಾತುಗಳನ್ನು ನಡಿಸಬೇಕು; ಒಂದನೆಯ ಮಾತು— ''ಆತನು ನನ್ನ ಸಂಗಡ ವಿಜಾಪುರಕ್ಕೆ ಬರಬೇಕು'' ಎರಡನೆಯ ಮಾತು—''ತಾನು ಬಾದಶಾಹಿಯ ನೌಕರನೆಂದು ಒಪ್ಪಿಕೊಂಡು ಇತ್ತ ಕಡೆಯ ಕಾರಭಾರವನ್ನು ನಡಿಸಬೇಕು.''

ಹರಿದಾಸನ ಕಥೆಯಲ್ಲಿ ಪಲ್ಲವಿಯಿಲ್ಲ ಎನ್ನುವಂತೆ, ಖಾನನು ಎತ್ತ ಸುತ್ತುವರಿದು ಬಂದರೂ—''ಶಿವಾಜಿಯು ನನ್ನ ಸಂಗಡ ವಿಜಾಪುರಕ್ಕೆ ಬರಬೇಕೆಂಬ'' ಮಾತು ಮರೆಯ ದಿರುವದನ್ನು ನೋಡಿ ಗೋಪೀನಾಥ ಪಂತನು ಮನಸ್ಸಿನಲ್ಲಿ ನಕ್ಕನು. ಖಾನನು ಒಮ್ಮೆಲೆ ಇಷ್ಟು ಸೌಮ್ಯನಾದದ್ದನ್ನು ನೋಡಿಯೂ ಆತನಿಗೆ ಆಶ್ಚರ್ಯವಾಯಿತು. ಇಷ್ಟು ಸೌಮ್ಯವಾಗಿ ಮಾತಾಡುತ್ತಿರುವದರಿಂದ, ಈತನು ಮನಸ್ಸಿನಲ್ಲಿ ಏನಾದರೂ ಕಪಟ ಕೃತಿಯನ್ನು ಯೋಚಿಸಿರ ಬಹುದೆಂದು ಆತನು ತರ್ಕಿಸಿದನು. ತನ್ನ ತರ್ಕದ ನಿಜತ್ವವನ್ನು ಪರೀಕ್ಷಿಸುವದಕ್ಕಾಗಿ ಆತನು ಖಾನನನ್ನು ಕುರಿತು—''ತಮ್ಮ ಮಾತಿನಂತೆ ಶಿವಾಜಿಯು ನಡೆದುಕೊಳ್ಳಲಿಕ್ಕೆ ತೊಂದರೆಯೇನು ಇರುವದಿಲ್ಲ; ಆದರೆ ತಾವು ನುಡಿದಂತೆ ನಡೆಯುವಿರೋ ಇಲ್ಲವೋ ಎಂಬ ಸಂಶಯವು ಆತನಿಗೆ ಬಂದರೆ, ಅದಕ್ಕೆ ಸಮಾಧಾನವೇನು? ತಾನು ಖಾನಸಾಹೇಬರ ಮಾತಿನ ಮೇಲಿಂದ ವಿಜಾಪುರಕ್ಕೆ ಹೋಗಲು, ಇಲ್ಲಿಯ ಮಾತು ಇಲ್ಲಿಯೇ ಉಳಿದು ಬಾದಶಹರು ತನ್ನನ್ನು

ಸೆರೆಯಲ್ಲಿರಿಸಿದರೆ ಮಾಡುವದೇನೆಂದು ಶಿವಾಜಿಯು ಪ್ರಶ್ನೆ ಮಾಡಬಹುದು; ಅದಕ್ಕೆ ಏನಾದರೂ ಉತ್ತರ ಕೊಡಬೇಕಾದೀತಲ್ಲವೆ? ಸೆರೆಯಲ್ಲಿರಿಸಿದರೆ ಇಂದಿಲ್ಲ ನಾಳೆಯಾದರೂ ಬಿಡುಗಡೆ ಹೊಂದಿ ಬರಬಹುದು; ಆದರೆ ಬಾದಶಹರು ನನ್ನ ಜೀವಕ್ಕೆ ಅಪಾಯ ಮಾಡಿದರೆ ಮಾಡುವದೇನೆಂತಲೂ ಶಿವಾಜಿಯು ಕೇಳಬಹುದು. ಇವೆಲ್ಲವುಗಳಿಗೆ ಸಮಾಧಾನಕರವಾದ ಉತ್ತರಗಳನ್ನು ಕೊಡಬೇಕಾಗುವದು. ಹಾಗೆ ಉತ್ತರ ಕೊಡದಿದ್ದರೆ ಶಿವಾಜಿಯು ನಮ್ಮನ್ನು ನಂಬಲಿಕ್ಕಿಲ್ಲ. ಎಂದು ನುಡಿದನು. ಪಂತನ ಈ ಮಾತುಗಳನ್ನು ಕೇಳಿ ಖಾನನಿಗೆ ಸ್ವಲ್ಪ ತ್ರಾಸವಾದಂತೆ ತೋರಿತು. ಆತನ ಹುಬ್ಬುಗಳು ಗಂಟಿಕ್ಕಿದವು. ಆತನು ಸ್ವಲ್ಪ ಹೊತ್ತು ಸುಮ್ಮನೆ ಕುಳಿತುಕೊಂಡು ಸಂತ್ರಸ್ತ ಸ್ವರದಿಂದ ಗೋಪೀನಾಥ ಪಂತನನ್ನು ಕುರಿತು—''ನಾವು ಇಷ್ಟು ನಂಬಿಗೆಯಿಂದ ಹೇಳುತ್ತಿದ್ದರೂ, ಆತನು ನಮ್ಮ ಮಾತಿನ ಮೇಲೆ ವಿಶ್ವಾಸವಿಡದ ಬಳಿಕ, ನಾವಾದರೂ ಆತನ ಮಾತನ್ನು ನಂಬಿ ಸ್ವಲ್ಪ ಜನರೊಡನೆ ಆತನ ಭೆಟ್ಟಿಗೆ ಹ್ಯಾಗೆ ಹೋಗಬೇಕು? ಹಾಗೆ ಹೋಗಲಿಕ್ಕೆ ನಮಗೆ ಅಂಥ ಪ್ರಸಂಗವಾದರೂ ಏನು ಬಂದಿದೆ?

ಖಾನನ ಮಾತುಗಳನ್ನು ಕೇಳಿ ಗೋಪೀನಾಥಪಂತನು ಸ್ವಲ್ಪ ಹೊತ್ತು ಆಲೋಚಿಸಿ ಆಮೇಲೆ ಆತನನ್ನು ಕುರಿತು—''ಖಾವಿಂದ, ಒಬ್ಬರಲ್ಲಿ ಒಬ್ಬ ವಿಶ್ವಾಸವಿಲ್ಲದಿದ್ದರೆ ಯಾವ ಕೆಲಸವೂ ಆಗಲಿಕ್ಕಿಲ್ಲ. ತಾವು ಆತನ ಮೇಲೆ, ಆತನು ತಮ್ಮ ಮೇಲೆ ವಿಶ್ವಾಸವಿಡಲೇಬೇಕು; ಆದರೆ ಈ ವರೆಗೆ ನಡೆದಿರುವ ವ್ಯವಹಾರವೆಲ್ಲ ಸಂಶಯಮೂಲಕವಾಗಿಯೇ ನಡೆದಿರುವದರಿಂದ, ಶಿವಾಜಿಯು ಆಕಸ್ಮಾತ್ತಾಗಿ ಶಂಕಿಸಿದರೆ ತಾವು ಆಶ್ಚರ್ಯಪಡುವ ಕಾರಣವಿಲ್ಲೆಂತಲೂ, ಪ್ರಸಂಗದಲ್ಲಿ ಆತನಿಗೆ ತಕ್ಕ ಉತ್ತರವನ್ನು ಕೊಡಲು ಯೋಚಿಸಿರಬೇಕೆಂತಲೂ ಸುಮ್ಮನೆ ನಾನು ಈ ಮಾತುಗಳನ್ನು ಆಡಿದೆನು. ಪ್ರಸಂಗ ಒದಗಿದಾಗ ಗುಯಿಗುಟ್ಟುವದಕ್ಕಿಂತ ಮೊದಲೇ ಯೋಚಿಸಿ ಉತ್ತರವನ್ನು ಗೊತ್ತುಮಾಡಿ ಇಟ್ಟುಕೊಂಡಿರುವದು ನೆಟ್ಟಗೆ,'' ಎಂದು ನುಡಿಯಲು, ಖಾನನು ಸ್ಪಷ್ಟವಾಗಿ ಉತ್ತರ ಕೊಡುವ ಉದ್ದೇಶದಿಂದ ಪಂತರನ್ನು ಕುರಿತು—''ಏನೇ ಇರಲಿ, ನೀವು ಹ್ಯಾಗೇ ಮಾತಾಡಿರಲಿ, ನಾನು ಕಟ್ಟಕಡೆಯ ಮಾತನ್ನು ಸ್ಪಷ್ಟವಾಗಿ ಹೇಳುತ್ತೇನೆ ಕೇಳಿಕೊಳ್ಳಿರಿ. ನಮ್ಮ ಮಾತಿನಲ್ಲಿ ವಿಶ್ವಾಸವಿಟ್ಟು ಶಿವಾಜಿಯು ನಮ್ಮೊಡನೆ ವಿಜಾಪುರಕ್ಕೆ ಬಂದು ಬಾದಶಹರಿಗೆ ಶರಣುಹೋಗಿ ನಾನು ತಮ್ಮ ನೌಕರನೆಂದು ಪ್ರತಿಜ್ಞೆಮಾಡಬೇಕು; ಆ ಮೇಲೆ ಈ ಪ್ರಾಂತದ ಸನದನ್ನು ಬಾದಶಹರಿಂದ ಸಂಪಾದಿಸಿ ಸುಬೇದಾರಿಕೆಯನ್ನು ಮಾಡಬೇಕು. ಇಷ್ಟು ಮಾತನ್ನು ನಡಿಸಿ ನಮ್ಮೊಡನೆ ವಿಜಾಪುರಕ್ಕೆ ಹೊರಡಲು ಅವನು ಸಿದ್ಧನಾದರೆ, ಅದರಲ್ಲಿ ಎಲ್ಲ ಬಂದಿತು. ಆಮೇಲೆ ಬೇಕಾದರೆ ನಾನೊಬ್ಬನೇ ನಿಶ್ಶಸ್ತ್ರನಾಗಿ ಆತನನ್ನು ಕಾಣಲಿಕ್ಕೆ ಹೋಗುವೆನು. ನೀವು ಇನ್ನೊಮ್ಮೆ ಹೋಗಿ ಇದಿಷ್ಟು ಮಾತು ಒಡಂಬಡಿಸಿಕೊಂಡು ಬರ್ರಿ. ಆತನು ಇದಕ್ಕೆ ಒಡಂಬಟ್ಟರೇ ಮುಂದಿನ ಮಾತು, ಇಲ್ಲದಿದ್ದರೆ ಆತನ ವಿಚಾರವನ್ನು ಆತನು ಮಾಡಲಿ, ನಮ್ಮ ವಿಚಾರವನ್ನು ನಾವು ಮಾಡುವೆವು. ಹಿಂದಿನಿಂದ ಒಂದಬಡಿಕೆಗೆ ಬಂದರೆ ನಾವು ಕೇಳಲಿಕ್ಕಿಲ್ಲ. ಅದನ್ನೆಲ್ಲ ಆತನು ಪೂರ್ಣವಾಗಿ ವಿಚಾರಿಸಿ ಉತ್ತರ ಕೊಡಲಿ. ಈ ಮಾತನ್ನು ಹೇಳಲಿಕ್ಕೆ ನಿಮ್ಮನ್ನು ಆತನ ಬಳಿಗೆ ಕಳಿಸುವ ಅವಶ್ಯವಿದ್ದಿಲ್ಲ. ಆತನ ವಕೀಲನು ನಮ್ಮ ಬಳಿಗೆ

ಬಂದಾಗ್ಗೆ ಅವನ ಮುಂದೆ ಹೇಳತಕ್ಕದ್ದಿತ್ತು; ಆದರೆ ಇನ್ನೊಂದು ಸಾರೆ ನಿಮ್ಮನ್ನು ಆತನ ಬಳಿಗೆ ಕಳಿಸುವದು ನನಗೆ ಯೋಗ್ಯವಾಗಿ ತೋರಿತು; ಮತ್ತು ಸಾಮೋಪಾಯದಿಂದ ಕಾರ್ಯಮಾಡುವ ಪ್ರಸಂಗದಲ್ಲಿ ನಾವಾದರೂ ಇಷ್ಟು ಬಿಗಿ ಹಿಡಿಯುವದು ಸರಿಯಲ್ಲ. ನೀವು ಇನ್ನೊಮ್ಮೆ ಹೋಗಿ ಆತನಿಗೆ ನೆಟ್ಟಗೆ ತಿಳಿಸಿ ಹೇಳಿರಿ. ನೀನು ದರಿದ್ರನು, ದುರ್ಬಲನು, ನಮ್ಮಂಥವರ ಮುಂದೆ ನಿನ್ನ ಆಟವೇನೂ ನಡೆಯದು; ನೀನು ವ್ಯರ್ಥವಾಗಿ ಸತ್ತೀ; ಎಂದು ಆತಂಕವಿಲ್ಲದೆ ಸ್ಪಷ್ಟವಾಗಿ ಆತನಿಗೆ ಹೇಳಿರಿ. ನಾವು ಹೇಳಿದ ಹಾಗೆ ಕೇಳುವದರಲ್ಲಿಯೇ ನಿನ್ನ ಕಲ್ಯಾಣವಿರುತ್ತದೆಂಬ ಮಾತನ್ನು ಅವನ ಮನಸ್ಸಿನಲ್ಲಿ ಚೆನ್ನಾಗಿ ತುಂಬಿರಿ. ಆತನು ವಿಚಾರವಂತನಿರುವದರಿಂದ ನಮ್ಮ ಮಾತಿನ ನಿಜತ್ವವು ಕೂಡಲೆ ಅವನ ಮನಸ್ಸಿನಲ್ಲಿ ಹೊಳೆಯಬಹುದು. ಇದರ ಮೇಲೆಯೂ ಅವನು ನಮ್ಮ ಮಾತು ಕೇಳದಿದ್ದರೆ, ತನ್ನ ಮನಸ್ಸಿಗೆ ಬಂದಂತೆ ಮಾಡಲಿ. ನಮ್ಮ ಮಾತಿಗೆ ಒಡಂಬಟ್ಟರೆ ಮುಂದೆ ಮಾತಾಡಲಿ, ಒಡಂಬಡದಿದ್ದರೆ ತಿರುಗಿ ಯಾವ ಉತ್ತರವನ್ನೂ ನಮಗೆ ಹೇಳುವ ಕಾರಣವಿಲ್ಲ; ಆತನ ವಕೀಲನೂ ನಮ್ಮ ಕಡೆಗೆ ಬರುವ ಕಾರಣವಿಲ್ಲ, ಇದು ಕಡೆಯ ಮಾತು. ನಾವು ಇಲ್ಲಿಗೆ ಬಂದು ಬಹಳ ದಿವಸಗಳಾದವು. ಇನ್ನು ಮೇಲೆ ನಾವು ವ್ಯರ್ಥ ಕಾಲಹರಣ ಮಾಡಲಾರೆವು. ಇನ್ನು ನಮ್ಮ ಮಾತಿನಲ್ಲಿ ಅಂತರವಾಗಲಿಕ್ಕಿಲ್ಲ, ಈಗಲೇ ನೀವು ಹೋಗಿ ಯಾವದೊಂದರ ನಿರ್ಣಯ ಮಾಡಿಕೊಂಡ ಬರ್ರಿ'' ಎಂದು ಹೇಳಿದನು. ಗೋಪೀನಾಥ ಪಂತನಾದರೂ ಹೆಚ್ಚಿಗೆ ಮಾತಾಡದೆ ಅಲ್ಲಿಂದ ಹೊರಟುಹೋದನು. ಖಾನನು ಏನೋ ದುರಾಲೋಚನೆ ಮಾಡಿರುವನೆಂದು ಆತನು ನಿಶ್ಚಯಿಸಿದನು; ಆದರೆ ಏನು ಮಾಡಿರುವ ನೆಂಬುದು ತಿಳಿಯಲಿಲ್ಲ; ಆದ್ದರಿಂದ ಆತನು ವಿಚಾರಮಗ್ನನಾಗಿ ಪ್ರತಾಪಗಡದ ದಾರಿಯನ್ನು ಹಿಡಿದನು.

## ಸಂಶಯ ನಿವಾರಣ

ಹೇಜೀಬನ ಸೋಗು ಹಾಕಿಕೊಂಡಿದ್ದ ಜಾಧವರಾಯನಿಗೆ ಸಂಶಯ ಪಿಶಾಚವು ಬಡಕೊಂಡದ್ದನ್ನು ವಾಚಕರು ಮರೆತಿರಲಿಕ್ಕಿಲ್ಲ. ತಾರಾಬಾಯಿಯ ಸಾಹಸವು ವಿಲಕ್ಷಣವಾದದ್ದು. ಆಕೆಯು ತನ್ನ ತಂದೆಯ ಸೇಡು ತೀರಿಸಿಕೊಳ್ಳುವದಕ್ಕಾಗಿ ಮಹಾರಾಜರ ಪ್ರಾಣಹರಣ ಮಾಡುವ ಹವ್ಯಾಸವನ್ನು ಕಡೆತನಕ ಬಿಡಲಿಲ್ಲ, ಈಗ ಆಕೆಯು ಜಾಧವರಾಯನಿಗೆ ಆತನ ಹೆಂಡತಿಯಾದ ಹೈಮವತಿಯ ಸಂಬಂಧದಿಂದ ಇಲ್ಲದ್ದೊಂದು ಹೇಳಿ, ಆತನಿಂದ ಶಿವಾಜಿಯ ಸೇಡು ತೀರಿಸಿಕೊಳ್ಳಲು ಯತ್ನಿಸಿದಳು. ಹೆಂಡತಿಯು ಗಂಡನ ದುರಭಿಮಾನದ ಖನಿಯೆಂದು ಹೇಳಬಹುದು. ಹೆಂಡತಿಯ ಹೊರತು ಬೇರೆ ಯಾವ ಆಪ್ತರನ್ನು ನಿಂದಿಸಿದರೂ, ಬೈದರೂ ನಾವು ಸೈರಿಸಬಹುದು; ಆದರೆ ನಮ್ಮ ಹೆಂಡಿರನ್ನು ಯಾರಾದರೂ ನಿಂದಿಸಿದರೆ ಅಥವಾ ಬೈದರೆ ನಾವು ಸಹಿಸಲಾರೆವು. ನಿಂದಿಸುವದು ಬೈಯುವದು ಒತ್ತಟ್ಟಿಗಿರಲಿ, ಹೆಂಡತಿಯನ್ನು

ಬೇರೆ ಗಂಡಸರು ದಿಟ್ಟಿಸಿ ನೋಡಿದರೆ ಅಥವಾ ಆಕೆಯೊಡನೆ ಹೆಚ್ಚಿಗೆ ಮಾತಾಡಿದರೆ ದುರಭಿಮಾನ ಮೂಲವಾದ ಸಂಶಯ ಪಿಶಾಚವು ಬಡಿದುಕೊಳ್ಳುತ್ತದೆ. ಹೆಂಡತಿಯ ವಿಷಯದ ಈ ಸಂಶಯಪಿಶಾಚದ ಬಾಧೆಯು ಹೆಚ್ಚಾಯಿತೆಂದರೆ, ಮನುಷ್ಯನು ಏನು ಮಾಡಲಿಕ್ಕೂ ಹೇಸುವದಿಲ್ಲ; ತರುಣ ಜಾಧವರಾಯನು ಶಿವಾಜಿಯ ಮೇಲಿನ ಭಕ್ತಿಯಿಂದ ಆತನಿಗೆ ಸಹಾಯ ಮಾಡುವದಕ್ಕಾಗಿ ವಿಜಾಪುರದಿಂದ ಹೊರಟು ಕುಟುಂಬಸಹಿತವಾಗಿ ಬಂದಿದ್ದನು. ಹಾದಿಯಲ್ಲಿ ಪಠಾಣರ ಮುತ್ತಿಗೆಯಿಂದ ತಾನು ಹೆಂಡತಿಯನ್ನು ಕಳಕೊಂಡರೂ, ಶಿವಾಜಿಯ ಮೇಲಿನ ಆತನ ಭಕ್ತಿಯು ಕಡಿಮೆಯಾಗಲಿಲ್ಲ, ಶಿವಾಜಿಗೆ ಸಹಾಯ ಮಾಡುವ ಉದ್ದೇಶದಿಂದಲೇ ಆತನು ಅಫಜುಲಖಾನನ ಬಳಿಯ ಸುದ್ದಿಗಳನ್ನು ತಿಳಕೊಂಡು, ಅವನ್ನು ಶಿವಾಜಿಗೆ ಹೇಳುವದಕ್ಕಾಗಿ ಆತನ ಬಳಿಗೆ ಹೇಜೀಬನ ವೇಷದಿಂದ ಹೋಗಿದ್ದನು. ಇನ್ನುಮೇಲೆಯಾದರೂ ಹಲವು ಬಗೆಯ ಸಹಾಯಗಳನ್ನು ತನ್ನ ಜೀವದ ಹಂಗು ಇಲ್ಲದೆ ಶಿವಾಜಿಗೆ ಮಾಡಬೇಕೆಂದು ಆತನು ನಿಶ್ಚಯಿಸಿದ್ದನು; ಆದರೆ ಮಧ್ಯದಲ್ಲಿ ತಾರಾಬಾಯಿಯು ಆತನಲ್ಲಿ ಸಂಶಯದ ಬೀಜವನ್ನು ಬಿತ್ತಿದ್ದರಿಂದ, ಆತನ ಮನಸ್ಸು ಚಂಚಲವಾಯಿತು. ಶಿವಾಜಿಯಂಥ ದಿವ್ಯ ವಿಭೂತಿಯ ವಿಷಯದಲ್ಲಿಯೂ ಆತನ ಮನಸ್ಸು ಸಂಶಯಯುಕ್ತವಾಯಿತು; ಆದರೆ ಶಿವಾಜಿಯ ಪರನಾರೀ ಸೋದರತ್ವವು ಲೋಕಪ್ರಸಿದ್ಧವಾಗಿದ್ದು, ಆ ಪುಣ್ಯಾತ್ಮನ ದರ್ಪದಿಂದ ಉಳಿದ ಮರಾಟ ಸರದಾರರು ಕೂಡ ಪರಸ್ತ್ರೀಯರನ್ನು ಮಾತೃ ಸಮಾನವಾಗಿ ಎಣಿಸುವ ಪ್ರಚಾರವಿತ್ತು, ಇದೆಲ್ಲ ಜಾಧವರಾಯನಿಗೆ ಗೊತ್ತಿದ್ದರೂ, ಮತ್ತು ಆತನು ಶಿವರಾಯನ ಗಂಭೀರ ಮೂರ್ತಿಯನ್ನು ಅದೇ ನೋಡಿ ಬಂದು ಪೂಜ್ಯ ಬುದ್ಧಿಯನ್ನು ತಾಳಿದ್ದರೂ, ತನ್ನ ಹೆಂಡತಿಯು ಅಲ್ಲಿ ಯಾಕೆ ಇರಬಹುದೆಂಬ ವಿಕಲ್ಪವು ಆತನ ಮನಸ್ಸಿನಲ್ಲಿ ಉತ್ಪನ್ನವಾಗದೆ ಇರಲಿಲ್ಲ; ಆದರೂ ಒಮ್ಮೆಲೆ ಶಿವರಾಯನ ವಿಷಯವಾಗಿ ದೋಷಾರೋಪ ಮಾಡಲು ಆತನ ಮನಸ್ಸು ಒಪ್ಪದಾಯಿತು. ಆತನು ಆ ತರುಣ ಸಿದ್ಧಪುರುಷನನ್ನು ಸೂಕ್ಷ್ಮ ದೃಷ್ಟಿಯಿಂದ ನೋಡಹತ್ತಿದನು. ಮೊದಲು ದರ್ಶನವಾದಾಗ ಸಿದ್ಧಪುರುಷನ ಧ್ವನಿಯ ಮೇಲಿಂದಲೂ, ಆತನ ಅವಯವಗಳ ಸ್ಥಿತಿಯ ಮೇಲಿಂದಲೂ ಈತನು ಸ್ತ್ರೀಯಾಗಿರಬೇಕೆಂಬ ಸಂಶಯವು ಜಾಧವರಾಯನ ಮನಸ್ಸಿನಲ್ಲಿ ಉತ್ಪನ್ನವಾಗಿತ್ತು, ಈಗ ದಿಟ್ಟಿಸಿ ನೋಡುತ್ತಿರುವಾಗ ಆತನಿಗೆ ಮೋರೆಯ ಗುರುತು ಹತ್ತಿದಂತೆ ಆಯಿತು. ಆತನು ಬಹಳ ಹೊತ್ತು ಆಲೋಚಿಸಿ ನೆನಪಿಗೆ ತಂದುಕೊಂಡ ಬಳಿಕ ಆ ಸಿದ್ಧ ಪುರುಷನನ್ನು ಕುರಿತು—"ತಂಗೀ, ನೀನು ಚಂದ್ರರಾವ ಮೋರೆಯ ಮಗಳಾದ ತಾರಾಬಾಯಿಯಲ್ಲವೆ? ನಿನ್ನ ತಂದೆಯನ್ನು ಮಹಾರಾಜರು ಕೊಂದರೆಂಬ ಸಿಟ್ಟಿನಿಂದ ನೀನು ಅವರ ಮೇಲೆ ದೋಷವನ್ನು ಆರೋಪಿಸುವದು ಸ್ವಾಭಾವಿಕವು; ಆದರೆ ಆ ದಿವ್ಯ ವಿಭೂತಿಯ ವಿಷಯವಾಗಿ ನನ್ನ ಮನಸ್ಸಿನಲ್ಲಿಯೂ ಸಂಶಯವನ್ನು ಉತ್ಪನ್ನ ಮಾಡಿದೆಯಲ್ಲ! ನನ್ನ ಹೆಂಡತಿಯು ಮಹಾರಾಜರ ಬಳಿಯಲ್ಲಿ ಇದ್ದರೂ ಚಿಂತೆಯಿಲ್ಲ. ನಾನು ಮಹಾರಾಜರ ಚರಿತ್ರವನ್ನು ಕೇಳಿರುವೆನು. ಚಿಕ್ಕಂದಿನಲ್ಲಿ ನಿನ್ನ ತಂದೆಯ ಸಂಗಡ ನೀನು ವಿಜಾಪುರಕ್ಕೆ ಬರುವಾಗಿನಿಂದ ನಾನು ನಿನ್ನನ್ನು ನೋಡಿದ್ದೇನೆ. ಅಂದಿನಿಂದಲೇ ನಿನ್ನ ಹಟಮಾರಿ ಸ್ವಭಾವವು

ನನಗೆ ಗೊತ್ತಿದೆ; ನೀನೂ, ನಿನ್ನ ಕಕ್ಕನೂ ಎಲ್ಲಿಯೋ ಓಡಿಹೋದ ವರ್ತಮಾನವನ್ನು ನಾನು ಕೇಳಿದ್ದೆನು; ಆದರೆ ನಿನ್ನ ಈ ವೇಷವನ್ನೂ, ನೀನು ಏಕಾಕಿಯಾಗಿ ಈ ಘೋರಾರಣ್ಯದಲ್ಲಿ ವಾಸಿಸುವದನ್ನೂ ನೋಡಿ ನನಗೆ ಬಹಳ ಆಶ್ಚರ್ಯವಾಗುತ್ತದೆ. ನೀನು ಇನ್ನು ಮೇಲೆ ಮಹಾರಾಜರ ವಿಷಯದ ದುರಾಲೋಚನೆಯನ್ನು ಬಿಟ್ಟುಕೊಟ್ಟು, ನನ್ನೊಡನೆ ಮಹಾರಾಜರ ಬಳಿಗೆ ಬಾ. ಅವರು ಬೆನ್ನಿನಲ್ಲಿ ಬಿದ್ದ ತಂಗಿಯಂತೆ ನಿನ್ನ ಸಂರಕ್ಷಣವನ್ನು ಮಾಡುವರು.

ಜಾಧವರಾಯನ ಈ ಮಾತುಗಳನ್ನು ಕೇಳಿ ತಾರಾಬಾಯಿಯು ಗಹಗಹಿಸಿ ನಗುತ್ತ ಆತನನ್ನು ಕುರಿತು—"ಜಾಧವರಾವ, ನಿನ್ನ ಮಾತನ್ನು ಕೇಳಿ ನನಗೆ ನಗೆ ಬರುತ್ತದೆ! ಪಿತೃಘಾತಕೀಯಾದ ಆ ಶಿವಾಜಿಯ ಬಳಿಗೆ ನಾನು ಬರಲಾ? ಆತನು ನನ್ನನ್ನು ಬೆನ್ನಲ್ಲಿ ಬಿದ್ದ ತಂಗಿಯಂತೆ ಸಂರಕ್ಷಿಸುವನೆಯೆ? ಮೀಸೆಹೊತ್ತ ಗಂಡನೆನಿಸುವ ನಿನಗೆ ಹೀಗೆ ಹೇಳಲಿಕ್ಕೆ ನಾಚಿಕೆ ಹ್ಯಾಗೆ ಬರುವದಿಲ್ಲ? ಅಲ್ಲೋ, ನಿನ್ನ ಮರಣವಾರ್ತೆಯನ್ನು ಕೇಳಿ ಜೀವದಿಂದಿರಲಾರದ ಪತಿವ್ರತಾ ಶಿಖಾಮಣಿಯಾದ ನಿನ್ನ ಹೆಂಡತಿಯು, ಶಿವಾಜಿಯ ಬಳಿಯಲ್ಲಿ ಸುಖದಿಂದಿರುವಳೆಂಬದನ್ನು ಕೇಳಿಯೂ ನೀನು ನಿರ್ಲಜ್ಜೆಯಿಂದ ನನಗೆ ಹಿತೋಪದೇಶ ಮಾಡುವಲ್ಲಿ ಪಾಂಡಿತ್ಯವನ್ನು ತೋರಿಸುವೆಯಲ್ಲ! ಗಂಡಸರು ನೀವು ಹೀಗೆ, ಮಾಡಿಕೊಂಡ ಹೆಂಡಿರ ದುರ್ವರ್ತನವನ್ನು ದುರ್ಲಕ್ಷಿಸಿ ಹೇಡಿತನವನ್ನು ತೋರಿಸಿದರೂ, ನಿಜವಾಗಿ ಪುರುಷನೆನಿಸುವ ಚಂದ್ರರಾಯನ ಮಗಳಾದ ತಾರೆಯು ನಾನು, ಪಿತೃಘಾತಕಿಯಾದ ಶಿವಾಜಿಯ ದುರ್ವರ್ತನವನ್ನು ಎಂದೂ ದುರ್ಲಕ್ಷಿಸಲಾರೆನು! ತಂದೆಯ ಮರಣದ ಸೇಡಿಗಾಗಿ ನಾನು ಶಿವಾಜಿಯನ್ನು ಕೊಲ್ಲುವೆನು, ಇಲ್ಲವೆ ಅವನ ಕಾಲಲ್ಲಿ ನನ್ನ ಪ್ರಾಣವನ್ನಾದರೂ ಕೊಡುವೆನು. ಇನ್ನು ಮೇಲೆ ನೀವು ಗಂಡಸರೆಲ್ಲರು ಮೀಸೆ ಬೋಳಿಸಿಕೊಳ್ಳಿರಿ. ಎರಡನೆಯವರ ಮನಸ್ಸನ್ನು ಒಲಿಸಿಕೊಳ್ಳುವುದಕ್ಕಾಗಿ ನಿಮ್ಮ ಹೆಂಡಿರನ್ನು ಅವರ ಮಗ್ಗ........ ಆದರೆ, ಜಾಧವರಾವ, ನಾನು ಇನ್ನು ಹೆಚ್ಚಿಗೆ ಮಾತಾಡುವದಿಲ್ಲ ನೀನು ಇಲ್ಲಿಂದ ಹೊರಟುಹೋಗು. ನಿನ್ನಂಥ ಅಭಿಮಾನಶೂನ್ಯನಾದ ಹೇಡಿಯ ನೆರಳು ಸಹ ನನಗೆ ಬೇಡ. ನೀನು ಹೀಗೆಯೇ ಶಿವಾಜಿಯ ಬಳಿಗೆ ಹೋಗಿ ನೋಡಿ ಬಾ. ಅಲ್ಲಿ ನಿನ್ನ ಹೆಂಡತಿಯು ಚಕ್ಕಂದದಿಂದ ಇರದಿದ್ದರೆ, ನನ್ನನ್ನು ಇಲ್ಲಿಯೇ ತುಂಡರಿಸಿ ಚಲ್ಲು. ಶಿವಾಜಿಯ ದುರ್ಗುಣಗಳಿಗಾಗಿ ಅವನಿಗೆ ತಕ್ಕ ಶಾಸನವನ್ನು ಮಾಡಲು ನಾನು ಹಗಲಿರುಳು ಯತ್ನಿಸುವೆನು. ನೀನೂ ಆ ದುಷ್ಟನ ದುರ್ಗುಣಗಳನ್ನು ಪ್ರತ್ಯಕ್ಷ ನೋಡಿ ಬಾ. ನಿನ್ನ ಮನಸ್ಸಿನ ನಂಬಿಗೆಯಾದರೆ ನನಗೆ ಸಹಾಯ ಮಾಡು ಅನ್ನಲು, ಜಾಧವರಾಯನು ಮತ್ತೆ ಸಂಶಯಗ್ರಸ್ತನಾದನು; ತಾರಾಬಾಯಿಯ ಮಾತು ಆತನಿಗೆ ಮತ್ತೆ ನಿಜವಾಗಿ ತೋರಹತ್ತಿತು. ಆತನು ತಾರಾಬಾಯಿಯನ್ನು ಕುರಿತು–

ಜಾಧವರಾಯ–ನನ್ನ ಹೆಂಡತಿಯು ಮಹಾರಾಜರ ಬಳಿಯಲ್ಲಿ ಇರುವದು ನಿಶ್ಚಯವೆ? ಇನ್ನೂ ಅವಳು ಅಲ್ಲಿಯೇ ಇರುವಳೆಯೆ?

ತಾರಾಬಾಯಿ–ಜಾಧವರಾವ, ನಾನು ಇನ್ನು ನಿನ್ನ ಸಂಗಡ ಹೆಚ್ಚಿಗೆ ಮಾತಾಡುವದಿಲ್ಲ. ಅಲ್ಲಿ ಅವಳು ಇರುವಳೋ ಇಲ್ಲವೋ ಎಂಬದನ್ನು ನೀನು ನೋಡಿ ಬಾ ಹೋಗು. ಇಲ್ಲವೆ ಶಿವಾಜಿಯ ಸೇವೆಯನ್ನು ಮಾಡುತ್ತ ನೀನೂ ನಿನ್ನ ಹೆಂಡತಿಯೂ ಸುಖದಿಂದ ಅವನ ಬಳಿಯಲ್ಲಿ

ಇರಲೊಲ್ಲಿರೇಕೆ? ಅದರಿಂದ ನನಗಾಗುವ ಲಾಭಹಾನಿಗಳು ಅಷ್ಟರಲ್ಲಿಯೇ ಇರುವವು. ನನಗೆ ಗೊತ್ತಿದ್ದ ನಿಜವಾದ ಸಂಗತಿಯನ್ನು ನಿನಗೆ ಹೇಳಿದೆನು. ನನ್ನ ತಂದೆಯು ಶಿವಾಜಿಯ ಗಂಟನ್ನೇನೂ ತಿಂದಿದ್ದಿಲ್ಲ. ತನ್ನ ಪುಂಡಾಟಿಕೆಯಲ್ಲಿ ಸೇರಲಿಲ್ಲೆಂತಲೂ, ತನ್ನ ಹಿಂದೂಪದ ಬಾದಶಾಹಿಯನ್ನು ಒಪ್ಪಿಕೊಳ್ಳಲಿಲ್ಲವೆಂತಲೂ ಶಿವಾಜಿಯು ನನ್ನ ತಂದೆಯನ್ನು ಕೊಲ್ಲಿಸಿದನು. ಉತ್ತಮ ಪದಾರ್ಥವು ದೊರೆತರೆ ಯಾವನು ಇಟ್ಟುಕೊಳ್ಳಲಿಕ್ಕಿಲ್ಲ? ಸುಂದರ ತರುಣಿಯಾದ ನಿನ್ನ ಹೆಂಡತಿಯನ್ನು ಶಿವಾಜಿಯು ಇಟ್ಟುಕೊಂಡದ್ದೇನಾಶ್ಚರ್ಯವು! ಆತನ ದುರುಳತನದ ಲೋಭಕ್ಕೆ ನೀನು ಅಡ್ಡಾಗಿ ಹೋದರೆ, ಆ ಸ್ವಾರ್ಥಪರಾಯಣನಾದ ಶಿವಾಜಿಯು ನಿನ್ನನ್ನು ಘಾತಿಸಲಿಕ್ಕೆ ಸಹ ಹಿಂದೆಮುಂದೆ ನೋಡಲಿಕ್ಕಿಲ್ಲ. ಶಿವಾಜಿಯು ಹೇಳಿ ಕೇಳಿ ಕಳ್ಳರ ನಾಯಕನಲ್ಲವೆ? ಅಂಥವನ ಮೇಲೆಯೇ ಜನರ ವಿಶ್ವಾಸವು! ಸರಿ, ಸರಿ! ಈಗಿನ ಕಾಲವೇ ಇಂತಹದಿರುವದು. ವಿಶ್ವಾಸಘಾತದಿಂದ ಒಬ್ಬನು ಮತ್ತೊಬ್ಬನನ್ನು ಕೊಂದರೂ ಈಗ ಅಪರಾಧವೆನಿಸದು. ಪ್ರಸಂಗದಲ್ಲಿ ಹೆಂಗಸರನ್ನು ಕೊಲ್ಲಲಿಕ್ಕೂ ನಿಮ್ಮಂಥವರು ಹೇಸುವಹಾಗಿಲ್ಲ. ಒಬ್ಬನು ಮತ್ತೊಬ್ಬನ ಹೆಂಡತಿಯನ್ನು ಚೆಲುವೆಯೆಂದು ತನ್ನ ಬಳಿಯಲ್ಲಿ ಇಟ್ಟುಕೊಂಡರೂ, ಆಕೆಯು ಆಪ್ತೇಷ್ಟರಿಗೆ, ಅದೇಕೆ ಪ್ರತ್ಯಕ್ಷ ಗಂಡನಿಗೆ ಕೂಡ ವ್ಯತ್ಯಾಸವೆನಿಸುವದಿಲ್ಲ. ಅವರು ಬುದ್ಧಿಪೂರ್ವಕವಾಗಿ ಆ ಮಾತನ್ನು ದುರ್ಲಕ್ಷಿಸುವರು! ಅಹಹ! ಎಂಥ ದಿವಸಗಳು ಬಂದವಿವು! ಇಂತ ದಿವಸಗಳು ಬಂದಾವೆಂದು ನಮ್ಮ ಪೂರ್ವಜರ ಕನಸು ಮನಸ್ಸಿನಲ್ಲಿ ಸಹ ಬಂದಿರಲಿಕ್ಕಿಲ್ಲ. ಮೂರ್ಖಾ, ಜಾಧವರಾಯಾ, ನೀನು ಎಷ್ಟು ಅಭಿಮಾನ ಶೂನ್ಯನಾದೆಯಲ್ಲ! ನಿನ್ನ ಹೆಂಡತಿಯನ್ನು ಶಿವಾಜಿಯು ಇಟ್ಟುಕೊಂಡಿರಲು,..... ಎಂದು ಇನ್ನೂ ಏನೇನೋ ನುಡಿಯುತ್ತಿರಲು, ಬೈರಾಗಿಣಿಯ ರೂಪವನ್ನು ಧರಿಸಿದ್ದ ಹೈಮವತಿಯು ಅಕಸ್ಮಾತ್ತಾಗಿ ಅವರ ಮುಂದೆ ಬಂದು ನಿಂತುಕೊಂಡು—''ದುಷ್ಟಳಾದ ತಾರೆಯೇ, ಯಾರ ವಿಷಯವಾಗಿ ಇಂಥ ಅಮಂಗಲ ಮಾತುಗಳನ್ನಾಡುವೆ? ಆ ಪುಣ್ಯಾತ್ಮನ ಮೇಲೆ ಹೀಗೆ ದೋಷವನ್ನು ಆರೋಪಿಸಲಿಕ್ಕೆ ನಿನ್ನ ನಾಲಿಗೆಯಾದರೂ ಹ್ಯಾಗೆ ಅಲ್ಲಾಡುತ್ತದೆ? ಅಲ್ಲಿಯೇ ಅದು ಹುಳಿತುಹೋಗಬಾರದೆ? ಮಹಾರಾಜರೂ, ಅವರ ತಾಯಂದಿರಾದ ಜೀಜಾಬಾಯಿ ಸಾಹೇಬರೂ ನಿನ್ನ ವಿಷಯವಾಗಿ ಹಗಲು ರಾತ್ರಿ ಚಿಂತಿಸುತ್ತ, ನಿನ್ನ ಶೋಧಕ್ಕಾಗಿ ನಾಲ್ಕೂ ಕಡೆಗೆ ಜನರನ್ನು ಕಳಿಸಿ ಹುಡುಕಿಸುತ್ತಿರಲು, ನಿನ್ನ ಅಕ್ಕಸವು ದಿನದಿನಕ್ಕೆ ಹೆಚ್ಚುತ್ತಿರುವದಲ್ಲ! ಮಹಾರಾಜರ ಹಿತವನ್ನು ಮಾಡುವ ಉತ್ಸಾಹದಿಂದ ಇಂದೇ ಪ್ರತಾಪಗಡದಿಂದ ಬಂದಿರುವ ನನ್ನ ಪತಿಯ ಮನಸ್ಸನ್ನು ತಿರುಗಿಸಿ, ನಿನ್ನ ಕಡೆಗೆ ಎಳೆದುಕೊಳ್ಳಲು ನೀನು ಯತ್ನಿಸುವೆಯಾ? ಇಂದಿಗೆ ನಿನ್ನ ದುಷ್ಟತನದ ಪರಮಾವಧಿಯಾಯಿತು; ಎಂದು ತಡತಡ ನುಡಿದಳು.

ಈ ಮೇರೆಗೆ ಹೈಮವತಿಯು ಸಂತಾಪದಿಂದ ಆಡಿದ ಮಾತುಗಳನ್ನು ಕೇಳಿ ತಾರೆಯು ಚಿಪ್ಪಾಗಿ ಸುಮ್ಮನೆ ಕುಳಿತುಕೊಂಡಳು. ಕೆಲಹೊತ್ತಿನ ಮೇಲೆ ಆಕೆಯ ಆಶ್ಚರ್ಯದ ಭರವು ಕುಗ್ಗಲು, ಆಕೆಯು ಗಹಗಹಿಸಿ ನಗುತ್ತ ಹೈಮವತಿಯನ್ನು ಕುರಿತು—''ನಾನು ಶಿವಾಜಿಯ ಸೇಡು ತೀರಿಸಿಕೊಳ್ಳುವದಕ್ಕಾಗಿ ಮಾಡಿದ ಉಪಾಯಗಳೆಲ್ಲ ವ್ಯರ್ಥವಾಗುತ್ತಿರುವದು ನನ್ನ

ದುರ್ದೈವವೇ ಸರಿ. ಗುಹೆಯಲ್ಲಿಯ ಮದ್ದಿನ ಚೀಲಗಳಿಗೆ ಕೊಳ್ಳಿಕೊಟ್ಟು ಶಿವಾಜಿಯ ಪ್ರಾಣಹರಣ ಮಾಡ ಬೇಕೆಂದು ಸಿದ್ಧವಾಗಿರುವಾಗ, ಚಾಂಡಾಲಿನಿಯು ನೀನು ವಿಘ್ನಮಾಡಿದೆ. ನಿನ್ನ ಮೇಲಿನ ಆ ಸಿಟ್ಟು ತೀರಿಸಿಕೊಳ್ಳವದಕ್ಕಾಗಿ ಈಗ ನಿನ್ನ ಗಂಡನ ಮನಸ್ಸನ್ನು ಕೆಡಿಸುವ ಯತ್ನನಡಿಸಿರಲು, ನೀನು ಮತ್ತೆ ಎದುರಿಗೆ ಬಂದು ನಿಂತೆ! ಆದರೂ ನನ್ನ ನಿಶ್ಚಯದಲ್ಲಿ ಅಂತರವಾಗಲಿಕ್ಕಿಲ್ಲ. ನಾನು ಬದುಕಿರುವವರೆಗೆ ಶಿವಾಜಿಯ ಪ್ರಾಣಹರಣಕ್ಕಾಗಿ ಯತ್ನಿಸತಕ್ಕವಳೇ ಸರಿ. ಹೋಗು, ಗಂಡನು ಸತ್ತನೆಂದು ತಿಳಿದು ನೀನು ಎರಡನೆಯವರ....'' ಎಂದು ನುಡಿಯುತ್ತಿರಲು, ಆಕೆಯ ಮನಸ್ಸಿಗೆ ಏನೋ ಹೊಳೆದು, ಆಕೆಯು ಸುಮ್ಮನಾದಳು. ಜಾಧವರಾಯನು ತನ್ನ ಹೆಂಡತಿಯ ವಿಲಕ್ಷಣರೂಪವನ್ನು ನೋಡಿ ಬೆರಗಾದನು; ತನ್ನ ಹಿಂದೆಯೇ ತನ್ನ ಹೆಂಡತಿಯು ಬಂದದ್ದೂ ಆತನಿಗೆ ಆಶ್ಚರ್ಯಕರವಾಗಿ ತೋರಿತು. ಆಕೆಯ ಕ್ಷೀಣಶರೀರ, ನಿಸ್ತೇಜವಾದ ಮುಖ, ಉದಾಸೀನ ಭಾವ ಇವು ಜಾಧವರಾಯನ ಮನಸ್ಸಿನಲ್ಲಿ ಕನಿಕರವನ್ನುಂಟುಮಾಡಿದವು. ತನ್ನ ವಿರಹ ದುಃಖದಿಂದ ಅತ್ಯಂತ ಕ್ಷೀಣದೆಸೆಯನ್ನು ಹೊಂದಿದ ಹೆಂಡತಿಯ ಮೂರ್ತಿಯನ್ನು ನೋಡಿದಕೂಡಲೆ, ಆತನ ಸಂಶಯ ಪಿಶಾಚವು ಬಿಟ್ಟುಹೋಯಿತು. ತಾರೆಯ ಸುಳ್ಳು ಆರೋಪದಿಂದ ಶಿವಾರಾಯನಂಥ ದಿವ್ಯ ವಿಭೂತಿಯ ವಿಷಯವಾಗಿ ಕುಶಂಕೆ ತಾಳಿದ್ದಕ್ಕೆ ಆತನಿಗೆ ಪಶ್ಚಾತ್ತಾಪವಾಯಿತು. ತನ್ನ ಹೊಟ್ಟೆಯೊಳಗಿಂದ ಉಕ್ಕಿಬರುವ ಪ್ರೇಮೋದಧಿಯ ತೆರೆಗಳ ತಾಕಲಾಟದಿಂದ ಮುಂದುಗಾಣದೆ ಆತನು ಸುಮ್ಮನೆ ಕುಳಿತುಕೊಂಡನು. ತನ್ನ ಮುಂದೆ ತಲೆಬಾಗಿಸಿಕೊಂಡು ಕಣ್ಣೀರು ಸುರಿಸುತ್ತ ನಿಂತುಕೊಂಡಿದ್ದ ಹೆಂಡತಿಯನ್ನು ತಬ್ಬಿಕೊಂಡು ಸಂತಯಿಸುವ ಅರಿವು ಕೂಡ ಆತನಿಗೆ ಉಳಿದಂತೆ ತೋರಲಿಲ್ಲ. ಆತನು ಅತ್ಯಂತ ವಾತ್ಸಲ್ಯ ಪೂರ್ಣವಾದ ದೃಷ್ಟಿಗಳಿಂದ ಹೆಂಡತಿಯನ್ನು ನೋಡುತ್ತ ಕುಳಿತುಕೊಂಡು ಬಿಟ್ಟಿದ್ದನು. ಇತ್ತ ಹೈಮವತಿಯು ಆನಂದಸಾಗರದಲ್ಲಿ ಗುಟಕರಿಸುತ್ತಿದ್ದದ್ದರಿಂದ ಪತಿಯೊಡನೆ ಮಾತಾಡಲಿಕ್ಕೂ ಆಕೆಗೆ ಆಸ್ಪದವು ದೊರೆಯದಾಯಿತು. ಹೊರಟುಹೋಗಿದ್ದ ಆಕೆಯ ಪ್ರಾಣವು ಮತ್ತೆ ದೇಹವನ್ನು ಪ್ರವೇಶಿಸಿದ ಹಾಗಾಯಿತೆಂದು ಹೇಳಬಹುದು. ಆಕೆಯ ದೇಹಕಾಂತಿಯು ಹೆಚ್ಚಿತು; ಮುಖಕ್ಕೆ ಕಳೆಯೇರಿತು; ಆಶಾವಲ್ಲಿಯು ಹೊಸ ಕುಡಿಗಳನ್ನು ಬಿಡತೊಡಗಿತು. ನವ ವಧುವು ಪತಿಯ ಪ್ರಥಮ ಸಮಾಗಮವನ್ನು ಹೊಂದಿದಾಗಿನ ಸೌಕುಮಾರ್ಯ ಸ್ಥಿತಿಯನ್ನು ಆಕೆಯು ಈಗ ಪಡೆದಳು. ಪತಿವ್ರತೆಯರಿಗೆ ಪತಿಯ ಸಮಾಗಮ ಸುಖಕ್ಕಿಂತ ಹೆಚ್ಚಿನ ಸುಖವೇ ಇಲ್ಲವೆನ್ನುವದನ್ನು ವ್ಯಕ್ತಮಾಡುವಂತೆ ಆಕೆಯು ಸುಮ್ಮನೆ ನಿಂತುಬಿಟ್ಟಿದ್ದಳು.

ಹೀಗೆ ಆ ತರುಣ ದಂಪತಿಗಳು ತಮ್ಮ ಅಪರೂಪದ ಅಲಭ್ಯ ಸಮಾಗಮದ ಸುಖ ಸಾಮ್ರಾಜ್ಯದಲ್ಲಿ ಲೋಲಾಡುತ್ತ ಕಾಲಹರಣ ಮಾಡುತ್ತಿರಲು. ಜಾಧವರಾಯನು ಗದ್ಗದ ಕಂಠದಿಂದ ತನ್ನ ಹೆಂಡತಿಯನ್ನು ಕುರಿತು—''ಪ್ರಿಯೇ, ನಿನಗೆ ಈ ವೈರಾಗ್ಯದ ವೇಷವೇಕೆ? ಈ ತಾರುಣ್ಯದಲ್ಲಿ ನಿನ್ನ ಸುಂದರ ಶರೀರವನ್ನು ಭಸ್ಮಮಯವಾಗಿ ಮಾಡಬಹುದೆ?'' ಎಂದು

ಕೇಳಲು, ಹೈಮವತಿಯು ಕಣ್ಣುಗಳಲ್ಲಿ ಆನಂದಭಾಷ್ಪಗಳನ್ನು ತುಂಬಿಕೊಂಡು—''ಇದೇನು ಕೇಳುವದು? ಪ್ರಾಣವು ಹೋದಬಳಿಕ ಶರೀರವು ಭಸ್ಮವಲ್ಲದೆ ಮತ್ತೇನು ಆಗುವದು? ತಮ್ಮ ವಿಷಯದ ದುರ್ವಾರ್ತೆಯನ್ನು ಕೇಳಿದಬಳಿಕ, ವೈರಾಗ್ಯದಿಂದ ತೀರ್ಥಯಾತ್ರೆಗಳನ್ನು ಮಾಡುತ್ತ ದೇಹವನ್ನು ಸವಿಸುವದಲ್ಲದೆ, ಮತ್ತೇನು ಮಾಡಬೇಕು? ತಮ್ಮ ಸನ್ನಿಧಿಯಲ್ಲಿ ಇಂದು ನನ್ನನ್ನು ಸಕಲ ಸೌಭಾಗ್ಯಗಳೂ, ಸುಖಗಳೂ ಆಶ್ರಮಿಸಿದವು; ಇಂದಿಗೆ ನಾನು ಕೃತಾರ್ಥಳಾದೆನು. ಮಂಗಲಕರವಾದ ನೂತನ ಜನ್ಮವನ್ನು ಹೊಂದಿದೆನು; ನನ್ನ ಸಕಲ ಮನೋರಥಗಳೂ ಕೈಗೂಡಿದವು'' ಎಂದು ಪತಿಯ ಎದುರಿನಲ್ಲಿ ಕೈಜೋಡಿಸಿ ನಿಂತುಕೊಂಡಳು. ಆಗ ಜಾಧವರಾಯನು ಪ್ರೇಮಭರದಿಂದ ಹೆಂಡತಿಯನ್ನು ತಬ್ಬಿಕೊಂಡು—''ಇಂಥ ಮಂಗಲ ಮೂರ್ತಿಯ ವಿಷವಾಗಿಯೂ ನಮ್ಮ ಆ ಚಂದ್ರರಾಯನ ಮಗಳು ಸಂಶಯದ ಬೀಜವನ್ನು ನನ್ನಲ್ಲಿ ಬಿತ್ತಿದಳಲ್ಲವೆ? ಮಹಾರಾಜರ ವಿಷಯದಲ್ಲಿಯೂ ಸಂಶಯಗ್ರಸ್ತವಾದ ನನ್ನ ಹೃದಯವನ್ನು ಸುಟ್ಟುಬಿಡುವದೇ ಯೋಗ್ಯವು. ಪ್ರಿಯೇ, ಹೀಗಾಗಲಿಕ್ಕೆ ನಿನ್ನ ವಿಷಯವಾಗಿ ನನ್ನಲ್ಲಿ ವಾಸಿಸುತ್ತಿರುವ ಅತ್ಯಂತವಾದ ಪ್ರೇಮದ ಪ್ರಭಾವವಲ್ಲದೆ ಮತ್ತೇನು ಕಾರಣವಿರುವದು ಹೇಳು! ನೀನು ಮಹಾತ್ಮನಾದ ಶಿವಪ್ರಭುವಿನ ಬಳಿಯಲ್ಲಿದ್ದೆಯೆಂದು ಆ ದುಷ್ಟ ತಾರೆಯು ಹೇಳಿದಳು; ಆದರೆ ಅದು ನಿಜವೆ? ಅದು ನಿಜವಿದ್ದ ಪಕ್ಷದಲ್ಲಿ ಇಂದು ನೀನು ಇಲ್ಲಿಗೆ ಹ್ಯಾಗೆ ಬಂದೆ? ಅತ್ಯಂತ ಕೃಶವಾಗಿ ಬಿಳುಪೇರಿರುವ ಈ ನಿನ್ನ ದೇಹವನ್ನು ನೋಡಿದಾಗಲೇ, ತಾರಾಬಾಯಿಯ ಮಾತಿನಿಂದ ಉತ್ಪನ್ನವಾಗಿದ್ದ ನನ್ನ ಸಂಶಯವೆಲ್ಲ ದೂರವಾಯಿತು,'' ಅನ್ನಲು ಹೈಮವತಿಯು—''ಶಿವಶಿವ! ನೀತಿಯ ಮೂರ್ತಿಯಾದ ಶಿವರಾಯನ ವಿಷಯವಾಗಿಯೂ ತಮ್ಮಲ್ಲಿ ಸಂಶಯವು ಉತ್ಪನ್ನವಾಯಿತೆ? ಪ್ರಿಯಕರಾ, ನಿಮ್ಮ ಅರ್ಧಾಂಗವಾಗಿರುವ ಹೈಮವತಿಯ ಹೃದಯದ ಸ್ವರೂಪ ಸರ್ವಸ್ವವು ಇನ್ನೂ ತಮಗೆ ಗೊತ್ತಾಗಿರುವದಿಲ್ಲವೆಂದ ಹಾಗಾಯಿತು! ಇರಲಿ, ಕಾಲ ಮಹಿಮೆಯಿಂದ ಅಶಕ್ಯ ಸಂಗತಿಯೂ ಶಕ್ಯವಾಗಿಯೂ ತೋರುತ್ತದೆ. ಇದರಲ್ಲಿ ಹೆಸರಿಡತಕ್ಕ ಭಾಗವೇನು ಇರುವದಿಲ್ಲ'' ಎಂದು ನುಡಿದು, ತಾನು ಪಠಾಣರ ಕೈಯಿಂದ ಹ್ಯಾಗೆ ಪಾರಾದೆನು, ತಾರೆಯ ದರ್ಶನವು ತನಗೆ ಹ್ಯಾಗಾಯಿತು, ಮಹಾರಾಜರು ಗಂಡಾಂತರದಿಂದ ಹ್ಯಾಗೆ ಪಾರಾದರು ಎಂಬಿವೇ ಮೊದಲಾದ ಸಂಗತಿಗಳನ್ನು ಒಂದುಳಿಯದಂತೆ ಹೇಳಿದಳು. ಆಮೇಲೆ ಆಕೆಯು ತನ್ನ ಪತಿಯನ್ನು ಕುರಿತು— ''ಮಹಾರಾಜರು ಈಶ್ವರಾಂಶರಾದರೂ, ಪರಗೃಹವಾಸವು ಪತಿವ್ರತೆಯರಿಗೆ ನಿಷೇಧವಲ್ಲವೆ? ಈ ಕೆಟ್ಟ ಪರಗೃಹವಾಸ ದೋಷವು ಲೋಕಮಾತೆಯಾದ ಜಾನಕಿಯನ್ನೂ ಬಿಡಲಿಲ್ಲವೆಂದ ಬಳಿಕ ನಮ್ಮಂತ ಕ್ಷುದ್ರರ ಪಾಡೇನು? ಲೋಕನಿಂದೆಯ ವಿಷಯವು ಬಹುಸೂಕ್ಷ್ಮವಾಗಿರುವದರಿಂದ, ಗಂಡಸಾಗಲಿ–ಹೆಂಗಸಾಗಲಿ ತನ್ನ ನೆರಳಿಗೆ ತಾನು ಅಂಜಿ ನಡೆಯುವದು ಯೋಗ್ಯ ವಾಗಿರುವದು. ಇದನ್ನು ಲಕ್ಷ್ಯದಲ್ಲಿಟ್ಟು, ನಾನು ಜೀಜಾಬಾಯಿ ಸಾಹೇಬರಿಗೆ ತೀರ್ಥಯಾತ್ರೆ ಗಳಿಗಾಗಿ ಹೊರಡಲು ಒಪ್ಪಿಗೆಯನ್ನು ಕೇಳಿಕೊಂಡೆನು; ಆದರೆ ಆ ಸಾಧ್ವಿಯು ಅದಕ್ಕೆ

ಒಪ್ಪಿಕೊಳ್ಳದೆ—''ನೀನು ಎಲ್ಲಿಯೂ ಹೋಗಬೇಡ, ನನ್ನ ಬಳಿಯಲ್ಲಿರುವದರಿಂದಲೇ ನಿನ್ನ ಕಲ್ಯಾಣವಾಗುವದು, ನಿನ್ನ ಪತಿಯ ಶೋಧಕ್ಕಾಗಿ ಶಿವಬಾನು ಜನರನ್ನು ಕಳಿಸಿರುವನು. ಇಂಥ ತಾರುಣ್ಯದಲ್ಲಿ ತೀರ್ಥಯಾತ್ರೆಯ ನೆವದಿಂದ ಸಿಕ್ಕಹಾಗೆ ತಿರುಗುವದು ಯೋಗ್ಯವಲ್ಲ'' ಎಂದು ನನ್ನನ್ನು ಬೋಧಿಸಿದರು. ಅವರ ಬೋಧವು ಯಥಾರ್ಥವಾದದ್ದೆಂದು ನಾನು ಹೇಳುವ ಕಾರಣವಿಲ್ಲ; ಆದರೆ ನನ್ನ ಗತಿಯು ''ಇತ್ತ ಬಿದ್ದರೆ ಕೆರೆ, ಅತ್ತ ಬಿದ್ದರೆ ಬಾವಿ'' ಎನ್ನುವಂತೆ ಆಗಿ, ನಾನು ತಳಮಳಿಸುತ್ತಿದ್ದೆನು; ಅಷ್ಟರಲ್ಲಿ ನೀವು ಹೇಜೀಬನ ವೇಷದಿಂದ ಮಹಾರಾಜರ ಬಳಿಗೆ ಬಂದದ್ದು ಅಕಸ್ಮಾತ್ತಾಗಿ ನನಗೆ ಗೊತ್ತಾಯಿತು. ಆಗ ನಾನು ಯಾರಿಗೂ ಗೊತ್ತಾಗದಂತೆ ನನ್ನ ಪ್ರಯಾಣದ ಸಿದ್ಧತೆಯನ್ನು ಮಾಡಿಕೊಂಡು ನೀವು ಹೊರಡುವ ಹಾದಿಯನ್ನು ನೋಡುತ್ತಿದ್ದೆನು. ನೀವು ಕುದುರೆಯನ್ನು ಹತ್ತಿದಕೂಡಲೆ ನಾನೂ ಹೊರಟೆನು. ಪ್ರತಾಪಗಡದಲ್ಲಿ ಯಾರಿಗೂ ನಾನು ಹೊರಟುಬಂದ ಸುದ್ದಿಯು ಗೊತ್ತಿರುವದಿಲ್ಲ. ನೀವು ಕುದುರೆಯ ಮೇಲಿಂದ ಎಷ್ಟು ಸಾವಕಾಶವಾಗಿ ಬಂದರೂ, ನಿಮ್ಮ ಬೆನ್ನುಹತ್ತಿ ಬರಲಿಕ್ಕೆ ನನಗೆ ತಡವೇ ಆಯಿತು; ಆದರೆ ನಾನು ತಮ್ಮ ಸುಳವನ್ನು ಬಿಡದೆ ಈಗ  ಸನ್ನಿಧಿಗೆ ಬಂದಿರುವೆನು. ಜೀಜಾಬಾಯಿಸಾಹೇಬರು ಎಷ್ಟು ಚಡಪಡಿಸುತ್ತಿರಬಹುದು, ಅವರು ನನಗೆ ಎಷ್ಟು ಸಿಟ್ಟು ಮಾಡುತ್ತಿರಬಹುದು! ಹಹ! ಆ ಮಹಾತ್ಮಳ ಹೃದಯವು ಎಷ್ಟು ಕೋಮಲವಾದದ್ದು, ಎಷ್ಟು ಉದಾತ್ತವಾದದ್ದು!!

ಹೆಂಡತಿಯ ಈ ಮಾತುಗಳನ್ನು ಕೇಳಿ ಜಾಧವರಾಯನು ಸಮಾಧಾನಪಟ್ಟು ಆಕೆಗೆ ತನ್ನ ವೃತ್ತಾಂತವನ್ನು ಹೇಳಿದನು. ನಾನು ಪಠಾಣರ ಹೊಡತದಿಂದ ನೆಲಕ್ಕೆ ಬಿದ್ದಬಳಿಕ ಒಬ್ಬ ಉದಾರ ಗೃಹಸ್ಥನ ಉಪಾಚಾರದಿಂದ ಎಚ್ಚತ್ತು, ಹ್ಯಾಗೆ ನೆಟ್ಟಗಾದೆನು, ಮಹಾರಾಜರಿಗೆ ಸಹಾಯ ಮಾಡುವದಕ್ಕಾಗಿ ಅಫಜುಲಖಾನನ ಹೊಟ್ಟೆಯೊಳಗಿನ ಮಾತನ್ನು ಹ್ಯಾಗೆ ತಿಳಿದು ಕೊಂಡೆನು, ಆ ಮಾತನ್ನು ಮಹಾರಾಜರಿಗೆ ಹೇಳುವದಕ್ಕಾಗಿ ಹೇಜೀಬನ ವೇಷದಿಂದ ಮಹಾರಾಜರ ಬಳಿಗೆ ಹ್ಯಾಗೆ ಹೋದೆನು ಎಂಬ ಸಂಗತಿಗಳನ್ನು ಸಾದ್ಯಂತವಾಗಿ ಹೇಳಿದನು. ಹೀಗೆ ಆ ತರುಣ ದಂಪತಿಗಳು ಪರಸ್ಪರರ ದರ್ಶನಯೋಗದಿಂದ ಆನಂದದಲ್ಲಿ, ಪರಸ್ಪರರು ತಮ್ಮ ತಮ್ಮ ವೃತ್ತಾಂತ ವನ್ನು ಹೇಳುತ್ತಿರಲು, ತಾರಾಬಾಯಿಯ ವಿಷಯವಾಗಿ ಸ್ವಾಭಾವಿಕ ವಾಗಿಯೇ ಅವರ ದುರ್ಲಕ್ಷ ವಾಯಿತು. ಹೈಮವತಿಯು ಬಂದದ್ದನ್ನು ನೋಡಿದಕೂಡಲೆ ತಾರೆಯ ಚಿತ್ತವು ಕ್ಷೋಭಿಸಿದಂತೆ ಆದ್ದರಿಂದ, ಆಕೆಯ ಮೈಮೇಲಿನ ಎಚ್ಚರವು ತಪ್ಪಿತು. ಹಿಂದಕ್ಕೆ ಮಹಾರಾಜರ ಬಳಿಯಿಂದ ಓಡಿಹೋದಂತೆ ಈಗಾದರೂ ಆಕೆಯು ಚಟ್ಟನೆ ಚೀರಿ, ಚಿಗರೆಯಂತೆ ಬಹು ಚಪಲಗತಿಯಿಂದ ಓಡಿಹೋಗಿದ್ದಳು. ಅದು ಆ ದಂಪತಿಗಳಿಗೆ ಗೊತ್ತಾಗಿದ್ದಿಲ್ಲ. ತಾರಾಬಾಯಿಯು ಸಾಮಾನ್ಯ ಯೋಗ್ಯತೆಯ ಹೆಣ್ಣು ಮಗಳಿದ್ದಿಲ್ಲ, ದೊಡ್ಡ ದೊಡ್ಡ ಗಂಡಸರಲ್ಲಿಯೂ ಇರದಂಥ ನಿರ್ಧಾರವು ಆಕೆಯಲ್ಲಿ ಕಾಣಿಸುತ್ತಿತ್ತು, ಅತ್ಯಂತವಾದ ಪಿತೃಭಕ್ತಿಯಿಂದ ಆಕೆಯು ತನ್ನ ತಂದೆಯ ಮರಣದ ಸೇಡು ತೀರಿಸಿಕೊಳ್ಳುವದಕ್ಕಾಗಿ ತನ್ನ ಪ್ರಾಣದ ಆಶೆಯನ್ನೂ ಬಿಟ್ಟಿದ್ದಳು. ಮಹಾರಾಜರ ಸೇಡು ತೀರಿಸಿಕೊಳ್ಳುವದಕ್ಕಾಗಿಯೇ

ಆಕೆಯು ಬದುಕಿ ಇದ್ದಳಲ್ಲದೆ, ಆಕೆಯ ಪ್ರಾಣಧಾರಣಕ್ಕೆ ಬೇರೆ ಕಾರಣವೇನು ಇದ್ದಿಲ್ಲ. ಆಕೆಯ ಈ ಸ್ಥಿತಿಯನ್ನು ಚನ್ನಾಗಿ ಅರಿತಿದ್ದ ಹೈಮವತಿಯು, ಆಕೆಯ ದುರವಸ್ಥೆಗಾಗಿ ಮರಮರನೆ ಮರುಗಿದಳು. ಜಾಧವರಾಯನಿಗೂ ಬಹಳ ವ್ಯಸನವಾಯಿತು. ಚಂದ್ರರಾವ ಮೋರೆಯ ಮಗಳಿಗೆ ಇಂಥ ದುರವಸ್ಥೆಯು ಪ್ರಾಪ್ತವಾಗಬೇಕೋ, ಎಂದು ಅವರು ದೈವವನ್ನು ಹಳಿದರು. ಆದರೆ ಬರಿಯ ವ್ಯಸನಪಟ್ಟು ಅವರು ಏನು ಮಾಡುವಹಾಗಿದ್ದರು? ತಾರೆಯ ಬುದ್ಧಿಯು ಭ್ರಂಶವಾಗಿ ಹೋಗಿತ್ತು. ಆಗಾಗ್ಗೆ ಆಕೆಗೆ ಹುಚ್ಚು ಹಿಡಿದ ಹಾಗೆ ಆಗಿ, ಆಕೆಯು ಆ ಹುಚ್ಚಿನ ಭರದಲ್ಲಿ ಓಡಿಹೋದಳೆಂದರೆ ಯಾರ ಕೈಗೂ ಸಿಗುತ್ತಿದ್ದಿಲ್ಲ. ಆ ದಂಪತಿಗಳು ಸ್ವಲ್ಪ ಹೊತ್ತು ತಾರೆಯನ್ನು ಹುಡುಕಿದರು; ಆದರೆ ಎಲ್ಲಿಯೂ ಆಕೆಯ ಗೊತ್ತು ಹತ್ತಲಿಲ್ಲ. ಆಗ ಅವರು ನಿರುಪಾಯರಾಗಿ ಒಂದು ಗಿಡದ ಬುಡದಲ್ಲಿ ಕುಳಿತು, ತಾವು ಇನ್ನು ಎಲ್ಲಿಗೆ ಹೋಗ ಬೇಕೆಂದು ಆಲೋಚಿಸತೊಡಗಿದರು. ಮಹಾರಾಜರ ವಿಷಯದಲ್ಲಿ ಅತ್ಯುತ್ಕಟ ಭಕ್ತಿಯು ಅವರಿಬ್ಬರಲ್ಲಿಯೂ ವಾಸಿಸುತ್ತಿತ್ತು. ಮಹಾರಾಜರಿಗೆ ಸಹಾಯ ಮಾಡುವದಕ್ಕಾಗಿಯೇ ಅವರು ವಿಜಾಪುರದಿಂದ ಮನೆಮಾರುಗಳನ್ನು ಬಿಟ್ಟು ಬಂದಿದ್ದರೆಂಬದನ್ನು ವಾಚಕರು ಮರೆತಿರಲಿಕ್ಕಿಲ್ಲ. ಅವರು ಬಹಳ ಹೊತ್ತು ಆಲೋಚಿಸಿದ ಬಳಿಕ ಹೈಮವತಿಯು ಪತಿಯನ್ನು ಕುರಿತು—''ನಾವು ಮಹಾರಾಜರ ಹಿತವನ್ನೇ ಚಿಂತಿಸುವದಿದ್ದಬಳಿಕ, ಅದೇ ಕಾರ್ಯದಲ್ಲಿ ದೇಹವನ್ನು ಸವೆಸತಕ್ಕದ್ದು. ಜೀಜಾಬಾಯಿವರ ಬಳಿಯಲ್ಲಿ ನಾನು ಕೆಲವು ದಿವಸಗಳಿಂದ ಇದ್ದದ್ದರಿಂದ, ಅವರ ಮುಖಾಂತರ ನನಗೆ ಹಲವು ಸಂಗತಿಗಳು ಗೊತ್ತಾಗಿರುತ್ತವೆ. ಅಫಜುಲಖಾನನ ಹೃದ್ಗತವು ಮಹಾರಾಜರಿಗೆ ಗೊತ್ತಾಗದೆ ಇದದ್ದರಿಂದ ಅವರಿಗೆ ಬಹಳ ತೊಂದರೆಯಾಗಿದೆ. ಸರಳತನಕ್ಕೆ ಸರಳತನವನ್ನೂ, ಕುಟಿಲ ತನಕ್ಕೆ ಕುಟಿಲತನವನ್ನೂ ಜೋಡಿಸುವದು ಮಹಾರಾಜರ ತಂತ್ರವಾಗಿರುತ್ತದೆ. ಅಫಜುಲಖಾನನು ತಮ್ಮ ಸಂಗಡ ಸರಳತನದಿಂದ ನಡೆದುಕೊಂಡರೆ, ತಾವೂ ಸರಳತನದಿಂದಲೇ ನಡೆದುಕೊಳ್ಳ ಬೇಕೆಂದು ಅವರು ನಿಶ್ಚಯಿಸಿರುವರು. ಖಾನನು ಕುಟಿಲತನವನ್ನು ತೋರಿಸಿದರೆ ಮಾತ್ರ ಮಹಾರಾಜರು ಆತನಿಗೆ ಕೈತೋರಿಸದೆ ಬಿಡುವ ಹಾಗಿಲ್ಲ. ಅಫಜುಲಖಾನನು ಕುಟಿಲ ತಂತ್ರವನ್ನು ಯೋಚಿಸಿದ್ದು ಮಹಾರಾಜರಿಗೆ ತಿಳಿಯದೇ ಹೋದರೆ ಘಾತವಾಗುವಹಾಗಿದೆ; ಆದ್ದರಿಂದ ನಾವು ಯುಕ್ತಿಪ್ರಯುಕ್ತಿಗಳಿಂದ ಖಾನನ ಮನೋದಯವನ್ನು ತಿಳಿದುಕೊಂಡು ಮಹಾರಾಜರಿಗೆ ತಿಳಿಸೋಣ. ಇಷ್ಟಾದರೂ ಮಹಾರಾಜರ ಸೇವೆಯು ನಮ್ಮಿಂದ ಘಟಿಸಲಿ! ಈ ಕಾರ್ಯವನ್ನು ಮಾಡುವಾಗ ನಮ್ಮ ದೇಹಪಾತವಾದರೂ ಚಿಂತೆಯಿಲ್ಲ'' ಎಂದು ಹೇಳಿದಳು. ಜಾಧವರಾಯನಿಗೆ ಹೆಂಡತಿಯ ಈ ಮಾತು ಒಪ್ಪಿಗೆಯಾಯಿತು. ಆತನು ಇದೇ ಕಾರ್ಯವನ್ನೇ ಸ್ವೀಕರಿಸಿದ್ದನು. ಹೆಂಡತಿಯ ವಿಚಾರವೂ ತನ್ನ ವಿಚಾರವೂ ಕೂಡಿದಂತಾದ್ದರಿಂದ, ಆತನಿಗೆ ಬಹಳ ಸಮಾಧಾನವಾಯಿತು. ಅವರಿಬ್ಬರು ಅಫಜುಲಖಾನನ ಪಾಳಯದ ಕಡೆಗೆ ನಡೆದರು.

# ಮಹತ್ವದ ಸುದ್ದಿಯು

ಹೀಗೆ ಆ ತರುಣ ದಂಪತಿಗಳು ಶಿವಾಜಿ ಮಹಾರಾಜರಿಗೆ ಸಹಾಯ ಮಾಡುವ ಉದ್ದೇಶದಿಂದ ಅಫಜುಲಖಾನನ ಪಾಳಯಕ್ಕೆ ಹೊರಟು ಬರುತ್ತಿರಲು, ಹಾದಿಯಲ್ಲಿ ಅವರಿಗೆ ಸರ್ಜೇರಾಯನ ಭೆಟ್ಟಿಯಾಯಿತು. ಮಹಾರಾಜರು ಖಾನನ ಬಳಿಯ ಸುದ್ದಿಗಳನ್ನು ತಿಳಕೊಳ್ಳುವದಕ್ಕಾಗಿ ಸರ್ಜೇರಾಯನನ್ನು ಅವನ ಪಾಳಯದಲ್ಲಿ ಇಟ್ಟಿದ್ದನ್ನು ವಾಚಕರು ಮರೆತಿರಲಿಕ್ಕಿಲ್ಲ. ಸರ್ಜೇರಾಯನು ಪ್ರತಾಪಗಡದಿಂದ ಹೋಗುವಾಗ ಹಾದಿಯಲ್ಲಿ ಹೈಮವತಿಯನ್ನು ಪಠಾಣನ ಕೈಯಿಂದ ಬಿಡಿಸಿ, ದೇಶಮುಖನ ಮನೆಯಲ್ಲಿ ಆಕೆಯನ್ನು ಇಟ್ಟು, ತಾನು ವಿಜಾಪುರಕ್ಕೆ ಹೋದದ್ದಾದರೂ ವಾಚಕರ ಸ್ಮರಣದಲ್ಲಿರಬಹುದು. ಹೈಮವತಿಯು ಸರ್ಜೇರಾಯನನ್ನು ನೋಡಿದ ಕೂಡಲೆ ಆತನ ಗುರುತು ಹಿಡಿದಳು. ಸರ್ಜೇರಾಯನೂ ಹೈಮವತಿಯ ಗುರುತು ಹಿಡಿದನು. ಆಮೇಲೆ ಆ ಮೂವರೂ ಬಹು ಸಂತೋಷಪಟ್ಟು, ಏಕಾಂತದಲ್ಲಿ ಕುಳಿತು ಮುಂದೆ ಏನು ಮಾಡಬೇಕೆಂದು ಯೋಚಿಸಹತ್ತಿದರು. ಸರ್ಜೇರಾಯನು ಬಹು ಚಾತುರ್ಯದಿಂದ ಖಾನನ ವಿಷಯದ ಕೆಲವು ಸುದ್ದಿಗಳನ್ನು ಅರಿತುಕೊಂಡಿದ್ದನು. ಅವನ್ನೆಲ್ಲ ಆತನು ಆ ತರುಣ ದಂಪತಿಗಳ ಮುಂದೆ ಹೇಳಿದನು. ಖಾನನ ಹೊಟ್ಟೆಯೊಳಗಿನ ಮಾತನ್ನು ನಿಚ್ಚಳವಾಗಿ ತಿಳಕೊಳ್ಳಲಿಕ್ಕೆ ಏನು ಮಾಡಬೇಕೆಂದು ಅವರು ಯೋಚಿಸಹತ್ತಿದರು. ಈ ಕಾರ್ಯವನ್ನು ಮೂವರೂ ಕೂಡಿ ಮಾಡಬೇಕೆಂದು ಗೊತ್ತಾಯಿತು. ಹೈಮವತಿಯು ಬಹು ಧೈರ್ಯಶಾಲಿಯು. ಆಕೆಯು ತನ್ನ ಪತಿಯನ್ನೂ ಸರ್ಜೇರಾಯನನ್ನೂ ಕುರಿತು—''ನಾನು ಹ್ಯಾಗೂ ತಪಸ್ವಿನಿಯ ವೇಷದಿಂದ ಇರುವೆನು. ಇದೇ ವೇಷದಿಂದ ಖಾನನ ಹೊಟ್ಟೆಯೊಳಗಿನ ಮಾತನ್ನು ತಿಳಕೊಳ್ಳಲು ಯತ್ನಿಸುತ್ತೇನೆ. ಈ ಕಾರ್ಯದಲ್ಲಿ ನೀವಿಬ್ಬರೂ ನನಗೆ ಸಹಾಯ ಮಾಡತಕ್ಕದ್ದು. ಖಾನನು ನನ್ನ ಗುರುತು ಹಿಡಿಯುವ ಸಂಭವವಂತು ಇಲ್ಲವೇ ಇಲ್ಲ. ನಮ್ಮವರು (ಪತಿಯು) ಖಾನನ ಪರಿಚಯ ದವರಾದ್ದರಿಂದ, ಅವರು ಎಂದಿನಂತೆ ಖಾನನ ನಂಬಿಗೆಯುವರಾಗಿ, ಅವನ ಬಳಿಯಲ್ಲಿದ್ದು ನನ್ನವರೆಂದು ತಿಳಿಯಗೊಡದೆ ನನಗೆ ಅವಶ್ಯವಾದ ಸಹಾಯವನ್ನು ಮಾಡತಕ್ಕದ್ದು. ಸರ್ಜೇರಾವ, ನೀವು ಬರಹೋಗುವವರಲ್ಲಿ ಬೆರೆತುಕೊಂಡು ನನ್ನವರೆಂದು ತಿಳಿಯಗೊಡದೆ ನನಗೆ ತಕ್ಕ ಸಹಾಯವನ್ನು ಮಾಡತಕ್ಕದ್ದು. ನಾನು ಮಹಾ ತಪಸ್ವಿನಿಯಾಗಿ, ನನ್ನ ತಪೋಬಲದಿಂದ ಭೂತ ಭವಿಷ್ಯ ವರ್ತಮಾನಕಾಲಗಳ ಸಂಗತಿಗಳನ್ನು ಹೇಳುತ್ತ ಜನರ ಚಿತ್ತಹರಣ ಮಾಡುವೆನು. ಈ ಕಾರ್ಯದಲ್ಲಿ ಅಂಬಾಬಾಯಿಯು ನನಗೆ ನಿಶ್ಚಯವಾಗಿ ಯಶಸ್ಸು ಕೊಡುವಳೆಂಬ ನಂಬಿಗೆಯು ನನಗಿದೆ. ಖಾನನ ಹೊಟ್ಟೆಯೊಳಗಿನ ಮಾತನ್ನು ತಿಳಿಕೊಳ್ಳುವಾಗ ನನ್ನ ನಾಶವಾದರೂ ಚಿಂತೆಯಿಲ್ಲ. ಸಾಹಸವನ್ನು ಮಾಡಿ ತೀರುವೆನು. ನೀವಿಬ್ಬರೂ ಬಹು ಜಾಗರೂಕತೆಯಿಂದ ನನಗೆ ಸಹಾಯ ಮಾಡತಕ್ಕದ್ದು; ನನ್ನ ಯೋಗಕ್ಷೇಮದಲ್ಲಿ ನೀವಿಬ್ಬರೂ ಜಾಗರೂಕರಾಗಿರತಕ್ಕದ್ದು ಎಂದು ಹೇಳಿದಳು. ಇಂಥ ಸಾಹಸದಲ್ಲಿ ಹೆಂಗಸರು ಬೀಳುವದು ಯೋಗ್ಯವಲ್ಲೆಂದು ಸರ್ಜೇರಾಯನು ಬಹಳ ಹೇಳಿದನು;

ಆದರೆ ಹೈಮವತಿಯು ಅದಕ್ಕೆ ಒಪ್ಪಲಿಲ್ಲ. ಆ ಮೂವರೂ ಬಹಳ ಹೊತ್ತು ವಾದ ವಿವಾದಗಳನ್ನು ನಡೆಸಿದ ಬಳಿಕ, ಹೈಮವತಿಯ ವಿಚಾರವೇ ಸರ್ವಸಮ್ಮತವಾಯಿತು.

ಕೆಲವು ದಿನಗಳು ಕ್ರಮಿಸಿದಬಳಿಕ ಒಂದು ದಿನ ಮುಂಜಾನೆ ಅಫಜುಲಖಾನನ ದಂಡಿನ ಪಾಳಯದೊಳಗಿನದೊಂದು ಗಿಡದ ಬುಡದಲ್ಲಿ ಒಬ್ಬ ತೇಜಃಪುಂಜಳಾದ ತಪಸ್ವಿನಿಯು, ದೇವಿಯದೊಂದು ಮೂರ್ತಿಯನ್ನು ಸ್ಥಾಪಿಸಿಕೊಂಡು ತನ್ನ ಬಳಿಗೆ ಬಂದವರ ಭವಿಷ್ಯವನ್ನು ಜ್ಞಾನದೃಷ್ಟಿಯಿಂದ ಹೇಳತೊಡಗಿದಳು. ಆ ತಪಸ್ವಿನಿಯ ತೇಜೋಮಯವಾದ ಸುಂದರ ಮೂರ್ತಿಯನ್ನು ನೋಡುತ್ತಲೇ ಜನರ ಚಿತ್ತಹರಣವಾಗಿ ಹೋಗುತ್ತಿತ್ತು; ಅದರಲ್ಲಿ ಆಕೆಯು ಹೇಳಿದ ಭೂತ-ವರ್ತಮಾನಕಾಲಗಳ ಸಂಗತಿಗಳು ನಿಜವಾಗಹತ್ತಿದ ಬಳಿಕಂತು ಕೇಳುವದೇನು? ಜನರ ಗುಂಪಿಗೆ ಗುಂಪುಗಳು ಆ ತಪಸ್ವಿನಿಯ ಬಳಿಗೆ ಬರತೊಡಗಿದವು. ದಿನದಿನಕ್ಕೆ ತಪಸ್ವಿನಿಯ ಕೀರ್ತಿಯು ಹೆಚ್ಚಾಗಹತ್ತಿ ಅದು ಅಫಜುಲಖಾನನ ಕಿವಿಯವರೆಗೆ ಹೋಯಿತು. ಅದನ್ನು ಕೇಳಿ ಖಾನನು ಮೊದಲು ಉಪಹಾಸಮಾಡಿದನು; ಆದರೆ ಆತನ ಪರಿಜನರು ತಪಸ್ವಿನಿಯ ಭವಿಷ್ಯದ ಸ್ತೋತ್ರ ಮಾಡಿದ್ದರಿಂದಲೂ, ಜಾಧವರಾಯನು ಅವರ ಮಾತಿಗೆ ಉತ್ತೇಜನ ಕೊಟ್ಟಿದ್ದರಿಂದಲೂ ಖಾನನು ತಪಸ್ವಿನಿಯ ವಿಷಯದ ಸುದ್ದಿಗಳನ್ನು ಲಕ್ಷಗೊಟ್ಟು ಕೇಳಹತ್ತಿದನು. ಬರಬರುತ್ತ ದೊಡ್ಡ ದೊಡ್ಡ ಮುಸಲ್ಮಾನ ಸರದಾರರೂ ತಪಸ್ವಿನಿಯನ್ನು ಹೊಗಳಹತ್ತಿದರು. ಮನಸ್ಸಿನೊಳಗಿನ ಮಾತನ್ನು ಹೇಳುವದರಲ್ಲಿಯೂ, ಮುಂದಾಗುವದನ್ನು ತಿಳಿಸುವದರಲ್ಲಿಯೂ ತಪಸ್ವಿನಿಗೆ ಸರಿಯಾದವರನ್ನು ಈವರೆಗೆ ನಾವು ನೋಡಲಿಲ್ಲೆಂದು ಹಲವರು ಅನ್ನಹತ್ತಿದರು. ನಮ್ಮ ಮರುಳು ಜನರು ಇಂಥ ವೇಷಧಾರಿ ಭವಿಷ್ಯ ವಾದಿಗಳಿಗೂ, ದಾಂಭಿಕರಾದ ಸಾಧು-ಸತ್ಪುರುಷರಿಗೂ ಮರುಳಾಗುವುದು ಬಹಳ. ಆಯುಷ್ಯ, ಮಕ್ಕಳು-ಮರಿ, ದುಡ್ಡು-ದುಗಾಣಿ, ಉದ್ಯೋಗ-ವ್ಯವಹಾರ ಮುಂತಾದವು ಗಳನ್ನು ಕುರಿತು ಭವಿಷ್ಯವನ್ನು ಕೇಳುವುದು ಇವರ ಮುಖ್ಯೋದ್ದೇಶವಾಗಿರುತ್ತದೆ. ಇವರ ಹಿಂದಿನವೆರಡು ಮಾತುಗಳನ್ನು ಸಮರ್ಪಕವಾಗಿ ಹೇಳಿದರೆ ತೀರಿತು; ವಿಶ್ವಾಸವು ಕುಳಿತು ಬಿಡುವದು. ಆ ಮಾತುಗಳನ್ನು ಭವಿಷ್ಯವಾದಿಗಳು ಅನ್ಯರ ಮುಖಗಳಿಂದ ತಿಳಿದು ಕೊಂಡಿರುವರು. ಭೂತಕಾಲದ ನಿಜವಾದ ಸಂಗತಿಗಳ ಮೇಲಿಂದ, ಭವಿಷ್ಯಕಾಲದ ಸಂಗತಿಗಳೂ ನಿಜ ವಾಗುತ್ತವೆಂದೂ ತಿಳಿದುಕೊಳ್ಳುವದು ಮರುಳು ಜನರ ವಾಡಿಕೆ ಯಾಗಿರುವದು. ಬಡವರೂ, ಉದ್ಯೋಗಹೀನರೂ, ಹೆಂಗಸರೂ ಇಂಥವರು ಬೆನ್ನುಹತ್ತುವದು ಹೆಚ್ಚು. ಎಷ್ಟೋ ಭವಿಷ್ಯವಾದಿಗಳು ತಮ್ಮದೊಂದು ಪರಿವಾರವನ್ನು ಮಾಡಿಕೊಂಡಿರುವರು. ಆ ಪರಿವಾರದವರು ಯಾವದೊಂದು ಊರೊಳಗಿನ ಮುಖ್ಯ ಮುಖ್ಯ ಜನರ ಭೂತಕಾಲದ, ಹಾಗೂ ವರ್ತಮಾನ ಕಾಲದ ಸಂಗತಿಗಳನ್ನು ಚಾತುರ್ಯದಿಂದ ತಿಳಕೊಂಡು, ಭವಿಷ್ಯವಾದಿಗಳಿಗೆ ಮೊದಲೇ ತಿಳಿಸುವರು. ಹೀಗೆ ಯಾವದೊಂದು ಊರೊಳಗಿನ ಜನರ ಸಾಕಷ್ಟು ಸುದ್ದಿಗಳನ್ನು ತಿಳಿದಬಳಿಕ, ಭವಿಷ್ಯವಾದಿಗಳು ಆ ಊರಿಗೆ ಹೋಗುವರು. ಆಯಾ ಊರುಗಳಲ್ಲಿಯ ನಿರುದ್ಯೋಗಿಗಳಾದ ಜನರನ್ನೂ, ಹರಟೆ ಕೊಚ್ಚುವವರನ್ನೂ ತಮ್ಮ ಕಡೆಗೆ

ಮಾಡಿಕೊಂಡು, ಅವರ ಸಹಾಯದಿಂದ ಹೊಸ ಹೊಸ ಜನರ ಸುದ್ದಿಗಳನ್ನು ತಿಳಕೊಂಡು ಇವರು ಅವನ್ನು ಭವಿಷ್ಯವಾದಿಗಳಿಗೆ ತಿಳಿಸುವರು. ಪ್ರತಿ ಒಬ್ಬನ ಹವ್ಯಾಸಗಳು ನೆರೆಹೊರೆಯವರಿಗೆ ಸಾಧಾರಣವಾಗಿ ತಿಳಿಯುತ್ತಿರುತ್ತವೆ. ಅವನ್ನು ಕೇಳಿಕೊಂಡು ಈ ಭವಿಷ್ಯವಾದಿಗಳು ಅನುಮಾನದಿಂದ ಮಂದಿಯ ಮನಸ್ಸಿನೊಳಗಿನ ಮಾತನ್ನು ಹೇಳುವರು. ಹೀಗೆ ಮೋಸಗಾರಿಕೆಯಿಂದ ಹಲವು ಜನರು ಮಂದಿಯ ಕೈಯಿಂದ ದುಡ್ಡು ಎತ್ತಿ ತಮ್ಮ ಉಪಜೀವನ ಸಾಗಿಸಿಕೊಳ್ಳುವರು. ನಮ್ಮ ತಪಸ್ವಿನಿಯು ತಾನು ನಿಸ್ಪೃಹಳೆಂಬದನ್ನು ತೋರಿಸುವದಕ್ಕಾಗಿ, ತನ್ನ ದೇವರ ಮುಂದೆ ಬಿದ್ದ ಕಾಯಿ-ಹಣ್ಣುಗಳ ರಾಶಿಯನ್ನೂ, ಹಣವನ್ನೂ ಮಂದಿಗೆ ಹಂಚಿಬಿಡುತ್ತಿದ್ದಳು. ಇದರಿಂದಂತು ಆಕೆಯ ಕೀರ್ತಿಯು ಮತ್ತಿಷ್ಟು ಹೆಚ್ಚಿತು. ತಪಸ್ವಿನಿಯ ಸ್ಫುರದ್ರೂಪ, ಆ ಸ್ಫುರದ್ರೂಪವನ್ನು ಬೆಳಗುವ ಅತುಲ ತೇಜಸ್ಸು, ಆ ಅತುಲ ತೇಜಸ್ಸನ್ನು ಅಲಂಕರಿಸ್ಸುವ ಜಾಜ್ವಲ್ಯವಾದ ನಿಸ್ಪೃಹತೆ, ಆ ಜಾಜ್ವಲ್ಯ ನಿಸ್ಪೃಹತೆಯನ್ನು ಭೂಷಿಸುವ ಯಥಾರ್ಥವಾದಿತ್ವ ಇವೆಲ್ಲಾ ಒಟ್ಟು ಗೂಡಿ, ತಪಸ್ವಿನಿಯು ಸ್ವಲ್ಪ ದಿವಸಗಳಲ್ಲಿಯೇ ಸರ್ವಸಮ್ಮತಳೂ, ಸನ್ಮಾನನೀಯಳೂ, ಪೂಜ್ಯಳೂ ಆದಳು!

ಈ ತಪಸ್ವಿನಿಯು ಯಾರೆಂಬುದನ್ನು ನಾವು ವಾಚಕರಿಗೆ ಹೇಳಲವಶ್ಯವಿಲ್ಲ, ಕೆಚ್ಚೆದೆಯ ಹೈಮವತಿಯೇ ಆಕೆಯೆಂಬದನ್ನು ವಾಚಕರು ಅರಿತಿರಬಹುದು. ಆಕೆಯ ಪತಿಯಾದ ಜಾಧವರಾಯನು ಆಕೆಯ ಜಾಗರೂಕನಾದ ಅಂಗರಕ್ಷಕನಾಗಿದ್ದನು. ಸರ್ಜೇರಾಯನೂ, ಅವನ ಪರಿವಾರದವರೂ ಸುದ್ದಿಗಳನ್ನು ತಿಳಿಸುವ ಸಾಧನವೂ, ಆಕೆಯ ಕೀರ್ತಿಯನ್ನು ಹೊಗಳುವ ಜಾಗಟೆಗಳೂ ಆಗಿದ್ದರು. ಹೀಗೆ ಶಿವರಾಯನ ಪರಿವಾರದೊಳಗಿನ ಆ ಮೂವರು ಚತುರರು ತಮ್ಮ ತಂತ್ರವನ್ನು ಬಹು ಚಾತುರ್ಯದಿಂದಲೂ, ಜಾಗರೂಕತೆಯಿಂದಲೂ ಒಡ್ಡಿದ್ದರು. ಅವರು ಒಡ್ಡಿದ ಮೋಹ ಜಾಲದಲ್ಲಿ ದೊಡ್ಡ ದೊಡ್ಡವರು ಸಹ ಬೀಳಹತ್ತಿದರು. ಅಫಜುಲಖಾನನೂ ಒಮ್ಮೆ ತಪಸ್ವಿನಿಯನ್ನು ನೋಡಿ ಬರಬೇಕೆಂದು ಮಾಡಿದನು. ತಾನಿದ್ದಲ್ಲಿಗೇ ಆಕೆಯನ್ನು ಕರಿಸಿಕೊಳ್ಳಬೇಕೆಂದು ಆತನು ಯೋಚಿಸಿದನು; ಆದರೆ ಆಕೆಯ ನಿಸ್ಪೃಹತೆಯ ಸುದ್ದಿಗಳನ್ನು ಕೇಳಿ, ತಾನೇ ವೇಷಾಂತರದಿಂದ ಆಕೆಯ ಬಳಿಗೆ ಹೋಗುವದು ಯೋಗ್ಯವೆಂದು ನಿಶ್ಚಯಿಸಿ, ತಾನು ಸಾಯಜಿಯ (ಮುಸಲ್ಮಾನ ಸಾಧುವಿನ) ವೇಷ ಹಾಕಿಕೊಂಡು, ಒಬ್ಬ ಹುಜರೆಯನ್ನು ಸಂಗಡ ಕರಕೊಂಡು ಹೊರಟನು. ಖಾನನು ಹಾಕಿಕೊಂಡಿದ್ದ ಸಾಯಜಿಯ ಈ ಅಪೂರ್ವ ವೇಷವನ್ನು ನೋಡಿ ಛಾವಣಿಯೊಳಗಿನ ಜನರು ಬೆರಗಾದರು. ಒಬ್ಬರೂ ಅವನ ಗುರುತು ಹಿಡಿಯಲು ಸಮರ್ಥರಾಗಲಿಲ್ಲ, ಅವರು ಹುಜರೆಗೆ—"ಈ ಸಾಯಜಿಯವರು ಎಲ್ಲಿಯವರು?" ಎಂದು ಪ್ರಶ್ನೆ ಮಾಡತೊಡಗಿದರು. "ಇವರೊಬ್ಬ ದೊಡ್ಡ ಸಾಯಜಿಯವರಿರುವರು" ಎಂದು ಅವನು ಜನರಿಗೆ ಹೇಳುತ್ತ ನಡೆದನು. ಹೀಗೆ ವೇಷಧಾರಿಯಾದ ಖಾನನು ತಪಸ್ವಿನಿಯ ಬಳಿಗೆ ಹೋಗಲು, ಅಲ್ಲಿ ಜನರ ಸಂದಣಿಯು ವಿಲಕ್ಷಣವಾಗಿತ್ತು. ಹುಜರೆಯು ಮೊಣಕೈಯಿಂದ ಜನರನ್ನು ತಿವಿದು ಹಾದಿಯನ್ನು ಮಾಡುತ್ತ ಸಾಯಜಿಯನ್ನು ಕರಕೊಂಡು ನಡೆದನು. ಖಾನನ ಹುಜರೆಯನ್ನು ತಡೆಯುವವರು ಯಾರು? ಈ ಸುದ್ದಿಯು

ಸರ್ಜೇರಾಯನ ತಾರಾಯಂತ್ರದ ತಂತಿಗಳ ದ್ವಾರದಿಂದ ತಪಸ್ವಿನಿಗೆ ತಟ್ಟನೆ ಮುಟ್ಟಿತು. ತಪಸ್ವಿನಿಯು ವೇಷಧಾರಿಯಾದ ಖಾನನನ್ನು ನೋಡಿದ ಕೂಡಲೆ ಬೆದರಿದಳು. ಕ್ಷಣದಲ್ಲಿ ಆಕೆಯು ತನ್ನ ಮನಸ್ಸನ್ನು ಸಮಾಧಾನಪಡಿಸಿಕೊಂಡು, ಕುಳಿತ ಸ್ಥಳದಲ್ಲಿಯೇ ಎದ್ದು ನಿಂತು, ಸಾಯಜಿಯನ್ನು ಬಹುಮಾನಪೂರ್ವಕ ಬರಮಾಡಿಕೊಂಡಳು. ಆಕೆಯು ಅಚ್ಚಫಾರಸೀ ಮಿಶ್ರವಾದ ಉರ್ದು ಭಾಷೆಯಿಂದ ಸಾಯಜಿಗೆ—''ಬರಬೇಕು, ಸಾಯಜಿಯವರು ಇತ್ತ ಬರಬೇಕು; ತಮ್ಮ ಚರಣ ಸ್ಪರ್ಶದಿಂದ ನಮ್ಮ ಸ್ಥಳವು ಪವಿತ್ರವಾದದ್ದಕ್ಕಾಗಿ ನನಗೆ ಬಹಳ ಸಮಾಧಾನವಾಗಿದೆ. ನನ್ನಿಂದ ಏನಾದರೂ ತಮ್ಮ ಸೇವೆಯು ಘಟಿಸುವದಿದ್ದರೆ ಹೇಳಬೇಕು, ನಾನು ಸಿದ್ಧಳಿರುವೆನು. ತಮ್ಮ ವಿದ್ಯೆಯ ಮುಂದೆ ನನ್ನಂಥ ಕ್ಷುದ್ರಳ ಪಾಡೇನು? ಬರಬೇಕು, ಇತ್ತ ಕುಳಿತುಕೊಳ್ಳಬೇಕು, ಎಂದು ನುಡಿಯಲು ಆಕೆಯ ಪರಿಚಯದವನಾದ ಹುಜರೆಯು— ''ತಪೋಧನರೇ, ನಿಮ್ಮ ಅದ್ಭುತ ಸಾಮರ್ಥ್ಯದ ವರ್ಣನವನ್ನು ನಾನು ಇವರ ಮುಂದೆ ಮಾಡಲು, ಇವರು ನಿಮ್ಮನ್ನು ಕಾಣಲಿಕ್ಕೆ ಬಂದಿದ್ದಾರೆ. ಇವರು ಕೇಳುವ ಪ್ರಶ್ನೆಗಳಿಗೆ ನೀವು ಸಮರ್ಪಕವಾಗಿ ಉತ್ತರವನ್ನು ಕೊಡಬೇಕು,'' ಎಂದು ಹೇಳಿದನು. ಅದಕ್ಕೆ ತಪಸ್ವಿನಿಯು— ''ಅವಶ್ಯವಾಗಿ ಕೇಳಬೇಕು; ನಾನು ತಿಳಿದಷ್ಟು ಹೇಳುವೆನು. ಇಂಥವರ ಮುಂದೆ ನನ್ನ ಸಾಮರ್ಥ್ಯವನ್ನೇನು ತೋರಿಸುವದು?'' ಎಂದು ನುಡಿಯಲು, ಕೂಡಲೆ ಸಾಯಜಿಯು— ''ಹೀಗಂದರೆ ಹ್ಯಾಗೆ? ಯಾರಲ್ಲಿ ಎಂಥ ಸಾಮರ್ಥ್ಯವಿರುತ್ತದೆಂಬುದನ್ನು ಹೇಳಲಾಗುವದಿಲ್ಲ. ನಾನು ಮನಸ್ಸಿನಲ್ಲಿ ಒಂದು ಪ್ರಶ್ನೆಯನ್ನು ಯೋಚಿಸಿರುವೆನು; ಅದನ್ನೂ ಅದರ ಉತ್ತರವನ್ನೂ ಹೇಳಿರಿ'' ಎಂದು ಕೇಳಲು, ತಪಸ್ವಿನಿಯು ಸಾಯಜಿಯ ಮುಖವನ್ನು ನೋಡಿ—''ನಿಮ್ಮ ಪ್ರಶ್ನವನ್ನೂ, ಅದರ ಉತ್ತರವನ್ನೂ ಈ ಹಿಂಡು ಜನರು ಮುಂದೆ ಹೇಳುವ ಹಾಗಿಲ್ಲ, ಎಲ್ಲರನ್ನು ದೂರ ಕಳಿಸಿರಿ; ನೀವು, ನಾನು, ಬೇಕಾದರೆ ನಿಮ್ಮ ಈ ಹುಜರೆಯವರು ಇಷ್ಟೇ ಜನರು ಇರೋಣ. ಇಲ್ಲದಿದ್ದರೆ ನಾವು ಮೂವರೇ ಒತ್ತಟ್ಟಿಗೆ ಹೋಗಿ ಬಿಡೋಣ ನಡೆಯಿರಿ. ನಿಮ್ಮ ಪ್ರಶ್ನವನ್ನು ಇವರೆಲ್ಲರ ಮುಂದೆ ಹೇಳುವಹಾಗಿಲ್ಲ, ಇದರ ಮೇಲೆ ನಿಮ್ಮ ಇಚ್ಛೆಯು. ಇಲ್ಲಿಯೇ ಹೇಳೆಂದರೆ ಹೇಳುವೆನು.

ತಪಸ್ವಿನಿಯ ಈ ಮಾತುಗಳನ್ನು ಕೇಳಿದಕೂಡಲೆ ಸಾಯಿಜಿಗೆ ಹ್ಯಾಗೆ ಹ್ಯಾಗೋ ಆಯಿತು. ತಪಸ್ವಿನಿಯನ್ನು ನೋಡಿದ ಕೂಡಲೆ ಆ ವೇಷಧಾರಿಯಾದ ಖಾನನ ಮೇಲೆ ವಿಲಕ್ಷಣ ಪರಿಣಾಮವಾಗಿತ್ತು, ಖಾನನ ಚಿತ್ತಹರಣವಾಗಿ ಹೋಗಿತ್ತೆಂದು ಹೇಳಬಹುದು. ಒತ್ತಟ್ಟಿಗೆ ಹೋಗಿಯೇ ಈ ತಪಸ್ವಿನಿಯು ಹೇಳುವ ಉತ್ತರವನ್ನು ಕೇಳಿಕೊಳ್ಳಬೇಕೆಂದು ಆತನು ನಿಶ್ಚಯಿಸಿ ತಪಸ್ವಿನಿಯನ್ನು ಕುರಿತು—''ಒಳ್ಳೇದು, ನೀವು ಅಂದಂತೆಯೇ ಆಗಲಿ, ನಾನು ಒತ್ತಟ್ಟಿಗೆ ಬಂದು ನನ್ನ ಪ್ರಶ್ನದ ಉತ್ತರವನ್ನು ಕೇಳಿಕೊಳ್ಳುವೆನು; ಆದರೆ ನನ್ನ ಪ್ರಶ್ನವೇನೆಂಬದನ್ನು ಈ ಜನರ ಮುಂದೆ ಹೇಳಲು ಬಾಧೆಯಿಲ್ಲ, ಹೇಳಬೇಕು, ಎಂದು ಕೇಳಲು, ತಪಸ್ವಿನಿಯು ಮುಗುಳುನಗೆ ನಗುತ್ತ ಸಾಯಿಜಿಯನ್ನು ಕುರಿತು—

ತಪಸ್ವಿನಿ–ಪ್ರಶ್ನವನ್ನೇ ಏಕೆ, ಬೇಕಾದರೆ ಪ್ರಶ್ನವನ್ನೂ ಉತ್ತರವನ್ನೂ ಕೂಡಿಯೇ ಹೇಳುವೆನು. ಹೇಳಲಿಕ್ಕೆ ನಾನು ಸಿದ್ಧಳಿದ್ದೇನೆ; ಹೇಳಿರಿ, ಬರಿಯ ಪ್ರಶ್ನವನ್ನೇ ಹೇಳಲೋ, ಪ್ರಶ್ನವನ್ನೂ ಉತ್ತರವನ್ನೂ ಕೂಡಿಯೇ ಹೇಳಲೋ?

ಸಾಯಿಜಿ–ಬರಿಯ ಪ್ರಶ್ನವನ್ನೇ.

ತಪಸ್ವಿನಿ–ಹಾಗೇ ಹಾಗಲಿ; ನಿಮ್ಮ ಮೊದಲನೆಯ ಪ್ರಶ್ನವನ್ನು ಹೇಳುವೆನು ಕೇಳಿರಿ— ''ನಾನು ನಿಜವಾಗಿ ಯಾರು ಇರುವೆನು?'' ಎಂಬದು ನಿಮ್ಮ ಆ ಮೊದಲನೆಯ ಪ್ರಶ್ನವಾಗಿರುತ್ತದೆ. ಹೀಗೆ ನೀವು ಕೇಳುತ್ತಿರುವದರಿಂದ, ನೀವು ನಿಜವಾಗಿ ಸಾಯಜಿಯವರು ಅಲ್ಲವೆಂಬ ಉತ್ತರವು ತಾನೆ ವ್ಯಕ್ತವಾಗುತ್ತದೆ. ಇನ್ನು ತಾವು ಯಾರೆಂಬುದರ ಉತ್ತರವನ್ನು ಈಗೇ ಹೇಳಲೋ?

ತಪಸ್ವಿನಿಯ ಈ ಮಾತುಗಳನ್ನು ಕೇಳಿ ಹುಜರೆಯು ಸಾಯಿಜಿಯ ಮೋರೆಯನ್ನು ನೋಡಿದನು. ಖಾನನ ಮನಸ್ಸಿಗೂ ಬಹು ಚಮತ್ಕಾರವಾಗಿ ತೋರಿತು. ಸಾಯಿಜಿಯು ತಪಸ್ವಿನಿಗೆ—''ಬೇಡ, ಇಲ್ಲಿ ಉತ್ತರವನ್ನು ಹೇಳುವದು ಬೇಡ. ನಾನು ಇಳಿದುಕೊಂಡಿದ್ದ ಮಶೀದೆಗೆ ನೀವು ಬರ್ರಿ. ಅಲ್ಲಿ ಮಾತಾಡತಕ್ಕ ಮಾತುಗಳು ಬಹಳ ಇರುತ್ತವೆ'' ಎಂದು ನುಡಿದು, ತಾನು ಇಳಿದುಕೊಂಡಲ್ಲಿಗೆ ಬರುವ ಮನಸ್ಸು ತಪಸ್ವಿನಿಗೆ ಇರುತ್ತದೆಯೋ ಇಲ್ಲವೋ ಎಂಬದನ್ನು ಕೇಳದೆ, ಖಾನನು ಗಡಬಡಿಸಿ ಹೊರಟುಹೋದನು. ಖಾನನು ಮೋರೆ ತಿರುವಿದಕೂಡಲೆ ಹೈಮವತಿಯು ಅರ್ಥಪೂರ್ಣವಾದ ದೃಷ್ಟಿಯಿಂದ ಖಾನನನ್ನು ನೋಡಿ, ಮುಗುಳುನಗೆ ನಗುತ್ತ ತಲೆಯಲ್ಲಾಡಿಸಿದಳು. ಹುಜರೆಯು ಸಾಯಜಿಯನ್ನು ಕಳಿಸಿ ಬರಲಿಕ್ಕೆ ಹೊರಟನು. ಆಗ ಸರ್ಜೇರಾಯನು ಹೈಮವತಿಯನ್ನು ಒತ್ತಟ್ಟಿಗೆ ಕರೆದುಕೊಂಡು ಹೋಗಿ— ''ಅಮ್ಮಾ ಹೈಮವತೀ, ಇನ್ನು ಹುಜರೆಯು ನಿಮ್ಮನ್ನು ಕರೆಯಲಿಕ್ಕೆ ಬರುವನು. ಆ ದುಷ್ಟ ಖಾನನ ಮನೆಗೆ ನೀವು ಹೋಗುವದು ನನ್ನ ಮನಸ್ಸಿಗೆ ಬರುವದಿಲ್ಲ; ಒಂದು ವೇಳೆ ಹೋಗುವದೇ ನಿಮ್ಮ ನಿಶ್ಚಯವಿದ್ದರೆ, ಶಿಷ್ಯಳೆಂದು ಹೇಳಿ ನನ್ನನ್ನು ಸಂಗಡ ಕರೆದುಡೊಂದು ಹೋಗಿರಿ. ಅಲ್ಲಿ ಜಾಧವರಾಯರಂತೂ ಇದ್ದೇ ಇರುವರು. ನಾನು ಈಗಲೇ ಯೋಗಿನಿಯ ವೇಷವನ್ನು ಹಾಕಿಕೊಂಡು ಬರುವೆನು'' ಎಂದು ಹೇಳಲು, ಹೈಮವತಿಯು—''ಅಣ್ಣಾ ಸರ್ಜೇರಾವ, ನಿಮ್ಮ ಮಾತು ಯೋಗ್ಯವಾದದ್ದು, ನೀವಂದಂತೆಯೇ ಆಗಲಿ. ನಾನು ನಿಮ್ಮನ್ನು ಸಂಗಡ ಕರಕೊಂಡು ಹೋಗುವೆನು. ನಾನಾದರೂ ಬರಿಗೈಯಿಂದ ಖಾನನ ಬಳಿಗೆ ಹೋಗುವದಿಲ್ಲ, ನೋಡಿರಿ ಈ ಗುಪ್ತ ಶಸ್ತ್ರವನ್ನು. ಪ್ರಸಂಗದಲ್ಲಿ ನನ್ನ ಕೈಯನ್ನು ಖಾನನಿಗೆ ತೋರಿಸದೆ ಇರೆನು. ಅಂಥ ಪ್ರಸಂಗವೇ ಒದಗಿದರೆ, ನನ್ನ ಜೀವವು ನನ್ನ ಕೈಯೊಳಗಿರುವದು.

ಈ ಮೇರೆಗೆ ಅವರು ಮಾತಾಡುತ್ತಿರುವಷ್ಟರಲ್ಲಿ ಹುಜರೆಯು ಬಂದು ತಪಸ್ವಿನಿಗೆ ಹೊರಡಲು ಹೇಳಿಕೊಳ್ಳಹತ್ತಿದನು; ಆದರೆ ತನಗೆ ಅದೇ ಬೇಕಾಗಿದ್ದರೂ ತನ್ನ ಹೊರಡುವ ಆತುರವನ್ನು ಮುಚ್ಚಿಕೊಳ್ಳುವದಕ್ಕಾಗಿ ತಪಸ್ವಿನಿಯು ಹುಜರೆಗೆ—''ಅವರು ಹೇಳಲೊಲ್ಲರೇಕೆ, ನಾನೇನು ಅಲ್ಲಿಗೆ ಬರುವದಿಲ್ಲ, ನಾನು ನನ್ನ ಸ್ಥಳ ಹಿಡಿದು ಕುಳಿತುಕೊಂಡು ಮಾಡುವದನ್ನು

ಮಾಡುವೆನು. ಅದನ್ನು ಬಿಟ್ಟು ಸಿಕ್ಕವರು ಸಿಕ್ಕಲ್ಲಿ ಕರೆದರೆ ನಾನು ಸ್ಥಳಬಿಟ್ಟು ಕದಲತಕ್ಕವಳಲ್ಲ'' ಎಂದು ಸ್ಪಷ್ಟವಾಗಿ ಹೇಳಿದಳು. ಆಗ ಹುಜರೆಯು ವಿನಯದಿಂದ—''ತಾವು ಹಾಗೆ ಮಾಡಬಾರದು. ನನ್ನ ಮಾತನ್ನು ಕೇಳಿದರೆ ತಮಗೆ ದೊಡ್ಡ ಲಾಭವಾಗುವದು. ಒಲ್ಲೆನೆನ್ನುವದು ಯೋಗ್ಯವಲ್ಲ. ನನ್ನ ಮಾತನ್ನಾದರೂ ಕೇಳಿ ನೋಡಿರಿ'' ಎಂದು ಹೇಳಿದನು. ಆಮೇಲೆ ಬಹಳ ಅರೆದಾಟವಾಗಿ ಕಡೆಗೆ ತಪಸ್ವಿನಿಯು ಹುಜರೆಯ ಮಾತನ್ನು ಮೀರಲಾದರೆ ನಿರ್ವಾಹವಿಲ್ಲದೆ ಹೊರಡಲು ಒಪ್ಪಿಕೊಂಡಂತೆ ನಟಿಸಿದಳು. ಕೂಡಲೆ ಯೋಗಿನಿಯ ವೇಷಧಾರಿಯಾದ ಸರ್ಜೇರಾಯನು, ದೇವಿಯ ಮೂರ್ತಿಯೇ ಮೊದಲಾದ ಉಪಕರಣಗಳನ್ನು ತಕ್ಕೊಂಡು, ತಪಸ್ವಿನಿಯ ಸಂಗಡ ಹೊರಡಲು ಸಿದ್ಧನಾದನು. ಆ ಶಿಷ್ಯಳಿಗೆ ಬೇಡೆನ್ನುವ ಧೈರ್ಯವು ಹುಜರೆಗೆ ಆಗಲಿಲ್ಲ. ಅವರಿಬ್ಬರನ್ನು ಕರಕೊಂಡು ಆತನು ಅಡ್ಡ ತಿಡ್ಡ ಮಾರ್ಗದಿಂದ ಸಾಗಿದನು. ಮಾರ್ಗದಲ್ಲಿ ಯಾರೂ ಪಿಟ್ಟೆಂದು ಮಾತಾಡುತ್ತಿದ್ದಿಲ್ಲ. ಖಾನನ ಡೇರೆಗೆ ಅವರೆಲ್ಲರೂ ಮುಟ್ಟಲು, ಅವರು ಬಂದ ಸುದ್ದಿಯು ಖಾನನಿಗೆ ಮುಟ್ಟಿತು. ಕೂಡಲೆ ಖಾನನು ತಪಸ್ವಿನಿಯನ್ನು ಕರೆಸಿ, ಸತ್ಕರಿಸಿ ಕುಳ್ಳಿರಿಸಿಕೊಂಡನು. ಶಿಷ್ಯೆಯು ತಪಸ್ವಿನಿಯ ಹಿಂದೆ ನಿಂತುಕೊಂಡಳು. ಅಷ್ಟರಲ್ಲಿ ಜಾಧವ ರಾಯನೂ ಅಲ್ಲಿಗೆ ಬಂದನು. ಸ್ವಲ್ಪ ಹೊತ್ತು ಸುಮ್ಮನೆ ಕುಳಿತುಕೊಂಡು ಖಾನನು ತಪಸ್ವಿನಿಯನ್ನು ಕುರಿತು–

ಖಾನ–ನಿಜವಾಗಿ ಕೇಳಿದರೆ ಸಾಧು ಸತ್ಪುರುಷರ ಮೇಲೆ ನಮ್ಮ ವಿಶ್ವಾಸವಿಲ್ಲ; ಆದರೆ ನಿಮ್ಮ ಕೀರ್ತಿಯನ್ನು ಕೇಳಿ ನಿಮ್ಮನ್ನು ಕಾಣಲಿಕ್ಕೆ ನಾವು ಬಂದಿದ್ದೆವು. ಕೀರ್ತಿಗೆ ತಕ್ಕಂತೆ ನಿಮ್ಮ ಸ್ಥಿತಿಯಿರುತ್ತದೆ. ಅದಕ್ಕಾಗಿಯೇ ನಾವು ನಿಮ್ಮನ್ನು ಬುದ್ಧಿಪೂರ್ವಕವಾಗಿ ಈಗ ಕರಿಸಿದ್ದೇವೆ. ಇನ್ನು ನಿಮ್ಮ ಕರಾಮತಿಯಿದ್ದದ್ದನ್ನು ನನಗೆ ತೋರಿಸಿರಿ.

ತಪಸ್ವಿನಿ–ಏನು ಹೇಳಿದರೆ ಸಾಧು ಸತ್ಪುರುಷರ ಮೇಲೆ ನಿಮ್ಮ ವಿಶ್ವಾಸವು ಕುಳಿತೀತು? ನೀವೇ ನೋಡಿರಿ, ಹಿಂದೆ ಆದದ್ದನ್ನು ನಾನು ನಿಮಗೆ ಹೇಳಿದರೆ, ಈಕೆಯು ಎಲ್ಲಿಯಾದರೂ ಕೇಳಿಕೊಂಡಿರಬಹುದೆಂದು ನೀವು ತಿಳಕೊಳ್ಳುವಿರಿ; ಮುಂದಾಗುವದನ್ನು ಹೇಳಿದರೆ, ಅನುಭವಕ್ಕೆ ಬರುವ ತನಕ ನೀವು ಅದನ್ನು ನಂಬುವಹಾಗಿಲ್ಲ. ಅಂದಬಳಿಕ, ಈಗ ನಿಮ್ಮ ಮನಸ್ಸಿನಲ್ಲಿ ಅತ್ಯಂತ ಗೂಢವಾದ ಯಾವ ಮಾತು ಇರುತ್ತದೆಂಬದನ್ನು ಹೇಳಿದರೆ ನಿಮ್ಮ ವಿಶ್ವಾಸವು ಕೂಡುವದು; ಆದ್ದರಿಂದ ಈಗ ನಾನು ಅದೇ ಮಾತನ್ನು ಹೇಳುವೆನು.

ಖಾನ–ನೀವನ್ನುವದು ನಿಜವು; ನಮ್ಮ ಮನಸ್ಸಿನೊಳಗಿನ ಅತ್ಯಂತ ಗೂಢವಾದ ಮಾತನ್ನೇ ಈಗ ನೀವು ನನಗೆ ಹೇಳಿರಿ.

ತಪಸ್ವಿನಿ–ಅದು ನನ್ನನ್ನು ಕೂಡಿತು. ಆದರೆ ನಿಮ್ಮ ಮನಸ್ಸಿನೊಳಗಿನ ಮಾತನ್ನು ಇವರೆಲ್ಲರ ಸಮಕ್ಷ ಹೇಳಲೋ, ನಿಮ್ಮ ಒಬ್ಬರ ಮುಂದೆಯೇ ಹೇಳಲೋ?

ತಪಸ್ವಿನಿಯ ಈ ಮಾತುಗಳನ್ನು ಕೇಳಿ ಖಾನನು ಮೊದಲು–''ಏನೂ ಚಿಂತೆಯಿಲ್ಲ, ಇವರೆಲ್ಲರ ಸಮಕ್ಷ ಹೇಳಿರಿ'' ಎಂದು ನುಡಿದನು; ಆದರೆ ಕೂಡಲೆ ಆತನು—''ಹಾಗೆ ಮಾಡಬೇಡಿರಿ. ನನ್ನೊಬ್ಬನ ಮುಂದೆಯೇ ಆ ಮಾತನ್ನು ಹೇಳಿರಿ'' ಎಂದು ನುಡಿದು, ತನ್ನ ಹುಜರೆಯನ್ನು ವಕ್ರದೃಷ್ಟಿಯಿಂದ ನೋಡಿದನು. ಆಗ ಹುಜರೆಯು ಎಲ್ಲರನ್ನು ಹೊರಗೆ

ಕಳಿಸಿದನು. ಬಳಿಕ ತಪಸ್ವಿನಿಯ ಶಿಷ್ಯಳೂ ಹೊರಗೆ ಹೋಗಬೇಕಾಯಿತು. ಹೀಗೆ ಎಲ್ಲರೂ ಹೊರಗೆ ಹೋದದ್ದನ್ನು ನೋಡಿ ತಪಸ್ವಿನಿಯು ಖಾನನನ್ನು ಕುರಿತು— ''ಇನ್ನು ನಾನು ನಿಮಗೆ ಗುರುತಿನ ಮಾತನ್ನು ಹೇಳುವೆನು, ಅದು ನಿಜವಿದ್ದರೆ ನಿಜವೆಂದು ನನ್ನ ಮುಂದೆ ಸ್ಪಷ್ಟವಾಗಿ ಒಪ್ಪಿಕೊಳ್ಳಬೇಕು. ನಾನು ಹೇಳಿದ್ದು ನಿಜವಾದರೆ ಬಹಳ ನೆಟ್ಟಗಾಗುವದು. ನೆಟ್ಟಗೆಂದರೇನು? ಹೇಳಿದ ಮಾತು ನಿಜವಾದರೆ ಯಾರಿಗಾದರೂ ಸಂತೋಷವಾಗುವ ದಿಷ್ಟೆ, ಹೆಚ್ಚಿನದೇನೂ ಇಲ್ಲ

ಖಾನ–ಹೇಳುವೆನು, ನೀವು ಹೇಳಿದ ಮಾತು ನಿಜವಾದರೆ ನಿಜವಾಯಿತೆಂದು ಹೇಳುವೆನು; ಆದರೆ ನಿಜವಾಗದಿದ್ದರೆ ಮಾತ್ರ ಕತ್ತೆಯ ಮೇಲೆ ಕುಳ್ಳಿರಿಸಿ ನಿಮ್ಮನ್ನು ನಮ್ಮ ಪಾಳಯದ ತುಂಬ ಮೆರಿಸೇನು!

ತಪಸ್ವಿನಿ–ಅವಶ್ಯವಾಗಿ ಮೆರಿಸಬೇಕು; ಅದಕ್ಕೆ ಸಂಪೂರ್ಣವಾಗಿ ನನ್ನ ಒಪ್ಪಿಗೆಯಿದೆ. ನೀವು ನ್ಯಾಯವಾದದ್ದನ್ನೇ ಮಾಡಿದರೆ, ನಾನು ವಿಷಾದಪಡುವದೇಕೆ? ಕೇಳಿರಿ, ಇನ್ನು ನಾನು ನಿಮ್ಮ ಮನಸ್ಸಿನೊಳಗಿನ ಮಾತನ್ನು ಹೇಳುತ್ತೇನೆ ಕೇಳಿರಿ—''ಶಿವಾಜಿಯು ಹೇಳಿದ ಹಾಗೆ ಈಗ ಕೇಳಿ, ಪ್ರಸಂಗದಲ್ಲಿ ವಿಶ್ವಾಸಘಾತದಿಂದ ಅವನನ್ನು ಹಣ್ಣು ಮಾಡಬೇಕು, ಇಲ್ಲವೆ ಸಾಧಿಸಿದರೆ ಅವನನ್ನು ಕೊಂದುಬಿಡಬೇಕು, ಎಂದು ನೀವು ಮನಸ್ಸಿನಲ್ಲಿ ನಿಶ್ಚಯಿಸಿರುವಿರಿ;'' ಈ ಮಾತು ನಿಜವೋ ಸುಳ್ಳೋ ಹೇಳಿರಿ. ಇನ್ನು ಮುಚ್ಚುಮರೆ ಮಾಡಿದರೆ ನಾನು ಕೇಳಲಿಕ್ಕಿಲ್ಲ!

ಹೀಗೆ ಮಾತಾಡುವಾಗ ತಪಸ್ವಿನಿಯ ತೀಕ್ಷ್ಣ ದೃಷ್ಟಿಯು ಖಾನನ ದೃಷ್ಟಿಗಳ ಕಡೆಗೆ ಇತ್ತು ಇದು ಖಾನನ ಲಕ್ಷದಲ್ಲಿ ಬರಲಿಲ್ಲ, ತಪಸ್ವಿನಿಯ ಮಾತುಗಳನ್ನು ಕೇಳಿ ಖಾನನು ಆಶ್ಚರ್ಯ ಮಗ್ನನಾದನು. ತನ್ನ ಮನಸ್ಸಿನೊಳಗಿನ ಮಾತುಗಳನ್ನು ಈಕೆಯು ಸರಿಯಾಗಿ ಹೇಳಿದಳೆಂದು ಆತನು ತಿಳಕೊಂಡನು. ಇನ್ನು ಈಕೆಗೆ ಏನು ಉತ್ತರ ಕೊಡಬೇಕೆಂದು ಆತನು ತನ್ನೊಳಗೆ ವಿಚಾರ ಮಾಡುತ್ತ ಮೆಲ್ಲನೆ ಆ ತಪಸ್ವಿನಿಗೆ—''ಅಲಬತ! ಅಲಬತ! ಈ ಮಾತು ನಮ್ಮ ಮನಸ್ಸಿನಲ್ಲಿರುತ್ತದೆ. ನಿಜವನ್ನು ನುಡಿಯುವೆನೆಂದು ನಿಮಗೆ ವಚನ ಕೊಟ್ಟಿರುವದರಿಂದ ಈಗ ಮಾಜದೆ ಹೇಳುತ್ತೇನೆ. ನನ್ನ ಮನಸ್ಸಿನೊಳಗಿನ ಮಾತು ನಿನಗೆ ಗೊತ್ತಾಗಿರುವದರಿಂದ, ಅದರ ಪರಿಣಾಮವು ಮುಂದೆ ಏನಾಗುವದೆಂಬದಾದರೂ ನಿನಗೆ ಗೊತ್ತಿರಲೇಬೇಕು; ಹೇಳು, ನೀನು ನನಗೆ ಅದನ್ನು ಹೇಳು,'' ಎಂದು ಕೇಳಿದನು. ಆಗ ತಪಸ್ವಿನಿಯೂ ಗಂಭೀರ ಮುದ್ರೆಯನ್ನು ತಾಳಿ ಕೆಲವು ಹೊತ್ತು ಸುಮ್ಮನೆ ಕುಳಿತುಕೊಂಡು ಖಾನನಿಗೆ—''ನಾನು ಅದನ್ನೂ ನಿಮ್ಮ ಮುಸಲ್ಮಾನೀ ರಮಲ ಶಾಸ್ತ್ರದ ಆಧಾರದಿಂದ ಹೇಳುವೆನು; ಆದರೆ ನನ್ನ ಭವಿಷ್ಯವು ನಿಜವಾದರೆ, ಈಗ ನೀವು ನೆಲಸಮ ಮಾಡಿರುವ ತುಳಜಾಪುರದ ಭವಾನಿಯ ಗುಡಿಯನ್ನೂ, ಪಂಢರಪುರದ ವಿಠೋಬನ ಗುಡಿಯನ್ನೂ ನಿಮ್ಮ ವೆಚ್ಚದಿಂದ ಕಟ್ಟಿಸಬೇಕು. ತಮ್ಮಂಥವರ ಮುಂದೆ ನನ್ನಂಥ ಹಿಂದೂ ಸ್ತ್ರೀಯು ಹೀಗೆ ಮಾತಾಡುವದು ಅತ್ಯಂತ ಸಾಹಸವೆಂಬದೇನೋ ನಿಜ; ಆದರೆ ನಾನು ಸರಳ ಮನುಷ್ಯಳು. ಎರಡನೆಯದೇನನ್ನೂ ನಾನು ಬೇಡಲಾರೆನು. ನನಗೆ ಸ್ವತಃ ಏನೂ ಬೇಕಾಗಿಲ್ಲ, ನಮ್ಮ ಪ್ರಸಿದ್ಧ ದೇವಾಲಯಗಳ ಪುನರುದ್ಧಾರವಾದರೆ ಸಾಕು!

ಖಾನ–ಏನು? ನಾನು ಕೆಡವಿರುವ ನಿಮ್ಮ ಹಿಂದೂ ದೇವಾಲಯಗಳನ್ನು ಕಟ್ಟಿಸಲಿಕ್ಕೆ ನೀನು ನನಗೆ ಹೇಳುವೆಯಾ? ನೀನು ಒಳ್ಳೆಯ ದಿಟ್ಟಳೆಂಬದರಲ್ಲಿ ಸಂಶಯವಿಲ್ಲ. ನನ್ನನ್ನು ನೋಡಿದ ಕೂಡಲೇ ಹಿಂದುಗಳು ಗದಗುಟ್ಟಿ ನಡಗುತ್ತಿರಲು, ನೀನು ಹೀಗೆ ಕೇಳುವದು ಹೆಚ್ಚು! ನಿಮ್ಮ ಶಿವಾಜಿಯಂಥವನು ಕೂಡ ನನಗೆ ಅಂಜಿ ಪರಿಪರಿಯಿಂದ ನನ್ನ ಮನಸ್ಸನ್ನು ಒಲಿಸಿಕೊಳ್ಳಲು ಯತ್ನಿಸುತ್ತಿರುವನು. ಹೀಗಿರಲು ನೀನು ನಮ್ಮ ಮುಂದೆ ಇಂಥ ಮಾತುಗಳನ್ನು ನಿಶ್ಶಂಕೆಯಿಂದ ಆಡುವೆಯಲ್ಲ! ನೀನು ಒಳ್ಳೇ ಎದೆಗಾರಳು!!

ತಪಸ್ವಿನಿ–ಖಾನಸಾಹೇಬ, ನೀವು ಹೇಳಿದಂತೆ ನಾನು ಕೆಚ್ಚೆದೆಯವಳೆಂಬದು ಸುಳ್ಳಲ್ಲ. ನಮ್ಮಂಥ ನಿಸ್ಪೃಹಿಗಳಿಗೆ ಯಾರದೇನು ಅಂಜಿಕೆ? ಕಟ್ಟಿಸುವದು ನಿಮ್ಮಿಂದ ಆಗದಿದ್ದರೆ, ಆಗುವದಿಲ್ಲೆಂದು ಸ್ಪಷ್ಟವಾಗಿ ಹೇಳಿರಿ. ಅದಕ್ಕೆ ನನ್ನ ಸಿಟ್ಟು ಇಲ್ಲ. ನಿಮ್ಮ ಪ್ರಶ್ನದ ಉತ್ತರವನ್ನು ನಾನು ಹ್ಯಾಗಿದ್ದರೂ ಹೇಳುವೆನು!!

ಖಾನ–ನೀನು ಬೇಕಾದದ್ದನ್ನು ಹೇಳು; ಮತ್ತು ನೀನು ಹೇಳಿದ ಹಾಗೆ ಬೇಕಾದದ್ದರ ಅನುಭವವು ನನಗೆ ಬರಲಿ; ಆದರೆ ನೀನು ಬೇಡುವ ಭಿಕ್ಷೆಯನ್ನು ನಾನು ಸರ್ವಥಾ ಹಾಕುವದಿಲ್ಲ. ನಿನಗೆ ನಾವು ಒಂದು ಭಿಕ್ಷೆ ಹಾಕುವದು ನಿಜವು; ಆದರೆ ಈಗಲೇ ಅದನ್ನು ಒಡೆದು ಹೇಳುವದಿಲ್ಲ. ನೀನು ಭವಿಷ್ಯವನ್ನು ಹೇಳಿದ ಹೊರತು ಇಲ್ಲಿಂದ ನೀನು ಬಿಡುಗಡೆ ಹೊಂದ ಲಾರೆಯೆಂಬುದನ್ನು ಮಾತ್ರ ಲಕ್ಷದಲ್ಲಿಡು. ಹೇಳು, ಇನ್ನು ಭವಿಷ್ಯ ವಾವದದನ್ನು!

ತಪಸ್ವಿನಿ–ಹೇಳುವೆನು; ಆದರೆ, ನಿಮ್ಮ ಈ ಬೆದರಿಕೆಗೆ ನಾನು ಬೆದರುವೆನೆಂದು ಮಾತ್ರ ತಿಳಿಯಬೇಡಿರಿ, ಎಷ್ಟುಮಾತ್ರವೂ ತಿಳಿಯಬೇಡಿರಿ. ನಾವು ನಿಮ್ಮ ಸಾಯಿಜಿಗಳು, ಫಕೀರರು ಇದ್ದಹಾಗೆ. ನಮಗೆ ಜಗತ್ತಿನ ಭಯವಿಲ್ಲ; ನಮ್ಮಿಂದ ಜಗತ್ತಿಗೆ ಭಯವಿಲ್ಲ. ಜೀವದ ಹಂಗು ನಾವು ಎಣಿಸುವವರಲ್ಲ. ನಿಮಗೆ ಧೈರ್ಯವಿದ್ದರೆ ನಿಮ್ಮ ಖಡ್ಗವನ್ನು ತಕ್ಕೊಂಡು ನನ್ನ ರುಂಡವನ್ನು ಈಗ ತುಂಡರಿಸಿರಿ. ಜೀವದ ಆಶೆಯು ಯಾರಿಗೆ? ಯಾತರದಾದರೂ ಲೋಪವಿದ್ದವರಿಗೆ. ನಮಗೆ ಸರ್ವಥಾ ಜೀವದ ಭಯವಿಲ್ಲ.

ತಪಸ್ವಿನಿಗೆ ಸಿಟ್ಟು ಬಂದದ್ದು ಒಳಿತಾಗಲಿಲ್ಲೆಂದು ಖಾನನು ತಿಳಿದು ಆಕೆಯನ್ನು ಕುರಿತು—"ನಿಮಗೆ ಸಿಟ್ಟು ಬರಬೇಕೆಂದು ನಾನು ಮಾತಾಡಲಿಲ್ಲ; ಆದರೆ ಅದು ಇರಲಿ, ಏನು ಹೇಳುವದನ್ನು ಹೇಳಿರಿ. ಹೊತ್ತು ಬಹಳ ಆಯಿತು. ಈ ಭವಿಷ್ಯದ ಕೆಲಸವನ್ನು ಬೇಗನೆ ತೀರಿಸಿ ಬಿಡೋಣ, ಅನ್ನಲು, ತಪಸ್ವಿನಿಯು—"ಅದಕ್ಕೇನು ತಡವಾಗಬೇಕಾಗಿದೆ? ಸ್ವಲ್ಪ ತಮ್ಮ ಹಸ್ತವನ್ನು ತೋರಿಸಿರಿ, ಈಗ ಹೇಳುವೆನು, ಎಂದು ಹೇಳಿದಳು. ಆಗ ಖಾನನು ಕೈಯನ್ನು ತೋರಿಸಲು, ತಪಸ್ವಿನಿಯು ಅದನ್ನು ಲಕ್ಷಪೂರ್ವವಾಗಿ ನೋಡಿ ಖಾನನನ್ನು ಕುರಿತು—"ಖಾನಸಾಹೇಬ, ನಿಮ್ಮ ಮನಸ್ಸಿನ ಬಯಕೆಯು ಸಂಪೂರ್ಣವಾಗಿ ಸಿದ್ಧವಾಗುವದು. ನಿಮ್ಮ ದೈವವು ಅನುಕೂಲವಾಗಿರುತ್ತದೆ; ನಿಮ್ಮ ಗ್ರಹಗಳು ಬಲಿಷ್ಠವಾಗಿರುತ್ತವೆ. ನಮ್ಮ ಧರ್ಮ ರಕ್ಷಕನು ನಾಶಹೊಂದುವನು. ಈ ಮಾತನ್ನು ಹೇಳುವಾಗ ನನಗೆ ಪರಮಾವಧಿಯಾದ ವ್ಯಸನ

ವಾಗುತ್ತಿದ್ದರೂ, ನಿಜವಾದ ಸಂಗತಿಯನ್ನು ನಾನು ಹೇಳದೆಯಿರಲಾರೆನು. ಈಗ ನನಗೆ ಸ್ಪಷ್ಟವಾಗಿ ಕಾಣುತ್ತದೆ; ನೀವು ಕೈಕೊಂಡ ಕಾರ್ಯವು ಸಫಲವಾಗಿ, ಬಾದಶಹರ ಸಂಪೂರ್ಣ ಪ್ರೇಮವು ನಿಮ್ಮ ಮೇಲೆ ಆಗುವದು.

ಈ ಮೇರೆಗೆ ನುಡಿದು ತಪಸ್ವಿನಿಯು ಅತ್ಯಂತ ವ್ಯಾಕುಲ ಮುದ್ರೆಯನ್ನು ತಾಳಿ ಸುಮ್ಮನೆ ಕುಳಿತುಕೊಂಡಳು. ಖಾನನಿಗೆ ಆಕೆಯ ಭವಿಷ್ಯವಾಣಿಯನ್ನು ಕೇಳಿ ಪರಮಾನಂದವಾಯಿತು. ಆತನು ತಪಸ್ವಿನಿಯನ್ನು ಕುರಿತು—''ಇನ್ನು ನಾನು ನಿನಗೆ ಹಾಕಬೇಕಾದ ಭಿಕ್ಷೆಯನ್ನು ಹೇಳುತ್ತೇನೆ ಕೇಳು. ಈಗಲೇ ನಿನ್ನ ರುಂಡವನ್ನು ಚಂಡಾಡುತ್ತಿದ್ದೆನು; ಆದರೆ ಹೆಂಗಸಾದದ್ದರಿಂದ ಬಿಟ್ಟಿದ್ದೇನೆ. ನಿನ್ನನ್ನು ಸದ್ಯಕ್ಕೆ ಸೆರೆಮನೆಯಲ್ಲಿರಿಸುವೆನು. ನಿಮ್ಮಂಥವರನ್ನು ಜೀವದಿಂದ ಬಿಡಲೇಬಾರದು. ನಿಮ್ಮಿಂದ ಮಂದಿಯ ಮನಸ್ಸಿನೊಳಗಿನ ಗುಟ್ಟಿನ ಮಾತು ಹೊರಬಿದ್ದು ಅನರ್ಥಗಳು ಒದಗಬಹುದು. ನಿನ್ನ ಭವಿಷ್ಯವು ನಿಜವಾಗುವವರೆಗೆ ನಿನ್ನನ್ನು ಸೆರೆಯಲ್ಲಿಟ್ಟು, ಭವಿಷ್ಯವು ನಿಜವಾದರೆ ಬಿಟ್ಟುಬಿಡುವೆನು. ಇಲ್ಲದಿದ್ದರೆ ನಿನ್ನ ರುಂಡವನ್ನು ಚಂಡಾಡುವೆನು. ಯಾರವರು ಅಲ್ಲಿ? ಲತೀಫ, ಬಾಯಿತ್ತ ಈಕೆಯನ್ನು ಸೆರೆಯಲ್ಲಿರಿಸು. ಬಲವಾದ ಕಾವಲಿರಲಿ. ಈಕೆಯನ್ನು ಬಿಟ್ಟರೆ ಕಾವಲುಗಾರರನ್ನೆಲ್ಲ ತುಂಡರಿಸಿ ಚಲ್ಲೇನು, ಜೋಕೆ, ಎಂದು ಹೇಳಲು, ಲತೀಫನು ಯೋಗಿನಿಯನ್ನು ಕಾರಾಗೃಹಕ್ಕೆ ಕರಕೊಂಡು ನಡೆದನು! ಆದರೆ ತನಗೆ ಮಹತ್ವದ ಸುದ್ದಿಯು ಗೊತ್ತಾಯಿತೆಂದು ತಪಸ್ವಿನಿಯು ಸಂತೋಷಪಡುತ್ತಿದ್ದಳು!!

# ಭವಾನಿಯ ಪ್ರಸಾದ

ಹೀಗೆ ಮಹಾರಾಜರ ಪರಿವಾರವು ಸ್ವಾಮಿಭಕ್ತಿಯಿಂದ ಪ್ರೇರಿತವಾಗಿ, ತನ್ನ ಸ್ವಾಮಿಯ ಹಿತಕ್ಕಾಗಿ ಬೆಂಕಿಯಲ್ಲಿ ಹಾರಿಕೊಂಡಂತೆ ಅತಿ ಸಾಹಸದ ಕಾರ್ಯವನ್ನು ಮಾಡುತ್ತಿರಲು, ಇತ್ತ ಪ್ರತಾಪಗಡದಲ್ಲಿ ಮಹಾರಾಜರು ಒಂದು ದಿನ ರಾತ್ರಿ ಸುಖದಿಂದ ನಿದ್ದೆ ಮಾಡುತ್ತಿದ್ದರು! ''ಮಸ್ತಕದಲ್ಲಿ ಕಿರೀಟವನ್ನು ಧರಿಸಿದವನಿಗೆ ಸ್ವಾಸ್ಥ್ಯದ ಸುದ್ದಿಯು ಕೂಡ ಇರುವದಿಲ್ಲೆಂ''ದು ಸೆಕ್ಸಪೀಯರನು ಹೇಳಿರುತ್ತಾನಂತೆ! ಈ ಮಾತು ಯಥಾರ್ಥವಾದದ್ದೆಂದು ಯಾರಾದರೂ ಒಪ್ಪಿಕೊಳ್ಳಬಹುದು; ಆದರೆ ಶಿವಾಜಿ ಮಹಾರಾಜರು ಈ ನಿಯಮಕ್ಕೆ ಅಪವಾದವಾಗಿದ್ದರು. ಯಾಕಂದರೆ ಶಿವಾಜಿ ಮಹಾರಾಜರಂಥ ಸ್ವಸ್ಥವೃತ್ತಿಯ ಧೀರರು, ತ್ರಿಭುವನದಲ್ಲಿ ಸಿಗುವದು ದುರ್ಲಭವು. ಎಂಥ ಸಂಕಟದ, ಅಥವಾ ಚಿಂತೆಯ ಪ್ರಸಂಗವೇ ಒದಗಿರಲಿ, ಮಹಾರಾಜರಿಗೆ ನಿದ್ದೆ ಮಾಡಬೇಕೆಂದು ಮನಸ್ಸಿನಲ್ಲಿ ಬಂದರೆ ಅರ್ಧಕ್ಷಣದಲ್ಲಿ ಅವರಿಗೆ ಗಾಢ ನಿದ್ರೆಯು ಹತ್ತುತ್ತಿತ್ತು! ಮತ್ತು ಎಷ್ಟು ಹೊತ್ತು ನಿದ್ದೆ ಮಾಡಬೇಕೆಂದು ಅವರು ಸಂಕಲ್ಪ ಮಾಡುತ್ತಿದ್ದರೋ ಅಷ್ಟೇ ಹೊತ್ತು ಅವರು ನಿದ್ದೆಮಾಡಿ ಎಚ್ಚರಿಸುತ್ತಿದ್ದರು! ಒಟ್ಟಿಗೆ, ಅವರ ಸಿಪಾಯಿಗಳಂತೆಯೇ ಅವರ ನಿದ್ದೆಯೂ ಅವರ ಆಜ್ಞಾಪಾಲನದಲ್ಲಿ ತತ್ಪರವಾಗಿರುತ್ತಿತ್ತೆಂದು ಹೇಳಬಹುದು!!

ಅಫಜುಲಖಾನನು ಬಂದಂದಿನಿಂದ, ವಿಶೇಷವಾಗಿ ಅವನು ತಮ್ಮ ಸುತ್ತುಮುತ್ತು ಬಲೆ ಒಡ್ಡಹತ್ತಿದಾಗಿನಿಂದ ಮಹಾರಾಜರ ಚಿತ್ತವು ಬಹು ಅಸ್ವಸ್ಥವಾಗಿತ್ತು. ಅಫಜುಲಖಾನನ ದವಡೆಯೊಳಗಿಂದ ತಾವು ಪಾರಾಗದಿದ್ದರೆ, ಸ್ವರಾಜ್ಯದ ಕಥೆಯು ಮುಗಿಯಿತೆಂತಲೂ, ಅಫಜುಲಖಾನನು ತಮ್ಮ ಕೈಯೊಳಗಿಂದ ಪಾರಾಗಿ ಹೋದರೂ ಸ್ವರಾಜ್ಯದ ಕತೆಯು ಮುಗಿದ ಹಾಗೆಯೇ ಎಂತಲೂ ಅವರು ತಿಳಕೊಂಡಿದ್ದರು. ಹೀಗೆ ಆಗಗೊಡದೆ ಖಾನನ ಪಾರಿಪತ್ಯ ಮಾಡಲಿಕ್ಕೆ ಏನು ಉಪಾಯ ಮಾಡಬೇಕೆಂದು ಅವರು ಆ ರಾತ್ರಿ ಸದರಿನ ಮೇಲೆ ಕುಳಿತು ಎಣಿಕೆ ಹಾಕುತ್ತಲಿದ್ದರು. ಹೀಗೆ ಎಣಿಕೆ ಹಾಕಿ ಕಡೆಗೆ ಅವರು —''ಅಂಬಾಬಾಯಿಯ ಮನಸ್ಸಿಗೆ ಬಂದರೆ ನಮ್ಮ ಯೋಚನೆಯು ಸಫಲವಾಗುವದು'' ಎಂದು ಭವಾನೀ ಮಾತೆಯ ಮೇಲೆ ಭಾರಹಾಕಿ, ಕುಳಿತಲ್ಲಿಯೇ ಸ್ವಲ್ಪ ಕಣ್ಣು ಮುಚ್ಚಿದರು. ಸ್ವಲ್ಪ ಹೊತ್ತು ನಿದ್ದೆಮಾಡಿ ಎದ್ದರೆ ಚಿತ್ತಕ್ಕೆ ಸ್ವಾಸ್ಥ್ಯವು ದೊರೆತು, ಯೋಗ್ಯ ಮಾರ್ಗವು ಗೊತ್ತಾಗಬಹುದೆಂದು ಅವರು ಯೋಚಿಸಿ, ತಲೆಯೊಳಗಿನ ವಿಚಾರಗಳ ಪೆಟ್ಟಿಗೆಗಳನ್ನು ಮುಚ್ಚಿ ಸ್ವಸ್ಥಚಿತ್ತರಾಗಲು, ಕೂಡಲೆ ಮೇಲೆ ಹೇಳಿದಂತೆ ಅವರಿಗೆ ಗಾಢವಾದ ನಿದ್ರೆಯು ಹತ್ತಿತು!

ಮಹಾರಾಜರು ಹೀಗೆ ಗಾಢ ನಿದ್ರೆಯ ಸುಖವನ್ನು ಕೆಲ ಹೊತ್ತು ಅನುಭವಿಸಿದ ಬಳಿಕ, ಅವರಿಗೊಂದು ಅರ್ಥಪೂರ್ಣವಾದ ಸ್ವಪ್ನವು ಬಿದ್ದಿತು. ಅದರ ಸಂಗತಿಯೇನೆಂದರೆ— ''ಒಂದು ಅರಣ್ಯವು, ಅತ್ಯಂತ ಗಹನವಾದ ಅರಣ್ಯವು. ಆ ಅರಣ್ಯದಲ್ಲಿ ಒಂದು ದೊಡ್ಡ ತಪೋವನವು. ಆ ಸುಂದರ ತಪೋವನವನ್ನು ನೋಡಿದ ಕೂಡಲೆ ಯಾರಿಗಾದರೂ ಆನಂದವಾಗದೆ ಇರದು. ಅಂಥ ತಪೋವನವನ್ನು ಮಹಾರಾಜರು ಹೊಕ್ಕು ಒಂದು ದಿನ್ನೆಯ ಕಡೆಗೆ ಸಾಗಿದಹಾಗಾಯಿತು. ಆ ದಿನ್ನೆಯ ಮೇಲೆ ಸಣ್ಣ ಸಣ್ಣ ಪರ್ಣಕುಟೀರಗಳು ಇದ್ದವು. ಅವುಗಳ ಸುತ್ತು ಮುತ್ತು ಚಿಗರೆಯ ಮರಿಗಳು ಚಕ್ಕಂದದಿಂದ ಹಾರಾಡುತ್ತಲಿದ್ದವು. ಅಷ್ಟರಲ್ಲಿ ಒಂದು ಹನ್ನೆರಡು ಮೆಟ್ಟಿನ ಭಯಂಕರವಾದ ಹುಲಿಯು ಆರ್ಭಟಿಸಿ ಹಾರುತ್ತ ಒಂದೊಂದು ಹಾರಿಕೆಗೆ ಕ್ರೂರತನದಿಂದ ಒಂದೆರಡಾದರೂ ಚಿಗರೆಯ ಮರಿಗಳನ್ನೂ, ಆಕಳು–ಆಕಳ ಕರುಗಳು ಮೊದಲಾದ ನಿರುಪದ್ರವ ಪ್ರಾಣಿಗಳನ್ನೂ, ಮುರಿದು ಚಲ್ಲುತ್ತ ಬರತೊಡಗಿತು. ಅದು ಮುರಿದು ಚಲ್ಲಿದ ಬಡಪ್ರಾಣಿಗಳ ಮೃತ ಶರೀರಗಳು ಅಲ್ಲಲ್ಲಿ ಬಿದ್ದಿದ್ದವು. ರಕ್ತವು ಸರವುಗಟ್ಟಿ ಹರಿಯುತ್ತಿತ್ತು. ಆ ತಪೋವನದೊಳಗಿನ ನಿರ್ಮಲವಾದ ಜಲ ಪ್ರವಾಹಗಳು ರಕ್ತಕೂಡಿ ಕೆಂಪಾಗಿದ್ದವು. ಹುಲಿಯ ಈ ಕ್ರೂರತನವನ್ನು ನೋಡಿ ಮಹಾರಾಜರು ಸಂತಾಪಗೊಂಡರು. ಅವರು ತಮ್ಮ ಬಳಿಯಲ್ಲಿದ್ದ ಬರ್ಚಿ–ಕತ್ತಿಗಳನ್ನು ಸಜ್ಜು ಮಾಡಿಕೊಂಡು ಹುಲಿಯ ಮೇಲೆ ಧುಮುಕಿದರು. ಆಗ ಆ ಹುಲಿಯು ಮಹಾರಾಜರನ್ನು ಕುರಿತು— ''ಬಾ–ಬಾ; ನಾನು ನಿನ್ನನ್ನು ಮುರಿಯುವದಕ್ಕಾಗಿಯೇ ಬಂದಿದ್ದೇನೆ. ಈವರೆಗೆ ಈ ಪ್ರಾಣಿಗಳನ್ನು ಕೊಂದದ್ದು ಮೋಜಿಗಾಗಿ. ನೀನು ಸಿಗುವವರೆಗೆ ನಾನು ಹ್ಯಾಗಾದರೂ ಹೊತ್ತುಗ್ಗಳೆದೆನು. ಈಗ ನೀನು ನನ್ನ ಕಣ್ಣಿಗೆ ಬಿದ್ದಿರುತ್ತೀ, ನನ್ನ ಬಳಿಗೆ ಬಂದಿರುತ್ತೀ. ನಿನ್ನ ಸಮಾಚಾರವನ್ನು ತಕ್ಕೊಳ್ಳದೆ ನಾನು ಬಿಡುವದಿಲ್ಲ. ಬಾ, ಮುಂದಕ್ಕೆ ಸಾಗಿ ಬಾ.''

ಹುಲಿಯು ಮಾತಾಡುವದನ್ನು ನೋಡಿ ಮಹಾರಾಜರಿಗೆ ಆಶ್ಚರ್ಯವಾಯಿತು; ಆದರೆ ಆಶ್ಚರ್ಯಪಡುತ್ತ ಸುಮ್ಮನೆ ನಿಂತುಕೊಳ್ಳಲಿಕ್ಕೆ ಅದು ಸಮಯವಿದ್ದಿಲ್ಲ. ಮಹಾರಾಜರು ಕೂಡಲೆ ಹುಲಿಯ ಮೇಲೆ ಏರಿಹೋದರು; ಎದುರಿಗೆ ನಿಂತು ಹೊಡೆದರೆ ಹುಲಿಯು ಸತ್ತೀತೆಂದು ಅವರಿಗೆ ತೋರಲಿಲ್ಲ ; ಆದ್ದರಿಂದ ಅವರು ಮುಂದಿನಿಂದ ಹುಲಿಯನ್ನು ಇರಿಯುವ ಹಾಗೆ ತೋರಿಸಿ, ಸರಕ್ಕನೆ ಹಿಂದಕ್ಕೆ ಸರಿದು ಅಡ್ಡವಾಗ್ಗಲಿನಿಂದ ಅದರ ಮರ್ಮಸ್ಥಾನಕ್ಕೆ ಬರ್ಚಿಯಿಂದ ಇರಿದರು. ಕೂಡಲೆ ಹುಲಿಯು ನೆಲಕ್ಕುರುಳಲು, ಎಲ್ಲ ಕಡೆಯಲ್ಲಿ ಆನಂದವು ತುಂಬಿ ತುಳಕಹತ್ತಿತು. ಆಗ ರಕ್ತಮಯ ಜಲಪ್ರವಾಹಗಳು ಸ್ವಚ್ಛವಾದವು; ಅಲ್ಲಲ್ಲಿ ಸತ್ತು ಬಿದ್ದಿದ್ದ ಪ್ರಾಣಿಗಳು ಚೇತರಿಸಿಕೊಂಡು ಎದ್ದು, ಮಹಾರಾಜರ ಸುತ್ತಮುತ್ತ ನಿಂತುಕೊಂಡು ಕೃತಜ್ಞತೆಯ ದೃಷ್ಟಿಯಿಂದ ಅವರನ್ನು ನೋಡಹತ್ತಿದವು. ಮಹಾರಾಜರು ಹಾಗೆಯೇ ಪರ್ಣಕುಟೀರಗಳಿರುವ ದಿನ್ನೆಯ ಕಡೆಗೆ ಸಾಗಿದರು. ಆ ಗುಡಿಸಲುಗಳ ಮಧ್ಯದಲ್ಲಿ ಒಂದು ಭವ್ಯವಾದ ದೇವಾಲಯವಿತ್ತು. ಮಹಾರಾಜರು ದೇವಾಲಯವನ್ನು ಹೊಕ್ಕು ಗರ್ಭಗುಡಿಗೆ ಹೋಗಲು, ಅಲ್ಲಿ ಅವರಿಗೆ ಕಣ್ಣು ಕುಕ್ಕುವ ತೇಜಸ್ಸಿನ ಮಧ್ಯದಲ್ಲಿ ದೇದೀಪ್ಯಮಾನವಾದ ಭವಾನಿಯ ದಿವ್ಯ ಮೂರ್ತಿಯ ದರ್ಶನವಾಯಿತು; ಆ ಲೋಕಮಾತೆಯ ಸುಂದರ ಮುಖಕಮಲದಲ್ಲಿ ಧೈರ್ಯವನ್ನು ಹುಟ್ಟಿಸುವ ಮೃದುಹಾಸವು ಒಪ್ಪುತ್ತಿರಲು, ಮತ್ತು ದೇವಿಯ ವರದಹಸ್ತವು ಅಭಯವನ್ನೀಯುತ್ತಿರಲು, ಮಹಾರಾಜರು ಭಕ್ತಿಪರವಶರಾಗಿ ಆ ಸರ್ವಮಂಗಲೆಗೆ ಸಾಷ್ಟಾಂಗವೆರಗಿದರು. ದೇವಿಯ ಚರಣ ಕಮಲಗಳಲ್ಲಿ ಮಹಾರಾಜರ ಮನಸ್ಸು ಲೀನವಾಗಲು, ಅವರ ಮೈಮೇಲಿನ ಎಚ್ಚರವು ತಪ್ಪಿದಂತಾಯಿತು. ಆಗ ಜಗದಂಬೆಯು ಮಹಾರಾಜರ ಮಸ್ತಕದ ಮೇಲೆ ತನ್ನ ವರದ ಹಸ್ತವನ್ನಿಟ್ಟು—''ವತ್ಸಾ, ಏಳು ಏಳು, ನೀನು ನನ್ನ ತಪೋವನದೊಳಗಿನ ನಿರಪರಾಧಿಗಳಾದ ಬಡ ಪ್ರಾಣಿಗಳನ್ನು ಆ ದುಷ್ಟ ವ್ಯಾಘ್ರನ ಕೈಯೊಳಗಿಂದ ಬಿಡಿಸಿದಕ್ಕಾಗಿ ನಾನು ಸಂತುಷ್ಟಳಾಗಿದ್ದೇನೆ. ಈ ದುಷ್ಟ ವ್ಯಾಘ್ರವನ್ನು ಹೋಲುವ ಆ ಮೂವತ್ತೆರಡು ಹಲ್ಲಿನ ಟಗರು ತಾನಾಗಿ ನಿನ್ನ ಬಳಿಗೆ ನಡೆದುಬರುತ್ತಲಿದೆ. ಅದನ್ನು ನನಗೆ ಬಲಿಯಾಗಿ ಅರ್ಪಿಸು. ವತ್ಸಾ, ಬೆದರಬೇಡ. ನಿನ್ನ ಮಸ್ತಕದ ಮೇಲೆ ನನ್ನ ಅಭಯ ಹಸ್ತವು ಇರುವದು. ನೀನು ರಮಿಸುತ್ತ ರಮಿಸುತ್ತ ಆ ಬಲಿಯನ್ನು ಹತ್ತರ ಬರಮಾಡಿಕೊಳ್ಳು. ಕೂಡಲೆ ಅದರ ಕೋಡುಗಳನ್ನು ಹಿಡಿದು ಗೊತ್ತಿಗೆ ಹಚ್ಚು. ಆ ಕಾರ್ಯದಲ್ಲಿ ನಿನಗೆ ಸಂಪೂರ್ಣ ಯಶಸ್ಸು ಪ್ರಾಪ್ತವಾಗುವದು. ನಾನು ನಿನ್ನ ಬೆನ್ನ ಮೇಲೆಯೇ ಇರುತ್ತೇನೆಂದು ತಿಳಿ. ಈ ಕಾರ್ಯವನ್ನು ನೀನು ಸಾಧಿಸಿ ಬಿಟ್ಟರೆ ನಿನ್ನ ಸುತ್ತು ಹತ್ತಿದ ಅರಿಷ್ಟವು ಶಾಶ್ವತವಾಗಿ ಹಿಂಗಿ ಹೋಗುವದು. ಬಲಿ ಕೊಡುವ ಮುಹೂರ್ತವನ್ನು ಮಾರ್ಗಶೀರ್ಷ ಶುದ್ಧ ಷಷ್ಠಿಯಾಗಿ ನಿಯಮಿಸು'' ಎಂದು ನುಡಿದು, ಭವಾನಿಯು ಪುನಃ ಮಹಾರಾಜರ ಮಸ್ತಕದ ಮೇಲೆ ವರದ ಹಸ್ತವನ್ನಿಟ್ಟಳು. ಆಗ ಮಹಾರಾಜರಿಗೆ ತಣ್ಣಗೆ ಹತ್ತಿದಂತೆ ಆಗಿ, ಅವರಿಗೆ ಎಚ್ಚರವಾಯಿತು.

ಮಹಾರಾಜರು ಕಣ್ತೆರೆದು ನೋಡಲು, ಯಾರೋ ನಿಜವಾಗಿಯೇ ಅವರ ತಲೆಯ ಮೇಲೆ ಕೈಯಿಟ್ಟಿದ್ದರು. ಆಗ ಮಹಾರಾಜರು ಲಕ್ಷಪೂರ್ವಕ ಅವಲೋಕಿಸಿ, ಕೈಯಿಟ್ಟವರು ತಮ್ಮ ಪೂಜ್ಯ ಜನನಿಯೆಂದು ತಿಳಿದು ಅವರನ್ನು ನೋಡಿ ನಕ್ಕರು. ತಮ್ಮ ಮಗನು ಈಗ ಒದಗಿದ್ದ ಗಂಡಾಂತರದೊಳಗಿಂದ ಹ್ಯಾಗೆ ಪಾರಾದಾನೆಂದು ಆ ಸಾಧ್ವಿಯು ಹಗಲಿರುಳು ಚಿಂತಾಮಗ್ನಳಾಗಿ, ಪ್ರತ್ಯಕ್ಷ ಚಿಂತೆಯ ಮೂರ್ತಿಯಂತೆ ತೋರುತ್ತಿದ್ದಳು. ಮಗನು ಕುಳಿತಲ್ಲಿಯೇ ನಿದ್ದೆ ಮಾಡುವದನ್ನು ನೋಡಿ, ಆತನು ಒಳಗೆ ಹೋಗಿ ಸ್ವಸ್ಥ ಮಲಗಿಕೊಳ್ಳಲೆಂದು ಆತನನ್ನು ಎಬ್ಬಿಸುವದಕ್ಕಾಗಿ ಆ ಜೀಜಾಬಾಯಿ ಸಾಹೇಬರು ಅಲ್ಲಿಗೆ ಬಂದಿದ್ದರು. ಮಹಾರಾಜರ ಮಸ್ತಕದ ಮೇಲೆ ಭವಾನೀ ಮಾತೆಯು ಕೈಯಿಡಲಿಕ್ಕೂ, ಜೀಜಾಬಾಯಿವರು ಕೈಯಿಡಲಿಕ್ಕೂ ಗಂಟುಬಿದ್ದಿತು! ತಾಯಿಯನ್ನು ನೋಡಿದ ಕೂಡಲೆ ಮಹಾರಾಜರಿಗೆ ಪರಮಾನಂದವಾಯಿತು. ಅವರು ತಟ್ಟನೆ ಎದ್ದು ತಾಯಿಯನ್ನು ಕುರಿತು''ಅವ್ವಾ, ಭವಾನಿಮಾತೆಯ ಕೃಪೆಯು ನನ್ನ ಮೇಲೆ ಇರುವದು ನಿಶ್ಚಯವು. ನೀನು ನನ್ನ ಮಸ್ತಕದ ಮೇಲೆ ಕೈಯಿಟ್ಟಂತೆ, ಈಗ ಸ್ವಪ್ನದಲ್ಲಿ ಭವಾನೀಮಾತೆಯು ತನ್ನ ವರದ ಹಸ್ತವನ್ನು ನನ್ನ ತಲೆಯಮೇಲೆ ಇಟ್ಟಿದ್ದಳು. ಹಹ! ಏನು ಸುಪ್ರಸನ್ನ ಮುಖವದು! ವಾಣಿಯು ಎಷ್ಟು ಮಧುರವದು! ಅವ್ವಾ, ನೀನು ನನ್ನ ಸಂಗಡ ಆ ತಪೋವನದಲ್ಲಿ ಬಂದಿದ್ದರೆ ಬಹಳ ನೆಟ್ಟಗಾಗುತ್ತಿತ್ತು'' ಎಂದು ನುಡಿದು, ತಮ್ಮ ಯಾವತ್ತು ಕನಸನ್ನು ಸವಿಸ್ತಾರವಾಗಿ ತಾಯಿಗೆ ಹೇಳಿದರು. ಅದನ್ನು ಕೇಳಿದ ಕೂಡಲೆ ಜೀಜಾಬಾಯಿ ಸಾಹೇಬರಿಗೆ ಬಹಳ ಆನಂದವಾಯಿತೆಂದು ಹೇಳಲವಶ್ಯವಿಲ್ಲ. ಅವರು ತಮ್ಮ ಮಗನನ್ನು ಕುರಿತು—''ಶಿವಬಾ, ನಿನ್ನ ಮೇಲೆ ಜಗದಂಬೆಯ ಕೃಪೆಯು ಪೂರ್ಣವಾಗಿ ಇರುವದು. ನೀನು ಬಡವರು ಬಗ್ಗರನ್ನು ಮೊಗಲರ ಉಪದ್ರವದಿಂದ ಮುಕ್ತ ಮಾಡುವವರೆಗೆ ನಿನಗೆ ಅಪಯಶಸ್ಸು ಪ್ರಾಪ್ತವಾಗದು. ಮೊಗಲರ ಅತ್ಯಾಚಾರದ ಮಿತಿಯು ಮೀರಿದ್ದರಿಂದ, ಅವರ ಶಾಸನ ಮಾಡುವದು ಭವಾನೀಮಾತೆಯ ಮನಸ್ಸಿಗೆ ನಿಶ್ಚಯವಾಗಿ ಬಂದಿರುತ್ತದೆ. ಆಕೆಯೂ ನಿನ್ನ ಕೈಯಿಂದಲೇ ಅವರ ಶಾಸನ ಮಾಡಿಸುವಳು; ಆದ್ದರಿಂದ ನೀನು ಕರ್ತವ್ಯತತ್ಪರನಾಗು. ಅಪಯಶಸ್ಸು ಬರುವದೆಂಬದನ್ನು ಮನಸ್ಸಿನಲ್ಲಿ ಕೂಡ ತರಬೇಡ.''

ಹೀಗೆ ಆ ತಾಯಿಯಮಕ್ಕಳ ಸಂಭಾಷಣವು ನಡೆದಿರಲು, ಬೆಳಗಾಯಿತು. ಆದರೂ ಅವರ ಮಾತುಗಳು ಮುಗಿಯಲಿಲ್ಲ. ಖಾನನ ನಿಜವಾದ ಮನೋದಯವು ತಿಳಿಯದ್ದರಿಂದ ಮಹಾರಾಜರು ಸಂಶಯಗ್ರಸ್ತರಾಗಿದ್ದರು. ನಾನು ಹೇಳಿದ್ದಕ್ಕೆಲ್ಲ ಖಾನನು ಒಪ್ಪಿಕೊಳ್ಳುವದರಿಂದ, ಆತನು ಅಂತರಂಗದಲ್ಲಿ ದುರಾಲೋಚನೆ ಮಾಡಿರಬಹುದೆಂದು ಅವರು ತರ್ಕಿಸಿದರು; ಆದರೆ ಹೀಗೆಯೇಯೆಂದು ನಿರ್ಧರಿಸಲಿಕ್ಕೆ ಅವರಿಗೆ ಆಧಾರಗಳಿದ್ದಿಲ್ಲ. ಖಾನನನ್ನು ಕಾಣುವ ವಿಷಯದಲ್ಲಿ ಇನ್ನು ಅವರು ವಿಲಂಬಮಾಡುವ ಹಾಗಿದ್ದಿಲ್ಲ. ಖಾನನು ಭೆಟ್ಟಿಯ ವಿಷಯವಾಗಿ ಅತ್ಯಂತ ಆತುರನಾಗಿದ್ದನು. ಅವನ ವಕೀಲನು ಮೇಲೆ ಮೇಲೆ ಬರತೊಡಗಿದ್ದನು. ಮಹಾರಾಜರ ಪರಿವಾರವಾದರೂ ಈ ಪ್ರಕರಣದ ನಿರ್ಣಯವು ಬೇಗನೆ ಆಗಬೇಕೆಂದು ಆತುರಪಡುತ್ತಿತ್ತು. ಸ್ವತಃ ಮಹಾರಾಜರ ಮನಸ್ಸಿನಲ್ಲಿಯೂ ವಿಲಂಬ ಮಾಡುವದಿದ್ದಿಲ್ಲ; ಆದರೆ

ತಾವು ಖಾನನೊಡನೆ ವಿಶ್ವಾಸದಿಂದ ನಡೆಯಬೇಕೋ, ಅವಿಶ್ವಾಸದಿಂದ ನಡೆಯಬೇಕೋ ಎಂಬದನ್ನು ನಿರ್ಣಯಿ ಸಿಕೊಳ್ಳಲಿಕ್ಕೆ ಅವರಿಗೆ ಬರುವಹಾಗಿದ್ದಿಲ್ಲ. ಹೀಗಿರುವಾಗ, ಸರ್ಜೇರಾಯನು ಬಂದಿರುವೆಂದು ಒಬ್ಬ ಸೇವಕನು ಹೇಳಲು, ಮಹಾರಾಜರು ಕೂಡಲೆ ಆತನನ್ನು ಕರಿಸಿಕೊಂಡರು. ಪದ್ಧತಿಯಂತೆ ಸರ್ಜೇರಾಯನು ಮಹಾರಾಜರನ್ನು ವಂದಿಸಿ ಕೈಕಟ್ಟಿಕೊಂಡು ನಿಂತು—''ಪ್ರಭುವೇ, ಈಗ ಕೆಲವು ದಿನಗಳ ಹಿಂದೆ ನಿಮ್ಮ ಮನೆಯಲ್ಲಿದ್ದ ಬೈರಾಗಿಣಿಯು, ಅಂದರೆ ಜಾಧವ ರಾಯನ ಹೆಂಡತಿಯಾದ ಹೈಮವತೀ ದೇವಿಯು, ಅತ್ಯಂತವಾದ ಸಾಹಸದಿಂದ ತಿಳಿದುಕೊಂಡಿದ್ದ ಖಾನನ ಹೊಟ್ಟೆಯೊಳಗಿನ ಮಾತನ್ನು ಹೇಳಲಿಕ್ಕೆ ನಾನು ಈಗ ತಮ್ಮ ಬಳಿಗೆ ಬಂದಿದ್ದೇನೆ. ಖಾನನು ತಮ್ಮನ್ನು ಮೋಸದಿಂದ ಕೊಲ್ಲಲು ನಿಶ್ಚಯಿಸಿರುವನು. ತಾವು ಖಾನನಲ್ಲಿ ವಿಶ್ವಾಸವಿಟ್ಟು ಸರಳತನದಿಂದ ಆತನ ಭೆಟ್ಟಿಗೆ ಹೋದರೆ, ಘಾತವಾದೀತೆಂದು ತಿಳಿದು ನಾನು ಈ ಸುದ್ದಿಯನ್ನು ಹೇಳಲಿಕ್ಕೆ ಅವಸರದಿಂದ ಬಂದೆನು. ಹೈಮವತೀ ದೇವಿಯು ಬಹು ತೀವ್ರವಾಗಿ ಹೋಗೆಂದು ಹೇಳಿರುವಳು. ಆಕೆಯು ಕಾರಾಗೃಹವಾಸವನ್ನು ಭೋಗಿಸುತ್ತಿರುವದರಿಂದ, ಮಹಾರಾಜರ ದರ್ಶನಕ್ಕೆ ಬರುವ ಹಾಗಿಲ್ಲ. ಆಕೆಯ ಪತಿಯಾದ ಜಾಧವರಾಯನು ಖಾನನ ಬಳಿಯಲ್ಲಿದ್ದು, ತನ್ನ ಹೆಂಡತಿಗೆ ಅಪಾಯವು ಒದಗದಂತೆ ಗುಪ್ತ ರೀತಿಯಿಂದ ನೋಡಿಕೊಳ್ಳುತ್ತಿರುವನು. ನಾವು ಹೈಮವತಿಯನ್ನು ಕಾರಾಗೃಹದಿಂದ ಬಿಡಿಸಿಕೊಂಡು ಬರಬಹುದಾಗಿತ್ತು; ಆದರೆ, ಅದರಿಂದ ಖಾನನಿಗೆ ಸಂಶಯವು ಉತ್ಪನ್ನವಾಗಬಹುದೆಂದು ತಿಳಿದು ಸುಮ್ಮನೆ ಬಿಟ್ಟಿರುತ್ತೇವೆ. ಈಗಲೇ ನಾನು ಖಾನನ ಛಾವಣಿಗೆ ಹೋಗುವೆನು. ಹೈಮವತೀದೇವಿಯ ಚಿಂತೆಯನ್ನು ಮಹಾರಾಜರು ಸರ್ವಥಾ ಮಾಡಬಾರದು. ತಮ್ಮಲ್ಲಿಗೆ ಬಂದ ಹೇಜೀಬನೇ ಜಾಧವರಾಯನು, ತಮ್ಮನ್ನು ಗವಿಯ ಗಂಡಾಂತರದಿಂದ ಪಾರು ಮಾಡಿದವಳೇ ಯೋಗಿನಿಯ ವೇಷಧಾರಿಯಾದ ಹೈಮವತಿಯು, ಎಂದು ಹೇಳಿ, ಹೈಮವತಿಯು ಯೋಗಿನಿಯ ವೇಷದಿಂದ ಖಾನನಿಗೆ ಭವಿಷ್ಯವನ್ನು ಹೇಳಿದ್ದನ್ನೂ, ತಾನು ಆಕೆಯ ಶಿಷ್ಯಳಾಗಿ ಹೋಗಿ ಈ ಗುಟ್ಟಿನ ಮಾತನ್ನು ತಿಳಕೊಂಡು ಬಂದದ್ದನ್ನೂ ಒಂದುಳಿಯದಂತೆ ಹೇಳಿದನು; ಮತ್ತು ತನ್ನ ಗುಟ್ಟಿನ ಮಾತನ್ನು ಹೊರಗೆಡವಿಯಾಳೆಂದು ತಿಳಿದು, ಹೈಮವತಿಯನ್ನು ಖಾನನು ಸೆರೆಯಲ್ಲಿಟ್ಟಿದ್ದೇ ತಾನು ತಂದ ಸುದ್ದಿಗೆ ಬಲವಾದ ಸಾಕ್ಷಿಯೆಂತಲೂ ಆ ಸ್ವಾಮಿನಿಷ್ಠನು ಮಹಾರಾಜರಿಗೆ ಸೂಚಿಸಿದನು.

ಸರ್ಜೇರಾಯನ ಈ ಮಾತನ್ನು ಕೇಳಿ ಮಹಾರಾಜರು ಆಶ್ಚರ್ಯಪಟ್ಟರು. ಹೈಮವತಿಯು ತಮ್ಮ ವಿಷಯವಾಗಿ ತಾಳಿದ ಭಕ್ತಿಯನ್ನು ಸ್ಮರಿಸಿ, ಅವರು ಕಣ್ಣುಗಳು ಬಾಷ್ಪಪೂರ್ಣವಾದವು. ಅವರು ತಮ್ಮ ಬಳಿಯಲ್ಲಿ ಕುಳಿತಿರುವ ತಮ್ಮ ತಾಯಿಯ ಕಡೆಗೆ ನೋಡಲು, ಆ ಸಾಧ್ವಿಯ ಕಂಠವು ಬಿಗಿದು, ಕಣ್ಣುಗಳೊಳಗಿಂದ ಬಳಬಳ ನೀರುಗಳು ಉದರಹತ್ತಿದ್ದವು. ಇಂಥ ಸ್ವಾಮಿನಿಷ್ಠ ಜನರ ಯೋಗದಿಂದ ತಾವು ಧನ್ಯರೆಂದು ಮಹಾರಾಜರು ತಿಳಿದರು! ಇಂಥ ಪುಣ್ಯಶಾಲಿಯಾದ ಮಗನನ್ನು ಪಡೆದದ್ದರಿಂದ ತಾವು ಧನ್ಯರಾದೆವೆಂದು ಜೀಜಾಬಾಯಿವರು ತಿಳಿದುಕೊಂಡರು. ಆ ಪವಿತ್ರ ಮೂರ್ತಿಯಾದ ಹೈಮವತಿಯ ದರ್ಶನವು ತಮಗೆ ಯಾವಾಗ ಆದೀತೆಂದು ಅವರಿಬ್ಬರು ಆತುರಪಡಹತ್ತಿದರು.

ಹೀಗೆ ಆ ತಾಯಿ-ಮಕ್ಕಳಿಬ್ಬರು ಸದ್ಭಾವನಾಪೂರಿತರಾಗಿ, ಸರ್ಜೇರಾಯನನ್ನು ಕೃತಜ್ಞತಾಪೂರ್ವಕ ದೃಷ್ಟಿಯಿಂದ ನೋಡುತ್ತ ಒಂದು ಮಾತನ್ನಾದರೂ ಆಡಲಾರದೆ ಸುಮ್ಮನೆ ಕುಳಿತುಕೊಂಡರು. ಸ್ವಲ್ಪ ಹೊತ್ತಿನ ಮೇಲೆ ಮಹಾರಾಜರು ಸರ್ಜೇರಾಯನನ್ನು ಕುರಿತು— "ಸರ್ಜೇರಾವ, ನಿಮ್ಮಂಥವರ ಸಹಾಯವು ನನಗಿಲ್ಲದಿದ್ದರೆ ನನ್ನಿಂದ ಯಾವ ಕೆಲಸವಾಗಿತ್ತು ಹೇಳು. ನಿಮ್ಮಂಥ ಸ್ವಾಮಿನಿಷ್ಠರ ಸ್ವಾಮಿಯ ಸ್ಥಾನದಲ್ಲಿ ನಾನಿರುವದು ದೊಡ್ಡ ಪುಣ್ಯವು! ನಿಮ್ಮೆಲ್ಲರ ಜೀವದ ಮೇಲೆಯೇ ಶಿವಾಜಿಯ ಚಲ್ಲಾಟವು! ಆಗಲಿ, ಸರ್ಜೇರಾವ, ಹೆಚ್ಚಿಗೆ ಮಾತಾಡಲಿಕ್ಕೆ ಈಗ ಅವಕಾಶವಿಲ್ಲ. ನೀನು ಈಗಲೇ ಹೋಗಿ ಆ ಸಾಧ್ವಿ ಶಿರೋಮಣಿಯಾದ ಹೈಮವತಿಯ ಯೋಗಕ್ಷೇಮದಲ್ಲಿ ಜಾಗರೂಕನಾಗಿರು. ನಿಮ್ಮ ಸ್ವಾಮಿಗೆ ಪ್ರಾಣದಾನ ಮಾಡಿದವಳು ಸಾಕ್ಷಾತ್ ಅಂಬಾಬಾಯಿಯೆಂತಲೇ ನಾನು ನೀವೂ ತಿಳಕೊಂಡು ಆಕೆಯ ಸೇವಾತತ್ಪರರಾಗಿರತಕ್ಕದ್ದು. ನಿಜವಾದ ಸೇವಕರೇ ಸೇವ್ಯರಿಗೆ ಪೂಜ್ಯರು! ಇಂಥ ಸೇವ್ಯ-ಸೇವಕರಲ್ಲಿ ಭೇದವನ್ನೆಣಿಸುವದು ಅಜ್ಞಾನವೇ ಸರಿ. ನಡೆ, ನಿಲ್ಲಬೇಡ. ಬೇಗನೆ ಊಟಮಾಡಿ ಹೈಮವತಿಯ ಸಂರಕ್ಷಣಕ್ಕಾಗಿ ಸಿದ್ಧನಾಗಿರು ನಡೆ. ಕೆಲವು ವಿಶ್ವಾಸದ ಜನರನ್ನು ಸಂಗಡ ಕರಕೊಂಡು ಹೋಗು. ನಿಮ್ಮ ಮಹಾರಾಜರನ್ನು ಖಾನನ ಬಾಧೆಯಿಂದ ಸಂರಕ್ಷಿಸುವಲ್ಲಿ ಎಚ್ಚರಪಡುವದಕ್ಕಿಂತ, ಹೈಮವತಿಯನ್ನು ಸಂರಕ್ಷಿಸುವ ವಿಷಯದಲ್ಲಿ ಹೆಚ್ಚು ಎಚ್ಚರಪಡಿರಿ," ಎಂದು ಹೇಳಿದರು. ಜೀಜಾಬಾಯಿಯವರು ಸರ್ಜೇರಾಯನನ್ನು ಕರಕೊಂಡು ಒಳಗೆ ಹೋಗಲು, ಮಹಾರಾಜರು ಪ್ರಾತರ್ವಿಧಿಗಳನ್ನು ತೀರಿಸುವದಕ್ಕಾಗಿ ಎದ್ದು ಹೋದರು.

ಮಹಾರಾಜರ ಹಾಗು ಖಾನನ ಭೆಟ್ಟಿಯ ಯೋಗವು ಒದಗಿದ್ದರಿಂದ ಅದಕ್ಕೆ ಅನುಕೂಲವಾದ ಸಂಗತಿಗಳು ಬಡಬಡ ಒದಗಹತ್ತಿದವು. ಮಹಾರಾಜರು ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಏಕಾಂತ ಗೃಹದಲ್ಲಿ ಕುಳಿತು ತಮ್ಮೊಳಗೆ ವಿಚಾರಮಾಡುತ್ತಿರಲು, ಖಾನನ ಕಡೆಯಿಂದ ವಕೀಲನು ಬಂದನೆಂಬ ಸುದ್ದಿಯು ಬಂದಿತು. ಅಫಜುಲಖಾನನು ಭೆಟ್ಟಿಯ ಸಲುವಾಗಿ ಅತ್ಯಂತ ಆತುರಪಟ್ಟವನಾಗಿ ತನ್ನ ಕಟ್ಟಕಡೆಯ ನಿರೂಪವನ್ನು ತಿಳಿಸುವದಕ್ಕಾಗಿ ಗೋಪೀನಾಥಪಂತನನ್ನು ಕಳಿಸಿದ ಸಂಗತಿಯನ್ನು ನಾವು ಹಿಂದೆ ತಿಳಿಸಿದ್ದೇವೆ. ಅದರಂತೆ ಗೋಪೀನಾಥಪಂತನು ಈ ಮಹಾರಾಜರನ್ನು ಕಾಣಲಿಕ್ಕೆ ಬಂದಿದ್ದನು. ಆತನು ಬಂದ ವರ್ತಮಾನವು ಮಹಾರಾಜರಿಗೆ ಗೊತ್ತಾಯಿತು. ಮಹಾರಾಜರ ವಕೀಲನು ಗೋಪೀನಾಥ ಪಂತನನ್ನು ಕಾಣಲಿಕ್ಕೆ ಹೋದನು. ಅವರಿಬ್ಬರು ಸರಳ ಮನಸ್ಸಿನಿಂದ ಬಹಳ ಹೊತ್ತು ಮಾತಾಡಿದರು. ಬಳಿಕ ಗೋಪೀನಾಥಪಂತನು ಮಹಾರಾಜರನ್ನು ಕಂಡನು. ಮಹಾರಾಜರು ಖಾನನ ನಿರೂಪವನ್ನು ಕೇಳಿಕೊಂಡರು. ಅವರು ಗೋಪೀನಾಥಪಂತನನ್ನು ಕುರಿತು—"ನೀವು ಬ್ರಾಹ್ಮಣರು ಸತ್ಯವಚನದವರು. ಆ ಹಿಂದೂ ಧರ್ಮದಲ್ಲಿ ನಿಮ್ಮ ಪೂರ್ಣ ವಿಶ್ವಾಸವಿದ್ದು, ಅದರ ಉದ್ಧಾರಕ್ಕಾಗಿ ಯೋಗ್ಯ ಸಹಾಯ ಮಾಡಲು ಆ ಮೊದಲೆ ನನಗೆ ನೀವು ವಚನ ಕೊಟ್ಟಿರುತ್ತೀರಿ. ಇನ್ನು ಆ ಮಾತನ್ನು ಕುರಿತು ಪುನಃ ಪ್ರಸ್ತಾಪಿಸುವ ಕಾರಣವಿಲ್ಲ. ಇನ್ನು ಮುಂದಿನ ವ್ಯವಸ್ಥೆಯನ್ನು ಹ್ಯಾಗೆ ಮಾಡಬೇಕೆಂಬದನ್ನು ನಾವಿಬ್ಬರೂ ಕೂಡಿ ಆಲೋಚಿಸಿ ನಿಶ್ಚಯಿಸೋಣ. ಸದ್ಯಕ್ಕೆ ನಾನು ಆಯಿ ಸಾಹೇಬರವರ ವಿಚಾರವನ್ನು ಕೇಳಿಕೊಂಡು, ಅಂಬಾಬಾಯಿಯ

ಅಪ್ಪಣೆಯನ್ನು ಪಡೆದುಬರುತ್ತೇನೆ. ಅಂಬಾಬಾಯಿಯ ಅಪ್ಪಣೆಯಂತೆ ಎಲ್ಲ ಕೆಲಸಗಳು ನಡೆಯತಕ್ಕವು. ನೀವು ಸ್ವಲ್ಪ ವಿಶ್ರಮಿಸಬೇಕು. ಯೋಗ್ಯ ಕಾಲಕ್ಕೆ ತಮ್ಮನ್ನು ಕರೆಸುವೆನು. ನಮ್ಮ ನಿಮ್ಮ ವಿಚಾರಗಳು ಭಿನ್ನವಾಗಿಲ್ಲ, ಉದ್ದೇಶವೂ ಭಿನ್ನವಾಗಿರುವದಿಲ್ಲ.

ಈ ಮೇರೆಗೆ ನುಡಿದು ಮಹಾರಾಜರು ಜೀಜಾಬಾಯಿ ಸಾಹೇಬರ ಅಂತಃಪುರಕ್ಕೆ ಹೋದರು. ಅವರು ತಾಯಿಯ ವಿಚಾರವನ್ನು ಕೇಳಿಕೊಳ್ಳದೆ ಯಾವ ಕೆಲಸವನ್ನೂ ಮಾಡುತ್ತಿದ್ದಿಲ್ಲ, ಇದು ಅವರ ನಿತ್ಯ ನಿಯಮವಾಗಿತ್ತು. ಅವರು ತಾಯಿಯ ಮುಂದೆ ಖಾನನ ಕಟ್ಟಕಡೆಯ ವಿಚಾರವನ್ನು ತಿಳಿಸಿದರು. ಅದನ್ನು ಕೇಳಿ ಜೀಜಾಬಾಯಿಸಾಹೇಬರಿಗೆ ಆಶ್ಚರ್ಯವಾಯಿತು. ಅವರು ಮಹಾರಾಜರನ್ನು ಕುರಿತು—''ಶಿವಬಾ, ಖಾನನು ತನ್ನ ಸಂಗಡ ನೀನು ವಿಜಾಪುರಕ್ಕೆ ಬರಬೇಕೆಂಬ ಮಾತನ್ನು ಹರಿದಾಸರ ಪಲ್ಲವಿಯಂತೆ ಮೇಲೆ ಮೇಲೆ ಉಚ್ಚರಿಸುವನಲ್ಲ! ವಿಜಾಪುರಕ್ಕೆ ಬಂದು ಬಾದಶಹನಿಗೆ ಮುಜರೆ ಮಾಡಿ, ಆತನಿಂದ ಸುಭೇದಾರಿಕೆಯ ವಸ್ತ್ರಗಳನ್ನು ಪಡಕೊಂಡು ಬರಬೇಕೆನ್ನುವ ಆತನ ಮಾತಿನಲ್ಲಿ ಸಂಪೂರ್ಣವಾಗಿ ಮೋಸವು ತುಂಬಿರುವಂತೆ ನನಗೆ ಕಾಣುತ್ತದೆ. ವಿಜಾಪುರಕ್ಕೆ ಹೋಗುವದು ನಿನ್ನ ಮನಸ್ಸಿನಲ್ಲಿ ಇಲ್ಲೆಂಬದನ್ನೂ, ಹೋದರೆ ಹಿತವಾಗ ದೆಂಬದನ್ನೂ ಗೋಪೀನಾಥಪಂತರು ಅರಿತಿದ್ದು, ಅವರು ಮತ್ತೆ ಈ ಮಾತನ್ನು ತಿಳಿಸಲಿಕ್ಕೆ ನಿನ್ನ ಬಳಿಗೆ ಯಾಕೆ ಬಂದರು? ಶಿವಬಾ, ಆ ಬ್ರಾಹ್ಮಣನಾದರೂ ಸರಳ ರೀತಿಯಿಂದ ನಡೆಯುವನೋ ಇಲ್ಲವೋ ಎಂಬದನ್ನು ನೀನು ಚನ್ನಾಗಿ ವಿಚಾರಮಾಡು. ಯಾರಿಗೆ ಗೊತ್ತು, ಆತನೂ ಮೋಸಮಾಡಿ ನಿನ್ನನ್ನು ಖಾನನ ದವಡೆಯಲ್ಲಿ ಕೊಡಲಿಕ್ಕೆ ನಿಂತಿರಬಹುದು. ಹಾಗೆ ಇಲ್ಲದಿದ್ದರೆ, ಮೇಲೆ ಮೇಲೆ ಆ ಮಾತನ್ನು ಕೇಳಿಲಿಕ್ಕೆ ಅವರು ಯಾಕೆ ಬರುತ್ತಿದ್ದರು? ಅಂಬಾಬಾಯಿ ಮನಸ್ಸಿನಲ್ಲಿ ಇದ್ದಂತೆ ಆಗುವದು. ನೀನು ಮಾತ್ರ ಸರ್ವಥಾ ವಿಜಾಪುರಕ್ಕೆ ಹೋಗಬೇಡ. ಎತ್ತಕಡೆ ಯಿಂದಾದರೂ ನಿನ್ನನ್ನು ಬಲೆಯಲ್ಲಿ ಹಿಡಿಯಲಿಕ್ಕೆ ಖಾನನು ಯತ್ನಿಸುತ್ತಿರುವನು. ನೀನು ಆತನ ಸಂಗಡ ವಿಜಾಪುರಕ್ಕೆ ಹೋದೆಯೆಂದರೆ, ಪೂರಾ ಆತನ ಬಲೆಯಲ್ಲಿ ಸಿಕ್ಕಹಾಗೆ ಆಗುವದು. ಆಮೇಲೆ ಅವರು ಏನು ಮಾಡುವರು, ಏನು ಬಿಡುವರು, ಎಂಬದನ್ನು ಹೇಳಲಾಗುವದಿಲ್ಲ. ನೀನು ಸರ್ವಥಾ ವಿಜಾಪುರಕ್ಕೆ ಹೋಗಲು ಒಡಂಬಡಬೇಡ. ಶಿವಬಾ, ನೀನು ತೀರ ತಿಳಿಗೇಡಿಯಿರುವೆಯೆಂದು ಅವರು ತಿಳಿದಿರುವರೋ ಏನು?''

ತಾಯಿಯ ಈ ಮಾತುಗಳನ್ನು ಕೇಳಿ ಮಹಾರಾಜರು''ಅವ್ವಾ, ನಿಮ್ಮ ಅಪ್ಪಣೆಗೆ ನಾನು ಸರ್ವಥಾ ಹೊರಗಾಗುವನಲ್ಲ, ಕಾಲತ್ರಯದಲ್ಲಿಯೂ ನಾನು ವಿಜಾಪುರಕ್ಕೆ ಹೋಗುವ ದಿಲ್ಲ. ನಿಮ್ಮ ವಿಚಾರವನ್ನು ಕೇಳಿಕೊಂಡು ಕೆಲಸ ಮಾಡುವದು ನನ್ನ ನಿತ್ಯಕ್ರಮವಾದ್ದರಿಂದ, ಈಗ ತಮ್ಮ ಅಪ್ಪಣೆಯನ್ನು ಕೇಳಿಕೊಳ್ಳಲಿಕ್ಕೆ ಬಂದೆನಿಷ್ಟೆ. ರೋಗಿಯು ಬಯಸಿದ್ದೂ ಹಾಲೋಗರವು, ವೈದ್ಯ ಹೇಳಿದ್ದೂ ಹಾಲೋಗರವು'' ಅನ್ನುವಹಾಗೆ, ನನ್ನ ಮನಸ್ಸಿನಲ್ಲಿದ್ದಂತೆಯೇ ನೀವು ಹೇಳಿದ್ದರಿಂದ ಇನ್ನು ಎರಡನೆಯ ವಿಚಾರಮಾಡುವ ಅವಶ್ಯವೇ ಇಲ್ಲ. ಇನ್ನು ಅಂಬಾಬಾಯಿಯ ಮನಸ್ಸಿ ನೊಳಗಿದ್ದದ್ದನ್ನಿಷ್ಟು ಕೇಳಿಕೊಂಡು, ಕಡೆಯ ಮಾತನ್ನೇ ಖಾನನಿಗೆ

ಹೇಳಿಕಳಿಸಿ ಬಿಡೋಣ. ಗೋಪೀನಾಥಪಂತನ ವಿಷಯವಾಗಿ ಮಾತ್ರ ವಿಕಲ್ಪವೆಣಿಸುವ ಹಾಗಿಲ್ಲ; ಆತನು ಸಾತ್ವಿಕ ಬ್ರಾಹ್ಮಣನು'' ಎಂದು ನುಡಿದು, ಅವರು ಅಂಬಾಬಾಯಿಯ ಸನ್ನಿದಿಗೆ ಹೋದರು. ಅಂಬಾಬಾಯಿಯ ಸಾಕ್ಷಾತ್ಕಾರವನ್ನು ಪಡೆಯುವ ಮೊದಲು ಅವರು ಆಕೆಯ ಮುಂದೆ ಕೈಜೋಡಿಸಿಕೊಂಡು ಕಣ್ಣು ಮುಚ್ಚಿಕೊಂಡು ಕುಳಿತುಕೊಳ್ಳುತ್ತಿದ್ದರು. ಹೀಗೆ ಅವರು ಕುಳಿತರೆಂದರೆ, ಅವರ ಚೀಟನೀಸನಾದ ಬಾಳಾಜಿ ಆವಜಿಯವರಿಗೆ ಸುದ್ದಿಯು ಹೋಗಿ, ಅವರ ಕೂಡಲೆ ದೌತಿ, ಲೇಖನಿ, ಕಾಗದ ಇವುಗಳನ್ನು ತಕ್ಕೊಂಡು ಬಂದು ಕುಳಿತುಕೊಳ್ಳುತ್ತಿದ್ದರು. ಅಂಬಾಬಾಯಿಯ ಸಾಕ್ಷಾತ್ಕಾರವು ಮಹಾರಾಜರಿಗೆ ಆಗುವಾಗ ಬಹುತರ ಬೇರೆ ಯಾರನ್ನೂ ಅಲ್ಲಿ ಇರಗೊಡುತ್ತಿದ್ದಿಲ್ಲ. ಜೀಜಾಬಾಯಿ ಸಾಹೇಬರೊಬ್ಬರು, ಬಾಳಾಜಿ ಆವಜಿಯವರು ಎರಡನೆಯವರು, ಮಹಾರಾಜರು ಮೂರನೆಯವರು, ಹೀಗೆ ಮೂವರೇ ಆಗಿನ ಕಾಲದಲ್ಲಿ ಇರತಕ್ಕವರು. ಮಹಾರಾಜರು ಮೇಲೆ ಹೇಳಿದಂತೆ ಸ್ವಲ್ಪ ಹೊತ್ತು ಸುಮ್ಮನೆ ಕುಳಿತುಕೊಂಡ ಬಳಿಕ, ಆಮೇಲೆ ತಮ್ಮಷ್ಟಕ್ಕೆ ತಾವು ಮುಸುಗುಟ್ಟುತ್ತಿದ್ದರು. ಆಮೇಲೆ ದೇವಿಗೆ ಧೂಪದೀಪಗಳನ್ನು ಮಾಡುವರು; ಇಷ್ಟಾದ ಬಳಿಕ ಮಹಾರಾಜರ ಮೈಯಲ್ಲಿ ದೇವಿಯ ಸಂಚಾರವಾಗುವದು. ಹೀಗೆ ಸಂಚಾರವಾದ ಮೇಲೆ ಮಹಾರಾಜರು ಸ್ವಲ್ಪ ಹೊತ್ತು ಸ್ವಸ್ಥವಾಗಿ ಕುಳಿತ ಬಳಿಕ, ದೇವಿಯು ಅವರ ಮುಖದಿಂದ ಆಡಿಸುವ ಮಾತುಗಳನ್ನು ಆಡಿಸುತ್ತಿದ್ದಳು. ಇದೇ ಕ್ರಮವು ಈಗಲೂ ಆಯಿತು. ಮಹಾರಾಜರು ಸುಮ್ಮನೆ ಕುಳಿತಿರುವಷ್ಟರಲ್ಲಿ ಅವರು ತಮ್ಮಷ್ಟಕ್ಕೆ ತಾವು ಮುಸುಗುಟ್ಟುತ್ತ ಮೈ ಒಡ್ಡ ಮುರಿಯಹತ್ತಿದರು. ಕೂಡಲೆ ದೇವಿಗೆ ಧೂಪ ದೀಪಗಳಾದವು. ಮಹಾರಾಜರ ಮೈಯಲ್ಲಿ ದೇವಿಯು ಸಂಚಾರವಾಯಿತು. ಆಗ ಜೀಜಾಬಾಯಿ ಸಾಹೇಬರು ಕೈಜೋಡಿಸಿಕೊಂಡು—''ಈಗ ದೊಡ್ಡ ಸಂಕಟವು ಬಂದೊದಗಿರುವದು. ಅದು ಹ್ಯಾಗೆ ದೂರವಾಗುವದೆಂಬ ಬಗ್ಗೆ ಅಪ್ಪಣೆಯಾಗ ಬೇಕು. ಅಪ್ಪಣೆಯಂತೆ ಎಲ್ಲ ವ್ಯವಸ್ಥೆಯನ್ನು ಮಾಡುವೆವು.''

ಹೀಗೆ ಪ್ರಶ್ನ ಮಾಡಿದ ಕೂಡಲೆ ಮಹಾರಾಜರ ಕಣ್ಣುಗಳು ಕೆಂಪಗೆ ಕೆಂಡದಂತಾದವು. ಅವರ ಮೈಮೇಲಿನ ಕೂದಲುಗಳು ನೆಟ್ಟಗಾದವು. ಬಹಳ ಹೊತ್ತು ಸುಮ್ಮನೆ ಕುಳಿತಬಳಿಕ ಬಾಯಿಸಾಹೇಬರ ಪ್ರಶ್ನೆಯ ಉತ್ತರವು ಹೊರಬಿದ್ದಿತು. ಅದು ಏನೆಂದರೆ—''ಈ ಸಂಕಟವನ್ನು ನೀವು ಯಾಕೆ ಲೆಕ್ಕಿಸುವಿರಿ? ಸದ್ಯಕ್ಕೆ ಆತನು ಹೇಳಿದ್ದಕ್ಕೆಲ್ಲ ನೀವು ಒಪ್ಪಿಕೊಳ್ಳಬೇಕು. ಹು ಹು ಎನ್ನುತ್ತ ಹೋಗಬೇಕು. ಆತನ ಹೊಟ್ಟೆಯಲ್ಲಿ ವಿಷವಿದೆ. ವಿಷಕ್ಕೆ ವಿಷವನ್ನೇ ಇದಿರು ಮಾಡಬೇಕು. ಹ್ಯಾಗಾದರೂ ಮಾಡಿ ಆತನನ್ನು ಭೆಟ್ಟಿಗೆ ಬರಮಾಡಿಕೊಳ್ಳಬೇಕು. ಹೇಳಿದ ಹಾಗೆ ಕೇಳಿದರೆ ಆತನು ಭೆಟ್ಟಿಗೆ ಬರುವನು. ಇಲ್ಲದಿದ್ದರೆ ಬರುವದಿಲ್ಲ. ಆದ್ದರಿಂದ ಆತನು ಹೇಳಿದ್ದಕ್ಕೆಲ್ಲ ನೀವು ಹು ಅಂದು ಆತನು ಬರುವಂತೆ ಮಾಡಬೇಕು. ಆತನು ಬಂದಕೂಡಲೆ ಆತನ ಕಪಟವು ಸಹಜವಾಗಿ ಹೊರಬೀಳುವದು. ಕಪಟವು ಹೊರಬಿದ್ದಕೂಡಲೆ ಶಾಸನ ಮಾಡಲಿಕ್ಕೆ ಯಾರು ಅಸಮರ್ಥರಿರುವರು? ಆತನು ಕಪಟವನ್ನು ಆಚರಿಸುವನೆಂದು ತಿಳಿದೇ ಏನು ಮಾಡುವದನ್ನು ನೀವು ಮಾಡಬೇಕು. ಚಿಂತೆ ಬೇಡ. ನನ್ನ ಸಹಾಯವಿರುವದು. ಕಾರ್ಯ ಸಿದ್ಧಿಯಾಗುವದು!''

ಈ ಮೇರೆಗೆ ನುಡಿದು ಮಹಾರಾಜರು ನಿಶ್ಚೇಷ್ಟಿತರಾಗಿ ಬಿದ್ದರು. ಕೆಲವು ಹೊತ್ತಿನ ಮೇಲೆ ಅವರು ಎಚ್ಚತ್ತು ಬಾಳಾಜಿ ಆವಜಿಯನ್ನು ಕುರಿತು—''ಶ್ರೀ ಅಂಬಾ ಭವಾನಿಯ ಆಜ್ಞೆಯು ಏನಾಯಿತು, ನೀವು ಬರೆದು ಇಟ್ಟಿರುವಿರಲ್ಲವೆ?'' ಎಂದು ಕೇಳಲು, ಆತನು ಬರೆದದ್ದನ್ನೆಲ್ಲ ಓದಿ ತೋರಿಸಿದನು. ಅದನ್ನು ಕೇಳಿ ಮಹಾರಾಜರಿಗೆ ಬಹಳ ಸಂತೋಷ ವಾಯಿತು. ಜೀಜಾಬಾಯಿಸಾಹೇಬರು ಅಂಬಾಬಾಯಿಯ ಅಪ್ಪಣೆಯ ಮಹತ್ವವನ್ನು ಮಗನಿಗೆ ತಿಳಿಸಿ, ಆತನನ್ನು ಪ್ರೋತ್ಸಾಹಗೊಳಿಸಿದರು. ಅಂಬಾಬಾಯಿಯ ಆಜ್ಞೆಗೆ ವಿರುದ್ಧವಾಗಿ ಯಾರು ನಡೆಯುವರು? ದೇವಿಯ ಆಜ್ಞೆಯಂತೆ ಖಾನನಿಗೆ ಹೇಳಿಕಳಿಸುವದನ್ನು ಅವರು ನಿಶ್ಚಯಿಸಿ, ಗೋಪೀನಾಥಪಂತನನ್ನು ಕರೆಸಿದರು. ಆಗ ಮಹಾರಾಜರು ಜೀಜಾಬಾಯಿಯವರ ಸಮಕ್ಷ ಆ ವಕೀಲನನ್ನು ಕುರಿತು—''ನಮ್ಮ ಕಟ್ಟಕಡೆಯ ನಿಶ್ಚಿತವಾದ ವಿಚಾರವನ್ನು ನಿಮ್ಮ ಯಜಮಾನನಿಗೆ ತಿಳಿಸಬೇಕು. ವಿಶ್ವಾಸದಿಂದ ವಿಶ್ವಾಸವು ಉತ್ಪನ್ನವಾಗುತ್ತದೆ. ವಿಜಾಪುರಕ್ಕೆ ನಿಮ್ಮ ಸಂಗಡ ಬರುತ್ತೇವೆಂದು ಈಗ ನಾವು ಹೇಳುವದರಲ್ಲಿಯೂ ಅರ್ಥವಿಲ್ಲ, ಬರುವದಿಲ್ಲೆಂದು ಹೇಳುವದರಲ್ಲಿಯೂ ಅರ್ಥವಿಲ್ಲ, ನಮ್ಮ ನಿಮ್ಮ ಮನಸ್ಸುಗಳು ಸರಳವಾದನಂತರ, ಇಲ್ಲಿ ಬಂದಾಗಲೇ ಯಾವದೊಂದು ಮಾತಿನ ನಿಶ್ಚಯವನ್ನು ಮಾಡೋಣ. ನಾವು ಭೆಟ್ಟಿಯ ವಿಷಯವಾಗಿ ಅತ್ಯಂತ ಉತ್ಸುಕರಾಗಿರುವೆವು. ಈ ಮಾತಿಗೆ ನಾವು ಹೊರತಾಗಿರುವದಿಲ್ಲ; ನಿಮ್ಮ ಮಾತಿಗೂ ಹೊರತಾಗಿಯೂ ನಾವು ಇರುವದಿಲ್ಲ, ಆದರೆ ತಾವು ಭೆಟ್ಟಿಗೆಂದು ಬರುವಾಗ ನಮಗೆ ಅಂಜಿಕೆ ಬರುವಷ್ಟು ಲವಾಜಮುವನ್ನು ತಂದರೆ, ನಮ್ಮ ಸಂರಕ್ಷಣ ವಾಗಲಾರದೆಂಬ ಮಾತನ್ನು ನಾವು ಮೊದಲಿಗೇ ತಿಳಿಸಿದ್ದೇವೆ, ಎಂದು ಖಾನನಿಗೆ ನೀವು ಹೇಳಿರಿ. ಆತನು ಏನಾದರೂ ಮೋಸ ಮಾಡಿದರೆ, ನಮ್ಮ ಹಾದಿಯನ್ನು ನಾವು ಕಂಡುಕೊಳ್ಳುವೆವು. ಏನಾದರೂ ಸಂಶಯ ಬಂದರೆ ನೀವು ನಮಗೆ ತಿಳಿಸಬೇಕು, ನಮಗೆ ಸಂಶಯ ಬಂದರೆ ನಾವು ನಿಮಗೆ ತಿಳಿಸುವೆವು, ಎಂದು ಹೇಳಿದರು. ಗೋಪೀನಾಥಪಂತನು ಮಹಾರಾಜರ ಮಾತಿನಿಂದ ಎಲ್ಲ ಸಂಗತಿಯನ್ನು ಮನಸ್ಸಿನಲ್ಲಿ ತಂದು, ಹೆಚ್ಚಿಗೆಯೇನೂ ಮಾತಾಡದೆ, ಮಹಾರಾಜರ ಒಪ್ಪಿಗೆಯಿಂದ ಹೊರಟುಹೋದನು. ಸೇರಿಗೆ ಸವ್ವಾಸೇರಾಗಿ ಖಾನನೊಡನೆ ನಡಕೊಳ್ಳಲಿಕ್ಕೆ ಮಹಾರಾಜರು ಸಿದ್ಧರಿರುವರೆಂದು ಆತನು ತಿಳಿದುಕೊಂಡನು.

## ಮಾರ್ಗಶೀರ್ಷ ಶುದ್ಧ ಷಷ್ಠಿಯು

ಗೋಪೀನಾಥಪಂತನನ್ನು ಕಳಿಸಿದ ಬಳಿಕ ಮಹಾರಾಜರು ತಮ್ಮ ಅತ್ಯಂತ ವಿಶ್ವಾಸದ ಜನರೊಡನೆ ಏಕಾಂತಸ್ಥಾನದಲ್ಲಿ ವಿಚಾರಮಾಡುತ್ತ ಕುಳಿತಿದ್ದರು. ಈ ವಿಶ್ವಾಸದ ಜನರು ಬಹು ಸ್ವಲ್ಪ ಇದ್ದರು. ಅವರಲ್ಲಿ ಮಹಾರಾಜರ ತಾಯಂದಿರಾದ ಜೀಜಾಬಾಯಿಯವರು ಒಬ್ಬರು; ಇವರಂತು ಮಹಾರಾಜರ ಸರ್ವಥೈವ ಗುರುಗಳೇ ಆಗಿದ್ದರು. ಇವರನ್ನು

ಕೇಳದೆ ಮಹಾರಾಜರು ಯಾವ ಕಾರ್ಯವನ್ನೂ ಮಾಡುತ್ತಿದ್ದಿಲ್ಲ. ಮಹಾರಾಜರ ಗುಪ್ತ ಮಸಲತ್ತಿನಲ್ಲಿ ಬರತಕ್ಕ ಎರಡನೆಯ ಮನುಷ್ಯನೆಂದರೆ, ಅವರ ಬಾಲಮಿತ್ರನಾದ ತಾನಾಜಿ ಮಾಲಸೂರೆಯು. ಈತನು ಮಹಾರಾಜರ ಬಲಗೈಯಾಗಿದ್ದನು. ಬಾಳಾಜಿ ಅವಜಿಯಂತು ಮಹಾರಾಜರ ಚೀಟನೀಸನೇ ಆದದ್ದರಿಂದ ಮಹಾರಾಜರ ಮಸಲತ್ತಿನಲ್ಲಿ ಆತನು ಇರತಕ್ಕವನೇ ಆಗಿದ್ದನು. ಈತನು ಅತ್ಯಂತ ವಿಶ್ವಾಸದ ಬ್ರಾಹ್ಮಣನು. ಮಹಾರಾಜರ ಪ್ರತಿ ಒಂದು ಗುಪ್ತ ಪತ್ರವನ್ನು ಈತನೇ ಬರೆಯುತ್ತಿದ್ದನು. ಈ ಮೂವರ ಹೊರತು ನಾಲ್ಕನೆಯ ವಿಶ್ವಾಸದ ಮನುಷ್ಯನೆಂದರೆ ಮೋರೋ ತ್ರಿಮಲನು. ಈತನು ಅತ್ಯಂತ ಸಾಹಸಿಯು. ಯಾವ ಸಾಹಸದ ಕಾರ್ಯವನ್ನು ಮಾಡಬೇಕಾದರೂ ಮಹಾರಾಜರು ಈತನ ಕಿವಿಯ ಮೇಲೆ ಹಾಕದೆಯಿರುತ್ತಿದ್ದಿಲ್ಲ. ಈ ನಾಲ್ಕು ಜನರೊಡನೆಯೇ ಮಹಾರಾಜರು ಈಗ ತಮ್ಮ ಗುಪ್ತವಾದ ಏಕಾಂತ ಸ್ಥಳದಲ್ಲಿ ಆಲೋಚಿಸುತ್ತಲಿದ್ದರು. ಈ ಆಲೋಚನೆಯಲ್ಲಿ ಖಾನನ ಬಳಿಗೆ ಹೋಗಿ ಬರುವ ವಕೀಲನಾದ ಕೃಷ್ಣಾಜಿ ಭಾಸ್ಕರನೊಬ್ಬನು ಇದ್ದನು. ಬಹಳ ಹೊತ್ತಿನವರೆಗೆ ಆ ಮಾತು ಈ ಮಾತು ನಡೆದ ಬಳಿಕ ಕೃಷ್ಣಾಜಿಭಾಸ್ಕರನು ಮಹಾರಾಜರನ್ನು ಕುರಿತು—

ಕೃಷ್ಣಾಜಿ ಭಾಸ್ಕರ—ಏನಾದರೂ, ಇನ್ನು ಖಾನನನ್ನು ಕಾಣಲಿಕ್ಕೆ ತಡಮಾಡುವದು ಸರಿಯಲ್ಲ; ಖಾನನು ತಮ್ಮನ್ನು ಕಾಣುವ ವಿಷಯದಲ್ಲಿ ಅತ್ಯಂತ ಆತುರನಾಗಿದ್ದಾನೆ. ತಮ್ಮನ್ನು ಯಾವಾಗ ವಿಜಾಪುರಕ್ಕೆ ಹಿಡಿದುಕೊಂಡು ಹೋದೇನೆನ್ನುವ ಹಾಗೆ ಆತನಿಗೆ ಆಗಿದೆ. ತಮ್ಮ ಹೆಸರನ್ನು ದಿನಕ್ಕೆ ಎಷ್ಟುಸಾರೆ ತಕ್ಕೊಳ್ಳುತ್ತಾನೆಂಬದನ್ನು ತಿಳಿದುಕೊಳ್ಳಬೇಕೆಂದು, ನಾನು ಒಬ್ಬ ಗುಪ್ತಚಾರನನ್ನು ಇಟ್ಟಿದ್ದೆನು. ಎಂಟು ಪ್ರಹರದಲ್ಲಿ ಆತನು ತಮ್ಮ ಹೆಸರನ್ನು ಮುನ್ನೂರಾ ಹದಿನೇಳು ಸಾರೆ ಉಚ್ಚರಿಸಿದನಂತೆ! ಅವನಿಗೆ ಎರಡನೆಯ ಕೆಲಸವೇ ಇಲ್ಲ. ನಿಮ್ಮ ಉಸಾಬರಿಯೇ ಉಸಾಬರಿಯು. ಇನ್ನು ಎಂಟು ಹತ್ತು ದಿವಸ ನೋಡಿ, ಅಷ್ಟರಲ್ಲಿ ನೀವು ಭೆಟ್ಟಿಯ ನಿಶ್ಚಿತವಾದ ದಿವಸವನ್ನು ತಿಳಿಸದಿದ್ದರೆ, ಆತನು ಪ್ರತಾಪಗಡವನ್ನು ಮುತ್ತಿ ಅದನ್ನು ಸ್ವಾಧೀನಪಡಿಸಿಕೊಂಡು, ಎಲ್ಲರನ್ನು ಸೆರೆಹಿಡಿದು ಒಯ್ಯುವನಂತೆ!

ತಾನಾಜಿ–ಪ್ರತಾಪಗಡವನ್ನು ಮುತ್ತೆಂದು ಹೇಳಬೇಕು. ಆ ಮಗನಿಗೆ. ಅವನ ಹಿಂದಿನ ನಾಲ್ವತ್ತೆರಡು ತಲೆಯವರು ಮೇಲಿನಿಂದ ಇಳಿದು ಬಂದು ದುರ್ಗವನ್ನು ಮುತ್ತಿ ಹೋರಾಡಿದರೂ ಅದು ಕೈಸೇರುವಹಾಗಿಲ್ಲ. ಮಹಾರಾಜ, ಈ ಮುಸಲ್ಮಾನರು ಯಾವಾಗಲೂ ಇಷ್ಟು ಬಾಯಿ ಬಡಾಯಿ ಕೊಚ್ಚುತ್ತಾರಲ್ಲ, ಅವರಲ್ಲಿ ಅಂಥ ಕುವತ್ತಾದರೂ ಏನಿರುತ್ತದೆ? ಅವರು ನಿಜವಾಗಿಯೇ ನಮ್ಮನ್ನು ಗುಡ್ಡದೊಳಗಿನ ಇಲಿಗಳೆಂದು ತಿಳಿದಿದ್ದಾರೆ. ನಮ್ಮನ್ನು ಬೇಕಾದಾಗ ಬಡಿದು ಕೊಲ್ಲಬಹುದೆಂದು ಅವರು ಭಾವಿಸಿರುವರು! ಆದರೆ ಆ ದಿವಸಗಳು ಹಿಂದಾದವೆಂದು ಅವರಿಗೆ ಸ್ಪಷ್ಟವಾಗಿ ಹೇಳಬೇಕು. ಅವರಿಗೆ ಬಾಯಿಂದ ಹೇಳುವದಾದರೂ ಯಾಕೆ? ಚನ್ನಾಗಿ ಅವರ ಮೈ ನುಗ್ಗು ಮಾಡಿದರೆ ತಾನೇ ಸಹಜವಾಗಿ ಗೊತ್ತಾಗುವದು. ಅದಕ್ಕಾಗಿಯೇ ನಾವು ಖಾನನಿಗೆ ಎದುರಾಗಿ ಅವನಿಗೆ ಚನ್ನಾಗಿ ನಮ್ಮ ಕೈ ತೋರಿಸಬೇಕೆಂದು ನಾನು ಮಹಾರಾಜರಿಗೆ ಮೇಲೆ ಮೇಲೆ ಹೇಳುತ್ತಿದ್ದದ್ದು! ಅವರಿಗೆ ಸೊನ್ನೆ ಸೂಕ್ಷ್ಮವು ಕೆಲಸದಲ್ಲಿ

ಹಾಕಬೇಕು ಚನ್ನಾಗಿ ನಾಲ್ಕು ಪೆಟ್ಟಿಗಳನ್ನು. ವೇಷಾಂತರದಿಂದ ನಾನೆಲ್ಲ ಖಾನನ ಸೈನ್ಯದ ಮಟ್ಟನ್ನು ತಿಳಿದುಕೊಂಡಿದ್ದೇನೆ. ಕರ್ತೃತ್ವಕ್ಕಿಂತ ಅವರ ದಿಮಾಕು ಬಹಳ. ಮಹಾರಾಜರು ಅಪ್ಪಣೆಕೊಟ್ಟು ನೋಡಬೇಕು, ನಮ್ಮ ಮಾವಳರ ದಂಡು ಅವರನ್ನು ಮಣ್ಣುಗೂಡಿಸಿಬಿಡುವದು.

ಮೋರೋತ್ರಿಮಲ—ಖಾನನ ಮೂರ್ಖತನವನ್ನೇನು ಹೇಳಬೇಕು? ಆತನು ಇತ್ತಕಡೆಗೆ ಬಂದಕೂಡಲೆ ಮಹಾರಾಜರು ವಿನಯವನ್ನು ತೋರಿಸಿದ್ದರಿಂದ, ಆ ಹುಂಬನ ಕಣ್ಣುಗಳು ನೆತ್ತಿಯ ಮೇಲೆ ಬಂದಿರುತ್ತವೆ. ಮಹಾರಾಜರನ್ನು ಆತನು ತೀರ ತಿಳಿಗೇಡಿಗಳೆಂದು ಭಾವಿಸಿದ್ದಾನೆ. ತನ್ನ ದರ್ಪದಿಂದ ಮಹಾರಾಜರು ಹೆದರಿಹೋಗಿರುವರೆಂತಲೂ, ಅವರನ್ನು ತಾನು ಅನಾಯಾಸದಿಂದ ವಿಜಾಪುರಕ್ಕೆ ಹಿಡಿದೊಯ್ಯಬಹುದೆಂತಲೂ ಆತನು ಭಾವಿಸಿರುವನು. ಮಹಾರಾಜರು ಹಿಂದುಮುಂದಿನ ವಿಚಾರವಿಲ್ಲದೆ ಕಂಡವರ ಮೇಲೆ ವಿಶ್ವಾಸವಿಡುವರಂತೆ. ಖಂಡೇರಾಯನಿಗೆ ಮಹಾರಾಜರು ಆಶ್ರಯಕೊಟ್ಟದ್ದೊಂದು ಖಾನನಿಗೆ ಆಧಾರವಾಗಿದೆ. ಜಾಧವರಾಯನನ್ನೂ ಖಾನನು ತನ್ನ ಗುಪ್ತಚಾರನೆಂದೇ ಭಾವಿಸಿರುವನು; ಆದರೆ ಜಾಧವರಾಯನೂ, ಆತನ ಹೆಂಡತಿಯಾದ ಹೈಮವತೀ ದೇವಿಯೂ ಮಹಾರಾಜರ ಏಕನಿಷ್ಠ ಸೇವಕರಾಗಿ, ತನ್ನನ್ನೇ ವಂಚಿಸುತ್ತಿರುವರೆಂಬದು ಆ ಮದಾಂಧನಿಗೆ ಗೊತ್ತಿಲ್ಲ.

ಮಹಾರಾಜರು—ಏನೇ ಇರಲಿ, ನಮ್ಮ ವಿಷಯವಾಗಿ ಖಾನನು ಹೀಗೆ ಭಾವಿಸುವದು ಅತ್ಯಂತ ಹಿತಕರವಾಗಿರುವದು. ಹೀಗೆ ಖಾನನು ತಿಳಿಯಬೇಕೆಂದು ನಾವು ಯತ್ನಿಸಿದ್ದು ಸಫಲ ವಾದಂತಾಯಿತು. ನಮ್ಮಲ್ಲಿ ಹೀಗೆ ಅವ್ಯಸ್ಥೆಯಿರುವದೆಂದು ತಿಳಿದರೆ, ಆತನು ದುರ್ಲಕ್ಷದಿಂದ ನಡೆಯುವನು. ಅದರಿಂದ ನಮಗೆ ನಿಶ್ಚಯವಾಗಿ ಹಿತವಾಗುವದು. ನಾವು ಆತನ ಕಪಟ ಜಾಲವಲ್ಲಿ ಸಿಕ್ಕೆವೆಂದು ಆತನು ತಿಳಿದುಕೊಂಡಷ್ಟು ನಮ್ಮ ಹಿತವಾಗುವದು.

ಕೃಷ್ಣಾಜಿಭಾಸ್ಕರ—ಮಹಾರಾಜ, ಅವನು ಹೀಗೆ ನಿಶ್ಚಯವಾಗಿ ತಿಳಿದಿರುವನು. ಪ್ರತಾಪಗಡವನ್ನು ವಶಮಾಡಿಕೊಳ್ಳುವದು ಆತನಿಗೆ ಸ್ವಲ್ಪವೂ ಅಸಾಧ್ಯವಾಗಿ ತೋರುವದಿಲ್ಲ. ಅವನು ಹೀಗೆ ಬಾಯಿಂದ ಆಡಿ ತೋರಿಸುವನು; ಆದರೆ ತಾವು ಇಲ್ಲಿಂದ ಜಾರಿಹೋದರೆ, ತಮ್ಮನ್ನು ವಿಜಾಪುರಕ್ಕೆ ಹಿಡಿದೊಯ್ಯುವದು ಅಸಾಧ್ಯವಾದೀತೆಂದು ತಿಳಿದು, ಆತನು ತಮ್ಮನ್ನು ಸಮಕ್ಷಮ ಕಾಣಲು ಹೊಂಚು ಹಾಕಿರುವನು; ಸಮಕ್ಷಮ ಭೆಟ್ಟಿಯಾದಾಗ ತಾನು ಸಹಜವಾಗಿ ತಮ್ಮನ್ನು ಹಣ್ಣು ಮಾಡಬಹುದೆಂದು ಆತನು ನಂಬಿರುತ್ತಾನೆ. ಅಂತೇ ಆತನು ನೀವು ಹೇಳಿದ ಹಾಗೆ ಕೇಳುವನು, ನೀವು ಎಷ್ಟು ದಿವಸ ತಡಮಾಡಿದರೂ ಸೈರಿಸುತ್ತಿರುವನು. ಇನ್ನು ಮೇಲೆ ಮಾತ್ರ ಆತನು ತಡೆಯುವ ಹಾಗೆ ತೋರುವದಿಲ್ಲ. ಇಂದು, ಅಥವಾ ನಾಳೆ ಇಷ್ಟರಲ್ಲಿ ಆತನ ವಕೀಲನು ಬಂದು, ಭೆಟ್ಟಿಯ ದಿವಸವನ್ನು ನಿರ್ಧರಿಸಿ ಹೇಳಲೇಬೇಕೆಂದು ತಮಗೆ ಆಗ್ರಹ ಮಾಡಬಹುದು.

ಮಹಾರಾಜ—ಮಾಡಲಿ, ಆತನು ಬೇಕಾದಷ್ಟು ಆಗ್ರಹ ಮಾಡಲಿ. ನಾವು ಅಂಜಿಹೋದದ್ದರಿಂದ ಮುಂದುಗಾಣದೆ ಗಾಬರಿಯಾಗಿ ಕುಳಿತುಬಿಟ್ಟಿರುವೆವೆಂದು ಆತನ ತಿಳುವಳಿಕೆಯಾದಷ್ಟು ನಮಗೆ ಹಿತವು. ಖಂಡ್ಯಾನಂಥ ಇನ್ನು ನಾಲ್ಕು ಜನರು ನಮ್ಮಲ್ಲಿಯ

ಅವ್ಯವಸ್ಥೆಯನ್ನು ಖಾನನ ಮುಂದೆ ವರ್ಣಿಸಲಿ. ಈ ಸಾರೆ ಈ ದುಷ್ಟರಿಗೆ ಚನ್ನಾಗಿ ಕೈತೋರಿಸಿ, ಇನ್ನೊಮ್ಮೆ ಇಂಥ ಸರದಾರಗಿರದಾರರು ನಮ್ಮ ಗೊಡವೆಗೆ ಬಾರದಂತೆ ಮಾಡ ಬೇಕು; ಆದರೆ ಮುಖ್ಯ ವಿಷಯವು ಒತ್ತಟ್ಟಿಗುಳಿದು, ನಾವು ವ್ಯರ್ಥಹರಟೆ ಕೊಚ್ಚುತ್ತಿದೆವಲ್ಲ!

ಹೀಗೆ ಪರಸ್ಪರ ಸಂಭಾಷಣಗಳು ನಡೆದಿರುವಾಗ ಜೀಜಾಬಾಯಿ ಸಾಹೇಬರು ಅವನ್ನೆಲ್ಲ ಕೇಳುತ್ತ ಸುಮ್ಮನೆ ಕುಳಿತುಕೊಂಡಿದ್ದರು. ಅವರು ನಡುವೆ ಮಹಾರಾಜರನ್ನು ಕುರಿತು— ''ಶಿವಬಾ, ಈ ವ್ಯರ್ಥ ಮಾತುಗಳಿಂದ ಪ್ರಯೋಜನವಿಲ್ಲೆಂದು ನಾನು ನಿನಗೆ ಹೇಳಬೇಕೆಂದು ಮಾಡಿದ್ದೆನು. ಈಗ ನೀನು ಇಂಥ ದಿವಸವೇ ನಿನ್ನನ್ನು ಕಾಣುವೆನೆಂದು ಖಾನನಿಗೆ ಆತಂಕವಿಲ್ಲದೆ ಸ್ಪಷ್ಟವಾಗಿ ಹೇಳಿ ಕಳಿಸಿಬಿಡು. ಅದರಂತೆ, ನಾವು ಇಷ್ಟೇ ಜನರನ್ನು ಸಂಗಡ ಕರಕೊಂಡು ಬರುವೆವು; ನೀವು ಇಷ್ಟೇ ಜನರನ್ನು ಸಂಗಡ ಕರಕೊಂಡು ಬರ್ರಿ; ಎಂದು ಗೊತ್ತುಮಾಡಿ ತಿಳಿಸಿಬಿಡು. ಆತನು ಅಷ್ಟು ಆತುರ ಪಡುತ್ತಿದ್ದರೆ, ನಾವಾದರೂ ಯಾಕೆ ವಿಳಂಬ ಮಾಡಬೇಕು? ಬಾಳಾ, ಶಿವಬಾ, ನೀನು ಚಿಂತೆ ಮಾಡಬೇಡ. ನೀನು ಈ ಪ್ರಸಂಗದಲ್ಲಿ ನಿಶ್ಚಯವಾಗಿ ಜಯಶೀಲನಾಗುವೆ. ನಿನ್ನೆ ಮತ್ತೆ ಅಂಬಾಬಾಯಿಯ ದೃಷ್ಟಾಂತವು ನನಗೆ ಆಗಿರುತ್ತದೆ. ನೀನು ಎಷ್ಟು ಮಾತ್ರವೂ ಅಂಜಬೇಡ. ಆ ದುಷ್ಟನು ತುಳಜಾಪುರದ ಭವಾನಿಯ ಸ್ಥಾನಭ್ರಷ್ಟ ಮಾಡಿಸಿದನು. ಈಗ ಇಲ್ಲಿ ಈ ಪ್ರತಾಪಗಡದಲ್ಲಿರುವ ನಮ್ಮ ಭವಾನೀ ಮಾತೆಯನ್ನು ನಾಶಗೊಳಿಸಲು ಹೊಂಚು ಹಾಕಿರುತ್ತಾನೆ. ಇಂಥ ನೀಚನ ಶಾಸನವನ್ನು ಭವಾನೀ ಮಾತೆಯು ನಿಶ್ಚಯವಾಗಿ ನಿನ್ನ ಕೈಯಿಂದ ಮಾಡಿಸುವಳು. ಇನ್ನು ಸ್ವಲ್ಪವೂ ವಿಳಂಬ ಮಾಡಬೇಡ. ಕೃಷ್ಣಾಜಿಪಂತ, ನೀವು ಸ್ಪಷ್ಟವಾಗಿ ಖಾನನಿಗೆ ಹೇಳಿರಿ. ಇಂಥ ದಿವಸ ಮಹಾರಾಜರು ನಿನ್ನನ್ನು ಕಾಣುವರೆಂದು ಆತನಿಗೆ ಸ್ಪಷ್ಟವಾಗಿ ತಿಳಿಸಿ ಬಿಡಿರಿ. ಅವನಿಗೇ ಅಷ್ಟು ಅವಸರವಿದ್ದರೆ, ನೀವಾದರೂ ಯಾಕೆ ತಡಮಾಡುತ್ತೀರಿ?

ಜೀಜಾಬಾಯಿ ಸಾಹೇಬರು ಹೀಗೆ ಮಾತಾಡುತ್ತಿರುವಾಗ ಮಹಾರಾಜರು ಅತ್ಯಂತ ವಾದ ಅಭಿಮಾನದಿಂದ ಅವರನ್ನು ನೋಡುತ್ತಲಿದ್ದರು. ಇಂಥ ವೀರ ಮಾತೆಯ ಉದರದಲ್ಲಿ ತಮಗೆ ಜನ್ಮವಿತ್ತದ್ದಕ್ಕಾಗಿ ಅವರು ಪರಮೇಶ್ವರನ ಉಪಕೃತಿಯನ್ನು ಬಹಳವಾಗಿ ಕೊಂಡಾಡಿದರು. ಪ್ರಾಚೀನ ಕಾಲದ ವೀರಮಾತೆಯರಂತೆ ತಮ್ಮ ತಾಯಿಯು ತಮ್ಮ ಇಂಥ ಗಂಡಾಂತರದ ಪ್ರಸಂಗದಲ್ಲಿ ತಮ್ಮನ್ನು ಈ ಪರಿ ಉತ್ಸಾಹಗೊಳಿಸುವದನ್ನು ನೋಡಿ, ಅವರ ಆನಂದವು ಅವರ ಹೊಟ್ಟೆಯಲ್ಲಿ ಹಿಡಿಸದಾಯಿತು. ಜೀಜಾಬಾಯಿಯವರ ಮಾತು ಮುಗಿದರೂ ಮಹಾರಾಜರು ಅತ್ಯಂತವಾದ ಅಭಿಮಾನದಿಂದಲೂ, ಆನಂದದಿಂದಲೂ ತಮ್ಮ ಆ ತಾಯಿಯನ್ನು ನೋಡುತ್ತಲೇ ಇದ್ದರು! ಅವರು ಪಿಟ್ಟೆಂದು ಮಾತಾಡದೆ ಸುಮ್ಮನೆ ಕುಳಿತಿದ್ದರು. ತನ್ನ ವೀರ ಜನನಿಯ ಬೋಧದೊಳಗಿನ ಪ್ರತಿಯೊಂದು ಅಕ್ಷರರೂಪವಾದ ಅಮೃತ ಬಿಂದುವು, ತಮಗೆ ಅಮರ ಪದವಿಯನ್ನು ಕೊಡುವದೆಂಬ ಉತ್ಸಾಹದಿಂದ ಅವರು ಕುಳಿತಂತೆ ತೋರುತ್ತಿತ್ತು, ತಮ್ಮ ತಾಯಿಯ ಬೋಧಾಮೃತವನ್ನು ಪ್ರಾಶನಮಾಡಿ ಮಾಡಿದಂತೆ ಮಹಾರಾಜರ ಧೈರ್ಯ- ಶೌರ್ಯ -ಸಮಾಧಾನ-ಸಾಮರ್ಥ್ಯಗಳು

ಹೆಚ್ಚುತ್ತಲಿದ್ದವು. ಮಹಾರಾಜರಂತೆಯೇ ಮಹಾ ರಾಜರ ಪರಿವಾರದ ಸ್ಥಿತಿಯೂ ಆಗಿತ್ತು! ಜೀಜಾಬಾಯಿಯವರ ವಿಲಕ್ಷಣ ಪ್ರಭಾವವೇ ಅಂತಹದು!

ಕೆಲವು ಹೊತ್ತಿನಮೇಲೆ ಮಹಾರಾಜರು ತಮ್ಮ ತಾಯಿಯನ್ನು ಕುರಿತು—''ಆಯಿ ಸಾಹೇಬ, ತಾವು ಹೇಳಿದಂತೆ ಎಲ್ಲ ವ್ಯವಸ್ಥೆಯನ್ನು ಮಾಡಿರುತ್ತೇನೆ. ನಾವು ಇಂಥ ದಿವಸವೇ ಕಾಣುವೆವೆಂದು ಖಾನನ ವಕೀಲನ ಮುಂದೆ ಹೇಳದಿದ್ದರೂ, ಇನ್ನು ನಾವು ವಿಲಂಬ ಮಾಡುವದಿಲ್ಲೆಂದು ತಿಳಿಸಿರುತ್ತೇನೆ. ಪರಸ್ಪರರ ಭೆಟ್ಟಿಯ ಸಲುವಾಗಿ ಪ್ರಯತ್ನಪೂರ್ವಕ ಶೃಂಗರಿಸಿರುವ ಸಭಾಮಂದಿರವನ್ನು ಆ ವಕೀಲನಿಗೆ ತೋರಿಸಿರುತ್ತೇನೆ. ಆತನ ಮನಸ್ಸಿಗೆ ಅದೆಲ್ಲ ಬಂದಿರುತ್ತದೆ. ಇನ್ನು ಖಾನನ ವಕೀಲನು ಬರುವದೊಂದೇ ತಡ, ಮಾರ್ಗಶೀರ್ಷ ಶುದ್ಧ ಷಷ್ಠಿಯು ಭೆಟ್ಟಿಯಾಗುವ ನಿಶ್ಚಿತವಾದ ದಿವಸವೆಂದು ಆತನಿಗೆ ನಾನು ತಿಳಿಸಿಬಿಡುವೆನು. ಹಲವು ಉಪಾಯಗಳಿಂದ ನಾನು ಗೊತ್ತು ಮಾಡಿಕೊಂಡಿದ್ದರ ಮೇಲಿಂದಲೂ, ಹೈಮವತಿ ದೇವಿಯು ಕಳಿಸಿದ ಸುದ್ದಿಯಿಂದಲೂ ಅಂಬಾಬಾಯಿಯ ದೃಷ್ಟಾಂತದಿಂದಲೂ ಖಾನನು ದುರಾಲೋಚನೆ ಯಿಂದ ನನ್ನನ್ನು ನಾಶಗೊಳಿಸಲು ನಿಂತಿರುವನೆಂಬದು ನನಗೆ ನಿಶ್ಚಯವಾಗಿ ಗೊತ್ತಾಗಿದೆ. ಅದಕ್ಕೆ ಸರಿಯಾಗಿ ನಾನು ಎಲ್ಲ ವ್ಯವಸ್ಥೆಯನ್ನು ಮಾಡಿಕೊಳ್ಳುವೆನು. ಮದಾಂಧನಾದ ಖಾನನು ನನ್ನನ್ನು ಲೆಕ್ಕಿಸದೆ, ವಿಶೇಷತರದ ವ್ಯವಸ್ಥೆಯನ್ನೇನೂ ಮಾಡಿಕೊಳ್ಳದೆ, ತನ್ನಲ್ಲಿ ತಾನು ಮರೆಯುತ್ತಿರುವದು ನನಗೆ ಬಹಳ ಅನುಕೂಲವು. ಆತನು ಇನ್ನು ತನ್ನ ಸೈನ್ಯ ವನ್ನೆಲ್ಲ ಸಂಗಡ ಕರಕೊಂಡು ಬಂದರೂ ನಾನು ಬೇಡವೆನ್ನುವದಿಲ್ಲ. ನಾನು ಸರಬರಾಯಿಯ ಇಷ್ಟು ಅತ್ಯುತ್ತಮ ವ್ಯವಸ್ಥೆಯನ್ನು ಇಟ್ಟಿದ್ದರೂ, ಆ ದುಷ್ಟ ಸೈನಿಕರು ನಮ್ಮ ಪ್ರಜೆಗಳಿಗೆ ಉಪದ್ರವ ಕೊಡದೆ ಇರಲಿಲ್ಲ. ಇಂಥ ದುಷ್ಟರ ಶಾಸನ ಮಾಡುವದೂ ಅವಶ್ಯವೇ ಆಗಿರುವದು! ಅಹಹ! ಅವರು ಎಷ್ಟು ಉನ್ಮತ್ತ ರಾಗಿರುವರು! ಇಷ್ಟಾದರೂ ಇವರು ಐಶ್ವರ್ಯವನ್ನು ಭೋಗಿಸುತ್ತಿರುವದು ಆಶ್ಚರ್ಯವು! ದೇವರು ಇವರ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವನ್ನೇಕೆ ಕೊಟ್ಟಿರಲಿಕ್ಕಿಲ್ಲ! ಆದರೆ ಅಂಬಾಬಾಯಿಯ ವಿಚಾರವು ಆಕೆಗೇ ಗೊತ್ತು, ನಮ್ಮಂಥ ಪಾಮರರಿಗೆ ಅದು ಹ್ಯಾಗೆ ತಿಳಿಯಬೇಕು? ಬಡಪ್ರಜೆಗಳ ದುಃಖವನ್ನು ಮಾತ್ರ ನಾನು ನೋಡಲಾರೆನು.''

ಹೀಗೆ ನುಡಿಯುವಾಗ ಮಹಾರಾಜರ ಕಣ್ಣುಗಳೊಳಗಿಂದ ಅಶ್ರುಗಳು ಉದುರಿದವು. ಅದನ್ನು ನೋಡಿ ಜೀಜಾಬಾಯಿ ಸಾಹೇಬರವರು—''ಅಪ್ಪಾ, ಶಿವಬಾ, ನೀನು ಹೀಗೆ ದುಃಖಿಸಬೇಡ, ಖಿನ್ನನಾಗಬೇಡ. ಅಂಬಾಬಾಯಿಯು ನಿನ್ನ ಕೈಯಿಂದ ಅವರ ಶಾಸನ ಮಾಡಿಸಬೇಕೆಂತಲೇ ಆಕೆಯು ಇಂಥ ಅನರ್ಥಗಳು ನಿನ್ನ ಕಣ್ಣಿಗೆ ಬೀಳುವಂತೆ ಮಾಡಿರುವಳು. ಅವನ್ನು ನೋಡಿ ನೀನು ಸಂತಾಪಗೊಳ್ಳಬೇಕು, ದ್ವೇಷಪಡಬೇಕು, ಅವರ ಶಾಸನಮಾಡಲು ಸಿದ್ಧನಾಗಬೇಕು, ಎಂಬದೇ ಆಕೆಯ ಉದ್ದೇಶವಾಗಿರುವದು. ಅಂಬಾಬಾಯಿಯ ಮೇಲಿನ ನಮ್ಮ ವಿಶ್ವಾಸವೂ, ಆಕೆಯು ನಮಗೆ ತೋರಿಸುವ ದೃಷ್ಟಾಂತಗಳೂ ವ್ಯರ್ಥವಾಗಬಹುದೆ?

ಅಪ್ಪಾ, ಹೀಗೆ ಉದಾಸೀನನಾದರೆ ಹ್ಯಾಗೆ? ಬಂದ ಸಂಕಟಗಳಿಗೆ ಧೈರ್ಯದಿಂದ ಎದೆಗೊಟ್ಟು ನಿಲ್ಲಲೇಬೇಕು; ಅಂದರೆ ದುಷ್ಟರ ಶಾಸನವಾಗುವದು. ನಿನ್ನ ಮಾತು ನಿಜವು; ಖಾನನು ಮೋಸದಿಂದ ನಿನ್ನ ಪ್ರಾಣಹರಣ ಮಾಡಲಿಕ್ಕೂ ಹಿಂದೆಮುಂದೆ ನೋಡಲಿಕ್ಕಿಲ್ಲ. ನೀನು ಅದಕ್ಕೆ ತಕ್ಕಂತೆಯೇ ಎಲ್ಲ ಸಿದ್ಧತೆಯನ್ನು ಮಾಡಿಕೋ. ನಡೆ, ಕಾರ್ಯವು ಸಫಲವಾಗುವದು. ಅಂಬಾಬಾಯಿಯ ಪೂರ್ಣ ಕೃಪೆಯು ನಿನಗಿರುತ್ತದೆ; ನಮ್ಮಂಥ ಹಿರಿಯರ ಅಂತಃಕರಣ ಪೂರ್ವಕವಾದ ಆಶೀರ್ವಾದದ ಬಲವೂ ನಿನಗಿರುತ್ತದೆಂದು ತಿಳಿದುಕೋ. ಸ್ವಲ್ಪವೂ ಚಿಂತೆ ಮಾಡಬೇಡ.

ತಾನಾಜಿ—ಅಂಬಾಬಾಯಿಯ ಕೃಪೆಯೂ, ಆಯಿಸಾಹೇಬರ ಆಶೀರ್ವಾದವೂ ಇದ್ದಬಳಿಕ ಎರಡನೆಯದೇನು ಬೇಕು? ನಾವು ಚಿಂತೆ ಮಾಡುವದಾದರೂ ಯಾಕೆ?

ಜೀಜಾಬಾಯಿ—(ಸ್ವಲ್ಪ ನಕ್ಕು)ಎರಡು ಹೇಳಿದೆ; ಆದರೆ ಮೂರನೆಯದನ್ನು ಹೇಳಲಿಲ್ಲ?

ತಾನಾಜಿ—ಮೂರನೆಯದಾವದು? ನನಗಂತು ಅದು ತೋರಲೊಲ್ಲದು. ಈ ಎರಡರಲ್ಲಿ ಉಳಿದವೆಲ್ಲ ಬರುತ್ತವೆಂದು ನಾನು ತಿಳಿದಿರುತ್ತೇನೆ.

ಜೀಜಾಬಾಯಿ—ಏನೇ ಅನ್ನು, ಮೂರನೆಯ ಮಾತಿನ ಅವಶ್ಯವೂ ಇರುತ್ತದೆ.

ತಾನಾಜಿ—ಅದು ಯಾವದು ಆಯಿಸಾಹೇಬ, ನನ್ನ ಮನಸ್ಸಿಗೆ ಹೊಳೆಯಲೊಲ್ಲದಲ್ಲ!

ಜೀಜಾಬಾಯಿ—ಹೇಳುತ್ತೇನೆ ಕೇಳು. ಅಂಬಾಬಾಯಿಯ ಕೃಪೆಯೂ, ಹಿರಿಯರ ಆಶೀರ್ವಾದವೂ ಅವಶ್ಯವಾಗಿಯಿದ್ದಂತೆ, ನಿನ್ನಂಥ ಮಿತ್ರರ ಸಹಾಯವೂ ಅವಶ್ಯವಾಗಿ ಬೇಕಾಗುತ್ತದೆ.

ತಾನಾಜಿ—(ವಿನಯದಿಂದ) ಆಯಿಸಾಹೇಬ, ಸುಮ್ಮನೆ ನಮ್ಮನ್ನು ಗೌರವಿಸುವದಕ್ಕಾಗಿ ನೀವು ಹೀಗೆ ಹೇಳುವಿರಿ. ಅದೆಲ್ಲ ಸುಳ್ಳು. ನಾವು ನಿಮ್ಮ ನೌಕರರು; ತಮ್ಮ ಅಪ್ಪಣೆಯಂತೆ ಕಾರ್ಯವನ್ನು ಸಾಧಿಸುವದು ನಮ್ಮ ಕೆಲಸವು. ಅಂದಬಳಿಕ ಅದರಲ್ಲಿ ನಮ್ಮ ದೊಡ್ಡಿಸ್ತನವೇನು?

ಹೀಗೆ ಸಂಭಾಷಣವು ನಡೆದಿರಲು, ''ಖಾನನ ವಕೀಲನು ಬಂದಿದ್ದು, ಆತನು ಮಹಾರಾಜರನ್ನು ಕಾಣಲು ಇಚ್ಛಿಸುವನೆಂ''ಬ ವರ್ತಮಾನವು ಬಂದಿತು. ಅದನ್ನು ಕೇಳಿ ಎಲ್ಲರಿಗೂ ಸಮಾಧಾನವಾಯಿತು. ಒಮ್ಮೆ ಖಾನನ ಪ್ರಕರಣವು ಮುಗಿದುಹೋಗಬೇಕೆನ್ನುವ ಹಾಗೆ ಎಲ್ಲರಿಗೂ ಆಗಿತ್ತು. ಖಾನನ ಜನರು ಹಳ್ಳಿಪಳ್ಳಿಗಳಲ್ಲಿ ಪುಂಡಾಟಿಕೆಯನ್ನು ನಡೆಸಿದ್ದ ರಿಂದಲೂ, ಅವರು ದೇವಸ್ಥಾನಗಳನ್ನು ನಾಶಗೊಳಿಸಹತ್ತಿದ್ದರಿಂದಲೂ ಜನತಾಪವು ಹೆಚ್ಚಿತ್ತು. ಖಾನನು ಗೊತ್ತಿಗೆಹತ್ತಿದ ಹೊರತು ಈ ಜನತಾಪವು ಶಾಂತವಾಗುವ ಹಾಗಿದ್ದಿಲ್ಲ; ಆದ್ದರಿಂದ ಮಹಾರಾಜರ ಪರಿವಾರವು ಮಹಾರಾಜರನ್ನು ಕುರಿತು—''ನೀವು ವಕೀಲನ ಭೆಟ್ಟಿಯಾದ ಕೂಡಲೆ ಭೆಟ್ಟಿಯ ದಿವಸವನ್ನು ತಿಳಿಸಿಬಿಡಿರಿ.''ಎಂದು ಹೇಳಿದರು. ಅದಕ್ಕೆ ಮಹಾರಾಜರು ಮುಗುಳು ನಗೆ ನಗುತ್ತ ಒಪ್ಪಿಕೊಂಡು, ನಿಮ್ಮ ಮನಸ್ಸಿನಂತೆಯೇ ಮಾಡುವೆನೆಂದು ಹೇಳಿ,

ವಕೀಲನನ್ನು ಕಾಣುವದಕ್ಕಾಗಿ ಸದರಿಗೆ ಹೋದರು. ಅಲ್ಲಿ ರೀತಿಯಂತೆ ಆ ಮಾತು ಈ ಮಾತು ಹೊರಟಬಳಿಕ ಗೋಪೀನಾಥ ಪಂತನು ಮಹಾರಾಜರನ್ನು ಕುರಿತು—''ಖಾನಸಾಹೇಬರು ಭೆಟ್ಟಿಯ ದಿವಸವನ್ನು ತಿಳಕೊಂಡು ಬರುವದಕ್ಕಾಗಿ ಪುನಃ ನನ್ನನ್ನು ಕಳಿಸಿರುವರು. ಇನ್ನು ಅವರ ಸರ್ವಥಾ ವಿಳಂಬ ಮಾಡುವ ಹಾಗಿಲ್ಲ, ನಿಮ್ಮ ಎಲ್ಲ ಕರಾರುಗಳನ್ನು ಅವರು ಒಪ್ಪಿಕೊಳ್ಳುವರು. ಇನ್ನು ಮೇಲೆ ಅವರು ಯಾವ ನೆವವನ್ನೂ ಕೇಳುವಹಾಗಿಲ್ಲ, ಒಮ್ಮೆ ಬೇಗನೆ ಭೆಟ್ಟಿಯಾಗಿ ಮಾತು ಕಥೆಗಳನ್ನಾಡಿಯೇ ತೀರ ಬೇಕೆಂದು ಅವರು ಆಗ್ರಹ ಪಡುವರು.'' ಎಂದು ಹೇಳಲು, ಮಹಾರಾಜರು—''ಅದಕ್ಕೆ ನಾವೆಲ್ಲಿ ಬೇಡವೆನ್ನುವೆವು? ಮಾರ್ಗಶೀರ್ಷ ಶುದ್ಧ ಷಷ್ಠಿಯ ಮುಹೂರ್ತವು ಭೆಟ್ಟಿಗೆ ನೆಟ್ಟಗಿರುವದರಿಂದ, ಅದನ್ನೇ ಭೆಟ್ಟಿಯ ದಿವಸವೆಂದು ಗೊತ್ತುಮಾಡಿರುತ್ತೇವೆ. ಈ ಮಾತನ್ನು ನಿಮ್ಮ ಖಾನಸಾಹೇಬರಿಗೆ ತಿಳಿಸಬೇಕು; ಅವರು ಸಂಗಡ ಹೆಚ್ಚು ಜನರನ್ನು ಕರಕೊಂಡು ಬರಬಾರದು. ಬಹಳವಾದರೆ ಅವರು ಇಬ್ಬರನ್ನೇ ಸಂಗಡ ಕರಕೊಂಡು ಬರಬಹುದು. ನಾವೂ ಇಬ್ಬರನ್ನೇ ಸಂಗಡ ಕರಕೊಂಡು ಬರುತ್ತೇವೆ. ಇವರಲ್ಲದೆ ನಮ್ಮ ವಕೀಲನು, ನಿಮ್ಮ ವಕೀಲನು, ಹೀಗೆ ಎಂಟೇ ಜನರು ದರ್ಬಾರ ದೊಳಗೆ ಇರತಕ್ಕದ್ದು. ಹೀಗೆ ಮಾಡದೆ ನಮಗೆ ಸಂಶಯ ಬರುವಹಾಗೆ ನಡೆದುಕೊಂಡರೆ, ನಾವು ಅಂಜಿ ಭೆಟ್ಟಿಗೆ ಬರಲಿಕ್ಕಿಲ್ಲ. ನಾವು ಈ ಸಂಗತಿಯನ್ನು ನಮ್ಮ ವಕೀಲನ ಸಂಗಡ ಹೇಳಿ ಕಳಿಸುತ್ತೇವೆ. ನೀವು ಅನಾಯಾಸವಾಗಿ ಸಮಕ್ಷ ಬಂದಿರುವದರಿಂದ ನಿಮ್ಮ ಮುಂದೆಯೂ ಹೇಳುವೆವು. ನೀವೂ ಈ ಸಂಗತಿಯನ್ನು ಖಾನಸಾಹೇಬರಿಗೆ ತಿಳಿಸಿರಿ. ಇನ್ನು ನಮ್ಮ ನಿಶ್ಚಯದಲ್ಲಿ ಅಂತರವಾಗುವ ಹಾಗಿಲ್ಲ. ನಾವು ಇನ್ನು ಯಾರ ಆಲೋಚನೆ ಯನ್ನೂ ಕೇಳುವದಿಲ್ಲ. ''ಶಿವಾಜಿಯನ್ನು ಬೇಕಾದವರು ಬೇಕಾದ ಹಾಗೆ ಮೋಸಗೊಳಿಸ ಬಹುದೆ''ಂಬ ಖಾನನ ತಿಳುವಳಿಕೆಯು ನಮಗೆ ಬಹು ಉಪಯುಕ್ತವಾಗಿರುತ್ತದೆ. ಈ ಮಬ್ಬಿನಿಂದ ಅವನ ಮೋಸ ಗಾರಿಕೆಯು ಪ್ರಸಂಗದಲ್ಲಿ ತಟ್ಟನೆ ಹೊರಬೀಳಬಹುದು. ಆಗ ನಮ್ಮ ಅವಸ್ಥೆಯೇನಾಗುವ ದೆಂಬದನ್ನು ನಾವು ನೋಡಿಕೊಳ್ಳುವೆವು. ಪಂತ, ಹಿಂದೂ ಧರ್ಮದ ಅಭಿಮಾನವು ನಮಗಿಂತ ನಿಮಗೆ, ಬ್ರಾಹ್ಮಣರಾದದ್ದರಿಂದ ಹೆಚ್ಚು ಇರಬೇಕು. ಖಾನನು ಏನಾದರೂ ಕಪಟವನ್ನು ಯೋಚಿಸಿದ್ದರೆ, ಅದನ್ನು ನಮಗೆ ನೀವು ತಿಳಿಸಬೇಕು, ಅಂದರೆ ಅದಕ್ಕೆ ನಾವು ತಕ್ಕ ಉಪಾಯಗಳನ್ನಾದರೂ ಮಾಡಿಕೊಳ್ಳುವೆವು. ಖಾನನು ಸರಳರೀತಿ ಯಿಂದ ನಡೆದರೆ ನಾವೂ ಸರಳರೀತಿಯಿಂದ ನಡೆದುಕೊಳ್ಳುವೆವು. ನಾವು ಸರಳರೀತಿಯಿಂದ ಹೋಗಿರಲು, ಖಾನನು ಕಪಟವನ್ನು ಆಚರಿಸಿ ನಮ್ಮನ್ನು ನಾಶಗೊಳಿಸುವದೂ, ಖಾನನು ಸರಳರೀತಿಯಿಂದ ಬಂದಿರಲು, ನಾವು ಕಪಟವನ್ನು ಆಚರಿಸಿ ಆತನನ್ನು ನಾಶಗೊಳಿಸುವುದು ಯೋಗ್ಯವಲ್ಲ. ಸರಳತನಕ್ಕೆ ಸರಳತನವು, ಕುಟಿಲತನಕ್ಕೆ ಕುಟಿಲತನವು ಎದುರಾಗುವದು ನೆಟ್ಟಗೆ. ನಾವಂತು ಸಂಶಯಗ್ರಸ್ತ ರಾಗಿರುತ್ತೇವೆ. ಖಾನನ ಸಂಗಡ ಪ್ರಸಂಗ ಒದಗಿದಂತೆ ನಡಕೊಳ್ಳುವ ಸಿದ್ಧತೆಯಿಂದಲೇ ನಾವು ಬರುತ್ತೇವೆ; ಆದರೆ ನೀವು ನಿಮಗೆ ಗೊತ್ತಾಗಿದ್ದ

ನಿಜವಾದ ಸಂಗತಿಯನ್ನು ತಿಳಿಸಿದರೆ, ನೆಟ್ಟಗಾಗುವದು. ನಾವು ಅನ್ಯಾಯಕ್ಕೆ ಎಷ್ಟು ಅಂಜಿ ನಡೆದರೂ ಮುಸಲ್ಮಾನರು ಪ್ರಸಂಗದಲ್ಲಿ ಕಪಟಾಚರಣೆಯ ಆರೋಪವನ್ನು ನಮ್ಮ ಮೇಲೆ ಹೊರಿಸುವರೆಂಬದನ್ನು ನಾವು ಅರಿತಿದ್ದೇವೆ. ನಾವಿದ್ದಲ್ಲಿಗೆ ಖಾನನು ಭೆಟ್ಟಿಗೆ ಬರುವಂತೆ ನೀವು ಮಾಡಿದ್ದಕ್ಕಾಗಿ ಕೃತಜ್ಞರಾಗಿರುವೆವು. ಎಲ್ಲ ಬಗೆಯಿಂದ ವಿಚಾರ ಮಾಡಿ ಈ ಪ್ರಸಂಗದಲ್ಲಿ ನಮಗೆ ತಿಳಿಸತಕ್ಕದ್ದನ್ನು ನೀವು ತಿಳಿಸಬೇಕೆಂದು ನಾವು, ಆಗ್ರಹದಿಂದ ಹೇಳಿಕೊಳ್ಳುವೆವು.''

ಮಹಾರಾಜರ ಈ ಮಾತುಗಳನ್ನು ಕೇಳಿ ಗೋಪೀನಾಥಪಂತನು ಸುಮ್ಮನೆ ಕುಳಿತನು. ಉಪ್ಪು ಉಂಡವನ ಮೇಲೆ ತಿರುಗಿ ಬೀಳಲಿಕ್ಕೆ ಆತನ ಮನಸ್ಸು ಒಪ್ಪದಾಯಿತು. ಅದರಂತೆ, ಮುಸಲ್ಮಾನರು ತೀರತಾಳ ಪರಿಪರಿಯಾಗಿ ಹಿಂದೂ ಜನರನ್ನು ಪೀಡಿಸುತ್ತಿರುವಾಗ, ಧರ್ಮೋದ್ಧಾರಕ್ಕಾಗಿ ತ್ರಿಕರಣಪೂರ್ವಕ ಯತ್ನಿಸುವ ಮಹಾರಾಜರನ್ನು ನಾಶಗೊಳಿಸಲಿಕ್ಕೂ ಆತನ ಮನಸ್ಸು ಒಪ್ಪದಾಯಿತು. ಹೀಗಾಗಿ ಆತನು ಸುಮ್ಮನೆ ಕುಳಿತುಕೊಂಡನು. ಆತನ ಮನಸ್ಸಿನ ಈ ದ್ವೈತಭಾವವು ಆಗಲೆ ಮಹಾರಾಜರ ಮನಸ್ಸಿನಲ್ಲಿ ಬಂದುಹೋಗಿತ್ತು, ಅವರು ವಕೀಲನ ಈ ಸಂಶಯಗ್ರಸ್ತ ಸ್ಥಿತಿಯನ್ನು ಅಯೋಗ್ಯವೆಂದು ತಿರಸ್ಕರಿಸಲಿಲ್ಲ; ಆದರೆ ವಕೀಲನ ಮನಸ್ಸು ಚಂಚಲವಾಗಿರುವದರಿಂದ, ಪ್ರಸಂಗದಲ್ಲಿ ಅದು ತನ್ನ ಅನ್ನದಾತೃವಿನ ಕಡೆಗೆ ಹೊರಳಬಹು ದೆಂದು ಮಾತ್ರ ಅವರು ತಿಳಿದುಕೊಂಡರು. ಅಷ್ಟರಲ್ಲಿ ಗೋಪೀನಾಥ ಪಂತನು ಮಹಾರಾಜರಿಗೆ —''ಮಹಾರಾಜ, ನೀವು ನಿಸ್ವಾರ್ಥಬುದ್ಧಿಯಿಂದ ಧರ್ಮೋದ್ಧಾರದ ಕಾರ್ಯವನ್ನು ನಡಿಸುತ್ತಿರುವದರಿಂದ, ನಾನು ನನ್ನ ಮನಸ್ಸಿನ ವಿರುದ್ಧವಾಗಿ ಕೆಲವು ಮಾತುಗಳನ್ನು ನಿಮಗೆ ತಿಳಿಸುವೆನು. ಅದಕ್ಕಾಗಿ ಪರಲೋಕದಲ್ಲಿ ನನಗೆ ತಕ್ಕ ಶಾಸನವಾದರೂ ಆಗಲಿ; ಈ ಲೋಕದಲ್ಲಿ ಅಪಕೀರ್ತಿ ಬಂದರೂ ಬರಲಿ. ನಾನು ಯಾವ ದುರಾಶೆಗೂ ಬಲಿಯಾಗದೆ, ಸ್ವಜನರ ಅನ್ಯಾಯದ ತಾಪನಿವಾರಣದ ದೃಷ್ಟಿಯಿಂದ ಕೆಲವು ಸಂಗತಿ ಗಳನ್ನು ನಿಮಗೆ ಹೇಳುವೆನು. ಖಾನನು ಮನಸ್ಸಿನಲ್ಲಿ ಕಪಟವನ್ನು, ಆದರೆ ಯಾವ ಬಗೆಯ ಕಪಟವ ಯೋಚಿಸಿರುವನೆಂಬದನ್ನು ನಾನು ಹೇಳಲಾರೆನು. ಖಾನನು ತನ್ನ ಸಂಗಡ 1500 ಜನ ದಂಡಾಳುಗಳನ್ನು ಕರಕೊಂಡು ಬರುವನೆಂದು ಈ ಮೊದಲೆ ನಾನು ಹೇಳಿದ್ದು ನಿಜವು. ಮೋಸದಿಂದ ನಿಮ್ಮನ್ನು ಬಗ್ಗುಬಡಿದು, ಕೂಡಲೆ ಆ ದಂಡಿನ ಸಹಾಯದಿಂದ ಪ್ರತಾಪಗಡವನ್ನು ಕೈವಶಮಾಡಿಕೊಳ್ಳುವ ವಿಚಾರವು ಆತನದಿದ್ದ ಹಾಗೆ ತೋರುತ್ತದೆ. ಇದಕ್ಕೂ ನಾನು ಹೆಚ್ಚಿಗೆ ಸೂಚಿಸಲಾರೆನು. ಖಾನನ ಈ ಮೋಸಕ್ಕೆ ತಕ್ಕ ಪ್ರತಿಕಾರವನ್ನು ತಾವು ಮಾಡುವಿರೆಂಬ ನಂಬಿಗೆಯು ನನಗಿದೆ. ಇನ್ನು ನಾನು ಹೋಗಿಬರುವೆನು. ಮಾರ್ಗಶೀರ್ಷ ಶುದ್ಧ ಷಷ್ಠಿಯು ಭೆಟ್ಟಿಯ ದಿವಸವೆಂದು ಖಾನಸಾಹೇಬರಿಗೆ ಹೇಳುವೆನು;'' ಮತ್ತು ತಾವು ಹೇಳಿದ ಉಳಿದ ಮಾತುಗಳನ್ನೂ ಅವರಿಗೆ ತಿಳಿಸುವೆನು; ಎಂದು ಹೇಳಿ, ಗೋಪೀನಾಥಪಂತನು ಹೊರಟುಹೋದನು.

# ಮಹಾರಾಜರ ಮನಸ್ಸಿನ ಸ್ಥಿತಿಯು

ಒಮ್ಮೆ ಮಹಾರಾಜರು ಮನಸ್ಸಿನ ನಿಶ್ಚಯವಾದಬಳಿಕ ಅದು ತಿರುಗುವದು ಪರಮ ದುಸ್ತರವು. ಖಾನನ ಭೆಟ್ಟಿಯಾಗುವ ದಿವಸವು ಒಮ್ಮೆಗೊತ್ತಾಗಿ, ಗೋಪೀನಾಥಪಂತನ ಸಂಗಡ ಖಾನನಿಗೆ ಅದನ್ನು ಹೇಳಿಕಳಿಸಿದ ಬಳಿಕ, ಮಹಾರಾಜರು ತಾವು ಮಾಡಿಕೊಳ್ಳತಕ್ಕ ಸಿದ್ಧತೆಯನ್ನು ಬಡ ಬಡ ಮಾಡಿಕೊಳ್ಳಹತ್ತಿದರು. ಮೊದಲು ತಮ್ಮ ನಂಬಿಗೆಯ ಮುಖ್ಯ ಮುಖ್ಯ ಜನರನ್ನು ಕರಿಸಿ, ಪ್ರಕೃತದ ಕಠಿಣ ಪ್ರಸಂಗವನ್ನೂ, ಅದರಲ್ಲಿ ಪ್ರತಿ ಒಬ್ಬನು ಮಾಡಬೇಕಾದ ಸ್ವಾರ್ಥತ್ಯಾಗವನ್ನೂ ಕುರಿತು ತಮ್ಮ ಅಚ್ಚುಕಟ್ಟಿನ ರಸ ಭಾಷಣದಿಂದ ಅವರನ್ನು ಪ್ರೋತ್ಸಾಹಗೊಳಿಸಿದರು. ಬಳಿಕ ತಮ್ಮ ಸೈನ್ಯದ ಮುಖ್ಯ ಸೇನಾಪತಿಗಳಾದ ಮೋರೋಪಂತ ಪೇಶವೆ, ಹಾಗು ಜೀವಾಜಿ ಸುಭಾನಜಿ ಇವರಿಬ್ಬರನ್ನು ಕುರಿತು—''ನೀವು ಖಾನನ ಮುಖ್ಯ ಸೈನ್ಯದ ಬಳಿಯಲ್ಲಿ ನಿಮ್ಮ ಸೈನ್ಯದ ಬೇರೆ ಬೇರೆ ಭಾಗಗಳೊಡನೆ ಸ್ವಲ್ಪ ದೂರ ದೂರ ಗುಪ್ತ ರೀತಿಯಿಂದ ಕಾದುಕೊಂಡು ಇದ್ದು ದುರ್ಗದ ಮೇಲಿನ ಐದು ತೋಪುಗಳು ಹಾರಿದ ಕೂಡಲೆ ಖಾನನ ಸೈನ್ಯದ ಮೇಲೆ ಮುಗಿಬಿದ್ದು ಅದನ್ನು ತುಂಡರಿಸಬೇಕು; ಮತ್ತು ಗೊತ್ತಾದ ಕರಾರುಗಳಂತೆ ಖಾನನು ತನ್ನ ಡೇರೆ ಯನ್ನು ಹೊಡೆದು, ಹೆಚ್ಚಿನ ಪರಿವಾರವನ್ನು ನಿಯಮಿತ ಸ್ಥಳದಲ್ಲಿ ಬಿಡುವನಷ್ಟೇ? ಆ ಸ್ಥಳದ ಸಮೀಪದಲ್ಲಿ ಈ ನೇತಾಜಿ ಪಾಲಕರನು ತನ್ನ ಸೈನ್ಯದೊಡನೆ ಕಾದಿದ್ದು ಸಾಂಕೇತಿಕ ತೋಪು ಹಾರಿದಕೂಡಲೇ ಖಾನನ ಆ ಪರಿವಾರದ ಮೇಲೆ ಬಿದ್ದು ಅದನ್ನು ಗೊತ್ತಿಗೆ ಹಚ್ಚಬೇಕು. ಅದರಂತೆ, ನಾವು ದುರ್ಗದಿಂದ ಕೆಳಗಿಳಿದು ಬಂದಕೂಡಲೆ ಕರ್ಣೆಯ ಧ್ವನಿಯಾಗುವದು, ಕಾಳಿಯು ಊದುವದು. ಆ ಕೂಡಲೆ ಇವರಿಷ್ಟು ಜನರು ತಮ್ಮ ತಮ್ಮ ಪರಿವಾರದೊಡನೆ ಮುಂದಕ್ಕೆ ಸಾಗಿಬಂದು, ನಮ್ಮಿಂದ ಒಂದು ಕೂಗಳತೆಯ ಅಂತರದಲ್ಲಿ ನಿಂತುಕೊಳ್ಳಬೇಕು. ಹಾಗೆಯೇ, ದುರ್ಗದ ದ್ವಾರಗಳನ್ನು ಈ ದೊಡ್ಡ ದೊಡ್ಡ ಸರದಾರರು ಕಾಯುತ್ತಲಿದ್ದು, ನಾವು ಕಚೇರಿಗೆ ಮುಟ್ಟಿದ ಕೂಡಲೆ ಇವರು ಮುಂದಕ್ಕೆ ಸಾಗಿ ಬರತಕ್ಕದ್ದು'' ಎಂದು ಹೇಳಿದರು. ಸಂಕೇತದ ತೋಪು ಹಾರಿದ ಹೊರತು ಯಾರೂ ಖಾನನ ಸೈನ್ಯದ ಮೇಲೆ, ಅಥವಾ ಆತನ ಪರಿವಾರದ ಮೇಲೆ ಬೀಳಬಾರದೆಂದು ಮಹಾರಾಜರು ನಿರ್ಧಾರದ ಅಪ್ಪಣೆಯನ್ನಿತ್ತರು; ಯಾಕಂದರೆ, ಖಾನನು ಸರಳತನದಿಂದ ನಡಕೊಂಡರೆ, ತಾವೂ ಸರಳತನದಿಂದಲೇ ನಡಕೊಳ್ಳ ತಕ್ಕದ್ದೆಂದು ಅವರು ನಿಶ್ಚಯಿಸಿದ್ದರು. ಹಾಗೆ ನಿಶ್ಚಯಿಸಿರದಿದ್ದರೆ, ಖಾನನ ಸೈನ್ಯವು ಬಂದಕೂಡಲೆ ಅದರ ಮೇಲೆ ಬಿದ್ದು ಅವರ ದೂಳ ಹಾರಿಸಿರೆಂದು ಅವರು ಅಪ್ಪಣೆ ಕೊಡುತ್ತಿದ್ದರು.

ಹೀಗೆ ಮಹಾರಾಜರು ಸಣ್ಣ ಪುಟ್ಟ ಸಂಗತಿಗಳನ್ನು ಕೂಡ ದುರ್ಲಕ್ಷಿಸದೆ ಯಥಾ ಯೋಗ್ಯವಾಗಿ ವ್ಯವಸ್ಥೆಗೊಳಿಸಿದ ಬಳಿಕ, ಭೆಟ್ಟಿಯ ಮಂಟಪವು ಹ್ಯಾಗಾಗಿರುವದೆಂಬದನ್ನು ನೋಡುವದಕ್ಕಾಗಿ ಅಲ್ಲಿಗೆ ಹೋದರು. ಭೆಟ್ಟಿಯ ಮೊದಲು ಖಾನನಿಗೆ ಯಾವ ಬಗೆಯ ಸಂಶಯವೂ ಬರಬಾರದೆಂದು ತಿಳಿದು, ಅವರ ಮಂಟಪವನ್ನು ಬಹು ಸುಂದರವಾಗಿ

ಹಾಕಿಸಿದ್ದರು. ಈ ಕೆಲಸದಲ್ಲಿ ವೆಚ್ಚದ ಕಡೆಗೆ ನೋಡದೆ ಕೆಲಸವನ್ನು ಉತ್ತಮ ರೀತಿಯಿಂದ ಮಾಡಿಸಬೇಕೆಂದು ವ್ಯವಸ್ಥಾಪಕನಿಗೆ ಅಪ್ಪಣೆಯಾದದ್ದರಿಂದ ಮಂಟಪದ ಶೃಂಗಾರದಲ್ಲಿ ಯಾವ ಬಗೆಯ ಕೊರತೆಯೂ ಆಗಿದ್ದಿಲ್ಲ. ಮಂಟಪದ ಎಲ್ಲ ಕಂಬಗಳನ್ನು ಜರತಾರಿಯ ವಸ್ತ್ರಗಳಿಂದ ಅಲಂಕರಿಸಿದ್ದರು. ಸರ್ವೋತ್ಕೃಷ್ಟವಾದ ಕಿನಕಾಫಿನ ಮೇಲ ಕಟ್ಟಿನಿಂದ ಮಂಟಪಕ್ಕೆ ವಿಲಕ್ಷಣ ಶೋಭೆಯು ಉಂಟಾಗಿತ್ತು, ಮುತ್ತಿನ ಝಾಲರಗಳು ಅಲ್ಲಲ್ಲಿ ಒಪ್ಪುತ್ತಿದ್ದವು. ಕೂಡುವ ಆಸನವನ್ನಂತು ಬಹು ಸುಂದರವಾಗಿ ಶೃಂಗರಿಸಿದ್ದರು. ತನ್ನ ಸತ್ಕಾರಕ್ಕಾಗಿ ಶಿವಾಜಿಯು ಬಹು ಪರಿಶ್ರಮಪಟ್ಟಿರುವನೆಂದು ಖಾನನ ಭಾವನೆಯಾ ಮಹಾರಾಜರು ಪ್ರಯತ್ನ ಪೂರ್ವಕವಾಗಿ ಇಷ್ಟು ಸುಂದರ ಮಂಟಪವನ್ನು ಹಾಕಿಸಿದ್ದರೆಂದು ಹೇಳಬಹುದು. ತಾವು ಹೇಳಿದ್ದಕ್ಕಿಂತ ಕೆಲಸವು ಉತ್ತಮ ರೀತಿಯಿಂದ ಆಗಿರುತ್ತದೆಂದು ಮಹಾರಾಜರ ಭಾವನೆಯಾಯಿತು; ಆದರೆ ಇದರಿಂದ ಅವರಿಗೆ ಸಮಾಧಾನವಾಗುವದರ ಬದಲು, ಅಸಮಾಧಾನವಾಯಿತೆಂದು ನಾವು ಬರೆಯುವದನ್ನು ನೋಡಿ, ವಾಚಕರು ಆಶ್ಚರ್ಯಪಡಬಹುದು; ಆದರೆ ಹಾಗೆ ಆಶ್ಚರ್ಯಪಡುವ ಕಾರಣವಿಲ್ಲ, ಗೋ-ಬ್ರಾಹ್ಮಣರನ್ನು ಪರಿಪರಿಯಾಗಿ ಪೀಡಿಸುವ ಮೊಗಲರ ಸರದಾರರನ್ನು, ಅದರಲ್ಲಿಯೂ ವಿಶೇಷವಾಗಿ ಸಂತರ ಮಹಾದೈವತವಾದ ಪಂಢರಪುರದ ವಿಠೋಬನ, ಹಾಗು ತಮ್ಮ ಕುಲದೈವತವಾದ ತುಳಜಾಪುರದ ಭವಾನಿಯ ಸ್ಥಾನಭ್ರಷ್ಟಗೊಳಿಸಿದ ಅಫಜುಲಖಾನನನ್ನು ಸತ್ಕರಿಸುವದಕ್ಕಾಗಿ ತಾವು ಸುಂದರ ಮಂಟಪವನ್ನು ಹಾಕಿಸಿರಲು, ಸ್ವಾಭಿಮಾನದ ಮಹಾರಾಜರಿಗೆ ಅದರಿಂದ ಹ್ಯಾಗೆ ಸಮಾಧಾನವಾಗಬೇಕು? ಮೊಗಲರ ಕಾಲುಬೀಳುವ ಪ್ರಸಂಗ ಬರಲು, ಮಹಾರಾಜರ ಅಂತಃಕರಣವು ಅತ್ಯಂತ ವ್ಯಥಿತವಾಗುತ್ತಿತ್ತು, ಅವರು ತೀರ ಸಣ್ಣವರಿರುವಾಗ ತಂದೆಯ ಸಂಗಡ ವಿಜಾಪುರಕ್ಕೆ ಹೋದಾಗ, ತಂದೆಯ ಅಪ್ಪಣೆಯನ್ನು ಕೂಡ ಧಿಕ್ಕರಿಸಿ, ಬಾದಶಹನಿಗೆ ಕುರ್ನಿಸಾತ ಮಾಡದೆ ಕೂಡಿದ ದರ್ಬಾರದೊಳಗಿಂದ ಹೊರಟು ಬಂದಿದ್ದರು; ಆದರೆ ಹುಡುಗತನದ ಕೃತಿಯು ಹುಡುಗತನಕ್ಕೇ ಒಪ್ಪುವದು. ಅಫಜುಲಖಾನನಂಥ ಬಲಿಷ್ಠ ಮೊಗಲ ಸರದಾರರೊಡನೆ ಎದುರಿಗೆ ನಿಂತು ಕಾದುವಷ್ಟು ತಾವು ಇನ್ನು ಬಲಿಷ್ಠರಾಗದ್ದರಿಂದ, ಮಹಾರಾಜರು ನಿರ್ವಾಹವಿಲ್ಲದೆ ಕುಟಿಲ ತಂತ್ರವನ್ನು ಯೋಚಿಸಬೇಕಾಗುತ್ತಿತ್ತು, ಹಾಗೆ ಮಾಡದಿದ್ದರೆ ಅವರ ಸ್ವರಾಜ್ಯವು ನಷ್ಟವಾಗುವ ಸಂಭವವಿತ್ತು, ಸ್ವಧರ್ಮದ, ಹಾಗು ಸ್ವರಾಜ್ಯದ ಉದ್ಧಾರಕ್ಕಾಗಿ, ದುಷ್ಟ ಕೃತಿಯ ಮೂಲಕ ಮುಖಾವಲೋಕನ ಮಾಡಬಾರದ ಮೊಗಲರ ಕೈಕಾಲು ಸಹ ಕಟ್ಟಿಕೊಳ್ಳಬೇಕಾಗುತ್ತದೆಂದು ಮಹಾರಾಜರು ದುಃಖದಿಂದ ಅನ್ನುತ್ತಲಿದ್ದರು; ಆದರೆ ವಿಸ್ತಾರ ವಾಗುತ್ತ ನಡೆದಿದ್ದ ತಮ್ಮ ರಾಜ್ಯವನ್ನು ಮೊಗಲರಿಂದ ರಕ್ಷಿಸುವಾಗ ಹೀಗೆ ಮುತ್ಸದ್ದಿಗಿರಿಯಿಂದ ನಡೆಯದಿದ್ದರೆ ನಿರ್ವಾಹವೇಯಿದ್ದಿಲ್ಲ; ಆದ್ದರಿಂದ ಮಹಾರಾಜರು ತಮ್ಮ ಮನಸ್ಸಿನ ಸಮಾಧಾನವನ್ನು ವಿವೇಕದಿಂದ ಮಾಡಿಕೊಳ್ಳುತ್ತ, ಮಂಟಪವನ್ನು ನೋಡುವ ಕೆಲಸವನ್ನು ಮುಗಿಸಿ ತಿರುಗಿ ದುರ್ಗದೊಳಗೆ ಹೋದರು.

ಇನ್ನು ನಾಡದಿನ ದಿವಸವೇ ಮಹಾರಾಜರು ಖಾನನ ಭೆಟ್ಟಿಗೆ ಹೋಗಬೇಕಾಗಿತ್ತು. ಆದ್ದರಿಂದ ಅವರು ತಮ್ಮ ಸಂಗಡ ಯಾರನ್ನು ಕರಕೊಂಡು ಹೋಗಬೇಕೆಂಬದನ್ನು ನಿರ್ಧರಿಸುವದಕ್ಕಾಗಿ ತಮ್ಮ ಅತ್ಯಂತ ವಿಶ್ವಾಸದ ಜನರನ್ನು ಅಂತಗೃಹದಲ್ಲಿ ಕರಿಸಿಕೊಂಡರು. ಮಹಾರಾಜರ ಸಂಗಡ, ಹುಜರೆಯ ವೇಷದಿಂದ ನಾನು ಹೋಗುವೆನು, ನೀನು ಹೋಗುವೆನು ಎಂದು ಆ ಬಂದ ಜನರು ಮೇಲಾಟವಾಡಹತ್ತಿದ್ದರು. ತಾನಾಜಿಯಂತು ಹೊಸದೊಂದು ವಿಚಾರವನ್ನೇ ಮಹಾರಾಜರಿಗೆ ಸೂಚಿಸಿದನು. ಆತನು ಮಹಾರಾಜರನ್ನು ಕುರಿತು— ''ಮಹಾರಾಜ, ನೀವು ಸ್ವತಃ ಖಾನನ ಭೆಟ್ಟಿಗೆ ಹೋಗಲೇ ಬೇಡಿರಿ. ನಿಮ್ಮನ್ನೇನು ಖಾನನು ನೋಡಿರುವದಿಲ್ಲ. ನಿಮ್ಮ ಹೆಸರಿನಿಂದ ನಾನು ಆತನ ಭೆಟ್ಟಿಗೆ ಹೋಗುತ್ತೇನೆ. ಆ ದುಷ್ಟನು ತಮ್ಮ ಜೀವಕ್ಕೆ ಏನಾದರೂ ಕೇಡು ಬಗೆದರೆ, ಎಂಥ ಅನರ್ಥವಾದೀತಲ್ಲ! ನಮ್ಮಂಥವರಿಗೆ ಅಪಾಯವಾದರೂ ಚಿಂತೆಯಿಲ್ಲ. ನೀವಿದ್ದರೆ ನಮ್ಮಂಥವರು ನೂರಾರು ಜನರು ಕೂಡಬಹುದು. ಒಂದು ಕಂಬದ ಮೇಲಿನ ದ್ವಾರಕಾ ಪಟ್ಟಣವೆಂಬಂತೆ, ನಿಮ್ಮ ಒಬ್ಬರ ಆಧಾರದಿಂದ ಸ್ವರಾಜ್ಯವು ಈಗ ನಿಂತಂತಾಗಿರುತ್ತದೆ; ಅಂದಬಳಿಕ ಕಂಬವೇ ಕಡಕೊಂಡು ಬಿದ್ದರೆ ಸ್ವರಾಜ್ಯದ ಗತಿಯೇನು? ಆದ್ದರಿಂದ ಮಹಾರಾಜರು ನನ್ನ ವಿನಂತಿಯನ್ನು ಮನ್ನಿಸಬೇಕು; ಅಂದರೆ ನಮ್ಮೆಲ್ಲರಿಗೂ ಬಹಳ ಸಮಾಧಾನವಾಗುವದು,'' ಎಂದು ನುಡಿಯಲು, ಮಹಾರಾಜರು—''ತಾನಾಜೀ, ನನ್ನ ಸಲು ವಾಗಿ ಮುಂದುವರಿದು ಒಮ್ಮೆ ಪ್ರಾಣ ಕೊಡಬೇಕೆಂದು ನಿನ್ನ ಮನಸ್ಸಿನಲ್ಲಿ ಇರುತ್ತದೆ; ಆದರೆ ಹಾಗೆ ನಾನು ಎಂದೂ ಮಾಡಗೊಡುವದಿಲ್ಲ. ಬೇಕಾದರೆ ನೀನು ನನ್ನ ಸಂಗಡ ನಡೆ. ಖಾನನ ಮನಸ್ಸಿನಲ್ಲಿ ಏನಾದರೂ ಘಾತ ಮಾಡುವದಿದ್ದಾಗ, ನನ್ನ ಹೆಸರಿನಿಂದ ನಿನ್ನನ್ನು ಕಳಿಸಿ ನಾನು ಎಂದೂ ನಿನ್ನ ಘಾತ ಮಾಡಿಸಲಾರೆನು. ನೀನು ಹುಜರೆಯ ವೇಷದಿಂದ ನನ್ನ ಸಂಗಡ ಬಾ. ನಾವಿಬ್ಬರೂ ಬಂದದ್ದನ್ನು ನೋಡಿಕೊಳ್ಳೋಣ, ಎಂದು ಹೇಳಿದರು. ಅದನ್ನು ಕೇಳಿ ತಾನಾಜಿಗೆ ಬಹುಮಟ್ಟಿಗೆ ಸಮಾಧಾನವಾಯಿತು. ತನ್ನ ಸೂಚನೆಯನ್ನು ಮಹಾರಾಜರು ಸರ್ವಥಾ ಮನ್ನಿಸುವದಿಲ್ಲೆಂದು ಆತನು ಮೊದಲೇ ತಿಳಿದಿದ್ದನು. ಹಾಗೆ ಸೂಚಿಸಿದ್ದರಿಂದ ಮಹಾರಾಜರ ಸಂಗಡ ಹುಜರೆಯ ವೇಷದಿಂದ ಹೋಗಲಿಕ್ಕೆ ಅನಾಯಾಸವಾಗಿ ಒಪ್ಪಿಗೆ ದೊರೆಯಿತೆಂದು ಆತನಿಗೆ ಬಹಳ ಸಮಾಧಾನವಾಯಿತು. ಅದನ್ನು ನೋಡಿ ಉಳಿದವರಿಗೆ ಬಹಳ ಅಸಮಾಧಾನವಾಯಿತು. ಆದರೂ ಮಹಾರಾಜರು ಉಳಿದವರನ್ನು ಒಂದು ಕೂಗಿನ ಅಳತೆಯಲ್ಲಿ ಇರಹೇಳಿ, ಯಾರು ಯಾರು ಎಲ್ಲೆಲ್ಲಿ ನಿಂತಿರ ಬೇಕೆಂಬದನ್ನು ಗೊತ್ತುಮಾಡಿ ಕೊಟ್ಟರು. ತಮಗೆ ಮಹಾರಾಜರ ಸಂಗಡ ಹೋಗುವ ಸಂಧಿಯು ದೊರೆಯದಿದ್ದರೂ, ಹೀಗೆ ಮಹಾರಾಜರ ಸಮೀಪದಲ್ಲಿಯಾದರೂ ಇರುವ ಒಪ್ಪಿಗೆಯು ದೊರೆಯಿತೆಂದು ಅವರು ಸಮಾಧಾನಪಟ್ಟರು.

ಹೊತ್ತು ಮುಣುಗಿತು. ಮಹಾರಾಜರು ಮಾಡತಕ್ಕ ವ್ಯವಸ್ಥೆಯನ್ನೆಲ್ಲ ಮಾಡಿ, ತಮ್ಮ ತಾಯಿಯ ಬಳಿಗೆ ಹೋಗಿ ತಾವು ಮಾಡಿದ್ದನ್ನೆಲ್ಲ ವಿವರಿಸಿ ಹೇಳಿದರು. ಆಗ ಜೀಜಾಬಾಯಿ

ಸಾಹೇಬರು ಮಗನಿಗೆ—''ಬಾಳಾ, ಶಿವಬಾ, ಎಲ್ಲ ಕೆಲಸವು ನಿನ್ನ ಮನಸ್ಸಿನಂತೆ ಆಗುವದು. ಶ್ರೀ ಭವಾನಿಯ ಕೃಪೆಯು ನಿನ್ನ ಮೇಲೆ ಸಂಪೂರ್ಣವಾಗಿ ಇರುತ್ತದೆ. ಇಂದು ರಾತ್ರಿ ನೀನು ಸ್ವಸ್ಥ ಚಿತ್ತದಿಂದ ಮಲಗಿಕೋ, ಸ್ವಲ್ಪವೂ ಚಿಂತೆ ಮಾಡಬೇಡ'' ಎಂದು ಹೇಳಲು, ಮಹಾರಾಜರು ರಾಣೀವಾಸಕ್ಕೆ ಹೋಗಿ ಎಲ್ಲ ವಿಚಾರಗಳನ್ನು ಮರೆತು ಸ್ವಸ್ಥವಾಗಿ ಮಲಗಿಕೊಂಡರು. ಅವರಿಗೆ ಗಾಢವಾದ ನಿದ್ರೆಯು ಹತ್ತಿತು. ಆ ರಾತ್ರಿಯಲ್ಲಿ ಪುನಃ ಜಗದಂಬೆಯು ಅವರ ಸ್ವಪ್ನದಲ್ಲಿ ಬಂದು—''ವತ್ಸಾ, ಮೂವತ್ತೆರಡು ಹಲ್ಲುಗಳ ಟಗರಿನ ಬಲಿಯು ನನಗೆ ಬಹಳವಾಗಿ ಸೇರುತ್ತದೆ. ಅದನ್ನು ನಾಡದು ನಿನ್ನ ಕೈಯಿಂದ ನಾನು ಸ್ವೀಕರಿಸುವೆನು. ನೀನು ಸರ್ವಥಾ ಚಿಂತಿಸಬೇಡ, ನಿನ್ನ ಮಸ್ತಕದ ಮೇಲೆ ನನ್ನ ವರದಹಸ್ತವಿರುತ್ತದೆಂದು ನಿಶ್ಚಯವಾಗಿ ತಿಳಿದುಕೊ. ಕಾರ್ಯವನ್ನು ಹ್ಯಾಗೆ ಸಾಧಿಸಬೇಕೆಂಬದು ಆಗ ನಿನಗೆ ತಾನೇ ಸ್ಫೂರ್ತಿಯಾಗುವದು.'' ಎಂದು ಹೇಳಿದಳು. ಆಗ ಮಹಾರಾಜರಿಗೆ ಎಚ್ಚರವಾಯಿತು. ಸ್ವಪ್ನದ ಸ್ಮರಣದಿಂದ ಅವರಿಗೆ ಬಹಳ ಸಮಾಧಾನವಾಯಿತೆಂದು ಬರೆಯುವ ಕಾರಣವಿಲ್ಲ. ಮಹಾರಾಜರ ಕುಟುಂಬವು ಸ್ವಪ್ನದ ವೃತ್ತಾಂತವನ್ನು ಕೇಳಿ ಪರಮಾನಂದಪಟ್ಟಿತು. ಹೀಗಿರುವಾಗ ಬೆಳಗಾಯಿತು. ಮಾರ್ಗಶೀರ್ಷ ಶುದ್ಧ ಪಂಚಮಿಯ ದಿವಸವು ಬಂದೊದಗಿತು. ಖಾನನ ಭೆಟ್ಟಿಗೆ ಇನ್ನು ಒಂದು ದಿನದ ಅವಧಿಯು ಮಾತ್ರ ಉಳಿಯಿತು. ಮನುಷ್ಯನು ಎಂಥ ಧೀರನಿರಲಿ, ಎಂಥ ಚತುರನಿರಲಿ, ಎಂಥ ಪರಾಕ್ರಮಿಯೂ ಸಾಹಸಿಯೂ ಆದವನಿರಲಿ, ಆತನು ದುರ್ಧರ ಪ್ರಸಂಗಕ್ಕೆ ಎದುರಾಗುವ ಪೂರ್ವದಲ್ಲಿ ಆತನ ಚಿತ್ತವು ಕ್ಷೋಭಿಸದೆಯಿರುವದಿಲ್ಲ. ಮಹಾರಾಜರ ಸ್ಥಿತಿಯು ಹೀಗೆಯೇ ಆಗಿತ್ತು. ನೋಡುವವರಿಗೆ ಅವರು, ಇಂಥ ಕಠಿಣ ಪ್ರಸಂಗದಲ್ಲಿಯೂ ಬಹು ಶಾಂತರೂ, ಗಂಭೀರರೂ ಆಗಿರುವಂತೆ ತೋರುತ್ತಿತ್ತು; ಆದರೆ ಮಹಾರಾಜರ ಸ್ಥಿತಿಯು ಹಾಗಿದ್ದಿಲ್ಲ. ನಾಳಿನ ಪ್ರಸಂಗದಲ್ಲಿ ತಮಗೆ ಅಪಯಶಸ್ಸು ಪ್ರಾಪ್ತವಾದರೆ, ತಾವು ಬಹು ಕಷ್ಟಪಟ್ಟು ಸ್ಥಾಪಿಸಿದ್ದ ಸ್ವರಾಜ್ಯದ ಸ್ಥಿತಿಯು ಏನಾಗುವದೋ ಎಂದು ಅವರ ಮನಸ್ಸು ಅತ್ಯಂತ ವ್ಯಗ್ರವಾಗಿತ್ತು.

ಹೀಗೆ ಚಿತ್ತವು ವ್ಯಗ್ರವಾದ ಮಾತ್ರದಿಂದ ಮಹಾರಾಜರು ಕೈಕಾಲುಗೆಟ್ಟು ಚಿಂತೆ ಮಾಡುತ್ತ ಕುಳಿತುಕೊಳ್ಳತಕ್ಕವರಿದ್ದಿಲ್ಲ. ಅವರು ಮೇಲೆ ಹೇಳಿದಂತೆ, ತಮ್ಮ ಸೈನಿಕರೂ ಸರದಾರರೂ ಎಲ್ಲೆಲ್ಲಿ ಇರಬೇಕು, ಏನೇನು ಮಾಡಬೇಕು ಎಂಬುದನ್ನು ನಿನ್ನೆಯೇ ಗೊತ್ತು ಮಾಡಿದ್ದರು. ಇಂದು ಅವರು ತಮ್ಮ ಕುಟುಂಬದವರ ವ್ಯವಸ್ಥೆಯನ್ನು ಮಾಡತೊಡಗಿದರು. ಜೀಜಾಬಾಯಿಸಾಹೇಬರ, ಹಾಗು ಬಾಲಕನಾದ ಸಂಭಾಜಿಯೇ ಮೊದಲಾದ ಕುಟುಂಬದವರ ಸಂರಕ್ಷಣಕ್ಕೆ, ಸುರನೀಸ–ವಾಕನೀಸರನ್ನು ನಿಯಮಿಸಿ, ಅವರನ್ನು ಕುರಿತು—''ನಾವು ಕೈಹಾಕಿದ ಕಾರ್ಯದಲ್ಲಿ ಅಂಬಾಭವಾನಿಯು ಯಶಸ್ಸನ್ನು ಕೊಟ್ಟೇಕೊಡುವಳು. ಅಕಸ್ಮಾತ್ತಾಗಿ ದುರ್ದೈವದಿಂದ ಅಂಥ ವಿಪರೀತ ಪ್ರಸಂಗವು ಒದಗಿದಲ್ಲಿ, ನೀವು ಕೈಕಾಲುಗೆಡಬಾರದು. ನಾವು ಈಗ ಯೋಚಿಸಿರುವಂತೆ ಶತ್ರುವನ್ನು ಮಣ್ಣುಗೂಡಿಸಿ ಸ್ವರಾಜ್ಯವನ್ನು ರಕ್ಷಿಸಿಕೊಳ್ಳಬೇಕು.'' ಎಂದು ಹೇಳಿದರು. ಮಹಾರಾಜರ ಈ ಮಾತುಗಳು ಸ್ವಲ್ಪವಾಗಿದ್ದರೂ ಅವು

ಅತ್ಯಂತ ಅರ್ಥಪೂರ್ಣ ವಾಗಿದ್ದು ಅವುಗಳಲ್ಲಿ ಮಹಾರಾಜರ ಅಂತಃಕರಣವು ಪ್ರತಿಬಿಂಬ ವಾಗಿತ್ತು. ಈ ಮಾತುಗಳನ್ನು ಕೇಳಿ ಪ್ರತಿಯೊಬ್ಬ ವ್ಯಕ್ತಿಗೆ ಆಶ್ಚರ್ಯವಾಯಿತು. ಅದರಲ್ಲಿ ''ಆಕಸ್ಮಾತ ದುರ್ದೈವದಿಂದ ಅಂಥ ವಿಪರೀತ ಪ್ರಸಂಗವು ಒದಗಿದರೆ'' ಎಂಬ ಮಾತನ್ನು ಕೇಳಿದ ಕೂಡಲೆ ಎಲ್ಲರ ಮೈಮೇಲಿನ ಕೂದಲುಗಳು ನೆಟ್ಟಗಾದವು. ಎಲ್ಲ ವ್ಯವಸ್ಥೆಯನ್ನು ಅತ್ಯುತ್ತಮ ರೀತಿಯಿಂದ ಮಾಡಿದ್ದು, ಅಂಬಾ ಬಾಯಿಯ ಅಭಯ ವಚನವಿದ್ದು, ಜೀಜಾಬಾಯಿಯವರ ಪೂರ್ಣವಾದ ಆಶೀರ್ವಾದವನ್ನು ಪಡೆದಿದ್ದು ಮಹಾರಾಜರು ಹೀಗೆ ಮಾತಾಡುವದು ಎಲ್ಲರಿಗೂ ವಿಲಕ್ಷಣವಾಗಿ ತೋರಿತು. ಅವರು ಮಹಾರಾಜರ ಅಮಂಗಲದ ಮಾತನ್ನು ನಿಷೇಧಿಸುವದಕ್ಕಾಗಿ ಅವರನ್ನು ಕುರಿತು—''ಮಹಾರಾಜ, ತಮ್ಮ ಪುಣ್ಯ ಪ್ರತಾಪದಿಂದ ಯಾವತ್ತು ಕಾರ್ಯಗಳು ಈವರೆಗೆ ಸುಸೂತ್ರವಾಗಿ ಸಾಗಿಸುತ್ತ ಬಂದಂತೆ, ಈಗಿನ ಕಾರ್ಯವಾದರೂ ನಿರ್ವಿಘ್ನವಾಗಿ ಸಾಧಿಸುವದು. ಬಂದ ಗಂಡಾಂತರವು ಕೃಷ್ಣದಲ್ಲಿ ದೂರ ವಾಗುವದು. ತಮ್ಮ ಮುಂದೆ ಆ ನರಪಶುವಿನ ಪಾಡೇನು? ಭವಾನಿಯ ಕೃಪಾಪ್ರಸಾದವು ವ್ಯರ್ಥವಾದದ್ದೇ? ತಾವು ಚಿಂತಿಸುವದೇಕೆ? ವಿಕಲ್ಪವನ್ನು ಭಾವಿಸುವದೇಕೆ? ಆ ಮದೋನ್ಮತ್ತವಾದ ಆನೆಯಮೇಲೆ ಮುಗಿಬಿದ್ದು ಯಾವಾಗ ಅದರ ರುಂಡವನ್ನು ತುಂಡರಿಸಿ ಭವಾನೀಮಾತೆಯ ಚರಣಕ್ಕೆ ಅರ್ಪಿಸೇವೆನ್ನುವ ಹಾಗೆ ನಮಗಾಗಿದೆ'' ಎಂದು ನುಡಿದರು.

ತಮ್ಮ ಜನರ ಈ ಅಂತಃಕರಣದ ಆವೇಶದ ಮಾತುಗಳನ್ನು ಕೇಳಿ ಮಹಾರಾಜರಿಗೆ ಬಹಳ ಸಂತೋಷವಾಯಿತು. ಅವರು ತಮ್ಮ ಆ ಸ್ವಾಮಿನಿಷ್ಠ ಸೇವಕರನ್ನು ಕುರಿತು— ''ನೀವೆಲ್ಲರೂ ಶೂರರೂ, ಪರಾಕ್ರಮಿಗಳೂ ಇರುವಿರಿ. ನೀವು ಇಲ್ಲಿಯವರೆಗೆ ನನಗೆ ಸಹಾಯ ಮಾಡುತ್ತ ಬಂದದ್ದರಿಂದಲೇ ಸ್ವರಾಜ್ಯದ ಸ್ಥಾಪನೆಯಾಗಿ ಅದು ಬೆಳವಣಿಗೆ ಹೊಂದುತ್ತಲಿದೆ. ನನ್ನೊಬ್ಬನಿಂದೇನಾಗುತ್ತಿತ್ತು? ನಿಮ್ಮ ಕರ್ತೃತ್ವ ಶಕ್ತಿಯಲ್ಲಿ ನಮ್ಮ ಸಂಪೂರ್ಣ ವಿಶ್ವಾಸವಿದೆ. ನಿಮ್ಮ ಮುಂದೆ ಆ ಯವನರ ಪಾಡೇನು? ನಮ್ಮ ದೇವಸ್ಥಾನಗಳನ್ನು ಹಾಳುಮಾಡುತ್ತ ವಿಜಾಪುರ ದಿಂದ ಬಂದಿದ್ದ ಆ ಉನ್ಮತ್ತನ ಭೆಟ್ಟಿಯಾಗುವದೂ, ಆತನೊಡನೆ ಮಾತಾಡಿ ನಾಲಿಗೆಯನ್ನು ಅಪವಿತ್ರವಾಗಿ ಮಾಡಿಕೊಳ್ಳುವದೂ ನಮಗೆ ಪರಮಲಾಂಛನವಾಗಿರುವದು; ಆದರೆ ಮಾಡುವದೇನು? ಪ್ರಸಂಗವೇ ಹಾಗೆ ಬಂದೊದಗಿರುತ್ತದೆ. ಆಗಲೆ ನಾನು ಹೇಳಿದಂತೆ, ಮೋರೆ ನೋಡಬಾರದವನ ಕೈಕಾಲುಗಳನ್ನು ಈಗ ಕಟ್ಟಿಕೊಳ್ಳಬೇಕಾಗಿದೆ. ಪಂಢರಿಯ ವಿಠೋಬರಾಯನ ಮೇಲೆ ಕೈಮಾಡಿದ ಈ ದುಷ್ಟನ ಸ್ವಾಗತಕ್ಕಾಗಿ ಮಂಟಪವನ್ನು ಶೃಂಗರಿಸುವಾಗ ನಮ್ಮ ಚಿತ್ತಕ್ಕೆ ಸುಖವಾಗುತ್ತಿರಬಹುದೆ? ಆದರೆ ಉತ್ತಮ ಬೆಳೆ ಬರುವದಕ್ಕಾಗಿ ಹೊಲಸು ಗೊಬ್ಬರವನ್ನು ಹಾಕಿ ಭೂಮಿಯ ಸತ್ವವನ್ನು ಹೆಚ್ಚಿಸಬೇಕಾದಂತೆ, ಈಗ ನಾವು ಮಾಡಿ ನಮ್ಮ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳಬೇಕಾಗಿದೆ. ನಾನು ಮಾಡುವದನ್ನೆಲ್ಲ ನಿಮ್ಮ ಸಹಾಯದಿಂದಲೇ ಮಾಡುವೆನು; ಮತ್ತು ನಿಮ್ಮ ಸಲುವಾಗಿಯೇ ಮಾಡುವೆನು. ನಿಮ್ಮ ಅನುಕೂಲ್ಯವಿಲ್ಲದಿದ್ದರೆ ಯಾವ ಕಾರ್ಯವೂ ನನ್ನಿಂದ ಸಾಧಿಸುತ್ತಿದ್ದಿಲ್ಲ; ಆದ್ದರಿಂದ, ನೀವೆಲ್ಲರೂ ಈಗ ಜೀವದ ಹಂಗು ದೊರೆದು ಆವೇಶದಿಂದ ಹೆಣಗಬೇಕು. ಖಾನನು ಮೋಸ

ಮಾಡುವುದಂತೂ ನಿಶ್ಚಯವು; ಮೋಸ ಮಾಡದೆ ಆತನು ಸರಳತನದಿಂದ ನಡೆದರೆ ಯಾವ ಗೊಂದಲವೂ ಇಲ್ಲ. ಆತನು ಮೋಸ ಮಾಡಿದರೆ ನಾವು ನಿಶ್ಚಯವಾಗಿ ಅವನನ್ನು ಗೊತ್ತಿಗೆ ಹಚ್ಚುವೆವು. ಕೂಡಲೆ ನೀವೂ ನಿಮ್ಮ ಕಾಯಕವನ್ನು ನಡೆಸಿರಿ. ನಮ್ಮ ಅಸ್ವಸ್ಥ್ಯಸ್ತವಾದರೂ ನಿಮ್ಮ ಕರ್ತವ್ಯವನ್ನು ನೀವು ಮಾಡಿ ಸ್ವರಾಜ್ಯವನ್ನು ಉಳಿಸಿಕೊಳ್ಳಿರಿ. ಖಾನನನ್ನೂ ಖಾನನ ಜನರನ್ನೂ ತಿರುಗಿ ವಿಜಾಪುರಕ್ಕೆ ಹೋಗಗೊಡದೆ, ಅವರನ್ನು ತುಂಡರಿಸಿ ಚಲ್ಲಿರಿ. ರಾಜ್ಯವು ಅಭಿವೃದ್ಧವಾದಂತೆ, ನಿಮ್ಮ ಅಭಿವೃದ್ಧಿಯಾಗುವದು. ರಾಜ್ಯವು ನಿಮ್ಮದು, ನಾನು ನಿಮಿತ್ತ ಮಾತ್ರನು!

ಈ ಮೇರೆಗೆ ನುಡಿದು ಮಹಾರಾಜರು ಎಲ್ಲ ವ್ಯವಸ್ಥೆಯನ್ನು ಮತ್ತೊಮ್ಮೆ ಎಲ್ಲರ ಮುಂದೆ ಹೇಳಿ, ಎಲ್ಲರನ್ನು ಕರೆಸಿ ತಾವು ಭವಾನೀ ಮಾತೆಯ ಸನ್ನಿಧಿಗೆ ಹೋಗಿ ಆಕೆಯ ಧ್ಯಾನ ಮಾಡುತ್ತ ಕುಳಿತುಕೊಂಡರು. ಮಹಾರಾಜರ ಸ್ವಜನಾಭಿಮಾನವು. ವಿಶೇಷವಾಗಿ ಕರ್ತವ್ಯನಿಷ್ಠರ ಅಭಿಮಾನವು ಬಹು ಬಲವತ್ತರವಾದದ್ದೆಂಬದನ್ನು ವಾಚಕರು ಹಲವು ಪ್ರಸಂಗಗಳಲ್ಲಿ ಅರಿತಿರುವರು. ತಮ್ಮ ಪ್ರಾಣರಕ್ಷಣಮಾಡಿದ, ಹಾಗು ಖಾನನ ನಿಜವಾದ ಹೃದ್ಗತವನ್ನು ಅರಿತು ಕೊಳ್ಳುವ ಪರಮ ಸಾಹಸದ ಕಾರ್ಯದಲ್ಲಿ ಕಾರಾಗೃಹವಾಸಕ್ಕೆ ಗುರಿಯಾದ ಹೈಮವತಿಯ ಸ್ಮರಣದಿಂದ ಅವರ ಚಿತ್ತವು ಅಸ್ವಸ್ಥವಾಯಿತು. ಆ ಸಾಧ್ವಿಯ ಕಾರಾಗೃಹ ವಿಮೋಚನಕ್ಕೆ ಏನು ಉಪಾಯ ಮಾಡಬೇಕೆಂದು ಅವರು ಯೋಚಿಸಹತ್ತಿದರು. ಹೀಗೆ ಸ್ವಜನರ ಕಷ್ಟದ ಸ್ಮರಣದಿಂದ ಮಹಾರಾಜರ ಚಿತ್ತವು ಚಂಚಲವಾಗಲು, ಅವರು ದೇವಿಯ ಸನ್ನಿಧಿಯಿಂದ ಹೊರಟುಹೋಗಿ ಅಂತಗೃರ್ಹವನ್ನು ಪ್ರವೇಶಿಸಿದರು. ತಮಗೊದಗಿದ ಗಂಡಾಂತರದ ಚಿಂತೆಗಿಂತ ಹೈಮವತಿಯ ಕಾರಾಗೃಹವಾಸದ ಚಿಂತೆಯು ಅವರನ್ನು ಹೆಚ್ಚು ಬಾಧಿಸಹತ್ತಿತು. ಅವರಿಗೆ ನಿದ್ರೆ ಬರಲೊಲ್ಲದು; ಯಾವ ಉಪಾಯವೂ ತೋಚಲೊಲ್ಲದು. ಹೀಗಿರುವಾಗ ಅತ್ತ ಜೀಜಾಬಾಯಿಯವರೂ ಚಿಂತೆಗೊಳಗಾಗಿದ್ದರು. ಎಷ್ಟಾದರೂ ತಾಯಿಯ ಕರಳು; ಗುಣಾಢ್ಯನೂ, ಮಹಾತೇಜಸ್ವಿಯೂ, ಭಗವದ್ಭಕ್ತನೂ ಆದ ಒಬ್ಬನೇ ಒಬ್ಬ ಮಗನು ನಾಳೆ ಸಂಕಟಕ್ಕೆ ಗುರಿಯಾಗಿರುತ್ತಿರಲು, ಅವರಿಗೆ ನಿದ್ರೆಯಾದರೂ ಹೇಗೆ ಬರಬೇಕು? ತಮ್ಮ ಮಗನಿಗೆ ನಿದ್ರೆ ಹತ್ತಿರುವದೋ ಆತನೂ ತನ್ನಂತೆ ಎಚ್ಚತ್ತಿರುವನೊ, ಎಂಬದನ್ನು ನೋಡಬರುವದಕ್ಕಾಗಿ ಅವರು ಒಬ್ಬ ದಾಸಿಯನ್ನು ಕಳಿಸಿದರು. ಮಹಾರಾಜರು ತಮ್ಮ ತಾಯಿಯವರಿಗೆ ಇನ್ನೂ ನಿದ್ರೆ ಬಾರದಿರುವದನ್ನು ಕೇಳಿ ಅಸಮಾಧಾನ ಪಟ್ಟು, ಅವರನ್ನು ಸಮಾಧಾನಗೊಳಿಸುವದಕ್ಕಾಗಿ ಅವರ ಬಳಿಗೆ ಹೋದರು. ಮಗನು ಬಂದದ್ದನ್ನು ನೋಡಿ ಜೀಜಾಬಾಯಿಯವರು ''ಶಿವಬಾ, ನೀನೇಕೆ ಬಂದೆ? ನನಗೆ ನಿದ್ರೆ ಬಾರದಿರಲು, ನೀನಾದರೂ ಮಲಗಿರುವೆಯೋ ಇಲ್ಲವೋ ಎಂಬದನ್ನು ನೋಡಿ ಬರುವದಕ್ಕೆ ಸುಮ್ಮನೆ ರಕಮಾಯಿಯನ್ನು ಕಳಿಸಿದ್ದೆನು. ನಿನಗೂ ನಿದ್ರೆ ಬರಲೊಲ್ಲದೇನು?'' ಎಂದು ಕೇಳಿದರು. ಅದಕ್ಕೆ ಮಹಾರಾಜರು—''ನಿದ್ರೆ ಬಾರದಹಾಗೆ ಆಗಿರುತ್ತದೆಂಬದೇನೋ ನಿಜ; ಆದರೆ ನಾಳೆ ಏನಾದೀತು, ಹ್ಯಾಗೆ ಮಾಡಬೇಕು, ಎಂಬ ಯೋಚನೆಯಿಂದ ನನಗೆ ನಿದ್ರೆ ಬರಲೊಲ್ಲದೆನ್ನುವಹಾಗಿಲ್ಲ, ನಾಳೆ ಏನು ಮಾಡಬೇಕು,

ಖಾನನೊಡನೆ ಹ್ಯಾಗೆ ನಡಕೊಳ್ಳಬೇಕು, ಎಂಬದರ ನಿಶ್ಚಯವಾಗಿ, ಹೋಗಿದೆ. ಅದರ ಸಂಬಂಧದಿಂದ ಯಾವ ಯೋಚನೆಯನ್ನೂ ಮಾಡುವ ಹಾಗಿಲ್ಲ; ಆದರೆ ನನ್ನ ಪ್ರಾಣರಕ್ಷಣ ಮಾಡಿದ್ದ, ಹಾಗೂ ನನಗೆ ಸಹಾಯ ಮಾಡುವದಕ್ಕಾಗಿ ಕಾರಾಗೃಹವಾಸದ ಕಷ್ಟವನ್ನು ಭೋಗಿಸುತ್ತಿರುವ ಹೈಮವತಿಯ ವ್ಯವಸ್ಥೆಯೇ ನಾಗಿರುವದೆಂಬದು ತಿಳಿಯದ್ದರಿಂದ ನನ್ನ ಮನಸ್ಸು ವ್ಯಗ್ರವಾಗಿ ನಿದ್ದೆಯು ಬಾರದಂತಾಗಿದೆ. ಅವ್ವಾ, ಇಷ್ಟು ಹೊತ್ತಾದರೂ ನೀವು ಯಾಕೆ ಎಚ್ಚತ್ತಿರುವಿರಿ?'' ಎಂದು ಕೇಳಲು, ಜೀಜಾಬಾಯಿ ಯವರು—ಅಪ್ಪಾ, ನಾಳಿನ ಪ್ರಸಂಗದಲ್ಲಿ ನಿನಗೆ ಪೂರ್ಣ ಯಶಸ್ಸನ್ನು ಕೊಡುವದಕ್ಕಾಗಿ ನಾನು ಅಂಬಾಬಾಯಿಯನ್ನು ಪ್ರಾರ್ಥಿಸಿದ್ದೇನೆ. ಈವರೆಗೆ ಆಗಿರುವ ಆಕೆಯ ಎಲ್ಲ ದೃಷ್ಟಾಂತಗಳ ಮೇಲಿಂದ ನಾವು ಚಿಂತೆ ಮಾಡುವ ಕಾರಣವಿಲ್ಲ. ಹೀಗಿದ್ದರೂ ಅದು ತಾಯಿಯ ಕರಳು, ಅಸಮಾಧಾನವಾಗದೆ ಹೇಗೆ ಹೋದೀತು? ಆ ದುಷ್ಟ ಅಫಜುಲನು ನನ್ನ ಸಂಭಾಜಿಯನ್ನು ವಿಶ್ವಾಸಘಾತದಿಂದ ಕೊಂದದ್ದನ್ನು ನೆನಿಸಿ, ನಾಳೆ ಅದರ ಸೇಡು ತೀರಿಸಿಕೊಳ್ಳುವ ಪ್ರಸಂಗವು ನಿನಗೆ ಒದಗಿರಲು, ಏನಾಗುವದೋ ಎಂಬ ಬಗ್ಗೆ ನನ್ನ ಜೀವನವು ತಳಮಳಿಸುತ್ತದೆ, ಎರಡನೆಯ ದೇನೂ ಇಲ್ಲ.

ತನ್ನ ಅಣ್ಣನಾದ ಸಂಭಾಜಿಯನ್ನು ಅಫಜುಲಖಾನನು ವಿಶ್ವಾಸಘಾತದಿಂದ ಕೊಂದದ್ದನ್ನು ತಾಯಿಯ ಮುಖದಿಂದ ಕೇಳಿದಕೂಡಲೆ, ಮಹಾರಾಜರು ಸಂತಾಪಗೊಂಡರು. ಅವರು ಕೂಡಲೆ ತಾಯಿಯನ್ನು ಕುರಿತು—''ಆಯಿಸಾಹೇಬ, ನೀವು ಅದರ ಚಿಂತೆಯನ್ನು ಬಿಡಿರಿ. ಖಾನನು ಶಂಭೂ ಅಣ್ಣನನ್ನು ಕೊಂದ ಸೇಡು ನಾನು ನಾಳೆ ನಿಶ್ಚಯವಾಗಿ ತೀರಿಸಿಕೊಳ್ಳುತ್ತೇನೆ. ಈಗ ತಾನಾಗಿ ಒದಗಿರುವ ಬಂಗಾರದಂಥ ಪ್ರಸಂಗವನ್ನು ನಾನು ವ್ಯರ್ಥ ಹೋಗಗೊಡುವೆನೆ? ನಿಮಗೆ ಅಣ್ಣನ ನೆನಪು ಯಾವಾಗಲೂ ಆಗುತ್ತಿರಬಹುದು; ಆದರೆ ಖಾನನು ವಿಜಾಪುರದಿಂದ ಹೊರಟು ಬಂದಾಗಿನಿಂದ ನನ್ನ ಮನಸ್ಸಿನಲ್ಲಿ ಅದು ಕಟಿಯುತ್ತಲಿದೆ. ಖಾನನು ನಿಶ್ಚಯವಾಗಿ ಮೋಸಮಾಡುವನೆಂಬ ಮಾತು ನನಗೆ ಮೊದಲಿಗೇ ಗೊತ್ತಾಗಿದೆ. ಆತನ ದ್ರೋಹದ ನಡತೆಗಳು ಒಂದೇ ಎರಡೇ, ನನಗೆ ಹಲವು ಗೊತ್ತಿರುವವು; ಆದರೆ ಜನರ ತಪ್ಪುತಿಳುವಳಿಕೆಯಾಗಿ ಅವರು ನಿಷ್ಕಾರಣ ನನಗೆ ಮರೆಮೋಸದ ಅಪವಾದವಿಡಬಾರದೆಂದು ನಾನು ಇಷ್ಟು ಎಚ್ಚರ ಪಡುವೆನು. ಚಂದ್ರರಾವ ಮೋರೆಯ ಸಂಬಂಧದಿಂದ ನೋಡಿದಿರೋ ಇಲ್ಲವೋ? ನಿಷ್ಕಾರಣವಾಗಿ ನಾನು ಎಂಥ ಅಪವಾದಕ್ಕೆ ಗುರಿಯಾಗಬೇಕಾಗಿದೆ? ಖಾನನು ದೊಡ್ಡ ಮಹಾರಾಜರ (ತಮ್ಮ ತಂದೆಯವರ) ಸಂಗಡಲೂ ಮೋಸದಿಂದಲೇ ನಡೆದು ಕೊಳ್ಳುವನು. ಹೊರ–ಹೊರಗೆ ಮಾತ್ರ ಸ್ನೇಹವನ್ನು ತೋರಿಸುವನು. ಅವರೂ ತಾನೂ ಒಂದೇ ಗಾದಿಯ ನೌಕರರಂತೆ! ಅಹಹ!! ಧರ್ಮದ್ವೇಷಿಗಳೂ, ಗೋ–ಬ್ರಾಹ್ಮಣ ಘಾತಕರೂ ಆದವರ ನೌಕರರೆನಿಸಿಕೊಳ್ಳುವ ನಮ್ಮ ಕಲಂಕವು ಎಂದು ದೂರವಾದೀತು! ಅವ್ವಾ, ಅಲ್ಲಿ ನೋಡು, ಶಂಭು ಅಣ್ಣನು ನನ್ನೆದುರಿಗೆ ನಿಂತುಕೊಂಡು ನಗುತ್ತಲಿದ್ದಾನೆ. ''ಅಣ್ಣಾ! ಅಣ್ಣಾ! ನಾನು ನಿಶ್ಚಯವಾಗಿ ನಿನ್ನ ಕೊಲೆಯ ಸೇಡನ್ನು ನಾಳೆ ತೀರಿಸಿಕೊಳ್ಳುವೆನು; ಅದಕ್ಕಾಗಿ ಶಂಕಿಸಬೇಡ'' ಎಂದು ನುಡಿಯುತ್ತ ಮಹಾ ರಾಜರು ಒಮ್ಮಿಂದೊಮ್ಮೆ ಭೂಮಿಯ ಮೇಲೆ

ದೊಪ್ಪನೆ ಬಿದ್ದರು. ಅರ್ಧ ತಾಸಿನವರೆಗೆ ಅವರು ಹಾಗೆಯೇ ಬಿದ್ದುಕೊಂಡಿದ್ದರು. ಮಗನು ಹೀಗೆ ಬಿದ್ದುಕೊಳ್ಳುವದು ಜೀಜಾಬಾಯಿ ಸಾಹೇಬರಿಗೆ ಹೊಸದಿದ್ದಿಲ್ಲ; ಅಂಬಾಭವಾನಿಯ ಸಂಚಾರವಾಗುವ ಮೊದಲು ಮಹಾರಾಜರು ಹೀಗೆಯೇ ಬೀಳುತ್ತಲಿದ್ದರು; ಆದ್ದರಿಂದ ಜೀಜಾಬಾಯಿ ಸಾಹೇಬರಿಗೆ ಅದರಿಂದ ಅಸಮಾಧಾನವಾಗಲಿಲ್ಲ. ಮುಂದೆ ಸ್ವಲ್ಪ ಹೊತ್ತಿನಲ್ಲಿ ಮಹಾರಾಜರು ಎದ್ದು ತಾಯಿಯನ್ನು ಕುರಿತು—''ಅಹಹ! ?ಆಯಿಸಾಹೇಬ, ಅಂಬಾ ಭವಾನಿಯು ಪುನಃ ನನಗೆ ದರ್ಶನವಿತ್ತು ತನ್ನ ವರದ ಹಸ್ತವನ್ನು ನನ್ನ ಮಸ್ತಕದ ಮೇಲಿಟ್ಟಳು. ಆಕೆಯು ನನಗೆ ಸ್ಪಷ್ಟವಾಗಿ—''ಬಾಳಾ, ನಿಶ್ಚಯವಾಗಿ ಕಾರ್ಯಸಿದ್ಧಿಯಾಗುವದು. ಹೈಮವತಿಯ ಚಿಂತೆಯು ನಿನಗೆ ಬೇಡ, ಆಕೆಯು ಸುರಕ್ಷಿತವಾಗಿ ನಿನ್ನ ಬಳಿಗೆ ಬರುವಳು. ಯಾವ ಚಿಂತೆಯನ್ನೂ ನೀನು ಮಾಡಕೂಡದು'' ಎಂದು ಹೇಳಿದಳು. ಅಹಹ! ಆ ದಿವ್ಯ ರೂಪವು ಈಗಲೂ ನನ್ನ ಕಣ್ಣಿಗೆ ಕಟ್ಟಿರುತ್ತದೆ. ಆ ಲೋಕಮಾತೆಯ ಮಂಜುಲವಾಣಿಯು ಇನ್ನೂ ನನ್ನ ಕಿವಿಯಲ್ಲಿ ದಿಮಿಗುಟ್ಟುತ್ತವೆ! ಇನ್ನು ನಾನು ಕೆಲವು ಹೊತ್ತು ಸ್ವಸ್ಥವಾಗಿ ಮಲಗಿಕೊಳ್ಳುವೆನು.'' ಎಂದು ಹೇಳಲು, ಜೀಜಾಬಾಯಿಯವರು—''ಶಿವಬಾ, ಇಲ್ಲಿ ನನ್ನ ತೊಡೆಯಮೇಲೆ ತಲೆಯಿಟ್ಟು ಸ್ವಸ್ಥವಾಗಿ ಮಲಗಿಕೋ; ಅದರಿಂದ ನನಗೆ ಬಹಳ ಸಮಾಧಾನ ವಾಗುವದು,'' ಎಂದು ಹೇಳಲು, ಮಹಾರಾಜರು ತಾಯಿಯ ತೊಡೆಯ ಮೇಲೆ ತಲೆಯಿಟ್ಟು, ಸ್ವಸ್ಥವಾಗಿ ಮಲಗಿಕೊಂಡರು. ಕೂಡಲೆ ಅವರಿಗೆ ಗಾಢವಾದ ನಿದ್ರೆಯು ಹತ್ತಿತು.

## ಸಮರ್ಥರ ಕೃಪಾಪ್ರಸಾದವು

ಮಹಾರಾಜರು ಬಹಳ ಹೊತ್ತು ಸ್ವಸ್ಥವಾಗಿ ನಿದ್ದೆ ಮಾಡಿದರು. ಜೀಜಾಬಾಯಿ ಸಾಹೇಬರು ಮಗನನ್ನು ಬಹು ಕೌತುಕದಿಂದ ನೋಡುತ್ತಲಿದ್ದರು. ತಮ್ಮ ಹೊಟ್ಟೆಯಲ್ಲಿ ಈ ವೀರ ಪುರುಷನು ಉತ್ಪನ್ನವಾದದ್ದು ಎಂಥ ಪುಣ್ಯವೆಂದು ಅವರು ಕ್ಷಣಮಾತ್ರ ಅಭಿಮಾನ ತಾಳಿದರು. ಆ ಪುತ್ರ ರತ್ನವು ಸ್ವಧರ್ಮದ ಹಾಗು ಸ್ವದೇಶದ ಉದ್ಧಾರಕ್ಕಾಗಿ ದೀರ್ಘ ಪ್ರಯತ್ನ ಮಾಡುತ್ತಿರುವದನ್ನೂ, ಅದರ ಯೋಗದಿಂದ ಸಹಜವಾಗಿ ತಮ್ಮ ಕುಲದ ಉದ್ಧಾರವಾಗುತ್ತಿರುವದನ್ನೂ ಸ್ಮರಿಸಿ, ಅವರಿಗೆ ಪರಮಾನಂದವಾಯಿತು. ಈವರೆಗೆ ಮಹಾರಾಜರು, ಎಷ್ಟೋ ಜನ ದುರ್ಬಲರನ್ನು ದುಃಖಮುಕ್ತ ಮಾಡಿದ್ದರು. ಅದನ್ನು ನೆನಸಿ ಜೀಜಾಬಾಯಿಯವರು ಬಹು ಸಮಾಧಾನಪಟ್ಟರು; ಆದರೆ ಶುದ್ಧಾನಂದದ ಅನುಭವವು ಸಾಂಸಾರಿಕರಿಗೆ ಆದ ಆನಂದವು ಕ್ಷಣಿಕವಾಯಿತು. ಪ್ರಕೃತದಲ್ಲಿ ಒದಗಿದ ಕಠಿಣ ಪ್ರಸಂಗದ ಸ್ಮರಣವಾಗಲು, ಅವರ ಆನಂದಕ್ಕೆ ಭಂಗ ಒದಗಿ, ಅವರ ಮನಸ್ಸು ಚಡಪಡಿಸಹತ್ತಿತು. ತಮ್ಮ ಮಗನಿಗೊದಗಿದ ಸಂಕಟಕ್ಕಾಗಿ ಅವರ ಮನಸ್ಸು ಭಯಗ್ರಸ್ತವಾಗಿರುತ್ತಿದ್ದರೂ, ಹೊರಗೆ ಅದನ್ನು ಅವರು ತೋರಗೊಡದೆ ಮಗನಿಗೆ ಧೈರ್ಯವನ್ನು ಹೇಳುತ್ತಲಿದ್ದರು. ವೀರ ಮಾತೆಯು

ಲಕ್ಷಣವೇ ಇದು. ವೀರ ಜನನಿಯರು ಬೇಕಾದಂಥ ಸಂಕಟ ಒದಗಲಿ, ತಮ್ಮ ಮಕ್ಕಳನ್ನು ಸಂಕಟಕ್ಕೆ ಎದುರಾಗಲು, ಪ್ರೋತ್ಸಾಹಿಸುವರಲ್ಲದೆ ಮೋಹಗ್ರಸ್ತರಾಗಿ ಮಕ್ಕಳ ಕೈಕಾಲುಗೆಡಿಸಿ ಅವರನ್ನು ಕರ್ತವ್ಯಪರಾಙ್ಮುಖರನ್ನು ಮಾಡುವದಿಲ್ಲ; ಆದರೆ ಇದರಿಂದ ಆ ವೀರ ಜನನಿಯರಿಗೆ ದುಃಖವಾಗುವದಿಲ್ಲೆಂದು ಮಾತ್ರ ತಿಳಿಯಲಾಗದು. ಜೀಜಾಬಾಯಿ ಯವರ ಅಂತಃಕರಣಕ್ಕೆ ಯಾವಾಗಲೂ ತಾಪವಾಗುತ್ತಿತ್ತು. ಒಬ್ಬರೇ ಇದ್ದಾಗ ಅವರ ಆ ತಾಪವು ಹೆಚ್ಚುತ್ತಿತ್ತು. ಈಗಂತು ಸಂಕಟ ಸಮಯವು ತೀರ ಸಮೀಪಿಸಿದ್ದು ಆ ಪ್ರಾಣ ಸಂಕಟಕ್ಕೆ ಗುರಿಯಾಗಿದ್ದ ತಮ್ಮ ಮೋಹದ ಕುಮಾರನು ತೊಡೆಯ ಮೇಲೆ ಸ್ವಸ್ಥ ನಿದ್ದೆ ಮಾಡುವದನ್ನು ನೋಡಿ, ಅವರ ಅಂತಃಕರಣಕ್ಕೆ ವಿಶೇಷ ವ್ಯಥೆಯಾಗ ಹತ್ತಿತು. ಅವರು ಗಹನ ವಿಚಾರದಲ್ಲಿ ತೊಡಗಿ ಚಿಂತಿಸಹತ್ತಿದರು. ಈ ಸ್ಥಿತಿಯಲ್ಲಿ ಮಗನ ಮುಖವನ್ನು ನೋಡುವಾಗ ಅವರ ಅಂತಃಕರಣವು ಉಕ್ಕೇರಿ ನೇತ್ರಗಳು ಅಶ್ರುಪೂರ್ಣವಾಗಲು ಅವರು ನಿಗ್ರಹದಿಂದ ಆ ಅಶ್ರುಗಳನ್ನು ಅಲ್ಲಿಯೇ ಸುಟ್ಟುಬಿಟ್ಟರು!

ಈ ಮೇರೆಗೆ ಜೀಜಾಬಾಯಿಸಾಹೇಬರು ಚಿಂತಾಮಗ್ನರಾಗಿ ಕುಳಿತಿರಲು ಅವರಿಗೆ ಏನೋ ನೆನಪಾಗಿ ಅವರು ತಮ್ಮೊಳಗೆ—''ಇಂಥ ಕಠಿಣ ಪ್ರಸಂಗದಲ್ಲಿ ಶ್ರೀ ಸಮರ್ಥ ರಾಮದಾಸಸ್ವಾಮಿಗಳ ವಿಚಾರಗಳನ್ನು ಕೇಳಿಕೊಳ್ಳುವದಕ್ಕೆ ಪ್ರತಿಬಂಧವಾಗಿರುವದು ಎಷ್ಟು ವಿಚಿತ್ರವು! ಆದರೆ ಸಮರ್ಥರ ಅಪ್ಪಣೆಯನ್ನು ಯಾರು ಉಲ್ಲಂಘಿಸುವರು? ತುಕಾರಾಮ ಮಹಾರಾಜರ ಕೀರ್ತನವನ್ನು ಕೇಳಿ ಶಿವಬಾನು ಸಂಸಾರಕ್ಕೆ ಹೇಸಿ, ಸರ್ವಸಂಗಪರಿತ್ಯಾಗಕ್ಕೆ ಮನಸ್ಸು ಮಾಡಲು, ಶ್ರೀ ಸಮರ್ಥರು ಆತನ ಮನಸ್ಸನ್ನು ತಿರುಗಿಸಿ—''ಶಿವಬಾ, ನೀನು ಸಂಸಾರತ್ಯಾಗ ಮಾಡತಕ್ಕದ್ದಲ್ಲ, ಸ್ವಧರ್ಮದ ಹಾಗು ಸ್ವರಾಜ್ಯದ ಉದ್ಧಾರಕ್ಕಾಗಿ ನೀನು ತ್ರಿಕರಣಪೂರ್ವಕವಾಗಿ ಯತ್ನಿಸುವದು ಅವಶ್ಯವಾಗಿದೆ. ಇದು ಕ್ಷತ್ರಿಯನಾದ ನಿನ್ನ ಅವಶ್ಯದ ಧರ್ಮವು. ಈಗ ನೀನು ನಿನ್ನ ಕ್ಷತ್ರಿಯ ಧರ್ಮದ ತ್ಯಾಗ ಮಾಡಿ, ನಮ್ಮ ಸಹವಾಸದಿಂದ ವೈರಾಗ್ಯ ತಾಳಿದ್ದಕ್ಕೆ ನಿನ್ನೆ ಶಿಕ್ಷೆಯೇನಂದರೆ—''ನೀನು ಹನ್ನೆರಡು ವರ್ಷ ನಮ್ಮ ದರ್ಶನಕ್ಕೆ ಬರಬಾರದು; ಮತ್ತು ನಮ್ಮ ಆಲೋಚನೆಯನ್ನು ಕೇಳಲು ಯತ್ನಿಸಬಾರದು,'' ಎಂದು ಹೇಳಿದರು. ಶಿವಬಾನು ಬೇಕಾದಷ್ಟು ಹೇಳಿಕೊಂಡನು; ಸಂಕಟಸಮಯದಲ್ಲಿ ಯೋಗ್ಯ ಮಾರ್ಗವನ್ನು ತೋರಿಸುವವರು ನಿಮ್ಮ ಹೊರತು ನನಗೆ ಬೇರೆ ಯಾರೂ ಇಲ್ಲದಿರುವದರಿಂದ, ಇಷ್ಟು ನಿಷ್ಠುರರಾಗಬಾರದೆಂದು ಪರಿಪರಿಯಾಗಿ ಬೇಡಿಕೊಂಡನು; ಆದರೆ ಸಮರ್ಥರಿಗೆ ದಯ ಬರಲಿಲ್ಲ, ಅವರು—''ನಮ್ಮ ಅಪ್ಪಣೆಯಲ್ಲಿ ಇನ್ನು ಅಂತರವಾಗಲಾರದು. ಈ ಹನ್ನೆರಡು ವರ್ಷದ ಅವಧಿಯಲ್ಲಿ ನೀನು ನನ್ನ ನಾಮೋಚ್ಚಾರವನ್ನು ಕೂಡ ಮಾಡಕೂಡದು!'' ಎಂದು ನಿಷ್ಠುರವಾಗಿ ಹೇಳಿಬಿಟ್ಟರು. ಈ ಅವಧಿಯಲ್ಲಿಯೇ ಈಗಿನ ಕಠಿಣ ಪ್ರಸಂಗವು ಒದಗಿರುವದರಿಂದ, ಏನಾಗುವದೋ ಹ್ಯಾಗೆ ತಿಳಿಸಬೇಕು! ಶ್ರೀ ಗುರುವಿನ ತಂತ್ರವನ್ನು ತಿಳಿಯಲು ನಾವು ಅಸಮರ್ಥರಾದ್ದರಿಂದ, ಹೀಗೆ ಆಜ್ಞಾಪಿಸಿದ್ದು ನಮಗೆ ನಿಷ್ಠುರವಾಗಿ ತೋರುತ್ತದೆ; ಆದರೆ ಹೀಗೆ ಆಜ್ಞಾಪಿಸುವದರಲ್ಲಿಯೇ ಶಿವಬಾನ ಕಲ್ಯಾಣವಿರಬಹುದು.

ಶ್ರೀ ಭವಾನೀ ಮಾತೆಯಂತೆಯೇ ಶ್ರೀ ಸಮರ್ಥರ ಪೂರ್ಣ ಕೃಪೆಯೂ ಶಿವಬಾನ ಮೇಲಿರುವದರಿಂದ ಅವರು ಈಗಿನ ಪ್ರಸಂಗದಲ್ಲಿ ನಮ್ಮನ್ನು ಮರೆ ಯಲಿಕ್ಕಿಲ್ಲವೆಂದು ನಾನು ತಿಳಿದಿದ್ದೆನು. ಶಿವಬಾನು ಶ್ರೀ ಗುರುವಿನ ಆಜ್ಞೆಯನ್ನು ಅಕ್ಷರಶಃ ಪಾಲಿಸಿರುವನು. ಈಗ ಸರಾಸರಿ ಹನ್ನೆರಡು ವರ್ಷಗಳಾಗುತ್ತ ಬಂದವು; ಆದರೆ ಈ ಅವಧಿಯಲ್ಲಿ ಆತನು ಗುರುಗಳ ನಾಮೋಚ್ಚಾರವನ್ನು ಕೂಡ ಮಾಡಿರುವದಿಲ್ಲ. ಹೀಗೆ ಗುರುಗಳ ಆಜ್ಞೆ ಯಾಗಿರದಿದ್ದರೆ, ಶಿವಬಾನು ಈ ಪ್ರಸಂಗದಲ್ಲಿ ಅವರ ಬಳಿಗೆ ಹತ್ತುಸಾರೆ ಹೋಗಿ ಬರುತ್ತಿದ್ದನು. ಇರಲಿ, ಗುರುವಾಜ್ಞೆಯನ್ನು ಶಿವಬಾನು ಪಾಲಿಸಿದ್ದೇ ಯೋಗ್ಯವು; ಆದರೆ ಸಮರ್ಥರು ಆತನನ್ನು ಹ್ಯಾಗೆ ಮರೆತಿರಬಹುದು! ಆತನಿಗೆ ತಮ್ಮ ದರ್ಶನವನ್ನು ಯಾಕೆ ಕೊಟ್ಟಿರಲಿಕ್ಕಿಲ್ಲ! ದರ್ಶನ ಕೊಡದಿದ್ದರೂ, ಯಾರಾದರೊಬ್ಬ ಶಿಷ್ಯರ ಸಂಗಡ ನಾಲ್ಕು ಉಪದೇಶದ ಮಾತುಗಳನ್ನು ಹೇಳಿ ಕಳಿಸಿ, ತೀರ್ಥ ಪ್ರಸಾದವನ್ನಾದರೂ ಅವರು ಕಳಿಸಬಹುದಾಗಿತ್ತು. ಈಗ ಬೆಳಗಾದಕೂಡಲೆ ಶಿವಬಾನು ಹುಲಿಯ ಬಾಯೊಳಗೆ ತಲೆ ಕೊಡಲಿಕ್ಕೆ ಹೋಗುವಂತೆ ಖಾನನ ಬಳಿಗೆ ಹೋಗ ಬೇಕಾಗಿರಲು, ಇನ್ನೂ ಸಮರ್ಥರ ಕೃಪಾಪ್ರಸಾದವು ದೊರೆಯಲಿಲ್ಲವಲ್ಲ! ಅಂಬಾಬಾಯಿಯ ದೃಷ್ಟಾಂತವಾಗಿರುವದು; ಆದರೆ ಸಮರ್ಥರವೆರಡು ಆಶೀರ್ವಾದ ವಚನಗಳು ಲಭಿಸಿದ್ದರೆ ಎಷ್ಟು ನೆಟ್ಟಗಾಗುತ್ತಿತ್ತು?

ಈ ಮೇರೆಗೆ ಅತ್ಯಂತವಾದ ಗುರುಭಕ್ತಿಯ ಸಥಿಯಿಂದ ಸದ್ಗದಿತಾಂತಃಕರುಣ ವುಳ್ಳವರಾಗಿದ್ದ ಜೀಜಾಬಾಯಿಯವರ ಮನಸ್ಸಿನಲ್ಲಿ ಗುರು ಸ್ಮರಣಪೂರ್ವಕವಾದ ಇಂಥ ವಿಚಾರಗಳು ಬರುತ್ತಲಿದ್ದವು. ಆಗಲವರು, ಸ್ವಧರ್ಮದ, ಹಾಗು ಸ್ವದೇಶದ ಉದ್ಧಾರಕ್ಕಾಗಿ ಅಹೋರಾತ್ರ ಶ್ರಮಬಟ್ಟು ದಣಿದು ತಮ್ಮ ತೊಡೆಯಮೇಲೆ ಸ್ವಸ್ಥವಾಗಿ ಮಲಗಿಕೊಂಡಿದ್ದ ವೀರಪುತ್ರನ ಕಡೆಗೆ ನೋಡಿ ನಿಟ್ಟುಸಿರುಗಳನ್ನು ಬಿಡುತ್ತಲಿದ್ದರು; ಆದರೆ ತಾವು ಗಟ್ಟಿಯಾಗಿ ಉಸುರು ಬಿಟ್ಟರೆ, ಅಥವಾ ಸ್ವಲ್ಪ ಅಲ್ಲಾಡಿದರೆ ಮಗನ ನಿದ್ರಾಭಂಗವಾದೀತೆಂದು, ಆ ಪುತ್ರವತ್ಸಲರಾದ ಸಾಧ್ವಿಯವರು ಬಹು ಜಾಗರೂಕತೆಯಿಂದ ವ್ಯವಹರಿಸುತ್ತಿದ್ದರು. ಆ ಕಾಲದಲ್ಲಿ ಆ ತಾಯಿ–ಮಕ್ಕಳನ್ನು ಯಾರಾದರೂ ನೋಡಿದ್ದರೆ, ವೀರ ಜನನಿ–ವೀರ ಪುತ್ರರ ಸ್ವರೂಪವೂ, ಸಂಬಂಧವೂ, ನಡತೆಯು ಯಾವ ಬಗೆಯದಿರುತ್ತದೆಂಬದರ ಪ್ರತ್ಯಕ್ಷ ಅನುಭವವಾಗಬಹುದಾಗಿತ್ತು. ಹೀಗೆ ಆ ಸತ್ಪುತ್ರನು ತನ್ನ ಜನನಿಯ ತೊಡೆಯಮೇಲೆ ಸುಖದಿಂದ ನಿದ್ರೆ ಮಾಡುತ್ತಿರಲು, ಅರುಣೋದಯವಾಯಿತು. ಸೂರ್ಯನ ಆರಕ್ತ ಕಿರಣಗಳು ಪ್ರತಾಪಗಡದ ಗಗನ ಚುಂಬಿತ ಮಸ್ತಕದ ಮೇಲೆ ದೇದಿಪ್ಯಮಾನವಾದ ಸುವರ್ಣ ರಸದಂತೆ ಪಸರಿಸಿದವು. ಆಗ ಮಹಾರಾಜರು ಕೂಡಲೆ ಎಚ್ಚತ್ತರು. ತಾವು ತಾಯಿಯ ತೊಡೆಯಮೇಲೆ ಮಲಗಿದವರು ಗಾಢ ನಿದ್ರೆಹತ್ತಿ ಹಾಗೆಯೇ ಮಲಗಿ ಬಿಟ್ಟಿದ್ದಕ್ಕಾಗಿ ಅವರಿಗೆ ಬಹಳ ಆಶ್ಚರ್ಯವಾಯಿತು; ಆದರೆ ಆಶ್ಚರ್ಯಪಡುತ್ತ ಕುಳಿತು ಕೊಳ್ಳಲಿಕ್ಕೆ ಅದು ಸಮಯವಿದ್ದಿಲ್ಲ. ಅವರು ತಾಯಿಗೆ ಆಯಾಸವನ್ನುಂಟು ಮಾಡಿದ್ದಕ್ಕಾಗಿ ಮನಸ್ಸಿನಲ್ಲಿ ಪಶ್ಚಾತ್ತಾಪಪಡುತ್ತ ತಾಯಿಯನ್ನು ಕುರಿತು—''ಆಯಿಸಾಹೇಬ, ನೀವು ಹೀಗೆಯೇ ಎಚ್ಚತ್ತು ಕುಳಿತು

ಕೊಂಡಿರಲ್ಲ, ನನ್ನನ್ನು ಎಬ್ಬಿಸಬೇಕೋ ಇಲ್ಲವೋ'' ಎಂದು ಕೇಳಲು ಜೀಜಾಬಾಯಿಸಾಹೇಬರು ಮುಗುಳುನಗೆ ನಗುತ್ತ ಏನೋ ಮಾತಾಡಬೇಕೆನ್ನುತ್ತಿದ್ದರು; ಅಷ್ಟರಲ್ಲಿ ಅವರಿಬ್ಬರ ತಾಯಿಮಕ್ಕಳ ಕಿವಿಗೆ, ಉಚ್ಚ ಸ್ವರದಿಂದ ಯಾರೋ ''ಜಯಜಯ ರಘುವೀರ ಸಮರ್ಥ'' ಎಂದು ಉಚ್ಚರಿಸಿದ್ದು ಇಂಪಾಗಿಯೂ, ಆನಂದಕರವಾಗಿಯೂ ಕೇಳಿಸಿತು. ಹೀಗೆ ಉಚ್ಚರಿಸಿದವರು ಕೂಡಲೆ ರಾಮದಾಸರ ''ಮನಸ್ಸಿನ ಶ್ಲೋಕಗಳೊ''ಳಗಿನದೊಂದು ಶ್ಲೋಕವನ್ನು ಅನ್ನುತ್ತ ಬರತೊಡಗಿದರು. ದನಿಯು ಅವರಿಬ್ಬರ ಗುರುತಿನದಾಗಿತ್ತು, ಹತ್ತರ ಯಾರೂ ಸೇವಕರಿದ್ದಿಲ್ಲ. ಮಹಾರಾಜರು ಯಾರನ್ನಾದರೂ ಕರೆದು ವಿಚಾರಿಸಬೇಕೆನ್ನುತ್ತಿರಲು, ಒಬ್ಬ ನೌಕರನು ಹೊರಗಿನಿಂದ ಬಂದು ಮಹಾರಾಜರನ್ನು ಕುರಿತು—''ಶ್ರೀ ಸಮರ್ಥಸ್ವಾಮಿಗಳವರ ಕಡೆಯಿಂದ ಶ್ರೀಧರ ಗೋಸಾವಿಗಳವರು ಬಂದಿದ್ದಾರೆ'' ಎಂದು ಹೇಳಿದನು. ಅದನ್ನು ಕೇಳಿದ ಕೂಡಲೆ ಜೀಜಾಬಾಯಿಯವರ ಮುಖದಲ್ಲಿ ಆಶ್ಚರ್ಯದ ಚಿಹ್ನವು ತೋರಹತ್ತಿತು. ಇದೇ ಈಗ ತಾವು ಸಮರ್ಥರ ಸಂಬಂಧದಿಂದ ವಿಚಾರಮಾಡುತ್ತಿರಲು, ಅವರ ಕಡೆಯಿಂದ ಕರೆಕಳುಹಿಸಿದ ಹಾಗೆ ಒಬ್ಬ ಶಿಷ್ಯರ ಬಂದರಲ್ಲ. ಹನ್ನೆರಡು ವರ್ಷಗಳವರೆಗೆ ದರ್ಶನಕ್ಕೂ, ನಾಮೋಚ್ಚಾರಕ್ಕೂ ಪ್ರತಿಬಂಧಿಸಿದ್ದ ಸದ್ಗುರುವು, ಈಗ ಕರುಣಾಳುವಾಗಿ ಇಂಥ ಕಠಿಣಕಾಲದಲ್ಲಿ ಅನುಗ್ರಹಿಸಿದ್ದನ್ನು ಸ್ಮರಿಸಿ ಅವರ ಹೃದಯವು ಭಕ್ತಿರಸಪೂರ್ಣವಾಯಿತು. ''ಸಮರ್ಥರು ಸಮರ್ಥರೆಂಬದೇ ನಿಜವು.'' ಎಂದು ಮನಸ್ಸಿನಲ್ಲಿ ಅಂದು ಅವರ ಏನೋ ಮಾತಾಡಬೇಕೆನ್ನುತ್ತಿರಲು ಶ್ರೀಧರ ಸ್ವಾಮಿಗಳು ಅವರ ಬಳಿಗೆ ಬಂದು ಮುಗುಳುನಗೆ ನಗುತ್ತ ಉಚ್ಚಸ್ವರದಿಂದ–

> ಸಮರ್ಥಾಚಿಯಾ ಸೇವಕಾ ವಕ್ರಪಾಹೆ ।
> ಅಸಾಸರ್ವ ಭೂಮಂಡಳೀ ಕೋಣ ಆಹೇ॥
> ಜಯಾಚೀಲಿಲಾವರ್ಣಿತೀ ಲೋಕತೀನ್ನಿ ।
> ನುಪೇಕ್ಷೀಕದಾರಾಮದಾಸಾಭಿಮಾನೀ ॥
> ಜಯಜಯ ರಘುವೀರ ಸಮರ್ಥ ।

ಹೀಗೆ ನುಡಿಯುತ್ತ ಪ್ರಸನ್ನವದನರಾಗಿ ಎದುರಿಗೆ ಬಂದು ನಿಂತುಕೊಂಡಿದ್ದ ಶ್ರೀ ಗುರುಪುತ್ರರನ್ನು ನೋಡಿ ಆ ತಾಯಿಮಕ್ಕಳಿಗೆ ಪರಮಾನಂದನಾಯಿತು. ಆನಂದದ ಭರದಲ್ಲಿ ಗುರುಪುತ್ರನನ್ನು ನಮಸ್ಕರಿಸುವ ಸ್ಮರಣವು ಕೂಡ ಅವರಿಗೆ ಆಗಲಿಲ್ಲ, ಸ್ವಲ್ಪ ಹೊತ್ತಿನ ಮೇಲೆ ಅವರ ಆನಂದದ ಭರವು ಕುಗ್ಗಲು, ಅವರು ಎದ್ದು ಶ್ರೀಧರಸ್ವಾಮಿಗಳನ್ನು ವಂದಿಸಿ, ಅವರನ್ನು ಆನಂದದಿಂದ ಕುಳ್ಳಿರಿಸಿಕೊಂಡರು. ಶ್ರೀಧರಸ್ವಾಮಿಗಳು ಅಂದ ಶ್ಲೋಕದಲ್ಲಿಯ ಗಂಭೀರವಾದ ಅರ್ಥವನ್ನು ಸ್ಮರಿಸಿ ಆ ತಾಯಿ–ಮಕ್ಕಳು ಪರಮಾನಂದ ಪಡುತ್ತಲಿದ್ದರು; ಆದರೆ ಆಗ ಕಾಲ ಹರಣಕ್ಕೆ ಅವಕಾಶವಿದ್ದಿಲ್ಲ. ಆಗ ಮಹಾರಾಜರು ಶ್ರೀಧರಸ್ವಾಮಿಗಳಿಗೆ—''ತಾವು ಸಮರ್ಥರ ಕೃಪಾ ಪ್ರಸಾದವನ್ನು ತಂದಿರಬಹುದು, ಅದನ್ನು ಬೇಗನೆ ಕೊಡಬೇಕು. ಇಂಥ ಕಠಿಣ ಪ್ರಸಂಗದಲ್ಲಿ ಶ್ರೀಸಮರ್ಥರು ಕೃಪಾಪ್ರಸಾದವನ್ನು ಕಳಿಸಿಯೇ ಕಳಿಸುವರೆಂದು ನಾನು ಭಾವಿಸಿದ್ದೆನು; ಆದರೆ ಅದನ್ನು ಯಾರ ಮುಂದೆಯೂ

ಆಡಿ ತೋರಿಸಿದ್ದಿಲ್ಲ. ನನ್ನ ಭಾವನೆಯಂತೆ ಗುರುಗಳು ನನ್ನನ್ನು ಅನುಗ್ರಹಿಸಿದರು. ಗುರುಗಳ ಆಜ್ಞೆಯಂತೆ ನಾನು ಅವರ ದರ್ಶನ ಮಾಡಿಕೊಳ್ಳಲಿಕ್ಕೂ, ಅವರ ನಾಮವನ್ನು ಉಚ್ಚರಿಸಲಿಕ್ಕೂ ಅನಧಿಕಾರಿಯಾಗಿದ್ದರೂ, ವಿಪತ್ಕಾಲದಲ್ಲಿ ಶ್ರೀಗುರುವು ತನ್ನ ಪ್ರಸಾದದಿಂದ ನನ್ನನ್ನು ಪರಿತುಷ್ಟನನ್ನಾಗಿ ಮಾಡಿದರು; ಇದರಲ್ಲಿಯೇ ಎಲ್ಲವೂ ಬಂದು ಹೋಯಿತೆಂದು ನಾನು ತಿಳಿದುಕೊಳ್ಳುತ್ತೇನೆ.'' ಎಂದು ನುಡಿಯುವಾಗ ಮಹಾರಾಜರ ಕಣ್ಣುಗಳೊಳಗಿಂದ ನೀರುಗಳು ಉದುರಿದವು. ಅದನ್ನು ನೋಡಿ ಶ್ರೀಧರ ಸ್ವಾಮಿಗಳು ಕನಿಕರಪಟ್ಟು ಮಹಾರಾಜರನ್ನು ಕುರಿತು—''ರಾಜಾ, ಸಮರ್ಥರು ಮಾಡುವದೆಲ್ಲ ನಿನ್ನ ಹಿತಕ್ಕಾಗಿಯೇ ಎಂಬದನ್ನು ನೀನು ಅರಿಯೆಯಾ? ಹನ್ನೆರಡು ವರುಷಗಳವರೆಗೆ ತಮ್ಮ ಗುರುತು ಇಲ್ಲದವರಂತೆ ಇರಬೇಕೆಂದು ಸಮರ್ಥರು ನಿಮಗೆ ಹೇಳಿದ್ದರ ಕಾರಣವನ್ನು ಅವರು ನಿನಗೆ ಆಗ ಹೇಳಿರುವರಲ್ಲವೆ? ನಿನ್ನಂಥ ಕರ್ತೃತ್ವಶಾಲಿಗಳಾದ ಪುರುಷರು ಯಾವ ಕಾರ್ಯವನ್ನು ಕೈಕೊಂಡರೂ ಜಯಶೀಲರಾಗುವಲ್ಲಿ ಸಂಶಯವಿಲ್ಲ. ನೀನು ನಮ್ಮ ಹರಿಗೆ ಬಿದ್ದು ವೈರಾಗ್ಯಶಾಲಿಯಾಗಿದ್ದರೆ ಇಷ್ಟು ಹೊತ್ತಿಗೆ ಮಹಾ ತಪಸ್ವಿಯಾಗುತ್ತಿದ್ದೆ; ಅಂದಬಳಿಕ ಈ ಸ್ವರಾಜ್ಯಸ್ಥಾಪನೆಯ ಕಾರ್ಯವನ್ನು ಯಾರು ಮಾಡುತ್ತಿದ್ದರು? ಮತ್ತು ಮ್ಲೇಂಛರ ಪುಂಡಾಟಿಕೆ ಯನ್ನು ಮುರಿಯುವದಕ್ಕೆ ಯಾರು ನಿಲ್ಲುತ್ತಿದ್ದರು? ಈ ಹನ್ನೆರಡು ವರ್ಷದ ಅವಧಿಯಲ್ಲಿ ನಿನ್ನಿಂದ ಎಷ್ಟೋ ಮಹತ್ವದ ರಾಜಕಾರ್ಯಗಳು ಘಟಿಸಿರುತ್ತವೆ. ಹೀಗೆಯೇ ನೀನು ಶ್ರೀ ಗುರುಕೃಪೆಯಿಂದ ಅಭಿವೃದ್ಧಿಯನ್ನು ಹೊಂದುತ್ತ ಹೋಗಿ, ಸ್ವರಾಜ್ಯಸ್ಥಾಪನೆಯ ಕಾರ್ಯವನ್ನು ನೆರವೇರಿಸಿದರೆ ರಾಜಕಾರ್ಯದಲ್ಲಿದ್ದೂ ನೀನು ವೈರಾಗ್ಯಶಾಲಿಯಾಗುವೆ. ನಿನ್ನನ್ನು ವಿದೇಹಿ ಜನಕನಿಗೆ ಹೋಲಿಸಬಹುದು. ಈ ಮಾತನ್ನು ಸಮರ್ಥರು ಯಾವಾಗಲೂ ನಮ್ಮ ಮುಂದೆ ಹೇಳುತ್ತಿರುವರು. ನಮ್ಮಂಥವರ ಸಹವಾಸವು ನಿನಗೆ ವಿಶೇಷವಾಗಿ ಆಗುವದು ಸರ್ವಥಾ ಹಿತಕರವಲ್ಲ, ರಾಜಾ, ನೀನೇ ಹೇಳು. ಶಕೆ 1469ನೇ ವರ್ಷ, ನಿನ್ನ ಇಪ್ಪತ್ತು ಇಪ್ಪತ್ತೊಂದು ವರ್ಷದ ವಯಸ್ಸಿನಲ್ಲಿ ನಿನಗೆ ವೈರಾಗ್ಯವು ಉತ್ಪನ್ನವಾಯಿತಷ್ಟೇ? ಅಂದಿನಿಂದ ಇಲ್ಲಿಯವರೆಗೆ ನೀನು ವೈರಾಗ್ಯಶಾಲಿಯಾಗಿ ವರ್ತಿಸಿದ್ದರೆ, ಈಗಾಗಿದ್ದ ಸ್ವರಾಜ್ಯದ ಕಾರ್ಯವು ಆಗುತ್ತಿತ್ತೇ? ನೀನು ನಮ್ಮಂತೆಯೇ ಅಡವಡವಿ ತಿರುಗುತ್ತಲಿರುತ್ತಿದ್ದೆ. ಅಪ್ಪಾ, ಯಾರ ಕೆಲಸವು ಯಾವದೋ ಅವರು ಅದನ್ನು ಮಾಡಬೇಕು. ನೀನು ಕ್ಷತ್ರಿಯನು. ಯುದ್ಧ ವ್ಯಾಪರದಿಂದ ದುಷ್ಟರನ್ನು ದಂಡಿಸುವದೂ, ಶಿಷ್ಟರನ್ನು ಪಾಲಿಸುವದೂ ನಿನ್ನ ಕೆಲಸವು. ಅರಣ್ಯದಲ್ಲಿ ಸಂಚರಿಸಿ ತನ್ನ ದೇಹದಂಡನದಿಂದ ತನಗಾಗಿ ಮೋಕ್ಷವನ್ನು ಸಂಪಾದಿಸಿಕೊಳ್ಳುವ ಮಾರ್ಗವು ನಿನಗೆ ಶ್ರೇಯಸ್ಕರವಲ್ಲ. ಇರಲಿ, ಸಮರ್ಥರು ನಿನಗೊದಗಿದ ಸಂಕಟವನ್ನು ಅಂತರ್ಜ್ಞಾನದಿಂದ ತಿಳಿದುಕೊಂಡಿರುತ್ತಾರೆ. ಈ ದಿನ ನಿನಗೆ ಪೂರ್ಣ ಯಶಸ್ಸು ಪ್ರಾಪ್ತವಾಗುವದೆಂದು ಅವರು ನನ್ನ ಮುಂದೆ ಮೇಲೆ ಮೇಲೆ ಹೇಳಿದ್ದಾರೆ; ಮತ್ತು ಕೆಲವು ಓವಿಗಳನ್ನು ಮಾಡಿ ಅವನ್ನು ಈ ದಿನ ನಿನಗೆ ಓದುವದಕ್ಕಾಗಿ ಕೂಡ ಹೇಳಿರುವರು. ಇವನ್ನು ನೀನು ಓದಿ ಮುಂದಿನ ಕಾರ್ಯಗಳನ್ನು ಕೈಕೊಳ್ಳು. ಇನ್ನು ಅವಕಾಶವು ಸ್ವಲ್ಪ ಉಳಿದಿರುವದೆಂಬದನ್ನು ನಾನು ಬಲ್ಲೆನು; ಆದ್ದರಿಂದಲೇ ನಾನು ಹೆಚ್ಚಿಗೆ ಮಾತುಗಳನ್ನು

ಆಡುವದಿಲ್ಲ; ಎಂದು ಹೇಳಿ, ಮಹಾರಾಜರ ಕೈಯಲ್ಲಿ ಒಂದು ಲಕೋಟಿಯನ್ನು ಕೊಟ್ಟರು. ಮಹಾರಾಜರು ಅದನ್ನು ಭಕ್ತಿಯಿಂದ ಇಸಕೊಂಡು ಅದಕ್ಕೆ ನಮಸ್ಕರಿಸಿ ಅದನ್ನು ತಲೆಯ ಮೇಲಿಟ್ಟುಕೊಂಡರು. ಜೀಜಾಬಾಯಿಸಾಹೇಬರೂ ಆ ಲಕೋಟಿಯನ್ನು ನಮಸ್ಕರಿಸಿದರು. ಬಳಿಕ ಮಹಾರಾಜರು ಅದನ್ನು ಒಡೆದು ಶ್ರೀ ಗುರುವು ಓವಿಬದ್ಧ ರಚನೆಯಿಂದ ತನ್ನನ್ನು ಬೋಧಿಸಿದ್ದನ್ನು ಓದಿ ಪರಮೋತ್ಸಾಹವನ್ನು ತಾಳಿದರು; ಅವರ ಅಂತಃಕರಣವು ಸದ್ಗದಿತ ವಾಯಿತು; ಶರೀರದಲ್ಲಿ ರೋಮಾಂಚನಗಳು ಉತ್ಪನ್ನವಾದವು, ಕಣ್ಣುಗಳೊಳಗಿಂದ ಆನಂದಬಾಷ್ಪಗಳು ಉದುರಿದವು. ಆ ಕಾಲದ ಶಿವಪ್ರಭುವಿನ ಮೂರ್ತಿಯನ್ನು ನೋಡಿ ಶ್ರೀಧರಸ್ವಾಮಿಗಳು ಬಹಳ ಆನಂದ ಪಟ್ಟರು. ಅವರ ಅಂತಃಕರಣವೂ ಸದ್ಗದಿತವಾಯಿತು. ಅವರು ಅಂತಃಕರಣಪೂರ್ವಕವಾಗಿ ಮಹಾರಾಜರನ್ನು ಆಶೀರ್ವದಿಸಿದರು. ಈ ಮೇರೆಗೆ ಶ್ರೀ ಗುರು ಕೃಪಾಪ್ರಸಾದದಿಂದ ಪರಿಪುಷ್ಟ ರಾದ ಮಹಾರಾಜರು ಉತ್ಸಾಹಶಾಲಿಗಳಾಗಿ ಮುಂದಿನ ಕಾರ್ಯಗಳಲ್ಲಿ ತೊಡಗಿದರು.

ಈ ಮೇರೆಗೆ ಶಿವಾಜಿ ಮಹಾರಾಜರು ಸಂತುಷ್ಟಚಿತ್ತರಾಗಿ ಪರಮೋತ್ಸಾಹದಿಂದ ಅಫಜುಲಖಾನನನ್ನು ಕಾಣುವದಕ್ಕಾಗಿ ಹೊರಡಲು ಸಿದ್ಧರಾಗುತ್ತಿರಲು, ಅತ್ತ ಅಫಜುಲ ಖಾನನು ತನಗೆ ಇಳಿದುಕೊಳ್ಳುವದಕ್ಕಾಗಿ ಮಹಾರಾಜರು ಹೊಡಿಸಿದ್ದ ಡೇರೆಯಲ್ಲಿ ಬಂದು ಇಳಿದುಕೊಂಡಿದ್ದನು. ಆತನು ತನ್ನ ಸೈನ್ಯದೊಡನೆ ಮುಂದ ಮುಂದಕ್ಕೆ ಬಂದ ಬಂದಹಾಗೆ, ಈ ಮೊದಲೆ ಮಾರ್ಗ ಮಾಡುವಾಗ ಕಡೆದು ಚೆಲ್ಲಿದ್ದ ಗಿಡಗಳ ಟೊಂಗೆಗಳನ್ನು ಮಹಾರಾಜರ ಅಪ್ಪಣೆಯಂತೆ ಅವರ ಜನರು ಮಾರ್ಗದಲ್ಲಿ ಒಟ್ಟಿ, ಪ್ರಸಂಗದಲ್ಲಿ ಖಾನನ ಸೈನ್ಯವು ಸುರಕ್ಷಿತ ವಾಗಿ ಹೋಗದಂತೆ ಮಾಡಿದರು. ಯಾಕೆಂದರೆ, ಖಾನನು ಮೋಸಮಾಡಿ ಮಹಾರಾಜರಿಗೆ ಕೇಡು ಬಗೆದರೆ, ಅವರ ಸೈನ್ಯದವರನ್ನು ತುಂಡರಿಸಿ ಚಲ್ಲಬೇಕೆಂದು ಮಹಾರಾಜರು ಆಜ್ಞಾಪಿಸಿದ್ದರು. ಸಂಗಡ ಸೈನ್ಯವನ್ನು ತರಬಾರದೆಂದು ಗೊತ್ತಾಗಿದ್ದರೂ ಖಾನನು ಸ್ವಲ್ಪವಾದರೂ ಸೈನ್ಯವನ್ನು ತಂದದ್ದು ಸಂಶಯಕ್ಕೆ ಕಾರಣವಾಗಿತ್ತು, ಖಾನನ ಈ ಬಗೆಯ ಮೋಸವು ಕಾಲ ಕಾಲಕ್ಕೆ ತಿಳಿಯಬೇಕೆಂದು ಮಹಾರಾಜರು ಮಾರ್ಗದಲ್ಲಿ ಅಲ್ಲಲ್ಲಿ ಗ್ಯಾಟುಗಳನ್ನು ಇಟ್ಟಿದ್ದರು. ಅರಣ್ಯದಲ್ಲಿ ಹುಲಿಗಳ ಉಪದ್ರವವು ಬಹಳವಿರುವದರಿಂದ, ನಿಮ್ಮ ಸೈನ್ಯದವರಿಗೆ ಅವುಗಳಿಂದ ತ್ರಾಸವಾಗದಂತೆ ವ್ಯವಸ್ಥೆಮಾಡಿರುವೆವೆಂದು ಅವರು ಖಾನನಿಗೆ ಸಮಾಧಾನ ಹೇಳಿದ್ದರು. ಆ ಗ್ಯಾಟಿನವರೇ ಮಹಾರಾಜರಿಗೆ ಎಲ್ಲ ಸುದ್ದಿಗಳನ್ನು ತಿಳಿಸುತ್ತಿದ್ದರು. ಗೋಪೀನಾಥಪಂತನು ಮೊದಲು ಭೆಟ್ಟಿಯ ಮಂಟಪವನ್ನು ನೋಡಿಹೋಗಿ, ಅದು ಉತ್ತಮರೀತಿಯಿಂದ ಸಿದ್ಧಮಾಡಿ ರುವದನ್ನು ಖಾನನ ಮುಂದೆ ಹೇಳಿದ್ದನು. ಆದರೆ ಅದರಿಂದ ಖಾನನಿಗೆ ಸಮಾಧಾನವಾಗ ದಿರಲು, ಆತನು ತನ್ನ ಖಾಸ ಹುಜರೆಯಾದ ಸೈದಾಬಂಡನನ್ನು ಮತ್ತೆ ಅದನ್ನು ನೋಡುವ ದಕ್ಕಾಗಿ ಕಳಿಸಿದ್ದನು. ಶೃಂಗರಿಸಿದ ಆ ಸುಂದರ ಮಂಟಪವನ್ನು ನೋಡಿ ಸೈದಾಬಂಡನಿಗೂ ಬಹಳ ಆನಂದವಾಯಿತು. ಆತನು ಖಾನನ ಬಳಿಗೆ ಬಂದು ಸಂತೋಷದ ಭರದಿಂದ ಆತನನ್ನು ಕುರಿತು—''ಖಾನಸಾಹೇಬ, ಶಿವಾಜಿಯು ತಮಗೆ ನಿಶ್ಚಯವಾಗಿ ಹೆದರಿದ್ದಾನೆ. ತಮ್ಮ

ಮನಸ್ಸನ್ನು ಒಲಿಸಿಕೊಂಡು ತಾನು ಉಳಿದುಕೊಳ್ಳಬೇಕೆಂದು ಆತನು ಯೋಚಿಸಿರುವದು ಖಂಡಿತವು; ಹಾಗಿಲ್ಲದಿದ್ದರೆ ಆತನು ಮಂಟಪವನ್ನು ಅಷ್ಟು ಸುಂದರವಾಗಿ ಶೃಂಗರಿಸಬಹುದೆ? ಮಾರ್ಗವನ್ನು ಇಷ್ಟು ಪ್ರಶಸ್ತವಾಗಿ ಮಾಡಿಸಬಹುದೆ? ಸರಬರಾಯಿಯ ವ್ಯವಸ್ಥೆಯನ್ನು ಇಷ್ಟು ಉತ್ತಮ ರೀತಿಯಿಂದ ಇಡಿಸಬಹುದೆ? ಶಿವಾಜಿಯು ಮಹಾಪುಂಡನು, ಠಕ್ಕನು, ಆತನು ಅನ್ಯರನ್ನು ಲೆಕ್ಕಿಸುವವನೇ ಅಲ್ಲ. ಅಂಥವನು ತನ್ನ ಪುಂಡತನವನ್ನೂ ಠಕ್ಕತನವನ್ನೂ ಬಿಟ್ಟು ಕೇವಲ ಸಾತ್ವಿಕನಂತೆ ಇಷ್ಟು ಸೌಜನ್ಯವನ್ನು ಎಂದಿಗೂ ತೋರಿಸುತ್ತಿದ್ದಿಲ್ಲ. ಆತನು ತಮಗೆ ಹೆದರಿ ಮುಂದುಗಾಣದೆ ಕುಳಿತಿರುವದೇ ನಿಶ್ಚಯವು; ತಾವು ಭೆಟ್ಟಿಗೆ ಹೋಗುವದೊಂದೇ ತಡ; ಆತನು ನಿಶ್ಚಯವಾಗಿ ತಮ್ಮ ಆಧೀನನಾಗುವನು.

ಹೀಗೆ ಸೈದಾಬಂಡನು ಹೇಳಿದ್ದನ್ನು ಕೇಳಿ ಮೊದಲೇ ಮದಾಂಧನಾಗಿದ್ದ ಖಾನನು ಹರ್ಷಾನಿರ್ಭರನಾದನು; ಹರ್ಷಾತಿರೇಕದಿಂದ ಆತನ ವಿವೇಕದೃಷ್ಟಿಯು ಇಂಗಿಹೋಯಿತು. ಆತನು ಉಲ್ಲಾಸದಿಂದ ಸೈದಾಬಂಡನನ್ನು ಕುರಿತು—''ಸರಿಸರಿ, ಹೀಗೆ ಆತನು ಅಂಜಿದ್ದರೆ, ಹಾಗೂ ಆತನ ಮನಸ್ಸಿನಲ್ಲಿ ಕಪಟವನ್ನೇನೂ ಎಣಿಸದೆ ಮತಿಗೆಟ್ಟು ಕುಳಿತುಕೊಂಡಿದ್ದರೆ ಬಹಳ ನೆಟ್ಟಗಾಯಿತು; ಇದರಿಂದ ನಾವು ಯೋಚಿಸಿರುವ ಕಪಟಕೃತಿಯು ಬಹಳ ಸರಸವಾಗಿ ಸಾಧಿಸುವದು. ನಾವು ಕಪಟದಿಂದ ನಮ್ಮ ಪ್ರತಿಜ್ಞೆಯನ್ನು ಸಾಧಿಸಿಕೊಳ್ಳದೆ ವಿಜಾಪುರಕ್ಕೆ ಹೋಗುವದು ಅಶ್ಲಾಘ್ಯವು. ಇಂಥ ಬೇಟೆಯನ್ನು ಅದು ಮೈಮರೆತಿರುವಾಗಲೇ ಬಲೆಯಲ್ಲಿ ಹಿಡಿದು ಬಿಗಿಯಬೇಕಾಗುವದು. ಇಲ್ಲದಿದ್ದರೆ, ಅದು ಯಾವಾಗೋ ಸಳಕ್ಕನೆ ನುಸಿದು ಓಡಿ ಹೋಗುವದು. ಇನ್ನು ಆ ಶಿವಾಜಿಯು ನನ್ನ ಕಣ್ಣಿಗೊಂದು ಬೀಳಲಿ, ಅವನನ್ನು ಸುಮ್ಮನೆ ಬಗಲಲ್ಲಿ ಹಿಚುಕಿ ಕೊಲ್ಲುತ್ತೇನೆ. ಅವನ ಬಿಸಾತೇನು? ಅದು ತೀರ ಪುಡಿ ಆಳು! ನಾವು ಅವನಿಗಿಂತ ಎಷ್ಟು ಬಲ್ಲಿದರು!! ಅವನಿಗೆ ನಮ್ಮ ವಿಷಯದ ಪೂರ್ಣ ವಿಶ್ವಾಸವು ಉತ್ಪನ್ನವಾಗಬೇಕೆಂತಲೇ ಅವನು ಹೇಳಿದ ಕರಾರುಗಳನ್ನೆಲ್ಲ ನಾವು ಒಪ್ಪಿಕೊಂಡಿರುವೆವು. ಬರಲಿ ಆ ಪುಂಡನು; ಈವರೆಗೆ ಬಹುಜನ ಮುಸಲ್ಮಾನ ಸರದಾರರ ಮಣ್ಣುಗೂಡಿಸಿದ ಅವನ ಸೇಡನ್ನು ಕ್ಷಣದಲ್ಲಿ ತೀರಿಸಿಕೊಳ್ಳುವೆನು.'' ಎಂದು ನುಡಿಯಲು, ಸೈದಾಬಂಡನು ತಲೆಯಲ್ಲಾಡಿಸಿ ತನ್ನ ಒಡೆಯನ ಮಾತಿಗೆ ಒಪ್ಪಿಕೊಂಡು, ನೀವು ಹೇಳುವದು ಅಕ್ಷರಶಃ ನಿಜವೆಂದು ಸೂಚಿಸಿದನು. ಆಮೇಲೆ ಸಂಗಡ ಯಾರು ಬರಬೇಕೆಂಬ ಬಗ್ಗೆ ವಿಚಾರವು ನಡೆಯಿತು. ಮೊದಲು ತನ್ನ ಸಂಗಡ ಬರುವದಕ್ಕಾಗಿ ಬಹು ಜನರನ್ನು ಖಾನನು ಆರಿಸಿದನು. ಅದನ್ನು ನೋಡಿ ಗೋಪೀನಾಥಪಂತನು—''ಖಾನಸಾಹೇಬ, ಇಷ್ಟು ಜನರನ್ನು ಸಂಗಡ ಕರಕೊಂಡು ಹೋಗುವ ಕರಾರು ಇಲ್ಲವು. ಕರಾರು ಮೀರಿದರೆ ಶಿವಾಜಿಯು ಮೂಲತಃ ನಿಮ್ಮನ್ನು ಕಾಣಲಿಕ್ಕೇ ಬರಲಿಕ್ಕಿಲ್ಲ. ನಾನು ಕರಾರುಗಳನ್ನು ಗೊತ್ತು ಮಾಡಿದವನಾಗಿರುವದರಿಂದ ಈ ಮಾತನ್ನು ಸೂಚಿಸುವೆನು,'' ಎಂದು ಹೇಳಿದನು. ವಕೀಲನ ಈ ಮಾತುಗಳನ್ನು ಕೇಳಿ, ಸ್ವರ್ಗವು ಮೂರುಗೇಣು ಉಳಿದಿದ್ದ ಖಾನನು ಸೊಕ್ಕಿನಿಂದ—''ಪಂತ, ಇಷ್ಟು ಜನರೂ, ಬೇಡ, ಒಬ್ಬನೂ ನನ್ನ ಸಂಗಡ ಬರಬೇಡ. ಶಿವಾಜಿಯು ಇಬ್ಬರನ್ನು ಕರಕೊಂಡು

ಬರಹೇಳಿರುವನಷ್ಟೆ, ಆದರೆ ನನ್ನ ಸಂಗಡ ಇಬ್ಬರು ಬರುವ ಕಾರಣವಿಲ್ಲ; ಸುಮ್ಮನೆ ಮರ್ಯಾದೆಗಾಗಿ ಒಬ್ಬನು ಬಂದರೆ ಸಾಕು. ಶಿವಾಜಿಯೂ ಒಬ್ಬನನ್ನೇ ಸಂಗಡ ಕರಕೊಂಡು ಬರಲಿ, ಈಗಲೇ ಈ ಮಾತನ್ನು ದೂತಮುಖದಿಂದ ಆತನಿಗೆ ತಿಳಿಸಿಬಿಡಿರಿ. ಗದ್ದಲವು ಕಡಿಮೆಯಾದಷ್ಟು ನಮಗೆ ಹಿತವೇ ಇರುವದು. ನಮ್ಮ ಸಂಗಡ ಫಕ್ತ ಸೈದಾ ಬಂಡನೊಬ್ಬನು ಬರಲಿ.''

ಈ ಮೇರೆಗೆ ನುಡಿದು ಖಾನನು ಹೊರಡುವ ಸಿದ್ಧತೆಯಲ್ಲಿ ತೊಡಗಿದನು. ಆತನು ರೂಪವು ಅತ್ಯಂತ ಭವ್ಯವಾದದ್ದೆಂತಲೂ, ಆತನು ಬಹು ಬಲಿಷ್ಠ ನಿದ್ದನೆಂತಲೂ ಹಿಂದೆ ಹೇಳಿದೆ. ಇರತಕ್ಕಷ್ಟಕ್ಕಿಂತ ಆತನು ಹೆಚ್ಚು ಸ್ವಾಭಿಮಾನಿಯು ಇದ್ದದ್ದರಿಂದ, ಗರ್ವಿಷ್ಠನಾಗಿ ಶಿವಾಜಿಯನ್ನು ಲೆಕ್ಕಿಸದೆ ಆತನನ್ನು ಹಿಚಿಕಿ ಕೊಲ್ಲಬಹುದೆಂದು ತಿಳಿದು, ಹೆಚ್ಚಿನ ಸಿದ್ಧತೆಯನ್ನೇನು ಮಾಡಿಕೊಳ್ಳಲಿಲ್ಲ, ಆತನು ಒಂದು ಖಡ್ಗವನ್ನು ಮಾತ್ರ ತಕ್ಕೊಂಡು ಆನೆಯ ಮೇಲೆ ಕುಳಿತು ನಡೆದನು. ಅದರಂತೆ ಸೈದಾಬಂಡನು ಒಂದು ಮೇಣೆಯಲ್ಲಿ, ಗೋಪೀನಾಥಪಂತನು ಒಂದು ಮೇಣೆಯಲ್ಲಿ ಕುಳಿತು ಖಾನನನ್ನು ಹಿಂಬಾಲಿಸಿದರು. ಖಾನನು ಈಗ ಹೀಗೆ ಒಬ್ಬನೇ ಹೊರಟಿದ್ದರೂ, 1500 ಜನ ಕುದುರೆಯ ಸವಾರರನ್ನು ಆತನು ಸಂಗಡ ಕರಕೊಂಡು ಬಂದು, ದುರ್ಗದ ಕೆಳಗೆ ಇಟ್ಟು ಬಂದಿದ್ದನು. ಖಾನನು ಹೀಗೆ ಮಾಡಿದ್ದರ ಕಾರಣವು, ತಾನು ಶಿವಾಜಿಯನ್ನು ಮೋಸದಿಂದ ಕೊಂದ ಕೂಡಲೆ, ತನ್ನ ಆ ಸೈನ್ಯದ ಸಹಾಯದಿಂದ ಪ್ರತಾಪಗಡವನ್ನು ಕೈವಶಮಾಡಿಕೊಳ್ಳಬೇಕೆಂಬದು. ಹೀಗೆ ಖಾನನು ದುರಾಲೋಚನೆಯನ್ನು ಮಾಡಿ, ಶಿವಾಜಿಯನ್ನು ಯಾವಾಗ ಗೊತ್ತಿಗೆ ಹಚ್ಚೇನೆಂಬ ಆತುರದಿಂದ ಮುಂದಕ್ಕೆ ಸಾಗಿದ್ದನು. ಆನೆಯು ಪ್ರತಾಪಗಡದ ಬುಡಕ್ಕೆ ಬಂದಿತು; ಆದರೆ ಮುಂದೆ ಅದಕ್ಕೆ ಗುಡ್ಡವನ್ನು ಹತ್ತಲಿಕ್ಕೆ ಬರಲಿಲ್ಲ, ಆಗ ಖಾನನು ಶಿವಾಜಿಗೆ—''ನಮ್ಮ ಆನೆಯು ಗುಡ್ಡವನ್ನು ಹತ್ತಲೊಲ್ಲದು; ಆದ್ದರಿಂದ ನೀವು ದುರ್ಗವನ್ನು ಇಳಿದು ಗುಡ್ಡದ ಕೆಳಗೆ ನಮ್ಮ ಭೆಟ್ಟಿಗೆ ಬರಬೇಕು,''ಎಂದು ಹೇಳಿಕಳಿಸಿದನು; ಅದಕ್ಕೆ ಮಾಹಾರಾಜರು—''ಭೆಟ್ಟಿಗಾಗಿ ಮಂಟಪವು ಶೃಂಗರಿಸಿ ಸಿದ್ಧವಾಗಿದೆ; ನಿಮ್ಮ ವಕೀಲನು ಅದನ್ನು ನೋಡಿ ಇರಲೆಂದು ಒಪ್ಪಿಕೊಂಡು ಹೋಗಿದ್ದಾನೆ; ಹೀಗಿದ್ದು ಈಗ ನಾವು ಕೆಳಗೆ ಇಳಿದು ಬರಬೇಕೆನ್ನುವದು ಕರಾರಿನ ಹೊರಗಿನ ಮಾತಾಗಿರುವದು; ಆದ್ದರಿಂದ ನಾವು ಕೆಳಗೆ ಬರಲಾರೆವು. ತಾವು ಪಲ್ಲಕ್ಕಿಯಲ್ಲಿ ಕುಳಿತುಕೊಂಡು ಮೇಲಕ್ಕೆ ಬರಬೇಕು,'' ಎಂದು ಹೇಳಿಕಳಿಸಿದನು. ಮೊಸಳೆಯು ನೀರಲ್ಲಿರುವಾಗ ದೊಡ್ಡ ಆನೆಯನ್ನು ಕೂಡ ಎಳಕೊಂಡು ಹೋಗುವಂತೆ, ಮಹಾರಾಜರು ತಮ್ಮ ಸ್ಥಳದಲ್ಲಿ ತಾವಿದ್ದು, ಬಲಿಷ್ಠನಾದ ಖಾನನನ್ನು ಸಹ ಬಗ್ಗು ಬಡಿಯಬಹುದೆಂದು ತಿಳಿದುಕೊಂಡಿದ್ದರು. ಇದೇ ಉದ್ದೇಶದಿಂದಲೇ ಅವರು ಖಾನನಿಗೆ ಹಾಗೆ ಹೇಳಿಕಳಿಸಿದರು; ಆದರೆ ಖಾನನು ತನ್ನ ಡೌಲಿನಲ್ಲಿಯೇ ಇದ್ದದ್ದರಿಂದ, ಯಾವ ವಿಚಾರವನ್ನೂ ಮಾಡಲಿಲ್ಲ, ನಾವು ಮೇಲೆ ಹೋದರೆ ಆಗುವದೇನು? ಭೆಟ್ಟಿಯಾದ ಕೂಡಲೆ ಶಿವಾಜಿಯನ್ನು ಗೊತ್ತಿಗೆ ಹಚ್ಚಿಬಿಟ್ಟರಾಯಿತು, ಎಂದು ಆಲೋಚಿಸಿ, ಮೇಲಕ್ಕೆ ಹೋಗಲು ನಿಶ್ಚಯಿಸಿದನು. ಕೂಡಲೆ ಆತನ ಪಲ್ಲಕ್ಕಿಯು ಸಿದ್ಧವಾಯಿತು.

# ಗಂಡಾಂತರ ನಿವಾರಣ

ಶ್ರೀ ಸದ್ಗುರುವಿನ ಬೋಧಾಮೃತದಿಂದ ಮಹಾರಾಜರು ಪರಿಪುಷ್ಟರಾದರೆಂದು ಹಿಂದೆ ಹೇಳಿದೆಯಷ್ಟೆ, ಮಹಾರಾಜರೂ ಜೀಜಾಬಾಯಿಸಾಹೇಬರೂ ಕೃತಜ್ಞತೆಯಿಂದ ಶ್ರೀಧರ ಸ್ವಾಮಿಗಳನ್ನು ಕುರಿತು—''ಮಹಾರಾಜ, ಇಂದಿನ ಗಂಡಾಂತರದ ನಿವಾರಣ ವಾಗುವವರೆಗೆ ತಾವು ಇಲ್ಲಿಯೇ ಇರಬೇಕು'' ಎಂದು ಬೇಡಿಕೊಂಡರು. ಶ್ರೀ ಸಮರ್ಥರಾದರೂ ಸ್ವಾಮಿಗಳಿಗೆ ಹಾಗೆಯೇ ಹೇಳಿದ್ದರಿಂದ ಅವರು ಅದಕ್ಕೆ ಸಂತೋಷದಿಂದ ಒಪ್ಪಿಕೊಂಡರು. ಬಳಿಕ ಮಹಾರಾಜರು ಮತ್ತೊಮ್ಮೆ ಭೆಟ್ಟಿಯ ಮಂಟಪವನ್ನು ನೋಡಲಿಕ್ಕೆ ಹೋಗಿ, ಅಲ್ಲಿಗೆ ಯಾವತ್ತು ಮುಖ್ಯ ಮುಖ್ಯ ಜನರನ್ನು ಕರೆಸಿಕೊಂಡರು. ಯಾರು ಯಾರು ಎಲ್ಲೆಲ್ಲಿ ಇರಬೇಕು, ಯಾರು ಯಾರು ಏನೇನು ಮಾಡಬೇಕು, ಎಂಬದನ್ನು ಕುರಿತು ಮತ್ತೊಮ್ಮೆ ನಿರ್ಧಾರದಿಂದ ಹೇಳಿ, ಎಲ್ಲ ವ್ಯವಸ್ಥೆಯನ್ನು ಸ್ಥಿರಗೊಳಿಸಿದರು. ಸಮರ್ಥಗರ ಕೃಪಾಪ್ರಸಾದವು ಬಂದಿರುವದ ರಿಂದ ಇನ್ನು ನಮಗೆ ನಿಶ್ಚಯವಾಗಿ ಮಂಗಲವಾಗುವದೆಂದು ಮಹಾರಾಜರು ತಮ್ಮವರಿಗೆ ಹೇಳಿ ಅತ್ಯಂತ ಉತ್ಸಾಹದಿಂದಲೂ, ದಕ್ಷತೆಯಿಂದಲೂ ತಮ್ಮ ತಮ್ಮ ಕಾರ್ಯಗಳನ್ನು ಮಾಡಲು ಅವರನ್ನು ಆಜ್ಞಾಪಿಸಿದರು. ಪ್ರಸಂಗವಶಾತ್ ಏನಾದರೂ ಅನಿಷ್ಟ ಪ್ರಸಂಗವು ಒದಗಿದರೆ ನೀವು ಕೈಕಾಲುಗೆಡದೆ, ನಾವು ಹೇಳಿದಂತೆ ಖಾನನ ಸೈನ್ಯವನ್ನು ತುಂಡರಿಸಿ ಸ್ವರಾಜ್ಯವನ್ನು ಕಾಯ್ದುಕೊಳ್ಳಿರೆಂದು ಮತ್ತೊಮ್ಮೆ ಸೂಚಿಸಿದರು. ನಾವು ಸುರಕ್ಷಿತವಾಗಿ ಪಾರಾದರಂತು ನೆಟ್ಟಗೇ ಆಯಿತು; ಆಗದಿದ್ದರೆ ದೊಡ್ಡ ಮಹಾರಾಜರಿಗೆ (ತಂದೆಯಾದ ಶಹಾಜಿರಾಜರಿಗೆ) —''ನಾನು ರಜಪೂತ ವೀರರಿಗೆ ಉಚಿತವಾದ ಮಾರ್ಗದಿಂದ ನಡೆದು, ರಣದಲ್ಲಿ ಬಿದ್ದನೆಂತಲೂ, ನಾನು ಮಾಡತಕ್ಕದ್ದನ್ನೇ ಮಾಡಿದೆನೆಂತಲೂ ತಿಳಿಸಿರಿ,'' ಎಂದು ಹೇಳಿದರು. ಇದನ್ನು ಕೇಳಿ ಎಲ್ಲರು ಸುಮ್ಮನೆ ನಿಂತುಕೊಂಡರು. ಬಳಿಕ ಅವರೆಲ್ಲರು ಮಹಾರಾಜರಿಗೆ—''ನೀವು ಈ ಪ್ರಸಂಗದಲ್ಲಿ ಖಾನನನ್ನು ಕಾಣಲಿಕ್ಕೆ ಹೋಗಲೇಬಾರದು; ನಮ್ಮೊಳಗಿನವರಾದರೊಬ್ಬರನ್ನು ಖಾನನ ಭೆಟ್ಟಿಗೆ ಕಳಿಸಿದರಾಯಿತು; ಬೇಕಾದರೆ ಅಂಬಾಭವಾನಿಯ ಮುಂದೆ ಚೀಟಿಗಳನ್ನು ಹಾಕಿ, ಚೀಟಿ ಬಂದವರನ್ನು ಖಾನನ ಭೆಟ್ಟಿಗೆ ಕಳಿಸಿರಿ'' ಎಂದು ಬಹಳವಾಗಿ ಬೇಡಿಕೊಂಡರು; ಆದರೆ ಅದಕ್ಕೆ ಮಹಾರಾಜರು ಒಪ್ಪಿಕೊಳ್ಳಲಿಲ್ಲ. ಅವರು ಕೃತಜ್ಞತೆಯಿಂದ—''ನಮ್ಮ ಪ್ರಿಯ ಸರದಾರರೇ, ನನ್ನ ವಿಷಯವಾಗಿ ಇಷ್ಟು ಜನರು ಪ್ರಾಣವನ್ನರ್ಪಿಸಲು ಸಿದ್ಧರಾದದ್ದನ್ನು ನೋಡಿ ನನಗೆ ಬಹಳ ಸಮಾಧಾನ ವಾಗುತ್ತದೆ. ನೀವೆಲ್ಲರೂ ನನ್ನ ಮೇಲೆ ಅನಿರ್ವಾಚ್ಯವಾದ ಭಕ್ತಿಯನ್ನಿಟ್ಟು ಈವರೆಗೆ ಸಹಾಯ ಮಾಡುತ್ತ ಬಂದದ್ದರಿಂದಲೇ ಸ್ವರಾಜ್ಯದ ಸ್ಥಾಪನೆಯಾಗಿ ಅದು ಇಷ್ಟು ಬೆಳೆದಿರುತ್ತದೆ. ಕೆಲವು ಕೆಲಸಗಳು ನಾವೇ ಮಾಡತಕ್ಕವಿರುತ್ತವೆ. ಇಂದಿನ ಕೆಲಸವು ಅಂತಹದೆಂದು ತಿಳಿದು ನೀವು ನನ್ನನ್ನು ಇಂದು ಭೆಟ್ಟಿಗೆ ಹೋಗಗೊಡಿರಿ. ಅಂಥ ಅನಿಷ್ಟ ಪ್ರಸಂಗವು ಒದಗಿದರೆ, ಸಂಭಾಜಿ ಯನ್ನು ಪಟ್ಟಕ್ಕೆ ಕುಳ್ಳಿರಿಸಿ ನಾನಿರುವೆನೆಂದು ತಿಳಿದು ನೀವೆಲ್ಲರೂ ಕೂಡಿ ಸ್ವರಾಜ್ಯವನ್ನು ರಕ್ಷಿಸಿರೆಂದರಾಯಿತು! ಹೋಗಿರಿ, ಇಂದು ನಾನೇ ಖಾನನನ್ನು ಕಾಣಲಿಕ್ಕೆ ಹೋಗುವೆನು. ಗೊತ್ತಾದಂತೆ ಕೆಲಸವನ್ನು ಮಾಡಲೇಬೇಕು.''

ಈ ಮೇರೆಗೆ ನುಡಿದು ಮಹಾರಾಜರು ಅಂತಗೃಹಕ್ಕೆ ಹೋಗಿ ಸ್ನಾನಮಾಡಿ ಶ್ರೀ ಭವಾನಿಯ ಸಂಬಂಧದ ತಮ್ಮ ನಿತ್ಯ ಕರ್ಮಗಳನ್ನು ತೀರಿಸಿಕೊಂಡರು. ಅಂದು ಉಪವಾಸ ಮಾಡಬೇಕೆಂದು ಅವರು ನಿಶ್ಚಯಿಸಿದ್ದರಿಂದ, ಊಟ–ಉಡಿಗೆಗಳನ್ನೇನೂ ಮಾಡುವಹಾಗಿದ್ದಿಲ್ಲ. ಅಷ್ಟರಲ್ಲಿ ತಾನಾಜಿಯು ಬಂದನೆಂಬ ಸುದ್ದಿಯು ಬರಲು, ಅವರಿಗೆ ಸಮಾಧಾನವಾಯಿತು. ಅವರು ಆತನನ್ನು ಒಳಗೆ ಕರಿಸಿಕೊಂಡರು. ಅವರಿಬ್ಬರ ಮಾತುಕಥೆಗಳಾದವು. ಕೂಡಲೆ ಮಹಾರಾಜರು ಆತನಿಗೆ ಹುಜರೆಯ ಪೋಷಾಕು ಹಾಕಿಕೊಂಡು ಬಾರೆಂದು ಹೇಳಿ, ತಾವು ಪೋಷಾಕು ಹಾಕಿಕೊಳ್ಳಲಿಕ್ಕೆ ಹೋದರು. ಅವರು ಮೊದಲು ಸುರವರಿಯ ಇಜಾರವನ್ನು ಏರಿಸಿ, ಮೈಯಲ್ಲಿ ಸರಪಳಿಯದೊಂದು ಚಿಲಕತ್ತನ್ನು ಹಾಕಿಕೊಂಡು, ಅದರ ಮೇಲೆ ಸಾಧಾರಣ ಪ್ರತಿಯೊಂದು ಬಗಲಕಸಿಯ ಅಂಗಿಯನ್ನು ತೊಟ್ಟುಕೊಂಡರು; ಬಳಿಕ ಅದರ ಮೇಲೆ ತಾವು ನಿತ್ಯದಲ್ಲಿ ಹಾಕಿಕೊಳ್ಳುವ ಉದ್ದಂಗಿಯನ್ನು ಹಾಕಿಕೊಂಡರು; ಬಳಿಕ ಅವರು ತಲೆಗೆ ಶಿರಸ್ತ್ರಾಣವನ್ನು ಅದು ಎಷ್ಟು ಮಾತ್ರವೂ ಕಾಣಿಸದಂತೆ ಅದರ ಮೇಲೆ ಮುಂಡಾಸವನ್ನು ಸುತ್ತಿಕೊಂಡರು. ಅವರು ಬಲಗೈಯ ಅಂಗಿಯ ತೋಳಿನಲ್ಲಿ ಒಂದು ಕರಾರಿಯನ್ನು ಬಚ್ಚಿಟ್ಟುಕೊಂಡದ್ದಲ್ಲದೆ, ಎಡಗೈಯ ಬೆರಳುಗಳಿಗೆ ಹುಲಿಯುಗುರುಗಳನ್ನು ಹಾಕಿಕೊಂಡರು. ಇಷ್ಟೆಲ್ಲ ಸಿದ್ಧತೆಯಾದ ಮೇಲೆ ಸವಾರಿಯು ಭವಾನಿಯ ದರ್ಶನಕ್ಕೆ ಹೊರಟಿತು. ಅವರು ಅಂಬಾಬಾಯಿಯ ದರ್ಶನಮಾಡಿ ಕೊಂಡು ಮಂಟಪದ ಕಡೆಗೆ ಹೋಗಬೇಕೆಂದು ಗುಡಿಯನ್ನು ಹೊಕ್ಕರು. ಅಲ್ಲಿ ಬಹಳ ಹೊತ್ತಿನಿಂದ ಜೀಜಾಬಾಯಿಯವರು ಬಾಲಕನಾದ ಸಂಭಾಜಿಯೊಡನೆ ಜಪಮಾಡುತ್ತ ಕುಳಿತುಕೊಂಡಿದ್ದರು. ತಮ್ಮ ಮಗನಿಗೆ ಸಂಕಟ ಒದಗಿರಲು, ತಾವು ಭವಾನೀಮಾತೆಯ ಚರಣಗಳ ಮೇಲೆ ಮಸ್ತಕವಿಟ್ಟು ಪ್ರಾರ್ಥಿಸಿದರೆ, ಆ ಲೋಕಮಾತೆಯು ಮಗನ ಸಂಕಟವನ್ನು ದೂರಮಾಡುವಳೆಂದು ಅವರು ದೃಢವಾಗಿ ನಂಬಿದ್ದರು. ಅವರು ತಮ್ಮ ಮೊಮ್ಮಗನಾದ ಸಂಭಾಜಿಯ ಕೈಯಿಂದ ''ಜಯಭವಾನಿ ಜಯಭವಾನಿ'' ಎಂದು ಜಪ ಮಾಡಿಸುತ್ತಿದ್ದರು. ಸಂಭಾಜಿಯು ತೀರ ಚಿಕ್ಕವನು. ಆತನಿಗೆ ಅದೇ ಎರಡು ವರ್ಷಗಳು ತುಂಬುತ್ತ ಬಂದಿದ್ದವು. ಆತನು ''ಭವಾನಿ'' ''ಅಂಬಾ'' ''ಆಯಿ'' ''ಮಹಾರಾಜ'' ಎಂಬ ಶಬ್ದಗಳನ್ನು ಅದೇ ತೊದಲು ನುಡಿಗಳಿಂದ ನುಡಿಯಹತ್ತಿದ್ದನು. ಅಜ್ಜಿಯಲ್ಲಿ ಆತನ ಭಕ್ತಿಯು ವಿಶೇಷ. ಆದ್ದರಿಂದ ಆಕೆಯು ಹೇಳಿದಂತೆ ಕೇಳಲು ಆತನು ಬಳ್ಳೇ ಉತ್ಸಾಹಪಡುತ್ತಿದ್ದನು. ತಾಯಿಯನ್ನೂ, ಮಗ ಸಂಭಾಜಿಯನ್ನೂ ನೋಡಿ ಮಹಾರಾಜರ ಕಂಠವು ಬಿಗಿಯಿತು. ಅವರು ಜಗದಂಬೆಯನ್ನು ಸಾಷ್ಟಾಂಗವಾಗಿ ವಂದಿಸಿದರು. ಬಳಿಕ ತಮ್ಮ ಜನನಿಯ ಚರಣಗಳ ಮೇಲೆ ಮಸ್ತಕವನ್ನಿಟ್ಟು, ಸಂಭಾಜಿಯ ಗದ್ದವನ್ನು ಹಿಡಿದು ಆತನನ್ನು ಪ್ರೇಮಾರ್ದ್ರದೃಷ್ಟಿ ಗಳಿಂದ ನೋಡಿದರು. ಆ ಮೇಲೆ ಅವರು ಮಾತೃಶ್ರೀಯವರನ್ನು ಕುರಿತು ''ಅವ್ವಾ, ನಾನು ಇನ್ನು ಬರುತ್ತೇನೆ. ತಿರುಗಿ ಬಂದರೆ ನೆಟ್ಟಗಾಯಿತು, ಇಲ್ಲದಿದ್ದರೆ ನನ್ನ ಸ್ಥಳದಲ್ಲಿ ಈ ಸಂಭಾಜಿಯು ನಿನಗೆ ಇರುತ್ತಾನೆ'' ಎಂದು ನುಡಿದರು. ಅದನ್ನು ಕೇಳಿ ಜೀಜಾಬಾಯಿಯವರ ಅವಸ್ಥೆಯು ಏನಾಗಿರಬಹುದೆಂಬದನ್ನು ವಾಚಕರೇ ತರ್ಕಿಸತಕ್ಕದ್ದು. ಅದನ್ನು ವರ್ಣಿಸುವ

ಯೋಗ್ಯತೆಯು ನಮ್ಮ ಲೇಖನಿಯಲ್ಲಿ ಇಲ್ಲ. ಅವರ ಕಣ್ಣುಗಳೊಳಗಿಂದ ಒಂದೇಸವನೆ ಅಶ್ರುಧಾರೆಗಳು ಸುರಿಯುತ್ತಲಿದ್ದವು; ಆದರೆ ಅವರು ಅಶ್ರುಗಳನ್ನು ಒರಿಸಿಕೊಂಡು ಸದ್ಗದಿತ ಕಂಠದಿಂದ ಮಹಾರಾಜರನ್ನು ಕುರಿತು—"ಶಿವಬಾ, ನೀನು ಎಂದಿನಂತೆ ಸಮರಾಂಗಣದಲ್ಲಿ ಶತ್ರುವಿಗೆ ಎದುರಾಗಿ ಮೈಗೆ ಮೈಕೊಟ್ಟು ಯುದ್ಧಮಾಡಲಿಕ್ಕೆ ಹೋಗುತ್ತಿದ್ದರೆ, ನಾನು ಎಷ್ಟು ಮಾತ್ರವೂ ಕಣ್ಣೀರು ಹಾಕುತ್ತಿದ್ದಿಲ್ಲ; ಆದರೆ ಆ ವಿಶ್ವಾಸಘಾತಕಿಯಾದ ಶತ್ರುವು ಏನು ಮಾಡ್ಯಾನು, ಯಾವ ಕುಟಿಲತಂತ್ರವನ್ನು ಒಡ್ಡಿಯಾನು ಎಂಬುದನ್ನು ಹೇಳಲಾಗುವದಿಲ್ಲ. ಆದ್ದರಿಂದ ನನಗೆ ಬಹಳ ಅಂಜಿಕೆ ಬರುತ್ತದೆ; ಇನ್ನು ಜಗದಂಬೆಯ ದೃಷ್ಟಾಂತವಾಗಿರುವದ ರಿಂದಲೂ, ಶ್ರೀ ಗುರು ಪ್ರಸಾದವು ದೊರೆತಿರುವದರಿಂದಲೂ ಯಾವ ಚಿಂತೆಮಾಡುವ ಕಾರಣವೂ ಇಲ್ಲ; ಆದರೆ ಶಿವಬಾ, ನಾನು ನಿನ್ನ ಹಡೆದ ತಾಯಿಯಲ್ಲವೆ? ನಿನ್ನನ್ನು ಒಂಬತ್ತು ತಿಂಗಳು ಹೊತ್ತಿರುವೆನಲ್ಲವೇ? ಅಂದಬಳಿಕ ನಿನ್ನ ವಿಷಯದ ನನ್ನ ಮೋಹವು ಹ್ಯಾಗೆ ದೂರವಾದೀತು ಹೇಳು! ಖಾನನು ಮಹಾಬಲಿಷ್ಠನು, ನೀನೊಬ್ಬನೇ ಆತನನ್ನು ಕಾಣಲಿಕ್ಕೆ ಹೋಗುವೆಯಾ? ಆದರೆ ಸಂಗಡ ಒಬ್ಬರನ್ನು ಕರಕೊಂಡು ಹೋಗುವ ಮಾತು ಇರುವದಷ್ಟೇ, ಕರಕೊಂಡು ಹೋಗುವದಾದರೆ ಆ ತಾನಾಜಿಯನ್ನು ಕರಕೊಂಡು ಹೋಗು, ಅವನೇ....."

ತಾಯಿಯ ಈ ಮಾತುಗಳನ್ನು ಕೇಳಿ ಮಹಾರಾಜರ ಅಂತಃಕರಣವು ಅತ್ಯಂತ ವ್ಯಥಿತವಾಗಿತ್ತು; ಆದರೆ ತಾನಾಜಿಯ ವಿಷಯವಾಗಿ ತನ್ನ ತಾಯಿಯಲ್ಲಿ ವಾಸಿಸುತ್ತಿದ್ದ ವಿಶ್ವಾಸ ವನ್ನು ನೋಡಿ ಅವರಿಗೆ ಸ್ವಲ್ಪ ಮೋಜು ಆಯಿತು. ಅವರು ತಾಯಿಗೆ—"ಅವ್ವಾ, ನನ್ನ ಆ ಬಾಲಮಿತ್ರನನ್ನಲ್ಲದೆ ಅಂಥ ಕಠಿಣ ಪ್ರಸಂಗದಲ್ಲಿ ನಾನು ಬೇರೆ ಯಾರನ್ನೂ ಕರಕೊಂಡು ಹೋದೇನು ಹೇಳು? ಆತನನ್ನೇ ಸಂಗಡ ಕರಕೊಂಡಿರುತ್ತೇನೆ. ಖಾನನು ಮೋಸ ಮಾಡುವದೇನೋ ನಿಶ್ಚಯವು; ಆದರೆ ಯಾವ ಬಗೆಯಿಂದ ಮೋಸ ಮಾಡುವನೆಂಬುದು ಮಾತ್ರ ತಿಳಿದಿರುವದಿಲ್ಲ. ಈಗ ಅದು ತಿಳಿಯುವ ಅವಶ್ಯವೂ ಇಲ್ಲ, ಪ್ರಸಂಗ ಬಂದಾಗ ತಕ್ಕ ಬುದ್ಧಿಯನ್ನು ಕೊಡುವವಳು ಅಂಬಾಬಾಯಿ ಇರುವಳು!" ಎಂದು ನುಡಿಯುತ್ತಿರಲು, ಭೆಟ್ಟಿಯ ಮಂಟಪದ ಕಡೆಯಿಂದ—"ಖಾನನು ಮಂಟಪದಲ್ಲಿ ಯಾವಾಗೋ ಬಂದು ಕುಳಿತಿರುತ್ತಾನೆ, ತಮ್ಮ ಹಾದಿಯನ್ನು ನೋಡುತ್ತಿರುವನು" ಎಂಬ ಸುದ್ದಿಯು ಬಂದಿತು. ಕೂಡಲೆ ಮಹಾರಾಜರು ಹೊರಡುತ್ತಿರಲು, ಅಷ್ಟರಲ್ಲಿ ಮತ್ತೊಬ್ಬನು ಮಹಾರಾಜರನ್ನು ಕರೆಯಲು ಬಂದನು. ಆಗ ಮಹಾರಾಜರು ಪುನಃ ಜನನಿಯ ಚರಣಗಳ ಮೇಲೆ ಮಸ್ತಕವನ್ನಿಟ್ಟರು. ಅಷ್ಟರಲ್ಲಿ ತಾನಾಜಿಯು ಅಲ್ಲಿಗೆ ಬಂದನು. ಆತನು ಶೀರ ಹುಜರೆಯಂತೆ ಪೋಷಾಕನ್ನು ಹಾಕಿಕೊಂಡಿದ್ದನು. ಆತನ ಮೊಣಕಾಲತನಕ ಇದ್ದ ಚಣ್ಣ, ಮೇಲೆ ಟೊಂಕದ ಕೆಳಗೆ ಬರುವಂಥದೊಂದು ಕಂಠಿಕಮಾನಿನ ಅಂಗಿ, ಟೊಂಕದಲ್ಲಿ ಪಟ್ಟಿಗೆಯ ಸಿಕ್ಕಿಸಿಕೊಂಡಿರುವ ಎರಡು ಖಡ್ಗಗಳು; ತಲೆಗೆ ಹಾಕಿಕೊಂಡಿದ್ದ ಒಂದು ಕೆಂದು ಬಣ್ಣದ ಮುಂಡಾಸ ಇವನ್ನೆಲ್ಲ ನೋಡಿ ಜೀಜಾಬಾಯಿಯವರಿಗೆ ಸ್ವಲ್ಪ ನಗೆ ಬಂದಿತು. ಅವರು ತಾನಾಜಿಗೆ—"ಯಾಕೆ ತಾನಬಾ, ಇಂದು ನೀವು ಈ ಹುಜರೆಯ ವೇಷದಿಂದ ಹೊರಟಿರು ವಿರೆಂಬಂತೆ ಕಾಣುತ್ತದೆ!

ಸೋಗು ಹಾಕಿಕೊಂಡು ಮಂದಿಯ ಹೊಟ್ಟೆಯಲ್ಲಿ ಸೇರಿ ಬೆನ್ನಲ್ಲಿ ಬಿರಿಯುವ ಕಲೆಯು ನಿನಗೆ ಚನ್ನಾಗಿ ಸಾಧಿಸಿರುವದು ಬಿಡು! ಇರಲಿ, ನೀವಿಬ್ಬರು ಜೋಕೆ, ಠಕ್ಕನಿಗೆ ಮಹಾ ಠಕ್ಕರಾಗಿ ನಡೆದು ಇಬ್ಬರೂ ಸುಖರೂಪದಿಂದ ಪಾರಾಗಿ ಬರ್ರಿ'' ಎಂದು ನುಡಿಯುತ್ತಿರುವಷ್ಟರಲ್ಲಿ ''ಖಾನನು ಸದರಿನ ಮೇಲೆ ಕುಳಿತಿರುವನೆಂ''ದು, ಆಳಿನ ಮೇಲೆ ಆಳುಗಳು ಕರೆಯಲಿಕ್ಕೆ ಬಂದವು. ಆಗ ತಾನಾಜಿಯು ಗಟ್ಟಿಯಾಗಿ ನಕ್ಕು—''ಆಯಿಸಾಹೇಬ, ನೀವು ಚಿಂತೆಯನ್ನು ಮಾಡಬೇಡಿರಿ. ಈ ಮೂವತ್ತೆರಡು ಹಲ್ಲಿನ ಟಗರು—''ನನ್ನನ್ನು ಜಗದಂಬೆಗೆ ಬಲಿಕೊಡಿರಿ, ಬಲಿಕೊಡಿರಿ, ಎಂದು ಒಂದೇಸವನೆ ಒದರಹತ್ತಿರುತ್ತದೆ. ಜಗದಂಬೆಯ ಚರಣಗಳ ಮೇಲೆ ತನ್ನ ರುಂಡವು ಯಾವಾಗ ಬಿದ್ದೀತೆನ್ನುವ ಹಾಗೆ ಅದಕ್ಕೆ ಆಗಿದೆಯನ್ನುವಂತೆ ತೋರುತ್ತದೆ. ಇನ್ನು ನಮಗೆ ಹೊರಡಲು ಅಪ್ಪಣೆ ಕೊಡಿರೆಂದರಾಯಿತು. ಜಗದಂಬೆಗೆ ಇಂಥ ಬಲಿಯು ದೊರೆತಬಳಿಕ ಮತ್ತೇನು ಬೇಕು?''

ತಾನಾಜಿಯ ಈ ಮಾತುಗಳಿಂದ ಎಲ್ಲರ ಅಸಮಾಧಾನವೂ ಖಿನ್ನತೆಯೂ ದೂರ ಪಾದವು. ಕೂಡಲೆ ಜೀಜಾಬಾಯಿಯವರು—''ಬಾಲಕರಿರಾ, ಸಂತೋಷದಿಂದ ಹೋಗಿರಿ, ನಿಶ್ಶಂಕೆಯಿಂದ ಹೋಗಿರಿ; ನಿರ್ಭಯದಿಂದ ಹೋಗಿರಿ. ಅಂಬಾಭವಾನಿಯ ವರದಹಸ್ತವು ನಿಮ್ಮ ಮಸ್ತಕದ ಮೇಲಿರುವದರಿಂದ ಯಾವ ಬಗೆಯ ಅಶುಭ ಪ್ರಸಂಗವೂ ಒದಗಲಾರದು. ಹಿಡಿಯಿರಿ, ಯಶಸ್ಸನ್ನು ಸಂಪಾದಿಸಿಕೊಡುವ ನನ್ನ ಕೈಯೊಳಗಿನ ಈ ತಾಂಬೂಲವನ್ನು ತಕ್ಕೊಳ್ಳಿರಿ; ಮತ್ತು ಹಿಂದಕ್ಕೆ ನನ್ನ ಬಾಲಕನಾದ ಸಂಭಾಜಿಯನ್ನು ಈ ಮೋಸಗಾರ ಖಾನನು ಮೋಸದಿಂದ ಕೊಂದದ್ದರ ಸೇಡನ್ನು ತೀರಿಸಿಕೊಳ್ಳಿರಿ. ಹೋಗಿರಿ, ಭವಾನೀಮಾತೆಗೆ ಒಮ್ಮೆ ನಮಸ್ಕಾರಮಾಡಿ ಹಾದಿಯ ಹಿಡಿಯಿರಿ'' ಎಂದು ನುಡಿಯಲು, ಮಹಾರಾಜರೂ, ತಾನಾಜಿಯೂ ಕೂಡಲೆ ಅಂಬಾಭವಾನಿಗೆ ಸಾಷ್ಟಾಂಗವಾಗಿ ಎರಗಿದರು. ಮಹಾರಾಜರು ಕೈ ಜೋಡಿಸಿ ಜಗದಂಬೆಗೆ—''ಮಾತೇ, ಜಗದಂಬೇ, ನಿನ್ನ ಕೃಪೆಯು ಸಂಪೂರ್ಣವಾಗಿ ಇರಲಿ. ನಿನ್ನ ಮೂರ್ತಿಯನ್ನು ಅಪಮಾನಗೊಳಿಸಿದ ನೀಚನ ರುಂಡವನ್ನು ಚಂಡಾಡಿ ನಿನ್ನ ಚರಣಕ್ಕರ್ಪಿಸಿದ ಹೊರತು ನಿನಗೆ ಸಮಾಧಾನವು ಹ್ಯಾಗಾಗಬೇಕು? ಆದರೆ ನೀನೇ ನಮ್ಮ ಕೈಯಿಂದ ಆತನ ಶಾಸನ ಮಾಡಿಸು. ನಿನ್ನ ಕೃಪೆಯಿಲ್ಲದೆ ನಮ್ಮ ಕೈಯಿಂದ ಯಾವ ಕಾರ್ಯವು ಸಾಧಿಸುವದು? ಜಯಜಗದಂಬೇ, ಕರುಣಿಸು'' ಎಂದು ನುಡಿದು ಮಹಾರಾಜರೂ, ಅವರ ಆ ಬಾಲ ಸ್ನೇಹಿತನೂ ಅಲ್ಲಿಂದ ಹೊರಟುಹೋದರು. ಇತ್ತ ಖಾನನು, ಒಂದು ಗಳಿಗೆ ಹಾದಿಯ ನೋಡಿದನು, ಎರಡು ಗಳಿಗೆ ಹಾದಿಯ ನೋಡಿದನು, ಮೂರು ಗಳಿಗೆಯಾದರೂ ಮಹಾರಾಜರ ಸುದ್ದಿಯೇ ಇಲ್ಲ, ಆಗ ಆತನು ಮತ್ತೆ ಆಳನ್ನು ಕಳಿಸಿದನು.

ಮೇಲೆ ಹೇಳಿದಂತೆ ಮಹಾರಾಜರು ಹೊರಟು ತಾನಾಜಿಯೊಡನೆ ಮಂಟಪದ ಕಡೆಗೆ ನಡೆದರು. ಮಹಾರಾಜರು ಬಂದರೆಂಬದನ್ನು ಕೇಳಿದ ಕೂಡಲೆ ಕೃಷ್ಣಾಜಿಭಾಸ್ಕರನೂ, ಗೋಪೀನಾಥಪಂತನೂ ಸನ್ಮಾನಾರ್ಥವಾಗಿ ಅವರ ಎದುರಿಗೆ ಹೋದರು. ಆಗ ಶಿವಾಜಿ

ಮಹಾರಾಜರೂ ಬ್ರಾಹ್ಮಣರಿಗೆ ನಮಸ್ಕಾರ ಮಾಡಿದರು. ಖಾನನೂ ತಾನು ಕುಳಿತ ಸ್ಥಳದಿಂದ ಎದ್ದು ನಾಲ್ಕು ಹೆಜ್ಜೆ ಮುಂದಕ್ಕೆ ಬಂದನು. ತಾನಾಜಿಯ ಕಡೆಗೆ ಖಾನನ ದೃಷ್ಟಿಯು ಹೋಯಿತು. ತಾನಾಜಿಯ ಟೊಂಕಟದಲ್ಲಿ ಅಲೆದಾಡುತ್ತಿರುವ ಎರಡು ಖಡ್ಗಗಳನ್ನು ಆತನು ನೋಡಿದನು; ಆದರೆ ಮರಾಟರಲ್ಲಿ ಹೀಗೆ ಜೋಡು ಖಡ್ಗಗಳನ್ನು ಧರಿಸುವ ಪರಿಪಾಠವಿದ್ದದ್ದ ರಿಂದಾಗಲಿ, ಇಂಥದಕ್ಕೆಲ್ಲ ನಾನು ಸೊಪ್ಪು ಹಾಕುವವನಲ್ಲೆಂಬ ದಿಮಾಕನ್ನು ತೋರಿಸುವದಕ್ಕಾಗಿ ಯಾಗಲಿ ಖಾನನು ಜೋಡು ಖಡ್ಗಗಳನ್ನು ಧರಿಸಿದ ಬಗ್ಗೆ ತಕರಾರನ್ನು ಮಾಡಲಿಲ್ಲ. ತಾನಾಜಿಯು ಸೈದಾಬಂಡನಿಂದ ಸ್ವಲ್ಪ ದೂರದಲ್ಲಿ ನಿಂತುಕೊಂಡನು. ಖಾನನ, ಹಾಗು ಶಿವಾಜಿಯ ಭೆಟ್ಟಿಯು ಹಳೆಯ ಪದ್ಧತಿಯಂತೆ ಆಯಿತು. ಆದರೆ ಭೆಟ್ಟಿಯ ಕಾಲದಲ್ಲಿ ಸಹ ಘಾತವಾಗಬಹುದೆಂದು ಮಹಾರಾಜರು ಮೊದಲೇ ತರ್ಕಿಸಿದ್ದರು; ಆದ್ದರಿಂದ ಅವರು ಒಳ್ಳೇ ಜಾಗರೂಕರಾಗಿದ್ದರು. ಖಾನನು ಬಹು ಎತ್ತರ, ಭೃಷ್ಟಪುಷ್ಟ; ಮಹಾರಾಜರು ಗಿಡ್ಡ, ಪುಡಿ ಆಳು. ಖಾನನು ಆಲಿಂಗನ ಕೊಡುವದಕ್ಕಾಗಿ ಎರಡೂ ಕೈಗಳನ್ನು ಮುಂದಕ್ಕೆ ಚಾಚಿರುವಾಗ, ಮಹಾರಾಜರು ಮುಂದಕ್ಕೆ ಸಾಗಿಹೋಗಲು, ಖಾನನು ಅವರ ತಲೆಯನ್ನು ಬಗಲಲ್ಲಿ ಹಿಚಿಕಿಹಿಡಿದು, ತನ್ನ ಕೈಯೊಳಗಿನ ಖಡ್ಗದಿಂದ ಮಹಾರಾಜರ ತಲೆಗೆ ಕಸುವಿನಿಂದ ಹೊಡೆದನು; ಆದರೆ ಖಡ್ಗದ ಪೆಟ್ಟು ಮಹಾರಾಜರ ಶಿರಸ್ತ್ರಾಣಕ್ಕೆ ತಗಲಿ, ''ಝಣ ಝಣಣಣ'' ಎಂದು ಸಪ್ಪಳವಾಯಿತು. ಆಗ ಮಹಾರಾಜರ ಮಸ್ತಕದ ಸಂರಕ್ಷಣವು ಶಿರಸ್ತ್ರಾಣದಿಂದ ಬಹು ಚನ್ನಾಗಿ ಆಯಿತು. ಇಷ್ಟೆಲ್ಲ ಒಂದು ಕ್ಷಣದಲ್ಲಿ ಮಿಂಚಿಹೋಯಿತು. ಎರಡನೆಯ ಕ್ಷಣದಲ್ಲಿ ಖಾನನು ಚಿವುಗುಟ್ಟುತ್ತ ''ಯಾ ಅಲ್ಲಾ! ದಗಾದಗಾ'' ಎಂದು ಒದರುತ್ತ ನೆಲಕ್ಕೆ ಉರುಳಿದನು. ಮಹಾರಾಜರು ತಮ್ಮ ಕುತ್ತಿಗೆಯನ್ನು ಖಾನನು ಬಗಲಲ್ಲಿ ಹಿಡಿದು ಹಿಚಕಹತ್ತಿದ ಕೂಡಲೆ ಅವರು—''ದುಷ್ಟಾ, ವಿಶ್ವಾಸಘಾತಕಾ'' ಎಂದು ಸಂತಾಪದಿಂದ ನುಡಿದು, ತಮ್ಮ ಎಡಗೈಯೊಳಗಿನ ಹುಲಿಯುಗುರುಗಳನ್ನು ಅವನ ಹೊಟ್ಟೆಯಲ್ಲಿ ಇರಿದು ಅವನ ಕರುಳು ಗಳನ್ನು ಹೊರಗೆ ಹಿರಿದರು! ತಾನು ಮೊದಲು ಮೋಸ ಮಾಡಹೋಗಿ, ಅದು ಸಾಧಿಸದಿರು ವಾಗ ಮಹಾರಾಜರು ತಕ್ಕ ಶಾಸನಮಾಡಲು ''ದಗಾ! ದಗಾ'' ಎಂದು ಒದರಹತ್ತಿದ್ದ ಖಾನನು ಮೇಲೆ ಹೇಳಿದಂತೆ ನೆಲಕ್ಕೆ ಉರುಳಲು, ಮಹಾರಾಜರು, ಅವನ ಕೈಯೊಳಗಿನ ಖಡ್ಗವನ್ನು ತಕ್ಕೊಂಡು ಮಂಟಪದಿಂದ ಹೊರಟು ಬಂದರು. ಇತ್ತ ತಾನಾಜಿಯು ಸೈದಾಬಂಡನಿಗೆ— ''ನೀನು ಶರಣುಬಾ, ಜೀವದಾನ ಕೊಡುವೆನು'', ಎಂದು ಹೇಳಿದನು; ಆದರೆ ಆ ಶೂರ ಸೈಯದನು ಕೇಳದೆ ಯುದ್ಧಕ್ಕೆ ನಿಲ್ಲಲು, ಅವರಿಬ್ಬರು ಯುದ್ಧವು ನಡೆಯಿತು. ಸ್ವಲ್ಪ ಹೊತ್ತಿನಲ್ಲಿಯೇ ಸೈದಾಬಂಡನನ್ನು ತಾನಾಜಿಯು ನೆಲಕ್ಕುರುಳಿಸಿದನು. ಮಂಟಪದಲ್ಲಿ ಆರೇ ಜನರಿದ್ದರು. ಖಾನನು, ಖಾನನ ವಕೀಲನು, ಸೈದಾಬಂಡನು, ಇತ್ತ ಮಹಾರಾಜರು, ಮಹಾರಾಜರ ವಕೀಲನು, ತಾನಾಜಿಯು. ಖಾನನು ನೆಲಕ್ಕುರುಳಿದ ಕೂಡಲೆ ಆತನ ಬೋವಿಗಳು ಮೇಣೆಯನ್ನು ತಂದು ಅದರಲ್ಲಿ ಆತನನ್ನು ಹಾಕಿಕೊಂಡು ಹೋಗುತ್ತಲಿದ್ದರು.

ಖಾನನ ಪ್ರಾಣವು ಇನ್ನೂ ಹೋಗಿದ್ದಿಲ್ಲ. ಅಷ್ಟರಲ್ಲಿ ಖಂಡೋಜಿಯೇ ಮೊದಲಾದ ಮಹಾರಾಜರ ಸರದಾರರು ಅಲ್ಲಿಗೆ ಬಂದು ಮೇಣೆ ಯನ್ನು ಮುತ್ತಿದರು. ಬೋವಿಗಳು ಪ್ರಾಣಭಯದಿಂದ ಮೇಣೆಯನ್ನು ಚಲ್ಲಿಕೊಟ್ಟು ಓಡಿಹೋಗಲು, ಖಂಡೋಜಿಯು ಖಾನನ ಶಿರಸ್ಸನ್ನು ತುಂಡರಿಸಿ, ಬರ್ಚಿಯ ತುದಿಗೆ ಚುಚ್ಚಿಕೊಂಡುಹೋಗಿ ಪ್ರತಾಪಗಡದ ಬಾಗಿಲಿಗೆ ಅದನ್ನು ಕಟ್ಟಿದನು.

ಖಾನನು ಮೋಸ ಮಾಡಹೋಗಿ ಅದು ಸಾಧಿಸದೆ ಮಹಾರಾಜರಿಂದ ಆತನು ಮರಣಹೊಂದಿದ ಪಕ್ಷದಲ್ಲಿ ಅದನ್ನು ಸುತ್ತುಮುತ್ತಲಿನ ಸರದಾರರಿಗೆ ತಿಳಿಸುವ ಸಾಧನವೆಂದರೆ, ದುರ್ಗದಮೇಲಿನ ಐದು ತೋಫುಗಳನ್ನು ಹಾರಿಸುವದು. ಅದರಂತೆ ಐದು ತೋಫುಗಳನ್ನು ಹಾರಿಸಿದ ಕೂಡಲೇ, ಅರಣ್ಯದಲ್ಲಿ ಅಲ್ಲಲ್ಲಿ ಅಡಗಿಕೊಂಡು ಕುಳಿತಿದ್ದ ಸರದಾರರು ತಮ್ಮ ತಮ್ಮ ಸೈನ್ಯಗಳೊಡನೆ ಖಾನನ ಸೈನ್ಯದಮೇಲೆ ಆಯಾ ಸ್ಥಳದಲ್ಲಿ ದುಮುಕಿ, ಅದನ್ನು ತುಂಡರಿಸಹತ್ತಿದರು. ತಮ್ಮ ಖಾನರು ನಿಶ್ಚಯವಾಗಿ, ಶಿವಾಜಿಯನ್ನು ಕೊಲ್ಲುವರು, ಕೂಡಲೇ ನಾವು ದುರ್ಗವನ್ನು ತಕ್ಕೊಳ್ಳೋಣ, ಎಂದು ಎದುರು ನೋಡುತ್ತಿದ್ದ ಖಾನನ ಸೈನ್ಯದ ಮೇಲೆ ಹೀಗೆ ಒಮ್ಮೆಲೆ ಮರಾಟರು ಬಿದ್ದದ್ದರಿಂದ ಖಾನನ ಸೈನ್ಯದಲ್ಲಿ ಅವ್ಯವಸ್ಥೆಯುಂಟಾಯಿತು. ಅವರು ಬಂದ ದಾರಿಯಿಂದ ಓಡಹತ್ತಿದರು; ಆದರೆ ಹಾದಿಯಲ್ಲಿ ಗಿಡಗಳ ಟೊಂಗೆಗಳನ್ನು ಒಟ್ಟಿದ್ದರಿಂದ ಅವರಿಗೆ ಓಡಿಹೋಗಲಿಕ್ಕೆ ಬರಲೊಲ್ಲದು. ಇತ್ತ ಮರಾಟರು—''ಇವರು ನಮ್ಮ ಮೂರ್ತಿಗಳನ್ನು ಒಡೆದ ನೀಚರು, ನಮ್ಮ ಗುಡಿಗಳನ್ನು ಅಪವಿತ್ರ ಮಾಡಿದ ದುಷ್ಟರು, ನಮ್ಮನ್ನು ಪರಿಪರಿಯಾಗಿ ಪೀಡಿಸಿದ ಅಧಮರು,'' ಎಂದು ಸಿಟ್ಟಿನಿಂದ ನುಡಿಯುತ್ತ ಅವರನ್ನು ಒಂದೇಸವನೆ ತುಂಡರಿಸಹತ್ತಿದರು. ''ಹರಹರಮಹಾದೇವ'' ''ಜಯಭವಾನಿ'' ಎಂಬ ಧ್ವನಿಯು ನಾಲ್ಕೂ ಕಡೆಗೆ ಕೇಳಹತ್ತಿತು. ಈ ಪ್ರಸಂಗದಲ್ಲಿ ಖಾನನ ಬಹುತರ ಯಾವತ್ತೂ ಸೈನ್ಯದ ಸಂಹಾರ ವಾಯಿತು. ವಿಜಾಪುರದ ಪಕ್ಷಪಾತಿಗಳಾದ ಎಷ್ಟೋ ಮರಾಠಾ ಸರದಾರರು ಮಹಾರಾಜರ ಸೆರೆಯಾಳುಗಳಾದರು. ಫಾಜಿಲಖಾನನು ತನ್ನ ತಾಯಿಯನ್ನು–ಹೆಂಡತಿಯನ್ನು ಕಟ್ಟಿಕೊಂಡು ಓಡಿಹೋದನು; ಆತನು ಓಡಿಹೋದನೆನ್ನುವದಕ್ಕಿಂತ ಮರಾಟರೇ ಅವನನ್ನು ಓಡಿಹೋಗಗೊಟ್ಟರೆಂದು ಹೇಳುವದು ಸಯುಕ್ತಿಕವು; ಯಾಕಂದರೆ ಹೆಂಗಸರ ಗೊಡವೆಗೆ ಹೋಗದಂತೆ ಮಹಾರಾಜರ ಕಟ್ಟಪ್ಪಣೆಯಾದ್ದರಿಂದ, ಫಾಜಿಲಖಾನನನ್ನು ಮರಾಟರು ಬುದ್ಧಿಪೂರ್ವಕವಾಗಿ ಬೆನ್ನಟ್ಟಿ ಹೋಗಲಿಲ್ಲ. ಅಫಜುಲಖಾನನ ದಂಡಿನೊಡನೆ ಆದ ಈ ಕದನದಲ್ಲಿ ಮಹಾರಾಜರಿಗೆ 65 ಆನೆಗಳು, 4,000 ಕುದುರೆಗಳು, 12,000 ಒಂಟೆಗಳು, 200 ಅರಿವೆಯ ಗಂಟುಗಳು, 7,00000 ರೋಖ ರೂಪಾಯಿಗಳು ದೊರೆತವು. ಇವುಗಳ ಹೊರತು ಲಕ್ಷಾಂತರ ರೂಪಾಯಿಗಳ ವಸ್ತ್ರ–ವಡವೆಗಳು ಸಿಕ್ಕಿದ್ದು ಬೇರೆಯೆ!

# ಆನಂದ

ಈ ಮೇರೆಗೆ ಮಹಾರಾಜರು ಭಯಂಕರವಾದ ಸಂಕಟದಿಂದ ಮುಕ್ತರಾದ ವರ್ತಮಾನವು ಹಾ ಹಾ ಅನ್ನುವದರೊಳಗಾಗಿ ಪ್ರತಾಪಗಡದ ಮೇಲೆ ಹೋಯಿತು. ದುರ್ಗದೊಳಗಿನ ಜನರೆಲ್ಲ ಚಿಂತಾಕ್ರಾಂತರಾಗಿ, ಮಹಾರಾಜರಿಗೆ ವಿಜಯಪ್ರಾಪ್ತಿಯಾಗಲು ದೇವರನ್ನು ಬೇಡಿ ಕೊಳ್ಳುತ್ತಲಿದ್ದರು. ಜೀಜಾಬಾಯಿಯವರಂತು ಸಂಭಾಜಿಯೊಡನೆ ಅಂಬಾ ಬಾಯಿಯ ಸನ್ನಿಧಿ ಯಲ್ಲಿ ಕುಳಿತವರು ಮೇಲಕ್ಕೆದ್ದಿದ್ದಿಲ್ಲ. ಹೈಮವತಿಯು ಬಂಧಮುಕ್ತಳಾಗಿ ಈ ಮೊದಲೆ ಜೀಜಾಬಾಯಿಯವರ ಬಳಿಯಲ್ಲಿ ಬಂದು ಕುಳಿತುಕೊಂಡಿದ್ದಳು. ಆಕೆಯ ಮುಖದಿಂದಲೇ ಮಗನ ವಿಜಯದ ವರ್ತಮಾನವು ಆ ಜೀಜಾಬಾಯಿಯರಿಗೆ ಗೊತ್ತಾಗಿತ್ತು. ಖಾನನ ಸಂಹಾರವಾಗಿ ಮರಾಟರು ಆತನ ಸೈನ್ಯದ ಮೇಲೆ ಬಿದ್ದಾಗಲೇ ಜಾಧವರಾಯನು ತನ್ನ ಹೆಂಡತಿಯನ್ನು ಕರಕೊಂಡು ಪ್ರತಾಪಗಡದ ಮೇಲೆ ಬಂದಿದ್ದನು. ಮಹಾರಾಜರು ಅಂಬಾಬಾಯಿಯ ದರ್ಶನಕ್ಕಾಗಿ ಬರಲು, ಅವನ ಮೂರ್ತಿಮಂತ ಅಂಬಾಬಾಯಿಯಂತೆ ಇದ್ದ ಜನನಿಯ ದರ್ಶನವೂ ಅವರಿಗೆ ಅಲ್ಲಿಯೇ ಆಯಿತು. ಮಹಾರಾಜರು ತಾನಾಜಿಯೊಡನೆ ಅಂಬಾಬಾಯಿಗೆ ಸಾಷ್ಟಾಂಗವೆರಗಿ, ತಾಯಿಯ ಚರಣಗಳ ಮೇಲೆ ಮಸ್ತಕವನ್ನಿಟ್ಟರು. ಬಳಿಕ ಅವರ ಲಕ್ಷವು ಯೋಗಿನಿಯ ವೇಷಧಾರಿಯಾದ ಹೈಮವತಿಯ ಕಡೆಗೆ ಹೋಯಿತು. ಆಗಿನ ಮೂಕವೃತ್ತಿಯ ಮಹಾರಾಜರ ಮುಖದಲ್ಲಿ ವ್ಯಕ್ತವಾಗಿದ್ದ ಕೃತಜ್ಞತೆಯ ಮುದ್ರೆಯನ್ನು ವಿನಯದಿಂದ ನೋಡಿದ ಹೈಮವತಿಯು, ತನ್ನನ್ನು ಧನ್ಯಳೆಂದು ಭಾವಿಸಿದಳು. ಮಹಾರಾಜರು ತಮ್ಮ ಜನನಿಯನ್ನು ಕುರಿತು—''ಅಮ್ಮಾ ಈ ಹೈಮವತಿಯಂಥ ಪತಿವ್ರತಾ ಸ್ತ್ರೀಯರು ನನ್ನ ಹಿತಚಿಂತನದಲ್ಲಿ ತೊಡಗಿದ್ದರಿಂದಲೇ ನಾನು ಇಂದು ಗಂಡಾಂತರದಿಂದ ಮುಕ್ತನಾಗಿ ದುಷ್ಟರ ಶಾಸನ ಮಾಡಿದೆನು. ಈ ಹೈಮವತೀದೇವಿಯು ನಿನ್ನಂತೆಯೇ ನನಗೆ ಪೂಜ್ಯ ಜನನಿಯಾಗಿದ್ದಾಳೆ. ಆಕೆಯು ನನ್ನ ಜನ್ಮದಾತೃವಾಗಿರುವಳು'' ಎಂದು ಶ್ಲಾಘಿಸಲು, ಜೀಜಾಬಾಯಿಯವರು ಸುರಿಯುವ ಆನಂದಾಶ್ರುಗಳನ್ನು ಒರಿಸಿಕೊಳ್ಳುತ್ತ—''ಬಾಳಾ, ಶಿವಬಾ, ಇಂಥ ಪ್ರತಿವ್ರತಾ ಸ್ತ್ರೀಯರ ಪಾತಿವ್ರತ್ಯದ ಪುಣ್ಯವೂ, ತಾನಾಜಿ, ಜಾಧವ ರಾಯರಂಥ ನಿನ್ನ ಮಿತ್ರರ ಸಹಾಯಸಂಪತ್ತೂ ನಿನ್ನನ್ನು ಉದ್ಧರಿಸಿರುವಲ್ಲಿ ಸಂಶಯವಿಲ್ಲ. ಬಾಳಾ, ತಾನಾಜೀ, ಇತ್ತಬಾ. ರಾಮ–ಲಕ್ಷ್ಮಣರು ರಾವಣನನ್ನು ಕೊಂದು ಕೌಶಲ್ಯಾಮಾತೆಯನ್ನು ನಮಸ್ಕರಿಸಿದಾಗ ಆಕೆಗೆ ಎಷ್ಟು ಆನಂದವಾಗಿರಬಹುದೆಂಬದರ ಅನುಭವವು ಇಂದು ನನಗಾಯಿತು! ಅಂಬಾಬಾಯಿಯು ಹೇಳಿಕೊಳ್ಳುವಂತೆ ಮಾಡಿದ್ದರಿಂದ ಎಲ್ಲ ಚಂದವಾಯಿತು. ಏನಾದರೂ ಅಸ್ವಸ್ಥವಾಗಿದ್ದರೆ, ಎಂಥ ಅಮಂಗಲ ಸ್ಥಿತಿಯು ಒದಗುತ್ತಿತ್ತಲ್ಲ.'' ಎಂದು ನುಡಿಯುತ್ತಿರಲು ಮಹಾರಾಜರು ನಡುವೆ ಬಾಯಿಹಾಕಿ—ಅವ್ವಾ, ಇನ್ನು ಆ ವಿಚಾರವೇತಕ್ಕೆ? ಏನಾದರೂ ಅಸ್ವಸ್ಥವಾಗಿದ್ದರೆ, ಅಂಬಾಬಾಯಿಯು ಯಾರ ಮುಖದಿಂದಾದರೂ ಸ್ವರಾಜ್ಯದ ಸಂರಕ್ಷಣ ವನ್ನು ಮಾಡಿಸುತ್ತಿದ್ದಳು. ಆದರೆ ದೇವಿಯ ಕೃಪೆಯಿಂದಲೂ, ಶ್ರೀ ಸಮರ್ಥರ ಆಶೀರ್ವಾದ

ದಿಂದಲೂ, ನಿಮ್ಮ ಪುಣ್ಯದಿಂದಲೂ, ಈ ಪುಣ್ಯಾತ್ಮರ ಸಹಾಯದಿಂದಲೂ ಕಾರ್ಯವು ಯಥಾಸ್ಥಿತವಾಗಿ ಸಾಧಿಸಿರುತ್ತದೆ. ಇನ್ನು ಆ ಮಾತು ಏತಕ್ಕೆ? ಏಳಿರಿ ಇನ್ನು, ನೀವು ಬಾಯಲ್ಲಿ ನೀರು ಹಾಕಿರುವದಿಲ್ಲ, ಉಪವಾಸವ್ರತವನ್ನು ಮುಗಿಸಿ ಊಟಮಾಡಿರಿ. ಏಳಿರಿ. ಈ ಹೈಮವತಿ ದೇವಿಯನ್ನು ಕರಕೊಂಡು ಹೋಗಿರಿ. ನಿಮ್ಮ ಶಿವಬಾನು ಇಂಥ ಪುಣ್ಯವಂತರ ಋಣದಿಂದ ಎಷ್ಟು ಜನ್ಮಗಳಲ್ಲಿ ಮುಕ್ತನಾಗುವನೋ ಏನೋ! ನಾನೂ ಶ್ರೀಧರಸ್ವಾಮಿಗಳ ದರ್ಶನ ಮಾಡಿಕೊಂಡು ಸ್ನಾನಕ್ಕೆ ಹೋಗುವೆನು.

ಈ ಮೇರೆಗೆ ನುಡಿದು ಮಹಾರಾಜರು ಮೇಲಕ್ಕೆದ್ದು ಹೋಗುತ್ತಿರಲು, ಒಬ್ಬ ಹುಜರೆಯು ಬಂದು—''ಮಹಾರಾಜ, ದುಷ್ಟನ ರುಂಡವನ್ನು ದುರ್ಗದ ಬಾಗಿಲಿಗೆ ಕಟ್ಟಿದೆವು.'' ಎಂದು ನುಡಿಯುತ್ತಿರಲು, ಮಹಾರಾಜರು ಮುಂದೆ ಆತನನ್ನು ಮಾತಾಡಗೊಡದೆ ಸಿಟ್ಟಿನಿಂದ—''ಯಾವನವನು? ಯಾವ ಮೂರ್ಖನು ಈ ನೀಚ ಕೆಲಸವನ್ನು ಮಾಡಿದನು! ಶತ್ರುವು ಮರಣಹೊಂದಿದಬಳಿಕ ಅವನ ಶವವನ್ನು ಅವಮಾನಗೊಳಿಸುವದು ಶೂರರ ಲಕ್ಷಣವಲ್ಲ, ಹಾಗಿದ್ದರೆ ನಾನೇ ಖಾನನ ಶಿರಸ್ಸನ್ನು ತುಂಡರಿಸುತ್ತಿದ್ದಿಲ್ಲವೆ? ನಾನು ಜಾವಳಿಯಿಂದ, ಇಲ್ಲವೆ ನಾಶಿಕದಿಂದ ಒಬ್ಬ ಮುಸಲ್ಮಾನನನ್ನು ಕರೆಸಿ ವಿಧಿಯಂತೆ ಖಾನನ ಶವಕ್ಕೆ ಮಣ್ಣು ಕೊಡಬೇಕೆನ್ನುತ್ತಿರಲು, ಅದಾವನು ಈ ಅಯೋಗ್ಯ ಕೆಲಸವನ್ನು ಮಾಡಿದನು! ಹೋಗು, ತಾನಾಜೀ, ಹೀಗೆಯೇ. ಹೋಗಿ ಆ ರುಂಡವೆಲ್ಲಿರುತ್ತದದನ್ನು ತಕ್ಕೊಂಡು ಹೋಗಿ ಶವದ ಬಳಿಯಲ್ಲಿ ಇಡು; ಒಬ್ಬ ಮುಸಲ್ಮಾನನನ್ನು ಕರಿಸಿ ಮಣ್ಣುಕೊಡುವ ವ್ಯವಸ್ಥೆ ಮಾಡು. ಶವಕ್ಕೆ ಮಣ್ಣು ಕೊಟ್ಟಮೇಲೆಯೇ ನಾನು ಸ್ನಾನಕ್ಕೆ ಹೋಗುತ್ತೇನೆ. ಶಿವಾಜಿಯು ವಿಶ್ವಾಸಘಾತುಕನ ಸಂಗಡ ವಿಶ್ವಾಸಘಾತದಿಂದ ನಡೆದುಕೊಂಡಾನು; ಆದರೆ ಶವದ ಅಪ್ರತಿಷ್ಠೆ ಮಾಡುವಲ್ಲಿ ಆತನು ಎಂದೂ ಆನಂದ ಪಡಲಾರನು. ಹೋಗು, ಎಂದು ಹೇಳಿ ತಾನಾಜಿಯನ್ನು ಕಳಿಸಿಕೊಟ್ಟರು. ತಾನಾಜಿಯು ಅಪ್ಪಣೆಯಂತೆ ಖಾನನ ಶಿರಸ್ಸನ್ನು ಆತನ ಶವದ ಬಳಿಯಲ್ಲಿಟ್ಟು, ಶವದ ಮೇಲೆ ಒಂದು ಹೊಸಶಲ್ಲೆಯನ್ನು ಹೊಚ್ಚಿದನು. ಬಳಿಕ ಜಾವಳಿಯಿಂದ ಒಬ್ಬ ಮುಲ್ಲಾನನ್ನುಕರಿಸಿ, ಮಣ್ಣುಕೊಡುವ ಸಿದ್ಧತೆಯನ್ನು ಮಾಡಿದನು. ಆಮೇಲೆ ಮಹಾರಾಜರು ಬಂದು ಖಾನನ ಮರ್ಯಾದೆಗೆ ತಕ್ಕಂತೆ ಆತನ ಶವಕ್ಕೆ ಮಣ್ಣುಕೊಟ್ಟು, ತಾವು ಶ್ರೀಧರಸ್ವಾಮಿಗಳ ದರ್ಶನವನ್ನು ತಕ್ಕೊಂಡರು. ನಡೆದ ವರ್ತಮಾನವನ್ನೆಲ್ಲ ಮಹಾರಾಜರು ನಿವೇದಿಸಲು, ಅದನ್ನು ಕೇಳಿ ಸ್ವಾಮಿಗಳಿಗೆ ಪರಮಾನಂದವಾಯಿತು. ಅವರು ಮಹಾರಾಜರಿಗೆ ಹೇಳಿ ಸಮರ್ಥರಿಗೆ ಈ ವರ್ತಮಾನವನ್ನು ತಿಳಿಸುವದಕ್ಕಾಗಿ ಒಬ್ಬ ಸವಾರನನ್ನು ಕಳಿಸಿದರು. ಸಮರ್ಥರು ತ್ರಿಕಾಲಜ್ಞರಾಗಿದ್ದರೂ ಲೌಕಿಕಕ್ಕಾಗಿ ವರ್ತಮಾನವನ್ನು ಕಳಿಸುವದು ಯೋಗ್ಯವೆಂದು ಎಲ್ಲರೂ ತಿಳಿದರು. ಬಳಿಕ ಶ್ರೀಧರ ಸ್ವಾಮಿಗಳು ಮಹಾರಾಜರನ್ನು ಕುರಿತು—''ರಾಜಾ, ನೀನು ಸ್ವರಾಜ್ಯವನ್ನು ಸ್ಥಾಪಿಸುತ್ತಿರುವಾಗ ಹಲವು ವಿಘ್ನಗಳು ಬರುತ್ತಿದ್ದರೂ ಶ್ರೀಗುರು ಕೃಪೆಯಿಂದ ನೀನು ಅವುಗಳಿಂದ ಮುಕ್ತನಾಗಿ, ರಾಹುಮುಕ್ತ ಸೂರ್ಯನಂತೆ ಪ್ರಕಾಶಿಸುವೆ! ಬಂದ ವಿಘ್ನಗಳನ್ನು ದೂರಮಾಡಿಕೊಂಡು ಜಯವನ್ನು ಸಂಪಾದಿಸಿದರೆಯೇ ಜಯಕ್ಕೆ ಬೆಲೆ

ಬರುತ್ತದೆ. ಇಲ್ಲದಿದ್ದರೆ ಜಯದ ಮಹತ್ವವಾದರೂ ಏನು? ಹೋಗು, ನೀನು ಇನ್ನು ಸ್ನಾನಮಾಡಿ ಊಟ ಮಾಡು. ನೀನು ಬರುವವರೆಗೆ ಊಟ ಮಾಡಬಾರದೆಂದು ನಾವೂ ಉಪವಾಸವಿರುವೆವು, ಬಾಯಲ್ಲಿ ನೀರು ಹಾಕಿಲ್ಲ, ಎಂದು ಹೇಳಲು, ಮಹಾರಾಜರು ಸ್ವಾಮಿಗಳನ್ನು ವಂದಿಸಿ ಸ್ನಾನಕ್ಕೆ ಹೋದರು. ಮಹಾರಾಜರ ಊಟವಾಗುವವರೆಗೆ ಎಂಥ ಮಹತ್ವದ ಸುದ್ದಿಯಿದ್ದರೂ ಅದನ್ನು ಹೇಳ ಬಾರದೆಂದು ಅವರ ಪರಿವಾರದವರು ನಿಶ್ಚಯಿಸಿ, ಯಾರೂ ಮಹಾರಾಜರ ಬಳಿಗೆ ಹೋಗದಂತೆ ಜನರನ್ನು ಪ್ರತಿಬಂಧಿಸುತ್ತಲಿದ್ದರು.

ಮಹಾರಾಜರ ಭೋಜನವಾಯಿತು. ಬಳಿಕ ಎಲ್ಲ ಸ್ವಾಮಿಭಕ್ತರೂ ಊಟ ಮಾಡಿದರು. ಅಂದು ಪ್ರತಾಪಗಡದಲ್ಲಿ ಆನಂದವು ತುಂಬಿ ತುಳುಕುತ್ತಲಿತ್ತು. ಅಂದಿನ ರಾತ್ರಿಯಲ್ಲಿ ಮಹಾರಾಜರಿಗೆ ಗಡದ್ದ ನಿದ್ರೆಯು ಹತ್ತಿತು. ಒಬ್ಬ ಮಹಾರಾಜರಿಗೆ ಏಕೆ, ಇಡಿಯ ಪ್ರತಾಪಗಡವೇ ಅಂದು ನಿಶ್ಚಿಂತೆಯಿಂದ ನಿದ್ದೆ ಮಾಡುತ್ತಿತ್ತೆಂದು ಹೇಳಬಹುದು. ಮಹಾರಾಜರು ಉಷಃಕಾಲದಲ್ಲಿ ಎದ್ದರು. ಅಂದು ನೋಡಿದತ್ತೆಲ್ಲ ಆನಂದವು ತುಂಬಿ ತುಳುಕುತ್ತಲಿತ್ತು. ಅಂದು ಒಂಬತ್ತು ತಾಸಿನ ಕಡೆಗೆ ಮಹಾರಾಜರು ದರ್ಬಾರವನ್ನು ಕೂಡಿಸಿ, ಮಹಾರಾಷ್ಟ್ರ ವೀರರನ್ನು ಅವರವರ ಯೋಗ್ಯತೆಯಂತೆ ಸಂಭಾವಿಸಿದರು. ಅಷ್ಟರಲ್ಲಿ, ಚಂದ್ರರಾವ ಮೋರೆಯ ಮಗಳನ್ನು ಹುಡುಕಲಿಕ್ಕೆ ಹೋದವರು, ಆಕೆಯು ಒಂದು ಮಡುವಿನಲ್ಲಿ ಬಿದ್ದು ಮುಣುಗಿದ್ದಳೆಂತಲೂ, ಆಕೆಯ ಶವವನ್ನು ಈ ಖಂಡೇರಾಯನು ತೆಗೆಯುತ್ತಿದ್ದನೆಂತಲೂ ಹೇಳಿದರು. ಆಗ ಮಹಾರಾಜರು ಸ್ವಲ್ಪಹೊತ್ತು ಸುಮ್ಮನೆ ಕುಳಿತು ಯೋಚಿಸಿದ ಬಳಿಕ ತಾರಾಬಾಯಿಯ ಶವಕ್ಕೆ ಅಗ್ನಿಸಂಸ್ಕಾರ ಮಾಡಲು ಆಜ್ಞಾಪಿಸಿ, ಖಂಡೇರಾಯನನ್ನು, ಅವನ ದ್ರೋಹದ ಆಚರಣೆಗಾಗಿ ತಮ್ಮ ರಾಜ್ಯದ ಗಡಿ ದಾಟಿಸಿಬಿಟ್ಟರು. ಹೀಗೆ ಮಹಾರಾಜರು ದರ್ಬಾರದ ಕಾರ್ಯವನ್ನು ಮುಗಿಸಿ, ಪುನಃ ಅಂಬಾ ಬಾಯಿಯ ದರ್ಶನ ಮಾಡಿಕೊಂಡು, ತಮ್ಮ ಜನನಿಯ ಬಳಿಗೆ ಹೋದರು. ಬಳಿಕ ಅವರು ಜಾಧವರಾಯನನ್ನು ಕರೆಸಿ ಜೀಜಾಬಾಯಿಯವರ ಸಮಕ್ಷ—''ಜಾಧವರಾವ, ನೀವು ನನ್ನ ಸಲುವಾಗಿ ನಿಮ್ಮ ಹಿರಿಯರ ಮಾತನ್ನು ಮೀರಿ, ಜಹಗಿರಿಯ ಆಶೆಯನ್ನು ತೊರೆದು, ಬಾದಶಹನ ಲಕ್ಷ್ಯವಿಲ್ಲದೆ ನನ್ನ ಆಶ್ರಯವನ್ನು ಪಡೆಯುವದಕ್ಕಾಗಿ ಸಕುಟುಂಬವಾಗಿ ವಿಜಾಪುರದಿಂದ ಹೊರಟಿರಿ; ಆದರೆ ನಡುವೆ ವಿಘ್ನವು ಒದಗಿ ನನ್ನ ಆಶ್ರಯವನ್ನು ಪಡೆಯಲಿಕ್ಕೆ ಅನುಕೂಲವಾಗದಿದ್ದರೂ, ಆಶ್ರಿತರಿಗಿಂತ ಹೆಚ್ಚಾಗಿ ನೀವು ದಂಪತಿಗಳು ನನ್ನನ್ನು ಕೃತಜ್ಞನನ್ನು ಮಾಡಿರುತ್ತೀರಿ. ನಿಮ್ಮ ಉಪಕಾರವು ನಾನು ಏನು ಮಾಡಿದರೂ ತೀರುವಹಾಗಿಲ್ಲ. ಹೈಮವತಿದೇವಿಯರಂತೂ ನನ್ನನ್ನು ಹೊಸದಾಗಿ ಹಡೆದಂತೆ ನನಗೆ ಪುನರ್ಜನ್ಮ ಕೊಟ್ಟರು. ಈ ಉಪಕಾರವನ್ನು ಸ್ಮರಿಸುವದಕ್ಕಿಂತ ಹೆಚ್ಚಿನದನ್ನೇನು ನಾನು ಮಾಡುವ ಹಾಗಿದ್ದೇನೆ? ನೀವು ಸ್ವರಾಜ್ಯದ ಆಶ್ರಯ ಪಡೆದು, ಅದನ್ನು ರಕ್ಷಿಸಿ ಅಭಿವೃದ್ಧಿಗೊಳಿಸುವ ಮಹಾಕಾರ್ಯಕ್ಕೆ ನನ್ನೊಡನೆ ಸಿದ್ಧವಾಗಿರ ಬೇಕೆಂದು ಹೇಳಿಕೊಳ್ಳುವೆನು.''

ಈ ಮೇರೆಗೆ ನುಡಿದ ಮಹಾರಾಜರ ಮಾತುಗಳನ್ನು ಕೇಳಿ ಜಾಧವರಾಯನು ಅತ್ಯಂತವಾದ ಕೃತಜ್ಞತಾಭಾವದಿಂದ ಮೌನವನ್ನು ತಾಳಿದನು. ಮಹಾರಾಜರು ಈ ಪರಿ ತನ್ನನ್ನು ಗೌರವಿಸಿದ ಭಾರವು ಆತನಿಗೆ ದುಸ್ಸಹವಾಯಿತು. ಜೀಜಾಬಾಯಿಯವರು ಹೈಮವತೀ ದೇವಿಯ ಯೋಗಿನಿಯ ವೇಷವನ್ನು ಬಿಡಿಸಿ, ಆಕೆಯನ್ನು ವಸ್ತ್ರಾಲಂಕಾರಗಳಿಂದ ಸತ್ಕರಿಸಿದರು. ಆ ಜೀಜಾಬಾಯಿ ಸಾಹೇಬರಿಗೂ, ಮಹಾರಾಜರಿಗೂ ಹೈಮವತಿಯು ಕಡೆತನಕ ಆದರಣೀಯಳಾಗಿದ್ದಳು. ಅಂದಿನ ದಿವಸವೂ ಮಹಾರಾಜರೇ ಮೊದಲಾದವರಿಗೆ ಆನಂದದಿಂದ ಕಳೆದುಹೋಯಿತು; ಆದರೆ ನಿಜವಾಗಿ ಮಹಾರಾಜರಿಗೆ ಆನಂದವಾಗಿದ್ದಿಲ್ಲ, ನೋಡಲಿಕ್ಕೂ ಅವರು ಖಿನ್ನರಾಗಿಯೇ ತೋರುತ್ತಿದ್ದರು. ಇಂಥ ದೊಡ್ಡ ಜಯವನ್ನು ಸಂಪಾದಿಸಿಯೂ ಅವರು ಖಿನ್ನರಾಗುವ ಕರಾಣವೇನೆಂದು ವಾಚಕರು ಕೇಳಬಹುದು. ಅದಕ್ಕೆ ಎರಡು ಕಾರಣಗಳಿರುವವು. ''ನಾನು ನಿರಪೇಕ್ಷ ಬುದ್ಧಿಯಿಂದ, ಲೇಶವಾದರೂ ಸ್ವಾರ್ಥವಿಲ್ಲದೆ ಸ್ವರಾಜ್ಯ ಸ್ಥಾಪನೆಗಾಗಿ ಹೆಣಗುತ್ತಿರಲು, ಖಂಡೇರಾಯನಂಥ ಸ್ವಜನರು ನನಗೆ ಯಾಕೆ ದ್ರೋಹಿಗಳಾಗಬೇಕೆಂದು ಮಹಾರಾಜರು ಚಿಂತಾಕ್ರಾಂತರಾಗಿದ್ದರು. ಆ ಕಾಲದಲ್ಲಿ ಬಹು ಜನ ಮಹಾರಾಷ್ಟ್ರ ಸರದಾರರು ಮಹಾರಾಜರ ಕಾರ್ಯಕ್ಕೆ ವಿಘ್ನಕಾರಿಗಳಾಗಿದ್ದರೆಂಬದನ್ನು ವಾಚಕರು ಅರಿತಿರಬಹುದು. ಸ್ವಜನರ ಉದ್ಧಾರಕ್ಕಾಗಿ ಯತ್ನಿಸುವ ತಮಗೆ, ಸ್ವಜನರೊಡನೆ ಕಾದುವ ಪ್ರಸಂಗವು ಬರುತ್ತದಲ್ಲ ಎಂದು ಅವರು ಚಿಂತಿಸುತ್ತಿದ್ದರು. ಇದರ ಹೊರತು ಮಹಾರಾಜರ ಚಿಂತೆಗೆ ಮತ್ತೊಂದು ದೊಡ್ಡ ಕಾರಣವಿತ್ತು, ಮಹಾರಾಜರ ರಾಜ್ಯವು ವಿಸ್ತಾರವಾಗುತ್ತ ಹೋದಂತೆ, ಮತ್ತು ಅವರು ಅಫಜುಲಖಾನನಂತ ಮುಸಲ್ಮಾನ ಸರದಾರರನ್ನು ಗೊತ್ತಿಗೆ ಹಚ್ಚಿ ಉಭಯ ಬಾದಶಹರ ಮನಸ್ಸನ್ನು ನೋಯಿಸಿದಂತೆ, ಮಹಾರಾಜರ ಕಾರ್ಯಕ್ಕೆ ವಿಘ್ನಗಳು ವಿಶೇಷವಾಗಿ ಬರುವ ಸಂಭವವಿತ್ತು, ಈ ಸಂಬಂಧದಿಂದ ಮಹಾರಾಜರು ಇಂದಿನ ದರ್ಬಾರದಲ್ಲಿ ತಮ್ಮ ಅನುಯಾಯಿಗಳನ್ನು ಕುರಿತು ಮಾಡಿದ ಚಿಕ್ಕ ಭಾಷಣವನ್ನು ನಾವು ಇನ್ನೂ ಹೇಳಿರುವದಿಲ್ಲ, ಅದನ್ನು ಈಗ ಹೇಳುವೆವು; ಅಂದರೆ ಮಹಾರಾಜರ ಪ್ರಬಲವಾದ ಚಿಂತೆಯ ಕಾರಣದ ಸ್ವರೂಪವು ವಾಚಕರಿಗೆ ಗೊತ್ತಾಗಬಹುದು. ಅವರು ದರ್ಬಾರದಲ್ಲಿ ನುಡಿದದ್ದೇನಂದರೆ—ವೀರರೇ, ಸ್ವರಾಜ್ಯವು ನನ್ನದೆಂದು ನೀವು ತಿಳಿಯಬೇಡಿರಿ; ಆ ಸ್ವರಾಜ್ಯವು ನಿಮ್ಮದು. ನಿಮ್ಮದನ್ನು ಸದ್ಯಕ್ಕೆ ಮುಸಲ್ಮಾನರು ತಕ್ಕೊಂಡಿರುವದರಿಂದ ಅದನ್ನು ಅವರ ಕೈಯಿಂದ ನಿಮಗೆ ಕೊಡಿಸಲಿಕ್ಕೆ ನಾನು ನಿಮಿತ್ತ ಮಾತ್ರನಿರುತ್ತೇನೆ. ಈ ದಿನ ಆದದ್ದಿಷ್ಟರಿಂದ ಎಲ್ಲವೂ ಮುಗಿಯಿತೆಂದು ಮಾತ್ರ ತಿಳಿಯಬೇಡಿರಿ. ಸೂರ್ಯೋದಯವಾದರೆ ದಿವಸಕ್ಕೆ ಆರಂಭವಾಗುತ್ತದೆ. ಇಷ್ಟರಿಂದ ದಿವಸವು ಸುಸೂತ್ರವಾಗಿ ಪರಿಣಮಿಸುವದೆಂದು ತಿಳಿಯಲಾಗದು. ನಡುವೆ ಮೋಡಗಳು ಅಡ್ಡ ಬರುತ್ತವೆ; ಗ್ರಹಣಗಳಾಗುವದುಂಟು. ಅದರಂತೆ ಸ್ವರಾಜ್ಯ ಸೂರ್ಯೋದಯದ ಕಥೆಯೂ ಇರುತ್ತದೆ. ಸ್ವರಾಜ್ಯಕ್ಕೊದಗುವ ವಿಘ್ನಗಳನ್ನೆಲ್ಲ ನಿವಾರಣ ಮಾಡಿಕೊಳ್ಳಬೇಕಾಗುವದು. ಆ ಕೆಲಸವನ್ನು ನೀವೇ ಮಾಡಿಕೊಳ್ಳಬೇಕು. ಅಫಜುಲಖಾನನ ಶಾಸನ ಮಾಡಿಕೊಳ್ಳಬೇಕಾಗುವದು. ವಿಜಾಪುರದ ದರ್ಬಾರದಲ್ಲಿ ದೊಡ್ಡ ಗೊಂದಲವೇಳುವದು. ಯಾವನಾದರೂ ಮತ್ತೊಬ್ಬ

ಸರದಾರನು ನಮ್ಮ ಸುತ್ತ ಕೈ ತೊಳಕೊಂಡು ಬೆನ್ನಹತ್ತತಕ್ಕವನೇ. ಅತ್ತ ದಿಲ್ಲಿಯ ಔರಂಗಜೇಬ ಬಾದಶಹನ ಕಣ್ಣು ನಮ್ಮ ಮೇಲಿರುತ್ತದೆ. ಅತ್ತ ವಿಜಾಪುರದ ಸರದಾರರನ್ನು ನಾವು ಒಬ್ಬಬ್ಬರನ್ನಾಗಿ ಜಯಿಸುತ್ತ ಪ್ರಬಲವಾಗುವದು, ಆ ದಿಲ್ಲಿಯ ಬಾದಶಹನಿಗೆ ಎಂದಿಗೂ ಸಹನವಾಗದು. ಆತನ ತ್ರಾಸವು ನಮಗೆ ಆಗೇ ಆಗುವದು. ಅದೊಂದು ದೊಡ್ಡ ತ್ರಾಸವಿರುವ ದೆಂದು ನೀವು ತಿಳಿಯಿರಿ. ಆ ತ್ರಾಸದಿಂದ ನೀವೇ ಮುಕ್ತವಾಗಬೇಕಾಗಿರುವದು. ಆ ತಾಪದಿಂದ ಮುಕ್ತರಾದ ಬಳಿಕ ಮಾತ್ರ ನಿಮ್ಮ ಸ್ವರಾಜ್ಯ ಸೂರ್ಯನು ಲಕಲಕಿಸಿ ಹೊಳೆದು ನಿರ್ವಿಘ್ನವಾಗಿ ಸಾಗಬಹುದು. ಇದನ್ನೆಲ್ಲ ಲಕ್ಷದಲ್ಲಿಟ್ಟು ನೀವು ನಡೆಯಿರೆಂದರಾಯಿತು. ಎರಡನೆಯದೇನೂ ನಾನು ನಿಮಗೆ ಹೇಳುವದಿಲ್ಲ''

ಈ ಭಾಷಣದ ಮೇಲಿಂದ ಮಹಾರಾಜರ ಚಿಂತೆಯ ಸ್ವರೂಪವು ವಾಚಕರ ಲಕ್ಷದಲ್ಲಿ ಬಂದಿರಬಹುದು. ಮಹಾಪುರುಷರ ಲಕ್ಷಣವೇ ಇದು; ಲೋಕಹಿತದ ಕಾರ್ಯವು ಇನ್ನಿಷ್ಟು ವಿಸ್ತೃತವಾಗಿ, ಬಹು ಜನರ ಹಿತವು ತಮ್ಮಿಂದ ಹ್ಯಾಗೆ ಸಾಧಿಸೀತೆಂದು ಅವರು ಚಿಂತೆಗೊಳ ಗಾಗುವರು. ಸಾಮಾನ್ಯ ಜನರ ಚಿಂತೆಯು ಸ್ವಹಿತದ ವೃದ್ಧಿಗೋಸ್ಕರ ಇರುತ್ತದೆ. ದೊಡ್ಡವರ ಚಿಂತೆಯು ಪರಹಿತದ ವೃದ್ಧಿಗೋಸ್ಕರ ಇರುತ್ತದೆ; ಇಷ್ಟೇ ಭೇದವು. ಹೀಗೆ ಚಿಂತಾಮಗ್ನರಾದ ಮಹಾರಾಜರಿಗೆ ತಮ್ಮ ಸದ್ಗುರುಗಳಾದ ಶ್ರೀ ಸಮರ್ಥ ರಾಮದಾಸ ಸ್ವಾಮಿಗಳ ದರ್ಶನ ಮಾಡಿಕೊಳ್ಳುವ ಇಚ್ಛೆಯಾಯಿತು. ಕೂಡಲೇ ಅವರ ಶ್ರೀದರಸ್ವಾಮಿಗಳ ಬಳಿಗೆ ಹೋಗಿ ತಮ್ಮ ವಿಚಾರವನ್ನು ಅರಿಕೆ ಮಾಡಿಕೊಂಡು ಅವರನ್ನು ಕುರಿತು—''ಮಹಾರಾಜ, ಈಗ ಹನ್ನೆರಡು ವರ್ಷಗಳಾದವು. ಗುರುಗಳ ಆಜ್ಞೆಯಂತೆ ಅವರ ದರ್ಶನ ಮಾಡಿಕೊಳ್ಳದೆ, ನಿರ್ಧಾರದಿಂದ ರಾಜಕಾರ್ಯದಲ್ಲಿ ತೊಡಗಿ ದುಡಿದೆನು. ''ನಿನ್ನ ಧರ್ಮಕ್ಕನುಸರಿಸಿ ಕರ್ಮಗಳನ್ನು ಮಾಡುವದು ನಿನ್ನ ಕರ್ತವ್ಯವು'' ಎಂದು ಶ್ರೀ ಭಗವಂತನು ಅರ್ಜುನನ್ನು ಬೋಧಿಸಿದಂತೆ, ಶ್ರೀ ಗುರುಗಳು ನನ್ನನ್ನು ಬೋಧಿಸಲು, ನಾನು ಆ ಬೋಧವಚನಗಳನ್ನು ಅಕ್ಷರಶಃ ಪಾಲಿಸಿದೆನು. ಅದರಿಂದಲೇ ಸ್ವರಾಜ್ಯಸ್ಥಾಪನೆಯ ಕಾರ್ಯವಾಯಿತು. ಇದರ ಶ್ರೇಯಸ್ಸಿಗೆಲ್ಲ ಶ್ರೀ ಗುರುಗಳೇ ಕಾರಣವಾಗಿರುವರು; ಆದರೆ ಈಗ ಸಮರ್ಥರ ದರ್ಶನ ಮಾಡಿಕೊಳ್ಳದೆ ಇರುವದು ನನ್ನಿಂದ ಆಗದು'' ಎಂದು ನಿರ್ಧಾರದಿಂದ ನುಡಿಯಲು, ಶ್ರೀಧರಸ್ವಾಮಿಗಳೂ ಅದಕ್ಕೆ ಒಪ್ಪಿಕೊಂಡರು. ಆಮೇಲೆ ಅವರಿಬ್ಬರೂ ಗುಪ್ತರೀತಿಯಿಂದ ಗುರುಗಳ ದರ್ಶನಕ್ಕೆ ಹೋಗುವದನ್ನು ನಿಶ್ಚಯಿಸಿದರು. ಹೊರಡುವ ಪೂರ್ವದಲ್ಲಿ ತಮ್ಮ ಜನರಿಗೆ ಮಾತ್ರ ಈ ಸಂಗತಿಯನ್ನು ಮಹಾರಾಜರು ತಿಳಿಸಿದರು. ಮಹಾರಾಜರು ಯಾವದೇ ಕಾರ್ಯವನ್ನು ತಮ್ಮ ತಾಯಿಗೆ ಹೇಳದೆ ಮಾಡುತ್ತಿದ್ದಿಲ್ಲವೆಂಬದನ್ನು ವಾಚಕರು ಬಲ್ಲರು. ಮಹಾರಾಜರು ತಮ್ಮ ಸಲುವಾಗಿ ಯೊಂದು, ಶ್ರೀಧರಸ್ವಾಮಿಗಳ ಸಲುವಾಗಿಯೊಂದು ಹೀಗೆ ಎರಡು ಕುದುರೆಗಳನ್ನು ತರಿಸಿಕೊಂಡು, ರಾತ್ರಿಯಲ್ಲಿಯೇ ಸಜ್ಜನ ಗಡದ ದಾರಿಯನ್ನು ಹಿಡಿದರು.

ಹೀಗೆ ಅವರಿಬ್ಬರೂ ಶ್ರೀ ಗುರುವಿನ ದರ್ಶನಕ್ಕಾಗಿ ಆತುರದಿಂದ ಸಾಗಿರಲು, ಕರುಣಾಳು ವಾದ ಶ್ರೀ ಗುರುವು ತನ್ನ ದೃಢಶಿಷ್ಯಯದ ಸಚ್ಛಿಷ್ಯನಿಗೆ ಶ್ರಮವಾಗಬಾರದೆಂದು ಮಧ್ಯ ಮಾರ್ಗದಲ್ಲಿ ಒಂದು ಗಿಡದ ಬುಡದಲ್ಲಿ ಬೆಂಕಿಯನ್ನು ಕಾಸುತ್ತ ಕುಳಿತಿದ್ದರು. ಹೀಗೆ

ಮಧ್ಯರಾತ್ರಿಯಲ್ಲಿ ಆಕಸ್ಮಾತ್ತಾಗಿ ಅರಣ್ಯದಲ್ಲಿ ಶ್ರೀ ಗುರುವಿನ ದರ್ಶನವಾದ್ದರಿಂದ, ಮಹಾರಾಜರಿಗೆ ಪರಮಾನಂದವಾಯಿತು. ಅವರು ಕುದುರೆಗಳ ಮೇಲಿಂದ ಕೆಳಗೆ ಧುಮುಕಿ, ಶ್ರೀ ಗುರುವನ್ನು ಸಾಷ್ಟಾಂಗವಾಗಿ ವಂದಿಸಿದರು. ಸಮರ್ಥರು ಶಿಷ್ಯನ ಕೈ ಹಿಡಿದು ಕರಕೊಂಡು ಹತ್ತರ ಕುಳ್ಳಿರಿಸಿಕೊಂಡು, ಆತನ ಮೈಮೇಲೆ ಕೈಯಾಡಿಸಿ ವಾತ್ಸಲ್ಯದಿಂದ ನೆತ್ತಿಯನ್ನು ಮೂಸಿನೋಡಿ, ಆತನಿಗೆ ಮಂತ್ರೋಪದೇಶವನ್ನು ಮಾಡಿದರು! ಆ ಕಾಲದಲ್ಲಿಯ ಗುರುಶಿಷ್ಯರ ಹೃದ್ಗತವನ್ನು ವರ್ಣಿಸುವದು ಯಾರ ಯೋಗ್ಯತೆಯು? ಅದು ಅತ್ಯಂತ ಗೂಢವಾದದ್ದು, ಅತ್ಯಂತ ಪವಿತ್ರವಾದದ್ದು! ಆ ಕಾಲದಲ್ಲಿ ಶ್ರೀಧರಸ್ವಾಮಿಗಳನ್ನು ಕೂಡ ಸಮರ್ಥರು ಅಲ್ಲಿ ಕುಳಿತು ಕೊಳ್ಳಗೊಟ್ಟಿದ್ದಿಲ್ಲ; ಅಂದ ಬಳಿಕ ನಮ್ಮ ಪಾಡೇನು? ಆದ್ದರಿಂದ ನಮ್ಮ ಕಥಾನಿರೂಪಣವನ್ನು ಆ ಗುರು–ಶಿಷ್ಯರ ಪರಸ್ಪರ ಹೃದ್ಗತ ಪ್ರದರ್ಶನ ಪ್ರಸಂಗವು ನಡೆದಿರುವಾಗಲೇ ನಾವು ಮುಗಿಸಿಬಿಡುವೆವು.

**ಸಮಾಪ್ತ**

# ಪ್ರಸ್ತಾವನೆ

ಪ್ರಜೆಗಳ ಹಿತವನ್ನು ಮನಮುಟ್ಟಿ ಚಿಂತಿಸುತ್ತಿರುವ ಸರಕಾರದವರು, ಮುಂಬಯಿ ಇಲಾಖೆಯೊಳಗಿನ ಪ್ರಾಥಮಿಕ ಶಾಲೆಗಳಿಗಾಗಿ ತಕ್ಕ ವಾಚನ ಪುಸ್ತಕಗಳನ್ನು ಸಿದ್ಧಪಡಿಸುವದಕ್ಕೆ ಈಗ ಏಳು ವರ್ಷಗಳಹಿಂದೆ 'ವ್ಹರ್ನಾಕ್ಯುಲರ ಟೆಕ್ಸ್ಟ್‌ಬುಕ್ಸರಿವಿಜನ್ ಕಮೀಟಿ, ಎಂಬ ಹೆಸರಿನ ದೊಂದು ಕಮೀಟಿಯನ್ನು ಪುಣೆಯಲ್ಲಿ ಕೂಡಿಸಿದ್ದರು. ಆ ಕಮಿಟಿಯವರ ।।। ವರ್ಷದ ಅವಿಶ್ರಾಂತ ಶ್ರಮದಿಂದಲೇ ಈಗಿನ ವಾಚನದ ಎಂಟು ಪುಸ್ತಕಗಳು ಸಿದ್ಧವಾದವು. ಸಧ್ಯಕ್ಕೆ ಬ್ರಹ್ಮದೇಶದ ವಿದ್ಯಾಖಾತೆಯ ಡಾಯರೆಕ್ಟರರಾಗಿದ್ದ ಮೆಹರ್ಬಾನ ಕೊವ್ಹರಂಟನ್ ಸಾಹೇಬರುವರು ಆ ಕಮೀಟಿಯ ಅಧ್ಯಕ್ಷರಾಗಿದ್ದರು; ಮತ್ತು ಸಧ್ಯಕ್ಕೆ ನಮ್ಮ ದಕ್ಷಿಣ ಭಾಗದ ಎಜ್ಯುಕೇಶನಲ್ ಇನಸ್ಪೆಕ್ಟರರಾಗಿದ್ದ ಗುರುವರ್ಯ ರಾವಬಹದ್ದೂರ ರಾವಜಿರಾವ ಕರಂದಿಕರರವರು ಕನ್ನಡ ಮೆಂಬರರಾಗಿದ್ದರು. ಗುರುಗಳವರ ಸಹಾಯದಿಂದ ಆಕಮಿಟಿಯ ಕಾರಕೂನನಾಗಿ ಕೆಲಸ ಮಾಡುವ ಸುಯೋಗವು ನನಗೆ ಒದಗಿತು. ಅಲ್ಲಿ ಬರೆಯುವ ಕೆಲಸ ಮಾಡುತ್ತಿರುವಾಗ ನನಗೆ ಬರವಣಿಗೆಯ ಕಾರ್ಯದಲ್ಲಿ ಗುರುಗಳವರಿಂದಾದ ಸಹಾಯವನ್ನು ನಾನು ಆಜನ್ಮ ಮರೆಯೆನು. ಈ ಉಪಕಾರಕ್ಕಾಗಿ, ಇನ್ನು ಮೇಲೆ ನನ್ನ ಆಯುಷ್ಯದಲ್ಲಿ ಗುರುಗಳವರ ಪುಣ್ಯದಿಂದ ಯಾವಾದರೂ ಪುಸ್ತಕಗಳು ಬರೆದು ಸಿದ್ಧವಾದರೆ, ಆ ಪ್ರತಿ ಒಂದು ಪುಸ್ತಕದ ಪ್ರಸ್ತಾವನೆಯಲ್ಲಿ ಗುರುಗಳವರನ್ನು ನೆನಿಸುವದಕ್ಕಿಂತ ಹೆಚ್ಚಿನದಾದ ಬೇರೆ ಯಾವ ಕೃತಜ್ಞತಾದರ್ಶ ಕೋಪಾಯವು ನನಗೆ ಸಾಧ್ಯವಾಗಿರುವದಿಲ್ಲ.

ಪುಣೆಯು ಮಹಾರಾಷ್ಟ್ರಭಾಷೆಯ ಮುಖ್ಯಸ್ಥಾನವಷ್ಟೇ? ಅಲ್ಲಿ ಕೆಲವು ಮರಾಠಿಯ ಒಳ್ಳೆಯ ಪುಸ್ತಕಗಳು ನನಗೆ ಓದಲಿಕ್ಕೆ ಸಿಕ್ಕವು. ಅವುಗಳಲ್ಲಿ ಪ್ರಸಿದ್ಧ ಕಾದಂಬರಿಕಾರರಾದ ರಾ. ರಾ. ಹರಿನಾರಾಯಣ ಆಪಟೆಯವರು ಬರೆದ ''ಗಡ ಆಲಾ, ಪಣ ಸಿಂಹ ಗೇಲಾ!'' ಎಂಬ ಹೆಸರಿನ ಐತಿಹಾಸಿಕ ಕಾದಂಬರಿಯು ಒಂದಾಗಿತ್ತು, ಅದನ್ನು ನಾನು ಒಂದೇಸವನೆ ಓದಿ ಮುಗಿಸಿದೆನು; ಇದಲ್ಲದೆ ಆ ಕಾದಂಬರಿಯ ಉತ್ಪತ್ತಿಯ ಮೂಲಕಾರಣವಾದ ಸಿಂಹಗಡವನ್ನು ನೋಡುವ ಸುಯೋಗವೂ ಆಗ ನನಗೆ ಒದಗಿತು. ರಾ. ರಾ. ಆಪಟೆಯವರಂಥ ರಸಿಕರು ಬರೆದ ಕಾದಂಬರಿಯ ವಾಚನ, ಅದಕ್ಕೆ ಸಂಬಂಧಿಸಿದ ಸಿಂಹಗಡದಂಥ ಭಯಂಕರವಾದ ದುರ್ಗದ ಪ್ರತ್ಯಕ್ಷಾವಲೋಕನ ಇವೆರಡು ಏಕಸಮಯಾವಚ್ಛೇದದಿಂದ ಒದಗಿದ್ದರಿಂದ ಆಸುರಸವಾದ ಕಾದಂಬರಿಯನ್ನು ಕನ್ನಡಕ್ಕೆ ಪರಿವರ್ತಿಸಬೇಕೆಂಬ ಇಚ್ಛೆಯು ನನಗೆ ಉತ್ಪನ್ನವಾಯಿತು; ಆ ಇಚ್ಛೆಗೆ ಶ್ರೀ ಸದ್ಗುರುವಿನ ಕೃಪೆಯ ಸಹಾಯವೂ ಒದಗಿದ್ದರಿಂದ

ಸಿಂಹಗಡದ ಕಾದಂಬರಿಯು 'ಕಮಲಕುಮಾರಿ' ಎಂಬ ಹೆಸರಿನಿಂದ ಭಾಷಾಂತರಿಸಲ್ಪಟ್ಟು, ಅದು ಸದ್ಬೋಧಚಂದ್ರಿಕೆಯಲ್ಲಿ ಈಗ ಎರಡು ವರ್ಷಗಳಿಂದ ಭಾಗಶಃ ಪ್ರಸಿದ್ಧವಾಗಿ ಸದ್ಯಕ್ಕೆ ಪೂರ್ಣವಾಗಿರುತ್ತದೆ. ಇದಕ್ಕೆಲ್ಲ ಶ್ರೀಶೇಷಾಚಲ ಸದ್ಗುರುವಿನ ಕೃಪಾಪ್ರಸಾದವೇ ಕಾರಣವು.

ಧಾರ್ಮಿಕ ಲೇಖಗಳಿಗೆ ತುಂಬಾ ಆಶ್ರಯಕೊಡುತ್ತಿರುವ ಸದ್ಬೋಧ ಚಂದ್ರಿಕೆಯಲ್ಲಿ ಕಮಲಕುಮಾರಿಯು ಪ್ರಸಿದ್ಧವಾದದ್ದಕ್ಕಾಗಿ ನನಗೆ ಬಹಳ ಸಮಾಧಾನವಾಗಿದೆ; ಯಾಕಂದರೆ, ಕಮಲಕುಮಾರಿಯಂಥ ಧರ್ಮಿಷ್ಠ ಸಾಧ್ವಿಯ, ಹಾಗು ತಾನಾಜಿಯಂಥ ಧರ್ಮನಿಷ್ಠ ಹಾಗು ರಾಜನಿಷ್ಠ ವೀರನ ಪವಿತ್ರವಾದ ವರ್ಣನಗಳಿಗೆ ಇದಕ್ಕಿಂತ ಪವಿತ್ರವಾದ ಸ್ಥಳವು ದೊರೆಯುವದು ದುರ್ಲಭವು. ಏಕದೇಶೀಯ ವಿಕಾರಗಳ ಪ್ರೇರಣೆಗಳಿಗೆ ಆಶ್ರಯವಾದ ಅನಂತ ಸ್ಥಳಗಳು ಲೋಕದಲ್ಲಿ ಒಟ್ಟಿದ್ದರೂ, ಶತ್ರುಮಿತ್ರಸಮಭಾವ, ನಿರ್ಲೋಭತ್ವ, ದಯಾ, ಶಾಂತಿ ಮೊದಲಾದ ಸಾತ್ವಿಕಗುಣಗಳು ಪೂರ್ಣವಾಗಿ ವಾಸಿಸುತ್ತಿರುವ, ಅರ್ಥಾತ್ ಮೂರ್ತಿಮತ ಧರ್ಮವಾದ ಶ್ರೀಶೇಷಾಚಲ ಸದ್ಗುರುವಿನ ಸ್ಥಾನದಂಥ ಶಾಂತಿ ಸ್ಥಾನವು ಲೋಕದಲ್ಲಿ ಅಪರೂಪವೇ ಸರಿ.

ಅನೀತಿಯು ಪಾಪಕ್ಕೆ ಕಾರಣವು. ಧರ್ಮಶ್ರದ್ಧೆಯುಳ್ಳವರಿಗಲ್ಲದೆ ಅನ್ಯರಿಗೆ ಪಾಪದ ಭಯವು ತೋರದು. ಆಸ್ತಿಕಭಾವ, ಧರ್ಮನಿಷ್ಠೆ, ರಾಜನಿಷ್ಠೆ ಈ ಗುಣಗಳು ನಿಜವಾದ ಪ್ರಗತಿಗೂ, ಶಾಂತತೆಗೂ, ಇಹ-ಪರ ಸುಖಕ್ಕೂ ಸಾಧನಗಳಾಗಿರುತ್ತವೆಂದು ಹೇಳಲವಶ್ಯವಿಲ್ಲ. ಈ ಸಾಧನಗಳು ಸತ್ವಗುಣಸಂಪನ್ನನಿಗಲ್ಲದೆ ಅನನ್ಯಿಗೆ ದೊರೆಯವು. ಬರಬರುತ್ತ ಜನರಲ್ಲಿ ಸಾತ್ವಿಕಗುಣವು ಕಡಿಮೆಯಾಗಹತ್ತಿ ಅದರ ಸ್ಥಳವನ್ನು ರಾಜಸ-ತಾಮಸ ಗುಣಗಳು ಆಶ್ರಯಿಸಹತ್ತಿರುತ್ತವೆ. ಈ ಸ್ಥಿತಿಯಿಂದ ಯಾರಿಗೂ ಸುಖವಾಗದು. ಜನರಲ್ಲಿ ಸಾತ್ವಿಕಭಾವವನ್ನು ಹೆಚ್ಚಿಸುವದೇ ಸಜ್ಜನರ ಧರ್ಮವಾಗಿರುವದು. ಆ ಸಾತ್ವಿಕಭಾವದ ಅಭಿವೃದ್ಧಿಗೆ ಈ ಕಾದಂಬರಿಯು ಸಹಾಯಮಾಡಬಹುದೆಂದು ನಾನು ನೆನಿಸುತ್ತೇನೆ! ಯಾಕಂದರೆ, ಈ ಕಾದಂಬರಿಯ ಪ್ರಧಾನ ಪಾತ್ರಗಳು ಧರ್ಮಶ್ರದ್ಧೆಯುಳ್ಳವುಗಳಾಗಿರುತ್ತವೆ.

ಧರ್ಮಶ್ರದ್ಧೆಯುಳ್ಳವರಿಗೂ, ಧರ್ಮಲಂಡರಿಗೂ ಇರುವ ಅಂತರವನ್ನು ಕಮಲಕುಮಾರಿ, ತಾನಾಜಿ, ಉದಯಭಾನು ಇವರ ವರ್ತನದಿಂದ ಕಂಡುಕೊಳ್ಳಬಹುದು. ಕಮಲಕುಮಾರಿಯು ಹೆಂಗಸಾದರೂ ಧರ್ಮಶ್ರದ್ಧೆಯ ಮೂಲಕ ಆಕೆಯು ವಿಷಯ ಸುಖಗಳನ್ನೆಲ್ಲ ತಿರಸ್ಕರಿಸಿ, ಮನಸ್ಸಿನ ಚಾಂಚಲ್ಯಕ್ಕೆ ಒಳಗಾಗದೆ ಭಕ್ತಿಯಿಂದ ಸಹಗಮನವಮಾಡಿದ್ದನ್ನು ನೋಡಿದರೆ, ನಿಜವಾದ ಧರ್ಮಶ್ರದ್ಧೆಯಿಂದಲೇ ಮನುಷ್ಯನು ಸಂಕಟವನ್ನು ತಾಳಿಕೊಳ್ಳುವವನೂ, ಸಹನಶೀಲನೂ ಆಗುವನೆಂಬದು ವ್ಯಕ್ತವಾಗುತ್ತದೆ. ಕಮಲಕುಮಾರಿಯು ಚಿಕ್ಕತನದಲ್ಲಿ ಸಹಗಮನಕ್ಕೆ ಮನಸ್ಸು ಮಾಡಿದ್ದೂ, ಉದಯಭಾನುವಿನಂಥ ಪ್ರಭವಶಾಲಿಯಾದ ಸುಂದರವೀರನೊಡನೆ ಲಗ್ನವಾಗುವದನ್ನು ನಿರಾಕರಿಸಿದ್ದೂ, ಎಂಥ ವಿಪತ್ತು ಒದಗಿದರೂ ಪತಿಭಕ್ತಿಯನ್ನು ಬಿಡದೆಯಿದ್ದದ್ದೂ ಈಗಿನ ಸ್ವಾರ್ಥಪರಾಯಣತೆಯ ಕಾಲದಲ್ಲಿ ಆಶ್ಚರ್ಯದ ಸಂಗತಿಗಳಾಗಿ ತೋರುವದು ಸ್ವಾಭಾವಿಕವು. ಆದರೆ ಸರ್ವಸ್ವವನ್ನೂ ಪತಿಗೆ ಅರ್ಪಿಸಿ, ಆತನೇ ದೇವರೆಂದು ತಿಳಿದು, ಅಂತ್ಯಕಾಲದಲ್ಲಿ ಅಭೇದವೃತ್ತಿಯಿಂದ ಆತನನ್ನು ಹಿಂಬಾಲಿಸುವವಳು ಸದ್ಗತಿಯನ್ನು ಪಡೆಯುವಳೆಂಬ ಧರ್ಮದ ತತ್ವದಲ್ಲಿ ಪೂರ್ಣವಿಶ್ವಾಸವುಳ್ಳ ಕಮಲಕುಮಾರಿಯರಂಥ

ಸಾಧ್ವಿಯರಿಗೆ ಅವು ಆಶ್ಚರ್ಯದ ಸಂಗತಿಗಳಲ್ಲ. ಸಹಗಮನವೆಂದರೆ, ಪ್ರಾಣತ್ಯಾಗವೇ ಎಂದು ತಿಳಿಯದೆ, ಇರುವತನಕ ಪತಿಗೆ ಅನುಕೂಲವಾಗಿ ನಡೆದು, ದುರ್ದೈವದಿಂದ ಪತಿಯ ವಿಯೋಗವಾದ ಕಾಲದಲ್ಲಿಯೂ ಆತನಲ್ಲಿ ಭಕ್ತಿಯನ್ನಿಟ್ಟು ಸನ್ಮಾರ್ಗದಿಂದ ನಡೆದರೆ, ಬೇಕಾದಷ್ಟು ಹಿತವಾಗುವದು. ಇಷ್ಟಾದರೂ ನಮ್ಮ ಆರ್ಯ ಭಗಿನಿಯರು ನಡಿಸಿ ಸ್ವಪರ ಹಿತಗಳನ್ನು ಸಾಧಿಸತಕ್ಕದ್ದು.

ತಾನಾಜಿಯು ತನ್ನ ಅರಸನಾದ ಶಿವಾಜಿಮಹಾರಾಜರಲ್ಲಿ "ನಾವಿಷ್ಣುಃ ಪೃಥಿವೀಪತಿಃ" ಎಂಬ ಆರ್ಯಧರ್ಮ ಸಿದ್ಧಾಂತಕ್ಕನುಸರಿಸಿ ಅಕೃತ್ರಿಮ ಶ್ರದ್ಧೆಯನ್ನು ತಾಳಿದ್ದು ವ್ಯಕ್ತವಾಗಿ ಕಂಡುಬರಬಹುದು. ಸ್ವಾಮಿಕಾರ್ಯದಲ್ಲಿ ದೇಹಪಾತವಾದರೆ ಜನ್ಮಸಾರ್ಥಕವಾದಂತಾಯಿತೆಂದು ನಂಬಿದಂಥ ತಾನಾಜಿಯ ಪವಿತ್ರವಾದ ರಾಜನಿಷ್ಠೆಯು ಅನ್ಯರಲ್ಲಿ ತೋರುವದು ದುರ್ಲಭವೆ ಸರಿ. ತನ್ನ ಪ್ರಭುವಿನ ಕಾರ್ಯವನ್ನು ಸಾಧಿಸುವದಕ್ಕಾಗಿ ಆತನು ತನ್ನ ಮಗನ ಲಗ್ನದ ಕಾರ್ಯವನ್ನು ಒತ್ತಟ್ಟಿಗಿಟ್ಟನು, ತನ್ನ ಜೀವದ ಪರಿವೆ ಇಲ್ಲದೆ ಕೋಳಿಯಜನರಲ್ಲಿ ಭೇದವನ್ನುಂಟುಮಾಡಲಿಕ್ಕೆ ಗೊಂದಲಿಗನಾದನು. ಕಮಲಕುಮಾರಿಯ ಪಾತಿವ್ರತ್ಯದ ರಕ್ಷಣಕ್ಕಾಗಿ ಮರಣದ ಭಯವನ್ನು ಬಿಟ್ಟು ಯತ್ನಿಸುತ್ತಿರುವ ಜಗತ್ಸಿಂಗನಿಗೆ ವಿಘ್ನವನ್ನುಂಟು ಮಾಡಿದ ಪಶ್ಚಾತ್ತಾಪದಿಂದಲೇ ಆ ಪಾಪಭೀರುವಾದ ತಾನಾಜಿಯು ಮಾಘವದ್ಯ ನವಮಿಯ ಮಧ್ಯರಾತ್ರಿಯೊಳಗೇ ದುರ್ಗವನ್ನು ಕೈವಶಮಾಡಿಕೊಳ್ಳುವೆನೆಂದು ಪ್ರತಿಜ್ಞೆಮಾಡಿದನು. ಸ್ವಾಮಿಕಾರ್ಯ, ಸತಿಕಾರ್ಯಗಳೆರಡರ ಸಂಧಿಯಲ್ಲಿ ಸಿಕ್ಕಿಕೊಂಡಿದ್ದ ಆ ನರವೀರನು ಹೊತ್ತಿಗೆ ತನಗೆ ದಂಡಿನ ಸಹಾಯ ದೊರೆಯದಿದ್ದರೂ ಐವತ್ತೇ ಜನರೊಡನೆ ದುರ್ಗವನ್ನೇರಿ ಹೋಗಿ ಸಾವಿರ ಜನರಮೇಲೆ ಬಿದ್ದು ವೀರಸ್ವರ್ಗವನ್ನು ಹೊಂದಿದನು. ಇದು ತಮ್ಮ ಸುಖವು ಹ್ಯಾಗೆ ಸಾಧಿಸೀತೆಂಬ, ಇಲ್ಲವೆ ತಮ್ಮ ಸೇಡು ಹ್ಯಾಗೆ ತೀರೀತೆಂಬ ವಿಚಾರದಲ್ಲಿಯೇ ಮಗ್ನವಾಗಿರುವ ವಿಕಾರವಶದ ಜನರಿಂದ ಆಗಲಾರದು.

ಧರ್ಮಲಂಡರಲ್ಲಿ ಮಾತ್ಸರ್ಯ, ವಿಶ್ವಾಸಘಾತ ಮೊದಲಾದ ದುರ್ಗುಣಗಳು ತುಂಬಿಕೊಂಡಿರುತ್ತವೆಂಬದನ್ನು ಉದಯಭಾನುವಿನ ಚರಿತ್ರದಿಂದ ಕಂಡುಕೊಳ್ಳಬಹುದು. ಉದಯಭಾನುವು ತನ್ನ ಮನಸ್ಸಿನಂತೆ ಆಗದ್ದರಿಂದ ರಾಜಸಿಂಹನ ಮೇಲೆಯೂ ಉದೇಪುರದ ರಜಪೂತರ ಮೇಲೆಯೂ ಸಿಟ್ಟಾಗಿ ಮಾತ್ಸರ್ಯದಿಂದ ರಾಜದ್ರೋಹಿಯು ಔರಂಗಜೇಬನನ್ನು ಕೂಡಿದನು. ಸುಖಾಪೇಕ್ಷೆಯಿಂದ ಔರಂಗಜೇಬನ ಮನಸ್ಸನ್ನು ಒಲಿಸಿಕೊಳ್ಳುವದಕ್ಕಾಗಿ ಮುಸಲ್ಮಾನ ಧರ್ಮವನ್ನು ಕೈಕೊಂಡನು. ಆ ಕುಲಗೇಡಿಗೆ ಯಾವ ಧರ್ಮದಲ್ಲಿಯೂ ಶ್ರದ್ಧೆಯಿದ್ದಿಲ್ಲ; ಯಾಕಂದರೆ, ಹಿಂದೂ ಧರ್ಮದೊಳಗಿನ ತತ್ವಗಳು ಮನಸ್ಸಿಗೆ ಬಾರದ್ದರಿಂದಲೂ, ಮುಸಲ್ಮಾನಧರ್ಮದ ತತ್ವಗಳು ಮೆಚ್ಚಿಕೆಯಾದ್ದರಿಂದಲೂ ಆತನು ಧರ್ಮಾಂತರವನ್ನು ಮಾಡಿದ್ದಿಲ್ಲ. ಸೇಡುತೀರಿಸುವ ವಿಕಾರಕ್ಕೂ, ಹೆಚ್ಚಳವನ್ನು ಪಡೆಯುವ ಆಶೆಗೂ ಒಳಗಾಗಿ ಆತನು ಮುಸಲ್ಮಾನನಾಗಿದ್ದನು. ಹೀಗೆ ಯಾವ ಧರ್ಮದಲ್ಲಿಯೂ ಶ್ರದ್ಧೆಯಿಲ್ಲದ್ದರಿಂದಲೇ ಅವನು ಪಾಪಕ್ಕೆ ಅಂಜದೆ ಅನಾಥೆಯಾದ ಕಮಲಕುಮಾರಿಯನ್ನು ಪರಿಪರಿಯಿಂದ ಗೋಳಾಡಿಸಿದನು. ಬಾದಶಹನ ಭಯವಿಲ್ಲದಿದ್ದರೆ, ಅವಧಿ ತೀರುವದರೊಳಗೇ ಅವನು ವಿಕಾರವಶನಾಗಿ ಕಮಲಕುಮಾರಿಯಮೇಲೆ ಬಲಾತ್ಕಾರಮಾಡುತ್ತಿದ್ದನು; ಅಂದರೆ ಅವನು

ರಾಜಾಜ್ಞೆಯನ್ನು ಮುರಿದು ರಾಜದ್ರೋಹಕ್ಕೆ ಒಳಗಾಗುತ್ತಿದ್ದನೆಂಬ ತಾತ್ಪರ್ಯವು ಔರಂಗಜೇಬನ ಪತ್ರವನ್ನು ಬಿಸುಟ್ಟಿದ್ದನ್ನೂ, ಔರಂಗಜೇಬನ ಭಯವನ್ನು ಲೆಕ್ಕಿಸುವ ಕಾರಣವಿಲ್ಲೆಂದು ಬಗೆದದ್ದನ್ನೂ ವಿಚಾರಿಸಿದರೆ ಉದಯಭಾನುವು ರಾಜದ್ರೋಹಕ್ಕ ಮನಸ್ಸು ಮಾಡಿದ್ದು ಗೊತ್ತಾಗಬಹುದು. ಅವನು ಏಕಲಿಂಗೇಶ್ವರನ ತಿರಸ್ಕಾರಮಾಡಿದ್ದನ್ನೂ, ಎಲ್ಲಿಯೂ ಅಲ್ಲಾನಹೆಸರು ತಕ್ಕೊಳ್ಳದ್ದನ್ನೂ ನೋಡಿದರೆ, ಆತನು ನಾಸ್ತಿಕನಿದ್ದನೆಂಬದೂ ಸ್ಪಷ್ಟವಾಗುತ್ತದೆ. ಹೀಗೆ ಉದಯಭಾನುವು ಧರ್ಮಲಂಡನೂ, ನಾಸ್ತಿಕನೂ, ರಾಜದ್ರೋಹಿಯೂ ಆಗಿ ಪಾಪಕ್ಕೆ ಹೆದರದೆ ಕಮಲಕುಮಾರಿಯನ್ನು ಪೀಡಿಸಿದ್ದರಿಂದ ಕಡೆಗೆ ಆ ಸತಿಯ ಶಾಪದಿಂದ ದಗ್ಧನಾದನು. ಇದನ್ನರಿತು ನಾನು ಧರ್ಮಶ್ರದ್ಧೆಯುಳ್ಳವರೂ, ಆಸ್ತಿಕರೂ, ರಾಜನಿಷ್ಠರೂ, ಪಾಪಭೀರುಗಳೂ ಆಗತಕ್ಕದ್ದು.

ಕಾದಂಬರಿಯೊಳಗಿನ ಈ ಮೂರು ಮುಖ್ಯ ಪಾತ್ರಗಳ ನಡತೆಯ ಹೊರತು, ದೇವಲ ದೇವಿಯ ಅಕೃತ್ರಿಮ ಪ್ರೇಮ, ಜಗತ್ಸಿಂಗನ ಪರೋಪಕಾರಬುದ್ಧಿ, ಮಾಳವರ ಸ್ವಾಮಿಭಕ್ತಿ ಇವು ವಿಚಾರಮಾಡತಕ್ಕವಾಗಿವೆ. ಅದರಂತೆ ಶಿವಾಜಿಮಹಾರಾಜರು ತಾನಾಜಿಯ ವಿಷಯವಾಗಿ ವಹಿಸಿದ್ದ ಭಕ್ತಿಯನ್ನೂ, ಉದಯಭಾನುವಿನ ರಾಣೀವಾಸವನ್ನು ದಿಲ್ಲಿಗೆ, ಕಾಜಿಯನ್ನು ಔರಂಗಾಬಾದಕ್ಕೆ ಕಳಿಸಿದ್ದನ್ನೂ, ತಾನಾಜಿಯ ಗೋರಿಯ ಸಂಗಡ ಉದಯ ಭಾನುವಿನ ಗೋರಿಯನ್ನು ಕಟ್ಟಿಸಿದ್ದನ್ನೂ ನೋಡಿದರೆ ಅವರ ಪಾಪಭೀರುತೆ, ಪರಧರ್ಮಸಹಿಷ್ಣುತೆ, ಶತ್ರು–ಮಿತ್ರ ಸಮಭಾವ ಇವು, ವ್ಯಕ್ತವಾಗುತ್ತವೆ. ಇವೆಲ್ಲ ಗುಣಗಳು ನಮ್ಮಲ್ಲಿ ಬರುವಂತೆ ನಾವು ಯತ್ನಿಸತಕ್ಕದ್ದು.

ಹೀಗೆ ಈ ಕಾದಂಬರಿಯೊಳಗಿನ ಧೀರೋದಾತ್ತ ಪಾತ್ರಗಳಿಂದ ನಾವು ಸದ್ಗುಣಗಳನ್ನು ಸ್ವೀಕರಿಸಿ, ನಮ್ಮ ನಮ್ಮ ಧರ್ಮಗಳಲ್ಲಿ ಶ್ರದ್ಧೆಯುಳ್ಳವರೂ, ದೇವರಲ್ಲಿ ಭಕ್ತಿಯುಳ್ಳವರೂ, ನಮ್ಮ ಸರಕಾರದ ವಿಷಯವಾಗಿ ನಿಷ್ಠೆಯುಳ್ಳವರೂ ಆಗತಕ್ಕದ್ದು. ಸೃಷ್ಟಿಯ ಆಗುಹೋಗುಗಳ ಸೂತ್ರವು ಈಶ್ವರಾಧೀನವಾಗಿರುತ್ತದೆ. ಆ ಕರುಣಾಘನನಾದ ಈಶ್ವರನು ಇಟ್ಟ ಸ್ಥಿತಿಯಲ್ಲಿ ನಾವು ಸಮಾಧಾನವನ್ನು ತಾಳಿ ಶೀಲವನ್ನು ಕಾಯ್ದುಕೊಳ್ಳತಕ್ಕದ್ದು. ಶೀಲಭ್ರಷ್ಟರಾಗುವದು ಹಿತಕರವಲ್ಲ. ನಮ್ಮ ಪೂರ್ವಜರು ಎಷ್ಟು ಕಷ್ಟ ಒದಗಿದರೂ ಶೀಲಭ್ರಷ್ಟರಾಗಿಲ್ಲವೆಂಬದನ್ನು ನೆನಪಿನಲ್ಲಿಡ ಬೇಕು. ಅಲ್ಪಜ್ಞರೂ, ಅಲ್ಪಶಕ್ತಿಯುಳ್ಳವರೂ ಆದ ನಾವು ಶೀಲಭ್ರಷ್ಟರಾಗಿ ಏನುಮಾಡುವ ಹಾಗಿದ್ದೇವೆ?! ಈವೊತ್ತಿನವರೆಗೆ ಶೀಲವಂತರಿಂದಲೇ ಈಶ್ವರನು ಜಗತ್ತಿನಲ್ಲಿ ಮಹತ್ಕಾರ್ಯಗಳನ್ನು ಮಾಡಿಸಿದ್ದಾನೆ. ಶೀಲಭ್ರಷ್ಟರು ಯಾವ ಮಹತ್ಕಾರ್ಯಗಳನ್ನೂ ಮಾಡಿಲ್ಲ. ಅವರು ಗಾಳಿಯೊಳಗಿನ ದೀಪದಂತೆ ಸುಖಕ್ಕಾಗಿ ಅತ್ತಿತ್ತ ಅಲೆದಾಡಿ ಕಡೆಗೆ ನಾಶಹೊಂದುವರು. ಇದನ್ನು ಲಕ್ಷದಲ್ಲಿಟ್ಟು ಪತ್ರಿಯೊಬ್ಬನೂ ಶೀಲವನ್ನು ಕಾಯ್ದುಕೊಳ್ಳುವ ಸಾಮರ್ಥ್ಯವನ್ನು ಪಡೆಯತಕ್ಕದ್ದು. ಇಂಥ ಸಾಮರ್ಥ್ಯವನ್ನು ಪಡೆಯಲಿಚ್ಛಿಸುವವರು ಸತ್ಸಂಗವನ್ನು ಮಾಡತಕ್ಕದ್ದು. ಅಂಥ ಬುದ್ಧಿಯನ್ನು ಸರ್ವೇಶನು ಎಲ್ಲರಿಗೆ ಕೊಡಲೆಂದು ಕೊನೆಯಲ್ಲಿ ಪ್ರಾರ್ಥಿಸಿ ಈ ಪ್ರಸ್ತಾವನೆಯ ಲೇಖವನ್ನು ಮುಗಿಸುವೆನು.

ಧಾರವಾಡ

21ನೇ ಮಾರ್ಚ್ 1910 ವೇ. ತಿ. ಕುಲಕರಣಿ

## ಇವರು ಯಾರಿರಬಹುದು ?

ಅರಾವಲೀ ಪರ್ವತದ ಕಟ್ಟಡವಿಯು; ದೊಡ್ಡ ದೊಡ್ಡ ಗಿಡಗಳು ದಟ್ಟವಾಗಿ ಬೆಳೆದದ್ದರಿಂದ ಮಧ್ಯಾಹ್ನ ಕಾಲದಲ್ಲಿಯೂ ಅಲ್ಲಿ ಸೂರ್ಯ ಕಿರಣಗಳಿಗೆ ಆಸ್ಪದವಿದ್ದಿಲ್ಲ. ಭಿಲ್ಲರ ಹೊರತು ಉಳಿದ ಮನುಷ್ಯರು ಆ ಅರಣ್ಯದಲ್ಲಿ ವಾಸಿಸುವ ಸಾಹಸಕ್ಕೆ ಹೋಗುತ್ತಿದ್ದಿಲ್ಲ. ಅಪರೂಪವಾಗಿ ಸಿದ್ಧ ಪುರುಷರು ಗುಹೆಗಳಲ್ಲಿ ಧ್ಯಾನಸ್ಥರಾಗಿ ಕುಳಿತಿದ್ದರೆ ಕುಳಿತಿರಬಹುದು. ಸೃಷ್ಟಿಯ ಕ್ರೂರ ಸ್ವರೂಪವು ಈ ಅರಣ್ಯದಲ್ಲಿ ಒಡೆದು ಕಾಣುತ್ತಿತ್ತು. ಕ್ರೂರ ಪಶ್ವಾದಿಗಳು ಭಕ್ಷ್ಯ ಶೋಧಕ್ಕಾಗಿ ಅತ್ತಿತ್ತ ಅಲೆದಾಡುತ್ತಿರುವಾಗ ಭಯಂಕರವಾಗಿ ಗರ್ಜಿಸಲು, ಆ ರೌದ್ರತೆಗೆ ಮತ್ತಿಷ್ಟು ಕಳೆಯೇರುತ್ತಿತ್ತು. ಊರಮನೆಯ ಜನರಿಗೆ ಅಂಜಿಕೆಯನ್ನುಂಟು ಮಾಡುವ ಆ ಘೋರಾರಣ್ಯದಲ್ಲಿ ಶಕೆ 1592ನೆಯ ವರುಷ ಕಾರ್ತಿಕ ಶುದ್ಧ 9ನೆಯ ದಿವಸ. ಯತ್ತಿನದೊಂದು ಬಂಡಿಯು ಹೋಗುತ್ತಿತ್ತು. ಅದಕ್ಕೆ ಬಂಡಿಯೆನ್ನುವದಕ್ಕಿಂತ ರಥವೆಂದರೆ ಒಪ್ಪಬಹುದು. ಯಾಕಂದರೆ, ಅದು ಸಣ್ಣದಾಗಿದ್ದರೂ ಆಕಾರದಿಂದ ಪ್ರಾಚೀನ ಕಾಲದ ರಥವನ್ನು ಹೋಲುತ್ತಿತ್ತು. ಅದರ ಮೇಲ್ಛದಿಯು ದೇವರ ಗುಡಿಯ ಶಿಖರದ ಹಾಗೆ ಒಪ್ಪುತ್ತಿದ್ದು, ಆ ಶಿಖರದ ಮೇಲೊಂದು ಸುಂದರವಾದ ಕಳಸವೂ, ರಥದ ನಾಲ್ಕೂ ಮೂಲೆಗಳ ಮೇಲೆ ಬೇರೆ ನಾಲ್ಕು ಸಣ್ಣ ಕಳಸಗಳೂ ಇದ್ದವು. ರಥದ ನಾಲ್ಕೂ ಮಗ್ಗಲಲ್ಲಿ ಪರದೆಗಳು ಇಳಿಬಿಟ್ಟಿದ್ದವು. ಒಳಗೆ ಕೂತ ಸಾಧಾರಣ ಎತ್ತರದ ಮನುಷ್ಯರಿಗೆ ಕಾಣಿಸುವ ಅಳತೆಯಿಂದ ಆ ಪರದೆಗಳಲ್ಲಿ ಸಣ್ಣ ಕಿಡಿಕಿಗಳನ್ನು ಬಿಟ್ಟಿದ್ದರು. ಆ ಕಿಡಿಕಿಗಳಿಗೆ ಜಾಳಿಗೆಯಂಥ ಹೆಣಿಕೆಯ ಅರಿವೆಯನ್ನು ಹಚ್ಚಿದ್ದರು. ಈ ಎಲ್ಲ ಲಕ್ಷಣಗಳ ಮೇಲಿಂದ ರಥದಲ್ಲಿ ಹೆಂಗಸು ಕುಳಿತಿರುವಳೆಂಬ ಭಾವನೆಯು ನೋಡುವವರಿಗೆ ಆಗುತ್ತಿತ್ತು.

ಆ ರಥದ ಸಂಗಡ ಕೇಸರಿಯ ಬಣ್ಣದ ಉಡುಪು ತೊಡಪುಗಳುಳ್ಳ ನಾಲ್ಕು ಜನ ರಜಪೂತ ಸಿಪಾಯಿಗಳೂ, ಬಣ್ಣದಿಂದ ಇದ್ದಲಿಯನ್ನು ಹೋಲುವ ಕರಾಳವದನದ ನಾಲ್ಕು ಜನರೆಭಿಲ್ಲರೂ ಸಾಗಿದ್ದರು. ಕೇಸರಿಯ ಬಣ್ಣದ ಉದ್ದಂಗಿಯನ್ನು ಹಾಕಿಕೊಂಡಿದ್ದ ಒಬ್ಬ ವೃದ್ಧ ರಜಪೂತ ಸರದಾರನು ಕೇಸರಿಯ ಬಣ್ಣದ್ದೇ ಒರೆಯುಳ್ಳ ಕತ್ತಿಯನ್ನು ಕೈಯಲ್ಲಿ ಹಿಡಕೊಂಡು ದೊಡ್ಡ ಕುದುರೆಯನ್ನೇರಿ ರಥದ ಮುಂದೆ ನಡೆದಿದ್ದನು. ಅವನು ಭವ್ಯನೂ ತೇಜಃಪುಂಜನೂ ಆಗಿದ್ದಾಗ್ಯೂ ಮುಪ್ಪಿನಿಂದ ಅವನ ಮೋರೆಯು ಸುಕ್ಕುಗಟ್ಟಿತ್ತು. ಆ ವೃದ್ಧ ಸರದಾರನು ಚಿಂತಾ ಕ್ರಾಂತನಾಗಿದ್ದನು. ಯಾವದೋ ಒಂದು ದುಃಖದಿಂದ ಅವನ ಅಂತಃಕರಣವು ಕಮರಿ ಹೋದಂತೆ ಕಾಣುತ್ತಿತ್ತು. ತಗ್ಗುದಿನ್ನೆಯ ನೆಲದಲ್ಲಿ ರಥವು ಹೋಗುವಾಗ ಆಗುವ ಗಾಲಿಗಳ

ಸಪ್ಪಳವೂ, ಎತ್ತುಗಳ ಹುರಿಗೆಜ್ಜೆಗಳ ಸಪ್ಪಳವೂ, ಕುದುರೆಯ ಕೊಳಗಗಳ ಸಪ್ಪಳವೂ, ಪ್ರಾತಃಕಾಲವಾದ್ದರಿಂದ ಆಹಾರಕ್ಕಾಗಿ ಹೊರಗೆ ಹೋಗುವ ಮೊದಲು ತಮ್ಮ ಮರಗಳ ಮೇಲೆಯೇ ಕೂತು ಕೂಗುವ ಹಕ್ಕಿಗಳ ಮಂಜುಳವಾದ ಕಿಲಕಿಲವೆಂಬ ಸಪ್ಪಳವೂ ಅಲ್ಲದೆ ಬೇರೆ ಸಪ್ಪಳಗಳು ಆ ಸ್ಥಾನದಲ್ಲಿ ಆಗ್ಗೆ ಕಿವಿಗೆ ಬೀಳುತ್ತಿದ್ದಿಲ್ಲ. ರಥದ ಸಂಗಡ ಸಾಗಿರುವವರು ತಮ್ಮ ತಮ್ಮೊಳಗೆ ಒಬ್ಬರ ಸಂಗಡ ಲೊಬ್ಬರು ಮಾತಾಡುತ್ತಿದ್ದಿಲ್ಲ; ರಥದೊಳಗೂ ಯಾರೂ ಮಾತಾಡುತ್ತಿದ್ದಿಲ್ಲ. ಮುಂಜಾವಿನ ಹೊತ್ತಾದ್ದರಿಂದ ಎತ್ತುಗಳು ಉಲ್ಲಾಸದಿಂದ ತಮ್ಮ ಹುರಿಗೆಜ್ಜೆಯ ಗತ್ತಿನಲ್ಲಿ ಒತ್ತರದಿಂದ ಸಾಗಿದ್ದವು. ಎತ್ತು ಕುದುರೆಗಳ ಹೊರತು ಉಳಿದ ಯಾರಲ್ಲಿಯೂ ಚಟುವಟಿಕೆಯು ಕಾಣುತ್ತಿದ್ದಿಲ್ಲ; ಅವರ ಮುಖದಲ್ಲಿ ಉಲ್ಲಾಸವು ತೋರುತ್ತಿದ್ದಿಲ್ಲ. ಪ್ರತಿ ಒಬ್ಬನು ಚಿಂತಾಕ್ರಾಂತನೂ ಶೋಕಮಗ್ನನೂ ಆಗಿದ್ದನು. ಆದ್ದರಿಂದ ಆ ಪ್ರಭಾತ ಸಮಯದ ರಮಣೀಯವಾದ ವನಶೋಭೆಯ ಕಡೆಗೆ ಅವರ ಲಕ್ಷವು ಹೋದಂತೆ ತೋರಲಿಲ್ಲ. ಅವರು ಒಳ್ಳೇ ಒತ್ತರದಿಂದ ದಾರಿಯನ್ನು ನಡೆಯುತ್ತಿದ್ದರು.

ಸುಮಾರು ಎರಡು ತಾಸು ಹೊತ್ತು ಏರಲು, ಮುಂದೆ ಸಾಗಿದ್ದ ವೃದ್ಧ ಸರದಾರನು ಹಿಂದಕ್ಕೆ ತಿರುಗಿ ಒಬ್ಬ ರಜಪೂತ ಸಿಪಾಯಿಯನ್ನು ಕುರಿತು, ಮೆಲ್ಲಗೆ– ಪದ್ಮನಾಭನೇ, ಇನ್ನೂ ಆ ಸ್ಥಳವು ಎಷ್ಟು ದೂರವಿರುವದು? ನಿನ್ನ ಹೇಳಿಕೆಯಂತೆ ನಾವು ಇಷ್ಟೊತ್ತಿಗೆ ಆ ಸ್ಥಳಕ್ಕೆ ಹೋಗ ಬಹುದಾಗಿತ್ತು, ಹೀಗಿದ್ದು ನೀನು ಹೇಳಿದ ಗುರುತುಗಳು ಇನ್ನೂ ಕಂಡುಬರಲೊಲ್ಲವಲ್ಲ! ಅವರು ತನ್ನ ಹದ್ದುಬಿಟ್ಟು ಇಷ್ಟು ದೂರ ಬಂದರೂ ವೀರಸಿಂಹನು ಅವರ ಬೆನ್ನುಹತ್ತಿ ಇಲ್ಲಿಯವರೆಗೆ ಯಾಕೆ ಬಂದಿರಬಹುದು ! ಮಾಡುವದೇನು? ಪ್ರಾರಬ್ಧವನ್ನು ಮೀರುವದು ಯಾರಿಗೂ ಶಕ್ಯವಲ್ಲ; ವೀರಸಿಂಹನ ಪ್ರಾಚೀನ ಕರ್ಮವೇ ಅವನನ್ನು ಎಳೆದುತಂದಿತು. ತಮ್ಮ ತಮ್ಮ ಹದ್ದುಗಳನ್ನಷ್ಟು ಕಾಯಬೇಕೆಂದು ರಾಜಸಿಂಹ ಮಹಾರಾಜರು ಆಜ್ಞಾಪಿಸಿ ರುವರು; ಆದರೆ ವೀರಸಿಂಹನು ಕಡುಗಲಿಯಾದ್ದರಿಂದ ಯವನರನ್ನು ಕಂಡಕೂಡಲೇ ಅವನ ವೀರಶ್ರೀಯು ಸ್ಫೂರ್ತಿಗೊಂಡು ಅವರನ್ನು ತುಂಡರಿಸಿ ಚೆಲ್ಲುವ ಭರದಲ್ಲಿ ಅವನು ಇಲ್ಲಿಯವರೆಗೆ ಬಂದಿರಬಹುದು. ಉಪಾಯವಿಲ್ಲ! ಅವನು ಇಷ್ಟು ಸಾಹಸ ಮಾಡುವ ಅಗತ್ಯವಿದ್ದಿಲ್ಲ ಎಂದು ಮಾತಾಡುತ್ತಿರಲು ಪದ್ಮನಾಭನು ನಡುವೆ ಬಾಯಿಹಾಕಿ– ''ಸಂಗ್ರಾಮ ಸಿಂಗಜೀ, ವೀರಸಿಂಹನ ಆಗಿನ ವೀರಶ್ರೀಯನ್ನು ನಾನೇನು ಬಣ್ಣಿಸಲಿ! ಒಬ್ಬ ಉತ್ತಮ ಬೇಟೆಗಾರನು ಬೇಟೆ ದೊರೆಯದ್ದರಿಂದ ನಿರಾಶನಾಗಿ ಕುಳಿತಿರಲು, ಆನೆಯಂಥಾದ್ದೊಂದು ಮಿಕವು ಅವನ ಕಣ್ಣಿಗೆ ಬಿದ್ದದ್ದರಿಂದ ಅವನು ಅದನ್ನು ಬೆಂಬಳಿಸಿ ಹೋದಂತೆ ವೀರಸಿಂಹನು ಮೊಗಲರ ಬೆನ್ನುಹತ್ತಿ ಹೋದನು. ಅವನು ಯವನರ ಹಾದಿಯನ್ನು ಉತ್ಸುಕತೆಯಿಂದ ನೋಡುತ್ತಿದ್ದನು. ಅವನು ಈ ಗಡಿಯನ್ನು ಕಾಯಹತ್ತಿ ಬಹುದಿವಸ ವಾಗಿದ್ದರೂ ಮೊಗಲರ ದೊಂದು ಪಿಳ್ಳೆ ಸಹ ಅವನ ಕಣ್ಣೆದುರಿಗೆ ಸುಳಿದಿದ್ದಿಲ್ಲ; ಆದ್ದರಿಂದ ಅವನಿಗೆ ಬಹಳ ಅಸಮಾಧಾನವಾಗಿತ್ತು, ರಾಜಸಿಂಹ ಮಹಾರಾಜರು ತನ್ನನ್ನು ಈ ಗಡಿಗೆ ನೇಮಿಸಿದಂತೆ ತಾನು ಮೊಗಲರ ಮೇಲೆ ಧುಮುಕಿ ಅವರ ಒಂದೆರಡು ಗುಂಪುಗಳನ್ನಾದರೂ ಸೆರೆಹಿಡಿದು ಮಹಾರಾಜರಿಗೆ ಒಪ್ಪಿಸಬೇಕೆಂದು ಆತನು ಹಾತೊರೆಯುತ್ತಿದ್ದನು. ಮೊಗಲರ ಸುಳುವು ಹಿಡಿಯುವದಕ್ಕಾಗಿ

ನಮ್ಮನ್ನು ಹಲವುಸಾರೆ ದೂರದೂರ ಕಳಿಸಿದ್ದನು. ನಾವು ತಿರುತಿರುಗಿ ಬೇಸತ್ತೆವಾದರೂ ಮೊಗಲರ ಸದ್ದು ನಮ್ಮ ಕಿವಿಗೆ ಬೀಳಲಿಲ್ಲ.

ಹೀಗಿರಲು ಮೊನ್ನೆ ಮೊಗಲರು ನಮ್ಮ ಗಡಿಯ ಕಡೆಗೆ ತಿರುಗಿದರು. ಈ ಸುದ್ದಿಯು ವೀರಸಿಂಹ ಸರದಾರರ ಕಿವಿಗೆ ಬಿದ್ದ ಕೂಡಲೇ ಅವರ ಬಾಹುಗಳು ಸ್ಫುರಣಗೊಂಡವು. ಅವರು ಶಸ್ತ್ರಾಸ್ತ್ರಗಳಿಂದ ಸಜ್ಜಾಗಿ, ತಮ್ಮ ಪರಿವಾರವು ತಟ್ಟನೇ ಕೂಡಬೇಕೆಂದು ಕೊಂಬುಗಳ ನ್ನೂದಿಸಿದರು. ಎಲ್ಲ ಸೌರಣೆಯಾಗಲು ಪರಿವಾರದೊಡನೆ ಅವರು ತಡಮಾಡದೆ ತಮ್ಮ ಕಡೆಗೆ ಸಾಗಿಬರುವ ಶೀರಖಾನನ ಗುಂಪಿನಮೇಲೆ ಬಿದ್ದರು. ಕೇಳುವದೇನು? ಇಕ್ಕಡಿಯ ಬಣದವರು ಕೈಗೆ ಕೈಹತ್ತಿ ಜೀವದ ಪರಿವೆಯಿಲ್ಲದೆ ಕಾದಿದೆವು. ಕಡೆಗೆ ಶೀರಖಾನನು ಹಿಂದೆಗೆದನು; ವೀರಸಿಂಹ ಸರದಾರರು ಮೊಗಲರನ್ನು ಸ್ವಲ್ಪ ಬೆನ್ನಟ್ಟಿ ಹಿಂದಕ್ಕೆ ತಿರುಗಿದ್ದರೆ ಎಲ್ಲ ನೆಟ್ಟಗಾಗುತ್ತಿತ್ತು ಆದರೆ ಮಾಡುವದೇನು? ಅವರ ಶೌರ್ಯಾಗ್ನಿಯು ಶಾಂತವಾಗದಿರಲು ಅವರು ಮೊಗಲರನ್ನು ತುಂಡರಿಸುವ ಆವೇಶದಲ್ಲಿ ಭರದಿಂದ ಒಬ್ಬರೇ ಮುಂದಕ್ಕೆ ಸಾಗಿಹೋದರು. ಇದನ್ನು ನೋಡಿ ಮೊಗಲರು ಹಿಂದಿರುಗಿ ವೀರಸಿಂಹರವರನ್ನು ಕವಿದು ಅವರನ್ನು ಇಳಿಗೆರಗಿಸಿದರೋ, ನಡುವೆ ಅಡಗಿಕೊಂಡಿದ್ದ ಮೊಗಲರು ಹಿಂದಿನಿಂದ ಬಂದು ಅವರ ಮೇಲೆ ಧುಮುಕಿ ನೆಲಕ್ಕುರುಳಿಸಿದರೋ ದೇವರೇ ಬಲ್ಲ. ನಾವು ಹೋಗುವದ ರೊಳಗಾಗಿ ನಮ್ಮ ಸರದಾರ ವೀರಸಿಂಹರವರು ಹದಿನೈದು ಗಾಯಗಳ ವ್ಯಥೆಯಿಂದ ಮೈಮರೆತು ಬಿದ್ದಿದ್ದರು. ಅವರ ಸರ್ವಾಂಗದಲ್ಲಿ ಒಂದೇಸವನೆ ರಕ್ತಸ್ರಾವವಾಗುತ್ತಿತ್ತು ನಾವು ಅವರನ್ನು ಎಚ್ಚರಗೊಳಿಸವದಕ್ಕಾಗಿಯೂ ರಕ್ತಸ್ರಾವವನ್ನು ನಿಲ್ಲಿಸುವದಕ್ಕಾಗಿಯೂ ಬಹಳ ಯತ್ನಿಸಿದೆವು ! ಹಾಯ್ ! ಹಾಯ್ ! ಸಂಗ್ರಾಮಸಿಂಗರೇ, ಅದೆಲ್ಲ ವ್ಯರ್ಥವಾಯಿತು ! ನೋಡನೋಡುತ್ತಿರು ವಷ್ಟರಲ್ಲಿ ವೀರಸಿಂಹರವರು ಗತಪ್ರಾಣರಾದರು. ಅವರಿಗೆ ಅಗ್ನಿಸಂಸ್ಕಾರವನ್ನು ಮಾಡಿ ನಿಮಗೆ ಈ ದುರ್ವಾರ್ತೆಯನ್ನು ಹೇಳುವದಕ್ಕಾಗಿ ಬದುಕಿ ಉಳಿದೆವು. ಒಮ್ಮೆ ಶವವನ್ನು ಊರಿಗೆ ತರಬೇಕೆಂದು ಯೋಚಿಸಿದೆವು; ಆದರೆ ಏಳು ಎಂಟು ದಿನದ ಹಾದಿಯಾದ್ದರಿಂದ ಕೆಟ್ಟು ನಾತವಿಟ್ಟೀತೆಂದು ತಿಳಿದು ಹಾಗೆ ಮಾಡಲಿಲ್ಲ. ನಾವು ಮುಂದಕ್ಕೆ ಹೋಗ ಬೇಡಿರೆಂದು ಪರಿಪರಿಯಾಗಿ ಹೇಳಿದೆವು; ಅವರು ಕೇಳಲಿಲ್ಲ. ಅವರ ಶೌರ್ಯವು ಮಿಗಿಲಾದದ್ದು; ಸಾಹಸವು ಅತರ್ಕ್ಯವಾದದ್ದು. ಅವುಗಳಲ್ಲಿ ದುರಭಿಮಾನವು ಬೆರೆತದ್ದರಿಂದ ಹೇಳಿದ್ದೆಲ್ಲ ವ್ಯರ್ಥವಾಯಿತು.

ಪದ್ಮನಾಭನ ಈ ಮಾತುಗಳನ್ನೆಲ್ಲ ಆ ವೃದ್ಧ ಸರದಾರನು ಒಮ್ಮನಸ್ಸಿನಿಂದ ಕೇಳುತ್ತಿದ್ದನು. ನಡುನಡುವೆ ಆತನ ಕಣ್ಣುಗಳೊಳಗಿಂದ ಅಶ್ರುಬಿಂದುಗಳು ಉದುರುತ್ತಿದ್ದವು. ಅವುಗಳನ್ನು ಅವನು ಹಾಗೆಯೇ ಉದುರಗೊಡುತ್ತ ಮುಂದಿನ ಮಾರ್ಗದ ಕಡೆ ಲಕ್ಷವಿಟ್ಟು ಸಾಗಿದ್ದನು. ಆ ವೃದ್ಧ ಸರದಾರನು ವೀರಸಿಂಹನ ಮರಣ ವೃತ್ತಾಂತವನ್ನು ಇದೇ ಮೊದಲು ಕೇಳಿದ್ದನೆಂಬ ಹಾಗೆ ಇದ್ದಿಲ್ಲ. ಬೇರೆ ಬೇರೆ ಸಿಪಾಯಿಗಳ ಮುಖದಿಂದ ಅದನ್ನು ಹಲವು ಸಾರೆ ಕೇಳಿದ್ದನು; ಆದರೂ ಪುನಃ ಪುನಃ ಆ ವಾರ್ತೆಯನ್ನು ಕೇಳಲಿಕ್ಕೆ ಅವನು ಬೇಸರಿಸುತ್ತಿದ್ದಿಲ್ಲ. ಅತ್ಯಂತ ಪ್ರಿಯರಾದವರು ಮರಣ ಹೊಂದಿದರೆ, ಅವರ ಮರಣವಾರ್ತೆಯನ್ನು ಮೇಲೆ ಮೇಲೆ

ಹೇಳಲಿಕ್ಕೂ ಕೇಳಲಿಕ್ಕೂ ಆಪ್ತರಿಗೆ ಬೇಸರವಾಗದೆ ಅದರಿಂದ ಅವರಿಗೆ ಒಂದು ಪ್ರಕಾರದ ಸಮಾಧಾನ ಉಂಟಾಗುತ್ತಿರುತ್ತದೆ. ವೃದ್ಧ ಸಂಗ್ರಾಮಸಿಂಗನ ಗತಿಯಾದರೂ ಹೀಗೇ ಆಗಿತ್ತು.

ರಥವು ಪರಿವಾರದೊಡನೆ ಕೆಲವು ಮಾರ್ಗವನ್ನು ಕ್ರಮಿಸಿ ಒಂದು ದಟ್ಟವಾದ ಗಿಡಗಳ ಗುಂಪಿನಲ್ಲಿ ಬಂದಿತು. ಅಲ್ಲಿ ಒತ್ತಟ್ಟಿಗೆ ಒಂದು ಬೂದಿಯ ರಾಶಿಯು ಕಣ್ಣಿಗೆ ಬಿತ್ತು. ಅಷ್ಟರಲ್ಲಿ ಒಬ್ಬ ಭಿಲ್ಲನು ಮುಂದಕ್ಕೆ ಬಂದು ಅತ್ತಿತ್ತ ನೋಡಿ ಒಮ್ಮಿಂದೊಮ್ಮೆ– ''ಹ ! ಇದೇ ಆ ಸ್ಥಳವು'' ಎಂದು ನುಡಿದನು. ಆಗ ರಥವು ಅಲ್ಲಿ ನಿಂತುಕೊಂಡಿತು. ಒಳಗಿಂದಲೇ ಪರದೆಯನ್ನು ಸರಿಸುವ ಒಬ್ಬ ಇಪ್ಪತ್ತು–ಇಪ್ಪತ್ತೆರಡು ವರುಷದ ಸ್ತ್ರೀಯು ಅತ್ತಿತ್ತ ಹಣಿಕಿನೋಡಿ ಕೆಳಗಿಳಿದಳು. ಅವಳ ಮುಖಮುದ್ರೆಯು ದುಃಖದಿಂದ ವ್ಯಾಪ್ತವಾಗಿತ್ತು. ಅವಳು ಮತ್ತೊಮ್ಮೆ ರಥದ ಪರದೆಯನ್ನು ಓರೆಮಾಡಿ ಕೈಕೊಟ್ಟು ಮತ್ತೊಬ್ಬ ತರುಣ ಸ್ತ್ರೀಯನ್ನು ಕೆಳಗಿಳಿಸಿಕೊಂಡಳು.

ಎರಡನೆಯ ತರುಣ ಸ್ತ್ರೀಯು ಕೇವಲ ಕಾರುಣ್ಯದ ಮೂರ್ತಿಯಾಗಿದ್ದಳು. ಅವಳು ಶುಭ್ರವಸ್ತ್ರ ಪರಿಧಾನಮಾಡಿದ್ದಳು. ಅವಳ ಕಂಠದಲ್ಲಿ ಮುತ್ತಿನದೊಂದು ಸರವೂ, ಕೈಗಳಲ್ಲಿ ಒಂದೆಂದರೆ ಒಂದೇ ಕಂಕಣವೂ ಒಪ್ಪುತ್ತಿದ್ದವು. ಆಗ ಅವಳ ಕಣ್ಣುಗಳಲ್ಲಿ ಸ್ವಲ್ಪವಾದರೂ ನೀರು ಬರುತ್ತಿದ್ದಿಲ್ಲ; ಆ ನೀರುಗಳು ಪ್ರವಾಹರೂಪದಿಂದ ಒಮ್ಮೆ ಹರಿದುಹೋಗಿಬಿಟ್ಟಿದ್ದರಿಂದ ಆಕೆಯ ವಿಶಾಲವಾದ ಸುಂದರ ನೇತ್ರಗಳಲ್ಲಿ ನೀರೇ ಇದ್ದಂತೆ ತೋರುತ್ತಿದ್ದಿಲ್ಲ. ಅಥವಾ ಆಕೆಯು ಇನ್ನು ಕಣ್ಣೀರು ಹಾಕಲಿಕ್ಕಿಲ್ಲೆಂದು ಪ್ರತಿಜ್ಞೆ ಮಾಡಿ ಅವನ್ನು ಒಳಗೇ ಪ್ರತಿಬಂಧಿಸಿ ಇಟ್ಟಿದ್ದಳೆಂದರೂ ಅನ್ನಬಹುದು. ತನ್ನ ದುಃಖವನ್ನು ಮಂದಿಗೆ ತೋರಗೊಡಲಿಕ್ಕಿಲ್ಲೆಂದು ನಿಶ್ಚಯಿಸಿದಂತೆ ಆಕೆಯ ಮುಖಮುದ್ರೆಯಿಂದ ಗೊತ್ತಾಗುತ್ತಿತ್ತು. ಹೀಗೆ ದುಃಖಾತಿರೇಕದಿಂದ ಕಂಗೆಟ್ಟು ಗಾಂಭೀರ್ಯವನ್ನು ತಾಳಿದ್ದ ಆ ಪ್ರಮದೆಯನ್ನು ಮೊದಲು ಗಾಡಿಯಿಂದ ಇಳಿದಿದ್ದ ಸ್ತ್ರೀಯು ಕೈಹಿಡಿದು ಬೂದಿಯ ರಾಶಿಯಹತ್ತರ ಕರಕೊಂಡು ಹೋಗಿ ದೊಡ್ಡ ದನಿಯಿಂದ ಅಳಹತ್ತಿದಳು. ಆ ವೃದ್ಧ ರಜಪೂತ ಸರದಾರನು ಒಂದು ಬದಿಗೆ ಹೋಗಿ ನಿಂತುಕೊಂಡನು. ಸಂಗಡಿಗರಾದ ಭಿಲ್ಲರು ದೂರ ಸರಿದು ನಿಂತುಕೊಂಡರು. ಉಳಿದ ರಜಪೂತ ಸಿಪಾಯಿಗಳು ವೃದ್ಧ ಸರದಾರನ ಹತ್ತಿರ ವಿನಯದಿಂದ ನಿಂತುಕೊಂಡರು. ಆ ಇಪ್ಪತ್ತೆರಡು ಇಪ್ಪತ್ಮೂರು ವರ್ಷದ ಸ್ತ್ರೀಯ ಹೊರತು ಉಳಿದವರ ಮುಖದಿಂದ ದುಃಖೋದ್ಗಾರಗಳು ಹೊರಗೆ ಮಾತ್ರ ಹೊರಡುತ್ತಿದ್ದಿಲ್ಲ. ಆಕೆಯೊಬ್ಬಳು ಮಾತ್ರ ''ವೀರಸಿಂಹಜೀ, ವೀರಸಿಂಹಜೀ, ನಮ್ಮನ್ನು ತೊಲಗಿ ಹ್ಯಾಗೆ ಹೋದಿರಿ? ಮಹಾರಾಜರ ಸೇವೆಗಾಗಿಯೇ ತಮ್ಮ ಜನ್ಮವಿದ್ದರೂ, ಅದಕ್ಕಾಗಿ ಪ್ರಾಣತ್ಯಾಗ ಮಾಡುವದರಲ್ಲಿ ಯಾವ ಲಾಭವನ್ನು ಕಂಡುಕೊಂಡಿರಿ? ನೀವು ನಿಮ್ಮ ಈ ಹೆಂಡತಿಯ ಸಲುವಾಗಿಯೂ, ನಮ್ಮ ಸಲುವಾಗಿಯೂ, ನಿಮ್ಮ ಹಿರಿಯರ ಸಲುವಾಗಿಯೂ ಬೇಸತ್ತು ಈ ದುರವಸ್ಥೆಯನ್ನು ತಂದುಕೊಂಡಿರಾ ! ಇನ್ನು ನಮ್ಮ ಗತಿಯೇನು? ಎಂದು ಹಾಡಿ ಹಾಡಿಕೊಂಡು ದೊಡ್ಡ ಧ್ವನಿಯಿಂದ ಅಳತೊಡಗಿದಳು.

ಇಪ್ಪತ್ತು ವರ್ಷದ ಒಳಹೊರಗಿನ ವಯಸ್ಸುಳ್ಳ ಇನ್ನೊಬ್ಬ ಆ ಸ್ತ್ರೀಯು ಬಗ್ಗಿ ಒಂದುಸಾರೆ ಆ ಬೂದಿರಾಶಿಗೆ ವಂದಿಸಿ ಒಂದು ಚಿಮ್ಮಟಿಗೆ ಬೂದಿಯನ್ನು ತಕ್ಕೊಂಡು

ತನ್ನ ಹಣೆಗೆ ಹಚ್ಚಿಕೊಂಡಳು. ಆಗ ಅವಳ ಕಣ್ಣುಗಳೊಳಗಿಂದ ದುಃಖಾಶ್ರುಗಳು ಪಟಪಟನೆ ಉದರಿದವು. ಒಳಗೆ ನಿಲ್ಲಲಾರದೆ ಹೊರಗೆ ಧುಮ್ಮಿಕಲೆತ್ನಿಸುವ ದುಃಖವನ್ನು ಆಕೆಯು ಬಹು ಪ್ರಯಾಸದಿಂದ ಒತ್ತೊತ್ತಿ ಮತ್ತೆ ನುಂಗಿಕೊಂಡಳು. ಬಳಿಕ ಕಣ್ಣೀರುಗಳನ್ನು ಒರಿಸಿಕೊಂಡು ಒಳ್ಳೇ ಧೈರ್ಯವನ್ನು ತಾಳಿ ಆಕೆಯು ಸಮಾಧಾನದಿಂದ ತನ್ನ ಗೆಳತಿಯ ಹತ್ತಿರ ಹೋಗಿ ನುಡಿದಳೇನಂದರೆ— ದೇವಲದೇವಿ, ಅವ್ವನನ್ನು (ಮಾಜೀಯನ್ನು) ಬಿಟ್ಟು ನಿನ್ನನ್ನು ಸಂಗಡ ಕರೆದುಕೊಂಡು ಬಂದಿದ್ದು ಇದಕ್ಕಾಗಿಯೇ ಏನು? ನನ್ನನ್ನು ತೀವ್ರವಾಗಿ ಪತಿಯೆಡೆಗೆ ಕಳಿಸುವ ಸಿದ್ಧತೆಯನ್ನು ಬಿಟ್ಟು ಅಳುತ್ತ ಕುಳಿತುಕೊಂಡಿಯಲ್ಲ! ತಂದೆಗಳೇ, (ಪಿತಾಜೀ) ಇನ್ನು ಯಾಕೆ ತಡಮಾಡುತ್ತೀರಿ? ಈ ಭಿಲ್ಲರಿಗೆ ಚಿತೆಯನ್ನು ರಚಿಸಲು ಇಂಧನಗಳನ್ನು ತರಬೇಕೆಂದು ಯಾಕೆ ಹೇಳಲೊಲ್ಲಿರಿ? ಬರ್ರಿ, ಮಥುರಾನಾಥರೇ, ನೀವು ಪುರೋಹಿತರಿರುತ್ತೀರಿ. ನೀವು ನನಗೆ ಮಂತ್ರವನ್ನು ಹೇಳಿ ನನ್ನನ್ನು ಪತಿಯೆಡೆಗೆ ಕಳಿಸಿರೆಂದು ತಿಳಿದು ತಂದೆಗೆ ಹೇಳಬೇಕಂತ ನಿಮ್ಮನ್ನು ಕರೆತಂದಿದ್ದೇನೆ. ಇನ್ನುಮೇಲೆ ಯಾರೂ ಅಳಬೇಡಿರಿ. ನನಗೆ ಆತ್ತಕಡೆಯ ದರ್ಶನೇಚ್ಛೆಯು ಬಹಳವಾಗಿದೆ. ನೀವು ಹೊತ್ತು ಮಾಡಿಮಾಡಿದಂತೆ ನನ್ನ ಮನಸ್ಸಿಗೆ ಹೆಚ್ಚು ಹೆಚ್ಚು ವ್ಯಥೆಯಾಗುತ್ತದೆ. ನನಗೆ ಆ ವ್ಯಥೆಯನ್ನು ಯಾಕೆ ಉಂಟು ಮಾಡುತ್ತೀರಿ? ಹೂ! ದೇವಲ, ಏಳು ಏಳು ವಿಲಂಬಮಾಡುವದು ಸರಿಯಲ್ಲ!

ಆ ಪ್ರಮದೆಯ ದಿಟ್ಟತನದ ಮಾತುಗಳನ್ನು ಕೇಳಿ ಎಲ್ಲರಿಗೂ ಬಹಳ ಆಶ್ಚರ್ಯ ವಾಯಿತು; ಯಾಕಂದರೆ ಅವರು ಆ ಸುಕುಮಾರಿಯನ್ನು ಮನೆಯಿಂದ ಕರತರುವಾಗ ಅವಳ ಈ ಸ್ಥಾನಕ್ಕೆ ಬರುವದರೊಳಗೆ ಹಾದಿಯಲ್ಲಿ ಇಲ್ಲವೆ ಈ ಸ್ಥಾನಕ್ಕೆ ಬಂದಬಳಿಕ ಪತಿಯೊಡನೆ ಸತಿಹೋಗುವ ತನ್ನ ವಿಚಾರವನ್ನು ಬಿಟ್ಟು ಬಿಟ್ಟಾಳೆಂದು ಅವರು ನೆನೆಸಿದ್ದರು; ಆದರೆ ಆ ಪತಿವ್ರತೆಯು ಹಾಗೆ ಮಾಡದೆ ಸಂತೋಷದಿಂದ ಸಹಗಮನಕ್ಕೆ ಸಿದ್ಧಳಾದದ್ದನ್ನು ನೋಡಿ ಎಲ್ಲರೂ ನಿರಾಶೆಪಟ್ಟರು. ದೇವಲದೇವಿಯು ಇನ್ನೊಮ್ಮೆ ಹೇಳಿ ತನ್ನ ಒತ್ತಾಸೆಯಿಂದ ತನ್ನ ಗೆಳತಿಯ ಮನಸ್ಸನ್ನು ತಿರುಗಿಸಬೇಕೆಂದು ಬಗೆದು— ಸಖೀ, ಕಮಲಕುಮಾರೀ, ಇದೇನು ನಿನ್ನ ಹುಚ್ಚುತನ? ಈ ವಯಸ್ಸಿನಲ್ಲಿ ಸತಿಹೋಗುವ ಹಟಹಿಡಿಯುವರೇ? ಭಗವಂತನಾದ ಏಕಲಿಂಗೇಶ್ವರನ ಸೇವೆಯಲ್ಲಿ ದೇಹವನ್ನು ಸವಿಸಿದರೆ ಪುಣ್ಯ ಬರಲಿಕ್ಕಿಲ್ಲವೇ? ನೀನು ಸತಿಹೋಗುವದರಿಂದ ನಿನ್ನ ತಾಯಿ–ತಂದೆಗಳಿಗಾಗುವ ದುಃಖವನ್ನು ಮನಸ್ಸಿನಲ್ಲಿ ತಂದುಕೋ. ನೀನು ಒಬ್ಬಳೇ ಮಗಳು. ನೀನು ಹೀಗೆ ಪ್ರಾಣ ಕೊಟ್ಟರೆ ಮುಪ್ಪಿನ ತಾಯಿ–ತಂದೆಗಳ ಗತಿಯೇನು? ತಿಳಿದು ನೋಡು, ಹುಚ್ಚಿಯ ಹಾಗೆ ಮಾಡಬೇಡ ಎಂದು ಹೇಳಿದಳು.

ದೇವಲದೇವಿಯ ಈ ಮಾತುಗಳನ್ನು ಕೇಳಿದಕೂಡಲೇ ಕಮಲಕುಮಾರಿಯು ನಕ್ಕು ನುಡಿದಳೇನಂದರೆ— ಸಖೀ, ನಿನ್ನ ಮಾತುಗಳನ್ನು ಕೇಳಿ ನನಗೆ ಬಹಳ ಆಶ್ಚರ್ಯವಾಗುತ್ತದೆ. ಅಲ್ಲೇ ಹುಚ್ಚೀ, ನಾನು ಸತಿಹೋದರೆ ತಂದೆತಾಯಿಗಳು ದುಃಖಪಡುತ್ತಾರೆಂದು ಹೇಳುತ್ತೀ ಯಲ್ಲ! ಒಳ್ಳೇದು ನಿನ್ನಂತೆ ಮಾತಾಡುತ್ತೇನೆ; ನಾನು ಸತಿಹೋಗದೆ ಬಿಟ್ಟರೆ ವೈಧವ್ಯದಿಂದ ಅಮಂಗಲೆಯಾದ ನಾನು ತಾಯಿತಂದೆಗಳ ಕಣ್ಣಿಗೆ ಕಟ್ಟಿದ್ದರೆ, ಅವರು ಆನಂದಪಡಬಹುದೇ?

ನೀನೇ ಹೇಳು. ವ್ಯರ್ಥವಾಗಿ ಮೋಹಪಾಶಕ್ಕೊಳಗಾಗಿ ಆಗುವ ಕಾರ್ಯಕ್ಕೆ ವಿಘ್ನವನು ತರಬೇಡ. ಏಳು ನನಗೆ ಅನುಕೂಲೆಯಾಗು. ಅಪ್ಪನಿಗೆ ತೊಂದರೆಯುಂಟುಮಾಡಬೇಡ. ಭಿಲ್ಲರನ್ನು ಕಟ್ಟಿಗೆಗೆ ಕಳಿಸು. ಇವರಿಬ್ಬರು ಸಿಪಾಯಿಗಳೂ ಪದ್ಮನಾಭಜಿಯೂ ಚಿತೆಯನ್ನು ರಚಿಸಲಿ. ಮಥುರಾನಾಥರೇ, ಪ್ರತಿಮೆಯನ್ನು ರಚಿಸುವಿರೋ ? ಸಂಗಡತಕ್ಕೊಂಡು ಬಂದಿದ್ದ ಪಾದುಕೆಗಳನ್ನು ತೆಗೆಯಲೋ? ನೀವು ಹೇಳಿದಂತೆ ಮಾಡುತ್ತೇನೆ. ಇದೇನು ನೀವು ಅಳಹತ್ತಿದಿರಲ್ಲ? ಈ ದೇವಲದೇವಿಯೇ ನಿಮ್ಮೆಲ್ಲರನ್ನು ಅಳಿಸಿದಳು. ಈಕೆಯನ್ನು ನಾನು ಯಾಕೆ ಕರಕೊಂಡು ಬಂದಿದ್ದೇನು! ನಾನು ಒಬ್ಬಳೇ ಬಂದಿದ್ದರೆ ನೆಟ್ಟಗಾಗುತ್ತಿತ್ತು.

ಕಮಲಕುಮಾರಿಯ ದೃಢ ನಿಶ್ಚಯವನ್ನು ನೋಡಿ ಮಥುರಾನಾಥನ ಕಂಠವು ಸದ್ಗದಿತವಾಯಿತು. ಆತನು ಅವಳನ್ನು ಕುರಿತು— ಎಲೈ ಸತ್ಯ ಶೀಲೆಯಾದ ಸಾಧ್ವಿಯೇ, ನಿನ್ನ ಮುಂದೆ ನಮ್ಮಂಥವರ ಪಾಡೇನು? ನಿನ್ನ ಧೈರ್ಯವನ್ನು ನೋಡಿ ನಾನು ಬೆರಗಾದೆನು. ನಿನ್ನ ನಿಶ್ಚಯವೇ ನಿನ್ನ ಮಂತ್ರವು. ನಿನಗೆ ನಮ್ಮ ವೈದಿಕ ಮಂತ್ರದಿಂದ ಏನು ಪ್ರಯೋಜನ ವಾಗುವದು? ಸಂಗ್ರಾಮಸಿಂಹರೇ, ನಿಮ್ಮ ಹೊಟ್ಟೆಯಲ್ಲಿ ಹುಟ್ಟಿದವಳು ಕಮಲಕುಮಾರಿಯಲ್ಲ ಜಗತ್ತಿನ ಲೀಲೆಯನ್ನು ನೋಡುವದಕ್ಕಾಗಿ ಬಂದಿದ್ದ ಯಾವಳೋ ಒಬ್ಬ ಮಹಾದೇವಿ, ಇದ್ದಾಳೆಂದು ಭಾವಿಸಿ ನೀವು ಧನ್ಯರೆಂದು ತಿಳಿದು ದುಃಖವನ್ನು ಹತ್ತೊತ್ತಿಕೊಂಡು ಈ ಸತಿಯನ್ನು ಕಳಿಸಿಕೊಡುವ ಯತ್ನವನ್ನು ಮಾಡಿರಿ. ಹೋಗಿರಿ, ಎಲೈ ಭಿಲ್ಲರುಗಳಿರಾ ಹೋಗಿರಿ. ಇಂಧನಗಳನ್ನು ಪೂರೈಸಿ ಕೊಡುವ ಪುಣ್ಯವನ್ನು ನೀವು ಕಟ್ಟಿಕೊಳ್ಳಿರಿ. ದೇವಲದೇವಿ, ನಿನ್ನ ಶೋಕವನ್ನು ನುಂಗಿಕೋ; ಕಮಲಕುಮಾರಿಯು ಸಾಮಾನ್ಯ ಸ್ತ್ರೀಯಲ್ಲ, ಶಾಬಾಸ್, ಕಮಲ ಕುಮಾರೀ ಸಾಬಾಸ್: ನಿನ್ನಂಥ ಪತಿವ್ರತಾ ಶಿಖಾಮಣಿಗಳ ಪುಣ್ಯವೇ ಮೇವಾಡಾಧಿ ಪತಿಯಾದ ರಾಜಸಿಂಹನ ಪುಣ್ಯವು. ನಿನ್ನಂಥ ಸ್ತ್ರೀರತ್ನಗಳು ಮೇವಾಡದಲ್ಲಿರುವವರೆಗೆ ಅದಾವನು ಮೇವಾಡದ ಮೇಲೆ ಕಣ್ಣಿಡುವನು? ನಡಿಯಿರಿ, ಇನ್ನುಮೇಲೆ ನಾವೆಲ್ಲರೂ ದುಃಖವನ್ನು ನುಂಗಿಕೊಂಡು ಮುಂದಿನ ಉದ್ಯೋಗವನ್ನು ಕೈಕೊಳ್ಳೋಣ. ನಮ್ಮ ಪುಣ್ಯವು ಬಲವತ್ತರವಾಗಿರುವದರಿಂದಲೇ ನಾವು ಈ ಸಾಧ್ವಿಯ ಸಹಗಮನ ಕಾಲದಲ್ಲಿ ಒದಗಿರುವೆವು.

ಈ ಮೇರೆಗೆ ಮಥುರಾನಾಥನು ನುಡಿದು ರಥದ ಹತ್ತಿರ ಹೋಗಿ ತನಗೆ ಬೇಕಾದ ಸಾಮಾನುಗಳನ್ನು ಲಗುಬಗೆಯಿಂದತಕ್ಕೊಂಡನು. ದೇವಲದೇವಿಯು ಇನ್ನೂ ಸುಮ್ಮನೆ ಕುಳಿತಿದ್ದಳು. ಮಥುರಾನಾಥನು ಅವಳ ಬಳಿಗೆ ಹೋಗಿ ದುಃಖವನ್ನು ಹತ್ತೊತ್ತಿಕೊಳ್ಳೆಂದು ಸಿಟ್ಟುಮಾಡಿ ಹೇಳಿ, ಅವಳನ್ನು ಕೈ ಹಿಡಿದು ಮೇಲಕ್ಕೆಬ್ಬಿಸಿದಳು. ಆಗ ದೇವಲದೇವಿಯು ಎಚ್ಚತ್ತು ತನ್ನ ಪ್ರಿಯ ಗೆಳತಿಯು ಸತಿಹೋಗದೆ ಬಿಡುವದಿಲ್ಲೆಂದು ನಿರ್ಧರಿಸಿ ದುಃಖವನ್ನು ನುಂಗಿಕೊಂಡು ಅವಳಿಗೆ ನೆರವಾಗುವದಕ್ಕಾಗಿ ಮುಂದುವರೆದಳು. ಸಹಗಮನಕ್ಕೆ ಬೇಕಾಗುವ ಒಡವೆಗಳನ್ನೆಲ್ಲ ಕಮಲಕುಮಾರಿಯು ತಕ್ಕೊಂಡು ಬಂದಿದ್ದಳು. ಆ ಒಡವೆಗಳು ಒಂದುಳಿಯು ದಂತೆ ಅವಳಿಗೆ ಗೊತ್ತಾದದ್ದಕ್ಕಾಗಿ ಮಥುರಾನಾಥನಿಗೆ ಬಹಳ ಆಶ್ಚರ್ಯವಾಯಿತು. ಮನಮೆಚ್ಚಿ ಸತಿ ಹೋಗಲು ಹೊರಟ ಸತಿಗೆ ಯಾವ ಮಾತಿನ ಕೊರತೆ ಬರುವದು? ಎಂದು

ಆತನು ಮನದೊಳಗೆ ಅಂದುಕೊಂಡು ಒಂದು ಕೆಂಪುವಸ್ತ್ರವನ್ನು ಕಮಲಕುಮಾರಿಗೆ ಉಡಿಸೆಂದು ಹೇಳಿ ದೇವಲ ದೇವಿಯ ಕೈಯಲ್ಲಿ ಕೊಟ್ಟನು. ಆಮೇಲೆ ಆತನು ಕಮಲ ಕುಮಾರಿಯ ಹಣೆಗೆ ಪಟ್ಟೆ ಕುಂಕುಮ ಹಚ್ಚಲಿಕ್ಕೂ, ಬೈತಲಲ್ಲಿ ಕುಂಕುಮವನ್ನಿಕ್ಕಲಿಕ್ಕೂ, ಹೂವು ಮುಡಿಸಲಿಕ್ಕೂ ನೆನಪುಕೊಟ್ಟು ತಾನು ಸ್ವತಃ ಚಿತೆಯ ಕಡೆಗೆ ಹೋದನು. ಸಹಗಮನ ಕಾಲದ ಚಿತೆಯನ್ನು ವಿಶೇಷ ಪ್ರಕಾರದಿಂದ ರಚಿಸಬೇಕಾಗುತ್ತದೆ. ಅದರಂತೆ ಮಥುರಾನಾಥನೇ ಮೊದಲಾದವರು ಕೂಡಿ ಚಿತೆಯನ್ನು ರಚಿಸಿದರು. ಭಿಲ್ಲರು ಬಹುತರವಾಗಿ ಒಣಗಿದ ಗಂಧದ ಕಟ್ಟಿಗೆಗಳನ್ನು ತಂದುಹಾಕಿದ್ದರು. ಚಿತೆಯು ಸಿದ್ಧವಾದ ಮೇಲೆ ಮಥುರಾನಾಥನು ಕಮಲ ಕುಮಾರಿಯ ಬಳಿಗೆ ಹೋಗಿ–ತಂಗೀ, ಒಮ್ಮೆ ತಂದೆಯ ದರ್ಶನವನ್ನು ತೆಗೆದುಕೋ; ದೇವಲದೇವಿಗೆ ಭೆಟ್ಟಿಯಾಗು, ನಿನ್ನ ತಾಯಿಯನ್ನು ನೆನಿಸು; ಆಮೇಲೆ ನಿನ್ನ ಪತಿಯ ಆವುಗೆಗಳನ್ನು ತಕ್ಕೊಂಡು ಇತ್ತ ಬಾ ಎಂದು ಹೇಳಿದನು.

ಕಮಲಕುಮಾರಿಯ ಧೈರ್ಯವು ಅಚ್ಚಳಿದಿದ್ದಿಲ್ಲ. ಅವಳ ಪತಿಭಕ್ತಿಯು ತಿಲಮಾತ್ರವೂ ಕೊಂಕಿದ್ದಿಲ್ಲ. ಆಕೆ ಮಾಡತಕ್ಕದ್ದನ್ನೆಲ್ಲ ಧೈರ್ಯದಿಂದ ಮಾಡುತ್ತಿದ್ದಳು. ಅವಳ ತಂದೆಯಾದ ಸಂಗ್ರಾಮಸಿಂಹನು ದುಃಖವೇಗದಿಂದ ಕೈಕಾಲುಗೆಟ್ಟು ಒತ್ತಟ್ಟಿಗೆ ಕುಳಿತುಕೊಂಡಿದ್ದನು. ಚಿತೆಯು ಏರುತ್ತಹೋದಂತೆ ಅವನ ಧೈರ್ಯವು ಕುಸಿಯುತ್ತ ಹೋಯಿತು. ತನ್ನ ಅಕ್ಕರೆಯ ಮಗಳು ತನ್ನ ಕಣ್ಣೆದುರಿಗೆ ವಿಧವೆಯಾಗಿ ಸಹಗಮನ ಮಾಡುವದನ್ನು ನೋಡುವದಕ್ಕಿಂತ ಹೆಚ್ಚಿನ ದುಃಖವು ಬೇರೆ ಯಾವದಿರುವದೆಂದು ನೆನಿಸಿ ಅವನು ಶೂನ್ಯದೃಷ್ಟಿಯಿಂದ ಅತ್ತಿತ್ತ ನೋಡುತ್ತಿದ್ದನು. ಅಷ್ಟರಲ್ಲಿ ಕಮಲಕುಮಾರಿಯು ಆತನ ಬಳಿಗೆ ಹೋಗಿ— "ತಂದೆಯವರೇ, ಇನ್ನು ನಾನು ತಮ್ಮ ಅಪ್ಪಣೆಯನ್ನು ತೆಗೆದುಕೊಳ್ಳುತ್ತೇನೆ. ಇಹ–ಪರ ಲೋಕಗಳಲ್ಲಿಯೂ ಅಗಲದೆ ಕೂಡಿರಬೇಕೆಂತಲೇ ನೀವು ನನ್ನನ್ನು ಪ್ರಿಯ ಪತಿಗೆ ಒಪ್ಪಿಸಿರುವಿರಲ್ಲವೇ? ಅಂದಬಳಿಕ ಪತಿಯನ್ನು ಹಿಂಬಾಲಿಸಿ ಪರಲೋಕಕ್ಕೆ ತೆರಳುವ ನನ್ನನ್ನು ಕುರಿತು ದುಃಖಿ ಸುವದೇಕೆ? ಈ ಕೆಟ್ಟ ಮೋಹವು ನಿಮ್ಮನ್ನು ಯಾಕೆ ಆವರಿಸಿತು? ಏಳಿರಿ, ವಾತ್ಸಲ್ಯದಿಂದ ಒಮ್ಮೆ ನನ್ನನ್ನು ಆಲಿಂಗಿಸಿ ಮೈಮೇಲೆ ಕೈ ಆಡಿಸಿರಿ. ಮದುವೆ ಮಾಡಿಕೊಟ್ಟ ದಿವಸ ನನ್ನ ಗದ್ದವನ್ನು ಹಿಡಿದು– "ಮಗಳೇ, ಹೋಗಿಬಾರವ್ವಾ ಅತ್ತೆಯ ಮನೆಗೆ, ಹೋಗಿ ಸುಖದಿಂದಿದ್ದು ಬಾ'' ಎಂದು ಹೇಳಿದಂತೆ ಈಗಾದರೂ ಪತಿಯ ಬಳಿಗೆ ಹೋಗುವ ನನಗೆ ಹೇಳಿರಿ. ಹೂ! ಬಿಡಿರಿ ಇನ್ನು ಅಳಬೇಡಿರಿ, ಸಮಾಧಾನದಿಂದ ನನಗೆ ಅಪ್ಪಣೆಯನ್ನು ಕೊಡಿರಿ ನೋಡೋಣ. ನಾನು ಆನಂದದಿಂದ ಸಹಗಮನ ಮಾಡಿದೆನೆಂತಲೂ, ಒಂದು ನಿಟ್ಟುಸಿರನ್ನು ಸಹ ಬಿಡಲಿ ಲ್ಲೆಂತಲೂ ಅವ್ವನ ಮುಂದೆ (ಮಾಜೀಯವರ ಮುಂದೆ) ಹೇಳಿರಿ. ಅವ್ವನು ಇಲ್ಲಿಯವರೆಗೆ ನನ್ನನ್ನು ಪ್ರೀತಿಸುತ್ತ ಬಂದಂತೆ ಇನ್ನು ಮೇಲೆ ದೇವಲದೇವಿಯನ್ನು ಪ್ರೀತಿಸುತ್ತಿರಬೇಕೆಂದು ಆಕೆಗೆ ಮರೆಯದೆ ಹೇಳಿರಿ. ಕರಿಸುವ ಕಳಿಸುವದನ್ನು ಈಕೆಗೇ ಮಾಡೆನ್ನಿರಿ. ನಾನಿಲ್ಲದಾಗ ಈ ನನ್ನ ಪ್ರೀತಿಯ ಗೆಳತಿಯು ಆಕೆಯ ಸಮಾಧಾನಕ್ಕೆ ಕಾರಣವಾಗುವಳು, ಬಿಡಿರಿ ಅಳಬೇಡಿರಿ. ಬಂದಾಗಿನಿಂದ ಒಂದೇಸವನೆ ಅಳುತ್ತ ಕುಳಿತಿರುವ ಈ ದೇವಲದೇವಿಯನ್ನು ಸಮಾಧಾನ

ಗೊಳಿಸಿರಿ. ಪ್ರಿಯ ಸಖೀ, ದೇವಲೇ, ಇನ್ನೂ ಎಲ್ಲಿಯವರೆಗೆ ಅಳುತ್ತೀಯವ್ವಾ? ಸುಮ್ಮನಾಗು. ಇನ್ನುಮೇಲೆ ನೀನು ನನ್ನ ತಾಯಿ ತಂದೆಗಳನ್ನು ನಿನ್ನ ತಾಯಿ ತಂದೆಗಳೆಂತಲೇ ತಿಳಿದು ನಡೆದುಕೋ; ಜೋಕೆ ಕಂಡಿಯಾ ! ನನ್ನ ನೆನವು ಸಹ ಅವರಿಗೆ ಆಗಗೊಡಬೇಡ; ಬೇರೆ ಹೆಚ್ಚಿನ ಮಾತೇನೂ ಹೇಳುವದು ನಿನಗೆ ಉಳಿಯಲಿಲ್ಲ. ಇತ್ತ ನೋಡು, ಮಥುರಾನಾಥರವರು ತಮ್ಮ ದುಃಖವನ್ನು ನುಂಗಿಕೊಂಡು ನನ್ನ ಮಾರ್ಗ ನೋಡುತ್ತ ನಿಂತಿರುವರು. ಮಥುರಾನಾಥರೇ, ನೀವು ನಮ್ಮ ಕುಲಪುರೋಹಿತರು, ನಿಮ್ಮನ್ನು ನಾನು ಮೊದಲು ಒಂದಿಸುತ್ತೇನೆ; ತಾಯಿಯನ್ನು ನೆನಿಸಿ ಮನಸಾ ಆಕೆಯನ್ನು ಒಂದಿಸುತ್ತೇನೆ. ತಂದೆಗಳೇ, ನಿಮ್ಮನ್ನು ನಾನು ನಮಿಸುತ್ತೇನೆ. ದೇವಲೇ, ಇತ್ತ ಬಾ; ನನ್ನನ್ನು ಒಮ್ಮೆ ಬಿಗಿಯಾಗಿ ಅಪ್ಪಿಕೊಳ್ಳು; ರಜಪೂತ ವೀರರೇ, ನನ್ನನ್ನು ಮರೆಯಬೇಡಿರಿ. ಎಲೈ ಸ್ವಾಮಿನಿಷ್ಠರಾದ ಭಿಲ್ಲರೇ, ನನಗೆ ಇಂಧನಗಳನ್ನೊದಗಿಸಿಕೊಟ್ಟ ಪುಣ್ಯವು ನಿಮಗೆ ಬರಲಿ. ಪಶುಗಳಾದರೂ ಈ ಎತ್ತುಗಳು ಪತಿಯನ್ನು ಕುರಿತು ತೆರಳುವ ನನಗೆ ತುಂಬಾ ಸಹಾಯ ಮಾಡಿರುವವು. ಇನ್ನು ಮೇಲೆ ನೀವೆಲ್ಲರೂ ನನಗೆ ಆನಂದದಿಂದ ಅಪ್ಪಣೆ ಕೊಡಿರಿ; ಹೋಗುತ್ತೇನೆ.

ಈ ಮೇರೆಗೆ ನುಡಿದು ಸತ್ವಶೀಲೆಯಾದ ಕಮಲಕುಮಾರಿಯು ಮಥುರಾನಾಥನನ್ನು ಕುರಿತು–ಮಥುರಾನಾಥಜೀ, ಇನ್ನು ತಡವೇಕೆ? ನಾನು ಇನ್ನು ಯಾವ ಕರ್ಮಗಳನ್ನು ಮಾಡುವ ದುಳಿದದೆ? ಯಾವ ಮಂತ್ರವನ್ನು ಅನ್ನಲಿ? ಬೇಗ ಹೇಳಿರಿ ಅಂದಳು. ಆಗ ಮಥುರಾನಾಥನ ಕುತ್ತಿಗೆಯ ನರಗಳು ಬಿಗಿದವು; ಮಾತುಗಳು ಹೊರಡದಾದವು. ಇದನ್ನು ನೋಡಿ ಕಮಲ ಕುಮಾರಿಯು–ನಾಥಜೀ, ಇದೇನು? ನೀವೇ ಹೀಗೆ ಅಳಹತ್ತಿದರೆ, ಅವ್ವನಿಗೂ ಅಪ್ಪನಿಗೂ ಯಾರು ಸಮಾಧಾನ ಹೇಳಬೇಕು? ನೀವು ನೆಟ್ಟಗೇ ಮಂತ್ರವನ್ನು ಹೇಳದಿದ್ದರೆ ಸಶಾಸ್ತ್ರವಾಗಿ ಸಹಗಮನ ಮಾಡಿದೆನೆಂದು ನನ್ನ ಮನಸ್ಸಿಗೆ ಸಮಾಧಾನವಾದರೂ ಹ್ಯಾಗೆ ಆದೀತು? ಹೇಳಿರಿ; ನಾನು ಈಗ ಏನು ಮಾಡಲಿ?

ಹೀಗೆ ನುಡಿಯುವ ಕಮಲಕುಮಾರಿಯ ಮಾತುಗಳನ್ನು ಕೇಳಿ ಮಥುರಾನಾಥನು–ಕಮಲಕುಮಾರೀ, ನೀನು ಪರಮಸಾಧ್ವಿಯು. ನಿನಗೆ ನಮ್ಮ ಮಂತ್ರದ ಉಪಯೋಗವೇನು? ನಾವು ನಿನ್ನನ್ನು ಆಶೀರ್ವದಿಸುವದಕ್ಕಿಂತ ನಿನ್ನ ಆಶೀರ್ವಾದವನ್ನೇ ನಾವು ಸ್ವೀಕರಿಸುವದು ತಕ್ಕದ್ದಾಗಿದೆ. ನೀನು ನನ್ನನ್ನು ಒಂದಿಸುವದಕ್ಕಿಂತ ನಾವೇ ನಿನ್ನನ್ನು ಸಾಷ್ಟಾಂಗವಾಗಿ ಒಂದಿ ಸುವದು ಕಲ್ಯಾಣಕಾರಕವಾಗಬಹುದು; ಆದರೆ ನಿನ್ನ ಆಗ್ರಹವಿರುವದರಿಂದ ನಿನ್ನ ಮಾತನ್ನು ಮೀರಲಾಗುವದಿಲ್ಲ; ಹಾಗೇ ಬಾ; ನಾನು ಮಂತ್ರವನ್ನಂದಕೂಡಲೇ ............ ಇಷ್ಟು ಮಾತುಗಳನ್ನು ಮಥುರಾನಾಥನು ನುಡಿಯುತ್ತಿರುವಷ್ಟರಲ್ಲಿ ನಾಲ್ವತ್ತು ಐವತ್ತು ಜನ ಕುದುರೆಯ ಸವಾರರು ಚಿತೆಯ ಬಳಿಯಲ್ಲಿ ಬಂದುನಿಂತು "ಯೇಕ್ಯಾ? ಯೇಕ್ಯಾ?" ಎಂದು ಗೊಂದಲ ವನ್ನೆಬ್ಬಿಸಿದರು. ಸಹಗಮನವನ್ನು ತಡೆ ಹಾಯ್! ಹಾಯ್!! ಪ್ರಿಯವಾಚಕರೇ, ಉತ್ಕಟ ಧರ್ಮಶ್ರದ್ಧೆಯ ಮೂಲಕ ಸತ್ವಶೀಲೆಯೂ, ಅಚಲ ಧೈರ್ಯಶಾಲಿಯೂ ಆದ ಆ ಮಹಾಸಾಧ್ವಿ ಕಮಲಕುಮಾರಿಯ ಧರ್ಮಕಾರ್ಯವನ್ನು ತಡೆದವರು ಇವರು ಯಾರಿರ ಬಹುದು !!!

# ಹಾ! ತಿಳಿಯಿತು

ಪ್ರಿಯವಾಚಕರೇ, ಸಮಾಧಾನ ತಾಳಿರಿ; ನಮ್ಮ ಆರ್ಯೆಯಾದ ಕಮಲಕುಮಾರಿಯ ದುಃಖದ ವೃತ್ತಾಂತ ಶ್ರವಣದಿಂದ ನಿಮ್ಮ ಹೃದಯ ವಿದಾರಣವಾಗಿರಬಹುದು. ನೀವು ಸ್ವಲ್ಪ ವಿಶ್ರಾಂತಿ ತಾಳಿದ ಬಳಿಕ ಇವರು ಯಾರೆಂಬುದನ್ನು ನಾನೆಲ್ಲ ನಿಮಗೆ ಹೇಳುವೆನು. ಪ್ರಕೃತದಲ್ಲಿ ಒಂದು ಮಾತನ್ನು ಸೂಚಿಸುತ್ತೇನೆ. ಧರ್ಮತೇಜವು ಎಷ್ಟು ಉಜ್ವಲವಿರುತ್ತ ದೆಂಬದನ್ನೂ ಅದರಿಂದ ಮನುಷ್ಯರಲ್ಲಿ ಎಂಥ ಉಜ್ವಲ ಗುಣಗಳ ಪ್ರಾದುರ್ಭಾವವಾಗುವ ದೆಂಬದನ್ನೂ ಅದರಿಂದ ಕಮಲಕುಮಾರಿಯ ಉದಾಹರಣದ ಮೇಲಿಂದ ನಿಮ್ಮ ಹೃತ್ಪಟಲ ದಲ್ಲಿ ನೀವು ಸ್ಥಿರವಾಗಿ ಬಿಂಬಿಸಿಕೊಳ್ಳತಕ್ಕದ್ದು. ಸಹಗಮನದ ಇಷ್ಟಾನಿಷ್ಟ ಪರಿಣಾಮದ ಮಾತು ಹ್ಯಾಗೇ ಇರಲಿ, ಅಧರ್ಮಶ್ರದ್ಧಾಮೂಲವಾದ ಸಹಗಮನವೆಂಬ ಬಹುರೂಢ ಸಂಗತಿಯಿಂದ ಕಮಲಕುಮಾರಿಯಲ್ಲುಂಟಾದ ಅಚಲಪ್ರೇಮ, ಚ್ಯುತಿಹೊಂದದ ನಿಕಟ ಜಗತ್ತನ್ನೇ ಮುಚ್ಚಿ ಮುಸುಕು ಹಾಕಿದ ವಿಷಯವಾಸನೆಯ ತುಚ್ಛೀಕರಣ, ಮೀಸೆಹೊತ್ತ ಗಂಡಸರಲ್ಲಿಯೂ ಕಂಡುಬಾರದ ಧೈರ್ಯ–ಗಾಂಭೀರ್ಯ ಗುಣಗಳು, ಇವನ್ನು ಕುರಿತು ಶಾಂತಮನಸ್ಸಿನಿಂದ ವಿಚಾರಮಾಡಿರಿ. ಈ ಗುಣಗಳು ಕೇವಲ ವಿಷಯಾಸಕ್ತರಾದ ಧರ್ಮಲಂಡರಲ್ಲಿ ಕಂಡುಬರಬಹುದೋ? ಕಂಡು ಬರುವದು ಪರಮದುರ್ಲಭವೇ ಸರಿ. ಇರಲಿ, ಸದ್ಯಕ್ಕೆ ಇವರು ಯಾರಿರಬಹುದೆಂಬದನ್ನು ಕುರಿತು ವಿಚಾರಿಸುವಾ.

ತೇಜಸ್ವಿಗಳಾದ ಮೊಗಲ ಬಾದಶಹರಲ್ಲಿ ಕಟ್ಟ ಕಡೆಯವನಾದ ಔರಂಗಜೇಬನು ಮೊಗಲ ಸಾಮ್ರಾಜ್ಯವನ್ನು ಪರಮಾವಧಿಯಾಗಿ ಬೆಳಸಿದನೆಂಬ ಮಾತು ನಿಮಗೆ ಗೊತ್ತಿರ ಬಹುದು. ಈ ಬಾದಶಹನ ಕಾಲದಲ್ಲಿ ರಜಪೂತ ಸ್ಥಾನದೊಳಗಿನ ಮೇವಾಡ ರಾಜ್ಯವನ್ನು ರಾಜಸಿಂಹನೆಂಬ ತೇಜಸ್ವಿಯಾದ ರಜಪೂತನು ರಾಣಾನೆಂಬ ಹೆಸರಿನಿಂದ ಆಳುತ್ತಿದ್ದನು. ರಾಣಾನ ವರ್ಚಸ್ಸು ರಜಪೂತಸ್ಥಾನದಲ್ಲಿ ವಿಶೇಷವಾಗಿ ಇತ್ತು ಇಬ್ಬರು ತೇಜಸ್ವಿಗಳು ಕೂಡಿ ನಡೆಯುವದು ಅಸಂಭವವು. ಅದರಂತೆ ಔರಂಗಜೇಬನು ರಾಣಾನ ವರ್ಚಸ್ಸನ್ನು ಸಹಿಸದಾದನು. ಅವನು ಯುಕ್ತಿ ಪ್ರಯುಕ್ತಿಗಳಿಂದ ರಾಣಾನನ್ನು ಹಣ್ಣು ಮಾಡಿ ತನ್ನ ಕೈಕೆಳಗೆ ನಡಿಸಿಕೊಳ್ಳಲು ಹವಣಿಸುತ್ತಿದ್ದನು. ಇದಕ್ಕಾಗಿ ಅವನು ಹೊತ್ತುನೋಡಿ ಮೇವಾಡವ ನ್ನೊಳನುಗ್ಗಲು ಅನುಕೂಲ ವಾಗಬೇಕೆಂದು ಮೇವಾಡದ ಗಡಿಯಲ್ಲಿ ಅಲ್ಲಲ್ಲಿ ತನ್ನ ದಂಡಿನ ಠಾಣ್ಯಗಳನ್ನು ಇಟ್ಟಿದ್ದನು. ಇತ್ತ ರಾಣಾನಾದರೂ ಮೈಮರೆತು ಕೂತಿದ್ದಿಲ್ಲ. ಅವನು ತನ್ನ ರಾಜ್ಯವನ್ನು ನುಗ್ಗಲೆತ್ನಿಸುವ ಮೊಗಲರನ್ನು ಹೊಡೆದೋಡಿಸುವದಕ್ಕಾಗಿ ತನ್ನ ಕಡೆಯ ಆಯಕಟ್ಟಿನ ಸ್ಥಳಗಳಲ್ಲಿ ದಂಡಿನೊಡನೆ ನಂಬಿಗೆಯ ಶೂರ ರಜಪೂತ ಸರದಾರರನ್ನು ಕಾಯಲಿಟ್ಟಿದ್ದನು. ಇಂಥ ಸರದಾರರಲ್ಲಿ ನಮ್ಮ ಕಮಲ ಕುಮಾರಿಯ ಪತಿಯಾದ ವೀರಸಿಂಹನೂ ಒಬ್ಬನಾಗಿದ್ದನು. ವೀರಸಿಂಹನು ಮೇವಾಡದ ಅರಸು ಮನೆತನಕ್ಕೆ ಹೊಂದಿದವನು. ಅವನು ತನ್ನ ಹೆಸರಿಗೆ ಒಪ್ಪುವಂತೆ ಮಹಾವೀರನಾಗಿದ್ದನು. ರಾಣಾರಾಜಸಿಂಹನ ಮೇಲೆ ಅವನ ಭಕ್ತಿ

ಬಹಳ. ರಾಣಾನು ಕುತ್ತಿಗೆಯನ್ನು ಕೊಯ್ದಿಡೆಂದು ಹೇಳಿದರೂ ವೀರಸಿಂಹನು ಹಿಂದೆ ಮುಂದ ನೋಡುವ ಹಾಗಿದ್ದಿಲ್ಲ. ಈ ಸ್ವಾಮಿನಿಷ್ಠೆಗಾಗಿ ರಾಣಾನಾದರೂ ಆತನನ್ನು ಬಹಳವಾಗಿ ಪ್ರೀತಿಸುತ್ತಿದ್ದನು. ಮೊಗಲರ ಮೇಲೆ ವೀರಸಿಂಹನ ಸಿಟ್ಟು ಬಹಳ. ಅವರನ್ನು ಬಗ್ಗು ಬಡೆಯುವದಕ್ಕೆ ಅನುವು ದೊರೆಯಬೇಕೆಂತಲೇ ಆ ವೀರನು ರಾಣಾನನ್ನು ಕೇಳಿಕೊಂಡು ಅರವಲೀಪರ್ವತದ ಇಕ್ಕಟ್ಟಿನ ಮಾರ್ಗದ ಕಾವಲುಗಾರಿಕೆಯನ್ನು ಸಂಪಾದಿಸಿದ್ದನು. ಅವನು ತನ್ನ ಮೇಲೆ ಸಾಗಿಬರುವ ಮೊಗಲರನ್ನು ಹೊಡೆದೋಡಿಸಿ, ಅವನನ್ನು ಬೆನ್ನಟ್ಟುವ ಭರದಲ್ಲಿ ಒಬ್ಬನೇ ಬಹುದೂರ ಹೋಗಿ ಅವರ ಮೋಸದಿಂದ ಮರಣ ಹೊಂದಿದ್ದನ್ನು ಪದ್ಮನಾಭನು ಕಮಲಕುಮಾರಿಯ ತಂದೆಯಾದ ಸಂಗ್ರಾಮಸಿಂಗನ ಮುಂದೆ ಹೇಳುವಾಗ ನೀವು ಕೇಳಿದ್ದೀರಿ. ಕಮಲಕುಮಾರಿಯು ಸಂಗ್ರಾಮಸಿಂಗನಿಗೆ ಒಬ್ಬಳೇ ಮಗಳಾಗಿದ್ದಳು. ಆಕೆಯು ಪತಿಯ ಮರಣವಾರ್ತೆಯನ್ನು ಕೇಳಿ ದುಃಖಪಟ್ಟು, ಸಹಗಮನವನ್ನು ನಿಶ್ಚಯಿಸಿದಳು. ಅಕಬರ ಬಾದಶಹನು ಸಹಗಮನವನ್ನು ನಿಲ್ಲಿಸಲು ಬಹಳವಾಗಿ ಯತ್ನಿಸಿದನು. ಆದರೆ ಅವನಿಗೆ ಬರತಕ್ಕಷ್ಟು ಯಶಸ್ಸು ಬರಲಿಲ್ಲ. ರಜಪೂತ ಸ್ತ್ರೀಯರು ಪತಿಹೀನರಾಗಿ ಬಾಳುವದು ನರಕಯಾತನೆಗಿಂತಲೂ ಅಸಹ್ಯವಾದದ್ದೆಂದು ತಿಳಿದು ಸಹಗಮನ ಮಾಡುತ್ತಿದ್ದರು. ಕಮಲಕುಮಾರಿಯ ಸಹಗಮನ ನಿಶ್ಚಯವು ಅವಳ ತಾಯಿ ತಂದೆಗಳ ಮನಸ್ಸಿಗೆ ಬರಲಿಲ್ಲ; ಆದರೂ ಆಕೆಯು ಅವರ ಮಾತನ್ನು ಲೆಕ್ಕಿಸದೆ ಹಟಹಿಡಿದು ಅನ್ನ ನೀರುಗಳನ್ನು ಬಿಟ್ಟು ಕಡೆಗೆ ಸಹ ಗಮನಕ್ಕೆ ಅವರ ಅನುಮತಿಯನ್ನು ಪಡೆದಳು. ತಾಯಿ ತಂದೆಗಳು ಆಕೆ ಹೇಳಿದಂತೆ ಕೇಳಲು ಒಡಂಬಟ್ಟರು. ತಾಯಿಯನ್ನು ಕರಕೊಂಡು ಹೋದರೆ ಮೋಹಕ್ಕೆ ಒಳಗಾಗಬಹುದೆಂದು ತಿಳಿದು ಆಕೆಯನ್ನು ಬಿಟ್ಟು ಕಮಲಕುಮಾರಿಯು ತಂದೆಯಾದ ಸಂಗ್ರಾಮಸಿಂಗನನ್ನೂ ದೇವಲ ದೇವಿ ಎಂಬ ಹೆಸರಿನ ತನ್ನ ಸಖಿಯನ್ನೂ, ಮಂತ್ರಹೇಳುವದಕ್ಕಾಗಿ ಮಥುರಾನಾಥನೆಂಬ ಶೂರ ಬ್ರಾಹ್ಮಣನನ್ನೂ ಪತಿಯ ಸಂಗಡಿಗನಾದ ಪದ್ಮನಾಭನನ್ನೂ ಬೇರೆ ಇಬ್ಬರು ಶೂರ ರಜಪೂತ ಸಿಪಾಯಿಗಳನ್ನೂ ನಾಲ್ಕು ಜನ ಭಿಲ್ಲರನ್ನೂ ಕರಕೊಂಡು ಪತಿಯ ದಹನ ಸ್ಥಾನದೆಡೆಗೆ ಹೋಗಿ ಸಹಗಮನಕ್ಕೆ ಸಿದ್ಧಳಾಗಿದ್ದದ್ದನ್ನು ನೀವು ಕೇಳಿರುವಿರಿ.

ಸಾಹಸಿಯಾದ ವೀರಸಿಂಗನ ಕಕ್ಕನ ಮಗನ ಹೆಸರು ಉದಯಭಾನುವು. ಉದಯ ಭಾನುವು ಶೂರನೂ, ಚಲುವನೂ, ಚಪಲನೂ, ತೇಜಃಪುಂಜನೂ ಆಗಿದ್ದು ಒಳ್ಳೇ ಮಹತ್ವಾ ಕಾಂಕ್ಷಿಯಾಗಿದ್ದನು; ಆದರೆ ಅವನು ದಾಸೀಪುತ್ರನಾದ್ದರಿಂದ ಅಚ್ಚ ರಜಪೂತನಾದ ವೀರಸಿಂಗ ನಿಗಿದ್ದಷ್ಟು ಮಾನವು ಅವನಿಗಿದ್ದಿಲ್ಲ. ಈ ಮಾತು ಉದಯಭಾನುವಿನ ಮನಸ್ಸಿಗೆ ಬಹಳವಾಗಿ ಹತ್ತಿತ್ತು. ಅವನು ತನ್ನ ಜನ್ಮಕಥೆಯನ್ನು ಮುಚ್ಚಿ ತಾನು ಮೇವಾಡದ ಶೂರ ಮನೆತನದ ಒಬ್ಬ ಪುರುಷನೆಂದೆನಿಸಿಕೊಂಡು ಪ್ರತಿಷ್ಠಿತನಾಗಲು ಯತ್ನಿಸುತ್ತಿದ್ದನು. ಆಗ ಅವನ ವಿರುದ್ಧವಾಗಿ ಜನರು ಅವನ ಜನ್ಮ ಕಥೆಯನ್ನು ಬೈಲಿಗೆಳೆದು ಅವನ ಮುಂದೆ ವಾದಮಾಡುತ್ತಿದ್ದರು.

ಉದಯಭಾನುವು ತನ್ನ ಜನ್ಮ ಸಂಬಂಧದ ಈ ಕಲಂಕವನ್ನು ತೊಳೆದು ರಾಜ ದರ್ಬಾರದಲ್ಲಿ ಒಂದಿಲ್ಲೊಂದು ದೊಡ್ಡ ಪದವಿಯನ್ನು ಸಂಪಾದಿಸುವದಕ್ಕಾಗಿ ಬಹು

ಪ್ರಯತ್ನ ಪಟ್ಟನು; ಆದರೆ ಅವನ ಸೊಕ್ಕಿನ ನಡಾವಳಿಯ ಮೂಲಕ ಅದೆಲ್ಲ ವ್ಯರ್ಥವಾಯಿತು. ಉದಯಭಾನುವು ಇಷ್ಟಕ್ಕೆ ಪ್ರತಿಷ್ಠೆಯ ಆಸೆಯನ್ನು ಬಿಡಲಿಲ್ಲ. ಅವನು ಉದೇಪುರದ ಅರಸು ಮನೆತನದವರೊಡನೆ ಶರೀರಸಂಬಂಧ ಮಾಡುವಷ್ಟು ಮಾನ್ಯನಾದ ಸಂಗ್ರಾಮಸಿಂಗನೆಂಬ ರಜಪೂತ ಸರದಾರನ ಮಗಳಾದ ಕಮಲಕುಮಾರಿಯನ್ನು ಮದುವೆಯಾಗಲಿಚ್ಛಿಸಿದನು. ಅವನು ಈ ಸಂಗತಿಯನ್ನು ಸಂಗ್ರಾಮಸಿಂಗನಿಗೆ ತಿಳಿಸಲು ಅವನು—''ಹಂಸಪಕ್ಷಿಯ ಮರಿಯನ್ನು ಹಂಸಕುಲದಲ್ಲಿಯೇ ಕೊಡಬೇಕಾಗುವದು. ಕಾಗೆಯು ಸುಣ್ಣದಲ್ಲಿ ಗರಿಗಳನ್ನೆದ್ದಿ ಎಷ್ಟು ಬೆಳ್ಳಗೆ ಮಾಡಿಕೊಂಡು ಬಂದರೂ ಅದಕ್ಕೆ ಆ ಹಂಸ ಶಬ್ದವು ದೊರೆಯಲಾರದು'' ಎಂದು ಸ್ಪಷ್ಟವಾಗಿ ಹೇಳಿದನು. ಸಂಗ್ರಾಮಸಿಂಗನ ಈ ನಿಷ್ಠುರದ ಉತ್ತರದಿಂದ ಉದಯ ಭಾನುವು ಸಂತಪ್ತನಾದನು. ಇದಾದ ಸ್ವಲ್ಪ ದಿವಸಗಳಲ್ಲಿಯೇ ವೀರಸಿಂಹನು ಕಮಲಕುಮಾರಿ ಯನ್ನು ಮದುವೆಯಾಗಲು, ಉದಯಭಾನುವಿನ ಸಂತಾಪಾಗ್ನಿಯು ಪ್ರಜ್ವಲಿಸಿತು. ವೀರಸಿಂಹನೂ ಉದಯಭಾನುವೂ ಚಿಕ್ಕ ದೊಡ್ಡಪ್ಪನ ಮಕ್ಕಳಾಗಿದ್ದರೆಂದು ಈ ಮೊದಲೇ ಹೇಳಿರುತ್ತದೆ. ಅವರಿಬ್ಬರೂ ಸ್ವಲ್ಪ ಹೆಚ್ಚುಕಡಿಮೆ ಓರಿಗೆಯವರಾಗಿದ್ದರು. ಅವರಿಬ್ಬರೂ ಒಂದೇ ಶಾಲೆಯಲ್ಲಿ ಕೂಡಿಕಲಿತಿದ್ದರು; ಆದರೆ ಉದಯಭಾನುವು ದಾಸೀಪುತ್ರನಾದ್ದರಿಂದ ಅವನಿಗೆ ಕಮಲ ಕುಮಾರಿಯು ಲಭಿಸಲಿಲ್ಲ. ರಾಜದರ್ಬಾರದಲ್ಲಿ ಸರದಾರ ಪದವಿಯೂ ದೊರೆಯಲಿಲ್ಲ. ಇದಕ್ಕೆ ವಿಪರೀತವಾಗಿ ವೀರಸಿಂಹನು ಅಚ್ಚ ರಜಪೂತನಾದದ್ದರಿಂದ ಕಮಲಕುಮಾರಿಯನ್ನು ಮದುವೆಯಾದನು; ರಾಜದರ್ಬಾರದಲ್ಲಿ ಸರದಾರ ಪದವಿಯೂ ದೊರೆಯಿತು. ಅದರಲ್ಲಿ ರಾಣಾ ರಾಜಸಿಂಗನ ಪ್ರೀತಿಯೂ ವೀರಸಿಂಗನ ಮೇಲೆ ಅವನ ಹಲವು ಸದ್ಗುಣಗಳ ಮೂಲಕ ವಿಶೇಷವಾದದ್ದರಿಂದ ವೀರಸಿಂಹನು ಹೆಚ್ಚು ಹೆಚ್ಚು ಉತ್ಕರ್ಷವನ್ನು ಹೊಂದಹತ್ತಿದನು. ಇದನ್ನು ನೋಡಿ ಉದಯಭಾನುವಿನ ಸರ್ವಾಂಗವು ಉರಿಯಹತ್ತಿತು.

ಏನು ಮಾಡಿದರೂ ಮೇವಾಡದ ರಾಜ್ಯದಲ್ಲಿ ತನ್ನ ಉತ್ಕರ್ಷಕ್ಕೆ ಸಂಧಿಯು ಸಾಧಿಸದ್ದನ್ನು ನೋಡಿ ಉದಯಭಾನುವು ಕಪಟನಾಟಕವನ್ನು ಆರಂಭಿಸಬೇಕೆಂದು ನಿಶ್ಚಯಿಸಿದನು. ಈ ನಿಶ್ಚಯಕ್ಕೆ ಅನುಕೂಲವಾಗಬೇಕೆಂದು ಅವನು ರಾಣಾನ ಶತ್ರುಗಳನ್ನು ಕೂಡಬೇಕೆಂದು ಯೋಚಿಸಿದನು. ಇತ್ತ ಔರಂಗಜೇಬನಂತೂ ಮೇವಾಡದ ರಾಣಾನನ್ನೂ, ಅವನ ಮನೆತನ ವನ್ನೂ ಪಾದಾಕ್ರಾಂತ ಮಾಡಿಕೊಳ್ಳಬೇಕೆಂದು ಹೊಂಚುಹಾಕಿದ್ದನು. ರಾಣಾರಾಜಸಿಂಹನು ಅಂತಿಂತಹ ಮನುಷ್ಯನಿದ್ದಿಲ್ಲ. ಬಂಧುಗಳಾದ ರಜಪೂತರನ್ನು ಒಟ್ಟು ಗೂಡಿಸಿ ಹೊತ್ತುಸಾಧಿಸಿ ಔರಂಗಜೇಬನ ಮಗ್ಗಲು ಮುರಿಯಬೇಕೆಂತಲೂ, ಹಿಂದುಸ್ಥಾನದೊಳಗಿನ ಮೊಗಲ ಸಾಮ್ರಾಜ್ಯವನ್ನು ನಷ್ಟಪಡಿಸಬೇಕೆಂತಲೂ ಮಾಡಿದ್ದನು.

ಔರಂಗಜೇಬನು ಮಹಾಕಪಟಿ ಎಂಬುದು ಪ್ರಸಿದ್ಧವಿರುವದು ಅವನು ಒಂದಿಲ್ಲೊಂದು ತಂತ್ರದಿಂದ ತನ್ನ ಕಾರ್ಯವನ್ನು ಸಾಧಿಸಿಕೊಳ್ಳುತ್ತಿದ್ದನು. ರಾಜಸಿಂಹನ ರಾಜ್ಯದಲ್ಲಿ ಯಾವ ನೊಬ್ಬನನ್ನು ಒಡಕೊಂಡು ಅವನ ಸಹಾಯದಿಂದ ರಾಜ್ಯದಲ್ಲಿ ಸದುವು ಸಿಕ್ಕರೆ ನೋಡ ಬೇಕೆಂದು ಅವನು ಎಣಿಕೆ ಹಾಕುತ್ತಿದ್ದನು. ಅವನ ಎಣಿಕೆಗೆ ಉದಯಭಾನುವಿನಿಂದ ಬಹಳ

ಉತ್ತೇಜನವು ದೊರೆಯಿತು. ಬರಬರುತ್ತ ಔರಂಗಜೇಬನ ಬಳಿಯಲ್ಲಿ ಉದಯಭಾನುವಿನ ಮಹತ್ವವು ಹೆಚ್ಚಾಯಿತು. ಮೊದಲೇ ಗರ್ವಿಷ್ಠನಾದ ಉದಯಭಾನುವು ಔರಂಗಜೇಬನ ಒತ್ತಾಸೆಯಿಂದ ಮದೋನ್ಮತ್ತನಾಗಿ ಮನಬಂದಂತೆ ನಡೆಯತೊಡಗಿದನು. ಅವನ ನಡತೆಯಿಂದ ವೀರಸಿಂಹನಿಗೆ ಸಂಶಯಬಂದು ಅವನು ಉದಯಭಾನುವನ್ನು ತನ್ನ ರಾಜ್ಯದಿಂದ ಹೊರಗೆ ಹಾಕಿದನು. ವಾಸ್ತವಿಕ ಈ ಅಪರಾಧಕ್ಕಾಗಿ ಉದಯಭಾನುವಿನ ಶಿರಚ್ಛೇದವೇ ಆಗತಕ್ಕದ್ದು. ಆದರೆ ಅವನ ದೈವವು ಸಬಲವಿದ್ದದ್ದರಿಂದ ಬದುಕಿ ಉಳಿದನು.

ಹೀಗೆ ಮೇವಾಡದ ರಾಜ್ಯದಿಂದ ಹೊರಗೆ ಹಾಕಲ್ಪಟ್ಟ ಉದಯಭಾನುವು ನೆಟ್ಟಗೇ ಔರಂಗಜೇಬನ ಬಳಿಗೆಹೋಗಿ ಅವನ ಸಂತೋಷಕ್ಕಾಗಿ ಮುಸಲ್ಮಾನೀ ಧರ್ಮವನ್ನು ಸ್ವೀಕರಿಸಿದನು. ಅನುಪಮವೀರನೂ, ಅಸಾಧಾರಣ ಬಲಿಷ್ಠನೂ, ಸುಂದರಾಕಾರನೂ, ಚಪಲನೂ, ಮಾತು– ಕಥೆಯಲ್ಲಿ ಒಳ್ಳೇ ಜಾಣನೂ ಆದ ಉದಯಭಾನುವು ಕುಟಿಲನೀತಿಯಲ್ಲಿ ಪ್ರವೀಣನಾದದ್ದರಿಂದ ಔರಂಗಜೇಬನ ಪ್ರೀತಿಯ ಸರದಾರರಲ್ಲಿ ಒಬ್ಬನಾಗಿ ಕೂತನು. ಅವನು ತಾನು ಮೇವಾಡದ ಅರಸು ಮನೆತನಕ್ಕೆ ಹೊಂದಿದವನೆಂದು ಹೇಳಿದ್ದರಿಂದಂತೂ ಅವನ ವಿಷಯವಾಗಿ ಬಾದಶಹನ ಆದರವು ಹೆಚ್ಚಾಯಿತು. ಈ ಮೇರೆಗೆ ಔರಂಗಜೇಬನು ಉತ್ತರದಲ್ಲಿ ರಜಪೂತರನ್ನು ಮೂಲೆಗುಂಪು ಮಾಡಬೇಕೆಂದು ಯೋಚಿಸಿದಂತೆ ದಕ್ಷಿಣದಲ್ಲಿ ಶಿವಾಜಿ ಮಹಾರಾಜನ ರಾಜ್ಯವನ್ನು ಬಡಿದು ಬಾಯಲ್ಲಿ ಹಾಕಿಕೊಳ್ಳಬೇಕೆಂದು ಮಾಡಿದ್ದನು. ಶಿವಾಜಿ ಮಹಾರಾಜನು ದಿಲ್ಲಿಯಿಂದ ತಪ್ಪಿಸಿಕೊಂಡು ಓಡಿಬಂದದ್ದರಿಂದ ಔರಂಗಜೇಬನಿಗೆ ಹೇಳಕೂಡದಷ್ಟು ಅಸಮಾಧಾನವಾಯಿತು. ತಾನು ಕುಟಿಲತನದಲ್ಲಿ ಪ್ರವೀಣನಿದ್ದು ಶಿವಾಜಿಯು ತನಗೇ ಮಂಕುಬೂದಿ ಹಚ್ಚಿ ಹೋದನೆಂದು ಅವನು ನಾಚಿಕೊಂಡನು. ಆದರೆ ಆ ಧೂರ್ತನು ಹಳ ಹಳಿಸಿ ಸುಮ್ಮನೇ ಕೂಡದೇ ತನ್ನ ಕುಟಿಲನೀತಿಯನ್ನು ಆರಂಭಿಸಿದನು. ಮೊದಲು ತಾನು ಶಿವಾಜಿಯ ಮೇಲೆ ಸಿಟ್ಟಾಗಿಲ್ಲೆಂಬುದನ್ನು ತೋರಿಸುವದಕ್ಕಾಗಿ ಅವನ ಸಂಗಡ ಒಡಂಬಡಿಕೆಯ ಮಾತುಗಳನ್ನು ನಡಿಸಿದನು; ಮತ್ತು ಕೆಲವು ಕೋಟೆಗಳೂ, ಪರಗಣೆಗಳೂ, ಊರುಗಳೂ ಶಿವಾಜಿಯವಿರುತ್ತವೆಂದು ಒಡಂಬಟ್ಟನು. ಕೆಲವು ಪ್ರಾಂತಗಳನ್ನು ತಾನು ಅವನಿಗೆ ಹೊಸದಾಗಿ ಕೊಟ್ಟಹಾಗೆ ಮಾಡಿದನು; ಕೆಲವು ಹೊಸ ಹಕ್ಕುಗಳನ್ನು ಕೊಟ್ಟಂತೆ ತೋರಿಸಿದನು. ಈ ಶಿವಾಜಿಯ ಪಾರುಪತ್ಯಕ್ಕಾಗಿ ಈ ಮೊದಲೇ ಜಯವಂತಸಿಂಗನೂ ಶಾಹಾಜಾದಾ ಮುಅಝ್ಝಮನೂ ದಕ್ಷಿಣಕ್ಕೆ ಕಳುಹಲ್ಪಟ್ಟಿದ್ದರು. ಅವರಿಗೆ ಔರಂಗಜೇಬನು ಮೇಲಿಂದ ಮೇಲೆ "ನೀವು ಏನಾದರೂ ಹಂಚಿಕೆಮಾಡಿ ಶಿವಾಜಿಯನ್ನು ಒಮ್ಮೆ ಸೆರೆಹಿಡಿಯಿರಿ. ಇದನ್ನು ಸಾಧಿಸುವದಕ್ಕಾಗಿ ನೀವು ಅವನಿಗೆ ಬೇಕಾದ ವಚನಗಳನ್ನು ಕೊಡಿರಿ; ಬೇಕಾದದ್ದುಮಾಡಿರಿ; ಹೊತ್ತು ಬಿದ್ದರೆ ನೀವು ನನ್ನ ಮೇಲೆ ತಿರುಗಿಬಿದ್ದಂತೆಯೂ, ನನ್ನ ವಿರುದ್ಧವಾಗಿ ಬಂಡು ಎಬ್ಬಿಸುವಂತೆಯೂ ಅವನ ಮುಂದೆ ನಟಿಸಿರಿ. ಬೇಕಾದ ವಿಶ್ವಾಸಘಾತವನ್ನು ಮಾಡಿದರೂ ಚಿಂತೆಯಿಲ್ಲ; ಅವನನ್ನು ಮಾತ್ರ ದಿಲ್ಲಿಗೆ ಸೆರೆಹಿಡ ಕೊಂಡು ಬರ್ರಿ" ಎಂದು ಪತ್ರ ಬರೆಯುತ್ತಿದ್ದನು; ಆದರೆ ಶಿವಾಜಿಯು ಯಾವದಕ್ಕೂ ಹತ್ತಗೊಡಲಿಲ್ಲ. ಅವನು ಔರಂಗಜೇಬನ

ಕಪಟವನ್ನು ಕಂಡುಹಿಡಿದು ತಾನಾದರೂ ಹೊತ್ತುಬಂದಾಗ ಬಾದಶಹನ ಕರಾರುಗಳನ್ನು ಮೂಲೆಗೊತ್ತಿ ತನ್ನ ಕೆಲಸಗಳನ್ನು ಮಾಡಿಕೊಳ್ಳಬೇಕೆಂದು ನಿಶ್ಚಯಿಸಿದನು.

ಇತ್ತ ಬಾದಶಹನು ಜಸವಂತಸಿಂಗನಿಗೂ, ಶಹಾಜಾದಾನಿಗೂ ಪತ್ರಗಳನ್ನು ಕಳಿಸಿ ಕಳಿಸಿ ಬೇಸತ್ತು, ಬಹುದಿವಸಗಳಾದರೂ ಅವರಿಂದ ಯಾವ ಕಾರ್ಯವಾಗದ್ದನ್ನು ನೋಡಿ ಶಂಕಿಸಿದನು. ಅವರಿಬ್ಬರನ್ನು ಶಿವಾಜಿಯು ಒಡಕೊಂಡಿರಬಹುದೆಂಬ ಸಂಶಯವು ಅವನಲ್ಲಿ ಉತ್ಪನ್ನವಾಯಿತು. ಕೂಡಲೇ ಅವನು ತಾನು ಯೋಚಿಸಿದ ಉಪಾಯಗಳೆಲ್ಲ ಮಣ್ಣುಗೂಡಿದ ವೆಂದು ಬಗೆದು ತನ್ನ ನಂಬಿಗೆಯ ಇನ್ನೊಬ್ಬ ಸರದಾರನನ್ನು ದಕ್ಷಿಣಕ್ಕೆ ಕಳಿಸಬೇಕೆಂತಲೂ, ಅವನ ಕೈಯಲ್ಲಿ ದಂಡುಕೊಡಬೇಕೆಂತಲೂ, ತನ್ನ ಮಗನಾದ ಮುಅಝೀಮನ ಮೇಲೆಯೂ ಜಸವಂತಸಿಂಗನ ಮೇಲೆಯೂ ಆ ಹೋದವನು ಕಣ್ಣಿಡುವಂತೆ ಮಾಡಬೇಕೆಂತಲೂ ಗೊತ್ತು ಮಾಡಿದನು. ಈ ಕೆಲಸಕ್ಕೆ ಯೋಗ್ಯವರನಾವನೆಂಬದನ್ನು ಎಣಿಕೆಹಾಕಿ ನೋಡುತ್ತಿರಲು, ಉದಯಭಾನುವಿನ ಮೂರ್ತಿಯು ಬಾದಶಹನ ಕಣ್ಣೆದುರಿಗೆ ಕಟ್ಟಿತು. ಆಗ ಬಾದಶಹನು ಉದಯಭಾನುವನ್ನು ಕರಿಸಿ— ನೀನು ಒಂದು ಸಾವಿರ ಜನ ರಜಪೂತರನ್ನು ಕರಕೊಂಡು ದಕ್ಷಿಣಕ್ಕೆ ಹೋಗು. ಜಸವಂತಸಿಂಗ. ಶಹಾಜಾದಾ ಇವರ ಸಲುವಾಗಿ ಇನ್ನೊಂದು ಮೂರು ಸಾವಿರ ದಂಡಾಳುಗಳನ್ನು ಕರಕೋ; ಈ ಪತ್ರವನ್ನು ಜಸವಂತಸಿಂಗನಿಗೆ ಮುಟ್ಟಿಸಿ, ನೀನು ಕೊಂಡಾಣಾ (ಇದಕ್ಕೆ ಮುಂದೆ ಸಿಂಹಗಡವೆಂಬ ಹೆಸರು ಬಂದಿರುತ್ತದೆ) ಎಂಬ ಕೋಟೆಯ ಮೇಲೆ ಹೋಗಿ ಇರು. ಆ ಕೋಟೆಯಮೇಲೆ ನಿನ್ನಂಥ ಶೂರ ಸರದಾರನೇ ಬೇಕಾಗಿರುವನು. ಆ ಧೂರ್ತನಾದ ಶಿವಾಜಿಯ ಸಂಗಡ ಒಡಂಬಡಿಕೆಯನ್ನು ಮಾಡಿಕೊಳ್ಳುವಾಗ್ಗೆ ಬೇಕಂತ ಈ ಕೋಟೆಯನ್ನು ನನ್ನ ವಶದಲ್ಲಿಟ್ಟುಕೊಂಡಿರುತ್ತೇನೆ. ಈ ಕೋಟೆಯು ನಮ್ಮ ಕೈಯಲ್ಲಿರುವವರೆಗೆ ಆ ಪ್ರಾಂತವು ಅವನ ಕೈಯಲ್ಲಿದ್ದರೂ ಇಲ್ಲದ ಹಾಗೆಯೇ ಸರಿ. ಆ ಕಾಫರನಿಗೆ ನನ್ನ ಪತ್ರವು ಮುಟ್ಟಿ ನನ್ನ ವಿಚಾರವು ತಿಳಿಯುವದೊಂದೇ ತಡ, ಕೂಡಲೇ ಅವನು ಕೊಂಡಾಣೆಯ ಕೋಟೆಯನ್ನು ವಶಮಾಡಿಕೊಳ್ಳಲೆತ್ನಿಸುವನು. ಇದಕ್ಕಾಗಿ ನಿನ್ನಂಥ ವೀರನನ್ನು ಅಲ್ಲಿಗೆ ಕಳಿಸುವೆನು. ನೀನು ಇನ್ನೊಂದು ಕೆಲಸವನ್ನು ಮಾಡತಕ್ಕದ್ದು. ಜಸವಂತಸಿಂಗನು ವಿಶ್ವಾಸಘಾತಮಾಡಿ ಆ ಕಾಫರನಾದ ಶಿವಾಜಿಗೆ ಅನುಕೂಲನಾಗಿರುತ್ತಾನೋ ಹೇಗೆಂಬದನ್ನು ಗೊತ್ತುಹಚ್ಚಿ ನನಗೆ ಆ ಸಂಬಂಧದ ವರ್ತಮಾನವನ್ನೆಲ್ಲ ತಿಳಿಸಿ ಜಸವಂತನ ವಿಶ್ವಾಸಘಾತವನ್ನು ಬೈಲಿಗೆಳೆದು ಸಿದ್ಧಮಾಡಿಕೊಟ್ಟೆಯಂದರೆ ನಾನು ಅಲಮಗೀರನಿರುತ್ತೇನೆ ನೆನಪಿನಲ್ಲಿಡು. ಆ ಜಸವಂತಸಿಂಗನ ಅಧಿಕಾರವನ್ನಷ್ಟೇ ಯಾಕೆ ಅವನ ರಾಜ್ಯವನ್ನು ಸಹ ನಿನಗೆ ಕೊಡುವೆನು. ಆಮೇಲೆ ಈ ರಜಪೂತರು ನಿನ್ನ ಕಾಲುಬೀಳುತ್ತ ಬರುವರು.

ತನ್ನ ಅಭ್ಯುದಯದ ಉತ್ತಮ ಸಂಧಿಯು ಪ್ರಾಪ್ತವಾದದ್ದನ್ನು ನೋಡಿ ಉದಯ ಭಾನುವಿಗೆ ಬಹಳ ಆನಂದವಾಯಿತೆಂದು ಬೇರೆ ಹೇಳುವ ಕಾರಣವಿಲ್ಲ. ಜಸವಂತಸಿಂಗನು ತಗಲನಿದ್ದರಂತೂ ನೆಟ್ಟಗೇ ಆಯಿತು. ಅವನ ತಗಲುತನವನ್ನು ಬೈಲಿಗೆಳೆಯುವದು ಬಿಗಿಯಲ್ಲ. ಒಂದು ಪಕ್ಷದಲ್ಲಿ ಅವನು ಪ್ರಾಮಾಣಿಕನೇ ಇದ್ದರೆ, ಅವನ ಮೇಲೆ ಇಲ್ಲದ ಆರೋಪಗಳನ್ನು

ಹೊರಿಸುವದು ನನಗೇನು ಅಸಾಧ್ಯವಲ್ಲ. ನಾನು ಹಲವು ಬಗೆಗಳಿಂದ ಅವನ ಪತ್ರುಗೇಡು ಮಾಡುವೆನು. ಬೇಕಾದಷ್ಟು ಸಾಕ್ಷಿಗಳನ್ನು ಕೊಡುವೆನು, ಬೇಕಾದಹಾಗೆ ವಿಶ್ವಾಸಘಾತವನ್ನು ಮಾಡಿ ಜಸವಂತಸಿಂಗನು ವಿಶ್ವಾಸಘಾತಕಿಯಿದ್ದದ್ದನ್ನು ಬಾದಶಹನಿಗೆ ಒಡಂಬಡಿಕೆಯಾಗುವಂತೆ ಮಾಡುವೆನು. ಆಮೇಲೆ ಬಾದಶಹನು ವಚನಕೊಟ್ಟಂತೆ ಜೋಧಪುರದ ರಾಜ್ಯವನ್ನೂ, ದಕ್ಷಿಣದ ಸುಬೇದಾರಿಕೆಯನ್ನೂ ಕೊಟ್ಟೇಕೊಡುವನು. ಇವೇ ಮೊದಲಾದ ಮನೋರಾಜ್ಯಗಳಲ್ಲಿ ಯಥೇಚ್ಛ ರಾಜ್ಯಭಾರಮಾಡುವ ಉದಯಭಾನುವು ಮುಂದಿನ ವ್ಯೂಹವನ್ನು ರಚಿಸ ತೊಡಗಿದನು. ಅವನು ಬಾದಶಹನ ಹೇಳಿಕೆಯಂತೆ ತನ್ನ ಸಲುವಾಗಿ ಒಂದುಸಾವಿರ ಆರಿಸಿದ ಅಚ್ಚ ರಜಪೂತ ದಂಡಾಳುಗಳನ್ನು ಕರಕೊಂಡನು. ಬಾದಶಹನು ಜಸವಂತಸಿಂಗನ ಸಲುವಾಗಿ 3,000 ಜನರನ್ನು ಕಳಿಸಿದನು. ಮೊಗಲ ಸೈನ್ಯದಲ್ಲಿ ಒಂದುಸಾವಿರ ದಂಡಾಳುಗಳಿದ್ದರೆ, ಎರಡುಸಾವಿರ ಜನ ಬಾಜಾರಬುಣಗಿನವರು ಇರುತ್ತಿದ್ದರು. ಈ ಲೆಕ್ಕದಿಂದ ಉದಯಭಾನುವಿನ ಸಂಗಡ ಹೊರಟ ನಾಲ್ಕು ಸಾವಿರದಂಡಿನೊಡನೆ ಎಂಟುಸಾವಿರ ಬಾಜಾರಬುಣಗಿನವರು ಹೊರಟರು. ಇಂತಹ ದೊಡ್ಡ ಸೈನ್ಯದೊಡನೆ ಉದಯಭಾನುವು ತಾನು ಮುಂದೆ ಜೋಧಪುರದ ಮಹಾ ರಾಜನೂ, ದಕ್ಷಿಣದ ಸುಬೇದಾರನೂ ಆಗುವೆನೆಂದು ಮನಸ್ಸಿನಲ್ಲಿ ಮಂಡಿಗೆ ತಿನ್ನುತ್ತ ದಿಲ್ಲಿಯಿಂದ ಹೊರಟನು.

ಔರಂಗಜೇಬನ ಕಾಲದ ಮೊಗಲ ಸೈನ್ಯವು ಸುಖಕ್ಕೆ ಮೆಚ್ಚಿತ್ತು; ಅವರು ತಿಂದು ಸವಿಗಲಿತವರಾಗಿದ್ದರು; ಸುಲಿಗೆಯಲ್ಲಿ ಅವರ ಲಕ್ಷಬಹಳ; ಸುಲಿಗೆಯೊಳಗಿನ ಹೊನ್ನು ಹೆಣ್ಣುಗಳ ಮೇಲೆ ಅವರ ಆಶೆ ಹೆಚ್ಚು. ಈ ಕಾರಣಗಳಿಂದ ಮೊಗಲ ಸೈನ್ಯವು ಇಳಕೊಂಡ ಪ್ರದೇಶದೊಳಗಿನ ಹೊಲಗಳು ಹಾಳಾಗುತ್ತಿದ್ದವು; ಊರುಗಳು ಬಹುತರ ಗುಳೇಗಟ್ಟುತ್ತಿದ್ದವು. ಇದೇ ಚಂದದಿಂದ ಉದಯಭಾನುವಿನ ಸೈನ್ಯವು ಚಕ್ಕಂದದಿಂದ ಅಲ್ಲಲ್ಲಿ ಇಳಕೊಳ್ಳುತ್ತ ಸುಖಲೋಲುಪವಾಗಿ ಮದುವೆಯ ನಿಬ್ಬಣದಂತೆ ಸಾಗಿತ್ತು.

ಕ್ಷುಲ್ಲಕರಿಗೆ ಸ್ವಲ್ಪ ಅಧಿಕಾರ ಸಿಕ್ಕರೆ ಸಾಕು. ಅವರು ತಮ್ಮ ಅಧಿಕಾರದ ಹೆಮ್ಮೆಯನ್ನು ಮಂದಿಗೆ, ವಿಶೇಷವಾಗಿ ತಮ್ಮ ಗುರುತಿನವರಿಗೆ ತೋರಿಸಿ ಬಹುಮಾನ ಪಡೆಯಲು ಹವಣಿಸುವರು. ಉದಯಭಾನುವಿನ ಸ್ಥಿತಿಯು ಅದರಂತೆಯೇ ಆಯಿತು. ಉದೇಪುರದಲ್ಲಿರುವಾಗ ಅಲ್ಲಿಯ ಜನರು ಅವನನ್ನು ನೀಚಕುಲದವನೆಂದು ಎತ್ತಿ ಎಣಿಸುತ್ತಿದ್ದರು. ಆದ್ದರಿಂದ ಅವನು ಉದೇಪುರದ ಜನರಿಗೆ ತನ್ನ ವೈಭವವನ್ನು ತೋರಿಸುವ ಉಬ್ಬಿನಿಂದ ದಕ್ಷಿಣ ದೇಶಕ್ಕೆ ಹೋಗುವ ಒಳಹಾದಿಯನ್ನು ಬಿಟ್ಟು ಉದೇಪುರದ ರಾಜ್ಯದ ಗಡಿಯ ಮೇಲಿಂದ ಹೋಗುವ ಸುತ್ತು ಹಾದಿಯನ್ನು ಹಿಡಿದನು. ಅಧಿಕಾರ ಸಂಪನ್ನನಾದ ತನ್ನನ್ನು ಉದೇಪುರದ ಜನರು ಮನ್ನಿಸುವರೆಂದು ತಿಳಕೊಂಡಿದ್ದನು. ಅವನು ಸೈನ್ಯದ ಮುಖ್ಯಾಧಿಕಾರಿಯಾದ್ದರಿಂದ ಯಾರೂ ಅವನ ಮಾತು ಮೀರುವಂತೆ ಇದ್ದಿಲ್ಲ. ಅನುವು ದೊರೆತರೆ ಕೆಲವೊಂದು ಕಡೆಯಲ್ಲಿ ಪರಾಕ್ರಮವನ್ನು ತೋರಿಸಿ ಕೆಲವು ರಜಪೂತರನ್ನು ಸೆರೆಹಿಡಿದು ಬಾದಶಹನ ಬಳಿಗೆ ಕಳುಹಿಸಬಹುದೆಂತಲೂ ಅವನು ಭಾವಿಸಿದ್ದನು. ಅದಾಗದಿದ್ದರೂ ತಾನು ಬಾದಶಹನ

ಒತ್ತಾಶೆಯಿಂದ ಪಡೆದ ವೈಭವವನ್ನು ನೋಡಿ ಬೇರೆ ಜನರೂ ಬಾದಶಹನನ್ನು ಹೊಂದಲು ಮುಂದುವರಿಯಬಹುದೆಂದು ತಿಳಕೊಂಡಿದ್ದನು. ಹೀಗೆ ಒಂದಲ್ಲ ಎರಡಲ್ಲ ಹಲವು ಕಲ್ಪನೆಗಳನ್ನು ಮಾಡುತ್ತ ಉದಯಭಾನುವು ವೀರಸಿಂಹನ ದಹನಸ್ಥಾನದ ನಿಟ್ಟಿನ ಅರವಲೀ ಪರ್ವತದ ಅರಣ್ಯದ ಕಡೆಗೆ ಬಂದನು. ಅಲ್ಲಿ ಅವನು ಒಂದು ಪ್ರಶಸ್ತವಾದ ಸ್ಥಳವನ್ನು ನೋಡಿ ಸೈನ್ಯದ ತಳವೂರಿ ತಾನು ನಾಲ್ವತ್ತು ಐವತ್ತು ಜನ ಶಿಪಾಯಿಗಳೊಡನೆ ವಿಶ್ರಾಂತಿಗಾಗಿ ಬೇಟೆಯಾಡಲಿಕ್ಕೆ ಹೊರಟನು. ಬೇಟೆ ಯಾಡುತ್ತಾಡುತ್ತ ಅವನು ಒಂದು ಕಾಡಹಂದಿಯನ್ನು ಅಟ್ಟಿಕೊಂಡು ಸಿಪಾಯಿಗಳೊಡನೆ ಕಮಲಕುಮಾರಿಯು ಸತಿ ಹೋಗುತ್ತಿರುವಲ್ಲಿಗೆ ಬಂದು, ''ಯೇಕ್ಯಾ ಯೇಕ್ಯಾ'' ಎಂದು ಗದ್ದಲವನ್ನೆಬ್ಬಿಸಿದನು. ಪ್ರಿಯವಾಚಕರೇ, ಇವರು ಯಾರೆಂಬದು ತಿಳಿಯಿತೋ? ಹಾ ! ತಿಳಿಯಿತು.

## ಪಾಪ ಏನುಮಾಡಿಯಾರು !

ಆಕಸ್ಮಿಕವಾಗಿ ಮುಸಲ್ಮಾನರು ಬಂದು ಗದ್ದಲವೆಬ್ಬಿಸಿದ್ದನ್ನು ನೋಡಿ ಕಮಲಕುಮಾರಿಯು ಕ್ಷುಬ್ಧಳಾದಳು. ಇಂಥ ಪ್ರಸಂಗದಲ್ಲಿ ಮುಸಲ್ಮಾನರ ನೆರಳು ಬೀಳುವದು ಸಹ ಅಪ್ರಶಸ್ತ ವಾಗಿರಲು, ಅವರು ಪ್ರತ್ಯಕ್ಷ ಚಿತೆಯ ಬಳಿಯಲ್ಲಿ ಬಂದು ನಿಂತದ್ದರಿಂದ ಕಮಲಕುಮಾರಿಗೆ ಅಪಶಕುನ ವಾದಂತಾಯಿತು. ಈ ಅಪಶಕುನದ ಮೂಲಕ ಮುಂದೆ ಒದಗುಬಹುದಾದ ಅರಿಷ್ಟಗಳ ಕಲ್ಪನೆಯಾಗಿ ಅವಳ ಎದೆವಡೆದು ನೀರಾಯಿತು. ಆದರೂ ಆ ಸತಿಯು ಧೈರ್ಯತಾಳಿ ಚಿತೆಯ ಹತ್ತರ ಹೋಗಿ ಮಥುರಾನಾಥನನ್ನು ಕರೆದಳು. ಅಷ್ಟರಲ್ಲಿ ಉದಯ ಭಾನುವು ತನ್ನ ಕುದುರೆಯನ್ನು ಮುಂದಕ್ಕೆ ನೂಕಿ ಕಮಲಕುಮಾರಿಯ ಬಳಿಗೆ ಬಂದು ಒಮ್ಮೆಲೆ ಅವಳ ಗುರುತು ಹಿಡಿದು– ''ಯಾರು ! ಕಮಲಕುಮಾರೀ ! ನೀನು ಸಹಗಮನ ಮಾಡುತ್ತೀಯಾ ! ನಿನಗೆ ಸಹಾಯ ಮಾಡುವವರಾರು? ಓಹೋ ! ಈ ನಿನ್ನ ತಂದೆಯಾದ ಸಂಗ್ರಾಮಸಿಂಹನೇನು? ಶಾಬಾಸ್'' ಎಂದನು.

ತಮ್ಮಿಬ್ಬರನ್ನು ಹೆಸರ್ಗೊಂಡು ಕರೆದವರಾರೆಂದು ಆಶ್ಚರ್ಯದಿಂದ ತಂದೆ ಮಗಳಿಬ್ಬರೂ ಉದಯಭಾನುವನ್ನು ನೋಡಿದರು; ಆದರೆ ಅವರಿಗೆ ಅವನ ಗುರುತು ಹತ್ತಲಿಲ್ಲ; ಆದರೂ ಕಮಲಕುಮಾರಿಯು ಧೈರ್ಯದಿಂದ ತಟ್ಟನೆ ಉದಯಭಾನುವಿನ ಬಳಿಗೆ ಹೋಗಿ—ಅಪ್ಪಾ, ನೀನು ಯಾರಿದ್ದರೂ ನನ್ನ ನಿಶ್ಚಯಕ್ಕೆ ಅಡ್ಡಾಗಬೇಡ. ಬಹಳ ಕಷ್ಟಪಟ್ಟು, ಇವರೆಲ್ಲರ ಸಮ್ಮತಿಯನ್ನು ಪಡೆದು, ಸತಿ ಧರ್ಮಕ್ಕನನುಸರಿಸಿ ಸಹಗಮನ ಮಾಡಲು ನಿಂತಿರುತ್ತೇನೆ. ಇದೇ ಈಗ ಸ್ವರ್ಗ ದ್ವಾರದಲ್ಲಿ ಕಾಲಿಡುವೆನೆಂಬ ಆನಂದದಲ್ಲಿರುವ ನನಗೆ ನೀನೇಕೆ ವಿಘ್ನಮಾಡುವೆ? ನೀನು ರಜಪೂತನಿದ್ದರೆ ನನ್ನನ್ನು ಧರ್ಮದ ತಂಗಿಯೆಂದು ತಿಳಿದು ನನ್ನ ಸತಿ ಧರ್ಮಕ್ಕೆ ಅನು ಕೂಲನಾಗು. ರಜಪೂತನಲ್ಲದಿದ್ದರೆ, ನೀನು ಯಾರೇ ಇರು, ದಯಮಾಡಿ ನನ್ನ ಕಾರ್ಯಕ್ಕೆ

ವಿಘ್ನವನ್ನುಂಟು ಮಾಡಬೇಡ. ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ; ಅನಾಥೆಯಾದ ನನ್ನ ಮಾತನ್ನು ನಡಿಸು ಎಂದು ಬೇಡಿಕೊಂಡಳು. ಕಮಲಕುಮಾರಿಯ ಈ ದಿಟ್ಟತನದ ಮಾತನ್ನು ಕೇಳಿ ಉದಯಭಾನುವಿಗೆ ಬಹಳ ಆಶ್ಚರ್ಯವಾಯಿತು. ಅವನು ಎವೆಯಿಕ್ಕದೆ ಕಮಲಕುಮಾರಿಯನ್ನು ನೋಡುತ್ತ ಸುಮ್ಮನೆ ನಿಂತುಕೊಂಡನು. ಆಗ ಅವನ ಮನಸ್ಸಿನಲ್ಲಿ ಕಮಲಕುಮಾರಿಯ ಧರ್ಮಕಾರ್ಯಕ್ಕೆ ವಿಘ್ನವನ್ನುಂಟು ಮಾಡಬಾರದೆಂಬ ವಿಚಾರವು ಹುಟ್ಟಿದ್ದರೂ ಹುಟ್ಟಿರಬಹುದು; ಆದರೆ ಅವನು ಕೂಡಲೇ ಆ ವಿಚಾರವನ್ನು ಮನಸ್ಸಿನೊಳಗಿಂದ ಹೊರಹೊರಡಿಸಿ, ಕಮಲಕುಮಾರಿಯನ್ನು ಕುರಿತು ನುಡಿದನೇನಂದರೆ—ಕಮಲಕುಮಾರೀ, ನಾನು ಯಾರೆಂಬದನ್ನು ಹೇಳುವ ಹೊತ್ತು ಇದಲ್ಲ. ಈಗ ನಾನು ಸಹಗಮನ ಮಾಡಗೊಡದೆ ನಿನ್ನನ್ನು ಸೆರೆ ಹಿಡಿದೊಯ್ಯುವದು ನಿಶ್ಚಯವಾದದ್ದು. ನೀವೆಲ್ಲರೂ ತಿಳಿದವರಾಗಿದ್ದರೆ ಸುಮ್ಮನೆ ನನ್ನ ಮಾತಿಗೆ ಅನುಕೂಲರಾಗಿರಿ. ಇಲ್ಲದಿದ್ದರೆ...........

ಮುಂದಿನ ಮಾತುಗಳನ್ನಾಡಗೊಡದೆ ಸಂಗ್ರಾಮಸಿಂಹನು ಉದಯಭಾನುವಿನ ಮೇಲೆ ಹರಿದು ಹೋಗಿ—ಏನಂದಿ? ಸಹಗಮನಕ್ಕೆ ವಿಘ್ನ ಮಾಡುವಿಯಾ? ಕಮಲಕುಮಾರಿಯನ್ನು ಸೆರೆ ಹಿಡಿದೊಯ್ಯುವಿಯಾ? ಯಾರ ಸಂಗಡ ಹೆಣಗಾಡಬೇಕಾದೀತೆಂಬದರ ಎಚ್ಚರವಿರಲಿ. ಗರುಡ ಪಕ್ಷಿಯ ಮರಿಯನ್ನು ಗೂಡಿನೊಳಗಿಂದ ಒಯ್ಯುವವನು ಗರುಡಪಕ್ಷಿಯೊಡನೆ ಹೋರಾಡ ಬೇಕಾಗುತ್ತದೆ. ಸತಿ ಧರ್ಮಕ್ಕೆ ವಿಘ್ನವನ್ನುಂಟು ಮಾಡುವ ನೀನು ಅಧಮನಿರುತ್ತೀ. ನಿನಗೆ ದೇಹಾಂತ ಶಿಕ್ಷೆಯೇ ಯುಕ್ತವಾದದ್ದು ಎಂದು ನುಡಿಯುವಾಗ ಸಂತಾಪದ ಹೆಚ್ಚಳದಿಂದ ಆ ವೃದ್ಧ ಸರದಾರನ ಸರ್ವಾಂಗವು ನಡುಗತೊಡಗಿತು. ಅವನ ಧ್ವನಿಯು ಕಂಪನವನ್ನೆಯ್ದಿತು; ಆದರೂ ಅವನು ತನ್ನ ಖಡ್ಗವನ್ನು ಒರೆಯಿಂದ ಹಿರಿದು ಉದಯಭಾನುವಿನ ಮೇಲೆ ಧುಮುಕಿದನು. ಕೂಡಲೆ ಎರಡೂ ಬಣದವರು ಕೈಗೆ ಕೈಹತ್ತಿ ಕಾದತೊಡಗಿದರು.

ಮೊದಮೊದಲು ಕಮಲಕುಮಾರಿಯೇ ಮೊದಲಾದವರು ಉದಯಭಾನುವನ್ನು ಮುಸಲ್ಮಾನನೆಂತಲೇ ತಿಳಿದಿದ್ದರು. ಯಾಕಂದರೆ ಹಿಂದೂ ಸ್ತ್ರೀಯು, ವಿಶೇಷವಾಗಿ ರಜಪೂತ ಸ್ತ್ರೀಯು ಸಹಗಮನ ಮಾಡುತ್ತಿರಲು, ಅದಕ್ಕೆ ಮುಸಲ್ಮಾನರ ಹೊರತು ಅನ್ಯರು ವಿಘ್ನ ಮಾಡಲಾರರೆಂಬ ಮಾತು ಅವರಿಗೆ ಗೊತ್ತಿತ್ತು; ಆದರೆ ಉದಯಭಾನುವು ಕಮಲಕುಮಾರಿಯ ಸಂಗಡ ಮಾತಾಡುವಾಗ ಅವನ ಮಾತಿನ ರೀತಿಯನ್ನು ನೋಡಿ ಅವನು ಹುಟ್ಟಾ ಮುಸಲ್ಮಾನನಲ್ಲೆಂದು ಅವರು ಕಂಡುಹಿಡಿದರು. ಆಗ ಅವರು ಜಾತಿಯನ್ನು ವಿಚಾರಿಸುತ್ತ ಕೂಡ್ರುವಂತೆ ಇದ್ದಿಲ್ಲ. ಬಂದ ಅರಿಷ್ಟವನ್ನು ನೀಗಲಾಡಿಸಿ ಸಹಗಮನ ಕಾರ್ಯವನ್ನು ಸರಿಯಾಗಿ ಜರುಗಿಸುವದು ಅವಶ್ಯವಾಗಿತ್ತು; ಆದ್ದರಿಂದ ಸಂಗ್ರಾಮಸಿಂಹನು ವೈರಿಗಳ ಮೇಲೆ ಬಿದ್ದು ಕಾದತೊಡಗಿದನು. ಆ ವೃದ್ಧ ಸರದಾರನ ಮುಂದಾಳುತನದಿಂದ ಹುರಿದುಂಬಿದವರಾದ ಪದ್ಮನಾಭನೇ ಮೊದಲಾದವರು ಜೀವದ ಹಂಗುದೊರೆದು ಉದಯಭಾನುವಿನ ಸಂಗಡಿಗರೊಡನೆ ಕಾದಲಾರಂಭಿಸಿದರು. ಆಗ ಸಂಗ್ರಾಮಸಿಂಗನಿಂದಲೂ, ಅವನ ಅನುಯಾಯಿಗಳಿಂದಲೂ ರಜಪೂತರ ರಣರಕ್ಕಸತನವು ಚೆನ್ನಾಗಿ ವ್ಯಕ್ತವಾಗಹತ್ತಿತು. ಕಮಲಕುಮಾರಿ

ಯಂಥ ರಜಪೂತ ಸಾಧ್ವಿಯು ಸ್ತ್ರೀ ಧರ್ಮ ಕ್ಕನುಸರಿಸಿ ಸಹಗಮನ ಮಾಡುವಾಗ ತಮ್ಮೆದುರಿಗೆ ಮುಸಲ್ಮಾನರು ವಿಘ್ನವನ್ನುಂಟುಮಾಡಿದ್ದರಿಂದ ಆ ರಜಪೂತ ವೀರರು ರೊಚ್ಚಿಗೆದ್ದಿದ್ದರು; ಕಾರಣ ಎಂಟೇ ಜನರು ಸಂತಾಪದಿಂದ ಮೈಮರೆತು ಕಾದಿ ಐವತ್ತು ಜನರನ್ನು ಹಣ್ಣು ಮಾಡಿದರು; ಆದರೆ ಅವರ ಈ ವೀರಾವೇಶವು ಬಹಳ ಹೊತ್ತು ತಡೆಯಲಿಲ್ಲ. ಒಬ್ಬನಿಗೆ ಆರು ಮಂದಿಯಂತೆ ಲೆಕ್ಕ ಬಿದ್ದದ್ದರಿಂದ ಸ್ವಲ್ಪಹೊತ್ತಿನಲ್ಲಿ ಅವರು ವೀರಸ್ವರ್ಗವನ್ನು ಹೊಂದಿದರು. ಸಂಗ್ರಾಮಸಿಂಹನು ಗಾಯಪಟ್ಟು ನೆಲಕ್ಕುರುಳಿದನು. ಆಗ ಉದಯಭಾನುವು ಕಮಲಕುಮಾರಿಯನ್ನೂ ದೇವಲದೇವಿಯನ್ನೂ ಸೆರೆಹಿಡಿದನು.

ಉದಯಭಾನುವಿಗೆ ಸ್ವರ್ಗವು ಮೂರೇ ಬೆರಳು ಉಳಿಯಿತು. ಆನಂದದಿಂದ ಅವನು ಮಧ್ಯಾಹ್ನದ ಭಾನುವಿನಂತೆ ದೇದೀಪ್ಯಮಾನನಾದನು. ತಾನು ಈ ಹಾದಿಯಿಂದ ದಕ್ಷಿಣ ಹಿಂದುಸ್ತಾನಕ್ಕೆ ತೆರಳಿದ್ದರಲ್ಲಿ ದೈವಿಕ ಸಂಕಲ್ಪವೇನಾದರೂ ಇರಬಹುದೆಂತಲೂ, ತನಗೆ ಈಗ ಅನುಕೂಲ ಕಾಲವಿರುವದರಿಂದ ತಾನು ಮಣ್ಣು ಹಿಡಿದರೂ ಚಿನ್ನವಾಗುವದೆಂತಲೂ ಅವನು ಭಾವಿಸಿದನು. ದಕ್ಷಿಣಕ್ಕೆ ತೆರಳುವಾಗ ಮಾರ್ಗದಲ್ಲಿ ಕಮಲಕುಮಾರಿಯು ದೊರೆತಾಳೆಂಬ ವಿಚಾರವು ಅವನ ಕನಸು ಮನಸುಗಳಲ್ಲಿ ಸಹ ಬಂದಿದ್ದಿಲ್ಲ. ಯಾವನೊಬ್ಬ ಜೋಯಿಸನು ಹೀಗಾಗುವದೆಂದು ಭವಿಷ್ಯವನ್ನು ವರ್ಣಿಸಿದ್ದರೆ ಅದು ಅವನಿಗೆ ವಿಶ್ವಾಸನೀಯವಾಗಿ ತೋರುತ್ತಿದ್ದಿಲ್ಲ. ಹೀಗಿದ್ದು ಅಕಲ್ಪಿತವಾಗಿ ಕಮಲಕುಮಾರಿಯು ಹಸ್ತಗತಳಾದ್ದರಿಂದ ಅವನಿಗೆ ಸ್ವರ್ಗವು ಮೂರೇ ಬೆರಳು ಉಳಿದದ್ದರಲ್ಲಿ ಆಶ್ಚರ್ಯವೇನು?

ಈ ಮೇರೆಗೆ ಸ್ತ್ರೀಲಾಭದ ಕ್ಷಣಿಕಾನಂದದಿಂದ ಮತ್ತನಾದ ಉದಯಭಾನುವು ಗಾಯಗಳ ನೋವಿನಿಂದ ನರಳುತ್ತಿರುವ ಸಂಗ್ರಾಮಸಿಂಹನ ಬಳಿಗೆ ಹೋಗಿ—ಯಾಕೆ ಮಾವನವರೇ, ಹಂಸಿಯನ್ನು ಹಂಸಿಗೇ ಕೊಡಬೇಕಲ್ಲದೆ ಕಾಗೆಗೆ ಕೊಡಬಾರದೆಂದು ತಿಳಿದು ನೀವು ಹಂಸನಾದ ವೀರಸಿಂಹನ ಮಾವಂದಿರಾಗಿದ್ದಿರಲ್ಲವೇ? ನಿಮ್ಮ ಹಂಸನು ಮಾನಸ ಸರೋವರಕ್ಕೆ ಯಾವಾಗ ಹೋದನು? ಇನ್ನು ಹಂಸಿಯ ಗತಿಯೇನು? ಸಹಗಮನದ ವಿಚಾರವಂತೂ ಮೂಲೆಗೆ ಬಿದ್ದಿತು. ಇನ್ನು ಕಾಗೆಯಾದ ನಾನು ಬಲಾತ್ಕಾರದಿಂದ ಹಂಸಿಯನ್ನು ಅಪಹರಿಸಿದರೆ ಹೇಗೆ ಮಾಡುವಿರಿ! ಪಾಪ ! ಹಂಸಿಯ ಹಣೆಯಲ್ಲಿಯೇ ವಿಧಿಯು ಹಾಗೆ ಬರೆದಿದ್ದರೆ ನೀವಾದರೂ ಏನು ಮಾಡುವಿರಿ ! ಇನ್ನು ಕಾಗೆಯ ಕೈಯೊಳಗಿಂದ ಹಂಸಿಯು ಪಾರಾಗುವ ಬಗೆ ಹೇಗೆ? ನೀವು ಕಾಗೆಯ ಮಾವಂದಿರಾಗುವ ಹೊತ್ತು ಬಂದಿತಲ್ಲ ! ಹ್ಯಾಗೆ ಮಾಡುವಿರಿ !! ಯಾಕೆ ಸುಮ್ಮನಿರುವಿರಲ್ಲ? ಈಗ ಮಾತಾಡಿರಿ, ಎಂದು ಹಂಗಿಸಿದನು.

ಸಂಗ್ರಾಮಸಿಂಹನಿಗೆ ಬಲವಾದ ಗಾಯಗಳಾಗಿದ್ದವು. ಅವನು ಕಣ್ಣುಮುಚ್ಚಿಕೊಂಡು ಸುಮ್ಮನೆ ಮಲಗಿದ್ದನು. ಕಮಲಕುಮಾರಿಯೂ, ದೇವಲದೇವಿಯೂ ತಮ್ಮ ಸೀರೆಗಳನ್ನು ಹರಿದು ಪಟ್ಟಿಗಳಿಂದ ಗಾಯುಗಳನ್ನು ಕಟ್ಟುತ್ತಿದ್ದರು. ಚಾಂಡಾಲನಾದ ಉದಯಭಾನುವಿನ ಮರ್ಮಭೇದಕ ಮಾತುಗಳನ್ನು ಕೇಳಿ ಅವರಿಬ್ಬರಿಗೂ ಬಹಳ ದುಃಖವಾಯಿತು; ಆದರೆ ಮಾಡುತ್ತಾರೇನು? ಆ ದುಷ್ಟನ ಸಂಗಡ ಮಾತಾಡುವದರಿಂದ ಅವರ ವಿಟಂಬನವು

ಹೆಚ್ಚಾಗುವಂತೆ ಇತ್ತು; ಕಾರಣ ಕಮಲಕುಮಾರಿಯು ಒಂದು ತುಟಿ ಎರಡು ಮಾಡದೆ ತಂದೆಯ ಗಾಯಗಳನ್ನು ಕಟ್ಟುತ್ತ ಕುಳಿತಿದ್ದಳು. ದೇವಲದೇವಿಯು ತಡೆಯಲಾರದೆ ಮಾತಾಡಲೆತ್ನಿಸಲು, ಕಮಲಕುಮಾರಿಯು ತೊಡೆಚಿವುಟಿ ಅವಳನ್ನು ಸುಮ್ಮನಿರಿಸಿದಳು.

ತಾನಾಡಿದ ಮರ್ಮಭೇದಕ ಮಾತುಗಳಿಗೆ ಮೂವರಲ್ಲಿ ಒಬ್ಬರೂ ಉತ್ತರ ಕೊಡದ್ದನ್ನು ನೋಡಿ ಉದಯಭಾನುವು ರೇಗಿಗೆದ್ದನು. ಅವನು ಕಮಲಕುಮಾರಿಯನ್ನೂ, ಸಂಗ್ರಾಮ ಸಿಂಹನನ್ನೂ ನೋಡಿ ಮತ್ತೆ ನುಡಿದನೇನಂದರೆ—ಸಂಗ್ರಾಮಸಿಂಹನೇ, ನೀನು ಸುಮ್ಮನಿದ್ದರೆ ಮುಂದಾಗುವದು ತಪ್ಪುವದೆಂದು ತಿಳಿಯಬೇಡ. ನೀನು ಜಯಸಿಂಹ ಮಹಾರಾಜನ ಒಳ್ಳೆಯ ಅಭಿಮಾನಿಯು. ನಿನ್ನನ್ನು ಬಾದಶಹನ ಬಳಿಗೆ ಹಿಡಕೊಂಡು ಹೋದರೆ, ಆತನು ಬಹಳ ಸಂತೋಷ ಬಟ್ಟು ನಿನ್ನನ್ನು ಸೆರೆಯಲ್ಲಿಡುವನು; ಮತ್ತು ನನ್ನಿಂದ ತನಗಾದ ಆನಂದಕ್ಕಾಗಿ ಆ ಬಾದಶಹನು ಕಮಲಕುಮಾರಿಯನ್ನು ನನಗೆ ಲಗ್ನಮಾಡಿಕೊಡುವನು. ಹೇಗಿದ್ದರೂ ಈ ಹಂಸಿಯು ಕಾಗೆಯ ಕೊರಳಿಗೇ ಬೀಳುವಳು. ಹಾಗೆ ಮಾಡದಿದ್ದರೆ ಆಕೆಗೆ ಗತ್ಯಂತರವೇ ಇಲ್ಲ. ಪರವರದಿಗಾರ ಅಲ್ಲಾನ ಮನಸ್ಸಿಗೆ ಬಂದಬಳಿಕ ಯಾರ ಉಪಾಯವೇನಿರುವದು? ನಡೆ; ನಿನ್ನನ್ನೂ, ನನ್ನ ಹೆಂಡತಿಯಾಗ ಬೇಕಾಗಿರುವ ಈ ಕಮಲಕುಮಾರಿಯನ್ನೂ ಕರಕೊಂಡು ಬಾದಶಹನ ಬಳಿಗೆ ಹೋಗಿ ನಡೆದ ವೃತ್ತಾಂತವನ್ನೆಲ್ಲ ಹೇಳುವೆನು, ಎಂದನು.

ಈಗ ಮಾತ್ರ ಸಂಗ್ರಾಮಸಿಂಹನಿಂದ ಸುಮ್ಮನಿರುವದಾಗಲಿಲ್ಲ. ಗಾಯಗಳಿಂದ ರಕ್ತಸ್ರಾವ ವಾಗುತ್ತಿದ್ದರೂ ಅವನು ಉದಯಭಾನುವಿನ ಮರ್ಮಭೇದಕ ಮಾತುಗಳಿಂದ ಸಂತಾಪಗೊಂಡು ಆವೇಶದಿಂದ ಒಮ್ಮೆಲೆ ಎದ್ದು ನಿಂತು ಉದಯಭಾನುವನ್ನು ಕುರಿತು—ಉದಯಭಾನೂ, ನೀನು ಜಾತಿಯಿಂದ ರಜಪೂತನೆನಿಸುತ್ತೀ; ಕ್ಷತ್ರಿಯ ವೀರನೆನಿಸುತ್ತೀ; ಆದರೆ ಈ ಸತಿಯ ಪವಿತ್ರ ಧರ್ಮಕ್ಕೆ ವಿಘ್ನ ಮಾಡುತ್ತೀಯಲ್ಲ! ಅಲ್ಲೋ, ಪತಿಯ ಸಂಗಡ ಸಹಗಮನ ಮಾಡಿ ಸ್ವರ್ಗ ವನ್ನೈದಲು ಸಿದ್ಧಳಾಗಿನಿಂತವಳನ್ನು ಎಳೆದೊಯ್ದು ದುಷ್ಟನೂ, ಅಧಮನೂ, ಪಿತೃಘಾತಕಿಯೂ, ಭ್ರಾತೃಘಾತಕಿಯೂ ಆದ ಬಾದಶಹನ ಮುಂದೆ ನಿಲ್ಲಿಸುವಿಯಾ? ಇದೇ ಏನು ನಿನ್ನ ಕ್ಷತ್ರಿಯ ತೇಜಸ್ಸು ! ಇದೇ ಏನು ನಿನ್ನ ರಜಪೂತ ಕುಲಾಭಿಮಾನವು ! ಇದೇ ಏನು ನಿನ್ನ ಹಿಂದೂ ಧರ್ಮದ ಪ್ರೀತಿಯು ! ಹೀಗೆ ಮಾಡುವದಕ್ಕಿಂತ ನೀನು.............

ಸಂಗ್ರಾಮಸಿಂಹನು ಹೀಗೆ ಮಾತಾಡುತ್ತಿರಲು ಉದಯಭಾನುವು ತಿರಸ್ಕಾರವನ್ನು ವ್ಯಕ್ತಮಾಡುವದಕ್ಕಾಗಿ ನಡುವೇ ಗಹಗಹಿಸಿ ನಕ್ಕು–ಸಂಗ್ರಾಮಸಿಂಹಾ, ಈದಿನ ನಾನು ನಿನಗೆ ನಿಜವಾದ ಕ್ಷತ್ರಿಯನೂ, ರಜಪೂತನೂ ಆದೆನಲ್ಲವೇ! ನಾನು ಯಾರೆಂಬದನ್ನು ನೀನು ಮರೆತಂತೆ ತೋರುತ್ತದೆ; ನೆನಪು ಮಾಡಿಕೊಡುತ್ತೇನೆ ಕೇಳು. ನಾನು ಸುಣ್ಣದಲ್ಲಿ ಗರಿಗಳನ್ನು ಎದ್ದಿಕೊಂಡು ಬೆಳ್ಳಗೆ ಮಾಡಿಕೊಂಡ ಕಾಗೆಯು, ರಜಪೂತನಲ್ಲ. ನಾನು ಕಮಲಕುಮಾರಿಯನ್ನು ಕೇಳಲಿಕ್ಕೆ ಬಂದಾಗ ಆಡಿದ ಮಾತುಗಳು ನಿನ್ನ ನೆನಪಿನಲ್ಲಿರುವವೋ? ನನ್ನ ತಾಯಿಯು ದಾಸಿ ಇದ್ದದ್ದು ನನ್ನ ದೋಷವಲ್ಲ; ಹೀಗಿದ್ದು ನಾನು ಕಾಗೆಯಾದೆನು; ಈಗ ವಿಪರೀತ ಕಾಲ ಒದಗಿ, ಹಂಸಿ ಯಿಂದ ಸಹಿತನಾದ ನೀನು ನನ್ನ ಕೈಯಲ್ಲಿ ಸಿಕ್ಕಕೂಡಲೆ ನಾನು ಕ್ಷತ್ರಿಯನು! ರಜಪೂತವೀರನು !

ಶಾಬಾಸ್!! ಮಾವನವರೇ, ಈ ಹೊಯ್ಮಾಲಿತನವನ್ನು ಯಾರ ಮುಂದೆ ತೋರಿಸುತ್ತೀರಿ? ಲಕ್ಷಗೊಟ್ಟು ಕೇಳಿರಿ. ಈಗ ನಾನು ರಜಪೂತನಿರುವದಿಲ್ಲ ಮುಸಲ್ಮಾನನಿರುತ್ತೇನೆ. ಬಾದಶಹನ ಸಮಕ್ಷ ಈ ಕಮಲ ಕುಮಾರಿಯನ್ನು ನಿಕಾಮಾಡಿಕೊಂಡು, ಈಕೆಯನ್ನು ಕೊಂಡಾಣಾ ಎಂಬ ಕೋಟೆಗೆ ಕರಕೊಂಡು ಹೋಗುತ್ತೇನೆ; ತಿಳಿಯಿತೇ, ಎಂದು ಹೇಳಿ ಮರ್ಮವನ್ನು ಭೇದಿಸುವ ಹಾಗೆ ಮತ್ತೊಮ್ಮೆ ಗಹಗಹಿಸಿ ನಕ್ಕನು.

ಉದಯಭಾನುವಿನ ಈ ನೀಚವೃತ್ತಿಯನ್ನು ನೋಡಿ ದೇವಲದೇವಿಯು ತಿರಸ್ಕಾರ ದಿಂದ—ಉದಯಭಾನೂ, ನಿನ್ನನ್ನು ನಾವು ದುಷ್ಟನೆಂತಲೂ, ನೀಚನೆಂತಲೂ ತಿಳಿದೇ ಇದ್ದೆವು; ಆದರೆ ನಿನ್ನ ನೀಚತನವು ಇಷ್ಟು ಪರಮಾವಧಿಗೆ ಮುಟ್ಟಿದ್ದನ್ನು ನಾವು ಎಂದೂ ನೋಡಿದ್ದಿಲ್ಲ. ಏನೋ ನೀನು ಇಂಥ ಪ್ರಸಂಗದಲ್ಲಿ ಮುಂದಾಳುವಾಗಿ ಇಷ್ಟು ಜನರ ಪ್ರಾಣಹರಣಮಾಡಿ, ಸಹಗಮನವನ್ನು ತಡೆದು, ಮೇಲೆ ಸತಿಯಾದ ಕಮಲಕುಮಾರಿಯ ಸಲುವಾಗಿ ಪಾಪ ವಾಸನೆಯನ್ನು ಮಾಡುತ್ತೀ ! ದೇವರ ಮುಂದೆ ಈ ಅಪರಾಧದ ಬಗ್ಗೆ ಉತ್ತರವನ್ನಾದರೂ ಹೇಗೆ ಕೊಟ್ಟೀ ಎನ್ನಲು ಉದಯ ಭಾನುವು ಬಹುಸಮಾಧಾನದಿಂದ ನಕ್ಕು—ದೇವಲದೇವೀ, ಕಮಲಕುಮಾರಿಗೆ ವೀರಸಿಂಹನ ಪ್ರೇತದ ಸಂಗಡ ಇಲ್ಲವೆ ಅವನ ಪಾದುಕೆಗಳ ಸಂಗಡ ಸಹಗಮನ ಮಾಡಲಿಕ್ಕೆ ಅಧಿಕಾರವಿರುವದಿಲ್ಲ; ಯಾಕಂದರೆ ಆಕೆಯು ವೀರಸಿಂಹನ ಹೆಂಡತಿಯೇ ಅಲ್ಲ; ನಾನು ಎಲ್ಲಕ್ಕೂ ಮೊದಲು ಕಮಲಕುಮಾರಿಯನ್ನು ಮನಸ್ಸಿನಿಂದ ಲಗ್ನವಾಗಿದ್ದೇನೆ; ಆದ್ದರಿಂದ ಅವಳ ಸಹಗಮನಕ್ಕೆ ವಿಘ್ನವನ್ನುಂಟುಮಾಡಿದ್ದು ಅವಳನ್ನು ಅಧರ್ಮದಿಂದ ರಕ್ಷಿಸಿದ ಹಾಗಾಗಿದೆ. ನೀನು ಇಲ್ಲದ್ದೊಂದು ಹುಟ್ಟಿಸಿಕೊಂಡು ಒಣ ಉಸಾಬರಿ ಮಾಡಬೇಡ. ನೀನು ಅವಳ ಸಂಗಡ ಬರುವ ಗೊಂದಲಕ್ಕೆ ಹೋಗುವದು ಒಳಿತಲ್ಲ. ಬೇಕಾದರೆ ನಿನ್ನ ಸಂಗಡ ನನ್ನ ಸಿಪಾಯಿಗಳಲ್ಲೊಬ್ಬನನ್ನು ಕಳುಹುತ್ತೇನೆ. ಆತನು ಸುರಕ್ಷಿತವಾಗಿ ನಿನ್ನನ್ನು ನಿನ್ನ ಗಂಡನ ಮನೆಗೆ ಕಳಿಸುವನು. ಇದು ನಿನ್ನ ಮನಸ್ಸಿಗೆ ಬಾರದಿದ್ದರೆ ಉಪಾಯವಿಲ್ಲ. ನಿಮ್ಮೆಲ್ಲರಿಗೆ ಇನ್ನೊಮ್ಮೆ ಸ್ಪಷ್ಟವಾಗಿ ಹೇಳುತ್ತೇನೆ. ನೀವು ವ್ಯರ್ಥವಾಗಿ ಕಾಲಹರಣ ಮಾಡಿ ತಾಪಕೊಡಬೇಡಿರಿ; ಬೇಗನೆ ನಮ್ಮ ಸಂಗಡ ಬರುವ ಎತ್ತುಗಡೆ ಮಾಡಿರಿ.

ಈ ಮೇರೆಗೆ ನುಡಿದು ಉದಯಭಾನುವು ತನ್ನ ಸಿಪಾಯಿಗಳ ಕಡೆಗೆ ತಿರುಗಿ ಏನೋ ಕೇಳಹತ್ತಿದನು. ಕಮಲಕುಮಾರಿಯು ಮನಸ್ಸಿನಲ್ಲಿ— ಈ ದುಷ್ಟನು ನಮ್ಮನ್ನು ಬಿಡುವದಿಲ್ಲ; ಇನ್ನು ಮೇಲೆ ಹಲವು ಬಗೆಯಾಗಿ ನನ್ನ ವಿಟಂಬನವಾಗುವದು. ಈಶ್ವರೇಚ್ಛೆಯ ಮುಂದೆ ಯಾರ ಉಪಾಯವೇನು? ಬರುವ ಸಂಕಟಗಳನ್ನು ನಾನೊಬ್ಬಳೇ ಅನುಭವಿಸಿದರಾಯಿತು. ಈ ದೇವಲದೇವಿಯು ವ್ಯರ್ಥವಾಗಿ ನನ್ನ ಸಂಗಡ ಯಾಕೆ ಬರಬೇಕು? ಎಂದು ಯೋಚಿಸಿ ದೇವಲ ದೇವಿಯನ್ನು ಕುರಿತು—ದೇವಲೇ, ನನ್ನ ಸಲುವಾಗಿ ನೀನು ಯಾಕೆ ಸಂಕಟದಲ್ಲಿ ಬೀಳುತ್ತೀ? ಉದಯಭಾನುವು ನಿನ್ನನ್ನು ಕಳಿಸಿಕೊಡುತ್ತಿದ್ದರೆ ನೀನು ನಿನ್ನ ಪತಿಯ ಬಳಿಗೆ ಹೋಗುವದೇ ನೆಟ್ಟಗೆ ಕಾಣುತ್ತದೆ; ನೀನು ನನ್ನ ಬಳಿಯಲ್ಲಿದ್ದರೆ ಆಗುವ ಲಾಭವೇನು? ನನ್ನ

ದುರ್ದೈವದಿಂದ ಒದಗುವ ದುಃಖಗಳನ್ನು ನಾನೇ ಅನುಭವಿಸುವೆನು. ನೀನು ಊರಿಗೆ ಹೋದರ ಯಾರಿಗಾದರೂ ಹೇಳಿ ಏನಾದರೂ ಉಪಾಯ ಮಾಡಿಸಲಿಕ್ಕೆ ಬಂದೀತು. ಇದರಿಂದ ಒಂದುವೇಳೆ ನನ್ನ ಬಿಡುಗಡೆಯಾದರೂ ಆಗಬಹುದು. ಆದ್ದರಿಂದ ದೇವಲದೇವೀ, ನನ್ನ ಮಾತನ್ನು ಕೇಳು. ಸುಮ್ಮನೆ ಊರಿಗೆ ಹೋಗು; ಇಲ್ಲಿ ಇದ್ದರೆ ನಿನ್ನಿಂದ ಏನೂ ಆಗುವಹಾಗಿಲ್ಲ, ಈ ನನ್ನ ತಂದೆಯ ಗತಿಯಾದರೂ ನೆಟ್ಟಗೆ ಕಾಣುವದಿಲ್ಲ; ಎಂದು ನುಡಿದು ಆಕೆಯು ತನ್ನ ತಂದೆಯ ಕಡೆಗೆ ತಿರುಗಿ ನೋಡಲು, ಆತನು ಮೈಮೇಲೆ ಅರಿವು ಇಲ್ಲದೇ ಬಿದ್ದಿದ್ದನು. ಅವನು ಈ ಕುತ್ತಿನೊಳಗಿಂದ ಪಾರಾದಾನೆಂದು ಯಾರಿಗೂ ತೋರುತ್ತಿದ್ದಿಲ್ಲ; ಆಗ ದೇವಲದೇವಿಯು ಕಮಲಕುಮಾರಿಗೆ—ಕಮಲೇ, ನೀನು ಬೇಕಾದದ್ದು ಹೇಳು. ನಾನಂತೂ ನಿನ್ನನ್ನು ಬಿಟ್ಟು ಹೋಗುವದಿಲ್ಲ, ನನ್ನನ್ನು ಇವರ ಜೀವದರಿಸೆಯಾಗಿ ಹೊಡೆದರೆ ಉಪಾಯವಿಲ್ಲ. ಜೀವ ಧಿಂದಿರುವವರೆಗೆ ಇಂದಿನಿಂದ ನಿನ್ನನ್ನು ಒಂದು ಅರಗಳಿಗೆಯಾದರೂ ಅಗಲಲಾರೆನು. ಆಗತಕ್ಕದ್ದೆಲ್ಲ ಇಬ್ಬರಿಗೂ ಒಮ್ಮೆಲೇ ಆಗಲಿ; ಬಿಡುಗಡೆಯಾಗುವ ಪ್ರಸಂಗಬಂದರೆ ಇಬ್ಬರೂ ಬಿಡುಗಡೆ ಮಾಡಿಕೊಳ್ಳೋಣ, ಎಂದು ಹೇಳಿದಳು.

ಇವರಿಬ್ಬರ ಮಾತುಗಳನ್ನು ಉದಯಭಾನುವು ಕೇಳದಿದ್ದದ್ದೇ ನೆಟ್ಟಗಾಯಿತು. ಅವನು ತನ್ನ ಸಿಪಾಯಿಗಳಲ್ಲಿ ಕೆಲವರಿಗೆ ಛಾವಣಿಗೆ ಹೋಗಿ ಮೂರು ಡೋಲಿಗಳನ್ನು ತರಲು ಆಜ್ಞಾಪಿಸು ತ್ತಿದ್ದನು. ಅವನು ಮರಳಿ ಸಂಗ್ರಾಮಸಿಂಹನ ಬಳಿಗೆ ಬಂದು ಅವನ ಪ್ರಕೃತಿಯನ್ನು ವಿಚಾರಿಸಿದನು. ಸಂಗ್ರಾಮಸಿಂಹನು ಕೇವಲ ನಿಶ್ಚೇಷ್ಟನಾಗಿ ಬಿದ್ದಿದ್ದನು; ಅವನಿಗೆ ತನ್ನ ಸುತ್ತ ಮುತ್ತ ನಡೆದ ಸಂಗತಿಗಳ ಎಚ್ಚರವಿದ್ದಂತೆ ಸಹ ತೋರಲಿಲ್ಲ. ಅವನು ಸಾಯುವನೋ ಏನೋ ಎಂಬ ಅಂಜಿಕೆಯು ಉದಯಭಾನುವಿನಲ್ಲಿ ಹುಟ್ಟಿತು. ಆತನ ಸಾವಿನಿಂದ ಉದಯಭಾನುವಿಗೆ ದುಃಖವಾಗುವದೂ ಅಷ್ಟರಲ್ಲಿಯೇ ಇತ್ತು. ಆದರೆ ಅವನು ಮರಣ ಹೊಂದಿದರೆ, ಮೇವಾಡದ ಒಬ್ಬ ರಜಪೂತ ಸರದಾರನನ್ನು ಬಹುಪ್ರಯಾಸದಿಂದ ಸೆರೆಹಿಡಿದು ತಂದೆನೆಂದು ಔರಂಗಜೇಬನ ಮುಂದೆ ಪೌರುಷ ಹೇಳಿಕೊಳ್ಳಲಿಕ್ಕೆ ಅವನಿಗೆ ಅನುವು ದೊರೆಯುತ್ತಿದ್ದಿಲ್ಲ. ಅಷ್ಟಕ್ಕಾಗಿಯೇ ಅವನು ಸಂಗ್ರಾಮಸಿಂಹನ ಮರಣವನ್ನು ಕುರಿತು ಚಿಂತಿಸುತ್ತಿದ್ದನು. ಔರಂಗಜೇಬನ ಎದುರಿಗೆ ನಿಲ್ಲಿಸಿದ ಬಳಿಕ ಸಂಗ್ರಾಮಸಿಂಹನು ಮರಣ ಹೊಂದಿದರೆ ಉದಯಭಾನುವಿನ ದೃಷ್ಟಿಯಿಂದ ಅನ್ಯಾಯ ವಾಗುವಂತೆ ಇದ್ದಿಲ್ಲ. ತಾವು ಇಲ್ಲಿಂದ ಹೊರಡುವವರೆಗೆ ಈ ಹುಡುಗೆಯರನ್ನು ತಡವುವದು ಸರಿಯಲ್ಲೆಂದು ತಿಳಿದು ಉದಯಭಾನುವು ತನ್ನ ಜನರ ಸಂಗಡ ಮಾತಾಡುವ ನೆವದಿಂದ ಸ್ವಲ್ಪ ದೂರದಲ್ಲಿ ನಿಂತುಕೊಂಡು ಕಾಲಹರಣ ಮಾಡಿದನು.

ಸ್ವಲ್ಪಹೊತ್ತಿನಲ್ಲಿ ಮೂರು ಡೋಲಿಗಳು ಬಂದವು. ಸಂಗ್ರಾಮಸಿಂಹನು, ಕಮಲ ಕುಮಾರಿಯು, ದೇವಲದೇವಿಯು ಇವರು ಒಬ್ಬೊಬ್ಬರು ಒಂದೊಂದು ಡೋಲಿಯಲ್ಲಿ ಕುಳಿತು ಕೊಳ್ಳಬೇಕೆಂದು ಉದಯಭಾನುವು ಗೊತ್ತುಮಾಡಿಕೊಂಡಿದ್ದನು; ಆದರೆ ದೇಲದೇವಿಯು ಏನುಮಾಡಿದರೂ ಕೇಳಲಿಲ್ಲ. ಆಕೆಯು ತಮ್ಮ ರಥದಲ್ಲಿಯೇ ಸಂಗ್ರಾಮಸಿಂಹರವರನ್ನು ಮಲಗಿಸಿಕೊಂಡು ತಾವಿಬ್ಬರೂ ಹ್ಯಾಗಾದರೂ ಕುಳಿತುಕೊಳ್ಳುವೆವೆಂತಲೂ, ನಾವು ಹತ್ತರ

ಇರದಿದ್ರೆ ನೆಟ್ಟಗಾಗುವದಿಲ್ಲೆಂತಲೂ ಹಟ ಹಿಡಿದಳು. ಉದಯಭಾನುವಾದರೂ ಈ ಮಾತಿನಲ್ಲಿ ದುರಾಗ್ರಹಮಾಡುವದು ಒಳಿತಲ್ಲವೆಂದು ತಿಳಿದು, ದೇವಲದೇವಿಯ ಮಾತಿಗೆ ಒಪ್ಪಿಕೊಂಡು, ಗದ್ದಲದಲ್ಲಿ ಬೆದರಿ ಓಡಿಹೋಗಿದ್ದ ಎತ್ತುಗಳನ್ನು ಹಿಡಕೊಂಡು ಬರಲಿಕ್ಕೆ ಆಳುಗಳನ್ನು ಕಳಿಸಿದನು. ಅವರು ಯುಕ್ತಿ- ಪ್ರಯುಕ್ತಿಗಳಿಂದ ಅವನ್ನು ಹಿಡಕೊಂಡುಬಂದು ರಥಕ್ಕೆ ಹೂಡಿದರು. ಬಳಿಕ ದೇವಲದೇವಿಯ ಇಚ್ಛೆಯಂತೆ ಸಂಗ್ರಾಮಸಿಂಹನನ್ನು ಒಳಗೆ ಮಲಗಿಸಲು, ಕಮಲಕುಮಾರಿಯೂ ದೇವಲದೇವಿಯೂ ಅಷ್ಟರಲ್ಲಿಯೇ ಮುದುಡಿಕೊಂಡು ಹ್ಯಾಗಾದರೂ ಮಾಡಿ ಕುಳಿತುಕೊಂಡರು. ಪಾಪ ಏನುಮಾಡಿಯಾರು !!

## ನಿರಾಶೆಯಲ್ಲಿ ಆಶೆಯ ಅಂಕುರವು

ಪ್ರಿಯವಾಚಕರೇ, ಮನುಷ್ಯನಿಗೆ ಯಾವ ಮಾತಿನಲ್ಲಿಯೂ ಸ್ವಾತಂತ್ರ್ಯವಿಲ್ಲ ಅವನು ತಾನೊಂದುಮಾಡಲು ಯತ್ನಿಸಿದರೆ ದೈವವು ಬೇರೊಂದನ್ನು ಮಾಡಿಸುತ್ತದೆ. ಕಮಲಕುಮಾರಿಯ ಸ್ಥಿತಿಯಾದರೂ ಹೀಗೆಯೇ ಆಯಿತು. ಆ ಸತಿಯು ಸಹಗಮನಮಾಡಬೇಕೆಂದು ಬಂದವಳು ದೈವಯೋಗದಿಂದ ಉದಯಭಾನುವಿನ ಸೆರೆಯಾಳಾದಳು. ಉದಯಭಾನುವಿನ ಜನರು ಆ ಸೆರೆಯವರ ರಥವನ್ನು ನಡುವೆ ಮಾಡಿಕೊಂಡು ಹೊರಟರು. ಛಾವಣಿಗೆ ಬಂದ ಬಳಿಕ ಉದಯಭಾನುವು ತನ್ನ ಮನಸ್ಸಿನಲ್ಲಿ—ಈಗ ದಿಲ್ಲಿಗೆ ತಿರುಗಿ ಹೋಗುವಾಗ ಎಲ್ಲ ಸೈನ್ಯವನ್ನು ಒಯ್ಯುವದು ಮೂರ್ಖತನವು. ನಾನು ನಿಂದನಿಂದರಿಕೆಯಿಂದ ದಿಲ್ಲಿಗೆ ಹೋಗಿ ಬಾದಶಹನಿಗೆ ನಡೆದ ಸಂಗತಿಯನ್ನೆಲ್ಲ ಸರಳತನದಿಂದ ಹೇಳಿ, ಆತನ ಅಪ್ಪಣೆಯನ್ನು ಪಡೆದು ತಿರುಗಿ ದಕ್ಷಿಣಕ್ಕೆ ಹೋಗತಕ್ಕದ್ದು ಎಂದು ಯೋಚಿಸಿ ತನ್ನ ಕೆಳಗಿನ ಸೇನಾಪತಿಯನ್ನು ಕರೆದು—ನಾನು ದಿಲ್ಲಿಗೆ ಹೋಗಿ ಬಾದಶಹನನ್ನು ಕಂಡು ಬರುವೆನು. ನೀವು ಇನ್ನು ಮೇಲೆ ಉದೇಪುರದ ಪ್ರಾಂತದೊಳಗಿಂದ ದಕ್ಷಿಣಕ್ಕೆ ಹೋಗಬಾರದು. ಈಗ ನಡೆದ ಸಂಗತಿಯು ಉದೇಪುರದವರಿಗೆ ತಿಳಿದು, ನಾವು ಅವರ ಅಳವಿನೊಳಗೆ ಸಿಕ್ಕರೆ ಏನಾದೀತೆಂಬದನ್ನು ಯಾರು ಹೇಳಬೇಕು? ಆದ್ದರಿಂದ ನೀವು ಕೆಲವು ಹಾದಿಯನ್ನು ಹಿಂದಕ್ಕೆ ತಿರುಗಿಹೋಗಿ ದಿನದ ಹಾದಿಯನ್ನು ಕೂಡಿಕೊಂಡು ನಾನು ದಿಲ್ಲಿಯಿಂದ ಬರುವವರೆಗೆ ದಂಡು ಬೀಡುಬಿಟ್ಟುಕೊಂಡು ನನ್ನ ಹಾದಿಯನ್ನು ನೋಡುತ್ತ ಇರ್ರಿ, ಎಂದು ಹೇಳಿ, ತನ್ನಸಂಗಡ ನಾಲ್ವತ್ತು ಐವತ್ತು ಜನ ರಾವುತರನ್ನೂ ಮೂರು ಡೋಲಿಗಳನ್ನೂ ತಕ್ಕೊಂಡು ಈ ಸೆರೆಯವರ ರಥದೊಡನೆ ದಿಲ್ಲಿಯ ಕಡೆಗೆ ಸಾಗಿದನು. ಹಾದಿಯಲ್ಲಿ ಸಂಗ್ರಾಮಸಿಂಹನಿಗೆ ಏನಾದರೂ ಹೆಚ್ಚುಕಡಿಮೆ ಯಾದೀತೆಂಬ ಭಯದಿಂದ ಅವನು ದಂಡಿನೊಳಗಿನ ಒಬ್ಬ ವೈದ್ಯನನ್ನು ಸಂಗಡ ಕರ ಕೊಂಡಿದ್ದನು. ಆ ವೈದ್ಯನು ಬಹುಶ್ರಮಪಟ್ಟು ಗಾಯಗಳಿಂದಾಗುತ್ತಿದ್ದ ರಕ್ತಸ್ರಾವವನ್ನು ನಿಲ್ಲಿಸಿದನು. ಅದರಿಂದ ಸಂಗ್ರಾಮಸಿಂಹನಿಗೆ ಸ್ವಲ್ಪ ವಿರಾಮವಾಗಿ ಅವನು ಬದುಕುವ

ಆಶೆಯು ತಲೆದೋರಹತ್ತಿತು. ಉದಯಭಾನುವು ಪಯಣದಮೇಲೆ ಪಯಣಮಾಡುತ್ತ ದಿಲ್ಲಿಗೆ ಹೋಗಿ ತಾನು ತಿರುಗಿ ಬಂದ ಕಾರಣವನ್ನು ಬಾದಶಹನಿಗೆ ಅರುಹಿದನು.

ಈ ಸಂಧಿಯಲ್ಲಿ ದಿಲ್ಲಿಯೊಳಗೆ ಉದಯಭಾನುವಿಗೆ ಪ್ರತಿಕೂಲವಾದದ್ದೊಂದು ಸಂಗತಿಯು ಒದಗಿತ್ತು. ಉದಯಭಾನುವು ದಕ್ಷಿಣಕ್ಕೆ ಹೋದಬಳಿಕ ಔರಂಗಜೇಬನಿಗೆ ಅವನ ವಿಷಯವಾಗಿಯೂ ಸಂಶಯವುತ್ಪನ್ನವಾಯಿತೋ ಅಥವಾ ಏನಾದರೂ ಅವನಿಗೆ ಹೇಳುವದು ಉಳಿದಿತ್ತೋ ತಿಳಿಯದು. ಬಾದಶಹನು ಉದಯಬಾನುವಿನ ಬೆನ್ನ ಹಿಂದೆಯೇ ಆತನನ್ನು ಕರತರುವದಕ್ಕಾಗಿ ಒಬ್ಬ ಹೇಜೀಬನನ್ನು ಕಳಿಸಿದ್ದನು. ಆ ಹೇಜೀಬನು ಆರು ಏಳು ದಿವಸಗಳ ಹಾದಿಯವರೆಗೆ ಉದಯಭಾನುವಿನ ಶೋಧಮಾಡಿದರೂ ಅವನ ಗೊತ್ತುಹತ್ತಲಿಲ್ಲ. ಎಷ್ಟು ಒತ್ತರದಿಂದ ಹೋಗಿದ್ದರೂ ಅವನು ಇಷ್ಟುದೂರ ಹೋಗಲಾರನೆಂದು ತಿಳಿದು ಆ ಹೇಜೀಬನು ಬಾದಶಹನ ಬಳಿಗೆ ಬಂದು, ಉದಯಭಾನುವೇನೂ ದಕ್ಷಿಣದ ಹಾದಿಯಿಂದ ಹೋಗಿಲ್ಲೆಂದು ಹೇಳಿದನು. ತನ್ನ ಅಪ್ಪಣೆಯನ್ನು ಮುರಿದದ್ದಕ್ಕಾಗಿ ಬಾದಶಹನಿಗೆ ಸಂತಾಪ ವಾಯಿತು. ಅವನು ಅರ್ಧದಾರಿಯಿಂದಲೇ ಉದಯಭಾನುವನ್ನು ಹಿಂದಕ್ಕೆ ಕರಿಸಿ ಶಿಕ್ಷಿಸ ಬೇಕೆಂದು ಯೋಚಿಸಿದ್ದನು. ಅಷ್ಟರಲ್ಲಿ ಉದಯಭಾನುವಿನ ವಿಜ್ಞಾಪನೆಯ ಪತ್ರವನ್ನು ತಕ್ಕೊಂಡು ಅವನ ದೂತನು ಬಂದನು. ಬಾದಶಹನು ತನಗೆ ಸಿಟ್ಟುಬಂದದ್ದನ್ನು ತೋರಿಸು ವದಕ್ಕಾಗಿ ಆ ವಿಜ್ಞಾಪನೆಯ ಪತ್ರಕ್ಕೆ ಏನೂ ಉತ್ತರವನ್ನು ಕೊಡಲಿಲ್ಲ; ಮತ್ತು ಏಳು ದಿನಗಳ ವರೆಗೆ ಉದಯಭಾನುವನ್ನು ಕಾಣಲಿಲ್ಲ. ಕಡೆಗೆ ಎಂಟನೆಯ ದಿವಸ ಬಾದಶಹನು ಅವನನ್ನು ಕರಿಸಿಕೊಂಡು, ದಿನದ ಹಾದಿಯಿಂದ ದಕ್ಷಿಣಕ್ಕೆ ಹೋಗದೆ ವಿಲಂಬ ಮಾಡಿದ್ದಕ್ಕಾಗಿ ಬಾಯಿಗೆ ಬಂದ ಹಾಗೆ ಅಂದನು. ತಾನು ಇಂಥಿಂಥವರನ್ನು ಸೆರೆಹಿಡಕೊಂಡು ಬಂದಿದ್ದೇನೆ. ಹೀಗೆ ಹೀಗೆ ಪರಾಕ್ರಮವನ್ನು ತೋರಿಸಿದೆನು; ಇವೇ ಮೊದಲಾದ ಸಂಗತಿಗಳನ್ನು ಹೇಳಿದರೆ, ಬಾದಶಹನು ತನ್ನ ಅಪರಾಧವನ್ನು ಕೂಡಲೆ ಕ್ಷಮಿಸುವದಲ್ಲದೆ, ತನ್ನನ್ನು ಹೊಗಳಬಹುದೆಂದು ಉದಯಭಾನುವು ನಂಬಿದ್ದನು; ಆದರೆ ಆ ನಂಬಿಗೆಯೆಲ್ಲ ಒತ್ತಟ್ಟಿಗೆ ಉಳಿಯಿತು. ಅವನು ಕಾಳಗದ ವರ್ಣನವನ್ನು ತನ್ನಿಂದಾದಷ್ಟು ಉಪ್ಪುಕಾರ ಹಚ್ಚಿ ಹೇಳಿ ಸಂಗ್ರಾಮ ಸಿಂಹನನ್ನು ಸೆರೆಹಿಡಿಯಬೇಕಾದರೆ ಬಹಳ ಜಾಣತನವನ್ನು ತೋರಿಸಬೇಕಾಯಿತೆಂಬ ಭಾವವನ್ನು ವ್ಯಕ್ತಮಾಡಿದನು; ಆದರೆ ಅದೆಲ್ಲ ವ್ಯರ್ಥವಾಯಿತು; ಔರಂಗಜೇಬ ಬಾದಶಹನು ಕಡಿಮೆ ಯವನಿದ್ದಿಲ್ಲ, ಅವನು ನಿಜವಾದ ಸಂಗತಿಯನ್ನು ಕೂಡಲೇ ಕಂಡುಹಿಡಿದು ಕಮಲಕುಮಾರಿ ಯನ್ನೂ, ಸಂಗ್ರಾಮಸಿಂಹನನ್ನೂ ತನ್ನ ಬಳಿಗೆ ಕರಕೊಂಡು ಬರಬೇಕೆಂದು ಉದಯಭಾನುವಿಗೆ ಅಪ್ಪಣೆಯನ್ನು ಮಾಡಿದನು.

ಈ ಅಪ್ಪಣೆಯಿಂದ ಉದಯಭಾನುವು ಬಹಳ ಪೇಚಾಟದಲ್ಲಿ ಬಿದ್ದನು. ಬಾದಶಹನು ಕಮಲಕುಮಾರಿಯ ಸೌಂದರ್ಯಕ್ಕೆ ಮರುಳಾಗಿ ಆಕೆಯನ್ನು ತನ್ನ ರಾಣೀವಾಸದಲ್ಲಿ ಎಲ್ಲಿ ಇಟ್ಟು ಕೊಳ್ಳುವನೋ ಏನೋ ಎಂದು ಅವನು ಚಿಂತಿಸಿದನು; ಆದರೆ ಅವನ ಚಿಂತೆಯಿಂದ ಏನೂ ಉಪಯೋಗವಾಗುವಂತೆ ಇದ್ದಿಲ್ಲ. ಅವನು ಕಮಲಕುಮಾರಿಯನ್ನೂ, ಸಂಗ್ರಾಮಸಿಂಹನನ್ನೂ

ಬಾದಶಹನ ಮುಂದೆ ನಿಲ್ಲಿಸಲೇಬೇಕಾಗಿತ್ತು, ಅದರಂತೆ ಅವನು ಬಹು ಕಷ್ಟದಿಂದ ಅವರನ್ನು ಬಾದಶಹನ ಬಳಿಗೆ ಕರಕೊಂಡು ಹೋದನು. ಆಗ ಸಂಗ್ರಾಮಸಿಂಹನು ತೀರ ಮರಣೋನ್ಮುಖನಾಗಿದ್ದನು. ಅವನಿಗೆ ಮಾತಾಡುವ ತ್ರಾಣ ಸಹ ಇದ್ದಿಲ್ಲ. ಕಮಲಕುಮಾರಿಯು ಮಾತ್ರ ತನ್ನನ್ನು ಬಾದಶಹನ ಮುಂದೆ ನಿಲ್ಲಿಸಿದ ಕೂಡಲೆ ತಾನು ಬೆದರದೆ ಸ್ವಚ್ಛವಾಗಿ ತನ್ನ ಸ್ಥಿತಿಯನ್ನೂ, ಉದಯಭಾನುವಿನ ನೀಚತನವನ್ನೂ ಒಂದುಳಿಯದಂತೆ ಬಾದಶಹನ ಮುಂದೆ ಹೇಳಿ ತನ್ನನ್ನು ಬಿಡಲು ಆತನನ್ನು ಪ್ರಾರ್ಥಿಸಬೇಕೆಂದು ಗೊತ್ತುಮಾಡಿಕೊಂಡಿದ್ದಳು. ಬಾದಶಹನು ಬಹು ದುಷ್ಟನೂ, ಹಿಂದೂಧರ್ಮವನ್ನು ದ್ವೇಷಿಸುವವನೂ ಆದ್ದರಿಂದ ತನ್ನ ಬೇಡಿಕೊಳ್ಳುವಿಕೆಯಿಂದ ಏನೂ ಫಲವಾಗಲಿಕ್ಕಿಲ್ಲೆಂದು ಆಕೆಯು ತಿಳಿದಿದ್ದಳು; ಆದರೆ ಮುಳುಗುವವರಿಗೆ ಜೇಡಹುಳದ ಎಳೆಯ ಆಧಾರದ ಆಶೆಯು ತೋರುತ್ತದೆಂಬ ನ್ಯಾಯದಂತೆ ಆಕೆಯು ಬಾದಶಹನಿಗೆ ಒಮ್ಮೆ ಹೇಳಿಕೊಂಡು ನೋಡಿಬಿಡಬೇಕೆಂದು ನಿಶ್ಚಯಿಸಿದ್ದಳು. ತನನ್ನು ಬಾದಶಹನ ಮುಂದೆ ನಿಲ್ಲಿಸಿದಕೂಡಲೆ ಆಕೆಯು ದಿಟ್ಟತನದಿಂದ—ಬಾದಶಹನಾದ ಔರಂಗಜೇಬನೇ, ನಿನ್ನ ಧರ್ಮವು ಹ್ಯಾಗೇ ಇರಲಿ, ನೀನು ಅನ್ಯ ಧರ್ಮಗಳನ್ನು ಎಷ್ಟೇ ಹಳಿಯುತ್ತಿರು; ಆದರೆ ಪಾತಿವ್ರತ್ಯವು ನಿನ್ನ ಧರ್ಮದಲ್ಲಿಯೂ ನಮ್ಮ ಧರ್ಮದಲ್ಲಿಯೂ ಒಂದೇ ಇರುತ್ತದಲ್ಲವೇ? ಆ ಪಾತಿವ್ರತ್ಯ ಧರ್ಮಕ್ಕೆ ಉಚಿತವಾದ ಸತಿಧರ್ಮವನ್ನು ನಾನು ಆಚರಿಸುತ್ತಿರಲು, ಆ ಪವಿತ್ರ ಪ್ರಸಂಗದಲ್ಲಿ ಈ ದುಷ್ಟನು ನನ್ನನ್ನು ಎಳತಂದು ನಿನ್ನ ಮುಂದೆ ನಿಲ್ಲಿಸಿರುತ್ತಾನೆ. ಇಂಥ ಪ್ರಸಂಗದಲ್ಲಿ ನನ್ನ ಬಿಡುಗಡೆಮಾಡಿ ಈ ದುಷ್ಟನನ್ನು ಶಿಕ್ಷಿಸುವದು ಯೋಗ್ಯವು. ನಿನ್ನ ಧರ್ಮದಲ್ಲಿಯೂ ಸ್ತ್ರೀಯರಿಗೆ ಪಾತಿವ್ರತ್ಯ ದೊಡ್ಡ ಧರ್ಮವೆಂದು ಹೇಳಿರುತ್ತದಷ್ಟೇ? ನೀನು ನನ್ನನ್ನು ಮಗಳೆಂದು ಭಾವಿಸಿ ಇಷ್ಟುಮಾತನ್ನು ನಡಿಸು. ಒಂದುಪಕ್ಷದಲ್ಲಿ ನಿನಗೆ ಬೇಡಾಗಿದ್ದು ಈ ದುಷ್ಟನನ್ನು ಶಿಕ್ಷಿಸದಿದ್ದರೂ ಚಿಂತೆಯಿಲ್ಲ, ನನ್ನನ್ನು ಮಾತ್ರ ಬಿಟ್ಟುಕೊಟ್ಟು ಪುಣ್ಯಕಟ್ಟಿಕೋ.

ಕಮಲಕುಮಾರಿಯ ಈ ದಿಟ್ಟತನದ ಮಾತುಗಳನ್ನು ಕೇಳಿ ಬಾದಶಹನಿಗೆ ಸ್ವಲ್ಪ ಆಶ್ಚರ್ಯವೂ, ಕೌತುಕವೂ ಉತ್ಪನ್ನವಾದವು; ಆದರೆ ಆತನು ದುಷ್ಟರಲ್ಲಿ ಅತ್ಯಂತ ದುಷ್ಟನಾದ್ದರಿಂದ ಇಂಥ ಧರ್ಮಶ್ರವಣಕ್ಕೆ ಒಳಗಾಗುವಂತೆ ಇದ್ದಿಲ್ಲ; ಹೊರತು ಉದಯಭಾನುವಿನಂಥ ಸರದಾರನಿಗೆ ಉಪಕಾರಮಾಡಿದಹಾಗೆ ತೋರಿಸಿ ಅವನ ಕೃತಜ್ಞತೆಯನ್ನು ಸಂಪಾದಿಸುವ ಸುಯೋಗವನ್ನು ವ್ಯರ್ಥ ಕಳಕೊಳ್ಳುವಷ್ಟು ಅವನು ಮಂದಬುದ್ಧಿಯವನೂ ಇದ್ದಿಲ್ಲ, ಕೌತುಕವೆಷ್ಟು? ಒಂದುಕ್ಷಣ. ಆ ಕ್ಷಣವು ಕ್ರಮಿಸಿ ಹೋದಮೇಲೆ ಬಾದಶಹನು ಕಮಲ ಕುಮಾರಿಯ ನಿಚ್ಚಳವಾದ ದಿಟ್ಟತನದ ಮಾತುಗಳಿಗೆ ನಕ್ಕು—ತಂಗೀ, ನೀನನ್ನುವದು ನಿನ್ನ ತಿಳುವಳಿಕೆಯಂತೆ ಸರಿಯಾದದ್ದು; ಆದರೆ ನಿಮ್ಮಂಥವರು ತಮ್ಮ ಧರ್ಮದ ಮರುಳತನದಿಂದ ತಮ್ಮ ಸುಂದರವಾದ ಶರೀರವನ್ನು ಸುಟ್ಟುಕೊಳ್ಳುವದು ದೇವರ ಮನಸ್ಸಿಗೆ ಬರುವದಿಲ್ಲ ಕಂಡಿಯಾ? ಈ ಉದಯಭಾನುವು ಅಂಥಿಂಥ ಮನುಷ್ಯನಲ್ಲ. ಒಳ್ಳೆಯ ಶೂರನೂ, ಚತುರನೂ, ಮುಂಜಾಗ್ರತೆ ಯವನೂ ಇರುತ್ತಾನೆ; ಆದ್ದರಿಂದ ನಿನಗೂ ಆತನಿಗೂ ನಿಕಾ (ಉಡಿಕೆ) ಆದರೆ, ಅದರಿಂದ ಎಷ್ಟುಮಾತ್ರವೂ ಪಾಪವು ಬರುವದಿಲ್ಲ, ಅದರಲ್ಲಿ ಧರ್ಮ

ವಿರುದ್ಧವಾದ ಸಂಗತಿಯು ಯಾವದೂ ಇರುವದಿಲ್ಲ; ಆದರೆ ನಿನ್ನ ಗಂಡನು ಇದೇ ತೀರಿ ಕೊಂಡಿರುವದರಿಂದ ಇಷ್ಟರಲ್ಲಿ ಎರಡನೆಯವರನ್ನು ಉಡಿಕೆಯಾಗಲಿಕ್ಕೆ ನಿನ್ನ ಮನಸ್ಸು ಒಪ್ಪಲಿಕ್ಕಿಲ್ಲ; ಕಾರಣ ಈವೊತ್ತಿನಿಂದ ನಿನಗೆ ಮೂರುತಿಂಗಳ ಅವಧಿಯಲ್ಲಿ ಕೊಡುತ್ತೇನೆ. ಆ ಮೂರು ತಿಂಗಳಲ್ಲಿ ಇವನು ನಿನ್ನ ನೆರಳಿಗೆ ಬರಲಿಕ್ಕಿಲ್ಲ. ನನ್ನ ಅಪ್ಪಣೆಯನ್ನು ಮುರಿದದ್ದಕ್ಕಾಗಿ ಇವನಿಗೆ ಹ್ಯಾಗೂ ಶಿಕ್ಷೆಮಾಡಬೇಕಾಗಿದೆ. ಇದೇ ಇವನಿಗೆ ಶಿಕ್ಷೆಯು. ನೀನು ಬಳಿಯಲ್ಲಿದ್ದು ಮೂರು ತಿಂಗಳವರೆಗೆ ನಿನ್ನ ಸಂಗಡ ಮಾತು ಸಹ ಆಡಗೊಡದಿರುವದೇ ಇವನಿಗೆ ತಕ್ಕ ಶಿಕ್ಷೆಯು. ಉದಯಭಾನೂ, ನಿಜವಾಗಿ ನೋಡಿದರೆ ನಿನ್ನ ಅಪರಾಧಕ್ಕೆ ದೇಹಾಂತ ಶಿಕ್ಷೆಯನ್ನೇ ಕೊಡತಕ್ಕದ್ದು; ಆದರೆ ನಿನ್ನ ಮೇಲೆ ನನ್ನ ಪ್ರೇಮವೂ, ವಿಶ್ವಾಸವೂ ಇರುವದರಿಂದ ಇಷ್ಟೇ ಶಿಕ್ಷೆಯು ನಿನಗೆ ಸಾಕು. ಈ ಹುಡುಗೆಯು ನಿನಗೆ ತಕ್ಕವಳಿರುತ್ತಾಳೆ. ಈಕೆಯನ್ನು ನಿನಗೆ ಒಪ್ಪಿಸುತ್ತೇನೆ; ಆದರೆ ಈವೊತ್ತಿನಿಂದ ಎರಡು ತಿಂಗಳುಗಳೊಳಗೆ ಕೊಂಡಾಣಾ ದುರ್ಗಕ್ಕೆ ಹೋಗುವೆನೆಂತಲೂ, ಅಲ್ಲಿಗೆ ಹೋದ ಬಳಿಕ ಒಂದು ತಿಂಗಳವರೆಗೆ ಅಂದರೆ ಈವೊತ್ತಿನಿಂದ ಮೂರು ತಿಂಗಳವರೆಗೆ ಈಕೆಯ ಸಂಗಡ ಮಾತು ಸಹ ಆಡುವದಿಲ್ಲೆಂತಲೂ ನನ್ನ ತಲೆ ಮುಟ್ಟಿ ಆಣೆಯನ್ನು ಮಾಡು. ಮೂರು ತಿಂಗಳು ತುಂಬಿದ ಕೂಡಲೆ, ಬೇಕಾದರೆ ಆವೊತ್ತಿನ ದಿವಸ ಮಧ್ಯರಾತ್ರಿಯು ಮೀರಿದಮೇಲೆ ಕಾಜಿಯನ್ನು ಕರಿಸಿಕೊಂಡು ಈಕೆಯ ನಿಕಾಮಾಡಿಕೋ. ಅಷ್ಟರಲ್ಲಿ ಏನಾದರೂ ಗಡಿಬಿಡಿಮಾಡಿಯೇ ನೆನಪಿನಲ್ಲಿಡು; ನಾನು ಅಲಮಗೀರ ಬಾದಶಹ ನಿರುತ್ತೇನೆ. ನಿನ್ನನ್ನು ನುಚ್ಚು ನುಚ್ಚು ಮಾಡಿ ಕಡಿಸೇನು. ಇಲ್ಲವೆ ಜೀವದಿಂದಿರುವಾಗಲೇ ನರಿನಾಯಿಗಳಿಂದ ನಿನ್ನನ್ನು ತಿನ್ನಿಸೇನು.

ಈ ಮೇರೆಗೆ ನುಡಿದು ಬಾದಶಹನು ಉದಯಭಾನುವಿನಿಂದ ತನ್ನ ತಲೆ ಮುಟ್ಟಿಸಿ ಆಣೆಮಾಡಿಸಿಕೊಂಡನು. ಬಳಿಕ ಆತನು ನಗುತ್ತ ನಗುತ್ತ ಉದಯಭಾನುವಿಗೆ—ಉದಯ ಭಾನೂ, ಹೀಗೆ ಅಪ್ಪಣೆ ಮಾಡಿಸಿಕೊಳ್ಳುವದರ ಕಾರಣವು ಬೇರೆ ಇರುತ್ತದೆ. ಇದರಿಂದ ನೀನು ಮೂರು ತಿಂಗಳವರೆಗಾದರೂ ನಿನ್ನ ಕೆಲಸದಲ್ಲಿ ಜಾಗರೂಕನಾಗಿ ಇದ್ದೀ, ಕೋಟೆಗೆ ಹೋದಬಳಿಕ ಒಂದು ತಿಂಗಳವರೆಗಾದರೂ ಎಚ್ಚರದಿಂದ ಕೆಲಸಮಾಡೀ. ಏನು ಮಾಡುತ್ತೀ ಎಂಬದನ್ನು ನನಗೆ ಆಗಾಗ್ಗೆ ತಿಳಿಸಬೇಕು ಎಂದು ಹೇಳಿ ಕಮಲಕುಮಾರಿಯ ಕಡೆಗೆ ತಿರುಗಿ— ತಂಗೀ, ಹೋಗು, ಉದಯ ಭಾನುವಿನ ಸಂಗಡ ಸಂತೋಷದಿಂದ ಹೋಗು. ಬಾದಶಹನು ಸುಟ್ಟುಕೊಳ್ಳಲಿಕ್ಕೆ ಅಪ್ಪಣೆಕೊಡಲಿಲ್ಲೆಂದು ಆತನನ್ನು ಬೈಯ್ಯಬೇಡ. ತಿರುಗಿ ನೀನು ಕೇಳಿದರೆ ಆತನಿಗೆ ಕಲ್ಯಾಣವನ್ನು ಚಿಂತಿಸತಕ್ಕದ್ದು, ತಿಳಿಯಿತೇ? ಮೂರು ತಿಂಗಳ ಮೇಲೆ ಅದದ್ದು ನೆಟ್ಟಗಾಯಿತೆಂದು ನಿನಗೆ ತಿಳಿದೀತು. ಲೆಕ್ಕದಿಂದ ಮೂರು ತಿಂಗಳು ಎಂಗಿಗೆ ತುಂಬುತ್ತವೆಂಬ ದನ್ನು ಹೇಳಲೇನು? ಆದರೆ ನಮ್ಮ ಮುಸಲ್ಮಾನೀ ತಾರೀಖು ನಿನಗೆ ಹ್ಯಾಗೆ ತಿಳಿಯಬೇಕು? ನಿಲ್ಲು ಪಂಡಿತರನ್ನು ಕೇಳಿ ನಿಮ್ಮ ಶಕದ ಮಿತಿಯನ್ನು ಹೇಳುತ್ತೇನೆ.

ಹೀಗೆ ನುಡಿದು ಬಾದಶಹನು ಒಬ್ಬ ಹಿಂದೂ ಪಂಡಿತನನ್ನು ಕರಿಸಿ—ಇಂದು ನಿಮ್ಮ ತಿಥಿಯು ಯಾವದೆಂದು ಕೇಳಲು, ಪಂಡಿತನು ಕಾರ್ತಿಕವದ್ಯ ನವಮಿ ಎಂದು ಹೇಳಿದನು. ಆಗ

ಬಾದಶಹನು ನಗುತ್ತ ದುಷ್ಟತನದಿಂದ ಚಿವುಗಣ್ಣು ಮಾಡಿಕೊಂಡು—ಇಗೋ, ಮಾರ್ಗಶಿರ, ಪುಷ್ಯ, ಮಾಘವದ್ಯ ನವಮಿಗೆ ಮೂರುತಿಂಗಳು ತುಂಬುತ್ತವೆ, ತಿಳಿಯಿತೇ? ಅಂದಿಗೆ ನಿನ್ನ ಮೊದಲನೆಯ ಗಂಡನ ಸಂಬಂಧದ ಪಾತಿವ್ರತ್ಯವು ಮುಗಿಯಲಿಕ್ಕೇಬೇಕು, ಎಂದು ನುಡಿದು ಮತ್ತೆ ಉದಯ ಭಾನುವಿನ ಕಡೆಗೆ ತಿರುಗಿ—ಕೇಳಿದೆಯೇನಪ್ಪಾ ಉದಯಭಾನು, ಮಾಘವದ್ಯ ನವಮಿಯವರೆಗೆ ನೀನು ಈಕೆಯ ಗೊಡವಿಗೆ ಹೋದರೆ, ನನ್ನ ತಲೆಮುಟ್ಟಿ ಆಣೆಮಾಡಿದ್ದನ್ನು ಮುರಿದಂತಾಗುವದು; ಕಾರಣ ಈ ತಿಥಿಯನ್ನು ನೆನಪಿನಲ್ಲಿಡು. ಇನ್ನುಮೇಲೆ ಈಕೆಯನ್ನು ಕರಕೊಂಡು ಹೋಗು. ಈ ಸಂಗ್ರಾಮಸಿಂಹನು ನನ್ನ ಬಳಿಯಲ್ಲಿಯೇ ಇರಲಿ. ನಾಡದು ಬೆಳಗಿನಲ್ಲಿ ನೀನು ದಿಲ್ಲಿಯಲ್ಲಿ ಇರಕೂಡದು; ಎಂದು ಹೇಳಿದನು.

''ಇನ್ನು ಈಕೆಯನ್ನು ಕರಕೊಂಡು ಹೋಗು; ಸಂಗ್ರಾಮಸಿಂಹನು ನನ್ನ ಬಳಿಯಲ್ಲಿಯೇ ಇರಲಿ'' ಎಂಬ ಮಾತು ಕಿವಿದೆರೆಗೆ ಬಿದ್ದಕೂಡಲೆ ಕಮಲಕುಮಾರಿಗೆ ಸಿಡಿಲು ಬಡಿದಂತಾಯಿತು. ಆಕೆಯು—ಬೇಡರಿ, ನನ್ನನ್ನು ನನ್ನ ತಂದೆಯಿಂದ ಅಗಲಿಸಬೇಡರಿ, ನಮ್ಮಪ್ಪನು ಸಾಯ ಲಾಗಿದ್ದಾನೆ. ಇಂಥ ಹೊತ್ತಿನಲ್ಲಿ ನಮ್ಮಿಬ್ಬರನ್ನು ಅಗಲಿಸುವದು ಸರಿಯಲ್ಲ, ಎಂದು ಆಕ್ರೋಶ ಮಾಡಿದಳು; ಆದರೆ ಆಕೆಯ ಆಕ್ರೋಶವನ್ನು ಯಾರು ಕೇಳಬೇಕು? ಆಗ ಬಾದಶಹನು ನೀಚತನದಿಂದ ಕಮಲ ಕುಮಾರಿಗೆ ನೀನೇನು ಚಿಂತೆ ಮಾಡಬೇಡ. ನಿಮ್ಮಪ್ಪನಿಗೆ ಬೇಗನೆ ನೆಟ್ಟಗೆ ಮಾಡಿಸಿ ನಿನ್ನ ಲಗ್ನಕ್ಕೆ ಕೊಂಡಾಣಾ ಕೋಟೆಗೆ ಕಳಿಸುತ್ತೇನೆ, ಎಂದು ನುಡಿದು ತನ್ನ ಸೇವಕರಿಗೆ ಸಂಗ್ರಾಮಸಿಂಹನನ್ನು ತನ್ನ ಅರಮನೆಯೊಳಗಿನ ಇಂಥ ಕೋಣೆಯಲ್ಲಿ ಇರಿಸಿರೆಂದು ಹೇಳಿದನು. ಅದರಂತೆ ಸೇವಕರು ಸಂಗ್ರಾಮಸಿಂಹನನ್ನು ಒಯ್ದಕೂಡಲೆ ಕಮಲಕುಮಾರಿಯು ಉಪಾಯಗಾಣದೆ ಸುಮ್ಮನೆ ಉದಯಭಾನುವಿನ ಸಂಗಡ ಹೋಗಬೇಕಾಯಿತು.

ಕೆಟ್ಟ ಸುದ್ದಿಯು ಗಾಳಿಯಹಾಗೆ ಹಬ್ಬುತ್ತದೆಂಬ ಮಾತು ಸುಳ್ಳಲ್ಲ, ಉದಯಭಾನುವು ಅಕಸ್ಮಿಕವಾಗಿ ಕಮಲಕುಮಾರಿಯ ಸಹಗಮನವ ತಡೆದದ್ದನ್ನೂ, ಸಂಗ್ರಾಮಸಿಂಹ, ಕಮಲಕುಮಾರಿ, ದೇವಲದೇವಿ ಈ ಮೂರರ ಹೊರತು ಎಲ್ಲರೂ ಕಾಳಗದಲ್ಲಿ ಮಡಿದದ್ದನ್ನೂ ಒಬ್ಬ ಭಿಲ್ಲನ್ನು ಅಕಸ್ಮಾತ್ತಾಗಿ ನೋಡಿ ಮೊದಲು ಮೇವಾಡದ ಗಡಿಯವರಿಗೆ ಹೇಳಿದನು. ಆ ಭಿಲ್ಲನು ತನ್ನ ಕೆಲಸದ ಸಲುವಾಗಿ ಮೇವಾಡದ ರಾಜ್ಯದಲ್ಲಿ ಹೋದಹೋದಂತೆ ಆ ಕೆಟ್ಟ ಸುದ್ದಿಯು ನಾಕೇಳು ನೀಕೇಳು ಅನ್ನುತ್ತ ದೇಶದಲ್ಲೆಲ್ಲ ಹಬ್ಬಿತು. ಕೇಳಿದವರೆಲ್ಲ ಸಂತಾಪ ಗೊಂಡರು; ಆದರೆ ಮಾಡುತ್ತಾರೇನು? ಕೆಲಸವು ಕೈಮೀರಿ ಹೋಗಿತ್ತು ಉದಯಭಾನುವನ್ನು ಬೆನ್ನಟ್ಟಿ ಹೋಗಬೇಕೆಂದರೆ ಅವನು ಇಷ್ಟೊತ್ತಿಗೆ ದಿಲ್ಲಿಗೆ ಹೋಗಿರಬಹುದಾದ್ದರಿಂದ ತಾವು ಹೋಗಿಯೂ ವ್ಯರ್ಥವೆಂದು ಅವರು ತಿಳಿದರು; ರಾಜಸಿಂಹ ಮಹಾರಾಜನಿಗೆ ಈ ಸುದ್ದಿಯು ಮುಟ್ಟಲು, ಅವನು ಹುಡುಕುವದಕ್ಕಾಗಿ ತನ್ನ ಜನರನ್ನು ಕಳುಹಿದನು; ಆದರೆ ವೈರಿಗಳು ಪಾರಾಗಿ ಹೋದರೆಂಬ ಸುದ್ದಿಯನ್ನು ಮಾತ್ರ ಅವರು ತಂದರು. ಕಡೆಗೆ ರಾಜಸಿಂಹನು ಸಂತಾಪಗೊಂಡು ಔರಂಗಜೇಬನಿಗೆ ಒಂದು ಪತ್ರವನ್ನು ಬರೆದು ದೂತನ ಸಂಗಡ

ಕಳುಹಿಕೊಟ್ಟನು. ಅದರಲ್ಲಿ ಅವನು ರಜಪೂತ ಸ್ತ್ರೀಯು ಸಹಗಮನ ಮಾಡುತ್ತಿರಲು, ಆಕೆಯನ್ನು ಎಳೆದೊಯ್ಯುವದು ಎಂಥ ನೀಚತನದ ಕೆಲಸವು! ನಿನ್ನಂಥ ಬಾದಶಹನು ಅಂಥ ಅಪರಾಧಕ್ಕಾಗಿ ಕಠಿಣತರವಾದ ಶಿಕ್ಷೆಯನ್ನು ವಿಧಿಸತಕ್ಕದ್ದು ಎಂಬ ಅಭಿಪ್ರಾಯವನ್ನು ಬರೆದಿದ್ದನು. ಬಾದಶಹನು ಕಮಲಕುಮಾರಿಯನ್ನು ಉದಯಭಾನುವಿಗೆ ಒಪ್ಪಿಸಿದ ದಿವಸ ಸಾಯಂಕಾಲಕ್ಕೇ ಆ ಪತ್ರವು ಬಂದಿತು. ಅದನ್ನು ಬಾದಶಹನು ಓದಿ ಚೂರು ಚೂರು ಮಾಡಿ ಹರಿದು ಒಗೆದು ತಿರಸ್ಕಾರದಿಂದ ನಕ್ಕು ತನ್ನೊಳಗೆ—ಒಂದುಸಾರೆ ತನಗೆ ಗೆಲವು ಬಂದಿತೆಂಬ ಉಬ್ಬಿನಿಂದ ಈ ಹರಾಮಜಾದಾನು ಇಂಥ ಪತ್ರಗಳನ್ನು ನನಗೆ ಬರೆಯುತ್ತಾನೆ. ಒಳ್ಳೆಯದು ನೋಡೋಣ, ನಾನು ನಿಜವಾಗಿ ಅಲಮಗೀರನಿದ್ದರೆ ಮೇವಾಡದ ಮನೆತನವನ್ನು ಬೇರುದರಿಸೆ ಕಿತ್ತಿ ಒಗೆಯುವೆನು, ಎಂದು ಒಟಗುಟ್ಟಿದನು.

ರಾಜಸಿಂಹನ ದೂತನು ಪತ್ರವನ್ನು ತಕ್ಕೊಂಡು ಬಾದಶಹನ ಬಳಿಗೆ ಬಂದ ಮುನ್ನಾ ದಿವಸ ಇನ್ನೊಬ್ಬ ರಜಪೂತನು ಮೇವಾಡದಿಂದ ದಿಲ್ಲಿಗೆ ಬಂದಿದ್ದನು; ಅವನಾದರೂ ಈ ಅನಾಥರ ಶೋಧಮಾಡುತ್ತಿದ್ದನು. ಕೆಲಸವಾಗುವ ಯೋಗವಿದ್ದರೆ ಒಮ್ಮೊಮ್ಮೆ ಒದಗಿಬರುವ ಅನುಕೂಲತೆಗಳನ್ನು ಹೇಳಲಾಗುವುದಿಲ್ಲ. ಆ ರಜಪೂತನು ದಿಲ್ಲಿಗೆ ಬಂದ ಎರಡನೆಯ ದಿವಸವೇ ಬಾದಶಹನು ಉದಯಭಾನುವನ್ನು ಕರಿಸಿ ಕಮಲಕುಮಾರಿಯನ್ನೂ, ಸಂಗ್ರಾಮಸಿಂಹನನ್ನೂ ತನ್ನ ಬಳಿಗೆ ಕರತರಬೇಕೆಂದು ಅಪ್ಪಣೆಮಾಡಿದನು. ಅದರಿಂದ ಉದಯಭಾನುವು ತನ್ನ ಮನೆಯಲ್ಲಿಯೇ ಸೆರೆಯೊಳಗಿಟ್ಟಿದ್ದ ಕಮಲಕುಮಾರಿಯನ್ನೂ, ಸಂಗ್ರಾಮಸಿಂಹನನ್ನೂ ಬಾದಶಹನ ಬಳಿಗೆ ಕರೆದೊಯ್ಯುವ ಗೊಂದಲದಲ್ಲಿ ತೊಡಗಿದ್ದನು. ಎರಡು ಮೂರು ಪಲ್ಲಕ್ಕಿಗಳು ಅವನ ಬಾಗಿಲಲ್ಲಿ ಬಂದಿದ್ದವು. ಹೀಗಿರುವಾಗ ಆ ರಜಪೂತನು ಸ್ವಾಭಾವಿಕವಾಗಿ ಅಲ್ಲಿಗೆ ಹೋದನು. ಬಾದಶಹನ ಬಳಿಗೆ ಹೋಗುವ ಜನರನ್ನು ಕಳಿಸಲಿಕ್ಕೆಂದು ಬಾಗಿಲವರೆಗೆ ಬಂದಿದ್ದ ದೇವಲದೇವಿಯು ಆ ರಜಪೂತನನ್ನು ನೋಡಿ ಗುರುತು ಹಿಡಿದು, ಮುಂದಕ್ಕೆ ಹೋಗದೆ ನಿಲ್ಲಬೇಕೆಂದು ಸನ್ನೆ ಮಾಡಿದಳು. ಅದನ್ನು ನೋಡಿ ಆ ರಜಪೂತನು ನಿಂತನು. ಪುಣ್ಯಕ್ಕೆ ದೇವಲದೇವಿಯು ಸನ್ನೆಮಾಡಿದ್ದನ್ನು ಯಾರೂ ನೋಡಲಿಲ್ಲ. ನೋಡಿದ್ದರೆ ಕೆಲಸವೆಲ್ಲ ಕೆಟ್ಟು ಹೋಗುತ್ತಿತ್ತು. ದೇವಲದೇವಿಯು ಬಾಗಿಲ ಮೇಲಿದ್ದ ಉಪ್ಪರಿಗೆಯಮೇಲೆ ಹೋಗಿ ಒಂದು ಪತ್ರವನ್ನು ಬರೆದು ಅದರ ಉಂಡೆಯಮಾಡಿ ಪರದೆಯ ಮರೆಗೆನಿಂತು ರಜಪೂತನ ಮೇಲೆ ಬೀಳುವಂತೆ ಗುರಿನೋಡಿ ಒಗೆದಳು. ಅದು ತಪ್ಪದೆ ಆ ರಜಪೂತನ ಮೈಮೇಲೆ ಬೀಳಲು, ಅವನು ಅದನ್ನು ತಕ್ಕೊಂಡು ಓದಿದನು. ಅದರಲ್ಲಿ—ನೀವು ನಾಳೆ ಬೆಳಗಿನ ಎಂಟುಘಂಟೆಗೆ ಭಿಕ್ಷುಕರ ವೇಷದಿಂದ ಬಾಗಿಲಿಗೆ ಬರ್ರಿ, ನಾನು ಸ್ವತಃ ರೊಟ್ಟಿಯನ್ನು ಹಾಕುವೆನು. ಆ ರೊಟ್ಟಿಯಲ್ಲಿರುವ ಪತ್ರವನ್ನು ನೋಡಿದರೆ ನಿಮಗೆ ಎಲ್ಲ ಸಂಗತಿಯು ತಿಳಿಯುವದು, ಎಂದು ಬರೆದಿತ್ತು. ದೇವಲದೇವಿಯು ತಾನು ತಿಳಿಸಿದಂತೆ ಪತ್ರದಲ್ಲಿ ಬರೆಯ ತಕ್ಕದ್ದನ್ನೆಲ್ಲ ಬರೆದು ಒಂದು ಬಕ್ಕರಿಯನ್ನು ಮಾಡಿ ಅದರ ಪದರಿನಲ್ಲಿ ಅದನ್ನು ಹಾಕಿದಳು.

ತಾನು ಪ್ರತಿ ದಶಮಿಯ ತಿಥಿಗೆ ಮುಂಜಾನೆಗೊಂದು ಸಂಜೆಗೊಂದು ರೊಟ್ಟಿಯನ್ನು ಕೈಮುಟ್ಟಿ ಮಾಡಿ ಭಿಕ್ಷುಕರಿಗೆ ಹಾಕುವ ನಿಯಮ ಮಾಡಿರುವೆನೆಂದು ಆಕೆಯು ಜನರ ಮುಂದೆ ಮೊದಲೇ ಹೇಳಿದ್ದಳು. ಮರುದಿನ ಮುಂಜಾನೆ ಭಿಕ್ಷುಕನು ಬಂದಕೂಡಲೆ ಬಕ್ಕರಿಯನ್ನು ಹಾಕಿ, ಪುನಃ ಸಂಜೆಗೆ ಬಕ್ಕರಿ ಹಾಕಿಸಿಕೊಳ್ಳಲಿಕ್ಕೆ ಬರಬೇಕೆಂದು ಅವನಿಗೆ ಹೇಳಿದಳು. ಸೆಜ್ಜೆಯ ಬಕ್ಕರಿಯ ಪದರಿನಲ್ಲಿ ಪತ್ರವಿತ್ತು ಸುರಕ್ಷಿತವಾಗಿ ಪತ್ರವು ರಜಪೂತನ ಕೈಗೆ ಬಿದ್ದದ್ದನ್ನು ನೋಡಿ ದೇವಲದೇವಿಗೆ ನಿರಾಶೆಯಲ್ಲಿ ಆಶೆಯ ಅಂಕುರವು ಉತ್ಪನ್ನ ವಾಯಿತು.

## ಬಂದವರು ಅಲ್ಲಿಯೇ ಉಳಿದರು

ಉಮರಾದೆಯು ಕೊಂಕಣದೊಳಗಿನ ಸಾಧಾರಣತರದ್ದೊಂದು ಹಳ್ಳಿಯು. ಸ್ವಾಭಾವಿಕ ವಾಗಿಯೇ ಕೊಂಕಣದೊಳಗಿನ ವಸ್ತಿಯು ಹೇಳಿಕೊಳ್ಳುವಷ್ಟು ದಟ್ಟವಾದದ್ದಲ್ಲ; ಆದರೆ ಉಮರಾದೆಯು ಶಿವಾಜಿಮಹಾರಾಜರವರ ಬಲಗೈಯಂತೆ ಇದ್ದ ತಾನಾಜಿ ಮಾಲಸುರೆಯ ಊರಾದ್ದರಿಂದ ಅಲ್ಲಿ ಜನರ ವಸ್ತಿಯು ದಟ್ಟವಾಗಿತ್ತು. ಅದರಲ್ಲಿ ಸುಬೇದಾರನಾದ ತಾನಾಜಿಯು ಈಗ ರಜೆಯಮೇಲೆ ಬಂದದ್ದರಿಂದಂತೂ ಉಮರಾದೆಯಲ್ಲಿ ಸುತ್ತುಮುತ್ತಲಿನ ಹಳ್ಳಿಯ ಜನರ ಜಾತ್ರೆಯೇ ಕೂಡಿದಂತಾಗಿತ್ತು. ಸುಬೇದಾರನ ಸಂಗಡ ಹಲವುಜನ ಸಿಲೇದಾರರೂ ಬಾರಗೀರರೂ ಬಂದದ್ದರಿಂದ ಉಮರಾದೆಯಲ್ಲಿ ದಂಡಿನದೊಂದು ಛಾವಣಿಯೇ ಬಿದ್ದಂತಾಗಿತ್ತು. ತಮ್ಮ ಊರ ತಾನಾಜಿಯು ದೊಡ್ಡ ಸುಬೇದಾರನ ಪದವಿಯನ್ನು ಹೊಂದಿ ಶಿವಾಜಿ ಮಹಾರಾಜರವರ ಅತ್ಯಂತ ಪ್ರೀತಿಗೆ ಪಾತ್ರನಾದದ್ದನ್ನು ನೋಡಿ ಊರೊಳಗಿನ ಆ ಬಾಲವೃದ್ಧರಿಗೆ ಪರಮಾವಧಿ ಆನಂದವಾಗಿತ್ತು. ಅವರು ತಾನಾಜಿಯ ವಿಷಯವಾಗಿ ಅಭಿಮಾನವುಳ್ಳವರಾಗಿದ್ದರು. ಊರೊಳಗಿನ ವೃದ್ಧರು ತಾನಾಜಿಯ ಶೌರ್ಯದ ಸುದ್ದಿಗಳನ್ನು ಕೇಳಿ ಕೌತುಕಪಡುತ್ತಿದ್ದರು. ತರುಣರು ತಾನಾಜಿಯ ಒತ್ತಾಸೆಯಿಂದ ಮಹಾರಾಜರವರ ದಂಡಿನಲ್ಲಿ ತಾವು ಸರದಾರಗಿರಿಯ ಸ್ಥಳವನ್ನು ಸಂಪಾದಿಸಿ ಒಂದಿಲ್ಲೊಂದು ದಿನ ತಾನಾಜಿ ಯಂತೆ ತಾವೂ ಸುಬೇದಾರರಾಗಿ ಊರಿಗೆ ಬರಬಹುದೆಂಬ ಮಹತ್ವಾಕಾಂಕ್ಷೆಯುಳ್ಳವ ರಾಗುತ್ತಿದ್ದರು; ಹುಡುಗರಂತೂ ತಾನಾಜಿ, ಶಿವಾಜಿಮಹಾರಾಜ, ಮೊಗಲ ಬಾದಶಹ, ವಿಜಾಪುರದ ಬಾದಶಹ ಮೊದಲಾದವರ ಸೋಗು ಹಾಕಿಕೊಂಡು ರಾಜ್ಯಸ್ಥಾಪನೆಯ ಆಟವನ್ನೂ, ಕೋಟೆಯನ್ನು ಲಗ್ಗೆಹತ್ತಿ ಕೈವಶಮಾಡಿಕೊಳ್ಳುವ ಆಟವನ್ನೂ ಆಡುತ್ತಿದ್ದರು. ಒಟ್ಟಿನಲ್ಲಿ ಒಬ್ಬ ಶೂರಪುರುಷನು ಆ ಘಟ್ಟದೊಳಗಿನ ಹಳ್ಳಿಯಲ್ಲಿ ಹುಟ್ಟಿದ್ದರಿಂದ ಆ ಹಳ್ಳಿಯ ಸುತ್ತುಮುತ್ತಲಿನ ಪ್ರದೇಶದ ಜನರಲ್ಲಿ ಅಭಿಮಾನವೂ ಮಹತ್ವಾಕಾಂಕ್ಷೆಯೂ

ಉತ್ಪನ್ನವಾಗಿದ್ದವು. ಅದರಲ್ಲಿ ಶೂರಪುರುಷನು ಸ್ವಸ್ಥವಾಗಿ ನಾಲ್ಕು ದಿವಸ ಇರಲಿಕ್ಕೆ ಬಂದವನು; ಕೇಳುವದೇನು? ನೆರೆಹಳ್ಳಿಯ ಜನರು ತಾವು ಆತನನ್ನು ಒಮ್ಮೆ ನೋಡಬೇಕು, ಆತನ ಸಂಗಡ ಮಾತಾಡುವ ಸಂಧಿಯೊದಗಿದರಂತೂ ನೆಟ್ಟಗಾಯಿತು; ಒಂದು ವೇಳೆ ಒದಗದಿದ್ದರೆ, ಆತನ ಮುಖದಿಂದ ಶಿವಾಜಿಮಹಾರಾಜರವರ ಕಥೆಗಳನ್ನಾದರೂ ಕೇಳೋಣ, ಎಂಬ ವಿಚಾರದಿಂದ ಹದಿನೈದು ದಿನಗಟ್ಟಲೆ ತಾನಾಜಿಯ ಮನೆಗೆ ಎಡತಾಕುತ್ತಿದ್ದರು. ಅಷ್ಟರಲ್ಲಿ ಮಾಘಶುದ್ಧ ಸಪ್ತಮಿಯು `ಬಂದಿತು. ಕಮಲಕುಮಾರಿಯನ್ನು ಉದಯಭಾನುವು ಸೆರೆ ಹಿಡಿದೊಯ್ದು ಆವೊತ್ತಿಗೆ ಎರಡುವರೆ ತಿಂಗಳು ಆಗಿತ್ತು .ಆ ದಿನವಂತೂ ಊರಜನವೆಲ್ಲ ತಾನಾಜಿಯ ಮನೆಗೇ ಹೊರಳಿತ್ತು, ಜನರ ಮುಖಗಳಲ್ಲಿ ಆನಂದದ ಕಳೆಯು ಉಕ್ಕುತ್ತಿತ್ತು! ಆಗ ಸುಬೇದಾರನಾದ ತಾನಾಜಿಯು ಉಡುಪು ತೊಡವುಗಳಿಂದ ಸಜ್ಜಾಗಿ ಕುದುರೆಯನ್ನೇರಿ, ತನ್ನ ಭಾಲೆ ಬರ್ಚಿಗಳನ್ನು ಸಾವರಿಸಿಕೊಂಡು, ತನ್ನಂತೆ ಕುದುರೆಯನ್ನೇರಿ ಸಿದ್ಧವಾಗಿ ನಿಂತಿದ್ದ ಮುದುಕ ಸರದಾರನ ಸಂಗಡ ಏನೋ ಮಾತಾಡುತ್ತಿದ್ದನು. ಆ ವೃದ್ಧ ಸರದಾರನ ಆಚೆಯಲ್ಲಿ ಒಬ್ಬ ಎಂಟುವರ್ಷದ ಹುಡುಗನು ತಾನಾಜಿಯಂತೆಯೇ ಉಡುಪು ತೊಡವುಗಳನ್ನು ಧರಿಸಿ, ಅವನಂತೆ ತನ್ನ ಸಣ್ಣ ಸಣ್ಣ ಶಸ್ತ್ರಗಳನ್ನು ಸಜ್ಜುಮಾಡಿಕೊಳ್ಳುತ್ತ ಒಂದು ಸಣ್ಣ ಕುದುರೆಯನ್ನು ಹತ್ತುವದಕ್ಕಾಗಿ ಆತುರಪಡುತ್ತಿದ್ದನು. ಆ ಹುಡುಗನ ಮುಖಮುದ್ರೆಯನ್ನು ನೋಡಿ ಒಮ್ಮೆ ತಾನಾಜಿಯ ಮುಖಮುದ್ರೆಯನ್ನು ನೋಡಿದರೆ, ಅವರು ತಂದೆಮಕ್ಕಳಾಗಬೇಕೆಂದು ಬಾಯಿಂದ ಹೇಳಬೇಕಾಗುತ್ತಿದ್ದಿಲ್ಲ. ಆ ಮಗುವು ತಂದೆಯ ಕೇವಲ ಪ್ರತಿಬಿಂಬವಾಗಿತ್ತು. ಹುಡುಗರ ಸ್ವಭಾವದಂತೆ ಆತನು ತಂದೆಯಂಥ ಉಡಿಗೆ ತೊಡಿಗೆಗಳಿಂದ ಸಿಂಗಾರಾಗಿ, ಕುದುರೆಯನ್ನೇರಿ, ತಂದೆಯ ಸಂಗಡ ಹೋಗುವೆನೆಂದು ಹಟಮಾಡುತ್ತಿದ್ದನು. ಅವನ ಆ ಮರಾಟರ ಪದ್ಧತಿಯ ಸಣ್ಣ ಮುರಿಗೆಯ ಮುಂಡಾಸದ ಎರಡು ಪಟ್ಟಿಗಳನ್ನು ಆಗಿನ ಸಿಪಾಯಿಗಳಂತೆ ಕಿವಿಗಳ ಮೇಲಿಂದ ಹಾಯಿಸಿ ಗಲ್ಲದ ಬುಡದಲ್ಲಿ ಕಟ್ಟಿದ್ದರು. ಅವನು ಸಣ್ಣ ಗುಡಿಗೆಯ ಚಣ್ಣವನ್ನು ತೊಟ್ಟುಕೊಂಡಿದ್ದನು. ಟೊಂಕದ ತನಕ ಇದ್ದ ಅವನ ಕಂಠಿಯ ಕಮಾನಿನ ಅಂಗಿಯ ಗೋಪಿನ ಕಸಿಗಳನ್ನು ಕಟ್ಟಿದ್ದರು. ಅವನ ನಡಕಟ್ಟಿನೊಳಗಿಂದ ಒಂದು ಸಣ್ಣ ಖಡ್ಗವು ಅಲೆದಾಡುತ್ತಿತ್ತು. ಅವನು ಕೈಯಲ್ಲಿ ಭಾಲೆಯನ್ನು ಹಿಡಿದು ಬೆನ್ನಿಗೆ ಢಾಲುಕಟ್ಟಿದ್ದನು. ಈ ಚಂದದಿಂದ ಆ ಪುಟ್ಟ ಸರದಾರನು ಸಿದ್ಧನಾಗಿ ತಂದೆಗಿಂತ ಮುಂದೆ ತನ್ನ ಕುದುರೆಯನ್ನು ನೂಕಲಿಕ್ಕೆ ಆತುರಪಡುತ್ತಿದ್ದನು. ಊರೊಳಗಿನ ಎಲ್ಲ ಹೆಂಗಸರು ಆತನನ್ನು ಪ್ರೀತಿಯಿಂದ ಕಣ್ತುಂಬ ನೋಡಿ, ತಮ್ಮ ತಮ್ಮ ಮಕ್ಕಳನ್ನು ಎದೆಗವಚಿಕೊಂಡು ಪ್ರೇಮಾಶ್ರುಗಳನ್ನು ಸುರಿಸಿದರು. ಎಷ್ಟೋ ಜನ ಮುದುಕಿಯರು ಆ ಕೂಸಿಗೆ ದೃಷ್ಟಿಯಾದೀತೆಂದು ದೂರದಿಂದಲೇ ಅವನ ಮೇಲೆ ಹಸ್ತಗಳನ್ನು ನಿವಾಳಿಸಿ ಅವನ್ನು ತಮ್ಮ ಕಿವಿಗಳ ಹತ್ತರ ಒಯ್ದು ಲಟಿಕೆ ಮುರಿಯುತ್ತಿದ್ದರು. ತಾನಾಜಿಯ ತಾಯಿಯಾದ ಜಾನಕೀಬಾಯಿಯು ತನ್ನ ಮೊಮ್ಮಗನ ಬಳಿಗೆ ಹೋಗಿ ಅವನ ಮೋರೆಯಮೇಲೆ ಕೈಮಾಡಿಸಿ—ಯಾಕೆ ರಾಯಬಾ ಸರದಾರರೇ, ಇನ್ನೂ ಸಾಕಾಗಿಲ್ಲವೇನು? ಸಾಕು ಇಳಿಯಿರಿನ್ನು.. ನೀವು ಮಹಾರಾಜರ ಬಳಿಗೆ ಹೋದಿರೆಂದರೆ,

ನಿಮ್ಮ ಶೌರ್ಯವನ್ನು ನೋಡಿ ಅವರು ಈಗೇ ನಿಮ್ಮನ್ನು ಎಲ್ಲಿಗಾದರೂ ಯುದ್ಧಕ್ಕೆ ಕಳಿಸಿ ಗಿಳಿಸಿಯಾರು ಎಂದಳು.

ಜಾನಕೀಬಾಯಿಯ ಮಾತುಗಳನ್ನು ಕೇಳಿ ನೆರೆದವರೆಲ್ಲ ಕೊಳ್ಳನೆ ನಕ್ಕರು; ಆದರೆ ಆ ಚಿಕ್ಕರಣಧೀರನು ಗಾಂಭೀರ್ಯದಿಂದ ತನ್ನ ಅಮ್ಮನಿಗೆ—''ಅಮ್ಮಾ ನಾನು ಯುದ್ಧ ಮಾಡಲಿಕ್ಕಿಲ್ಲೆಂದು ನೀನು ತಿಳಿಯುತ್ತೀಯೇನು? ಮಹಾರಾಜರು ಅಫಜುಲಖಾನನನ್ನು ಕೊಂದಂತೆ ನಾನೂ ಯಾವನಾದರೊಬ್ಬ ಖಾನನನ್ನು ಕೊಂದೇನು'' ಎಂದು ನುಡಿದು ಆ ಪುಂಡನು ತನ್ನ ಟೊಂಕದಲ್ಲಿದ್ದ ಕತ್ತಿಗೆ ಕೈನೀಡಿದನು. ಆ ಕಾಲದ ಮಗುವಿನ ರೀವಿಯನ್ನು ನೋಡಿ ನೆರೆದವರಿಗೆಲ್ಲ ಕೌತುಕವಾಗಿ ಅವರೆಲ್ಲರು ಅವನ ಮಾತಿಗೆ ಬಿದ್ದುಬಿದ್ದು ನಕ್ಕರು. ಎಷ್ಟೋ ಮುದುಕರ ಮೈ ಜುಮ್ಮೆಂದು ಕಣ್ಣುಗಳೊಳಗಿಂದ ಅಶ್ರುಗಳು ಉದುರಿದವು.

ಈ ಮೇರೆಗೆ ರಾಯಬಾನನ್ನು ಕುದುರೆಯ ಮೇಲಿಂದ ಇಳಿಸಿಕೊಳ್ಳುವದಕ್ಕಾಗಿ ತಾನು ಮಾಡಿದಪ್ರಯತ್ನವು ವ್ಯರ್ಥವಾದದ್ದನ್ನು ನೋಡಿ ಆ ಮುದುಕೆಯು—ರಾಯಾ, ನಿನ್ನ ಲಗ್ನಕ್ಕೆ ಕರೆಯಲಿಕ್ಕೆ ನೀನೇ ಹೋಗುತ್ತೀಯೇನು? ಮಹಾರಾಜರು ನಿನಗೆ ಏನಂದಾರು? ಹುಚ್ಚನೆನ್ನ ಲಿಕ್ಕಿಲ್ಲವೆ? ಈ ಹುಚ್ಚನ ಲಗ್ನವನ್ನು ಮಾಡಬೇಡಿರಿ, ಇವನನ್ನು ಇಲ್ಲಿಯೇ ಬಿಟ್ಟುಹೋಗಿರಿ ಅಂದು ಗಿಂದಾರು! ಬಾರಪ್ಪಾ ಇಳಿ, ನಿಮ್ಮಪ್ಪನೇ ಹೋಗಲಿ, ನಾವು ಮನೆಗೆ ಹೋಗೋಣ, ಎಂದಳು. ಇಷ್ಟು ಹೇಳಿದರೂ ಹುಡುಗನ ಮನಸ್ಸು ತಿರುಗಲಿಲ್ಲ. ಅವನು ಗಾಂಭೀರ್ಯದಿಂದ ಅಮ್ಮನಿಗೆ–ಅಮ್ಮಾ ನಾನು ಮಹಾರಾಜರ ಹತ್ತರ ಇರಲಿಕ್ಕಿಲ್ಲೆಂದು ನೀನು ತಿಳಿದಿರುವಿಯೇನು? ನಾನು ಇನ್ನು ಬರುವದೇ ಇಲ್ಲ, ಅಲ್ಲಿಯೇ ಇರುವೆನು; ಮತ್ತು ಮಹಾರಾಜರಿಗೆ ನಿಮ್ಮ ಸಂಗಡ ನನ್ನನ್ನು ಯುದ್ಧಕ್ಕೆ ಕರಕೊಂಡು ಹೋಗಿರೆಂದು ಹೇಳುವೆನು; ಆ ಮೇಲೆ ಮಹಾರಾಜರ ಒಂದುಬದಿಗೆ ಅಪ್ಪನು, ಒಂದು ಬದಿಗೆ ನಾನು ನಿಂತುಕೊಂಡು ಯುದ್ಧಮಾಡುವೆವು. ಆಗ ನಾನು ಹೀಗೆ ಕತ್ತಿಯನ್ನು ಹಿರಿದು ಕೈಯಲ್ಲಿ ಹಿಡಕೊಂಡು ಹೋಗುವೆನು; ಎಂದನು.

ಆ ಕಾಲದ ಆ ಹುಡುಗನ ಹಾವಭಾವಗಳನ್ನೂ ಅವನು ನಿಜವಾಗಿಯೇ ತನ್ನ ಸಣ್ಣ ಕತ್ತಿಯನ್ನು ಒರೆಯಿಂದ ಹಿರಿದದ್ದನ್ನೂ ನೋಡಿ ನೆರೆದವರಿಗೆಲ್ಲ ಬಹಳ ಕೌತುಕವಾಯಿತು. ಇಷ್ಟರಲ್ಲಿ ಕುದುರೆಯಮೇಲೆ ಕುಳಿತುಕೊಂಡಿದ್ದ ಆ ವೃದ್ಧ ಮನುಷ್ಯನು ಆ ಮುದುಕಿಯ ಕಡೆಗೆ ತಿರುಗಿ—ಜಾನಕ್ಕಾ, ಬಿಡು, ಅವನು ನಿನ್ನಮಾತು ಕೇಳುವದಿಲ್ಲ; ಬರಲೊಲ್ಲನೇಕೆ. ಒಮ್ಮೆ ಹದಗಂಡನೆಂದರೆ, ಮತ್ತೊಮ್ಮೆ ಬರುತ್ತೇನೆಂದು ಹಟಮಾಡುವದಿಲ್ಲ, ಬಾ ಗೆಣೆಯಾ, ನಿನಗೆ ಒಮ್ಮೆ ಹಾದಿಯ ಸುಖವು ಚನ್ನಾಗಿ ಗೊತ್ತಾಗಲಿ; ತಾನ್ಯಾ, ಸುಮ್ಮನೇ ಮಾತಾಡುತ್ತ ಯಾಕೆ ಹೊತ್ತುಮಾಡುತ್ತೀ, ಬಿಸಿಲಾಗುವದಿಲ್ಲವೇ? ಇನ್ನು ಮಾತು ಸಾಕುಮಾಡು; ನಡಿ ಹೋಗೋಣ, ಎಂದನು.

ಈ ಮುದುಕನ ವಯಸ್ಸು ಎಂಭತ್ತು ವರ್ಷದಮೇಲೆ ಇರಬಹುದು; ಆದರೂ, ಅವನ ಮೈಕಟ್ಟು, ಗರಡಿಯ ಮನೆಯ ಹುಡುಗನಂತೆ ಇತ್ತು, ಅವನ ಕಣ್ಣುಗಳು ಹದ್ದಿನ ಕಣ್ಣಿನಂತೆ ತೀಕ್ಷ್ಣವಾಗಿದ್ದವು; ಕಿವಿಗಳು ಹಾವಿನ ಕಿವಿಯಹಾಗೆ ಚುರುಕಾಗಿದ್ದವು; ಅವನ ಬಾಯೊಳಗಿನ

ಒಂದಾದರೂ ಹಲ್ಲುಬಿದ್ದಿದ್ದಿಲ್ಲ. ಇಪ್ಪತ್ತೈದು ವರ್ಷದ ತರುಣನಷ್ಟು ಅವನು ಚಪಲನಾಗಿದ್ದನು. ಆದರೆ ನರೆಹಾದದ್ದರಿಂದ ಮಾತ್ರ ಅವನು ಮುದುಕನಹಾಗೆ ಕಾಣುತ್ತಿದ್ದನು. ಈ ಮುದುಕನು ತಾನಾಜಿಯ ಸೋದರಮಾವನಾಗಿದ್ದನು. ಇವನನ್ನು ಎಲ್ಲರೂ ಸೇಲಾರಮಾವನೆಂದು ಕರೆಯುತ್ತಿದ್ದರು. ಇವನ ತಂಗಿಯಾದ ಜಾನಕೀಬಾಯಿಯು ಅಂದರೆ ತಾನಾಜಿಯ ತಾಯಿಯು ಸಹ ವಿನೋದದಿಂದ ತನ್ನ ಅಣ್ಣನನ್ನು ಸೇಲಾರಮಾವನೆಂತಲೇ ಕರೆಯುತ್ತಿದ್ದಳು.

ಸೇಲಾರಮಾವನು ಮೇಲೆ ಹೇಳಿದಂತೆ ಮಾತಾಡಿ, ತನ್ನ ಕುದುರೆಯನ್ನು ಮುಂದಕ್ಕೆ ಬಿಡುವ ಉತ್ಸುಕತೆಯನ್ನು ತೋರಿಸಿದನು. ಆಗ ತಾನಾಜಿಯು ತನ್ನ ತಾಯಿಗೆ ಬೊಗ್ಗಿ ಒಮ್ಮೆ ನಮಸ್ಕಾರ ಮಾಡಿ, ನೆರೆದವರಿಗೆಲ್ಲ ರಾಮರಾಮ ಮಾಡಿ ತನ್ನ ಮಗನಿಗೆ—ಹ! ನಡೆಯಿರಿ ರಾಯಬಾ ಸರದಾರರೇ, ಎಂದನು. ರಾಯಬಾನಾದರೂ, ಒಳ್ಳೆಯ ಉತ್ಸುಕತೆಯಿಂದ ಕುದುರೆಯನ್ನು ಮುಂದಕ್ಕೆ ನೂಕಿದನು. ಹೀಗೆ ಆ ಮೂವರೂ ಮುಂದಕ್ಕೆ ಸಾಗಿದರು. ಕಳಿಸಲಿಕ್ಕೆ ಬಂದವರಲ್ಲಿ ಕೆಲವರು ಒದರಿ—ತಾನಾಜೀ, ಒಳ್ಳೆಯ ಆಗ್ರಹದಿಂದ ಕರೆಯಿರಿ. ಮಹಾರಾಜರು ನಮ್ಮ ಊರಿಗೆ ಬರಲೇಬೇಕು. ನಾವೆಲ್ಲರೂ ನಿಮ್ಮ ಹಾದಿಯನ್ನು ನೋಡುತ್ತೇವೆ. ಮಹಾರಾಜರ ಪಾದಧೂಲಿಯು ನಮ್ಮ ಊರಲ್ಲಿ ಬೀಳಲಿ. ನೋಡೋಣ ಮಹಾರಾಜರ ಹತ್ತರ ನಿಮ್ಮ ಮಾತು ಎಷ್ಟು ನಡೆಯುತ್ತದೆಂಬದನ್ನು; ಸೇಲಾರಮಾವಾ, ಏ ಸೇಲಾರಮಾವಾ, ನೀವು ಹೋಗುತ್ತೀರಿ ನೋಡಿರಿ; ನೀವು ಹೋಗುತ್ತೀರಿ, ಮಹಾರಾಜರನ್ನು ಕರಕೊಂಡು ಬರ್ರಿ. ನಾವೆಲ್ಲರೂ ನಿಮ್ಮ ಹಾದಿಯನ್ನೇ ನೋಡುತ್ತ ಕುಳಿತುಕೊಳ್ಳುತ್ತೇವೆ. ಮಹಾರಾಜರು ಬಂದರೆಂಬ ಸುದ್ದಿಯನ್ನು ಹೇಳಲಿಕ್ಕೆ ಬರ್ರಿ. ಇಲ್ಲದಿದ್ದರೆ ಏನಾದರೊಂದು ನೆವಹೇಳುತ್ತ ಸುಮ್ಮನೇ ಕೈಬೀಸುತ್ತ ಬಂದೀರಿ, ಎಂದರು. ಸೇಲಾರಮಾವನ ಓರಿಗೆಯ ಒಬ್ಬ ಮುದುಕನು—ಏ ಸೇಲಾರಮಾವಾ, ನೀನು ಮಹಾರಾಜರಿಗೆ ಸ್ಪಷ್ಟವಾಗಿಹೇಳು; ನಮ್ಮ ಸುತ್ತಮುತ್ತಲಿನ ಊರವರು ನಿಮ್ಮ ಬಳಿಯಲ್ಲಿ ಏನಿಲ್ಲೆಂದರೂ ಸಾವಿರಜನ ಬಾರಗಿರರಿರುವದರಿಂದ ಅವರ ಸೇವೆಯನ್ನು ಮನಸ್ಸಿನಲ್ಲಿ ತಂದು ಬರಲೇಬೇಕೆಂದು, ಅವರು ಬರುವದಿಲ್ಲೆಂದರೆ ನೀನು ಕೇಳಬೇಡ, ಎಂದು ಹೇಳಿದನು.

ಆ ಮುದುಕನ ಮಾತುಗಳನ್ನು ಕೇಳಿ ಸೇಲಾರಮಾವನು—ಏ ಕಾಳೂ ದಾದಾ, ನಿನಗೆ ಅದರ ಚಿಂತೆಯಾಕೆ? ಮಹಾರಾಜರನ್ನು ಕರಕೊಂಡು ಬಂದರಾಯಿತೋ ಇಲ್ಲವ್ರೋ? ನಾವು ಕರೆಯುತ್ತಿರಲಿಕ್ಕೆ ಮಹಾರಾಜರು ಬರುವದಿಲ್ಲೆಂದು ಹೇಳಿದರೆ ನಾನೇನು ಸುಮ್ಮನೇ ಕೂಡ್ರುವದಿಲ್ಲ. ನಾನು ಅವರಿಗೆ—ಮಹಾರಾಜಾ, ನೀನು ನಮ್ಮ ಊರಿಗೆ ಬರಲೇಬೇಕು, ಎಂಬತ್ತು ವರ್ಷದ ಮುದುಕನಾದ ನಾನು ನಿನಗೆ ತಂದೆಯಹಾಗೆ ಇದ್ದೇನೆ. ನನ್ನ ಮೂವರು ಮಕ್ಕಳು ನಿನ್ನ ಸೇವಾತತ್ಪರರಾಗಿದ್ದಾರೆ. ನನ್ನ ಸೋದರಳಿಯನಾದ ಈ ತಾನಾಜಿಯಂತೂ ಜೀವದಪರಿವೆಯನ್ನು ಬಿಟ್ಟು, ನಿನ್ನ ಸೇವೆಯನ್ನು ಮಾಡುತ್ತಿದ್ದಾನೆ. ಹೀಗಿದ್ದು ನಿನ್ನ ಬಾಲಮಿತ್ರನಾದ ತಾನಾಜಿಯ ಮಗನ ಲಗ್ನಕ್ಕೆ ಕರೆಯಬಂದರೆ ಒಲ್ಲೆನೆನ್ನುತ್ತೀಯಾ? ನೀನು ಬಾರದಿರಲು ನಾವು ಸೊಟ್ಟಮೋರೆ ಮಾಡಿಕೊಂಡು ಊರಿಗೆ ಹೋಗಬೇಕೇ? ಊರವರಾದರೂ ನಮಗೆ ಏನಂದಾರು? ಕಾಳೂದಾದಾ, ನೋಡು ಹೀಗೆ ಹೇಳುತ್ತೇನೆ;

ಆಸಿಮಿಸಿ ಮಾಡುವದಿಲ್ಲ, ನಾವು ತೆರಪಿಲ್ಲದೇ ಮನಮುಟ್ಟಿ ಒಡೆಯನ ಸೇವೆಯನ್ನು ಮಾಡಬೇಕು, ಒಮ್ಮೆ ಲಗ್ನಕ್ಕೆ ಕರೆದರೆ ಒಡೆಯನು ಬರಬಾರದು! ಏನು ಹೇಳುತ್ತೀ ಕಾಳೂದಾದಾ, ಹೀಗೆ ಎಂದಿಗೂ ಆಗದು. ನಾನು ಇಷ್ಟು ಮಾತಾಡಿದ ಬಳಿಕ ಶಿವಾಜೀ ಮಹಾರಾಜರು ಬರುವದಿಲ್ಲೆಂದು ಅನ್ನಲಾರರು. ನೀವು ಎಲ್ಲವನ್ನೂ ಸಜ್ಜುಮಾಡಿಕೊಂಡು ಇರ್ರಿ. ಮಹಾರಾಜರು ನಮ್ಮ ರಾಯಬಾನ ಲಗ್ನಕ್ಕೆ ಬಂದೇಬರುವರು. ಈ ಸೇಲಾರಮಾವನು ಹಾಗೇ ಕೈ ಅಲ್ಲಾಡಿಸುತ್ತ ಎಂದೂ ಬರುವವನಲ್ಲ, ಮಹಾರಾಜರು ನಮ್ಮ ಊರಲ್ಲಿ ನಾಲ್ಕುದಿವಸ ನಿಲ್ಲಬೇಕಾಗುವದರಿಂದ ಎಲ್ಲ ವ್ಯವಸ್ಥೆಯನ್ನು ನೆಟ್ಟಗೇಮಾಡಿ ಬರ್ರಿ, ಎಂದು ಅವರಿಗೆ ನಾನು ಸ್ಪಷ್ಟವಾಗಿ ಹೇಳುವೆನು, ಎಂದನು.

ಸೇಲಾರಮಾವನ ಮಾತುಗಳನ್ನು ಕೇಳಿ ಕಾಳೂದಾದಾನು ಮನಸ್ಸಿನಲ್ಲಿ ಆನಂದ ಬಟ್ಟನು; ಆದರೂ ಸೇಲಾರಮಾವನನ್ನು ಇನ್ನಿಷ್ಟು ಛಲಿಸಬೇಕೆಂದು—ಸೇಲಾರಮಾವಾ, ಇಲ್ಲಿಯಂತೂ ನೀನು ದೊಡ್ಡ ದೊಡ್ಡ ಮಾತುಗಳನ್ನು ಆಡಿಬಿಟ್ಟೆ. ಇಲ್ಲಿ ಮಾತಾಡಿದಹಾಗೆ ಮಹಾರಾಜರೆದುರಿಗೆ ಮಾತಾಡಿ ಅವರನ್ನು ಕರಕೊಂಡು ಬಂದರೆ ಸೈ ಅನ್ನುವೆನು. ನೆನಪಿನಲ್ಲಿಡು; ಮಬ್ಬಿಗೆ ಬಿದ್ದೀ. ಮಹಾರಾಜರ ಕೆಲಸ ಬಹಳ, ಏನಾದರೂ ನೆವವನ್ನು ಹೇಳಿಯಾರು, ನಿನಗೆ ಶಾಲು–ಮುಂಡಾಸಗಳನ್ನು ಉಡುಗರೆಯಾಗಿ ಕೊಟ್ಟಾರು, ನೀನು ಅಷ್ಟಕ್ಕೇ ಸಂತೋಷಬಟ್ಟು ಹಾಗೇ ಬಂದೀ, ಅನ್ನಲು ಸೇಲಾರ ಮಾವನು—ಹೋಗೋ ನಿನಗೆ ಯಾಕೆ ಅದರ ಚಿಂತೆ. ಶಿವಾಜೀಮಹಾರಾಜರು ಬರುವದಿಲ್ಲೆಂದು ಅಂದಾದರೂ ಅನ್ನಲಿ, ಆಮೇಲೆ ಹೇಳೋಣವಂತೆ. ನಾನು ಆತನಿಗೆ ಸ್ಪಷ್ಟವಾಗಿ—ಮಹಾರಾಜಾ, ನೀನೇ ನಮ್ಮಮಾತು ಕೇಳದಿದ್ದಮೇಲೆ ನಾವು ನಿನ್ನ ಸಲುವಾಗಿ ಯಾಕೆ ಸಾಯಬೇಕು? ಎಂದು ಕೇಳಿ ಬಿಡುವೆನು. ದಾದಾ, ಅವನೇನು ಬರುವದಿಲ್ಲೆನ್ನಬೇಕಾಗಿದೆಯೋ! ಅವನ ಅಪ್ಪನೆದುರಿಗೆ ಮಾತಾಡಲಿಕ್ಕೆ ನಾನು ಹೆದರುವವನಲ್ಲ, ಆ ಶಿವಾಜಿಗೆ ಹೆದರುತ್ತೇನೇನು? ನಿನಗೆ ಆ ಮಾತಿನ ಚಿಂತೆಬೇಡ. ನಮ್ಮ ಔತನವನ್ನು ಮನ್ನಿಸಿ ಆತನು ಬಂದೇಬರುವನು. ನೀವು ನಿಶ್ಚಿಂತೆಯಿಂದ ಇರ್ರಿ, ಎಂದನು.

ಈ ಮಾತುಗಳನ್ನು ಕೇಳಿ ಕಾಳೂದಾದಾನಿಗೆ ಸ್ವಲ್ಪ ಸಮಾಧಾನವಾಯಿತು, ಇನ್ನು ಸೇಲಾರ ಮಾವನು ಮಹಾರಾಜರಿಂದ ವಚನತಕ್ಕೊಳ್ಳದೆ ಬರುವದಿಲ್ಲೆಂದು ಅವನು ನಿಶ್ಚಯಿಸಿದನು. ಈ ನಿಶ್ಚಯದ ಭಾವನೆಯಿಂದ ಕಳಿಸಬಂದವರೆಲ್ಲ ಸಮಾಧಾನಪಟ್ಟರು. ತಮ್ಮ ಊರ ತಾನಾಜಿಯ ಮನೆಗೆ ಶಿವಾಜಿಮಹಾರಾಜರು ಬರುತ್ತಾರೆಂಬ ಸುದ್ದಿಯು ಊರೊಳಗೆ ಹಬ್ಬಿದ ಕೂಡಲೆ ಎಲ್ಲರೂ ಆನಂದಬಟ್ಟರು. ಮಹಾರಾಜರು ಬರುತ್ತಿರಲು, ತಮ್ಮ ಮನೆಗಳನ್ನು ಹ್ಯಾಗೆ ಶೃಂಗರಿಸಬೇಕು? ಗುಡಿ ತೋರಣಗಳನ್ನು ಹ್ಯಾಗೆ ನಿಲ್ಲಿಸಬೇಕು? ಅಂಗಳವನ್ನು ಹ್ಯಾಗೆ ಸ್ವಚ್ಛವಿಡಬೇಕು? ಎಂಥ ಉಡಿಗೆ ತೊಡಿಗೆಗಳನ್ನು ಧರಿಸಬೇಕು, ಎಂಬ ಹಲವು ವಿಚಾರಗಳಲ್ಲಿ ಅವರು ಮುಳುಗಿ ಹೋದರು. ಮೊಗಲರಿಂದ ದೇಶಕ್ಕಾಗುವ ಪೀಡೆ ಯನ್ನು ನಿವಾರಿಸುವದಕ್ಕಾಗಿ ಸಾಕ್ಷಾತ್ ಶಂಕರನೇ ಶಿವಾಜಿಯ ರೂಪದಿಂದ ಅವತರಿಸಿರುವ ನೆಂದು ಅವರು ನಂಬಿದ್ದರು. ಆ ಮಹಾಪುರುಷನಲ್ಲಿ ಅವರ ಭಕ್ತಿಯು ಅನಾದೃಶ್ಯವಾಗಿತ್ತು

ಶಿವಾಜಿಯ ಚರಣಸ್ಪರ್ಶವಾಗುವ ಊರವರು ಧನ್ಯರೆಂತಲೂ, ಆ ಯೋಗವು ಪ್ರಾಚೀನ ಪುಣ್ಯದಿಂದಲ್ಲದೆ ಅನ್ಯಕಾರಣಗಳಿಂದ ದೊರಕದೆಂತಲೂ ಅವರು ಭಾವಿಸಿದ್ದರು. ಆ ಈಶ್ವರೀ ವಿಭೂತಿಯ ದರ್ಶನವಾದ ದಿವಸವೇ ಅವರಿಗೆ ಸುದಿವಸವಾಗಿತ್ತು; ಆದುದರಿಂದ ಉಮರಾದೆಯ ಊರವರಿಗೆ ಶಿವಾಜಿಯ ಆಗಮನದ ಸ್ಮರಣದಿಂದ ಪರಮಾವಧಿ ಆನಂದ ವಾಗುತ್ತಿತ್ತು, ತಾನಾಜಿಯೇ ಮೊದಲಾದವರು ರಾಯಗಡಕ್ಕೆ ಹೋಗುವಮೊದಲೂ, ಹೋದ ಮೇಲೆಯೂ ಶಿವಾಜಿಯ ಆಗಮನವೇ ಉಮರಾದೆಯವರ ಮಾತಿನ ಮುಖ್ಯ ವಿಷಯ ವಾಗಿತ್ತು. ಬೆಳಗಿನಿಂದ ಸಂಜೆಯ ಮಲಗುವ ಹೊತ್ತಿನವರೆಗೆ ಅವರು ಶಿವಾಜಿಯನ್ನು ನೆನಿಸುತ್ತಲೇ ಇರುತ್ತಿದ್ದರು. ಸುತ್ತುಮುತ್ತಲಿನ ಮೂವತ್ತು ನಾಲ್ವತ್ತು ಹರಿದಾರಿಗಳಲ್ಲಿ ಶಿವಾಜಿ ಮಹಾರಾಜರು ತಾನಾಜಿಯ ಮಗನ ಮದುವೆಗೆ ಉಮರಾದೆಗೆಬರುವರೆಂಬ ಆನಂದದ ಸುದ್ದಿಯು ಹಬ್ಬಲು, ಅಲ್ಲಿಯ ಜನರು ತಾವೂ ಮಹಾರಾಜರನ್ನು ನೋಡಲಿಕ್ಕೆ ಹೋಗ ಬೇಕೆಂದು ಯೋಚಿಸ ತೊಡಗಿದರು.

ಇತ್ತ ತಾನಾಜಿಯು ತನ್ನ ಮಾವನನ್ನೂ ಮಗನನ್ನೂ ಕೂಡಿಕೊಂಡು ರಾಯಗಡದ ಹಾದಿಯನ್ನು ಹಿಡಿದಿದ್ದನು. ಹತ್ತುಮಂದಿ ಸಿಲೇದಾರರೂ ನಾಲ್ವತ್ತು ಮಂದಿ ಬಾರಗೀರರೂ ಅವರನ್ನು ಹಿಂಬಾಲಿಸಿದ್ದರು. ಇಷ್ಟು ಜನರನ್ನು ಸಹ ಕರಕೊಂಡು ಹೋಗಬೇಕೆಂದು ತಾನಾಜಿಯು ಯೋಚಿಸಿದ್ದಿಲ್ಲ. ಏನೋ ಕೆಲವು ಜನರು ಇದ್ದರೂ ಇರಲೆಂದು ಅವನು ಅಷ್ಟು ಮಂದಿಯನ್ನು ಸಂಗಡ ಬರಗೊಟ್ಟಿದ್ದನು. ಆ ಮೂವರ ಪ್ರಯಾಣವು, ಬಾಲ್ಯ-ತಾರುಣ್ಯ -ವಾರ್ಧಿಕ್ಯಗಳೆಂಬ ಮೂರು ಅವಸ್ಥೆಗಳು ಮೂರು ರೂಪಗಳಿಂದ ಸಾಗಿರುವಂತೆ ತೋರುತ್ತಿತ್ತು. ರಾಯಬಾನು ಎಂಟು ವರ್ಷದ ಕೂಸಾಗಿದ್ದನು. ತಾನಾಜಿಯು ಹೆಚ್ಚು ಕಡಿಮೆ ನಾಲ್ವತ್ತು ವರ್ಷದ ತರುಣನಾಗಿದ್ದನು. ಸೇಲಾರಮಾವನು ಹಿಂದೆ ಹೇಳಿದಂತೆ ಎಂಬತ್ತುವರ್ಷದ ಒಳಹೊರಗಿನ ಮುದುಕನಾಗಿದ್ದನು. ಆ ಮೂರೂ ಮೂರ್ತಿಗಳು ತಮ್ಮ ತಮ್ಮ ಯೋಗ್ಯತೆ ಯಂತೆ ಒಂದೇ ಮೂರ್ತಿಯ ಚಿಂತನವನ್ನು ಮಾಡುತ್ತಿದ್ದವು. ಚಿಕ್ಕಮಗುವಾದ ರಾಯಬಾನು ಪ್ರತಿಯೊಂದು ಮಾತಿನಲ್ಲಿ ತಂದೆಯ ಅನುಕರಣವನ್ನು ಮಾಡಲು ಯತ್ನಿಸುತ್ತಿದ್ದನು. ತಮ್ಮಪ್ಪನು ಕುದುರೆಯ ಲಗಾಮುವನ್ನು ಹಿಡಿದಂತೆ ತಾನೂ ಹಿಡಿಯುತ್ತಿದ್ದನು. ಅವನು ಭಾಲೆಯನ್ನು ಸಾವರಿಸುವಂತೆ ತಾನು ಸಾವರಿಸುತ್ತಿದ್ದನು. ನಡುನಡುವೆ ಆ ಕೂಸಿನ ಮನಸ್ಸಿನಲ್ಲಿ—ಶಿವಾಜಿಮಹಾರಾಜರು ಹ್ಯಾಗೆ ಇರಬಹುದು? ಅವರು ನನ್ನನ್ನು ನೋಡಿ ಏನು ಅನ್ನಬಹುದು? ಅವರ ಮಾತಿಗೆ ನಾನು ಏನು ಉತ್ತರಕೊಡಬೇಕಾದೀತು ಮುಂತಾದ ವಿಚಾರಗಳು ಹೊಳೆ ಯುತ್ತಿದ್ದವು. ತರುಣನಾದ ತಾನಾಜಿಯು—ಈಗ ಮಹಾರಾಜರು ಯಾವ ವಿಚಾರದಲ್ಲಿರ ಬಹುದು? ನಾನು ಹೋದಕೂಡಲೆ ಯಾವ ಸುದ್ದಿಗಳು ಕಿವಿಗೆ ಬೀಳಬಹುದು? ದಿಲ್ಲಿಯ ಬಾದಶಹನು ಈಗ ಯಾವ ಕಾರಸ್ಥಾನವನ್ನು ನಡಿಸಿದ್ದಾನು? ವಿಜಾಪುರದವರ ಚಲನವಲನವು ಹ್ಯಾಗೆ ನಡೆದಿರಬಹುದು, ಇವೇ ಮೊದಲಾದ ವಿಚಾರಗಳಲ್ಲಿ ಮಗ್ನನಾಗಿದ್ದನು. ಇತ್ತ ವೃದ್ಧ ಸೇಲಾರಮಾವನು—ನಾವು ಸ್ವತಃ ಕರಿಯಲಿಕ್ಕೆ ಹೊರಟಿದ್ದೇವೆ,

ಮಹಾರಾಜರು ಯಾಕೆ ಬಾರದೇ ಬಿಟ್ಟಾರು? ನಾನಂತು ಅವರ ಹಂಗು ಇಡದೆ ಸ್ಪಷ್ಟವಾಗಿ ಮಾತಾಡುತ್ತೇನೆ. ಹೇಳಿಕೊಂಡು ಮಹಾರಾಜರ ತಾಯಂದಿರಾಧ ಜೀಜಾಬಾಯಿಯವರನ್ನು ಸಹಕರಕೊಂಡು ಬರೋಣವಂತೆ. ಲಗ್ನಕ್ಕಂದರೆ ಆ ಸಾಧ್ವಿಯು ಬಾರದೇನು ಮಾಡುತ್ತಾಳೆ. ನಮಗೆ ಅಷ್ಟು ಸಥಿಯಿಲ್ಲವೇನು, ಇವೇ ಮೊದಲಾದ ವಿಚಾರಗಳಲ್ಲಿ ಮುಳುಗಿಹೋಗಿದ್ದನು. ಈ ಪ್ರಕಾರದ ಭಿನ್ನಭಿನ್ನ ವಿಚಾರಗಳಿಂದ ಆ ವೀರ ಮಹಾರಾಷ್ಟ್ರರ ತ್ರಯಿಯು ಮುಂದಕ್ಕೆ ಸಾಗಿತ್ತು. ಆ ಪ್ರಾಂತದಲ್ಲಿ ತಾನಾಜಿಯ ಬೆಳಕು ವಿಶೇಷವಾಗಿದ್ದುದರಿಂದ ಊರು ಹತ್ತಿದಲ್ಲೆಲ್ಲ ಜನರು ತಾನಾಜಿಯನ್ನು ಕಾಣಲಿಕ್ಕೆ ಬಂದು—ಮಹಾರಾಜರಿಗೆ ಬರಲಿಕ್ಕೇಬೇಕೆಂದು ಆಗ್ರಹ ಮಾಡಿರೆಂದು ಆ ಅಳಿಯ–ಮಾವಂದಿರಿಗೆ ಹೇಳುತ್ತಿದ್ದರು. ರಾಯಬಾನು ಚಿಕ್ಕವನಾದುದರಿಂದ ಒಂದೇ ದಿವಸಕ್ಕೆ ರಾಯಗಡಕ್ಕೆ ಹೋಗುವದಾಗಲಿಕ್ಕಿಲ್ಲೆಂತಲೂ, ಅಷ್ಟು ಅವಸರದಿಂದ ಹೋಗುವ ಅವಶ್ಯವೂ ಇಲ್ಲೆಂತಲೂ ಬಗೆದು ಅವರು ಆ ಒಂದುದಿನದ ಹಾದಿಯನ್ನು ಮೂರುವಸ್ತಿಗಳಿಂದ ಹೋಗಬೇಕೆಂದು ಗೊತ್ತುಮಾಡಿಕೊಂಡಿದ್ದರು.

ಸಹ್ಯಾದ್ರಿಯ ಘಟ್ಟವನ್ನು ಏರಲಾರಂಭಿಸಿದಾಗಿನಿಂದ ಎರಡು ತಾಸಿನವರೆಗೆ ಎಲ್ಲರೂ ಸುಮ್ಮನೆ ಸಾಗಿದ್ದರು. ಆಮೇಲೆ ತಾನಾಜಿಯು ಸೇಲಾರಮಾವನಿಗೆ—ಮಾವಾ, ದೇವರು ಈ ಮಹಾಪುರುಷನಿಗೆ (ಶಿವಾಜಿಗೆ) ಆಯುಷ್ಯವನ್ನು ಮಾತ್ರ ಕೊಡಬೇಕು; ಅಂದರೆ ಆತನು ಮೊಗಲರ ಮಗ್ಗಲುಮುರಿದು ಸ್ವರಾಜ್ಯವನ್ನು ಸ್ಥಾಪಿಸಿ, ರಾಮರಾಜ್ಯದಂತೆ ಎಲ್ಲರಿಗೂ ಸುಖ ಕೊಡದೆ ಬಿಡಲಿಕ್ಕಿಲ್ಲ ನೋಡು. ಆ ಪುರುಷನಲ್ಲಿರುವ ವಿಚಿತ್ರಶಕ್ತಿ ದೇವರೇಬಲ್ಲನು. ನಾವೂ ಅವನೂ ಚಿಕ್ಕಂದಿನಿಂದ ಕೂಡಿ ಆಡಿದವರು. ಚಿಕ್ಕವನಿರುವಾಗಲೇ ಆತನು ಬೇಕಾದ ಕೆಲಸಗಳನ್ನು ಹೇಳಲಿ, ನಮಗೆ ಮಾಡುವಹಾಗೆಯೇ ಆಗುತ್ತಿತ್ತು. ಅವಾಗಿನಿಂದಲೇ ನಾವು ಅವನನ್ನು ನಮ್ಮ ಅರಸನೆಂದು ಭಾವಿಸಿದ್ದೇವೆ. ಆತನ ಒಂದೊಂದು ಯುಕ್ತಿಗಳನ್ನು ನೆನಿಸಿ ಕೊಂಡರೆ ಆಶ್ಚರ್ಯವಾಗುತ್ತದೆ. ಆತನ ಧೈರ್ಯವೇನು, ಶೌರ್ಯವೇನು, ಸಾಹಸವೇನು, ಶಾಬಾಸ್ ಅಂತೇ ಅವನು ಈಶ್ವರಾಂಶನೆಂದು ಭಾವಿಸಲ್ಪಡುತ್ತಾನೆ. ಜೀವಕ್ಕೆ ಜೀವಾ ಕೊಡಬೇಕು ಆತನೇ! ಒಂದೇ ಹೊಟ್ಟೆಯ ಅಣ್ಣತಮ್ಮಂದಿರು ಸಹಕೊಡಲಿಕ್ಕಿಲ್ಲ. ಒಂದು ಸಂಗತಿಯು ಸಹಜವಾಗಿ ನೆನಪಾಯಿತು, ಹೇಳುತ್ತೇನೆ; ನಾವು ತುಸು ಹೆಚ್ಚು ಕಡಿಮೆ ಹದಿನೆಂಟು ಹತ್ತೊಂಬತ್ತು ವರ್ಷದವರಿರುವಾಗ ಅಂದರೆ ಸುಲ್ತಾನ ಗಡವನ್ನು ಕೈವಶಮಾಡಿಕೊಳ್ಳುವದಕ್ಕಿಂತ ಸ್ವಲ್ಪ ದಿವಸದ ಪೂರ್ವದಲ್ಲಿ, ಅದೇಕೆ ತೋರಣ ಗಡವನ್ನು ತಕ್ಕೊಂಡು ಸ್ವರಾಜ್ಯದ ತೋರಣವನ್ನು ಕಟ್ಟಿದಾಗೇ ಅನ್ನಬಾರದೇ. ಆಗ ಪುರಂದರ ಕೋಟೆಯೊಳಗೆ ಆ ಮುಸುಂಡಿಗಳು ಶ್ರೀಧರಸ್ವಾಮಿ ಗಳನ್ನು ಸೆರೆಯಲ್ಲಿಟ್ಟಿದ್ದರು. ಆಗ ನಮ್ಮ ಮಹಾರಾಜರು ಎಂಥ ಉತ್ತಮವಾದ ಯುಕ್ತಿಯಿಂದ ಆ ಸ್ವಾಮಿಗಳನ್ನು ಬಿಡಿಸಿಕೊಂಡರೆನ್ನುತ್ತೀ! ನಾವಂತೂ ಆಶ್ಚರ್ಯದಿಂದ ಬೊಟ್ಟೇ ಕಚ್ಚಿದೆವು ನೋಡು. ದೂರವೇಕೆ? ಮೊನ್ನೆ ಅಫಝುಲಖಾನನ ಕೈಯೊಳಗಿಂದ ಪಾರಾದದ್ದೇನು ಸಾಧಾರಣ ಯುಕ್ತಿಯೇ? ಆ ಘಾತಕಿಯು ಮಹಾರಾಜರ ಜೀವ ಕಳೆಯಲಿಕ್ಕೆ ಎಂಥ ಯುಕ್ತಿಯನ್ನು ಯೋಚಿಸಿದ್ದನು! ಎಷ್ಟು ಮೋಸಮಾಡಿದ್ದನು! ಆತನು ಮಹಾರಾಜರಿಗೆ ಆಕಸ್ಮಿಕವಾಗಿ

ಗಂಟುಬಿದ್ದು ಅವರನ್ನು ಪೂರ್ಣವಾಗಿ ನಾಶಗೊಳಿಸಬೇಕೆಂದು ಯೋಚಿಸಿದ್ದನು; ಆದರ ನಮ್ಮ ಮಹಾರಾಜರು ಸಾಮಾನ್ಯರೇ? ಹಾರುವ ಹಕ್ಕಿಯ ಪುಚ್ಚಾ ಎಣಿಸುವವರು. ಅವರು ಯೋಚಿಸಿದ್ದೇನಂದರೆ—ಈ ಜನರು ಮುರುವು ಇಟ್ಟು ಆಕಳತಲೆ ಹೊಡೆಯುವವರು, ಹೇಸುವವರಲ್ಲ; ಅವರ ಸಂಗಡ ಯಾವಾಗಲೂ ಎಚ್ಚರದಿಂದಲೇ ಇರಬೇಕು. ನಾವಂತೂ ಪೂರ್ಣ ಸಿದ್ಧತೆಯಿಂದಲೇ ಹೋಗಿರೋಣ. ಹೊತ್ತುಬಂದಾಗ ಅತ್ತಿತ್ತ ನೋಡುವ ಹಾಗಿರ ಬಾರದು. ಮಹಾರಾಜರವರ ಈ ಪೂರ್ವಸಿದ್ಧತೆಯು, ಅವರ ಯೋಚನೆಯಂತೆ ಹೊತ್ತಿಗೆ ಉಪಯೋಗಿಸಿತು. ಅಫಝುಲಖಾನನ ಮದವೆಷ್ಟು! ಮಹಾರಾಜರವರನ್ನು ಅವನು ಹುಲ್ಲಿಗಿಂತ ಕಡೆ ಮಾಡಿ ಬಂದಿದ್ದನು. ಆ ಘಾತಕಿಯು ಭೆಟ್ಟಿಯ ನೆವದಿಂದ ಮಹಾರಾಜರನ್ನು ಆಲಿಂಗಿಸಿ ಅವರ ಮುಂಡವನ್ನು ಬಗಲಲ್ಲಿ ಹಿಡಿದು ಹಿಚಕಹತ್ತಿದನು. ಹೀಗೆ ಏನಾದರೂ ವಿಶ್ವಾಸಘಾತವಾದೀತೆಂದು ಮಹಾರಾಜರು ಮೊದಲೇ ಯೋಚಿಸಿದ್ದರೆಂದು ಈ ಮೊದಲೆ ಹೇಳಿರುವೆನಲ್ಲ? ಮಹಾರಾಜರು ಪ್ರಸಂಗಕ್ಕೆ ತಕ್ಕಹಾಗೆ ನಡೆದು ಆ ವಿಶ್ವಾಸಘಾತಕಿಯ ನಾಶವನ್ನು ಮಾಡಿದರು. ಆಗ ನಾನು ಹತ್ತರವೇ ಇದ್ದೆನು. ಸಂಕಟದಲ್ಲಿ ಎದೆಗುಂದುವದು ಮಹಾರಾಜರಿಗೆ ಕನಸಿನಲ್ಲಿ ಸಹ ಗೊತ್ತಿಲ್ಲ. ತೀರಿತು, ಮಾಡಿದರೆ ಇಂಥ ಪ್ರಭುವಿನ ಸೇವೆಯನ್ನೇ ಮಾಡಬೇಕು. ಸೇಲಾರಮಾವಾ ನಿಶ್ಚಯವಾಗಿ ಹೇಳುತ್ತೇನೆ. ನಮ್ಮ ಪ್ರಭುವು ಈ ಕೊಳ್ಳದೊಳಗೆ ಹಾರಿಕೋ, ಎಂದು ಹೇಳಿದರೆ ಹಾರಿಕೊಂಡು ಬಿಟ್ಟೇನು, ಕಯ್ ಕುಯ್ ಅನ್ನಲಿಕ್ಕಿಲ್ಲ, ಶಿವಾಜಿಮಹಾರಾಜರವರ ಸೇವೆಯನ್ನು ಮಾಡಮಾಡುತ್ತ ಮರಣ ಒದಗಿದರೂ ದುಃಖವಿಲ್ಲ, ಅದೊಂದು ಆನಂದದ ಪ್ರಸಂಗವೆಂತಲೇ ತಿಳಿಯುವೆನು; ಆದರೆ ನಮ್ಮ ಮಹಾರಾಜರು ಗಂಡಾಂತರದ ಪ್ರಸಂಗಗಳಲ್ಲಿ ತಾವೇ ಮುಂದುವರಿಯುತ್ತಾರೆ. ಇನ್ನುಮೇಲೆ ಅಂಥ ಪ್ರಸಂಗವೇನಾದರೂ ಬಂದರೆ, ನೀವು ಸ್ಥಳಬಿಟ್ಟು ಕದಲಲಾಗದು, ನಾನು ಈ ಕೆಲಸವನ್ನು ಮಾಡುವೆನು, ಎಂದು ಸ್ಪಷ್ಟವಾಗಿ ಹೇಳುತ್ತೇನೆ. ನೀನೇ ನೋಡು ಮಾವಾ, ನಮ್ಮಂಥವರು ಹೋದರೆ ಏನಾಗುವದದೆ? ಆ ಪುರುಷನ ಯೋಗದಿಂದ ನಮ್ಮಂಥ ನೂರಾರು ಜನರು ಮುಂದೆಬಿದ್ದು ಕೆಲಸವನ್ನು ಮಾಡಿಯಾರು. ಮಹಾರಾಜರವರ ಜೀವಕ್ಕೆ ಏನಾದರೂ ಅಪಾಯ ಒದಗಿದರೆ, ಉಳಿದವರ ಅವಸ್ಥೆಯೇನು? ನಮ್ಮಂಥ ಸಾವಿರಾರು ಜನರಿದ್ದು ಮಾಡುವದೇನು? ಯಾಕೆ ಮಾತಾಡು, ನಾನನ್ನುವದು ಸಟಿಯೋ ದಿಟವೋ?

ತಾನಾಜಿಯಾಡಿದ ಮಾತುಗಳನ್ನು ಕೇಳಿ ಸೇಲಾರಮಾವನು—ನೀನಾಡಿದ್ದು ನಿಜವು. ಮಹಾರಾಜರು ಇನ್ನುಮೇಲೆ ಸುಮ್ಮನೆ ಅಪ್ಪಣೆಮಾಡುತ್ತ ಕುಳಿತುಕೊಳ್ಳತಕ್ಕದ್ದು. ನಾನು ಅವರಿಗೆ ಹೀಗೆ ಆಲೋಚನೆ ಹೇಳುತ್ತೇನೆ; ಅಲ್ಲೋ ತಾನ್ಯಾ, ಅವರು ನಮ್ಮ ರಾಯಬಾನ ಲಗ್ನಕ್ಕೆ ಬಂದಾರೇನು? ಜೀಜಾಬಾಯಿಯನ್ನು ಕರೆಯಲಿಕ್ಕೆ ಜಾಸಕ್ಕನು ಬಂದಿದ್ದರ ನೆಟ್ಟಗಾಗುತ್ತಿತ್ತಲ್ಲವೇ? ಆ ಜೀಜಾಬಾಯಿಯು ಸಾಧಾರಣ ಸ್ತ್ರೀಯಲ್ಲ, ಆಕೆಯ ಭೆಟ್ಟಿಯಾಗದೆ ಬಹಳ ದಿವಸವಾಯಿತು. ನಾಳೆ ಭೆಟ್ಟಿಯಾದಾಗ ಆಕೆಗೆ—ತಾಯೀ, ನೀನು ಸಾಮಾನ್ಯ ಸ್ತ್ರೀಯಲ್ಲ; ಪರಮ ಧನ್ಯಳು. ನಿನ್ನ ಹೊಟ್ಟೆಯಲ್ಲಿ ಶಿವಾಜಿಯೆಂದರೆ ಪ್ರತ್ಯಕ್ಷ ಶಂಕರನೇ

ಹುಟ್ಟಿಬಂದಿದ್ದಾನೆ, ಎಂದು ಹೇಳುವೆನು. ಯಾಕಲೇ, ಏ ರಾಯಾ, ದಣಕೊಂಡಿಯೇನು? ಛೀನಿನ! ನಾನು ಮೊದಲೇ ಬೇಡೆನ್ನಲಿಲ್ಲವೆ? ನನ್ನ ಮಾತು ಯಾಕೆ ಕೇಳೀ? "ನಾನು ಬರುತ್ತೇನೆ, ನಾನು ಬರುತ್ತೇನೆ" ಬಾರೋ! ಈಗ ಸವಿಗೊತ್ತಾಯಿತೇ? ಸುಮ್ಮನೆ ಮನೆಯಲ್ಲಿ ತಣ್ಣಗೆ ಕೂಡ್ರಬಾರದಾಗಿತ್ತೇ?

ಅಜ್ಜನ ಮಾತು ಕೇಳಿ ರಾಯಬಾನು ಸ್ವಲ್ಪ ಚಟುವಟಿಕೆಯನ್ನು ತೋರಿಸಿ—ಆ ನಾನು ದಣಿದಿರುವೆನೋ! ಇಲ್ಲಪ್ಪೋ ನಾನು ದಣಿದಿಲ್ಲ, ನಡಿಬೇಕಾದರೆ; ನಿನ್ನ ಸಂಗಡ ಇಪ್ಪತ್ತು ಹರದಾರಿ ಬರುತ್ತೇನೆ. ಅಪ್ಪಾ, ನೋಡು ದಣಿದಿರುತ್ತೀಯೆಂದು ಅಜ್ಜನು ಅನ್ನುತ್ತಾನೆ. ನೀನೇ ಹೇಳು ನಾನು ದಣಿದಿರುವೆನೇ? ಅಂದನು.

ಮಾಘಮಾಸವು ಚಳಿಗಾಲವಾದರೂ ಕೊಂಕಣಪ್ರಾಂತದಲ್ಲಿ ಅಷ್ಟು ಚಳಿ ಇರುವದಿಲ್ಲ. ಮೇಲಾಗಿ ಅವರು ಸ್ವಲ್ಪ ಹೊತ್ತೇರಿಯೇ ಹೊರಟಿದ್ದರು; ಆದ್ದರಿಂದ ಕೆಲಹೊತ್ತಿನ ಮೇಲೆ ಬಿಸಿಲು ಏರಿ ತಾಪವು ಹೆಚ್ಚಾಯಿತು. ತಾನಾಜಿಯೂ ಸೇಲಾರಮಾವನೂ ಬಿಸಿಲಿಗೆ ಹೆದರುವಂತೆ ಇದ್ದಿಲ್ಲ. ಅವರು ಇದಕ್ಕೂ ಹೆಚ್ಚಿನ ಬಿಸಿಲಲ್ಲಿ ಇಪ್ಪತ್ತು ಇಪ್ಪತ್ತೈದು ಹರದಾರಿಗಳ ವರೆಗೆ ಹೋಗಿದ್ದರು; ಆದರೆ ರಾಯಬಾನು ಚಿಕ್ಕವನಾದ್ದರಿಂದ ಬಿಸಿಲಲ್ಲಿ ಹೋಗಲಿಕ್ಕೆ ಸ್ವಲ್ಪ ಹಿಂದು ಮುಂದೆ ನೋಡಬೇಕಾಗಿತ್ತು; ಮೇಲಾಗಿ ಅಷ್ಟು ಅವಸರದಿಂದ ಹೋಗುವ ಅವಶ್ಯವೂ ಇದ್ದಿಲ್ಲ; ಕಾರಣ ಅವರು ನೆರಳು ಕಂಡಲ್ಲಿ ಸ್ವಲ್ಪ ಕುಳಿತುಕೊಳ್ಳುತ್ತ ರಾಯಬಾನಿಗೆ ಏನಾದರೂ ತಿನಿಸುತ್ತ ಅವನೊಡನೆ ಹುಡುಗಾಟಿಕೆ ಮಾಡುತ್ತ ಸಾವಕಾಶವಾಗಿ ಘಟ್ಟವನ್ನು ಏರಿ ಪರಿವಾರ ಸಹಿತವಾಗಿ ರಾಯಗಡಕ್ಕೆ ಹೋದರು. ಆಗ ಶಿವಾಜಿಮಹಾರಾಜರು ರಾಯಗಡದಲ್ಲಿಯೇ ಇದ್ದರು. ಕರ್ಮಧರ್ಮಸಂಯೋಗದಿಂದ ಮಹಾರಾಜರ ತಾಯಂದಿರಾದ ಜೀಜಾಬಾಯಿಯವರು ಪ್ರತಾಪಗಡದಿಂದ ರಾಯಗಡಕ್ಕೆ ಬಂದಿದ್ದರು. ಈ ವರ್ತಮಾನವನ್ನು ಕೇಳಿ ರಾಯಬಾನಿಗೆ ಬಹಳ ಸಂತೋಷವಾಯಿತು.

ತಾನಾಜಿಯು ಪದ್ಧತಿಯಂತೆ ತಾನು ಬಂದ ವರ್ತಮಾನವನ್ನು ಮಹಾರಾಜರಿಗೆ ತಿಳಿಸಿ ಪರಿವಾರ ಸಹಿತವಾಗಿ ಮೆಲ್ಲಮೆಲ್ಲನೆ ದುರ್ಗವನ್ನು ಏರಹತ್ತಿದನು. ದಣಿದು ಬಂದ ರಾಯಬಾನಿಂದ ಗುಡ್ಡವನ್ನು ಏರುವದು ಆಗಲಿಕ್ಕಿಲ್ಲೆಂದು ತಿಳಿದು ಆತನನ್ನು ಒಬ್ಬ ಮನುಷ್ಯನ ಕುಂಕಿಯಮೇಲೆ ಕುಳ್ಳಿರಿಸಿದ್ದರು. ಹೋಗಹೋಗುತ್ತ ತಾನಾಜಿಯು ಮನಸ್ಸಿನಲ್ಲಿ— ಮಹಾರಾಜರವರು ಈಗ ಯಾವ ಉದ್ಯೋಗದಲ್ಲಿ ತೊಡಗಿರಬಹುದು? ನನ್ನನ್ನು ಕಂಡಕೂಡಲೆ ಏನು ಅನ್ನಬಹುದು? ಎಂಬ ಸಂಗತಿಗಳ ವಿಷಯವಾಗಿ ಕಲ್ಪನೆಗಳನ್ನು ಮಾಡುತ್ತಿದ್ದನು. ತನ್ನ ಪ್ರಭುವು ಒಂದು ಅರಗಳಿಗೆಯಾದರೂ ಸುಮ್ಮನೆ ಕೂಡ್ರುವವನಲ್ಲೆಂಬ ಮಾತು ಅವನಿಗೆ ಗೊತ್ತಿತ್ತು. ಸೇಲಾರಮಾವನು—ತಾನು ಇನ್ನು ಮಹಾರಾಜರ ಬಳಿಯಲ್ಲಿ ಹೋದಬಳಿಕ ಏನು ಮಾತಾಡಬೇಕು? ಹ್ಯಾಗೆ ಮಾತಾಡಬೇಕು? ಎಂಬ ವಿಚಾರದಲ್ಲಿ ಮಗ್ನನಾಗಿದ್ದನು. ರಾಯಬಾನು ತಾನು ಎಲ್ಲರಿಗಿಂತ ಮೊದಲು ಮಹಾರಾಜರವರ ಎದುರಿಗೆ ಹೋಗಿ ನಿಲ್ಲಬೇಕೆಂದು ಹಾತೊರೆಯುತ್ತಿದ್ದನು.

ಈ ಮೇರೆಗೆ ವಿಚಾರಮಾಡುತ್ತ ಅವರು ದುರ್ಗವನ್ನು ಏರಿಹೋದರು. ಆಗ ಶಿವಾಜಿಮಹಾರಾಜರವರು ಸದರುಗಟ್ಟೆಯ ಮೇಲೆಯೇ ಕುಳಿತಿದ್ದರು. ತಾನಾಜಿಯು ಬಂದಸುದ್ದಿಯನ್ನು ಕೇಳಿದಕೂಡಲೆ ತೀವ್ರಬರಬೇಕೆಂದು ಅವರು ತಾನಾಜಿಗೆ ಸೂಚಿಸಿದರು. ಬಳಿಕ ಅವರೆಲ್ಲರು ಮಹಾರಾಜರವರ ಮುಂದೆ ನಿಂತುಕೊಂಡರು. ಸೇಲಾರಮಾವನು ಮಹಾರಾಜರಿಗೆ ಬಹುವಿನಯದಿಂದ ರಾಮರಾಮ ಮಾಡುವದಕ್ಕಾಗಿ ಬಗ್ಗುತ್ತಿರಲು, ಮಹಾರಾಜರವರು ಲಗುಬಗೆಯಿಂದ ಎದ್ದು ಬಂದು ಸೇಲಾರಮಾವನ ಕೈಹಿಡಿದು— ಮಾವನವರೇ, ನಾವು ಅರಸರಾಗಿದ್ದರೂ ನಿಮಗೆ ಅರಸರಲ್ಲ; ಎರಡನೆಯವರಿಗೆ ಅರಸರು. ನಾವು ನಿಮಗೆ ನಿಮ್ಮ ಹೊಟ್ಟೆಯ ಮಕ್ಕಳಂತೆಯೇ ಸರಿ. ನೀವು ನಮ್ಮ ತಂದೆಗೆ ಸಮಾನರು. ನಿಮ್ಮ ಆಶೀರ್ವಾದದಿಂದಲೇ ನಾವು ದೊಡ್ಡ ಪದವಿಯನ್ನು ಹೊಂದಿರುವೆವು. ಹೀಗೆ ಬರ್‍ರಿ, ಈ ಗಾದಿಯ ಮೇಲೆ ಕುಳಿತುಕೊಳ್ಳಿರಿ. ಎಂದು ಕೈಹಿಡಿದು ಸೇಲಾರಮಾವನನ್ನು ತಮ್ಮ ಗಾದಿಯಮೇಲೆ ಬಲಕ್ಕೆ ಕುಳ್ಳಿರಿಸಿಕೊಂಡರು. ಈ ಆದರವನ್ನು ನೋಡಿ ಆ ವೃದ್ಧ ಸರದಾರನಿಗೆ ಬಹಳ ಆನಂದವಾಯಿತು. ಆನಂದದ ಭರದಲ್ಲಿ ಅವನ ಕಣ್ಣುಗಳೊಳಗಿಂದ ಪ್ರೇಮಾಶ್ರುಗಳು ಉದುರಿದವು. ಮಾವನು ಶಿವಾಜಿಯ ಬೆನ್ನು ಚಪ್ಪರಿಸಿ—ಶಿವಾಜಿರಾಜನೇ, ನಮ್ಮಂಥ ಬಡವರನ್ನು ಕೇವಲ ಮುದುಕರೆಂಬ ಕಾರಣದಿಂದ ಇಷ್ಟು ಮನ್ನಿಸುತ್ತೀಯಲ್ಲ! ನಾನು ನಿಶ್ಚಯವಾಗಿ ಹೇಳುತ್ತೇನೆ; ನಿನಗೆ ಎಲ್ಲಿಯೂ ಸೋಲು ಬರಲಿಕ್ಕಿಲ್ಲ. ದೇಶದೊಳಗಿನ ಮುದುಕರ ಅಶೀರ್ವಾದವ ಹೊಂದಿದವನನ್ನು ಸೋಲು ಮುಟ್ಟಲಾರದು. ನಾನು ಈ ದಿನ ನಿನಗೆ ಔತನ ಹೇಳಲಿಕ್ಕೆ ಬಂದಿರುತ್ತೇನೆ. ರಾಯಬಾ, ಬಾ; ಮಹಾರಾಜರವರಿಗೆ ದಂಡವತ ನಮಸ್ಕಾರಮಾಡು. ಈತನು ತಾನಾಜಿಯ ಮಗನು. ಜಾನಕ್ಕನು ಇವನ ಲಗ್ನಮಾಡಬೇಕೆಂದು ನಿಶ್ಚಯಿಸಿದ್ದಾಳೆ. ಲಗ್ನದ ಮುಹೂರ್ತವನ್ನು ಇದೇ ವದ್ಯ ನವಮಿಯ ದಿವಸ ಇಟ್ಟಿರುತ್ತದೆ. ನೀನು ಲಗ್ನಕ್ಕೆ ಬರಲೇಬೇಕು. ನಾಲ್ಕುದಿನ ಮಂಟಪ ಶೋಭೆಯನ್ನುಂಟುಮಾಡಬೇಕು. ಬಡವರ ಕಾರ್ಯವೆಂದು ಇಲ್ಲೆನ್ನಬೇಡ.

ಸೇಲಾರಮಾವನು ಈ ಮೇರೆಗೆ ಮಾತಾಡುತ್ತಿರಲು, ರಾಯಬಾನು ಮಹಾರಾಜರವರಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿದನು. ಮಹಾರಾಜರವರು ಆ ಚಿಕ್ಕ ಸರದಾರನ ಸುಂದರ ಮೂರ್ತಿಯನ್ನು ನೋಡಿ, ಕೌತುಕಪಟ್ಟರು. ಅವರು ಆ ಪುಂಡನನ್ನು ಆತುರದಿಂದ ತಬ್ಬಿ ಕೊಂಡು—ಓಹೋ! ಇವರು ನಮ್ಮ ಚಿಕ್ಕ ಸುಬೇದಾರರೇನು? ಸುಬೇದಾರರೇ, ನಿಮ್ಮ ಲಗ್ನಕ್ಕೆ ಕರೆಯಲಿಕ್ಕೆ ನೀವೇ ಬಂದಿರೋ? ನೋಡೋಣ; ನಿಮ್ಮ ಕತ್ತಿಯನ್ನಾದರು ತೋರಿಸಿರಿ ಹ್ಯಾಗದೆ, ಎಂದು ಅವನ ಟೊಂಕದೊಳಗಿನ ಖಡ್ಗಕ್ಕೆ ಕೈಹಾಕಿದರು. ಕೂಡಲೆ ರಾಯಬಾನು ಏನೋ ಯೋಚಿಸಿ ಒಮ್ಮೆಲೆ—ಮಹಾರಾಜರೇ, ನನಗೊಂದು ನಿಜವಾದ ಕತ್ತಿಯನ್ನು ಕೊಡ ಬಾರದಿರಾ! ನಾನು ಮೊಗಲರೊಡನೆ ಕಾದುವದಕ್ಕಾಗಿ ಅಪ್ಪನನ್ನು ಹಿಂಬಾಲಿಸಿ ಹೋಗಲಿಕ್ಕೆ ನೆಟ್ಟಗಾಗುವದು. ಅನ್ನಲು ಮಹಾರಾಜರು–ಹಾ! ಅದಕ್ಕಂತೇ ನಿಮಗೆ ನಾವು ಚಿಕ್ಕ ಸುಬೇದಾರರೆಂದು ಕರೆದೆವು. ಯಾಕೆ ತಾನಾಜಿರಾಯರೇ, ನಿಮ್ಮ ಮಗನು ನಿಮ್ಮನ್ನು

ಶೌರ್ಯದಲ್ಲಿ ಮೀರಬಹುದಲ್ಲವೇ? ನೀವು ಈಗ ಈತನ ಲಗ್ನವನ್ನು ನಿಶ್ಚಯಿಸಿರುವಿರೇನು? ನಿನ್ನೆ ನಮ್ಮ ಮಾತೋಶ್ರೀ ಸಾಹೇಬರು ಸಹ ನಿಮ್ಮನ್ನು ನೆನಿಸಿದರು.

ಮಹಾರಾಜರ ಈ ಮಾತುಗಳನ್ನು ಕೇಳಿ ತಾನಾಜಿಯು—ಪ್ರಭುಗಳೇ, ಮಾತೃಶ್ರೀ ಸಾಹೇಬರವರೂ ತಾವೂ ಅಪ್ಪಣೆಕೊಟ್ಟಾಗ ನಾನು ಸಿದ್ಧವಾಗಿರುವೆನು. ಈ ಕ್ಷಣದಲ್ಲಿ ಏನಾದರೂ ಅಪ್ಪಣೆಕೊಡುವದಿದ್ದರೆ ಕೊಡಬೇಕು, ಅನ್ನಲು ಮಹಾರಾಜರು—ಸದ್ಯಕ್ಕೆ ನಿಮಗೆ ಅಪ್ಪಣೆಮಾಡತಕ್ಕದ್ದಿಲ್ಲ; ನೀವು ಸ್ನಾನಕ್ಕೆ ಏಳಬೇಕು. ಊಟವಾದಬಳಿಕ ಮಾತಾಡೋಣ ವಂತೆ. ಯಾರವರು? ಅಪ್ಪನವರಿಗೆ ಸುದ್ದಿಯನ್ನು ತಿಳಿಸಿರುವಿರಷ್ಟೇ?

ಮಹಾರಾಜರು ಒತ್ತಟ್ಟಿಗೆ ಹೀಗೆ ಕೇಳುತ್ತ ಮತ್ತೊತ್ತಟ್ಟಿಗೆ ರಾಯಬಾನ ಸಂಗಡ ಮಾತಾಡುತ್ತ ಕುಳಿತಿರಲು, ಚಿಟನೀಸನು—"ಒಬ್ಬ ಹೇಜೀಬನು ಮಹತ್ವದ ಅವಸರದ ಕೆಲಸಕ್ಕಾಗಿ ಮಹಾರಾಜರನ್ನು ಕಾಣಲಿಕ್ಕೆ ಬಂದಿದ್ದಾನೆ" ಎಂದು ಹೇಳಿಕಳಿಸಿದನು. ಆಗ ಮಹಾರಾಜರು ಬೇಗನೆ ಎದ್ದು ಹೋಗಿ ಸ್ವಂತದ ಮಹಾಲಿನೊಳಗಿನ ಏಕಾಂತದ ಕೋಣೆಯನ್ನು ಹೊಕ್ಕರು. ಇತ್ತ ಕರಿಯಬಂದವರು ಕೌತುಕದಿಂದ ವಿಚಾರ ಮಾಡುತ್ತ ಅಲ್ಲಿಯೇ ಉಳಿದರು.

## ಹೊನ್ನು ಹೆಣ್ಣುಗಳ ಹುಚ್ಚು

ಉದಯಭಾನುವು ಔರಂಗಜೇಬನಿಂದ ಆಜ್ಞಾಪಿತನಾಗಿ ಕಮಲಕುಮಾರಿಯೊಡನೆ ದಕ್ಷಿಣಕ್ಕೆ ಸಾಗಿದನೆಂದು ಹಿಂದೆ 3ನೆಯ ಪ್ರಕರಣದಲ್ಲಿ ಹೇಳಿರುತ್ತದೆ. ಉದಯಭಾನುವು ತನ್ನ ಪೌರುಷವನ್ನು ತೋರಿಸುವದಕ್ಕಾಗಿ ಮಾಡಿದ ಕೆಲಸವೇ ಅಪ್ಪನಿಗೆ ಮುಳುವಾಯಿತು. ಔರಂಗಜೇಬನು ತನ್ನ ಅಪ್ಪಣೆ ಮುರಿದದ್ದಕ್ಕಾಗಿ ಸಿಟ್ಟಿನಿಂದ ಉದಯಭಾನುವನ್ನು ಸೆರೆಯ ಲ್ಲಿರಿಸಬಹುದಾಗಿತ್ತು, ಅದೇಕೆ? ಮನಸ್ಸಿಗೆ ಬಂದಿದ್ದರೆ, ಆತನು ದೇಹಾಂತ ಶಿಕ್ಷೆಯನ್ನಾದರೂ ವಿಧಿಸಬಹುದಾಗಿತ್ತು. ಈ ಸಂಗತಿಗಳೆಲ್ಲ ಉದಯಭಾನುವಿನ ಮನಸ್ಸಿನಲ್ಲಿ ಬಂದು ಅವನಿಗೆ ಬಹಳ ಪಶ್ಚಾತ್ತಾಪವಾಯಿತು. ಅವನು ಮನಸ್ಸಿನಲ್ಲಿ—ನಾನು ಔರಂಗಜೇಬನ ಬಳಿಗೆ ಹೋಗದೆ ಹಾಗೇ ದಕ್ಷಿಣಕ್ಕೆ ಹೋಗಿದ್ದರೆ ಎಷ್ಟು ಜಾಣನಾಗುತ್ತಿದ್ದೆನು! ಇದೆಲ್ಲಿಯ ಕೆಟ್ಟ ಬುದ್ಧಿಯು ಹುಟ್ಟಿತು! ಕಮಲಕುಮಾರಿಯು ಕೈಯಲ್ಲಿ ಸಿಕ್ಕೂ ಸಿಗದಹಾಗೆ ಆಯಿತಲ್ಲ! ನಾನು ಇನ್ನು ದಕ್ಷಿಣಕ್ಕೆ ಹೋಗುವಾಗ್ಗೆ ಹಾದಿಯಲ್ಲಿ ರಜಪೂತರ ದಂಡುಗಂಟುಬಿದ್ದು ಕಮಲಕುಮಾರಿಯನ್ನು ಬಿಡಿಸಿಕೊಂಡು ಹೋದರೆ ಮಾಡುವದೇನು? ಕಮಲಕುಮಾರಿಯ ಕಡೆಯವನೊಬ್ಬನು ಮೋಸದಿಂದ ದಂಡಿನಲ್ಲಿ ಸೇರಿಕೊಂಡು, ಹೊತ್ತು ಸಾಧಿಸಿ ನನ್ನ ಪ್ರಾಣಹರಣಮಾಡಿದರೆ ಗತಿಯೇನು? ಇನ್ನು ಮೂರು ತಿಂಗಳವರೆಗೆ ಕಮಲಕುಮಾರಿಯ

ಗೊಡವೆಗೆ ಹೋಗದೆ ನಾನು ಹ್ಯಾಗೆ ಇರಲಿ? ಈ ಮಾತಿಗೆ ಇಷ್ಟೊಂದು ಚಿಂತೆಯನ್ನಾದರೂ ಯಾಕೆ ಮಾಡಬೇಕು? ಈಗ ಹಾದಿಯಲ್ಲಿ ಔರಂಗಜೇಬನ ಅಪ್ಪಣೆಗೆ ವಿರುದ್ಧವಾಗಿ ನಡೆದರ ಅವನಿಗೆ ಗೊತ್ತಾಗಲಾರದು. ನನ್ನ ಮನಸ್ಸಿಗೆ ಬಂದಂತೆ ನಾನು ನಡೆದರಾಯಿತು. ಛೆ! ಹಾಗೆ ಮಾಡುವದು ಹಿತಕರವಲ್ಲ, ಔರಂಗಜೇಬನು ಬಹಳ ಸಂಶಯದವನು; ತನ್ನ ಅಪ್ಪಣೆಯು ಪಾಲಿಸಲ್ಪಡುವದೋ ಇಲ್ಲವೋ ಎಂಬದನ್ನು ನೋಡುವದಕ್ಕಾಗಿ ಗುಪ್ತಚಾರರನ್ನು ಇಟ್ಟಿದ್ದರೂ ಇಟ್ಟರಬಹುದು. ಇಲ್ಲದ ಉಸಾಬರಿಗೆ ಹೋಗಿ ಪೆಟ್ಟು ತಿನ್ನಬೇಕಾದೀತು. ಒಮ್ಮೆ ಗಟ್ಟಿಮನಸ್ಸು ಮಾಡಿ ತೀವ್ರವಾಗಿ ದಕ್ಷಿಣಕ್ಕೆ ಹೋಗಿ ಕೊಂಡಾಣೆಯ ಕೋಟೆಯನ್ನು ಸೇರಿ ಬಾದಶಹನಿಗೆ, ತಮ್ಮ ಅಪ್ಪಣೆಯ ಪ್ರಕಾರ ವರ್ತಿಸಿದ್ದೇನೆಂದು ತಿಳಿಸಬೇಕು. ಸಾವಿರ ಹೇಳಿದರೂ ನಾನು ಕಮಲಕುಮಾರಿಯನ್ನು ಔರಂಗಜೇಬನ ಬಳಿಗೆ ಕರಕೊಂಡು ಹೋಗತಕ್ಕದ್ದಿದ್ದಿಲ್ಲ. ಈ ಮಾತನ್ನು ಎಷ್ಟುಸಾರೆ ಆಡಿದರೂ ಎಷ್ಟು ಪಶ್ಚಾತ್ತಾಪಪಟ್ಟರೂ ಆದ ಹಾನಿಯು ಇನ್ನು ಕೂಡಿಬರುವಂತೆ ಇಲ್ಲ, ಎಂದು ಚಿಂತಿಸಿದನು.

ವಿಚಾರದಿಂದ ನೋಡಿದರೆ ಉದಯಭಾನುವು ಇಷ್ಟು ಹೆದರುವ ಕಾರಣವಿದ್ದಿಲ್ಲ; ಮನುಷ್ಯನು ಅವಿಚಾರದಿಂದ ಒಮ್ಮೆ ಪಾಪಕೃತ್ಯ ಮಾಡಿದನೆಂದರೆ ಅವನು ಹೆಜ್ಜೆ ಹೆಜ್ಜೆಗೆ ಅಂಜಬೇಕಾಗುತ್ತದೆ. ಅವನ ಪಾಪವೇ ಅವನನ್ನು ಅಂಜಿಸುತ್ತದೆ. ಉದಯಭಾನುವಿನ ಸ್ಥಿತಿಯಾದರೂ ಹೀಗೆಯೇ ಆಗಿತ್ತು. ಅವನ ಬಳಿಯಲ್ಲಿ ನಾಲ್ಕುಸಾವಿರ ರಜಪೂತ ಸೈನ್ಯ ವಿದ್ದದ್ದರಿಂದ ಹಾದಿಯಲ್ಲಿ ಅವನನ್ನು ಯಾರೂ ತಡವುವಂತೆ ಇದ್ದಿಲ್ಲ. ನಂಬಿಗೆಯ ಶೂರ ಸಿಪಾಯಿಗಳನ್ನು ತನ್ನ ಮೈಗಾವಲಿಗಾಗಿ ಇಟ್ಟು ಬಿಟ್ಟಿದ್ದರೆ ಮರೆಮೋಸಗಳಿಗೂ ಆಸ್ಪದ ದೊರೆಯುವಂತೆ ಇದ್ದಿಲ್ಲ; ಈ ಒಡಕಿನ ಸಂಶಯದಿಂದ ಅವನು ಕೆಲವು ಶೂರ ಸಿಪಾಯಿಗಳನ್ನು ತನ್ನ ಮೈಗಾವಲಿಗೆ ಇಟ್ಟಿದ್ದನು; ಆದರೂ ಅವನ ಅಂಜಿಕೆ ಮುರಿದಿದ್ದಿಲ್ಲ. ಹಾದಿಯಲ್ಲಿ ಕಮಲಕುಮಾರಿಯನ್ನು ತಾನು ಹಣಿಕಿ ನೋಡಲಿಲ್ಲೆಂಬದನ್ನು ತೋರಿಸುವದಕ್ಕಾಗಿ ಅವನು ಆದಷ್ಟು ಎಚ್ಚರಪಡುತ್ತಿದ್ದನು. ಕಮಲಕುಮಾರಿಯ ಕಾವಲಿನ ಸಲುವಾಗಿಯೂ ಅವನು ಬಹಳ ಎಚ್ಚರಪಡಬೇಕಾಗುತ್ತಿತ್ತು, ಕಾವಲುಗಾರರನ್ನು ಒಡಕೊಂಡು ಯಾವನಾದರೂ ಒಳಗೆ ಸೇರಿ ಮೋಸಮಾಡಬಹುದೆಂದು ಅವನು ಸಂಶಯಪಡುತ್ತಿದ್ದನು. ಒಮ್ಮೆ ತಾನು ಜಾಗ್ರತೆಯಿಂದ ಕೊಂಡಾಣೆಯಕೋಟೆಯನ್ನು ಸೇರಿ ಔರಂಗಜೇಬನ ಕಟ್ಟಿನ ದಿವಸಗಳು ಹೋಗುವವರೆಗೆ ಸುಮ್ಮನಿದ್ದರೆ ಆಮೇಲೆ ಬೇಕಾದದ್ದು ಮಾಡಿದರೂ ತನ್ನ ಕೈ ಹಿಡಿಯುವವರಿಲ್ಲೆಂದು ಅವನು ಗಟ್ಟಿಯಾಗಿ ಗೊತ್ತುಮಾಡಿಕೊಂಡನು. ತನ್ನ ಸೈನ್ಯದಲ್ಲಿ ಯಾವನೊಬ್ಬನು ತನ್ನನ್ನು ಕೊಲ್ಲಲು ಹೊಂಚುಹಾಕಿದ ಸಂಶಯವು ಉದಯಭಾನುವಿಗೆ ಬಂದಿತ್ತು; ಆದರೆ ಶೋಧದ ಕಡೆಯಲ್ಲಿ ಸಂಶಯವು ದೂರವಾಯಿತು. ಸಂಶಯದ ಮನುಷ್ಯನು ಮುಂದೆ ಕೆಲವು ದಿನಗಳ ಮೇಲೆ ಕಾಣದಂತಾದನು.

ಉದಯಭಾನುವು ಇಲ್ಲಿಯವರೆಗೆ ಕಮಲಕುಮಾರಿಯ ಸಂಗಡ ನಿಷ್ಠುರತನದಿಂದಲೇ ನಡಕೊಳ್ಳುತ್ತ ಬಂದಿದ್ದನು; ಆದರೆ ಇನ್ನು ಮುಂದೆ ಸ್ವಲ್ಪ ಸೌಮ್ಯವಾಗಿ ನಡಕೊಳ್ಳಬೇಕೆಂದು

ನಿಶ್ಚಯಿಸಿದನು. ಒಂದು ದಿನ ನರ್ಮದಾನದಿಯ ದಂಡೆಯ ಮೇಲೆ ಅವನು ದಂಡಿನ ಬೀಡು ಬಿಟ್ಟಿದ್ದನು. ರಾತ್ರಿ ಸ್ವಚ್ಛವಾಗಿ ಬೆಳದಿಂಗಳು ಬಿದ್ದಿತ್ತು ಆಗ ಅವನ ಮನಸ್ಸಿನಲ್ಲಿ—ಈಗ ಕಮಲ ಕುಮಾರಿಯನ್ನು ನನ್ನೆದುರಿಗೆ ಕರಿಸಿ ಎರಡು ಒಳ್ಳೆಯ ಮಾತುಗಳನ್ನು ಹೇಳಲಿಯಾ? ಛೀ, ಹಾಗೆಮಾಡುವದು ಸರಿಯಾಗಲಿಕ್ಕಿಲ್ಲ; ನಾನೇ ಅವಳಿದ್ದಲ್ಲಿಗೆ ಹೋಗಿ ಮಾತಾಡಿಸಬೇಕು; ಇದೇ ನೆಟ್ಟಗೆ, ಎಂದು ನಿಶ್ಚಯಿಸಿ ಆ ಮರುಳನು ಕೂಡಲೇ ಕಮಲಕುಮಾರಿಯ ರಾಹುಟಿಗೆ ಹೋದನು. ಆ ಕಾಮಾಂಧನು ಕಾವಲುಗಾರರಿಗೆ ಗದ್ದಲಮಾಡದಂತೆ ಕಟ್ಟಪ್ಪಣೆಯನ್ನಿತ್ತು ಕಮಲಕುಮಾರಿಯ ಅಂತಃಪುರದ ಪರದೆಯ ಹತ್ತರಹೋದನು. ಇನ್ನು ಅವನು ಪರದೆಯನ್ನು ಸರಿಸತಕ್ಕವನು; ಅಷ್ಟರಲ್ಲಿ ಕಮಲಕುಮಾರಿಯು ಬಿಕ್ಕಿ ಬಿಕ್ಕಿ ಅಳುವದು ಅವನ ಕಿವಿಗೆ ಬಿದ್ದಿತು. ದೇವಲದೇವಿಯು ಅವಳಿಗೆ ಸಮಾಧಾನ ಹೇಳುತ್ತಿದ್ದಳು. ಆಗ ಉದಯಭಾನುವು ಒಳಗೆ ಹೋಗದೆ ಪರದೆಯ ಹಿಂದೆ ನಿಂತು ಕೇಳುತ್ತಿರಲು, ದೇವಲದೇವಿಯು—ಕಮಲೇ, ನೀನು ಹೀಗೆ ಕೈಕಾಲು ಬಿಡಬೇಡಕ್ಕಾ. ಸ್ವಲ್ಪ ಧೈರ್ಯತಾಳು. ದುಷ್ಟನಾದ ಔರಂಗಜೇಬನ ಮನಸ್ಸನ್ನೂ ಕರಗಿಸಿ ಮೂರು ತಿಂಗಳವರೆಗೆ ಉದಯಭಾನುವು ನಿನ್ನ ಗೊಡವೆಗೆ ಬಾರದಂತೆ ಮಾಡಿದ ಶ್ರೀ ಏಕಲಿಂಗೇಶ್ವರನೇ ನಿನ್ನನ್ನು ಈ ಸಂಕಟದೊಳಗಿಂದ ಪಾರುಮಾಡುವದಿಲ್ಲೆಂದು ಯಾರು ಹೇಳುವರು? ನೀನು ಕೆಟ್ಟ ವಿಚಾರಗಳನ್ನು ಮನಸ್ಸಿನಲ್ಲಿಯೇ ತರಬೇಡ. ನಿನ್ನ ಬಿಡುಗಡೆ ಯಾಗುವದೆಂದು ನನ್ನ ಮನಸ್ಸಿಗಂತೂ ಹೊಳೆಯುತ್ತದೆ. ಉದಯಭಾನುವಿಗಾದರೂ ಏನು ನಿಯಮ? ಶ್ರೀ ಏಕಲಿಂಗೇಶ್ವರನ ಪ್ರೇರಣೆಯಿಂದ ಅವನ ಬುದ್ಧಿಯಲ್ಲಿ ಸುವಿಚಾರವು ತಲೆದೋರಿ ಆತನು ನಿನ್ನನ್ನು ಉಗುಳಿ ಬಿಸುಡಿದರೂ ಬಿಸುಡಬಹುದು. ಹುಚ್ಚೀ, ಧೈರ್ಯ ಬಿಡುವರೇ? ಬಂದ ಪ್ರಸಂಗದೊಳಗಿಂದ ಹ್ಯಾಗಾದರೂ ಪಾರಾಗಬೇಕು. ನಿನಗೆ ನಾನು ಇನ್ನೊಂದು ಗುಪ್ತ ಸಂಗತಿಯನ್ನು ತಿಳಿಸತಕ್ಕವಳಿದ್ದೇನೆ; ಆದರೆ ಇಲ್ಲಿಯ ಅರಿವೆ ಅಂಚಡಿಗಳಿಗೆ ಸಹ ಕಿವಿಗಳಿವೆ. ಎಚ್ಚರದಿಂದ ಮಾತಾಡಬೇಕಾಗುವದು; ಯಾರಾದರೂ ಕೇಳಿದರೆ ಘಾತವಾದೀತು; ಅದಕ್ಕಾಗಿ ನಾನು ಈಗ ನಿನ್ನ ಮುಂದೆ ಹೇಳುವದಿಲ್ಲ, ಹೊತ್ತುನೋಡಿ ನಿನಗೆ ಹೇಳೇನಂತೆ. ನೀನು ಹೀಗೆ ಉಪವಾಸ ವನವಾಸದಿಂದ ದೇಹವನ್ನು ಕೊರಗಿಸುತ್ತ ಹೋದರೆ ಮುಂದೆ ಗತಿಯೇನು? ಉಪವಾಸದ ಪುಣ್ಯವು ಒತ್ತಟ್ಟಿಗುಳಿದು, ಆತ್ಮಹತ್ಯೆ ಮಾಡಿಕೊಂಡ ಪಾಪವು ಮಾತ್ರ ನಿನ್ನ ಉಡಿಯಲ್ಲಿ ಬಿದ್ದೀತು. ಇದರ ವಿಚಾರವನ್ನು ನೀನು ಮೊದಲು ಮಾಡು; ಇಲ್ಲದಿದ್ದರೆ ನಾನು ಹೇಳಿದಂತೆಯಾದರೂ ಕೇಳು. ನಾನು ಬದುಕಿರುವವರೆಗೆ ನಿನ್ನ ಕೂದಲು ಕೊಂಕ ಗೊಡಲಿಕ್ಕಿಲ್ಲ, ಅದಾವನು ನಿನ್ನ ಮೇಲೆ ಕೈಮಾಡುವನು ನೋಡುತ್ತೇನೆ. ಬರುವವನು ನನ್ನ ತಲೆತಕ್ಕೊಂಡಬಳಿಕ ನಿನ್ನ ಕಡೆಗೆ ಬರಬೇಕಾದೀತು. ಈ ಮಾತನ್ನು ಸೆರಗಿಗೆ ಗಂಟು ಹೊಡೆದು ನೆನಪಿನಲ್ಲಿಟ್ಟುಕೋ.

ದೇವಲದೇವಿಯ ಈ ಮಾತುಗಳಿಗೆ ಕಮಲಕುಮಾರಿಯು ಯಾವ ಉತ್ತರವನ್ನೂ ಕೊಡದೆ ಒಂದೇಸವನೆ ಅಳುತ್ತ ಮಾತ್ರ ಕುಳಿತಿದ್ದಳು. ಉದಯಭಾನುವು ದುಷ್ಟನಾದರೂ ಕಮಲಕುಮಾರಿಯ ಈ ಅಳೋಣವನ್ನೂ ಅವಳ ಮೇಲಿರುವ ದೇವಲದೇವಿಯ

ನಿಸ್ಸೀಮವಾದ ಭಕ್ತಿಯನ್ನೂ ನೋಡಿ ತಾನು ಈಗ ಒಳಗೆ ಹೋಗದೆ ಹಿಂದಕ್ಕೆ ತಿರುಗುವದೇ ಹಿತವೆಂದು ಬಗೆದು ಹೊರಟು ಬಂದನು; ಆದರೆ ದೇವಲದೇವಿಯ ಮಾತುಗಳಲ್ಲಿಯ ಒಂದುಮಾತು ಮಾತ್ರ ಅವನ ಮನಸ್ಸಿಗೆ ಬಹಳವಾಗಿ ಹತ್ತಿತು. ಆಕೆಯು ಕಮಲಕುಮಾರಿಗೆ ''ನಿನಗೆ ನಾನೊಂದು ಗುಪ್ತಸಂಗತಿಯನ್ನು ಹೇಳುವೆನೆ''ಂದು ಅಂದಳಲ್ಲ ಆದರ ಮರ್ಮವು ಅವನಿಗೆ ತಿಳಿಯದಾಯಿತು. ಅವನು ಮನಸ್ಸಿನಲ್ಲಿ—ಆ ಗುಪ್ತಸಂಗತಿಯು ಯಾವದಿರ ಬಹುದು? ಆ ಸಂಗತಿಯಿಂದ ನನ್ನ ಘಾತವಾಗುವ ಸಂಭವವಿರಲಿಕ್ಕಿಲ್ಲವಷ್ಟೇ! ಆಕೆಯು ನನ್ನ ಛಾವಣಿಯಲ್ಲಿ ಯಾವನೊಬ್ಬನನ್ನು ಒಡಕೊಂಡು ನನ್ನ ನಾಶಕ್ಕೆ ಬಲೆಯೊಡ್ಡಿರಬಹುದೋ! ನನ್ನನ್ನು ಕೊಲ್ಲುವ ಆಲೋಚನೆಯನ್ನು ಮಾಡಿರಬಹುದೋ! ಅವಳು ತಾನೂ ಕಮಲಕುಮಾರಿಯೂ ಇಲ್ಲಿಂದ ಓಡಿಹೋಗುವ ವಿಚಾರವನ್ನು ಮಾಡಿದ್ದಾಳಾದೀತೇನು? ಹೀಗೆ ಒಂದಲ್ಲ ಎರಡಲ್ಲ ಹಲವು ಸಂಶಯಗಳನ್ನು ತಂದುಕೊಂಡನು. ಅವನು ಈ ಸಂಶಯಗಳ ಭಯದಿಂದ ಆ ಹೆಂಗಳೆಯರ ರಾಹುಟಿಯ ಕಾವಲಿಗಾಗಿ ಮೇಲೆ ಮೇಲೆ ಹೊಸಬರನ್ನು ನಿಯಮಿಸಬೇಕೆಂದು ಗೊತ್ತು ಮಾಡಿದನು. ಅವನ ವಿಚಾರದಂತೆ ಒಬ್ಬ ಕಾವಲುಗಾರನು ಒಂದೇಸವನೆ ಎರಡುದಿವಸ ಎಂದೂ ಇರುವಹಾಗಿದ್ದಿಲ್ಲ. ಬಳಿಯಲ್ಲಿ ದೊಡ್ಡ ಸೈನ್ಯವಿದ್ದದ್ದರಿಂದ ಹೀಗೆ ವ್ಯವಸ್ಥೆ ಮಾಡಲಿಕ್ಕೆ ಅವನಿಗೆ ತೊಂದರೆಯಾಗುವ ಹಾಗೆ ಇದ್ದಿಲ್ಲ; ಆದ್ದರಿಂದ ಕೂಡಲೆ ಅವನು ಅದರಂತೆ ಅಪ್ಪಣೆಮಾಡಿ, ಕಾವಲುಗಾರರು ತಮ್ಮ ಕಾವಲಿನ ಸರತಿಯು ಮುಗಿದ ಕೂಡಲೇ ಇದ್ದ ಸುದ್ದಿಯನ್ನು ತನಗೆ ತಿಳಿಸಲಿಕ್ಕೇಬೇಕೆಂದು ಕಟ್ಟುಮಾಡಿದನು. ಇಷ್ಟು ಮಾಡಿದ್ದೂ ವ್ಯರ್ಥವು; ದೇವಲದೇವಿಯ ಗುಪ್ತಸಂಗತಿಯನ್ನು ತಿಳಕೊಳ್ಳಬೇಕೆಂಬ ಅವನ ಇಚ್ಛೆಯು ತೃಪ್ತವಾಗಲಿಲ್ಲ. ಆ ಮಾತನ್ನು ಬೈಲಿಗೆಳೆಯುವ ಉಪಾಯವೇ ಅವನಿಗೆ ಹೊಳೆಯದಾಯಿತು. ಆದ್ದರಿಂದ ಅವನು ಒಮ್ಮೆ ದೇವಲದೇವಿಯನ್ನು ಕಂಡು, ಅವಳಿಂದ ಅದನ್ನು ತಿಳಕೊಳ್ಳ ಬೇಕೆಂದು ಯೋಚಿಸಿ ''ನಿನ್ನನ್ನು ಕಾಣುವ ಇಚ್ಛೆಯು ಬಹಳವಾಗಿದೆ'' ಎಂದು ದೇವಲದೇವಿಗೆ ಎರಡುಸಾರೆ ಹೇಳಿಕಳುಹಿಸಿದನು. ಆದರೆ ಆಕೆಯು ಅತ್ತಕಡೆಗೆ ಲಕ್ಷವನ್ನೇ ಕೊಡಲಿಲ್ಲ. ಆಗ ಉದಯಭಾನುವು ''ನೀನು ಬರಲೇಬೇಕೆ''ಂದು ಆಕೆಗೆ ಸ್ಪಷ್ಟವಾಗಿ ಹೇಳಿಕಳುಹಿದನು. ಅದಕ್ಕೆ ದೇವಲೆಯು—ಸದ್ಯಕ್ಕೆ ನಾವು ನಿನ್ನ ಕೈಯ್ಯಲಿದ್ದೇವೆ; ನೀನು ಕರೆದತ್ತ ಬರಲೇಬೇಕಾಗುವದು; ಆದರೆ ಕಮಲಕುಮಾರಿಯನ್ನೊಬ್ಬಳನ್ನೇ ಬಿಟ್ಟು ನಾನು ಒಂದು ಕ್ಷಣವಾದರೂ ಎರಡನೆಯ ಕಡೆಗೆ ಬರಲಾರೆನು. ಇನ್ನು ಕಮಲಕುಮಾರಿಯನ್ನು ನನ್ನ ಬಳಿಯಿಂದ ಎಳೆದೊಯ್ಯುಕೊಂಡರೆ ಯತ್ನವಿಲ್ಲ. ನನಗೆ ನೀನು ಏನಾದರೂ ಹೇಳಬೇಕಿದ್ದರೆ ಇಲ್ಲಿಗೇ ಬಂದು ಹೇಳಿಹೋಗು, ಎಂದು ತಿರುಗಿ ಹೇಳಿಕಳಿಸಿಕೊಟ್ಟಳು. ಈ ಕಠೋರವಾದ ಉತ್ತರವನ್ನು ಕೇಳಿ ಉದಯಭಾನುವು ಬಹಳ ಸಿಟ್ಟಾದನು; ಆದರೆ ಮಾಡುತ್ತಾನೇನು? ಒಮ್ಮೆಲೇ ಕಮಲಕುಮಾರಿಯ ಬಳಿಯಿಂದ ದೇವಲದೇವಿಯನ್ನು ಅಗಲಿಸುವ ಧೈರ್ಯವು ಅವನಿಗಾಗಲೊಲ್ಲದು; ಆದ್ದರಿಂದ ತಾನೇ ಅಲ್ಲಿಯವರೆಗೆ ಹೋಗಿ ಉಪಚಾರದ ಮಾತುಗಳನ್ನಾಡಿ ಗುಪ್ತ ಸಂಗತಿಯನ್ನು ಬೈಲಿಗೆಳೆಯುವ ಯತ್ನ ಮಾಡಬೇಕೆಂದು ನಿಶ್ಚಯಿಸಿ, ಆದರಂತೆ ಅವನು ಒಂದುದಿವಸ ಅವರ ರಾಹುಟಿಯನ್ನು

ಹೊಕ್ಕನು. ಅವನನ್ನು ನೋಡಿದಕೂಡಲೇ ಅನಾಥರಾದ ಆ ಅಬಲೆಯರು ಅಂಜಿ ಗಡಗಡನೆ ನಡುಗಿದರು.

ಕಮಲಕುಮಾರಿಯ ಕ್ಷೀಣದೆಸೆಯನ್ನು ನೋಡಿ ಉದಯಭಾನುವಿನ ಪಾಷಾಣ ಹೃದಯವು ಕೂಡ ಕರಗಿನೀರಾಯಿತು. ತನ್ನ ಹೆದರಿಕೆಯಿಂದಲೇ ಈಕೆಯ ಸ್ಥಿತಿಯು ಹೀಗಾಗಿರ ಬಹುದೆಂಬ ವಿಚಾರವು ಪಕ್ಕನೇ ಅವನ ಮನಸ್ಸಿನಲ್ಲಿ ಹೊಳೆಯಲು, ಅವನು ಮನಸ್ಸಿನಲ್ಲಿ ಏನೋ ವಿಚಾರಮಾಡುತ್ತ ಸುಮ್ಮನೇ ನಿಂತುಕೊಂಡನು. ಕಮಲಕುಮಾರಿಯು ಸೊರಗಿ ಸೊರಗಿ ಕಡ್ಡಿಯಾಗಿದ್ದಳು. ಚಿವುಟಿದರೆ ಅವಳ ಮೈಯೊಳಗೆ ರಕ್ತವಿದ್ದಿಲ್ಲ; ಬರಿಯ ಎಲವುಗಳು ಮಾತ್ರ ಕಾಣುತ್ತಿದ್ದವು; ಮುಖವು ನಿಸ್ತೇಜವಾಗಿತ್ತು; ಕಣ್ಣುಗಳು ಒಳನಟ್ಟಿದ್ದವು. ಈ ಸ್ಥಿತಿಯಲ್ಲಿರುವ ಆ ಹತಭಾಗ್ಯಳನ್ನು ನೋಡುವ ಉದಯಭಾನುವಿನ ದುಷ್ಟ ವಿಚಾರಗಳು ಅಲ್ಲಿಂದಲ್ಲಿಯೇ ಅಳಿದು ಹೋದದ್ದೇನಾಶ್ಚರ್ಯವು? ಅವನು ಮನಸ್ಸಿನಲ್ಲಿ—ನಾನು ಕೆಲವು ದಿನಗಳವರೆಗೆ ಇವರ ಉಸಾಬರಿಗೆ ಬಾರದೆ ಬಿಟ್ಟರೆ ಮಾತ್ರ ಕಮಲಕುಮಾರಿಯು ಮೈಹಿಡಿದರೆ ಹಿಡಿಯಬಹುದು; ಇಲ್ಲವೇ ಬದುಕಿಯಾದರೂ ಬದುಕಿಯಾಳು. ಹಾಗೆಮಾಡದಿದ್ದರೆ ಇವಳು ಸ್ವಲ್ಪ ದಿವಸಗಳಲ್ಲಿ ಮರಣಹೊಂದುವದೇ ನಿಶ್ಚಯವು; ಎಂದು ಯೋಚಿಸಿ ದೇವಲದೇವಿಗೆ–ದೇವಲೇ, ನಾನು ಇಂದಿನಿಂದ ನಿಮ್ಮ ಉಸಾಬರಿಗೆ ಬರುವದಿಲ್ಲ; ಕಮಲಕುಮಾರಿಯ ಇಚ್ಛೆಯ ವಿರುದ್ಧವಾಗಿ ನಡೆಯುವದಿಲ್ಲ; ವದ್ಯ ನವಮಿಯ ದಿವಸ ಲಗ್ನಮಾಡಿಕೊಳ್ಳೆಂದು ಒಂದುಮಾತು ಆಕೆಯನ್ನು ಕೇಳುವೆನು, ಅದಕ್ಕೆ ಆಕೆಯು ಸಮ್ಮತಿಸದಿದ್ದರೆ, ತಿರುಗಿ ಮಾತಾಡದೆ ಆಕೆಯನ್ನು ರಜಪೂತಸ್ಥಾನಕ್ಕೆ ಕಳಿಸಿಕೊಡುವೆನು. ನೀನು ಮಾತ್ರ ಅವಳ ಆರೈಕೆಯನ್ನು ಚೆನ್ನಾಗಿ ಮಾಡು. ನಾನು ಇವಳನ್ನು ನೋಡಲಾರೆನು. ಈಗಲೇ ಈಕೆಯನ್ನು ಬಿಟ್ಟುಬಿಡುತ್ತಿದ್ದೆನು; ಆದರೆ ಕೆಟ್ಟ ಆಸೆಯು ಸುಟ್ಟು ಹೋಗಲೊಲ್ಲದು, ಎಂದು ಹೇಳಿ ಅವನು ತಟ್ಟನೇ ಅಲ್ಲಿಂದ ಹೊರಟುಹೋದನು.

ಉದಯಭಾನುವು ಕೇವಲ ಹಿತದ ಆಪ್ತನಂತೆ ಈ ಮಾತುಗಳನ್ನು ಯಾವ ಭಾವನೆ ಯಿಂದ ಆಡಿದನೆಂಬದನ್ನು ಹೇಳುವದು ಕಷ್ಟವು. ಎಷ್ಟೋ ಸಾರೆ ದುಷ್ಟಬುದ್ಧಿಯ ಮನುಷ್ಯರು ಕೂಡ ಸದ್ಬುದ್ಧಿಯುಳ್ಳವರಾಗಿ ತಮ್ಮ ದುಷ್ಟಕರ್ಮಗಳಿಗೆ ನಾಚಿ ಹಿಂದಕ್ಕೆ ಸರಿಯುವದುಂಟು. ಆ ಹೊತ್ತಿನ ಮಟ್ಟಿಗಾದರೂ ಅವರಲ್ಲಿ ನಿಜವಾದ ಅನುತಾಪವು ಹುಟ್ಟಿ, ಇನ್ನುಮೇಲೆ ಇಂಥ ದುಷ್ಕೃತ್ಯಗಳನ್ನು ಮಾಡಲಿಕ್ಕಿಲ್ಲೆಂದು ಅವರು ನಿಶ್ಚಯಿಸುವದೂ ಉಂಟು. ಇದರಂತೆ ಉದಯ ಭಾನುವಿನ ಸ್ಥಿತಿಯಾದರೂ ಆಗಿರಬಹುದು. ಅವರ ಪಶ್ಚಾತ್ತಾಪವು ಆಗಿನ ಮಟ್ಟಿಗಾದರೂ ನಿಜವಾದದ್ದಿರ ಬಹುದು; ಆದರೆ ಆ ಪಶ್ಚಾತ್ತಾಪವು ಕಡೆತನಕ ತಡೆಯುವದೋ ಹ್ಯಾಗೆಂಬದನ್ನು ನೋಡ ಬೇಕಾಗಿದೆ. ಯಾರಿಗೆ ಗೊತ್ತು ತನ್ನ ದುಷ್ಟಹೇತುವನ್ನು ಸಾಧಿಸಿಕೊಳ್ಳುವದಕ್ಕೆ ಕಮಲ ಕುಮಾರಿಯ ದೇಹದ ಸ್ಥಿತಿಯು ಅನುಕೂಲವಿಲ್ಲದ್ದರಿಂದ ಕಮಲಕುಮಾರಿಯು ಪುಷ್ಟಳಾಗಬೇಕೆಂದು ಆ ಕುಲಗೇಡಿಯು ಹೀಗೆ ಸವಿಮಾತುಗಳನ್ನು ಆಡಿದ್ದರೂ ಆಡಿರಬಹುದು. ಹ್ಯಾಗೇ ಇರಲಿ, ಅವನು ಕಮಲಕುಮಾರಿಯ ಬಳಿಗೆ ಬಂದು ಸಮಾಧಾನದ ಮಾತುಗಳನ್ನು ಆಡಿದ್ದು ನಿಜವು.

ಕಮಲಕುಮಾರಿಯ ದೇಹವು ಬಹು ಕ್ಷೀಣವಾಗಿತ್ತೆಂದು ಮೇಲೆ ಹೇಳಿರುತ್ತದೆ. ಹೌದು, ಆಗದೇನು ಮಾಡೀತು? ಉಂಡುಟ್ಟು ಸಮಾಧಾನದಿಂದಿದ್ದರೆ, ದೇಹದ ಸ್ಥಿತಿಯು ನೆಟ್ಟಗಿರ ಬೇಕಷ್ಟೇ. ಕಮಲಕುಮಾರಿಯ ನಿತ್ಯದ ಭಯಂಕರವಾದ ಕ್ರಮವನ್ನು ನೋಡಿದರೆ ಆಕೆಯು ಇಷ್ಟುದಿನ ಬದುಕಿದ್ದೇ ಆಶ್ಚರ್ಯವಾಗಿ ತೋರುತ್ತಿತ್ತು. ಆಕೆಯು ಬೆಳಗಿನಿಂದ ಸಂಜೆಯವರೆಗೆ ಸಂಜೆಯಿಂದ ಮುಂಜಾವಿನವರೆಗೆ ಒಂದೇಸವನೆ ಅಳುತ್ತ ಕುಳಿತುಕೊಳ್ಳುತ್ತಿದ್ದಳು. ತನ್ನ ಗಂಡನ ಪಾದುಕೆಗಳನ್ನು ಯಾವಾಗಲೂ ನೋಡುತ್ತ ಪತಿಯನ್ನು ಧ್ಯಾನಿಸುತ್ತ ಆ ಪಾದುಕೆಗಳ ಪೂಜೆ ಮಾಡುತ್ತ ದಿನಹಾಕುತ್ತಿದ್ದಳು; ಊಟಕ್ಕೆ ಬಡಿಸಿದ ಪಾತ್ರೆಯನ್ನು ಕೈಯಿಂದ ಮುಟ್ಟುತ್ತಿದ್ದಿಲ್ಲ. ದೇವಲದೇವಿಯು ದುಂಬಾಲು ಬಿದ್ದರೆ ಅದರೊಳಗಿನ ಹಾಲನ್ನಷ್ಟು ಕುಡಿಯುತ್ತಿದ್ದಳು; ಮಿತಿಮೀರಿ ಆಗ್ರಹಮಾಡಿದರೆ ಓಕರಿಸುತ್ತ ಎರಡು ತುತ್ತು ಅನ್ನವನ್ನು ಉಣ್ಣುತ್ತಿದ್ದಳು. ಔಷಧವನ್ನಂತೂ ಆಕೆಯು ತಕ್ಕೊಳ್ಳುತ್ತಿದ್ದೇ ಇಲ್ಲ. ಆತ್ಮಹತ್ಯ ಮಾಡಿಕೊಳ್ಳಬಾರದೆಂದು ಆಗಾಗ್ಗೆ ಮಾಡುವ ದೇವಲದೇವಿಯ ಉಪದೇಶವು ಸಹವ್ಯರ್ಥವಾಯಿತು. ನಾನು ಇನ್ನು ಬದುಕುವಹಾಗೆಯೇ ಇಲ್ಲವೆಂದು ಆಕೆಯು ಮೇಲೆ ಮೇಲೆ ಅನ್ನುತ್ತಿದ್ದಳು. ಹೀಗಿರಲು ಒಂದು ಚಮತ್ಕಾರದ ಸಂಗತಿಯು ಒದಗಿತು.

ದೇವಲದೇವಿಯು ಯಾವದೋ ಒಂದು ಕೆಲಸದ ಸಲುವಾಗಿ ಡೇರೆಯ ಬಾಗಿಲ ಕಡೆಗೆ ಬಂದು ಸ್ವಾಭಾವಿಕವಾಗಿ ಹೊರಗೆ ನೋಡಲು, ಅವಳ ದೃಷ್ಟಿಯು ಒಬ್ಬ ಕಾವಲುಗಾರನ ಮೇಲೆ ಬಿದ್ದಿತು. ಕೂಡಲೆ ಅವಳು ಸುಮ್ಮನೆ ನಿಂತುಬಿಟ್ಟಳು. ಅವನನ್ನು ನೋಡಿ ಅವಳಿಗೆ ಆಶ್ಚರ್ಯವಷ್ಟೇ ಅಲ್ಲ, ಆನಂದವೂ ಆಯಿತೆಂದು ಅವಳ ಮುಖಚರ್ಯದಿಂದ ಗೊತ್ತಾಗುತ್ತಿತ್ತು. ಅವಳ ಕಣ್ಣುಗಳಲ್ಲಿಯೂ, ಗಲ್ಲಗಳಲ್ಲಿಯೂ ವಿಚಿತ್ರವಾದ ಕಾಂತಿಯು ಒಪ್ಪುತ್ತಿತ್ತು. ಅವಳು ಆ ಆನಂದದ ಭರದಲ್ಲಿ ಬಹಳ ಹೊತ್ತಿನವರೆಗೆ ಅವನನ್ನು ನೋಡುತ್ತ ನಿಂತುಕೊಂಡಳು. ಅವಳ ಮನಸ್ಸಿನಲ್ಲಿ ಆ ಕಾವಲುಗಾರನೊಡನೆ ಮಾತಾಡಬೇಕೆಂಬ ವಿಚಾರವು, ಬಂದಿದ್ದರೂ ಬಂದಿರ ಬಹುದು; ಯಾಕಂದರೆ ಕಾರಣವಿಲ್ಲದೆ ಆಕೆಯು ಅಷ್ಟುಹೊತ್ತು ನಿಲ್ಲುವ ಸಂಭವವಿದ್ದಿಲ್ಲ. ಇಲ್ಲಿಯವರೆಗೆ ಎರಡನೇಯವರ ಸಂಗಡ ಮಾತಾಡುವ ಸಾಹಸಕ್ಕೆ ಹೋಗಿಲ್ಲೆಂಬ ವಿಚಾರದಿಂದ ಈಗಾದರೂ ಅವಳು ಮಾತಾಡುವದನ್ನು ಬಿಟ್ಟಿರಬಹುದು. ಮಾತಾಡಿದರೆ ಅನರ್ಥ ಒದಗುವ ಸಂಭವವೂ ಇತ್ತು; ಈ ಮೇರೆಗೆ ದೇವಲದೇವಿಯು ಬಹುದೂರದವರೆಗೆ ಲಕ್ಷಗೊಟ್ಟು, ಅವನೊಡನೆ ಮಾತಾಡದೆ ಹಿಂದಿರುಗಿ ಹೋಗುತ್ತಿರಲು, ಆ ಕಾವಲುಗಾರನು ಬಾಗಿಲಿಗೆ ನಿಂತು ಪಹರೆಮಾಡು ವವನಂತೆ ಡೇರೆಯ ಬಾಗಿಲಿಗೆ ಬಂದು ನಿಂತನು. ನಾನು ನಿಂತದ್ದನ್ನು ನೋಡಿ ಇವನು ಬಂದು ನಿಂತಿರಬಹುದೋ ಎಂದು ದೇವಲೆಯು ಶಂಕಿಸುತ್ತಿರಲು, ಅವನು ತೀರ ಬಾಗಿಲಿಗೆ ಬಂದನು. ಬಳಿಕ ಅವನು ಮೊಚ್ಚೆಗಳನ್ನು ನೆಟ್ಟಗೆ ಮಾಡಿಕೊಳ್ಳುವ ವನಂತೆ ಜಗ್ಗಿ ಹಿಂದಿನಿಂದ ಕಾಲು ತಕ್ಕೊಂಡು ಮೊಚ್ಚೆಯೊಳಗಿಂದ ಕಾಗದದ ಒಂದು ಸಣ್ಣಗುಳಿಗೆಯನ್ನು ಹಿಂದಿನಿಂದ ಡೇರೆಯೊಳಗೆ ಒಗೆದು, ತಿರುಗಾಡಿ ಪಹರೆಮಾಡುವವನಂತೆ ಮತ್ತೆ ತಿರುಗಾಡಹತ್ತಿದನು.

ದೇವಲದೇವಿಯು ಈ ಚಮತ್ಕಾರವನ್ನು ನೋಡುತ್ತ ನಿಂತಿದ್ದಳು. ಅವಳು ಕಾಗದದ ಆ ಸಣ್ಣಗಳಿಗೆಯನ್ನು ಬಿಚ್ಚಿ ಓದಿಕೊಳ್ಳಲು, ಏನೋ ಒಂದು ಆನಂದದ ಸುದ್ದಿಯು ತಿಳಿದಂತೆ ಅವಳು ಆನಂದಭರಿತಳಾದಳು. ಅವಳು ಅದೇ ಕೈಲಿ ಕಮಲಕುಮಾರಿಯ ಬಳಿಗೆ ಹೋಗಿ— ''ಕಮಲೇ, ಇನ್ನು ನಿಶ್ಚಯವಾಗಿ ನಿನ್ನ ಬಿಡುಗಡೆಯಾಯಿತೆಂದು ತಿಳಿ. ನೀನು ಸ್ವಲ್ಪವಾದರೂ ಚಿಂತೆಮಾಡಬೇಡ. ಜಾಣೆಯಾಗಿದ್ದರೆ ನಾನು ಹೇಳಿದಂತೆ ಮಾತ್ರ ಕೇಳು. ನಾನು ಇಲ್ಲಿಯವರೆಗೆ ನಿನ್ನ ಮುಂದೆ ಏನೂ ಹೇಳಿದ್ದಿಲ್ಲ. ಇನ್ನು ಮೇಲೆ ಮಾತ್ರ ಹೇಳಲಿಕ್ಕೆ ಅಡ್ಡಿಯಿಲ್ಲ. ಅಷ್ಟಕ್ಕಿಷ್ಟಕ್ಕೆ ನಿನ್ನ ಮುಂದೆ ಹೇಳುತ್ತ ಕೂಡ್ರಬೇಕು, ಯಾರಾದರೂ ಕೇಳಿ ಅನರ್ಥವಾಗಬೇಕು. ಈ ಉಸಾಬರಿ ಬೇಡೆಂದು ಬಿಟ್ಟಿದ್ದೆನು. ಇನ್ನು ಮೇಲೆ ನಿನ್ನ ಹಟಮಾರಿತನವನ್ನು ಬಿಟ್ಟುಬಿಡಬೇಕು ಕಂಡಿಯಾ! ಹಾದಿಯ ನಡೆಯುವ ಪ್ರಸಂಗಬಂದಾಗ ಕೈಕಾಲುಗೆಟ್ಟು ಸುಮ್ಮನೆ ಕುಳಿತೀ. ಮಾಡಿದ್ದೆಲ್ಲ ವ್ಯರ್ಥವಾಗಬೇಕಾದೀತು. ಇನ್ನು ಮೇಲೆ ಉಂಡುಟ್ಟು ಗಟ್ಟಿಮುಟ್ಟಿಯಾಗ:. ನಾನು ಈಗ ಎಲ್ಲಾ ಹೇಳಿದೆನೆಂದರೆ ನನ್ನ ಮಾತಿನ ಮಹತ್ವವು ಕಂಡುಬಂದೀತು. ಇನ್. ಈ ಉಪವಾಸ ವನವಾಸವನ್ನು ಬಿಟ್ಟುಬಿಡಕ್ಕಾ. ಇತ್ತ ಬಾ, ಎಲ್ಲ ಹೇಳುತ್ತೇನೆ.

ದೇವಲದೇವಿಯು ಹೀಗೆ ಮಾತಾಡಿ ಕಮಲಕುಮಾರಿಗೆ ಬಹು ಎಚ್ಚರದಿಂದ ಏನೋ ಕಿವಿಮಾತು ಹೇಳಿದಳು. ಆ ಮಾತುಗಳನ್ನು ಕೇಳುತ್ತಹೋದ ಹಾಗೆ ಕಮಲಕುಮಾರಿಯ ಮನಸ್ಸಿನಲ್ಲಿ ಬೇರೆ ಬೇರೆ ವಿಕಾರಗಳು ಉತ್ಪನ್ನವಾಗುತ್ತ ಹೋಗಿ ಅವುಗಳ ಲಕ್ಷಣಗಳು ಮುಖಚರ್ಯದಿಂದ ತೋರಹತ್ತಿದವು. ಮೊದಲು ಅವಳ ಮನಸ್ಸಿನಲ್ಲಿ ಸಂಶಯವು ಉತ್ಪನ್ನವಾಯಿತು. ಬರಬರುತ್ತ ಆ ಸಂಶಯವು ಅಳಿದುಹೋಗಿ ಅದರೆಡೆಯಲ್ಲಿ ಆನಂದವು ತಲೆದೋರಹತ್ತಿತು. ದೇವಲದೇವಿಯು ಎರಡು ಪತ್ರಗಳನ್ನು ತೋರಿಸಿದ ಕೂಡಲೆ ಕಮಲಕುಮಾರಿಗೆ ಪರಮಾವಧಿ ಹರ್ಷವಾಯಿತು. ಹರ್ಷದ ಭರದಲ್ಲಿ ಆಕೆಯು—ದೇವಲೇ, ಹೀಗೆಲ್ಲ ಆಗುವ ಹಾಗಿದ್ದರೆ, ಪುನಃ ನಾನು ಅಪ್ಪನ ಮೋರೆಯನ್ನು ನೋಡುವಹಾಗಿದ್ದರೆ ನಿನ್ನ............ ಹಾಗು ನಿನ್ನ ಈ ಪ್ರಕಾರದ ಉದ್ಗಾರವನ್ನು ಹೊರಗೆಡವುತ್ತಿರಲು, ದೇವಲದೇವಿಯು ತನ್ನ ಕೈಯಿಂದ ಕಮಲಕುಮಾರಿಯ ಬಾಯಿಮುಚ್ಚಿ—ಕಮಲೇ, ಏ ಕಮಲೇ! ಎಷ್ಟು ಗಟ್ಟಿಯಾಗಿ ಮಾತಾಡುತ್ತೀಯೇ! ನಿನ್ನ ಹುಚ್ಚು ಹಾಳಾಗಲಿ! ಏನು ಚಿಂತೆಯಿಲ್ಲವ್ವಾ, ನೆಟ್ಟಗೆ ಮಾಡುತ್ತೀ. ಇದಕ್ಕಾಗಿಯೇ ನಿನ್ನ ಮುಂದೆ ನಾನು ಇಲ್ಲಿಯವರೆಗೆ ಹೇಳಿದ್ದಿಲ್ಲ, ಈಗ ಹೇಳಿದನೋ ಹೇಳಲಿಲ್ಲವೋ ಅನ್ನುವಷ್ಟರೊಳಗೆ ಸುತ್ತುಮುತ್ತಲಿನವರೆಲ್ಲ ಕೇಳುವ ಹಾಗೆ ಗದ್ದಲ ಮಾಡಿಬಿಟ್ಟೆ; ಇದರಿಂದ ಇಲ್ಲಿಯವರೆಗೆ ಮಾಡಿದ ಕೆಲಸಗಳೆಲ್ಲ ಮಣ್ಣುಗೂಡಿ ಹೋಗಿ, ನಾವು ಮತ್ತಿಷ್ಟು ವಿಪತ್ತಿಗೆ ಗುರಿಯಾಗಬೇಕಾದೀತು. ಇನ್ನಾದರೂ ಸುಮ್ಮನಾಗು. ಹೊತ್ತುಬಿದ್ದರೆ ನಾಲ್ಕು ಹರದಾರಿ ನಡೆಯುವಂತೆ ಗಟ್ಟಿಮುಟ್ಟಿ ಯಾಗು, ಎಂದಳು. ಈಗ ಮಾತ್ರ ಕಮಲ ಕುಮಾರಿಯು ದೇವಲದೇವಿಗೆ ಅನುಕೂಲಳಾದಳು; ದೇವಲೆಯು ಹೇಳಿದಂತೆ ಕೇಳಬೇಕೆಂದು ನಿಶ್ಚಯಿಸಿದಳು. ಆಕೆಯು ದೇವಲೆಗೆ—ತಂಗೀ ದೇವಲೇ, ನೀನೂ ಅವರೂ ನನ್ನ ಸಲುವಾಗಿ ಇಷ್ಟು ಕಷ್ಟಬಡುತ್ತಿರಲು, ನಾನಾದರೂ ನಿನ್ನ ಮನಸ್ಸನ್ನು ಯಾಕೆ ನೋಯಿಸಲಿ? ಇನ್ನುಮೇಲೆ

ನೀನು ಹೇಳಿದಂತೆ ಕೇಳುತ್ತೇನೆ, ಇನ್ನಾದರೂ ಆಯಿತೇ, ಎಂದು ಹೇಳಿ ತನ್ನ ದಿನದ ಕ್ರಮವನ್ನು ತಿರುಗಿಸಿ ದೇವಲೆಯ ಹೇಳಿಕೆಯಂತೆ ಊಟ ಉಡಿಗೆಗಳನ್ನು ಮಾಡತೊಡಗಿದಳು.

ಹೀಗಾಗುತ್ತಾಗುತ್ತ ಉದಯಭಾನುವು ಒಮ್ಮೆ ದಕ್ಷಿಣಕ್ಕೆ ಬಂದು ಮುಟ್ಟಿದನು. ಅವನು ಬಾದಶಹನಿಂದ ತಾನು ಇಸುಕೊಂಡು ಬಂದಿದ್ದ ಪತ್ರಗಳನ್ನು ಜಸವಂತಸಿಂಗನಿಗೂ, ಔರಂಗಜೇಬನ ಮಗನಾದ ಮುಆಝೀಮನಿಗೂ ಕಳಿಸಿ, ಅವರವರ ದಂಡಿಗೆ ಅವರವರ ಬಳಿಗೆ ಹೋಗಲು ಅಪ್ಪಣೆಕೊಟ್ಟು ತಾನು ತನ್ನ ದಂಡಿನೊಡನೆ ಕೊಂಡಾಣೆಯ ಕೋಟೆಯಲ್ಲಿ ತಳವೂರಿದನು. ಆಮೇಲೆ ಅವನು ಜಸವಂತಸಿಂಗನಿಗೂ, ಶಿವಾಜಿಗೂ ಇರುವ ಸಂಬಂಧವನ್ನು ಕಂಡುಹಿಡಿಯುವದಕ್ಕಾಗಿ ಚಾರರನ್ನು ನಿಯಮಿಸಿದನು. ಈ ಪ್ರಯತ್ನದಲ್ಲಿ ಯಶಸ್ಸು ಬರಲಿ ಬಾರದಿರಲಿ ಅದರ ಚಿಂತೆ ಅವನಿಗಿದ್ದಿಲ್ಲ. ಅವನು ಜಸವಂತಸಿಂಗನ ಸಂಬಂಧದಿಂದ ಬಾದಶಹನ ಕಡೆಗೆ ಬರೆದು ಕಳಿಸಿ ಕೊಡತಕ್ಕ ಸಂಗತಿಗಳನ್ನು ಮೊದಲೇ ಗೊತ್ತುಮಾಡಿಕೊಂಡಿದ್ದನು. ಅದರಂತೆ ಅವನು ಕೊಂಡಾಣೆಯ ಕೋಟೆಗೆ ಬಂದ ಎಂಟು ದಿವಸಗಳ ಮೇಲೆ ಒಂದು ಪತ್ರವನ್ನು ಬರೆದು ಬಾದಶಹನಿಗೆ ಕಳಿಸಿದನು. ಅದರ ಅಭಿಪ್ರಾಯವೇನೆಂದರೆ—ಜಸವಂತಸಿಂಗನೂ, ಮುಆಝೀಮನೂ ಒಳಗಿಂದೊಳಗೆ ಶಿವಾಜಿಗೆ ಅನುಕೂಲರಾಗಿರುವರು. ಶಹಾಜಾದಾನ (ಮುಆಝೀಮನ) ಉಪಾಯ ಸಾಗದ್ದರಿಂದ ಅವನು ಜಸವಂತಸಿಂಗನ ವಿಚಾರಕ್ಕೆ ಸಮ್ಮತಿ ಪಟ್ಟಿರಬಹುದು. ಜಸವಂತಸಿಂಗನು ಮಾತ್ರ ಸಂಪೂರ್ಣ ರಾಜದ್ರೋಹಿಯಾಗಿದ್ದು, ಶಿವಾಜಿಯ ಕೈಯೊಳಗಿನ ಗೊಂಬೆಯಾಗಿದ್ದಾನೆ. ತಾವು ನನ್ನ ಸಂಗಡ ಕಳಿಸಿದ ಪತ್ರವನ್ನು ಕೂಡ ಅವನು ಶಿವಾಜಿಗೆ ಕೊಟ್ಟಿರ ಬಹುದೆಂಬಂತೆ ಕಾಣುತ್ತದೆ. ಗೋವಳಕೊಂಡ ವಿಜಾಪುರ ರಾಜ್ಯಗಳನ್ನು ತಕ್ಕೊಳ್ಳಬೇಕೆಂತಲೂ, ಶಿವಾಜಿಯಮೇಲೆ ವರ್ಚಸ್ಸು ಕೂಡ್ರಿಸಬೇಕೆಂತಲೂ, ಬಾದಶಹರು ದಂಡು ಕಳಿಸಿರುವಿರಷ್ಟೇ. ಆ ರಾಜ್ಯಗಳು ಮೊಗಲರ ದಂಡುಗಳಿಂದ ಗೆಲ್ಲಲ್ಪಟ್ಟು, ಅವುಗಳ ಸ್ವಾಮಿತ್ವವು ಮಾತ್ರ ಶಿವಾಜಿಯದಾಗ ಬಹುದಾಗಿ ನನಗೆ ತೋರುತ್ತದೆ. ನನ್ನ ಬರಹದ ವಿಷಯವಾಗಿ ಎಳ್ಳಷ್ಟಾದರೂ ಸಂಶಯವನ್ನು ತಕ್ಕೊಳ್ಳಬಾರದು. ದಕ್ಷಿಣದ ಸುಭೆಯು ಶಿವಾಜಿಯ ಕೈಸೇರಿ, ಆತನು ಬೇರೆ ಹಲವು ರಾಜ್ಯಗಳಿಗೆ ಒಡೆಯನಾಗಬಹುದು. ಹೀಗೆ ಬಲಿಷ್ಠನಾದ ಶಿವಾಜಿಯು ಸ್ವತಃ ತಮಗೂ ಹಣಿಯಲಿಕ್ಕಿಲ್ಲ. ಜಸವಂತಸಿಂಗನ ಅನುಕೂಲ್ಯ ದಿಂದಲೇ ಶಿವಾಜಿಯು ಇಷ್ಟು ಪ್ರಬಲನಾಗಿದ್ದಾನೆ. ಆದ್ದರಿಂದ ಜಸವಂತಸಿಂಗನನ್ನು ದಕ್ಷಿಣ ದಿಂದ ಕರಿಸಿಕೊಳ್ಳುವದೇ ಇದಕ್ಕೆ ತಕ್ಕ ಉಪಾಯವು. ಜಸವಂತಸಿಂಗನು ದಕ್ಷಿಣದಲ್ಲಿರುವವರೆಗೆ ಶಿವಾಜಿಯನ್ನು ಸೆರೆಹಿಡಿಯುವದಾಗಲಿ, ಅವನ ಬಂಡನ್ನು ಮುರಿಯುವದಾಗಲಿ ಯಾರಿಗೂ ಶಕ್ಯವಿಲ್ಲ; ಯಾಕಂದರೆ ಜಸವಂತಸಿಂಗನು ಇಲ್ಲಿಯವರೆಗೆ ಆ ಪುಂಡನನ್ನು ಬೇಕಾದ ಹಾಗೆ ನಡೆಯಗೊಟ್ಟಿದ್ದಾನೆ. ಬಾದಶಹನ ವಿರೋಧಿಗಳಾದ ಮಹಾರಾಷ್ಟ್ರ ಸರದಾರರೆಲ್ಲ ಶಿವಾಜಿಯನ್ನು ಕೂಡಿಕೊಂಡಿದ್ದಾರೆ. ಆದಷ್ಟು ಬೇಗನೆ ತಕ್ಕ ಬಿಗುವು ಮಾಡದಿದ್ದರೆ ಪರಿಣಾಮ ವಾಗದು. ಜಸವಂತಸಿಂಗನು ಇಲ್ಲಿ ಇರುವವರೆಗೆ ಯಾರ ಆಟವೂ ನಡೆಯುವ ಹಾಗಿಲ್ಲ. ಅವನು ತಮ್ಮವರಾಗಿ ಪ್ರಯತ್ನಮಾಡುವವರಿಗೆ ಹಲವು ವಿಘ್ನಗಳನ್ನುಂಟುಮಾಡುವನು. ಇದ್ದ

ಸಂಗತಿಯನ್ನು ಸನ್ನಿಧಿಗೆ ಅರಿಕೆ ಮಾಡಿಕೊಂಡಿದ್ದೇನೆ. ಅದನ್ನೆಲ್ಲ ಚಿತ್ತಕ್ಕೆ ತಂದು, ಸೇವಕನನ್ನು ಆಜ್ಞಾಪಿಸಬೇಕು. ನಾನು ತಮ್ಮ ಚರಣದ ಆಜ್ಞೆಯಂತೆ ಕೊಂಡಾಣೆಯ ಕೋಟೆಯೊಳಗೆ ಇದ್ದೇನೆ, ಆ ಕೋಟೆಯ ಸಲುವಾಗಿ ಎಳ್ಳಷ್ಟಾದರೂ ಚಿಂತೆಮಾಡಬಾರದು. ಇನ್ನು ಮೇಲೆ ಶಿವಾಜಿಯು ಈ ಕೋಟೆಯನ್ನು ಕಣ್ಣೆತ್ತಿ ನೋಡುವಹಾಗಿಲ್ಲ, ನಾನು ಈ ದುರ್ಗಕ್ಕೆ ಬಂದಾಗಿನಿಂದ ಅಲ್ಲಿಯ ಕೋಳೀ ಜನರಮೇಲೆ ದರ್ಪವನ್ನು ಚೆನ್ನಾಗಿ ಕೂಡ್ರಿಸಿದ್ದೇನೆ. ಎಲ್ಲ ವ್ಯವಸ್ಥೆ ನೆಟ್ಟಗದೆ; ಆದರೆ ಜಸವಂತಸಿಂಗನ ಒತ್ತಾಸೆಯಿಂದ ಆ ಪುಂಡಶಿವಾಜಿಯು ದಕ್ಷಿಣದಲ್ಲೆಲ್ಲ ಪುಂಡಾಟಿಕೆಯನ್ನು ನಡಿಸಿದ್ದಾನೆ. ಇಂಥ ಪ್ರಸಂಗದಲ್ಲಿ ಕೋಟೆಯನ್ನೊಂದು ನಮ್ಮ ಕೈಯಲ್ಲಿಟ್ಟುಕೊಂಡರೆ ಆಗುವದೇನು? ಬಾದಶಹರ ಅಪ್ಪಣೆಯಾದರೆ ಇನ್ನು ತಿಂಗಳೊಪ್ಪತ್ತಿನಲ್ಲಿ ಶಿವಾಜಿಯ ಅಧಿಕಾರವನ್ನು ಬಕ್ಕಬೋರಲು ಹಾಕಿ ಅವನನ್ನು ಚರಣ ಸನ್ನಿಧಿಗೆ ಸೆರೆಹಿಡ ಕೊಂಡು ಬರುತ್ತೇನೆ. ನಾನು ಇಲ್ಲಿಗೆ ಬಂದು ನೋಡಿದಾಗಿನಿಂದ ನನಗೆ ಯಾವದೂ ಅಶಕ್ಯವಾಗಿ ತೋರುವದಿಲ್ಲ; ಆದರೆ ಜಸವಂತಸಿಂಗನನ್ನು ಮಾತ್ರ ತೀವ್ರ ಉತ್ತರಕ್ಕೆ ಕರಿಸಿಕೊಳ್ಳಬೇಕು. ಶಹಾಜಾದಾ ಮುಆಝೀಮರು ನನ್ನ ಕೈಕೆಳಗೆ ನಡೆಯುವಂತೆ ಮಾಡಿದರೆ ಅವರ ಮನಸ್ಸನ್ನು ತಿದ್ದಿ ತಮ್ಮ ಚರಣದಲ್ಲಿ ಯಾವಾಗಲೂ ಪ್ರೇಮಭಾವದಿಂದ ನಡಕೊಳ್ಳುವಂತೆ ನಿಶ್ಚಯವಾಗಿ ವ್ಯವಸ್ಥೆಮಾಡುವೆನು. ಜಸವಂತಸಿಂಗನ ಉಪದೇಶದಿಂದಲೇ ಅವರು ಕೆಟ್ಟು, ಕಾಫರನಾದ ಶಿವಾಜಿಗೆ ಅನುಕೂಲರಾಗಿ ನಡೆಯುತ್ತಿರುವರು. ಖಾವಂದರವರ ಅಪ್ಪಣೆಗೆ ಅಧೀನನಾಗಿರುವೆನು. ಸದ್ಯಕ್ಕೆ ನಾನು ಕೊಂಡಾಣೆಯ ಛಾವಣಿಯಲ್ಲಿದ್ದು ಈ ಪತ್ರವನ್ನು ಬೇಕಂತ ಒಂಟೆಯ ಸವಾರನ ಕೂಡ ಕಳಿಸಿದ್ದೇನೆ.

ಉದಯಭಾನುವು ಈ ಮೇರೆಗೆ ಪತ್ರವನ್ನು ಕಳಿಸಿ ಮುಂದೆ ಏನಾಗುವದೆಂಬದನ್ನು ಎಣಿಕೆ ಹಾಕುತ್ತ ಮಾಘವದ್ಯ ನವಮಿಯು ಎಷ್ಟು ದಿವಸ ಉಳಿಯಿತೆಂಬದನ್ನು ಬೊಟ್ಟು ಹಾಕಿ ಎಣಿಸುತ್ತ ಕುಳಿತುಕೊಂಡನು. ಹೊನ್ನು ಹೆಣ್ಣುಗಳ ಹುಚ್ಚು ಹಿಡಿದವರ ಗತಿಯು ಹೀಗೆಯೇ ಸರಿ.

## ಮಹಾರಾಜರ ಚಿಂತೆ

ತಾನಾಜಿ ಸೇಲಾರಮಾವ ಮೊದಲಾದವರ ಊಟ ಉಡಿಗೆಗಳಾದರೂ ಮಹಾರಾಜರು ಏಕಾಂತಗ್ರಹದಿಂದ ಹೊರಬೀಳದ್ದನ್ನು ನೋಡಿ ಎಲ್ಲರಿಗೂ ಆಶ್ಚರ್ಯವಾಯಿತು. ಕೈಕೆಳಗಿನ ಜನರ ಊಟ-ಉಡಿಗೆಗಳನ್ನು ಪ್ರೇಮಪೂರ್ವಕವಾಗಿ ವಿಚಾರಿಸುವದು ಮಹಾರಾಜರ ಹುಟ್ಟು ಗುಣವಾಗಿತ್ತು, ಯುದ್ಧಕ್ಕೆ ಹೋದಾಗ ದಂಡು ಬೀಡುಬಿಟ್ಟ ಕೂಡಲೇ ಮೊದಲು ಒಮ್ಮೆ ಎಲ್ಲರ ಊಟವಾಯಿತೋ ಇಲ್ಲವೋ ಎಂಬುದನ್ನು ವಿಚಾರಿಸುವದಕ್ಕಾಗಿ ಅವರು ಛಾವಣಿಯನ್ನೆಲ್ಲ ತಿರುಗುತ್ತಿದ್ದರು. ಪ್ರತಿಯೊಬ್ಬ ಸರದಾರನು, ಸಿಪಾಯಿಯು, ಬಾಜಾರ ಬುಣಗಿನವರು ಇವರೆಲ್ಲರ ಊಟವಾದದ್ದನ್ನು ಕಂಡು ಆಮೇಲೆ ತಮ್ಮ ಊಟದ ವಿಚಾರವನ್ನು

ಮಾಡುತ್ತಿದ್ದರು. ಹೀಗೆ ಸಣ್ಣ-ಪುಟ್ಟ ಸಂಗತಿಗಳ ಕಡೆಗೂ ಲಕ್ಷಗೊಡುತ್ತಿದ್ದುದರಿಂದ ಪ್ರತಿಯೊಬ್ಬನು ಮಹಾರಾಜರ ಮೇಲೆ ಲೋಭಮಾಡುತ್ತಿದ್ದನು. ಮಹಾರಾಜರ ಪ್ರೀತಿಯು ತನ್ನ ಮೇಲೆ ಇರುವದೆಂದು ಪ್ರತಿಯೊಬ್ಬನು ಭಾವಿಸುತ್ತಿದ್ದನು. ಈ ಭಾವನೆಯಿಂದಲೇ ಪ್ರತಿಯೊಬ್ಬನು ಬುದ್ಧಿಪೂರ್ವಕವಾಗಿ ಮಹಾರಾಜರ ಸೇವೆಯನ್ನು ಮಾಡಲಿಕ್ಕೆ ಹಾತೊರೆಯುತ್ತಿದ್ದನು. ಹೀಗೆ ಸ್ವಾಮಿನಿಷ್ಠನಾಗಿದ್ದ ಪ್ರತಿಯೊಬ್ಬ ದಂಡಾಳುವು ತನ್ನ ಪ್ರಾಣವನ್ನು ಮನಃಪೂರ್ವಕವಾಗಿ ಮಹಾರಾಜರ ಚರಣಕ್ಕರ್ಪಿಸಿದ್ದೇನಾಶ್ಚರ್ಯವು? ಮಹಾರಾಜರು ಯಾವನೊಬ್ಬನಿಗೆ ಯಾವದೊಂದು ಕಾರ್ಯವನ್ನು ಹೇಳುವದೊಂದೇ ತಡ, ಅದನ್ನು ಮಾಡುವದರಿಂದ ಕೂಡಲೇ ಸ್ವರ್ಗಪ್ರಾಪ್ತಿಯಾಗುತ್ತದೆಂತಲೇ ಅವನು ತಿಳಿಯುತ್ತಿದ್ದನು. ಮಹಾರಾಜರ ಸ್ಮರಣಶಕ್ತಿಯಾದರೂ ವಿಚಿತ್ರವಾದದ್ದಿತ್ತು ಅವರು ಯಾವನೊಬ್ಬನನ್ನು ಒಮ್ಮೆ ನೋಡಿ ಅವನ ಊರುಕೇರಿಗಳನ್ನೂ ಆಪ್ತೇಷ್ಟರನ್ನೂ ಒಮ್ಮೆ ಕೇಳಿದರೆ ಸಾಕು. ಆ ಮನುಷ್ಯನು ಎಲ್ಲಿಯಾದರೂ ಆಕಸ್ಮಿಕವಾಗಿ ಭೆಟ್ಟಿಯಾದರೆ ಅವನನ್ನು ಹೆಸರ್ಗೊಂಡು ಕರೆದು, ಅವನ ಹಾಗೂ ಅವನ ಆಪ್ತೇಷ್ಟರ ಕ್ಷೇಮಸಮಾಚಾರವನ್ನು ಕೇಳಿದರೆಂತಲೇ ತಿಳಿಯಬೇಕು. ಹೀಗಾಗಲು, ಆ ಭೆಟ್ಟಿಯಾದ ಮನುಷ್ಯನು—ಆಹಾ! ಮಹಾರಾಜರು ಬಡವನ ಮೇಲೆ ಎಷ್ಟು ಲೋಭಮಾಡುತ್ತಾರಲ್ಲ! ಒಮ್ಮೆ ಎಲ್ಲಿಯೋ ಭೆಟ್ಟಿಯಾಗಿತ್ತು; ಅಷ್ಟಕ್ಕೇ ಊರುಕೇರಿ, ಆಪ್ತರು ಇಷ್ಟರು ಮುಂತಾದವರ ಕ್ಷೇಮವನ್ನು ಸಹ ಕೇಳಿದರು; ಅಂದಬಳಿಕ ನಮ್ಮ ಮೇಲೆ ಇವರ ಪ್ರೇಮವು ವಿಶೇಷವಾಗಿರುವದು, ಎಂದು ಭಾವಿಸುವಾಗ ಆನಂದದಿಂದ ಅವನ ಮೈ ಉಬ್ಬುತ್ತಿತ್ತು.

ಈ ಮೇರೆಗೆ ಶಿಪಾಯಿಗಳ ಯೋಗಕ್ಷೇಮವನ್ನು ಕೂಡ ಮಮತೆಯಿಂದ ನೋಡುವ ಮಹಾರಾಜರು ತಾನಾಜೀ, ಶೇಲಾರಮಾಮಾ ಮೊದಲಾದವರು ಲಗ್ನಕ್ಕೆ ಕರೆಯಬಂದಿರಲು, ಅವರ ಯೋಗಕ್ಷೇಮಕ್ಕೆ ಬಾರದಿರುವದನ್ನು ನೋಡಿ ಎಲ್ಲರೂ ಆಶ್ಚರ್ಯಪಟ್ಟದ್ದು ಸ್ವಾಭಾವಿಕವೇ ಸರಿ. ಮಹಾರಾಜರು ಏನು ಮಾಡುತ್ತಿರುವರೆಂಬದನ್ನು ನೋಡಿ ಬರಲಿಕ್ಕೆ ಜೀಜಾಬಾಯಿಯವರು ಒಬ್ಬ ಪ್ರತಿಹಾರನನ್ನು ಕಳಿಸಿದರು. ಅವನು ಏಕಾಂತಗೃಹಕ್ಕೆ ಹೋಗಿ ಬಂದು—ಮಹಾರಾಜರು ಇನ್ನೂ ತಮ್ಮ ಏಕಾಂತಮಂದಿರದಲ್ಲಿಯೇ ಇರುತ್ತಾರೆಂತಲೂ ಎಲ್ಲಿಂದಲೋ ಪತ್ರವನ್ನು ತಂದ ಹೇಜೀಬನು ಇನ್ನೂ ಹೊರಗೆ ಬಂದಿರುವದಿಲ್ಲೆಂತಲೂ ಹೇಳಿದನು. ಅದನ್ನು ಕೇಳಿ ಮಹಾರಾಜರು ಯಾವದೋ ಒಂದು ಮಹತ್ವದ ಕೆಲಸದಲ್ಲಿ ತೊಡಗಿರುವರೆಂದು ಎಲ್ಲರೂ ತಿಳಕೊಂಡರು. ಮಹಾರಾಜರು ಬಾರದ್ದರಿಂದ ತಾನಾಜಿಯೇ ಮೊದಲಾದವರ ಯೋಗಕ್ಷೇಮದಲ್ಲಿ ಕೊರತೆ ಯಾದೀತೆನ್ನುವಹಾಗಿದ್ದಿಲ್ಲ. ಜೀಜಾಬಾಯಿಯವರ ಸ್ವತಃ ಅವರ ಯೋಗಕ್ಷೇಮವನ್ನು ನೋಡಿ ಕೊಳ್ಳುತ್ತಿದ್ದರು. ಇಂಥ ಕೆಲಸಗಳಲ್ಲಿ ಅವರು ಮಹಾರಾಜರಿಗಿಂತ ಹತ್ತುಪಟ್ಟು ಮಿಗಿಲಾಗಿದ್ದರು. ಮಹಾರಾಜರು ಇಷ್ಟುಹೊತ್ತು ಏಕಾಂತಮಂದಿರದಲ್ಲಿ ಕುಳಿತದ್ದರಿಂದ ಅವರಿಗೆ ಯಾವದಾದರೊಂದು ಚಿಂತೆಯ ಪ್ರಸಂಗವು ಒದಗಿರಬಹುದೆಂದು ತಾನಾಜಿಯು ಕೂಡಲೇ ತರ್ಕಿಸಿದನು. ಅವನು ಆ ಚಿಂತೆಯ ಕಾರಣವನ್ನು ಯಾವಾಗ

ಕೇಳೇನು? ಕೇಳಿದಕೂಡಲೇ ಅದರ ನಿವಾರಣವನ್ನು ಯಾವಾಗ ಮಾಡೇನು? ಎಂದು ಆತುರಪಡುತ್ತಿದ್ದನು. ಅವನು ಊಟಮಾತ್ರ ಮಾಡಿದನು; ಅವನಿಗೆ ಏನೇನು ಉಂಡೆನೆಂಬುದರ ಅರಿವು ಉಳಿಯಲಿಲ್ಲ ಅವನ ಎಲ್ಲ ಲಕ್ಷವು ಮಹಾರಾಜರ ಕಡೆಗೆ ಹೋಗಿತ್ತು ಜೀಜಾಬಾಯಿ ಯವರು ಸೇಲಾರಮಾವನ ಸಂಗಡ ಒಂದೇಸವನೆ ಮಾತಾಡುತ್ತಿದ್ದರು; ಚಿಕ್ಕವನಾದ ರಾಯಬಾನಿಗೆ ಹಲವು ನಗಿಚಾಟಗಿಯ ಪ್ರಶ್ನೆಗಳನ್ನು ಕೇಳುತ್ತಿದ್ದರು; ಆ ಪುಂಡನು ಅವುಗಳಿಗೆ ಉತ್ತರ ಕೊಡಲು, ಕೇಳಿ ಕೌತುಕಪಡುತ್ತಿದ್ದರು. ನಡನಡುವೆ ಅವರು ತಾನಾಜಿಯನ್ನೂ ಮಾತಾಡಿಸುತ್ತಿದ್ದರು. ತಾನಾಜಿಯಾದರೂ ಅವರಿಗೆ ಉತ್ತರಕೊಡುತ್ತಿದ್ದನು; ಆದರೆ ಇವುಗಳಲ್ಲೊಂದರ ಕಡೆಗೂ ಅವನ ಲಕ್ಷವಿದ್ದಿಲ್ಲ ಈ ಸಂಗತಿಯನ್ನು ಜೀಜಾಬಾಯಿಯವರು ಕಂಡುಹಿಡಿದರು. ಇನ್ನೂವರೆಗೆ ಮಹಾರಾಜರು ಬಾರದ್ದನ್ನು ನೋಡಿ ಅವರು ಯಾವದೋ ಒಂದು ದೊಡ್ಡ ವಿಚಾರದಲ್ಲಿ ತೊಡಗಿರುವರೆಂಬ ವಿಚಾರವು ತಾನಾಜಿಯ ಮನಸ್ಸಿಗೆ ಹೊಳೆದದ್ದರಿಂದ ಅವನು ಈ ಶೂನ್ಯಭಾವವನ್ನು ತಾಳಿರುವನೆಂತಲೂ ಜೀಜಾಬಾಯಿ ಯವರು ತಿಳಕೊಂಡರು. ತನ್ನ ಮಗನ ಮೇಲೆ ತಾನಾಜಿಯಂಥ ವೀರನ ನಿಸ್ಸೀಮವಾದ ಭಕ್ತಿಯು ಇರುವದನ್ನು ನೋಡಿ ಅವರು ಕೌತುಕಪಟ್ಟು ಸಮಾಧಾನವನ್ನು ತಾಳಿದರು. ತಾನಾಜಿಯ ಈ ಭಕ್ತಿಯ ಅನುಭವವು ಆ ಪ್ರೇಮಲಸ್ವಭಾವದ ತಾಯಿಗೆ ಈವೊತ್ತೇ ಬಂತೆನ್ನುವಂತೆ ಇದ್ದಿಲ್ಲ; ಆದರೆ ಆ ಭಕ್ತಿಯ ಮಹಾತ್ಮವೇ ಅಂತಹದು; ಅದು ನಿದರ್ಶನಕ್ಕೆ ಬಂದಬಂದಾಗೆಲ್ಲ ಅದರ ವಿಷಯವಾಗಿ ಕೌತುಕವು ಉತ್ಪನ್ನವಾಗದೆ ಇರುವದಿಲ್ಲ.

ಹೀಗೆ ಮೌನವನ್ನು ತಾಳಿ ಕುಳಿತಿರುವ ತಾನಾಜಿಯನ್ನು ಕುರಿತು ಜೀಜಾಬಾಯಿಯವರು ವಿನೋದದಿಂದ—ತಾನಾಜಿರಾಯರೇ, ನಾನು ಇಷ್ಟು ಹೊತ್ತಿನವರೆಗೆ ನಿಮ್ಮ ಸಂಗಡ ಮಾತಾಡುತ್ತ ಕುಳಿತಿದ್ದರೂ ಆ ಮಾತುಗಳ ಕಡೆ ನಿಮ್ಮ ಲಕ್ಷವೇ ಇಲ್ಲ; ಅದು ಎರಡನೆಯ ಕಡೆಗೆ ಹೋದಂತೆ ತೋರುತ್ತದೆ. ಮಹಾರಾಜರು ಬಳಿಯಲ್ಲಿ ಇಲ್ಲದಿದ್ದರೆ ನಮ್ಮ ಮಾತುಗಳ ಕಡೆಗೆ ಸಹ ನಿಮ್ಮ ಲಕ್ಷವಿರಬಾರದೇನು? ಯಾಕೆ; ಅವರು ನಿಮ್ಮ ಸಮಾಚಾರವನ್ನು ನೋಡಿ ಕೊಳ್ಳಲಿಕ್ಕೆ ಬರಲಿಲ್ಲವೆಂದು ನಿಮಗೆ ಸಂಕೋಚವಾಗುವದೋ ಹ್ಯಾಗೆ? ನಾವು ಯೋಗ ಕ್ಷೇಮವನ್ನು ತಕ್ಕೊಂಡರೂ ಅದರಿಂದ ಏನೂ ಉಪಯೋಗವಾಗಲಿಲ್ಲವಷ್ಟೇ? ಸೇಲಾರ ಮಾವಾ, ನಿಮ್ಮ ಸ್ಥಿತಿಯು ಮಾತ್ರ ಹಾಗೆ ಇರುವದಿಲ್ಲ, ನಾವೂ ನೀವೂ ಮುದುಕಮನುಷ್ಯರು. ನಿಮ್ಮ ಸಮಾಚಾರವನ್ನು ನಾವು ತಕ್ಕೊಂಡರೂ ಬರುವದು, ಎಂದು ನುಡಿದರು.

ಜೀಜಾಬಾಯಿಯವರ ಈ ವಿನೋದದ ಮಾತುಗಳನ್ನು ಕೇಳಿ ತಾನಾಜಿಯು ಸ್ವಲ್ಪ ಎಚ್ಚತ್ತು—ಛೇ, ಛೇ. ಅಪ್ಪನವರೇ, ತಾವು ಹೀಗೆ ಮನಸ್ಸಿನಲ್ಲಿ ಎಣಿಸಬಾರದು. ಈ ವಿಚಾರವು ಅಪ್ಪನವರ ಮನಸ್ಸಿನಲ್ಲಿಯಾದರೂ ಹೇಗೆ ಬಂದಿತು! ನಿಮಗಿಂತ ಹೆಚ್ಚಿನ ಸಮಾಚಾರವನ್ನು ಮಹಾರಾಜರು ತಕ್ಕೊಳ್ಳುವದಾದರೂ ಏನು? ಆದರೆ ಇಷ್ಟು ಹೊತ್ತಾದರೂ ಅವರು ಏಕಾಂತ ಗೃಹದಿಂದ ಬಾರದ್ದನ್ನು ನೋಡಿ, ಯಾವದೋ ಒಂದು ಚಿಂತೆಯ ಕಾರಣವು ಅವರ ಕಿವಿಗೆ ಮುಟ್ಟಿರಬಹುದೆಂಬ ಸಂಶಯವು ಮನಸ್ಸಿಗೆ ಸ್ವಲ್ಪ ಬಾಧಿಸಿತು, ಎರಡನೆಯದೇನೂ ಇಲ್ಲ.

ಪ್ರತ್ಯಕ್ಷ ಅಂಬಾಬಾಯಿಯಾದ ತಾವು ನಮ್ಮ ಸಮಾಚಾರವನ್ನು ತಕ್ಕೊಳ್ಳುತ್ತಿರಲು, ಮತ್ತೆ ಯಾರ ಆಶೆಯು ನಮಗಿರುವದು! ಅವ್ವನವರೇ, ಯಾವಾಗಲೂ ಮಹಾರಾಜರ ಒಂದಿಲ್ಲೊಂದು ಸೇವೆಯು ತನ್ನಿಂದ ಘಟಿಸಬೇಕೆಂತಲೂ, ಅವರು ಯಾವಾಗಲೂ ನಿಶ್ಚಿಂತರಾಗಿರಬೇಕೆಂತಲೂ ಈ ತಾನಾಜಿಯು ಯಾವಾಗಲೂ ಹಾರಯಿಸುತ್ತಿರುತ್ತಾನೆ. ಯಾಕೆ ಮಾವಾ, ಈ ಭಾವನೆಯಿಂದ ನಾವು ಯಾವಾಗಲೂ ಸೇವಾತತ್ಪರರಾಗದಿದ್ದರೆ, ನಾವು ಮಹಾರಾಜರ ಸೇವಕರು ಹ್ಯಾಗಾಗುವೆವು?

ಈ ಮೇರೆಗೆ ಮಾತಾಡುತ್ತಿರಲು, ಮಹಾರಾಜರು ಏಕಾಂತಗ್ರುಹದಿಂದ ಹೊರಬಿದ್ದು ಇತ್ತಕಡೆಗೆ ಬರುವರೆಂಬ ವರ್ತಮಾನವು ಬಂದಿತು. ಅಷ್ಟರಲ್ಲಿ ತಾನಾಜಿಯ ಹಾಗೂ ಸೇಲಾರ ಮಾವನ ಊಟವಾಗಿತ್ತು ಅದನ್ನು ನೋಡಿದ ಕೂಡಲೇ ಮಹಾರಾಜರಿಗೆ ಸ್ವಲ್ಪ ಆಶ್ಚರ್ಯ ವಾದಂತೆ ತೋರಿತು. ಅವರು ಆ ಅಳಿಯಮಾವಂದಿರನ್ನು ಕುರಿತು—ಎಲ! ನಾವು ಬರುವದಕ್ಕೆ ಸ್ವಲ್ಪ ತಡವಾದ ಮಾತ್ರದಿಂದ ನೀವು ಊಟವನ್ನು ಸಹ ನೆಟ್ಟಗೆ ಮಾಡಬಾರದೇನು? ಈ ಕೆಲಸದಲ್ಲಿ ನಾವು ತಪ್ಪಿದ್ದು ನಿಜವು; ಆದರೆ ಮಾವನವರೇ, ತಾವು ಹುಡುಗರಾದ ನಮ್ಮ ಸಮಾಚಾರವನ್ನು ತಕ್ಕೊಳ್ಳಬೇಕೋ, ನಾವು ಸಮಾಚಾರವನ್ನು ತಕ್ಕೊಳ್ಳಲಿಕ್ಕೆ ಬರಲಿಲ್ಲವೆಂದು ಸಿಟ್ಟಾಗಿ ಅವಸರದಿಂದ ಊಟಮಾಡಿ ಏಳಬೇಕೋ? ಮನೆ ಯಾರದು? ನಿಮ್ಮದಿರುತ್ತದೆ. ನಿಮ್ಮ ಮನೆಯಲ್ಲಿ ನಿಮ್ಮ ಸಮಾಚಾರವನ್ನು ನೀವಲ್ಲದೆ ಮತ್ತೆ ಯಾರುತಕ್ಕೊಳ್ಳುವರು? ಹೊರತು ಅವ್ವನವರು ಇಲ್ಲೇ ಇದ್ದರಲ್ಲವೇ? ತಾನಾಜಿಯು ಇಂದೇ ಬಂದಿದ್ದಾನೆ. ಆತನು ನಿಮ್ಮವನಲ್ಲ, ನಮ್ಮವನು. ಅವನಾದರೂ ನಿಮ್ಮ ಸಮಾಚಾರ ತಕ್ಕೊಳ್ಳಬೇಕು. ಅವ್ವಾ, ಇವರು ನೆಟ್ಟಗೇ ಊಟಮಾಡಿದರೇನು? ಯಾಕೆ ಪುಟ್ಟ ಸುಬೇದಾರರೇ, ನಿಮ್ಮ ಸಮಾಚಾರವೇನು? ನೀವು ಈಗ ನಮ್ಮನ್ನೊಡಗೊಂಡು ಯುದ್ಧಕ್ಕೆ ಬರುವಿರಷ್ಟೇ? ಮೊದಲು ಲಗ್ನಮಾಡಿ ಕೊಳ್ಳುವಿರೋ ಯುದ್ಧಕ್ಕೆ ಬರುವಿರೋ?

ಮಹಾರಾಜರ ಪ್ರಶ್ನೆಗಳಿಗೆ ರಾಯಬಾನು ಠೀವಿಯಿಂದ—ಮಹಾರಾಜರೇ, ಕರಕೊಂಡು ಹೋಗುತ್ತಿದ್ದರೆ ಮೊದಲು ಯುದ್ಧಕ್ಕೆ ಬರುತ್ತೇನೆ, ಎಂದು ನುಡಿದು ಖಡ್ಗಕ್ಕೆ ಕೈನೀಡಿ— ಮಹಾರಾಜರೇ, ಈ ಸಣ್ಣಕತ್ತಿಯಿಂದ ಮೊಗಲರೊಡನೆ ಕಾದಲಿಕ್ಕೆ ಬರಬಹುದೇ? ಇಲ್ಲದಿದ್ದರೆ ಮೊಗಲರ ಹುಡುಗರೊಡನೆಯೇ ನನ್ನನ್ನು ಯುದ್ಧಕ್ಕೆ ಕಳಿಸಿರಿ. ಅವರೊಡನೆ ಯುದ್ಧಮಾಡಲಿಕ್ಕೆ ಈ ಕತ್ತಿಯು ಸಾಕು. ಒಂದು ದೊಡ್ಡ ಕತ್ತಿಯನ್ನು ಕೊಡಿರೆಂದು ಅಪ್ಪನನ್ನು ಕೇಳುತ್ತೇನೆ; ಆದರೆ ನನಗೆಲ್ಲಿ ಅವರು ಕೊಡುತ್ತಾರೆ?

ಕೂಸಿನ ಈ ವೀರಲಾಪಗಳನ್ನು ಕೇಳಿ ಮಹಾರಾಜರು—ಎಲ! ನಿಮ್ಮಪ್ಪನು ಕೊಡದಿದ್ದರೆ ನಾವು ಕೊಟ್ಟೇವಂತೆ. ಇನ್ನಾದರೂ ನಿನ್ನ ಕೆಲಸವಾಯಿತೋ ಇಲ್ಲವೋ? ಎನ್ನಲು ರಾಯಬಾನು —ಇದೊಳ್ಳೆಯ ಮಾತು! ನೀವೇ ಕೊಟ್ಟಬಳಿಕ ಕೇಳುವದೇನು? ಆದರೆ ಅಪ್ಪನಿಗೆ ಮೊದಲು ನೀವೇ ಕತ್ತಿಯನ್ನು ಕೊಟ್ಟಿದ್ದೀರೇನು? ಎಂದು ಕೇಳಿದನು. ಅಷ್ಟರಲ್ಲಿ ಸೇಲಾರಮಾವನು ನಡುವೇ ಬಾಯಿಹಾಕಿ—ಮಹಾರಾಜರೇ, ಆತನ ಒಟಗುಟ್ಟುವಿಕೆಯು ಎಂದಿಗೂ

ನಿಲ್ಲತಕ್ಕದ್ದಲ್ಲ. ನೀವು ಕೇಳಿದ ಮಾತಿಗೆಲ್ಲ ಅವನು ಏನಾದರೂ ಕೇಳತಕ್ಕವನೇ; ಆದರೆ ಮಹಾರಾಜರೇ, ನಮ್ಮ ಊರಿಗೂ ನಮ್ಮ ಮನೆಗೂ ತಮ್ಮ ಚರಣಸ್ಪರ್ಶವಾಗುವದಷ್ಟೇ? ತಮ್ಮ ಚರಣ ಸ್ಪರ್ಶವಾಗುವದೆಂದು ನಮ್ಮ ಊರವರಂತೂ ಟಕ್ಕುಹಿಡಿದು ಕುಳಿತುಕೊಂಡಿದ್ದಾರೆ, ಎಂದು ನುಡಿದನು. ಅದಕ್ಕೆ ಮಹಾರಾಜರು—ಮಾವನವರೇ, ನಮ್ಮ ಚರಣಸ್ಪರ್ಶ ವಾಗುವದು ಯಾವ ದೊಡ್ಡ ಮಾತು? ನೀವು ಕರೆಯಬಂದಿರಲು, ಒಲ್ಲೆನೆನ್ನುವದು ನನಗೆ ಒಪ್ಪಬಹುದೋ? ಆದರೆ ಈಗಿನ ದಿನಗಳು ಹ್ಯಾಗಿರುತ್ತವೆಂಬದು ತಮಗೆ ಗೊತ್ತೇ ಇರುವದು. ಯಾವ ಕಾಲದಲ್ಲಿ ಯಾವ ಕೆಲಸ ಮಾಡಬೇಕೆಂಬದರ ನಿಯಮವನ್ನು ಹೇಳಲಿಕ್ಕೆ ಬರುವಂತಿಲ್ಲ. ಔರಂಗಜೇಬ ಬಾದಶಹನ ನಂಬಿಗೆಯನ್ನು ಎಷ್ಟು ಮಾತ್ರವೂ ಹಿಡಿಯುವ ಹಾಗಿಲ್ಲ. ಈ ಕ್ಷಣದಲ್ಲಿ ಆಡಿದ್ದರ ವಿರುದ್ಧವಾಗಿ ಮುಂದಿನ ಕ್ಷಣದಲ್ಲಿ ಆತನು ಮಾಡಿಯಾನು. ಆತನ ಮಗನೂ, ಜಸವಂತಸಿಂಗನೂ ನಮ್ಮನ್ನು ಕೂಡಿಕೊಂಡಂತೆ ತೋರುತ್ತಿದ್ದರೂ ಅವರ ವಿಶ್ವಾಸವನ್ನಾದರೂ ಹ್ಯಾಗೆ ಹಿಡಿಯಬೇಕು? ನಮ್ಮನ್ನು ಕೂಡಿಕೊಂಡಂತೆ ತೋರಿಸ ಬೇಕೆಂದು ಬಾದಶಹನೇ ಅವರಿಗೆ ಒಳಗಿಂದೊಳಗೆ ಸೂಚಿಸಿರಲಿಕ್ಕಿಲ್ಲೆಂದು ಯಾರು ಹೇಳುವರು? ಈ ಮೊಗಲರೇನು? ಯಾವಕಾಲಕ್ಕೆ ಹ್ಯಾಗೆ ಮೋಸ ಮಾಡಿಯಾರೆಂಬದನ್ನು ಕಂಡು ಹಿಡಿಯುವದಾಗದು. ಮಾವಾ, ಒಂದುವೇಳೆ ಹಾವನ್ನಾದರೂ ನಂಬಬಹುದು; ಆದರೆ ಈ ಮೊಗಲರನ್ನೂ, ಅವರ ಸಂಗಡಿಗರನ್ನೂ ನಂಬಲಿಕ್ಕಾಗದು. ಈ ಮಾತು ನಿಮಗೂ ಗೊತ್ತಿರುತ್ತದೆ. ಇರಲಿ ನೀವು ಇದೇ ದಣಿದು ಬಂದಿರುತ್ತೀರಿ ಸ್ವಲ್ಪ ಅಡ್ಡಾಗಿರಿ. ಹಿಂದಿನಿಂದ ಮಾತಾಡೋಣವಂತೆ. ತಾನಾಜೀರಾಯರೇ ಬೇಕಾದರೆ ನೀವೂ ಒಂದುಗಳಿಗೆ ಸ್ವಸ್ಥ ಅಡ್ಡಾಗಬಹುದು.

ಮಹಾರಾಜರ ಈ ಭಾಷಣವನ್ನು ತಾನಾಜಿಯು ಸ್ವಸ್ಥ ಮನಸ್ಸಿನಿಂದ ಕೇಳುತ್ತಿದ್ದನು. ಆತನ ಕಿವಿಗಳು ಮಹಾರಾಜರ ಮುಖದಿಂದ ಹೊರಬೀಳುತ್ತಿದ್ದ ಪ್ರತಿ ಒಂದು ಅಕ್ಷರವನ್ನು ಗ್ರಹಣಮಾಡುತ್ತಿದ್ದವು. ಆತನ ಕಣ್ಣುಗಳು ಮಹಾರಾಜರ ಮುಖಚರ್ಯದಲ್ಲಿ ನಟ್ಟು ಹೋಗಿದ್ದವು. ಮುಖಲಕ್ಷಣದ ಮೇಲಿಂದ ಮಹಾರಾಜರು ಯಾವದೋ ಒಂದು ಮಾತನ್ನು ತನ್ನ ಮುಂದೆ ಹೇಳದೆ ಮುಚ್ಚಿಡುತ್ತಾರೆಂಬದನ್ನು ಆ ಧೂರ್ತ ತಾನಾಜಿಯು ಕಂಡುಹಿಡಿದನು. ಕಡೆಗೆ "ಬೇಕಾದರೆ ನೀವೂ ಒಂದುಗಳಿಗೆ ಸ್ವಲ್ಪ ಅಡ್ಡಾಗಬಹುದು." ಎಂದು ಮಹಾರಾಜರು ನುಡಿದಕೂಡಲೆ ಆತನು ಕೈಜೋಡಿಸಿ—"ಪ್ರಭುಗಳೇ, ಮಾತಾಡಿದ್ದಕ್ಕಾಗಿ ಕ್ಷಮಿಸಬೇಕು. ಆಗಲೆ ಬಂದ ಹೇಜೀಬನು ಮಹಾರಾಜರಿಗೆ ಚಿಂತೆಯನ್ನುಂಟುಮಾಡುವ ಸುದ್ದಿಯನ್ನು ಹೇಳಿರಬಹುದು. ಮಹಾರಾಜರು ಚಿಂತೆಯಲ್ಲಿರಲು, ಅದರ ಕಾರಣವನ್ನು ಕೇಳಿಕೊಳ್ಳದೆ ಈ ತಾನಾಜಿಯು ಒಂದು ಗಳಿಗೆಯಂತೂ ಇರಲಿ, ಒಂದು ಕ್ಷಣವಾದರೂ ಸ್ವಸ್ಥ ಹ್ಯಾಗೆ ಅಡ್ಡಾದಾನು?

ತಾನಾಜಿಯ ಈ ಮಾತುಗಳನ್ನು ಕೇಳಿ ಮಹಾರಾಜರು ಮುಗುಳು ನಗೆ ನಕ್ಕು— ತಾನಾಜೀ, ನಾನು ನಿನಗೆ ಆ ಸಂಗತಿಯನ್ನು ಹೇಳುತ್ತಿದ್ದಿಲ್ಲ. ನೀನು ಇಲ್ಲಿಂದ ಹೋಗುವವರೆಗೆ ಆ ಸಂಬಂಧದ ಮಾತನ್ನೇ ಆಡುತ್ತಿದ್ದಿಲ್ಲ. ಆದರೆ ನನ್ನ ಮುಖಚರ್ಯದಿಂದಲೇ ನೀನು

ತಿಳಕೊಂಡ ಬಳಿಕ ಅದನ್ನು ಹೇಳದಿದ್ದರೆ ಹ್ಯಾಗೆ ನಡೆಯುವದು? ಅವ್ವಾ, ನೀವು ಆ ದಿವಾನಖಾನೆಗೆ ಬಂದರೆ ಎಲ್ಲ ಹೇಳುತ್ತೇನೆ. ಮಾವಾ, ನೀವೂ ನಡೆಯಿರಿ; ಅಂದರೆ ನಾನು ಇದೇ ಈಗ ಆಡಿದ ಮಾತಿನ ಸತ್ಯತೆಯನ್ನು ತೋರಿಸುವೆನು, ಎಂದುನುಡಿದು ಮಹಾರಾಜರು ದಿವಾನಖಾನೆಯ ಕಡೆಗೆ ನಡೆದರು. ಕೂಡಲೆ ತಾನಾಜಿಯೂ, ಸೇಲಾರಮಾವನೂ ಅವರನ್ನು ಹಿಂಬಾಲಿಸಿದರು. ಎಲ್ಲರ ಹಿಂದಿನಿಂದ ಜೀಜಾಬಾಯಿಯವರು ಸಾಗಿದರು. ಸ್ವಂತದ ಮಹಾಲಿನಲ್ಲಿ ಬಂದಕೂಡಲೆ ಮಹಾರಾಜರು ದ್ವಾರಪಾಲಕರಿಗೆ—''ಇನ್ನೂ ಕೆಲವು ವೇಳೆಯವರೆಗೆ ಯಾರು ಬಂದರೂ ಬಂದ ಸುದ್ದಿಯನ್ನು ಸಹ ತಮಗೆ ತಿಳಿಸಲಾಗದೆಂದು ಸ್ಪಷ್ಟವಾಗಿ ತಿಳಿಸಿದರು; ಮತ್ತು ಬಾಳಾಜಿ ಆವಜಿಯನ್ನು ಮಾತ್ರ ಇತ್ತಕಡೆಗೆ ಕಳಿಸಿಕೊಡಬೇಕೆಂದು ಅಪ್ಪಣೆಯನ್ನಿತ್ತರು.'' ಆ ಚಿಟಣೀಸನು ಬಂದಕೂಡಲೆ ಐವರು ಕುಳಿತುಕೊಂಡರು; ಮಹಾರಾಜರು ದಿಲ್ಲಿಯಿಂದ ಬಂದ ಒಂದು ಕಾಗದವನ್ನು ಚಿಟಣೀಸನ ಕೈಯಲ್ಲಿ ಕೊಟ್ಟು ಓದಿತೋರಿಸೆಂದು ಹೇಳಿದರು.

ಕಾಗದದೊಳಗಿನ ಸಂಗತಿಯನ್ನು ಕೇಳುವ ಮೊದಲು ವಾಚಕರಿಗೆ ಆ ಕಾಗದವು ಎಲ್ಲಿಯದೆಂಬದನ್ನೂ, ಅದನ್ನು ಯಾರು ಬರೆದರೆಂಬದನ್ನೂ ತಿಳಿಸುವದು ಅವಶ್ಯವಿರುತ್ತದೆ. ಹಿಂದಕ್ಕೆ ಜಯಸಿಂಗನ ಉತ್ತೇಜನದಿಂದಲೂ, ಬಾದಶಹನ ಸವಿಮಾತಿನ ಪತ್ರದಿಂದಲೂ ಮಹಾರಾಜರು ದಿಲ್ಲಿಗೆ ಹೋಗಿದ್ದರು. ಆಗ ಬಾದಶಹನು ವಿಶ್ವಾಸಘಾತದಿಂದ ಮಹಾರಾಜರನ್ನು ಪ್ರತಿಬಂಧದಲ್ಲಿಟ್ಟಿದ್ದನು. ಪ್ರತಿಬಂಧದಲ್ಲಿರುವಾಗ ಶಿವಾಜಿಮಹಾರಾಜರವರ ಒಳ್ಳೆಯ ಸ್ವಭಾವವನ್ನೂ, ಔರಂಗಜೇಬನು ಮಾಡಿದ ವಿಶ್ವಾಸಘಾತವನ್ನೂ ನೋಡಿ ದರ್ಬಾರದಲ್ಲಿದ್ದ ಎಷ್ಟೋಜನ ರಜಪೂತರ ಹಾಗು ಒಬ್ಬಿಬ್ಬ ಮುಸಲ್ಮಾನ ಅಧಿಕಾರಿಗಳ ಮತವು ಶಿವಾಜಿ ಮಹಾರಾಜರವರಿಗೆ ಅನುಕೂಲವಾಗಿತ್ತು, ಒಬ್ಬಿಬ್ಬರಂತೂ ಶಿವಾಜಿಮಹಾರಾಜರವರಿಗೆ ಒಳ್ಳೆಯ ಮಿತ್ರರಾಗಿದ್ದರು. ಈ ಮಿತ್ರರಲ್ಲಿ ಒಬ್ಬ ರಜಪೂತನು ದಿನದಿನಕ್ಕೆ ಬಾದಶಹನ ಕಡೆಯ ಸಂಗತಿಗಳನ್ನು ತಿಳಿಸುತ್ತಿದ್ದನು. ಮುಂದೆ ಮಹಾರಾಜರವರು ದಿಲ್ಲಿಯಿಂದ ಬಿಡುಗಡೆಹೊಂದಿ ದಕ್ಷಿಣಕ್ಕೆ ಬಂದಬಳಿಕಾದರೂ ಆ ಮಿತ್ರನು ಮಹತ್ವದ ಸುದ್ದಿಯನ್ನು ತಿಳಿಸುವ ತನ್ನ ಕ್ರಮವನ್ನು ಹಾಗೇ ಸಾಗಿಸಿದ್ದನು. ಅದೇ ರಜಪೂತ ಅಧಿಕಾರಿಯ ಕಡೆಯಿಂದಲೇ ಈ ದಿನ ಆ ಹೇಜೀಬನು ಪತ್ರವನ್ನು ತಕ್ಕೊಂಡು ಬಂದಿದ್ದನು.

ಔರಂಗಜೇಬನು ಉದಯಭಾನುವನ್ನು ದಕ್ಷಿಣಕ್ಕೆ ಕಳಿಸಿದ ಹೇತುವನ್ನು ಆ ಮಿತ್ರನು ಪತ್ರದಲ್ಲಿ ಬರೆದಿದ್ದನು. ಉದಯಭಾನುವು ಕೊಂಡಾಣೆಯ ದುರ್ಗಕ್ಕೆ ಮುಟ್ಟಿದಾಗಲೇ ಈ ಹೇಜೀಬನು ಮಹಾರಾಜರ ಬಳಿಗೆ ಬರತಕ್ಕವನು; ಆದರೆ ಹಾದಿಯಲ್ಲಿ ಜಡ್ಡು ಆಗಲು, ಆತನು ಒಂದು ಊರಲ್ಲಿ ಕೆಲವು ದಿನ ವಸ್ತಿಯು ಮಾಡಬೇಕಾದ್ದರಿಂದ ಸ್ವಲ್ಪ ತಡವಾಯಿತು. ಕುಲಗೆಟ್ಟು ಮುಸಲ್ಮಾನನಾದ ಉದಯಭಾನುವೆಂಬ ಹೆಸರಿನ ಯಾವನೋ ಒಬ್ಬ ಸರದಾರನು ಒಮ್ಮಿಂದೊಮ್ಮೆ ಕೊಂಡಾಣೆಯ ದುರ್ಗದಲ್ಲಿ ಬಂದಿರುವನೆಂತಲೂ, ಅವನ ಬಳಿಯಲ್ಲಿ ಎಂಟು ಹತ್ತುಸಾವಿರ ರಜಪೂತ ಸೈನ್ಯವಿರುತ್ತದೆಂದಲೂ ಮಹಾರಾಜರಿಗೆ ಗೊತ್ತಾಗಿತ್ತು, ಆದರೆ ಆ ಸರದಾರನು ದಕ್ಷಿಣಕ್ಕೆ ಬಂದ ಉದ್ದೇಶವನ್ನೂ ಅವನು ಬೇರೆ ದೊಡ್ಡ ಸೈನ್ಯವನ್ನು

ತಕ್ಕೊಂಡು ಬಂದು ಜಸವಂತಸಿಂಗನ ಬಳಿಗೂ, ಶಹಾಜಾದಾನ ಬಳಿಗೂ ಕಳಿಸಿದ ಹೇತುವನ್ನೂ ತಿಳಕೊಂಡು ಬರುವದಕ್ಕಾಗಿ ಗುಪ್ತಚಾರರನ್ನು ಕಳಿಸಿದ್ದರು. ಇದರಿಂದ ಮಹಾರಾಜರಿಗೆ ಬಹುತರ ಯಾವತ್ತೂ ಸಂಗತಿಯು ಗೊತ್ತಾದಂತೆ ಆಗಿತ್ತು; ಆದರೆ ಈವೊತ್ತಿನ ಪತ್ರದಿಂದ ಅವರಿಗೆ ಯಾವ ಮಾತಿನ ಸಂಶಯವೂ ಉಳಿಯಲಿಲ್ಲ. ಬಾಳಾಜಿ ಆವಜಿಯು ಆ ಪತ್ರವನ್ನು ಓದಿ ತೋರಿಸಿದ ಮೇಲೆ ಮಹಾರಾಜರೂ, ಉಳಿದವರೂ ಕೆಲವು ವೇಳೆಯವರೆಗೆ ಪಿಟ್ಟೆಂದು ಮಾತಾಡದೆ ಸುಮ್ಮನೆ ಕುಳಿತುಕೊಂಡರು. ಇಷ್ಟರಲ್ಲಿ ಜೀಜಾಬಾಯಿಯವರು—ಈ ಕೊಂಡಾಣೆಯ ದುರ್ಗವನ್ನು ಒಮ್ಮೆ ಸ್ವಾಧೀನ ಮಾಡಿಕೊಂಡು ಬಿಡಬೇಕೆಂದು ನನ್ನ ಮನಸ್ಸಿಗೆ ಈ ಮೊದಲೇ ಹೊಳೆದಿತ್ತು. ಬಾದಶಹನು ಒಳ್ಳೆಯ ತಂತ್ರಗಾರನಾದುದರಿಂದಲೆ ಅವನು ಕೊಂಡಾಣೆಯ ದುರ್ಗವನ್ನು ತನ್ನ ಕೈಯಲ್ಲಿಟ್ಟುಕೊಂಡನು. ಈ ದುರ್ಗವೊಂದು ಅವನ ಕೈಯಲ್ಲಿದ್ದರೆ ಆದರ ಸುತ್ತುಮುತ್ತಲಿನ ಪ್ರಾಂತಗಳು ನಮ್ಮ ಕೈಯಲ್ಲಿ ಇದ್ದೂ ಇಲ್ಲದ ಹಾಗೆಯೇ ಸರಿ. ಕೊಂಡಾಣೆಯ ದುರ್ಗದ ಸಹಾಯದಿಂದ ಬೇಕಾದಾಗ ಶತ್ರುಗಳನ್ನು ಹಣ್ಣು ಮಾಡಬಹುದೆಂಬ ಗುಟ್ಟು ಬಾದಶಹನಿಗೆ ಗೊತ್ತಾಗಿರುವದು. ನಾನು ಮೊನ್ನೆ ಸ್ವಾಭಾವಿಕವಾಗಿ ನಿಂತುಕೊಂಡಿರುವಾಗ ನನ್ನ ದೃಷ್ಟಿಯು ಕೊಂಡಾಣೆಯ ದುರ್ಗದ ಕಡೆಗೆ ಹೋಯಿತು. ಆ ದುರ್ಗವನ್ನು ವಶಮಾಡಿಕೊಳ್ಳದಿದ್ದರೆ ನಮ್ಮ ಭದ್ರತೆಯಾಗದೆಂದು ಬಗೆದು ಆ ಕೋಟೆಯನ್ನಷ್ಟು ವಶಮಾಡಿಕೊಂಡು ಅಲ್ಲಿ ದಂಡನ್ನಿಟ್ಟುಬಿಡೆಂದು ನಾನು ನಿನಗೆ ಹೇಳಬೇಕೆಂದು ಮಾಡಿದ್ದೆನು, ಎಂದು ನುಡಿದರು.

ತಾಯಿಯಾಡಿದ ಮಾತುಗಳನ್ನು ಕೇಳಿ ಶಿವಾಜಿಮಹಾರಾಜರವರು—ಅವ್ವನವರೇ, ನೀವನ್ನುವದು ನಿಜವು; ಆದರೆ ಈವೊತ್ತಿನವರೆಗೆ ಒಪ್ಪಂದವನ್ನು ಮುರಿಯಲಿಕ್ಕೆ ಯಾವ ನೆವವೂ ದೊರೆತಿದ್ದಿಲ್ಲ. ಈಗ ಉದಯಭಾನುವಿನ ಸಂಗಡ ಬಾದಶಹನು ಬುದ್ಧಿಪೂರ್ವಕವಾಗಿ ಸೈನ್ಯವನ್ನು ಕಳಿಸಿರುವದರಿಂದ ನಿಮ್ಮ ಉದ್ದೇಶವು ಒಳ್ಳೆಯದಿದ್ದಂತೆ ತೋರುವದಿಲ್ಲೆಂದು ಆತನಿಗೆ ತಿಳಿಸಿ ನಾವು ಮಾಡತಕ್ಕದ್ದನ್ನು ಮಾಡಲಿಕ್ಕೆ ಆಸ್ಪದವು ದೊರೆತಂತಾಯಿತು. ಇದಲ್ಲದೆ ಬಾದಶಹನು ನಿಮ್ಮ ಮೇಲೆ ಕಣ್ಣಿಡುವದಕ್ಕಾಗಿಯೇ ಉದಯಭಾನುವನ್ನು ದಕ್ಷಿಣಕ್ಕೆ ಕಳಿಸಿರುವನೆಂಬದನ್ನು ಈ ಪತ್ರದ ಸಹಾಯದಿಂದ ಜಸವಂತಸಿಂಗನಿಗೂ, ರಾಜಪುತ್ರನಾದ ಮುಆಝೀಮನಿಗೂ ಒಪ್ಪಿಗೆಯಾಗುವಂತೆ ಮಾಡಿದರೆ ಅವರು ಉದಯಭಾನುವಿಗೆ ಸಹಾಯಮಾಡುವದಕ್ಕಾಗಿ ಮುಂದುವರಿಯಲಿಕ್ಕಿಲ್ಲೆಂಬದು ಮೇಲೆಯೇ ಕಾಣುತ್ತದೆ. ಬಾದಶಹನು ನಿಮ್ಮ ಮೇಲೆ ಎಷ್ಟು ವಿಶ್ವಾಸವಿಟ್ಟಿರುತ್ತಾನೆಂಬದನ್ನು ತೋರಿಸುವದಕ್ಕಾಗಿ ಅವರಿಬ್ಬರ ಕಡೆಗೆ ಈ ಪತ್ರವನ್ನು ಬೇಗನೆ ಸೇವಕರ ಸಂಗಡ ಕಳಿಸಿಕೊಡಬೇಕೆಂದು ಮಾಡಿರುತ್ತೇನೆ. ಅವರಿಬ್ಬರು ನಾಲ್ಕುದಿನ ಸ್ವಸ್ಥ ಕುಳಿತುಕೊಂಡರೆ ನನ್ನ ಕೆಲಸವಾಯಿತು. ನಾಲ್ಕು ದಿನಗಳ ಮೇಲೆ ಈ ದುರ್ಗವು ವಶವಾದ ಬಳಿಕ ಅವರು ಹೆಣಗಾಡಿದರೆ ನಾನು ನಡೆಯಗೊಡೆನು. ಅವರು ಬಹುತರವಾಗಿ ಅಂಥ ಮೋಸಗಾರ ರಿದ್ದಂತೆ ತೋರುವದಿಲ್ಲ. ಬಾದಶಹನ ವಿರುದ್ಧವಾಗಿ ನನಗೆ ಸಹಾಯ ಮಾಡುವ ಬುದ್ಧಿಯುಳ್ಳ ಜನರಲ್ಲಿ ಅವರಿಬ್ಬರು

ಇರುತ್ತಾರೆ; ಆದರೆ ಯಾರಿಗೆಗೊತ್ತು! ನಾವು ಎಚ್ಚರದಿಂದಿರುವ ಹಾಗೆ ಇದ್ದರಾಯಿತು. ಒಟ್ಟಿಗೆ ಈಗಿನ ಮುಖ್ಯ ಕೆಲಸವು ಕೊಂಡಾಣೆಯ ದುರ್ಗವನ್ನು ಕೈವಶಮಾಡಿಕೊಳ್ಳುವದು. ಈ ಕೆಲಸವು ಹೇಗೆ ಕೈಗೂಡುವದೆಂಬದರ ವಿಚಾರಮಾಡಬೇಕಾಗಿದೆ. ಉದಯಭಾನುವು ಹೊಸಬನು. ಅವನು ತಳಊರಿ ಎಲ್ಲ ವ್ಯವಸ್ಥೆಯನ್ನು ಮಾಡಿಕೊಂಡು ಸ್ವಸ್ಥಚಿತ್ತನಾಗುವದರೊಳಗೆ ಅವನನ್ನು ದುರ್ಗದಿಂದ ಹೊರಗೆ ಹಾಕತಕ್ಕದ್ದು. ಅವನಿಗೆ ಅವಕಾಶಕೊಟ್ಟಲ್ಲಿ ನಮಗೆ ಲಾಭವಿಲ್ಲ; ಆದ್ದರಿಂದ ಈ ಕೆಲಸಕ್ಕೆ ಸ್ವತಃ ನಾನೇ ಮುಂದುವರಿಯುವೆನು. ಹಾಗಾಗದಿದ್ದರೆ ನಡೆಯುವಹಾಗಿಲ್ಲ.

ಮಹಾರಾಜರಾಡಿದ ಈ ಮಾತುಗಳನ್ನು ತಾನಾಜಿಯು ಕೇಳಿ ಒಮ್ಮೆಲೆ ಸ್ವಲ್ಪ ಮುಂದಕ್ಕೆ ಸರಿದು—ಪ್ರಭುಗಳೇ, ನಾನು ಬಹು ದಿವಸದಿಂದ ತಮಗೊಂದು ಮಾತಿನ ಸಲುವಾಗಿ ವಿನಂತಿ ಯನ್ನು ಮಾಡಿಕೊಳ್ಳುತ್ತ ಬಂದಿರುತ್ತೇನೆ. ಇನ್ನು ಮೇಲೆ ನೀವು ಯಾವ ಯುದ್ಧದಲ್ಲಿಯೂ ಮುಂದುವರಿದು ಹೋಗಲಾಗದು. ನನ್ನಂಥ ಸೇವಕನನ್ನು ಇಟ್ಟುಕೊಳ್ಳುವದು ಯಾತಕ್ಕೆ ಪ್ರಭುಗಳು ತಾವು ಮುಂದುವರಿದು ಹೋಗುವಾಗ ಏನಾದರೂ ಅಸ್ತವ್ಯಸ್ತವಾದರೆ ಮಾಡುವದೇನು? ಎಂಥ ಅನರ್ಥವಾದೀತು? ಆರಂಭದ ಮಾತು ಬೇರೆ, ಈಗಿನ ಮಾತು ಬೇರೆ. ಈಗ ನಿಮ್ಮನ್ನು ದೊಡ್ಡ ಸ್ವರಾಜ್ಯವು ಅವಲಂಬಿಸಿರುವದು. ಈಗ ತಾವು ಇಲ್ಲಿಯಾಗಲಿ, ಪ್ರತಾಪಗಡದಲ್ಲಿಯಾಗಲಿ ಸ್ವಸ್ಥ ಕುಳಿತುಕೊಂಡು ನಮ್ಮಂಥ ಸೇವಕರಿಗೆ ಅಪ್ಪಣೆ ಕೊಡುತ್ತ ಹೋಗಬೇಕಲ್ಲದೆ ಸ್ವತಃ ಯುದ್ಧಕ್ಕೆ ಹೋಗಬಾರದು, ಎಂದು ಹೇಳಿದನು. ಅದಕ್ಕೆ ಶಿವಾಜಿ ಮಹಾರಾಜರು—ತಾನಾಜಿರಾಯರೇ, ನಿಮ್ಮಂಥವರ ಜೀವದಲ್ಲಿಯೂ ನನ್ನ ಜೀವದಲ್ಲಿಯೂ ಅಂತರವೇನು, ಎಂದು ಕೇಳಲು ತಾನಾಜಿಯು—ಮಹಾರಾಜರೇ, ತಮ್ಮ ಜೀವದಲ್ಲಿಯೂ, ನಮ್ಮಂಥವರ ಜೀವದಲ್ಲಿಯೂ ಇರುವ ಅಂತರವನ್ನು ಕೇಳುವಿರೋ? ಪ್ರಭುಗಳೇ, ತಮ್ಮ ಜೀವಕ್ಕೆ ಏನಾದರೂ ಅಪಾಯ ಒದಗಿದರೆ ಈ ಸ್ವರಾಜ್ಯರೂಪವಾದ ಕಟ್ಟಡವನು ನೆಲಸಮ ಮಾಡಲಿಕ್ಕೆ ವೈರಿಗಳಿಗೆ ಅವಕಾಶವಾಗುವದು. ಆ ಕಟ್ಟಡವು ತನ್ನಿಂದತಾನೇ ಕಡಕೊಂಡು ಬಿದ್ದೀತು. ಆ ಕಟ್ಟಡದ ಭಾರಕ್ಕೆಲ್ಲ ನಿಮ್ಮ ಶಿರಸ್ಸು ಆಧಾರವಾಗಿರುತ್ತದೆ. ನನ್ನಂಥವನ ನಾಶವಾದರೆ ಕಟ್ಟಡದೊಳಗಿನದೊಂದು ಇಟ್ಟಂಗಿಯು ಸರಿದು ಬಿದ್ದಂತಾಗಲಿಕ್ಕಿಲ್ಲ. ನೀವಿರುವವರೆಗೆ ನನ್ನಂಥ ಲಕ್ಷಾವಧಿ ಜನರು ತಮಗೆ ದೊರೆಯಬಹುದು; ಆದ್ದರಿಂದ ತಾವು ನನಗೆ ಅಪ್ಪಣೆಯನ್ನು ಕೊಡಬೇಕು. ನಾನು ಹೋಗಿ ದುರ್ಗವನ್ನು ಕೈವಶಮಾಡಿಕೊಂಡು ಬರುತ್ತೇನೆ, ಎಂದು ಹೇಳಿದನು.

ಆಗ ಮಹಾರಾಜರು ತಾನಾಜಿಯನ್ನು ಕುರಿತು—ತಾನಾಜಿರಾಯರೇ, ನೀವು ದುರ್ಗವನ್ನು ಕೈವಶಮಾಡಿಕೊಳ್ಳುವಿರೋ ಇಲ್ಲವೊ ಎಂಬ ಬಗ್ಗೆ ನನಗೆ ಸ್ವಲ್ಪವಾದರೂ ಸಂಶಯುವಿಲ್ಲ; ಆದರೆ ಸದ್ಯಕ್ಕೆ ನೀವು ಮಗನ ಲಗ್ನಕ್ಕೆ ಕರೆಯಬಂದಿರುವಿರಲ್ಲವೇ? ಆ ಕಾರ್ಯವಾಗುವವರೆಗೆ ನಿಮಗೆ ಯಾವ ಕಾರ್ಯವನ್ನೂ ಹೇಳುವದಿಲ್ಲ. ದುರ್ಗವನ್ನು ಕೈವಶಮಾಡಿಕೊಳ್ಳುವದಾದರೆ ಆ ಕೆಲಸವನ್ನು ಈಗಲೇ ಮಾಡಬೇಕಾಗಿದೆ, ವಿಲಂಬವು

ಕೆಲಸದ್ದಲ್ಲ. ಈ ಪ್ರಸಂಗದಲ್ಲಿ ನಾನೇ ಕೆಲಸಕ್ಕೆ ಮುಂದುವರೆಯುವ ವಿಚಾರ ಮಾಡಿದ್ದೇನೆ, ಅದಕ್ಕೆ ವಿಘ್ನವನ್ನುಂಟುಮಾಡಬೇಡಿರಿ, ಎಂದು ಹೇಳಿದರು. . ಅದಕ್ಕೆ ತಾನಾಜಿಯು—ಲಗ್ನವೊಲ್ಲೇ! ದೊರೆಗಳೇ, ನಿನ್ನಂಥ ಪ್ರಭುವಿನ ಕಾರ್ಯದ ಮುಂದೆ ಮಗನ ಲಗ್ನದ ಪಾಡೇನು? ಮೊದಲು ಕೊಂಡಾಣೆಯ ದುರ್ಗದ ಲಗ್ನವನ್ನು ಮಾಡಿಕೊಂಡು, ಆಮೇಲೆ ತಮ್ಮೊಡನೆ ಮಗನ ಲಗ್ನಕ್ಕೆ ಹೋಗುವೆನು. ಸೇಲಾರಮಾವಾ, ನೀನು ಊರಿಗೆ ಹೋಗು. ನಮ್ಮ ಯಾವತ್ತೂ ಸೈನ್ಯವನ್ನು ತೆಗೆದುಕೊಂಡು ಬರಬೇಕೆಂದು ಸೂರ್ಯಾಜಿಗೆ ಹೇಳು. ಪ್ರಭುಗಳೇ, ಕೊಂಡಾಣೆಯ ದುರ್ಗವನ್ನು ಕೈವಶಮಾಡಿಕೊಂಡು ಬಂದಬಳಿಕ ಮುಂದೆ ಮಾತಾಡುವದನ್ನು ಮಾತಾಡುವೆನು; ಆದರೆ ಕ್ಷಮಿಸುವದಾದರೆ ಒಂದು ಮಾತಿಗಾಗಿ ಬೇಡಿಕೊಳ್ಳುತ್ತೇನೆ. ಆ ಮಾತನ್ನು ನಡಿಸಲೇಬೇಕು.

ತಾನಾಜಿಯಾಡಿದ ಮಾತುಗಳನ್ನು ಕೇಳಿ ಮಹಾರಾಜರು ಕೌತುಕದಿಂದ—ನೀನು ಬೇಡಿಕೊಳ್ಳುವದೇನೆಂದು ಕೇಳಲು, ತಾನಾಜಿಯು—ಪ್ರಭುಗಳೇ, ನನ್ನ ವಿನಂತಿಯಿಷ್ಟೇ; ನಾನು ದುರ್ಗವನ್ನು ಕೈವಶಮಾಡಿಕೊಳ್ಳುವವರೆಗೆ ತಾವು ಈ ರಾಯಗಡವನ್ನು ಬಿಟ್ಟು ಕದಲಲಾಗದು. ನಾನು ಯಾವ ಯಾವ ಯುಕ್ತಿಗಳನ್ನು ಯೋಜಿಸುವೆನೆಂಬದನ್ನೂ, ಯಾವ ಯಾವ ಕಡೆಯಿಂದ ಸಂಧಾನ ಹಚ್ಚುವೆನೆಂಬದನ್ನೂ ಆಗಾಗ್ಗೆ ಪ್ರಭುಗಳ ಅಡಿದಾವರೆಗಳಿಗೆ ತಿಳಿಸುವೆನು. ತಮ್ಮ ಆಲೋಚನೆಯನ್ನು ಕೇಳಿಕೊಳ್ಳದೆ ಯಾವ ಕಾರ್ಯವನ್ನೂ ಮಾಡುವದಿಲ್ಲ. ತಾವು ಮಾತ್ರ ಈ ಸ್ಥಳದಿಂದ ಚಲಿಸಲಾಗದು ಎಲ್ಲ ಭಾರವನ್ನೂ ನನಗೆಹೊರಿಸಿ ತಾವು ಸ್ವಸ್ಥಚಿತ್ತದಿಂದ ನೋಡುತ್ತಿರಬೇಕು. ಈ ಕಾರ್ಯವನ್ನು ನೆರವೇರಿಸಿ ಬರುವೆನು. ಈ ಸ್ವಾಮಿಸೇವೆಯನ್ನಷ್ಟು ಈ ಸೇವಕನಿಂದಲೇ ಪೂರ್ಣಮಾಡಿಸಿಕೊಳ್ಳಬೇಕು. ಪ್ರಭುಗಳ ಚರಣಸ್ಪರ್ಶ ಮಾಡಿ ಹೇಳುತ್ತೇನೆ; ಈವೊತ್ತಿನಿಂದ ಹತ್ತುದಿವಸಗಳಲ್ಲಿ ಕೊಂಡಾಣೆಯ ದುರ್ಗವನ್ನು ಕೈವಶಮಾಡಿಕೊಂಡು ಸನ್ನಿಧಿಗೆ ಬರುವೆನು. ನನ್ನ ಜೀವನ ಬೆಲೆಯೇನು? ತಾವು ಸುರಕ್ಷಿತವಾಗಿದ್ದರೆ ನನ್ನಂಥ ಲಕ್ಷಾವಧಿ ಜನರು ಸೇವೆಯಲ್ಲಿ ತತ್ಪರರಾಗುವರು. ತಮ್ಮದೊಂದು ಕೂದಲು ಕೊಂಕಿದರೆ ಮಾತ್ರ ರಾಜ್ಯಕ್ಕೆ ಪೆಟ್ಟುತಾಕದೆ ಇರದು.

ತಾನಾಜಿಯ ಈ ಭಾಷಣದಲ್ಲಿ ಕಂಡುಬಂದ ಆವೇಶವನ್ನು ನೋಡಿ ಶಿವಾಜಿ ಮಾಹಾರಾಜರೂ ಕ್ಷಣಹೊತ್ತು ಸ್ತಬ್ಧರಾಗಿ ಕುಳಿತುಕೊಂಡರು. ಬಳಿಕ ಅವರು ತಾನಾಜಿಯನ್ನು ಕುರಿತು—ನಿಮ್ಮ ಮನೆಯಲ್ಲಿ ಲಗ್ನವೆಂದು ಕರೆಯ ಬಂದಿರಲು, ಇಲ್ಲಿಗೆ ಬಂದಕೂಡಲೆ ನಾವು ಯುದ್ಧಕ್ಕೆ ಕಳಿಸಿದರೆ ಜನರಾದರೂ ಏನಂದಾರು? ದೂರವೇಕೆ, ಈ ಸೇಲಾರಮಾವನವರನ್ನೇ ಕೇಳಿರಿ; ಈ ಮಾತು ಅವರ ಮನಸ್ಸಿಗೆ ಬರುವದೊ? ಎರಡನೆಯ ವಿಚಾರವಿಲ್ಲ, ಈ ಕಾರ್ಯಕ್ಕೆ ನಾನೇ...... ಎಂದು ನುಡಿಯುತ್ತಿರಲು, ಸೇಲಾರಮಾವನು ನಡುವೆಯೇ ಬಾಯಿಹಾಕಿ ಮುಂದೆ ಮಾತಾಡಗೊಡದೆ ಒಮ್ಮೆಲೆ—ನಾನಲ್ಲವೆ? ಪ್ರಭುಗಳೇ, ಇನ್ನು ನಾನೆಲ್ಲಿ ತಿರುಗಿ ಹೋಗುತ್ತೇನೆ? ತಾನ್ಯಾ, ಈ ಕಾರ್ಯವನ್ನು ಒಪ್ಪಿಕೊಂಡು ನಿನ್ನ ಕುಲದ ಹೆಸರು ಉಳಿಸಿದೆಯಲಾ! ಪ್ರಭುಗಳೇ, ಸ್ವರಾಜ್ಯದ ಕೆಲಸವು ಮೊದಲೋ, ಮಗನ ಲಗ್ನವು ಮೊದಲೋ? ದುರ್ಗವನ್ನು ಕೈವಶಮಾಡಿಕೊಳ್ಳುವದಕ್ಕಾಗಿ ನಾನು ತಾನಾಜಿಯ ಸಂಗಡವೇ

ಹೋಗುವೆನು. ದೊರೆಗಳೇ, ದುರ್ಗವು ತಮ್ಮದಾಯಿತೆಂದು ತಿಳಿಯಿರಿ, ದುರ್ಗವನ್ನು ತಕ್ಕೊಂಡು ಬಳಿಕ ಲಗ್ನವೇನು ಆಗುವದಿಲ್ಲವೊ? ಆ ದುರ್ಗದ ಲಗ್ನವೇ ಮೊದಲೆಂದು ತಾನಾಜಿಯು ಆಡಿದ್ದು ನಿಜವು; ಈಗ ಮೊದಲು ಅದೇ ಲಗ್ನವು. ಇನ್ನು ದೊರೆಗಳು ನಿಶ್ಚಿಂತರಾಗಿರಬೇಕು. ಈಗ ನೋಡಿರಿ, ನಾನು ಎಂಭತ್ತೈದು ವರ್ಷದ ಮುದುಕನಾದೆನು; ಇದ್ದರೆ ಇನ್ನೂ ಒಂದೆರಡು ವರ್ಷ ಹೆಚ್ಚೇ ಇರಬಹುದಲ್ಲದೆ ಕಡಿಮೆ ಇರಲಿಕ್ಕಿಲ್ಲ; ಆದರೆ ನೋಡಿರಿ ದುರ್ಗವನ್ನು ಹ್ಯಾಗೆ ಕೈವಶ ಮಾಡಿಕೊಳ್ಳುತ್ತೇನೆಂಬದನ್ನು! ನೀವು ಮಾತ್ರ ತಾನಾಜಿಯು ಹೇಳಿದಂತೆ ಈ ಸ್ಥಳವನ್ನು ಬಿಟ್ಟು ಕದಲಲಾಗದು ಇಲ್ಲಿಯೇ ಇರಬೇಕು. ದುರ್ಗವು ಕೈಸೇರಿದ ಕೂಡಲೆ ಅದರ ಮೇಲೆ ದೊಡ್ಡ ಉರಿಯನ್ನುಂಟುಮಾಡುವೆವು. ಅದನ್ನು ನೋಡಿ ದುರ್ಗವು ಕೈಸೇರಿತೆಂದು ನಿಶ್ಚಯಿಸಿ ಆಮೇಲೆ ಮಾಡತಕ್ಕದ್ದನ್ನು ಮಾಡಿರಿ. ಯಾಕೋ ತಾನ್ಯಾ, ಹೀಗೇ ಮಾಡಬೇಕಲ್ಲವೆ? ಪ್ರಭುಗಳೇ, ಇಂದು ತಾನಾಜಿಯ ವಿಷಯವಾಗಿ ನನಗೆ ಒಳ್ಳೆಯ ಕೌತುಕವಾಗಿದೆ. ಆತನು ಇಂದು ತನ್ನ ಕುಲದ ಹೆಸರನ್ನು ಕಾದುಕೊಂಡನು. ಏ ಇನ್ನಾರನ್ನಾದರೂ ಸೂರ್ಯಾಜಿಯನ್ನು ಕರೆಯಲಿಕ್ಕೆ ಕಳಿಸು; ನಾನು ನಿನ್ನ ಸಂಗಡಲೇ ಬರುವೆನು. ಮುದುಕರ ನುರಿತ ಎಲವುಗಳಲ್ಲಿ ಎಷ್ಟು ಸಾಮರ್ಥ್ಯವಿರುತ್ತದೆ, ಎಷ್ಟು ಮುರಿಯು ಇರುತ್ತದೆ, ಎಂಬುದುಗೊತ್ತಾಗುವದು. ಆ ಮೊಗಲರ ಗೋಣುಮುರಿದು ಚಲ್ಲಲಿಕ್ಕೆ ನನ್ನಂಥ ನುರಿತ ಮುದುಕನೇ ತಕ್ಕವನು!

ಮುದುಕನ ಈ ವೀರಶ್ರೀಯನ್ನು ನೋಡಿ ಶಿವಾಜಿ ಮಹಾರಾಜರಿಗೆ ಬಹಳ ಆಶ್ಚರ್ಯವಾಯಿತು. ಅವರು ಆ ಮುದುಕನ ವಿಷಯವಾಗಿ ಬೇರೆ ಕಲ್ಪನೆಯನ್ನು ಮಾಡಿದ್ದರು. ಆತನು ತಾನಾಜಿಗೆ—ನೀನು ಲಗ್ನಮಾಡುವದನ್ನು ಬಿಟ್ಟು ಯುದ್ಧದ ಉಸಾಬರಿಗೆ ಹೋಗಬೇಡೆಂತಲೂ, ಮಹಾರಾಜರು ಈ ಕೆಲಸಕ್ಕೆ ಮತ್ತೆ ಯಾರನ್ನಾದರು ಕಳಿಸಲೊಲ್ಲರೇಕೆಂತಲೂ ಹೇಳಿಯಾನೆಂದು ಭಾವಿಸಿದ್ದರು; ಆದರೆ ಪ್ರತ್ಯಕ್ಷ ನೋಡಿದರೆ ಮುದುಕನ ವೀರಶ್ರೀಯು ಎಲ್ಲರನ್ನು ಮೀರಿದ್ದು! ''ಹೊತ್ತು ಬಿದ್ದರೆ ಮಂಗನ ಹಾಗೆ ದುರ್ಗವನ್ನು ಏರಿ ಹೋಗುವೆನು'' ಎಂದು ಮುದುಕನು ನಡುವೆ ಮಾತಾಡಿದಾಗ ಕಂಡಬಂದ ಆತನ ಆವಿರ್ಭಾವವು ವಿಚಿತ್ರವಾಗಿತ್ತು, ಅದನ್ನು ನೋಡಿ ಜೀಜಾಬಾಯಿಯವರಿಗೆ ಸ್ವಲ್ಪ ನಗೆಯೂ ಬಂದಿತು. ಅವರು ತಮ್ಮ ಮಗನ ಕಡೆಗೆ ನೋಡಿ—ಅಪ್ಪಾ, ಶಿವಬಾ, ಇಂಥ ಜನರ ದಮ್ಮಿನಿಂದಲೂ, ಆಶೀರ್ವಾದದಿಂದಲೂ ನಿನ್ನ ರಾಜ್ಯವು ಸುರಕ್ಷಿತವಾಗಿ ನಡೆದಿರುವದು ಕಂಡೆಯಾ! ಇವರು ನಮ್ಮ ರಾಜ್ಯದ ಆಧಾರ ಸ್ತಂಭವಾಗಿರುವರು. ಎಷ್ಟು ಹಳಬರಾದರೂ ಇವರ ಬೆಲೆಯು ಹೆಚ್ಚಿನದು, ಅಸ್ತುತ್ತಿರಲು, ಸೇಲಾರಮಾವನು ಒಮ್ಮೆಲೆ—ಸಾಧ್ವಿಯೇ, ಇದೆಲ್ಲ ನಿನ್ನ ಆಶೀರ್ವಾದದ ಮಹಿಮೆಯು, ನಿನ್ನ ಉದರವು ಧನ್ಯವಾದದ್ದು; ಅಂತೇ ಅದರಲ್ಲಿ ಇಂಥ ರತ್ನವು ಉತ್ಪನ್ನವಾಗಿ ಅದರ ಯೋಗದಿಂದ ನಾವೆಲ್ಲರು ಬೆಲೆಬಾಳಿದೆವು. ಇರಲಿ, ನಾವು ಇನ್ನು ಇಲ್ಲಿಂದ ಹೊರಡುವೆವು. ರಾಯಬಾನು ಅಲ್ಲಿ ಮಲಗಿರಬಹುದು, ಆತನನ್ನು ನಿಮ್ಮ ಉಡಿಯಲ್ಲಿ ಹಾಕಿರುತ್ತೇವೆ. ದುರ್ಗವನ್ನು ಕೈವಶಮಾಡಿಕೊಂಡು ಬಂದಬಳಿಕ ಆತನನ್ನು ಕರಕೊಂಡು ಹೋಗುವೆವು, ಎಂದು ನುಡಿಯುತ್ತಿರುವಷ್ಟರಲ್ಲಿ ತಾನಾಜಿಯು ಎದ್ದು ಒಮ್ಮೆ ಜೀಜಾಬಾಯಿಯವರಿಗೂ,

ಮಹಾರಾಜರಿಗೂ ಸಾಷ್ಟಾಂಗವಾಗಿ ಎರಗಿ ಅವರ ಆಶೀರ್ವಾದವನ್ನೂ ಮಹಾರಾಜರ ಕೈಯಿಂದ ತಾಂಬೂಲವನ್ನೂ ಸ್ವೀಕರಿಸಿದನು. ಬಳಿಕ ಆ ಅಳಿಯ ಮಾವಂದಿರು ದುರ್ಗವನ್ನು ವಶಮಾಡಿಕೊಳ್ಳಲು ಉಬ್ಬಿನಿಂದ ಸಾಗಿದರು. ಮಹಾರಾಜರು ಅವರನ್ನು ಆನಂದದಿಂದ ಕಳಿಸಿದರು.

## ಕೊಂಡಾಣೆಯ ದುರ್ಗವು

ಮುಂದಿನ ಕಥೆಯನ್ನು ಹೇಳುವ ಮೊದಲು ಕೊಂಡಾಣೆಯ ದುರ್ಗದ ಹಿಂದಿನ ಸಂಗತಿಯನ್ನೂ ಅದರ ರಚನೆಯನ್ನೂ ಕುರಿತು ವಾಚಕರಿಗೆ ಅಲ್ಪಸ್ವಲ್ಪ ತಿಳಿಸುವದು ತಕ್ಕದ್ದು; ಯಾಕಂದರೆ ದುರ್ಗದಲ್ಲಿ ನಡೆದ ಬಗೆಬಗೆಯ ಪ್ರಸಂಗಗಳು ಎಲ್ಲಿ ಎಲ್ಲಿ ಹ್ಯಾಗೆ ಹ್ಯಾಗೆ ವರ್ತಿಸಿದವೆಂಬದನ್ನು ತಿಳಕೊಳ್ಳಲಿಕ್ಕೆ ಅವರಿಗೆ ಅದರಿಂದ ಅನುಕೂಲವಾಗುವದು.

ಈ ದುರ್ಗವು ಪುಣೆಯ ನೈರುತ್ಯ ದಿಕ್ಕಿನಲ್ಲಿ ಸುಮಾರು ಏಳು ಹರದಾರಿಯ ಮೇಲೆ ಇರುತ್ತದೆ. ಸಿಂಹಗಡ, ಭುಲೇಶ್ವರ ಎಂಬ ಹೆಸರಿನ ಎರಡು ಗುಡ್ಡದ ಸಾಲುಗಳಲ್ಲಿರುವ ಬಹು ಎತ್ತರವಾದದ್ದೊಂದು ಶಿಖರದಮೇಲೆ ಇದು ಕಟ್ಟಲ್ಪಟ್ಟಿರುತ್ತದೆ. ದಕ್ಷಿಣದಿಕ್ಕಿನಲ್ಲಿಯೂ ಉತ್ತರದಿಕ್ಕಿನಲ್ಲಿಯೂ ಶಿಖರವು ಗೋಡೆಯ ಹಾಗೆ ಬಹು ನೆಟ್ಟಗೆ ಹೋಗಿದ್ದು, ಅಲ್ಲಿಂದ ದುರ್ಗಕ್ಕೆ ಕೊಳ್ಳೆಯಿಡುವದು ಅಶಕ್ಯವೆಂತಲೇ ಹೇಳಬಹುದು. ಈ ಕೋಟೆಯು ಎಂದು, ಯಾರಿಂದ ಕಟ್ಟಲ್ಪಟ್ಟಿತೆಂಬದನ್ನು ಹೇಳುವದು ಈಗ್ಗೆ ಶಕ್ಯವಾಗಿ ತೋರುವದಿಲ್ಲ; ಆದರೆ ಮುಸಲ್ಮಾನರ ಪ್ರವೇಶವು ಹಿಂದುಸ್ಥಾನದಲ್ಲಿ ಆಗುವ ಮೊದಲು, ಅಂದರೆ ಹಿಂದುಸ್ಥಾನ ದೊಳಗಿನ ಕೋಟೆಗಳೂ, ದುರ್ಗಗಳಿಗೂ, ಪುರಗಳಿಗೂ ಸಂಸ್ಕೃತ ಹೆಸರುಗಳನ್ನು ಕೊಡುತ್ತಿದ್ದಾಗ ಈ ದುರ್ಗವು ಕಟ್ಟಲ್ಪಟ್ಟಿರಬಹುದೆಂಬದು ಇದರ ಹೆಸರಿನಿಂದಲೂ, ದಂತಕಥೆಯಿಂದಲೂ ಗೊತ್ತಾಗುತ್ತದೆ. ಈ ದುರ್ಗಕ್ಕೆ ಸಿಂಹಗಡವೆಂಬ ಹೆಸರು ಬೀಳುವ ಮೊದಲು ಅದನ್ನು ಕೊಂಡಾಣೆಯ ದುರ್ಗವೆಂದು ಕರೆಯುತ್ತಿದ್ದರು. ಈವೊತ್ತಿಗೂ ಈ ದುರ್ಗದ ಒಂದು ಮಗ್ಗಲಿಗೆ ಕೋಂಡಣಪುರವೆಂಬ ಹೆಸರಿನ ಊರು ಇರುತ್ತದೆ. ಕೋಂಡಣಪುರವೆಂದರೆ ಕೌಂಡಿನ್ಯಪುರ ವೆಂತಲೂ, ಕೊಂಡಾಣಾ ಅಂದರೆ ಕೌಂಡಿನ್ಯಋಷಿಯ ಆಶ್ರಮಸ್ಥಾನವೆಂತಲೂ ದಂತಕಥೆಯಿಂದ ಗೊತ್ತಾಗುತ್ತದೆ. ಇಂದಿಗೂ ಆ ದುರ್ಗದಸುತ್ತಲು ವಾಸಿಸುವ ಕೋಳೀ ಜನರನ್ನು ಕೇಳಿದರೆ ಇದು ಕೌಂಡಿನ್ಯಋಷಿಯ ಅಥವಾ ಶೃಂಗಋಷಿಯ ತಪಶ್ಚರ್ಯದ ಸ್ಥಾನವೆಂದು ಹೇಳುತ್ತಾರೆ. ಅದು ಹ್ಯಾಗೇ ಇರಲಿ ''ಕೋಂಡಣಪುರ''ವೆಂಬ ಹೆಸರಿನೊಳಗಿನ ಪುರವೆಂಬ ಶಬ್ದದ ಮೇಲಿಂದ ''ಕೋಂಡಣ''ವೆಂಬ ಶಬ್ದವು ಮುಸಲ್ಮಾನರ ತರದ್ದಲ್ಲವೆಂಬದು ಸ್ಪಷ್ಟವಾಗಿ ಗೊತ್ತಾಗುವದು. ಇನ್ನು ''ಕೋಂಡಣಪುರ'' ವೆಂದರೆ ''ಕುಂಡಿನಪುರ''ವೆಂತಾಗಲಿ, ''ಕೌಂಡಿನ್ಯಪುರ''ವೆಂತಾಗಲಿ ಆಗಬಹುದು. ಅದರಂತೆ ಕೋಂಡಾಣೆ ಎಂದರೆ ಕುಂಡಿನಗಡ ಇಲ್ಲವೆ ಕೌಂಡಿನ್ಯಗಡವೆಂತಾಗಲಿ

ಆಗಬಹುದು; ಆದ್ದರಿಂದ ಈ ದುರ್ಗವನ್ನು ಮುಸಲ್ಮಾನರು ಕಟ್ಟಿಸಿದರೆಂಬ ಕಲ್ಪನೆಯನ್ನು ಸಹ ಮನಸ್ಸಿನಲ್ಲಿ ತರಲಾಗದು. ಮೂಲ ಯಾದವರ ವಂಶದ ಇಲ್ಲವೆ ಶಿಲಾಹಾರರ ವಂಶದ ಅಥವಾ ಅದಕ್ಕೂ ಪೂರ್ವದ ಯಾವದೊಂದು ರಾಜವಂಶದ ಪರಾಕ್ರಮಶಾಲಿಯಾದ ಅರಸನು ಇದನ್ನು ಕಟ್ಟಿಸಿರಬಹುದು. ಇತಿಹಾಸದಲ್ಲಿ ಮೊಟ್ಟಮೊದಲು ಈ ದುರ್ಗದ ಹೆಸರು ತಘಲಕ ಮಹಮ್ಮದನ ಕಾಲದಲ್ಲಿ ಬಂದಿರುತ್ತದೆ. ಆಗ ನಾಗನಾಯಕನೆಂಬ ಹೆಸರಿನ ಯಾವನೋ ಒಬ್ಬ ಕೋಳಿಯ ಜಾತಿಯ ಅರಸನು ಈ ಪ್ರಾಂತವನ್ನು ಆಳುತ್ತಿದ್ದನು. ಅವನ ವಶದಲ್ಲಿ ಈ ದುರ್ಗವಿತ್ತು. ತಘಲಕಮಹಮ್ಮದನು ಈ ಪ್ರಾಂತದ ಮೇಲೆ ದೌಡುಮಾಡಿ ನಾಗನಾಯಕನನ್ನು ಹಣ್ಣುಮಾಡಿದ್ದರಿಂದ ಆ ನಾಯಕನು ತನ್ನ ಜನರೊಡನೆ ಈ ದುರ್ಗವನ್ನು ಸೇರಿದನು. ದುರ್ಗದ ಮೇಲೆ ಶಸ್ತ್ರಾಸ್ತ್ರ ಪ್ರಯೋಗಮಾಡಿ ಅದನ್ನು ಕೈವಶಮಾಡಿಕೊಳ್ಳುವದು ಕೇವಲ ಅಶಕ್ಯವಾಗಿತ್ತು. ಈ ಮಾತಿನ ಅನುಭವವು ಮಹಮ್ಮದನಿಗೆ ಬಂದದ್ದರಿಂದ ಆತನು ಎಂಟು ತಿಂಗಳವರೆಗೆ ಕೋಟೆಯನ್ನು ಮುತ್ತಿ ಒಳಗಿನವರಿಗೆ ಕಾಳು ಮೇವುಸಿಗದಂತೆ ಮಾಡಿದನು; ಆದ್ದರಿಂದ ನಾಗನಾಯಕನು ಕೋಟೆಯನ್ನು ಬಿಟ್ಟುಕೊಟ್ಟನು.

ಮುಂದೆ ಈ ದುರ್ಗವು ಅಹಮ್ಮದನಗರದ ರಾಜ್ಯ ಸ್ಥಾಪಕನಾದ ಮಲಿಕಮಹಮ್ಮದನ ಕೈಸೇರಿತೆಂದುಗೊತ್ತಾಗುತ್ತದೆ. ಅಹಮ್ಮದನಗರದವರ ಆಳಿಕೆಯಲ್ಲಿ ಶಿವಾಜಿಯ ತಂದೆಯಾದ ಶಹಾಜಿರಾಜನ ಕೈಯಲ್ಲಿ ಈ ದುರ್ಗವು ಇತ್ತು; ಮತ್ತು ತ್ರ್ಯಂಬಕದ ಸುಬೇದಾರನು ಶಿವಾಜಿ ಮಹಾರಾಜರ ತಾಯಿಯಾದ ಜೀಜಾಬಾಯಿಯವರನ್ನು ಸೆರೆಹಿಡಿದೊಯ್ದು ಬಿಟ್ಟಮೇಲೆ ಆ ಜೀಜಾಬಾಯಿಯವರು ಈ ಕೊಂಡಾಣೆಯ ದುರ್ಗದಲ್ಲಿಯೇ ಬಂದು ಇದ್ದರು. ವಿಜಾಪುರದ ಬಾದಶಹನು ತನ್ನನ್ನು ಬೆನ್ನಟ್ಟಿದ್ದರಿಂದ ಒಮ್ಮೆ ಶಹಾಜಿರಾಯರು ಇದೇ ದುರ್ಗದ ಆಶ್ರಯವನ್ನು ಮಾಡಬೇಕಾಯಿತು. ಮುಂದೆ ಅವರು ವಿಜಾಪುರದವರ ಚಾಕರಿಗೆ ನಿಂತಮೇಲೆ ಕೊಂಡಾಣೆಯು ವಿಜಾಪುರದವರ ಅಧೀನದಲ್ಲಿ ಉಳಿಯಿತು. ಪುಣೆಯ ಪ್ರಾಂತವನ್ನು ಸಂರಕ್ಷಿಸಿಕಾದುಕೊಳ್ಳಲಿಕ್ಕೆ ಈ ದುರ್ಗವು ಅತ್ಯುತ್ತಮವಾದದ್ದು; ಆದ್ದರಿಂದ ಯಾರೊಬ್ಬರ ಲಕ್ಷವು ಸ್ವಾಭಾವಿಕವಾಗಿಯೇ ಈ ದುರ್ಗದ ಕಡೆಗೆ ಹೋಗುತ್ತಿತ್ತು. ಶಿವಾಜಿಮಹಾರಾಜರು ಸ್ವರಾಜ್ಯ ಸ್ಥಾಪನೆಯ ಕಾರ್ಯವನ್ನು ಆರಂಭಿಸಿದಾಗ ಉಳಿದ ದುರ್ಗಗಳನ್ನು ತೆಗೆದುಕೊಳ್ಳುವ ಪೂರ್ವದಲ್ಲಿಯೇ ಅಂದರೆ ತೋರಣದ ದುರ್ಗದಲ್ಲಿ ತಮ್ಮ ಪರಾಕ್ರಮದ ತೋರಣವನ್ನು ಕಟ್ಟಿದ ಕೂಡಲೆ ಈ ದುರ್ಗವನ್ನು ಸ್ವಾಧೀನ ಮಾಡಿಕೊಂಡರು. ಮುಂದೆ ಬಹುದಿವಸ ಈ ದುರ್ಗವು ಮಹಾರಾಜರ ಅಧೀನದಲ್ಲಿಯೇ ಇತ್ತು; ಮತ್ತು ಶಾಹಿಸ್ತೇಖಾನನು ಪುಣೆಗೆ ಬಂದು ಗದ್ದಲ ಮೆಚ್ಚಿಸಿದಾಗ ಮಹಾರಾಜರು ಈ ಕೊಂಡಾಣೆಯ ದುರ್ಗದಲ್ಲಿ ಬಂದು ನಿಂತು ಪುಣೆಯಲ್ಲಿದ್ದ ಶಾಹಿಸ್ತೇಖಾನನನ್ನು ಹ್ಯಾಗೆ ಹೊಡೆಯ ಬೇಕೆಂಬದನ್ನೂ, ಅವನಮೇಲೆ ಹ್ಯಾಗೆ ಬೀಳಬೇಕೆಂಬದನ್ನೂ ಆಲೋಚಿಸಿ, ತಮ್ಮ ಆಲೋಚನೆಯನ್ನು ತೀವ್ರವಾಗಿಯೇ ಕೊನೆಗಾಣಿಸಿದರು. ಈ ಆಲೋಚನೆಯನ್ನು ಕೊನೆಗಾಣಿಸಿದ ರೀತಿಯು ಬಹು ಚಮತ್ಕಾರದ್ದಾಗಿರುವದು. ಈ ಕೆಲಸಕ್ಕಾಗಿ ಮಹಾರಾಜರು

ತಮ್ಮ ಸಂಗಡ ಬರಿಯ ಇಪ್ಪತ್ತೈದು ಮಂದಿ ಮಾವಳೆಯರನ್ನೂ, ತಾನಾಜಿ ಮಾಲಸುರೆಯನ್ನೂ, ಏಸಾಜಿ ಕಂಕನನ್ನೂ ಕರಕೊಂಡಿದ್ದರು; ಮತ್ತು ರಾತ್ರಿ ಪುಣೆಯಲ್ಲಿ ದೀವಟಿಗೆಯ ಬೆಳಕಿನಲ್ಲಿ ಸಾಗಿರುವ ಲಗ್ನದ ಮೆರವಣಿಗೆಯಲ್ಲಿ ಅಲ್ಲಿಯೊಬ್ಬರು ಇಲ್ಲಿಯೊಬ್ಬರು ಸೇರಿಕೊಂಡು ಅಡಗುತ್ತ ಅವರು ಷಾಹಿಸ್ತೇಖಾನನು ಇಳಿದುಕೊಂಡಿದ್ದ ಮಂದಿರದ ಬಳಿಗೆ ಹೋದರು. ಚಿಕ್ಕಂದಿನಲ್ಲಿ ಶಿವಾಜಿಮಹಾರಾಜರು ದಾದಾಜಿ ಕೋಂಡ ದೇವನೆಂಬ ಬ್ರಾಹ್ಮಣನ ಶಿಕ್ಷೆಯಲ್ಲಿದ್ದ ಮಂದಿರವೇ ಇದಾದ್ದರಿಂದ ಮಹಾರಾಜರಿಗೆ ಆ ಮಂದಿರದ ಸ್ಥಳಗಳ ಗುರುತು ಚನ್ನಾಗಿ ಇತ್ತು. ಅವರು ಷಾಹಿಸ್ತೇಖಾನನಿದ್ದ ಮಹಾಲಿನ ಒಂದು ಕಿಡಕಿಯ ಮಾರ್ಗದಿಂದ ಮಹಲಿನೊಳಗೆ ಒಮ್ಮಿಂದೊಮ್ಮೆ ಪ್ರವೇಶಿಸಿದರು. ಖಾನನು ಚಿಕ್ಕಂದದಿಂದ ಕುಳಿತಿದ್ದನು. ಆತನ ಕನಸು ಮನಸುಗಳಲ್ಲಿಲ್ಲದ ಈ ಗೊಂದಲನ್ನು ನೋಡಿ ಬೆದರಿ, ಶಿವಾಜಿಮಹಾರಾಜರವರ ಹಾಗೂ ಏಸಾಜಿಕಂಕನ ಕಡತವನ್ನು ತಪ್ಪಿಸಿಕೊಂಡು ಓಡತೊಡಗಿದನು. ಆತನು ಒಂದು ಕಿಡಕಿಯೊಳಗಿಂದ ಪಾರಾಗಿ ಹೋಗುವಾಗ ಒಂದು ಕಡತ ಹತ್ತಿ ಕೈಬೆರಳುದುರಿ ನೆಲಕ್ಕುರುಳಿದನು. ಆಗ ಆತನ ಇಬ್ಬರು ದಾಸಿಯರು ಆತನನ್ನು ದರದರ ಎಳಕೊಂಡು ಹೋಗಿ ಎಲ್ಲಿಯೋ ಒಂದು ಸುರಕ್ಷಿತವಾದ ಸ್ಥಳದಲ್ಲಿಟ್ಟರು. ಅಷ್ಟರಲ್ಲಿ ಮಂದಿರದೊಳಗೆ ಅಲ್ಲೋಲ ಕಲ್ಲೋಲವಾಯಿತು. ಆಗ ಶಿವಾಜಿಮಹಾರಾಜರೂ ಅವರ ಸಂಗಡಿಗರೂ ಸಪ್ಪಳಿಲ್ಲದೆ ತಪ್ಪಿಸಿಕೊಂಡು ಕೋಂಡಾಣೆಯ ಹಾದಿಯನ್ನು ಹಿಡಿದರು. ಮುಂದೆ ಮೊಗಲರು ಆ ದುರ್ಗವನ್ನು ಸ್ವಾಧೀನಪಡಿಸಿಕೊಳ್ಳುವದಕ್ಕಾಗಿಯೂ, ಆ ಪುಂಡ ಶಿವಾಜಿಯನ್ನು ದಂಡಿಸುವದಕ್ಕಾಗಿಯೂ ದಂಡನ್ನು ಕಳಿಸಿದರು; ಆದರೆ ದುರ್ಗದ ಬಳಿಗೆ ಹೋದಕೂಡಲೆ ಮೇಲಿನಿಂದ ಬಂದೂಕಿನ ಗುಂಡುಗಳ ಮಳೆಸುರಿಯತೊಡಗಿತು; ಮತ್ತು ಅದರೊಳಗಿಂದ ಪಾರಾಗಿ ಅವರು ಪುಣೆಯ ಹಾದಿಯನ್ನು ಹಿಡಿಯುತ್ತಿರಲು, ಹಾದಿಯಲ್ಲಿ ಅಡಗಿಕೊಂಡು ಕುಳಿತಿದ್ದ ಮಾವಳೆಯ ದಂಡಾಳುಗಳು ಅವರನ್ನು ಗುಂಡುಗಳ ಹೊಡತದಿಂದ ದಿಕ್ಕುಗಳ ಪಾಲುಮಾಡಿದರು! ಅಂದಿನಿಂದ ಮುಂದೆ ಬಹುಕಾಲ ಈ ದುರ್ಗದ ಗೊಡವಿಗೆ ಯಾರೂ ಹೋಗಲಿಲ್ಲ. ಸನ್ 1664ರಲ್ಲಿ ಸುರತವನ್ನು ಸುಲಿದು ಬಂದಬಳಿಕ ತಂದೆಯಾದ ಶಹಾಜಿಯ ಮರಣವನ್ನು ಕೇಳಿ ದುಃಖಿತರಾದ ಮಹಾರಾಜರು ಈ ದುರ್ಗಕ್ಕೆ ಬಂದು ಅಲ್ಲಿಯೇ ತಂದೆಯ ಉತ್ತರಕ್ರಿಯೆಯನ್ನು ತೀರಿಸಿಕೊಂಡರು.

ಮುಂದೆ 1665ನೆಯ ಇಸವಿಯಲ್ಲಿ ಜಯಸಿಂಗನು ಮಾತ್ರ ಯುಕ್ತಿಪ್ರಯುಕ್ತಿಯಿಂದ ಆ ದುರ್ಗವನ್ನು ಕೈವಶಮಾಡಿಕೊಂಡು ಅಲ್ಲಿ ತನ್ನ ದಂಡನ್ನು ಇಟ್ಟನು. ಆಮೇಲೆ ಔರಂಗಜೇಬನು ಮಹಾರಾಜರಿಗೆ "ರಾಜನೆಂಬ ಪದವಿಯನ್ನು ಕೊಟ್ಟು ಅವರೊಡನೆ ಒಡಂಬಡಿಕೆಯನ್ನು ಮಾಡಿಕೊಂಡಾಗ ಅವರ ಎಲ್ಲ ಕೋಟೆಗಳನ್ನು ಅವರಿಗೆ ತಿರುಗಿ ಕೊಟ್ಟನು; ಆದರೆ "ಕೊಂಡಾಣೆ" "ಪುರಂದರ" ಇವೆರಡು ಕೋಟೆಗಳನ್ನು ಮಾತ್ರ ಕೊಡಲಿಲ್ಲ. ಯಾಕಂದರೆ ಅವೆರಡು ದುರ್ಗಗಳು ಆ ಪ್ರಾಂತಗಳ ಮೂಗಿನಂತೆ ಇದ್ದವು. ಮೂಗು ಹಿಡಿದರೆ ಬಾಯಿ ತಾನೇ ತೆರೆಯುವದೆಂಬ ಗಾದೆಯಂತೆ ಇವೆರಡೂ ದುರ್ಗಗಳು

ಔರಂಗಜೇಬನ ಕೈಯಲ್ಲಿದ್ದದರಿಂದ ಅವುಗಳ ನೆರೆಯ ಪ್ರದೇಶಗಳು ಮಹಾರಾಜರ ಕೈಯಲ್ಲಿ ಇದ್ದೂ ಇಲ್ಲದಹಾಗೆ ಆಗಿದ್ದವು; ಆದ್ದರಿಂದ ಇವೆರಡು ಕೋಟೆಗಳು ಕೈಬಿಟ್ಟು ಹೋದದ್ದಕ್ಕಾಗಿ ಮಹಾರಾಜರಿಗೆ ಬಹಳ ಅಸಮಾಧಾನವಾಗಿತ್ತು. ಏನಾದರೂ ಮಾಡಿ ಈ ಕೋಟೆಗಳನ್ನು ಅವಶ್ಯವಾಗಿ ಸ್ವಾಧೀನಪಡಿಸಿಕೊಳ್ಳಲೇಬೇಕೆಂದು ಅವರ ಮನಸ್ಸಿನ ನಿಶ್ಚಯವಿತ್ತು; ಆದರೆ ಔರಂಗಜೇಬನೊಡನೆ ಮಾಡಿಕೊಂಡಿದ್ದ ಒಪ್ಪಂದವನ್ನು ಕಾರಣವಿಲ್ಲದೆ ಮುರಿಯುವದು ಸರಿಯಲ್ಲೆಂದು ಅವರು ನಿರ್ವಾಹವಿಲ್ಲದೆ ಇಷ್ಟು ದಿವಸ ಸುಮ್ಮನಿದ್ದರು. ಈಗ ಉದಯ ಭಾನುವಿನ ಆಗಮನದಿಂದಲೂ, ಅವನ ವಿಷಯವಾಗಿ ಬಂದ ಸುದ್ದಿಗಳಿಂದಲೂ ಮಹಾರಾಜರಿಗೆ ಆಯತವಾಗಿ ಕಾರಣದೊರೆಯಿತು. ಕೊಂಡಾಣೆಯ ದುರ್ಗವನ್ನು ಸ್ವಾಧೀನ ಪಡಿಸಿಕೊಂಡರೆ ಸ್ವಲ್ಪವಾದರೂ ಮೊಗಲರ ಮೂಗು ಕೊಯ್ದಂತಾಗುವದೆಂದು ತಿಳಿದು ಮಹಾರಾಜರು ಆ ಕೆಲಸಕ್ಕಾಗಿ ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ತಾನಾಜಿಯನ್ನು ನಿಯಮಿಸಿದರು. ಈ ಕೆಲಸವನ್ನಿಷ್ಟು ಸ್ವತಃ ಮಾಡಬೇಕೆಂದು ಮಹಾರಾಜರ ಮನಸ್ಸಿನಲ್ಲಿತ್ತು; ಆದರೆ ತಾನಾಜಿಯು ಎಷ್ಟು ಹೇಳಿದರೂ ಒಡಂಬಡದೆ, ತಾವು ಸ್ಥಳಬಿಟ್ಟು ಕದಲಕೂಡದೆಂದು ಮಹಾರಾಜರಿಗೆ ಸ್ಪಷ್ಟವಾಗಿ ಹೇಳಿ ತಾನು ಹತ್ತುಹನ್ನೆರಡು ದಿನಗಳಲ್ಲಿ ದುರ್ಗವನ್ನು ವಶಪಡಿಸಿ ಕೊಳ್ಳುವೆನೆಂದು ಪ್ರತಿಜ್ಞೆ ಮಾಡಿದನು. ಅದನ್ನು ಕೇಳಿ ಮಹಾರಾಜರಿಗೆ ನಿಜವಾಗಿ ಬಹಳ ಸಂತೋಷವಾಯಿತು. ತಾನಾಜಿಯು ಇಂಥಾದೊಂದು ಕೆಲಸವನ್ನು ಮಾಡಿಯೇ ತೀರುವೆನೆಂದು ಪ್ರತಿಜ್ಞೆಮಾಡಿದರೆ, ಅವನು ಆ ಕೆಲಸವನ್ನು ಮಾಡದೆ ಬಿಡುವದಿಲ್ಲೆಂಬ ನಂಬಿಗೆಯು ಮಹಾರಾಜರಿಗೆ ಇತ್ತು.

ಕೊಂಡಾಣೆಯ ಪ್ರಚಂಡವಾದ ದುರ್ಗವು ಸಮುದ್ರದ ಮೇಲ್ಮೈಯಿಂದ ಕೆಲವು ಕಡೆಯಲ್ಲಿ 2300 ಫೂಟು, ಕೆಲವು ಕಡೆಯಲ್ಲಿ 2500 ಫೂಟು ಎತ್ತರವಿರುತ್ತದೆ. ಇದಕ್ಕೆ ಎಲ್ಲಿಯೂ ಸುಲಭಮಾರ್ಗವಿರುವದಿಲ್ಲ. ಸುಲಭವಾದದ್ದೇ ಆಗಲಿ, ಕಠಿಣವಾದದ್ದೇ ಆಗಲಿ ಅದಕ್ಕೆ ಹಾದಿಯೇ ಇಲ್ಲೆಂದು ಹೇಳಿದರೂ ಸಲ್ಲುವದು. ಸದ್ಯಕ್ಕೆ ಇದಕ್ಕೆ ಎರಡು ಬಾಗಿಲು ಗಳಿರುತ್ತವೆ. ಆದರೆ ಪೂರ್ವಕಾಲದಲ್ಲೋ ಇದಕ್ಕೆ ಇನ್ನೊಂದು ಬಾಗಿಲು ಇತ್ತೆಂಬಂತೆ ತೋರುತ್ತದೆ. ಪುಣೆಯ ಕಡೆಯಿಂದ ಬರುವ ಜನರು ಗಡವನ್ನು ಪ್ರವೇಶಿಸುವ ಬಾಗಿಲಿಗೆ ಪುಣೆಯ ಬಾಗಿಲೆಂತಲೂ, ಕಲ್ಯಾಣವೆಂಬ ಊರಕಡೆಗಿರುವ ಬಾಗಿಲಿಗೆ ಕಲ್ಯಾಣದ ಬಾಗಿಲೆಂತಲೂ ಅನ್ನುವರು. ಇವೆರಡು ಬಾಗಿಲು ಈಗ್ಗೆ ಸ್ಪಷ್ಟವಾಗಿ ನಿಂತಿರುತ್ತವೆ; ಆದರೆ ಝುಂಜಾರ ಕೊತ್ತಲಕ್ಕೂ ಪಾತರದಾಕೆಯ (ಕಲಾವಂತಿಣಿಯ) ಕೊತ್ತಲಕ್ಕೂ ನಡುವೆ ಇರುವ ಕಂದರದ ದಕ್ಷಿಣದಲ್ಲಿ ಝುಂಜಾರ ಕೊತ್ತಲದ ಮಗ್ಗಲಿಗೆ ಇನ್ನೊಂದು ಬಾಗಿಲವಿತ್ತು. ಈಗ ಅದರ ಸುದ್ದಿಯೇ ಇಲ್ಲವು.

ಈ ದುರ್ಗದ ಸುತ್ತುಮುತ್ತಲು ಕೋಳೀ ಜನರ ವಸತಿಯು ಇತ್ತು; ಆ ಜನರೊಳಗಿನವನೇ ರಾಯಾಜಿ ಎಂಬ ಹೆಸರಿನವನೊಬ್ಬ ಮನುಷ್ಯನು ಈ ನಮ್ಮ ಕಥೆ ಆದ ಕಾಲದಲ್ಲಿ ಫೇರೇಸರನಾಯಕನಾಗಿದ್ದನು. ಉದಯಭಾನುವು ಕೋಟೆಯಲ್ಲಿ ಬರುವಮೊದಲು

ಕೋಟೆಯ ಸಂರಕ್ಷಣಕ್ಕಾಗಿ ಯಾರೂ ಅಷ್ಟು ಎಚ್ಚರಪಡುತ್ತಿದ್ದಿಲ್ಲ; ಯಾಕಂದರೆ ಕೋಟೆಯು ದುರ್ಗಮವಾದದ್ದೆಂಬದು ಎಲ್ಲರಿಗೆ ಗೊತ್ತಿದ್ದ ಸಂಗತಿಯಾಗಿತ್ತು; ಆದರೆ ಕಮಲಕುಮಾರಿಯನ್ನು ಯಾರಾದರೂ ಮೋಸಮಾಡಿ ತನ್ನಬಳಿಯಿಂದ ಓಡಿಸಿಕೊಂಡು ಹೋದಾರೆಂಬ ಅಂಜಿಕೆ ಯಿಂದ ಉದಯಭಾನುವು ಕೋಟೆಯಲ್ಲಿ ತಾನು ಕಾಲಿಟ್ಟ ಕ್ಷಣದಿಂದ ಅದರ ರಕ್ಷಣದ ವಿಷಯವಾಗಿ ಬಹಳ ಎಚ್ಚರಪಡಹತ್ತಿದನು. ಮೊದಲು ಆತನು ಘೇರೇಸರನಾಯಕನನ್ನೂ, ಡೋಣಜೆ, ಕಲ್ಯಾಣ, ಕೊಂಕಣಪುರ ಮೊದಲಾದ ಸ್ಥಳಗಳ ಗೌಡ ಶಾನುಭೋಗರನ್ನೂ, ಮಾದಿಗರು ರಾಮೋಶಿಗಳು ಮೊದಲಾದವರನ್ನೂ ಕರಿಸಿ ಅವರಿಗೆ—ನಿಮ್ಮ ಊರಿಗೆ ಹೊರಗಿಂದ ಬರುವರು ಗಂಡಸರೇ ಇರಲಿ, ಹೆಂಗಸರೇ ಇರಲಿ, ಹುಡುಗರೇ ಇರಲಿ ಅವರು ಬರುವ ಮೊದಲು ಕೋಟೆಯಮೇಲೆ ನನ್ನ ತನಕ ಸುದ್ದಿಯು ಬರಲಿಕ್ಕೇ ಬೇಕು; ನಾನು ಕೈಮುಟ್ಟಿ ಬರಕೊಟ್ಟ ಅಪ್ಪಣೆಯು ದೊರೆತಬಳಿಕ ಅವರನ್ನು ಒಳಗೆ ಕರಕೊಳ್ಳಬೇಕು. ಹುಕುಮಿನಲ್ಲಿ ಎಷ್ಟು ದಿವಸ ಇರಬೇಕೆಂದು ಬರೆದಿರುತ್ತದೋ ಅಷ್ಟೇದಿವಸ ಅವರು ನಿಮ್ಮಲ್ಲಿ ಅತಿಥಿಯಾಗಿರಬಹುದು. ಮತ್ತು ಆ ಹುಕುಮಿನಂತೆ ಬಂದವನು ತಿರುಗಿ ದುರ್ಗದ ಗಡಿಯನ್ನು ದಾಟಿ ಹೋದ ಕೂಡಲೇ ಕೋಟೆಯಮೇಲೆ ನನ್ನ ಕಡೆಗೆ ಸುದ್ದಿಯನ್ನು ಕಳಿಸಬೇಕು. ಗೊತ್ತುಮಾಡಿದ ದಿನಗಳವರೆಗೆ ಇರತಕ್ಕವನು ಪ್ರತಿದಿನ ಬೆಳಗಿಗೂ, ಸಂಜೆಗೂ ನಿಮ್ಮಲ್ಲಿ ಹಾಜರು ಇದ್ದ ಸುದ್ದಿಯನ್ನು ನನಗೆ ತಿಳಿಸಬೇಕು. ಈ ಅಪ್ಪಣೆಯ ವಿರುದ್ಧವಾಗಿ ನಡೆದವರನ್ನು ಗುಡ್ಡದ ಮೇಲಿಂದ ಕೆಳಗೆ ದೂಡಲಾದೀತು, ಎಂದು ಅಪ್ಪಣೆ ಮಾಡಿದನು.

ಈ ಮೇರೆಗೆ ಉದಯಭಾನುವು, ತೀಕ್ಷ್ಣವಾದ ಅಪ್ಪಣೆಯನ್ನಿತ್ತಿದ್ದರಿಂದ ಜನರೆಲ್ಲ ಹೌಹಾರಿ ಹೋಗಿದ್ದರು. ಬರುಹೋಗುವವರು ಎಂಥವರಿದ್ದರೂ ಅವರೆಲ್ಲರ ಸಲುವಾಗಿ ಈ ನಿಯಮವು ಹತ್ತುತ್ತಿತ್ತು. ಗುಡ್ಡದ ಕೆಳಗಿನ ಹಳ್ಳಿಗಳಲ್ಲಿಯಂತೂ ಗಸ್ತಿಯ ತಿರುಗುವ ವ್ಯವಸ್ಥೆಯನ್ನು ಮಾಡಿಯೇ ಇದ್ದನು. ಹೊರತು ಹಳ್ಳಿಗಳಿಗೂ ದುರ್ಗಕ್ಕೂ ನಡುವೆ ಗುಡ್ಡದ ಕೆಳಭಾಗದಲ್ಲಿದ್ದ ಹನ್ನೆರಡು ಗೇಟುಗಳಲ್ಲಿ ಪ್ರತಿಒಂದರ ಮೇಲೆ ಕೋಳಿಯ ಜನರು ಕಾವಲು ಇರುತ್ತಿತ್ತು. ಮೂರು ಮೂರು ತಾಸಿಗೊಮ್ಮೆ ಆ ಕಾವಲುಗಾರರು ಗಸ್ತಿಯ ಶಬ್ದವನ್ನು ಮಾಡುತ್ತ ತಮ್ಮ ತಮ್ಮ ಗೇಟಿನ ಎಡಬಲಗಳಲ್ಲಿದ್ದ ಗೇಟುಗಳ ಜನರ ಸುದ್ದಿಯನ್ನು ಕೇಳಿಕೊಳ್ಳಬೇಕೆಂದು ಕಟ್ಟಪ್ಪಣೆಮಾಡಿದ್ದನು. ಹೊರತು ಒಂದು ಗೇಟಿನೊಳಗಿನ ಮೂವರು ತಮ್ಮ ಬಲಗಡೆಯ ಗೇಟಿಗೆ ಹೋಗಬೇಕು; ಆಮೇಲೆ ಆ ಬಲಗಡೆಯ ಗೇಟಿನೊಳಗಿನ ಮೂವರು ತಮ್ಮ ಬಲಗಡೆಯ ಗೇಟಿಗೆ ಹೋಗಬೇಕು. ಹೀಗೆ ಒಂದು ಗೇಟಿನಿಂದ ಮತ್ತೊಂದು ಗೇಟಿನವರೆಗೆ ಹೋಗಿ ಗಸ್ತಿಯನ್ನು ಮುಟ್ಟಿಸುತ್ತ ಬೆಳತನಕ ಒಂದೇಸವನೆ ಕೋಟೆಯ ಸುತ್ತಲು ಗಸ್ತಿಯನ್ನು ತಿರುಗಬೇಕೆಂದು ಗೊತ್ತುಪಡಿಸಿದ್ದನು. ಒಟ್ಟಿಗೆ ಕೋಳಿಯ ಜನರು ರಾತ್ರಿಯೆಲ್ಲ ಎಚ್ಚರದಿಂದ ಇರಬೇಕಾಗುತ್ತಿತ್ತು. ಈ ಕೋಳಿಯ ಜನರಷ್ಟೇ ಕೋಟೆಯ ಹೊರಗಿನ ಕಾವಲುಗಾರರಿದ್ದಿಲ್ಲ; ಕೋಟೆಯ ಗೋಡೆಯ ಹೊರಮುಗ್ಗಲಿಗೆ ಅದರ ಬುಡದಿಂದ ಹೆಚ್ಚು ಕಡಿಮೆ ಒಂದುವರೆ ಆಳಿನ ಕೆಳಗೆ ಎಲ್ಲ ಕೋಟೆಯ ಸುತ್ತಲು ನಾಲ್ಕಯ್ದು ಮೊಳ ಅಗಲವಾದ ಸ್ಥಳವನ್ನು ಮಾಡಿಸಿದ್ದರು.

ಅಲ್ಲಿ ಮಾದಿಗರ ಗುಡಿಸಲುಗಳಿದ್ದವು. ಅವರು ಅಲ್ಲಿಯ ಕಾವಲುಗಾರರಾಗಿದ್ದರು. ಎಚ್ಚತ್ತು ಮಾಡುವ ಕಾವಲಿನಲ್ಲಿ ಈ ಮಾದಿಗರ ಕಾವಲೇ ಹೆಚ್ಚಿನದು. ಇವರ ಕಾವಲಿನ ಸ್ಥಳವಾದರೂ ಬಹು ಬಿಕ್ಕಟ್ಟಿನದು.

ಉದಯಭಾನುವು ಕಾವಲಿನ ಈ ಎಲ್ಲ ಜನರನ್ನು ಒಮ್ಮೆ ತನ್ನೆದುರಿಗೆ ಕರೆಯ ಕಳುಹಿ, ಎಚ್ಚರದಿಂದ ಕಾದಿರುವ ಬಗ್ಗೆ ಕಟ್ಟಪ್ಪಣೆಯನ್ನಿತ್ತನು; ಮತ್ತು ಒಮ್ಮೆ ಆ ಮಾದಿಗರ ಕಾವಲಿನ ಸ್ಥಳಗಳನ್ನೂ, ಕೋಳಿಯ ಜನರ ಮೇಟಿಗಳನ್ನೂ ಕೋಟೆಯ ಸುತ್ತೆಲ್ಲ ತಿರುಗಿ ಅವನು ಕಣ್ಣುಮುಟ್ಟಿ ನೋಡಿದನು. ಅವನು ಹೀಗೆ ಕೋಟೆಯ ಕೆಳಗೆ ಗಟ್ಟಿಮುಟ್ಟಿ ಕಾವಲು ಇಟ್ಟಂತೆ ಕೋಟೆಯ ಮೇಲೆಯಾದರೂ ತಕ್ಕ ಬಂದೋಬಸ್ತು ಮಾಡಿದ್ದನು.

## ಗೊಂದಲಿಗರ ತೋತಾರಾಮನು

ಘೇರೇಸರನಾಯಕನಾದ ರಾಯಾಜಿಯ ಮನೆಯಲ್ಲಿ ಆತನ ಮಗಳ ಲಗ್ನವು ಬಂದಿತು. ಅದಕ್ಕಾಗಿ ಸ್ವಾಭಾವಿಕವಾಗಿಯೇ ಬಹುದೊಡ್ಡ ನಿಬ್ಬಣವು ನೆರೆಯತಕ್ಕದ್ದಾಯಿತು. ಆಗಿನ ಕಾಲದಲ್ಲಿ ಆ ನಿಟ್ಟಿನ ಮಾವಳದ ಸೀಮೆಯಲ್ಲಿ ರಾಯಾಜಿಯ ಕುಲದವರಾದ ಕೋಳೀ ಜಾತಿಯ ಜನರ ಸಂಖ್ಯೆಯೇ ವಿಶೇಷವಾಗಿತ್ತು. ಆ ಪ್ರಾಂತವು ಕೋಳಿಯ ಜನರದೇ ಇತ್ತೆಂದು ಹೇಳಿದರೂ ಸಲ್ಲುವಹಾಗಿತ್ತು. ಅದರಲ್ಲಿ ಘೇರೇಸರನಾಯಕನ ಪ್ರಸಿದ್ಧಿಯು ಬಹಳ. ಆತನು ತನ್ನ ಜನರ ಮಟ್ಟಿಗೆ ಅರಸನಂತೆ ಇದ್ದನೆಂದು ಹೇಳಬಹುದು! ಇಂಥವನ ಮಗಳ ಲಗ್ನವೆಂದ ಬಳಿಕ ಕೇಳುವದೇನು? ಸುತ್ತುಮುತ್ತಲಿನ ಇಪ್ಪತ್ತು ಇಪ್ಪತ್ತೈದು ಊರುಗಳ ಜನರ ಗುಂಪೇ ಹೊರಳಿ ಬರತಕ್ಕದ್ದು. ಇತ್ತ ಉದಯಭಾನುವಂತು ತನ್ನ ಅಪ್ಪಣೆಯ ಹೊರತು ದುರ್ಗದ ಹದ್ದಿನಲ್ಲಿ ಒಂದು ಪಿಳ್ಳಿಕೂಡ ಅಡ್ಡಹಣಕಲಾಗದೆಂದು ಕಟ್ಟಪ್ಪಣೆಯನ್ನು ಮಾಡಿದ್ದನು. ಇದನ್ನೆಲ್ಲ ಮನಸ್ಸಿನಲ್ಲಿ ತಂದುರಾಯಬಾನು ವಿಚಾರಮಾಡತೊಡಗಿದನು. ಲಗ್ನದ ಸಲುವಾಗಿ ನಾಲ್ಕೆಂಟು ದಿನ ನಿಬ್ಬಣದವರಿಗೆ ಬರಹೋಗಲಿಕ್ಕೆ ಒಪ್ಪಿಗೆಯನ್ನು ಪಡೆಯುವದಕ್ಕಾಗಿ ಆತನು ಉದಯಭಾನುವಿನ ಬಳಿಗೆ ಹೋದನು. ಮೊದಮೊದಲು ಉದಯಭಾನುವು ನಿಬ್ಬಣ ದವರಿಗೆ ಬೇಕಾದ ಹಾಗೆ ಎಡತಾಕಲಿಕ್ಕೆ ಒಪ್ಪಿಗೆ ಕೊಡಲು ಒಡಂಬಡಲಿಲ್ಲ. ಇದರಿಂದ ರಾಯಾಜಿಗೆ ಬಹಳ ಅಸಮಾಧಾನವಾದದ್ದಲ್ಲದೆ ಆತನಿಗೆ ಸ್ವಲ್ಪ ಸಿಟ್ಟೂ ಬಂದಿತು; ಆದರೆ ಒಮ್ಮೆಲೆ ಸಿಟ್ಟಿಗೇಳದೆ ಸಮಾಧಾನದಿಂದ ಕೆಲಸಮಾಡಿ ಕೊಳ್ಳುವದುತಕ್ಕದ್ದೆಂದು ತಿಳಿದು ಆತನು ಉದಯಭಾನುವಿಗೆ—"ಒಡೆಯರೇ, ಅಪ್ಪಣೆಕೊಡುವದು ಬಿಡುವದು ನಿಮ್ಮ ಕೈಯೊಳಗಿನದು. ಆದರೆ ನಮ್ಮ ಮನೆಯಲ್ಲಿ ಲಗ್ನವಿದ್ದು, ನಮ್ಮ ಜಾತಿಯವರಿಗೂ ಲಗ್ನಕ್ಕೆ ಬರುವದಕ್ಕೆ ಒಪ್ಪಿಗೆ ಇರಬಾರದೆಂದರೆ ಯಾವ ಸೀಮೆಯ ಮಾತು! ಮುಖ್ಯ ಬೀಗರೇ ಪುಣೆಯವರಿರಲು, ಅವರನ್ನೂ ಅವರ ಆಪ್ತೇಷ್ಟರನ್ನೂ ಬರಮಾಡಿಕೊಳ್ಳದಿದ್ದರೆ ಗತಿಯೇನು?

ತಮ್ಮ ಮನಸ್ಸಿಗೆ ಬಾರದಿದ್ದರೆ ನಾವು ಕೋಳಿಯ ಜಾತಿಯ ಜನರೆಲ್ಲ ಹೊರಟು ಹೋಗುತ್ತೇವೆ. ಲಗ್ನಕಾರ್ಯವು ತೀರಿದ ಮೇಲೆ ಬರುವೆವು. ಅಲ್ಲಿಯವರೆಗೆ ತಮ್ಮ ದುರ್ಗದ ಕಾವಲನ್ನು ತಾವು ನೋಡಿಕೊಳ್ಳಬೇಕು. ಹೀಗೆ ಮಾಡದಿದ್ದರೆ ನಮಗೆ ಎರಡನೆಯ ಹಾದಿಯೇ ಇಲ್ಲ, ಎಂದು ಹೇಳಿದನು.

ರಾಯಾಜಿಯು ಈ ಮಾತುಗಳನ್ನು ಸಿಟ್ಟಿನಿಂದ ಆಡದಿದ್ದರೂ, ಅವನು ಬಹುಖೇದ ದಿಂದಲೂ, ಸ್ಪಷ್ಟವಾಗಿಯೂ ಆಡಿದ್ದರಿಂದ ಅವನ ಮಾತುಗಳ ಹೊಯಿಲವು ಉದಯ ಭಾನುವಿನ ಮನಸ್ಸಿಗೆ ಹೊಳೆಯದೆ ಹೋಗಲಿಲ್ಲ. ಉದಯಭಾನುವು ಸ್ವಲ್ಪ ವಿಚಾರಮಾಡಿ ತನ್ನ ನಿಷ್ಠುರ ಮಾತಿಗಾಗಿ ತಾನೇ ಪಶ್ಚಾತ್ತಾಪಪಟ್ಟನು. ಆಗ ಅವನು ರಾಯಾಜಿಗೆ—ಒಪ್ಪಿಗೆ ಕೊಡುವದಕ್ಕೆ ನಾನೇನು ಒಲ್ಲೆನೆನ್ನುವದಿಲ್ಲ; ಆದರೆ ನಿಮ್ಮ ಜನರ ಲೆಕ್ಕವು ಹ್ಯಾಗೆಹತ್ತಬೇಕು, ಅನ್ನಲು ರಾಯಾಜಿಯು—"ದೊರೆಗಳೇ, ಹಾಗೆ ನಮ್ಮ ಜನರ ಲೆಕ್ಕವು ಹತ್ತಲಾರದು; ನಾನು ಇಲ್ಲದ ಬೂಟಾಟಿಕೆಯನ್ನು ಹೇಳಲಾರೆನು. ನಮ್ಮ ಕೋಳಿಯ ಜನರ ಲೆಕ್ಕವು ನಮಗಿರುತ್ತದೆ; ಆದರೆ ಯಾವಾಗ್ಗೆ ಎಷ್ಟು ಮಂದಿ ಬರುತ್ತಾರೆ, ಎಷ್ಟು ಮಂದಿ ಹೋಗುತ್ತಾರೆ, ಎಂಬದನ್ನು ಯಾರು ಹೇಳಬೇಕು? ನಮ್ಮ ಲಗ್ನಕ್ಕೆ ಅಂಥಿಂಥ ಮಂದಿ ಬಂದರೆ ಅದರ ಜವಾಬುದಾರಿಯು ನನ್ನ ಕಡೆಗೆ; ಆದರೆ ಜನರನ್ನೇ ಬರಗೊಡಬಾರದೆಂದು ತಾವು ಹೇಳಿದರೆ ಹ್ಯಾಗಾಗಬೇಕು? ನಾನು ಆಗಲೆ ಹೇಳಿದಂತೆ ನಮ್ಮೆಲ್ಲರಿಗೆ ನಾಲ್ಕುದಿನ ಅಪ್ಪಣೆಕೊಟ್ಟುಬಿಡಬೇಕು. ಕಾರ್ಯ ತೀರಿಸಿಕೊಂಡು ಬರುತ್ತೇನೆ. ನಮ್ಮ ಮನೆಯಲ್ಲಿ ಲಗ್ನವಿರಲು, ನಮ್ಮ ಜನರಿಗೇ ಬರಹೋಗಲಿಕ್ಕೆ ಪ್ರತಿಬಂಧವಾದ ಬಳಿಕ ಕಾರ್ಯವಾದರೂ ಹ್ಯಾಗಾಗಬೇಕು!

ತನ್ನ ಸಾಮರ್ಥ್ಯವೆಷ್ಟು, ದುರ್ಗದ ಮೇಲೆ ಕಾವಲಿಟ್ಟಿದ್ದ ಶೂರ ರಜಪೂತರಿಗೆ ತನ್ನ ಅಂಜು ಎಷ್ಟು, ಎಂಬದನ್ನು ಚನ್ನಾಗಿ ಅರಿತವನಾದುದರಿಂದಲೇ ರಾಯಾಜಿಯು ಇಷ್ಟು ಜಳಜಳ ಮಾತಾಡಿದನೆಂದು ಒಡೆದು ಹೇಳುವ ಕಾರಣವಿಲ್ಲ ಉದಯಭಾನುವು ರಾಯಾಜಿಯ ಈ ಸ್ಪಷ್ಟ ಮಾತುಗಳಿಗಾಗಿ ಸಂತಾಪಗೊಳ್ಳದ್ದಕ್ಕೂ, ಸಂತಾಪಗೊಂಡಿದ್ದರೂ ಅದನ್ನು ಹೊರ ಗೆಡವದಕ್ಕೂ ಈ ಮರ್ಮವೇ ಕಾರಣವು. ಈ ಕೋಳೀ ಜನರೆಲ್ಲ ನಿಜವಾಗಿ ಒಮ್ಮೆಲೆ ಬಿಟ್ಟು ಹೋದರೆ ನಮ್ಮ ಸ್ಥಿತಿ ಏನಾದೀತೆಂಬದನ್ನೂ, ಅವರಿಗೆ ಹೀಗೆ ಬಿಟ್ಟು ಹೋಗುವ ಸಂಧಿಯ ನ್ನಾದರೂ ಯಾಕೆ ಕೊಡಬೇಕೆಂಬದನ್ನೂ ಆತನು ತಿಳಿಯದಾದನು. ಲಗ್ನಕಾರ್ಯವೆಂದ ಮೇಲೆ ಆಪ್ತೇಷ್ಟರು ಬರಹೋಗುವದು ಸ್ವಾಭಾವಿಕವಿದ್ದು ಅದಕ್ಕೆ ಸುಮ್ಮನೆ ಪ್ರತಿಬಂಧ ಮಾಡಿ ಅವರ ಮನಸ್ಸು ನೋಯಿಸಿ, ಇಲ್ಲದ ತೊಂದರೆಯನ್ನು ಉಂಟುಮಾಡಿಕೊಳ್ಳುವದು ಹಿತವಲ್ಲೆಂಬ ವಿಚಾರವು ಅವನ ಮನಸ್ಸಿಗೆ ಹೊಳೆಯಿತು. ಈ ಬಗೆಯ ಹಲವು ವಿಚಾರಗಳು ಅವನ ಮನಸ್ಸಿನಲ್ಲಿ ಉತ್ಪನ್ನವಾಗಲು, ರಾಯಾಜಿಗೆ ಏನು ಹೇಳಬೇಕೆಂಬದನ್ನು ಅವನು ತಿಳಿಯ ದಾದನು. ಒಪ್ಪಿಗೆಯನ್ನಿತ್ತರೆ ತನ್ನ ಒಗರು ಕಡಿಮೆಯಾಗುವದೆಂತಲೂ, ಕೊಡದಿದ್ದರೆ ಅವರು ಬಿಟ್ಟು ಹೋಗಬಹುದೆಂತಲೂ ಒಮ್ಮೆ ಆತನು ಚಿಂತಿಸಿದನು. ಆದರೂ ಆತನು ತನ್ನ ಗೌರವಕ್ಕೆ ಬಾಧೆಬಾರದಂತೆಯೂ, ಕೋಳೀಜನರ ಮನಸ್ಸು ನೋಯದಂತೆಯೂ ಹಂಚಿಕೆ

ಮಾಡಬೇಕೆಂದು ನಿಶ್ಚಯಿಸಿ ರಾಯಾಜಿಗೆ—ಎಲ! ನಿಮ್ಮ ಲಗ್ನಕಾರ್ಯವು ಇಲ್ಲಿ ಆಗಬಾರದು, ನಿಮ್ಮ ಬೀಗರು ಬಿಜ್ಜರು ಬರಬಾರದು ಎಂದು ಯಾರು ಅಂದಾರು? ವಂಶಪರಂಪರೆಯಿಂದ ನೀವು ಬಾದಶಹನ ಹಿತ ಚಿಂತಕರ ಸೇವಕರಾಗಿರಲು, ಹೀಗೆ ನಿಮ್ಮ ಕಾರ್ಯಕ್ಕೆ ವಿಘ್ನವನ್ನು ಯಾರು ತಂದಾರು? ನಿಮ್ಮ ಮೇಲೆ ಅಪನಂಬಿಗೆಯನ್ನಾದರೂ ಯಾರು ಮಾಡಿಯಾರು? ನಿಮಗೆ ನಾನು ಇಷ್ಟು ನಿಷ್ಠುರದಿಂದ ಹೇಳಲಿಕ್ಕೆ ಕಾರಣವಿಷ್ಟೇ; ಈಗಿನ ಕಾಲವು ಕಠಿಣವು. ಸ್ವಸ್ಥವಾಗಿರುವಂತೆ ಇಲ್ಲ, ಆ ಪುಂಡ ಶಿವಾಜಿಯು ಕಣ್ಣಲ್ಲಿ ಎಣ್ಣೆಹಾಕಿಕೊಂಡು ಕುಳಿತಿರುವನು. ಯಾರಿಗೆ ಗೊತ್ತು! ಆತನು ತಟ್ಟನೆ ಬಂದು ನಿಮ್ಮ ಮೈಮರಸುತನದ ಲಾಭ ಮಾಡಿಕೊಂಡಾನು! ನಿಮ್ಮ ಭಾವಣೆಯಲ್ಲಿ ಅನ್ಯರು ಬಾರದಂತೆ ಎಚ್ಚರಪಟ್ಟರಾಯಿತು. ಇನ್ನೇನು ಹೆಚ್ಚಿಗೆ ಬೇಕಾಗಿರುವದು? ಇಷ್ಟು ಮಾತಿಗಾಗಿ ನಿನ್ನನ್ನು ಎಚ್ಚರಗೊಳಿಸುವದಕ್ಕಾಗಿಯೇ ನಾನು ಇಷ್ಟು ಸ್ಪಷ್ಟ ಮಾತಾಡಿದೆನು. ಇಲ್ಲದಿದ್ದರೆ ಮಾತಾಡುವ ಕಾರಣವೇ ಇದ್ದಿಲ್ಲ, ನಿನ್ನ ಮನೆಯ ಲಗ್ನವು ಬೇಕಾದ ಹಾಗೆ ನಡೆಯಲಿ, ನಿನ್ನ ಮನೆಯ ಲಗ್ನವು ನನ್ನ ಮನೆಯದೆಂದು ತಿಳಿದು ಸ್ವಲ್ಪ ಎಚ್ಚರಗೊಳಿಸಲಿಕ್ಕೆ ಹೆಚ್ಚಿಗೆರಡು ಮಾತಾಡಬೇಕಾಯಿತು. ರಾಯಾಜೀ, ನಿನ್ನಂಥವರಿಗೆ ಸ್ವಲ್ಪ ಸಿಟ್ಟು ಬರುವಹಾಗೆ ಮಾತಾಡುವದು ನೆಟ್ಟಗೆಂತಲೇ ಹೀಗೆ ಮಾಡಿದೆನು. ಇದಕ್ಕಿಂತ ಹೆಚ್ಚಿನ ಕಾರಣವೇನೂ ಇಲ್ಲ, ವಂಶಪರಂಪರೆಯಾಗಿ ಸೇವೆಮಾಡುತ್ತ ಬಂದವರ ಮನೆಯ ಲಗ್ನಕ್ಕೆ ಅವರ ಬೀಗರು ಬಿಜ್ಜರನ್ನು ಬರಗೊಡುವದಿಲ್ಲೆಂದು ಯಾರಾದರೂ ಅನ್ನುವದುಂಟೇ! ಬೇಕಾದಷ್ಟು ಜನರನ್ನು ಕರಕೊಂಡು ಬಾ, ಕಳಿಸುಬೇಕಾದಷ್ಟು ಜನರು ಬರಲಿ ಹೋಗಲಿ ಅದಕ್ಕೇನು ಬಂದದೆ? ಆದರೆ ಆ ಗದ್ದಲದಲ್ಲಿ ಮೋಸದಿಂದ ವೈರಿಗಳ ಕಡೆಯ ಗುಪ್ತಚಾರರು ಬಾರದಂತೆ ನೋಡಿಕೋ ಅಂದರಾಯಿತು. ಇದರ ಹೊರತು ಮತ್ತೆ ಯಾವ ಮಾತೂ ಹೇಳತಕ್ಕದ್ದಿರುವದಿಲ್ಲ.

ರಾಯಾಜಿಯೇನು ಕಡಿಮೆಯವನಿದ್ದಿಲ್ಲ. ತನ್ನ ನಿಸ್ಪೃಹವಾದ ಮಾತುಗಳಿಗೆ ಮೆತ್ತಗಾಗಿ ಅಪ್ಪನವರು ಇಷ್ಟುದ್ದ ಸಕ್ಕರೆಯಂಥ ಸವಿಮಾತುಗಳನ್ನು ಆಡಿದರೆಂದು ಆಗಲೆ ಕಂಡುಹಿಡಿದನು. ಆತನು ಉದಯಭಾನುವನ್ನು ಕುರಿತು—ನಾವು ವಂಶಪರಂಪರೆಯಿಂದ ಚಾಕರಿಯನ್ನು ಮಾಡುತ್ತ ಬಂದವರಂತೂ ಸರಿಯೇ, ಆದರೆ ತಾವು ನಮ್ಮನ್ನೇ ಮನ್ನಿಸಿ ನಮ್ಮ ಮೇಲೆ ಪೂರ್ಣ ವಿಶ್ವಾಸವಿಟ್ಟರೆ ಮಾತ್ರ ಅವರ ಉಪಯೋಗವು. ಇಲ್ಲಿಯವರೆಗೆ ಯಾವತ್ತೂ ಕಿಲ್ಲೆದಾರರು ನಮ್ಮ ಮೇಲೆ ಪೂರ್ಣ ವಿಶ್ವಾಸವಿಟ್ಟು, ರಾತ್ರಿಯೆಲ್ಲ ಗೊರಕೆ ಹೊಡೆಯುತ್ತ ಮಲಗಿ ಕೊಳ್ಳುತ್ತಿದ್ದರು, ಗೊರಕೆ ಹೊಡೆಯುತ್ತ! ಆದರೆ ದುರ್ಗದ ಕಡೆಗೆ ಬರಲಿಕ್ಕೆ ಇಲ್ಲವೆ ಹಣಿಕಿ ನೋಡಲಿಕ್ಕೆ ಅವನ ತಾಯಿಯೇನು ಹಡೆಯ ಬೇಕಾಗಿದೆ! ಯಾರಾದರೂ ಬಂದರೆ ಕೆಳಗಿನಿಂದ ಕೆಳಗೆ ನಾವು ದೂಳಹಾರಿಸಿ ಅವರನ್ನು ಓಡಿಸಿ ಬಿಡುತ್ತಿದ್ದೆವು. ಲಗ್ನಕ್ಕೆ ನನಗೇನು ಬಹಳ ದಿವಸ ಬೇಕಾಗುವದಿಲ್ಲ, ಶಿವರಾತ್ರಿಯವರೆಗೆ ಆದರೆ ಸಾಕು. ಶಿವರಾತ್ರಿಯ ಮರುದಿವಸ ಮತ್ತೆ ಮೊದಲಿನಂತೆ ಎಲ್ಲ ವ್ಯವಸ್ಥೆಮಾಡಿ, ಎಲ್ಲಜನರ ಹಾಜರಿಯನ್ನು ತಕ್ಕೊಂಡು, ಸಂಖ್ಯೆಯನ್ನು ತಮಗೆ ತಿಳಿಸಿ ತಮ್ಮನ್ನು ನಿಶ್ಚಿಂತರಾಗಮಾಡುವೆನು; ನೀವೇ ನೋಡಿರಿ,

ಇಂದು ನೀವು ನಮಗೆ ಪರವಾನಿಗಿಯನ್ನು ಕೊಡದಿದ್ದರೆ ನಮ್ಮ ಒಗರು ಏನು ಉಳಿಯುವದು? ನಮ್ಮ ಜಾತಿಯವರ ಮೇಲೆ ನಮ್ಮ ವರ್ಚಸ್ಸಾದರೂ ಹ್ಯಾಗೆ ಕೂಡುವದು? ನಾವು ತಮ್ಮ ನಂಬಿಗೆಯ ಸೇವಕರೆಂದು ಎಲ್ಲ ಕಡೆಯಲ್ಲಿ ಮೆರೆಯುತ್ತೇವೆ. ಓೀಗಿದ್ದು ಹೊತ್ತು ಬಿದ್ದಾಗ ನಮ್ಮ ಆಪ್ತೇಷ್ಟರನ್ನು ಕರತರುವದು ನಮ್ಮ ಕೈಯೆಲ್ಲಿರಬಾರದೆಂದ ಬಳಿಕ ಮಾಡುವದೇನು? ಅದಕ್ಕಾಗಿಯೇ ನಾನು ತಮಗೆ ಇಷ್ಟು ಹೇಳುವೆನು. ಎರಡನೆಯದೇನೂ ಇಲ್ಲ. ಈಗ ನೀವು ನಮಗೆ ಪರವಾನಿಗಿಯನ್ನು ಕೊಟ್ಟು ನಮ್ಮ ವಿನಂತಿಯನ್ನು ಮಾನ್ಯ ಮಾಡಿದ್ದರಿಂದ ನಮ್ಮ ಮೈಯೊಳಗೆ ಒಂದು ಬಟ್ಟು ಖಂಡವು ಹೆಚ್ಚಾದಂತಾಯಿತು!

ರಾಯಾಜಿಯ ಈ ಮಾತುಗಳಿಂದ ಉದಯಭಾನುವಿಗಾದರೂ ಸಂತೋಷವಾಯಿತು. ಆತನು ರಾಯಾಜಿಗೆ ಎಚ್ಚರದಿಂದಿರುವ ಬಗ್ಗೆ ಮತ್ತೊಮ್ಮೆ ಹೇಳಿ, ಖಡಕವಾಸಲೆ, ದೋಣಜಿ, ಕಲ್ಯಾಣ, ಕೊಂಡಣಪುರ, ಮೊದಲಾದ ಊರ ಅಧಿಕಾರಿಗಳಿಗೆ ಕೊಡುವದಕ್ಕಾಗಿ ಆಜ್ಞಾಪತ್ರ ಗಳನ್ನು ರಾಯಾಜಿಯ ಕೈಯಲ್ಲಿ ಕೊಟ್ಟನು. ಶಿವರಾತ್ರಿಯವರೆಗೆ ರಾಯಾಜಿಯ ಮನೆಗೆ ಬರುಹೋಗುವವರಿಗೆ ಯಾವ ತೊಂದೆರಯನ್ನೂ ಕೊಡಲಾಗದೆಂದು ಅವುಗಳಲ್ಲಿ ಬರೆದಿತ್ತು. ಈ ಆಜ್ಞಾಪತ್ರಗಳನ್ನು ರಾಯಾಜಿಯು ತನ್ನ ಗೇಟಿಗೆ ಬಂದಬಳಿಕ ಆಯಾ ಅಧಿಕಾರಿಗಳ ಕಡೆಗೆ ಕಳಿಸಿದನು. ಈ ಮೇರೆಗೆ ರಾಯಾಜಿಯ ಬೀಗರುಬಿಜ್ಜರಿಗೆ ಯಾವ ಬಗೆಯ ಪ್ರತಿಬಂಧವು ಆಗದಂತೆ ವ್ಯವಸ್ಥೆಯು ಮಾಡಲ್ಪಟ್ಟಿತು. ಫೇರೇಸರನಾಯಕನ ಮನೆಯ ಲಗ್ನವೆಂದಬಳಿಕ ಕೇಳುವದೇನು? ನಾಲ್ಕೂ ಕಡೆಯಿಂದ ಜನರು ಬಂದು ತುಂಬಹತ್ತಿದರು. ಲಗ್ನ ಸಮಾರಂಭವು ನಡೆಯಿತು. ಊಟ ಉಡಿಗೆಗಳು ಸಾಗಿದವು.

ಲಗ್ನ ಸಮಾರಂಭವೆಂದಬಳಿಕ ಈ ಕೋಳಿಯ ಜನರಲ್ಲಿ ಹಲವು ಬಗೆಯ ಕುಲಾಚಾರಗಳು ಇರತಕ್ಕವೆಂದು ಹೇಳುವ ಕಾರಣವಿಲ್ಲ. ಒಂದರಹಿಂದೊಂದು ದೇವತಾ ಕಾರ್ಯಗಳು ಆಗಹತ್ತಿದವು. ರಾಯಾಜಿಯು ಸ್ವಲ್ಪ ದುಂದುಗಾರನಾದದ್ದರಿಂದ ತನ್ನ ಮಗಳ ಲಗ್ನದಲ್ಲಿ ಇಂಥಾದ್ದೊಂದು ಮಾತಿನ ಕೊರತೆಯಾಯಿತೆಂದು ಜನರು ಹೆಸರಿಡಬಾರ ದೆಂದು ಕೈ ಸಡಿಲುಬಿಟ್ಟು ವೆಚ್ಚಮಾಡುತ್ತಿದ್ದನು. ಇರಲಿ, ಆ ಲಗ್ನ ಸಮಾರಂಭವನ್ನು ಇಲ್ಲಿ ವರ್ಣಿಸುವ ಅವಶ್ಯವಿಲ್ಲ. ಲಗ್ನವಾದಬಳಿಕ ಒದಗಿದ ಒಂದು ವಿಶೇಷ ಸಂಗತಿಯನ್ನು ಮಾತ್ರ ಇಲ್ಲಿ ವಿವರಿಸಬೇಕಾಗಿದೆ.

ಲಗ್ನಕಾರ್ಯವು ಯಥಾಸಾಂಗವಾಗಿ ಆಯಿತು. ರಾಯಾಜಿಯ ಬೀಗನಾದ ದೌಲತ್ತರಾವ ಎಂಬವನು ಪುಣೆಯವನಾಗಿದ್ದನು. ಆತನು ತನ್ನ ಬೀಗನಾದ ರಾಯಾಜಿಗೆ— ನೀವು ಲಗ್ನವನ್ನು ಬಹಳ ನೆಟ್ಟಗೆ ಮಾಡಿದಿರಿ; ಯಾತಕ್ಕೇನು ಕೊರತೆಯಾಗಲಿಲ್ಲ. ಇನ್ನು ಮೇಲೆ ಗೊಂದಲ ಹಾಕಿಬೇಕಾದರೆ ನಾವು ಹೇಳಿದ ಗೊಂದಲಿಗನಿಂದ ಮಾತ್ರ ಗೊಂದಲ ಹಾಕಿಸಬೇಕು. ನಮ್ಮ ಗೊಂದಲಿಗರವನು ಬಹಳ ಉತ್ತಮ ಗೊಂದಲ ಹಾಕುತ್ತಾನೆ. ಆತನ ಗೊಂದಲ ನೋಡಿದರೆ ನೀವು ಮರುಳಾಗಿ ಹೋದೀರಿ. ಅವನ ಮಾತೇನು, ಹಾಡೇನು, ಅಷ್ಟ ಕಥೆಯೇನು! ಉಳಿದ ಗೊಂದಲಿಗರು ಒಟ್ಟಿದ್ದಾರೆ ತಕ್ಕೊಂಡು ಮಾಡುವದೇನು? ನೀವು ಒಮ್ಮೆ

ಆತನ ಗೊಂದಲ ನೋಡಿದರೆ ತಿರುಗಿ ಮತ್ತೊಬ್ಬ ಗೊಂದಿಲಗನನ್ನು ಕರಿಸಲಿಕ್ಕಿಲ್ಲ ಎಂದು ಹೇಳಿದನು. ರಾಯಾಜಿಗೆ ತನ್ನ ಮನೆತನದ ಗೊಂದಲಿಗನ ಅಭಿಮಾನವು ಇತ್ತು, ಆದ್ದರಿಂದ ನಮ್ಮ ಗೊಂದಲಿಗನು ಸೊಟ್ಟಗೆ ನಿಮ್ಮ ಗೊಂದಲಿಗನು ನೆಟ್ಟಗೆ ಎಂಬ ವಾದವಾಗಿ ಕಡೆಗೆ ಎರಡು ದಿನ ಇಬ್ಬರ ಗೊಂದಲವೂ ಆಗಬೇಕೆಂದು ಗೊತ್ತಾಯಿತು. ಗೊಂದಲಿಗರ ಮಾತು ನಡೆದಾಗ, ರಾಯಾಜಿಯ ದೊಡ್ಡಪ್ಪನಾದ ಬಾಬಾಜಿ ಎಂಬವನು ಮೆಲ್ಲಗೆ ರಾಯಾಜಿಗೆ— ರಾಯಾ, ಗೊಂದಲಿಗನಿದ್ದರೆ ಆ ತುಳಶ್ಯಾನಂಥ ಗೊಂದಲಿಗನಿರಬೇಕು ನೋಡು. ನಿನಗೆ ನೆನಪಿರುವದೋ? ಹಿಂದಕ್ಕೊಮ್ಮೆ ಕೊಂಡಾಣೆಯ ಜಾತ್ರೆಗೆ ಹೋದಾಗ ಆಚೆ ಕಡೆಗಿರುವ ಒಂದು ಮರದ ಕೆಳಗೆ ಘಟಸ್ಥಾಪನೆ ಮಾಡಿ ಗೊಂದಲ ಹಾಕಿದನಲ್ಲ! ಅಹಹ! ಏನು ಗೊಂದಲವದು! ಆ ಮರದ ಬುಡದಲ್ಲಿ ಜಾತ್ರೆ ನೆರೆದಹಾಗಾಯಿತು. ಬಂದವರೆಲ್ಲ ಮುಂದಕ್ಕೆ ಹೋಗದೆ ಆ ಗಿಡದ ಬುಡದಲ್ಲಿಯೇ ಕುಳಿತುಕೊಂಡರು. ಗುಡಿಯಲ್ಲಿ ಜನರ ಗೊಂದಲವೇ ಇದ್ದಿಲ್ಲ, ಅಂಥ ಗೊಂದಲಿಗನಿದ್ದರೆ ಚಿಂತೆಯಿಲ್ಲ! ಸೊಟ್ಟ ಗೊಂದಲಿಗರನ್ನು ತಕ್ಕೊಂಡು ಮಾಡುವದೇನು, ಎಂದನು.

ದೌಲತ್ತರಾಯನು ಒಮ್ಮೆಲೆ ನಡುವೇಬಾಯಿಹಾಕಿ—ಸರಿ ಸರಿ! ಬಾಬಾಜಿರಾಯರು ಸರಿಯಾಗಿ ಹೇಳಿದರು. ನಾನು ಹೇಳುವ ಗೊಂದಲಿಗನು ಆ ತುಳಶ್ಯಾನ ಖಾಸ ತಮ್ಮನು. ಅವನು ಯಾವಾಗಲೂ ತುಳಶ್ಯಾನ ಹಿಮ್ಮೇಳದಲ್ಲಿರುತ್ತಿದ್ದನು. ತುಳಶ್ಯಾನು ಈಗ ನಾಲ್ಕು ತಿಂಗಳಹಿಂದೆ ತೀರಿಕೊಂಡನು; ಆದರೆ ಅವನ ತಮ್ಮನಾದ ತೋತಾರಾಮನು ಅಣ್ಣನಿಗಿಂತ ಒಂದು ಕೈಮೇಲೆ ಇರುವನು. ಅದರ ಅನುಭವವು ನಿಮಗೆ ಬರಬಹುದು. ತುಳಶ್ಯಾನು ಇದ್ದರೆ ಅವನನ್ನೇ ಕರಿಸುತ್ತಿದ್ದೆನು. ಆದರೆ ಸಾವಿನಮುಂದೆ ಯಾರ ಆಟ ನಡೆಯುವದು? ಸುಮ್ಮನೆ ಗೊಂದಲಿಗರೆಂದರಾಗಲಿಲ್ಲ! ಗೊಂದಲಿಗರು ಸಾಮಾನ್ಯರಿರುವದಿಲ್ಲ. ತೋತಾರಾಮನಿಗೆ ತುಳಶ್ಯಾನೇ ಕಲಿಸಿದ್ದಾನೆ. ಆತನಿಗೆ ವೀಳ್ಯಕೊಡಿರಿ, ಅನುಮಾನಮಾಡಬೇಡಿರಿ. ನಾವು ಆತನನ್ನು ಸಂಗಡಲೇ ಕರಕೊಂಡು ಬರಬೇಕೆಂದು ಮಾಡಿದ್ದೆವು; ಆದರೆ ಯಾಕೆ ಸುಮ್ಮನೆ, ಕೇಳಿ ಕರಿಸಿದರಾಯಿತೆಂದು ಬಿಟ್ಟೇವೆ, ಎಂದನು. ಅದಕ್ಕೆ ರಾಯಬಾನು—ಯಾಕೆ, ಕರಕೊಂಡು ಬಂದಿದ್ದರೇನು ತಪ್ಪಾಗುತ್ತಿತ್ತು? ಕೂತಾಗ ನಿಂತಾಗ ನಾಲ್ಕು ಲಾವಣೆಗಳನ್ನು ಹೇಳುತ್ತಿದ್ದನು; ಆನಂದದಿಂದ ಹೊತ್ತು ಹೋಗುತ್ತಿತ್ತು, ಅನ್ನಲು ದೌಲತ್ತರಾಯನು—ಆಗಲಿ, ಇನ್ನು ಬಂದಬಳಿಕ ಮತ್ತೆ ನಾಲ್ಕುದಿನ ನಿಮ್ಮ ಮನೆಯಲ್ಲಿಟ್ಟು ಕೊಂಡು ಆತನ ಲಾವಣಿಯ ಪದಗಳನ್ನು ಕೇಳಿದರಾಯಿತು. ಅವನೇನು ನಮ್ಮ ಮಾತು ಮೀರಿ ಹೋಗುವವನಲ್ಲ, ಎಂದು ಹೇಳಿದನು.

ಈ ಮೇರೆಗೆ ಮಾತುಕಥೆಯಾಗಿ ತೋತಾರಾಮನ ಗೊಂದಲವನ್ನು ಹಾಕಿಸುವದು ಗೊತ್ತಾಯಿತು. ಆತನಿಗೆ ಭಂಡಾರವನ್ನು ಕಳಿಸಬೇಕೆಂದು ನಿಶ್ಚಯಿಸಿದರು. ಆ ಕಾಲದಲ್ಲಿ ತುಳಸೀದಾಸ, ಅಜ್ಞಾನದಾಸ ಎಂಬ ಹೆಸರಿನ ಇಬ್ಬರು ಗೊಂದಲಿಗರು ಬಹುಪ್ರಸಿದ್ಧರಾಗಿದ್ದರು. ದೊಡ್ಡವರ ಮನೆಯಲ್ಲಿ ಗೊಂದಲ ಹಾಕಿಸಿದರೆ ಇವರಿಬ್ಬರಲ್ಲಿ ಯಾರಿಗಾದರೂ ಭಂಡಾರವನ್ನು ಕೊಡುತ್ತಿದ್ದರು. ಅವರಲ್ಲಿ ತುಳಸಿದಾಸನು ಹಾಡುವದರಲ್ಲಿಯೂ ಶೌರ್ಯದ ಮಾತುಗಳನ್ನು

ಆಡುವದರಲ್ಲಿಯೂ ಒಳ್ಳೇ ಪ್ರಸಿದ್ಧನಾಗಿದ್ದನು. ತುಲಸೀದಾಸನು ತೀರಿಕೊಂಡದ್ದರಿಂದ ಬಹುಜನರಿಗೆ ಅಸಮಾಧಾನವಾಗಿತ್ತು; ಆದರೆ ಆತನ ತಮ್ಮನು ಬೇಗನೆ ಹೆಸರಿಗೆ ಬರಬೇಕೆಂದು ಯತ್ನನಡಿಸಿ, ತನ್ನ ಅಣ್ಣನ ಗುರುತಿನವರಿಗೆ ಸಂಧಾನಹಚ್ಚಿ ಗೊಂದಲದ ಗಿರಾಕಿಗಳನ್ನು ಸಂಪಾದಿಸುತ್ತಿದ್ದನು. ಇನ್ನೂ ಆತನು ನಾಲ್ಕು ಕಡೆಗೆ ಹೋಗದೆ ಇದ್ದದ್ದರಿಂದ ಬಹು ಜನರಿಗೆ ಆತನ ಪ್ರತ್ಯಕ್ಷ ಗುರುತು ಇದ್ದಿಲ್ಲ. ದೌಲತ್ತರಾಯನ ಮನೆಯಲ್ಲಿ ಲಗ್ನವಿದ್ದು ಆತನ ಬೀಗರು ಬಿಜ್ಜರೊಡನೆ ಕೊಂಡಾಣೆಗೆ ಹೋಗುವನೆಂಬ ಸುದ್ದಿಯನ್ನು ಕೇಳಿ ಇದು ಒಳ್ಳೆಯ ಸಂಧಿಯೆಂದು ತಿಳಿದು ತೋತಾರಾಮನು ತನ್ನ ಗೊಂದಲಹಾಕಿಸಬೇಕೆಂದು ದೌಲತ್ತರಾಯನಿಗೆ ಹೇಳಿಕೊಂಡನು. ದೌಲತ್ತರಾಯನ ಮನೆತನದ ಗೊಂದಲಿಗರು ಹೊಟ್ಟಕಿಚ್ಚುಪಟ್ಟು ತೋತಾರಾಮನ ಗೊಂದಲ ಹಾಕಿಸಬಾರದೆಂದು ದೌಲತ್ತರಾಯನಿಗೆ ಹೇಳಿದರು; ಆದರೆ ದೌಲತ್ತರಾಯನು ತನ್ನ ಗೊಂದಲಿಗರ ಮಾತಿಗೆ ಕಿವಿಗೊಡದೆ, ತಿರುಗಿ ಪುಣೆಗೆ ಬಂದಬಳಿಕ ನಿನ್ನ ಗೊಂದಲವನ್ನೂ ಹಾಕಿಸುವೆನೆಂದು ತೋತಾರಾಮನಿಗೆ ವಚನಕೊಟ್ಟು ಕಳಿಸಿಕೊಟ್ಟಿದ್ದನು.

ರಾಯಾಜಿಯು ಒಪ್ಪಿಗೆಯನ್ನಿತ್ತ ಕೂಡಲೆ ದೌಲತ್ತರಾಯನು ತನ್ನ ಒಬ್ಬ ಮನುಷ್ಯನ ಸಂಗಡ ಪರಿವಾರದೊಡನೆ ಬರಬೇಕೆಂದು ತೋತಾರಾಮನಿಗೆ ಹೇಳಿ ಕಳಿಸಿದನು. ಅದರಂತೆ ತೋತಾರಾಮನಾದರೂ ಬಂದನು. ಲಗ್ನ ಸಮಾರಂಭವೆಲ್ಲ ತೀರಿಹೋಗಿತ್ತು, ಬರಿಯ ಗೊಂದಲ ಕಾರ್ಯವಷ್ಟು ಉಳಿದಿತ್ತು, ರಾಯಾಜಿಯೂ ದೌಲತ್ತರಾಯನೂ ಒಳ್ಳೆಯ ಉತ್ತಮನಾದ ಗೊಂದಲಿಗನನ್ನು ಕರಿಸುತ್ತಾರೆಂಬ ಸುದ್ದಿಯು ಸುತ್ತಮುತ್ತಲಿನ ಹಳ್ಳಿಯವರಿಗೆ ಗೊತ್ತಾದದ್ದರಿಂದ ದೂರಿನ ಹಳ್ಳಿಯ ಜನರು ಕೂಡ ಗೊಂದಲಕ್ಕೆ ಬಂದರು. ಸಮೀಪದವರು ದೂರಿನವರೂ ಕೂಡಿ ನಾಲ್ವತ್ತು ಐವತ್ತು ಹಳ್ಳಿಯ ಜನರು ಆ ರಾತ್ರಿ ಗೊಂದಲಕ್ಕೆ ಕೂಡಿದರು. ಗೊಂದಲದ ಸಿದ್ಧತೆಯಂತು ಬಹು ಚನ್ನಾಗಿ ಮಾಡಲ್ಪಟ್ಟಿತ್ತು, ಹಿಮ್ಮೇಳದವರು ಸಿದ್ಧರಾದರು. ಎಲ್ಲ ಸಾಹಿತ್ಯಗಳನ್ನು ಸಿದ್ಧಪಡಿಸಿಕೊಂಡು ಘಟಸ್ಥಾಪನೆಯನ್ನು ಮಾಡಿದರು. ಕಬ್ಬುಗಳನ್ನು ಮೂರು ಮೂಲೆಯ ಮೇಲೆ ನಿಲ್ಲಿಸಿ, ಅವುಗಳ ನಡುವಿನಿಂದ ಘಟ್ಟದ ಮೇಲಿಟ್ಟಿದ್ದ ಕಾಯಿಗೆ ನಿಲುಕುವಂತೆ ಹೂಮಾಲೆಯನ್ನು ಇಳಿಬಿಟ್ಟರು. ಚೌಟಿಕೆಯ ಕರ್ಣಮಧುರವಾದ ನಾದವು ಕೇಳತೊಡಗಿತು. ಸಂಬಾಲವು ಗಟ್ಟಿಯಾಗಿ ಬಾರಿಸಹತ್ತಿತು. ಗೊಂದಲಿಗನು ದೇವತಾಸ್ತೋತ್ರ ವನ್ನು ಆರಂಭಿಸಿದನು. ಸ್ವಲ್ಪ ಗೊಗ್ಗರದ ದನಿಯಾದದ್ದರಿಂದ ಮೊದಲಿಗೆ ಗೊಂದಲವು ಸವಿಯಾಗಲೊಲ್ಲದು. ದೇವತಾಸ್ತೋತ್ರವಾದ ಮೇಲೆ ನಿಯಮದಂತೆ ಬೇರೆ ಬೇರೇ ದೇವತೆಗಳನ್ನು ಗೊಂದಲಕ್ಕಾಗಿ ಕರೆಯೋಣವಾಯಿತು.

ಹೀಗೆ ಆರಂಭದ ಕಾರ್ಯಗಳೆಲ್ಲ ತೀರಿದ ಮೇಲೆ ಯಾವ ಕಥೆಯನ್ನು ಆರಂಭಿಸಬೇಕೆಂಬ ಬಗ್ಗೆ ಚರ್ಚೆಯಾಯಿತು. ಕೆಲವರು ಜಾಯಾರಾಣಿಯ ಕಥೆಯನ್ನು ಹಚ್ಚಬೇಕೆಂದು ಹೇಳಿದರು. ಕೆಲವರು ಸುಂದೋಪಸುಂದರ ಆಖ್ಯಾನವನ್ನು ಹೇಳಬೇಕೆಂದು ಸೂಚಿಸಿದರು. ಹೀಗೆ ಬೇರೆ ಬೇರೆ ಜನರು ತಮಗೆ ಬೇಕಾದ ವಿಷಯವನ್ನು ಸೂಚಿಸುತ್ತಿರಲು ಅವುಗಳಲ್ಲಿ ಯಜಮಾನನ

ಮನಸ್ಸಿಗೆ ಬಂದ ಒಂದು ವಿಷಯವು ಆರಂಭಿಸಲ್ಪಟ್ಟಿತು. ಗೊಂದಲದಲ್ಲಿ ಚೌಟಿಗಿಯವನು ಮುಖ್ಯ ಪಾತ್ರವಾಗಿರುವನು. ಅವನ ಅಡ್ಡಕಥೆಯಿಂದಲೂ, ವಿನೋದದಿಂದಲೂ ನಕ್ಕುನಕ್ಕು ಜನರ ಹೊಟ್ಟೆಗಳೂ ಹುಣ್ಣು ಹುಣ್ಣು ಆದವು. ನಡುವೆ ಯುದ್ಧ ಪ್ರಸಂಗವು ಬರಲು ಗೊಂದಲವು ಒಳ್ಳೇ ತುಂಬಿ ಬಂದಿತು. ಜನರು ಆನಂದಪರವಶರಾದರು. ಗೊಂದಲಿಗನು ನಿಂತು ಕಥೆ ಮಾಡಿ ದಣಿದಿರುವುದರಿಂದ ಕೂತು ಲಾವಣಿಯನ್ನು ಹೇಳಬೇಕೆಂತಲೂ, ಬೇರೆ ಯಾವದೊಂದು ಕಥೆಯನ್ನು ಹೇಳಬೇಕೆಂತಲೂ ಜನರು ಹೇಳಿದರು. ಲಾವಣಿಯನ್ನು ಅನ್ನುವುದರಲ್ಲಿಯೂ ಕೂತು ಕಥೆ ಹೇಳುವುದರಲ್ಲಿಯೂ ಗೊಂದಲಿಗನು ಒಳ್ಳೇ ಪ್ರಸಿದ್ಧ ನಾಗಿದ್ದನು. ಆತನು ಕೂತು ಲಾವಣಿಯನ್ನು ಅನ್ನತೊಡಗಲು, ಜನರ ಮನಸ್ಸುಗಳು ರಮಿಸ ಹೋದವು. ಗೊಂದಲಿಗನು ಬರಬರುತ್ತ ಆವೇಶಗೊಂಡು ಉಚ್ಚಸ್ವರದಿಂದ ಲಾವಣಿಯನ್ನು ಅನ್ನುವಾಗ ಬಹುದೂರ ಸಂದಿಗೊಂದಿಗಳಲ್ಲಿ ಕುಳಿತ ಜನರಿಗೂ ಸ್ಪಷ್ಟವಾಗಿ ಕೇಳುತ್ತಿತ್ತು. ಇದಲ್ಲದೆ ಆ ಗೊಂದಲಿಗನ ಉಚ್ಚಸ್ವರವು ಬರಬರುತ್ತ ಕೊಂಡಾಣೆಯ ದುರ್ಗದ ಕಂದರ ಗಳಲ್ಲಿಯೂ ಪ್ರತಿಧ್ವನಿಯನ್ನುಂಟುಮಾಡಿತು. ಗೊಂದಲಿಗನ ಆ ಗಂಭೀರವಾದ ಉಚ್ಚಸ್ವರ ವನ್ನು ಕೇಳಿ ಜನರು ತಟಸ್ಥರಾದರು.

## ಥೂ, ನಿಮ್ಮ ಗಳಿಕೆಗೆ ಬೆಂಕೆಹಚ್ಚಲಿ!

ತನ್ನ ಕಡೆಗೆ ಜನರ ಮನಸ್ಸುಗಳು ಎಳೆಯಲ್ಪಟ್ಟದ್ದನ್ನು ನೋಡಿ ತೋತಾರಾಮನು ಕಥೆ ಹೇಳಲಾರಂಭಿಸಿದನು. ಆತನು ಕಥೆಯನ್ನು ಆರಂಭಿಸುವ ಮೊದಲು—ಎಲೈ ಅಂಬಿಕೇ, ಆದಿಮಾಯೇ, ಭಕ್ತನ ಮೊರೆಯನ್ನು ಕೇಳು; ಕುಳಿತಿರುವ ಈ ಜನರ ಮನಸ್ಸುಗಳನ್ನು ರಂಜಿಸುವಂತೆ ಕತೆಹೇಳುವ ಸಾಮರ್ಥ್ಯವನ್ನು ನನಗೆ ಕೊಡು. ಭಕ್ತರ ಉದ್ಧಾರಕ್ಕಾಗಿ ನೀನು ಅನಂತ ಅವತಾರಗಳನ್ನು ಮಾಡಲಿಲ್ಲವೆ? ಹಲವು ದುಷ್ಟ ರಾಕ್ಷಸರ ಸಂಹಾರವನ್ನು ನೀನು ಮಾಡಿದ್ದಲ್ಲದೆ, ನಿನ್ನ ಪತಿಯಾದ ಶಂಕರನಿಂದಲೂ ಎಷ್ಟೋ ದುಷ್ಟರನ್ನು ನಾಶಗೊಳಿಸಿದೆಯಲ್ಲ! ಹೀಗೆ ಭಕ್ತರ ಕಷ್ಟಗಳನ್ನು ಯಾವಾಗಲೂ ನೀಗಲಾಡುತ್ತಿರುವ ನಿನಗೆ ನಾನು ತಿರುತಿರುಗಿ ನಮಸ್ಕಾರ ಮಾಡುತ್ತೇನೆ, ಎಂದು ಪ್ರಾರ್ಥನೆಯನ್ನು ಮಾಡಿದನು.

ತೋತಾರಾಮನು ಈ ಮೇರೆಗೆ ದೇವಿಯನ್ನು ಪ್ರಾರ್ಥಿಸಿ, ಸಾಷ್ಟಾಂಗವೆರಗಿ, ಸಾವ ಧಾನದಿಂದ ಕೇಳಬೇಕೆಂದು ಜನರನ್ನು ಬೇಡಿಕೊಂಡನು, ಕಥೆಯನ್ನು ಹೇಳಲಾರಂಭಿಸಿದನು. ಆತನು ಜನರನ್ನು ಕುರಿತು—ಎಲೈ ಸಜ್ಜನರೇ, ಈ ಭೂಮಿಯಲ್ಲಿ ದುಷ್ಟರು ಪ್ರಬಲರಾಗಿ ಜನರನ್ನು ಪೀಡಿಸಿದಾಗೆಲ್ಲ ಶ್ರೀಶಂಕರನು ಅಂಬಿಕೆಯ ಮಾತಿನಂತೆ ಅವತಾರವನ್ನು ತಾಳಿ ಜನರ ದುಃಖವನ್ನು ಪರಿಹರಿಸಿರುವನು. ಅಂಥ ಕರುಣಾಳುವು ಈಗ ನಮ್ಮನ್ನು ಮರೆಯುವನೇ? ನಾವೆಲ್ಲರೂ ಆತನನ್ನು ಈಗ ಬೇಡಿಕೊಳ್ಳೋಣ. ಆ ಅಂಬಿಕಾನಾಥನು ಭಸ್ಮಾಸುರನನ್ನು

ಕೊಂದನು; ತ್ರಿಪುರಾಸುರನನ್ನು ನಾಶಗೊಳಿಸಿದನು; ಜಟಾಸುರನನ್ನು ಸದೆಬಡೆದನು; ಇನ್ನೂ ಎಷ್ಟೋ ರಾಕ್ಷಸರನ್ನು ಮಣ್ಣುಗೂಡಿಸಿದನು. ಅಂಥ ದಯಾಸಾಗರನು ಈಗ ನಮ್ಮನ್ನು ಯಾಕೆ ಮರೆತಾನು. ಕಲಿಯುಗದಲ್ಲಿ ರಾಕ್ಷಸರಾದ ಈ ಮೊಗಲರು ಧರ್ಮವನ್ನು ಕೆಡಿಸುವರು; ಬ್ರಾಹ್ಮಣರನ್ನು ಪೀಡಿಸುವರು; ಬಡವರನ್ನು ಗೋಳಾಡಿಸುವರು; ಪತಿವ್ರತೆಯರ ಮಾನವನ್ನು ಕಳೆಯುವರು; ಆಕಳನ್ನು ಎಳದೊಯ್ದು ಚರಚರ ಕುತ್ತಿಗೆಯನ್ನು ಕೊಯ್ದು ಆ ಗೋವಾತೆಯ ರಕ್ತವನ್ನು ಗಟಗಟ ಕುಡಿಯುವರು ಈ ಕ್ರೂರಕರ್ಮವನ್ನು ಭವಾನಿಯು ತಡೆಯುವಳೇ? ಆ ಗಿರಿಜಾಪತಿಯು ಸೈರಿಸುವನೇ? ಈ ಘೋರಕೃತ್ಯವನ್ನು ನೋಡಲಾರದೆ ಅಂಬಿಕೆಯು ಪತಿಯಾದ ಶಂಕರನನ್ನು ಕುರಿತು—ಏಳಿರಿ, ಅನ್ಯಾಯವನ್ನೂ, ಕ್ರೂರಕರ್ಮವನ್ನೂ ಎಷ್ಟಂತ ನೋಡುವಿರಿ? ಇಲ್ಲಿ ಕುಳಿತು ಮಾಡುವದೇನು? ಭೂಮಿಯ ಮೇಲೆ ಹೋಗಿ ಅವತಾರವನು ತಾಳಿ ದುಷ್ಟರನ್ನು ಸಂಹರಿಸಿರಿ. ಧರ್ಮವು ನಾಶವಾಗುವದನ್ನೂ, ಸಾಧುಗಳು ಕಷ್ಟಪಡುವದನ್ನೂ, ಪತಿವ್ರತೆಯರು ಪ್ರಾಣಕೊಡುವದನ್ನೂ ನೋಡುವದಿಲ್ಲವೆ? ನೀವು ಹೀಗೆ ಕಣ್ಣು ಮುಚ್ಚಿಕೊಂಡು ಕುಳಿತುಕೊಂಡರೆ ಜನರ ಗೋಳನ್ನು ಯಾರು ಕೇಳಬೇಕು? ಎಂದು ಕೇಳಿಕೊಂಡಳು.

ಲೋಕಮಾತೆಯ ಈ ಮಾತುಗಳನ್ನು ಕೇಳಿ ಶಂಕರನು ಎಚ್ಚತ್ತನು. ಆತನು ತನ್ನ ಸತಿಯನ್ನು ಕುರಿತು—ಪ್ರಿಯೇ, ಹೇಳು, ದುಷ್ಟರನ್ನು ಸಂಹರಿಸುವದಕ್ಕಾಗಿ ನಾನೆಲ್ಲಿ ಅವತಾರವನ್ನು ಮಾಡಲಿ? ಎಂದು ಕೇಳಲು, ಶಂಕರಿಯು–ನೀವು ಶಿವನೇರಿ ಎಂಬ ದುರ್ಗಕ್ಕೆ ಹೋಗಿರಿ; ಅಲ್ಲಿ ನನ್ನ ಪರಮ ಭಕ್ತಳಾದ ಭೋಸಲೆ ಎಂಬ ಅಡ್ಡಹೆಸರಿನ ಜೀಜಾಬಾಯಿಯೆಂಬವಳು ಇರುವಳು. ಆಕೆಯ ಹೊಟ್ಟೆಯಲ್ಲಿ ನೀವು ಅವತಾರ ತಾಳಿ ದುಷ್ಟರನ್ನು ಸಂಹರಿಸಿರಿ, ಎಂದು ಹೇಳಿದಳು. ಆಗ ಶಂಕರನು ತ್ರಿಶೂಲವನ್ನೂ, ಪಾಶವನ್ನೂ, ಅಂಕುಶವನ್ನೂ ತಕ್ಕೊಂಡನು. ಡಮರುಗವೆಂಬ ತನ್ನ ವಾದ್ಯವನ್ನು ಗಟ್ಟಿಯಾಗಿ ಬಾರಿಸಿದನು. ಆ ವಾದ್ಯಧ್ವನಿಯನ್ನು ಕೇಳಿ ಪ್ರಮಥರೆಲ್ಲ ಬಂದು ಅಪ್ಪಣೆಯೇನೆಂದು ಆ ಉಮಾಪತಿಯನ್ನು ಕೇಳಿದರು. ಅದಕ್ಕೆ ಶಂಕರನು—ವೀರರೇ, ನಡೆಯಿರಿ ನಡೆಯಿರಿ, ದುಷ್ಟರ ಚಂಡುಗಳನ್ನು ಆಡೋಣ! ನಾನು ಶಿವಾಜಿರಾಜನಾಗುವೆನು, ನೀವು ನನಗೆ ಸಹಾಯಮಾಡುವದಕ್ಕಾಗಿ ಮಾವಳರಾಗಿರಿ; ಏಳಿರಿ, ಅವತಾರವನ್ನು ತಾಳೋಣ, ಎಂದನು.

ಶಿವನೇರಿಯ ದುರ್ಗದ ಭಾಗ್ಯವೆಷ್ಟಂತ ಹೇಳಬೇಕು? ಜೀಜಾಬಾಯಿಯ ಪುಣ್ಯವನ್ನೇನೆಂದು ವರ್ಣಿಸಬೇಕು? ಆ ಭಾಗ್ಯವಂತವಾದ ದುರ್ಗದಲ್ಲಿ ಜೀಜಾಬಾಯಿಯ ಪುಣ್ಯೋದರದಲ್ಲಿ ಶಿವನು ಅವತರಿಸಿದನು. ಶಿವಗಣವೆಲ್ಲ ಮಾವಳರ ಹೊಟ್ಟೆಯಲ್ಲಿ ಹುಟ್ಟಿ ಬಂದದ್ದರಿಂದ ಮಾವಳರ ಪುಣ್ಯವಾದರೂ ಕಡಿಮೆಯಲ್ಲ. ಶಕೆ 1549ನೆಯ ಪ್ರಭವ ಸಂವತ್ಸರದ ವೈಶಾಖಶುದ್ಧ ಪಂಚಮಿಯ ರೋಹಿಣೀ ನಕ್ಷತ್ರ (ತಾ 10ನೇ ಏಪ್ರಿಲ 1627ನೇ ಇಸ್ವಿ)ದ ದಿವಸ ಸೂರ್ಯೋದಯದ ಕಾಲಕ್ಕೇ ಜೀಜಾಬಾಯಿಯವರು ಬೇನೆ ತಿನ್ನಹತ್ತಿದರು. ಹೊಟ್ಟೆನೋವನ್ನು ತಾಳಲಾರದೆ ಅವರು ನೆಲದಮೇಲೆ ಗುಡುಗುಡು

ಉರಳಾಡಹತ್ತಿದರು. ಆದರೂ ಅವರು ಬಾಯಿಂದ ನಾನು—ಕೈಯಲ್ಲಿ ಖಡ್ಗವನ್ನು ತಕ್ಕೊಂಡು ಯಾವತ್ತೂ ದೈತ್ಯರನ್ನು ತುಂಡರಿಸುವೆನು, ದುಷ್ಟರ ಚೆಂಡುಗಳನ್ನು ರಾಶಿಯಾಗಿ ಒಟ್ಟುವೆನು, ಎಂದು ನುಡಿಯುತ್ತಿದ್ದರು. ಸೂರ್ಯನು ಮಧ್ಯಾಹ್ನಕ್ಕೆ ಬರಲು, ಶಿವಬಾಲಕನು ಜನಿಸಿದನು. ಆಗ ದುರ್ಗವೆಲ್ಲ ಪ್ರಕಾಶಮಯವಾಯಿತು.

ಕೂಸು ದಿನದಿನಕ್ಕೆ ಬೆಳೆಯಹತ್ತಲು, ಜೀಜಾಬಾಯಿಯವರ ಹರ್ಷವು ಉಕ್ಕೇರಿತು. ಇಂಥ ರತ್ನವನ್ನು ಜೋಕೆಮಾಡುವ ಪುಣ್ಯವು ಒದಗಿತೆಂದು ದಾದೋಜಿಕೋಂಡದೇವನ ಆನಂದವು ಹೆಚ್ಚಿತು. ಕೂಸು ಮೂರು ವರ್ಷದ್ದಾಗಲು, ಯುದ್ಧಮಾಡಿ ಆಡುವದಕ್ಕಾಗಿ ಅದು ತಾಯಿಗೆ ಖಡ್ಗವನ್ನು ಬೇಡಹತ್ತಿತು. ಮುಂದೆ ಆ ಶಿವಕುಮಾರನಿಗೆ ಐದು ವರ್ಷ ತುಂಬಲು, ಆತನು ಓರಿಗೆಯವರನ್ನು ಕೂಡಿಕೊಂಡು ಕಾಳಗದ ಆಟವನ್ನು ಆಡಹತ್ತಿದನು. ಆತನು ತನ್ನ ಗೆಳೆಯರಿಗೆ—ನಾನು ನಿಮ್ಮ ಅರಸನಾಗುತ್ತೇನೆ, ನೀವು ನನ್ನ ಪ್ರಜೆಗಳಾಗಿರಿ, ನಾವು ವಿಜಾಪುರದ ಕೋಟೆಗೆ ಮುತ್ತಿಗೆಯನ್ನು ಹಾಕೋಣ; ನಾನು ದುಷ್ಟರ ಗೋಣುಮುರಿದುಚಲ್ಲುವೆನು; ಗೋಬ್ರಾಹ್ಮಣರನ್ನು ಪಾಲಿಸುವೆನು; ಮೊಗಲರ ಮಗ್ಗಲನ್ನು ಮುರಿಯುವೆನು; ಎಂದು ನುಡಿಯುತ್ತಿದ್ದನು. ಮಗನ ಈ ಆಟಗಳನ್ನು ನೋಡಿ ಜೀಜಾಬಾಯಿಯವರಿಗೆ ಬಹಳ ಸಂತೋಷವಾಗುತ್ತಿತ್ತು.

ಶಿವಬಾಲಕನು ಹತ್ತು ವರ್ಷದವನಾಗಲು, ಆತನ ತಂದೆಯಾದ ಶಹಾಜಿರಾಜನು ಆತನನ್ನು ವಿಜಾಪುರಕ್ಕೆ ಕರಕೊಂಡು ಹೋದನು. ಒಂದುದಿನ ತಂದೆಯು ಮಗನಿಗೆ ಬಾದಶಹನ ದರ್ಬಾರಕ್ಕೆ ನಡೆಯೆಂದು ಹೇಳಿದನು. ಅದಕ್ಕೆ ಮಗನು—ಅಪ್ಪಾ, ನಾನು ನಿನ್ನ ಅಪ್ಪಣೆಯಂತೆ ದರಬಾರಿಗೆ ಬರುವೆನು; ಆದರೆ ಬಾದಶಹನಿಗೆ ಕುರ್ನಿಸ್(ನಮಸ್ಕಾರ) ಮಾಡುವದಿಲ್ಲ. ನಮಸ್ಕಾರವನ್ನು ಆ ದೇವರಿಗೊಬ್ಬರಿಗೆ ಮಾಡಬೇಕು, ತನ್ನ ತಂದೆತಾಯಿಗಳಿಗೆ ಮಾಡಬೇಕು, ತನ್ನ ಗುರುವಿಗೊಬ್ಬನಿಗೆ ಮಾಡಬೇಕು. ಅದನ್ನು ಬಿಟ್ಟು ನಾನು ಮೊಗಲರಿಗೆ ಮಾತ್ರ ಎಂದಿಗೂ ನಮಿಸಲಿಕ್ಕಿಲ್ಲ ಎಂದು ಹೇಳಿದನು.

ಮಗನ ಉದ್ಧಟತನದ ಮಾತಿಗಾಗಿ ಶಹಾಜಿರಾಜನು ಗದ್ದರಿಸಿ, ಮಗನನ್ನು ಬಲಾತ್ಕಾರದಿಂದ ದರ್ಬಾರಿಗೆ ಕರೆದೊಯ್ದು ಬಾದಶಹನ ಮುಂದೆ ನಿಲ್ಲಿಸಿದನು. ಆದರೆ ತೇಜಸ್ವಿಯಾದ ಆ ಶಿವ ಬಾಲಕನು ಬಾದಶಹನ ಮುಂದೆ ತಲೆಯನ್ನು ಬಾಗಿಸಲಿಲ್ಲ; ಕೈಯನ್ನು ಎತ್ತಲಿಲ್ಲ; ಮಾತ್ಸರ್ಯದಿಂದ ಬಾದಶಹನನ್ನು ನೋಡುತ್ತ ಮಾತ್ರ ನಿಂತುಕೊಂಡನು. ಅದನ್ನು ನೋಡಿ ಜನರೆಲ್ಲ ದಂಗುಬಡಿದು ಶಿವಬಾಲಕನನ್ನೇ ನೋಡಹತ್ತಿದರು. ಆಗ ಶಹಾಜಿರಾಜನು—ಮಗನೇ, ಬಾದಶಹರಿಗೆ ಕುರ್ನಿಸು ಮಾಡಬೇಕಪ್ಪಾ, ಎಂದು ಹೇಳಲು, ದೇವರಿಗೊಬ್ಬರಿಗೆ ನಮಿಸತಕ್ಕದ್ದೆಂದು ಶಿವಬಾಲಕನು ಉತ್ತರ ಕೊಟ್ಟನು; ಮತ್ತು ತನ್ನ ತಂದೆಗೆ—ಮಹಾರಾಜರೇ, ನಾನು ದರ್ಬಾರದಿಂದ ಹೋಗುತ್ತೇನೆ. ನೀವು ಹಿಂದಿನಿಂದ ಬರ್ರಿ. ನನ್ನಿಂದ ಇಲ್ಲಿ ಕೂಡ್ರೋಣವಾಗದು. ತಾಯಿಯ ಹೊರತು ನನಗೆ ಸಮಾಧಾನವಾಗುವದಿಲ್ಲ, ಎಂದು ನುಡಿದು ದರ್ಬಾರದಿಂದ ಹೊರಟನು.

ಶಿವಬಾಲಕನು ಬೀದಿ ಹಿಡಿದು ಹೋಗುವಾಗ ಒಂದು ಚಮತ್ಕಾರದ ಸಂಗತಿಯು ಒದಗಿತು. ಒಬ್ಬ ಬ್ರಾಹ್ಮಣನು ತನಗೆ ದಾನಕೊಟ್ಟಿದ್ದ ಆಕಳನ್ನು ಸಂತೋಷದಿಂದ ಹಿಡಕೊಂಡು ಹೋಗುತ್ತಿದ್ದನು. ಕರುವು ತಾಯಿಯ ಬೆನ್ನಹತ್ತಿ ಹಾರಾಡುತ್ತ ನಡೆದಿತ್ತು ಅಷ್ಟರಲ್ಲಿ ಕಟಕನ ಅಂಗಡಿಯು ಬಂದಿತು. ಆಗ ಕಟಕನು ಬ್ರಾಹ್ಮಣನಿಗೆ—ಏ ಹಾರುವಾ, ನಿನ್ನ ಆಕಳನ್ನು ನನಗೆ ಕೊಡೆಂದು ಕೇಳಿದನು; ಆದರೆ ಬ್ರಾಹ್ಮಣನು ಒಪ್ಪಲಿಲ್ಲ ಅದರಿಂದ ಕಟಕನಿಗೆ ಸಿಟ್ಟುಬಂದಿತು. ಆತನು ಶಸ್ತ್ರವನ್ನು ತಕ್ಕೊಂಡು ಬಂದು ಆಕಳನ್ನು ಇರಿಯ ಹೋದನು; ಆಕಳು ಅವನ ಕೈಗೆ ಸಿಗಲಿಲ್ಲ ಕಟಕನು ಕರುವನ್ನು ಹಿಡಕೊಂಡನು. ಅದನ್ನು ನೋಡಿ ಬ್ರಾಹ್ಮಣನು ಗಾಬರಿಯಾದನು. ಆತನು ದೈನ್ಯದಿಂದ—ಅಪ್ಪಾ, ಆ ಎಳೆಗರುವನ್ನು ಕೊಲ್ಲಬೇಡ ಬಿಡು. ಪಾಪ! ಅದು ನಿನಗೇನು ಮಾಡಿದೆ? ದಯಮಾಡಿ ಅದನ್ನು ಬಿಟ್ಟು ಪುಣ್ಯಕಟ್ಟಿಕೋ, ಎಂದು ಅಂಗಲಾಚಿ ಬೇಡಿಕೊಂಡನು; ಆದರೆ ಆ ಕಟಕನಿಗೆ ದಯವೆಲ್ಲಿಂದ ಬರಬೇಕು? ಆತನು ಕರುವನ್ನು ಕರುಣವಿಲ್ಲದೆ ನೆಲಕ್ಕೆ ಕೆಡವಿದನು. ಆ ನೀಚನು ನಕ್ಕು ಬ್ರಾಹ್ಮಣನನ್ನು ಕುರಿತು—ಹೋಗು, ಹಾರುವಾ, ನಿನ್ನಂಥ ಬಹಳ ಮಂದಿಯನ್ನು ನೋಡಿದ್ದೇನೆ. ಈಗಲೇ ಈ ಕರುವಿನ ಕುತ್ತಿಗೆಯನ್ನು ಕರಕರ ಕೊಯ್ದು ಅದರ ರಕ್ತವನ್ನು ನಿನ್ನ ಬಾಯಲ್ಲಿ ಅಡ್ಡಗೆಡವಿ ಹಾಕುವೆನು, ಎಂದು ನುಡಿದು ಶಸ್ತ್ರವನ್ನು ಮೇಲಕ್ಕೆತ್ತಿದನು. ಅಷ್ಟರಲ್ಲಿ ಒಬ್ಬ ಪುಣ್ಯವಂತನು ಆ ದುರುಳನ ಹಸ್ತವನ್ನು ತುಂಡರಿಸಿದನು.

ಕಟಕನ ಕೈಯನ್ನು ತುಂಡರಿಸಿದ ಆ ಪುಣ್ಯವಂತನು ಶಿವಬಾಲಕನೇ ಆಗಿದ್ದನು. ಆತನು ಬೀದಿಹಿಡಿದು ಹೋಗುವಾಗ ಕಟಕನ ಸೊಕ್ಕಿಗೆ ಸಂತಾಪಪಟ್ಟು, ತನ್ನ ಖಡ್ಗದ ಒಂದೇ ಪೆಟ್ಟಿನಿಂದ ಆತನ ಕೈಯನ್ನು ಕತ್ತರಿಸಿದನು. ಅದನ್ನು ನೋಡಿ ಜನರು ವಿಸ್ಮಿತರಾದರು. ಅವರು ಬೆರಗಾಗಿ ನಿಂತಲ್ಲೇನಿಂತು ಶಿವಬಾಲಕನನ್ನೇ ನೋಡಹತ್ತಿದರು. ಆ ತೇಜಸ್ವಿಯಾದ ಕುಮಾರನು ಬ್ರಾಹ್ಮಣನ ಕೈಯಲ್ಲಿ ಒಂದು ಮೊಹರನ್ನು ಹಾಕಿ, ನಿರ್ಭಯದಿಂದ ನಿಮ್ಮ ಕರುವನ್ನು ತಕ್ಕೊಂಡು ಹೋಗಿರೆಂದು ಹೇಳಿ, ತಾನು ಪಲ್ಲಕ್ಕಿಯಲ್ಲಿ ಕುಳಿತು ನಡೆದನು. ಜನರು ಬೀದಿಯಲ್ಲಿ ನಿಂತು ಶಿವಬಾಲಕನನ್ನು ಮಿಕಿಮಿಕಿ ನೋಡಹತ್ತಿದರು. ಶಿವಕುಮಾರನು ಇನ್ನು ವಿಜಾಪುರದಲ್ಲಿ ನಿಲ್ಲಲಿಕ್ಕಿಲ್ಲೆಂದು ನಿಶ್ಚಯಿಸಿದನು. ಶಹಾಜಿರಾಜನು ಮನೆಗೆ ಬರಲು, ಆ ಕುಮಾರನು, ತನ್ನನ್ನು ಪುಣೆಗೆ ಕಳಿಸಿಕೊಡಬೇಕೆಂದು ಹಟಹಿಡಿದನು. ಮಗನ ನಿಶ್ಚಯವನ್ನು ನೋಡಿ ಶಹಾಜಿರಾಜನಿಗೆ ಸಂತಾಪವಾಯಿತು; ಆದರೆ ಶಿವಬಾಲಕನು ತನ್ನ ಹಟವನ್ನು ಬಿಡಲಿಲ್ಲ, ಆತನು ಅನ್ನ ನೀರು ಬಿಟ್ಟದ್ದರಿಂದ ಶಹಾಜಿರಾಜನು ಉಪಾಯಗಾಣದೆ ಮಗನನ್ನು ಪುಣೆಗೆ ಕಳಿಸಿದನು.

ವಿಜಾಪುರದಲ್ಲಿ ಈ ನೀಚಪ್ರಸಂಗವನ್ನು ನೋಡಿದಾಗಿನಿಂದ ಶಿವರಾಯನಿಗೆ ಗೋಗಳನ್ನು ಹ್ಯಾಗ ಬಿಡಿಸೇನೆಂಬ ಚಡಪಡಿಕೆಯು ಹತ್ತಿತು. ಆತನು ಬಾಲಮಿತ್ರರನ್ನು ಕೂಡಿಕೊಂಡು ಗೋಬ್ರಾಹ್ಮಣರನ್ನು ಹ್ಯಾಗೆ ರಕ್ಷಿಸಲೆಂಬ ವಿಚಾರದಲ್ಲಿ ಮಗ್ನನಾದನು. ಮೊಗಲರು ತಮ್ಮ ದೇಶವನ್ನು ಹಾಳುಮಾಡಿದ್ದರಿಂದ ಅವರನ್ನು ಯಾವಾಗ ಮಣ್ಣುಪಾಲು ಮಾಡೇನೆಂಬ ಚಿಂತೆಯು ಆತನಲ್ಲಿ ಉತ್ಪನ್ನವಾಯಿತು. ಆತನು ಕೊಂಕಣದ 'ಹೇಟಕರಿ' ಎಂಬ

ಜನರನ್ನು ಕೂಡಿಸಿ, ಅವರಿಗೆ ಶಿಲೇದಾರಿಯನ್ನು ಕಲಿಸಿದನು. ಮಾವಳದೇಶದ ಮಾವಳ ರೆಂಬವರನ್ನು ಕೂಡಿಸಿ ಅವರನ್ನು ಶೂರ ದಂಡಾಳುಗಳಾಗಿ ಮಾಡಿದನು.

ಈ ಮೇರೆಗೆ ಸೈನ್ಯವನ್ನು ಸಿದ್ಧಮಾಡಿಕೊಂಡು ಆ ಶಿವಭೂಪನು ತೋರಣವೆಂಬ ದುರ್ಗವನ್ನು ತಕ್ಕೊಂಡು, ಸ್ವರಾಜ್ಯದ ತೋರಣವನ್ನು ಕಟ್ಟಿ ಮಹಾರಾಷ್ಟ್ರರ ನಿಶಾನೆಯನ್ನು ನಿಲ್ಲಿಸಿದನು. ತರುವಾಯ ಆ ಪ್ರತಾಪಿಯು ಚಾಕಣವೆಂಬ ಎರಡನೆಯ ದುರ್ಗವನ್ನು ತಕ್ಕೊಳ್ಳಲು ಹವಣಿಸಿದನು. ಆ ದುರ್ಗವನ್ನು ನರಸಾಳ ಫಿರಂಗೋಜಿ ಎಂಬ ನಿಜವಾದ ಶೂರನು ರಕ್ಷಿಸುತ್ತಿದ್ದನು. ಆಗ ಶಿವಾಜಿಯು ಫಿರಂಗೋಜಿಗೆ ಹೇಳಿ ಕಳಿಸಿದನೇನಂದರೆ— ಎಲೈ ಮಹಾರಾಷ್ಟ್ರ ವೀರನೇ, ಗೋಬ್ರಾಹ್ಮಣರನ್ನು ರಕ್ಷಿಸುವದಕ್ಕಾಗಿ ಸ್ವರಾಜ್ಯವನ್ನು ಸ್ಥಾಪಿಸುವ ನನಗೆ ಸಹಾಯಮಾಡಲಿಕ್ಕೆ ಬರುವವರನ್ನೆಲ್ಲ ನನ್ನ ಒಡಹುಟ್ಟಿದವರೆಂದು ನಾನು ತಿಳಿಯುತ್ತೇನೆ; ಆದರೆ ನನ್ನ ಸ್ವರಾಜ್ಯಸ್ಥಾಪನೆಗೆ ವಿಘ್ನಮಾಡುವವನನ್ನು ನನ್ನ ಶತ್ರುವೆಂದು ತಿಳಿಯುವೆನು. ಮೊಗಲರ ಚಾಕರಿಯನ್ನು ಮಾಡುವ ಹಿಂದುಗಳೇ, ಥೂ, ನಿಮ್ಮ ಗಳಿಕೆಗೆ ಬೆಂಕಿ ಹಚ್ಚಲಿ! ಎಲೈ ಪರಮಶೂರನಾದ ಫಿರಂಗೋಜಿಯೇ, ನಿಮ್ಮೆಲ್ಲರ ಅಭಿಮಾನವು ಎಲ್ಲಿ ಹಾಳಾಗಿ ಹೋಯಿತು? ನೀವು ಯಾರ ಚಾಕರಿಯನ್ನು ಮಾಡುತ್ತೀರೆಂಬದನ್ನು ಸ್ವಲ್ಪವಾದರೂ ವಿಚಾರ ಮಾಡಿರುವಿರಾ? ಅಲ್ಲೋ ಫಿರಂಗೋಜಿ, ಆಕಳು ನಿಮ್ಮ ತಾಯಿಯಲ್ಲವೆ? ಮೊಗಲರು ಅದರ ಕುತ್ತಿಗೆಯನ್ನು ಚರಚರ ಕೊಯ್ಯುವದನ್ನು ನೀವು ನೋಡಿಲ್ಲವೆ? ನಿಮ್ಮ ವೀರಶ್ರೀಯು ಎಲ್ಲಿ ಹಾಳಾಗಿಹೋಯಿತು? ಮೊಗಲರು ಇಂಥ ಅನರ್ಥವನ್ನು ನಡಿಸಿದ್ದರೂ ತಿರುಗಿ ನೀವೇ ಆ ದುಷ್ಟರ ಚಾಕರಿಯನ್ನು ಮಾಡುತ್ತೀರಲ್ಲ! ನಿಮ್ಮ ನಾಚಿಕೆಯು ಹಾಳಾಗಿ ಹೋಯಿತೇ? ಥೂ, ನಿಮ್ಮ ಗಳಿಕೆಗೆ ಬೆಂಕಿಹಚ್ಚಲಿ! ಫಿರಂಗೋಜಿ, ನಮ್ಮ ಮನೆಯನ್ನು ಮುಣುಗಿಸಿದವರು ಯಾರು? ನಮ್ಮ ಅಕ್ಕತಂಗಿಯರ ಮಾನವನ್ನು ಕಳೆಯುವವರು ಯಾರು? ಇಷ್ಟು ಮಾಡಿದರೂ ಆ ಮೊಗಲರನ್ನು ನೀವೇ ಏರಿಸಿ ಕೂಡಿಸಿದಿರಲ್ಲ! ನಿಮ್ಮ ವಿಚಾರವೆಲ್ಲ ಎಲ್ಲಿ ಹಾಳಾಗಿ ಹೋಯಿತು? ಥೂ, ನಿಮ್ಮ ಗಳಿಕೆಗೆ ಬೆಂಕಿಹಚ್ಚಲಿ!!

ಖಂಭೀರನಾದ ಶಿವಾಜಿಯು ಹೀಗೆ ಹೇಳಿಕಳಿಸಲು, ಫಿರಂಗೋಜಿಯ ಮನಸ್ಸು ತಿರುಗಿತು. ಆತನು ಶಿವಾಜಿಯ ಬಳಿಗೆ ಬಂದು—ಶಿವರಾಯನೇ, ಇಂದಿನಿಂದ ನಾನು ನಿನ್ನ ದಾಸನಾದೆನು. ನಿನ್ನ ಸೇವೆಯಲ್ಲಿ ಈ ದೇಹವನ್ನು ಸವಿಸುವೆನು, ಎಂದು ಹೇಳಿದನು. ಆಗ ಶಿವಾಜಿಯು ಚಾಕಣ ದುರ್ಗವನ್ನು ಕೈವಶಮಾಡಿಕೊಂಡು, ಫಿರಂಗೋಜಿಯೊಡನೆ ಬಂಧುತ್ವವನ್ನು ಬಳಿಸಿದನು.

ಈ ಮೇರೆಗೆ ಕತೆಯನ್ನು ಹೇಳುವಾಗ ಗೊಂದಲಿಗರ ತೋತಾರಾಮನ ಆವೇಶವು ಹೆಚ್ಚಾಯಿತು. ಆತನು ಆವೇಶದಭರದಲ್ಲಿ ಎದ್ದುನಿಂತು, ಅಂಗಿಯ ತೋಳುಗಳನ್ನು ಮೇಲಕ್ಕೆ ಸರಿಸಿ, ಮೀಸೆಯಮೇಲೆ ಕೈಹಾಕುತ್ತ ''ಥೂ, ನಿಮ್ಮ ಗಳಿಕೆಗೆ ಬೆಂಕಿಹಚ್ಚಲಿ, ಥೂ, ನಿಮ್ಮ ಗಳಿಕೆಗೆ ಬೆಂಕಿಹಚ್ಚಲಿ'' ಎಂದು ಅನ್ನುವಾಗ ಕೈಕೊಡಹಿ ಜನರನ್ನು ತಿರಸ್ಕರಿಸುತ್ತಿದ್ದನು; ಅದರಿಂದ ಶಿವಾಜಿಯು ಫಿರಂಗೋಜಿಯನ್ನು ತಿರಸ್ಕರಿಸಿದಂತೆ, ಮೊಗಲರ ಚಾಕರಿಯನ್ನು ಮಾಡುವ ನಿಮ್ಮನ್ನು ನಾನಾದರೂ ತಿರಸ್ಕರಿಸುತ್ತೇನೆಂದು ಹೇಳುತ್ತಾನೆನ್ನುವಂತೆ ತೋರುತ್ತಿತ್ತು. ಗೊಂದಲಿಗನ

ಆವೇಶವನ್ನು ನೋಡಿ ಕುಳಿತವರ ಶರೀರದಲ್ಲಿಯೂ ಆವೇಶದ ಸಂಚಾರವಾಯಿತು. ಮೊದಲು ಅಸ್ತವ್ಯಸ್ತವಾಗಿ ಕುಳಿತಿದ್ದವರು ಎದ್ದು ನೆಟ್ಟಗೆ ಕುಳಿತುಕೊಂಡು ಗೊಂದಲಿಗನ ಕಥೆಯನ್ನು ಮನಸ್ಸುಗೊಟ್ಟು ಕೇಳತೊಡಗಿದರು. ತಾವು ಮೊಗಲರ ಚಾಕರಿಯನ್ನು ಮಾಡುವದು ಅನ್ಯಾಯವೆಂತಲೂ, ತಮ್ಮ ಗಳಿಕೆಯ ಮೇಲೆ ಗೊಂದಲಿಗನು ಉಗುಳಿದ್ದು ಯೋಗ್ಯವೆಂತಲೂ, ತಾವಾದರೂ ಹಾಗೇ ಉಗುಳತಕ್ಕದ್ದೆಂತಲೂ ಅವರು ನೆನಿಸಿದರು. ಗೊಂದಲವನ್ನು ಕೇಳುತ್ತಿದ್ದ ಯಾವತ್ತು ಕೋಳಿಯ ಜನರ ಮನಸ್ಸಿನ ಮೇಲೆ ಗೊಂದಲಿಗನ ಕತೆಯ ಪರಿಣಾವು ಬಹು ಚನ್ನಾಗಿ ಆಯಿತು. ಅವರು ಮೊಗಲರ ಚಾಕರಿಯನ್ನು ಮಾಡುತ್ತಿದ್ದರೂ, ಮೊಗಲರ ಮೇಲೆ ಅವರ ಭಕ್ತಿಯು ಇದ್ದಿಲ್ಲ. ಚಾಕರಿ ಮಾಡುವಲ್ಲಿ ಆಸ್ಥೆಯೂ ಕಂಡು ಬರುತ್ತಿದ್ದಿಲ್ಲ. ಗೋಬ್ರಾಹ್ಮಣರನ್ನು ರಕ್ಷಿಸುವದಕ್ಕಾಗಿಯೂ, ಬಡಬಗ್ಗರ ದುಃಖವನ್ನು ನಿವಾರಿಸುವ ದಕ್ಕಾಗಿಯೂ ಸಾಕ್ಷಾತ್ ಶಂಕರನೇ ಶಿವಾಜಿಯಾಗಿ ಹುಟ್ಟಿರುವನೆಂತಲೂ, ಶಿವಾಜಿಯು ಕೇವಲ ಧರ್ಮರಕ್ಷಣಕ್ಕಾಗಿಯೇ ರಾಜ್ಯವನ್ನು ಸ್ಥಾಪಿಸಿರುವನೆಂತಲೂ, ಅಂಥವನ ಕಾರ್ಯಕ್ಕೆ ಅನುಕೂಲವಾಗದಿರುವದು ಪಾಪವೆಂತಲೂ ಅವರು ಈ ಮೊದಲೇ ಭಾವಿಸಿದ್ದರು. ತೋತಾ ರಾಮನ ಕಥೆಯನ್ನು ಕೇಳಿದ ಬಳಿಕಂತೂ ಆ ಭಾವನೆಯು ಬಲವತ್ತರವಾಗಿ, ಅವರು ತಮ್ಮನ್ನೇ ತಾವು ಹಳಿದುಕೊಳ್ಳಹತ್ತಿದರು. ತೋತಾರಾಮನು ಆವೇಶದ ಭರದಲ್ಲಿ ಮುಂದೆ ಮಾತಾಡಲಾರದೆ ಕೆಳಗೆ ಕುಳಿತುಕೊಂಡನು. ಜನರಿಗೆ ಗೊಂದಲವು ಮುಗಿಯಿ ತೆನ್ನುವದೂ ತಿಳಿಯಲಿಲ್ಲ, ಮುಗಿಯಲಿಲ್ಲೆನ್ನುವದೂ ತಿಳಿಯಲಿಲ್ಲ. ಜನರು ಪಿಟ್ಟೆಂದು ಮಾತಾಡದೆ ಗೊಂದಲಿಗನನ್ನು ನೋಡುತ್ತ ಕೆಲವು ಹೊತ್ತು ಕುಳಿತುಕೊಂಡರು. ಗೊಂದಲದ ಪರಿಣಾಮವು ಸರನಾಯಕನಾದ ರಾಯಾಜಿಯ ಮನಸ್ಸಿನಮೇಲೆ ಬಹಳ ಚನ್ನಾಗಿ ಆಯಿತು. ಆತನು ಬೆರಗಾಗಿ ಮುಂದುಗಾಣದೆ ಕುಳಿತುಕೊಂಡನು. ದೌಲತ್ತರಾಯನ ಸ್ಥಿತಿಯಾದರೂ ಹೀಗೆಯೇ ಆಯಿತು. ಈ ಮೇರೆಗೆ ಕೆಲವು ಹೊತ್ತು ಎಲ್ಲರೂ ತಟಸ್ಥರಾಗಿ ಕುಳಿತುಕೊಂಡಬಳಿಕ, ಜನರು ತಮ್ಮತಮ್ಮೊಳಗೆ ಕುಚು ಕುಚು ಮಾತಾಡತೊಡಗಿದರು. ತೋತಾರಾಮನ ಒಬ್ಬ ಸಂಗಡಿಗನು, ಬೆಳಗಾಯಿತೆಂದು ಸೂಚಿಸಿದ್ದರಿಂದ ಗೊಂದಲದ ಉಳಿದ ಕಾರ್ಯಗಳೆಲ್ಲ ಸಾಂಗಮಾಡಲ್ಪಟ್ಟವು. ಗೊಂದಲವು ಮುಗಿಯಿತು. ಜನರೆಲ್ಲ ಕತೆಯ ಸಂಗತಿಯನ್ನು, ಮುಖ್ಯವಾಗಿ "ಥೂ, ನಿಮ್ಮ ಗಳಿಕೆಗೆ ಬೆಂಕಿಹಚ್ಚಲಿ" ಎಂಬ ತಿರಸ್ಕಾರದ ಮಾತನ್ನು ಕುರಿತು ಮಾತಾಡುತ್ತ ಮನೆಗೆ ಹೋದರು.

ರಾಯಾಜಿಗೆ ಮಾತ್ರ ಗೊಂದಲಿಗನ ವಿಷಯವಾಗಿ ಸಂಶಯವು ಉತ್ಪನ್ನವಾಯಿತು. ತೋತಾರಾಮನು ನಿಜವಾದ ಗೊಂದಲಿಗನಲ್ಲೆಂತಲೂ, ಯಾವನೋ ಒಬ್ಬ ಶೂರನು ಗೊಂದಲಿಗನ ವೇಷದಿಂದ ಬಂದಿರುವನೆಂತಲೂ ಆತನು ತರ್ಕಿಸಿದನು. ಹೊರತು, ಶಿವಾಜಿ ಮಹಾರಾಜರಾಗಲಿ, ಅವರ ಗೆಳೆಯರಲ್ಲಿ ಯಾವನೊಬ್ಬ ಶೂರನಾಗಲಿ ಗೊಂದಲಿಗನ ಸೋಗಿನಿಂದ ಬಂದಿರಬಹುದೆಂತಲೂ ಆತನು ಶಂಕಿಸಿದನು. ತನ್ನ ಈ ಸಂಶಯವನ್ನು ದೂರಮಾಡಿಕೊಳ್ಳುವದಕ್ಕಾಗಿ ಆತುರಪಡುತ್ತಿದ್ದ ಆತನು ಜನರ ಗದ್ದಲವು ಕಡಿಮೆಯಾದಮೇಲೆ

ಸನ್ನೆಮಾಡಿ ತೋತಾರಾಮನನ್ನು ಒತ್ತಟ್ಟಿಗೆ ಕರೆದು—ತೋತಾರಾಮಾ, ನೀನು ಜಾತಿಯಿಂದ ಗೊಂದಲಿಗನಂತೆ ಕಾಣುವದಿಲ್ಲ; ಗೊಂದಲಿಗನ ಸೋಗಿನಿಂದ ಬಂದವನಾವನೋ ಒಬ್ಬ ಶೂರನಿರುತ್ತೀ. ನನ್ನ ಮುಂದೆ ಮುಚ್ಚಿಕೊಳ್ಳದೆ ಇದ್ದದ್ದನ್ನು ಹೇಳು, ಅಂದನು.

ತೋತಾರಾಮನು ಇದೇ ಸಂಧಿಯನ್ನು ಕಾಯುತ್ತಿದ್ದನೋ ಏನೋ ತಿಳಿಯದು. ರಾಯಾಜಿಯು ತನ್ನನ್ನು ಏಕಾಂತದಲ್ಲಿ ಕರೆದೊಯ್ದು ಕೇಳಿದ ಕೂಡಲೆ ಎಲ್ಲ ಸಂಗತಿಯನ್ನು ಆತನಿಗೆ ಹೇಳಿ, ಮೊಗಲರ ಚಾಕರಿಯನ್ನು ಮಾಡುತ್ತಿದ್ದದ್ದಕ್ಕಾಗಿ ಆತನನ್ನು ಒಳಿತಾಗಿ ಜರಿಯಬೇಕೆಂತಲೂ, ಹೊತ್ತು ಸಾಧಿಸಿದರೆ ಆತನನ್ನು ತನ್ನ ಪಕ್ಷಕ್ಕೆ ಒಡಕೊಳ್ಳಬೇಕೆಂತಲೂ ಆ ಗೊಂದಲಿಗನು ಮೊದಲೇ ನಿಶ್ಚಯಿಸಿದ್ದಂತೆ ತೋರುತ್ತಿತ್ತು; ಅಷ್ಟಕ್ಕಾಗಿಯೇ ಈ ಎಲ್ಲ ವ್ಯೂಹವನ್ನು ಆತನು ಒಡ್ಡಿದರೂ ಒಡ್ಡಿರಬಹುದು. ತಕ್ಕ ಸಮಯವು ದೊರೆಯುವದಕ್ಕಾಗಿ ಇಷ್ಟೆಲ್ಲ ಕಷ್ಟಪಟ್ಟವನು ಆ ಸಮಯವು ದೊರೆತಕೂಡಲೇ ತನ್ನ ಕೆಲಸವನ್ನು ಮಾಡಿಕೊಳ್ಳುವದಕ್ಕೆ ಮುಂದುರೆಯುವಂತೆ ಗೊಂದಲಿಗನ ವರ್ತನವು ತೋರಿತು. ರಾಯಾಜಿಯು ಏಕಾಂತದಲ್ಲಿ ಕರೆದುಕೊಂಡು ಹೋಗಿ ಮೇಲೆ ಹೇಳಿದಂತೆ ಪ್ರಶ್ನೆಮಾಡುವದೊಂದೇ ತಡ, ಇನ್ನೂ ರಾಯಾಜಿಯು ಮಾತಾಡುತ್ತಿರುವದರೊಳಗೇ, ತೋತಾರಾಮನು ನಡುವೇ ಬಾಯಿಹಾಕಿ ರಾಯಾಜಿಯನ್ನು ಮಾತಾಡಗೊಡದೆ—ರಾಯಾಜಿನಾಯಕರೇ, ನಿಮ್ಮ ಮುಂದೆ ಕದ್ದು ಮಾತಾಡಬೇಕಾಗಿದ್ದರೆ, ಇಷ್ಟೊಂದು ಸಾಹಸವನ್ನು ನಾನು ಯಾಕೆ ಮಾಡಬೇಕಾಗಿತ್ತು? ನಾನು ಒಂದು ಅಕ್ಷರವನ್ನಾದರೂ ಲೋಪಮಾಡದೆ ಎಲ್ಲ ಸಂಗತಿಯನ್ನು ನಿಮ್ಮಮುಂದೆ ಹೇಳುತ್ತೇನೆ. ಕೇಳಿರಿ, ಇನ್ನು ಮುಸುಕು ಏಕೆ? ಗೊಂದಲಿಗರ ತುಲಸೀದಾಸನ ತಮ್ಮನೆಂದು ಬಂದ ಈ ತೋತಾರಾಮನು ನಿಜವಾದ ತೋತಾರಾಮನಲ್ಲ, ತೋತಾರಾಮನೆಂಬ ಹೆಸರಿನ ನಾನು ಶಿವಾಜಿ ಮಹಾರಾಜರ ಚಾಕರನಾಗಿರುತ್ತೇನೆ. ಮಹಾರಾಜರ ಸೇವಕನೆಂದು ಹೇಳಿಕೊಳ್ಳುವದಕ್ಕೆ ನಾನು ತುಂಬಾ ಅಭಿಮಾನಪಡುತ್ತೇನೆ. ನನ್ನ ಹೆಸರು ತಾನಾಜಿಯು, ನಾನು ನಿಮ್ಮನ್ನು ಕಾಣುವ ದಕ್ಕಾಗಿಯೇ ಬಂದಿರುತ್ತೇನೆ. ಸ್ವಾಭಾವಿಕವಾಗಿ ಕೈಬೀಸುತ್ತಬಂದು ನಿಮ್ಮನ್ನು ಕಾಣುವದಕ್ಕಿಂತ, ನಿಮ್ಮನ್ನೂ ನಿಮ್ಮ ಜನರನ್ನೂ ಎಚ್ಚರಗೊಳಿಸಿ ಆಮೇಲೆ ಕಾಣಬೇಕೆಂದು ಈ ಗೊಂದಲಿಗರ ಸೋಗನ್ನು ಹಾಕಿಕೊಂಡೆನು. ಈಗ ನಿಮ್ಮನ್ನು ಎಚ್ಚರಗೊಳಿಸಿದ್ದೇನೆ. ನನ್ನ ಕರ್ತವ್ಯವನ್ನು ನಾನು ಮಾಡಿದೆನು. ಇನ್ನು ನೀವು ನಿಮ್ಮ ಮನಸ್ಸಿಗೆ ಬಂದಂತೆ ಮಾಡಿರಿ ಎಂದನು.

''ತಾನಾಜಿ'' ಎಂಬ ಹೆಸರು ಕಿವಿಗೆಬಿದ್ದಕೂಡಲೆ ರಾಯಾಜಿಯ ಕಣ್ಣುಗಳು ಒಮ್ಮೆಲೆ ವಿಸ್ತೃತವಾದವು. ತಾನು ನೋಡುತ್ತಿರುವದೆಲ್ಲ ಎಚ್ಚರದಲ್ಲಿಯೋ, ಕನಸಿನಲ್ಲಿಯೋ ಎಂಬ ವಿಚಾರದಲ್ಲಿ ಆತನು ಮುಣುಗಿದನು. ಸುಮಾರು ಐದು ಮಿನಿಟುಗಳಾದ ಬಳಿಕ ರಾಯಾಜಿಯು ತಾನಾಜಿಯನ್ನು ಕುರಿತು ಮೆಲ್ಲನೆ ನುಡಿದನೇನಂದರೆ—ತಾನಾಜಿರಾಯರೇ, ನಿಮ್ಮ ಸಾಹಸವು ಹೆಚ್ಚಿನದು. ನನ್ನ ಸ್ಥಳದಲ್ಲಿ ಬೇರೆ ಯಾವನೊಬ್ಬ ಮೊಗಲ ಭಕ್ತನು ಇದ್ದರೆ, ಆತನು ಕೂಡಲೆ ನಿಮ್ಮನ್ನು ಕೋಂಡಾಣೆಯ ದುರ್ಗದಮೇಲೆ ಹಿಡಕೊಂಡು ಹೋಗಿ ಉದಯಭಾನುವಿನ ಎದುರಿಗೆ ನಿಲ್ಲಿಸುತ್ತಿದ್ದನು. ಬಳಿಕ ಆ ಕುಲಗೇಡಿ ರಜಪೂತನ ಅಪ್ಪಣೆಯಂತೆ ಬಹುಕ್ರೂರತನ ದಿಂದ ನೀವು ಕೊಲ್ಲಲ್ಪಡುತ್ತಿದ್ದಿರಿ.

ರಾಯಾಜಿಯ ಈ ಮಾತುಗಳನ್ನು ಕೇಳಿ ತಾನಾಜಿಯು ಸಮಾಧಾನದಿಂದ— ರಾಯಾಜಿನಾಯಕರೇ, ಒಡೆಯನು ಹೇಳಿದ ಕೆಲಸವನ್ನು ಮಾಡುತ್ತಿರುವಾಗ ತನ್ನ ಜೀವದ ಪರಿವೆಯನ್ನು ಹಿಡಿಯಬೇಕಾಗುವದೇನು, ಎಂದು ಕೇಳಲು, ಅದಕ್ಕೆ ರಾಯಾಜಿಯು— ಹೌದು, ಒಮ್ಮೊಮ್ಮೆ ಜೀವದ ಪರಿವೆಯನ್ನು ಹಿಡಿಯಲೇಬೇಕಾಗುವದು, ಎಂದು ನುಡಿದು, ತನ್ನ ಮಾತಿಗೆ ಏನು ಉತ್ತರಕೊಡುತ್ತಾನೆಂಬದನ್ನು ನೋಡುವದಕ್ಕಾಗಿ ಆತನು ತಾನಾಜಿಯ ಮುಖಮುದ್ರೆಯ ಕಡೆಗೆ ನೋಡಹತ್ತಿದನು. ಆಗ ತಾನಾಜಿಯು—ಜೀವದ ಪರಿವೆಯನ್ನು ಒಮ್ಮೊಮ್ಮೆ ಹಿಡಿಯ ಬಹುದಲ್ಲದೆ, ಯಾವಾಗಲೂ ಹಿಡಿಯತಕ್ಕದ್ದಲ್ಲವಷ್ಟೆ? ಸದ್ಯದ ಪ್ರಸಂಗವು ಜೀವದ ಪರಿವೆಯನ್ನು ಹಿಡಿಯತಕ್ಕದ್ದಿರುವದಿಲ್ಲ ಮೇಲಾಗಿ ನೀವು ಮೊಗಲರಿಗೆ ಎಲ್ಲ ಬಗೆಯಿಂದಲೂ ಮನಮುಟ್ಟಿ ಅಂಕಿತರಾಗಿಲ್ಲೆಂಬ ನಂಬಿಗೆಯು ನನಗೆ ಇತ್ತು ಎಂದು ಹೇಳಿದನು.

ತಾನಾಜಿಯ ಮಾತುಗಳನ್ನು ಕೇಳಿ ರಾಯಾಜಿಯು—ನಾನು ಮೊಗಲರಿಗೆ ಮನಮುಟ್ಟಿ ಅಂಕಿತನಾಗಿರುವದಿಲ್ಲೆಂಬದನ್ನು ನೀವು ಹ್ಯಾಗೆ ನಿಶ್ಚಯಿಸಿದಿರಿ, ಎಂದು ಕೇಳಲು, ತಾನಾಜಿಯು —ಮನುಷ್ಯನ ಸ್ವಭಾವವನ್ನು ಅರಿತುಕೊಳ್ಳುವದು ನನ್ನ ಹುಟ್ಟುಗುಣವಾಗಿರುತ್ತದೆಂದು ಹೇಳಿ, ಕೆಲವು ಹೊತ್ತು ಸುಮ್ಮನೆ ಕುಳಿತುಕೊಂಡನು. ಬಳಿಕ ರಾಯಾಜಿಯನ್ನು ಕುರಿತು— ಇರಲಿ, ನೀವು ನನ್ನನ್ನು ಕೇಳಿದ್ದು ನೆಟ್ಟಗಾಯಿತು. ನಾನು ಅದಕ್ಕೆ ಉತ್ತರವನ್ನೂ ಕೊಟ್ಟೆನು. ಇನ್ನು ಮುಂದೆ ಏನು ಮಾಡತಕ್ಕದೆಂಬದನ್ನು ಹೇಳಿರಿ. ನಾನಂತು, ಏನಾದರೂ ಸಾಹಸಮಾಡಿ ಕಾರ್ಯವನ್ನು ಸಾಧಿಸಬೇಕು, ಅದು ಸಾಧಿಸದಿದ್ದರೆ ಪ್ರಾಣವನ್ನು ಕೊಡಬೇಕು ಎಂಬ ನಿಶ್ಚಯದಿಂದ ಬಂದೆನು. ಹಲವು ಹಂಚಿಕೆಗಳನ್ನು ಮಾಡಿ ನಿಮ್ಮತನಕ ಬಂದು ಮುಟ್ಟಿದ್ದೇನೆ. ನಿಮಗೆ ಮೊಗಲರನ್ನು ಒಲಯಿಸುವದು ಸೇರುತ್ತಿದ್ದರೆ, ನಾನು ಎರಡನೆಯ ಯಾವ ಮಾತನ್ನೂ ಆಡುವದಿಲ್ಲ ನನ್ನನ್ನು ದುರ್ಗದ ಮೇಲೆ ಕರೆದೊಯ್ದು ಉದಯಭಾನುವಿನ ಮುಂದೆ ನಿಲ್ಲಿಸಿ, ಕೋಟೆಯ ಗೋಡೆಯ ಮೇಲಿಂದ ನನ್ನನ್ನು ಕೆಳಗೆ ದೂಡಿಸಿಬಿಡಿರಿ. ಮೊಗಲರನ್ನು ಸೇವಿಸುವದು ಸೇರದಿದ್ದರೆ ದುರ್ಗವನ್ನು ಸ್ವಾಧೀನಪಡಿಸಿಕೊಳ್ಳಲಿಕ್ಕೆ ಸಹಾಯಮಾಡಿರಿ. ನಿಮ್ಮಿಂದ ನಾವು ಹೆಚ್ಚಿನ ಸಹಾಯವನ್ನು ಬಯಸುವದಿಲ್ಲ, ದುರ್ಗವನ್ನು ಹತ್ತಲಿಕ್ಕೆ ಸುಲಭವಾದ ಹಾದಿಯನ್ನು ಹುಡಕಿಕೊಡಲಿಕ್ಕೆ ನಮಗೆ ಅನುವು ದೊರೆಯಬೇಕು; ಮತ್ತು ನಮ್ಮ ದಂಡಾಳುಗಳು, ಇಲ್ಲಿಯೊಂದು ನೂರಾರು ಜನರು, ಅಲ್ಲಿಯೊಂದು ನೂರಾರು ಜನರು ಸದ್ದಿಲ್ಲದೆ ಬಂದು ನಿಂತುಕೊಂಡರೆ, ಆ ಸುದ್ದಿಯು ದುರ್ಗದ ಮೇಲೆ ಹೋಗಬಾರದು. ಇಷ್ಟು ಸಹಾಯವಾದರೆ ಸಾಕು. ಮುತ್ತಿಗೆ ಹಾಕುವ ನಮ್ಮ ಕೆಲಸವನ್ನು ನಾವು ನೋಡಿಕೊಳ್ಳುತ್ತೇವೆ. ರಾಯಾಜಿನಾಯಕರೇ, ಇನ್ನು ಮನಸ್ಸಿನಲ್ಲಿ ಒಂದು ನಿಶ್ಚಯಮಾಡಿರಿ. ನಮ್ಮ ಮಹಾರಾಜರಿಗೆ ಸಹಾಯವನ್ನು ಮಾಡಿ ನಿಮ್ಮ ಹಿಂದೂ ಧರ್ಮವನ್ನು ರಕ್ಷಿಸಲಿಕ್ಕೆ ನೆರವಾದ ಸಮಾಧಾನ ವನ್ನಾದರೂ ಪಡೆಯಿರಿ, ಇಲ್ಲದಿದ್ದರೆ ಕೂಡಲೆ ನನ್ನ ಹೆಡಮುರಿಗೆ ಕಟ್ಟಿ ದುರ್ಗದ ಮೇಲೆ ಎಳೆದೊಯ್ದು ಬಿಡಿರಿ. ಇನ್ನು ನಾನು ಹೆಚ್ಚಿಗೆ ಮಾತಾಡುವದಿಲ್ಲ.

ತಾನಾಜಿಯ ಈ ಮಾತುಗಳನ್ನು ಕೇಳಿ ರಾಯಾಜಿಯು ತೀರ ಸ್ತಬ್ಧನಾದನು. ಕೆಲಹೊತ್ತಿನ ಮೇಲೆ ಆತನು ತಾನಾಜಿಯನ್ನು ಕುರಿತುಒಳ್ಳೇದು ನಾನು ನಿಮಗೆ ಸಹಾಯಮಾಡುತ್ತೇನೆ. ಒಪ್ಪಂದದಲ್ಲಿ ಈ ಕೋಂಡಾಣೆಯ ದುರ್ಗವನ್ನು ಮಹಾರಾಜರು ತಿರುಗಿ ಔರಂಗಜೇಬನಿಗೆ ಕೊಟ್ಟಾಗಲೇ ನಮಗೆ ಬಹಳ ಅಸಮಾಧಾನವಾಗಿತ್ತು; ಆದರೆ, ಮಹಾರಾಜರ ಕೈಮೀರಿ ಹೋದಬಳಿಕ ಅವರಾದರೂ ಏನು ಮಾಡಿಯಾರು? ಆಗಲಿ ಆಗಲಿ; ತಾನಾಜೀ ನೀವು ಕೆಚ್ಚೆದೆಯವರೆಂಬದರಲ್ಲಿ ಸಂಶಯವಿಲ್ಲ! ಇಷ್ಟು ಜನರಲ್ಲಿ ನೀವು ಮಹಾರಾಜರ ವೃತ್ತಾಂತವನ್ನು ಹೇಳಹೇಳುತ್ತ ಆವೇಶದಿಂದ ಎದ್ದುನಿಂತು ಅಂಗಿಯ ತೋಳನ್ನು ಮೇಲಕ್ಕೆ ಸರಿಸಿ ನಮ್ಮೆಲ್ಲರ ಗಳಿಕೆಯ ಮೇಲೆ ಉಗುಳಿದಿರಿ. ಶಾಬಾಸ್! ಇದಕ್ಕಿಂತಲೂ ಶೌರ್ಯದ ಸಂಗತಿಯು ಅದಾವದಿರುವದು! ನಡೆಯಿರಿ, ಈ ದುರ್ಗದ ಸುತ್ತಲಿನ ಎಲ್ಲ ಕೋಳೀಜನರೂ, ಮೇಲಿನ ಮಾದರೂ ನಿಮಗೆ ಅನುಕೂಲರಾದರೆಂದು ತಿಳಿಯಿರಿ. ಇಂದು ಇಲ್ಲಿಂದಹೋದ ಪ್ರತಿಯೊಬ್ಬ ಮನುಷ್ಯನು ಇದೇ ವಿಚಾರವನ್ನು ಮಾಡುತ್ತಿರಬಹುದು. ಅವರೆಲ್ಲರಿಗೆ ಈ ವಿಚಾರವನ್ನು ತಿಳಿಸುವದೊಂದೇ ತಡ, ಅವರು ಅನುಕೂಲರಾಗುವರು. ಈಗ ಹದಿನೈದು ದಿವಸಗಳ ಹೊರಬಳಗೆ, ನನಗೂ, ಮಾದಿಗರ ನಾಯಕನಾದ ಗೋಂದನಾಯಕನಿಗೂ ಭೆಟ್ಟಿಯಾಗಿತ್ತು. ಆಗ ನಾವು ಕೋಂಡಾಣೆಯನ್ನು ಮಹಾರಾಜರು ಕೊಡತಕ್ಕದ್ದಿದ್ದಿಲ್ಲವೆಂದು ಮಾತಾಡಿದೆವು. ಆತನನ್ನು ನಿಮ್ಮ ಸಲುವಾಗಿ ಕರಕೊಂಡು ಬರುತ್ತೇನೆ. ದೌಲತ್ರಾಯರ ಸಹಾಯವಿತ್ತೆಂತಲೇ ನೀವು ಇಲ್ಲಿಗೆ ಬಂದದ್ದರಿಂದ ಅವರನ್ನೂ ನಮ್ಮ ಒಳಸಂಚಿನಲ್ಲಿ ಕೂಡಿಸಿಕೊಳ್ಳೋಣ, ಎಂದನು.

ರಾಯಾಜಿಯ ಮಾತುಗಳನ್ನು ಕೇಳಿ ತಾನಾಜಿಯು ನಕ್ಕು—ದೌಲತರಾಯರು ಈ ಸಂಚಿನಲ್ಲಿ ಇದ್ದೇ ಇದ್ದಾರೆ. ನಾನು ಯಾರೆಂಬುದು ಅವರಿಗೆ ಗೊತ್ತಿದ್ದು ನನ್ನನ್ನು ಗೊಂದಲಿಗನ ಸೋಗಿನಿಂದ ಅವರೇ ಇಲ್ಲಿಗೆ ಬರಮಾಡಿದರು. ಚಿಕ್ಕಂದಿನಿಂದಲೇ ನಮ್ಮಾ ಅವರಾ ಪುಣೆಯ ಗೆಳೆತನವು, ಎಂದು ಹೇಳಿದನು.

## ಜಗತ್ಸಿಂಗನು

ಮಾಘವದ್ಯ ಪಂಚಮಿಯ ಮಧ್ಯರಾತ್ರಿಯಲ್ಲಿ ಕೊಂಡಾಣೆಯ ದುರ್ಗದ ಮೇಲಿದ್ದ ದಂಡಿನೊಳಗಿನ ಒಬ್ಬ ರಜಪೂತ ಸಿಪಾಯಿಯು 'ಝುಂಜಾರ'ವೆಂಬ ಹುಡೆಯಹತ್ತರ ಕಾವಲುಗಾರನಾಗಿದ್ದನು. ಆತನಜತೆಗಾರರಾದ ಮುಸಲ್ಮಾನ ಸಿಪಾಯಿಗಳೂ, ರಜಪೂತ ಸಿಪಾಯಿಗಳೂ ಸ್ವಸ್ಥವಾಗಿ ಮಲಗಿದ್ದರು. ಅವರು ದಿನಾಲು ಹೀಗೆಯೇ ಸ್ವಸ್ಥನಿದ್ರೆ ಮಾಡುತ್ತಿದ್ದರು. ತಮ್ಮೊಳಗಿನ ಒಬ್ಬಿಬ್ಬರನ್ನು ಸರತಿಯಮೇಲೆ ಎಚ್ಚತ್ತಿರಲಿಕ್ಕೆ ನಿಯಮಿಸಿ, ಉಳಿದವರು ಗೊರಿಕೆ ಹೊಡೆಯುವದು ಅವರ ನಿತ್ಯದ ಕ್ರಮವಾಗಿತ್ತು. ಒಬ್ಬಿಬ್ಬರನ್ನು ಎಚ್ಚರಿಡಲಿಕ್ಕೆ ಕೇವಲ

ಉದಯಭಾನುವಿನ ಭಯವೇ ಕಾರಣವಾಗಿತ್ತು ಕಾವಲುಗಾರರು ತಮ್ಮ ತಮ್ಮ ಸ್ಥಳಗಳನ್ನು ಎಚ್ಚರದಿಂದ ಕಾಯುತ್ತಿರುವರೋ ಇಲ್ಲವೋ, ಎಂಬುದನ್ನು ನೋಡುವದಕ್ಕೆ ಆತನು ರಾತ್ರಿ ಆಕಸ್ಮಾತ್ತಾಗಿ ಬಂದರೆ, ಎಚ್ಚರಿದ್ದವರು ಅವನ ಕಾಲಸಪ್ಪಳನ್ನು ಕೇಳಿ ಉಳಿದವರನ್ನು ಕೂಡಲೆ ಎಬ್ಬಿಸಬೇಕೆಂದು ಅವರು ಇಷ್ಟು ವ್ಯವಸ್ಥೆ ಮಾಡಿದ್ದರು. ಆ ಸಿಪಾಯಿಗಳು ಕೊಂಡಾಣೆಯ ದುರ್ಗವು ಬಹುಭದ್ರವಾದದ್ದೂ ಎಲ್ಲಿಯೂ ಸುಲಭವಾಗಿ ಹತ್ತಲಿಕ್ಕೆ ಬಾರದ್ದೂ ಇರುವದರಿಂದ ಅದನ್ನು ಕಾಯುವ ಅವಶ್ಯಕತೆಯೇ ಇಲ್ಲೆಂದು ಭಾವಿಸಿದ್ದರು; ಆದ್ದರಿಂದ ಉದಯ ಭಾನುವಿನ ಕಿಟಕಿಟಿಗಾಗಿ ಅವರು ಒಬ್ಬಿಬ್ಬರನ್ನು ಸರತಿಯಿಂದ ಎಚ್ಚತ್ತಿರುವಂತೆ ನಿಯಮಿಸಿ ಸ್ವಸ್ಥ ಮಲಗಿಕೊಳ್ಳುವ ಚಾಳಿಯನ್ನು ಇಟ್ಟಿದ್ದರು. ಉದಯಭಾನುವು ದುರ್ಗದ ಕೆಳಗಿನ ಕೋಳಿಯ ಜನರ ಮೇಲೆ ಕಾವಲಿಗಾಗಿ ಒಳ್ಳೆಯ ಒತ್ತಾಯವನ್ನು ಮಾಡಿದ್ದರೂ, ದುರ್ಗದಮೇಲಿನ ಸಿಪಾಯಿಗಳ ಮೇಲೆ ಅವನ ಅಧಿಕಾರವು ಎಷ್ಟು ಮಾತ್ರವೂ ನಡೆಯು ತ್ತಿದ್ದಿಲ್ಲೆಂದು ಹೇಳಬಹುದು. ಆ ದುರ್ಗದ ಮೇಲೆ ಮೊದಲಿನಿಂದಲೇ ಇದ್ದ ಸಿಪಾಯಿಗಳು, ತಮ್ಮ ಮೇಲೆ ಉದಯಭಾನುವು ಹೊಸ ಸಿಪಾಯಿಗಳನ್ನು ತಂದನೆಂಬ ಹೊಟ್ಟೆಕಿಚ್ಚಿನಿಂದ ಹೊಸ ಸಿಪಾಯಿಗಳನ್ನೂ, ಉದಯಭಾನುವನ್ನೂ ತಿರಸ್ಕರಿಸುತ್ತಿದ್ದರು. ಉದಯಭಾನುವಿನ ಸಂಗಡ ಬಂದಿದ್ದ ಹೊಸ ಸಿಪಾಯಿಗಳು, ಉದಯಭಾನುವನ್ನು ಎಂದೂ ಮನ್ನಿಸುತ್ತಿದ್ದಿಲ್ಲ, ಹೊರತು ಒಬ್ಬ ದೊಡ್ಡ ಕುಲದ ಹೆಣ್ಣುಮಗಳು, ತನ್ನ ಸತೀಧರ್ಮವನ್ನು ಆಚರಿಸುತ್ತಿರುವಾಗ ಆಕೆಯನ್ನು ಎಳತಂದು ಪ್ರತಿಬಂಧದಲ್ಲಿಟ್ಟನೆಂದು ತಿಳಿದಬಳಿ ಕಂತು ಅವರು ಆ ಉದಯ ಭಾನುವನ್ನು ಬಹಳವಾಗಿ ತಿರಸ್ಕರಿಸಹತ್ತಿದರು; ಆದ್ದರಿಂದ ಆ ದುರ್ಗದ ಮೇಲಿದ್ದ ಸಿಪಾಯಿಗಳ ಶಕ್ತಿಯ ಉಪಯೋಗವಾಗುವದು ಒತ್ತಟ್ಟಿಗುಳಿದು, ಆ ಸಿಪಾಯಿಗಳ ಅಲ್ಪ ಸ್ವಲ್ಪ ಭಯವು ಮಾತ್ರ ಉದಯಭಾನುವನ್ನು ಅಳುಕಿಸುತ್ತಿತ್ತು, ಆದರೂ ಆತನು ಈ ಸಂಗತಿಯನ್ನು ಎಂದೂ ಹೊರಗೆ ತೋರಿಸುತ್ತಿದ್ದಿಲ್ಲ, ಹೊತ್ತುಬಿದ್ದರೆ ಬೇಕಾದವನಿಗೆ ಬೇಕಾದ ಶಿಕ್ಷೆಯನ್ನು ಕೊಡಲಿಕ್ಕೆ ತಾನು ಹಿಂದುಮುಂದು ನೋಡಲಿಕ್ಕಿಲ್ಲೆಂಬ ಅಬ್ಬರವನ್ನು ಅವನು ಎಲ್ಲರಿಗೆ ತೋರಿಸುತ್ತಿದ್ದನು; ಆದ್ದರಿಂದ ಆ ಸಿಪಾಯಿಗಳು, ತಾವು ತಮ್ಮ ಕಾರ್ಯದಲ್ಲಿ ಬಹು ದಕ್ಷರಿರುತ್ತೇವೆಂದು ಹೊರಗೆ ತೋರಿಸುತ್ತಿದ್ದರು. ಝುಂಜಾರ ಕೊತ್ತಳದ ಕಾವಲಿಗಾಗಿ ನಿಯಮಿಸಿದ್ದ ಸಿಪಾಯಿಗಳ ಗುಂಪಿನಲ್ಲಿ ಮೇಲೆ ಹೇಳಿದ ಒಬ್ಬ, ಸಿಪಾಯಿಯು ಮಾತ್ರ ದಿನಾಲು ಎಚ್ಚತ್ತು ಕಾಯುತ್ತಿದ್ದನು. ತನಗೆ ನಿದ್ದೆ ಬರುವದಿಲ್ಲಾದ್ದರಿಂದ ದಿನಾಲು ನಾನು ಕಾಯುತ್ತೇನೆಂದು ಹೇಳಿ, ರಾತ್ರಿಯ ಕಾವಲಿನ ಜವಾಬುದಾರಿಯನ್ನು ಅವನು ವಹಿಸಿಕೊಂಡಿದ್ದನು. ಈ ಸಿಪಾಯಿಯು ಹಗಲು ಎಲ್ಲಿಯೂ ಕಣ್ಣಿಗೆ ಬೀಳುತ್ತಿದ್ದಿಲ್ಲ, ಎಲ್ಲಿಯಾದರೂ ಸ್ವಸ್ಥ ಮಲಗಿಕೊಂಡು ನಿದ್ದೆಮಾಡುತ್ತಿದ್ದನು. ರಾತ್ರಿ ಮಾತ್ರ ಕಣ್ಣಿಗೆಕಣ್ಣು ಹಚ್ಚುತ್ತಿದ್ದಿಲ್ಲ. ಹೀಗೆ ಇವನು ಹಗಲು ಹೊರಗೆ ಮೋರೆತೋರಿಸದಿರುವದಕ್ಕೆ ಏನಾದರೂ ಕಾರಣವಿರಬಹುದೆಂಬ ಸಂಶಯವು ಧೂರ್ತರ ಮನಸ್ಸಿನಲ್ಲಿ ಬರುವ ಸಂಭವವಿತ್ತು; ಆದರೆ ಉಳಿದ ಸಿಪಾಯಿಗಳಿಗೆ ಈ ಸಂಶಯ ಬರುವದರ ಬದಲು, ಇವನು ಒಂದು ತರದ ಮನುಷ್ಯನಿದ್ದಾನೆಂದು ತಿಳಿದು ಅವರು ಅವನೊಡನೆ ಹುಡುಗಾಟಿಕೆ ಮಾಡುತ್ತಿದ್ದರು; ಆದರೂ

ಆ ಸಿಪಾಯಿಯು ಎಂದೂ ಎದುರುತ್ತರ ಅವರಿಗೆ ಕೊಡುತ್ತಿದ್ದಿಲ್ಲ; ಮತ್ತು ತನಗೆ ಹುಡುಗಾಟಿಕೆ ಮಾಡುತ್ತಾರೆಂದು ಸಿಟ್ಟಿಗೆದ್ದು ಅವರ ವಿನೋದಕ್ಕೆ ಭಂಗತರುತ್ತಿದ್ದಿಲ್ಲ. ಯಾರು ಏನು ಕೆಲಸ ಹೇಳಿದರೂ ಜಗತ್ಸಿಂಗನು ಕೂಡಲೆ ಅದನ್ನು ಮಾಡುತ್ತಿದ್ದನು; ನನ್ನಿಂದಾಗುವ ದಿಲ್ಲೆಂದು ಆತನು ಎಂದೂ ಹೇಳುತ್ತಿದ್ದಿಲ್ಲ; ಕಾರಣ ಆತನು ಎಲ್ಲ ಸಿಪಾಯಿಗಳಿಗೂ ಬೇಕಾಗಿದ್ದನು. ಪ್ರತಿಒಬ್ಬ ಸಿಪಾಯಿಯು ಜಗತ್ಸಿಂಗನು ತನ್ನ ಹತ್ತರವಿರಬೇಕೆಂದು ಬಯಸುತ್ತಿದ್ದನು; ಆದರೆ ಆತನು ತನ್ನ ನಂಬಿಗೆಯ ಗೆಳೆಯನಾದ ವಿಶಾಲದೇವನೆಂಬ ಸಿಪಾಯಿಯ ಬಳಿಯಲ್ಲಿಯೇ ವಿಶೇಷವಾಗಿ ಇರುತ್ತಿದ್ದನು. ಮತ್ತು ತನ್ನ ಗುಟ್ಟಿನ ಮಾತುಗಳನ್ನು ಅವನೊಬ್ಬನ ಮುಂದೆ ಮಾತ್ರ ಹೇಳುತ್ತಿದ್ದನು.

ಈ ಮಧ್ಯರಾತ್ರಿಯಲ್ಲಿ ವಿಶಾಲದೇವನು ಮಲಗಿಕೊಂಡಿದ್ದನು. ಒಬ್ಬ ಜಗತ್ಸಿಂಗನು ಮಾತ್ರ ಎಚ್ಚರಿದ್ದು ಅವನು ಝುಂಜಾರ ಹುಡೆಯಿಂದ, ಕಲಾವಂತಿಣಿಯ ಹುಡೆಯವರೆಗೂ, ಕಲಾವಂತಿಣಿಯ ಹುಡೆಯಿಂದ ಝುಂಜಾರ ಹುಡೆಯವರೆಗೂ ಒತ್ತರದಿಂದ ತಿರುಗಾಡುತ್ತಿದ್ದನು. ಆವೆರಡು ಹುಡೆಗಳ ನಡುವಿನ ಅಷ್ಟು ಸ್ವಲ್ಪ ಅಂತರದಲ್ಲಿ ಐದು ಚೋಕಿಗಳಿದ್ದವು, ಜಗತ್ಸಿಂಗನು ಪ್ರತಿಯೊಂದು ಚೌಕಿಯೊಳಗಿನ ಸಿಪಾಯಿಗಳಿಗೆ ''ನೀವು ಯಾವಚಿಂತೆಯನ್ನೂ ಮಾಡಬೇಡಿರಿ, ಸ್ವಸ್ಥನಿದ್ರೆಮಾಡಿರಿ. ಅಂಥ ಪ್ರಸಂಗವೇನಾದರೂ ಬಂದರೆ, ಇಲ್ಲವೆ ಉದಯಭಾನುವು ಇತ್ತ ಕಡೆಗೆ ಸುಳಿದರೆ, ಕೂಡಲೆ ನಾನು ನಿಮ್ಮನ್ನು ಎಚ್ಚರಗೊಳಿಸುತ್ತೇನೆ ಎಂದು ಹೇಳಿದ್ದನು; ಮತ್ತು ಹೇಳಿದಂತೆ ಅವನು ಐದಾರುಸಾರೆ ಆ ಸಿಪಾಯಿಗಳ ಮರ್ಯಾದೆಯನ್ನೂ ಕಾದಿದ್ದನು. ಅಂದಬಳಿಕ ಕೇಳುವದೇನು? ಆ ಐದೂ ಚೌಕಿಗಳೊಳಗಿನ ಸಿಪಾಯಿಗಳು ಜಗತ್ಸಿಂಗನ ಮೇಲೆ ಸಂಪೂರ್ಣ ವಿಶ್ವಾಸವಿಟ್ಟು ಮಲಗಿಕೊಳ್ಳುತ್ತಿದ್ದರು.

ಮೇಲೆ ಹೇಳಿದಂತೆ ಜಗತ್ಸಿಂಗನು ಎಡತಾಕುತ್ತಿರುವಾಗ ನಡುವೆ ನಿಂತುಕೊಳ್ಳುತ್ತಿದ್ದನು; ಏನೋ ಕಿವಿಗೊಟ್ಟು ಕೇಳಿದಹಾಗೆ ಮಾಡುತ್ತಿದ್ದನು. ಬಳಿಕ ಮತ್ತೆ ಮೊದಲಿನಂತೆ ಓಡಾಡುತ್ತಿದ್ದನು. ಹೀಗೆ ಮಾಡುತ್ತಮಾಡುತ್ತ ಅವನು ಒಂದು ಸ್ಥಳದಲ್ಲಿ ನಿಂತುಕೊಂಡು, ಕೋಟೆಯ ಗೋಡೆಯ ತುದಿಗೆ ಹೋಗಿ ಒಮ್ಮೆ ಕೆಳಗೆ ಹಣಿಕಿ ನೋಡಿದನು. ಕೆಳಗೆ ಏನೂ ಕಾಣಿಸಲಿಲ್ಲ, ಆಗ ಅವನು ಮೆಲ್ಲನೆ ಲಟಿಕಿಯನ್ನು ಹೊಡೆದನು. ಅದಕ್ಕೆ ಕೆಳಗಿನಿಂದ ಅದರಂತೆ ಲಟಿಕಿಯಿಂದ ಪ್ರತ್ಯುತ್ತರವು ದೊರಕಿತು. ಅದರಿಂದ ಜಗತ್ಸಿಂಗನ ಮುಖಮುದ್ರೆಯು ಪ್ರಫುಲ್ಲಿತವಾಗಿ, ಅವನು ಮತ್ತೊಮ್ಮೆ ಕೆಳಗೆ ಹಣಿಕಿ ನೋಡಿದನು. ಬಳಿಕ ಆತನು ತನ್ನ ಹತ್ತರಿದ್ದ ಗೂಟವನ್ನು ತೆಗದು ಅವನ್ನು ಕೋಟೆಯ ಗೋಡೆಯ ಒಳಮಗ್ಗಲಿಗೆ ಗಟ್ಟಿಮುಟ್ಟಿಯಾಗಿ ಬಡಿದನು. ಅವನು ಬಳಿಕ ಮತ್ತೆ ಒಮ್ಮೆ ಲಟಿಕಿಯನ್ನು ಬಾರಿಸಲು, ಕೆಳಗಿನಿಂದ ಯಾರೋ ಒಂದು ಗಟ್ಟಿಮುಟ್ಟಿಯಾದ ಹಗ್ಗದ ತುದಿಯನ್ನು ಮೇಲಕ್ಕೆ ಒಗೆದರು. ಕೈಗೆ ಆ ಹಗ್ಗದ ತುದಿಯು ಹತ್ತಿದಕೂಡಲೆ ಜಗತ್ಸಿಂಗನು ಅದನ್ನು ಹಿಡಕೊಂಡು ಗೂಟಕ್ಕೆ ಕಟ್ಟಹತ್ತಿದನು. ಹಗ್ಗವನ್ನು ಗೂಟಕ್ಕೆ ಗಟ್ಟಿಯಾಗಿ ಕಟ್ಟಿದಬಳಿಕ ಅದು ಸ್ವಾಭಾವಿಕ ವಾಗಿಯೇ ಕೋಟೆಯ ಗೋಡೆಯ ಕೆಳಗೆ ತೂಗಾಡುತ್ತ ನಿಂತುಕೊಂಡಿತು. ಇನ್ನು ಆತನು ಆ ಹಗ್ಗದ ಕೂಡ ಸರಸರ ಇಳಿದು ಹೋಗಬೇಕೆಂದು ಮಾಡಿದ್ದನು. ಅಷ್ಟರಲ್ಲಿ

ಏನೋ ಕಾಲಸಪ್ಪಳವಾದ ಹಾಗೆ ಕೇಳಿದ್ದರಿಂದ ಆತನು ಅತ್ತಿತ್ತ ನೋಡಹತ್ತಿದನು; ಆದರೆ ಯಾರ ಸುಳವೂ ಕಾಣಿಸಲಿಲ್ಲ. ಆಮೇಲೆ ಅವನು ಮತ್ತೊಮ್ಮೆ ಆ ಕಡೆಗೂ, ಈಕಡೆಗೂನೋಡಿ ಹಗ್ಗದಿಂದ ಇಳಿದು ಹೋಗುವ ತನ್ನ ಕಾರ್ಯವನ್ನು ನೆರವೇರಿಸುವದಕ್ಕಾಗಿ ಆರಂಭಿಸಿದನು. ಆತನು ಹಗ್ಗದ ಸಹಾಯದಿಂದ ಸರಸರ ಕೆಳಗೆ ಇಳಿದು ತಳಕ್ಕೆ ಹೋಗತಕ್ಕವನು, ಅಷ್ಟರಲ್ಲಿ ಕೆಳಗೆ ಕಂದರದಲ್ಲಿ ಎಲ್ಲಿಯೋ ಯಾರೋ ಮಾತಾಡುತ್ತಿರುವಂತೆ ಆತನಿಗೆ ತೋರಿತು. ಆಗ ಜಗತ್ಸಿಂಗನ ಮನಸ್ಸಿನಲ್ಲಿ—''ಇದು ಏನಿರಬಹುದು, ಯಾರು ಮಾತಾಡುತ್ತಿರಬಹುದು'' ಎಂಬ ವಿಚಾರವು ಹೊಳೆಯುತ್ತಿರುವಷ್ಟರಲ್ಲಿ ಕೆಳಗಿನಿಂದ ಒಂದು ಬಾಣವು ಸುಯ್‌ಗುಟ್ಟುತ್ತ ಬಂದು ಜಗತ್ಸಿಂಗನ ಕಾಲಲ್ಲಿ ನಟ್ಟಿತು. ಆಕಸ್ಮಾತ್ತಾಗಿ ಉಂಟಾದ ನೋವಿನಿಂದ ಜಗತ್ಸಿಂಗನು ವ್ಯಥೆಪಟ್ಟು ಕಾಲನ್ನು ಗಟ್ಟಿಯಾಗಿ ಜಾಡಿಸಲು, ಆ ಜೋಲಿಗೆ ಮೇಲಿನ ಗೂಟವು ಕಿತ್ತಿ ಅವನು ಹಗ್ಗದೊಡನೆ ಕೆಳಗೆ ಸಾಗಿದನು. ಕೆಳಗೆ ಬೀಳುವಾಗ ಅವನ ಬಾಯಿಂದ ''ಹಾ ಹಾ! ಇನ್ನೇನು ನಾನು ಅವರನ್ನು ಬಿಡಿಸುತ್ತೇನೆ,'' ಎಂಬವಿಷ್ಟೇ ಶಬ್ದಗಳು ಆಕಸ್ಮಾತ್ತಾಗಿ ಹೊರಟವು. ''ಕಾಯುವವನ ಮುಂದೆ ಕೊಲ್ಲುವವನ ಆಟವೇನೂ ನಡೆಯುವ ದಿಲ್ಲೆ''ಂದು ದೈವವಾದಿಗಳು ಯಾವಾಗಲೂ ಅನ್ನುತ್ತಿರುತ್ತಾರೆ. ಅವರ ಮಾತಿನಂತೆಯೇ ಆ ರಜಪೂತ ಸಿಪಾಯಿಯ ಸ್ಥಿತಿಯಾಯಿತು. ಅವನು ಗೂಟಕಿತ್ತಿ ಬಿದ್ದವನು, ನೆಟ್ಟಗೆ ಹೋಗಿ ಬೀಳದೆ, ಸ್ವಲ್ಪ ಸೊಟ್ಟಬಿದ್ದಿದ್ದರೆ, ಅವನ ತಲೆ ಒಡೆದು ಪ್ರಾಣಹೋಗತಕ್ಕದ್ದು; ಆದರೆ ಆ ಸಿಪಾಯಿಯು ದೈವಯೋಗದಿಂದ ನೆಟ್ಟಗೆ ಹೋಗಿ ಒಂದು ದಟ್ಟವಾದ ಗಿಡಗಳ ಗುಂಪಿನ ಮೇಲೆ ಬಿದ್ದು ಗಿಡದಲ್ಲಿ ಸಿಕ್ಕು ತೂಗಾಡಹತ್ತಿದನು. ಆ ಗಿಡದ ಬುಡದಲ್ಲಿ ಇಬ್ಬರು ಮನುಷ್ಯರು ಕುಳಿತಿದ್ದರು. ಅವರಲ್ಲಿಯ ಒಬ್ಬನು ಬಾಣವನ್ನು ಹೊಡೆದದ್ದರಿಂದ ಮೇಲಿನಿಂದ ಏನು ಬಿತ್ತೋ ಎಂದು ಅವರು ಗಾಬರಿಯಾಗಲಿಲ್ಲ; ಆದರೆ ಆ ಗಿಡಗಳ ಬುಡದಲ್ಲಿ ಕುಳಿತಿದ್ದ ಇಬ್ಬರು ಮನುಷ್ಯರು ಯಾರಿರಬಹು ದೆಂಬದನ್ನೂ ಅವರು ಇಂಥ ಅಪರಾತ್ರಿಯಲ್ಲಿ ಅಲ್ಲಿ ಯಾಕೆ ಬಂದಿರಬಹು ದೆಂಬದನ್ನೂ ತಿಳಕೊಳ್ಳಲಿಕ್ಕೆ ವಾಚಕರು ಆತುರಪಡುತ್ತಿರಬಹುದು; ಆದ್ದರಿಂದ ಮೊದಲು ಅವರಿಬ್ಬರ ವೃತ್ತಾಂತವನ್ನು ಹೇಳೋಣ. ಅದನ್ನು ಹೇಳುವಾಗ ಮೇಲಿನಿಂದ ಬಿದ್ದ ರಜಪೂತನ ವೃತ್ತಾಂತವೂ ತಿಳಿಯಬಹುದು.

ಈ ಗಿಡದ ಬುಡದಲ್ಲಿ ಕುಳಿತಿದ್ದ ಇಬ್ಬರು ಮನುಷ್ಯರಲ್ಲಿ ಒಬ್ಬನು ತಾನಾಜಿಯೂ, ಇನ್ನೊಬ್ಬನು ರಾಯಾಜಿಯೂ ಆಗಿದ್ದರು. ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ರಾಯಾಜಿಯು ತಾನಾಜಿಗೆ ಸಹಾಯ ಮಾಡುವೆನೆಂದು ಹೇಳಿದ ಬಳಿಕ, ಸೇಲಾರಮಾವನು, ರಾಯಾಜಿ ನಾಯಕನು, ದೌಲತರಾಯನು, ತಾನಾಜಿಯು ಈ ನಾಲ್ವರು ಏಕಾಂತದಲ್ಲಿ ಕುಳಿತು ಆಣೆ ಕ್ರಿಯೆಗಳನ್ನು ಮಾಡಿದರು. ಬಳಿಕ ಸೇಲಾರಮಾವನು ಮುಂದೆ ಮಾಡತಕ್ಕದ್ದೇನೆಂಬದನ್ನು ರಾಯಾಜಿಯೊಡನೆ ಗೊತ್ತುಮಾಡುವದಕ್ಕಾಗಿ ತಾನಾಜಿಯನ್ನು ಅಲ್ಲಿಬಿಟ್ಟು, ಮಾವಳ ಜನರನ್ನು ಕರಕೊಂಡು ಬರುವದಕ್ಕಾಗಿ ತಾನು ಹೋದನು. ಕೆಲಸವು ಆದಷ್ಟು ತೀವ್ರವಾಗಬೇಕಾದದ್ದರಿಂದ ಇಷ್ಟು ಅವಸರ ಮಾಡಲಿಕ್ಕೆ ಬೇಕಾಗಿತ್ತು, ಸೇಲಾರಮಾವನು ಹೋಗಲು, ರಾಯಾಜಿಯು

ತಾನು ದುರ್ಗದ ಸುತ್ತಲಿನ ಸ್ಥಳದ ನಾಯಕನಾದ್ದರಿಂದ ಒಮ್ಮೆ ದುರ್ಗದ ಸುತ್ತಲು ನೋಡಿ ಬರುವ ನೆವದಿಂದ ತಾನಾಜಿಯನ್ನು ಸಂಗಡ ಕರಕೊಂಡು ದುರ್ಗದ ಸುತ್ತೆಲ್ಲ ಅವನನ್ನು ತಿರುಗಿಸಿದನು; ಮತ್ತು ತನ್ನ ಹನ್ನೆರಡು ಮೇಟೆಗಳನ್ನೂ ಕೋಟೆಯ ಎಲ್ಲ ಮಗ್ಗಲುಗಳನ್ನೂ ತಾನಾಜಿಗೆ ತೋರಿಸಿದ್ದಲ್ಲದೆ, ಎತ್ತ ಕಡೆಯಿಂದ ಹ್ಯಾಗೆ ಹತ್ತಲಿಕ್ಕೆ ಬರಬಹುದೆಂಬದನ್ನು ಅಲ್ಲಲ್ಲಿ ನಿಂತು ನೋಡಿದನು. ಆ ಮೇಲೆ ಅವರು ಇಂಥ ಸ್ಥಳದಲ್ಲಿಯೇ ಉಡವನ್ನು ಏರಿಸಿ ಅದರ ಸಹಾಯದಿಂದ ಕೋಟೆಯನ್ನು ಹತ್ತತಕ್ಕದ್ದೆಂದು ಏಕಾಂತದಲ್ಲಿ ನಿಶ್ಚಯಿಸಿ, ಅದರಂತೆ ಒಮ್ಮೆ ಪ್ರಯತ್ನಮಾಡಿ ನೋಡಬೇಕೆಂದು ಗೊತ್ತುಮಾಡಿಕೊಂಡರು. ಅವರು ಒಂದು ರಾತ್ರಿ ಬಂದು ತಮ್ಮ ಕಾರ್ಯವನ್ನು ನಡಿಸಬೇಕೆನ್ನು ವಷ್ಟರಲ್ಲಿ ಯಾವನೋ ಮೇಲಿಂದ ಇಳಿದು ಬರುವ ಸುಳುವು ಅವರಿಗೆ ಕಂಡಿತು. ಅದನ್ನು ನೋಡಿ ಅವರು ತಮ್ಮ ಒಳಸಂಚು ಹ್ಯಾಗೋ ಹೊರಬಿದ್ದು, ತಮ್ಮನ್ನು ಹಿಡಿಯುವದಕ್ಕಾಗಿ ಮೇಲಿಂದ ಯಾರೋ ಇಳಿದು ಬರುತ್ತಿರಬಹುದೆಂತಲೂ, ಹಾಗಲ್ಲದಿದ್ದರೆ ಮಾದಿಗರಲ್ಲಿ ಯಾರಾದರೂ ಒಡೆದು, ನಾವು ಇಲ್ಲಿ ಬಂದದ್ದನ್ನೂ ನಮ್ಮ ಒಳಸಂಚನ್ನೂ ತಿಳಿಸುವದಕ್ಕಾಗಿ ಮೇಲಕ್ಕೆ ಏರಿಹೋಗುತ್ತಿರ ಬಹುದೆಂತಲೂ ತರ್ಕಿಸಿದರು. ಈ ಪ್ರಸಂಗದಲ್ಲಿ ಅವರು ಓಡಿ ಹೋಗುವದೊಂದೇ ಉಪಾಯವಾಗಿತ್ತು; ಆದರೆ ರಾಯಾಜಿಯು ತಮ್ಮ ವಿರೋಧಿಗೆ ತಕ್ಕಶಾಸನವನ್ನು ಮಾಡಿ ಹೋಗತಕ್ಕದ್ದೆಂದು ಅಭಿಪ್ರಾಯಪಟ್ಟನು; ಅದಕ್ಕೆ ತಾನಾಜಿಯು—ಹೀಗೆ ಮಾಡುವದು ಒಳ್ಳೆಯದಲ್ಲೆಂತಲೂ, ಒಬ್ಬ ಮನುಷ್ಯನು ಬಾಣ ತಾಕಿ ಸತ್ತದ್ದು ಇಲ್ಲವೆ ಗಾಯವಾದದ್ದು ಉದಯಭಾನುವಿಗೆ ಗೊತ್ತಾದರೆ ಅವನು ಈ ಸ್ಥಳದಲ್ಲಿ ಏನೋ ಗದ್ದಲ ಕಾಣುತ್ತದೆಂದು ವಿಶೇಷವಾದ ಬಂದೋಬಸ್ತನ್ನಿಡುವದರಿಂದ ಸುಮ್ಮನೆ ನಮ್ಮ ಕೆಲಸಕ್ಕೆ ತೊಂದರೆಯಾದೀತೆಂತಲೂ, ಹೀಗೆ ಮಾಡದೆ ನಾವು ಸುಮ್ಮನೆ ಹೊರಟುಹೋದರೆ, ಇಲ್ಲಿ ಯಾರೂ ಇಲ್ಲದ್ದು ನೋಡಿ, ನಾವು ನಾಳೆ ಪ್ರಯತ್ನ ಮಾಡುವಾಗ ಇಲ್ಲಿಗೆ ಯಾರೂ ಬರಲಿಕ್ಕಿಲ್ಲೆಂತಲೂ ಹೇಳಿದನು; ಆದರೆ ರಾಯಾಜಿಗೆ ಆತನ ಮಾತು ಸರಿಬೀಳಲಿಲ್ಲ, ಆತನು ನೀವು ಸುಮ್ಮನೆ ಗಾಬರಿಯಾಗಬೇಡಿರಿ, ಮೇಲಿಂದ ಬರುವವನು ಉದಯಭಾನುವಿನ ಕಡೆಯವನಿರುವ ಸಂಭವವಿರುವದಿಲ್ಲ, ನಮ್ಮ ಮಾದಿಗರೊಳಗಿನ ಯಾವನಾದರೊಬ್ಬ ನೀಚನು, ನಮ್ಮ ಗುಪ್ತಾಲೋಚನೆಯನ್ನು ಹೇಳಲಿಕ್ಕೆ ಮೇಲಕ್ಕೆ ಹೋಗುತ್ತಿರಬಹುದು. ಅವನನ್ನು ಹಾಗೇ ಬಿಟ್ಟರೆ, ನಿಮ್ಮ ಊರು, ನಿಮ್ಮ ಹೆಸರು ಮೊದಲಾದವು ಉದಯಭಾನುವಿಗೆ ತಿಳಿದು ಅನರ್ಥವಾದೀತು; ಕಾರಣ ಹೋಗುವವನನ್ನು ನೆಲಕ್ಕೆ ಕೆಡವುವದೇ ನೆಟ್ಟಗೆ, ಅವನು ಸತ್ತರೆ ಮೇಲಿನವರಿಗೆ ಗೊತ್ತಾಗುವ ಪ್ರಸಂಗವೇ ಇಲ್ಲ ಎಂದು ಹೇಳಿದನೇ ಒಂದು ಬಾಣವನ್ನು ಗುರಿನೋಡಿ ಬಿಟ್ಟು, ಬಿಟ್ಟನು. ಅದೇ ಬಾಣವೇ ಮೇಲೆ ಹೇಳಿದಂತೆ ಜಗತ್ಸಿಂಗನಿಗೆ ತಾಕಿ, ಆತನು ತೆಳಗಿನ ಗಿಡಗಳಲ್ಲಿ ಸಿಕ್ಕು ಜೋತಾಡಹತ್ತಿದನು. ಅವನನ್ನು ಹಾಗೇ ತೂಗಬಿಟ್ಟು, ಹೋಗಬೇಕೆಂದು ಅವರು ಯೋಚಿಸಿದರು. ಗಿಡದಲ್ಲಿ ಹೀಗೆ ಬಿಟ್ಟು ಹೋದರೆ, ಇವನು ಮೇಲಿಂದ ಬಿದ್ದು ಸತ್ತನೆಂದು ಜನರು ತರ್ಕಿಸಿ, ಯಾವಸಂಶಯವೂ ಬರಲಿಕ್ಕಿಲ್ಲೆಂದು ರಾಯಾಜಿಯು ಮೊದಲು ಸೂಚಿಸಿದನು. ಆಮೇಲೆ ಆತನು, ನಾವು ಬಾಣದ

ಗಾಯವನ್ನು ಮಾಡಿರುವದರಿಂದ ಜನರು ನೋಡಿ, ಯಾರೋ ಬಾಣಹೊಡೆದು ಇವನನ್ನು ಕೆಡವಿರುವರೆಂದು ತರ್ಕಿಸಿ, ನಮ್ಮ ವಿಷಯವಾಗಿ ಸಂಶಯಪಡ ಬಹುದಾದ್ದರಿಂದ ಇವನನ್ನು ಒಂದು ಕಂದರದಲ್ಲಿ ದೂಡಿಬಿಡಬೇಕೆಂತಲೂ ಹೇಳಿದನು; ಆದರೆ ತಾನಾಜಿಯು ಅವನ ಮಾತಿಗೆ ಒಪ್ಪಲಿಲ್ಲ. ಗಾಯದಿಂದ ವ್ಯಥೆಪಟ್ಟವನನ್ನು ಹಾಗೇ ಸಾಯಗೊಟ್ಟು ಹೋಗುವದೂ, ಅವನನ್ನು ಮತ್ತೆ ಕಂದರದಲ್ಲಿ ದೂಡಿ ವ್ಯಥೆಪಡಿಸವದೂ ಅವನ ಮನಸ್ಸಿಗೆ ಬರಲಿಲ್ಲ. ಇದಲ್ಲದೆ ಈ ಬಿದ್ದ ಮನುಷ್ಯನಿಗೆ ಜೀವದಾನ ಕೊಟ್ಟರೆ, ಅವನಿಂದ ದುರ್ಗದಮೇಲಿನ ವಿಶೇಷ ಸಂಗತಿಗಳು ತಿಳಿದು ನಮಗೆ ಸಹಾಯವಾದರೂ ಆಗಬಹುದೆಂತಲೂ ಆ ಧೂರ್ತನಾದ ತಾನಾಜಿಯು ತರ್ಕಿಸಿದನು. ಕಡೆಗೆ ಗಿಡದಲ್ಲಿ ಸಿಕ್ಕಿಕೊಂಡು ತೊಳಲಾಡುತ್ತಿರುವ ಆ ಜಗತ್ಸಿಂಗನನ್ನು ತಮ್ಮ ಗುಡಿಸಲಿಗೆ ಕರಕೊಂಡು ಹೋಗಬೇಕೆಂತಲೇ ತಾನಾಜಿಯು ಹೇಳಿದನು.

ತಾನಾಜಿಯ ಮಾತಿಗೆ ರಾಯಾಜಿಯೂ ಒಪ್ಪಿಕೊಂಡನು. ಬಳಿಕ ಅವರು ಜಗತ್ಸಿಂಗನನ್ನು ಗಿಡದೊಳಗಿಂದ ಇಳಿಸಿಕೊಂಡು ಇಬ್ಬರೂ ಕೂಡಿ ತಮ್ಮ ಮೇಟೆಗೆ ಕರಕೊಂಡು ಹೋದರು. ಜಗತ್ಸಿಂಗನ ಆಯುಸ್ಸೂತ್ರವು ಗಟ್ಟಿಯಾಗಿತ್ತು

ರಾಯಾಜಿಯೂ, ತಾನಾಜಿಯೂ ಕೂಡಿ ಜಗತ್ಸಿಂಗನನ್ನು ತಮ್ಮ ಮೇಟೆಗೆ ಒಯ್ದಾಗ ಜಗತ್ಸಿಂಗನ ಮೈಮೇಲೆ ಎಚ್ಚರವಿದ್ದಿಲ್ಲ. ಬಾಣತಾಕಿ ಅವನ ಕಾಲಿಗಾದ ಗಾಯದಿಂದ ಒಂದೇಸವನೆ ರಕ್ತವು ಸೋರುತ್ತಿತ್ತು; ಆದರೆ ಗುಡಿಸಲಿಗೆ ಹೋದಬಳಿಕ ರಾಯಾಜಿಯು ಕಾಲಿಗೆ ಔಷಧಹಚ್ಚಿ, ಯಾವದೋ ಒಂದು ತೊಪ್ಪಲವನ್ನು ಅರೆದು ಗಾಯದಲ್ಲಿ ತುಂಬಿ ಮೇಲೆ ಅರಿವೆಯನ್ನು ಕಟ್ಟಿದನು; ಬಳಿಕ ಎರಡುಮೂರು ಗಳಿಗೆಯ ಮೇಲೆ ರಕ್ತಸ್ರಾವವು ನಿಂತಿತು. ಕೋಳಿಯ ಜನರಿಗೂ, ಮಾವಳದ ಜನರಿಗೂ ಇಂಥ ಔಷಧಗಳು ಬಹಳ ಗೊತ್ತಿರುತ್ತಿದ್ದವು. ಅವರು ಇಂಥಗಾಯಗಳನ್ನು ಕೂಡಲೇ ಮಾಯಿಸುತ್ತಿದ್ದರು. ಅದರಲ್ಲಿಯಂತು ರಾಯಾಜಿಯೂ, ತಾನಾಜಿಯೂ ಅಟ್ಟುಂಡವರು. ಇಂಥವರಿಗೆ ಸೊಟ್ಟ ಒಂದು ಗಾಯವನ್ನು ಮಾಯಿಸುವದೇನು ಆಶ್ಚರ್ಯವು? ಜಗತ್ಸಿಂಗನಾದರೂ ಕಡಿಮೆಯವನಿದ್ದಿಲ್ಲ; ಒಂದು ಬಾಣದ ಗಾಯಕ್ಕೆ ಮೈಮರೆಯುವಷ್ಟು ಹೇಡಿತನವೂ ಅವನಲ್ಲಿ ಇದ್ದಿಲ್ಲ. ಅವನು ಯುದ್ಧದಲ್ಲಿ ಇಂಥ ಹಲವು ಗಾಯಗಳಾದರೂ ಲೆಕ್ಕಿಸದೆ ಸಮರಾಂಗಣದಲ್ಲಿ ಆವೇಶದಿಂದ ಕಾದುವ ವೀರಪುರುಷನಾಗಿದ್ದನು; ಆದರೆ ಮಾಡುತ್ತಾನೇನು? ತಾನು ಕೈಕೊಂಡಕಾರ್ಯವು ಹ್ಯಾಗಾದೀತೆಂದು ಚಿಂತಿಸುತ್ತ ಹಗ್ಗದ ಸಹಾಯದಿಂದ ಇಳಿದು ಬರುತ್ತಿರುವಾಗ ಅಕಸ್ಮಾತ್ತಾಗಿ ಬಾಣವು ತಾಕಿತು; ಹೀಗೆ ನಡುವೆ ಜೋತಾಡುತ್ತಿರುವಾಗ ಬಾಣತಾಕಿದ್ದಲ್ಲದೆ ಕಾಲು ಜಾಡಿಸಿದಕೂಡಲೆ ಮೇಲಿನ ಗೂಟವು ಕಿತ್ತಿತು; ಈ ಸ್ಥಿತಿಯಲ್ಲಿ ತಾನು ಇನ್ನುಮೇಲೆ ಅತ್ತ ತಾಕಿ, ಇತ್ತತಾಕಿ ಕಂದರದಲ್ಲಿ ಬಿದ್ದು ಸತ್ತುಹೋಗುವದರಿಂದ ಕೈಕೊಂಡಕಾರ್ಯವು ಪೂರ್ಣವಾಗುವದಿಲ್ಲೆಂಬ ಮಹಾದುಃಖವು ಅವನಲ್ಲಿ ಉತ್ಪನ್ನವಾಯಿತು. ಇಷ್ಟೆಲ್ಲ ಸಾಧನಗಳು ಒಟ್ಟುಗೂಡಿದ ಬಳಿಕ ಎಚ್ಚರದಪ್ಪುವದೇ ನಾಶ್ಚರ್ಯವು? ಇಂಥ ಪ್ರಸಂಗವಿಲ್ಲದೆ ಯುದ್ಧಪ್ರಸಂಗವಿದ್ದರೆ, ಇಂಥ ಹತ್ತು ಗಾಯಗಳ ಭಾರವನ್ನು ಹೆಗಲಮೇಲೆ ಹೊತ್ತುಕೊಂಡು ಆ ವೀರನು ಎದೆಗೊಟ್ಟು ಯುದ್ಧಮಾಡುತ್ತಿದ್ದನು.

ಮೇಲೆ ಹೇಳಿದಂತೆ ಅವರಿಬ್ಬರು ಮಾಡಿದ ಔಷಧೋಪಚಾರದಿಂದ ರಕ್ತಸ್ರಾವವು ನಿಂತು, ಜಗತ್ಸಿಂಗನು ಎಚ್ಚತ್ತನು. ಮೊದಲು ಅವನಿಗೆ ತಾನು ಎಲ್ಲಿ ಇದ್ದೇನೆಂಬದು ನೆಟ್ಟಗೆ ಗೊತ್ತಾಗ ಲೊಲ್ಲದು. ಆತನು ಸುತ್ತುಮುತ್ತುನೋಡಹತ್ತಿದನು. ತನ್ನ ಗುರುತಿನವರು ಯಾರೂ ಕಾಣಲಿಲ್ಲ, ಹೊರತು ತನ್ನ ಜಾತಿಯವರಾದರೂ ಅಲ್ಲಿ ಕಾಣಲಿಲ್ಲ; ಆದ್ದರಿಂದ ಅವನು ಏನೂ ತೋಚದೆ, ತಾನಾಜಿ ರಾಯಾಜಿವರ ಮುಖಮುದ್ರೆಯನ್ನು ನೋಡಹತ್ತಿದನು. ಅವನ ಮನಸ್ಸಿನ ಭಾವವು ತಾನಾಜಿಗೆ ಗೊತ್ತಾಯಿತು. ಈ ಗೃಹಸ್ಥನ ಸಂಗಡ ಮಾತಾಡುವಾಗ ದುರ್ಗದ ಮೇಲಿನ ಸಂಗತಿಗಳು ಗೊತ್ತಾದರೆ ಕೇಳಬೇಕೆಂದು ತಿಳಿದು ತಾನಾಜಿಯು ಜಗತ್ಸಿಂಗ ನನನ್ನು ಕುರಿತು ಹಿಂದುಸ್ಥಾನೀ ಭಾಷೆಯಿಂದ—ನಾವು ಇಂಥಹೊತ್ತಿಗೇ ಅಲ್ಲಿಗೆ ಬರುತ್ತೇವೆಂದು ನಿಮಗೆ ಹ್ಯಾಗೆ ಗೊತ್ತಾಯಿತು? ಯಾರಾದರೂ ಹೇಳಿದ್ದರಿಂದಲೇ ನೀವು ಹೊತ್ತು ಸಾಧಿಸಿ ನಮ್ಮನ್ನು ಹಿಡಿಯಲಿಕ್ಕೆ ಬಂದಿರಲ್ಲವೆ? ಆದರೆ ನಾವೂ ಕಿವಿಗೆ ತುತ್ತು ಒಯ್ಯುವವರ ಲ್ಲೆಂಬದನ್ನು ಚೆನ್ನಾಗಿ ನೆನಪಿನಲ್ಲಿಡಿರಿ. ಹೇಳಿಕೇಳಿ ನಾವು ದುರ್ಗವನ್ನು ಹತ್ತಿ ಸ್ವಾಧೀನಪಡಿಸಿ ಕೊಳ್ಳಲಿಕ್ಕೆ ಸುಲಭವಾಗಿರುವ ಹಾದಿಯನ್ನು ಹುಡುಕಲಿಕ್ಕೆ ಹೊರಟವರು. ಕಾರ್ಯವನ್ನು ಆರಂಭಿಸುತ್ತಿರುವಷ್ಟರಲ್ಲಿ ನೀವು ಆಕಸ್ಮಿಕವಾಗಿ ನಮ್ಮನ್ನು ಹಿಡಿಯಲಿಕ್ಕೆ ಬರುವದನ್ನು ನೋಡಿ ಸುಮ್ಮನೆ ಹ್ಯಾಗೆ ಇರೋಣ? ಆತ್ಮಸಂರಕ್ಷಣವನ್ನಂತು ಮಾಡಿಕೊಳ್ಳಲೇಬೇಕಷ್ಟೇ? ಅದಕ್ಕಾಗಿ ನಾವು ಬಾಣದಿಂದ ಹೊಡೆದು ನಿಮ್ಮನ್ನು ಕೆಡವಿದೆವು.

ತಾನಾಜಿಯು ಆಡಿದ ಮಾತುಗಳನ್ನು ಕೇಳಿ ಜಗತ್ಸಿಂಗನು ಆನಂದಸೂಚಕವಾದ ಸ್ವರದಿಂದ—ಏನು! ನೀವು ದುರ್ಗವನ್ನು ಕೈವಶಮಾಡಿಕೊಳ್ಳುವ ಉದ್ದೇಶದಿಂದ ಅಲ್ಲಿಗೆ ಬಂದಿದ್ದಿರೋ! ಎಲ ಎಲಾ! ಹಾಗಿದ್ದರೆ, ನನ್ನಿಂದ ನಿಮಗೆ ಎಷ್ಟು ಸಹಾಯವಾಗುತ್ತಿತ್ತಲ್ಲ!! ಕಳವಿನಿಂದ ದುರ್ಗವನ್ನು ಏರಲಿಕ್ಕೂ, ದುರ್ಗದಿಂದ ಇಳಿಯಲಿಕ್ಕೂ ಅದೊಂದೇ ಮಾರ್ಗ ವಿರುವದು. ನಿಮ್ಮ ಉದ್ದೇಶವು ನನಗೆ ಮೊದಲಿಗೇ ಗೊತ್ತಾಗಿದ್ದರೆ, ಎಷ್ಟು ನೆಟ್ಟಗಾಗುತ್ತಿತ್ತು! ಆದರೆ ಈ ದಿನ ನನ್ನನ್ನು ಹೀಗೆ ಹೊಡೆದು ಕೆಡವಿದ್ದರಿಂದ ಬಹು ದೊಡ್ಡ ಘಾತವಾಯಿತು. ಒಬ್ಬ ರಜಪೂತಸ್ತ್ರೀಯ ಪಾತಿವ್ರತ್ಯದ ನಾಶವಾಗತಕ್ಕದ್ದಿದ್ದು, ಆ ವಿಪತ್ತಿನೊಳಗಿಂದ ಆ ಸಾಧ್ವಿಯನ್ನು ಬಿಡಿಸಬೇಕೆಂದು ನಾನು ಯತ್ನಿಸುತ್ತಿರುವೆನು. ಆಕೆಯನ್ನು ಬಿಡಿಸಿಕೊಂಡು, ಕೆಳಗಿಳಿಸಿ ಕರಕೊಂಡು ಹೋಗಲಿಕ್ಕೆ ಏನಾದರೂ ತೊಂದರೆಗಳು ಇರುತ್ತವೋ ಹ್ಯಾಗೆಂಬುವದನ್ನು ನೋಡುವದಕ್ಕಾಗಿಯೇ ನಾನು ಈದಿನ ಹಗ್ಗದ ಸಹಾಯದಿಂದ ಕೆಳಗೆ ಇಳಿದು ಬರುತ್ತಿದ್ದೆನು. ಮೇಲಿನ ಕಾವಲುಗಾರನಾದ ಮಾದಿಗರ ಮಲ್ಹಾರಿಯು ನನ್ನ ಸುದೈವದಿಂದ ನನಗೆ ಅನಕೂಲವಾಗಿ ಸಹಾಯಮಾಡಲು ಒಡಂಬಟ್ಟನು. ಒಂದು ಹಗ್ಗವನ್ನು ದುರ್ಗದ ಮೇಲೆಯೇ ಬಹುಪ್ರಯತ್ನದಿಂದ ಸಂಪಾದಿಸಿ ಇಟ್ಟುಕೊಂಡಿದ್ದೆನು ಬಳಿಯಲ್ಲಿ ಹಗ್ಗವಿರುವದು ಸಂಶಯಕ್ಕೆ ಕಾರಣವೆಂದು ಬಗೆದು, ಅದನ್ನು ಮಲ್ಹಾರಿಯ ಕೈಯಲ್ಲಿ ಕೊಟ್ಟಿದ್ದೆನು. ಆತನು ಈದಿನ ಲಟಕೆ ಬಾರಿಸಿದ ಕೂಡಲೆ ತಪ್ಪದೆ ಹಗ್ಗವನ್ನು ಕೆಳಗಿನಿಂದ ಮೇಲಕ್ಕೆ ಒಗೆದನು. ನಾನು ಬಹಳ ಆನಂದಪಟ್ಟು ಆ ಹಗ್ಗದ ಸಹಾಯದಿಂದ ಇಳಿದು ಬರುತ್ತಿರಲು, ನಿಮ್ಮ ಬಾಣ ತಾಕಿ

ಕಡಕೊಂಡು ಬಿದ್ದೆನು. ನಾನು ಬದುಕಿದ್ದಾದರೂ ಹ್ಯಾಗೋ ದೇವರಿಗೇ ಗೊತ್ತು! ಅಷ್ಟು ಎತ್ತರದ ಮೇಲಿಂದ ಬಿದ್ದವನ ಕಪಾಳ ಮೋಕ್ಷವಾಗಿ ಅವನು ನಿಶ್ಚಯದಿಂದ ಸಾಯತಕ್ಕದ್ದು; ಆದರೆ ಈಗ ಬದುಕಿ ಉಳಿದದ್ದಕ್ಕಾಗಿಯಾದರೂ ನಾನು ಯಾಕೆ ಆನಂದಪಡಬೇಕು? ಎಂದನು.

ಜಗತ್ಸಿಂಗನ ಮಾತುಗಳನ್ನು ಕೇಳಿ ತಾನಾಜಿಯು—ಯಾಕೆ? ಆನಂದಪಡದಿರುವದೇಕೆ? ಹೀಗೇಕೆ ಮಾತಾಡುವಿರಿ? ಜೀವ ಉಳಿದದ್ದು ವ್ಯರ್ಥವೇ? ಎನ್ನಲು, ಜಗತ್ಸಿಂಗನು—ವ್ಯರ್ಥ ವೆಂದು ನಾನೇನು ಹೇಳಲಿ! ಇಂದಿನವರೆಗೆ ಮಾಡಿದ ಸಾಹಸವೆಲ್ಲವೂ ವ್ಯರ್ಥವಾಯಿತು. ಆ ದುಷ್ಟನಾದ ಉದಯಭಾನುವಿನ ಕೈಯಿಂದ ಅನಾಥೆಯಾದ ಸಾಧ್ವಿಯನ್ನು ಬಿಡಿಸಿಕೊಳ್ಳಲು ಪ್ರತಿಜ್ಞೆಮಾಡಿ, ಇಲ್ಲಿಯವರೆಗೆ ರಚಿಸಿದ ನನ್ನ ವ್ಯೂಹವೆಲ್ಲ ಇಂದು ಮಣ್ಣುಗೂಡಲಿಲ್ಲವೆ? ಇನ್ನು ಕಾಮಾಂಧನಾದ ಆ ನೀಚನು ನಾಳಿನ ನವಮಿಯ ದಿವಸ ರಾತ್ರಿ ಬಲಾತ್ಕಾರದಿಂದ ಅವಳ ನಿಕಾ(ಲಗ್ನ) ಮಾಡಿಕೊಳ್ಳುವನು; ಅವನು ಅದಕ್ಕಾಗಿಯೇ ಔರಂಗಾಬಾದದಿಂದ ಕಾಜಿಯನ್ನು ಸಹಕರಿಸಿರುವನು. ಯಾರು ಮಾಡುವದೇನು? ಸದ್ಯದ ಕಾಲವೇ ಹಿಂದೂ ಜನರಿಗೆ ಪ್ರತಿಕೂಲವಾದದ್ದಿರುತ್ತದೆ. ಅವರು ಮಾಡಬೇಕೆಂದ ಕೆಲಸಕ್ಕೆ ವಿಘ್ನವು ಬಂದೇ ತೀರುವದು. ಹಿಡಿದ ಕೆಲಸವು ಕೈಗೂಡಿತೆನ್ನುವಹಾಗಿಲ್ಲ! ಸ್ವಾಮೀ, ಏಕಲಿಂಗೇಶ್ವರಾ, ನಿನ್ನ ಮನಸ್ಸಿನಲ್ಲಿರುವದಾದರೂ ಏನು? ಇನ್ನುಮೇಲೆ ಹಿಂದುಗಳಾದ ನಾವು ಮೇಲಕ್ಕೆ ತಲೆಯೆತ್ತಬಾರದೆಂತಲೇ ನಿನ್ನ ಸಂಕೇತವಿರುವದೇ? ನಮ್ಮ ಧರ್ಮದ ಹಾಗು ನಮ್ಮ ಹೆಂಡಿರ ವಿಟಂಬನೆಯನ್ನು ಹೀಗೆ ಕಣ್ಣಿಂದ ನೋಡುತ್ತಿರುವದೇ ನಿನ್ನ ಮನಸ್ಸಿಗೆ ಬರುತ್ತದೋ? ಅಧಮಾಧಮನೂ, ಧರ್ಮಭ್ರಷ್ಟನೂ ಆದ ಉದಯಭಾನುವೇ ಜಯಶಾಲಿಯಾಗ ಬೇಕೋ? ಆಗಲಿ, ನಿನ್ನ ಮನಸ್ಸಿನಲ್ಲಿದ್ದಂತಾಗುವದೇ ನಮಗೆ ಇಷ್ಟವಾದದ್ದು ಎಂದು ನುಡಿದು ಜಗತ್ಸಿಂಗನು ಉಸುರ್ಗರೆದು ಸುಮ್ಮನಾದನು.

ಜಗತ್ಸಿಂಗನು ಈ ಮಾತುಗಳನ್ನು ಕೇಳಿ ತಾನಾಜಿಗೂ, ರಾಯಾಜಿಗೂ ಬಹಳ ಅಸಮಾಧಾನವಾಯಿತು. ಉದಯಭಾನುವನ್ನು ಬಯ್ಯುವ ಈ ಶಿಪಾಯಿಯು ಯಾರು? ಈತನು ಯಾವ ಸತಿಯ ಪಾತಿವ್ರತ್ಯವನ್ನು ರಕ್ಷಿಸಲಿಕ್ಕೆ ಯತ್ನಿಸುತ್ತಿದ್ದನು? ಎಂಬದು ತಿಳಿಯದ್ದ ರಿಂದ ಅವರು ಅದನ್ನು ಸ್ಪಷ್ಟವಾಗಿ ಹೇಳಬೇಕೆಂದು ಜಗತ್ಸಿಂಗನನ್ನು ಕೇಳಿಕೊಂಡರು. ಆಗ ಜಗತ್ಸಿಂಗನು ಅವರಿಗೆ ಕಮಲಕುಮಾರಿಯ ವೃತ್ತಾಂತವನ್ನೆಲ್ಲ ಹೇಳಿ ಮತ್ತೆ ನುಡಿದನೇ ನಂದರೆ—ಬಾದಶಹನ ಲಹರಿಯ ಮೂಲಕವಾಗಿ ಆಕೆಯು ಅಂಥ ಅನಿಷ್ಟಪ್ರಸಂಗದಿಂದ ಇಲ್ಲಿಯವರೆಗಾದರೂ ಉಳಿದಿರುವಳು; ಇಲ್ಲದಿದ್ದರೆ ಆ ದುಷ್ಟನಾದ ಉದಯಭಾನುವಿನ ಕಾಮಾಗ್ನಿಗೆ ಇಷ್ಟೊತ್ತಿಗೆ ಆಹುತಿಯಾಗುತ್ತಿದ್ದಳು. ಇಲ್ಲವೆ ಆತ್ಮಹತ್ಯವನ್ನಾದರೂ ಮಾಡಿ ಕೊಳ್ಳುತ್ತಿದ್ದಳು. ಬಾದಶಹನ ಲಹರಿಯಿಂದಲೇ ಆಕೆಗೆ ಮಾಘವದ್ಯ ನವಮಿಯವರೆಗೆ ಅವಧಿಯು ದೊರೆತಿರುವದು. ನನ್ನ ಹೆಂಡತಿಯು ಆಕೆಯ ಜೀವದ ಗೆಳತಿಯು. ಕಮಲ ಕುಮಾರಿಯು ಸಹ ಗಮನಮಾಡುವದಕ್ಕಾಗಿ ಅರಣ್ಯಕ್ಕೆ ಹೊರಡಲು ನನ್ನ ಹೆಂಡತಿಯೂ ಅವಳನ್ನು ಹಿಂಬಾಲಿಸಿದಳು. ಉದಯಭಾನುವು ನನ್ನ ಹೆಂಡತಿಯನ್ನು ಊರಿಗೆ ಕಳಿಸಿ,

ಕಮಲಕುಮಾರಿಯೊಬ್ಬಳನ್ನೇ ಸೆರೆಹಿಡಿದು ಒಯ್ಯಬೇಕೆಂದು ಬಹಳ ಪ್ರಯತ್ನಮಾಡಿದನು; ಆದರೆ ನನ್ನ ಹೆಂಡತಿಯು ಕಮಲಕುಮಾರಿಗೆ ಸಂಕಟ ಸಮಯದಲ್ಲಿ ನೆರವಾಗುವ ಉದ್ದೇಶ ದಿಂದ ತಾನಾಗಿ ಕಮಲಕುಮಾರಿಯ ಸಂಗಡ ಹೋದಳು. ನನಗೆ ಈ ಸುದ್ದಿಯು ಗೊತ್ತಾದ ಕೂಡಲೇ ಅವರ ಬೆನ್ನಹಿಂದೆ ನಾನೂ ದಿಲ್ಲಿಗೆ ಹೋದೆನು. ಬಳಿಕ ಉದಯಭಾನುವಿನ ಮನೆಯನ್ನು ಗೊತ್ತುಹಚ್ಚಿ ಏನಾದರೂ ಹಂಚಿಕೆಮಾಡಿ, ತಾನು ಬಂದಿರುವದನ್ನು ಕಮಲ ಕುಮಾರಿಗೆ ಇಲ್ಲವೆ ನನ್ನ ಹೆಂಡತಿಗೆ ತಿಳಿಸಬೇಕೆಂದು, ಉದಯಭಾನುವಿನ ಬಾಗಿಲಮುಂದೆ ಸುಮ್ಮನೆ ಹುಚ್ಚನಹಾಗೆ ತಿರುಗಾಡುತ್ತಿದ್ದೆನು. ಅಷ್ಟರಲ್ಲಿ ಒಂದು ಚಮತ್ಕಾರವಾಯಿತು, ಉದಯಭಾನುವು ಕಮಲಕುಮಾರಿಯನ್ನೂ ಆಕೆಯ ತಂದೆಯನ್ನೂ ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಬಾದಶಹನ ಬಳಿಗೆ ಹೊರಟನು. ಮತ್ತು ನನ್ನ ಹೆಂಡತಿಯು ತನ್ನ ಗೆಳತಿಗೆ ಧೈರ್ಯವನ್ನು ಹೇಳುವದಕ್ಕಾಗಿ ಮನೆಯ ಬಾಗಿಲವರೆಗೆ ಬಂದಳು. ಆಕೆಯ ಲಕ್ಷವು ಅಕಸ್ಮಾತ್ತಾಗಿ ನನ್ನ ಕಡೆಗೆ ತಿರುಗಲು, ಆಕೆಯು ಸ್ವಲ್ಪ ನಿಂತುಕೊಳ್ಳೆಂದು ನನಗೆ ಸನ್ನೆಮಾಡಿದಳು. ಸ್ವಲ್ಪ ಹೊತ್ತಿನಲ್ಲಿಯೇ ಆಕೆಯು ಪರದೆಯ ಮರೆಗೆ ನಿಂತುಕೊಂಡು ಒಳಗಿನಿಂದ ಒಂದು ಚೀಟಿಯನ್ನು ಒಗೆದಳು. ಅದರಲ್ಲಿ ನಾಳೆ ಇದೇ ವೇಳೆಗೆ ಮತ್ತೆ ಬಾ, ಎಂದು ಬರೆದಿತ್ತು.

ನನ್ನ ಹೆಂಡತಿಯ ಚೀಟಿಯಂತೆ ಮರು ದಿವಸ ನಾನು ಹೋಗಲು, ನನ್ನ ಹೆಂಡತಿಯು ಒಂದು ಬಕ್ಕರಿಯ ಹೊಟ್ಟೆಯಲ್ಲಿ ಒಂದು ಪತ್ರವನ್ನು ಇಟ್ಟು ನನಗೆ ಹಾಕಿದಳು. ಅದರಲ್ಲಿ ತಮ್ಮ ವೃತ್ತಾಂತವನ್ನೆಲ್ಲ ವಿಸ್ತಾರವಾಗಿ ಬರೆದಿದ್ದಳು. ಆಕೆಯ ಪತ್ರದಲ್ಲಿ—ಬಾದಶಹನು ಮೂರು ತಿಂಗಳವರೆಗೆ ಅವಧಿಯನ್ನು ಇಟ್ಟಿದ್ದಾನೆ. ಅಷ್ಟರಲ್ಲಿ ನಮ್ಮನ್ನು ಬಿಡಿಸುವ ಪ್ರಯತ್ನವೇನಾದರೂ ನಿಮ್ಮಿಂದ ಆದರೆ ಮಾಡಿನೋಡಿರಿ. ಇಲ್ಲದಿದ್ದರೆ ನಮ್ಮ ವಂಶದ ಕೀರ್ತಿಯನ್ನು ಕಾಯುವದಕ್ಕಾಗಿ ನಮ್ಮಿಬ್ಬರಿಗೂ ಏನಾದರೂ ಮಾಡಿಕೊಳ್ಳುವ ಪ್ರಸಂಗ ಬರಬಹುದು. ಕೋಟೆಯ ಗೋಡೆಯ ಮೇಲಿಂದ ಹಾರಿಕೊಂಡು ಪ್ರಾಣಕೊಡುವೆವು, ಇಲ್ಲವೆ ಮತ್ತೆ ಯಾವರೀತಿಯಿಂದಾದರೂ ಆತ್ಮಹತ್ಯ ಮಾಡಿಕೊಳ್ಳುವೆವು. ಯಾವ ರೀತಿಯಿಂದ ಪ್ರಾಣತ್ಯಾಗ ಮಾಡುವೆವೆಂಬದನ್ನು ಈಗ ಹೇಳಲಾರೆನು, ಎಂದು ಬರೆದಿತ್ತು. ಅದನ್ನು ಓದಿ ನನಗೆ ಬಹಳ ಸಂತಾಪವಾಯಿತು. ಆ ಸಂತಾಪದ ಭರದಲ್ಲಿ ನಾನು—"ನಾನು ಜಾತಿಯ ರಜಪೂತನ ಮಗನಾಗಿದ್ದರೆ ಈ ಅವಧಿಯಲ್ಲಿ ಆ ದುಷ್ಟನನ್ನು ಇಲ್ಲದಂತೆ ಮಾಡಿ ಇವರನ್ನು ಬಿಡಿಸುವೆನು ಎಂದು ಪ್ರತಿಜ್ಞೆಯನ್ನು ಮಾಡಿದೆನು; ಮತ್ತು ಆ ಪ್ರತಿಜ್ಞೆಯನ್ನು ಈಡೇರಿಸುವದಕ್ಕಾಗಿ, ಪರಿವಾರದೊಡನೆ ದಕ್ಷಿಣಕ್ಕೆ ಸಾಗಿದ್ದ ಉದಯಭಾನುವಿನೊಡನೆ ಹೊರಟೆನು. ನಾನು ಯಾರು, ಎಲ್ಲಿಯವನು ಎಂಬದರ ಗುರುತು ಸ್ವಲ್ಪವಾದರೂ ಹತ್ತಗೊಡದೆ, ಉದಯಭಾನುವಿನ ಅಜಸ್ರವಾದ ಸೇನಾಸಮುದ್ರವನ್ನು ಸೇರಿದೆನು. ಒಂದಾನೊಂದು ದಿವಸ ನರ್ಮದಾನದಿಯ ದಂಡೆಯಲ್ಲಿ ದಂಡು ಬೀಡುಬಿಟ್ಟಾಗ, ಕೆಲವು ಜನರು ಮಡುವಿನಲ್ಲಿ ಈಸಾಡುವದಕ್ಕಾಗಿ ಹಾರಿಕೊಂಡರು. ಅವರಲ್ಲಿ ವಿಶಾಲದೇವನೆಂಬ ಒಬ್ಬ ರಜಪೂತ ಶಿಪಾಯಿಯು ಅಕಸ್ಮಾತ್ತಾಗಿ ಕೈಸೋತು ಮುಣುಗಹತ್ತಿದನು. ಆತನ

ಆಪ್ತೇಷ್ಟರಾಗಲಿ, ಮಿತ್ರರಾಗಲಿ ಆತನನ್ನು ಕಡೆಗೆ ತೆಗೆಯಲಿಕ್ಕೆ ಧೈರ್ಯಗೊಳ್ಳಲಿಲ್ಲ. ಎಲ್ಲರೂ ದಂಡೆಯಮೇಲೆ ನಿಂತುಕೊಂಡು ಸಂಕಟಪಡುತ್ತಿರುವದನ್ನು ನೋಡುತ್ತಿದ್ದರು. ಆಗ ನಾನು ಮಡುವಿನಲ್ಲಿ ಹಾರಿಕೊಂಡು, ವಿಶಾಲ ದೇವನನ್ನು ಸುರಕ್ಷಿತವಾಗಿ ಕರಕೊಂಡು ಬಂದೆನು. ಅಂದಿನಿಂದ ವಿಶಾಲದೇವನು ನನ್ನ ಜೀವದ ಗೆಳೆಯನಾಗಿರುವನು. ಆತನೇ ನನ್ನನ್ನು ಶಿಪಾಯಿಗಳಲ್ಲಿ ಸೇರಿಸಿ, ಮುಖ್ಯ ಕಾವಲಿನಲ್ಲಿ ಸಹ ಸೇರಿಸಿಕೊಳ್ಳುವ ಅನುಕೂಲತೆಯನ್ನು ನನಗೆ ಮಾಡಿಕೊಟ್ಟನು. ಅಂದಿನಿಂದ ಒಂದಿಲ್ಲೊಂದು ಯುಕ್ತಿಯನ್ನು ಮಾಡಿ, ಅವರಿಬ್ಬರು ಹೆಂಗಸರಿಗೆ ಒಳಿತಾಗಿ ಧೈರ್ಯವನ್ನು ಹೇಳುತ್ತ ಬಂದಿದ್ದೇನೆ. ಅವರಾದರೂ ನನ್ನ ಹೇಳಿಕೆಯ ಮೇಲೆ ವಿಶ್ವಾಸವಿಟ್ಟು ಜೀವಧಾರಣ ಮಾಡಿರುತ್ತಾರೆ. ಇಲ್ಲದಿದ್ದರೆ ಇಷ್ಟೊತ್ತಿಗೆ ತಮ್ಮ ಜೀವಕ್ಕೆ ಏನಾದರೂ ಅಪಾಯ ಮಾಡಿಕೊಳ್ಳುತ್ತಿದ್ದರು. ದುರ್ಗದ ಮೇಲಿನ ಸೈನ್ಯದಲ್ಲಿ ಮುಖ್ಯ ಮಾತು ಒಕ್ಕಟ್ಟು ಇಲ್ಲ; ಮತ್ತು ಉದಯಭಾನುವು ಎಷ್ಟು ಒತ್ತಾಯಮಾಡಿದರೂ ಆ ಸೈನಿಕರೆಂಬವರಿಗೆ ಅವನ ಹಂಗು ಸ್ವಲ್ಪವಾದರೂ ತೋರುವದಿಲ್ಲ. ದುರ್ಗದ ಮೇಲಿದ್ದ ಹಳೆಯ ಜನರು, ಇವನು ಹೊಸದಾಗಿ ಬಂದಿರುತ್ತಾನೆಂತಲೂ, ಬಹಳ ಡೌಲು ತೋರಿಸುವ ನೆಂತಲೂ ಉದಯಭಾನುವಿನ ವಿಷಯವಾಗಿ ದ್ವೇಷಮಾಡುವರು; ಅವನೊಡನೆ ಹೊಸದಾಗಿ ಬಂದ ಸೈನಿಕರು, ಇವನು ಹೀನಕುಲದವನಿದ್ದು ಬಹಳ ಏರಿಬಂದು ನಮ್ಮೊಡನೆ ನಡಕೊಳ್ಳುವ ನೆಂತಲೂ, ಜಾತಿಯ ರಜಪೂತರಲ್ಲಿ ದ್ವೇಷಮಾಡುವನೆಂತಲೂ ಅವನೊಡನೆ ದ್ವೇಷಬುದ್ಧಿ ಯಿಂದ ನಡಕೊಳ್ಳುವರು. ಇದೆಲ್ಲ ಒಂದು ತೂಕವಾಯಿತು. ಸದ್ಯಕ್ಕೆ ಅವನು ರಜಪೂತಸತಿ ಯನ್ನು ಹಿಡತಂದು ಪೀಡಿಸುತ್ತಾನೆಂದು ತಿಳಿದು ಬಹು ಜನರು ಆ ಕುಲಗೇಡಿಯಲ್ಲಿ ಪ್ರೀತಿಯಿಲ್ಲ ದವರಾಗಿರುವರು. ಹೀಗಿರುವದರಿಂದ, ನಾನು ಆ ಹೆಂಗಸರನ್ನು ಬಿಡಿಸಿಕೊಂಡು ಹೋಗುವದು ಉದಯಭಾನುವಿಗೆ ಗೊತ್ತಾದರೂ, ನಮ್ಮನ್ನು ಬೆನ್ನಟ್ಟಲಿಕ್ಕೆ ಅವನ ಸೈನಿಕರು ಸಿದ್ಧವಾಗುವ ಸಂಭವವು ತೀರ ಕಡಿಮೆ. ನಾನು ಯಾರು, ಯಾವ ಉದ್ದೇಶದಿಂದ ಇತ್ತಕಡೆಗೆ ಬಂದಿರು ತ್ತೇನೆಂಬದರ ಗುರುತು ವಿಶಾಲದೇವನಿಗೊಬ್ಬನಿಗೆ ಮಾತ್ರ ಇರುತ್ತದೆ. ಆತನ ಸಹಾಯವು ನನಗೆ ಸಂಪೂರ್ಣವಾಗಿರುವದು; ಆದರೆ ಇನ್ನು ಏನು ಇದ್ದು ಮಾಡುವದೇನು? ನಾನು ಹೀಗೆ ಗಾಯವಾಗಿ ಬಿದ್ದಿರುವೆನು. ನನ್ನಿಂದ ಏನಾಗುವಹಾಗಿದೆ! ಭಗವಂತನಾದ ಏಕಲಿಂಗೇಶ್ವರನ ಇಚ್ಛೆಯಿದ್ದಂತಾಗಲಿ! ಎಂದು ನುಡಿದು ಜಗತ್ಸಿಂಗನು ಸುಮ್ಮನಾದನು!

ಈ ಮೇರೆಗೆ ಜಗತ್ಸಿಂಗನು ಹೇಳುವದನ್ನು ತಾನಾಜಿಯೂ, ರಾಯಾಜಿಯೂ ಬಹು ಲಕ್ಷಪೂರ್ವಕವಾಗಿ ಕೇಳುತ್ತಿದ್ದರು. ಸತಿಯಾದ ಕಮಲಕುಮಾರಿಯು, ಪತಿಯ ಪಾದುಕೆಗಳನ್ನು ತಕ್ಕೊಂಡು ಸಹಗಮನ ಮಾಡುತ್ತಿರುವಾಗ, ಆಕೆಯನ್ನು ಎಳಕೊಂಡು ಹೋದ ಪ್ರಸಂಗವನ್ನು ಕೇಳುವಾಗ ತಾನಾಜಿಯ ಬಾಹುಗಳು ಸ್ಫುರಣ ಹೊಂದಹತ್ತಿದವು; ಕಣ್ಣುಗಳು ಕೆಂಡದಂತಾದವು; ಮುಖಮುದ್ರೆಯು ಕ್ರೂರವಾಯಿತು; ಹಲ್ಲಿಗೆ ಹಲ್ಲು ಗಿಟಕರಿದವು; ಟೊಂಕದಲ್ಲಿದ್ದ ಖಡ್ಗದ ಕಡೆಗೆ ಕೈಯು ತಾನಾಗಿ ಹೋಯಿತು. ಈ ಪ್ರಸಂಗದಲ್ಲಿ ಆತನು ಗೊಂದಲಿಗರ ವೇಷದಿಂದ ಕಥೆ ಹೇಳಿದಾಗ ಆಡಿದ ಆವೇಶದ ಮಾತುಗಳೊಳಗಿನ—''ನಿಮ್ಮ ವೀರಶ್ರೀಯು ಎಲ್ಲ

ಹೋಯಿತು? ಆ ದುಷ್ಟನ ಚಾಕರಿಯನ್ನು ಮಾಡುತ್ತೀರಲ್ಲ! ನಿಮ್ಮ ನಾಚಿಕೆಯು ಹಾಳಾಗಿ ಹೋಯಿತೋ, ಥೂ, ನಿಮ್ಮ ಗಳಿಕೆಗೆ ಬೆಂಕೆಹಚ್ಚಲಿ!! ನಿಮ್ಮ ತಾಯಿ–ತಂಗಿಯರನ್ನಾದರೂ ರಕ್ಷಿಸಿಕೊಳ್ಳಿರಿ; ಹಾಗೆ ಮಾಡದೆ ಅವರನ್ನು ಮೊಗಲರಿಗೆ ಕೊಟ್ಟುಬಿಡುವಿರೋ? ನಿಮ್ಮ ನಾಚಿಕೆಯು ಹಾಳಾಗಿಹೋಯಿತೋ, ಥೂ, ನಿಮ್ಮ ಗಳಿಕೆಗೆ ಬೆಂಕೆಹಚ್ಚಲಿ!! ಎಲಾ, ನಿಮ್ಮ ಮನೆತನವನ್ನು ಮುಣುಗಿಸಿದವರು ಯಾರು? ಯಾರು ಮೊಗಲರನ್ನು ಮೇಲಕ್ಕೇರಿಸಿ ಕುಳ್ಳಿರಿಸಿದರು? ನಿಮ್ಮ ವಿಚಾರವೆಲ್ಲ ಹಾಳಾಗಿಹೋಯಿತೋ? ಥೂ, ನಿಮ್ಮ ಗಳಿಕೆಗೆ ಬೆಂಕೆಹಚ್ಚಲಿ!!'' ಎಂಬ ಮಾತುಗಳು ಕೆಲವು ಹೊತ್ತು ಅವನ ಮನಸ್ಸಿನಲ್ಲಿ ತಿಕ್ಕಾಡಿ, ಕಡೆಗೆ ಒಮ್ಮೆಲೆ ಅವನ ಬಾಯಿಂದ ಗಟ್ಟಿಯಾಗಿ ಹೊರಬೀಳಹತ್ತಿದವು. ರಾಯಾಜಿಯ ಸ್ಥಿತಿಯಾದರೂ ತಾನಾಜಿಯಂತೆಯೇ ಆಗಿತ್ತು. ಅವನ ಹುಬ್ಬುಗಳು ಮೇಲಕ್ಕೆ ಏರಿದವು, ದೃಷ್ಟಿಯು ಕ್ರೂರವಾಯಿತು, ಮೂಗಿನ ಹೊರಳೆಗಳು ವಿಸ್ತೃತವಾಗತೊಡಗಿದ್ದವು. ಮೇಲಿನ ಹಲ್ಲುಗಳು ಕೆಳದುಟಿಯನ್ನು ಸ್ವಾಭಾವಿಕ ವಾಗಿಯೇ ಕಚ್ಚಹತ್ತಿದವು. ಇಷ್ಟರಲ್ಲಿ ತಾನಾಜಿರಾಯನ ಮುಖದಿಂದ ಮೇಘಧ್ವನಿಯಂತೆ ಹೊರಟ ಶಬ್ದಗಳು ಕಿವಿಗೆ ಬಿದ್ದಕೂಡಲೆ, ಆ ರಾಯಾಜಿಯು ಕುಳಿತವನು ಮೇಲಕ್ಕೆದ್ದು ನಿಂತುಕೊಂಡನು. ಆಗಿನ ಅವನ ಆವೇಶವನ್ನು ನೋಡಿದರೆ, ಈಗಲೇ ಈತನು ದುರ್ಗದಮೇಲೆ ಉಡ್ಡಾಣಮಾಡಿ, ಉದಯಭಾನುವನ್ನು ಎರಡು ತುಂಡಾಗಿ ಕಡಿದು, ಆ ಸಾಧ್ವಿಯನ್ನು ಬಿಡಿಸುವ ನೆಂಬಂತೆ ತೋರುತ್ತಿತ್ತು. ತಾನಾಜಿಯ ಮಾತುಗಳು ಮುಗಿದಕೂಡಲೆ ಆತನು ಜಗತ್ಸಿಂಗನ ಕೈಯನ್ನು ಹಿಡಿದು—ಜಗತ್ಸಿಂಗ, ನಾವು ನಿಜವಾಗಿ ನಿಮ್ಮ ಘಾತಮಾಡಿದೆವು; ಆದರೂ ಚಿಂತೆಯಿಲ್ಲ. ನಮ್ಮ ದಂಡಿನ ಮೊದಲನೆಯ ತುಂಡು ನಾಡದು ಅಂದರೆ ಅಷ್ಟಮಿಯ ದಿವಸ ರಾತ್ರಿ, ಇಲ್ಲವೆ ಬೆಳಗು ಮುಂಜಾನೆ ಗೊತ್ತುಮಾಡಿದ ಸ್ಥಳಕ್ಕೆ ಬರುವದು. ಎರಡನೆಯದು ಮರುದಿವಸ ಮುಂಜಾನೆ ಬರತಕ್ಕದ್ದಿರುವದು. ಅದು ಬಂದರಂತೂ ಬಹಳ ನೆಟ್ಟಗಾಗುವದು. ಬಾರದಿದ್ದರೂ ಚಿಂತೆಯಿಲ್ಲ; ಮೊದಲನೆಯ ತುಕಡಿಯಲ್ಲಿ ಬಂದಷ್ಟು ಜನರಿಂದ, ಅಂದರೆ ಅವರು ಐವರು ಬರಲಿ, ಇಪ್ಪತ್ತೈದು ಮಂದಿ ಬರಲಿ, ಐವತ್ತು ಮಂದಿ ಬರಲಿ, ಅಷ್ಟೇ ಮಂದಿಯಿಂದ ಕೂಡಿಕೊಂಡು ನಾನು ಕೋಟೆಯನ್ನು ಮುತ್ತುವೆನು; ಮತ್ತು ನವಮಿಯ ಮಧ್ಯರಾತ್ರಿಯ ಸಮಯವು ಮೀರುವದರೊಳಗಾಗಿ, ಅಂದರೆ ಉದಯಭಾನುವು ಆ ಸತಿಯನ್ನು ಲಗ್ನಮಾಡಿ ಕೊಳ್ಳುವದರೊಳಗೆ, ಮಹಾರಾಜರು ಕೊಟ್ಟಿರುವ ಈ ನನ್ನ ಖಡ್ಗದೊಡನೆ ಆ ಉದಯಭಾನುವಿನ ಲಗ್ನವನ್ನು ಮಾಡಿಸುವೆನು. ಇನ್ನು ಹೆಚ್ಚಿಗೆ ಮಾತಾಡುವದಿಲ್ಲ. ಆ ಪತಿವ್ರತೆಯ ಪುಣ್ಯದಿಂದ ನನ್ನ ಐವತ್ತು ಜನರಿಂದಲೇ ನನಗೆ ಜಯವು ಪ್ರಾಪ್ತವಾಗುವದು!

ಈ ಮೇರೆಗೆ ನುಡಿದು ತಾನಾಜಿಯು ಸುಮ್ಮನಾದನು. ಆಗ್ಗೆ ಅವನ ಮನಸ್ಸಿನಲ್ಲಿ ವಿಲಕ್ಷಣ ವಿಚಾರಗಳ ಗೊಂದಲವು ನಡೆದಿರಬಹುದು. ಎಷ್ಟು ಹೊತ್ತಾದರೂ ಆತನ ಬಾಯಿಂದ ಒಂದು ಅಕ್ಷರವಾದರೂ ಹೊರಡಲಿಲ್ಲ. ಆಗಿನ ಅವನ ಮುದ್ರೆಯನ್ನು ನೋಡಿದರೆ ಈಗ ಇವನೊಡನೆ ಮಾತಾಡುವದು ಯೋಗ್ಯವಲ್ಲೆಂತಲೇ ಎರಡನೇಯವರಿಗೆ ತೋರುತ್ತಿತ್ತು.

# ದಿಲ್ಲಿಯ ಪತ್ರವು

ಮಾಘವದ್ಯ ನವಮಿಯ ತಿಥಿಯು ಸಮೀಪಕ್ಕೆ ಬಂದಂತೆ ಉದಯಭಾನುವಿನ ಮನಸ್ಸು ಹೆಚ್ಚು ಹೆಚ್ಚುವ್ಯಗ್ರವಾಗಹತ್ತಿತು. ಅದರಲ್ಲಿ ಅವನಿಗೆ ಸದ್ಯಕ್ಕೆ ವಿಶೇಷತರದ ಉದ್ಯೋಗವು ಯಾವದೂ ಇದ್ದಿಲ್ಲ ಕಮಲಕುಮಾರಿಯ ಧ್ಯಾನವೇ ಧ್ಯಾನವು. ಜಸವಂತಸಿಂಗನ ಸಂಬಂಧ ದಿಂದಲೂ, ಮುಆಝುಮಶಹಾಜಾದಾನ ಸಂಬಂಧದಿಂದಲೂ ಬರೆಯತಕ್ಕದ್ದನ್ನು ಬರೆದು ಅವನು ಬಾದಶಹನ ಕಡೆಗೆ ದಿಲ್ಲಿಗೆ ಕಳಿಸಿಕೊಟ್ಟಿದ್ದನು. ತನ್ನ ತಿಳುವಳಿಕೆಯಂತೆ ದುರ್ಗದ ಮೇಲೆ ಮಾಡಬಹುದಾಗಿದ್ದ ವ್ಯವಸ್ಥೆಯನ್ನೆಲ್ಲ ಮಾಡಿದ್ದನು. ಇನ್ನು ಬಾದಶಹನ ಕಡಿಂದ ಪತ್ರವಷ್ಟು ಬಂದು, ಜಸವಂತಸಿಂಗನ ಸ್ಥಳದಲ್ಲಿ ತನ್ನನ್ನು ನಿಯಮಿಸುವದಷ್ಟು ಉಳಿದಿತ್ತು ಅಷ್ಟಾದರೆ ತಾನು ದಕ್ಷಿಣದ ಸುಬೇದಾರನಾಗುವೆನೆಂದು ಆತನು ನಂಬಿದ್ದನು. ಸುಬೇದಾರಿಕೆಯು ದೊರೆತ ಬಳಿಕ ತನಗೆ ಯಾವ ಮಾತಿನ ಕೊರತೆಯು ಉಳಿಯದ್ದರಿಂದ ವರ್ಷಾರು ತಿಂಗಳಲ್ಲಿ ಶಿವಾಜಿಯನ್ನು ಸೆರೆಹಿಡಿದು ಬಾದಶಹನ ಕಡೆಗೆ ಕಳಿಸಿ, ದಕ್ಷಿಣದಲ್ಲೆಲ್ಲ ಶಾಂತತೆಯನ್ನುಂಟು ಮಾಡಿ, ಬಾದಶಹನ ಪೂರ್ಣ ಒಲುಮೆಯನ್ನು ಸಂಪಾದಿಸಬಹುದೆಂದು ಆತನು ಭಾವಿಸಿದ್ದನು. ಇಷ್ಟೆಲ್ಲ ಕೆಲಸ ಮಾಡಿದ್ದರಿಂದ ಸುಪ್ರಸನ್ನನಾದ ಬಾದಶಹನು, ಉದೇಪುರದಮೇಲೆ ದಂಡೆತ್ತಿ ಹೋಗಲಿಕ್ಕೆ ತನಗೆ ಸಹಜವಾಗಿ ಅಪ್ಪಣೆಕೊಡುವನೆಂತಲೂ, ಆ ದಂಡಯಾತ್ರೆಯಲ್ಲಿ ಉದೇಪುರದ ರಜಪೂತರನ್ನು ಹಣ್ಣುಮಾಡಿ, ಬಾಲ್ಯದಿಂದ ತನಗೆ ಅವರು ಮಾಡಿದ ವಿಟಂಬನೆಯ ಸೇಡು ತೀರಿಸಿಕೊಳ್ಳುವೆನೆಂತಲೂ ಆತನು ಕಲ್ಪಿಸಿದನು. ಹೀಗೆ ಮನಸ್ಸಿನೊಳಗಿನ ಮಂಡಿಗೆಯ ಪ್ರಸ್ತದಲ್ಲಿ ಸಂತುಷ್ಟನಾದ ಆ ಉದಯಭಾನುವಿಗೆ ಮಾಘವದ್ಯ ನವಮಿಯು ಸಮೀಪಕ್ಕೆ ಬಂದಬಳಿಕ ಕೇಳುವದೇನು? ಆ ದಿನ ಮಧ್ಯರಾತ್ರಿಯ ಹೊತ್ತಿಗೆ ತಾನು ಕಮಲಕುಮಾರಿಯನ್ನು ಲಗ್ನವಾಗಿ, ಆಕೆಯ ಅಪ್ಪನಿಗೊಂದು, ರಾಜಸಿಂಹ ಮಹಾರಾಜನಿಗೊಂದು, ಚಿಕ್ಕಂದಿನಲ್ಲಿ ತನಗೆ ಚೇಷ್ಟೆ ಮಾಡಿದ ಬೇರೆ ರಜಪೂತರಿಗೊಂದು ಪತ್ರಬರೆದು, ತನ್ನ ಅಧಿಕಾರವು ಎಷ್ಟು ಹೆಚ್ಚಿರುವ ದೆಂಬದನ್ನು ತೋರಿಸಬೇಕೆಂದು ಎಣಿಕೆ ಹಾಕುತ್ತಿದ್ದನು. ನವಮಿಯ ದಿವಸವು ಸಮೀಪಿಸುತ್ತ ಹೋದಂತೆ ಆತನು ಕಮಲಕುಮಾರಿಯ ಕಡೆಗೆ ಎಡತಾಕುವದು ಹೆಚ್ಚಾಗುತ್ತ ಹೋಯಿತು. ಪ್ರತಿಯೊಂದು ಸಾರೆ ಹೋದಾಗ ಆತನು ಇನ್ನು ಇಷ್ಟುದಿವಸ ಉಳಿದವು–ಇನ್ನು ಇಷ್ಟು ದಿವಸ ಉಳಿದವು, ಎಂದುಹೇಳಿ, ಹಂಗಿಸುತ್ತಿದ್ದನು. ದೇವಲದೇವಿಯು ಕಮಲಕುಮಾರಿಗೆ ಮೇಲೆಮೇಲೆ ಉತ್ತೇಜನಕೊಡದಿದ್ದರೆ, ಮತ್ತು "ಹಗ್ಗದ ಸಹಾಯದಿಂದ ಕೋಟೆಯನ್ನು ಇಳಿದು ಹೋಗುವ ಪ್ರಸಂಗಬಂದರೆ, ಮೈಯಲ್ಲಿ ಕಸುವು ಬೇಕಾಗುತ್ತದೆ, ನೀನು ಹೀಗೆ ಕಸುವುಗೆಟ್ಟರೆ ಕೆಲಸವು ಹ್ಯಾಗಾಗಬೇಕು?" ಎಂದು ಗಳಿಗೆ ಗಳಿಗೆಗೆ ಹೇಳದಿದ್ದರೆ ಮತ್ತು "ಈ ದಿನ ನನ್ನ ಗಂಡನು (ಜಗತ್ಸಿಂಗನು) ಹೀಗೆ ಹೀಗೆ ಹೇಳಿದನು, ಈದಿನ ಇಂಥ ಮಾದಿಗನು ಅವರಿಗೆ ಸಹಾಯಮಾಡಲು ಒಪ್ಪಿದ್ದಾನಂತೆ, ಈದಿನ ಇಂಥ ಕೋಳಿಯ ಜಾತಿಯ ಮನುಷ್ಯನು ನೆರವಾಗಲು ಸಮ್ಮತಿಸಿದ್ದಾನಂತೆ" ಮುಂತಾದ ಸುದ್ದಿಗಳನ್ನು ಹೇಳಿ ಆಕೆಯ ಧೈರ್ಯವನ್ನು

ಹೆಚ್ಚಿಸಿದಿದ್ದರೆ ಪತಿಭಕ್ತಿ ಪರಾಯಣಳಾದ ಕಮಲಕುಮಾರಿಯು ಇಷ್ಟೊತ್ತಿಗೆ ಈ ಲೋಕದಿಂದ ಹೊರಟುಹೋಗುತ್ತಿದ್ದಳು. ದೇವಲದೇವಿಯ ಪ್ರಯತ್ನಕ್ಕೆ ಚೆನ್ನಾಗಿ ಯಶಸ್ಸು ಬಂದಿತ್ತು. ಮಾಘವದ್ಯ ಪಂಚಮಿಯ ದಿವಸ ಜಗತ್ಸಿಂಗನು ತನ್ನ ಹಂಡತಿಗೆ—''ಈದಿನ ಮಧ್ಯರಾತ್ರಿಯಲ್ಲಿ ಸ್ವತಃ ನಾನೇ ಒಂದುಸಾರೆ ಹಗ್ಗದ ಸಹಾಯದಿಂದ ಕೋಟೆಯ ಕೆಳಗೆ ಇಳಿದು ನೋಡುತ್ತೇನೆ. ಎಲ್ಲ ಸರಿಯಾಗಿ ಕೂಡಿಬಂತೆಂದರೆ, ದಿನದಂತೆ ಮಹಾಲಿನ ಬಾಗಿಲೊಳಗೆ ಬೀಳುವಂತೆ ರಾತ್ರಿ ಚೀಟಿಯ ಉಂಡಿಯನ್ನು ಒಗೆದು ಮುಂದಿನ ಎಲ್ಲ ವ್ಯವಸ್ಥೆಯನ್ನು ತಿಳಿಸುತ್ತೇನೆ. ಮಹಾಲಿನ ಕಾವಲುಗಾರರು ಈಗ ನನಗೆ ಬೇಕಾದಾಗ ಬರಗೊಡುವರು; ಆದ್ದರಿಂದ ಇನ್ನು ಮೇಲೆ ನನ್ನ ಚೀಟಿಯು ನಿಮಗೆ, ನಿಮ್ಮ ಚೀಟಿಯು ನನಗೆ, ಮುಟ್ಟಲಿಕ್ಕೆ ಎಷ್ಟು ಮಾತ್ರವೂ ತೊಂದರೆಯಾಗಲಿಕ್ಕಿಲ್ಲ; ಆದರೆ ರಾತ್ರಿ ನಿಯಮಿತ ವೇಳೆಯಲ್ಲಿ ಮಾತ್ರ ಚೀಟಿಯನ್ನು ಚಲ್ಲಬೇಕು; ಹಾಗೆಮಾಡದೆ ಸಿಕ್ಕಾಗ ಚೀಟಿಯನ್ನು ಚಲ್ಲಕೊಟ್ಟರೆ, ಅನರ್ಥವಾಗಿ ಇಲ್ಲಿಯವರೆಗೆ ಮಾಡಿದ್ದೆಲ್ಲ ಮಣ್ಣುಗೂಡಬಹುದು'' ಎಂಬ ಸಂಗತಿಯನ್ನು ಪತ್ರಮುಖದಿಂದ ತಿಳಿಸಿದ್ದನು; ಆದ್ದರಿಂದ ಆಕೆಗೂ, ಕಮಲಕುಮಾರಿಗೂ ಬಹಳ ಹರ್ಷವಾಗಿತ್ತು. ಜಗತ್ಸಿಂಗನೆಂದರೆ ಸಾಮಾನ್ಯ ಪುರುಷನಿದ್ದಿಲ್ಲ. ಆತನು ಒಂದು ಕೆಲಸವನನ್ನು ಮಾಡುತ್ತೇನೆಂದು ಹೇಳಿದನೆಂದರೆ ಎಂದಿಗೂ ಮಾಡದೆ ಬಿಡುತ್ತಿದ್ದಿಲ್ಲ. ಹೇಳಿದ್ದಕ್ಕೆ ಎಂದೂ ತಪ್ಪುವವನಲ್ಲೆಂಬುದು ಇಬ್ಬರಿಗೂ ಗೊತ್ತಿತ್ತು. ಆದ್ದರಿಂದ ಇನ್ನು ನಾವು ಬಿಡುಗಡೆ ಹೊಂದಿದೆವೆಂದು ಅವರು ನಿಶ್ಚಯಿಸಿದರು. ಕಮಲ ಕುಮಾರಿಗಂತೂ ಬಹಳ ಹರ್ಷವಾಯಿತು. ಉದಯಭಾನುವು ಪಂಚಮಿಯ ದಿವಸ ಒಂಬತ್ತು ತಾಸಿನ ಕಡೆಗೆ ಹೋದಾಗ ಕಮಲಕುಮಾರಿಯ ಪ್ರಫುಲ್ಲಿತವಾದ ಮುದ್ರೆಯನ್ನು ನೋಡಿ ಆಶ್ಚರ್ಯಪಟ್ಟನು. ಎಷ್ಟೋ ದಿವಸಗಳಲ್ಲಿ ಕಮಲಕುಮಾರಿಯ ಇಂದಿನಂಥ ಪ್ರಫುಲ್ಲಿತ ಮುದ್ರೆಯು ಆತನ ಕಣ್ಣಿಗೆ ಬಿದ್ದಿದ್ದಿಲ್ಲ. ಎಂದೂ ಕಾಣದ ಪ್ರಫುಲ್ಲಿತ ಮುದ್ರೆಯು ಇಂದು ಕಾಣಲಿಕ್ಕೆ ಆ ಕಾಮಾಂಧನು ತನಗೆ ಅನುಕೂಲವಾದ ಕಾರಣವನ್ನು ಮನಸ್ಸಿನಲ್ಲಿ ಯೋಚಿಸಿದನು. ನವಮಿಯು ಇನ್ನು ಎರಡು ಮೂರು ದಿವಸಮಾತ್ರ ಉಳಿದಿರುವದರಿಂದ ಅಷ್ಟರಲ್ಲಿ ತಮ್ಮನ್ನು ಬಿಡಿಸುವದು ಶಕ್ಯವಿಲ್ಲೆಂತಲೂ, ಸುಮ್ಮನೆ ಅತ್ತು ಕರೆದು, ಸೊರಗಿ, ಕೊರಗಿ, ಕಷ್ಟಪಡುವದರವಲ್ಲಿ ಪ್ರಯೋಜನವಿಲ್ಲೆಂತಲೂ ತಿಳಿದು ಆಕೆಯು ತನ್ನ ಖೇದ, ಚಿಂತೆ, ದುಃಖವೇಗ ಇವನ್ನೆಲ್ಲ ಬಿಟ್ಟುಬಿಟ್ಟಿರಬಹುದೆಂದು ಆತನು ತರ್ಕಿಸಿದನು. ಈ ಮೇರೆಗೆ ಉದಯಭಾನುವು ತನ್ನ ಮನೋರಾಜ್ಯವನ್ನು ಹೆಚ್ಚು ಮನೋಹರವಾಗಿ ಮಾಡುವ ಪ್ರಯತ್ನವನ್ನು ನಡೆಸಿದನು; ಆದರೆ ನೀನು ಆನಂದದಿಂದಿರುವದನ್ನು ನೋಡಿ, ನನಗೆ ಬಹಳ ಆನಂದವಾಗಿ ರುತ್ತದೆಂಬರ್ಥದ ಬಣ್ಣದ ಮಾತುಗಳನ್ನು ಮಾತ್ರ ಆತನು ಕಮಲಕುಮಾರಿಯ ಮುಂದೆ ಆಡಿ ತೋರಿಸಲಿಲ್ಲ; ಯಾಕಂದರೆ ಅಷ್ಟೇ ಮಾತಿಗೆ ಆಕೆಯು ಸೊಟ್ಟ, ಮೋರೆ ಮಾಡಿಯಾಳೆಂಬ ಅಂಜಿಕೆಯು ಅವನಿಗಿತ್ತು. ಹ್ಯಾಗೇ ಇರಲಿ, ಉದಯಭಾನುವು ಏನೂ ಮಾತಾಡದೆ ಆ ದಿನದ ಮಟ್ಟಿಗಾದರೂ ಅಲ್ಲಿಯ ಕೆಲಸವನ್ನು ಮುಗಿಸಿ ಹೊರಟುಹೋದನು.

ಇತ್ತ ಪಂಚಮಿಯ ಮರುದಿವಸ ರಾತ್ರಿ ನಿಯಮಿತ ಹೊತ್ತಿನಲ್ಲಿ ಚೀಟಿಯ ಶೋಧಕ್ಕಾಗಿ ದೇವಲದೇವಿಯು ಬಾಗಿಲಿಗೆ ಹೋಗಿ ನಿಂತಳು. ಇಂದಿನ ಚೀಟಿಯಿಂದ, ತಾವು? ಏನೇನು ಮಾಡಬೇಕು, ಹ್ಯಾಗೆ ಹ್ಯಾಗೆ ನಡೆಯಬೇಕು ಎಂಬ ಸಂಗತಿಯು ತಿಳಿಯಬಹುದೆಂದು ಆಕೆಯು ಆಶಿಸಿದ್ದಳು; ಆದರೆ ಆದಿನ ಚೀಟಿ ಚಪಾಟಿಯೇನೂ ಆಕೆಗೆ ದೊರೆಯಲಿಲ್ಲ; ಆದ್ದರಿಂದ ಆಕೆಯ ಎದೆಯು ಧಸ್ ಎಂದಿತು. ಕೆಲಸವೇನೂ ಆಗದಿದ್ದರೂ, ''ಇಂದು ಆಗಲಿಲ್ಲ, ನಾಳೆ ಆದೀತು'' ಎಂಬ ಅರ್ಥದ ಚೀಟಿಯನ್ನಾದರೂ ಬರೆದು ಒಗೆಯಬೇಕಾಗಿತ್ತು, ಮೂಲತಃ ಚೀಟಿಯೇ ಬಾರದಿರುವದು ಒಳ್ಳೆಯ ಲಕ್ಷಣವಲ್ಲೆಂದು ಆಕೆಯು ಚಿಂತೆಗೆ ಒಳಗಾದಳು. ದೇವಲದೇವಿಯು ಚೀಟಿಯು ಬೀಳಬಹುದಾದ ಸ್ಥಳವನ್ನು ಸೂಕ್ಷ್ಮದೃಷ್ಟಿಯಿಂದ ನೋಡಿದಳು; ಆದರೆ ಏನೂ ಆಕೆಗೆ ದೊರೆಯಲಿಲ್ಲ, ಆಗ ಆಕೆಯ ಮನಸ್ಸಿನಲ್ಲಿ—''ಏನೂ ಘಾತವಾಗಿರಲಿಕ್ಕಿಲ್ಲವಷ್ಟೇ? ಹಗ್ಗದಿಂದ ಇಳಿದು ಹೋಗುವಾಗ ಕೈಜಾರಿರಲಿಕ್ಕಿಲ್ಲವಷ್ಟೇ? ಮಾಡಿದ ಒಳಸಂಚು ಹೊರಬಿದ್ದು, ಆ ದುಷ್ಟನಾದ ಉದಯಭಾನುವಿಗೆ ಎಲ್ಲ ಸಂಗತಿಯು ತಿಳಿದು, ಆತನು ಸೆರೆಮನೆಯ ಸೋಬತಿ ಮಾಡಿರಲಿಕ್ಕಿಲ್ಲವಷ್ಟೇ ಎಂಬ ಒಂದಲ್ಲ ಎರಡಲ್ಲ ಹದಿನೆಂಟು ಆಲೋಚನೆಗಳು ಉತ್ಪನ್ನವಾದವು. ಆ ಆಲೋಚನೆಗಳ ಗಲಿಬಿಲಿಯಲ್ಲಿ ಆಕೆಗೆ ಏನೂ ತೋಚದಂತಾಯಿತು. ಒದಗಿದ ಸಂಗತಿಯನ್ನು ಒದಗಿದಂತೆ ಕಮಲಕುಮಾರಿಯ ಮುಂದೆ ಹೇಳುವದು ಸ್ವಾಭಾವಿಕವಾಗಿಯೇ ಅನವಶ್ಯಕವೂ, ಅನಿಷ್ಟವೂ ಆಗಿತ್ತು; ಆದ್ದರಿಂದ ಆಕೆಯ ಮುಂದೆ ಏನೂ ಹೇಳಬಾರದೆಂದು ದೇವಲದೇವಿಯು ನಿಶ್ಚಯಿಸಿದಳು. ಎಷ್ಟೋಸಾರೆ ನಾವು ನಮ್ಮ ವಿಚಾರಗಳನ್ನು ಶಬ್ದಗಳಿಂದ ತಿಳಿಸದಿದ್ದರೂ, ನಮ್ಮ ಮುಖಮುದ್ರೆಯು ಆಗಲೇ ಅವನ್ನು ತಿಳಿಸಿಬಿಟ್ಟಿರುತ್ತದೆ. ದೇವಲದೇವಿಯಂತೆ ಕಮಲಕುಮಾರಿ ಯಾದರೂ ಜಗತ್ಸಿಂಗನ ಪತ್ರದ ಹಾದಿಯನ್ನು ಉತ್ಸುಕತೆಯಿಂದ ನೋಡುತ್ತಿದ್ದಳು; ಆದ್ದರಿಂದ ದೇವಲದೇವಿಯ ಮುಖಮುದ್ರೆಯನ್ನು ನೋಡಿದಕೂಡಲೆ, ಇಂದು ಏನೋ ದುರ್ಲಕ್ಷಣ ವಿರುತ್ತದೆಂದು ಆಕೆಯು ತಿಳಕೊಂಡು, ದೇವಲದೇವಿಯನ್ನು ಕುರಿತು—''ದೇವಲೇ, ಏನಾಯಿ ತವ್ವಾ, ಸುದ್ದಿಯು ಏನು ತಿಳಿಯಿತು'' ಎಂದು ಪ್ರಶ್ನೆ ಮಾಡಿದಳು. ಅದಕ್ಕೆ ದೇವಲದೇವಿಯು—ಈವೊತ್ತು ಇನ್ನೂ ಏನೂ ತಿಳಿದಿಲ್ಲವೆಂದು ಹೇಳಿ, ಹ್ಯಾಗಾದರೂ ಮಾಡಿ ಪಾರಾದಳು; ಆದರೆ ತಿಳಿಯತಕ್ಕ ಹೊತ್ತಿನಲ್ಲಿ ಕೆಟ್ಟಸುದ್ದಿಯು ತಿಳಿದರೆ ಆಗುವ ಅಸಮಾಧಾನಕ್ಕಿಂತ ಹೆಚ್ಚು ಅಸಮಾಧಾನವು, ಏನೂ ಸುದ್ದಿಯು ತಿಳಿಯದ್ದರಿಂದ ಆಗುತ್ತದೆ. ಯಾಕಂದರೆ ಕೆಟ್ಟ ವರ್ತಮಾನ ವನ್ನು ಕೇಳಿ, ಮನುಷ್ಯನು ನಿರಾಶೆಪಟ್ಟು ಸುಮ್ಮನಾದರೂ ಕುಳಿತುಕೊಳ್ಳಬಹುದು; ಆದರೆ ತಿಳಿಯತಕ್ಕ ಅವಶ್ಯದ ಸಂಗತಿಗಳು ತಿಳಿಯದೆ ಹೋಗಲು, ಚಿಂತೆಯೂ, ಖೇದವೂ ಮಾತ್ರ ಉತ್ಪನ್ನವಾಗಿ ಅವು ವ್ಯಥೆಪಡಿಸುವವು. ಇದೇ ಸ್ಥಿತಿಯು ನಮ್ಮ ನಾಯಕೆಗೂ, ಉಪನಾಯಕೆಗೂ ಸದ್ಯಕ್ಕೆ ಒದಗಿತ್ತು.

ಆ ದಿನ ಪ್ರತಿಕ್ಷಣದಲ್ಲಿ ಅವರಿಬ್ಬರ ಮನಸ್ಸಿನ ಸ್ಥಿತಿಯು ಹ್ಯಾಗೆ ಹ್ಯಾಗೆ ಆಗುತ್ತ ಹೋಯಿ ತೆಂಬದನ್ನು ವರ್ಣಿಸುವದು ಸುಲಭವಲ್ಲ. ದೇವಲದೇವಿಗಂತು ತನ್ನ ಸೌಭಾಗ್ಯದ

ಘಾತವಾಯಿ ತೆಂಬಂತೆ ತೋರಹತ್ತಿತು. ಆಕೆಯ ಮನಸ್ಸಿನಲ್ಲಿ—ನನ್ನ ಗಂಡನು ಹಗ್ಗವನ್ನು ಹಿಡಕೊಂಡು ಕೆಳಗೆ ಇಳಿಯುತ್ತಿರುವಾಗ ಕೈತಪ್ಪಿಯಾಗಲಿ, ಹಗ್ಗವು ಉಚ್ಚಿಯಾಗಲಿ ಕೆಳಗೆ ಬಿದ್ದಿರಬಹುದು. ಸಿಂಹಗಡದ ಕಂದರಗಳು ಬಹು ಭಯಂಕರವಾದವುಗಳು. ಅವುಗಳಲ್ಲಿ ಬಿದ್ದವನ ಎಲುವುಗಳು ಚೂರು ಚೂರಾಗಿ ಏನೂ ಕೈಗೆ ಹತ್ತುವದಿಲ್ಲ. ನನ್ನ ಗಂಡನ ಅವಸ್ಥೆಯು ಹೀಗೆಯೇ ಆಗಿರಬಹುದೇ? ಎಂಬ ಭಯಂಕರ ವಿಚಾರಗಳು ಉತ್ಪನ್ನವಾದ ಕೂಡಲೆ ಆಕೆಯ ಮೈಮೇಲಿನ ಕೂದಲುಗಳು ನೆಟ್ಟಗಾದವು. ಯಾವ ಆಶೆಯಿಂದ ಆಕೆಯು ಇಲ್ಲಿಯವರೆಗೆ ಧೈರ್ಯವನ್ನು ಹೇಳುತ್ತ ಬಂದಳೋ, ಆ ಆಶೆಯೇ ಇಂದಿಗೆ ಕಡಿದುಹೋಯಿತು. ಇನ್ನು ಮುಂದೆ ಆಕೆಯು ಕಮಲಕುಮಾರಿಗೆ ಧೈರ್ಯವನ್ನು ಹೇಳುವದರ ಬದಲು, ಕಮಲಕುಮಾರಿಯೇ ತಿರುಗಿ ದೇವಲದೇವಿಗೆ ಧೈರ್ಯಹೇಳುವ ಹೊತ್ತು ಬಂದಿತು. ಹೆಂಗಸರಿಗೆ ಸೌಭಾಗ್ಯವು ಜೀವಕ್ಕಿಂತಲೂ ಹೆಚ್ಚಿನದು. ಅದಕ್ಕೆ ಈಗ ಎರವಾಗುತ್ತೇನೆಂಬ ಕಲ್ಪನೆಯು ಎಷ್ಟು ದುಃಖಕಾರಕವು! ಎಷ್ಟು ಭಯಂಕರವು! ಯಾವದರ ಸಲುವಾಗಿ ಹೆಂಗಸರು ಜಗತ್ತಿನೊಳಗಿನ ಬೇಕಾದಂಥ ಕಷ್ಟವನ್ನೂ, ಅಪಮಾನವನ್ನೂ ಅನುಭೋಗಿಸಲಿಕ್ಕೆ ಸಿದ್ಧರಿರುವರೋ, ಆ ಸೌಭಾಗ್ಯವೇ ಹೋದಬಳಿಕ ಉಳಿಯಿತೇನು? ಮುತ್ತೈದೆತನವು ಹೋಯಿತೆಂಬ ಕಳಂಕಕ್ಕೆ ಒಳಗಾಗಲಾರದೆ ಹೆಂಗಸರು ಪ್ರಾಣವನ್ನಾದರೂ ಅರ್ಪಿಸುವರು. ಅಂದಬಳಿಕ ಸೌಭಾಗ್ಯವು ಈಗಲೆ ನಷ್ಟವಾಗುವದೆಂಬ ಕಲ್ಪನೆಯಿಂದ ಅವರ ಎದೆಯೊಡೆದು ನೀರಾಗುವದೇನಾಶ್ಚರ್ಯವು? ದೇವಲದೇವಿಯ ಅವಸ್ಥೆಯು ಇದರಂತೆಯೆ ಆಯಿತು. ಆಕೆಯ ಎದೆಯೊಡೆದು ನೀರಾಯಿತು!; ಆದರೆ ಆಕೆಯು ಬಹು ಎದೆಗಾರ್ತಿಯು. ಅವಳು ಮನಸ್ಸಿನಲ್ಲಿ—ನಾನು ಈಗಲೆ ಹೀಗೆ ನಿರಾಶೆಪಟ್ಟು ಕುಳಿತು ಕೊಂಡುಬಿಟ್ಟರೆ, ಕಮಲಕುಮಾರಿಯು ಕೂಡಲೆ ಪ್ರಾಣಬಿಟ್ಟಾಳು! ಆದ್ದರಿಂದ ನನ್ನ ದುಃಖವನ್ನು ನುಂಗಿಕೊಳ್ಳಬೇಕು, ಎಂದು ಒಂದು ಕ್ಷಣ ಯೋಚಿಸಿದಳು; ಆದರೆ ಎರಡನೆಯ ಕ್ಷಣದಲ್ಲಿ ಆಕೆಯ ಈ ವಿಚಾರವು ತಿರುಗಿ—"ಈಗ ನಾನೂ ಆಕೆಯೂ ಇಬ್ಬರೂ ಪ್ರಾಣತ್ಯಾಗಮಾಡಿಕೊಳ್ಳಲಿಕ್ಕೆ ತೊಂದರೆಯೇನು? ನನ್ನ ಪತಿಗೆ ಏನಾದರೂ ಅನಿಷ್ಟವು ಒದಗಿದ್ದರೆ ನಮ್ಮ ಬಿಡುಗಡೆಯ ಆಶೆಯಂತೂ ಇಲ್ಲವಷ್ಟೇ? ನಮಗೆ ಇನ್ನು ಎರಡನೆಯ ಆಶೆಯು ಯಾವದು? ಇನ್ನು ಮೇಲೆ ನಮ್ಮಿಬ್ಬರ ಬಿಡುಗಡೆಯೆಂದರೆ, ಪ್ರಾಣತ್ಯಾಗ ಮಾಡಿಕೊಳ್ಳುವದರಿಂದ ಪ್ರಾಪ್ತವಾಗತಕ್ಕ ನಿಶ್ಚಿಂತೆಯೇ ಬಿಡುಗಡೆಯು; ಎರಡನೆಯ ಬಿಡುಗಡೆಯು ಇಲ್ಲವು. ಈ ದೇಹದಿಂದ ಒಮ್ಮೆ ಪ್ರಾಣವು ಹೊರಟುಹೋಯಿತೆಂದರೆ, ದೇಹಕ್ಕಷ್ಟೇ ವಿಟಂಬನವು ಆಗಬಹುದು, ಎಂಬ ಬೇರೆ ವಿಧದ ವಿಚಾರವು ಉತ್ಪನ್ನವಾಯಿತು. ಆಕೆಯು ಇಬ್ಬರೂ ಆ ಪ್ರಕಾರದ ಬಿಡುಗಡೆಯನ್ನು ಹೊಂದುವ ಉಪಾಯವನ್ನು ಮನಸ್ಸಿನಲ್ಲಿ ಯೋಚಿಸತೊಡಗಿದಳು; ಆದರೆ ಯಾವಮಾತಿನ ನಿಶ್ಚಯವೂ ಇಲ್ಲದ್ದರಿಂದ ಅವಿಚಾರವೂ ಆಕೆಯ ಮನಸ್ಸಿಗೆ ಬರಲಿಲ್ಲ. ಮತ್ತೆ ಆಕೆಯ ಮನಸ್ಸಿನಲ್ಲಿ—ನನ್ನ ಗಂಡನಿಗೆ ಕೇಡು ಒದಗಿದ್ದರ ನಿಶ್ಚಯವೇನೂ ಆಗಿಲ್ಲ, ನಾಳೆಯು ಈದಿನ ಜೀವಕೊಟ್ಟಮೇಲೆ ಈದಿನ ರಾತ್ರಿ, ಇಲ್ಲವೆ ನಾಳೆ ರಾತ್ರಿ ನಮ್ಮ ಸಲುವಾಗಿ ನನ್ನ ಪತಿಯು ಏನಾದರೂ ಹೇಳಿ ಕಳಿಸಿದರೆ,

ಆತನು ಎಷ್ಟು ನಿರಾಶೆ ಪಡಬಹುದು! ಈಗ ಮೂರುತಿಂಗಳಿಂದ ನಾನಾಪ್ರಕಾರದ ಕಷ್ಟಗಳನ್ನು ಭೋಗಿಸಿ ರಚಿಸಿರುವ ಆತನ ವ್ಯೂಹವನ್ನು ನಾವು ಒಂದೆರಡುದಿನ ತಡೆಯದೆ ಅವಸರಮಾಡಿ ನಿಷ್ಫಲ ಮಾಡಿದರೆ ಎಷ್ಟು ಮೂರ್ಖತನ ವಾಗಬಹುದು! ಹೀಗೆ ಮಾಡುವ ದಕ್ಕಿಂತ ನಮ್ಮ ಪ್ರಾಣಘಾತಮಾಡಿಕೊಳ್ಳುವ ಸಾಧನಗಳನ್ನು ಸಿದ್ಧಮಾಡಿಟ್ಟು, ನವಮಿಯ ರಾತ್ರಿಯವರೆಗೆ ಹಾದಿಯನ್ನು ನೋಡಬೇಕು. ಅಲ್ಲಿಯವರೆಗೂ ಏನೂ ತಿಳಿಯದಿದ್ದರೆ, ಅವಶ್ಯವಾಗಿ ದೇಹವನ್ನು ಬಿಡತಕ್ಕದ್ದು, ಎಂಬ ವಿಚಾರವು ಉತ್ಪನ್ನವಾಗಲು, ಅದು ಆಕೆಗೆ ಸರಿಯಾಗಿ ತೋರಿದ್ದರಿಂದ ಹಾಗೇ ಮಾಡತಕ್ಕದ್ದೆಂದು ಮನಸ್ಸಿನಲ್ಲಿ ನಿಶ್ಚಯಿಸಿದಳು. ಸದ್ಯಕ್ಕೆ ಆಕೆಯ ಮನಸ್ಸಿನ ಹಾಗು ವಿಚಾರದ ಸ್ಥಿತಿಯು, ಅತ್ಯಂತವಾಗಿ ಕ್ಷೋಭಿಸಿದ ಮಹಾಸಾಗರದಲ್ಲಿ ಸಿಕ್ಕ ಹಡಗದ ಸ್ಥಿತಿಯಂತೆ ಆಗಿತ್ತು. ತೆರೆಗಳ ಕೂಡ ಹಡಗವು ಕೆಳಗೆ ಮೇಲೆ ಆಗುವಂತೆ ಆಕೆಯ ಮನಸ್ಸಿನ ಹಾಗು ವಿಚಾರದ ಸ್ಥಿತಿಯು ಆಗುತ್ತಿತ್ತು. ಒಮ್ಮೆ ಆಕೆಯು ಈ ವಿಚಾರವು ಸರಿಯಾದ ದ್ದೆಂದು ಯೋಚಿಸುವಳು, ಮತ್ತೊಮ್ಮೆ ಮತ್ತೊಂದನ್ನು ಸರಿಯಾದದ್ದೆಂದು ಎಣಿಸುವಳು. ಸ್ವಲ್ಪ ಆಧಾರವು ದೊರೆತ ಕೂಡಲೆ ಆಕೆಯು ಧೈರ್ಯಗೊಳ್ಳುವಳು; ನಿರಾಶೆಯ ಅತಿರೇಕವಾದ ಕೂಡಲೆ ಎದೆಗೆಟ್ಟು ಹತಾಶಳಾಗುವಳು. ಈ ಬಗೆಯ ಮನಸ್ಸಿನ ಸ್ಥಿತಿಯಲ್ಲಿ ಏನು ಮಾಡಬೇಕೆಂಬದು ಆಕೆಯದು ಆಕೆಗೇ ತಿಳಿಯದಾಯಿತು. ಕಡೆಗೆ ಆಕೆಯ ಮನಸ್ಸಿನ ಮೇಲೆ ವಿಕಾರಕ್ಕಿಂತ ವಿಚಾರದ ಅಧಿಕಾರವು ಹೆಚ್ಚು ನಡೆದು, ಆಕೆಯು ಮಾಘವದ್ಯ ನವಮಿಯವರೆಗೆ ಹಾದಿ ನೋಡುವದನ್ನು ನಿಶ್ಚಯಿಸಿದಳು. ಆದಿನ ಸಂಜೆಯವರೆಗೂ ಬಿಡುಗಡೆ ಹೊಂದುವ ಲಕ್ಷಣವು ತೋರದಿದ್ದರೆ, ಇಬ್ಬರೂ ಪ್ರಾಣತ್ಯಾಗಮಾಡಿ, ತಮ್ಮ ವಿಟಂಬನೆ ಮಾಡುವದಕ್ಕಾಗಿ ಬರುವ ಉದಯ ಭಾನುವಿನ ಸಲುವಾಗಿ ಶವಗಳನ್ನಷ್ಟು ಎದುರಿಡಬೇಕೆಂದು ಗೊತ್ತುಮಾಡಿಕೊಂಡಳು.

ಈ ಮೇರೆಗೆ ಉದಯಭಾನು, ಕಮಲಕುಮಾರಿ, ದೇವಲದೇವಿ ಈ ಮೂವರ ಮನಸ್ಸಿನ ಸ್ಥಿತಿಯು ಇರುತ್ತಿರಲು, ಮಾಘವದ್ಯನವಮಿಯು ಪ್ರಾಪ್ತವಾಯಿತು. ತಮ್ಮ ಕೋಟೆ ಯೊಳಗಿನ ಒಬ್ಬ ಶಿಪಾಯಿಯು ಪಂಚಮಿಯ ದಿವಸ ರಾತ್ರಿ ಕಾಣದಂತಾದನೆಂತಲೂ, ಈವರೆಗೆ ಅವನ ಗೊತ್ತು ಹತ್ತಲಿಲ್ಲವೆಂತಲೂ ಕಾವಲುಗಾರರು ಷಷ್ಠಿಯ ದಿವಸ ಒಂಬತ್ತು ತಾಸಿನ ಕಡೆಗೆ ಉದಯಭಾನುವಿನ ಮುಂದೆ ಹೇಳಿದರು. ಅದಕ್ಕೆ ಉದಯಭಾನುವು— ಯಾವದಾದರೂ ಗುಡ್ಡದ ಕಡಿವಾಡಿಯಿಂದ ಇಳಿಯುತ್ತಿರುವಾಗ ಕಾಲುಜಾರಿ ಬಿದ್ದಿರ ಬಹುದು. ಇಲ್ಲವೆ ಬಂಗಿಯ ನೀರನ್ನು ಕುಡಿದು ಗೋಡೆಯ ಮೇಲಿಂದ ಅಲೆದಾಡುತ್ತ ಹೋಗುತ್ತಿರುವಾಗ ಜೋಲಿ ಹೋಗಿ ಬಿದ್ದಿರಬಹುದು. ನೆಟ್ಟಗೆ ಶೋಧಮಾಡಿರಿ. ಕೋಟೆಯ ಮೇಲಿನವನೊಬ್ಬನು ಇಲ್ಲದಂತಾದರೆ ಮಹತ್ವವಿಲ್ಲ. ಮಕ್ಕಳಿರಾ, ಮೈಮೇಲೆ ಎಚ್ಚರಿಕೆ ಇದ್ದಿಲ್ಲವೆ. ಎತ್ತ ನೋಡುತ್ತಿದ್ದಿರಿ? ನೋಡಿರಿ, ಎಲ್ಲಿಯಾದರೂ ಇದ್ದಾನು. ಹೊರಗಿನಿಂದ ಯಾವನಾದರೂ ಬಂದಿದ್ದರೆ ಅವನನ್ನು ನನ್ನ ಎದುರಿಗೆ ತಂದು ನಿಲ್ಲಿಸಿರಿ, ಎಂದು ತಿರಸ್ಕರಿಸಿ ನುಡಿದನು. ಈ ಸುದ್ದಿಯನ್ನು ಷಷ್ಠಿಯ ದಿವಸ ಕೇಳುವದರ ಬದಲು ಅದಕ್ಕೂ ಮೂರು ನಾಲ್ಕು ದಿನ ಮುಂಚಿತವಾಗಿ ಕೇಳಿದ್ದರೆ, ಆತನು ಅದನ್ನು ಇಷ್ಟು ನಿರಾಕರಿಸಿ ದುರ್ಲಕ್ಷಿಸುತ್ತಿದ್ದಿಲ್ಲ.

ಈ ಕಾಲದಲ್ಲಿ ಉದಯಭಾನುವಿನ ಲಕ್ಷವು ಸಂಪೂರ್ಣವಾಗಿ ಕಮಲಕುಮಾರಿಯಲ್ಲಿ ನಟ್ಟು ಹೋಗಿತ್ತು. ಅವನಿಗೆ ಕಮಲಕುಮಾರಿಯ ಹೊರತು ಮತ್ತೊಂದು ವಿಷಯವು ಮಹತ್ವದ್ದಾಗಿ ತೋರುತ್ತಿದ್ದಿಲ್ಲ. ಅಂದ ಬಳಿಕ ಒಬ್ಬ ಸೊಟ್ಟ ಶಿಪಾಯಿಯು ಕಾಣದ ಹಾಗಾದದ್ದರ ಮಹತ್ವವು ಅವನಿಗೆ ಹ್ಯಾಗೆ ತೋರಬೇಕು? ರಾಜಕಾರಣದಲ್ಲಿ ಅವನ ಲಕ್ಷವಿದ್ದಿಲ್ಲೆಂದರೂ ನಡೆಯಬಹುದು. ಕಮಲಕುಮಾರಿಯ ಲಗ್ನಕ್ಕೆಂತಲೇ ಔರಂಗಾಬಾದದಿಂದ ಕರಿಸಿದ್ದ ಕಾಜಿಯ ಸಂಗಡ ಮಾತಾಡುವದರಲ್ಲಿಯೂ, ಕಮಲಕುಮಾರಿಯು ತನ್ನ ಹೆಂಡತಿಯಾದ ಬಳಿಕ ತನ್ನ ಸಂಗಡ ಹ್ಯಾಗೆ ನಡಕೊಳ್ಳಬಹುದೆಂಬದನ್ನು ಕುರಿತು ವಿಚಾರಿಸುವದರಲ್ಲಿಯೂ ಅವನ ಹೊತ್ತು ಹೋಗುತ್ತಿತ್ತು. ಉದಯಭಾನುವಿಗೆ ಕಮಲಕುಮಾರಿಯಿಂದ ಅಡಗಾಣಿಸಿತ್ತೆನ್ನುವ ಹಾಗೂ ಇದ್ದಿಲ್ಲ. ಅವನು ಮುಸಲ್ಮಾನ ಧರ್ಮವನ್ನು ಸ್ವೀಕರಿಸಿದ್ದರ ಸಂಗಡಲೇ ಬಹುಜನ ಹೆಂಡಿರನ್ನು ಮಾಡಿಕೊಳ್ಳುವ ಮುಸಲ್ಮಾನರ ಲಗ್ನದ ಪದ್ಧತಿಯನ್ನೂ ಸ್ವೀಕರಿಸಿದ್ದರಿಂದ ಅವನ ಅಂತಃಪುರದಲ್ಲಿ ಹಲವು ಜನ ಸುಂದರಿಯರು ಇದ್ದೇ ಇದ್ದರು; ಆದರೆ ಕಮಲಕುಮಾರಿಯನ್ನು ಲಗ್ನವಾಗಿಯೇ ತೀರೇನೆಂದು ಆತನು ಸಂಕಲ್ಪ ಮಾಡಿದ್ದರಿಂದ ಆಕೆಯ ಲಗ್ನವು ಅವನಿಗೆ ಪ್ರತಿಜ್ಞೆಯ ಮಾತಾಗಿತ್ತು. ರಾಜಸಿಂಹನೂ, ಅವನ ಸರದಾರರೂ ಬಲು ಡೌಲು ಮಾಡುತ್ತಿದ್ದು, ನಾನು ಜಾತಿಯ ರಜಪೂತನಲ್ಲೆಂದು ನನ್ನನ್ನು ತಿರಸ್ಕರಿಸಿ, ನನಗೆ ಮನೆತನಸ್ಥರ ಹೆಣ್ಣನ್ನು ಲಗ್ನವಾಗಗೊಡಲಿಲ್ಲ! ಈಗ ಕಮಲಕುಮಾರಿಯನ್ನು ಲಗ್ನಮಾಡಿಕೊಂಡರೆ, ರಾಜಸಿಂಹನ ಬಹುಶ್ರೇಷ್ಠ ಸರದಾರನ ಮಗಳನ್ನು ಲಗ್ನವಾದಂತಾಗಿ, ಉದೇಪುರದ ರಜಪೂತರ ಮೋರೆಯ ಮೇಲೆ ಹೊಡೆದ ಹಾಗಾಗುತ್ತದೆಂದು ಆತನು ತಿಳಿದಿದ್ದನು. ಇದೇ ಬುದ್ಧಿಯಿಂದಲೇ ಆತನು ಕಮಲಕುಮಾರಿಯನ್ನು ಸೆರೆಹಿಡಕೊಂಡು ಬಂದಿದ್ದನು; ಅದೇ ಬುದ್ಧಿಯಿಂದಲೇ ಮುಂದೆ ಆತನು ಆಕೆಯ ಆಶೆಗೆ ಬಿದ್ದನು. ಹೀಗೆ ಕಡದಿಗೆ ಬಿದ್ದು ಬಡದಾಡುವ ಉದಯಭಾನುವನ್ನು ಬಾದಶಹನು ಮೂರುತಿಂಗಳವರೆಗೆ ಲಗ್ನವಾಗಲಾಗದೆಂದು ಅಕಲ್ಪಿತವಾಗಿ ಪ್ರತಿಬಂಧಿಸಿದನು. ಈ ಪ್ರತಿಬಂಧದ ಮೂಲಕ ಉದಯಭಾನುವಿಗೆ ಕಮಲಕುಮಾರಿಯ ಪ್ರಾಪ್ತಿಯ ವಿಷಯದಲ್ಲಿ ದೊಡ್ಡ ವಿಘ್ನವು ಒದಗಿದಂತಾಯಿತು. ಹಲವು ವಿಘ್ನಗಳನ್ನು ನೀಗಿದರೆ ಮಾತ್ರ ಪ್ರಾಪ್ತವಾಗಬಹುದಾದ ವಸ್ತುವನ್ನು, ಇಲ್ಲವೆ ಏನುಮಾಡಿದರೂ ಪ್ರಾಪ್ತವಾಗುವ ದಿಲ್ಲೆಂಬಂತೆ ತೋರುವ ವಸ್ತುವನ್ನು ಸಂಪಾದಿಸಲಿಕ್ಕೆ ಹೆಣಗಲಿಚ್ಛಿಸುವದು ಮನುಷ್ಯ ಸ್ವಭಾವವಾಗಿರುತ್ತದೆ. ಉದಯಭಾನುವಿನ ಸ್ಥಿತಿಯಾದರೂ ಹೀಗೆಯೇ ಆಗಿತ್ತು. ಕಮಲಕುಮಾರಿಯು ಕೇವಲ ದುರ್ಲಭಳಾದ್ದರಿಂದಲೇ ಮೊದಲು ಆತನು ಅವಳ ಪ್ರಾಪ್ತಿಯ ಅಭಿಲಾಷೆಯನ್ನು ತಾಳಿದ್ದನು; ಆದರೆ ಈಗ ಮೂರು ತಿಂಗಳಿಂದ ಅವಳ ಸನ್ನಿಧಿಯಲ್ಲಿದ್ದದ್ದರಿಂದ ಆ ಅಭಿಲಾಷೆಗಿಂತ ಉದಾತ್ತವಾದ ಪ್ರೇಮವೆಂಬ ಬೇರೊಂದು ವಿಕಾರವು ಅವನಲ್ಲಿ ಉತ್ಪನ್ನವಾಯಿತು. ಆ ಪ್ರೇಮದ ಮೂಲಕವಾಗಿಯೇ ಈಗ ಆತನು ಕಮಲಕುಮಾರಿಯನ್ನು ಲಗ್ನವಾಗಲಿಚ್ಛಿಸುತ್ತಿದ್ದನು. ಕಮಲಕುಮಾರಿಯು ಮಹಾಪವಿತ್ರಳೆಂಬದನ್ನು ಉದಯಭಾನುವು ಅರಿತಿದ್ದನು. ಪವಿತ್ರತೆಯು ಬಹುದುರ್ಲಭವು. ಎಂಥ ಅಪವಿತ್ರ ಮನುಷ್ಯನಾದರೂ ಪವಿತ್ರತೆಯನ್ನು ಇಚ್ಛಿಸುವನು. ತಾನು ಪವಿತ್ರನಾಗದಿದ್ದರೂ, ಪವಿತ್ರತೆಯುಳ್ಳವರ ಪ್ರಾಪ್ತಿಯೂ,

ಅವರ ಪ್ರೇಮವೂ, ಅವರ ಸಾನ್ನಿಧ್ಯವೂ ತನಗೆ ಲಭಿಸಬೇಕೆಂದು ಮನುಷ್ಯನು ಇಚ್ಛಿಸುವನು. ಅದರಂತೆ ಉದಯಭಾನುವು ಮಹಾಪತಿವ್ರತೆಯಾದ ಕಮಲ ಕುಮಾರಿಯು ತನ್ನ ಹೆಂಡತಿ ಯಾಗಬೇಕೆಂದು ಇಚ್ಛಿಸುತ್ತಿದ್ದನು. ಸಾರಾಂಶ ಬರಿಯ ಪ್ರತಿಜ್ಞೆಯ ಪೂರತೆಗಾಗಿಯೇ ಅಲ್ಲದೆ, ಪವಿತ್ರ ವಸ್ತುವಿನ ಪ್ರೇಮ ಪ್ರಾಪ್ತಿಗಾಗಿಯೂ ಉದಯಭಾನುವು ಈಗ ಹೆಣಗುತ್ತಿದ್ದನು.

ಮಾಘವದ್ಯ ನವಮಿಯ ದಿವಸ ಬೆಳಗಾಗುತ್ತಲೆ, ಉದಯಭಾನುವಿನ ಆನಂದವು ಭೂಮಂಡಲದಲ್ಲಿ ಹಿಡಿಸದಾಯಿತು. ಇನ್ನು ನಾಲ್ಕಾರು ಪ್ರಹರಗಳ ಅವಕಾಶ ಉಳಿಯಿತು; ಅಷ್ಟು ಹೊತ್ತಾದರೂ ಇಂದಿನತನಕ ದೂರದೂರ ಇರುತ್ತಿದ್ದ ಕಮಲಕುಮಾರಿಯು ನನ್ನವಳಾಗುವಳೆಂದು ಆತನು ಹಿರಿಹಿರಿ ಹಿಗ್ಗಿದನು. ಅವನ ಮೋರೆಯು ಹಿಗ್ಗಿ ಇಷ್ಟಗಲ ವಾಯಿತು. ಆತನು ಮನಸ್ಸಿನಲ್ಲಿ—ತಾನು ಬಿಡುಗಡೆಹೊಂದೇನೆಂಬ ಆಶೆಯಿಂದ ಇಲ್ಲಿಯತನಕ ನನ್ನನ್ನು ಕಣ್ಣೆತ್ತಿ ನೋಡದ ಕಮಲಕುಮಾರಿಯು ಈದಿನ ನಿರಾಶೆಪಟ್ಟು ಉಪಾಯಗಾಣದೆ ನನ್ನೊಡನೆ ಲಗ್ನವಾದಳೆಂದರೆ ಆಕೆಯು ನನ್ನ ಹಣೇಬರಹವೇ ಹೀಗಿದ್ದ ಬಳಿಕ ಮಾಡುವ ದೇನೆಂದು ನನ್ನ ಸಂಗಡ ಪ್ರೀತಿಯಿಂದ ನಡಕೊಳ್ಳಬಹುದು. ಮುಂದೆ ಸ್ವಲ್ಪ ದಿವಸ ಗಳಲ್ಲಿಯೇ ಆಕೆಯ ಮನಸ್ಸಿನೊಳಗಿನ ವಿಕಲ್ಪವೆಲ್ಲ ಅಳಿದುಹೋಗಿ ಆಕೆಯು ತನ್ನ ತನು ಮನಧನಗಳನ್ನು ನನಗೆ ಅರ್ಪಿಸಬಹುದು.'' ಎಂದು ಹಲವು ಆನಂದಜನಕ ಕಲ್ಪನೆಗಳನ್ನು ಕಲ್ಪಿಸತೊಡಗಿದನು. ಅಷ್ಟರಲ್ಲಿ ಒಬ್ಬ ದ್ವಾರಪಾಲಕನು ಬಂದು'' ದಿಲ್ಲಿಯಿಂದ ಯಾವನೋ ಒಬ್ಬ ಒಂಟೆಯ ಸವಾರನು ಪತ್ರವನ್ನು ತಕ್ಕೊಂಡು ಬಂದಿದ್ದಾನೆ''ಂದು ಹೇಳಿದನು.

ದ್ವಾರಪಾಲಕನು ಹೇಳಿದ ಸುದ್ದಿಯನ್ನು ಕೇಳಿ ಉದಯಭಾನುವು ಮನಸ್ಸಿನಲ್ಲಿ—ಪತ್ರವು ಯಾರದಾಗಿರಬಹುದು? ನಾನು ಇಲ್ಲಿಂದ ಬಾದಶಹನ ಕಡೆಗೆ ಕಳಿಸಿದ ಪತ್ರದ ಉತ್ತರವಂತು ಇದು ಅಲ್ಲವು; ಯಾಕಂದರೆ ನಮ್ಮ ಹೇಜೀಬನು ಎಷ್ಟು ಒತ್ತರದಿಂದ ಹೋದರೂ ಅವನು ತಿರುಗಿ ಬರುವಷ್ಟು ದಿನಗಳು ಇನ್ನೂ ಆಗಿಲ್ಲ; ಆದ್ದರಿಂದ ಬೇರೆ ಯಾವದಾದರೊಂದು ಕಾರಣದ ಸಲುವಾಗಿ ಬಾದಶಹನು ಈ ಸವಾರನನ್ನು ಕಳಿಸಿರಬಹುದು'' ಎಂದು ಯೋಚಿಸಿ ಪತ್ರವನ್ನು ತಕ್ಕೊಂಡು ಬಾರೆಂದು ದ್ವಾರಪಾಲಕನಿಗೆ ಹೇಳಿದನು. ಈ ದಿನ ಮಾಘವದ್ಯ ನವಮಿಗೇ ಬಂದು ಮುಟ್ಟುವಂತೆ ಬಾದಶಹನು ಬುದ್ಧಿಪೂರ್ವಕವಾಗಿ ಪತ್ರವನ್ನು ಕಳಿಸಿರಲಿಕ್ಕಿಲ್ಲವಷ್ಟೇ, ಎಂಬ ವಿಚಾರವು ಅವನ ಮನಸ್ಸಿನಲ್ಲಿ ಬಂದು ಅವನ ಎಂದೆಯು ಧಸ್ಸೆಂದಿತು. ಯಾರಿಗೆ ಗೊತ್ತು! ಬಾದಶಹನ ಮನಸ್ಸಿನಲ್ಲಿ ಮತ್ತೇನಾದರೂ ವಿಚಾರವು ಬಂದು, ಆತನು ತನ್ನ ಹುಕುಮನ್ನು ತಿರುಗಿಸಿ ಕಮಲಕುಮಾರಿಯನ್ನು ತಿರುಗಿ ದಿಲ್ಲಿಗೆ ಕಳಿಸಿಕೊಡೆಂದು ಪತ್ರವನ್ನು ಬರೆದಿರಬಹುದೋ ಏನೋ? ಕಮಲಕುಮಾರಿಯನ್ನು ನೋಡಿ ದಾಗಿನಿಂದ ಆಕೆಯ ಧ್ಯಾಸವು ಹತ್ತಿ ಆಕೆಯು ತನಗೆ ಬೇಕೆಂದು ತಿಳಿದು ಬಾದಶಹನು ನಮ್ಮ ಬೆನ್ನಹಿಂದೇ ಸ್ವಾರನ್ನನು ಅಟ್ಟಿದ್ದಾನಾದೀತೇನು? ಎಂಬ ವಿಚಿತ್ರವಾದ ವಿಚಾರಗಳು ಅವನ ಮನಸ್ಸಿನಲ್ಲಿ ಬರುತ್ತಿರಲು, ದ್ವಾರಪಾಲಕನು ಪತ್ರದ ಥೈಲಿಯನ್ನು ತಕ್ಕೊಂಡು ಬಂದನು. ಆಗ ಉದಯಭಾನುವು—''ಈ ಥೈಲಿಯನ್ನು ಈಗೇ ತೆರೆಯಲೋ, ರಾತ್ರಿ ಕಮಲಕುಮಾರಿ

ಯೊಡನೆ ಲಗ್ನವಾದ ಬಳಿಕ ತೆರೆಯಲೋ? ಎಂದು ಯೋಚಿಸತೊಡಗಿದನು. ಥೈಲಿಯನ್ನು ಉಚ್ಚಿ ನೋಡಿದಬಳಿಕ ಅದರಲ್ಲಿ ಏನಾದರೂ ಭಯಪ್ರದವಾದ ಸಂಗತಿಯಿದ್ದರೆ, ಬಾದಶಹನ ಅಪ್ಪಣೆಯನ್ನು ಮುರಿಯಲಿಕ್ಕೆ ಬರುವದಿಲ್ಲ, ಹಾಗೆ ಮಾಡುವದಕ್ಕಿಂತ ಅಪ್ಪಣೆಯನ್ನು ಬಚ್ಚಿಟ್ಟು, ಕೆಲಸವಾದ ಬಳಿಕ ನೋಡೋಣವೆ''ಂದು ನಿಶ್ಚಯಿಸಿ, ದ್ವಾರಪಾಲಕನು ತಂದ ಥೈಲಿಯನ್ನು ತಿರಸ್ಕಾರದಿಂದ ಚೆಲ್ಲಿಕೊಟ್ಟನು. ಬಳಿಕ ಅವನ ಮನಸ್ಸಿಗ ಏನು ಹೊಳೆಯಿತೋ ತಿಳಿಯದು. ಆ ಥೈಲಿಯನ್ನು ಮತ್ತೆ ದ್ವಾರಪಾಲಕನಿಂದ ತರಿಸಿಕೊಂಡು, ಅದರ ಮೇಲಿನ ಅರಿವೆಯ ಚೀಲವನ್ನು ತೆಗೆದು, ಅದರೊಳಗಿನ ಥೈಲಿಯ ಕಡೆಗೆ ನೋಡುತ್ತ ಅದರ ಗೊಂಡೆಯನ್ನು ಕೈಯಲ್ಲಿ ಹಿಡಿದು ಆಡುತ್ತ ವಿಚಾರಮಾಡತೊಡಗಿದನು. ಅವನು ತನ್ನ ಮನಸ್ಸಿನಲ್ಲಿ—''ನಾನು ಬಾದಶಹನ ಬಗ್ಗೆ ಇಷ್ಟು ಭಯವನ್ನಾದರೂ ಯಾಕೆ ಪಡಬೇಕು? ನನ್ನ ಪಾಲಿನದೆಂದು ಗೊತ್ತಾಗಿ ಹೋಗಿದ್ದ ಒಡವೆಯನ್ನು ತಿರುಗಿ ಬಾದಶಹನು ಇಚ್ಛಿಸಿದರೆ, ನಾನಾದರೂ ಆತನ ಹಂಗು ಯಾಕೆ ಕಾಯಬೇಕು? ಹೊತ್ತು ಬಿದ್ದರೆ, ನನಗೆ ನವಮಿಯ ದಿವಸ ಥೈಲಿಯು ಮುಟ್ಟಲೇ ಇಲ್ಲೆಂದು ಹೇಳಿದರಾಯಿತು. ಈ ಸವಾರನು ನನ್ನ ವಿ ರುದ್ಧವಾಗಿ ಸಾಕ್ಷಿಯನ್ನು ಹೇಳಬಹುದೆಂದು ತೋರಿದರೆ, ಈತನನ್ನು ಇದೇದಿನ ಗೊತ್ತಿಗೆ ಹಚ್ಚೋಣ. ಏನೇ ಆಗಲಿ ನನ್ನ ಪಾಲಿನ ಒಡವೆಯನ್ನು ಬಾದಶಹನಿಗೆ ಕೊಡಲಿಕ್ಕಿಲ್ಲ''

ಈ ಮೇರೆಗೆ ಯೋಚಿಸಿ ಉದಯಭಾನುವು ಕೂಡಲೆ ಸರಕ್ಕನೆ ಗೊಂಡೆಯನ್ನು ಎಳೆದು, ಒಳಗಿನ ಲಖೋಟಿಯನ್ನು ತೆಗೆದನು. ಆ ಲಖೋಟಿಯೊಳಗೆ ಬಾದಶಹನ ಪತ್ರವಿತ್ತು, ಅದು ಎರಡು ಎರಡೂವರೆ ಚೋಟಿನ ಮಡಿಕೆಯನ್ನು ಹಾಕಿ ಸುತ್ತಿದ್ದಿತ್ತು; ಮತ್ತು ಮೇಲೆಯೇ ಬಾದಶಹನ ಹಸ್ತಮುದ್ರೆಯ ಮೊಹರು ಮಾಡಲ್ಪಟ್ಟಿತ್ತು, ಆ ಮೊಹರನ್ನಾದರೂ ಕೂಡಲೆ ಒಡೆದು, ಉದಯಭಾನುವು ಪತ್ರದ ಸುರಳಿಯನ್ನು ಉಚ್ಚಿದನು. ಸುತ್ತಲು ಸುಂದರವಾದ ಸುವರ್ಣದ ಸುಳುವು ತೆಗೆದ ಕಾಗದದ ಮೇಲೆ ಮುತ್ತಿನ ಸಾಲಿನಂತೆ ಅಕ್ಷರಗಳು ಬರೆಯ ಲ್ಪಟ್ಟಿದ್ದವು. ಔರಂಗಜೇಬ ಬಾದಶಹನು ಕೈಮುಟ್ಟಿ ಪತ್ರಬರಿಯಲಿಕ್ಕೆ ಮೆಚ್ಚಿದವನಿದ್ದನು. ಉದಯ ಭಾನುವಿಗಾಗಿ ಈ ಪತ್ರವನ್ನು ಆತನು ಮೊದಲಿನಿಂದ ಕಡೆಯವರೆಗೆ ಸ್ವತಃ ಬರೆದಿದ್ದನು. ಆತನ ಅಕ್ಷರಗಳು ಬಹುದಿವ್ಯವಾಗಿದ್ದವು. ಮೊದಲಿನ ನಾಲ್ಕು ಸಾಲುಗಳನ್ನು ಓದಿದಕೂಡಲೆ ಉದಯಭಾನುವಿನ ಮುಖವು ದೊಡ್ಡದೊಂಡು ಕಮಲಪುಷ್ಪದಹಾಗೆ ಪ್ರಫುಲ್ಲಿತವಾಯಿತು. ಪದ್ಧತಿಯಂತೆ ಒಕ್ಕಣೆಯಾದಮೇಲೆ ಮುಂದಿನ ಸಂಗತಿಯು ಪತ್ರದಲ್ಲಿ ಹೀಗೆ ಬರೆಯಲ್ಪಟ್ಟಿತ್ತು—''ನೀನು ಇಂದಿನವರೆಗೆ ನನ್ನ ಅಪ್ಪಣೆಯನ್ನು ಪಾಲಿಸಿದ್ದರೆ, ಈದಿನ ನಾನು ಬಹು ಸಂತೋಷದಿಂದ ಕಮಲಕುಮಾರಿಯನ್ನು ನಿನಗೆ ಅರ್ಪಿಸುತ್ತೇನೆ. ನೀನೂ, ಆಕೆಯೂ ಇಲ್ಲಿಂದ ಹೋದಬಳಿಕ ಹತ್ತಿಪ್ಪತ್ತು ದಿವಸವಾದರೂ ಆಕೆಯ ತಂದೆಯು ಬದುಕಿರಲಿಲ್ಲ, ಯಾವತ್ತು ಕಾಫರರ ಪದ್ಧತಿಯಂತೆ ಆತನು ನನ್ನನ್ನು ಬಯ್ಯುತ್ತ ಬಯ್ಯುತ್ತ ತನ್ನ ಮಗಳ ಹೆಸರಿನ ಜಪವನ್ನು ಮಾಡುತ್ತ ಮಾಡುತ್ತ ಜೀವಬಿಟ್ಟು ಸೈತಾನನ (ಪಿಶಾಚದ) ರಾಜ್ಯಕ್ಕೆ ಹೋದನು. ಅಂದಬಳಿಕ ಕಮಲಕುಮಾರಿಯ ತಂದೆಯ ಸ್ಥಾನದಲ್ಲಿ ಆಕೆಯನ್ನು ನಿನಗೆ

ಕನ್ಯಾದಾನವಾಗಿ ಅರ್ಪಿಸುವದಕ್ಕೆ ನಾನೇ ಆದೆನು; ಅಂತೇ ನಾನು ಆಕೆಯನ್ನು ನಿಯಮಿಸಿದ ದಿವಸ ನಿನಗೆ ಅರ್ಪಿಸುತ್ತೇನೆ; ಮತ್ತು ಆಕೆಯ ಸಂಗಡ ಅಂದಣವೆಂದು ಇಂಥ ಇಂಥ ಪ್ರಾಂತಗಳನ್ನು ನಿನಗೆ ಇನಾಮು ಹಾಕಿ ಕೊಟ್ಟಿದ್ದೇನೆ. ನಿನ್ನಂಥ ನಂಬಿಗೆಯ ಸೇವಕರು ಅಪರೂಪವು. ಇಂದಿನವರೆಗೆ ನಡಕೊಂಡು ಬಂದಂತೆ ಮುಂದೆಯಾದರೂ ವಿಶ್ವಾಸದಿಂದ ನಡೆದು, ಕಾಫರನಾದ ಆ ಶಿವಾಜಿಯನ್ನು (ಸೈತಾನನು ಅವನ ವಂಶವನ್ನು ನಿರ್ವಂಶವಾಗಿ ಮಾಡಲಿ) ಹಿಡತಂದು ನನಗೆ ಒಪ್ಪಿಸು! ಅಂದರೆ ಈಗ ಇರುವದಕ್ಕಿಂತಲೂ ನಿನ್ನಮೇಲೆ ನನ್ನ ಲೋಭವು ಹೆಚ್ಚಾಗುವದು. ನೀನು ಸುಖವನ್ನು ಪಡಿ; ಆದರೆ, ಆ ಸುಖದ ಉಪಭೋಗದಲ್ಲಿ ಮುಣುಗಿ ಹೋಗಿ, ಆ ಕಾಫರನಿಗೆ ಇಲ್ಲವೇ ಅವನ ಮಿತ್ರರಿಗೆ ನಿನ್ನ ಕುತ್ತಿಗೆಯನ್ನು ಕೊಯ್ಯುವ ಸಂಧಿಯನ್ನು ತಂದುಕೊಡಬೇಡ. ಆ ಕಾಫರನು ಇಲ್ಲಿಯವರೆಗೆ ಹೀಗೆ ಎಷ್ಟೋ ಸರದಾರರ ಕುತ್ತಿಗೆಗಳನ್ನು ಕೊಯ್ದಿರುವನು. ಅಂತೇ ನಾನು ನಿನ್ನನ್ನು ಎಚ್ಚರಗೊಳಿಸಿದ್ದೇನೆ. ಇಲ್ಲದಿದ್ದರೆ ಸುಖಸಮುದ್ರದಲ್ಲಿ ನೀನು ತೇಲಾಡುತ್ತಿರಲು, ಅದೇದಿನ ರಾತ್ರಿ ಆ ಕಾಫರನು ಬಂದು ನಿನ್ನ ಕುತ್ತಿಗೆಯನ್ನು ಕೊಯ್ಯಾನು; ಅಲ್ಲಾನು ಈ ವಿಪತ್ತಿನೊಳಗಿಂದ ನಿನ್ನನ್ನು ರಕ್ಷಿಸಲಿ; ಮತ್ತು ಬಾದಶಾಹಿ ಮನೆತನದ ಸೇವೆಯನ್ನು ನಂಬಿಗೆಯಿಂದ ಮಾಡುತ್ತ ಬಂದಿರುವ ನಿನ್ನ ಬುದ್ಧಿಯು ಯಾವಾಗಲೂ ಸ್ಥಿರವಾಗಿರಲಿ!''

ಈ ಪತ್ರವನ್ನು ಓದಿದಕೂಡಲೇ ಉದಯಭಾನುವಿಗೆ ಅತ್ಯಂತ ಹರ್ಷವಾಯಿತು. ಆ ಹರ್ಷದ ಭರದಲ್ಲಿ ಆತನು ತಾನು ಎಲ್ಲಿ ಇದ್ದೇನೆ, ಏನು ಮಾಡುತ್ತೇನೆ, ಎಂಬದರ ಅರಿವು ಇಲ್ಲದೇ ಗಟ್ಟಿಯಾಗಿ ನಕ್ಕನು. ಆತನು ಸದ್ಯಕ್ಕೆ ಮುಸಲ್ಮಾನನಾಗಿದ್ದರೂ, ಜನ್ಮತಃ ರಜಪೂತನಾದದ್ದರಿಂದ ಆತನ ಮುಖದಿಂದ—''ಭಗವಂತನಾದ ಏಕಲಿಂಗೇಶ್ವರನೇ, ನಿನ್ನ ಮಹಿಮೆಯು ಅಗಾಧವಾದದ್ದು'' ಎಂಬ ಉದ್ಗಾರವು ಸ್ವಾಭಾವಿಕವಾಗಿ ಹೊರಟಿತು. ತಾನು ಮುಸಲ್ಮಾನನಾದದ್ದರ ಎಚ್ಚರವು ಆತನಿಗೆ ಉಳಿದಂತೆ ತೋರಲಿಲ್ಲ, ಆತನಿಗೆ ಸ್ವರ್ಗಸುಖವು ಪ್ರಾಪ್ತವಾಗಲಿಕ್ಕೆ ಇನ್ನು ನಾಲ್ಕೇ ಪ್ರಹರಗಳ ಅವಕಾಶವು ಉಳಿದಿತ್ತು, ಆತನು ತನ್ನ ಆ ಮುಂದಿನ ಸುಖದ ವಿಚಾರದಲ್ಲಿ ಮಗ್ನನಾಗಿ ಹೋಗಿದ್ದನು. ಹೀಗೆ ಆನಂದಮಗ್ನನಾದ ಆ ಕಾಮಾಂಧನು ಒಮ್ಮೆ ಕಮಲಕುಮಾರಿಯನ್ನು ಕಂಡು ಬರಬೇಕೆಂದು ಯೋಚಿಸಿ ಕೂಡಲೇ ಆಕೆಯ ಮಂದಿರವನ್ನು ಪ್ರವೇಶಿಸಿದನು.

ಉದಯಭಾನುವಿಗೆ ಕೇವಲ ಆನಂದಮಯವಾಗಿ ತೋರುವಕಾಲವೇ, ಕಮಲಕುಮಾರಿಗೆ ಪರಮಾವಧಿ ದುಃಖಮಯವಾಗಿ ತೋರುತ್ತಿತ್ತು, ಅಪರಾಧಿಯನ್ನು ವಧಸ್ತಂಭದ ಬಳಿಗೆ ಒಯ್ದು, ಮರಣಶಿಕ್ಷೆಯನ್ನು ಓದಿತೋರಿಸಿದಾಗ ಆದ ಅಪರಾಧಿಯ ಅವಸ್ಥೆಯಂತೆ ಕಮಲಕುಮಾರಿಯ ಅವಸ್ಥೆಯು ಆಗಿತ್ತು, ಇನ್ನು ತನ್ನ ಆಯುಷ್ಯವು ಒಂದೊಂದು ಕ್ಷಣ ಕಡಿಮೆಯಾಗುತ್ತ ನಡೆದಿದ್ದು, ತನ್ನ ಮರಣಕಾಲವು ತೀರ ಸಮೀಪಿಸುತ್ತ ಬಂತೆಂದು ಆಕೆಯು ಎಣಿಸಿದ್ದಳು. ಜಗತ್ಸಿಂಗನಿಂದ ಏನಾದರೂ ಸುದ್ದಿಯು ತಿಳಿಯಬಹುದೆಂಬ ಆಶೆಯೂ ಈಗ ಸಂಪೂರ್ಣ ನಷ್ಟವಾಗಿ ಹೋಗಿತ್ತು, ಬೆಳಗಾದ ಬಳಿಕಂತೂ ಆತನಿಂದ ಯಾವ ಸುದ್ದಿಯೂ

ತಿಳಿಯುವ ಸಂಭವವಿದ್ದಿಲ್ಲ. ಆದ್ದರಿಂದ ಕಮಲ ಕುಮಾರಿಯೂ, ದೇವಲದೇವಿಯೂ ತಾವು ಬಿಡುಗಡೆಹೊಂದುವ ಆಶೆಯನ್ನು ತೊರೆದು, ಒಂದೇ ಸವನೆ ಶೋಕಮಾಡುತ್ತ ಬರಿಯ ನೋಡುವದರಿಂದಲೇ ಒಬ್ಬರನ್ನೊಬ್ಬರು ಸಮಾಧಾನಗೊಳಿಸುತ್ತ ಸ್ವಸ್ಥವಾಗಿ ಕುಳಿತಿದ್ದರು; ಯಾಕಂದರೆ, ಅವರಲ್ಲಿ ಈಗ ಮಾತಾಡುವ ಸಾಮರ್ಥ್ಯವೇ ಉಳಿದಿದ್ದಿಲ್ಲ.

ಇಂಥ ಹೊತ್ತಿನಲ್ಲಿ ಉದಯಭಾನುವು ತಮ್ಮ ಕಡೆಗೆ ಬರುತ್ತಾನೆಂಬ ಸುದ್ದಿಯು ಅವರಿಗೆ ಹತ್ತಿದ ಕೂಡಲೆ ಅವರ ಮೈಮೇಲಿನ ಎಚ್ಚರವು ತಪ್ಪಿತು. ಕಮಲಕುಮಾರಿಯಂತು ಭಯದಿಂದ ತೀರನಿಶ್ಚೇಷ್ಟಿತಳಾಗಿ ಬಿದ್ದುಕೊಂಡಳು. ಆಕೆಯ ಮೈಯೊಳಗಿನ ರಕ್ತವೆಲ್ಲ ಗಟ್ಟಿಯಾಗಿ ಹೋಯಿತೋ ಏನೋ ಅನ್ನುವಂತೆ ಆಕೆಯ ದೇಹವು ಬಿಳುಪೇರಿತು. ಆಕೆಯು ಥರ ಥರ ನಡುಗಹತ್ತಿದಳು. ಕಮಲಕುಮಾರಿಯ ಈ ಅವಸ್ಥೆಯನ್ನು ನೋಡಿದಕೂಡಲೆ, ದೇವಲದೇವಿಯ ಸ್ಥಿತಿಯು ಬೇರೆ ತರದ್ದಾಯಿತು. ಕೆಲವು ವ್ಯಕ್ತಿಗಳ ಧೈರ್ಯವು ಸಂಕಟಸಮಯದಲ್ಲಿಯೇ ಹೆಚ್ಚಾಗುತ್ತಿರುತ್ತದೆ. ಇಲ್ಲಿಯವರೆಗೆ ತನ್ನ ಸೌಭಾಗ್ಯವು ನಷ್ಟವಾದದ್ದಕ್ಕಾಗಿ ಶೋಕಮಾಡುತ್ತ ಕುಳಿತಿದ್ದ ದೇವಲದೇವಿಯು, ಆ ದುಷ್ಟನು ಇತ್ತ ಕಡೆಗೆ ಬಂದಬಳಿಕ ತನ್ನ ಗೆಳತಿಯನ್ನೂ ತನ್ನನ್ನೂ ಛಲಿಸುವನೆಂಬ ವಿಚಾರವು ಮನಸ್ಸಿನಲ್ಲಿ ಬಂದಕೂಡಲೆ ಸಂತಪ್ತಳಾದಳು. ಕಮಲಕುಮಾರಿಯ ಮೈಯೊಳಗಿನ ರಕ್ತವೂ, ದೇವಲದೇವಿಯ ಮೈಯೊಳಗಿನ ರಕ್ತವೂ ಒಬ್ಬ ದೇವಲದೇವಿಯ ಮೈಯೊಳಗೇ ಸೇರಿತೋ ಏನೋ ಅನ್ನುವಂತೆ ಆಕೆಯ ಸರ್ವಾಗವು ಕೆಂಪಾಯಿತು. ಆಕೆಯ ವಿಶಾಲವಾದ ಕಣ್ಣುಗಳಂತು ಕೆಂಡದಂತಾಗಿ, ಅವುಗಳಿಂದ ಇನ್ನು ಕಿಡಿಗಳು ಹಾರುತ್ತವೋ ಅನ್ನುವಂತೆ ತೋರಹತ್ತಿತು.

ಉದಯಭಾನುವು ಪರದೆಯನ್ನು ಓರೆಮಾಡಿ ಒಳಗೆ ಕಾಲಿಟ್ಟದ್ದೊಂದೇ ತಡ, ದೇವಲ ದೇವಿಯು ಈದ ಹುಲಿಯಂತೆ ಅವನ ಮೇಲೆ ಹರಿಹಾಯ್ದು ಒಮ್ಮೆಲೆ ನುಡಿದಳೇನೆಂದರೆ—ಉದಯಭಾನೂ, ಒಂದು ಭಯಂಕರವಾದ ಹುಲಿಯು ತನ್ನ ಕೈಯಲ್ಲಿ ಸಿಕ್ಕಿರುವ ಚಿಗರಿಯನ್ನು ಕೊಲ್ಲುವಮೊದಲು, ಅದನ್ನು ಅಂಜಿಸಿ, ಅದು ಭಯದಿಂದ ನಡುಗುತ್ತಿರಲು, ನೋಡಿ ಚಕ್ಕಂದಪಡುವಂತೆ, ನಮ್ಮನ್ನು ಅಂಜಿಸಿ ಚಕ್ಕಂದಪಡುವದಕ್ಕಾಗಿ ಮೇಲಿಂದ ಮೇಲೆ ನಮ್ಮ ಬಳಿಗೆ ಬರುತ್ತೀಯೇನು? ನೀನು ಶೂರ ರಜಪೂತನಿರುತ್ತೀಯೋ, ಯಾವನಿರುತ್ತೀ? ಬೇಕಾದಷ್ಟು ಮಾಡು; ನಿನ್ನ ಬಲೆಯು ಜೀವದಿಂದಿರುವಾಗ ನಿನ್ನ ಕೈಗೆ ಹತ್ತಲಿಕ್ಕಿಲ್ಲ, ಹೆಣವು ಸಿಕ್ಕೀತು. ಆಮೇಲೆ ಆ ಹೆಣದ ವಿಟಂಬನೆಯನ್ನು ಬೇಕಾದ ಹಾಗೆ ಮಾಡು. ಬಿಟ್ಟದ್ದು ಬಿಟ್ಟು, ದಿನಕ್ಕೆ ಮೂರು ಸಾರೆ ನೀನು ಬರುವ ಕಾರಣವೇನು?

ದೇವಲದೇವಿಯ ವಿಚಿತ್ರವಾದ ಆವಿರ್ಭಾವವನ್ನು ನೋಡಿದಕೂಡಲೇ, ಉದಯಭಾನುವು ಬೆದರಿ ಹೋದನು. ಅವನ ಬಾಯಿಂದ ಒಂದಾದರೂ ಶಬ್ದವು ಹೊರಡಲೊಲ್ಲದು; ಆದರೆ ದೇವಲದೇವಿಯಮಾತಿನಿಂದ ಅವನ ಮನಸ್ಸಿನಲ್ಲಿ ಇಂದು ವಿಲಕ್ಷಣವಾದ ಸಂಶಯವು ಉತ್ಪನ್ನವಾಯಿತು. ಈಕೆಯು ನುಡಿದಂತೆ ನಡೆದು, ಕಮಲಕುಮಾರಿಯು ಸಂಜೆಯೊಳಗಾಗಿ ಪ್ರಾಣಘಾತ ಮಾಡಿಕೊಳ್ಳುವಂತೆ ಮಾಡಿದರೆ ಮಾಡುವದೇನು? ಅದಕ್ಕಿಂತ

ನಾನು ಈಗ ಸ್ವಲ್ಪ ಕಠೋರತನವನ್ನು ತಾಳಿ, ಇವರಿಬರನ್ನು ಅಗಲಿಸಿ ಬಿಡಲಿಕ್ಕಬೇಕು ಎಂದು ಆತನು ಯೋಚಿಸಿದನು; ಆದರೆ ಆ ಕಾರ್ಯವನ್ನು ಹ್ಯಾಗೆ ಮಾಡಬೇಕೆಂಬದು ಅವನಿಗೆ ತೋಚದಾಯಿತು. ಕಡೆಗೆ ಆತನು ಬೇರೆ ಉಪಾಯವನ್ನು ಕಾಣದೆ, ದೇವಲದೇವಿಯನ್ನು ಬಲಾತ್ಕಾರದಿಂದ ಎಳೆದೊಯ್ಯುವಂತೆ ವ್ಯವಸ್ಥೆಮಾಡುವದನ್ನು ನಿಶ್ಚಯಿಸಿದನು. ಬಳಿಕ ಅವನು ಹೆಚ್ಚು ಕಡಿಮೆ ಏನೂ ಮಾತಾಡದೆ ಅಲ್ಲಿಂದ ಹೊರಟುಹೋಗಿ, ಎರಡನೆಯ ಅಂತಃಪುರದೊಳಗಿನ ನಾಲ್ಕು ಜನ ಹಬಸಿಯ ದಾಸಿಯರನ್ನು ಕಳಿಸಿ, ದೇವಲದೇವಿಯನ್ನು ಬಲಾತ್ಕಾರದಿಂದ ಎಳೆದೊಯ್ದು ಪ್ರತಿಬಂಧದಲ್ಲಿಡುವಂತೆ ನಿಯಮಿಸಿದನು. ಅದರಂತೆ ಆ ದಾಸಿಯರು ಮಾಡಿದರು. ಇತ್ತ ಕಮಲಕುಮಾರಿಯನ್ನು 'ಬಾಲೆಯಕಿಲ್ಲೆ' ಎಂಬ ಹೆಸರಿನ ಒಳಕೋಟೆಯೊಳಗಿನ ತನ್ನ ಮಹಾಲಿನಲ್ಲಿ ಇರಿಸಹೇಳಿ, ಆಕೆಯಮೇಲೆ ಕಣ್ಣಿಡುವವದಕ್ಕಾಗಿ ಹಬಸಿಯ ದಾಸಿಯರನ್ನು ನಿಯಮಿಸಿದನು. ದುಷ್ಟರಿಗೆ ತಮ್ಮ ದುಷ್ಟಹೇತುವು ಸಾಧ್ಯವಾಗಲಿಕ್ಕೆ ವಿಘ್ನವು ಬಂದರೆ, ಆ ವಿಘ್ನವನ್ನು ನಿವಾರಣಮಾಡಿಕೊಳ್ಳಲಿಕ್ಕೆ ಹಂಚಿಕೆಗಳು ಕೂಡಲೆ ಗೊತ್ತಾಗುತ್ತವೆ; ಅದರಂತೆ ಅವರು ಕೂಡಲೆ ಮಾಡಿಬಿಡುತ್ತಾರೆ.

## ಮಾಘವದ್ಯ ನವಮಿಯು

ಹಿಂದಿನ ಪ್ರಕರಣದಲ್ಲಿ ಹೇಳಿದಂತೆ, ಮಾಘವದ್ಯ ನವಮಿಯ ದಿವಸ ಉದಯ ಭಾನುವಿನ ಉದ್ಯೋಗವು ನಡೆದಿರಲು, ರಾಜಾಜಿಯ ಮನೆಯಲ್ಲಿ ತಾನಾಜಿಯು ಚಿಂತೆ ಮಾಡುತ್ತ ಕುಳಿತಿದ್ದನು. ಅವನು ಯಾವದೋ ಒಬ್ಬರ ಹಾದಿಯ್ನು ನೋಡುತ್ತಿದ್ದನೆಂಬಂತೆ ಸ್ಪಷ್ಟವಾಗಿ ಕಾಣುತ್ತಿತ್ತು. ಮೂರು ಮೂರು ಸಾರೆ ಬಿಸಿಲ ಕಡೆಗೆ ನೋಡಿ, ''ಇನ್ನೂ ಏನೂ ಸುದ್ದಿ ಬಾರದಿರುವ ಕಾರಣವೇನ''ೆಂದು ಹತ್ತರ ಕುಳಿತಿದ್ದ ಜಗತ್ಸಿಂಗನನ್ನು ಆತನು ಕೇಳುತ್ತಿದ್ದನು. ಜಗತ್ಸಿಂಗನಾದರೂ ತಾನಾಜಿಯಂತೆಯೇ ತೀರ ಚಿಂತಾತುರನಾಗಿದ್ದನು. ತನ್ನಿಂದ ಏನೂ ಸುದ್ದಿಯು ಬಾರದ್ದರಿಂದ ತನ್ನ ಹೆಂಡತಿಯು ಏನು ವಿಚಾರ ಮಾಡುತ್ತಿರಬಹುದೋ, ಎಂದು ಚಿಂತಿಸಿದನು. ಇನ್ನು ಮೇಲೆ ತಮ್ಮ ಬಿಡುಗಡೆಯಾಗುವ ಆಸೆಯುಳಿಯಲಿಲ್ಲೆಂದು ಅವರಿಬ್ಬರು ತಮ್ಮ ಜೀವಕ್ಕೆ ಏನಾದರೂ ಅಪಾಯ ಮಾಡಿಕೊಂಡಿರಬಹುದೆಂಬ ಬಗ್ಗೆ ಆತನಿಗೆ ಸಂಶಯವು ಉಳಿದಿದ್ದಿಲ್ಲ. ಇಂದು ರಾತ್ರಿ ಆರು ತಾಸಾಗುವವರೆಗಾದರೂ ಅವರು ಜೀವದಿಂದಿರುವರೋ ಇಲ್ಲವೋ ಎಂಬ ಬಗ್ಗೆ, ಆತನಿಗೆ ಸಂಶಯವು ಉತ್ಪನ್ನವಾಯಿತು. ಹೊತ್ತು ಏರುತ್ತ ಹೋದಂತೆ ಆತನ ಮನಸ್ಸಿನಲ್ಲಿ, ಈದಿನ ರಾತ್ರಿ ಆರುತಾಸಿನೊಳಗಾಗಿ ತಾನಾಜಿಯ ಜನರಿಂದ ದುರ್ಗವನ್ನು ತಕ್ಕೊಳ್ಳುವದಾಗುವದೋ ಇಲ್ಲವೋ ಎಂಬ ಬಗ್ಗೆಯೂ ಶಂಕೆಯು ಉತ್ಪನ್ನವಾಗತೊಡಗಿತು; ಆದರೂ ಆತನು ಒಂದಾದರೂ ನಿರಾಶೆಯ ಉದ್ಗಾರವನ್ನು

ಬಾಯಿಂದ ಹೊರಗೆಡವಲಿಲ್ಲ. ಕಮಲಕುಮಾರಿಯನ್ನು ಬಿಡಿಸುವ ವಿಷಯದಲ್ಲಿ ತನಗಿಂತಲೂ ತಾನಾಜಿಯೇ ಹೆಚ್ಚು ಉತ್ಕಂಠಿತನಾಗಿರುವನೆಂಬದನ್ನು ಈಗ ಜಗತ್ಸಿಂಗನು ಮನಗಂಡಿದ್ದನು. ''ನನ್ನ ಜನರು ಬಾರದಿದ್ದರೆ, ಲಗ್ನದ ಹೊತ್ತಿಗೆ ನಾನು, ನೀನು, ರಾಯಾಜಿಯು ಬಂದರೆ ರಾಯಾಜಿಯೊಬ್ಬನು ಹೀಗೆ ಮೂವರೇ ದುರ್ಗವನ್ನು ಏರಿ ಹೋಗಿ ಆ ಸಾಧ್ವಿಯಯನ್ನು ಬಿಡಿಸೋಣ. ಆಕೆಯನ್ನು ಬಿಡಿಸಿದ ಬಳಿಕ ಆ ದುಷ್ಟನನ್ನು ಆಕೆಯ ಬೆನ್ನು ಹತ್ತಿದರೆ, ಅಲ್ಲಿಯ ರಜಪೂತರನ್ನು ಸಿಟ್ಟಿಗೆಬ್ಬಿಸಿ, ಆ ಕಾಮಾಂಧನನ್ನು ಗೊತ್ತಿಗೆ ಹಚ್ಚೋಣ. ಒಟ್ಟಿಗೆ ಆದಷ್ಟು ಯತ್ನಮಾಡಿ ಆಕೆಯ ವಿಟಂಬನೆಯಾಗದಂತಾದರೂ ಮಾಡೋಣ. ಅದಕ್ಕೂ ಮೀರಿ ಅಂಥ ದುರ್ಧರ ಪ್ರಸಂಗವೇ ಬಂದರೆ, ರಜಪೂತಸ್ತ್ರೀಯರಿಗೆ ಯೋಗ್ಯವಾದ ಮೃತ್ಯುವನ್ನು ಅವರಿಬ್ಬರಿಗೂ ನೀನು ಒದಗಿಸಿ ಕೊಡು.'' ಎಂದು ತಾನಾಜಿಯು ಆತನಿಗೆ ಹೇಳಿದ್ದನು; ಆದ್ದರಿಂದ ತಾನು ನಿರಾಶೆಯ ಇಲ್ಲವೆ ತಾನಾಜಿಯನ್ನು ದೂಷಿಸುವ ಉದ್ಗಾರವನ್ನು ಹೊರಗೆಡವುವದು ಯೋಗ್ಯವಲ್ಲೆಂದು ಜಗತ್ಸಿಂಗನು ಸುಮ್ಮನೆ ಕುಳಿತಿದ್ದನು. ತಾನಾಜಿಯು ಹೊತ್ತುಬಿದ್ದಾಗ, ಮಾಡುವೆನೆಂದು ಹೇಳಿದಹಾಗೆ ಮಾಡಿತೋರಿಸದೆ ಎಂದೂ ಬಿಡುತ್ತಿದ್ದಿಲ್ಲ. ಆದರೆ ತಾನೊಬ್ಬನೇ ಮೇಲೆ ಏರಿಹೊಗುವ ಸಾಹಸಮಾಡಿದರೆ, ಶೂರರಿಗೆ ಯೋಗ್ಯವಾದ ಮರಣದ ಹೊರತು ಬೇರೆ ಏನೂ ಲಭಿಸಲಾರದೆಂದು ಆತನು ತಿಳಿದೇ ಇದ್ದನು. ನಿನ್ನೆ ಬೆಳಿಗ್ಗೆ ತನ್ನ ಜನರ ಒಂದು ಗುಂಪು ಬರತಕ್ಕದ್ದು, ಇಲ್ಲದಿದ್ದರೆ ಈದಿನ ಬೆಳಿಗ್ಗೆಯಾದರೂ ಬರತಕ್ಕದ್ದು; ಹೀಗಿದ್ದು ಇಷ್ಟು ಹೊತ್ತಾದರೂ ಏನೂ ಗೊತ್ತಾಗದ್ದರಿಂದ ತಾನಾಜಿಯು ಚಿಂತಿಸಿ, ನೋಡಿಬರುವದಕ್ಕಾಗಿ ರಾಯಾಜಿಯನ್ನು ಕಳಿಸಿದ್ದನು; ಆದರೆ ರಾಯಾಜಿಯೂ ಅತ್ತ ಕಡೆಗೇ ಹೋದನು. ಅವನ ಸುದ್ದಿಯೂ ಗೊತ್ತಾಗಲಿಲ್ಲ. ಇದರಿಂದಂತೂ ತಾನಾಜಿಯ ಚಿಂತೆಯು ಮತ್ತಿಷ್ಟು ಹೆಚ್ಚಿತು. ಅವನ ಮನಸ್ಸಿನಲ್ಲಿ ಹಲವು ಪ್ರಕಾರದ ವಿಚಾರಗಳು ಬರುತ್ತಿದ್ದವು; ಆದರೆ ಅವುಗಳೊಳಗಿನ ಯಾವ ವಿಚಾರದಿಂದಲೂ ಅವನಿಗೆ ಸಮಾಧಾನವಾಗಲೊಲ್ಲದು. ಇನ್ನು ತಾನೇ ಸ್ವತಃ ಶೋಧಮಾಡಲಿಕ್ಕೆ ಹೋಗಬೇಕೆಂದು ಆತನು ಯೋಚಿಸಿದನು; ಆದರೆ ರಾಯಾಜಿಯು''ನೀವು ಮನೆಬಿಟ್ಟು ಹೊರಗೆ ಹೋಗಲಾಗದೆ''ಂದು ಸಾರಿಹೇಳಿದ್ದನು. ಜಗತ್ಸಿಂಗನಾದರೂ ಅದರಂತೆಯೇ ಹೇಳಿದನು; ಆದ್ದರಿಂದ ಆ ಮಹಾರಾಷ್ಟ್ರವೀರನು ಚಡಪಡಿಸುತ್ತ ಮನೆ ಹಿಡಿದು ಕುಳಿತುಕೊಳ್ಳಬೇಕಾಯಿತು. ಹಟದಿಂದ ತಾನು ಹೋದರೂ ಪ್ರಯೋಜನವೇನಾಗುವದೆಂಬದು ಆತನಿಗೆ ತಿಳಿಯದಾಯಿತು; ಕಾರಣ ಮತ್ತೆ ಆತನು ತನ್ನ ಮನಸ್ಸಿನಲ್ಲಿ ಹಲವು ತರ್ಕ ವಿತರ್ಕಗಳನ್ನು ಮಾಡುತ್ತ ಕುಳಿತುಕೊಂಡನು. ಅವನು ಮನಸ್ಸಿನಲ್ಲಿ—''ದುರ್ಗವನ್ನು ಕೈವಶಮಾಡಿಕೊಳ್ಳುವದಿಷ್ಟೇ ಇದ್ದರೆ, ಆ ಕೆಲಸವು ಇಂದಿಲ್ಲ ನಾಳೆಯಾದೀತು. ಮಹಾರಾಜರ ಬಳಿಯಲ್ಲಿ ಪ್ರತಿಜ್ಞೆಮಾಡಿ ಬಂದ ಬಳಿಕ ದುರ್ಗವನ್ನು ಸ್ವಾಧೀನಪಡಿಸಿಕೊಳ್ಳದೆಯಂತು ಹೋಗುವದೇ ಇಲ್ಲ; ಆದರೆ ಈ ದಿನ ದುರ್ಗವನ್ನು ಕೈವಶ ಮಾಡಿಕೊಂಡರೆ ಸಾಧಿಸುವ ಮಾತು. ಮುಂದೆ ಹ್ಯಾಗೆ ಸಾಧಿಸೀತು! ಎಂದು ಚಿಂತಿಸತೊಡಗಿದನು. ಅದರಲ್ಲಿ, ಆ ಸಾಧ್ವಿಯ ಬಿಡುಗಡೆಯ ಸಲುವಾಗಿ ಯತ್ನಿಯಿಸುತ್ತಿದ್ದ ಜಗತ್ಸಿಂಗನನ್ನು

ಮೂಲೆಗುಂಪುಮಾಡಿ ಕೂಡ್ರಿಸಿದ್ದಕ್ಕಾಗಿಯಂತೂ ಆತನಿಗೆ ಬಹಳ ಅಸಮಾಧಾನವಾಗಿತ್ತು ಮೂರು ತಾಸಾಯಿತು, ಆರು ತಾಸಾಯಿತು, ಒಂಬತ್ತು ತಾಸಾಯಿತು; ಆದರೂ ರಾಯಾಜಿಯದಾಗಲಿ ಬೇರೆ ಯಾರೊಬ್ಬರದಾಗಲಿ ಯಾವಸುದ್ದಿಯು ಗೊತ್ತಾಗಲಿಲ್ಲ ಆಗ ಮಾತ್ರ ತಾನಾಜಿಯು ತೀರ ನಿರಾಶೆಪಟ್ಟನು. ಆಗ ಆತನು ಮನಸ್ಸಿನಲ್ಲಿ—''ಯಾರೂ ಬಾರದಿದ್ದರೆ, ಕಡೆಗೆ ಸಂಜೆಯಾದ ಕೂಡಲೆ ನಾನೊಬ್ಬನೇ ಉಡದ ಸಹಾಯದಿಂದ ದುರ್ಗವನ್ನು ಏರಿಹೋಗಿ, ಕಾವಲುಗಾರರನ್ನು ತುಂಡರಿಸಿ, ಕಮಲಕುಮಾರಿಯನ್ನು ಬಿಡಿಸುವೆನು; ಮತ್ತು ಆ ಸಾಧ್ವಿಯನ್ನು ಅಲ್ಲಿಯ ರಜಪೂತರಿಗೆ ಒಪ್ಪಿಸಿ—''ಈಕೆಯು ನಿಮ್ಮೆಲ್ಲರ ಒಡಹುಟ್ಟಿದವಳಿರುತ್ತಾಳೆ, ಈಕೆಯ ಪಾತಿವ್ರತ್ಯವನ್ನು ರಕ್ಷಿಸಿರಿ'' ಎಂದು ಹೇಳಿ, ಏನು ಆಗುತ್ತದೆಂಬದನ್ನು ನೋಡುವೆನು.''

ಈ ಮೇರೆಗೆ ತಾನಾಜಿಯು ನಿಶ್ಚಯಿಸಿದರೂ ಮನಸ್ಸಿಗೆ ಸಮಾಧಾನವಾಗ ಲೊಲ್ಲದು. ಈ ನಿಶ್ಚಯವೆಂದರೆ, ತಾನು ದುರ್ಗವನ್ನು ಏರಿಹೋಗಿ ಸಾಯತಕ್ಕದ್ದೆಂದು ನಿರ್ಧರಿಸಿದ ಹಾಗೆಯೇ ಇತ್ತು; ಆದರೆ, ಆಡಿದ ಮಾತಿಗೆ ತಪ್ಪಬಾರದೆಂದು ಆತನು ಹೀಗೆ ನಿಶ್ಚಯಿಸಿದನು. ಆಗ ಆತನ ಮನಸ್ಸಿಗಾಗುತ್ತಿದ್ದ ನೋವನ್ನು ಆತನೇ ಬಲ್ಲನು. ಶೂರನೂ, ಅಭಿಮಾನಿಯೂ, ಸತ್ಯ ಪ್ರತಿಜ್ಞನೂ ಆದ ಪುರುಷನು ತನ್ನ ಬಾಯಿಂದ ಹೊರಟ ಮಾತು ಸುಳ್ಳಾಗಿ ತನ್ನ ಜಾತಿಗೆ ಕಲಂಕವು ತಗಲುವದೆಂಬದನ್ನು ನೋಡಿದಕೂಡಲೆ ಈ ಸ್ಥಿತಿಯಲ್ಲಿ ಬದುಕುವದಕ್ಕಿಂತ ಸಾಯುವದೇಲೇಸೆಂದು ಆತನು ಎಣಿಸುವದು ಸ್ವಾಭಾವಿಕವಾದದ್ದು, ಮಾಡುತ್ತೇನೆಂದು ಹೇಳಿದ ಕಾರ್ಯವು ಆಗಲಿ– ಆಗದಿರಲಿ, ಅದರ ಸಲುವಾಗಿ ಹೆಣಗಿ ಪ್ರಾಣವನ್ನಾದರೂ ಅರ್ಪಿಸಬೇಕೆಂದು ನಿಶ್ಚಯಿಸುವದಾದರೂ ಆ ಮನುಷ್ಯನಿಗೆ ಸ್ವಾಭಾವಿಕ ವಾದದ್ದೇ ಸರಿ! ತಾನಾಜಿಯಾದರೂ ಅದರಂತೆಯೇ ಮನಸ್ಸಿನಲ್ಲಿ ನಿರ್ಧರಿಸಿ ಜಗತ್ಸಿಂಗನನ್ನು ಕುರಿತು ನುಡಿದನೇನಂದರೆ—''ಜಗತ್ಸಿಂಗ, ನೀವು ನಿಮ್ಮ ಹೆಂಡತಿಯನ್ನೂ, ಸಾಧ್ವಿಯಾದ ಕಮಲಕುಮಾರಿಯನ್ನೂ ಬಿಡಿಸುವದಕ್ಕಾಗಿ ಹೊರಟ ದಿವಸವೇ, ನಿಮ್ಮ ಶಿರಸ್ಸನ್ನು ಕೈಯಲ್ಲಿ ತಕ್ಕೊಂಡಿರುತ್ತೀರಿ; ಮತ್ತು ನಾನು ನಿಮ್ಮ ಮುಂದೆ—''ನಾನು ಮಾಘವದ್ಯ ನವಮಿಯು ಹೋಗುವದರೊಳಗಾಗಿ ಆ ಸಾಧ್ವಿಯನ್ನು ಬಿಡಿಸುವೆನು.'' ಎಂದು ಹೇಳಿದ ದಿವಸವೇ, ನಾನಾದರೂ ನನ್ನ ಶಿರಸ್ಸನ್ನು ಕೈಯಲ್ಲಿ ತಕ್ಕೊಂಡಿದ್ದೇನೆ. ಇನ್ನು ಎರಡನೆಯ ವಿಚಾರವೇಕೆ? ಕತ್ತಲಾದ ಕೂಡಲೆ ಇಬ್ಬರೇ ಉಡದ ಸಹಾಯದಿಂದ ದುರ್ಗವನ್ನು ಏರಿ ಹೋಗೋಣ; ಮತ್ತು ಕಮಲಕುಮಾರಿಯನ್ನು ಇಟ್ಟಿರುವ ಮಹಾಲಿನವರೆಗೆ ಹೋಗುವಾಗ ನಡುವೆ ಅಡ್ಡಾದವರನ್ನು ತುಂಡರಿಸುತ್ತ ಆ ಸಾಧ್ವಿಯನ್ನು ಬಿಡಿಸೋಣ. ಈ ಪ್ರಸಂಗದಲ್ಲಿ ಆದದ್ದಾಗಲಿ ಪ್ರತಿಜ್ಞಾಭಂಗಕ್ಕಿಂತ ಮರಣವೇ ಲೇಸು, ಇಬ್ಬರಾದರೆ ಇಬ್ಬರೇ ಆಯಿತು! ಕೆಟ್ಟದ್ದೇನು!!''

ಈ ಮೇರೆಗೆ ತಾನಾಜಿಯು ಆವೇಶದಿಂದ ನುಡಿಯುತ್ತಿರಲು, ಹೀಗೇಕೆ? ನೀವಿಬ್ಬರೆಯೋ ಹೋಗುವವರು? ನಾನು ಮೂರನೆಯವನಿಲ್ಲವೆ'' ಎಂದು ಹೊರಗಿನಿಂದ ಒಳಗೆ ಬರುವ ವನೊಬ್ಬನು ನುಡಿದನು. ಆಗ ತಾನಾಜಿಯು ಆ ದನಿಯನ್ನು ಕೇಳಿ ತಿರುಗಿ ನೋಡಲು—

"ನನ್ನೊಬ್ಬ ಮುದುಕನನ್ನು ಬೇಕಾದರೆ ನಾಲ್ಕನೆಯವನೆಂದು ತಿಳಿಯಿರಿ, ನಾನೇನು ಸುಮ್ಮನೆ ಕೂಡ್ರಲಿಕ್ಕಿಲ್ಲ, ಏನಾದರೂ ಮಾಡೇನು. ಎಲ್ಲರಿಗಿಂತ ಮೊದಲು ದುರ್ಗವನ್ನು ಹತ್ತಿ ಹೋಗುವೆನು. ನಾನು ಎಂಬತ್ತು ವರ್ಷಗಳನ್ನು ಸುಮ್ಮನೆ ಕಳೆದಿರುವದಿಲ್ಲ" ಎಂದು ಮುದುಕನು ಅಂದನು.

ಇವರಿಬ್ಬರ ದನಿಯನ್ನು ಕೇಳಿದ ಕೂಡಲೆ, ಮತ್ತು ಅವರ ಮುಖಮುಖದ್ರೆಯು ದೃಷ್ಟಿಗೆ ಬಿದ್ದಕೂಡಲೆ, ತಾನಾಜಿಯ ಮೋರೆಯು ಹಿಗ್ಗಿ ಇಷ್ಟಗಲವಾಯಿತು. ಆತನು ಕೂಡಲೆ ಆ ಮುದುಕನನ್ನು ಕುರಿತು ನುಡಿದನೇನಂದರೆ—ಸೇಲಾರಮಾವಾ, ನೀವು ಇಷ್ಟರೊಳಗೇ ಬಂದಿರೋ? ರಾಯಾಜಿನಾಯಕರೇ, ಇಷ್ಟು ತಡವಾದ ಕಾರಣವೇನು? ಮುಂಜಾವಿನಿಂದ ನಾನು ಹಾದಿಯನ್ನು ನೋಡುತ್ತ ಇನ್ನು ಏನು ಆಗುವದೋ, ಎಂದು ಗಾಬರಿಯಾಗಿದ್ದೆನು. ನನ್ನ ಧೈರ್ಯವು ಹೋಗಿತ್ತು, ಮಾವಾ, ಸೂರ್ಯಾಜಿಯು ಬಂದನೋ? ಅವನಷ್ಟು ಬಂದನೆಂದರೆ ಉಳಿದವರು ಬಾರದಿದ್ದರೂ ತೊಂದರೆಯಿಲ್ಲ, ಮಾವಾ, ನಿಮಗೆ ಮಾತ್ರ ಬಹಳ ಆಯಾಸ ವಾಯಿತು.

ತಾನಾಜಿಯ ಮಾತುಗಳನ್ನು ಕೇಳಿದಕೂಡಲೆ ಸೇಲಾರಮಾವನು—"ಅಲ್ಲೋ, ಅದರಲ್ಲಿ ಆಯಾಸವೇತರದು? ಏಸಾಜಿ ಕಣೇಕರನು ಐವತ್ತು ಜನರದೇ ಒಂದು ಗುಂಪನ್ನು ತಕ್ಕೊಂಡು ಬಂದಿದ್ದಾನೆ. ಆತನು ನನ್ನನ್ನು ಮುಂದಕ್ಕೆ ಹೋಗಗೊಡಲೊಲ್ಲನು. ಆತನು— "ಮಾವಾ, ಸೂರ್ಯಾಜಿಯು ದೊಡ್ಡ ಗುಂಪನ್ನು ತಕ್ಕೊಂಡು ನಮ್ಮ ಬೆನ್ನಹಿಂದೇ ಬರುತ್ತಾನೆ. ನೀವು ಈಗ ಸುಮ್ಮನೆ ಆಯಾಸ ಮಾಡಿಕೊಳ್ಳಲಿಕ್ಕೆ ಹೋಗಬೇಡಿರಿ, ತಿರುಗಿರಿ ಹಿಂದಕ್ಕೆ" ಎಂದು ಹೇಳಿ ಆತನು ನನ್ನನ್ನು ಹಿಂದಕ್ಕೆ ಕರಕೊಂಡು ಬಂದನು. ಸೂರ್ಯಾಜಿಯು ನಾಲ್ಕು ತಾಸು ರಾತ್ರಿಯ ಸುಮಾರಕ್ಕೆ ನಿಶ್ಚಯವಾಗಿ ಬರುವೆನೆಂದು ನಿನಗೆ ಹೇಳಬೇಕೆಂದು ಏಸಾಜಿ ಕಣೇಕರನು ನನ್ನ ಮುಂದೆ ಹೇಳಿದ್ದಾನೆ. ಇನ್ನು ನಾವು ಮುಂದಿನ ಕೆಲಸಗಳನ್ನು ಮಾಡೋಣ, ಎನ್ನಲು, ಅವರು ನಾಲ್ವರೂ ಮುಂದೆ ಮಾಡತಕ್ಕದ್ದೇನೆಂಬದನ್ನು ನಿಶ್ಚಯಿಸುವದಕ್ಕಾಗಿ ಒತ್ತಟ್ಟಿಗೆ ಕುಳಿತುಕೊಂಡರು. ಸೇಲಾರಮಾವನು ಹೋದಬಳಿಕ ತಾವು ಏನೇನು ಮಾಡಿದೆವೆಂಬದನ್ನು ಆತನಿಗೆ ತಾನಾಜಿಯು ಹೇಳತೊಡಗಿದನು. ಅದನ್ನೆಲ್ಲ ಮಾವನು ಲಕ್ಷಪೂರ್ವಕವಾಗಿ ಕೇಳುತ್ತಿದ್ದನು. ರಾಯಾಜಿಯು ದುರ್ಗವನ್ನೆಲ್ಲ ಸುತ್ತಿನೋಡಿ, ಡೋಣಗಿರಿ ಎಂಬ ಹೆಸರಿನ ಕಡೆವಾಡಿಯಷ್ಟು ಏರಲಿಕ್ಕೆ ಬರುವಹಾಗಿದೆಯೆಂದು ಆತನು ಕಂಡನೆಂತಲೂ, ಅಲ್ಲಿಯೇ ಜಗತ್ಸಿಂಗನು ಇಳಿದು ಬರುವದನ್ನು ನೋಡಿ ಅದೇ ಸ್ಥಲವು ಹತ್ತಿಹೋಗಲಿಕ್ಕೆ ತಕ್ಕದೆಂದು ನಿಶ್ಚಯಿಸಿರುವೆವೆಂತಲೂ ಹೇಳಿ, ಜಗತ್ಸಿಂಗನು ಯಾರು, ಎಲ್ಲಿಯವನು, ಅವನು ಇಲ್ಲಿಗೆ ಯಾಕೆ ಬಂದನು ಮೊದಲಾದ ಸಂಗತಿಗಳನ್ನು ಆ ಸೇಲಾರಮಾವನ ಮುಂದೆ ಹೇಳಿದನು. ಅದನ್ನೆಲ್ಲ ಕೇಳಿ ಆ ವೃದ್ಧ ಸರದಾರನಿಗೆ ಸ್ಫುರಣವು ಉತ್ಪನ್ನವಾಗಿ, ಆತನು ಉದಯಭಾನುವನ್ನು ಬಾಯಿಗೆ ಬಂದ ಹಾಗೆ ಬೈಯತೊಡಗಿದನು. ತಾನಾಜಿಯೂ, ರಾಯಾಜಿಯೂ ಆ ಮುದುಕನನ್ನು ಸುಮ್ಮನಿರಿಸಬೇಕಾದರೆ, ಸಾಕುಸಾಕಾಗಿ ಹೋಯಿತು. ಒಮ್ಮೆ ಆತನು ಸುಮ್ಮನೆ ಕುಳಿತಬಳಿಕ,

ರಾಯಾಜಿ, ತಾನಾಜಿ, ಜಗತ್ಸಿಂಗ ಈ ಮೂವರ ಮತದಂತೆ, ಜಗತ್ಸಿಂಗನು ಇಳಿದು ಬಂದ ಸ್ಥಳವಷ್ಟೇ ಹತ್ತಲಿಕ್ಕೆ ಬರುವಹಾಗಿದೆ, ಬೇರೆ ಯಾವ ಕಡೆಯಿಂದಲೂ ದುರ್ಗವನ್ನು ಹತ್ತಿಹೋಗಲಿಕ್ಕೆ ಬರುವಹಾಗಿಲ್ಲೆಂದು ಗೊತ್ತಾಯಿತು. ರಾಯಾಜಿಯೂ, ತಾನಾಜಿಯೂ ಮೊದಲಿಗೇ ಆ ಸ್ಥಳವನ್ನು ಆರಿಸಿದ್ದರು. ಈ ಮೇರೆಗೆ ಹತ್ತತಕ್ಕ ಸ್ಥಳವು ಗೊತ್ತಾದ ಮೇಲೆ, ಹ್ಯಾಗೆ ಹತ್ತಬೇಕು, ಮೊದಲು ಯಾರು ಹತ್ತಿ ಹೋಗಬೇಕು ಎಂಬ ಪ್ರಶ್ನೆಗಳು ಹೊರಟವು. ಕೂಡಲೆ ಸೇಲಾರಮಾವನು ಮುಂದಕ್ಕೆ ಬಂದು—ನಾನು, ನಾನು ಮೊದಲು ಏರಿಹೋಗಿ ಆ ನಡುವಿನ ಝುಂಜಾರವೆಂಬ ಬಾಗಿಲನ್ನು ತೆರೆಯುತ್ತೇನೆ. ನನ್ನ ಮೈಮೇಲೆ ಎಷ್ಟುಜನ ರಜಪೂತರು ಬರುತ್ತಾರೆ ಬರಲಿ ನೋಡೋಣ. ಮುದುಕರ ಮೈಯಲ್ಲಿ ಜಿಗಟು ಎಷ್ಟು ಇರುತ್ತದೆಂಬದನ್ನಾದರೂ ನೋಡಿರಿ ಹುಡುಗರಿರಾ! ಎಂದು ನುಡಿಯುವಾಗ ಮುದುಕನ ಮುಖಮುದ್ರೆಯು ನೋಡುವ ಹಾಗೆ ಇತ್ತು. ಬಳಿಕ ಆ ಮುದುಕನು—ಪೋರಾ, ತಾನ್ಯಾ, ನಗುತ್ತೀ ಹೌದೆ? ಮುದುಕನು ಒಟಗುಟ್ಟುವದು ವ್ಯರ್ಥವೆಂದು ತಿಳಿದೆಯೋ? ಈ ಮುದುಕನ ಎಲುವುಗಳು ಉಡದ ಸರಪಳಿಯಲ್ಲಿ ಹಿಡಕೊಂಡು 'ಚಟ ಚಟ' ಏರಿಹೋಗುವಾಗ, ಮುದುಕನು ಹ್ಯಾಗಿರುತ್ತಾನೆಂಬದು ತಿಳಿದೀತು ಮಗನೇ, ಈಗ ಹ್ಯಾಗೆ ತಿಳಿದೀತು? ನನ್ನ ತೋಳುಗಳು ಈಗ ಹಾರುತ್ತವೆ ನೋಡಿರಿ, ಎಂದು ನುಡಿದು ಮುದುಕನು ಅಷ್ಟಕ್ಕೆ ಸುಮ್ಮನಾಗದೆ ರಾಯಾಜಿಯ ಕಡೆಗೆ ನೋಡಿ—ತಕ್ಕೊಂಡುಬರ್‍ರಿ ಆ ಪೆಟ್ಟಿಗೆಯನ್ನು ನಮ್ಮ ಯಶವಂತಬಾಯಿ ಯನ್ನು ಒಮ್ಮೆ ನೋಡೋಣ; ಮತ್ತು ಆಕೆಗೆ ಸಿಂಧೂರವನ್ನು ಹಚ್ಚಿ, ಆಕೆಯ ಮುತ್ತಿನ ದಂಡೆಯನ್ನು ಆಕೆಯ ತಲೆಗೆ ಹಾಕೋಣ. ಯಾಕೋ ತಾನ್ಯಾ, ಹೀಗ್ಯಾಕೆ ಸುಮ್ಮನೆ ಕುಳಿತು ಕೊಂಡೆ? ನಾನು ಮೊದಲು ಹತ್ತಿ ಹೋಗುತ್ತೇನೆಂದದ್ದು ಕೇಳಿಸಲಿಲ್ಲವೆ? ಎಂದನು.

ತಾನಾಜಿಯು ಸ್ವಲ್ಪ ಮೆಲ್ಲಗೆ ಮಾತಾಡೆಂದು ಮಾವನಿಗೆ ಸನ್ನೆ ಮಾಡಿದನು; ಆದರೆ ಆ ಮುದುಕನು ಕೇಳಿದರಷ್ಟೇ. ಆಗ ತಾನಾಜಿಯು ಮಾವನಿಗೆ ಮಾವಾ, ಈಗ ಹತ್ತುವ ಪ್ರಸಂಗವಿಲ್ಲ. ಮುಂದೆ ಏನು ಮಾಡತಕ್ಕದ್ದೆಂಬದನ್ನು ಈಗ ನಿಶ್ಚಯಿಸಬೇಕಾಗಿದೆ. ಮೊದಲು ಅದರ ಸಂಬಂಧದಿಂದ ಮಾತಾಡೋಣ. ಮೇಲೆ ಹತ್ತುವ ಪ್ರಸಂಗ ಬಂದಾಗ ನೀವೇ ಮುಂದೆ, ನಾನು ಹಿಂದೆ ಎಂದು ಹೇಳಿ ಹ್ಯಾಗಾದರೂ ಮುದುಕನನ್ನು ಸುಮ್ಮನಿರಿಸಿದನು. ಮುದುಕನು ಒಳ್ಳೇ ಆವೇಶಗೊಂಡಿದ್ದನು. ಮುಂದೆ ಬಹಳ ಹೊತ್ತು ಆರೆದಾಟವಾಗಿ, ಏಸಾಜಿ ಕಣೇರಕರನಿಗೆ— "ನೀನು ನಿನ್ನ ಕೈಕೆಳಗಿನ ನಲವತ್ತೆಂಟು ಜನರೂ ಹೊತ್ತು ಮುಣುಗಿದ ಕೂಡಲೆ ಡೋಣಗಿರಿಯ ಮಗ್ಗಲಿಗೆ ಬರಬೇಕೆಂತಲೂ, ನಿನ್ನ ಉಳಿದ ಇಬ್ಬರನ್ನು ಕಳಿಸಿ, ಹಾದಿಯಲ್ಲಿ ಬರುತ್ತಿರುವ ಸೂರ್ಯಾಜಿಯ ಜನರ ಗುಂಪನ್ನು ನಿಲ್ಲಿಸಿ ಅವರನ್ನು ಕಲ್ಯಾಣದ ಬಾಗಲಿ ಕೆಳಗೆ ಬಂದು ನಿಲ್ಲುವಂತೆ ವ್ಯವಸ್ಥೆಮಾಡಬೇಕೆಂತಲೂ ಹೇಳಿ ಕಳಿಸಿ ಕೊಡಬೇಕೆಂದು ಗೊತ್ತಾಯಿತು. ತಾವು ತಮ್ಮ ಐವತ್ತು ಜನರೊಡನೆ ದುರ್ಗವನ್ನು ಹತ್ತಿಹೋದರೆ ಕಲ್ಯಾಣದ ಬಾಗಿಲನ್ನು ತೆಗೆಯುವದಕ್ಕೆ ಏನೂ ತೊಂದರೆ ಆಗಲಿಕ್ಕಿಲ್ಲವೆಂತಲೂ, ಒಮ್ಮೆ ಬಾಗಿಲು ತೆಗೆದುಬಿಟ್ಟರೆ, ತನ್ನ ಜನರೊಡಗೆ ಕೆಳಗೆ ನಿಂತಿದ್ದ ಸೂರ್ಯಾಜಿಯು ಮೇಲಕ್ಕೇರಿ

ಬಂದು ರಜಪೂತರ ದೂಳಹಾರಿಸುವನೆಂತಲೂ ತಾನಾಜಿಯೂ, ಸೇಲಾರಮಾವನೂ, ಜಗತ್ಸಂಗನೂ ನಂಬಿದ್ದನು. ಎಲ್ಲರ ಸಮ್ಮತಿಯಿಂದ ಈ ಮಾತಿನ ನಿರ್ಧಾರವಾದ ಬಳಿಕ ರಾಯಾಜಿಯು ತನ್ನ ಒಳ್ಳೆಯ ನಂಬಗೆಯ ಒಬ್ಬ ಮನುಷ್ಯನನ್ನು ಕರೆದು, ಪಿಸಾಜಿ ಕಣೇರಕರನ ಜನರು ಅಡಗಿಕೊಂಡು ಕುಳಿತಲ್ಲಿಗೆ ಹೋಗಿ ಗೊತ್ತಾದ ಮಾತುಗಳನ್ನು ಕಣೇರಕರನಿಗೆ ತಿಳಿಸುವದಕ್ಕಾಗಿ ಆತನನ್ನು ಕಳಿಸಿದನು. ಇಷ್ಟಾಗುವದರೊಳಗೆ ಮೂರು ಸಂಜೆಯಾಯಿತು ಕತ್ತಲೆ ಬೀಳತೊಡಗಿತು. ತಾನಾಜಿಯು ಆದಿನ ಇಡಿಯ ದಿವಸ ಬಾಯಲ್ಲಿ ನೀರು ಹಾಕಿದ್ದಿಲ್ಲ. ಆದರೂ ಹಸಿವೆ ನೀರಡಿಕೆಗಳೆಂಬ ವಿಕಾರಗಳು ಇರುತ್ತವೆಂಬದಾದರೂ ಅವನಿಗೆ ಗೊತ್ತಿರುವದೋ ಇಲ್ಲವೋ ಎಂಬಂತೆ ಅವನ ವರ್ತನವು ತೋರಿತು. ಆತನು ಉಂಡಿರುವನೋ ಉಪವಾಸ ವಿರುವನೋ ಎಂಬದರ ವಿಚಾರವನ್ನಾದರೂ ಆಗ ಯಾರು ಮಾಡಬೇಕು? ಸೇಲಾರಮಾವನಿಗೆ ಸ್ವಲ್ಪ ಸಂಶಯ ಬಂದು, ಆತನು ಆ ಬಗ್ಗೆ ತಾನಾಜಿಯನ್ನು ಕೇಳಲು— 'ದುರ್ಗವು ಕೈವಶವಾಗಿ, ಆ ಸತಿಯ ಬಿಡುಗಡೆಯಾಗದ ಹೊರತು ಬಾಯಲ್ಲಿ ನೀರು ಹಾಕಲಿಕ್ಕಿಲ್ಲೆಂದು ನಾನು ಇಂದು ನಿಶ್ಚಯಮಾಡಿದ್ದೇನೆ''ಂದು ಹೇಳಿದನು. ಜಗತ್ಸಿಂಗನಾದರೂ ತಾನಾಜಿಯಂತೆಯೇ ಉತ್ತರ ಕೊಟ್ಟನು. ಹೊರತು ಆಗ ಊಟದ ಕಾಲೊಳಗೆ ಹೊತ್ತು ಕಳೆಯುವ ಹಾಗೆ ಇಲ್ಲದ್ದರಿಂದ ಅವರಿಗೆ ಊಟದ ಬಗ್ಗೆ ಯಾರೂ ಹೆಚ್ಚಿಗೆ ವಿಚಾರವನ್ನು ಮಾಡಲಿಲ್ಲ. ಹೊತ್ತು ಮುಣುಗಿ ಕತ್ತಲಾಗಲು, ಸೇಲಾರಮಾವನು ತನ್ನ ಸಂಗಡ ತಕ್ಕೊಂಡು ಬಂದಿದ್ದ ಪೆಟ್ಟಿಗೆಯೊಳಗಿಂದ ಯಶವಂತಿಯೆಂಬ ಹೆಸರಿನ ಉಡವನ್ನು ಹೊರಗೆ ತೆಗೆದನು. ಈ ಉಡದ ಸಹಾಯದಿಂದ ಶಿವಾಜಿ ಮಹಾರಾಜರೂ, ಏಸಾಜಿಕಂಕ, ತಾನಾಜಿ ಮಾಲಸುರೆ ಮೊದಲಾದವರು ಎಷ್ಟೋ ಕೋಟೆಗಳನ್ನು ಹತ್ತಿ ಕೈವಶಮಾಡಿಕೂಂಡಿದ್ದರು. ಇದಕ್ಕಾಗಿ ಆ ಹೆಣ್ಣು ಉಡಕ್ಕೆ ಅವರು ಲೀಲೆಯಿಂದಲೂ, ಶುಭದಾಯಕವೆಂಬ ಕಾರಣದಿಂದಲೂ 'ಯಶವಂತಿ' ಎಂದು ಹೆಸರನ್ನಿಟ್ಟಿದ್ದರು. ಸೇಲಾರಮಾವನು ಯಶವಂತಿಯ ಹಣೆಗೆ ಸಿಂಧೂರವನ್ನು ಹಚ್ಚಿ, ಅದರ ಸಲುವಾಗಿಯೇ ಮಾಡಿಸಿಟ್ಟಿದ್ದ ಒಂದು ಮುತ್ತಿನ ದಂಡೆಯನ್ನು ಅದರ ತಲೆಗೆ ಹಾಕಿ ಕೋಟೆಯ ಮೇಲೆ ಬಿಡುವದಕ್ಕಾಗಿ ಅದನ್ನು ಸಜ್ಜುಗೊಳಿಸಿದನು. ಸುಮಾರು ಐದುಗಳಿಗೆ ರಾತ್ರಿಯ ಒಳಹೊರಗೆ, ಪಿಸಾಜಿ ಕಣೇರಕರನು ತನ್ನ ಜನರನ್ನು ಕರಕೊಂಡು ಬಂದು ದೋಣಗಿರಿಯ ಬಳಿಯಲ್ಲಿ ನಿಂತುಕೊಂಡನು. ಅವರಿಗೆ ಹಾದಿಯನ್ನು ತೋರಿಸಿ ಕರಕೊಂಡು ಬರುವದಕ್ಕಾಗಿ ರಾಯಾಜಿಯ ಒಬ್ಬ ಮನುಷ್ಯನೇ ಹೋಗಿದ್ದನು. ಕತ್ತಲೆಯ ರಾತ್ರಿಯು, ಭಯಂಕರವಾದ ಅಡವಿಯು, ವೃಕ್ಷಗಳ ಹಾಗು ಬಿದಿರ ಮೆಳೆಗಳ ದಟ್ಟಣೆ, ಮೇಲೆ ಹುಲಿ ಕರಡಿಗಳ ಅಂಜಿಕೆ, ಆದರೆ ಶಿವಾಜಿಯ ಮಾವಳರು ಇಂಥ ಅಡವಿಗೂ, ಸಂಕಟಕ್ಕೂ ಸೊಪ್ಪುಹಾಕುವರೇ? ಹಾ ಹಾ ಅನ್ನುವದರೊಳಗಾಗಿ ಅವರು ಹಾದಿಯನ್ನು ಹುಡುಕಿಕೊಂಡರು. ಒಂದೊಂದು ಕಡೆಯಲ್ಲಿ ಯಾವನಾದರೊಬ್ಬನು ಎಡವಿ ಬೀಳುತ್ತಿದ್ದನು; ಆದರೆ ವೀರಶ್ರೀಯಿಂದ ಆತನು ಎದ್ದು ಮತ್ತೆ ಹಾದಿಯನ್ನು ಹಿಡಿಯುತ್ತಿದ್ದನು. ಹೀಗೆ ಮಾಡುತ್ತ ಮಾಡುತ್ತ ಮೇಲೆ ಹೇಳಿದಂತೆ ಐದುಗಳಿಗೆಯ ಹೊರ ಒಳಗೆ ದೋಣಾಗಿರಿಯ ಕಡಿವಾಡಿಯ ಕೆಳಗಿನ ಕಂದರದಲ್ಲಿ ಅವರು ಬಂದು ನಿಂತರು. ನಮ್ಮ ವೀರರ ಚೌಕಳಿಯಂತೂ ಮೊದಲೇ ಬಂದು ನಿಂತಿತ್ತು, ಪರಸ್ಪರರ ಭೆಟ್ಟಿಯಾದ

ಕೂಡಲೆ,ಆ ನಲವತ್ತೆಂಟು ಜನರಲ್ಲಿ ಕೆಲವರ ಮೈಮೇಲೆ ಎಚ್ಚರವು ಉಳಿಯಲಿಲ್ಲ, ಅವರು ವೀರಶ್ರೀಯ ಹಾಗು ಆನಂದದ ಭರದಲ್ಲಿ ''ಹರಹರ ಮಹಾದೇವ'' ಎಂದು ಒದರಿದರು. ಕೂಡಲೆ ರಾಯಾಜಿಯೂ, ತಾನಾಜಿಯೂ ಅವರನ್ನು ಸಿಟ್ಟುಮಾಡಿ ಸುಮ್ಮನಿರಿಸಿದರು; ಆದರೂ ಮೇಲಿನ ಗಸ್ತಿಯ ಸಿಪಾಯಿಗಳು, ಕೆಳಗೆ ಗದ್ದಲವೇನೆಂದು ಕೇಳಿದರು. ಅದಕ್ಕೆ ಮಾದಿಗರೂ, ಮೇಟಿಯೊಳಗಿನ ಕೋಳಿಯ ಜನರೂ— ''ಏನೂ ಇಲ್ಲ, ನೀವು ಸ್ವಸ್ಥವಾಗಿ ಇರ್ರಿ. ಈ ರಾಯಾಜಿಯ ಲಗ್ನದ ಗೊಂದಲವೇ ಇನ್ನೂ ನಡೆದಿರುತ್ತದೆ. ಆ ಜನರು ಉಂಡು ಒದರುತ್ತಾರೆ. ಉಳಿದಗಸ್ತಿಯು ಎಲ್ಲ ಸರಿಯಾಗಿರುತ್ತದೆ, ಎಂದು ಹೇಳಿ ಅವರನ್ನು ಸಮಾಧಾನಗೊಳಿಸಿದರು! ಬಹುದಿವಸದಿಂದ ಸಮಾರಂಭವು ನಡೆಯುತ್ತ ಬಂದದ್ದರಿಂದ ಮೇಲಿನ ಸಿಪಾಯಿಗಳು ಅಷ್ಟು ಸೂಕ್ಷ್ಮವಿಚಾರಕ್ಕೆ ಹೋಗಲಿಲ್ಲ. ಮೇಲಾಗಿ ಅವರಲ್ಲಿ ಅಷ್ಟು ಶೋಧಕ ಬುದ್ಧಿಯೂ ಇದ್ದಿಲ್ಲ.

ಇತ್ತ ತಾನಾಜಿಯು, ಒದರಿದ ಜನರಿಗೆ ಅವರ ಅವಿಚಾರಕ್ಕಾಗಿ ಮತ್ತೊಮ್ಮೆ ಸಿಟ್ಟುಮಾಡಿ, ಉಡವನ್ನು ಹೊರಗೆ ತೆಗೆದನು; ಮತ್ತು ಆದಕ್ಕೆ ನಮಸ್ಕಾರಮಾಡಿ— ''ಜಯ ಅಂಬಿಕೇ, ನಿನ್ನ ಕೃಪೆಯಿರಲಿ'' ಎಂದು ನುಡಿದು ಅದನ್ನು ಸೇಲಾರಮಾವನ ಕೈಯಲ್ಲಿ ಕೊಟ್ಟು— ಮಾವಾ, ನೀವು ಹಿರಿಯರು. ನೀವು ಕೈ ಮುಟ್ಟಿ ಯಶವಂತಿಯನ್ನು ಬಿಡಲಿಕ್ಕೇಬೇಕು; ಆದ್ದರಿಂದ ನಮಸ್ಕಾರವನ್ನು ಮಾಡಿ, ನಾನು ಹೇಳಿದ ನಿಟ್ಟಿಗೆ ಯಶವಂತಿಯನ್ನು ಮೇಲಕ್ಕೆ ಏರಿಬಿಡಿರಿ, ಎಂದು ಹೇಳಿದನು.

ಸೇಲಾರಮಾವನು ಉಡವನ್ನು ಕೈಯಲ್ಲಿ ಹಿಡಕೊಂಡು, ಅದಕ್ಕೆ ನಮಸ್ಕಾರ ಮಾಡಿ,ಅದರ ಹಣೆಯ ಮೇಲಿನ ಸಿಂಧೂರವನ್ನು ತನ್ನಹಣೆಗೆ ಹಚ್ಚಿಕೊಂಡು ಉಳಿದವರ ಹಣೆಗೂ ಹಚ್ಚಿದನು; ಮತ್ತು ಭವಾನಿಯ ಸ್ಮರಣಮಾಡಿ ತಾನಾಜಿಯು ತೋರಿಸಿಕೊಟ್ಟ ಸ್ಥಳದ ಸುಮಾರಕ್ಕೆ ಉಡವನ್ನು ಬಿಟ್ಟನು; ಆದರೆ ಆ ಉಡಕ್ಕೆ ಏನಾಯಿತೋ ತಿಳಿಯದು. ಅದು ಆ ದಿನ ಮೇಲಕ್ಕೇರಿ ಹೋಗದೆ ಹಿಂದಿರುಗಿ ಬಂದಿತು. ಅದನ್ನು ನೋಡಿದ ಕೂಡಲೇ ಸೇಲಾರ ಮಾವನ ಎದೆಯು ಧಸಕ್ಕೆಂದಿತು. ಮೇಲಕ್ಕೆ ಕಳಿಸಿದ ಉಡವು ಹಿಂದಿರುಗಿ ಬರುವದೆಂದರೆ ಬಹುದೊಡ್ಡ ಅಪಶಕುನವು. ಇವೊತ್ತಿನವರೆಗೆ ಎಷ್ಟೋ ಕೋಟೆಗಳ ಮೇಲೆ ಆ ಉಡವನ್ನು ಬಿಟ್ಟಿದ್ದರೂ, ಅದು ಇಂದಿನ ಹಾಗೆ ಎಂದೂ ತಿರುಗಿಬಂದಿದ್ದಿಲ್ಲ. ಹೀಗಿದ್ದು, ಈ ಹೊತ್ತೇ ಹಿಂದಿರುಗಿ ಬಂದದ್ದರಿಂದ ಏನಾದರೂ ಅಪಘಾತವಾಗುವದೆಂದು ಮುದುಕನ ಮನಸ್ಸಿಗೆ ಅಸಮಾಧಾನವಾಯಿತು. ಆತನು ತಾನಾಜಿಗೆ—ತಾನ್ಯಾ, ಇಂದು ಶಕುನವು ನೆಟ್ಟಗಾಗಲಿಲ್ಲ. ಇಂದು ನೀನು ಈ ಕಾರ್ಯಕ್ಕೆ ಕೈಹಾಕಬೇಡ. ಈವೊತ್ತಿನವರೆಗೆ ಎಂದೂ ಹಿಂದಿರುಗದ ಈ ಯಶವಂತಿಯು, ಇಂದು ಹಿಂದಿರುಗಿರುತ್ತದೆ. ಶಕುನವು ಕೆಟ್ಟದು, ಹಿಂದಿನಿಂದ ಏನಾದರೂ ಹೆಚ್ಚು ಕಡಿಮೆಯಾದರೆ ನೆಟ್ಟಗಲ್ಲ ಎಂದನು.

ತಾನಾಜಿಯಂತೂ ಇಂದೇ ದುರ್ಗವನ್ನು ಕೈವಶಮಾಡಿಕೊಂಡು, ಸಾಧ್ವಿಯಾದ ಕಮಲಕುಮಾರಿಯನ್ನು ಬಿಡಿಸುವೆನೆಂದು ಪ್ರತಿಜ್ಞೆ ಮಾಡಿದ್ದನು. ಅಂದ ಬಳಿಕ ಆತನು ಸೇಲಾರಮಾವನ ಇಂಥ ಮಾತುಗಳನ್ನು ಕೇಳುವನೇ? ತಾನಾಜಿಯು ಸಂತಾಪದಿಂದ ಉಡದ

ಸರಪಳಿಯನ್ನು ಜಗ್ಗಿ—ಯಶವಂತೀ, ಇಂದಿಗೆ ಏನಿಲ್ಲೆಂದರೂ ಇಪ್ಪತ್ತೇಳು ಕೋಟೆಗಳನ್ನು ನಿನ್ನ ಸಹಾಯದಿಂದ ತಕ್ಕೊಂಡೆನು. ಈಗ ನೀನು ಇಂಥ ಹೊತ್ತಿನಲ್ಲಿ ಘಾತವಾಡೇನೆಂದರೆ ನಾನು ಹ್ಯಾಗೆ ನಡೆಯಗೊಟ್ಟೇನು? ಈಗ ಇನ್ನೊಮ್ಮೆ ನಾನು ನಿನ್ನನ್ನು ಮೇಲಕ್ಕೆ ಕಳಿಸಿಕೊಡುತ್ತೇನೆ. ಎಚ್ಚರದಿಂದ ಮೇಲಕ್ಕೇರಿ ಹೋಗಿ ತಕ್ಕ ಸ್ಥಳದಲ್ಲಿ ಗಟ್ಟಿಯಾಗಿ ಹಿಡಕೊಂಡರೆ, ಒಳ್ಳೇದಾಯಿತು. ಇಲ್ಲದಿದ್ದರೆ ಇದೇ ಕತ್ತಿಯಿಂದ ನಿನ್ನನ್ನು ತುಂಡುತುಂಡಾಗಿ ಕಡಿದು, ಈ ಜನರ ತಂಗಳ ಒಣರೊಟ್ಟಿಗೆ ಸಾಧನ ಮಾಡಿಕೊಡುವೆನು ಎಂದು ನುಡಿದು ಆತನು ಆ ಉಡವನ್ನು ಮತ್ತೆಬಿಟ್ಟನು. ತಾನಾಜಿಯು ತನಗೆ ಬಹುದೊಡ್ಡ ಅಂಜಿಕೆಯನ್ನು ತೋರಿಸಿದ್ದು ಯಶವಂತಿಗೆ ತಿಳಿಯಿತೋ ಏನೋ ಎಂಬಂತೆ, ಅದು ಮೇಲಕ್ಕೆರಹತ್ತಿದ್ದು ಕೆಳಗೆ ಬರಲಿಲ್ಲ, ಅದು ಸರಸರ ಮೇಲಕ್ಕೇರಿ ಹೋಗಿ ಒಂದು ಹುರಬರುಕು ಸ್ಥಳವನ್ನು ಗಟ್ಟಿಮುಟ್ಟಿಯಾಗಿ ಉಗುರುಗಳನ್ನು ಊರಿಕೊಂಡು ಭದ್ರವಾಗಿ ಕುಳಿತುಕೊಂಡಿತು. ತಾನಾಜಿಯ ಆ ಆವೇಶದ ಮಾತುಗಳನ್ನು ಕೇಳಿ ಉಳಿದವರೂ ಆವೇಶಗೊಂಡರು. ''ಉಡವು ಗಟ್ಟಿಯಾಗಿ ಕುಳಿತುಕೊಂಡದೆಯೋ ಇಲ್ಲವೋ ಎಂಬುದನ್ನು ನೋಡುವದಕ್ಕಾಗಿ ಯಾರದಾರೂ ಮುಂದಾಗುವಿರೋ, ನಾನೇ ನೋಡಲೋ'' ಎಂದು ತಾನಾಜಿಯು ಕೇಳಿದಕೂಡಲೇ, ಮೋಹಿತೆ, ಜವ್ಹಾಣ, ಮಾಹಡಿಕ, ಕಂಕ, ಕಣೇಕರ, ಜಾಧವ, ಶೇಲಾರ ಇವರಲ್ಲಿ ಪ್ರತಿಯೊಬ್ಬರು ಉಡದ ಸರಪಳಿಗೆ ಕೈಹಾಕಲಿಕ್ಕಿ ಮುಂದುವರಿದರು; ಆದರೆ ತಾನಾಜಿಯು ಹೀಗೆ ಕೇಳಿ ಜನರ ಪರೀಕ್ಷೆಯನ್ನು ಮಾತ್ರಮಾಡಿದನು. ಮೊದಲಿಗೆ ಏರುವದಕ್ಕಾಗಿ ತಾನೇ ಮುಂದಾದನು. ತಾನು ಮುಂದೆ ಏರಿ ಹೋದ ಹೊರತು ಎರಡನೆಯ ವರಿಗೆ ಏರಿಲಿಕ್ಕೆ ಸ್ಫೂರ್ತಿಯಾಗುವದಿಲ್ಲೆಂದು ಆತನು ತಿಳಿದಿದ್ದನು. ಆತನು ಸೇಲಾರಮಾವನಿಗೆ—ಮಾವಾ, ನಾನು ಮೇಲಕ್ಕೆ ಏರಿಹೋಗಿ ಮಾಡತಕ್ಕದ್ದನ್ನು ಮಾಡುವೆನು. ನೀವು ಒಬ್ಬ ಮನುಷ್ಯನು ಮೇಲಕ್ಕೆ ಏರಿಹೋಗುವವರೆಗೆ ಮತ್ತೊಬ್ಬನನ್ನು ಸರಪಳಿಗೆ ಕೈಹಚ್ಚಗೊಡ ಬೇಡಿರಿ. ಇಲ್ಲದಿದ್ದರೆ ಭಾರವು ಹೆಚ್ಚಾಗಿ ನಡುವೇ ಹಗ್ಗವು (ಸರಪಳಿಯು) ಹರದೀತು ಎಂದು ಹೇಳಿದನು. ಸೇಲಾರಮಾವನು ಏರುವದಕ್ಕೆ ಮುಂದಾಗುವದರೊಳಗೆ ತಾನಾಜಿಯು ತನ್ನ ಪಟ್ಟಾಕತ್ತಿಯನ್ನು ಬಾಯಲ್ಲಿ ಹಿಡಕೊಂಡು ಬಾಣ–ಬತ್ತಳಿಕೆ–ಢಾಲು ಇವನ್ನು ಸಾವರಿಸಿ ಕೊಂಡು ಹಾ ಹಾ ಅನ್ನುವದರೊಳಗಾಗಿ ಮೇಲಕ್ಕೇರಿ ಹೋಗಿ ಮುಟ್ಟಿದನು. ಆಮೇಲೆ ಜಗಿತ್ಸಿಂಗನು ಮತ್ತೆ ಯಾರನ್ನೂ ಮುಂದಕ್ಕೆ ಬರಗೊಡದೆ— ''ನಾನು ಮುಂದೆ ಹೋಗಿ ನಿಮಗೆ ತಿಳಿಸುತ್ತೇನೆ. ಮೇಲೆ ಏನಿರುತ್ತದೆಂಬದನ್ನು ನೋಡುತ್ತೇನೆ. ನಾನು ಮೇಲಿನ ಸಂಗತಿಗಳನ್ನು ಬಲ್ಲವನಾದ್ದರಿಂದ ತಾನಾಜಿರಾಯನಿಗೆ ನನ್ನಿಂದ ಬಹಳ ಉಪಯೋಗವಾಗ ಬಹುದು'' ಎಂದು ಹೇಳಿ ಹಗ್ಗಕ್ಕೆ ಕೈಹಾಕಿದನು. ಪಾಪ! ಅವನ ಕಾಲಿನಗಾಯವು ಇನ್ನೂ ಪೂರಾ ಮಾದಿದ್ದಿಲ್ಲ; ಆದರೆ ಆತನು ಜಾತಿಯ ಶೂರ ರಜಪೂತನಾದ್ದರಿಂದ ಹೇಡಿಯಂತೆ ಹೇಗೆ ಹಿಂದೆ ಉಳಿದಾನು! ''ಜಯಏಕಲಿಂಗಜೀಮಹಾರಾಜ'' ಎಂದು ನುಡಿದು ಬಾಯಲ್ಲಿ ಪಟ್ಟಾಕತ್ತಿಯನ್ನು ಹಿಡಿದವನೇ ನೋಡನೋಡುವದರೊಳಗೆ ಮೇಲಕ್ಕೇರಿ ಹೋದನು. ಮೇಲಕ್ಕೆ ಹೋದಬಳಿಕ ತಾನು ಮುಟ್ಟಿದ ಬಗ್ಗೆ ಕೆಳಗಿನವರಿಗೆ ತಿಳಿಸಿದನು. ಆಮೇಲೆ ಒಬ್ಬನ ಹಿಂದೆ ಒಬ್ಬನಂತೆ ಎಲ್ಲರೂ ಏರಿ ಹೋಗತೊಡಗಿದರು.

ತಾನಾಜಿಯು ಮೇಲಕ್ಕೇರಿ ಹೋದವನು, ಅಲ್ಲಿಯೇ ನಿಂತುಕೊಂಡನು. ಜಗತ್ಸಿಂಗನು ಮಾತ್ರ ಕೋಟೆಯಮೇಲೆ ಯಾವ ಸ್ಥಿತಿಯು ಇರುತ್ತದೆಂಬದನ್ನು ನೋಡುವದಕ್ಕಾಗಿ ಅತ್ತಿತ್ತ ತಿರುಗಾಡಲಿಕ್ಕೆ ಹೋದನು. ಯಾರಾದರೂ ಏನಾದರೂ ಕೇಳಿದರೆ, ಆತನು ರಜಪೂತ ಭಾಷೆಯಿಂದ ಉತ್ತರಕೊಡುತ್ತಿದ್ದನಾದ್ದರಿಂದ, ಇವನು ಮೋಸಮಾಡಿ ಬಂದವನೆಂದು ಯಾರಿಗೂ ಸಂಶಯ ಬರುವ ಸಂಭವವೇ ಇದ್ದಿಲ್ಲ. ಇತ್ತ ತಾನಾಜಿಯು ತನ್ನ ಜನರು ಮೇಲಕ್ಕೆ ಬಂದಬಂದಂತೆ ಅವರಿಗೆ ತಮ್ಮ ಶಸ್ತ್ರಗಳನ್ನು ಸಜ್ಜುಮಾಡಿಕೊಳ್ಳ ಹೇಳಿ, ಸವನೆಲದಲ್ಲಿ ಅಡ್ಡಬಿದ್ದುಕೊಳ್ಳಿರೆಂದು ಅಪ್ಪಣೆಮಾಡಿದನು. ಹನ್ನೆರಡು ಜನ ಮಾವಳರು ಮೇಲಕ್ಕೇರಿ ಬಂದ ಬಳಿಕ ಅವರು ಗೂಟವನ್ನು ಜಡಿದು, ಮತ್ತೆ ಎರಡು ಹಗ್ಗಗಳನ್ನು ಕಟ್ಟಿದರು; ಆದರೆ ಅಷ್ಟರಲ್ಲಿ ಝುಂಜಾರವೆಂಬ ಹೆಸರಿನ ಹುಡೆಯ ಆಚೆಯ ಮಗ್ಗಲಿಗೆ ಒಬ್ಬ ರಜಪೂತ ಸಿಪಾಯಿಯು ಬಂದಿದ್ದನು. ಆತನಿಗೆ ಡೋಣಗಿರಿಯ ಕಂದರದಲ್ಲಿ ಏನೋ ಸುಳಿದಾಟವು ಕಾಣುತ್ತದೆಂದು ಸಂಶಯವು ತಟ್ಟಿ, ಆತನು ಗಟ್ಟಿಯಾಗಿ ಗದ್ದರಿಸಿ, ಕೆಳಗಿನ ಮಾದರನ್ನು, ಕೋಳಿಯ ಜನರನ್ನೂ ಕೆಳಗೆ ಗದ್ದಲವೇನೆಂದು ಕೇಳಿದನು. ಅದಕ್ಕೆ ಹಿಂದಿನಂತೆಯೇ ಉತ್ತರವು ದೊರೆಯಿತು. ಆದರೆ ಆ ಉತ್ತರದಿಂದ ಆ ರಜಪೂತ ಸಿಪಾಯಿಯ ಸಮಾಧಾನ ವಾದಂತೆ ತೋರಲಿಲ್ಲ. ಆದ್ದರಿಂದ ಜನರ ಸುಳಿದಾಟವು ಎಲ್ಲಿ ನಡೆದಿರುವದೆಂಬದನ್ನು ಗೊತ್ತು ಹಚ್ಚುವದಕ್ಕಾಗಿ ತಾನಾಜಿಯ ಜನರು ಏರಿ ಬರುತ್ತಿದ್ದ ಮಗ್ಗಲಿಗೆ ಆತನು ಬರತೊಡಗಿದನು. ಕತ್ತಲೆಯ ರಾತ್ರಿಯಾದ್ದರಿಂದ ಆ ಬರುವ ಮನುಷ್ಯನು ಎಲ್ಲಿ ಇರುತ್ತಾನೆಂಬದು ಕಾಣಿಸುತ್ತಿದ್ದಿಲ್ಲ. ಆದರೆ ಗುರಿನೋಡಿ ಬಾಣಹೊಡೆಯಲಿಕ್ಕೆ ತಾನಾಜಿಗೆ ಮನುಷ್ಯನನ್ನು ನೋಡಲೇ ಬೇಕಾಗುತ್ತಿತ್ತೆಂಬ ಹಾಗಿದ್ದಿಲ್ಲ. ಆತನಿಗೆ ಶಬ್ದವೇಧದ ಜ್ಞಾನವು ಚನ್ನಾಗಿ ಇದ್ದದ್ದರಿಂದ ಆತನು ಕಾಲಸಪ್ಪಳದ ಮೇಲಿಂದಲೇ, ಬರುವ ಮನುಷ್ಯನ ಮೇಲೆ ಬಾಣವನ್ನುಬಿಟ್ಟನು. ಅದು ತಪ್ಪದೆ ಆ ಸಿಪಾಯಿಯ ಎದೆಗೆ ಬಡೆದು ಆತನು ದೊಪ್ಪನೆ ನೆಲಕ್ಕೆಬಿದ್ದನು. ಬಾಣವು ಆಯಕಟ್ಟಿಗೆ ಬಡೆದದ್ದರಿಂದ ನೆಲಕ್ಕುರುಳಿದ ಸಿಪಾಯಿಯು ಮೇಲಕ್ಕೇಳಲೇ ಇಲ್ಲ. ಅದರಿಂದ ಮುಂದೆ ಬಹಳಹೊತ್ತಿನವರೆಗೆ ಯಾರಿಂದಲೂ ತ್ರಾಸವಾಗಲಿಲ್ಲ. ತಾನಾಜಿಯ ಐವತ್ತು ಜನರೂ, ಕೆಲವರು ಉಡದ ಹಗ್ಗದ ಸಹಾಯದಿಂದ, ಕೆಲವರು ಗೂಟಕ್ಕೆ ಕಟ್ಟಿದ ಹಗ್ಗದ ಸಹಾಯದಿಂದ ಏರಿಬಂದರು.

ಮಾವಳರೆಲ್ಲರು ಮೇಲಕ್ಕೆ ಬಂದಬಳಿಕ ಝುಂಜಾರದ ಬಾಗಿಲನ್ನು ಕಟ್ಟಿ ಝುಂಜಾರ ವೆಂಬ ಹುಡೆಯನ್ನು ಸ್ವಾಧೀನಪಡಿಸಿಕೊಳ್ಳುವದು ಅವರ ಒಂದನೆಯ ಕೆಲಸವಾಗಿತ್ತು. ಕಲ್ಯಾಣದ ಬಾಗಿಲನ್ನು ತೆರೆಯುವದು ಎರಡನೆಯ ಕೆಲಸವಾಗಿತ್ತು. ಝುಂಜಾರ ಹುಡೆಯ ಮೇಲೆ 'ಚಕ್ರಿತೋಫ' ಎಂಬ ಹೆಸರಿನದೊಂದು ತೋಫು ಇದ್ದದ್ದರಿಂದ ಆ ಹುಡೆಯನ್ನು ಮೊದಲು ಕೈವಶಮಾಡಿಕೊಳ್ಳಬೇಕಾಗಿತ್ತು. ಹಾಗೆ ಮಾಡದಿದ್ದರೆ ರಜಪೂತರು ತೋಫನ್ನು ಉಪಯೋಗಿಸುವದರಿಂದ ತಮ್ಮೆಲ್ಲರ ಗತಿಯು ನೆಟ್ಟಗಾಗಲಿಕ್ಕಿಲ್ಲೆಂದು ತಾನಾಜಿಯು ತಿಳಿದಿದ್ದನು; ಆದ್ದರಿಂದ ಆತನು ಮೊದಲು ಬಿಟ್ಟದ್ದುಬಿಟ್ಟು, ತನ್ನ ಜನರನ್ನು ಝುಂಜಾರದ

ಬಾಗಿಲ ಕಡೆಗೆ ಕರೆದೊಯ್ದನು. ತಾನಾಜಿಯು ಹತ್ತಿಬಂದದರಿಗೂ ಝುಂಜಾರಬುರಜಿಗೂ ನಡುವೆ ಝುಂಜಾರವೆಂಬದೊಂದು ಬಾಗಿಲು ಇರುವೆದೆಂದು ಓಂದೆ ಹೇಳಿದೆಯಷ್ಟೇ. ಆ ಬಾಗಲಿನ್ನು ಕಟ್ಟಿ ಝುಂಜಾರ ಕೊತ್ತಳವನ್ನು ಕೈವಶಮಾಡಿಕೊಳ್ಳುವದು ಅವಶ್ಯವಾಗಿತ್ತು. ಕಾರಣ ಆ ಮಾವಳವೀರರೆಲ್ಲ ಆ ಬಾಗಿಲಕಡೆಗೆ ಹೋಗಿ, ಅಲ್ಲಿಯ ಕಾವಲುಗಾರರನ್ನೆಲ್ಲ ತುಂಡರಿಸಿ ಚಲ್ಲುವ ಕ್ರಮವನ್ನು ನಡಿಸಿದರು. ''ಹರಹರ ಮಹಾದೇವ'' ಇಲ್ಲವೆ ''ಜಯಭವಾನಿ'' ಎಂಬ ಶಬ್ದಗಳನ್ನು ಸಹ ಅವರು ಗಟ್ಟಿಯಾಗಿ ಉಚ್ಚರಿಸಲಿಲ್ಲ. ಕೋಟೆಯ ಒಂದು ಮಗ್ಗಲಿಗೆ ನಡೆದಿರುವ ಸುದ್ದಿಯು ಮತ್ತೊಂದು ಮಗ್ಗಲಿನವರಿಗೆ ತಿಳಿಯದಿರುವದೇ, ತನಗೆ ಜಯವಾಗುವ ಲಕ್ಷಣವೆಂದು ತಾನಾಜಿರಾಯನು ಯೋಚಿಸಿದ್ದನು. ಒದರಿ ಗದ್ದಲ ಮಾಡಿದರೆ, ಕೋಟೆಯ ಜನರೆಲ್ಲ ಎಚ್ಚತ್ತು ಕೋಟೆಗೆ ಕೋಟೆಯೇ ಜಾಗರೂಕವಾಗುವದೆಂತಲೂ, ಕಲ್ಯಾಣದ ಬಾಗಿಲನ್ನು ತೆರೆದು, ತನ್ನ ತಮ್ಮನಾದ ಸೂರ್ಯಾಜಿಯನ್ನು ಮೇಲಕ್ಕೆ ಕರಕೊಳ್ಳುವವರೆಗೆ ಹಾಗೆ ಜಾಗರೂಕ ಗೊಳಿಸುವದು ಇಷ್ಟವಲ್ಲವೆಂತಲೂ ಆತನು ತಿಳಿದಿದ್ದನು; ಆದ್ದರಿಂದ ತನ್ನ ಜನರಿಗೆ ಮಾಡತಕ್ಕದ್ದನ್ನು ಸಪ್ಪಳಿಲ್ಲದೆ ಮಾಡಿರೆಂದು ಆತನು ನಿಷ್ಕರ್ಷವಾಗಿ ಹೇಳಿದ್ದನು. ವ್ಯವಸ್ಥೆಯಿಂದ ನಡೆಯಲಿಕ್ಕೆ ಕಲಿತಿದ್ದ ಆ ಮಾವಳರಾದರೂ ತಾನಾಜಿಯು ಹೇಳಿದಂತೆಯೇ ಮಾಡಿದರು. ಬಾಯಿಂದ ಚಕಾರ ಶಬ್ದವನ್ನು ನುಡಿಯದೆ, ಗಟ್ಟಿಯಾಗಿ ಶ್ವಾಸವನ್ನು ಸಹ ಬಿಡದೆ ಅವರು ಝುಂಜಾರ ಬಾಗಿಲ ಕಾವಲುಗಾರರನ್ನು ಗೊತ್ತಿಗೆ ಹಚ್ಚಿದರು. ಈ ಬಗೆಯಾಗಿ ಬಾಗಿಲನ್ನು ಆಕ್ರಮಿಸಿ ಆ ಬಾಗಿಲನ್ನು ಕಾಯುತ್ತಿರುವ ಪಠಾಣಜನರನ್ನೆಲ್ಲ ತುಂಡರಿಸಿದರೂ, ಝುಂಜಾರ ಕೊತ್ತಳದವರಿಗೆ ಆ ಪುಂಡ ಮಾವಳರು ಸುಳುವ ಹತ್ತಗೊಟ್ಟಿದ್ದಿಲ್ಲ. ಈಮ್ಮಿಂದೊಮ್ಮೆ ಈ ಸೈತಾನ ಜನರು ತಮ್ಮನ್ನು ನಾಶಗೊಳಿಸುವದಕ್ಕಾಗಿ ಭೂಮಿಯೊಳಗಿಂದ ಮೇಲಕ್ಕೆ ಬಂದರೋ ಏನೋ? ಎಂಬಂತೆ ಆ ಕಾವಲುಗಾರರಿಗೆ ಆಗಲು, ಅವರು ಗಾಬರಿಯಾಗಿ ಮುಂದುಗಾಣದೆ ಕಲ್ಲಿನಂತೆ ನಿಂತುಬಿಟ್ಟರು. ಬಳಿಯಲ್ಲಿದ್ದ ಶಸ್ತ್ರವನ್ನು ತಕ್ಕೊಳ್ಳಲಿಕ್ಕೆ ಇಲ್ಲವೆ ಒರೆಯಿಂದ ಅವನ್ನು ಹಿರಿಯಲಿಕ್ಕೆ ಸಹ ಅವರಿಗೆ ಎಚ್ಚರವು ಇಲ್ಲದಂತಾಯಿತು. ಈ ಮೇರೆಗೆ ಕಾವಲುಗಾರರನ್ನು ತುಂಡರಿಸಿ, ಇಂಥ ಕೆಲಸದಲ್ಲಿ ಚನ್ನಾಗಿ ನುರಿತಿದ್ದ, ಹಾಗು ಜನಸಂಹಾರದಿಂದ ಆವೇಶ ಗೊಂಡಿದ್ದ ಆ ವೀರರು, ಮೊದಲಿ ನಂತೆಯೇ ಗದ್ದಲಮಾಡದೆ ಝುಂಜಾರ ಕೊತ್ತಳಕ್ಕೆ ಸಾಗಿದರು. ಆ ಬುರುಜಿನ ಮೇಲಿದ್ದ ಜನರು ನಿತ್ಯಕ್ರಮದಂತೆ ಬಂಗಿಯನ್ನು ಸೇದಿ, ಬಂಗಿಯ ನೀರನ್ನು ಕುಡಿದು ಕೆಲವರು ಗುರಿಕೆ ಹೊಡೆಯುತ್ತಿದ್ದರು; ಕೆಲವರು ತಮ್ಮತಮ್ಮೊಳಗೆ ಕಲೆದಾಡುತ್ತಿದ್ದರು. ಅವರನ್ನು ಈ ಕಗ್ಗರಾದ ಮಾವಳರು ಮುತ್ತಿ ತುಂಡರಿಸಿ ಚಲ್ಲಿದರು. ಅವರಿಗಾದರೂ ತಮ್ಮ ಶಸ್ತ್ರಗಳನ್ನು ತಕ್ಕೊಂಡು ಬರಲಿಕ್ಕೆ ಇಲ್ಲವೆ ಬಳಿಯಲ್ಲಿದ್ದದ್ದನ್ನು ತಕ್ಕೊಳಲಿಕ್ಕೆ ಮಾವಳರು ಅವಕಾಶವನ್ನು ಕೊಡಲಿಲ್ಲ. ರಜಪೂತರಲ್ಲಿ ಎಷ್ಟು ಮಾತ್ರವೂ ವ್ಯವಸ್ಥೆಯು ಇದ್ದಿಲ್ಲ. ಒಬ್ಬನಲ್ಲಿ ತುಬಾಕಿಯಿದ್ದರೆ ಮದ್ದು ಇದ್ದಿಲ್ಲ. ಮದ್ದು ಇದ್ದರೆ ಕೇಪು ಇದ್ದಿಲ್ಲ. ಒಬ್ಬನಲ್ಲಿ ಇಂಥ ಅವ್ಯವಸ್ಥೆಯ ಸ್ಥಿತಿಯಲ್ಲಿ ಮಾವಳರಂಥವರ ಮುತ್ತಿಗೆಯು! ಅಂದಬಳಿಕ ಕೇಳುವದೇನು? ಆ ಕೊತ್ತಳದ ಮೇಲಿನವನೊಬ್ಬನಾದರೂ ಬದುಕಿ ಉಳಿಯಲಿಲ್ಲ. ಒಬ್ಬ ಮಾವಳನು ಚಕ್ರಿಯ

ಕೊತ್ತಳದ ಕಿವಿಯಲ್ಲಿ ಯಾವನಪ್ಪನಿಗೂ ಕಿತ್ತಲಿಕ್ಕೆ ಬಾರದಂತೆ ಒಂದು ಗೂಟವನ್ನು ಬಡಿದುಬಿಟ್ಟನು.

ಈ ಮೇರೆಗೆ ಒಂದು ಕೊತ್ತಳದ ವ್ಯವಸ್ಥೆಯನ್ನು ಸದ್ದಿಲ್ಲದೆ ಮಾಡಿ, ಆ ಎದೆಗಾರರಾದ ಮಾವಳರು ಕಲ್ಯಾಣದ ಬಾಗಿಲಕಡೆಗೆ ನಡೆದರು; ಆದರೆ ಕೋಟೆಯ ಮೇಲೆ ಇಷ್ಟು ಪುಂಡಾಟಿಕೆಯು ನಡೆದಿದ್ದು, ಅದು ಯಾರಿಗೂ ತಿಳಿಯದಿರುವ ಬಗೆ ಹೇಗೆ? ದಿನಕ್ಕಿಂತ ಕೋಟೆಯ ಮೇಲೆ ವಿಶೇಷ ಗದ್ದಲವಾಗುವದನ್ನು ಕೇಳಿ, ಬೇರೆಕಡೆಯ ಕಾವಲುಗಾರರು— ''ಅದೇನು ಗದ್ದಲ? ಅದೇನು ಗದ್ದಲ?'' ಎಂದು ಕೇಳತೊಡಗಿದ್ದರು. ಇದಲ್ಲದೆ ಇಂದು ಮಾಘವದ್ಯ ನವಮಿಯಾದ್ದರಿಂದ ಉದಯಭಾನವು ಕಮಲಕುಮಾರಿಯನ್ನು ಇಂದೇ 'ನಿಕಾ' ಮಾಡಿಕೊಳ್ಳುವನು, ಆಗ ಏನಾಗುತ್ತದೋ ನೋಡಬೇಕೆಂದು ಎಷ್ಟೋ ಜನರು ತಮ್ಮ ಶಸ್ತ್ರಾಸ್ತ್ರಗಳನ್ನು ಅತ್ತಿತ್ತ ಚಲ್ಲಿಕೊಟ್ಟು, ಬಾಲೆಯಕಿಲ್ಲೆ ಎಂಬ ಹೆಸರಿನ ಒಳಕೋಟೆಯ ಕಡೆಗೆ ಹೋಗಿದ್ದರು. ಅಷ್ಟರಲ್ಲಿ ಯಾವನೋ ಒಬ್ಬನು ಆ ಬಾಲೆಯ ಕಿಲ್ಲೆಗೆ ಹೋಗಿ ಅಲ್ಲಿದ್ದ ಜನರಿಗೆ— ''ಕೋಟೆಯ ಎರಡನೆಯ ಮಗ್ಗಲಿಗೆ ಏನೋ ಗದ್ದಲವಾಗುತ್ತದೆ''ಂದು ಹೇಳಲು, ಆ ಜನರು ನಕ್ಕು ಹೇಳಬಂದವನನ್ನೇ ಹುಚ್ಚನನ್ನು ಮಾಡಿದರು. ಅಷ್ಟರಲ್ಲಿ ತಾನಾಜಿಯು ಕಲ್ಯಾಣದ ಬಾಗಿಲಿಗಿದ್ದ ಕಾವಲುಗಾರರನ್ನೆಲ್ಲ ತುಂಡರಿಸಿ ಬಾಗಿಲು ತೆಗೆದು ತನ್ನ ತಮ್ಮನಾದ ಸೂರ್ಯಾಜಿಯು ತನ್ನ ಜನರೊಡನೆ ಯಾವಾಗ ಬರುತ್ತಾನೋ, ಎಂದು ಹಾದಿಯ ನೋಡುತ್ತ ಕುಳಿತುಕೊಂಡನು. ಆತನು ಬರುವವರೆಗೆ ಸಾವಿರ ಎರಡು ಸಾವಿರ ದಂಡಿಗೆ ತನ್ನ ನಲವತ್ತೊಂಬತ್ತು ಜನರೊಡನೆ ಎದುರಾಗವದು ಜಾಣತನವಲ್ಲವೆಂದು ತಾನಾಜಿಯು ಯೋಗ್ಯವಿಚಾರವನ್ನು ಮಾಡಿದನು. ಆತನು ಚಕ್ರಿಯ ತೋಫಿನ ಒಂದು ಬುರುಜನ್ನೂ ಎರಡು ಬಾಗಿಲುಗಳನ್ನೂ ಈ ಮೊದಲು ಕೈವಶಮಾಡಿಕೊಂಡೇ ಇದ್ದನು. ಆದರೆ ತನ್ನ ತಮ್ಮನಾದ ಸೂರ್ಯಾಜಿಯು ತನ್ನ ಆರಿಸಿದ ಜನರೊಡನೆ ಬಂದ ಹೊರತು ಕೋಟೆಯು ಮಧ್ಯಭಾಗದ ಮೇಲೆ ಸಾಗಿಹೋಗುವದು ತಕ್ಕದ್ದಲ್ಲೆಂದು ಆತನು ತಮ್ಮನ ಹಾದಿಯನ್ನು ನೋಡುತ್ತಿದ್ದನು. ಇಲ್ಲಿಯವರೆಗೆ ಸಪ್ಪಳಿಲ್ಲದೆ ಕೆಲಸಮಾಡಿದಂತೆ ಇನ್ನು ಮಾಡುವ ಹಾಗೆ ಇದ್ದಿಲ್ಲ. ನಾಲ್ಕೂ ಕಡೆಗೆ ಗದ್ದಲವಾಗಿತ್ತು. ಆದ್ದರಿಂದ ಸೂರ್ಯಾಜಿಯು ಬರುವವರೆಗೆ ಗದ್ದಲಮಾಡದೆ ಅಲ್ಲಿಯೇ ಅಡಗಿಕೊಂಡು ಕೂಡಿರೆಂದು ತಾನಾಜಿಯು ತನ್ನ ಜನರಿಗೆ ಅಪ್ಪಣೆಮಾಡಿದನು. ಇಷ್ಟು ಹೊತ್ತು ಹೋರಾಡಿದರೂ, ಸುದೈವದಿಂದ ಒಬ್ಬನೇ ಮಾವಳನು ಜೀವಕ್ಕೆ ಎರವಾಗಿದ್ದನು.

ಇತ್ತ ಜಗತ್ಸಿಂಗನು ತಿರುಗಾಡುತ್ತ ತಿರುಗಾಡುತ್ತ ಬಾಲೆಯ ಕಿಲ್ಲೆಯ ಒಳಗೆ ಹೋದನು. ಅಲ್ಲಿ ಅವನ ಮಿತ್ರನಾದ ವಿಶಾಲದೇವನು ಭೆಟ್ಟಿಯಾದನು. ಮೊದಲನೆಯ ಹುರುಪಿಗೇ ವಿಶಾಲದೇವನು— ''ನೀನು ಈಗ ಮೂರು ನಾಲ್ಕುದಿನ ಎಲ್ಲಿಗೆ ಹೋಗಿದ್ದೆ'' ಎಂದು ಕೇಳಿದನು. ಅದಕ್ಕೆ ಜಗತ್ಸಿಂಗನು—''ಈ ಪ್ರಶ್ನಕ್ಕೆ ಉತ್ತರ ಕೊಡಲಿಕ್ಕೆ ಇದು ಯೋಗ್ಯ ಪ್ರಸಂಗವಲ್ಲ. ಮೊದಲು ಕಮಲಕುಮಾರಿಯ ವೃತ್ತಾಂತವನ್ನು ಹೇಳು'' ಎಂದು ಕೇಳಿದನು. ಆಗ ವಿಶಾಲದೇವನು—''ಉದಯಭಾನುವು ದೇವಲದೇವಿಯನ್ನು ಬಲಾತ್ಕಾರದಿಂದ

ಕಮಲಕುಮಾರಿಯಿಂದ ಅಗಲಿಸಿ, ಬಾಲೆಕಿಲ್ಲೆಯೊಳಗಿನ ರಾಜಮಂದಿರದಲ್ಲಿ ಇಟ್ಟಿರುವದ ರಿಂದ ದೇವಲದೇವಿಯೊಡನೆ ಈಗ ಯಾವ ಬಗೆಯ ಸಂಬಂಧವಿಡುವಂತೆ ಇಲ್ಲವೆಂತಲೂ, ಕಮಲಕುಮಾರಿಯನ್ನಾದರೂ ಅದೇ ರಾಜಮಂದಿರದಲ್ಲಿ ಇಟ್ಟಿರುವನೆಂತಲೂ ಹೇಳಿದನು. ಇದನ್ನು ಕೇಳಿ ಜಗತ್ಸಿಂಗನಿಗೆ ಬಹಳ ಅಸಮಾಧಾನವಾಯಿತು. ಆತನು ಕೂಡಲೆ ಹೊರಟು ಹೋದನು. ಮಧ್ಯರಾತ್ರಿಗೆ ಇನ್ನೂ ಎರಡು ತಾಸಿನ ಅವಕಾಶವಿದ್ದರೂ ಅಷ್ಟು ಹೊತ್ತು ಉದಯಭಾನವು ತಡೆಯುವನೋ ಇಲ್ಲವೋ ಎಂಬ ಸಂಶಯದಿಂದ, ಎಲ್ಲ ಸುದ್ದಿಯನ್ನು ತಾನಾಜಿಗೆ ಹೇಳಲಿಕ್ಕೆ ಜಗತ್ಸಿಂಗನು ಕಲ್ಯಾಣದ ಬಾಗಲಿಕಡೆಗೆ ಓಡಿದನು. ತಾನಾಜಿಯು ತನ್ನ ಜನರೊಡನೆ ಇಷ್ಟೊತ್ತಿಗೆ ಕಲ್ಯಾಣದ ಬಾಗಲಿವರೆಗೆ ನಿಶ್ಚಯವಾಗಿ ಬಂದಿರಬಹು ದೆಂದು ಆ ರಜಪೂತನು ತರ್ಕಿಸಿದ್ದನು.

## ಮಧ್ಯರಾತ್ರಿಯ

ಇತ್ತ ಬಾಲೆಯ ಕಿಲ್ಲೆಯೆಂಬ ಹೆಸರಿನ ಒಳಕೋಟೆಯಲ್ಲಿ ಕಮಲಕುಮಾರಿಯು ಆಶೆ ದೊರೆದು ಇನ್ನು ತನ್ನ ವಿಟಂಬನೆಯಾಗುವ ಹೊತ್ತು ತೀರ ಸಮೀಪಿಸಿತೆಂದು ಅಳುತ್ತ ಕುಳಿತದ್ದನು. ಆಕೆಗೆ ತನ್ನ ಜೀವಕ್ಕೆ ಅಪಾಯಮಾಡಿಕೊಳ್ಳಲಿಕ್ಕೆ ಸಂಧಿಯು ದೊರೆಯಬಾರ ದೆಂದು ಆಕೆಯ ಮೇಲೆ ಹಬಸಿಯ ಹೆಂಗಸರನ್ನೂ, ಕೊಜ್ಜೆಯರನ್ನೂ ಈಗ ಅಚ್ಚಗಾವ ಲಿಟ್ಟಿದ್ದರು. ತನ್ನ ಉಟ್ಟ ಸೀರೆಯಿಂದಾದರೂ ಉರಲು ಹಾಕಿಕೊಂಡು ಪ್ರಾಣ ಕೊಟ್ಟೇ ನೆಂದರೂ ಆಕೆಗೆ ಬರುವ ಹಾಗಿದ್ದಿಲ್ಲ, ಆ ಹಬಸಿಯ ಹೆಂಗಸರೂ, ಕೊಜ್ಜೆಯರೂ ನೋಡಲಿಕ್ಕೆ ಭಯಂಕರವಾಗಿ ಅಸಹ್ಯವಾಗಿದ್ದದ್ದರಿಂದ ಅವರನ್ನು ಎದುರಿಗೆ ಒಂದೇಸವನೆ ನೋಡುವದರೊಳಗೆ ಕಮಲ ಕುಮಾರಿಯ ಅರ್ಧಜೀವವು ಹೋದಂತಾಗಿತ್ತು, ದೇವಲದೇವಿ ಯನ್ನು ಅಗಲಿಸಿದಾಗಿನಿಂದ ಒಂದೇಸವನೇ ಕಣ್ಣೀರು ಹಾಕಿ ಹಾಕಿ ಕಮಲಕುಮಾರಿಯು ಕಣ್ಣೊಳಗಿನ ನೀರುಗಳೇ ಸುಟ್ಟು ಹೋಗಿದ್ದವು. ಕಣ್ಣು ಬಾತು ತಿದಿಯಾಗಿದ್ದವು. ಆಕೆಯ ಮುಖ್ಯ ಆಧಾರವು ದೇವಲದೇವಿಯಾಗಿದ್ದಳು. ಆಕೆಯನ್ನೇ ಅಗಲಿಸಿದ ಬಳಿಕ ಉಳಿಯಿತೇನು? ಈ ಸ್ಥಿತಿಯಲ್ಲಿ ಕಮಲಕುಮಾರಿಯು ಸುಮಾರು ನಾಲ್ಕು ತಾಸು ರಾತ್ರಿಯನ್ನು ಕಳೆದಳು. ಮಧ್ಯರಾತ್ರಿಗೆ ಇನ್ನು ನಾಲ್ಕು ಗಳಿಗೆಯ ಒಳಹೊರಗೆ ಅವಕಾಶವಿರಬಹುದು. ಅಷ್ಟರಲ್ಲಿ ಉದಯಭಾನವೂ, ಆತನು ಔರಂಗಾಬಾದದಿಂದ ಕಳಿಸಿಕೊಂಡಿದ್ದ ಕಾಜಿಯೂ ಕಮಲ ಕುಮಾರಿಯ ಮಹಾಲಿನೊಳಗೆ ಬಂದರು. ಅವರನ್ನು ನೋಡಿದ ಕೂಡಲೆ ಕಮಲಕುಮಾರಿಗೆ ಚಳಿಬಂದಂತಾಗಿ ಭಯದಿಂದ ಆಕೆಯು ಗದಗದ ನಡುಗಹತ್ತಿದಳು. ಪ್ರತ್ಯಕ್ಷ ಮೃತ್ಯುವನ್ನು ನೋಡಿದರೂ ಬಾರದಷ್ಟು ಅಂಜಿಕೆಯು, ಮೃತ್ಯುಗಿಂತಲೂ ಕಠೋರಹೃದಯನಾದ ಆ ಪುರುಷನನ್ನು ನೋಡಿ ಆಕೆಗೆ ಬಂದಿತು. ಆಕೆಯು ಕೂಡಲೆ ಎದ್ದು ನಿಲ್ಲಹೋದಳು; ಆದರೆ

ನಿಲ್ಲುವಷ್ಟು ತ್ರಾಣವು ಇಲ್ಲದ್ದರಿಂದ ಆ ಅನಾಥೆಯು ಉಸುರ್ಗುರೆಯುತ್ತ ಮುಂದೆ ಆಗುವದರ ಹಾದಿಯನ್ನು ನೋಡುವವಳಂತೆ ಸುಮ್ಮನೆ ಕುಳಿತುಬಿಟ್ಟಳು. ಉದಯಭಾನವು ಒಳ್ಳೇ ದಿಟ್ಟತನದಿಂದ ಆಕೆಯ ಬಳಿಗೆ ಹೋಗಿ, ಕಪಟವು ತುಂಬಿದ ವಾಣಿಯಿಂದ—ಕಮಲಕುಮಾರೀ, ನಮ್ಮಿಬ್ಬರ ಲಗ್ನವಾಗಲಿಕ್ಕೆ ಇನ್ನು ನಾಲ್ಕೇ ಗಳಿಗೆಗಳು ಉಳಿದಿರುತ್ತವೆ. ಲಗ್ನಕಾಲದಲ್ಲಿ ವಧೂವರರು ಆನಂದದಿಂದಿರುವದನ್ನು ಬಿಟ್ಟು ಹುಚ್ಚಿಯಹಾಗೆ ಇದೇನು ಆಟವನ್ನು ಹೂಡಿರುತ್ತೀ? ಏಳು, ಇನ್ನು ಈ ಶೋಕವನ್ನು ಬಿಟ್ಟುಬಿಡು. ಈ ಕಾಜೀಸಾಹೇಬರು ಬಂದಿರುತ್ತಾರೆ; ಅವರಿಂದ ಮೊದಲು ಮುಸಲ್ಮಾನ ಧರ್ಮದ ದೀಕ್ಷೆಯನ್ನು ಹೊಂದು. ಆಮೇಲೆ ಕೂಡಲೆ ನಮ್ಮ ನಿಕಾಮಾಡಿಕೊಳ್ಳೋಣ. ಇನ್ನು ಯಾರಾದರೂ ನಿನ್ನನ್ನು ಬಿಡಿಸುವರೆಂಬ ಆಶೆಯು ಇರುವದೋ ಏನು? ಈಗ ನಿಮ್ಮ ಏಕಲಿಂಗೇಶ್ವರನು ಬಂದರೂ ನನ್ನ ಕೈಯೊಳಗಿಂದ ನಿನ್ನನ್ನು ಬಿಡಿಸುವದಾಗುವ ಹಾಗಿಲ್ಲ. ಅಂದಬಳಿಕ ಸುಮ್ಮನೆ ಜೀವಕ್ಕೆ ಯಾಕೆ ತ್ರಾಸಮಾಡಿಕೊಳ್ಳುತ್ತಿ? ಏಳು, ಇತ್ತ ಬಾ. ನೋಡು, ಕಾಜೀಸಾಹೇಬರು ನಿನ್ನ ಹಾದಿಯನ್ನೇ ನೋಡುತ್ತ ಕುಳಿತುಕೊಂಡಿದ್ದಾರೆ, ಅಂದನು.

ಈ ಮೇರೆಗೆ ಉದಯಭಾನವು ವಿಲಕ್ಷಣ ಸೌಮ್ಯಸ್ವಭಾವವನ್ನು ತಾಳಿ, ತನ್ನಿಂದಾದಷ್ಟು ಸವಿಮಾತುಗಳನ್ನು ಆಡಿದನು; ಆದರೆ ಅವನ ಪ್ರತಿ ಒಂದು ಶಬ್ದವು ಕುದಿಯುವ ಎಣ್ಣೆಯ ಹನಿಯಂತೆ ಕಮಲಕುಮಾರಿಯ ಕಿವಿಯಲ್ಲಿ ಸುಡುತ್ತ ಪ್ರವೇಶಿಸಿ, ಕೇವಲ ಹಾಲಾಹಲ ವಿಷದಂತೆ ಹೃದಯದಲ್ಲಿ ಭೇದಿಸುತ್ತಿತ್ತು ಆಕೆಯು ಬಾಯಿಗೆ ಬಂದಂತೆ ಮಾತಾಡಿ, ಉದಯಭಾನುವನ್ನು ತಿರಸ್ಕರಿಸಬೇಕೆಂದು ಯತ್ನಿಸುತ್ತಿದ್ದಳು; ಆದರೆ ಬಾಯಿಂದ ಮಾತುಗಳೇ ಹೊರಡಾದಾದವು. ಪಾಪ! ಹ್ಯಾಗೆ ಹೊರಟಾವು!!

ತಾನು ಇಷ್ಟು ಸೌಮ್ಯದಿಂದ ರಮಿಸಿ ಮಾತಾಡಿದರೂ, ಈಕೆಯು ದೆವ್ವಬಡಿದ ಹಾಗೆ ಸುಮ್ಮನೆ ಕುಳಿತಿರುವಳೆಂದು ಉದಯಭಾನುವು ಸಿಟ್ಟಾದನು. ಆತನು ಕಮಲಕುಮಾರಿಯ ತೀರ ಸಮೀಪಕ್ಕೆ ಹೋಗಿ, ಆಕೆಯ ಮೈಮುಟ್ಟಿ ಎಬ್ಬಿಸಬೇಕೆಂದು ಕೈಯನ್ನು ಚಾಚಿದನು; ಆದರೆ ನಷ್ಟವಾದ ಧೈರ್ಯವೆಲ್ಲ ಒಟ್ಟುಗೂಡಿದಂತೆ ಆಗಿ, ಕಮಲಕುಮಾರಿಯು ಚಟ್ಟನೆ ಎದ್ದುನಿಂತು ಸಂತಾಪದಿಂದ—ಉದಯಭಾನೂ, ನಿನ್ನಲ್ಲಿ ದಯಾಮಾಯಗಳೇನಾದರೂ ಇದ್ದರೆ, ಮತ್ತು ನಿನ್ನ ಮನಸ್ಸಿಗೆ ನಾಚಿಕೆಯು ಇದ್ದದರೆ, ನೀನು ನನ್ನನ್ನು ಛಲಿಸಬೇಡ. ಇಲ್ಲಿಯವರೆಗೆ ನಷ್ಟವಾಗಿದ್ದ ನನ್ನ ಧೈರ್ಯವು ಮತ್ತೆ ಬಂದಿರುತ್ತದೆ. ಇನ್ನು ಮೇಲೆ ನಾನು ಬೇಕಾದದ್ದನ್ನು ಮಾಡುವೆನು. ನಿನ್ನ ಕೆಟ್ಟ ಕೈಯು ತನ್ನ ದೇಹವನ್ನು ಮುಟ್ಟುವದರೊಳಗೆ ಪ್ರಾಣತ್ಯಾಗವನ್ನು ಮಾಡುವೆನು, ಎಂದು ಹೇಳಿ, ಸಂತಾಪದಿಂದ ಗಟ್ಟಿಯಾಗಿ ಉಸರುಬಿಡುತ್ತ ನಿಂತುಕೊಂಡಳು.

ಕಮಲಕುಮಾರಿಯು ಒಮ್ಮೆಲೆ ಎದ್ದುನಿಂತು ಸಂತಾಪದಿಂದಾಡಿದ ಈ ಆವೇಶದ ಮಾತುಗಳನ್ನು ಕೇಳಿ ಉದಯಭಾನುವು ಕೂಡ ಕ್ಷಣಮಾತ್ರ ಬೆದರಿ ಹಿಂದಕ್ಕೆ ಸರಿದನು. ಆ ಕಾಲದಲ್ಲಿ ಪಾಪ! ಆ ಮುದುಕ ಕಾಜಿಗೂ ಕಮಲಕುಮಾರಿಯ ಸ್ಥಿತಿಯನ್ನು ನೋಡಿ ದಯವು ಉತ್ಪನ್ನವಾಯಿತು. ಆತನು ಮುಂದಕ್ಕೆ ಬಂದು ಕಮಲಕುಮಾರಿಯನ್ನು ಕುರಿತು—ತಂಗೀ,

ಇತ್ತ ತಾನಾಜಿಯು ಕಲ್ಯಾಣದ ಬಾಗಿಲ ಹತ್ತರ ಸೂರ್ಯಾಜಿಯ ಜನರ ಹಾದಿಯನ್ನು ಬಹಳ ಹೊತ್ತು ನೋಡಿದನು; ಆದರೆ ಅವರು ಬೇಗನೆ ಬಾರದ್ದರಿಂದ ತನ್ನ ಆರಿಸಿದ ಜನರನ್ನೇ ಕೂಡಿಕೊಂಡು ಬಾಲೆಯ ಕೋಟೆಯವರೆಗೆ ಹಾದಿಯನ್ನು ಮಾಡಿಕೊಂಡು ಆ ಕಿಲ್ಲೆಯನ್ನು ಮುತ್ತುವ ಸಾಹಸ ಕಾರ್ಯವನ್ನು ಆರಂಭಿಸಿದನು. ಆತನ ಸಂಗಡ ಜಗತ್ಸಿಂಗನು ಇದ್ದೇ ಇದ್ದನು. ಮುದುಕನಾದ ಸೇಲಾರಮಾವನಂತು ಆ ರಾತ್ರಿ ನೆಲೆಯಿಲ್ಲದ ಸಾಹಸವನ್ನು ಪ್ರಕಟಮಾಡಿ ಬಿಟ್ಟನು. ಈ ಮೇರೆಗೆ ಮರಾಟರು ತಮ್ಮ ಕಾಯಕವನ್ನು ನಡಿಸಹತ್ತಿ ಕೆಲವು ಕಾಲ ಕ್ರಮಿಸಿದ ಮೇಲೆ ರಜಪೂತ ಸಿಪಾಯಿಗಳು ಎಚ್ಚತ್ತು ತಮ್ಮ ಶಸ್ತ್ರಾಸ್ತ್ರಗಳನ್ನು ಸಜ್ಜು ಮಾಡಿಕೊಂಡರು. ಆಮೇಲೆ ಕಾಳಗಕ್ಕೆ ಆರಂಭವಾಯಿತು. ಶೂರನಾದ ತಾನಾಜಿಯು ತಾನೇ ಮುಂದಾಗಿ ಬಾಲೆಯಕೋಟೆಯವರೆಗೆ ಶತ್ರುಗಳನ್ನು ಹಣೆಯುತ್ತ ದೂಡಿಕೊಂಡು ನಡೆದನು. ಇಷ್ಟರೊಳಗೆ ಜಗತ್ಸಿಂಗನಂತು ಬಾಲೆಯ ಕಿಲ್ಲೆಯನ್ನು ಸೇರಿ ಎಲ್ಲ ಸಿಪಾಯಿಗಳನ್ನು ಹೆದರಿಸಿ ಬಿಟ್ಟನು. ಆತನು— ''ಉದಯಭಾನುವು ಎಲ್ಲಿ ಇರುವನು. ಆತನಿಗೆ ಸುದ್ದಿಯನ್ನು ಹೇಳಲಿಕ್ಕೆ ಬೇಕು. ಕೋಟೆಯನ್ನು ಕಾಫರರು ಸವರಿಬಿಟ್ಟರು; ತೋಬಾ ತೋಬಾ. ಇವರು ಮರಾಟರಲ್ಲ, ಸೈತಾನರಿರುವರು.'' ಎಂದು ಒದರುತ್ತ ಒದರುತ್ತ ಕಮಲಕುಮಾರಿಯನ್ನು ಇಟ್ಟಿರುವ ಮಹಾಲಿನಲ್ಲಿ ತನ್ನ ಪ್ರವೇಶವಾಗುವಂತೆ ಮಾಡಿಕೊಂಡು ಆಯತಸಮಯದಲ್ಲಿ ಉದಯ ಭಾನುವನ್ನು ಅಂಜಿಸುವದಕ್ಕಾಗಿ ಸುದ್ದಿಯನ್ನು ಹೇಳಿ ಅವನ ಸುಖದಲ್ಲಿ ಮಣ್ಣುಕೂಡಿಸಿದನು; ಮತ್ತು ಸಂತಾಪದಿಂದ ಹೊರಬಿದ್ದ ಉದಯಭಾನುವಿನ ಸಂಗಡ ತಾನೂ ಹೊರಬಿದ್ದನು. ಉದಯಭಾನುವಿಗೆ ಮೊದಲಿಗೆ ಸುದ್ದಿಯನ್ನು ಹೇಳಿದವನು ಜಗತ್ಸಿಂಗನೇ ಆಗಿದ್ದನೆಂಬದನ್ನು ಚಾಣಾಕ್ಷರಾದ ವಾಚಕರು ಗೊತ್ತು ಹಿಡಿದಿರಬಹುದು. ಜಗತ್ಸಿಂಗನು ಹೊರಬಿದ್ದವನು ನೆಟ್ಟಗೆ ದೇವಲದೇವಿಯು ಇದ್ದ ಮಹಾಲಿನ ಕಡೆಗೆ ಸಾಗಿದನು; ಆದರೆ ಅವನಿಗೆ ಅಲ್ಲಿಗೆ ಹೋಗಲಿಕ್ಕೆ ಹಾದಿಯು ಗೊತ್ತಾಗಲೊಲ್ಲದು. ಇಷ್ಟು ಹೊತ್ತಿಗೆ ಸೂರ್ಯಾಜಿಯ ಗುಂಪಿನವರು ಮೇಲಕ್ಕೆ ಬಂದಿದ್ದರು. ರಜಪೂತರು ಎಚ್ಚತ್ತು ಯುದ್ಧಕ್ಕೆ ಸಿದ್ಧರಾಗಿದ್ದರು; ಬಾಲೆಯಕೋಟೆಯಸುತ್ತಲಿನ ಪಟಾಂಗಣದಲ್ಲಿ ನಿಕರದ ಯುದ್ಧವು ಆರಂಭವಾಗಿತ್ತು, ಕೈಗೆ ಕೈಹತ್ತಿ ಜನರು ಕಾದುತ್ತಿದ್ದರು. ಖಡ್ಗಕ್ಕೆ ಖಡ್ಗವು ತಾಕಿ ''ಖಟ್‌ಖಟ್'' ಎಂಬ ಸಪ್ಪಳವು ಉಂಟಾಗಿತ್ತು, ಬಾಣಗಳ ''ಸೂ ಸೂ'' ಎಂಬ ಸಪ್ಪಳವು ಕಿವಿಗೆ ಬೀಳುತ್ತಿತ್ತು. ಎಷ್ಟೋ ರಜಪೂತರ ಎಡಗೈಯಲ್ಲಿ ಪಂಜುಗಳು, ಬಲಗೈಯಲ್ಲಿ ಖಡ್ಗಗಳೂ ಒಪ್ಪುತ್ತಿದ್ದವು! ಅವರು ಅದೇ ಸ್ಥಿತಿಯಲ್ಲಿಯೇ ಯುದ್ಧಮಾಡಲಿಕ್ಕೆ ಯತ್ನಿಸುತ್ತಿದ್ದರು. ಅವರಿಗೆ ಮಬ್ಬುಗತ್ತಲೆಯಲ್ಲಿ ಯುದ್ಧಮಾಡಲಿಕ್ಕೆ ಬಾರದ್ದರಿಂದ ಪಿಲಾಲುಗಳು ಬೇಕಾದವು! ಇದರಿಂದ ಸ್ವಾಭಾವಿಕವಾಗಿಯೇ ಅವರ ಒಡೊಂದುಕೈಗಳು ಯುದ್ಧಮಾಡಲಿಕ್ಕೆ ಬಾರದಂತಾದವು. ಆ ಪಿಲಾಲುಗಳ ಉಪಯೋಗವು ಮರಾಟರಿಗೆ ಮಾತ್ರ ಬಹು ಚೆನ್ನಾಗಿ ಆಯಿತು.

ಹೀಗಿರಲು, ಬಾಲೆಯ ಕೋಟೆಗೂ, ಕಲ್ಯಾಣದ ಬಾಗಿಲಿಗೂ ನಡುವೆ ಇರುವ ಭೈರವನ ಗುಡಿಯ ಹತ್ತರ ಸ್ವತಃ ಉದಯಭಾನುವಿಗೂ, ತಾನಾಜಿಗೂ ಯುದ್ಧವು ಆರಂಭ

ವಾಗಿತ್ತು ಇಬ್ಬರೂ ಒಳ್ಳೇ ಆವೇಶದಿಂದ ಕಾದುತ್ತಿರುವದನ್ನು ಜಗತ್ಸಿಂಗನು ನೋಡಿದನು. ಉದಯಭಾನುವೂ, ತಾನಾಜಿಯೂ ವಿಲಕ್ಷಣ ಶೂರರಾಗಿದ್ದರು. ಅಂಥವರ ಆ ಯುದ್ಧದ ರೀತಿಯನ್ನು ನೋಡಿ, ಅಂಥ ಸ್ಥಿತಿಯಲ್ಲಿಯೂ ಜಗತ್ಸಿಂಗನಿಗೆ ಆಶ್ಚರ್ಯವಾಗಿ ಅವನು ಸ್ವಲ್ಪ ಹೊತ್ತು ನಿಂತಲ್ಲಿಯೇ ನಿಂತುಕೊಂಡನು. ಮಿಂಚಿನ ಹೊಳಪು ಒಮ್ಮೆ ಪಳಕ್ಕನೆ ಹೊಳೆದು, ಕೂಡಲೆ ಅಡಗಿ, ಮತ್ತೆ ಪಳಕ್ಕನೆ ಹೊಳೆಯುವಂತೆ ಅವರಿಬ್ಬರು ವೀರರ ಖಡ್ಗಗಳ ಹೊಳಪುಗಳು ತೋರುತ್ತಿದ್ದವು. ಢಾಲುಗಳಲ್ಲಿ ಖಡ್ಗಗಳು ನಟ್ಟು 'ಕಚ್ ಕಚ್'ಎಂಬ ಸಪ್ಪಳಗಳು ಆಗುತ್ತಿದ್ದವು. ಸುತ್ತುಮುತ್ತು ಇದರಂತೆಯೇ ಜನರ ಕಾದಾಟವು ನಡೆದಿತ್ತು ಎರಡೂ ಕಡೆಯ ವೀರರು ತಮ್ಮ ತಮ್ಮ ಪಕ್ಷಕ್ಕೇ ಜಯವು ಒದಗಬೇಕೆಂದು ತಮ್ಮ ತಮ್ಮ ಜನರನ್ನು ತಮ್ಮಿಂದಾದಷ್ಟು ಹುರುಪುಗೊಳಿಸುತ್ತಿದ್ದರು. ವೈರಿಗಳನ್ನು ಹೊಡೆಯುವಾಗ ಉತ್ಸಾಹವನ್ನು ಹುಟ್ಟಿಸುವಂಥ ಶಬ್ದಗಳು ಅವರ ಮುಖದಿಂದ ಹೊರಡುತ್ತಲೇ ಇದ್ದವು. ಇತ್ತ ಉದಯಭಾನುವೂ, ತಾನಾಜಿಯೂ ಪರಸ್ಪರರನ್ನು ಕೆಡವುದಕ್ಕಾಗಿ ಹಂಗುದೊರೆದು ಕಾದುತ್ತಿದ್ದರು. ಅವರು ತಮ್ಮ ಮೇಲಿನ ಹಲ್ಲುಗಳಿಂದ ಕೆಳದುಟಿಯನ್ನು, ಇಲ್ಲವೆ ಕೆಳಗಿನ ಹಲ್ಲುಗಳಿಂದ ಮೇಲ್ತುಟಿಯನ್ನು ಕಚ್ಚುತ್ತ ತಮ್ಮ ಮುಂಗೈಯಲ್ಲಿದ್ದಷ್ಟು ಕಸವು ಹಾಕಿ, ತಮ್ಮಲ್ಲಿದ್ದಷ್ಟು ಚಾತುರ್ಯವನ್ನು ವೆಚ್ಚಮಾಡಿ ಒಬ್ಬರನ್ನೊಬ್ಬರು ಖಡ್ಗಗಳಿಂದ ಹೊಡೆಯುತ್ತಿದ್ದರು. ಇಬ್ಬರಿಗೂ ಐದೈದು ಆರಾರು ಗಾಯಗಳಾಗಿ ಪ್ರತಿ ಒಬ್ಬರ ಮೈಯೊಳಗಿಂದ ರಕ್ತವು ಸೋರುತ್ತಿತ್ತು ಇಷ್ಟರಲ್ಲಿ ಉದಯ ಭಾನುವಿನ ಖಡ್ಗದ ಒಂದು ಕಸುವಿನ ಹೊಡತವು ತಾನಾಜಿಯ ಢಾಲಿಗೆ ತಾಕಿ ಅದು ತುಂಡಾಯಿತು. ಕೆಲಸಕ್ಕೆ ಬಾರದಂತಾದ ಆ ಢಾಲನ್ನು ತಾನಾಜಿಯು ಚೆಲ್ಲಿಕೊಡಬೇಕಾಯಿತು. ಇಂಥ ಹೊತ್ತಿನಲ್ಲಿ ತಾನಾಜಿಗೆ ಎರಡನೆಯ ಢಾಲು ದೊರೆಯುವ ಬಗೆ ಹ್ಯಾಗೆ? ಆದರೂ ಆತನು ಬಲಗೈಯಿಂದ ಪಟ್ಟಾಕತ್ತಿಯನ್ನು ತಿರುವುತ್ತ ಶತ್ರುವಿನ ಹೊಡತಗಳನ್ನು ತಪ್ಪಿಸಿಕೊಳ್ಳುತ್ತ ಟೊಂಕಕ್ಕೆ ಕಟ್ಟಿದ ಶೆಲ್ಲೆಯನ್ನು ಎಡಗೈಯಿಂದ ಬಿಚ್ಚಿಕೊಂಡು ಅದೇ ಕೈಗೆ ಆ ಶೆಲ್ಲೆಯನ್ನು ಸುತ್ತಿಕೊಂಡು ಢಾಲಿನ ಹಾಗೆ ಮಾಡಿಕೊಂಡನು. ಇಂಥ ಢಾಲಿನಿಂದ ಏನು ಪ್ರಯೋಜನ ವಾಗಬೇಕು? ಉದಯಭಾನುವಂತು ತನ್ನ ವೈರಿಗೊದಗಿದ ಸಂಕಟದ ಲಾಭವನ್ನು ಪೂರ್ಣವಾಗಿ ಸಂಪಾದಿಸಲಿಕ್ಕೆ ತನ್ನಿಂದಾದಷ್ಟು ಹೆಣಗಿದನು; ಆದರೆ ಬೇಗನೆ ಅದು ಸಾಧಿಸಲಿಲ್ಲ; ಆದರೂ ಸ್ವಲ್ಪ ಕಾಲದಲ್ಲಿಯೇ ತಾನಾಜಿಯು ಬೀಳುವನೆಂದು ಜಗತ್ಸಿಂಗನು ನಿಶ್ಚಯಿಸಿದನು. ಉದಯ ಭಾನುವು ತಾನಾಜಿಯೊಡನೆ ಯುದ್ಧಕ್ಕೆ ನಿಲ್ಲುವಾಗ ದಣಿದಿದ್ದಿಲ್ಲ ತಾನಾಜಿಯ ಸ್ಥಿತಿಯು ಇದಕ್ಕೆ ತೀರ ವಿರುದ್ಧವಾಗಿತ್ತು ಆತನು ಈಗ ಮೂರುತಾಸಿನಿಂದ ಒಂದೇ ಸವನೆ ಕಾದಿ ದಣಿದಿದ್ದನು.; ಹೊರತು ಮುಂಜಾವಿನಿಂದ ಆತನು ಬಾಯಲ್ಲಿ ನೀರು ಸಹ ಹಾಕಿದ್ದಿಲ್ಲ, ಇದನ್ನೆಲ್ಲ ತಿಳಿದು ಜಗತ್ಸಿಂಗನು ತಾನಾಜಿಗೆ ಸಹಾಯ ಮಾಡುವದಕ್ಕಾಗಿ ತಿರುಗಿದನು. ಆತನು ಆ ಉಭಯ ವೀರರು ಕಾದುತ್ತಿರುವಲ್ಲಿಗೆ ಹೋಗುವದಕ್ಕಾಗಿ ಹಾದಿಯನ್ನು ಮಾಡಿಕೊಳ್ಳುತ್ತಿದ್ದನು. ಅಷ್ಟರಲ್ಲಿ ಉದಯಭಾನುವಿನ ಕತ್ತಿಯ ಒಂದು ಕಡತವು ತಾನಾಜಿಯ ಬಲಗೈ ಮಣಿಕ್ಕೈಯ ಕೆಳಗೆ ತಾಕಿ ಖಡ್ಗಸಹಿತವಾಗಿ ಆ ಕೈಯು ಹಾರಿಹೋಯಿತು. ಹೀಗೆ ಕೈಯು ಹಾರಿದ್ದನ್ನು ನೋಡಿ

ಉದಯಭಾನುವು ಕುತ್ತಿಗೆಯ ಹತ್ತರ ಮತ್ತೊಮ್ಮೆ ಖಡ್ಗವನ್ನು ಪ್ರಯೋಗಿಸಿ, ತಾನಾಜಿಯನ್ನು ನೆಲಕ್ಕೆ ಕೆಡವಿದನು. ಕೂಡಲೆ ಅವನು ಮೂರನೆಯ ಸಾರೆ ಖಡ್ಗವನ್ನು ನೆಗಹಿ ತಾನಾಜಿಯ ಎದೆಗೆ ಹೊಡೆದನು. ಅದು ತಾನಾಜಿಯ ಮರ್ಮಸ್ಥಳಕ್ಕೆ ತಾಕಲು ಆ ವೀರನು— ''ಹಾಯ್! ಮಹಾರಾಜರೇ, ಇಂದಿನ ಈ ಸೇವೆಯು ಪೂರ್ಣವಾದೀದೆಂದು ಮಾಡಿದ್ದೆನು; ಆದರೆ ಆಗಲಿಲ್ಲ, ಇಂದೇ ನಿಮ್ಮ ಸೇವೆಯ ಋಣಾನುಬಂಧವು ಕಡಿದುಹೋಯಿತು! ದೇವರ ಇಚ್ಛೆಯು!'' ಎಂದು ನುಡಿದು, ಆ ಸತ್ಯಪ್ರತಿಜ್ಞನು ಸ್ವರ್ಗವನ್ನೆಯ್ದಿದನು.

ತನ್ನ ವೈರಿಯನ್ನು ನೆಲಕ್ಕೆ ಕೆಡವಿದ ಮಾತ್ರದಿಂದ ಉದಯಭಾನುವಿಗೆ ಸಮಾಧಾನ ವಾಗಲಿಲ್ಲ. ಇಲ್ಲಿಯವರೆಗೆ ಮುಚ್ಚಿಕೊಂಡಿದ್ದ ತನ್ನ ಬಾಯಿಂದ ತಾನಾಜಿಯನ್ನು ಬಯ್ಯುತ್ತ ಅವನ ಹೆಣವನ್ನು ಒದೆಯಬೇಕೆಂಬ ಇಚ್ಛೆಯು ಆ ಕುಲಗೇಡಿಗೆ ಉತ್ಪನ್ನವಾಯಿತು. ಅವನು, ಏ ಕಾಫರಾ, ಹೋಗು, ನರಕಕುಂಡಕ್ಕೆ ಹೋಗು; ಸೈತಾನನ ರಾಜ್ಯವನ್ನು ಪ್ರವೇಶಿಸು, ಅಲ್ಲಿ ನಾನು ಕಳಿಸಿದೆನೆಂದು ಸೈತಾನನಿಗೆ ಹೇಳು, ಎಂದು ಗಟ್ಟಿಯಾಗಿ ನುಡಿಯುತ್ತ, ಹೆಣವನ್ನು ಒದೆಯುವದಕ್ಕಾಗಿ ಕಾಲನ್ನು ಎತ್ತಿದನು; ಆದರೆ ಅಷ್ಟರಲ್ಲಿ ಅದನ್ನು ಯಾರೋ ಅಲ್ಲಿಯೇ ತುಂಡರಿಸಿದರು. ಕಾಲು ಕಡೆದು ಹೋದದ್ದರಿಂದ ವ್ಯಥೆಪಡುತ್ತಿದ್ದ ಉದಯಭಾನುವಿನ ಕಿವಿಗೆ— ಎಲಾ— ದುಷ್ಟಾ, ನರಾಧಮಾ, ರಜಪೂತ ಕುಲದಲ್ಲಿ ಹುಟ್ಟಿ ಇನ್ನೂ ಎಷ್ಟು ಪ್ರಕಾರದ ನೀಚ ಕೃತ್ಯಗಳನ್ನು ಮಾಡಬೇಕೆನ್ನುತ್ತೀ? ಸಮರಾಂಗಣದಲ್ಲಿ ಎದುರಾಗಿ ನಾಲ್ಕುಗಳಿಗೆ ಸಮಾನ ಪರಾಕ್ರಮದಿಂದ ಕಾದಿದ ವೀರನು ರಣದಲ್ಲಿ ಪತನವಾಗಿರಲು, ಅವನ ಶವಕ್ಕೆ ನಮಸ್ಕಾರ ಮಾಡುವದನ್ನು ಬಿಟ್ಟು ಅದನ್ನು ಒದೆಯುವದಕ್ಕಾಗಿ ಕಾಲನ್ನು ಎತ್ತುತ್ತೀಯಾ? ಇನ್ನು ಇತ್ತ ನಿನ್ನ ಮೋರೆಯನ್ನು ತಿರುಗಿಸು, ನಿನ್ನ ಶೌರ್ಯವನ್ನು ನೋಡೋಣ. ಎಂಬ ಶಬ್ದಗಳು ಬೀಳಲು, ಉದಯಭಾನುವು ಮೇಲಕ್ಕೆ ಮೋರೆಯನ್ನು ಎತ್ತಿ ನೋಡಹತ್ತಿದನು. ಮಾತಾಡುವವನು ಗುರುತಿನವನೆಂಬಂತೆ ಆತನಿಗೆ ತೋರಲಿಲ್ಲ. ಆತನು ಆಡುವ ಅಚ್ಚಮೇವಾಡಿ ಭಾಷೆಯನ್ನು ಕೇಳಿದರೆ, ಜಾತಿಯಿಂದ ಅವನು ರಜಪೂತನೆಂಬದು ವ್ಯಕ್ತವಾಗುತ್ತಿತ್ತು. ಮಹಾರಾಷ್ಟ್ರರ ಪಕ್ಷದಿಂದ ಇಷ್ಟು ಅಭಿಮಾನಪೂರ್ವಕವಾಗಿ ಯುದ್ಧ ಮಾಡುವ ರಜಪೂತನು ಯಾವನಿರಬಹುದೆಂಬದರ ತರ್ಕವೇ ಉದಯಭಾನುವಿಗೆ ಆಗಲೊಲ್ಲದು; ಯಾಕಂದರೆ ಅವನು ಜಗತ್ಸಿಂಗನನ್ನು ಎಂದೂ ನೋಡಿದ್ದಿಲ್ಲ. ಆದ್ದರಿಂದ ಉದಯಭಾನುವು, ತನ್ನ ದಂಡಿನೊಳಗಿನ ತನಗೆ ಆಗದ ಯಾವನೋ ಒಬ್ಬ ಸಿಪಾಯಿಯು ತನ್ನ ಮೇಲೆ ತಿರುಗಿಬಿದ್ದು ಸೇಡು ತೀರಿಸಿಕೊಳ್ಳಲಿಕ್ಕೆ ಬಂದಿರಬಹುದೆಂದು ತರ್ಕಿಸಿ ಸಂತಾಪ ದಿಂದ ಅವನನ್ನು ಬಯ್ಯಹತ್ತಿದನು. ಆದರೆ ಜಗತ್ಸಿಂಗನು ಆ ಬೈಗಳನ್ನು ಕೇಳಿ ಸಹಜವಾಗಿ ನಕ್ಕು ಅವನನ್ನು ಕುರಿತು—ಉದಯಭಾನೂ, ನಿನ್ನ ಪರಾಕ್ರಮವು ಬೈಯುವದರಲ್ಲಿ, ಮತ್ತು ಯಾವಳಾದರೊಬ್ಬ ಸಾಧ್ವೀ ಸ್ತ್ರೀಯು ಸಹಗಮನ ಮಾಡುತ್ತಿರುವಾಗ ಆಕೆಯನ್ನು ಪ್ರತಿಬಂಧ ದಲ್ಲಿಟ್ಟು, ಆಕೆಯ ಪಾತಿವ್ರತ್ಯವನ್ನು ಕೆಡಿಸುವಷ್ಟರಲ್ಲಿ ಮಾತ್ರ ಇದ್ದೀತೆಂದು ನನಗೆ ತೋರಿದ್ದಿಲ್ಲ; ಆದರೆ ಆ ನಿನ್ನ ಪರಾಕ್ರಮವು ಅಂಥದೇ ಎಂಬದನ್ನು ಇಂದು ಮನಗಂಡೆನು; ಅಂದಬಳಿಕ

ಖಡ್ಗವನ್ನಾದರೂ ಕೈಯಲ್ಲಿ ಯಾಕೆ ಹಿಡಿಯುತ್ತೀ? ಒಗೆದು ಬಿಡಭಾರದೆ? ಎಂದು ನುಡಿದನು. ಜಗತ್ಸಿಂಗನು ಈ ಮನಸ್ಸಿಗೆ ಹತ್ತುವ ಮಾತುಗಳು ಸ್ವಾಭಾವಿಕವಾಗಿಯೇ ಉದಯಭಾನುವಿಗೆ ತಡೆಯಲಿಲ್ಲ. ''ಒಗೆದು ಬಿಡಬಾರದೆ'' ಎಂಬ ಶಬ್ದವು ಕಿವಿಗೆ ಬಿದ್ದಕೂಡಲೆ ಆತನು ಸಿಟ್ಟಿಗೆದ್ದು ಜಗತ್ಸಿಂಗನ ಮೇಲೆ ಖಡ್ಗವನ್ನು ಪ್ರಯೋಗಿಸಿ, ಮೋಸದಿಂದ ಮಹಾರಾಷ್ಟ್ರರನ್ನು ಕೂಡಿದ್ದಕ್ಕಾಗಿ ಅವನನ್ನು ಬಾಯಿಗೆ ಬಂದಂತೆ ಬೈದನು. ಆ ಬೈಗಳನ್ನು ಕೇಳಿ ಜಗತ್ಸಿಂಗನು ತಿರಸ್ಕಾರದಿಂದ ನಕ್ಕನು. ಆತನು ಜಾಗರೂಕನಾಗಿದ್ದದ್ದರಿಂದ ಉದಯಭಾನುವಿನ ಹೊಡೆತಕ್ಕೆ ಢಾಲನ್ನು ಅಡ್ಡಮಾಡಿ ತನ್ನನ್ನು ಕಾದುಕೊಂಡನು. ಬಳಿಕ ಅವರಿಬ್ಬರ ಕಾಳಗಕ್ಕೆ ಆರಂಭ ವಾಯಿತು. ಇವರಿಬ್ಬರ ಕಾಳಗವೆಂದರೆ ಈ ಮೊದಲು ಉದಯಭಾನುವು ತಾನಾಜಿಯೊಡನೆ ಮಾಡಿದ ಕಾಳಗದ ಪುನರಾವರ್ತನವೆಂದು ಹೇಳಬಹುದು. ಈ ಕಾಳಗದಲ್ಲಿ ಉದಯ ಭಾನುವು ಬಾಯಿಗೆ ಬಂದಹಾಗೆ ಬೈಯುತ್ತಿದ್ದದ್ದೊಂದೇ ಹೆಚ್ಚಿನ ಸಂಗತಿಯಾಗಿತ್ತು

ತಾನಾಜಿಯು ಮರಣಹೊಂದಿದ ವರ್ತಮಾನವು ಕಾಡುಗಿಚ್ಚಿನಂತೆ ಹಬ್ಬಲು, ನಿಜವನ್ನು ತಿಳಿಯುವದಕ್ಕಾಗಿ ಸೇಲಾರಮಾವನು ಹುಡುಕುತ್ತ ಹುಡುಕುತ್ತ ಆ ಯುದ್ಧ ನಡೆದ ಸ್ಥಳಕ್ಕೆ ಬಂದನು. ಅಲ್ಲಿ ಉದಯಭಾನುವಿಗೂ ಜಗತ್ಸಿಂಗನಿಗೂ ಕಾಳಗವು ನಡೆದಿದ್ದು, ಉದಯ ಭಾನುವು ಜಗತ್ಸಿಂಗನಿಗೆ— ಎಲಾ, ನಿನ್ನ ತಾನಾಜಿಯನ್ನು ಕೊಂದು ನರಕಕ್ಕೆ ಕಳುಹಿಸಿದಂತೆ, ನಿನ್ನನ್ನೂ ಕಳಿಸುತ್ತೇನೆ, ಎಂದು ಅನ್ನುತ್ತಾನೆ; ಅದಕ್ಕೆ ಜಗತ್ಸಿಂಗನು—''ನೀನು ನನ್ನನ್ನು ಕಳಿಸುತ್ತೀಯೋ, ನಾನು ನಿನ್ನನ್ನು ಕಳಿಸುತ್ತೇನೋ ನೋಡೋಣ'' ಎಂದು ಉತ್ತರ ಕೊಡುತ್ತಾನೆ! 'ತಾನಾಜಿ' ಮತ್ತು 'ನರಕ' ಎಂಬ ಎರಡು ಶಬ್ದಗಳನ್ನು ಕೇಳಿದಕೂಡಲೆ ಸೇಲಾರಮಾವನಿಗೆ ದುಃಖವೂ, ಸಂತಾಪವೂ ಉತ್ಪನ್ನವಾದವು. ಆತನು ಒಮ್ಮೆಲೆ ಇಬ್ಬರ ನಡುವೆ ಹೋಗಿ ಜಗತ್ಸಿಂಗನನ್ನು ಕುರಿತು— ಜಗತ್ಸಿಂಗಾ, ನನ್ನ ಶೂರ ಅಳಿಯನಾದ ತಾನಾಜಿಯನ್ನು ಕೊಂದು ಈ ದುಷ್ಟನನ್ನು ಕೊಲ್ಲುವ ಕೆಲಸವು ನನ್ನದು. ನೀನು ಹಿಂದಕ್ಕೆ ಸರಿ. ಮರಾಟನು ಎಂಬತ್ತು ವರ್ಷದ ಮುದುಕನಾಗಿದ್ದರೂ ಅವನ ಸುರಿತ ಎಲವುಗಳಲ್ಲಿ ಸಾಮರ್ಥ್ಯವೆಷ್ಟಿರುತ್ತದೆಂಬದು ಈ ಬಾಯಬಡಕನಾದ ರಜಪೂತನಿಗೆ ಗೊತ್ತಾಗಲಿ. ಏ ಷಂಢಾ, ನಡಿ, ಬಾ ಇತ್ತ ಎಂದು ಸೇಲಾರಮಾವನು ಹುಚ್ಚೆದ್ದು ಹರಿಯುವ ಹುಲಿಯಂತೆ ಉದಯಭಾನುವಿನ ಮೈಮೇಲೆ ಹರಿದುಹೋದನು. ಆ ಮುದುಕನ ವಿಲಕ್ಷಣವಾದ ತ್ವೇಷವನ್ನು ನೋಡಿ ಜಗತ್ಸಿಂಗನಂತು ಹಿಂದಕ್ಕೆ ಸರಿದೇ ಸರಿದನು; ಆದರೆ ಸ್ವತಃ ಉದಯಭಾನವೂ ಕ್ಷಣಹೊತ್ತು ಚಕಿತನಾಗಿ ಸುಮ್ಮನೆ ನಿಂತುಕೊಂಡನು. ಆ ಎಂಬತ್ತು ವರ್ಷದ ಮುದುಕನ ಪಟ್ಟಾಕತ್ತಿಯ ಮೊದಲನೆಯ ಹೊಡತದಿಂದಲೇ ಉದಯಭಾನುವು ಎಚ್ಚತ್ತನು. ತರುವಾಯ ಎಂಬತ್ತು ವರ್ಷದ ಮುದುಕನಿಗೂ ಮೂವತ್ತು ಮೂವತ್ತೈದು ವರ್ಷದ ತರುಣನಿಗೂ ಕಾಳಗವು ಆರಂಭವಾಯಿತು.

ತಾನಾಜಿಯು ರಣಭೂಮಿಯಲ್ಲಿ ಬಿದ್ದ ವರ್ತಮಾನವು ಹಬ್ಬುತ್ತ ಹೋದಂತ ಮಹಾರಾಷ್ಟ್ರರ ಧೈರ್ಯವು ಕುಗ್ಗುತ್ತ ಹೋಯಿತು. ರಜಪೂತ ಸಿಪಾಯಿಗಳು ಹೆಚ್ಚು ಆವೇಶದಿಂದ ಕಾದತೊಡಗಿದರು. ಮಹಾರಾಷ್ಟ್ರರು ಉಡದ ಸಹಾಯದಿಂದ ಏರಿಬಂದ

ನಿಟ್ಟಿನಲ್ಲಿ ಸೂರ್ಯಾಜಿಯು ಕಾದುತ್ತಿದ್ದನು. ವಿಸಾಜಿ ಕಣೇರಕರನು ಕಲ್ಯಾಣದ ಬಾಗಿಲನ್ನು ಕಾಯುತ್ತಿದ್ದನು. ಮರಾಟರು ಬರಬರುತ್ತ ತೀರ ಎದೆಗೆಟ್ಟು, ತಾವು ಹತ್ತಿಬಂದ ಹಾದಿಯಿಂದಲೇ ಇಳಿದು ಹೋಗುವದಕ್ಕಾಗಿ ಅತ್ತಕಡೆಗೆ ಓಡತೊಡಗಿದರು. ಹೀಗೆ ಅವರು ಓಡುವದನ್ನು ನೋಡಿ ಅವರನ್ನು ರಜಪೂತರು ಬೆನ್ನಟ್ಟಿದರು. ತಾನಾಜಿಯು ಮರಣ ಹೊಂದಿದ ವರ್ತಮಾನವನ್ನು ಕೇಳಿದ್ದರೂ, ಸೂರ್ಯಾಜಿಯು ಯುದ್ಧದಲ್ಲಿ ಆವೇಶ ಗುಂದಲಿಲ್ಲ. ಆತನು ಒಳ್ಳೇ ನಿಗ್ಗರದಿಂದ ಕಾದುತ್ತಿದ್ದನು. ಎದುರಾಳಿಗಳನ್ನು ತುಂಡರಿಸುವ ಕೆಲಸವು ಒಂದೇಸವನೆ ನಡೆದಿತ್ತು; ಆದರೆ ತನ್ನ ಅಣ್ಣನು ರಣಭೂಮಿಯಲ್ಲಿ ಬಿದ್ದಕೂಡಲೆ ತನ್ನ ನಂಬುಗೆಯ ಜನರು ಓಡಿಹೋಗುತ್ತಿರುವದನ್ನು ನೋಡಿ ಅವನಿಗೆ ಬಹಳ ಅಸಮಾಧಾನ ವಾಯಿತು. ಆತನು ಮೊದಲು ಆ ಹಗ್ಗಗಳಿದ್ದ ಸ್ಥಳಕ್ಕೆ ಹೋಗಿ ಅವನ್ನೆಲ್ಲ ಕೊಯ್ದು ಚಲ್ಲಿ ಅಲ್ಲಿಯೇ ನಿಂತು ಓಡಿಹೋಗುವ ತನ್ನ ಮಾವಳರನ್ನು ಕುರಿತು ನುಡಿದನೇನಂದರೆ— ಎಲೇ ಷಂಢರಿರಾ, ರಣಹೇಡಿಗಳಿರಾ, ಹೋಗಿರಿ, ಸಾಯಿರಿ, ಗೋಡೆಯ ಮೇಲಿಂದ ಹಾರಿಕೊಂಡು ಸಾಯಬೇಕೆಂದು ಇಚ್ಛಿಸುತ್ತಿದ್ದರೆ ಸಾಯಿರಿ, ನಾನು ಹಗ್ಗಗಳನ್ನು ಕೊಯ್ದುಬಿಟ್ಟಿದ್ದೇನೆ. ನಿಮ್ಮಪ್ಪನು ಅಲ್ಲಿ ಸತ್ತುಬಿದ್ದಿರುವನು, ಅವನ ಹೆಣವನ್ನು ಹೊಲಿಯರು ನಾಯಿಯ ಮುಂದೆ ಎಳೆದಾರೆಂಬದನ್ನು ಮಾತ್ರ ವಿಚಾರಮಾಡಿರಿ.

ಆಯಿತು; ಸೂರ್ಯಾಜಿಯ ಈ ಹೃದಯಭೇದಕ ಮಾತುಗಳಿಂದ ಆಗಬೇಕೆಂದು ಬಯಸಿದ್ದ ಕಾರ್ಯವು ಸಂಪೂರ್ಣವಾಗಿ ಆಯಿತು. ಗೋಡೆಯ ಮೇಲಿಂದ ಹಾರಿಕೊಂಡು ಪ್ರಾಣಬಿಡುವದಕ್ಕಿಂತ, ಶೌರ್ಯದಿಂದ ಯುದ್ಧಮಾಡಿ ಕೋಟೆಯನ್ನು ಕೈವಶಮಾಡಿ ಕೊಳ್ಳುವದು ಇಲ್ಲವೆ ಯುದ್ಧಮಾಡುತ್ತ ಮಾಡುತ್ತ ಧಾರಾತೀರ್ಥದಲ್ಲಿ ಪತನ ಹೊಂದುವದು ಶ್ರೇಯಸ್ಕರವೆಂದು ಅವರು ತಿಳಿದರು. ಅತ್ತ ಉದಯಭಾನುವಿನೊಡನೆ ಕಾದುತ್ತಿದ್ದ ಸೇಲಾರ ಮಾವನಾದರೂ ತನ್ನ ಜನರನ್ನು ಬಾಯಿಗೆ ಬಂದಹಾಗೆ ಬಯ್ಯುತ್ತಿದ್ದನು. ಆ ಮುದುಕನ ಪರಾಕ್ರಮವನ್ನೂ, ವೀರಶ್ರೀಯನ್ನೂ ನೋಡಿಯಂತೂ ಓಡಿಹೋಗಲಿಚ್ಛಿಸುವ ಮರಾಟರು ಬಹಳ ನಾಚಿಕೊಂಡರು. ಓಡಿ ಹೋಗುವ ಬುದ್ಧಿಯಿಂದ ಹಗ್ಗದ ಕಡೆಗೆ ಸಾಗಿದ್ದ ಅವರು ಒಮ್ಮೆಲೆ ಹಿಂದಿರುಗಿ ತಮ್ಮನ್ನು ಬೆನ್ನಟ್ಟಿಬರುವ ರಜಪೂತ ಸಿಪಾಯಿಗಳನ್ನು ಒಳಿತಾಗಿ ಹಣೆದರು. ಇಷ್ಟರಲ್ಲಿ ಮುದುಕನ ಪಟ್ಟಾಕತ್ತಿಯ ಪೆಟ್ಟು ಉದಯಭಾನುವಿನ ಕುತ್ತಿಗೆಗೆ ತಾಕಿ ಅಲ್ಲಿಯ ಶಿರಗಳು ಹರಿದದ್ದರಿಂದ ಅವನು ತಿರುಗಿ ಬಿದ್ದನು. ಆಮೇಲೆ ಕೇಳುವದೇನು? ಉದಯಭಾನುವು ಬಿದ್ದ ಸುದ್ದಿಯು ಕೂಡಲೆ ಕೋಟೆಯ ತುಂಬೆಲ್ಲ ಹಬ್ಬಿತು. ಇದಲ್ಲದೆ ಮರಾಟರ ಇನ್ನೊಂದು ಗುಂಪು ಕೆಳಗಿನಿಂದ ಮೇಲಕ್ಕೆ ಏರಿಬರುತ್ತದೆಂಬ ಸುದ್ದಿಯು ಬಂದಿತು. ತಮ್ಮ ಮುಂದಾಳುವು ಮಡಿದನು, ಅವನ ಸ್ಥಳವನ್ನು ಆಕ್ರಮಿಸಲಿಕ್ಕೆ ಎರಡನೆಯವನಾವನೂ ಇಲ್ಲವು, ಮೇಲಾಗಿ ಮರಾಟರ ಸೈನ್ಯವು ಹಬ್ಬುತ್ತದೆಂಬ ಸುದ್ದಿಯು! ಬಳಿಕ ಕೇಳುವದೇನು? ಸ್ವಲ್ಪಹೊತ್ತಿನ ಮುಂದೆ ಮರಾಟರ ಸಿಪಾಯಿಗಳಿಗೆ ಒದಗಿದ್ದ ಸ್ಥಿತಿಯು ಈಗ ರಜಪೂತ ಸಿಪಾಯಿಗಳಿಗೆ ಒದಗಿತು. ಅವರು ಹಾದಿಕ್ಕತ್ತ ಓಡತೊಡಗಿದರು. ಮರಾಟರು ಸ್ವಲ್ಪ ಜನರಿದ್ದರೂ

ಅವರು ಮೂರು ಸ್ಥಳಗಳಲ್ಲಿ ಹರಿಬಿದ್ದದ್ದರಿಂದ ಮರಾಟರು ಇಲ್ಲದ ಸ್ಥಳವಾವುದೆಂಬದೇ ರಜಪೂತರಿಗೆ ತಿಳಿಯದಾಯಿತು. ಕಲ್ಯಾಣದ ಬಾಗಿಲಕಡೆಗೆ ಹೋಗಬೇಕೆಂದರೆ ಅಲ್ಲಿ ಏಸಾಜಿಕಣೇರಕರನು ತನ್ನ ಸ್ವಲ್ಪ ಜನರೊಡನೆ ಕುಳಿತೇ ಇದ್ದನು. ಅವನು ಎಷ್ಟೋ ರಜಪೂತರನ್ನು ಹೊಡೆದನು. ನಡುಕೋಟೆಯಲ್ಲಿ ಸೇಲಾರಮಾವನು ಸಿಂಹದಂತೆ ಗರ್ಜಿಸುತ್ತ ಸಂಚರಿಸುತ್ತಿದ್ದನು. ಸೂರ್ಯಾಜಿಯಂತೂ ಎಲ್ಲ ಕಡೆಗೂ ಸುಳಿದಾಡುತ್ತಲೇ ಇದ್ದನು. ಮತ್ತೊಂದು ಮಗ್ಗಲಿಗೆ ನಿಕರದಿಂದ ಕಾದುವ ಮರಾಟರು ಸಿದ್ಧವಾಗಿದ್ದರು! ಇಂಥ ಸ್ಥಿತಿಯಲ್ಲಿ ಪಾಪ! ಹತಾಶರಾದ ರಜಪೂತರು ಏನು ಮಾಡಬೇಕು? ಕೆಲವರು ಮೈಮರೆತು ಗೋಡೆಯ ಮೇಲಿಂದ ಹಾರಿಕೊಂಡರು; ಕೆಲವರು ಹತವೀರ್ಯರಾಗಿ ಶಸ್ತ್ರಗಳನ್ನು ಚಲ್ಲಿಕೊಟ್ಟು ಕುಳಿತುಕೊಂಡರು. ಕಡೆಗೆ ಶತ್ರುಗಳು ತೀರ ಹತಾಶರಾದರೆಂಬದನ್ನು ನೋಡಿ ಸೂರ್ಯಾಜಿಯು ಜಗತ್ಸಿಂಗನು ಮುಖಾಂತರವಾಗಿ—"ಶಸ್ತ್ರಗಳನ್ನು ಚಲ್ಲಿಕೊಟ್ಟು, ಸ್ವಸ್ಥ ಕುಳಿತವರಿಗೆ ಇನ್ನುಮೇಲೆ ಯಾವ ಬಗೆಯ ಉಪದ್ರವವೂ ಆಗಲಿಕ್ಕಿಲ್ಲ, ಯುದ್ಧವು ನಿಲ್ಲಿಸಲ್ಪಟ್ಟಿರುವದು," ಎಂದು ಡಂಗುರವನ್ನು ಹೊಯಿಸಿದನು. ಕೂಡಲೆ ರಜಪೂತ ಸಿಪಾಯಿಗಳು ಶಸ್ತ್ರಗಳನ್ನು ಆತನ ಮುಂದೆ ಇಟ್ಟು, ರುಮಾಲದಿಂದ ಕೈಗಳನ್ನು ಕಟ್ಟಿಕೊಂಡು ಒಮ್ಮೆ ಬಗ್ಗಿ "ರಾಮರಾಮ" ಮಾಡಿದರು. ಅವರಿಗೆ ಸೂರ್ಯಾಜಿಯು ಅಭಯವನ್ನು ಕೊಟ್ಟು, ನಿಮ್ಮ ನಿಮ್ಮ ಸ್ಥಳದಲ್ಲಿ ಕುಳಿತುಕೊಳ್ಳಿರೆಂದು ಹೇಳಿದನು. ಕೋಟೆಯು ಕೈವಶವಾಯಿತು. ಈ ವರ್ತಮಾನವು ಮಹಾರಾಜರಿಗೆ ತಿಳಿಯಲಿಕ್ಕೆಬೇಕೆಂದು ಸೇಲಾರಮಾವನು ಏಸಾಜಿ ಕಣೇರಕರನಿಗೆ ಹೇಳಿ, ಪಾಗೆಯೊಳಗಿನದೊಂದು ಹುಲ್ಲುಬಣವಿಗೆ ಬೆಂಕಿಯನ್ನು ಹಚ್ಚಿಸಿಬಿಟ್ಟನು. ತಾನಾಜಿಯ ಅಕಾಲಿಕ ಮೃತ್ಯುವಿನಿಂದ ಒದಗಿದ ದುಃಖವನ್ನು ಶೂರರಿಗೆ ಯೋಗ್ಯವೂ, ಸ್ವಾಭಾವಿಕವೂ ಆದ ಆತ್ಮಸಂಯಮನದಿಂದ ಸೂರ್ಯಾಜಿ, ಸೇಲಾರಮಾವ, ಯೇಸಾಕಣೇರಕರ ಇವರು ಇಲ್ಲಿಯ ವರೆಗೆ ನುಂಗಿಕೊಂಡಿದ್ದರು. ಎಲ್ಲಕಡೆಯಲ್ಲಿ ಶಾಂತತೆಯು ಆಗಿ, ಮೂವರೂ ಒತ್ತಟ್ಟಿಗೆ ಕೂಡಿದ ಕೂಡಲೇ ಅವರ ಆ ದುಃಖಾಶ್ರುವು ಅಶ್ರುಗಳ ರೂಪದಿಂದ ಹೊರಬೀಳಹತ್ತಿತು. ಸೂರ್ಯಾಜಿಯಂತೂ ತಾನಾಜಿಯ ತಮ್ಮನು. ಸೇಲಾರಮಾವನು ತಾನಾಜಿಯ ಸೋದರಮಾವನು. ಅಂದಬಳಿಕ ಅವರಿಗೆ ಅಪರಿಮಿತ ದುಃಖವಾದದ್ದು ಸ್ವಾಭಾವಿಕವು; ಆದರೆ ಜತ್ಸಿಂಗಗನಿಗೆ ಅವರಿಬ್ಬರಿಗಿಂತಲೂ ಹೆಚ್ಚು ದುಃಖವಾದದ್ದು ವ್ಯಕ್ತವಾಯಿತು.

## ಶಿವಾಜಿ ಮಹಾರಾಜರು

ತಾನಾಜಿಯು, ಮಹಾರಾಜರ ಅಪ್ಪಣೆಯನ್ನೂ, ಜೀಜಾಬಾಯಿಯವರ ಆಶೀರ್ವಾದವನ್ನೂ ತಲೆಯಲ್ಲಾಂತು ಹೋದ ದಿವಸದಿಂದ, ದಿನಾಲು ಒದಗುತ್ತ ಬಂದಿದ್ದ ಸಂಗತಿಗಳನ್ನು ತಪ್ಪದೇ ತಿಳಿಸುತ್ತ ಬಂದಿದ್ದನು; ಆದರೆ ಕಡೆಯ ನಾಲ್ಕಯ್ದು ದಿವಸಗಳಲ್ಲಿ ಒದಗಿದ

ಸಂಗತಿಗಳು, ಒಂದರ ಹಿಂದೆ ಒಂದು ತೆರಪಿಲ್ಲದೆ ಒದಗಿದ್ದರಿಂದ ಅವನ್ನು ತಿಳಿಸಲಿಕ್ಕೆ ಆತನಿತ ಎಷ್ಟು ಮಾತ್ರವೂ ಹೊತ್ತು ದೊರೆಯಲಿಲ್ಲ. ಆತನು ತನ್ನ ಸಂಗಡ ಕಾರಕೂನನನ್ನೂ ಕರಕೊಂಡು ಹೋಗಿದ್ದಿಲ್ಲ; ಮತ್ತು ಕಡೆಯ ನಾಲ್ಕುದಿವಸ ಮಹಾರಾಜರ ಬಳಿಗೆ ಕಳಿಸತಕ್ಕಂಥ ಮನುಷ್ಯನೂ ಆತನ ಬಳಿಯಲ್ಲಿ ಇದ್ದಿಲ್ಲ. ಲಗ್ನಸಮಾರಂಭದಲ್ಲಿ ಗೊಂದಲಿಗನ ಸೋಗಿನಿಂದ ಕೋಳಿಯ ಜನರಲ್ಲಿ ಸೇರಿ ಅವರನ್ನು ಒಡಕೊಂಡಿರುತ್ತೇನೆಂತಲೂ, ಅವರ ಸಹಾಯವು ತನಗೆ ಇರುತ್ತದೆಂತಲೂ, ಇನ್ನು ಸ್ವಲ್ಪ ದಿವಸಗಳಲ್ಲಿ ಕೋಟೆಯನ್ನು ಕೈವಶಮಾಡಿಕೊಳ್ಳುವೆ ನೆಂತಲೂ ಆತನು ಮಹಾರಾಜರಿಗೆ ತಿಳಿಸಿದ್ದನು. ಇದರ ಮುಂದಿನ ಯಾವ ಸುದ್ದಿಯೂ ಮಹಾರಾಜರಿಗೆ ಮುಟ್ಟಿದ್ದಿಲ್ಲ. ದಿನಾಲು ಸಂಜೆಯಾದ ಕೂಡಲೆ ಅವರು ದುರ್ಗವನ್ನು ನೋಡುತ್ತ ಕುಳಿತುಕೊಳ್ಳುತ್ತಿದ್ದರು. ಕೋಳಿಯ ಜನರಲ್ಲಿ ಸೇರಿಕೊಂಡ ನಂತರ ತಿಳಿಸತಕ್ಕಂಥ ಪ್ರಸಂಗವು ಒದಗದ್ದರಿಂದ ತಿಳಿಸಿರಲಿಕ್ಕಿಲ್ಲೆಂತಲೂ ಒಂದರ ಹಿಂದೊಂದು ಪ್ರಸಂಗಗಳು ಒದಗುತ್ತ ಬಂದದ್ದರಿಂದ ತಿಳಿಸಲಿಕ್ಕೆ ಅನುಕೂಲವಾಗಿರಲಿಕ್ಕಿಲ್ಲೆಂತಲೂ ತಿಳಕೊಂಡು ಅವರು ತಮ್ಮ ಮನಸ್ಸಿಗೆ ಸಮಾಧಾನಮಾಡಿಕೊಂಡರು; ಆದರೆ ಎರಡು ದಿವಸ ಹೀಗೆ ಸಮಾಧಾನ ವಾಯಿತು. ಮೂರನೆಯ ದಿವಸ ಈ ತಿಳುವಳಿಕೆಯಿಂದ ಅವರಿಗೆ ಸಮಾಧಾನವಾಗಲಿಲ್ಲ. ಶಿವಾಜಿ ಮಹಾರಾಜರ ಅಪ್ಪಣೆಯನ್ನು ಅಕ್ಷರಶಃ ಪಾಲಿಸುವಂಥ ಅವರ ಸೇವಕನು ಯಾವ ನಾದರೂ ಇದ್ದರೆ, ಆತನು ತಾನಾಜಿಯೇ ಆಗಿದ್ದನು. ಅವರ ಅಪ್ಪಣೆಯನ್ನು ಆತನು ಇಲ್ಲಿಯ ವರೆಗೆ ಸ್ವಲ್ಪವಾದರೂ ಉಲ್ಲಂಘಿಸಿದ್ದಿಲ್ಲ. ಇಷ್ಟು ಹೊತ್ತಿನಲ್ಲಿ ಇಷ್ಟು ಕೆಲಸವಾಗಬೇಕೆಂದು ಹೇಳಿದರೆ, ಅದನ್ನು ಮಾಡಿಯೇ ತೀರುವದು ತಾನಾಜಿಯ ಕ್ರಮವಾಗಿತ್ತು. ದಿನದ ಸುದ್ದಿಯನ್ನು ದೂತರ ಮುಖದಿಂದ ಇಲ್ಲವೆ ಪತ್ರದ್ವಾರದಿಂದ ತಿಳಿಸಬೇಕೆಂದು ಹೇಳಿದರೆ, ಅದು ನಿಯಮಿಸಿದ ಹೊತ್ತಿಗೆ ಬಂದೇ ತೀರಬೇಕು. ಹೀಗಿದ್ದು ಮೂರು ದಿವಸ ಯಾವ ಸುದ್ದಿಯು ಬಾರದ್ದರಿಂದ ಮಹಾರಾಜರು ಮನಸ್ಸಿನಲ್ಲಿ—ಏನಾದರೂ ಘಾತವಾಗಿರಬಹುದು. ಕೋಳಿಯ ಜನರು ಒಡೆದಂತೆ ತೋರಿಸಿ ಒಳಗೆ ಕರಕೊಂಡು, ಆಮೇಲೆ ಆತನನ್ನು ಉದಯಭಾನುವಿಗೆ ಒಪ್ಪಿಸಿರಬಹುದು. ಆ ಉದಯಭಾನುವು ಅವನನ್ನು ಕೋಟೆಯ ಮೇಲಿಂದ ಕೆಳಗೆ ದೂಡಿಸಿರಬಹುದು. ಹೀಗಾಗದೆ ಬೇರೆ ಯಾವತರದ ಪ್ರಸಂಗವು ಒದಗಿದ್ದರೂ ಆತನು ಏನಾದರೂ ಹಂಚಿಕೆ ಮಾಡಿ, ಒದಗಿದ ಪ್ರಸಂಗವನ್ನು ತಿಳಿಸುತ್ತಿದ್ದನು. ತಾನಾಜಿಯು ಬಹು ಹಂಚಿಕೆಗಾರನು. ಆತನು ಬೇಕಾದ ಸೋಗನ್ನು ಹಾಕಿಕೊಳ್ಳಬಲ್ಲನು. ಆತನ ಮಾತು ಬಲು ಸವಿ. ಬೇಕಾದವರ ಮನಸ್ಸನ್ನು ತನ್ನಕಡೆಗೆ ಎಳಕೊಳ್ಳಲಿಕ್ಕೆ ಆತನಿಗೆ ಪ್ರಯಾಸವಾಗದು. ಚಿಕ್ಕಂದಿನಿಂದಲೇ ಆತನು ಯಾವ ಯಾವ ಸೋಗು ಹಾಕಿಕೊಂಡು ಎಲ್ಲಿ ಎಲ್ಲಿ ಪ್ರವೇಶ ಮಾಡಿದನೆಂಬದು ನನ್ನ ಕಣ್ಣಮುಂದೆ ಕಟ್ಟಿದ ಹಾಗಾಗಿವೆ. ಒಮ್ಮೊಮ್ಮೆ ಗೋಸಾವಿಯ ಸೋಗನ್ನೂ, ಒಮ್ಮೊಮ್ಮೆ ದುರಗಮುರಗಿಯ ಸೋಗನ್ನೂ, ಒಮ್ಮೊಮ್ಮೆ ಗೊಂದಲಿಗನ ಸೋಗನ್ನೂ ಹೀಗೆ ಬೇರೆ ಬೇರೆ ಸೋಗನ್ನು ಹಾಕಿಕೊಂಡು ಆತನು ಹತ್ತುಸಾರವನ್ನು ಸುದ್ದಿಯನ್ನು ಹಚ್ಚಿಕೊಂಡು ಬರುತ್ತಿದ್ದನು. ಇಂಥವನು ಏನೂ ಸುದ್ದಿಯನ್ನು ಕಳಿಸದೆ ಸುಮ್ಮನೆ ಹ್ಯಾಗಿದ್ದಾನು! ಏನಾದರೂ ಘಾತವಾಗಿರಲಿಕ್ಕೇ ಬೇಕು. ಎಂದು ಮಹಾರಾಜರು ಚಿಂತಿಸಿದರು.

ಗೊಂದಲಿಗನ ಸೋಗಿನಿಂದ ಕೋಳಿಯ ಜನರಲ್ಲಿ ಸೇರಿ, ಅವರಿಗೆ ಕಥೆ ಹೇಳಿ ಅವರನ್ನು ಆವೇಶಗೊಳಿಸಿ ಒಡಕೊಂಡನೆಂದು ಬರೆದ ಪತ್ರವನ್ನೂ, ಆ ಪತ್ರದ ಸಂಗಡ ಕಳಿಸಿದ ಆ ಕಥೆಯನ್ನೂ ಓದಿಸಿ ನೋಡಿದ ಬಳಿಕಂತು ತಾನಾಜಿಯ ಯುಕ್ತಿಗಾಗಿ ಮಹಾರಾಜರು ಪರಮಾಶ್ಚರ್ಯಪಟ್ಟರು. ಚಿಟಣೀಸನ ಕೈಯಿಂದ ಆ ಪತ್ರವನ್ನೂ, ಕಥೆಯನ್ನೂ ತಾಯಿಯಾದ ಜೀಜಾಬಾಯಿಯವರಿಗೆ ಓದಿ ತೋರಿಸಿದರು. ಅದನ್ನು ಕೇಳಿ ಜೀಜಾಬಾಯಿಯವರು ಆಶ್ಚರ್ಯದಿಂದ ಬಟ್ಟನ್ನೇ ಕಚ್ಚಿದರು. ಅವರ ಕಣ್ಣುಗಳಲ್ಲಿ ಪ್ರೇಮಾಶ್ರುಗಳು ಆಡಿದವು. ಅವರು ಮಹಾರಾಜರನ್ನು ಕುರಿತು—ಅವ್ವಯ್ಯಾ! ಹೀಗೆ ಈತನು ಮಂದಿಯ ಮನೆಸೇರಿ ಅವರ ಹೊಟ್ಟೆಯಲ್ಲಿ ಹೊಕ್ಕು ಬೆನ್ನಲ್ಲಿ ಬಿರಿಯುತ್ತಾನಲ್ಲ, ಅಲ್ಲಿ ಯಾರಾದರೂ ತನ್ನ ಗುರುತು ಹಿಡಿದು ಜೀವದರಿಸೆ ತನ್ನನ್ನು ಕೊಂದಾರೆಂಬ ಭಯವು ಈತನಿಗಿರಲಿಕ್ಕಿಲ್ಲವೇ? ಹ್ಯಾಗೆ ಕಥೆಯನ್ನು ರಚಿಸಿದ್ದಾನಲ್ಲ! ಆತನು ಇಲ್ಲಿಗೆ ಬಂದನೆಂದರೆ— "ಗೊಂದಲಿಗರೇ" ಎಂದು ಆತನ ಬೆನ್ನುಹತ್ತಿ ಆತನಿಂದ ಕಥೆಯನ್ನು ಹೇಳಿಸುತ್ತೇನೆ. ಶಿವಬಾ, ನಿನ್ನ ಮೇಲೆ ಆತನ ನಿಜವಾದ ಭಕ್ತಿಯಿರುತ್ತದೆ, ಕಂಡೆಯಾ, ಎಂದರು.

ತಾಯಿಯ ಮಾತನ್ನು ಕೇಳಿ ಮಹಾರಾಜರು—ಅವ್ವಾ, ನಾನೇನು ಅದನ್ನು ತಿಳಿದಿಲ್ಲವೇ? ಈಗ ನನ್ನ ಸುತ್ತಲಿರುವ ಪರಿವಾರದಲ್ಲಿ ಅಂಥ ಪ್ರಸಂಗವೇನಾದರೂ ಒದಗಿದಾಗ ತನ್ನ ಜೀವನವನ್ನು ಕೊಟ್ಟು ನನ್ನ ಜೀವವನ್ನು ಉಳಿಸುವವನು ಯಾವನಾದರೂ ಇದ್ದರೆ ಆತನು ತಾನಾಜಿಯೊಬ್ಬನೇ ಎಂದು ಹೇಳಬಹುದು. ತೋರಣದ ಕೋಟೆಯನ್ನು ತಕ್ಕೊಳ್ಳುವದಕ್ಕಿಂತ ಮೊದಲಿನಿಂದ ನಾನು ನೋಡುತ್ತೇನೆ. ಸಂಕಟ ಪ್ರಸಂಗವು ಬಂದಕೂಡಲೆ ನನಗೆ—ಶಿವಬಾ, ನೀನು ಹಿಂದಕ್ಕೆ ಸರಿ. ನಾನು ಅದನ್ನು ನಿವಾರಿಸುತ್ತೇನೆ, (ಆಗ ಅವನು ನನಗೆ "ಎಲಾ" "ಏ" ಎಂದು ಕರೆಯುತ್ತಿದ್ದನು. ಈಗ ಹಾಗೆ ಕರೆಯೆಂದರೂ ಕರೆಯುವದಿಲ್ಲ!) ಎಂದು ಅನ್ನುತ್ತಿದ್ದನು. ಶ್ರೀಧರಸ್ವಾಮಿಯನ್ನು ಪುರಂದರ ಕೋಟೆಯಿಂದ ಬಿಡಿಸುವದಕ್ಕಾಗಿ ಅವನೇ ಮುಂದಾಗಿದ್ದನು; ಆದರೆ ನಾನು ಮುಂದಾಗಗೊಡಲಿಲ್ಲ. ಅಫಜುಲಖಾನನು ದಂಡೆತ್ತಿ ಬಂದಾಗ—"ನಿಮ್ಮ ಗುರುತು ಆತನಿಗೆ ಇರುವದಿಲ್ಲ. ನಿಮ್ಮ ಹೆಸರಿನಿಂದ ನಾನೇ ಆತನ ಬಳಿಗೆ ಹೋಗುತ್ತೇನೆ. ಆಗ ಆತನಿಂದ ಏನಾದರೂ ಹೆಚ್ಚುಕಡಿಮೆ ಬಂದರೆ ಅವನ ಗೋಣನ್ನೇ ಮುರಿದು ಚಲ್ಲುತ್ತೇನೆ, ಎಂದನು. ದಿಲ್ಲಿಯಿಂದ ಹೊರಹೊರಟು ಬರಬೇಕಾದರೂ ಇದೇ ಅವಸ್ಥೆಯು. ಹಾದಿಯಲ್ಲಿಯೂ ಇದೇ ಸ್ಥಿತಿಯು. ಸಂಕಟ ಬಂತೆಂದರೆ ನನ್ನನ್ನು ಹಿಂದಕ್ಕೆ ಸರಿಸಿ ಅದಕ್ಕೆ ನನ್ನ ಕುತ್ತಿಗೆಯನ್ನು ಕೊಡುವದು ನಮ್ಮ ತಾನ್ಯಾನ ಹುಟ್ಟು ಗುಣವಾಗಿರುವದು. ಆತನು ಇರುವವರೆಗೆ ನನಗೆ ಯಾತರ ಚಿಂತೆಯೂ ಇಲ್ಲೆಂದು ನಾನು ಅನ್ನಲಿಕ್ಕೆ ಕಾರಣವು ಇದೇ. ಒಮ್ಮೆ ಆತನು ಇಂಥ ಕೆಲಸ ಮಾಡುತ್ತೇನೆಂದು ಹೇಳಿದನೆಂದರೆ ತೀರಿತು, ತಿರುಗಿ ಅತ್ತ ಕಡೆಗೆ ನಾನು ನೋಡುವ ಅವಶ್ಯವೇ ಇಲ್ಲ. ಇಷ್ಟುಮಾಡಿದರೂ "ನಾನು ತಮ್ಮ ಸಲುವಾಗಿ ಹೀಗೆ ಮಾಡಿದೆನು, ಹ್ಯಾಗೆ ಮಾಡಿದೆನು" ಎಂದು ಅಂದಾನೇನು? ಛೆ! ಅದರ ಹೆಸರು ಎತ್ತಬಾರದು. ಆತನ ಮಾತೇ ಬೇರೆಯಾಗಿರುವದು.

ಈ ಮೇರೆಗೆ ನುಡಿದು ಮಹಾರಾಜರು ಸುಮ್ಮನಾದರು. ಅವರಿಗೆ ಹುಡುಗತನದ ಎಷ್ಟೋ ಮಾತುಗಳು ನೆನಪಾಗಿ, ಅವರ ಅಂತಃಕರಣವು ಸದ್ಗದಿತವಾಯಿತು. ಅವರು ಬಹಳ ಹೊತ್ತಿನ ವರೆಗೆ ಸುಮ್ಮನೆ ಕುಳುತಕೊಂಡು ಮತ್ತೆ ತಾಯಿಯನ್ನು ಕುರಿತು—ಅವ್ವಾ, ಯಾಕೋ ಇಂದು ನನಗೆ ಸಮಾಧಾನವಾಗಲೊಲ್ಲದು. ತೃತೀಯೆಯವರೆಗಿನ ಆತನ ಪತ್ರಗಳು ಇರುತ್ತವೆ. ಈವೊತ್ತು ನವಮಿಯು. ಚತುರ್ಥಿ, ಪಂಚಮಿ, ಷಷ್ಠಿ, ಸಪ್ತಮಿ, ಅಷ್ಟಮಿ ಈ ಐದು ದಿನಗಳ ವರ್ತಮಾನವೇನೂ ಗೊತ್ತಾಗಿಲ್ಲ. ಆತನು ಸುದ್ದಿಯನ್ನು ತಿಳಿಸುತ್ತಾನೆಂಬ ನಂಬಿಗೆಯಿಂದ ನಾನು ಗುಪ್ತಚಾರರನ್ನೂ ಕಳಿಸಲಿಲ್ಲ. ಅದರಲ್ಲಿ ಈವೊತ್ತು ಎದ್ದಾಗಿನಿಂದ ನನ್ನ ಮನಸ್ಸಿಗೆ ಏನೋ ಒಂದು ತರವಾಗಹತ್ತಿದೆ. ಸಮಾಧಾನವಿಲ್ಲ. ಏನು ಅದೆಯೋ ತಿಳಿಯದು. ಈವೊತ್ತು ಒಂದು ದಿವಸ ಹಾದಿಯನ್ನು ನೋಡುತ್ತೇನೆ. ಇಲ್ಲದಿದ್ದರೆ ಇಂದು ಹೊತ್ತು ಮುಣುಗಿದ ಕೂಡಲೆ ಕೋಂಡಾಣೆಯ ದುರ್ಗದ ಕಡೆಗೆ ಹೋಗುತ್ತೇನೆ. ಆತನು ಸಂಕಟಕ್ಕೆ ಒಳಗಾಗಿದ್ದರೆ,ಬಿಡಿಸಲಿಕ್ಕೆ ನಾನೇ ಹೋಗಲಿಕ್ಕೇ ಬೇಕು. ಕೋಟೆಯನ್ನು ಕೈವಶಮಾಡಿ ಕೊಳ್ಳುವದರಲ್ಲಿ ತೊಡಗಿದ್ದರೆ, ನನ್ನಿಂದ ಆತನಿಗೆ ಸಹಾಯ ವಾಗಬಹುದು; ಆದರೆ ಇನ್ನುಮೇಲೆ ಇಲ್ಲಿ ಸುಮ್ಮನೆ ಹಾದಿಯ ನೋಡುತ್ತ ಹೀಗೆ ನೊಣಜಾಡಿಸುತ್ತ ಕುಳಿತುಕೊಳ್ಳುವದು ತಕ್ಕದ್ದಲ್ಲ. ಹೋಗಿಬಿಟ್ಟರೆ ಏನು ಇದ್ದರೂ ತಿಳಿಯುವದು. ನನ್ನಿಂದ ಇನ್ನು ನಿಲ್ಲೋಣವಾಗದು, ಎಂದರು.

ಮೇಲೆ ಮೇಲೆ ನೋಡುವವರಿಗೆ ಮಹಾರಾಜರು ಈ ಮಾತುಗಳನ್ನು ತಮ್ಮ ತಾಯಿಯನ್ನು ಕುರಿತು ಆಡುತ್ತಿದ್ದರೆಂಬಂತೆ ತೋರುತ್ತಿತ್ತು; ಆದರೆ ನಿಜವಾಗಿ ಅವರು ತಮ್ಮೊಳಗೆ ಮಾತಾಡಿ ಕೊಳ್ಳುತ್ತಿದ್ದರೆಂದು ಹೇಳಿದರೆ ಒಪ್ಪಬಹುದು. ತಮ್ಮ ಪರಮ ಮಿತ್ರನೂ ಏಕನಿಷ್ಠ ಸೇವಕನೂ ಆದವನಿಗೆ ಏನೋ ವಿಪತ್ತು ಒದಗಿರುತ್ತದೆಂಬ ಸಂಶಯವು ಉತ್ಪನ್ನವಾದಾಗಿನಿಂದ, ಇನ್ನು ತಾನು ಸ್ವಸ್ಥ ಕುಳಿತುಕೊಳ್ಳುವದು ತಕ್ಕದ್ದಲ್ಲ, ಆತನನ್ನು ಬಿಡಿಸಲಿಕ್ಕೆ ಇಲ್ಲವೆ ಆತನಿಗೆ ಸಹಾಯಮಾಡಲಿಕ್ಕೆ ಹೋಗಲಿಕ್ಕೇಬೇಕೆಂದು ಅವರು ಮನಸ್ಸಿನಲ್ಲಿ ನಿಶ್ಚಯಿಸಿದರು. ತಾನಾಜಿಯು ತನ್ನ ಸ್ವಾಮಿಯ ಪರಮ ಭಕ್ತನಿದ್ದಂತೆ, ಶಿವಾಜಿ ಮಹಾರಾಜರಾದರೂ ನಿಜವಾದ ಸೇವಕರ ಪರಮ ಭಕ್ತರಾಗಿದ್ದರು.

ಮಗನ ಮಾತುಗಳು ಜೀಜಾಬಾಯಿಯವರ ಮನಸ್ಸಿಗೆ ಒಪ್ಪಿಗೆಯಾಗಲಿಲ್ಲ. ನಿಜವಾಗಿ ನೋಡಿದರೆ, ಮಹಾರಾಜರು ಇಷ್ಟು ಅವಸರ ಮಾಡಿ ಹೋಗುವ ಕಾರಣವಿಲ್ಲೆಂದು ಅವರು ತಿಳಿದರು; ಆದರೆ ಇಂಥ ಕೆಲಸದಲ್ಲಿ ಆ ಸಾಧ್ವಿಯ ಮಾತೂ ಮಹಾರಾಜರ ಮುಂದೆ ನಡೆಯುತ್ತಿದ್ದಿಲ್ಲ. ಇಂಥ ಹೊತ್ತಿನಲ್ಲಿ ಹೀಗೆ ಮಾಡುವದು ಯೋಗ್ಯವು, ಹೀಗೆ ಮಾಡಲಿಕ್ಕೇ ಬೇಕೆಂದು ಒಮ್ಮೆ ಗೊತ್ತಾದರೆ ತೀರಿತು. ಅದರಂತೆ ಆಗಲಿಕ್ಕೇ ಬೇಕು. ಅದು ಎಂದಿಗೂ ತಪ್ಪಲಿಕ್ಕಿಲ್ಲ. ತಮ್ಮ ತಾನಾಜಿಯು ಯಾವದೋ ಒಂದು ಸಂಕಟಕ್ಕೆ ಗುರಿಯಾದದ್ದರಿಂದಲೇ ತನಗೆ ಸುದಿಯನ್ನು ಕಳಿಸಿಲ್ಲ, ಇಂಥ ಹೊತ್ತಿನಲ್ಲಿ ಆತನಿಗೆ ಸಹಾಯಮಾಡುವದು ಅವಶ್ಯವು, ಎಂದು ಮಹಾರಾಜರ ಮನಸ್ಸಿನಲ್ಲಿ ಹೊಕ್ಕುಬಿಟ್ಟಿತು. ಅಂದಬಳಿಕ ಕೇಳುವದೇನು! ಕೂಡಲೆ ಅವರು ತಮ್ಮ ಸ್ವಂತದ ಸರದಾರರೊಳಗಿನ ಇಬ್ಬರು ಸರದಾರರಿಗೂ ಹದಿನೈದು ಜನ ಬಾರಗೀರರಿಗೂ

"ಇಂದು ಸಂಜೆಗೆ ರಾಯಗಡವನ್ನು ಬಿಟ್ಟು ಕೋಂಡಾಣೆಯ ದುರ್ಗಕ್ಕೆ ಹೋಗಬೇಕು, ನೀವು ಸಿದ್ಧರಾಗಿರತಕ್ಕದ್ದು" ಎಂದು ಅಪ್ಪಣೆ ಮಾಡಿದರು. ಒಬ್ಬ ಚತುರನಾದ ಗುಪ್ತಚಾರನನ್ನು ನಿಜವಾದ ಸುದ್ದಿಯನ್ನು ತಿಳಕೊಂಡು ಬರುವದಕ್ಕೆ ಮುಂದೆ ಕಳಿಸಿ, ನಾವು ರಾತ್ರಿ ಅರ್ಧಹಾದಿಯಲ್ಲಿ ಇಂಥ ಸ್ಥಳದಲ್ಲಿ ಹಾದಿಯ ನೋಡುತ್ತ ಕುಳಿತುಕೊಂಡಿರುತ್ತೇವೆ, ಅಲ್ಲಿಗೆ ಬಂದು ನೀನು ಇದ್ದ ಸುದ್ದಿಯನ್ನು ಹೇಳಬೇಕೆಂದು ಅಪ್ಪಣೆಮಾಡಿದ್ದರು. ತಾನಾಜಿಗೆ ಯಾವ ಸಂಕಟವು ಒದಗಿರಬಹುದು, ಏನು ಆಗಿರಬಹುದು ಎಂಬದನ್ನು ಕಲ್ಪಿಸುತ್ತ ಅವರು ಆ ದಿವಸವನ್ನು ಕಳೆದರು. ಈಗ ಸುದ್ದಿ ಬಂದೀತು, ಆಗ ಸುದ್ದಿ ಬಂದೀತು, ಎಂದು ಅವರು ಪ್ರತಿಕ್ಷಣ ಹಾದಿಯನ್ನು ನೋಡುತ್ತಿದ್ದರು. ತಾನಾಜಿಯನ್ನು ದುರ್ಗದ ಮೇಲೆ ಪ್ರತಿಬಂಧಿಸಿಟ್ಟಿದ್ದರೆ, ಆತನನ್ನು ಹ್ಯಾಗೆ ಬಿಡಿಸಬೇಕೆಂಬ ಬಗ್ಗೆಯೂ ಅವರ ತಲೆಯಲ್ಲಿ ವಿಚಾರಗಳು ನಡೆದಿದ್ದವು.

ಹೀಗಾಗುತ್ತಾಗುತ್ತ ಹೊತ್ತು ಮುಣುಗಿತು. ಕತ್ತಲು ಬೀಳಹತ್ತಿತು. ಮಹಾರಾಜರ ಲಕ್ಷವು ರಾತ್ರಿ ಮೊದಲನೆಯ ಮೂರು ತಾಸುಗಳಲ್ಲಿ ಏನಿಲ್ಲೆಂದರೂ ಹತ್ತು ಹನ್ನೆರಡು ಸಾರೆಯಾದರೂ ಕೋಂಡಾಣೆಯ ದುರ್ಗದ ಕಡೆಗೆ ಹೋಗಿರಬಹುದು; ಆದರೆ ದುರ್ಗದ ಮೇಲೆ ವಿಶೇಷ ಪ್ರಕಾಶವೇನೂ ಕಾಣಿಸಲೊಲ್ಲದು. ಆಗ ತಾವು ಯೋಚಿಸಿದಂತೆ ಹೊರಡುವದನ್ನೇ ನಿಶ್ಚಯಿಸಿ ತಮ್ಮ ಪ್ರೀತಿಯ ಕರಿಯ ಕುದುರೆಗೆ ತಡಿಹಾಕುವದಕ್ಕಾಗಿ ಅಪ್ಪಣೆಯನ್ನು ಮಾಡಿದರು. ಈ ಕುದುರೆಯ ಮೇಲೆ ಮಹಾರಾಜರ ಪ್ರೇಮ ಬಹಳ. ಆ ಹೆಣ್ಣು ಕುದುರೆಯು ಎಷ್ಟೋ ಕಾಳಗಗಳಲ್ಲಿ ಅವರನ್ನು ಹತ್ತಿಸಿಕೊಂಡು ಯಶಸ್ಸನ್ನು ಸಂಪಾದಿಸಿತ್ತು; ಮತ್ತು ಎಷ್ಟೋ ಸಂಕಟಗಳೊಳಗಿಂದ ಅವರನ್ನು ದಾಟಿಸಿಕೊಂಡಾದರೂ ಹೋಗಿತ್ತು ಈ ಕುದುರೆಯ ಹೆಸರನ್ನು ಅವರು "ಕೃಷ್ಣಘೋಡೀ(ಕರಿ ಕುದುರೆ)" ಎಂದ ಇಟ್ಟಿದ್ದರು. ಕುದುರೆಗೆ ತಡಿ ಹಾಕಹೇಳಿ ಮಹಾರಾಜರು ತಮ್ಮ ಸುರವಾರಿ ತುಮಾನವನ್ನು ಅಂದರೆ ಮೊಣಕಾಲವರೆಗೆ ಬಿಗಿಯಾಗಿದ್ದು ಮೇಲೆ ಸೈಲಾಗಿರುವ ಚಣ್ಣವನ್ನು ಹಾಕಿಕೊಂಡರು; ಮತ್ತು ಮೈಯೊಳಗೆ ತಿಳುವಾದ ಬಂಡಿಯನ್ನು ಹಾಕಿಕೊಡು, ಮೇಲೆ ಸಣ್ಣ ಚಿಲಖತ್ತನ್ನು ಏರಿಸಿದರು. ಆ ಚಿಲಖತ್ತಿನ ಮೇಲೊಂದು ಕಿನಕಾಫಿನ ವಾಸಕೋಟನ್ನು ಅಂದರೆ ತೋಳಿಲ್ಲದ ಅಂಗಿಯನ್ನು ತೊಟ್ಟರು; ಅವೆಲ್ಲವುಗಳ ಮೇಲೆ ಜಾಳಿಗೆಯಂಥ ಅರಿವೆಯ ದೊಡ್ಡ ನಿಲುವಂಗಿಯನ್ನು ಹಾಕಿಕೊಂಡರು; ಬಳಿಕ ತಲೆಯಮೇಲೆ ಉದ್ದನ್ನ ಟೊಪ್ಪಿಗೆಯನ್ನು ಹಾಕಿಕೊಂಡು, ಅದರ ಮೇಲೆ ಹಗುರಾದ ಸೆಲ್ಲೆಯನ್ನು ಸುತ್ತಿ ಅದರಲ್ಲಿ ತಮ್ಮ ದಿನದ ತುರಾಯಿಯನ್ನು ಸಿಗಿಸಿದರು. ಆಮೇಲೆ ಕೈಯಲ್ಲಿ ಹುಲಿಯುಗುರುಗಳನ್ನು ಹಾಕಿಕೊಂಡು ಬಂಗಾರದ ಹಿಡಿಕೆಯ ಪಟ್ಟಾಕತ್ತಿಯನ್ನು ತಕ್ಕೊಂಡರು; ಮತ್ತು ಬೆನ್ನಿಗೆ ಢಾಲನ್ನು ಏರಿಸಿದರು. ಹೀಗೆ ಉಡಿಗೆತೊಡಿಗೆಗಳಿಂದಲೂ, ಶಸ್ತ್ರಗಳಿಂದಲೂ ಸಿದ್ಧರಾಗಿ ಮಹಾರಾಜರು ಕುದುರೆಯನ್ನೇರಿ ಇಬ್ಬರು ಸರದಾರರು, ಹದಿನೈದು ಮಂದಿ ಬಾರಗೀರರು, ಬಾಳಾಜಿ ಆವಜಿ, ಎಂಬ ಚಿಟಣೀಸನು ಇಷ್ಟು ಜನರೊಡನೆ ರಾಯಗಡದಿಂದ ಕೊಂಡಾಣೆಯ ದುರ್ಗಕ್ಕೆ ಸಾಗಿದರು. ಅವರ ಸವಾರಿಯು ಬಹಳ ಮಾಡಿ ಅಟ್ಟಹಾಸದಿಂದ

ಹೊರಡುತ್ತಿದ್ದಿಲ್ಲ. ಅದರಲ್ಲಿ ಈ ದಿನವಂತು ಮೆಲ್ಲಗೆ ಸಪ್ಪಳಿಲ್ಲದಂತೆ ಹೋಗಿ ದುರ್ಗದಲ್ಲಿಯ ವರ್ತಮಾನವೇನೆಂಬದನ್ನು ತಿಳಕೊಳ್ಳಬೇಕಾಗಿತ್ತು. ಮಹಾರಾಜರು ಹೊರಟಾಗ ಸುಮಾರು ಆರು ಆರುವರೆ ತಾಸು ರಾತ್ರಿಯಾಗಿತ್ತು ಬೆಳದಿಂಗಳು ಮೂಡುವ ಸಮಯವಿತ್ತು ರಾಯಗಡವು ಕೋಂಡಾಣೆಯ ದುರ್ಗದಿಂದ ಹನ್ನೆರಡು ಇಲ್ಲವೆ ಹದಿಮೂರು ಮೈಲು ಇರುತ್ತದೆ ಅಂದಬಳಿಕ ಅವರು ನೆಟ್ಟಗೆ ಸಾಗಿದ್ದರೆ ತಾಸೆರಡು ತಾಸಿನಲ್ಲಿ ದುರ್ಗದ ಬುಡವನ್ನು ಸೇರಬಹುದಾಗಿತ್ತು; ಆದರೆ, ಅವರಿಗೆ ಅಷ್ಟು ಅವಸರಮಾಡುವ ಅವಶ್ಯವಿದ್ದಿಲ್ಲ. ಹಾದಿಯಲ್ಲಿ ಸಂಗಡ ಇಷ್ಟು ಜನರಿದ್ದರೂ ಮಹಾರಾಜರು ಒಬ್ಬರ ಸಂಗಡವಾದರೂ ಮಾತಾಡಲಿಲ್ಲ. ಸುಮ್ಮನೆ ಸಾವಕಾಶವಾಗಿ ನಡೆದಿದ್ದರು. ಹಾದಿಯನ್ನು ತೋರಿಸಲಿಕ್ಕೆ ಮುಂದೆ ಒಬ್ಬ ಸರದಾರನೂ, ಐವರು ಬಾರಗೀರರೂ ಇದ್ದರು. ಮಹಾರಾಜರು ಅವರು ಹೋದತ್ತ ಹೋಗುವ ದನ್ನು ನಿಶ್ಚಯಿಸಿದ್ದರೋ ಏನೋ ಎಂಬಂತೆ ತೋರುತ್ತಿತ್ತು. ಸುಮಾರು ಅರ್ಧಹಾದಿಯನ್ನು ಹೋದರು. ಅಷ್ಟರಲ್ಲಿ ಮುಂದಿನವನೊಬ್ಬ ಬಾರಗೀರನು ಗಟ್ಟಿಯಾಗಿ ಕೂಗಿ— ''ಮಹಾ ರಾಜರೇ, ಕೋಂಡಾಣೆಯ ದುರ್ಗದ ಮೇಲೆ ಮೂಡಗಡೆಯ ನಿಟ್ಟಿಗೆ ಯಾತಕ್ಕೋ ಬೆಂಕಿಹತ್ತಿ ಉರಿ ಎದ್ದಂತೆ ಕಾಣುತ್ತದೆ'' ಎಂದು ಹೇಳಿದನು. ಮಹಾರಾಜರು ಅತ್ತಕಡೆಗೆ ನೋಡಿದರು. ಅವರಿಗೂ ಉರಿಯು ಸ್ಪಷ್ಟವಾಗಿ ಕಾಣಿಸಿತು. ತಾವು ದುರ್ಗವನ್ನು ಕೈವಶಮಾಡಿಕೊಂಡ ಬಳಿಕ ದುರ್ಗದ ಇಂಥ ಮಗ್ಗಲಿಗೆ ದೊಡ್ಡ ಉರಿಯನ್ನು ಹೊತ್ತಿಸುವೆವೆಂದು ಸೇಲಾರಮಾವನೇ ಮೊದಲಾದವರು ತಿಳಿಸಿದ ಸಂಕೇತದಂತೆ ಆ ಉರಿಯು ಇರುತ್ತದೋ ಇಲ್ಲವೋ ಎಂಬದನ್ನು ಮಹಾರಾಜರು ಲಕ್ಷಪೂರ್ವಕವಾಗಿ ನೋಡಿದರು, ಸಂಕೇತಕ್ಕೆ ಸರಿಯಾಗಿ ಉರಿಯುತ್ತಿದ್ದದ್ದನ್ನು ನೋಡಿ—ಶಾಬಾಸ್! ತಾನಾಜೀ, ನೀನು ನಿಜವಾದ ಭಟನಿರುತ್ತೀ'' ಎಂಬ ಶಬ್ದವು ಅವರ ಬಾಯಿಂದ ಒಮ್ಮೆಲೆ ಹೊರಬಿದ್ದಿತು. ಇಲ್ಲಿಯವರೆಗೆ ಅವರ ಮನಸ್ಸಿಗಾಗಿದ್ದ ಅಸ್ವಸ್ಥತೆಯಲ್ಲ ಅಳಿದು ಹೋಗಿ, ಅವರಿಗೆ ಹೊಸ ಜೀವವು ಬಂದಂತಾಯಿತು. ಇನ್ನು ಮುಂದಕ್ಕೆ ಹೋಗ ಬೇಕೋ, ಹಿಂದಕ್ಕೆ ರಾಯಗಡಕ್ಕೆ ತಿರಗಬೇಕೋ, ಎಂಬ ವಿಚಾರವು ಅವರಲ್ಲಿ ಉತ್ಪನ್ನ ವಾಯಿತು. ಅಷ್ಟರಲ್ಲಿ ತಾವು ಹಾದಿಯನ್ನು ನೋಡುತ್ತ ನಿಲ್ಲುತ್ತೇವೆಂದು ಮಹಾರಾಜರು ಗುಪ್ತಚಾರನ ಮುಂದೆ ಹೇಳಿದ ಊರ ಸಮೀಪಕ್ಕೆ ಅವರೆಲ್ಲರು ಬಂದರು. ಆಗ ಮಹಾರಾಜರು — ನಾವು ಇಲ್ಲಿ ಹಾದಿಯ ನೋಡುತ್ತೇವೆಂದು ಗುಪ್ತಚಾರನ ಮುಂದೆ ಹ್ಯಾಗೂ ಹೇಳಿರುತ್ತೇವೆ. ಅವನು ಏನು ಸುದ್ದಿಯನ್ನು ಹೇಳುತ್ತಾನೆಂಬದನ್ನು ಕೇಳಿಕೊಂಡು. ಮುಂದೆ ಯಾವ ಕಡೆಗೆ ಹೋಗತಕ್ಕದ್ದೆಂಬದನ್ನು ಗೊತ್ತುಮಾಡಿದರಾಯಿತು, ಎಂದು ಆಲೋಚಿಸಿ, ಕುದುರೆಯನ್ನು ಒಂದು ಮಾವಿನ ತೋಪಿನಕಡೆಗೆ ತಿರುಗಿಸಿದರು. ಕೂಡಲೇ ಸೇವಕರು ಸ್ಥಳವನ್ನು ಸ್ವಚ್ಛಮಾಡಿ, ಗಾಸೆಯನ್ನು ಹಾಸಿ ದೀವಟಿಗೆಗಳನ್ನು ಹಚ್ಚಿದರು. ಇಲ್ಲಿಯವರೆಗೆ ಬಾಡಿದ್ದ ಮಹಾರಾಜರ ಮುಖಮುದ್ರೆಯು ಈಗ ಸ್ವಲ್ಪ ಪ್ರಫುಲ್ಲಿತವಾಯಿತು. ಅವರು ಚಿಟಣೀಸನನ್ನೂ, ಹಿರೋಜಿಫರ್ಜಂದನನ್ನೂ ಕುರಿತು ನುಡಿದರೇನೆಂದರೆ— ಈ ದುರ್ಗವು ನಮ್ಮ ಕೈಸೇರಿದ್ದರಿಂದ ಬಹಳ ಕೆಲಸಗಳಾದಂತಾದವು. ಬಾದಶಹನ ಸಂಗಡ ಒಡಂಬಡಿಕೆಯನ್ನು ಮಾಡಿಕೊಂಡ

ಹೊರತು ನಿರ್ವಾಹವಿಲ್ಲೆಂದು ತೋರಿದ್ದರಿಂದಲೇ ಈ ದುರ್ಗವನ್ನೂ, ಪುರಂದರ ದುರ್ಗವನ್ನೂ ಆತನ ಸ್ವಾಧೀನದಲ್ಲಿರಿಸುವದಕ್ಕೆ ನಾನು ಸಮ್ಮತಿಸಿದ್ದೆನು. ಇಲ್ಲದಿದ್ದರೆ, ಪುಣೆ, ಸಾಸವಡ, ಸುಪೆ ಪ್ರಾಂತಗಳನ್ನು ನನಗೆ ಕೊಟ್ಟು, ಆ ಪ್ರಾಂತದೊಳಗಿನ ದುರ್ಗಗಳನ್ನಷ್ಟು ತನ್ನ ಕೈಯಲ್ಲಿಟ್ಟು ಕೊಳ್ಳುವನೆಂಬ ಬಾದಶಹನ ಮೋಸದ ಮಾತಿಗೆ ನಾನು ಒಪ್ಪಿಕೊಳ್ಳುತ್ತಿದ್ದೆನೆ? ಬಾದಶಹನ ಹಿಡತವು ನಮಗೆ ಗೊತ್ತಾಗಿದ್ದಿಲ್ಲವೆಂತಲ್ಲ; ಆದರೆ ಮಾಡುವದೇನು! ಜಸವಂತಸಿಂಗನೂ, ಜಯಸಿಂಗನೂ ಇಬ್ಬರೂ "ಸದ್ಯಕ್ಕೆ ನೀವು ಈ ಒಡಂಬಡಿಕೆಗೆ ನಿಃಶಂಕೆಯಿಂದ ಒಪ್ಪಿಕೊಳ್ಳಿರಿ. ಮುಂದೆ ಅದರ ವಿಚಾರವನ್ನು ಮಾಡಲಿಕ್ಕೆ ಬಂದೀತು," ಎಂದು ಹೇಳಿದರು. ನಾನಾದರೂ ಅವರ ಮಾತಿಗೆ ಒಪ್ಪಿಕೊಂಡೆನು; ಆದರೆ ಬಾದಶಹನಿಗೆ ನಮ್ಮ ಮೇಲೆ ವಿಶ್ವಾಸವೆಲ್ಲಿರುವದು! ಇತ್ತ ನಮ್ಮೊಡನೆ ಒಡಂಬಡಿಕೆಯನ್ನು ಮಾಡಿಕೊಂಡು ಮತ್ತೆ ನಮ್ಮನ್ನು ವಿಶ್ವಾಸಘಾತದಿಂದ ಹಿಡಿಯುವದಕ್ಕಾಗಿ ಜನರ ಅಪ್ಪಣೆಯನ್ನು ಕಳಿಸುತ್ತಲೇ ಇದ್ದಾನೆ. ಇನ್ನು ಒಡಂಬಡಿಕೆಯ ಪ್ರತಿಬಂಧವೇನೂ ಉಳಿದಿರುವದಿಲ್ಲ. ಈ ಕೋಂಡಾಣೆಯ ದುರ್ಗವನ್ನು ಕೈವಶಮಾಡಿಕೊಳ್ಳಲಿಕ್ಕೆ ಎಷ್ಟು ತ್ರಾಸವಾಗುವದೋ, ಎಷ್ಟು ಅನರ್ಥವಾಗುವದೋ ಎಂದು ಮಾಡಿದ್ದೆನು; ಆದರೆ ನಮ್ಮ ತಾನಾಜಿಯು ಒಳ್ಳೇ ಗಂಭೀರ ಸಿಂಹನೆಂಬದು ಸುಳ್ಳಲ್ಲ. ಆ ಸಿಂಹನು ಧೈರ್ಯಮಾಡಿದ್ದರಿಂದಲೇ ದುರ್ಗವು ಕೈಸೇರಿತು. ಬಾಳಾಜಿಪಂತರೇ, ಇಂದಿನಿಂದ ನಾವು ಈ ಕೋಂಡಾಣೆಯ ಗಡಕ್ಕೆ ಸಿಂಹಗಡವೆಂತಲೇ ಹೆಸರಿಡೋಣ. ಈ ಹೆಸರಿಗೆ ಎಲ್ಲ ಬಗೆಯ ಅರ್ಥದಿಂದಲೂ ಈ ಕೋಟೆಯೇ ತಕ್ಕದ್ದಾಗಿದೆ."

ಸಾಧಾರಣವಾಗಿ ಶಿವಾಜಿಮಹಾರಾಜರು ಮಿತಭಾಷಿಗಳಾಗಿದ್ದರು. ಕರ್ತೃತ್ವಶಾಲಿಗಳು ಬಹಳಮಾಡಿ ಸ್ವಲ್ಪ ಮಾತಾಡುವವರಿರುವರು. ಅದರಂತೆಯೇ ಮಹಾರಾಜರ ಸ್ವಭಾವ ವಾದರೂ ಇತ್ತು. ಇಂಥವರು ಈದಿನ ಇಷ್ಟು ಮಾತಾಡಿದ್ದನ್ನು ಕೇಳಿ ಅವರ ಹತ್ತರಿದ್ದವರಿಗೆ ಸ್ವಲ್ಪ ಆಶ್ಚರ್ಯವಾಯಿತು. ಆದರೂ ಈಪೊತ್ತಿನ ಪ್ರಸಂಗವೇ ಅಂಥ ವಿಲಕ್ಷಣವಾದದ್ದಿತ್ತು. ಇಷ್ಟೊತ್ತಿನವರೆಗೆ ಮಹಾರಾಜರ ಅಂತಃಕರುಣವು ಚಿಂತೆಯಿಂದ ವ್ಯಾಪ್ತವಾಗಿತ್ತು. ಅರ್ಧ ಹಾದಿಯಲ್ಲಿ ದುರ್ಗವು ತಮ್ಮ ಕೈಸೇರಿದ ವರ್ತಮಾನವು ಗೊತ್ತಾಗುವದೆಂದು ಅವರು ತಿಳಿದಿದ್ದಿಲ್ಲ. ಹೀಗೆ ತಿಳಕೊಳ್ಳುವದರ ಬದಲು ಅವರು, ತಾನಾಜಿಯು ದುರ್ಗವನ್ನು ವಶಮಾಡಿ ಕೊಳ್ಳುತ್ತಿರುವಾಗ ಸಂಕಟಕ್ಕೆ ಒಳಗಾದ ವರ್ತಮಾನವನ್ನು ಕೇಳಬಹುದೆಂದು ಭಾವಿಸಿದ್ದರು. ಅದೆಲ್ಲ ಸುಳ್ಳಾಗಿ ದುರ್ಗವನ್ನು ವಶಮಾಡಿಕೊಂಡ ಬಗ್ಗೆ ಹೊತ್ತಿಸಿದ ಉರಿಯನ್ನು ನೋಡಿ ಅವರ ಚಿಂತೆಯೆಲ್ಲ ದೂರವಾಯಿತು. ಮನಸ್ಸಿನ ಭಾರವು ಇಲ್ಲದಂತಾದ್ದರಿಂದಾದ ಆನಂದ, ತಾನಾಜಿಯ ವಿಷಯದ ಪ್ರೇಮಾದರ ಇವೆರಡೂ ಒಮ್ಮೆಲೆ ಶಬ್ದರೂಪದಿಂದ ಹೊರಬಿದ್ದವು.

ಈ ಸ್ಥಿತಿಯಲ್ಲಿ ನಾಲ್ಕು ಗಳಿಗೆಗಳು ಕಳೆದುಹೋದವು. ಬೆಳಗಾಯಿತು, ಕೋಳಿಗಳು ಕೂಗಹತ್ತಿದವು. ಹಳ್ಳಿಯವರ ಬೀಸುವ ಹೊತ್ತಾದದ್ದರಿಂದ ಅವರು ಕಲ್ಲಿಗೆ ಕೂತು ಹಾಡಿ ಹಾಡಿ ಬೀಸತೊಡಗಿದರು. ಚಂದ್ರನು ನಿಸ್ತೇಜವಾಗಹತ್ತಿದನು. ಪೂರ್ವದಿಕ್ಕು ನಸುಗೆಂಪಾಯಿತು. ಮಹಾರಾಜರು ಒಂದೇಸವನೆ ಆ ಗುಪ್ತಚಾರನ ಹಾದಿಯನ್ನು ನೋಡುತ್ತ ಕುಳಿತಿದ್ದರು;

ಆದರೆ ಅವನ ಸುದ್ದಿಯೇ ಇಲ್ಲ. ಆಗ ಮಹಾರಾಜರ ಮನಸ್ಸಿನಲ್ಲಿ ಮತ್ತೆ ಚಿಂತೆಯು ಉತ್ಪನ್ನವಾಯಿತು. ತಾವು ನೋಡಿದ ಉರಿಯು ಉರಿಯೇ ಇರಬಹುದಲ್ಲವೆ? ಒಂದು ವೇಳೆ ಉರಿಯು ಆಗಿದ್ದರೂ ಸಂಕೇತ ಸ್ಥಳದಲ್ಲಿ ಹತ್ತಿದ್ದಾಗಿರದೆ ಬೇರೆ ಸ್ಥಳದಲ್ಲಿ ಹತ್ತಿದ್ದಾಗಿರಬಹುದೋ? ಎಂಬ ಸಂಶಯವು ಉತ್ಪನ್ನವಾಗಿ ಅವರು—ಕಲ್ಯಾಣದ ಮಗ್ಗಲಿನವರೆಗಾದರೂ ಹೋಗಬೇಕು; ಅಲ್ಲಿಗೆ ಹೋದರೆ ಏನಾದರೂ ನಿಜವಾದ ವರ್ತಮಾನವು ಗೊತ್ತಾಗಬಹುದು; ಇನ್ನು ಗುಪ್ತಚಾರನ ಹಾದಿಯನ್ನು ನೋಡುತ್ತ ಕುಳಿತುಕೊಳ್ಳುವದರಲ್ಲಿ ಅರ್ಥವೇನೂ ಇಲ್ಲವು, ಎಂದು ಯೋಚಿಸಿ ಮತ್ತೆ ಅವರು ಹೊರಟರು. ಸ್ವಲ್ಪ ಸುತ್ತುಹರಿದು ಕಲ್ಯಾಣದ ಊರ ಮಗ್ಗಲಿಗೆ ಹೋದರು. ಆ ಊರ ಮಗ್ಗಲಿಗೆ ಹೋಗಲು, ಜನರೆಲ್ಲ ಅಂಜಿಕೊಂಡಂತೆ ತೋರಿದರು! ಮಹಾರಾಜರು ಒಬ್ಬ ಮನುಷ್ಯನನ್ನು ಕರೆದು ಊರಲ್ಲಿ ಗದ್ದಲವೇನೆಂದು ಕೇಳಲು, ಅವನಿಗೆ ಯಾವ ವರ್ತಮಾನವೂ ನೆಟ್ಟಗೆ ಗೊತ್ತಿದ್ದಿಲ್ಲ. ಅವನು ಹೇಳಿದ್ದೇನಂದರೆ— ''ಆರು ತಾಸು ರಾತ್ರಿಯ ಸುಮಾರಕ್ಕೆ ದುರ್ಗದ ಮೇಲೆ ಗದ್ದಲವಾದದ್ದು ನಿಜವು; ಕೆಲವರನ್ನುತ್ತಾರೆ, ಮರಾಟರು ದುರ್ಗವನ್ನು ಕೈವಶಮಾಡಿಕೊಂಡು ಉದಯಭಾನುವನ್ನು ಕೊಂದರೆಂದು; ಕೆಲವರನ್ನುತ್ತಾರೆ, ಉದಯಭಾನುವೇ ತಾನಾಜಿ ಮಾಲಸುರೆಯನ್ನು ಕೊಂದು ಉಳಿದ ಮರಾಟರನ್ನು ತುಂಡರಿಸಿದನೆಂದು! ಏನು ಅದೆಯೋ ಏನೋ ಎಂಬ ಅಂಜಿಕೆಯಿಂದ ಊರ ಜನವೆಲ್ಲ ಹಾಗೇ ಕುಳಿತುಬಿಟ್ಟಿದೆ. ಇನ್ನೂ ಯಾರೂ ಕೆಳಗೆ ಬಂದಿಲ್ಲ. ಏನು ಆಗಿದೆಯೆಂಬದು ದೇವರಿಗೇ ಗೊತ್ತು

ಆ ಮನುಷ್ಯನು ಹೀಗೆ ನುಡಿದಕೂಡಲೇ ಮಹಾರಾಜರ ಎದೆಯೊಡೆದು ನೀರಾಯಿತು. ಅಷ್ಟರಲ್ಲಿ ತಮ್ಮ ಎಡಗಣ್ಣು ಹಾರುವಂತೆ ಅವರಿಗೆ ಭಾಸವಾಯಿತು. ಶಕುನದ ಮೇಲೆ ಮಹಾರಾಜರ ವಿಶ್ವಾಸವು ವಿಶೇಷವಾಗಿದ್ದದ್ದರಿಂದ ಅವರು ಏನೋ ಘಾತವಾಗಿರುತ್ತದೆಂದು ತಿಳಕೊಂಡರು. ಇನ್ನು ತಾವು ಏನು ಮಾಡಬೇಕೆಂಬ ಪ್ರಶ್ನವು ಅವರ ಮುಂದೆ ಬಂದು ನಿಂತಿತು; ಆದರೆ ಅವರ ಮನಸ್ಸಿನ ವೃತ್ತಿಯೇ ಒಂದು ವಿಧವಾದದ್ದು. ಯಾವ ಪ್ರಶ್ನವೂ ಬಹಳಹೊತ್ತು ಅವರ ಮುಂದೆ ನಿಲ್ಲುತ್ತಿದ್ದಿಲ್ಲ; ಕೂಡಲೆ ಅದರ ಉತ್ತರವನ್ನು ಗೊತ್ತುಮಾಡಿಕೊಂಡು ಅವರು ಅದರಂತೆ ಮಾಡಿಬಿಡುತ್ತಿದ್ದರು. ಅವರು ಸುಮ್ಮನೆ, ''ನಾನು ಹೀಗೆ ಮಾಡಲೋ ಹಾಗೆ ಮಾಡಲೋ'' ಎಂದು ವಿಚಾರಿಸುತ್ತ ಕುಳಿತುಕೊಳ್ಳುವ ಸ್ವಭಾವದವರಿದ್ದಿಲ್ಲ. ಕೋಟೆಯ ಬುಡವವರೆಗೆ, ಅಂದರೆ ಕಲ್ಯಾಣದ ಬಾಗಿಲದ ಬುಡವವರೆಗಂತೂ ಹೋಗತಕ್ಕದ್ದೇ, ಎಂದು ನಿಶ್ಚಯಿಸಿ ಅವರು ಮುಂದಕ್ಕೆ ಸಾಗಿದರು. ಹಿರೋಜಿಫರ್ಜಂದನೂ, ಬಾಳಾಜಿ ಆವಜಿಯೂ ಮುಂದಕ್ಕೆ ಬಂದು ಬೇಡಿ ಕೊಂಡದ್ದೇನಂದರೆ— ''ಕೋಟೆಯೊಳಗಿನ ನಿಜವಾದ ಸ್ಥಿತಿಯು ತಿಳಿಯುವವರೆಗೆ ಮಹಾರಾಜರು ಮುಂದಕ್ಕೆ ಹೋಗುವ ಮನಸ್ಸುಮಾಡಬಾರದು. ಅನಿಷ್ಟ ಸ್ಥಿತಿಯು ಒದಗಿದ್ದರೆ, ಅನಾಯಾಸವಾಗಿಯೇ ಮೊಗಲರ ಕೈಸೇರಬದಂತಾಗಬಹುದು. ಅವರಿಗೆ ತಾವು ಸ್ವತಃ ಸಿಕ್ಕಬಳಿಕ ಇನ್ನು ಉಳಿಯಿತೇನು? ಅದರಿಂದ ಮಹಾರಾಜರು ಹಿಂದಿರುಗಿ ಸ್ವಲ್ಪದೂರ ಹೋಗಿನಿಂತುಕೊಳ್ಳಬೇಕು. ನಾವಿಬ್ಬರೂ ಶೋಧಮಾಡಿಕೊಂಡು ಬಂದು ವರ್ತಮಾನವನ್ನು ತಿಳಿಸುತ್ತೇವೆ.''

ಈ ಮಾತುಗಳನ್ನು ಕೇಳಿ ಮಹಾರಾಜರು— "ಖುದ್ದ ದಿಲ್ಲಿಯಲ್ಲಿ ಮೊಗಲರ ಕೈಯಲ್ಲಿ ಸಿಕ್ಕಿದ ನನ್ನನ್ನು ಜೀವದಿಂದ ಪಾರುಮಾಡಿದ ಭವಾನಿಯು ಈಗಾದರೂ ಯಾಕೆ ಪಾರುಮಾಡಲಿಕ್ಕಿಲ್ಲ? ತಾನಾಜಿಯಂಥವನು ಸಂಕಟದಲ್ಲಿ ಬಿದ್ದಿರಲು, ಹಿಂದಿರುಗಬೇಕೆಂದರೆ ಏನು? ಎಂದು ಉತ್ತರಕೊಟ್ಟು, ತಮ್ಮ ಕರಿಗುದುರೆಯನ್ನು ಮೆಲ್ಲನೆ ಚಬಕದಿಂದ ಹೊಡೆದು ಉತ್ತರದಿಂದ ನಡಿಸಿ ಕೋಟೆಯ ಬುಡಕ್ಕೆ ಹೋದರು, ಹೋಗಿ ನೋಡುತ್ತಾರೆ ಅಲ್ಲಿ ಮರಾಟರ ಕಾವಲು! ಆ ಗೇಟಿನೊಳಗಿದ್ದವರು ಎದ್ದುನಿಂತು ಭಯಭಕ್ತಿಯಿಂದ ಮುಜುರೆಯನ್ನು ಮಾಡಿದರು. ಆಗ ಮಹಾರಾಜರು—ಕೋಟೆಯು ಯಾವಾಗ ಕೈಸೇರಿತೆಂದು ಕೇಳಲು, "ಆರು ತಾಸು ರಾತ್ರಿಯ ಸುಮಾರಕ್ಕೆ ವಶವಾಯಿತೆ"ಂದು ಉತ್ತರಕೊಟ್ಟರು. ಕೋಟೆಯು ಕೈಸೇರಿತು, ಜಯವಾಯಿತು! ಆದರೂ ಜನರ ಮೋರೆಯಮೇಲೆ ಕಳೆಯು ಕಾಣಲೊಲ್ಲದು; ಆದ್ದರಿಂದ ಮಹಾರಾಜರಿಗೆ ಯಾವ ಮಾತೂ ಜಳಜಳ ಆಗಲೊಲ್ಲದು. ಇತ್ತ ಎಡಗಣ್ಣಂತೂ ಒಳ್ಳೆ ಒತ್ತರದಿಂದ ಹಾರತೊಡಗಿತು; ಆದ್ದರಿಂದ ಏನೋ ದೊಡ್ಡ ಅನಿಷ್ಟವು ಒದಗಿರುತ್ತದೆಂದು ನಂಬಿ ಮಹಾರಾಜರು ಹೆಚ್ಚು ಕಡಿಮೆ ವಿಚಾರವನ್ನು ಮಾಡದೆ, ನೆಟ್ಟಗೆ ದುರ್ಗವನ್ನು ಹತ್ತತೊಡಗಿದರು. ಅಲ್ಲಲ್ಲಿ ನಾಲ್ಕುನಾಲ್ಕು ಐದೈದು ಮಾವಳರ ಗೇಟುಗಳನ್ನು ಸ್ಥಾಪಿಸಿದ್ದರು. ಆ ಗೇಟುಗಳಲ್ಲಿದ್ದವರು ಮಹಾರಾಜರನ್ನು ಕಂಡಕೂಡಲೇ ಗುರುತು ಹಿಡಿದು ಎದ್ದುನಿಂತು ರಾಮರಾಮ ಮಾಡಬೇಕು. ಮುಜರೆ ಮಾಡಬೇಕು; ಆದರೆ ಕೂಡಲೇ ಔದಾಸೀನ್ಯದಿಂದ ತಲೆಬಾಗಿಸಿ ನಿಂತುಕೊಳ್ಳಬೇಕು. ಇದೇ ಕ್ರಮವು ನಡೆದಿತ್ತು ಮಹಾರಾಜರ ಕೊರಳೊಳಗಿನ ತಾಯಿತದಂತೆ ಇದ್ದ ತಾನಾಜಿಯು ಮರಣಹೊಂದಿದ ಸುದ್ದಿಯನ್ನು ತಮ್ಮ ಬಾಯಿಯಿಂದ ಯಾರು ಹೇಳಬೇಕು? ಯಾರ ನಾಲಿಗೆಗೆ ಇಷ್ಟು ಧೈರ್ಯವು ಬರಬೇಕು? ಮಹಾರಾಜರು ಪಾವಟಿಗೆಗಳನ್ನು ಹತ್ತತೊಡಗಿದ ಕೂಡಲೇ ನೋಡಿದತ್ತೆಲ್ಲ ರಕ್ತದ ಸಿಡುಕುಗಳನ್ನು, ಹೆಣದ ರಾಶಿಗಳು! ಬಾಗಿಲುದಾಟಿ ಒಳಗೆ ಹೋದ ಕೂಡಲೇ ಭೂಮಿಯಲ್ಲಿ ರಕ್ತಮಯವು! ಅಲ್ಲಲ್ಲಿ ಇರುವ ಜಲಾಶಯಗಳ ನೀರು ಕೂಡ ಕೆಂಪಾಗಿದ್ದವು. ಇಂಥ ಭಯಂಕರವಾದ ನೋಟವು ಮಹಾರಾಜರ ಕಣ್ಣಿಗೆ ಬಿದ್ದಿತು. ರಜಪೂತ ಶಿಪಾಯಿಗಳೆಲ್ಲ ಶಸ್ತ್ರಗಳನ್ನು ಚಲ್ಲಿಕೊಟ್ಟು ಒಂದು ಹುಡೆಯ ಮಗ್ಗಲಿನಲ್ಲಿ ಕುಳಿತಿದ್ದರು. ಮಹಾರಾಜರು ಮುಂದಕ್ಕೆ ಬಂದಕೂಡಲೆ ಆ ರಜಪೂತ ಶಿಪಾಯಿಗಳು ಅಂತಃಪ್ರೇರಣೆಯಿಂದ ಆ ಮಹಾವಿಭೂತಿಯ ಗುರುತು ಹಿಡಿದರೋ ಏನೋ ಅನ್ನುವಂತೆ ಎದ್ದುನಿಂತು ಮುಜುರೆಯನ್ನು ಮಾಡಿದರು, ಅವರ ಮುಜುರೆಗಳನ್ನು ಸ್ವೀಕರಿಸುತ್ತ ಮಹಾರಾಜರು ಮುಂದಕ್ಕೆ ಸಾಗಿದರು. ಬಿದ್ದ ಹೆಣಗಳಲ್ಲಿ ರಜಪೂತರೇ ವಿಶೇಷವಾಗಿ ಕಂಡರು. ತಾನಾಜಿ, ಸೂರ್ಯಾಜಿ, ಇಲ್ಲವೆ ಸೇಲಾರಮಾವ ಇವರಲ್ಲಿ ಯಾರೂ ಭೆಟ್ಟಿಯಾಗ ಲೊಲ್ಲರು. ಮತ್ತೆ ಸ್ವಲ್ಪ ಮುಂದಕ್ಕೆ ಹೋದಬಳಿಕ ರಾಜಮಹಾಲಿನ ಹೊರಗಿನ ಮಗ್ಗಲಿಗೆ ಒಂದು ಹೆಣದ ಮೇಲೆ ಜಿನುಗಾದದ್ದೊಂದು ಬಿಳಿಯ ಶೆಲ್ಲೆಯನ್ನು ಹೊಚ್ಚಿ, ಸೂರ್ಯಾಜಿಯೂ ಸೇಲಾರಮಾವನೂ ಕುಳಿತಿದ್ದರು. ಅದನ್ನು ನೋಡಿ ಮಹಾರಾಜರು ಸ್ವಲ್ಪ

ಬೆದರಿ, ತುಸು ಮುಂದಕ್ಕೆ ಹೋಗಲು, ಸೇಲಾರಮಾವನ ದೃಷ್ಟಿಯು ಅವರ ಮೇಲೆ ಬಿದ್ದಿತು. ಕೂಡಲೆ ಆ ಮುದುಕನು—ಮಹಾರಾಜರೇ, ನನ್ನ ತಾನಾಜಿಯು ಹೋದನು! ನಿಮ್ಮ ತಾನಾಜಿಯೂ ಹೋದನು, ಎಂದು ಒದರುತ್ತ ಮಹಾರಾಜರ ಎದುರಿಗೆ ಹೋದನು. ಮುದುಕನ ಈ ಹೃದಯಭೇದಕ ಶಬ್ದಗಳು ಕಿವಿಗೆ ಬಿದ್ದಕೂಡಲೇ ಮಹಾರಾಜರ ಸರ್ವಾಂಗದಲ್ಲಿ ಕಂಪವು ಉತ್ಪನ್ನವಾಯಿತು. ಕೂಡಲೇ ಅವರು ಆ ಮುದುಕನನ್ನು ತಮ್ಮ ಬಾಹುಗಳಿಂದ ಔಕಿಹಿಡಿದರು. ಬಹಳ ವೇಳೆಯವರೆಗೆ ಅವರು ಇದೇ ಸ್ಥಿತಿಯಲ್ಲಿ ನಿಂತುಬಿಟ್ಟರು. ಆಮೇಲೆ ಅವರು ಸೇಲಾರಮಾವನನ್ನು ಬಿಟ್ಟು, ತಮ್ಮ ತಲೆಯಮೇಲಿನ ಟೋಪನ್ನೂ, ತುರಾಯಿಯ ಶಲ್ಲೆಯನ್ನೂ ತೆಗೆದು ಚಲ್ಲಿಕೊಟ್ಟು ಮೈಮೇಲಿನ ಬಿಳಿಯ ಶಲ್ಲೆಯನ್ನು ತಲೆಗೆ ಸುತ್ತಿಕೊಂಡರು. ಬಳಿಕ ಕಾಲೊಳಗಿನ ಜೋಡುಗಳನ್ನು ತೆಗೆದು ಅವರು ತಾನಾಜಿಯ ಹೆಣದ ಬಳಿಗೆ ಹೋಗಿ ಅದರ ಮೇಲಿನ ಶಲ್ಲೆಯನ್ನು ತೆಗೆದರು. ಆಕಾಶವನ್ನು ನೋಡುತ್ತಿದ್ದ ಆ ಸ್ವಾಮಿನಿಷ್ಠನ ಶವದ ಕಣ್ಣುಗಳನ್ನು ಮಹಾರಾಜರು ಬಹಳ ಹೊತ್ತಿನವರೆಗೆ ದಿಟ್ಟಿಸಿನೋಡುತ್ತ ಕುಳಿತುಕೊಂಡರು, ಅವರ ಕಣ್ಣುಗಳೊಳಗಿಂದ ನೀರುಗಳು ಒಂದೇಸವನೆ ಸುರಿಯುತ್ತಿದ್ದವು. ತಾನಾಜಿಯು ನಿಜವಾಗಿ ಮರಣಹೊಂದಿರುವನೋ, ನಿದ್ದೆಮಾಡುತ್ತಿರುವನೋ ಎಂಬದರ ಸಂಶಯವು ಅವರಲ್ಲಿ ಉತ್ಪನ್ನವಾದದ್ದರಿಂದ ಅವರು ತಟಸ್ಥ ವೃತ್ತಿಯಿಂದ ತಾನಾಜಿಯನ್ನು ನೋಡುತ್ತ ಕುಳಿತು ಕೊಂಡಂತೆಯನ್ನು ತೋರುತ್ತಿತ್ತು!

ಕೆಲವು ಹೊತ್ತಿನ ಮೇಲೆ ಮಹಾರಾಜರು ಸೂರ್ಯಾಜಿಯ ಕಡೆಗೆ ತಿರುಗಿ, ತಲೆಗೆ ಸುತ್ತಿದ ಶಲ್ಲೆಯ ಬೆನ್ನಮೇಲಿನ ಸೆರಗಿನಿಂದ ಕಣ್ಣುಗಳನ್ನು ಒರಿಸಿಕೊಳ್ಳುತ್ತ, ಅತ್ಯಂತ ಸದ್ಗದಿತವಾದ ಕಂಠದಿಂದ ನುಡಿದರೇನಂದರೆ— ''ಸೂರ್ಯಾಜೀ, ಗಡವು ಕೈಸೇರಿತು, ಆದರೆ ಸಿಂಹವು ಹೋಯಿತು! ಅ! ಇರಲಿ, ಆ ಅಂಬಾಬಾಯಿಯ ಇಚ್ಛೆಯು! ಮಾವನವರೇ, ಈಗ ನಿಮಗೆ ಸಮಾಧಾನದ ಮಾತನ್ನೇನು ಹೇಳಲಿ? ಸತ್ತವನು ಶಿವಾಜಿಯೆಂತಲೂ, ಇದ್ದವನು ತಾನಾಜಿ ಯೆಂತಲೂ ನೀವೂ, ಸೂರ್ಯಾಜಿಯೂ ತಿಳಕೊಳ್ಳಿರಿ! ಜಾನಕ್ಕನಿಗಾದರೂ ಹೀಗೆಯೇ ಹೇಳಿರಿ. ನನಗೆ ಶಂಭುವೂ, ರಾಜಾರಾಮನೂ ಹ್ಯಾಗೆ ಇಬ್ಬರು ಮಕ್ಕಳೋ, ಹಾಗೆ ರಾಯಬಾನೂ ಒಬ್ಬ ಮಗನಾಗಿರುವನು. ಈ ಮಾತನ್ನಾದರೂ ಜಾನಕ್ಕನಿಗೆ ಹೇಳಿರಿ.

## ಉಪಸಂಹಾರ

ಶಿವಾಜಿಮಹಾರಾಜರು ಈ ಮೇರೆಗೆ ಶೋಕಮಾಡುತ್ತ ತಾನಾಜಿಯ ಆಪ್ತರನ್ನು ಸಮಾಧಾನಗೊಳಿಸುತ್ತ ಇರಲು, ಅತ್ತ ಜಗತ್ಸಿಂಗನು ತನ್ನ ಹೆಂಡತಿಯನ್ನು ಹುಡುಕುವದಕ್ಕಾಗಿ ರಾಜಮಂದಿರಕ್ಕೆ ಹೋಗಿದ್ದನು. ಉದಯಭಾನುವು ಮರಣಹೊಂದಿ, ಎಲ್ಲಕಡೆಯಲ್ಲಿ

ಶಾಂತತೆಯಾದ ಕೂಡಲೆ ಆತನು ಹೋಗಿದ್ದನಾದ್ದರಿಂದ ಮಹಾರಾಜರು ಬಂದಸುದ್ದಿಯು ಆತನಿಗೆ ಗೊತ್ತಿದ್ದಿಲ್ಲ. ಮೊದಮೊದಲು ಆತನಿಗೆ ಹೆಂಡತಿಯ ಸುದ್ದಿಯನ್ನು ಯಾರೂ ಹತ್ತಗೊಡಲೊಲ್ಲರು. ಕಡೆಗೆ ಆತನು ಅಂತಃಪುರವನ್ನು ಭೇದಿಸಿ ಪ್ರವೇಶಿಸುವ ಅಂಜಿಕೆಯನ್ನು ತೋರಿಸಲು, ಒಬ್ಬ ಹಬಸೀಜಾತಿಯ ದಾಸಿಯು ಜಗತ್ಸಿಂಗನನ್ನು ಆತನ ಹೆಂಡತಿಯಾದ ದೇವಲದೇವಿಯಬಳಿಗೆ ಕರಕೊಂಡುಹೋದಳು. ದೇವಲದೇವಿಯು ಮೃತಪ್ರಾಯಳಾಗಿ ಬಿದ್ದುಕೊಂಡಿದ್ದಳು. ಆಕೆಯನ್ನು ನೋಡಿದ ಕೂಡಲೆ ಜಗತ್ಸಿಂಗನ ಎದೆಯೊಡೆದು ನೀರಾಯಿತು. ಆತನಿಗೆ ಹೆಂಡತಿಯ ಆಶೆಯು ಎಷ್ಟು ಮಾತ್ರವೂ ತೋರಲಿಲ್ಲ. ತನ್ನ ಶ್ರಮದಿಂದ ಹೆಂಡತಿಗೆ ಏನೂ ಪ್ರಯೋಜನವಾಗಲಿಲ್ಲೆಂದು ತಿಳಿದು ಆತನು ಹೆಂಡತಿಯ ಬಳಿಯಲ್ಲಿ ಕುಳಿತು ಶೋಕ ಮಾಡತೊಡಗಿದನು. ಈ ವರ್ತಮಾನವು ಕಮಲಕುಮಾರಿಗೆ ಗೊತ್ತಾಗಲು, ಆಕೆಯೂ ತನ್ನ ಗೆಳತಿಯ ಬಳಿಗೆ ಬಂದು ಶೋಕ ಮಾಡಿತೊಡಗಿದಳು. ಜಗತ್ಸಿಂಗನು ತನ್ನ ಹೆಂಡತಿಯು ಸತ್ತಳೆಂತಲೇ ತಿಳಿದಿದ್ದನು. ಮೊದಲು ಕಮಲಕುಮಾರಿಯಾದರೂ ಹಾಗೇ ತಿಳಕೊಂಡಿದ್ದಳು. ದುಃಖದ ವೇಗವು ಕಡಿಮೆಯಾದಬಳಿಕ ಆಕೆಯು ಶೂನ್ಯದೃಷ್ಟಿಯಿಂದ ತನ್ನ ಸಖಿಯನ್ನು ನೋಡುತ್ತಿರಲು, ದೇವಲದೇವಿಯು ಮಿಸಿಕಾಡಿದಂತೆ ಆಕೆಗೆ ಭಾಸವಾಯಿತು. ಕೂಡಲೆ ಆಕೆಯು ದೇವಲೆಯ ಗೋಣನ್ನು ತೊಡೆಯಮೇಲಿಟ್ಟುಕೊಂಡು, ಕಕ್ಕುಲತೆಯಿಂದ ಮೈಮೇಲೆ ಕೈಯಾಡಿಸಿದಳು; ಮತ್ತು ಆಕೆಯ ಕಣ್ಣಿನ ನೀರನ್ನು ಹಚ್ಚಿ, ಮೆಲ್ಲನೆ ಬಾಯಿ ದೆರೆದು ಸ್ವಲ್ಪ ನೀರನ್ನು ಹಾಕಿದಳು. ದೇವಲದೇವಿಯು ಆ ನೀರನ್ನು ಸಾವಕಾಶವಾಗಿ ಗುಟುಕರಿಸಿದಳು. ಅದನ್ನು ನೋಡಿ ಜಗತ್ಸಿಂಗನಿಗೂ, ಕಮಲಕುಮಾರಿಗೂ ಸ್ವಲ್ಪು ಆಶೆಯು ಉತ್ಪನ್ನವಾಯಿತು. ಸ್ವಲ್ಪ ಹೊತ್ತು ಹೀಗೇ ನೀರು ಹಾಕುತ್ತ ಹೋಗಲು, ದೇವಲದೇವಿಯು ಚೇತರಿಸಿ ಕಣ್ದೆರೆದು ತನ್ನ ಸಖಿಯನ್ನೂ ಗಂಡನನ್ನೂ ನೋಡತೊಡಗಿದಳು.

ಹಿಂದಕ್ಕೆ ಗೂಟಕಿತ್ತಿ ದುರ್ಗದಮೇಲಿಂದ ಬಿದ್ದ ಜಗತ್ಸಿಂಗನು ದೈವಯೋಗದಿಂದಲೇ ಬದುಕಿ ಉಳಿದಂತೆ, ಆತನ ಹೆಂಡತಿಯಾದ ದೇವಲದೇವಿಯಾದರೂ ಈಗ ಹಬಸಿಯ ದಾಸಿಯರ ಕೈಯಿಂದ ಬದುಕಿ ಉಳಿದಳೆಂದು ಹೇಳಬಹುದು. ದೇವಲದೇವಿಯು ತನ್ನನ್ನು ದಾಸಿಯರು ಬಲಾತ್ಕಾರದಿಂದ ಎಳೆದೊಯ್ದಾಗ ಮಿತಿ ಮೀರಿ ಆಕ್ರೋಶ ಮಾಡತೊಡಗಿದಳು. ಆಗ ಆ ಹಬಸಿಯ ದಾಸಿಯರು ಉದಯಭಾನುವು ಮೊದಲೇ ಹೇಳಿದ್ದಂತೆ ದೇವಲದೇವಿಯನ್ನು ಕೊಲ್ಲುವದಕ್ಕಾಗಿ ಆಕೆಯ ಕುತ್ತಿಗೆಯನ್ನು ಹಿಚಿಗಿದರು. ದುಃಖದಿಂದ ಕಸುವುಗೆಟ್ಟಿದ್ದ ಆ ಅಬಲೆಯು ಕೂಡಲೆ ನಿಶ್ಚೇಷ್ಟಿತಳಾಗಿ ಬಿದ್ದುಕೊಳ್ಳಲು, ಸತ್ತಳೆಂದು ತಿಳಿದು ದಾಸಿಯರು ಆಕೆಯನ್ನು ಒತ್ತಟ್ಟಿಗೆ ಎಳೆದುಬಿಟ್ಟಿದ್ದರು. ಆದರೆ ಸುದೈವದಿಂದ ದೇವಲದೇವಿಯ ಜೀವವು ಹೋಗಿದ್ದಿಲ್ಲ; ಆದ್ದರಿಂದ ಮೇಲೆ ಹೇಳಿದಂತೆ ಕಮಲಕುಮಾರಿಯು ಉಪಚಾರವನ್ನು ಮಾಡಲು ಆಕೆಯು ಎಚ್ಚತ್ತಳು.

ದೇವಲದೇವಿಯು ಕಮಲಕುಮಾರಿಯನ್ನೂ, ತನ್ನ ಪತಿಯನ್ನೂ ನೋಡಿ ಬಹಳ ಸಮಾಧಾನಪಟ್ಟಳು. ಗಂಟಲು ನೋವಾದ್ದರಿಂದ ಆಕೆಗೆ ಮಾತಾಡಲಿಕ್ಕೆ ಬರುತ್ತಿದ್ದಿಲ್ಲ. ಆಕೆಯು

ಕಣ್ಣೊಳಗಿಂದ ನೀರುಗಳು ಒಂದೇಸವನೆ ಹೋಗುತ್ತಿದ್ದವು. ಜಗತ್ಸಿಂಗನು ಮಾಡಿದ ಸಾಹಸವನ್ನೂ, ಆ ಸಾಹಸದಿಂದಲೇ ತನ್ನ ಪಾತಿವ್ರತ್ಯದ ರಕ್ಷಣವಾದದ್ದನ್ನೂ ಕಮಲಕುಮಾರಿಯು ಸ್ವಲ್ಪದರಲ್ಲಿ ಹೇಳಲು, ಅದನ್ನು ಕೇಳಿ ಆ ನಿರ್ಮಲಾಂತಃಕರಣದ ದೇವಲೆಯು ಸಂತೋಷಬಟ್ಟು ಆಕಾಶದ ಕಡೆಗೆ ಕಣ್ಣೆತ್ತಿ ಮನಸ್ಸಿನಲ್ಲಿ ದೇವರನ್ನು ಕೊಂಡಾಡಿದಳು. ಆಗ ಕಮಲಕುಮಾರಿಯು ದೇವಲೆಗೆ—''ಗೆಳತೀ, ದೇವಲೇ, ಪ್ರಾಚೀನ ದುಷ್ಕರ್ಮದಿಂದ ನಾನು ಪತಿವಿಯೋಗ ದುಃಖವನ್ನು ಹೊಂದಿದೆನು; ಆ ದುಃಖಕ್ಕಿಂತ ಅಸಹ್ಯವಾಗಿದ್ದ ಪಾತಿವ್ರತ್ಯಭಂಗದ ದುಃಖವು ಬಂದೊದಗಿತ್ತು

ನೀನೂ ನಿನ್ನ ಪತಿಯೂ ಕೂಡಿ ದೂರಮಾಡಿದ್ದರಿಂದ ನನಗೆ ಬಹಳ ಸಮಾಧಾನ ವಾಗಿದೆ. ದೇವರು ನಿಮ್ಮ ಅಖಂಡ ಕಲ್ಯಾಣವನ್ನು ಮಾಡಲಿ ತಂಗೀ, ದೇವಲೇ, ನನ್ನ ಪ್ರೀಯಪತಿಯು ನನ್ನ ಮಾರ್ಗವನ್ನು ನೋಡುತ್ತಿರಬಹುದಲ್ಲವೇ?''

ಈ ಮೇರೆಗೆ ಕಮಲಕುಮಾರಿಯು ನುಡಿಯುತ್ತಿರಲು ಶಿವಾಜಿಮಹಾರಾಜರು ತಾನಾಜಿಯು ಬಿದ್ದಲ್ಲಿಗೆ ಬಂದಿರುತ್ತಾರೆಂಬ ವರ್ತಮಾನವು ಅಲ್ಲಿಗೆ ಬಂದಿತು. ಅದನ್ನು ಕೇಳಿದಕೂಡಲೆ ಆ ರಜಪೂತ ಪರಿವಾರದಲ್ಲಿ ಪೂಜ್ಯಭಾವವು ಉತ್ಪನ್ನವಾಯಿತು. ಆಗ ಕಮಲಕುಮಾರಿಯು ಜಗತ್ಸಿಂಗನನ್ನು ಕುರಿತು ಕೈಜೋಡಿಸಿಕೊಂಡು—ಜಗತ್ಸಿಂಗ, ನನ್ನಿಂದ ನಿಮ್ಮಿಬ್ಬರಿಗೂ ಬಹಳ ತ್ರಾಸವಾಯಿತು. ನೀವು ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರ ಮಾಡುವದು ನನ್ನಿಂದ ಆಗುವಹಾಗಿಲ್ಲ. ಹೀಗಿದ್ದು ಯಾವ ಮೋರೆಯಿಂದ ಮತ್ತೆ ನಿಮಗೆ ತ್ರಾಸವನ್ನು ಕೊಡಲಿ? ಆದರೂ ನಿಮ್ಮ ಹೊರತು ನನಗೆ ಯಾರೂ ಗತಿಯಿಲ್ಲ. ನೀವೇ ನನ್ನನ್ನು ಗೊತ್ತಿಗೆ ಹಚ್ಚಲಿಕ್ಕೇಬೇಕು. ನನ್ನನ್ನು ಆ ದುಷ್ಟನ ಕೈಯಿಂದ ಬಿಡಿಸಿದಂತೆ, ಬೇಗನೆ ಸಹಗಮನ ಮಾಡುವದಕ್ಕಾಗಿ ಮಹಾರಾಜರಿಂದ ಒಪ್ಪಿಗೆಯನ್ನು ಪಡೆಯಿರಿ. ಶಿವಾಜಿಮಹಾರಾಜರು ಹಿಂದೂಧರ್ಮ ರಕ್ಷಕರಿರುತ್ತಾರೆ. ಅವರು ಸತಿಗೆ ಇಷ್ಟು ಭಿಕ್ಷೆಯನ್ನು ನೀಡಬಹುದು, ಇಲ್ಲೆನ್ನಲಿಕ್ಕಿಲ್ಲ ಎಂದು ಹೇಳಿದಳು.

ಕಮಲಕುಮಾರಿಯ ಈ ಮಾತುಗಳನ್ನು ಕೇಳಿ ಜಗತ್ಸಿಂಗನ ದುಃಖವು ಒತ್ತರಿಸಿತು. ಆತನು ಅಲ್ಲಿಂದ ಎದ್ದು ಶಿವಾಜಿಮಹಾರಾಜರ ದರ್ಶನಕ್ಕಾಗಿ ಆತುರದಿಂದ ಹೋದನು. ಆತನು ಮಹಾರಾಜರನ್ನು ಕಂಡು ನಮಿಸಿ, ತನ್ನ ವೃತ್ತಾಂತವನ್ನೂ, ತಾನಾಜಿಯು ಇಷ್ಟು ಅವಸರದಿಂದ ದುರ್ಗವನ್ನುತಕ್ಕೊಂಡ ಕಾರಣವನ್ನೂ ಹೇಳಿ, ಕಮಲಕುಮಾರಿಯ ಸಹಗಮನಕ್ಕಾಗಿ ಒಪ್ಪಿಗೆಯನ್ನು ಕೇಳಿಕೊಂಡನು; ಆದರೆ ಮಹಾರಾಜರು ಒಮ್ಮೆಲೇ ಸಹಗಮನಕ್ಕೆ ಒಪ್ಪಿಗೆಯನ್ನು ಕೊಡಲಿಲ್ಲ. ''ಆ ಸಾಧ್ವಿಯ ಮನಸ್ಸು ತಿರುಗಿದರೆ ನೋಡಿರಿ. ಜೀವಕಳಕೊಳ್ಳುವದು ಸುಲಭವಲ್ಲ'' ಎಂದು ಹೇಳಿ, ಜಗತ್ಸಿಂಗನನ್ನು ತಿರುಗಿ ಕಮಲಕುಮಾರಿಯ ಬಳಿಗೆ ಕಳಿಸಿದರು. ಜಗತ್ಸಿಂಗನು ಆ ಮಾತನ್ನು ಕಮಲಕುಮಾರಿಗೆ ಹೇಳಿ, ತಾನೂ ಹೇಳತಕ್ಕ ನಾಲ್ಕು ಮಾತು ಹೇಳಿದನು ಅದಕ್ಕೆ ಕಮಲಕುಮಾರಿಯು— ಜಗತ್ಸಿಂಗ, ನೀವಾಗಲಿ, ಮಹಾರಾಜರಾಗಲಿ, ಒಂದು ಬಗೆಯಾಗಿ ನನ್ನ ಹಿತವನ್ನೇ ಚಿಂತಿಸುತ್ತೀರೆಂಬುದನ್ನು ನಾನು

ಬಲ್ಲೆನು; ಆದರೆ ನನ್ನ ನಿಶ್ಚಯವು ತಪ್ಪುವಹಾಗಿಲ್ಲ, ನಾನು ಹೀಗೆ ಹೇಳಿದೆನೆಂದು ಮಹಾರಾಜರಿಗೆ ಸ್ಪಷ್ಟವಾಗಿ ಹೇಳಿರಿ; ಏನಂದರೆ—ಮಹಾರಾಜರೇ, ನನ್ನಂಥ ದುರ್ದೈವಿಗೆ ಪ್ರಾಣತ್ಯಾಗ ಮಾಡುವದೇನು ಆಯಾಸವು? ನನ್ನ ಪತಿಯು ಮರಣಹೊಂದಿದನು; ನನ್ನ ಸಲುವಾಗಿ ಹಲವು ವಿಪತ್ತುಗಳನ್ನು ಅನುಭವಿಸಿ ನನ್ನ ತಂದೆಯು ಮರಣ ಹೊಂದಿದನು; ಬಹಳವೇಕೆ? ನನ್ನನ್ನು ಬಿಡಿಸಬೇಕೆಂತಲೇ ಬರಿಯ ಐವತ್ತು ಜನರನ್ನೇ ಸಂಗಡ ಕರಕೊಂಡು ಸಾವಿರ ರಜಪೂತರ ಮೇಲೆ ಬಿದ್ದು ವೀರಸಿರೋಮಣಿಯಾದ ನಿಮ್ಮ ಸರದಾರ ತಾನಾಜಿಯವರು ಸಮರಕ್ಷೇತ್ರದಲ್ಲಿ ದೇಹವಿಟ್ಟರು! ನನ್ನ ಗೆಳತಿಯಾದ ದೇವಲೆಯೂ, ಆಕೆಯ ಗಂಡನೂ ನನ್ನ ಸಲುವಾಗಿ ಕಷ್ಟಪಟ್ಟು ನಿಮ್ಮ ಪುಣ್ಯದಿಂದ ಸತ್ತು ಸತ್ತು ಉಳಿದರು. ಇವರಿಬ್ಬರು ಜೀವದಿಂದಿರುವಾಗಲೇ ನಾನು ಪತಿಯನ್ನು ಹಿಂಬಾಲಿಸುವೆನು. ನನಗೆ ಬೇರೆ ಆಪ್ತರಿಲ್ಲ. ನಾನು ಇನ್ನು ಜಗತ್ತಿನಲ್ಲಿ ಇದ್ದರೆ ಯಾವ ಯಾವ ಅನರ್ಥಗಳು ಒದಗಬಹುದೋ ಯಾರಿಗೆ ಗೊತ್ತು! ನನಗೆ ಸಹಗಮನಕ್ಕಾಗಿ ಅಪ್ಪಣೆಯನ್ನಿತ್ತರೆ ನಾನು ನಿಮ್ಮನ್ನು ಆಶೀರ್ವದಿಸುವೆನು. ನಿಮಗೆ ಪುಣ್ಯರಾಶಿಯು ಪ್ರಾಪ್ತವಾದೀತು. ನನ್ನ ಸಲುವಾಗಿ ಅಳುವವರು ನನ್ನ ಗೆಳತಿಯ ಹೊರತು ಇನ್ನಾರಿರುವರು? ಇದರ ಮೇಲೆಯೂ ತಾವು ಒಪ್ಪಿಗೆಯನ್ನು ಕೊಡದಿದ್ದರೆ ನನ್ನ ಜೀವವು ನನ್ನ ಕೈಯಲ್ಲಿರುತ್ತದೆ.

ಕಮಲಕುಮಾರಿಯು ಹೇಳಿದ ಈ ಮಾತುಗಳನ್ನು ಜಗತ್ಸಿಂಗನು ಒಂದುಳಿಯದಂತೆ ಮಹಾರಾಜರಮುಂದೆ ಹೇಳಿದನು. ಮಹಾರಾಜರು ಕಮಲಕುಮಾರಿಯ ನಿಶ್ಚಯವನ್ನು ಅರಿತು ಆಕೆಗೆ ಸಹಗಮನ ಮಾಡುವದಕ್ಕಾಗಿ ಒಪ್ಪಿಗೆಯನ್ನು ಕೊಟ್ಟರು; ಮತ್ತು ಎಲ್ಲ ವ್ಯವಸ್ಥೆಯನ್ನು ಮಾಡಿಕೊಡುವದಕ್ಕಾಗಿ ಬಾಳಾಜಿಗೆ ಹೇಳಿದರು. ಕಲ್ಯಾಣದಿಂದ ಒಬ್ಬ ಬ್ರಾಹ್ಮಣನು ಬಂದನು. ಕಮಲಕುಮಾರಿಯು ಒಬ್ಬ ರಜಪೂತ ಸಿಪಾಯಿಯ ಹೆಂಡತಿಯ ಕೈಯಿಂದ ಯಾವತ್ತು ಸಂಸ್ಕಾರಗಳನ್ನು ಮಾಡಿಸಿಕೊಂಡು, ತನ್ನ ಸಲುವಾಗಿ ಸಿದ್ಧಪಡಿಸಿರುವ ಚಿತೆಯನ್ನು ಪ್ರವೇಶಿಸುವದಕ್ಕಾಗಿ ಧರ್ಮಶಿಲೆಯನ್ನು ಏರಿ ನಿಂತುಕೊಂಡಳು. ಈವೊತ್ತಿನವರೆಗೆ ಕೇವಲ ಹೃದಯದಲ್ಲಿ ಜತನದಿಂದಿಟ್ಟುಕೊಂಡಿದ್ದ ಪತಿಯ ಪಾದುಕೆಗಳನ್ನು ಆಕೆಯು ತಕ್ಕೊಂಡಿದ್ದಳು. ಬ್ರಾಹ್ಮಣನು ಮಂತ್ರವ ಅನ್ನುತ್ತಿರುವದನ್ನು ಆಕೆಯು ಸಮಾಧಾನದಿಂದ ಕೇಳುತ್ತಿದ್ದಳು; ಮತ್ತು ಆತನು ಹೇಳಿದಂತೆ ಕೃತಿಗಳನ್ನು ಮಾಡುತ್ತಿದ್ದಳು. ಶಿವಾಜಿಮಹಾರಾಜರೇ ಮೊದಲಾದವರು ಮೊದಲು ಆಕೆಯ ಪಾದಗಳ ಮೇಲೆ ಹಣೆಯನ್ನಿಟ್ಟರು. ಕೂಡಲೆ ಎಲ್ಲರೂ ಅದರ ಅನುಕರಣವನ್ನು ಮಾಡಿದರು ಬಳಿಕ ಕಮಲಕುಮಾರಿಯು ಧೀರವೂ ಗಂಭೀರವೂ ಆದ ವಾಣಿಯಿಂದ ಎಲ್ಲರನ್ನು ಕುರಿತು—''ಭಗಂವಂತನಾದ ಏಕಲಿಂಗೇಶ್ವರನು ನಿಮ್ಮೆಲ್ಲರಿಗೆ ಮುಂದೆ ಕಲ್ಯಾಣವನ್ನು ಮಾಡಲಿ! ಮಹಾರಾಜರೇ, ಪ್ರತಿ ಒಂದು ಕಾರ್ಯದಲ್ಲಿ ನಿಮಗೆ ಯಶಸ್ಸನ್ನು ಕೊಡಲಿ ದೇವರೇ, ಸುಖದಲ್ಲಿಯೂ ದುಃಖದಲ್ಲಿಯೂ ನೀನು ನನ್ನನ್ನು ಹಿಂಬಾಲಿಸಿ ನನ್ನ ಸಹಾಯ ಮಾಡಿದೆ! ನಿನ್ನನ್ನು ಒಡಹುಟ್ಟಿದಾಕೆ ಎಂದು ತಿಳಿದು ಧರ್ಮರಕ್ಷಕನಾಗಿ ಈ ಶಿವಪ್ರಭುವಿಗೆ ಈಗ ಒಪ್ಪಿಸಿರುತ್ತೇನೆ. ಇನ್ನೊಮ್ಮೆ ಎಲ್ಲರ ಕಲ್ಯಾಣವನ್ನು ಚಿಂತಿಸುತ್ತೇನೆ

ಹೋಗಿ ಬರುವೆನು. ಎಂದು ನುಡಿದು ಸಮಾಧಾನದಿಂದ ಚಿತೆಯನ್ನು ಪ್ರವೇಶಿಸಿದಳು ಹಾ ಎಂಬ ಶಬ್ದವಾಗಲಿ ನಿಟ್ಟುಸುರಾಗಲಿ ಆ ಸತಿಯ ಬಾಯಿಂದ ಹೊರಡಲಿಲ್ಲ! ಚಿತಯಲ್ಲಿ ಗಂಡನ ದರ್ಶನವಾದದ್ದರಿಂದ ಆನಂದಮಗ್ನಳಾದಳೋ ಅನ್ನುವಂತೆ ಅವರಿಗೆ ತೋರಿತು!!!

ಮಹಾರಾಜರು ಜಗತ್ಸಿಂಗನಿಗೆ ಸೈನ್ಯದಲ್ಲಿ ಮರ್ಯಾದೆಯ ಸ್ಥಳವನ್ನು ಕೊಟ್ಟು, ದೇವಲದೇವಿಯ ಯೋಗಕ್ಷೇಮವನ್ನು ನೋಡಿದರು. ಉದಯಭಾನುವಿನ ಹೆಂಡತಿಯನ್ನು ರಜಪೂತರ ಕಾವಲಿನೊಡನೆ ದಿಲ್ಲಿಗೆ ಕಳಿಸಿದರು. ಮತ್ತು ಕಾಜಿಯನ್ನು ಔರಂಗಾಬಾದಿಗೆ ಕಳಿಸಿದರು. ತಾನಾಜಿಯು ಹತ್ತಿ ಬಂದ ಡೋಣಾಗಿರಿಯ ಬಳಿಯಲ್ಲಿ ಎರಡನೆಯವರಿಗೆ ಹತ್ತಲಿಕ್ಕೆ ಬರಬಾರದೆಂದು ಗೋಡೆಯನ್ನು ಕಟ್ಟಲಿಕ್ಕೆ ಅವರು ಅಪ್ಪಣೆಯನ್ನು ಮಾಡಿದರು. ಆಗ ಬಾಳಾಜಿ ಆವಜಿಯು ಕೈ ಜೋಡಿಸಿಕೊಂಡು–ತಮ್ಮ ಅಪ್ಪಣೆಯಂತೆ ಗೋಡೆಯು ಆಗಿಯೇ ಆಗುವದು; ಆದರೆ ತಾನಾಜಿಯು ಬಿದ್ದ ಸ್ಥಳದಲ್ಲಿ ಒಂದು ಸಮಾಧಿಯನ್ನು ಕಟ್ಟಬೇಕೆಂದು ಜನರ ಇಚ್ಛೆಯದೆ. ಅದಕ್ಕೆ ಮಹಾರಾಜರ ಅಪ್ಪಣೆ ದೊರೆಯಬೇಕು, ಎಂದು ಬೇಡಿಕೊಂಡನು. ಅದಕ್ಕೆ ಮಹಾರಾಜರು—''ಅವಶ್ಯವಾಗಿ ಆಗಲಿ, ಅವಶ್ಯವಾಗಿ ಆಗಲಿ'' ಎಂದು ಆದರದಿಂದ ಗಟ್ಟಿಯಾಗಿ ನುಡಿದರು; ಮತ್ತು ಚಿಟಣೀಸನನ್ನು ಕುರಿತು—ಚಿಟಣೀಸರೇ, ಈ ಕಲ್ಲು ಗಚ್ಚಿನ ಸಮಾಧಿಯಿಂದ ತಾನಾಜಿಗೇನು ಆಗುವದು? ಆತನ ನಿಜವಾದ ಸಮಾಧಿಯು ನನ್ನ ಹೃದಯದಲ್ಲಿರುತ್ತದೆ! ಇರಲಿ! ನೀವು ಕಟ್ಟುವ ಸಮಾಧಿಯ ಸಂಗಡಲೇ ಉದಯಭಾನುವಿನದೊಂದು ಗೋರೆಯನ್ನೂ ಕಟ್ಟಿಸಿರಿ, ಎಂದು ಹೇಳಿದರು. ತಾನಾಜಿಯ ಸಮಾಧಿ, ಸತಿಯ ಮೂರ್ತಿ, ಉದಯಭಾನುವಿನ ಗೋರಿ, ಇವು ಮೂರು ಸದ್ಯಕ್ಕೆ ಸಿಂಹಗಡದಲ್ಲಿರುತ್ತವೆ.

ಪ್ರಿಯವಾಚಕರೇ, ಇಲ್ಲಿಗೆ ನಮ್ಮ ಶೋಕಪರ್ಯವಸಾಯಿಯಾದ ಕಾದಂಬರಿಯು ಮುಗಿಯಿತು. ತಾನಾಜಿಯು ಸತ್ತ ಹದಿಮೂರು ದಿನಗಳಾದಮೇಲೆ ಶಿವಾಜಿಮಹಾರಾಜರು ಸ್ವತಃ ಉಮರಾಠೆಗೆ ಹೋಗಿ ತಾನಾಜಿಯ ಮಗನಾದ ರಾಯಾಜಿಯ ಲಗ್ನವನ್ನು ಸುಮುಹೂರ್ತದಲ್ಲಿ ಮಾಡಿದರೆಂತಲೂ, ಸೂರ್ಯಾಜಿಯನ್ನು ಸಿಂಹಗಡದ ಸುಬೇದಾರನನ್ನು ಮಾಡಿ ಕೆಲವು ಊರುಗಳನ್ನು ಇನಾಮು ಹಾಕಿ ಕೊಟ್ಟರೆಂತಲೂ ಎರಡೇ ಮಾತುಗಳನ್ನು ಕಟ್ಟಕಡೆಯಲ್ಲಿ ಹೇಳಿಬಿಡುತ್ತೇವೆ! ದೇವಲದೇವಿಯು ಪತಿಯೊಡನೆ ಪರಮಾನಂದ ಪಟ್ಟಳೆಂಬದನ್ನಾದರೂ ಮರೆಯಬೇಡಿರಿ.

ಸಂಪೂರ್ಣ

# ಪ್ರಸ್ತಾವನೆ

ಪೂರ್ವ ಸೂಚನೆಯಂತೆ "ಛತ್ರಪತಿ" ಕಾದಂಬರಿಯು ತಡವಾಗಿಯೇ ಆಗಲೊಲ್ಲದೇಕೆ, ಈಗ ಕನ್ನಡಿಗರ ಕೈಯಲ್ಲಿ ಓಡಾಡುವ ಸುಯೋಗವು ಒದಗಿದ್ದನ್ನು ನೋಡಿ ನಮಗೆ ಬಹಳ ಸಂತೋಷವಾಗಿರುತ್ತದೆ; ಆದರೆ ಈ ಕಾದಂಬರಿಯು ಮುಗಿಯುವ ಸಂಧಿಯಲ್ಲಿ ಇದರ ಕರ್ತೃಗಳೂ, ಮಹಾರಾಷ್ಟ್ರದ ಸುಪ್ರಸಿದ್ಧ ಕಾದಂಬರೀಕಾರರೂ, ನಮ್ಮ ಕಾದಂಬರೀ ಲೇಖನ ಪ್ರವೃತ್ತಿಯ ಪರಿಪೋಷಕರೂ ಆದ ನಮ್ಮ ಸನ್ಮಾನೀಯರಾದ ಮ. ರಾ. ರಾ. ಹರಿನಾರಾಯಣ ಆಪಟೆಯವರು ಕೈಲಾಸವಾಸಿಗಳಾದರೆಂದು ಬರೆಯಲಿಕ್ಕೆ ನಮಗೆ ಬಹಳ ವ್ಯಸನವಾಗುತ್ತದೆ! ಪ್ರತ್ಯಕ್ಷವಾಗಿ ನಮ್ಮ ಮೇಲೆಯೂ, ಅಪ್ರತ್ಯಕ್ಷವಾಗಿ ಕನ್ನಡಿಗರ ಮೇಲೆಯೂ ನಮ್ಮ ಆಪಟೆಯವರ ಮಹದುಪಕಾರವಾಗಿರುವದೆಂದು ನಾವು ಭಾವಿಸಿರುತ್ತೇವೆ. ಆ ಮಹನೀಯರ ಪ್ರತ್ಯಕ್ಷ ದರ್ಶನ ಮಾಡಿಕೊಂಡು, ನಮ್ಮ ಕೃತಜ್ಞತೆ ಪ್ರಕಟಿಸುವ ಸುಯೋಗ ಒದಗದ್ದಕ್ಕಾಗಿ ನಮಗೆ ಪರಮಾವಧಿ ವ್ಯಸನವಾಗಿದೆ. ಅವರ ದರ್ಶನಕ್ಕೆ ಹೋಗಬೇಕು, ಹೋಗಬೇಕೆನ್ನುವದರೊಳಗಾಗಿ ಬೆಳಗಾಗಿ ಹೋಯಿತು! ಉಪಾಯವಿಲ್ಲ, ಜಗದೀಶ್ವರನು ನಮ್ಮ ಗುರುಸ್ಥಾನಾಪನ್ನರಾದ ಆಪಟೆಯವರ ಆತ್ಮಕ್ಕೆ ಶಾಂತಿಯನ್ನೀಯಲೆಂದು ಪ್ರಾರ್ಥಿಸಿ, ಬಹುದುಃಖದಿಂದ ಲೇಖನಿಯನ್ನು ಕೆಳಗಿಟ್ಟು ಬಿಡುವೆವು!

ಸುರಸ ಗ್ರಂಥಮಾಲಾ ಆಫೀಸ ಹಾವೇರಿ.
ಶಕೆ ೧೮೪೧ ವೈಶಾಖ ಶುದ್ಧ ೨

ಕನ್ನಡಿಗರ ಸೇವಕ
ವೇ. ತಿ. ಕುಲಕರಣಿ ಗಳಗನಾಥ

## ಶ್ರೀ ಸದ್ಗುರುವಿನ ಹೃದ್ಗತ !

ಶ್ರೀ ಸಮರ್ಥ ರಾಮದಾಸ ಸ್ವಾಮಿಗಳ ಶಿಷ್ಯವಾತ್ಸಲ್ಯವನ್ನು ವರ್ಣಿಸುವದು ಯಾರಿಗೆ ತಾನೇ ಸಾಧ್ಯವು! ತಮ್ಮ ಶಿವಾಜಿಯು ಅಫಜುಲಖಾನನಿಂದ ತನಗೆ ಒದಗಬಹುದಾಗಿದ್ದ ಮಹಾ ಗಂಡಾಂತರದಿಂದ ಪಾರಾಗಿ, ತಮ್ಮ ದರ್ಶನಕ್ಕೆ ಬರುವಾಗ ಆತನಿಗೆ ಶ್ರಮವಾಗ ಬಾರದೆಂದು ಅವರು ಮಧ್ಯಮಾರ್ಗದಲ್ಲಿಯೇ ಬಂದು ಕುಳಿತಿದ್ದರು! ಆ ಮಹಾತ್ಮರಾದ ಗುರುಶಿಷ್ಯರ ಸೇವ್ಯ–ಸೇವಕ ಭಾವವನ್ನೂ, ಅವರ ಸಂಭಾಷಣದ ಸುಸಂಗತಿಗಳನ್ನೂ, ಅವರ ಪರಿಶ್ರಮದಿಂದಾಗುವ ಜಗತ್ಕಲ್ಯಾಣವನ್ನೂ ವರ್ಣಿಸುವ ಯೋಗ್ಯತೆಯು ಸರ್ವಥಾ ನಮ್ಮಲ್ಲಿರುವದಿಲ್ಲ ಓಂದೆ ''ಮರಾಟರ ಅಭ್ಯುದಯ''ದ ಕಟ್ಟಕಡೆಯಲ್ಲಿ ನಾವು ಹೇಳಿದಂತೆ, ಸಮರ್ಥರು ಶಿಷ್ಯನನ್ನು ವಾತ್ಸಲ್ಯದಿಂದ ತಬ್ಬಿಕೊಂಡು ಆತನ ಮೈಮೇಲೆ ಕೈಯಾಡಿಸಿದರು; ಆತನ ನೆತ್ತಿಯನ್ನು ಮೂಸಿನೋಡಿ ಸಂತಯಿಸಿದರು; ಮಂತ್ರೋಪದೇಶದಿಂದ ಆತನನ್ನು ಕೃತಾರ್ಥನನ್ನಾಗಿ ಮಾಡಿದರು. ಆಗ ಆನಂದಾತಿಶಯದಿಂದ ಸದ್ಗದಿತ ಕಂಠರಾದ ಶಿವಾಜಿಮಹಾರಾಜರು ಗುರುಗಳನ್ನು ಕುರಿತು– ''ಸಮರ್ಥಾ, ನಿನ್ನ ಸಮಾಗಮದ ಆನಂದವನ್ನು ಅನುಭವಿಸುವ ಪ್ರಾಣಿಯು ಧನ್ಯನಲ್ಲವೇ? ನೋಡುವವರಿಗೆ ನೀನು ಎಷ್ಟು ದರಿದ್ರನಾಗಿ ಕಾಣುವೆಯಲ್ಲ! ಕೌಪೀನದ ಹೊರತು ನಿನ್ನ ಮೈಮೇಲೆ ವಸ್ತ್ರಗಳಿಲ್ಲ ಜಟಾಭಾರದ ಹೊರತು ನಿನಗೆ ಶಿರೋ ಭೂಷಣವಿಲ್ಲ; ಜೋಳಿಗೆಯಂಥ ಕ್ಷುದ್ರ ಸಾಧನವಲ್ಲದೆ ನಿನಗೆ ಬೇರೆ ಉಪಜೀವನದ ಮಾರ್ಗವಿಲ್ಲ, ಶ್ರೀಗುರು ದೇವಾ, ಭಸ್ಮೋದ್ಧೂಲಿತ ಗಾತ್ರದಿಂದ ಕೇವಲ ವಿರಕ್ತ ಶಿಖಾಮಣಿ ಯಾಗಿ ತೋರುವ ನೀನು, ಕಳ್ಳತನದಿಂದ ಈ ಅಪಾರವಾದ ಪರಮಾನಂದ ನಿಧಿಯನ್ನು ಎಲ್ಲಿ ಕದ್ದು ಇಟ್ಟುಕೊಂಡಿರುವೆ? ಇಷ್ಟಾಗಿ ನಿನ್ನ ಕೃಪಣತನವೆಷ್ಟು? ನಮ್ಮಂಥ ಪಾಮರರಾದ ವಿಷಯಲಂಪಟರು ನಿನ್ನ ದರ್ಶನಮಾತ್ರದಿಂದ ಪರಮಾನಂದವ ಹೊಂದಿ ಧನ್ಯರಾಗು ತ್ತಿರಲು, ಮತ್ತೆ ಮತ್ತೆ ನಮ್ಮನ್ನು ವಿಷಯ ಕೂಪದಲ್ಲಿ ಕೆಡವುವೆಯಲ್ಲ; ದೇವಾ, ಇಂಥ ಕೃಪಣತನವು ಕರುಣಾಳುವಾದ ನಿನಗೆ ಒಪ್ಪುವದೇ? ನಿನ್ನಲ್ಲಿರುವ ಆ ಪರಮಾನಂದದ ನಿಧಿಯು ಅಮರ್ಯಾದಿತವಾದದ್ದೆಂದು ಕೇಳಿದ್ದೇನೆ; ಆದರೆ ವಿಕಾರವಿಲ್ಲವಂತೆ, ಚ್ಯುತಿಯಿಲ್ಲ ವಂತೆ! ಅಂದಬಳಿಕ ನಮ್ಮಂಥ ಪಾಪಿ–ಪಾಮರರ ಸಂಪರ್ಕದಿಂದ ಅದಕ್ಕೆ ಬರುವ ಕೊರತೆಯೇನು? ನಿನ್ನ ಮಹತ್ಸನ್ನಿಧಿಯನ್ನು ನಿರಂತರವಾಗಿ ಹೊಂದಿ ಪರಮಾನಂದದಲ್ಲಿ ಮಗ್ನರಾಗಿರುವ ಎಷ್ಟೋ ಜನ ಶಿಷ್ಯರು ಇರುವರಲ್ಲವೇ? ಆದರೆ ಸಮರ್ಥಾ, ನಾನೊಬ್ಬನು

ನಿನಗೆ ಭಾರವಾಗುವೆನೇ? ನನ್ನನ್ನು ಇನ್ನು ಚರಣಸನ್ನಿಧಿಯಲ್ಲಿ ನಿರಂತರವಾಗಿ ಇಟ್ಟುಕೊಂಡು ಬಿಡು. ನನಗೆ ಸ್ವಧರ್ಮ ಹೀನರ ಸಂಗವು ಸಾಕಾಗಿದೆ! ಸ್ವದೇಶದ್ರೋಹಿಗಳ ನೆರಳು ಬೇಡಾಗಿದೆ! ಸ್ವಕರ್ತವ್ಯ ಹೀನರ ಹವ್ಯಾಸದ ಹೇಸಿಕೆಯಿಟ್ಟಿದೆ! ಆದುದರಿಂದ ಗುರುದೇವಾ, ನನ್ನನ್ನು ಚರಣಸನ್ನಿಧಿಯಿಂದ ಅಗಲಿಸಬೇಡ– ಸರ್ವಥಾ ಅಗಲಿಸಬೇಡ.

ಹೀಗೆ ನುಡಿಯುತ್ತ ಮಹಾರಾಜರು ಗುರುಚರಣಗಳ ಮೇಲೆ ಮಸ್ತಕವನ್ನಿಟ್ಟು, ಆನಂದ ಬಾಷ್ಪಗಳಿಂದ ಅವುಗಳನ್ನು ತೊಳೆಯುತ್ತಿರಲು, ಅತ್ತ ಸಮರ್ಥರ ಕುತ್ತಿಗೆಯ ಶಿರಗಳೂ ಬಿಗಿದುಬಂದವು; ಅವರ ಕಣ್ಣುಗಳೊಳಗಿಂದಲೂ ಆನಂದ ಬಾಷ್ಪಗಳು ಉದುರಹತ್ತಿದವು. ಹೀಗೆ ಧನ್ಯರಾದ ಆ ಗುರುಶಿಷ್ಯರಿಬ್ಬರೂ ಪರಸ್ಪರ ಮಹಿಮೆಯ ಸ್ಮರಣದಿಂದ ಆನಂದ ಪರವಶರಾಗಿರುವಾಗ ಅವರ ಸೇವ್ಯ–ಸೇವಕ ಭಾವವು ಅಳಿದುಹೋಗಿ, ಅವರಿಬ್ಬರೂ ಆನಂದ ರೂಪ ಏಕರಸವಾಗಿ ಹೋಗಿದ್ದರು. ಆಗಿನ ಅವರ ಐಕ್ಯಭಾವವನ್ನು ನೋಡುವದು ಪಾಮರರಿಗೆ ಶಕ್ಯವೇ? ಹೀಗೆ ಪರಮಾನಂದ ಸ್ಥಿತಿಯಲ್ಲಿ ಕೆಲಕಾಲವು ಕ್ರಮಿಸುತ್ತಿರಲು, ಸಮರ್ಥರು ಜಾಗರೂಕರಾಗಿ ಶಿಷ್ಯನನ್ನು ವಾತ್ಸಲ್ಯದಿಂದ ಹಿಡಿದೆತ್ತಿ — ''ವತ್ಸಾ, ಶಿವಬಾ, ನೀನು ಪರಮ ಧನ್ಯನು ಕಂಡೆಯಾ; ಅಂತೇ ನಮ್ಮ ಕೈ ಮುಟ್ಟಿ ಮಾಡಲಾಗದ, ಹಾಗೂ ಅನ್ಯರಿಂದ ಸಾಧಿಸಲ ಶಕ್ಯವಾದ ಕಾರ್ಯವನ್ನು ನಿನ್ನ ಕೊರಳಲ್ಲಿ ಹಾಕಿರುತ್ತೇನೆ. ಸಮರ್ಥ ಶಿಷ್ಯಾ, ನಿನ್ನ ಹೊರತು ಅದನ್ನು ಯಾರು ವಿಸ್ತರಿಸುವರು ಹೇಳು? ಈ ಭರತ ಭೂಮಿಯು ಯವನ ಬಾಧೆಯಿಂದ ಪೀಡಿತವಾಗಿರುವದು. ಆ ಬಾಧೆಯನ್ನು ದೂರಮಾಡುವ ಕೆಲಸವು ಸಾಮಾನ್ಯವಾದದ್ದಲ್ಲ, ಅದನ್ನು ಪೂರಯಿಸಲಿಕ್ಕೆ ನಿನ್ನಂಥ ಅವತಾರಿಕರೇಬೇಕಾಗಿರುವರು. ನಾವೇನೂ ಮುತ್ಸದ್ದಿಗಳಲ್ಲ, ಶೂರರಲ್ಲ, ಧರ್ಮಸ್ಥಾಪನೆಯ ಬರಿಯ ಹವ್ಯಾಸವನ್ನು ಹಮ್ಮಿದ ಮಾತ್ರದಿಂದ ನಮ್ಮಿಂದೇನಾಗುವದು ಹೇಳು? ನಿನ್ನಂಥ ಮಹಾತೇಜಸ್ವಿಯು ತಪಸ್ಸಿನಿಂದ ತಪ್ತನಾಗುತ್ತ ಧರ್ಮೋದ್ಧಾರದ, ಅರ್ಥಾತ್ ಜಗತ್ಕಲ್ಯಾಣದ ಕಾರ್ಯವನ್ನು ಮಾಡುತ್ತಿರುವಾಗ ನಿನಗಾಗುವ ಪರಿತಾಪವನ್ನು ಕೂಡಿದಾಗ ನಾವು ಎರಡು ಮಾತುಗಳಿಂದ ಶಾಂತಗೊಳಿಸಲು ಯತ್ನಿಸತಕ್ಕವರು; ಮತ್ತು ನಿನ್ನ ಕಾರ್ಯದೊಳಗಿನ ವಿಘ್ನಗಳನ್ನು ದೂರಮಾಡಿ ನಿನ್ನನ್ನು ಜಯಶೀಲನಾಗಿ ಮಾಡೆಂದು ಆ ಶ್ರೀ ಸೀತಾರಾಮನನ್ನು ಪ್ರಾರ್ಥಿಸತಕ್ಕವರು. ಇದಕ್ಕೂ ಹೆಚ್ಚಿನ ಕೆಲಸವು ನಮ್ಮಿಂದೇನಾಗುವದು? ಶಿವಬಾ, ನೀನು ಈಗ ಅನುಭವಿಸುತ್ತಿರುವ ಪರಮಾನಂದವು ನಿನ್ನ ತಪಸ್ಸಿನ ಫಲವಾಗಿರುವದು. ಅದನ್ನು ನನ್ನಂಥವರು ಕಟ್ಟಿಡಬಹುದೇ? ಜಗತ್ತನ್ನೆಲ್ಲ ತುಂಬಿ ತುಳುಕುತ್ತಿರುವ, ಅಥವಾ ಜಗದ್ರೂಪವೇ ಆಗಿರುವ ಆ ಪರಮಾನಂದವನ್ನು ಸಂಚಯಿಸಿ ಇಡಲು, ಸ್ಥಳ ಸಾಲಬಹುದೇ? ಅದನ್ನು ಸಂಗ್ರಹಿಸಿ ಇಡುವವರಾದರೂ ಯಾರು? ಅಪ್ಪಾ, ನಿನ್ನ ಗುರುಭಕ್ತಿಯೇ ಅಷ್ಟು ಬಲವತ್ತರವಾಗಿರುವದರಿಂದ ನಿನ್ನ ಮುಖದಿಂದ ಭಕ್ತಿರಸವನ್ನು ಸ್ರವಿಸುತ್ತಿರುವ ಇಂಥ ದಿವ್ಯ ವಾಣಿಗಳು ಹೊರಡುತ್ತಿರುವವು. ಧನ್ಯಪುರುಷಾ, ಆ ಪರಮಾನಂದವು ಜ್ಞಾನಮೂಲವಾದ ಭಕ್ತಿಸ್ವರೂಪವೂ, ತಪೋರೂಪವೂ ಆಗಿರುವದರಿಂದ, ನಿನ್ನಂಥ ಭಕ್ತಿಯುತ ತಪೋಧನನಾಗಲ್ಲದೆ ಅನ್ಯರಿಗೆ ಅದು ಸರ್ವಥಾ ಪ್ರಾಪ್ತವಾಗಲಾರದು. ಸತ್ಪುರುಷರ ಸ್ಥಾನದಲ್ಲಿದ್ದ ಮಾತ್ರದಿಂದ ಯಾರು ಏನು ಸಂಪಾದಿಸಿರುವರು? ಕೆಚ್ಚಲಕ್ಕೆ ಹತ್ತಿದ್ದ ಉಣ್ಣಿಯು

ಹಾಲಿನ ಅನುಭವವನ್ನರಿಯದಂತೆ, ಭಕ್ತಿಯಿಲ್ಲದ ತಪೋಹೀನರು ಎಲ್ಲಿಯಿದ್ದರೂ ಅವರು ಪರಮಾನಂದದ ಅನುಭವವನ್ನು ಅರಿಯೇ ಅರಿಯರು ಏಳು, ಔದಾಸೀನ್ಯವನ್ನು ಬಿಡು. ಕೈಕೊಂಡ ಲೋಕಕಲ್ಯಾಣದ ಕಾರ್ಯಕ್ಕಾಗಿ ಟೊಂಕಕಟ್ಟು. ತಪ್ಪಾ ದೇಹವಿರುವತನಕ ಕರ್ಮವನ್ನು ತ್ಯಜಿಸಲಾಸಲ್ಲ, ಈ ಕರ್ಮಭೂಮಿಯಲ್ಲಿ ದೇಹವನ್ನೆತ್ತಿ ತಪಸ್ಸನ್ನಾಚರಿಸದ, ಮನುಷ್ಯನು ಮಂದಭಾಗ್ಯನಲ್ಲವೇ? ಆದ್ದರಿಂದ ನೀನು ಕರ್ಮತ್ಯಾಗಕ್ಕೆ ಮನಸ್ಸುಮಾಡದೆ, ಸ್ವದೇಶೋದ್ಧಾರದ ಕಾರ್ಯವನ್ನು ಮುಂದಕ್ಕೆ ಸಾಗಿಸಲು, ಸಿದ್ಧನಾಗು; ಏಳು.

ಎಲೈ ಪುಣ್ಯವಂತನಾದ ಶಹಾಜೀ ಪುತ್ರನೇ, ಜೀಜಾಬಾಯಿಯ ಪುಣ್ಯೋದರವನ್ನು ಪ್ರಕಾಶಿಸಿದವನೇ, ಬಾಲ್ಯಧಾರಭ್ಯ ಸ್ವದೇಶೋದ್ಧಾರದ ಕಾರ್ಯದಲ್ಲಿ ನೀನು ಪರಿಪರಿಯ ಕಷ್ಟಗಳನ್ನು ಅನುಭವಿಸಿರುವೆಯೆಂಬದನ್ನು ನಾನು ಬಲ್ಲೆನು. ಅವೆಲ್ಲ ಕಷ್ಟಗಳು ನಿನ್ನ ಹೆಚ್ಚಳಕ್ಕಾಗಿಯೇ ಬಂದಿರುತ್ತವೆಂದು ತಿಳಿದುಕೋ. ಮಹಾಕಾರ್ಯದಲ್ಲಿ ಬರುವ ಮಹಾ ವಿಘ್ನಗಳನ್ನು ಮಹಾಪುರುಷರಲ್ಲದೆ ಮತ್ತೆ ಯಾರು ನೀಗಬೇಕು? ನಿನ್ನ ಕಲ್ಯಾಣವನ್ನು ಸಜ್ಜನರು ಸದಾ ಚಿಂತಿಸುತ್ತಿರುವರು; ನಿನ್ನ ಬೆನ್ನನ್ನು ಶ್ರೀ ಭವಾನೀಮಾತೆಯು ಸದಾ ಕಾಯುತ್ತಿರುವಳು. ಹೀಗೆ ಸಜ್ಜನರೂ, ದೇವತೆಗಳೂ ನಿನ್ನ ಯೋಗಕ್ಷೇಮವನ್ನು ವಹಿಸಿರುವದು ಯಾತಕ್ಕೆ? ನೀನು ದೀನಾನಾಥರ ರಕ್ಷಣಕ್ಕಾಗಿ ಟೊಂಕಕಟ್ಟಿರುವದರಿಂದಲೇ ಅಲ್ಲವೇ? ಸಜ್ಜನರ, ಹಾಗು ದೇವರ ಪರೋಪಕಾರರೂಪ ಸಂಸಾರದ ಭಾರವನ್ನು ನೀನು ಹೊತ್ತಿರುವದರಿಂದ, ನಿನ್ನ ಸಂಸಾರದ ಭಾರವನ್ನು ಸಜ್ಜನರೂ, ದೇವರೂ ಹೊತ್ತಿರುವರು. ಈಗ ನಿನಗೊದಗಿದ್ದ ಪ್ರಸಂಗವನ್ನೇ ನೆನಪು ಮಾಡಿಕೊ. ನಿನ್ನ ಬಲವೆಷ್ಟು, ಅಫಜುಲಖಾನನ ಬಲವೆಷ್ಟು? ಆದರೆ ಶ್ರೀ ಭವಾನಿಯ ಕೃಪೆಯಿಂದ ಬಹುಬಲಿಷ್ಠನಾದ ಖಾನನನ್ನು ಮರ್ದಿಸಿ ವಿಜಾಪುರದ ಬಾದಶಹನ ಸಿಂಹಾಸನವನ್ನು ನೀನು ನಡುಗಿಸಿದೆಯಲ್ಲ? ಆದರೆ ಶಿವರಾಯಾ, ಇಷ್ಟರಿಂದ ನಿನಗೊದಗಿದ ವಿಘ್ನಗಳು ಮುಗಿದವೆಂದು ಮಾತ್ರ ತಿಳಿಯಬೇಡ. ನೀನು ಇನ್ನೊಂದು ಮಹಾಸಂಕಟದೊಳಗಿಂದ ಪಾರಾಗ ಬೇಕಾಗಿರುವದು. ಆ ಮಹಾ ಸಂಕಟದಿಂದ ಪಾರಾಗಲಿಕ್ಕೆ ಪ್ರತ್ಯಕ್ಷ ಶಿವಾವತಾರವೆನಿಸುವ ನೀನೇ ಸಮರ್ಥನು. ಇನ್ನು ಮುಂದೆ ಬರುವ ಸಂಕಟವನ್ನು ಮನಸ್ಸಿನಲ್ಲಿ ತಂದರೆ, ಈವರೆಗೆ ಒದಗಿದ ಸಂಕಟಗಳು ತೀರ ಕ್ಷುದ್ರವಾದವುಗಳೆಂದು ಹೇಳಬೇಕಾಗುತ್ತದೆ. ಅತ್ಯಂತ ಬಲಾಢ್ಯನಾದ ದಿಲ್ಲಿಯ ಔರಂಗಜೇಬಬಾದಶಹನು ನಿನ್ನನ್ನು ರಸಾತಲಕ್ಕೆ ಮೆಟ್ಟಲು ಸಂಕಲ್ಪ ಮಾಡಿರುವನು. ಆತನು ಮೊದಲು ತನ್ನ ಸೋದರತ್ತೆಯ ಗಂಡನಾದ ಶಾಹಿಸ್ತೇಖಾನನನ್ನು ನಿನ್ನ ಮೇಲೆ ದಂಡೆತ್ತಿ ಕಳಿಸಿದನು. ಆದರೆ ನೀನು ಯುಕ್ತಿಯಿಂದ ಆತನನ್ನು ದಿಕ್ಕುಪಾಲಾಗಿ ಓಡಿಸಿ, ಆತನ ಮಗನನ್ನು ಯಮ ಸದನಕ್ಕೆ ಅಟ್ಟಿದೆ! ಈ ಸಿಟ್ಟು ಔರಂಗಜೇಬನ ಹೊಟ್ಟೆಯಲ್ಲಿರುವದು. ಮೇಲಾಗಿ ಅಫಜುಲ ಖಾನನಂಥ ಬಲಾಢ್ಯ ಸರದಾರನನ್ನು ಗೊತ್ತಿಗೆ ಹಚ್ಚಿ ವಿಜಾಪುರದ ಬಾದಶಹನನ್ನು ನೀನು ಮೀರಿನಿಂತಿದ್ದರಿಂದ, ಆ ಹೊಟ್ಟೆಕಿಚ್ಚಿನ ಸ್ವಭಾವದ ಔರಂಗಜೇಬನಿಗೆ ಎಂದಿಗೂ ಸಹನವಾಗದು. ಆದ್ದರಿಂದ ಶಿವಬಾ, ದಿಲ್ಲಿಯ ಬಲಾಢ್ಯ ಸರದಾರರು ಒಬ್ಬರ ಹಿಂದೆ ಒಬ್ಬರಂತೆ ಬಾದಶಹನ ಅಪ್ಪಣೆಯಿಂದ ನಿನ್ನ ಮೇಲೆ ಎಡೆಬಿಡದೆ ಸಾಗಿ ಬರುವರೆಂಬ ದನ್ನು ಚೆನ್ನಾಗಿ ನೆನಪಿನಲ್ಲಿಡು! ಆದರೂ ಮಹಾ ವಿಭೂತಿ ಸ್ವರೂಪನಾದ ನೀನು, ಎಲ್ಲ

ಗಂಡಾಂತರಗಳೊಳಗಿಂದ ಪಾರಾಗಿ 'ಛತ್ರಪತಿ'ಯೆಂಬ ಬಿರುದನ್ನು ಆ ಬಾದಶಹನಿಂದಲೇ ಸಂಪಾದಿಸಿ, ರಾಹುಮುಕ್ತನಾದ ನಡುವಗಲ ಮಾರ್ತಾಂಡನಂತೆ ಪ್ರಕಾಶಿಸುವೆ! ಇದು ನಮ್ಮ ಭವಿಷ್ಯವಾಣಿಯೆಂದು ತಿಳಿದುಕೋ. ನಮ್ಮ ಈ ಭವಿಷ್ಯವಾಣಿಯನ್ನು ಸತ್ಯವಾಗಿ ಮಾಡುವ ದಕ್ಕಾಗಿ ತಕ್ಕ ಶಕ್ತಿ–ಯುಕ್ತಿಗಳನ್ನು ಸಮರ್ಥ ರಘುವೀರನು ನಿನಗೆ ದಯಪಾಲಿಸುವನು! ಶ್ರೀ ಅಂಬಾಭವಾನಿಯ ಅನುಗ್ರಹವು ನಿನ್ನ ಬೆಂಗಾವಲಿಗಿರುವದು. ಅಂದಬಳಿಕ ಪುಣ್ಯವಂತಾ, ನಿನಗಿಂತ ಹೆಚ್ಚಿನ ವೈಭವಶಾಲಿಯು ಮತ್ತೊಬ್ಬ ನಾವನಿರುವನು? ನಿನಗೆ ಅಲಭ್ಯವಾದ ದಿವ್ಯದೇಹವು ಪ್ರಾಪ್ತವಾಗಿರುತ್ತದೆ; ಅನುಕೂಲ ಪರಿಸ್ಥಿತಿಯು ಅನಾಯಾಸವಾಗಿ ಒದಗಿರುತ್ತದೆ; ಸತ್ಪುರುಷರೂ ದೇವರೂ ನಿನ್ನನ್ನು ಅನುಗ್ರಹಿಸಲು ಆತುರರಾಗಿರುತ್ತಾರೆ. ಆದ್ದರಿಂದ ದೇಹವು ಬಿದ್ದುಹೋಗುವದರೊಳಗೆ, ದೀರ್ಘ ಪ್ರಯತ್ನದಿಂದ ಕೀರ್ತಿ ಧ್ವಜವನ್ನು ನಿಲ್ಲಿಸಿಬಿಡು. ಅಂದರೆ ನಿನ್ನ ದೇಹವು ಹೋದರೂ ಕೀರ್ತಿಯು ನಿನ್ನ ಹಿಂದೆ ಉಳಿಯುವದು. ಹೀಗೆ ಕೀರ್ತಿಶೇಷ ರಾಗುವದೇ ಜನ್ಮದ ಸಾರ್ಥಕತೆಯೆಂದು ತಿಳಿದುಕೋ. ಒಟ್ಟಿಗೆ ಹೇಳುವದಿಷ್ಟೆ, ಸ್ವೀಕೃತ ಕಾರ್ಯವನ್ನು ನೀನು ಕೊನೆಗಾಣಿಸದೇ ಇರಬೇಡ; ಒಂದು ಪಕ್ಷದಲ್ಲಿ ಕಾರ್ಯವು ಕೊನೆಗಾಣದಿದ್ದರೂ ನೀನು ಕಾರ್ಯದಿಂದ ಆ ಜನ್ಮ ಚಲಿಸಬೇಡ. ಇದೇ ನಮ್ಮ ಹೃದ್ಗತವೆಂದು ತಿಳಿದುಕೋ. ನಮ್ಮ ಈ ಹೃದ್ಗತವನ್ನು ಕೊನೆಗಾಣಿಸುವಾಗ ನಿನಗೆ ಬಹಳ ತೊಂದರೆಗಳು ಒದಗಬಹುದು; ನಿರಾಶೆಯು ಉತ್ಪನ್ನವಾಗಬಹುದು; ಆದರೆ ಅವನ್ನೆಲ್ಲ ಕ್ಷಣವೆಂದು ತಿಳಿದುಕೋ. ನಾನು ತಪಸ್ಸನ್ನಾಚರಿಸುವಾಗ ಮೂರು ಸಾರೆ ದೃಷ್ಟಾಂತವಾಗಿದೆ ನೀನು ಸರ್ವಥಾ ಅಂಜಕೂಡದು.''

ಶ್ರೀ ಗುರುಗಳ ಈ ಉತ್ಸಾಹಜನಕ ಬೋಧದಿಂದ ಮಹಾರಾಜರ ಅಂತಃಕರಣವು ಸಂತುಷ್ಟವಾಯಿತು. ಅವರ ಮನಸ್ಸಿನ ದೌರ್ಬಲ್ಯವು ಅಳಿದು ಹೋಗಿ, ಅವರ ಉಜ್ವಲವಾದ ಕರ್ತವ್ಯ ಜಾಗರೂಕತೆಯು ಉತ್ತೇಜನಗೊಂಡಿತು. ಅವರು ಬದ್ಧಾಂಜಲಿಗಳಾಗಿ ಗುರುಗಳ ಮುಂದೆ ನಿಂತುಕೊಂಡು—''ಸದ್ಗುರುನಾಥನೇ, ಎಲ್ಲವೂ ನಿನ್ನ ತಂತ್ರದಿಂದಲೇ ನಡೆದಿರುವದು. ನಿನ್ನ ಹೊರತು ಜಗತ್ತಿನಲ್ಲಿ ಏನಿರುವದು? ನೀನು ಪರಾಕ್ರಮಿಗಳಲ್ಲಿಯ ಪರಾಕ್ರಮವೂ, ಮುತ್ಸದ್ದಿಗಳಲ್ಲಿಯ ಮುತ್ಸದ್ದಿತನವೂ, ಜಯಶಾಲಿಗಳಲ್ಲಿಯ ಜಯವೂ ಆಗಿರುತ್ತೀ. ಅಂತೇ ನಿನ್ನ ಬೋಧಶ್ರವಣ ಮಾತ್ರದಿಂದ ಮನುಷ್ಯರಲ್ಲಿಯ ಕಾರ್ಯಕ್ಷಮ ಗಳಾದ ಹಲವು ಸದ್ಗುಣಗಳು ಉತ್ತೇಜನಗೊಳ್ಳುವವು; ಮತ್ತು ನೂತನವಾದ ಜನ್ಮವನ್ನು ತಾಳಿದಂತೆ ಮನುಷ್ಯನು ಚಪಲತ್ವವನ್ನು ಪಡೆಯುವನು. ಸದ್ಗುರುನಾಥಾ, ನಿನ್ನ ಆಜ್ಞೆಯೇ ನನಗೆ ವೇದವಾಕ್ಯವು. ನನ್ನ ಅನಂತ ಅಪರಾಧಗಳನ್ನು ಕ್ಷಮಿಸಿ ನನಗೆ ಕಲ್ಯಾಣಕಾರಕವಾದ ಮಾರ್ಗವನ್ನು ತೋರಿಸು. ಅಜ್ಞಾನದ ಮೂಲಕ ನಮ್ಮ ಹಿತವನ್ನೇ ನಾವು ಅರಿಯೆವು; ಅಂದಬಳಿಕ ನಮಗೆ ಪರಹಿತಜ್ಞಾನದ ಮಾತೇಕೆ? ಸರ್ವ ಸತ್ತಾಧಾರಿಯೂ, ಸರ್ವಸ್ವತಂತ್ರನೂ, ಸರ್ವಸೂತ್ರ ಚಾಲಕನೂ ಆದ ನೀನು ಮಾತ್ರ ಜಗತ್ಕಲ್ಯಾಣ ಮಾಡಲು ಪಾತ್ರನು. ನಮ್ಮಂಥ ಪಾಮರರು ನಿನಗೆ ಸರ್ವಥಾ ಅಂಕಿತರೇ ಸರಿ. ಈ ದಾಸನ ಮೇಲೆ ನಿನ್ನ ಸಂಪೂರ್ಣ ಅಧಿಕಾರವಿರುವದು. ನಿನ್ನ ಮನಸ್ಸಿಗೆ ಬಂದಂತೆ ನನ್ನನ್ನು ನಡೆಸಿಕೋ. ನಿನ್ನ ಆಜ್ಞೆಯನ್ನು ಪಾಲಿಸುವದಕ್ಕಾಗಿಯೇ ಹನ್ನೆರಡು ವರ್ಷ ನಾನು ನಿನ್ನ ಚರಣ ದರ್ಶನವನ್ನು ಮಾಡಿ

ಕೊಂಡಿರುವದಿಲ್ಲ. ಇಷ್ಟು ದಿವಸಗಳಲ್ಲಿ ಒಮ್ಮೆಯಾದರೂ ನಿನ್ನ ಚರಣ ಧೂಳಿಯು ನನ್ನ ವಾಸಸ್ಥಳವನ್ನು ಪವಿತ್ರ ಮಾಡಿರುವದಿಲ್ಲ. ಈಗ ಪರಮಾನುಗ್ರಹ ಮಾಡಿ ಪ್ರತಾಪಗಡಕ್ಕೆ ದಯಮಾಡಿಸಿ, ನಮ್ಮೆಲ್ಲರನ್ನೂ ಪುನೀತರನ್ನಾಗಿ ಮಾಡಬೇಕು. ಮಾತೃಶ್ರೀಯವರು ಸದಾ ನಿನ್ನ ಧ್ಯಾನತತ್ಪರರಾಗಿರುವರು. ನಮ್ಮ ಸ್ವಾಮಿನಿಷ್ಠ ಮಾವಳ ವೀರರನ್ನೂ ನನ್ನ ಸಕಲಪರಿವಾರವನ್ನೂ ಕೃಪಾದೃಷ್ಟಿಯಿಂದ ನೋಡಿ, ಅವರಲ್ಲಿ; ಹೊಸ ಸತ್ವವನ್ನು ತುಂಬು: ಅಂದರೆ ನಾವೆಲ್ಲರೂ ಮುಂದೆ ಬರುವ ಸಂಕಟಗಳಿಗೆ ಎದೆಗೊಟ್ಟು ನಿಲ್ಲಲು ಸಮರ್ಥರಾಗುವೆವು.''

ಮಹಾ ತೇಜಸ್ವಿಯಾದ ಪ್ರಿಯ ಶಿಷ್ಯನ ಈ ಮಾತುಗಳನ್ನು ಕೇಳಿ ಸಮರ್ಥರು ತಟ್ಟನೇ ಎದ್ದುನಿಂತರು. ಅವರೆಲ್ಲರೂ ಕಾಲುನಡಿಗೆಯಿಂದಲೇ ಪ್ರತಾಪಗಡದ ಕಡೆಗೆ ಸಾಗಿದರು. ಶ್ರೀ ಗುರುವಿನ ಆಗಮನದ ಸುದ್ದಿಯು ಮಹಾರಾಜರ ಅಪ್ಪಣೆಯಂತೆ ರಾವುತರ ಮುಖಾಂತರ ಮುಂಗಡವಾಗಿ ಪ್ರತಾಪಗಡಕ್ಕೆ ಮುಟ್ಟಿತು; ಎಲ್ಲರೂ ಪರಮ ಭಕ್ತಿಯಿಂದ ಶ್ರೀ ಗುರುವಿನ ಬರುವನ್ನು ಎದುರು ನೋಡಹತ್ತಿದರು. ಸಾತ್ವಿಕ ಭಕ್ತಿಗೆ ಒಪ್ಪುವಂತೆ ಸ್ವಾಭಾವಿಕವಾದ ಸ್ವಾಗತವು ಶ್ರೀ ಗುರುವಿಗೋಸ್ಕರ ಮಾಡಲ್ಪಟ್ಟಿತು. ಇಂದು ಒಂದು ಅದ್ಭುತವಾದ ದೈವೀತೇಜಸ್ಸು ಪ್ರತಾಪ ಗಡವನ್ನು ಬೆಳಗಿದ್ದರಿಂದ, ನೋಡಿದತ್ತೆಲ್ಲ ದೈವೀಭಾವನೆಯು ಕಂಗೊಳಿಸುತ್ತಿತ್ತು. ಆಗ ಸಮರ್ಥರು ಪ್ರಸನ್ನವದನರಾಗಿ ರಾಜಗೃಹವನ್ನು ಪ್ರವೇಶಿದರು. ಶ್ರೀಗುರುವಿನ ದರ್ಶನಮಾತ್ರ ದಿಂದ ಜನರ ರಾಜಸತಾಮಸ ವೃತ್ತಿಗಳು ಅಳಿದುಹೋಗಿ ಸಾತ್ವಿಕ ವೃತ್ತಿಯು ಜಾಗೃತ ವಾಯಿತು. ಸಮರ್ಥರು ಶ್ರೀ ಭವಾನಿಯ ದರ್ಶನಮಾಡಿಕೊಂಡು ಜೀಜಾಬಾಯಿಯವರ ಬಳಿಗೆ ಹೋದರು. ಆಗ ಆ ವೀರಮಾತೆಯು ಗುರುಗಳ ಚರಣಕ್ಕೆರಗಿದಳು. ತನ್ನ ಶಿವಬಾನ ಮೇಲಿನ ಶ್ರೀಗುರುವಿನ ವಾತ್ಸಲ್ಯವನ್ನು ಸ್ಮರಿಸಿ ಆ ಸಾಧ್ವಿಯ ಕಂಠವು ಸದ್ಗದಿತವಾಯಿತು; ನೇತ್ರಗಳು ಬಾಷ್ಪಪೂರ್ಣವಾದವು; ಶ್ರೀ ಗುರುಕೃಪೆಯಿಂದಲೇ ತನ್ನ ಒಬ್ಬನೇ ಒಬ್ಬ ಮಗನು ಗಂಡಾಂತರದಿಂದ ಪಾರಾದನೆಂದು ಆಕೆಯು ಭಾವಿಸಿ ಶ್ರೀ ಗುರುಚರಣದಲ್ಲಿ ಕೃತಜ್ಞಳಾಗಿ ಮಾತಾಡಲಾರದೆ ತಲೆಬಾಗಿಸಿ ಸುಮ್ಮನೆ ನಿಂತುಕೊಂಡಳು. ಆಗ ಸಮರ್ಥರು ಪುಣ್ಯವಂತಳಾದ ಆ ಜೀಜಾಬಾಯಿಯನ್ನು ಕುರಿತು— ''ಅಮ್ಮಾ ವೀರಮಾತೇ, ನಿನಗೆ ಶುಭವಾಗಲಿ. ಈವರೆಗೆ ನಿನ್ನ ಪುಣ್ಯಪ್ರಭಾವದಿಂದಲೇ ಶಿವಬಾನು ಹಲವು ಗಂಡಾಂತರಗಳಿಂದ ಪಾರಾಗುತ್ತ ಬಂದನು; ಮಹಾಪತಿವ್ರತೆಯಾದ ನಿನ್ನ ಆಶೀರ್ವಾದದಿಂದಲೇ ಮುಂದೆ ಒದಗುವ ದೊಡ್ಡ ಗಂಡಾಂತರ ದಿಂದಪಾರಾಗಿ ಆತನು ಸ್ವರಾಜ್ಯವನ್ನು ಸ್ಥಿರಗೊಳಿಸುವನು. ಬಹುದಿವಸಗಳ ಮೇಲೆ ಆಗಿರುವ ನಿನ್ನ ದರ್ಶನದಿಂದ ನಮಗೆ ಪರಮಾನಂದವಾಗಿರುವದು.'' ಎಂದು ನುಡಿಯಲು, ಜೀಜಾಬಾಯಿ ಯವರು—''ಸಮರ್ಥಾ, ಸದ್ಗುರೋ, ಅಘಟಿತ ಘಟನಾಶಕ್ತಿಯ ನಿನ್ನ ವಾಣಿಯು ನಮ್ಮಂಥ ಪಾಮರರನ್ನು ಕೃತಾರ್ಥರನ್ನಾಗಿ ಮಾಡುವಲ್ಲಿ ಆಶ್ಚರ್ಯವಿಲ್ಲ. ನಿನ್ನ ಆಶ್ರಯವನ್ನು ಪಡೆದ ನಾವು ಪರಮ ಧನ್ಯರೇ ಸರಿ; ಆದರೆ ಕೃಪಾವಂತಾ, ನಮ್ಮ ಶಿವಬಾನಿಗೆ ಒದಗುವ ವಿಘ್ನಗಳು ಇನ್ನೂ ತೀರಿಲ್ಲವೇ? ಆಗಲಿ, ಸಮರ್ಥ ಶಿಷ್ಯನೆನಿಸುವ ನಮ್ಮ ಶಿವಬಾನು ಎಂಥ ವಿಘ್ನಗಳಿಗೂ ಸೊಪ್ಪುಹಾಕುವ ಕಾರಣವಿಲ್ಲ. ಮೇಲಾಗಿ ಶ್ರೀ ಗುರುಮುಖದಿಂದ ಕಲ್ಯಾಣಕರವಾದ

ಆಶೀರ್ವಾದರೂಪ ಭವಿಷ್ಯವಾಣಿಯು ಹೊರಟಿರುವದು. ನಮ್ಮ ಶಿವಬಾನ ಮುಖಾಂತರ ಶ್ರೀ ಗುರುವು ಸ್ವರಾಜ್ಯವನ್ನು ಸ್ಥಿರಗೊಳಿಸುವದಕ್ಕಿಂತ ಹೆಚ್ಚಿನದೇನು ನಮಗೆ ಬೇಕಾಗಿದೆ? ಸ್ವರಾಜ್ಯದ ಮುಖಾಂತರ ಸರ್ವೋತ್ಕರ್ಷ ಮೂಲವಾದ ಸ್ವಧರ್ಮದ ಉದ್ಧಾರವಾದರೆ ಶಿವಬಾನ ಶ್ರಮವು ಸಫಲವಾಗುವದು; ನಮ್ಮ ಭೋಸಲೆ ವಂಶವು ಕೃತಾರ್ಥವಾಗುವದು.''

ಈ ಮೇರೆಗೆ ಸತ್ವಶಾಲಿಗಳ ಸಂಭಾಷಣವಾದ ಬಳಿಕ ಶ್ರೀ ಗುರುವಿನ ಪೂಜೆ-ಪುನಸ್ಕಾರಗಳ ಸಂಭ್ರಮಕ್ಕೆ ಆರಂಭವಾಯಿತು. ಸಜ್ಜನರ ಆಗಮನದ ದಿವಸವನ್ನೇ ಸರ್ವ ಸುದಿನಗಳ ಸಮುಚ್ಚಯವೆಂದು ಸಜ್ಜನರು ಭಾವಿಸುವರು. ಅದರಂತೆ ಸಮರ್ಥರ ಆಗಮನದ ದಿವಸವು ಶಿವರಾಯನ ಪರಿವಾರಕ್ಕೆ ದೊಡ್ಡ ಮನ್ವಾದಿಯಂತೆ ಆಯಿತು. ಶ್ರೀ ಗುರುವಿನ ಪೂಜಾವಿಧಾನವು ಯಥಾಸಾಂಗವಾಗಿ ಜರುಗಿದ ಬಳಿಕ ಶ್ರೀ ಗುರುಪ್ರಸಾದವನ್ನು ಎಲ್ಲರೂ ಆನಂದದಿಂದ ಸ್ವೀಕರಿಸಿದರು. ಅಧಿಕಾರಸಂಪನ್ನರಾದ ಆಪ್ತರೊಡನೆ ಆಲೋಚಿಸುವದು ಮನುಷ್ಯ ಸ್ವಭಾವವಷ್ಟೇ? ಅದರಂತೆ ಪರಮ ಆಪ್ತನಾದ ಸಮರ್ಥ ಸದ್ಗುರುವಿನ ಬಳಿಯಲ್ಲಿ ತಾವು ಕೈಕೊಂಡಿದ್ದ ಗಂಡಾಂತರದ ಮಹಾಕಾರ್ಯವನ್ನು ಆಲೋಚಿಸುವದಕ್ಕಾಗಿ ಶಿವರಾಯನ ನಂಬಿಗೆಯ ನಿಯಮಿತ ಪರಿವಾರವು ಏಕಾಂತದಲ್ಲಿ ಶ್ರೀ ಗುರುವಿನ ಸಮ್ಮುಖದಲ್ಲಿ ನೆರೆಯಿತು. ಶ್ರೀ ಗುರುವು ಭಾವೀ ಗಂಡಾಂತರವನ್ನು ಕುರಿತು ಏನು ಹೇಳುವರೋ ಎಂದು ಎಲ್ಲರೂ ಆತುರದಿಂದ ಎದುರು ನೋಡುತ್ತಿದ್ದರು. ತೇಜೋವಂತರಾದ ತಪೋಧನರ ಮುಂದೆ ಬಾಯಿಬಿಡುವ ಯೋಗ್ಯತೆಯು ಯಾರಿಗಿರುವದು? ಎಲ್ಲರೂ ತಟಸ್ಥರಾಗಿ ಶ್ರೀ ಗುರುವಿನ ಸನ್ನಿಧಿಯಲ್ಲಿ ವಿನಯದಿಂದ ಕುಳಿತುಬಿಟ್ಟಿದ್ದರು. ಅಷ್ಟರಲ್ಲಿ ಸಮರ್ಥರು ಆ ಧರ್ಮನಿಷ್ಠ ಪರಿವಾರವನ್ನು ನೋಡಿ ಮಹಾರಾಜರನ್ನು ಕುರಿತು— ''ಶಿವಬಾ, ರಘುವೀರನ ತಂತ್ರದಿಂದ ಕಾಲಕಾಲಕ್ಕೆ ನಮಗೊದಗುವ ಪ್ರಸಂಗಗಳು ನಮ್ಮ ಹಿತಕ್ಕಾಗಿಯೇ ಇರುತ್ತವೆಂಬದನ್ನು ಮರೆಯ ಲಾಗದು. ದಿಲ್ಲಿಯ ಬಾದಶಹನಿಂದ ಮುಂದೆ ಒದಗಬೇಕಾಗಿದ್ದ ಗಂಡಾಂತರವು ನಮ್ಮ ಹಿತಕ್ಕಾಗಿಯೇ ಇರುತ್ತದೆ. ಗಂಡಾಂತರವು ಅತ್ಯಂತ ಭಯಂಕರವೆಂದು ಶ್ರೀ ರಘುವೀರನು ಸೂಚಿಸುತ್ತಿರುವನು; ಆದರೂ ಇದರಿಂದ ನೀವು ಹತಾಶರಾಗಬಾರದು. ಒಂದು ಪಕ್ಷದಲ್ಲಿ ನೀವು ಈಗ ಮಾಡಿದ ಯತ್ನವೆಲ್ಲ ನಿಷ್ಫಲವಾಗುವಂತೆ ತೋರಬಹುದು. ಕೆಲಕಾಲ ನೀವು ಕೇವಲ ನಿರಾಶೆಯಿಂದ ಜೀವಿಸಬೇಕಾಗಬಹುದು; ಆದರೆ ಕಡೆಗೆ ಗಂಡಾಂತರದ ನಿವಾರಣವಾಗಿ ಸ್ವರಾಜ್ಯವು ನಿಶ್ಚಯವಾಗಿ ಸ್ಥಿರಗೊಳ್ಳುವದು. ನಿಮ್ಮೆಲ್ಲರ ಸ್ವಾಮಿನಿಷ್ಠೆಯು, ಹಾಗು ಸ್ವದೇಶ ಪ್ರೀತಿಯ ಪರೀಕ್ಷೆಯ ಕಾಲವು ಒದಗತಕ್ಕದ್ದಿರುತ್ತದೆ. ಆ ಕಾಲದಲ್ಲಿ ನೀವು ಹತವೀರ್ಯರೂ, ಎದೆಗುಂದಿದವರೂ ಆಗಲಾಗದು.''

ಸಮರ್ಥರ ಈ ಮಾತುಗಳನ್ನು ಕೇಳಿ ಮಹಾರಾಜರು—''ಪ್ರತ್ಯಕ್ಷ ಸನ್ನಿಧಿಯಿಂದ ಈ ಮೇರೆಗೆ ಅಭಯಪ್ರದಾನವಾಗುತ್ತಿರಲು, ನಾವು ಹತವೀರ್ಯರಾಗುವ ಕಾರಣವೇನು? ನಿರಾಶೆಯ ಗಂಧವು ಕೂಡ ನಮ್ಮಲ್ಲಿ ಸುಳಿಯಲಿಕ್ಕಿಲ್ಲ; ಆದರೆ ಸನ್ನಿಧಿಯಲ್ಲಿ ವಿಜ್ಞಾಪಿಸುವದೇ ನೆಂದರೆ—ಈಗ ಹನ್ನೆರಡು ವರ್ಷಗಳಿಂದ ದರ್ಶನಕ್ಕೆ ಬರಲು ನನ್ನನ್ನು ಪ್ರತಿಬಂಧಿಸಿದಂತೆ,

ಇನ್ನು ಮೇಲೆ ಮಾತ್ರ ಪ್ರತಿಬಂಧಿಸಬಾರದು. ನನಗೆ ಅಸಮಾಧಾನವಾದಾಗೆಲ್ಲ ಚರಣದರ್ಶನದಿಂದ ಸಮಾಧಾನವಾಗುತ್ತದೆ; ಮಾರ್ಗವು ತೋಚದಾಗಲು, ಚರಣವನ್ನು ಕಂಡರೆ ಯೋಗ್ಯ ಮಾರ್ಗವು ದೊರೆಯುತ್ತದೆ; ನನ್ನ ಸಕಲ ವಿಪತ್ತುಗಳೂ, ದೈನ್ಯಗಳೂ ಚರಣ ದರ್ಶನದಿಂದ ದೂರಾಗುವದೆಂಬ ದೃಢವಿಶ್ವಾಸವು ನನಗಿರುವದು; ಆದ್ದರಿಂದ ಬೇಕಾದಾಗ ದರ್ಶನಕ್ಕೆ ಬರಲು ಅಭಯವನ್ನು ಕೊಡುವ ಕೃಪೆಯಾಗಬೇಕು. ದರ್ಶನಕ್ಕೆ ಬರಲು ಪ್ರತಿಬಂಧವಾದರೆ ನನ್ನ ಮುಖ್ಯವಾದ ಆಶ್ರಯವೇ ತಪ್ಪಿದ ಹಾಗಾಗುತ್ತದೆ,'' ಎಂದು ಪ್ರಾರ್ಥಿಸಲು, ಸಮರ್ಥರು— ಶಿವಬಾ, ನಿನಗೆ ನಮ್ಮ ಉಪಯೋಗವು ಆಶೀರ್ವಾದದಮಟ್ಟಿಗೇ ಸರಿ; ನಾವು ಮುತ್ಸದ್ದಿಗಳೂ ಅಲ್ಲ ಯೋಧರೂ ಅಲ್ಲವೆಂಬದನ್ನು ನಿನಗೆ ಮತ್ತೆ ಮತ್ತ ತಿಳಿಸುವ ಕಾರಣವಿಲ್ಲ ಕೈಕೊಂಡಿರುವ ಕಾರ್ಯದಲ್ಲಿ ನಿನಗೆ ಯಶಸ್ಸು ದೊರೆಯಬೇಕೆಂದು ನಾವು ಶ್ರೀ ರಘುವೀರನನ್ನು ಪ್ರಾರ್ಥಿಸ ತಕ್ಕವರು. ಶ್ರೀರಘುವೀರನ ಕೃಪೆಯಿಂದಲೇ ನಿನ್ನ ಕಾರ್ಯವು ಸಾಧಿಸುವದು. ಶ್ರೀ ಭವಾನಿಯು ನಿನ್ನ ಬೆಂಗಾವಲಾಗಿರುವಳು. ನಿನ್ನ ಕುಲಸ್ವಾಮಿಯಾದ ಆ ಲೋಕಮಾತೆಯು ಪ್ರಸಂಗದಲ್ಲಿ ದೃಷ್ಟಾಂತದಿಂದ ನಿನಗೆ ಯೋಗ್ಯ ಮಾರ್ಗವನ್ನು ತೋರಿಸುವಳು. ಪ್ರಸಂಗ ವಿಶೇಷದಲ್ಲಿ ನೀನು ನಮ್ಮ ಆಲೋಚನೆಗಳನ್ನು ಕೇಳಿಕೊಳ್ಳುವದರಿಂದ ನಿನಗೆ ಹಿತವಾಗುವಂತೆ ತೋರುತ್ತಿರುವದಕ್ಕೆ ನಮ್ಮ ಮೇಲಿರುವ ನಿನ್ನ ದೃಢವಿಶ್ವಾಸವೇ ಕಾರಣವು. 'ವಿಶ್ವಾಸಃ ಫಲದಾಯಕಃ' ಎಂಬಂತೆ ನಿನ್ನ ದೃಢವಿಶ್ವಾಸವೇ ನಿನಗೆ ಫಲವನ್ನು ಕೊಡುವದು. ಮುಖ್ಯವಾಗಿ ನೀನು ಗುರುಹಿರಿಯರ, ಹಾಗೂ ದೇವರ, ಅದರಂತೆ ಗೋ–ಬ್ರಾಹ್ಮಣರ ಮೇಲಿರುವ ವಿಶ್ವಾಸವನ್ನು ಕಾಯ್ದುಕೊಳ್ಳು. ಈ ದೈವೀ ವಿಶ್ವಾಸವೇ ನಿನ್ನನ್ನು ಉದ್ಧರಿಸುವದು. ನಿನ್ನ ಹಿತಚಿಂತನಕ್ಕೆ ನಮಗೆ ಸ್ವಾತಂತ್ರ್ಯವನ್ನು ಕೊಡು. ಏನು ಮಾಡಿದರೆ ನಿನಗೆ ಹಿತವಾದೀತೆಂಬದನ್ನು ಕುರಿತು ಶ್ರೀರಘುಪತಿಯು ನಮ್ಮನ್ನು ಪ್ರೇರಿಸುವನು, ಅದರಂತೆ ನಾವು ನಡೆಯತಕ್ಕವರು. ನಮ್ಮನ್ನು ಪ್ರತಿಬಂಧಿಸುವ ಗೊಡವಿಗೆ ನೀನು ಹೋಗಬೇಡ. ನಾವು ಸದಾ ನಿನ್ನ ಹಿತಚಿಂತನದಲ್ಲಿಯೇ ತತ್ಪರರಾಗಿರುವೆವು. ನಾವು ನಿನ್ನ ಹಿತವನ್ನು ನಿನ್ನ ಬಳಿಯಲ್ಲಿದ್ದು ಮಾಡುವೆವು, ನಿನ್ನಿಂದ ದೂರದಲ್ಲಿದ್ದು ಮಾಡುವೆವು. ವ್ಯಕ್ತಾವ್ಯಕ್ತರೂಪಗಳಿಂದ ಸದಾ ನಿನ್ನ ಗುರುದೈವತವು ನಿನ್ನ ಬಳಿಯಲ್ಲಿಯೇ ಇರುತ್ತದೆಂದು ದೃಢವಾಗಿ ನಂಬು. ನನ್ನ ಗುರುವೆಂಬ ಮೋಹದಿಂದ ಯಾವಾಗಲೂ ದರ್ಶನ ಕೊಡುತ್ತಿರಬೇಕೆಂದು ನಮ್ಮನ್ನು ನೀನು ಪ್ರತಿಬಂಧಿಸ ಬೇಡ. ಅಪ್ಪಾ, ನಿನ್ನ ಗುರುವು ನಿನ್ನನ್ನು ಅಗಲಿ ಹೋಗಬಹುದೇ? ನೀನು ನೆನಿಸಿದಾಗ ನಿನ್ನ ಗುರುವು ನಿನ್ನ ಮುಂದೆ ನಿಲ್ಲಬಹುದು; ಅಥವಾ ನಿನ್ನ ಮನಸ್ಸಿನಲ್ಲಿ ಪ್ರಕಟ ವಾಗಬಹುದು. ಶಿವಬಾ, ನಿನಗೆ ಅಸಮಾಧಾನವಾದಾಗ ಉತ್ತರಕ್ಷಣದಲ್ಲಿಯೇ ಸಮಾಧಾನ ವಾಗುತ್ತಿರುವ ಅನುಭವವು ನಿನಗೆ ಇರುವದಿಲ್ಲವೇ? ಅದು ಯಾತರ ಪರಿಣಾಮವೆಂದು ಭಾವಿಸುತ್ತೀ? ಇದು ಸಜ್ಜನರೂ, ದೇವರೂ ನಿನ್ನಂಥ ಧರ್ಮರಕ್ಷಕನ ಯೋಗಕ್ಷೇಮದ ವಿಷಯವಾಗಿ ಸದಾ ಜಾಗರೂ ಕರಾಗಿರದಿದ್ದರ ಪರಿಣಾಮವೆಂತಲೇ ನೀನು ದೃಢವಾಗಿ ನಂಬು. ಪುಣ್ಯವಂತಾ, ಧರ್ಮಮೂರ್ತಿ ಯಾದ ನಿನ್ನ ಕಾರ್ಯಕ್ಕೆ ಕೆಲವರು ಪ್ರತ್ಯಕ್ಷ ಸಹಾಯ

ಮಾಡುವರು. ಕೆಲವರು ಅಪ್ರತ್ಯಕ್ಷವಾಗಿ ಸಹಾಯಮಾಡುವರು, ನೋಡು, ನಿನ್ನ ಈ ಸ್ವಾಮಿನಿಷ್ಠ ಮಾವಳ ವೀರಪರಿವಾರವೂ, ಶ್ರೇಷ್ಠ ಮುತ್ಸದ್ದಿಗಳೆ ನಿಸುವ ಈ ಬ್ರಾಹ್ಮಣ ಪರಿವಾರವೂ, ನಿನಗೆ ಜನ್ಮವಿತ್ತ ಜೀಜಾಮಾತೆಯೂ ನಿನಗೆ ಪ್ರತ್ಯಕ್ಷ ಸಹಾಯ ಮಾಡತಕ್ಕವ ರಾಗಿರುತ್ತಾರೆ. ಶ್ರೀ ಅಂಬಾಭವಾನಿಯು ಅಪ್ರತ್ಯಕ್ಷ ಸಹಾಯಕಳಾಗಿದ್ದಾಳೆ. ನಮ್ಮಂಥ ನಿನ್ನ ಹಿತಚಿಂತಕ ಭಿಕ್ಷುಕ ವರ್ಗವು ಸದಾ ನಿನ್ನನ್ನು ಆಶೀರ್ವದಿಸುತ್ತ ನಿನ್ನ ಕಲ್ಯಾಣಕ್ಕೋಸ್ಕರ ತಪಸ್ಸನ್ನು ಆಚರಿಸುತ್ತಿರುವದು! ಅಂದಬಳಿಕ ನೀನು ಚಿಂತಿಸುವದೇಕೆ? ಕಾಲಮೃತ್ಯುವಿನ ಭಯವನ್ನು ಕೂಡ ನೀನು ಲೆಕ್ಕಿಸಲಾಗದು. ಸಂಕಲ್ಪಿತ ಕಾರ್ಯವು ನಿನ್ನಿಂದ ಪೂರ್ಣವಾಗುವ ವರೆಗೆ ಯಾವ ವಿಘ್ನಗಳೂ ನಿನ್ನನ್ನು ತಡೆಯಲಾರವು; ಯಾವ ಪ್ರಬಲ ಶತ್ರುವೂ ನಿನ್ನನ್ನು ನಿರ್ಬಂಧಿಸಲಾರನು. ನೀನು ಆಗಾಗ್ಗೆ ನಮ್ಮ ಬಳಿಗೆ ಬಂದು ಆಲೋಚಿಸುತ್ತಿರುವದರಿಂದ ನಮಗೆ ಬಹಳ ಸಮಾಧಾನವಾಗುತ್ತದೆಂಬದೇನೋ ನಿಜ; ಆದರೆ ನಿಜವಾಗಿ ಕಾರ್ಯಮಾಡುವಾಗ ಪ್ರಸಂಗಕ್ಕನುಸರಿಸಿ ಎಲ್ಲ ಸಂಗತಿಗಳ ವಿಚಾರವನ್ನು ನಿನ್ನಷ್ಟಕ್ಕೆ ನೀನೇ ಮಾಡಿಕೊಳ್ಳ ಬೇಕಾಗುವದು. ನಮ್ಮ ಈ ಹೃದ್ಗತವನ್ನೆಲ್ಲ ನಿನಗೆ ತಿಳಿಸುವ ಉದ್ದೇಶದಿಂದಲೇ ನಾವು ನಮ್ಮ ತಪೋಭೂಮಿಯಾದ ಪರಳಿಯನ್ನು ಬಿಟ್ಟು ನಿನ್ನ ಬಳಿಗೆ ಬಂದಿರುತ್ತೇವೆಂದು ತಿಳಿದುಕೋ. ನಾವು ಸ್ವಚ್ಛಂದಿಗಳು; ಬೇಕಾದಾಗ ತೀರ್ಥಯಾತ್ರೆಗೆ ಹೊರಡುವೆವು. ಬೇಕಾದಾಗ ನಿನ್ನ ಬಳಿಗೆ ಬರುವೆವು. ಎಲ್ಲಿದ್ದರೂ, ಏನು ಮಾಡಿದರೂ ಧರ್ಮೋದ್ಧಾರಕ್ಕಾಗಿ ಟೊಂಕಕಟ್ಟಿರುವ ನಿನ್ನ ಹಿತಚಿಂತನದಲ್ಲಿಯೇ ನಾವು ತತ್ಪರರಾಗಿರುವೆವು. ಇದೇ ನಿನಗೆ ತಿಳಿಸತಕ್ಕ ನಮ್ಮ ಮುಖ್ಯವಾದ ಹೃದ್ಗತವು!

## ದುಷ್ಟವಾರ್ತೆ !

ಶ್ರೀ ಗುರುವಿನ ಈ ಭವಿಷ್ಯವಾಣಿಯಿಂದ ಮಹಾರಾಜರೇ ಮೊದಲಾದ ವೀರಪರಿವಾರಕ್ಕೆ ಅಸಮಾಧಾನವಾದರೂ, ಕಡೆಗೆ ಗುರುವು ಅಭಯವನ್ನು ಸೂಚಿಸಿದ್ದರಿಂದ ಅವರೆಲ್ಲರೂ ಸಮಾಧಾನವನ್ನೇ ತಾಳಿದರು. ಮಹಾರಾಜರು ಅತ್ಯಂತ ಗುರುಭಕ್ತರು. ಅವರು ಗುರುವಚನದಲ್ಲಿ ಲೇಶವಾದರೂ ಅವಿಶ್ವಾಸ ಮಾಡತಕ್ಕವರಲ್ಲ; ಆದರೆ ಗುರುಗಳ ಮೇಲೆ ಭಾರಹಾಕಿ ಕೈಮುಚ್ಚಿಕೊಂಡು ಕುಳಿತುಕೊಳ್ಳುವಂಥ ನೀಚವೃತ್ತಿಯವರು ಮಾತ್ರ ಅವರು ಇದ್ದಿಲ್ಲ. ಅಂಥ ಅಧಮರಿಗೆ ಗುರುಕೃಪೆಯಾದರೂ ಹ್ಯಾಗಾಗಬೇಕು? ಶ್ರೀ ಗುರುಚರಣಾರ್ಪಣ ಬುದ್ಧಿಯಿಂದ ಅಥವಾ ಈಶ್ವರಾರ್ಪಣ ಬುದ್ಧಿಯಿಂದ, ಇಲ್ಲವೆ ಸಮಾಜಾರ್ಪಣ ಬುದ್ಧಿಯಿಂದ ತನ್ನ ಕರ್ತವ್ಯವನ್ನು ಮನಃಪೂರ್ವಕವಾಗ ಮಾಡಿ, ಮಾಡಿಯೂ ಮಾಡದಂತೆ ಇರುವ ಕರ್ತವ್ಯ ನಿಷ್ಠನನ್ನೇ ಗುರುವಾಗಲಿ, ಈಶ್ವರನಾಗಲಿ ಸಮಾಜವಾಗಲಿ ಅನುಗ್ರಹಿಸುವದು. ಮಹಾರಾಜರು ಇಂಥ ಧನ್ಯ ಶಿಷ್ಯರೊಳಗಿನವರಾದ್ದರಿಂದ, ತಮ್ಮ ನೂತನ ರಾಜ್ಯದ ಸುರಕ್ಷಿತತೆಗಾಗಿ ಮಾಡತಕ್ಕ

ವ್ಯವಸ್ಥೆಯನ್ನು ಅತ್ಯಂತ ದಕ್ಷತೆಯಿಂದ ಮಾಡತೊಡಗಿದರು. ದಿಲ್ಲಿಯಿಂದ ಒದಗಬಹುದಾದ ವಿಘ್ನದ ನಿವಾರಣೋಪಾಯಗಳನ್ನು ಕುರಿತು ಶಾಂತಮನಸ್ಸಿನಿಂದ ಆಲೋಚಿಸತೊಡಗಿದರು; ಯಾಕಂದರೆ, ಮಹಾತ್ಮರು ಕರ್ತವ್ಯ ದೃಷ್ಟಿಯವರಿರುವದಲ್ಲದೆ ಫಲದೃಷ್ಟಿಯವರಿರುವದಿಲ್ಲ. ಮಹಾರಾಜರು ಔರಂಗಜೇಬ ಬಾದಶಹನ ಸೋದರತ್ತೆಯ ಗಂಡನಾದ ಶಾಯಿಸ್ತೇ ಖಾನನನ್ನು ಓಡಿಸಿ, ಆತನ ಮಗನನ್ನು ಕೊಂದಿದ್ದರಷ್ಟೇ? ಈ ಸಿಟ್ಟು ಬಾದಶಹನ ಹೊಟ್ಟೆಯಲ್ಲಿ ಕುದಿಯುತ್ತಿತ್ತು. ಬಾದಶಹನು ಅತ್ಯಂತ ಮತ್ಸರ ಸ್ವಭಾವದವನು. ಆತನು ತನ್ನ ಧರ್ಮದಲ್ಲಿ ನಿಷ್ಠೆಯುಳ್ಳವನಾಗಿದ್ದರೂ, ಪರಧರ್ಮವನ್ನು ಬಹಳವಾಗಿ ದ್ವೇಷಿಸುತ್ತಿದ್ದನು. ರಾಜ್ಯವನ್ನು ಸಂಪಾದಿಸುವಾಗ ಅಣ್ಣತಮ್ಮಂದಿರನ್ನು ಕೊಲ್ಲಿಸಲಿಕ್ಕೂ, ತಂದೆಯನ್ನು ಸೆರೆಹಿಡಿಯಲಿಕ್ಕೂ ಈತನು ಹೇಸಲಿಲ್ಲ. ಹಿಂದೂ ಜನರನ್ನು ಈತನಷ್ಟು ಯಾವ ಬಾದಶಹನೂ ಪೀಡಿಸಲಿಲ್ಲವೆಂದು ಹೇಳಬಹುದು. ಅವಿಶ್ವಾಸ, ದ್ವೇಷ, ನಿರ್ದಯ, ಹೊಟ್ಟೇಕಿಚ್ಚು, ಈ ದುರ್ಗುಣಗಳು ಈತನ ಹೃದಯದಲ್ಲಿ ಸಂಪೂರ್ಣವಾಗಿದ್ದವು. ಈ ದುರ್ಗುಣಗಳು ಈತನಲ್ಲಿ ಇಲ್ಲದಿದ್ದರೆ, ಹಿಂದೂ ಜನರನ್ನು ಪ್ರೇಮದಿಂದ ಈತನು ನಡಿಸಿಕೊಂಡಿದ್ದರೆ, ಇವನಂಥ ಬಾದಶಹನು ಮೊಗಲರಲ್ಲಿ ಮತ್ತೊಬ್ಬ ನಾಗಲಿಲ್ಲೆಂದು ಹೇಳಬಹುದಾಗಿತ್ತೆಂದು ಇತಿಹಾಸಕಾರರು ಒಡಂಬಟ್ಟಿರುವರು. ಯಾಕಂದರೆ, ಈತನಲ್ಲಿ ಕೆಲವು ಸದ್ಗುಣಗಳೂ ಇದ್ದವು. ಈತನು ಅತ್ಯಂತ ಧರ್ಮನಿಷ್ಠನೂ, ವಿಷಯ ಸುಖಕ್ಕೆ ಮೆಚ್ಚದವನೂ, ಯಾವ ದುರ್ವ್ಯಸನಗಳಿಗೂ ಒಳಗಾಗದವನೂ, ಆಲಸ್ಯ ರಹಿತನೂ ಆಗಿದ್ದನು; ಡಾಂಭಿಕತನವು ಈತನಿಗೆ ಸರ್ವಥಾ ಸೇರುತ್ತಿದ್ದಿಲ್ಲ.

ಔರಂಗಜೇಬ ಬಾದಶಹನ ಕಾಲದಲ್ಲಿ ಮೊಗಲ ಸಾಮ್ರಾಜ್ಯವು ಬಹು ವಿಸ್ತಾರ ವಾಯಿತು. ಈತನು ''ಅಲಮಗೀರ'' ಅಂದರೆ ಜಗತ್ತನ್ನು ಗೆಲ್ಲುವವನು ಎಂಬ ಬಿರುದನ್ನು ಧರಿಸಿದ್ದನು. ಈತನ ಶೌರ್ಯವನ್ನೂ, ಮಹತ್ವಾಕಾಂಕ್ಷೆಯನ್ನೂ, ರಾಜ್ಯ ತೃಷ್ಣೆಯನ್ನೂ ತಡೆಯುವಂಥ ಹಿಂದೂ ಅರಸರು ಅಲ್ಲಲ್ಲಿ ಆಗ ಪ್ರಕಟವಾಗದಿದ್ದರೆ, ಈ ದುಷ್ಟ ಬಾದಶಹನ ಉಪಟಳವು ಮಿತಿಮೀರಿ ಹೆಚ್ಚುತ್ತಿತ್ತೆಂದು ಹೇಳಬಹುದು. ರಜಪೂತಸ್ಥಾನದಲ್ಲಿ ರಾಣಾರಾಜಸಿಂಹ, ರಾಜಾಜಯಸಿಂಗ, ಜಸವಂತಸಿಂಗ ಮೊದಲಾದ ಮಹಾಮಹಾವೀರರೂ ಔರಂಗಜೇಬ ನನ್ನು ಮೆತ್ತಗೆ ಮಾಡುವಷ್ಟು ಸಮರ್ಥರಾಗಿದ್ದರು. ದಕ್ಷಿಣದಲ್ಲಿ ಶಿವಾಜಿಮಹಾರಾಜರಂತೂ ಮುಸಲ್ಮಾನರ ದವಡೆಯೊಳಗಿಂದ ತಮ್ಮ ಬಾಂಧವರನ್ನು ಬಿಡಿಸಲು ಟೊಂಕಕಟ್ಟಿದ್ದರು. ಅವರ ಬೆಳವಣಿಗೆಯು ಔರಂಗಜೇಬನಂಥ ದುಷ್ಟ ಬಾದಶಹನಿಗ ಹ್ಯಾಗೆ ಸಹನವಾಗಬೇಕು? ತನ್ನ ಪರಾಕ್ರಮದಿಂದ ದಕ್ಷಿಣದ ಬಾದಶಹನನ್ನು ಮೀರಿ, ದಿನದಿನಕ್ಕೆ ಮೇಲಕ್ಕೆ ತಲೆಯೆತ್ತುತ್ತಿರುವ ಶಿವರಾಯನನ್ನು ಬಗ್ಗುಬಡಿಯುವದಕ್ಕಾಗಿ ಈ ರಾಜ್ಯತೃಷ್ಣೆಯ ಅಲಮಗೀರನು ಟೊಂಕ ಕಟ್ಟಿದ್ದನು. ಮಹಾರಾಜರ ಮೇಲೆ ಈತನ ಸಿಟ್ಟು ಬಹಳ. ಅವರನ್ನು ''ಶಿವ''ನೆಂದು ಒಂಟಿ ಹೆಸರಿನಿಂದ ಕರೆಯುತ್ತಿದ್ದನಲ್ಲದೆ 'ಶಿವಾಜಿ' ಎಂದು ಸಹ ಕರೆಯುತ್ತಿದ್ದಿಲ್ಲ. ಅವರನ್ನು ದಕ್ಷಿಣದ ಗುಡ್ಡಗಾಡಿನೊಳಗಿನ ಇಲಿಯೆಂದು ಆತನು ತಿಳಿದಿದ್ದನು. ಆದರೆ ಇಲಿಯು ದಿನದಿನಕ್ಕೆ ಹುಲಿಯಾಗಹತ್ತಿದ್ದನ್ನು ನೋಡಿ ಅವನ ಹೊಟ್ಟೆಯೊಳಗಿನ ಸಿಟ್ಟು ನೆತ್ತಿಗೇರಿತು. ಮಹರಾಜರು

ಮುಸಲ್ಮಾನ ಸರದಾರನನ್ನು ಒಬ್ಬೊಬ್ಬರನ್ನಾಗಿ ಹಣಿದು ಕೀರ್ತಿಶಾಲಿಗಳಾಗಹತ್ತಿದ್ದರಿಂದ, ಬಾದಶಹನು ಸಿಟ್ಟಿನಿಂದ ಹುಚ್ಚಾದನು. ಅಫಜುಲಖಾನನ ಮರಣದ ತರುವಾಯ ಆಲಮಗೀರನು ಜಸವಂತಸಿಂಗನೆಂಬ ಬಲಾಢ್ಯ ರಜಪುತ ಸರದಾರನನ್ನು ದಕ್ಷಿಣಕ್ಕೆ ಕಳಿಸಿದ್ದನು; ಆದರೆ ಈತನು ಹಿಂದುವಾಗಿರುವದರಿಂದ ಶಿವಾಜಿಯನ್ನು ಬಗ್ಗು ಬಡಿಯಲಿಕ್ಕೆ ಹಿಂದೆಮುಂದೆ ನೋಡಬಹುದೆಂದು ತಿಳಿದು, ತನ್ನ ಮಗನಾದ ಮೊಆಝೀಮನನ್ನು ಜಸವಂತಸಿಂಗನ ಮೇಲ್ವಿಚಾರಣೆಗಾಗಿ, ಬಾದಶಹನು ಕಳಿಸಿದನು. ಬಾದಶಹನ ವಿಶ್ವಾಸವು ತನ್ನ ಮಕ್ಕಳ ಮೇಲೆಯೂ ಇದ್ದಿಲ್ಲ; ಯಾವ ಸರದಾರರ ಮೇಲೆಯೂ ಇದ್ದಿಲ್ಲ; ಹಿಂದೂ ಜನರನ್ನಂತೂ ಆತನು ನಂಬುತ್ತಲೇ ಇದ್ದಿಲ್ಲ. ಆದ್ದರಿಂದ ಒಬ್ಬರ ಮೇಲೆಯೇ ವಿಶೇಷವಾಗಿ ಹಿಂದೂ ಸರದಾರರಮೇಲೆ ವಿಶ್ವಾಸವಿಟ್ಟು ಒಬ್ಬರನ್ನೇ ದಂಡಯಾತ್ರೆಗೆ ಆತನು ಕಳುಹುತ್ತಿದ್ದಿಲ್ಲ. ಅದರಂತೆ ಜಸವಂತಸಿಂಗನನ್ನೂ ಮೊಆಝೀಮನನ್ನೂ ಬಾದಶಹನು ದೊಡ್ಡ ದಂಡಿನೊಡನೆ ಮಹಾರಾಜರ ಮೇಲೆ ಕಳಿಸಿದ್ದನು. ಆದರೆ ಮಹಾರಾಜರು ಯುಕ್ತಿಪ್ರಯುಕ್ತಿಯಿಂದ ಅವರಿಬ್ಬರನ್ನೂ ತಮ್ಮ ಕಡೆಗೆ ಮಾಡಿಕೊಂಡು, ಮೂಗಿಗೆ ತುಪ್ಪ ಹಚ್ಚಿ ಬಾವುಗನನ್ನು ಒತ್ತಟ್ಟಿಗೆ ಕುಳ್ಳಿರಿಸಿಬಿಡುವಂತೆ, ಆ ಇಬ್ಬರು ವೀರರನ್ನು ದಕ್ಷಿಣದಲ್ಲಿ ಕುಳ್ಳಿರಿಸಿಬಿಟ್ಟರು.

ತನ್ನ ಮಗನೂ, ಜಸವಂತಸಿಂಗನೂ ಸುಮ್ಮನೆ ದಕ್ಷಿಣದಲ್ಲಿ ಕಾಲಹರಣ ಮಾಡುತ್ತಿದ್ದದ್ದನ್ನು ನೋಡಿ ಬಾದಶಹನು ಸಂತಾಪಗೊಂಡನು. ಇವರಿಬ್ಬರೂ ಗುಪ್ತವಾಗಿ ಶಿವನಿಗೆ ಅನುಕೂಲ ವಾಗಿರುವರೆಂಬ ಸಂಗತಿಯು ಗುಪ್ತಚಾರರ ಮುಖಾಂತರ ಬಾದಶಹನಿಗೆ ಗೊತ್ತಾಗಿತ್ತು. ಆತನು ಸಂತಾಪದ ಭರದಲ್ಲಿ ತಾನೇ ದಕ್ಷಿಣಕ್ಕೆ ದಂಡೆತ್ತಿ ಹೋಗಿ ಶಿವನ ಪಾರಪತ್ಯ ಮಾಡಬೇಕೆಂದು ಯೋಚಿಸಿದನು; ಆದರೆ ಉತ್ತರದಲ್ಲಿ ತನ್ನ ಸಿಂಹಾಸನವೇ ಇನ್ನೂ ಸ್ಥಿರವಾಗಿರುವದಿಲ್ಲೆಂಬ ವಿಚಾರವು ಆತನ ಮನಸ್ಸಿಗೆ ಹೊಳೆಯಿತು. ಪ್ರತ್ಯಕ್ಷ ತಂದೆಯನ್ನು ಸೆರೆಯಲ್ಲಿರಿಸಿ ಪಟ್ಟವೇರಿದ್ದ ರಿಂದ ಆತನು ಜನರಿಗೆ ಅಪ್ರಿಯನಾಗಿದ್ದನು. ಉದಾರನಾದ ಶಹಾಜಹಾನನ ಪಕ್ಷದವರು ಹೊಂಚು ಹಾಕಿಕೊಂಡು ಕುಳಿತಿದ್ದರಿಂದ ಔರಂಗಜೇಬನು ದಕ್ಷಿಣಕ್ಕೆ ಹೋದಕೂಡಲೆ ಅವರು ಬಂಡಾಯವೆಬ್ಬಿಸಿ ಪ್ರತಿಬಂಧದೊಳಗಿದ್ದ ಶಹಾಜಹಾನನನ್ನು ತಿರುಗಿ ಪಟ್ಟಕ್ಕೆ ಕುಳ್ಳಿರಿಸಬಹುದಾಗಿತ್ತು. ಆದ್ದರಿಂದ ತಂದೆ ಸಾಯುವವರೆಗೆ ಆತನು ಆಗ್ರಾಪಟ್ಟಣವನ್ನು ಬಿಟ್ಟು ಕದಲುವಹಾಗಿದ್ದಿಲ್ಲ. ಆಗ ಸ್ವತಂತ್ರರಾದ ರಜಪೂತರು ಔರಂಗಜೇಬನನ್ನು ಹಣೆಯಲಿಕ್ಕೆ ಹೊಂಚುಹಾಕಿದ್ದರು. ಔರಂಗಜೇಬನ ಪ್ರತ್ಯಕ್ಷ ಮಕ್ಕಳು ಕೂಡ ತಂದೆಯ ವಿರುದ್ಧವಾಗಿ ಬಂಡಾಯವೆಬ್ಬಿಸಲಿಕ್ಕೆ ಹಿಂದೆಮುಂದೆ ನೋಡುವ ಹಾಗಿದ್ದಿಲ್ಲ. ಈ ಸ್ಥಿತಿಯಲ್ಲಿ ಔರಂಗಜೇಬನು ತಾನೇ ದಕ್ಷಿಣಕ್ಕೆ ದಂಡೆತ್ತಿಹೋಗುವ ವಿಚಾರವನ್ನು ಬಿಟ್ಟುಬಿಡಬೇಕಾಯಿತು. ಔರಂಗಜೇಬನ ಆಶ್ರಿತರಲ್ಲಿ ಮೀರಜುಮಲಾ ಎಂಬ ಮುಸಲ್ಮಾನ ಸರದಾರನೂ, ರಾಜಾ ಜಯಸಿಂಗನೆಂಬ ರಜಪೂತ ಸರದಾರನೂ ಬಹುಬಲಿಷ್ಠರಾಗಿದ್ದರು. ಇವರ ಭಯವು ಔರಂಗಜೇಬನಿಗೆ ಅಂತರಂಗದಲ್ಲಿ ಬಾಧಿಸುತ್ತಿತ್ತೆಂದು ಹೇಳಬಹುದು. ಇವರ ವರ್ಚಸ್ಸನ್ನು ನೋಡಿ ಬಾದಶಹನು ತೋರಿಕೆಗೆ ಸಂತೋಷಪಡುತ್ತಿದ್ದನು. ಇದರಲ್ಲಿ ರಾಜಾಜಯಸಿಂಗನಂತೂ ಅತ್ಯಂತ ಬಲಿಷ್ಠನಾಗಿದ್ದನು.

ಆತನು ''ಮಿರ್ಝಾರಾಜ''ನೆಂಬ ಗೌರವದ ಹೆಸರನ್ನು ಪಡೆದಿದ್ದನು. ಜಯಸಿಂಗನು ಬಹುಸ್ವಾಮಿನಿಷ್ಠನು. ಆತನು ಔರಂಗಜೇಬನ ವಿರುದ್ಧವಾಗಿ ಆಟಹೂಡಿದ್ದರೆ, ರಜಪುತರೆಲ್ಲ ಆತನಿಗೆ ಅನುಕೂಲವಾಗಿ, ಮೊಗಲ ರಾಜ್ಯವು ತತ್ತರಿಸಬಹುದಾಗಿತ್ತು ಆದರೆ ತಾನು ಮೊಗಲರ ಬಾದಶಾಹಿಯ ಸಿಂಹಾಸನಕ್ಕೆ ಅಂಕಿತನಾದವನೆಂದು ಒಮ್ಮೆ ಒಡಂಬಟ್ಟಿದ್ದಕ್ಕೆ ವಿರುದ್ಧವಾಗಿ ಜಯಸಿಂಗನು ವರ್ತಿಸುವ ಸಂಭವವೇ ಇದ್ದಿಲ್ಲ. ಆತನ ಈ ಸತ್ಯಸಂಧತೆಯೂ, ರಜಪೂತ ರೊಳಗಿನ ಅಂತಃಕಲಹಗಳೂ ಮುಖ್ಯವಾಗಿ ಔರಂಗಜೇಬನ ದುಷ್ಟತನದ ಆಳಿಕೆಯನ್ನು ನಡೆಯಗೊಟ್ಟವೆಂದು ಹೇಳಬಹುದು. ಜಯಸಿಂಗನ ಈ ದೊಡ್ಡಸ್ತನದ ನಡತೆಯು ಔರಂಗಜೇಬನಿಗೆ ಗೊತ್ತಿದ್ದರೂ, ಸಂಶಯ ಸ್ವಭಾವದ ಆ ಬಾದಶಹನು ಜಯಸಿಂಗನ ಮೇಲೆ ಅಂತರಂಗದಲ್ಲಿ ವಿಶ್ವಾಸವಿಡುತ್ತಿದ್ದಿಲ್ಲ; ಆದರೂ ಸವಿಮಾತಿಗೂ, ಲಂಚರುಸವತ್ತುಗಳಿಗೂ ಮರುಳಾಗದೆ ಸಮರ್ಥ ಜಯಸಿಂಗನೇ ಪುಂಡ ಶಿವನ ಬಂಡು ಮುರಿಯಲಿಕ್ಕೆ ತಕ್ಕವನೆಂದು ಆತನು ತಿಳಿದನು!

ಬಾದಶಹನ ಈ ತಿಳುವಳಿಕೆಯಂತೆ ಶಿವನನ್ನು ಸೆರೆಹಿಡಿದು ದಿಲ್ಲಿಗೆ ಎಳತರಲು ದಕ್ಷಿಣಕ್ಕೆ ಕಳಿಸಲ್ಪಟ್ಟ ಜಯಸಿಂಗನ ಘನತರವಾದ ಯೋಗ್ಯತೆಯನ್ನು ಕುರಿತು ಇನ್ನು ನಾಲ್ಕು ಮಾತುಗಳನ್ನು ಬರೆಯುವದು ಯೋಗ್ಯವಾಗಿ ತೋರುತ್ತದೆ. ಜಯಸಿಂಗನು ರಜಪೂತನೆಂದು ಬರೆಯುವ ಕಾರಣವಿಲ್ಲ. ರಜಪೂತ ಸಂಸ್ಥಾನಿಕರಲ್ಲಿ ಈಗ ಮೂವರು ಅತ್ಯಂತ ಬಲಾಢ್ಯರಾಗಿದ್ದರು. ಉದೇಪುರದ ರಾಜಸಿಂಗ, ಜೋಧಪುರದ ಜಸವಂತಸಿಂಗ, ಜಯಪುರದ ಜಯಸಿಂಗ ಇವರೇ ಆ ಮೂವರು. ಇವರಲ್ಲಿ ಮೊದಲನೆಯವನು ಪ್ರಸಿದ್ಧ ರಾಣಾಪ್ರತಾಪಸಿಂಗನ ಮೊಮ್ಮಗನಾಗಿದ್ದು, ಔರಂಗಜೇಬನ ವಿರೋಧಿಯಾಗಿದ್ದನು. ಉಳಿದವರಿಬ್ಬರು ಔರಂಗಜೇಬನ ಆಶ್ರಿತ ಸರದಾರರಾಗಿದ್ದು, ಅವರಲ್ಲಿ ಜಸವಂತ ಸಿಂಗನೆಂಬವನು ಈ ಮೊದಲೆ ಬಾದಶಹನ ಅಪ್ಪಣೆಯಿಂದ ಮಹಾರಾಜರಮೇಲೆ ದಂಡೆತ್ತಿ ಬಂದು, ಅಂತರಂಗದಿಂದ ಮಹಾರಾಜರಿಗೆ ಅನುಕೂಲವಾಗಿ ದಿನಹಾಕುತ್ತ ದಕ್ಷಿಣದಲ್ಲಿ ಕುಳಿತುಕೊಂಡಿದ್ದನು. ಈ ಮೂವರಲ್ಲಿ ಪರಸ್ಪರ ಅಸಹ್ಯವಾದ ದ್ವೇಷಭಾವವಿತ್ತು ಈ ಮೂವರು ಒಮ್ಮನಸ್ಸಿನಿಂದ ನಡೆದು, ಬಾದಶಹನೊಡನೆ ವಿರೋಧ ಬಳಿಸಿದ್ದರೆ ಇವರ ತಂತ್ರದಂತೆ ಇಡಿಯ ರಜಪುತಸ್ಥಾನವೇ ಕುಣಿದು ದಿಲ್ಲಿಯ ಸಿಂಹಾಸನದ ಬುಡಮೇಲಾಗ ಬಹುದಾಗಿತ್ತು ಈ ಮೂವರಲ್ಲಿಯೂ ಜಯಸಿಂಗನು ಕೆಲಬಾಬುಗಳಲ್ಲಿ ಅತ್ಯಂತ ಶ್ರೇಷ್ಠ ನಾಗಿದ್ದನು. ಆತನ ದೃಢನಿಶ್ಚಯ, ಕರ್ತವ್ಯನಿಷ್ಠೆ, ಶೌರ್ಯ, ವಿನಯಭಾವ ಇವು ಬಣ್ಣಿಸತಕ್ಕ ವಂಥವಾಗಿದ್ದವು. ಆತನು ಒಮ್ಮೆ ಯಾವದೊಂದು ಕೆಲಸವನ್ನು ಕೈಕೊಂಡರೆ ತೀರಿತು, ಅದು ಕೊನೆಗಾಣುವವರೆಗೆ ನಡುವೆ ವಿಶ್ರಾಂತಿಯನ್ನು ಹೊಂದುವದು, ಅಥವಾ ಸುಮ್ಮನೆ ದಿನ ಹಾಕುವದು ಆತನಿಗೆ ಗೊತ್ತೇ ಇದ್ದಿಲ್ಲ. ಆತನ ಕನಸುಮನಸುಗಳಲ್ಲಿ ಕಾರ್ಯವೇ ಬಂದು ನಿಲ್ಲುತ್ತಿತ್ತು. ವಿಘ್ನಗಳು ಒದಗಿದಂತೆ ಆತನ ಕಾರ್ಯೋತ್ಸಾಹವು ಹೆಚ್ಚುತ್ತಹೋಗಿ, ವಿಘ್ನನಿವಾರ ಣೋಪಾಯಗಳು ಮನಸ್ಸಿನಲ್ಲಿ ತಾವಾಗಿ ಹೊಳೆಯುತ್ತಿದ್ದವು. ಹೇಳಿಕೆಯ ಮಾತಿನಿಂದ

ನಿಶ್ಚಯವನ್ನು ಬದಲಿಸುವದು ಆತನ ಶೀಲವಾಗಿದ್ದಿಲ್ಲ. ಆತನ ಸ್ವಾಮಿನಿಷ್ಠೆಯು ಅಚಲವಾದದ್ದು; ಶೌರ್ಯವು ಅತುಲವಾದದ್ದು; ಧೈರ್ಯವು ಅಗಾಧವಾದದ್ದು. ಈ ಸದ್ಗುಣಗಳ ಮೂಲಕವಾಗಿಯೇ ಶಹಾಜಹಾನನ ಆಳಿಕೆಯಲ್ಲಿಯೂ, ಈಗಿನ ಔರಂಗಜೇಬನ ಆಳಿಕೆಯಲ್ಲಿಯೂ ದೊಡ್ಡ ದೊಡ್ಡ ಕಾರ್ಯಗಳು ಈತನಿಗೆ ಒಪ್ಪಿಸಲ್ಪಟ್ಟವು. ಅವುಗಳನ್ನೆಲ್ಲ ಈ ಘನವಂತನು ಕೊನೆಗಾಣಿಸಿ ಕೀರ್ತಿಶಾಲಿಯಾಗಿದ್ದನು. ಆತನ ಭಾಷಣದಲ್ಲಿ ಸೌಜನ್ಯವೂ, ಮಾರ್ದವವೂ ಬಹಳ. ಆತನು ಎಲ್ಲರೊಡನೆ ಬಹು ವಿನಯದಿಂದ ನಡೆದುಕೊಳ್ಳುತ್ತಿದ್ದನು; ಆದ್ದರಿಂದ ಎಲ್ಲರೂ ಆತನನ್ನು ಆದರಿಸುತ್ತಿದ್ದರು. ಆತನ ವೈರಿಗಳು ಕೂಡ ಆತನ ಮುಂದೆ ಬಾಯಿಬಿಡಲು ಅಂಜುತ್ತಿದ್ದರು. ಆತನಿಗೆ ಮನುಷ್ಯರ ಪರೀಕ್ಷೆ ಬಹಳ. ಜನರ ಅಂತರಂಗವನ್ನು ಭೇದಿಸಿ ಅದರ ಒಲವನ್ನು ತಿಳಕೊಳ್ಳುವ ಆತನ ಕೌಶಲ್ಯವು ವಿಲಕ್ಷಣವಾದದ್ದಿತ್ತು. ಆತನು ಅತ್ಯಂತ ಸರಳಸ್ವಭಾವದವನು. ಆತನಿಗೆ ಒಳಗೊಂದು ಹೊರಗೊಂದು ಸರ್ವಥಾ ಸೇರುತ್ತಿದ್ದಿಲ್ಲ.

ಅಂಥ ಜನರ ಪರೀಕ್ಷೆಯನ್ನು ಆತನು ಬಹು ಬೇಗ ಮಾಡುತ್ತಿದ್ದನು. ಮಹಾರಾಜರ ಉದ್ದೇಶವು ಸ್ತುತ್ಯವಾದದ್ದೆಂದು ಆತನು ತಿಳಿದಿದ್ದನು; ಅವರ ವಿಷಯವಾಗಿ ಆತನಲ್ಲಿ ಸಹಾನುಭೂತಿಯೂ ವಾಸಿಸುತ್ತಿತ್ತು; ಆದರೆ ಕಾರ್ಯದಲ್ಲಿ ಮರೆಮೋಸಗಳು ರಜಪುತರ ಶೀಲಕ್ಕೆ ಒಪ್ಪತಕ್ಕವಲ್ಲವೆಂತಲೂ, ಪ್ರಚಂಡವಾದ ಬಾದಶಾಹಿಯ ಶಕ್ತಿಯೊಡನೆ ವಿರೋಧಬೆಳೆಸುವದೆಂದರೆ ಗುಡ್ಡ ಕೊರೆದು ಮೈಮೇಲೆ ಕೆಡವಿಕೊಂಡಂತೆಯೆಂತಲೂ ಆತನು ಭಾವಿಸಿದನು. ಮಹಾರಾಜರ ಪರಾಕ್ರಮವನ್ನೂ, ಯುಕ್ತಿ-ಪ್ರಯುಕ್ತಿಗಳನ್ನೂ, ಸ್ವಧರ್ಮ ನಿಷ್ಠೆಯನ್ನೂ, ಸ್ವಜನಾಭಿಮಾನವನ್ನೂ ಕುರಿತು ಆತನು ತನ್ನ ಮಗನಾದ ರಾಮಸಿಂಗನ ಮುಂದೆ ಬಣ್ಣಿಸುತ್ತಲಿದ್ದನು; ಅದರಿಂದ ಮಹಾರಾಜರ ಮೇಲಿನ ರಾಮಸಿಂಗನ ಪ್ರೇಮವು ದಿನದಿನಕ್ಕೆ ಹೆಚ್ಚುತ್ತಲಿತ್ತು. ಆತನು ಮಹಾರಾಜರ ಹಿತಚಿಂತಕ ಮಿತ್ರನಾಗಿದ್ದನು.

ಬಾದಶಹನ ಹುಟ್ಟಿದ ದಿವಸದ ದರ್ಬಾರವಾಯಿತು. ಅಂದಿನ ದರ್ಬಾರದಲ್ಲಿ ಬಾದಶಹನು ಎಲ್ಲರನ್ನೂ ಅವರವರ ಯೋಗ್ಯತೆಯಂತೆ ಗೌರವಿಸಿ, ಸಭೆಯಲ್ಲಿ ಮಿರ್ಝಾರಾಜನನ್ನು ಕುರಿತು—"ಮಿರ್ಝಾರಾವ, ತಾವು ಮೊಗಲ ಸಾಮ್ರಾಜ್ಯದ ಮುಖ್ಯವಾದ ಆಧಾರಸ್ತಂಭವು. ಬಾದಶಾಹಿಯ ಸಿಂಹಾಸನದ ತಮ್ಮ ಅಭಿಮಾನವು ಸುತ್ಯವಾದದ್ದು, ನಿಷ್ಠೆಯು ಅಚಲವಾದದ್ದು. ಈವರೆಗೆ ನಿಮ್ಮಿಂದ ದೊಡ್ಡ ದೊಡ್ಡ ಕೆಲಸಗಳು ಕೊನೆಗೊಂಡು, ಅದರಿಂದ ಬಾದಶಾಹಿಯ ಗೌರವ-ಸಾಮರ್ಥ್ಯಗಳು ಹೆಚ್ಚಿದವು. ನಿಮ್ಮಂಥ ದುರಂಧರರು ಬಾದಶಾಹಿಯ ಕೀರ್ತಿಯನ್ನು ಕಾಯ್ದುಕೊಳ್ಳಲು ದಕ್ಷರಾಗಿರುತ್ತಿರುವಾಗ ದಕ್ಷಿಣದಲ್ಲಿ ಶಿವನೆಂಬ ಪುಂಡನು ಬಾದಶಾಹಿಯ ವರ್ಚಸ್ಸನ್ನೇ ಲೆಕ್ಕಿಸದೆ ದಿನ ದಿನಕ್ಕೆ ಪ್ರಬಲನಾಗುತ್ತ ಬಾದಶಾಹಿಯ ದರ್ಬಾರದಲ್ಲಿ ಹೆಸರು ಎತ್ತುವಷ್ಟು ಗೌರವವನ್ನು ಪಡೆದದ್ದು ಆಶ್ಚರ್ಯವೇ ಸರಿ. ಜಸವಂತಸಿಂಗರನ್ನೂ ಪ್ರತ್ಯಕ್ಷ ಶಹಾಜಾದಾ ಮುಅಜ್ಜಿಮರನ್ನೂ ಕೂಡ ಶಿವನು ಈಗ ತನ್ನ ಕುಯುಕ್ತಿಯಿಂದಲೂ, ಸವಿಮಾತುಗಳಿಂದಲೂ ಮರಳು ಮಾಡಿದಂತೆ ತೋರುತ್ತದೆ.

ಇಲ್ಲದಿದ್ದರೆ ಒಬ್ಬ ಪುಂಡನ ದಂಡನೆಗೆ ಇಷ್ಟು ವಿಲಂಬವೇ? ಒಬ್ಬ ಕೊಳ್ಳೆಗಾರನೆಂದರೇನು, ಆತನು ವಿಜಾಪುರದ, ಹಾಗೂ ಪ್ರತ್ಯಕ್ಷ ಬಾದಶಾಹಿಯ ಸರದಾರರಿಗೆ ಚೆಳ್ಳೆಹಣ್ಣು ತಿನಿಸುವ ದೆಂದರೇನು? ಮಿರ್ಝಾ, ಆ ಪುಂಡನ ಸಮಾಚಾರವನ್ನು ನೀವೇ ತಕ್ಕೊಳ್ಳಬೇಕು. ಶಿವನು ಪುಂಡನಾಗಿರಲಿ, ಲಂಡನಾಗಿರಲಿ ಮೊಗಲ ಸಿಂಹಾಸನದ ಶತ್ರುವೂ ಆಗಿರಲಿ, ಆದರೆ, ಗುಣಗ್ರಾಹಿಯಾದ ನಿಮ್ಮ ಅಲಮಗೀರ ಬಾದಶಹನು ಆತನನ್ನು ಪ್ರತ್ಯಕ್ಷ ನೋಡಿ ಗೌರವಿಸಲು ಇಚ್ಛಿಸುವನು; ಆದ್ದರಿಂದ ನೀವು ದಕ್ಷಿಣಕ್ಕೆ ಹೋಗಿ ಶಿವನನ್ನು ಹಿಡಿದು ನನ್ನ ಬಳಿಗೆ ಕಳಿಸಬೇಕು. ಈ ಕೆಲಸಕ್ಕಾಗಿ ಸೈನ್ಯದ ಸರ್ವಾಧಿಕಾರವು ನಿಮಗೆ ಒಪ್ಪಿಸಲ್ಪಟ್ಟಿದೆ.'' ಎಂದು ನುಡಿಯಲು, ಜಯಸಿಂಗನು ಗೌರವಯುಕ್ತ ವಿನಯದಿಂದ ಅದಕ್ಕೆ ಒಪ್ಪಿಕೊಂಡು ಸ್ವಾಮಿನಿಷ್ಠೆಯನ್ನು ವ್ಯಕ್ತಗೊಳಿಸುತ್ತ ಬಾದಶಹನನ್ನು ಕುರಿತು—''ಖಾವಿಂದ, ಪೂಜ್ಯವಾದ ಮೊಗಲ ಬಾದಶಾಹಿಯ ಪುಣ್ಯಪ್ರತಾಪದ ಮುಂದೆ ಪುಂಡ ಶಿವ ಪಾಡೇನು? ಪುಂಡ ಶಿವನನ್ನು ದಂಡಿಸಲಿಕ್ಕೆ ಬಾದಶಾಹಿಯ ಪದರಿನಲ್ಲಿ ಬಹುಜನ ಬಲಾಢ್ಯರು ಇರುತಿದ್ದರೂ, ಸಿಂಹಾಸನದ ಸೇವೆಯ ಸುಯೋಗವನ್ನು ಪ್ರತಾಪವಂತ ಅಲಮಗೀರ ಬಾದಶಹರವರು ನನಗೆ ಒದಗಿಸಿ ಕೊಟ್ಟಿದ್ದಕ್ಕಾಗಿ ಕೃತಜ್ಞನಾಗಿರುವೆನು. ಜಹಾಪನ್ಹಾ, ಮೊಗಲ ಚಕ್ರವರ್ತಿಯ ಪ್ರತಾಪ ಪ್ರಖರ ಕಿರಣಗಳಿಂದಲೇ ಶಿವನು ಹುರುಪಳಿಸಿ ಹೋಗುತ್ತಿರುವಾಗ ಸೇವಕನಾದ ಮಿರ್ಝಾ ನಿಗಾಗುವ ಆಯಾಸವೇನು? ಆತನಿಗೆ ಕೊರತೆಯಾದರೂ ಯಾವ ಮಾತಿನದಿರುವದು?''

ಈ ಮೇರೆಗೆ ನುಡಿದ ಮಿರ್ಝಾರಾಜನ ವಿನಯದ ದರ್ಪೋಕ್ತಿಗಳನ್ನು ಕೇಳಿ ದರ್ಬಾರದ ಜನರು ಬಹು ಸಮಾಧಾನಪಟ್ಟರು. ಬಾದಶಹನಂತೂ ತನಗಾದ ಸಂತೋಷವನ್ನು ತನ್ನ ಗಂಭೀರ ಮುದ್ರೆಯಿಂದಲೇ ಅಲ್ಲ ಕಂಠರವದಿಂದಲೂ ವ್ಯಕ್ತಮಾಡಿದನು; ಆದರೆ ಕಪಟಾಚರಣ, ಕುಟಿಲತಂತ್ರ ಇವುಗಳ ಯೋಗದಿಂದ ಕಲುಷಿತ ಮನಸ್ಕನಾಗಿದ್ದ ಬಾದಶಹನ ಅಂತರಂಗ-ಬಹಿರಂಗಗಳಲ್ಲಿ ಏಕತ್ವವು ಹ್ಯಾಗಿರಬೇಕು? ಆತನು ಬಹಿರಂಗದಲ್ಲಿ ಮಿರ್ಝಾರಾಜನ ಸಂಬಂಧದಿಂದ ಎಷ್ಟು ವಿಶ್ವಾಸವನ್ನು ತೋರಿಸಿದರೂ, ಅಂತರಂಗದಲ್ಲಿ ಸಂಶಯ ಪಿಶಾಚವು ಆತನನ್ನು ಬಡಿದುಕೊಳ್ಳದೇ ಬಿಡಲಿಲ್ಲ. ಈ ಹಿಂದೂ ಜನರು ತಮ್ಮೊಳಗೇ ಗೇಣುಹಾಕಿಕೊಂಡು ನನಗೆ ಮುಣುಗುನೀರು ತರಬಹುದೆಂದು ಆತನು ಶಂಕಿಸಿದನು. ಶಿವನನ್ನು ಪೂರ್ಣವಾಗಿ ನಾಶಗೊಳಿಸಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸಿದ್ದ ಆ ಕುಟಿಲ ಹೃದಯದ ಬಾದಶಹನಿಗೆ, ಜಯಸಿಂಗನು ತನ್ನ ಮನೋದಯವನ್ನು ಪೂರ್ಣವಾಗಿ ಸಾಧಿಸಬಹುದೆಂಬ ನಂಬಿಗೆ ಯಾಗಲಿಲ್ಲ. ಆತನ ಕಪಟ ಸ್ವಭಾವಕ್ಕೆ ಇದೇನು ಸೋಜಿಗವಾದದ್ದಲ್ಲ. ಬಾದಶಹನ ಕಠಿಣ ಹೃದಯವನ್ನಂತೂ ಬಣ್ಣಿಸಲಾಸಲ್ಲ. ಆತನು ತನ್ನ ಪ್ರತ್ಯಕ್ಷ ತಂದೆಯಾದ ಉದಾರ ಮನಸ್ಸಿನ ಶಹಾಜಹಾನನನ್ನು ಸೆರೆಯಲ್ಲಿಟ್ಟು, ಗೋಳಾಡಿಸಿದ ಬಗೆಯನ್ನು ಓದಿದರೆ, ವಾಚಕರಿಗೆ ಆತನ ಸ್ವಭಾವದ ಪರಿಜ್ಞಾನವಾಗಬಹುದು. ಶಹಾಜಹಾನನನ್ನು ತನ್ನ ಪ್ರಿಯ ಪತ್ನಿಯ ಸ್ಮಾರಕಕ್ಕಾಗಿ ಆಗ್ರಾ ಪಟ್ಟಣದಲ್ಲಿ ತಾಜಮಹಾಲೆಂಬ ಜಗತ್ಪ್ರಸಿದ್ಧ ಮಸೀದೆಯನ್ನು ನೀರಿನಂತೆ ಹಣ ವೆಚ್ಚಮಾಡಿ ಕಟ್ಟಿಸಿರುವನಷ್ಟೇ? ಆ ಮಂದಿರವು ಹಗಲಿರುಳು ಕಣ್ಣಿಗೆ ಬೀಳುವಂಥ ಸ್ಥಳವನ್ನು

ಹುಡುಕಿ ಅಲಮಗೀರನು ತನ್ನ ತಂದೆಯನ್ನು ಆಗ್ರಾ ಪಟ್ಟಣದ ಕೋಟೆಯಲ್ಲಿ ಸೆರೆಯಿಟ್ಟಿದ್ದನು. ತಪಗಟ್ಟಲೆ ಬಾದಶಾಹಿಯ ವೈಭವವನ್ನು ಅತ್ಯಂತ ಸಾಮರ್ಥ್ಯದಿಂದ ಉಪಭೋಗಿಸಿದ ವಿಲಾಸಿಯಾದ ಶಹಜಹಾನನಿಗೆ, ಹೊಟ್ಟೆ ತುಂಬ ಉಣಸು ದೊರೆಯುತ್ತಿದ್ದಿಲ್ಲ; ತೀರ ಕದನ್ನದಿಂದ ಆತನು ಕಾಲಹರಣ ಮಾಡಬೇಕಾಗುತ್ತಿತ್ತು, ಬೇನೆ-ಬೇಸರಿಕೆಯಲ್ಲಿ ಆತನಿಗೆ ಔಷಧವು ದೊರೆಯುತ್ತಿದ್ದಿಲ್ಲ. ಫಕೀರನ ಹಾಗೆ ಆತನು ಉದ್ದವಾದ ನಿಲುವಂಗಿಯನ್ನು ತೊಟ್ಟುಕೊಂಡು, ತಲೆಗೊಂದು ಟೊಪ್ಪಿಗೆ ಹಾಕಿಕೊಂಡು ಪಂಜರದೊಳಗಿನ ಪಶುವಿನಂತೆ, ಪಂಜರದಂಥ ಸೆರೆಮನೆಯಲ್ಲಿ ಕೋಲು ಊರುತ್ತ ಇತ್ತಿಂದತ್ತ ಅತ್ತಿಂದಿತ್ತ ಓಡಾಡುವದನ್ನು, ನೋಡುವವರ ಕಣ್ಣುಗಳಲ್ಲಿ ನೀರುಗಳುದರುತ್ತಿದ್ದವು. ಆತನ ಸ್ನಾನ ಮುಖಮಾರ್ಜನ ಮೊದಲಾದವುಗಳ ಸಲುವಾಗಿ ಕೋಣೆಯಲ್ಲೊಂದು ಕಾಲುವೆಯನ್ನು ಹಾಯಿಸಿದ್ದರು. ಅದರಲ್ಲಿ ತಣ್ಣೀರಾಗಲಿ ಬಿಸಿನೀರಾಗಲಿ ಹಾಯುತ್ತಿರುವವು. ಆ ನೀರಿನಿಂದಲೇ ಆ ವೃದ್ಧ ಬಾದಶಹನು ತನ್ನ ಯಾವತ್ತೂ ವಿಧಿಗಳನ್ನು ತೀರಿಸಿಕೊಳ್ಳಬೇಕಾಗುತ್ತಿತ್ತು. ಬಾದಶಹನ ಬಳಿಯಲ್ಲಿ ಅವನ ಅಂತಃಕರಣದವರು ಯಾರೂ ಇದ್ದಿಲ್ಲ. ಯಾರಾದರೂ ಆತನ ಯೋಗಕ್ಷೇಮಕ್ಕೆ ಹೋಲಿಚ್ಛಿಸಿದರೆ, ದುಷ್ಟ ಔರಂಗಜೇಬನು ಹೋಗಗೊಡುತ್ತಿದ್ದಿಲ್ಲ. ತಾನು ತನ್ನ ತಂದೆಯನ್ನು ಸೆರೆಯಲ್ಲಿಟ್ಟಂತೆ ತನ್ನ ಮಕ್ಕಳು ತನ್ನನ್ನು ಸೆರೆಯಲ್ಲಿಟ್ಟಾರೆಂಬ ಭಯವು ಅಲಮಗೀರನ ಮನಸ್ಸಿನಲ್ಲಿ ಯಾವಾಗಲೂ ಕಟೆಯುತ್ತಿತ್ತು. ಈ ಭಯದಿಂದಲೇ ಆತನು ತನ್ನ ಮಕ್ಕಳನ್ನು ಕೂಡ ಅಜ್ಜನ ಯೋಗಕ್ಷೇಮವನ್ನು ವಿಚಾರಿಸುವದಕ್ಕಾಗಿ ಹೋಗಗೊಡುತ್ತಿದ್ದಿಲ್ಲ. ಇಂಥ ಕಠಿಣತರವಾದ ಕಾರಾಗೃಹವಾಸವನ್ನು ಭೋಗಿಸುತ್ತ ಕಣ್ಣೀರುಗಳಿಂದ ಕೈ ತೊಳೆಯುತ್ತ ವೈಭವಶಾಲಿಯಾದ ಶಹಾಜಹಾನನು ಸೆರೆಮನೆಯಲ್ಲಿಯೇ ಸಾಯಬೇಕಾಯಿತು!

ಹೀಗೆ ಹಡೆದ ತಂದೆಯನ್ನು ನೋಡದ ಔರಂಗಜೇಬನಿಗೆ ದಯವೆತ್ತಣದು, ದಾಕ್ಷಿಣ್ಯ ವೆತ್ತಣದು? ಇಂಥ ಕಠೋರ ಹೃದಯದ ಬಾದಶಹನು, ಕಾಫರನೆಂದು ತಿರಸ್ಕರಿಸಲ್ಪಟ್ಟು, ಶಿವನೆಂಬ ಒಂಟಿಹೆಸರಿನಿಂದ ಕರೆಯಲ್ಪಡುವ ಮಹಾರಾಜರ ವಿಷಯವಾಗಿ ದಯವನ್ನು ತಾಳಬಹುದೇ? ತಾನು ಕಳ್ಳಪರರನಂಬ''ನೆಂಬಂತೆ ಮಿರ್ಝಾರಾಜನನ್ನು ಬಾದಶಹನು ನಂಬಬಹುದೇ? ದಕ್ಷಿಣದಲ್ಲಿನ ತನ್ನ ಅಧಿಕಾರವೆಲ್ಲ ನಷ್ಟವಾದದ್ದನ್ನು ನೋಡಿ ಬಾದಶಹನು ಶಿವನನ್ನು ಮಣ್ಣುಗೂಡಿಸಬೇಕೆಂದು ಯೋಚಿಸಿದ್ದನಲ್ಲದೆ, ವಿಜಾಪುರ ಗೋವಳಕೊಂಡಗಳ ತನ್ನ ಜಾತಿಯ ಬಾದಶಾಹೆಗಳನ್ನೂ ಕೂಡ ಗೊತ್ತಿಗೆ ಹಚ್ಚಲು ನಿಶ್ಚಯಿಸಿದ್ದನು. ರಾಜನು ಉಳಿದವರಂತೆ ವಿಶ್ವಾಸಘಾತ ಮಾಡುವವನಲ್ಲವೆಂಬದನ್ನು ಆ ಕಪಟಿಯಾದ ಅಲಮಗೀರನು ಅರಿತಿದ್ದರೂ, ಸರ್ವಾಧಿಕಾರವನ್ನು ಕೊಟ್ಟು ಆತನೊಬ್ಬನನ್ನೇ ದಕ್ಷಿಣಕ್ಕೆ ಕಳಿಸಲಿಕ್ಕೆ ಆತನಿಗೆ ಎದೆಯಾಗಲಿಲ್ಲ. ಬಲಿಷ್ಠ ಜಯಸಿಂಗನಿಗಂತೂ ಸರ್ವಾಧಿಕಾರವನ್ನು ಕೊಡಲೇಬೇಕಾಗಿತ್ತು. ಈ ಸ್ಥಿತಿಯಲ್ಲಿ ಬಾದಶಹನು ತನ್ನ ಕುಟಿಲತನವನ್ನು ತೋರಿಸಿದ್ದು ಆಶ್ಚರ್ಯವಲ್ಲ. ಮೊದಲು ರಾಜನೀತಿಯೇ ಕುಟಿಲವಾದದ್ದು; ಅದರಲ್ಲಿ ಔರಂಗಜೇಬನ ರಾಜನೀತಿಯೆಂದ ಬಳಿಕ ಕೇಳುವದೇನು? ಬಾದಶಹನು ಜಯಸಿಂಗನಿಗೆ ದಕ್ಷಿಣದ ದಂಡಯಾತ್ರೆಯ ಸರ್ವಾಧಿಕಾರವನ್ನು

ಕೊಟ್ಟನು; ಆದರೆ ಪ್ರಸಂಗದಲ್ಲಿ ಆ ಮಿರ್ಝಾರಾಜನ ತಲೆಯಮೇಲೆ ಮೆಣಸು ಅರೆಯುವದಕ್ಕಾಗಿ ದಿಲೇರಖಾನನೆಂಬ ಬಲಾಢ್ಯ ಸರದಾರನನ್ನು ದೊಡ್ಡ ದಂಡಿನೊಡನೆ ಸಹಾಯಕನೆಂಬ ನೆವದಿಂದ ದಕ್ಷಿಣಕ್ಕೆ ಕಳಿಸಲು ನಿಶ್ಚಯಿಸಿದನು. ಸಂಶಯ ಸ್ವಭಾವದ ಆ ಹೊಟ್ಟೆಕಿಚ್ಚಿನ ಬಾದಶಹನು ಖಾನನಿಗೆ ಅಂತರಂಗದಲ್ಲಿ— ''ಜಯಸಿಂಗನಲ್ಲಿ ಏನಾದರೂ ಫಿತೂರಿಯ ಲಕ್ಷಣಗಳು ತೋರಿದ ಕೂಡಲೆ ನೀನು ಆತನ ಅಪ್ಪಣೆಯನ್ನು ಮನ್ನಿಸದೆ ನಿನ್ನ ಮನಸ್ಸಿಗೆ ಬಂದಹಾಗೆ ಮಾಡು; ಜಯಸಿಂಗನನ್ನು ಹಿಂದುಗಡೆ ನೋಡಿಕೊಳ್ಳೋಣವಂತೆ'' ಎಂದು ಹೇಳಿದ್ದನು. ಇದಲ್ಲದೆ ಆ ತಂತ್ರಗಾರನಾದ ಬಾದಶಹನು ದಾವುದಖಾನ, ಇಹಲೇರಖಾನ, ಶೇಕಜಾದಾ, ಕುಜಾರಖಾನ, ಮುಲ್ಲಾಯಹೀಲಿ, ಜಬರ್ದಸ್ತಖಾನ, ಬಾದಲ ಬಖತ್ಯಾರ, ಬರ್ಕಂದಾಜಖಾನ ಎಂಬ ಮುಸಲ್ಮಾನ ಸರದಾರರನ್ನೂ, ರಾಜಾರಾಯಸಿಂಗ ಶಿಸೇರಿಯಾ, ರಾಜಾ ಸುಜನಸಿಂಗ ಬುಂದೇಲಾ, ಕಿರಾತಸಿಂಗ, ರಾಜಾ, ನರಸಿಂಗಗೌರ, ಪೂರಣಮಲ್ಲ ಬುಂದೇಲಾ ಎಂಬ ರಜಪೂತ ಸರದಾರರನ್ನೂ ಮಿರ್ಝಾ ರಾಜನೊಡನೆ ದಕ್ಷಿಣಕ್ಕೆ ಕಳಿಸಲು ನಿಶ್ಚಯಿಸಿದನು.

ಹಿಂದೆ ಹೇಳಿದಂತೆ ಬಾದಶಹನ ಹುಟ್ಟಿದ ದಿವಸದ ಸಮಾರಂಭದಲ್ಲಿಯೇ ಮಿರ್ಝಾರಾಜನಿಗೆ ಶಿವನಮೇಲೆ ಸಾಗಿಹೋಗಲಿಕ್ಕೆ ಅಪ್ಪಣೆಯಾಯಿತು. ಮೇಲೆ ಹೇಳಿದ ಪರಿವಾರದೊಡನೆ ಮಿರ್ಝಾರಾಜನು ಪುಷ್ಯಮಾಸದಲ್ಲಿ ಆಗ್ರಾಪಟ್ಟಣದಿಂದ ಹೊರಟನು. ಆಗಿನ ಮೊಗಲ ಸೈನ್ಯದ ಚಂದದಿಂದಲೇ ಮಿರ್ಝಾರಾಜನ ಸೈನ್ಯವಾದರೂ ಹೊರಟಿತ್ತು. ಮೊಗಲ ಸೈನ್ಯವು ದಂಡಯಾತ್ರೆಗೆ ಹೊರಟಿತೆಂದರೆ ದಂಡಿನವರ ಸುಖೋಪಭೋಗಕ್ಕೆ ಎಣೆಯೇ ಇರುತ್ತಿದ್ದಿಲ್ಲ. ಮನಬಂದಂತೆ ಅವರು ನಡೆದುಕೊಳ್ಳುತ್ತಿದ್ದರು. ಮನಸ್ಸು ದಣಿಯುವ ವರೆಗೆ ಸುಲಿಗೆ ಮಾಡುತ್ತಿದ್ದರು. ಬೆಳೆದು ನಿಂತ ಪೈರನ್ನು ತುಳಿದು ಹಾಳು ಮಾಡುತ್ತಿದ್ದರು. ಹೀಗೆ ನಡೆದುಕೊಳ್ಳುವ ಹಕ್ಕು ತಮಗಿರುತ್ತದೆಂದು ಅವರು ತಿಳಿದುಕೊಂಡಿದ್ದರು. ಅವರನ್ನು ಯಾರೂ ತಡೆಯುತ್ತಿದ್ದಿಲ್ಲ. ಹೀಗೆ ಯಾಕೆಂದು ಯಾರೂ ಕೇಳುತ್ತಿದ್ದಿಲ್ಲ. ಯಾರಾದರೂ ತಡೆದರೆ ಅವರ ಪರಿಣಾಮ ವಾಗುತ್ತಿದ್ದಿಲ್ಲ; ಹೀಗೆ ಯಾಕೆಂದು ಯಾರಾದರೂ ಕೇಳಿದರೆ ದಾದು ಹತ್ತುತ್ತಿದ್ದಿಲ್ಲ. ದಂಡಿನೊಡನೆ ಯಾವತ್ತೂ ಸುಖೋಪಭೋಗದ ಸಾಧನಗಳು ಇರುತ್ತಿದ್ದವು. ಒಂದು ಪಾಲು ಸೈನ್ಯವಿದ್ದರೆ ಹತ್ತುಪಾಲು ಬಾಜಾರ ಬುಣುಗು ಇರುತ್ತಿತ್ತು, ಬಾಜಾರ ಬುಣುಗಿನಲ್ಲಿ ಅಂಗಡಿಕಾರರು, ಆಟಗಾರರು, ತಮಾಶೆಗಾರರು, ಪಾತರದವರು, ಗಾಯಕರು, ಮೊದಲಾದ ಹಲವು ವಿಧದ ಜನರ ಸಂಗ್ರಹವಿರುತ್ತಿತ್ತು. ಆಗಿನ ಸೈನ್ಯವೆಂದರೆ, ನಡೆದುಹೋಗುವ ಪಟ್ಟಣ ವೆಂತಲೇ ಹೇಳಬಹುದು. ಧಾರಾತೀರ್ಥದಲ್ಲಿ ದೇಹವಿಡುವ ನಿಶ್ಚಯದಿಂದ ಹೊರಟಿದ್ದ ವೀರರಿಗೆ, ಜನಾಪವಾದದ ಭಯವು ಇರುತ್ತಿದ್ದಿಲ್ಲ. ನಾಳೆ ಇರುವವರಾರು ಸಾಯುವವರಾರು ಎಂಬದರ ನಿಯಮವಿಲ್ಲದ್ದರಿಂದ, ತಿಂದುಂಡು ಸುಖಪಟ್ಟದ್ದೇ ಬಂತೆಂದು ತಿಳಿದು ದಂಡಾಳುಗಳು ಮನಬಂದಂತೆ ನಡಕೊಳ್ಳುತ್ತಿದ್ದರು. ಪ್ರಾಚೀನಕಾಲದ ಎಲ್ಲ ಸೈನ್ಯಗಳ ಸ್ಥಿತಿಯು ಬಹುತರ ಹೀಗೆಯೇ ಇರುತ್ತಿತ್ತೆಂದು ಹೇಳಬಹುದು. ಅದರಲ್ಲಿ ಮೊಗಲ ಸೈನ್ಯದ ಸುಖೋಪ

ಭೋಗದ ಇಚ್ಛೆಯೂ, ಡಾಂಭಿಕತನವೂ ಮಿತಿಮೀರಿದ್ದವು. ಜಯಸಿಂಗನು ಸನ್ 1665ನೇ ಇಸವಿಯ ಜನೇವರಿ ತಿಂಗಳ 9ನೇ ತಾರೀಖಿನೊಳಗೆ ನರ್ಮದಾ ನದಿಯನ್ನು ದಾಟಿ ಕೆಳಗಿಳಿದನು. ಮಕರ ಸಂಕ್ರಮಣವು ನರ್ಮದಾ ನದಿಯಲ್ಲಿ ಆಯಿತು. ಮುಂದೆ ಇಪ್ಪತ್ತೊಂದು ದಿವಸಗಳೊಳಗೆ ಆತನ ಸೈನ್ಯವು ಬರ್ಹಾಣಪುರದ ಬಳಿಯಲ್ಲಿ ಬೀಡು ಬಿಟ್ಟಿತ್ತು. ನಡುವೆ ವಿರಾಮವಿಲ್ಲದೆ ವೇಗದಿಂದ ಸೈನ್ಯವನ್ನು ಸಾಗಿಸಿಕೊಂಡು ಬಂದದ್ದರಿಂದ, ಸೈನಿಕರಿಗೆ ಬರ್ಹಾಣಪುರದಂಥ ದೊಡ್ಡ ಪಟ್ಟಣದಲ್ಲಿ ವಿಶ್ರಾಂತಿಯನ್ನು ಹೊಂದುವ ಇಚ್ಛೆಯಾಯಿತು. ಸೈನ್ಯದ ಸಾಮಗ್ರಿಗಳನ್ನು ಸಿದ್ಧಮಾಡಿಕೊಳ್ಳಲೂ ಬೇಕಾಗಿತ್ತು; ಆದ್ದರಿಂದ ಜಯಸಿಂಗನು ಬರ್ಹಾಣಪುರದಲ್ಲಿ ಎಂಟು ದಿನ ನಿಲ್ಲುವ ವಿಚಾರವನ್ನು ಪ್ರಸಿದ್ಧಮಾಡಲು, ಅದನ್ನು ಕೇಳಿ ಸೈನಿಕರು ಆನಂದಭರಿತರಾದರು. ಅವರ ಚಲ್ಲಾಟಕ್ಕೆ ಕಳೆಯೇರಿತು.

ಆ ಕಾಲದಲ್ಲಿ ಬರ್ಹಾಣಪುರವು ಬಹು ಪ್ರಸಿದ್ಧ ಪಟ್ಟಣವಾಗಿತ್ತು. ವಿಜಾಪುರವನ್ನುಳಿದು ನರ್ಮದೆಯ ದಕ್ಷಿಣದೊಳಗಿನ ಬೇರೆ ಯಾವ ಪಟ್ಟಣವೂ ಇಷ್ಟು ಘನತೆಗೇರಿದ್ದಿಲ್ಲವೆಂದು ಹೇಳಬಹುದು. ಜಯಸಿಂಗನ ಸೈನ್ಯವು ಚಿಕ್ಕಂದದಿಂದ ಎಂಟು ದಿನಗಳನ್ನು ಕಳೆದು ವಿಶ್ರಾಂತಿಯನ್ನು ಹೊಂದಿತು. ಸೈನ್ಯದ ಸರಬರಾಯಿಯ ಸಾಹಿತ್ಯದ ಸಿದ್ಧತೆಯಾಯಿತು. ಆಗ ಮಿರ್ಝಾರಾಜನು ಔರಂಗಾಬಾದಕ್ಕೆ ಸಾಗುವದಕ್ಕಾಗಿ ಸೈನ್ಯದ ತಳಕಿತ್ತಲು ಆಜ್ಞಾಪಿಸಿದನು. ಅಪ್ಪಣೆಯಂತೆ ಸೈನ್ಯವು ಮಾರ್ಗವನ್ನು ಕ್ರಮಿಸಹತ್ತಿತು. ಬರ್ಹಾಣಪುರದಿಂದ ಹೊರಟಂದಿನಿಂದ ಔರಂಗಬಾದಕ್ಕೆ ಮುಟ್ಟುವವರೆಗೆ ಮಿರ್ಝಾರಾಜನು ಸೈನ್ಯಕ್ಕೆ ವಿಶ್ರಾಂತಿಯನ್ನು ಕೊಡಲಿಲ್ಲ. ಮಾರ್ಗದಲ್ಲಿ ಊಟ–ಉಡಿಗೆಯ ಸಲುವಾಗಿ ಸಿಗುವ ನಾಲ್ಕಾರು ತಾಸುಗಳ ವಿಶ್ರಾಂತಿಯೇ ವಿಶ್ರಾಂತಿಯು. ಜಯಸಿಂಗನು ತನ್ನ ಸೈನ್ಯದ ಚಿಕ್ಕಂದಕ್ಕೆ ವಿಘ್ನವುಂಟುಮಾಡದಿದ್ದರೂ, ಅಪ್ಪಣೆಯಂತೆ ಸೈನಿಕರು ಮುಂದಕ್ಕೆ ಸಾಗುವ ವಿಷಯದಲ್ಲಿ ತೊಂದರೆಕೊಟ್ಟರೆ ತಡೆಯುತ್ತಿದ್ದಿಲ್ಲ. ಆತನಿಗೆ ಅರವತ್ತು ವರ್ಷದ ವಯಸ್ಸಾಗಿದ್ದರೂ ಉತ್ಸಾಹಶಾಲಿಗಳಾದ ತರುಣರಂತೆ ಆತನು ಕುದರೆಯನ್ನು ಹತ್ತಿ ಸೈನ್ಯದಲ್ಲೆಲ್ಲ ತಿರುಗಿ, ಸೈನಿಕರು ತನ್ನ ಅಪ್ಪಣೆಯ ನೆಡಸುವ ಬಗೆಯನ್ನೂ, ಬೇರೆ ಹಲವು ಸಂಗತಿಗಳನ್ನೂ ಕಣ್ಮುಟ್ಟ ನೋಡಿ ತಕ್ಕ ವ್ಯವಸ್ಥೆಯನ್ನು ದಕ್ಷತೆಯಿಂದ ಮಾಡುತ್ತಿದ್ದನು. ಇದರಿಂದ ಸೈನಿಕರ ಆಲಸ್ಯಕ್ಕೆ ಆಸ್ಪದವು ದೊರೆಯುತ್ತಿದ್ದಿಲ್ಲ. ನಿಯಮಿತ ಸ್ಥಳಕ್ಕೆ ನಿಯಮಿತ ಕಾಲದಲ್ಲಿ ಸೈನ್ಯವು ತಪ್ಪದೇ ಮುಟ್ಟುತ್ತಿತ್ತು. ಜಯಸಿಂಗನ ಈ ಅತ್ಯಂತ ಕಾರ್ಯದಕ್ಷತೆಗಾಗಿ ಆತನನ್ನು ಸೈನಿಕರು ಸೈತಾನಸಿಂಗನೆಂದು ಕರೆಯುತ್ತಿದ್ದರು. ಸೈನ್ಯವು ಬರ್ಹಾಣಪುರದಿಂದ ಹೊರಟ ನಾಲ್ಕುದಿನಗಳಿಗೆ ಔರಂಗಾಬಾದಕ್ಕೆ ಮುಟ್ಟಿತು. ಒತ್ತರದಿಂದ ಪುಣೆಗೆ ಸಾಗಬೇಕೆಂದು ಆತುರಪಡುತ್ತಿದ್ದ ಮಿರ್ಝಾರಾಜನು ಔರಂಗಾಬಾದದಲ್ಲಿಯೂ ನಿಲ್ಲಬಾರದೆಂದು ಮಾಡಿದ್ದನು; ಆದರೆ ಅಲ್ಲಿ ಶಹಾಜಾದಾ ಮುಅಝ್ಝಮನು ಇದ್ದದ್ದರಿಂದ ಆತನನ್ನು ಕಂಡು ಹೋಗುವದು ಅವಶ್ಯವಾಗಿತ್ತು. ಆದ್ದರಿಂದ ಮಿರ್ಝಾನು ಎರಡು ದಿನ ಔರಂಗಾಬಾದದಲ್ಲಿ ನಿಲ್ಲಬೇಕಾಯಿತು. ಅಷ್ಟರಲ್ಲಿ ಔರಂಗಜೇಬನಿಂದ ಮಿರ್ಝಾರಾಜನಿಗೆ, ದಕ್ಷಿಣದ ದಂಡಯಾತ್ರೆಯ ಖರ್ಚು ವೆಚ್ಚದ ಸಂಪೂರ್ಣ ಅಧಿಕಾರವು ದೊರೆತಂತೆ ಪತ್ರ ಬಂದಿತು; ಅದರಿಂದ ಮಿರ್ಝಾರಾಜನ

ಉತ್ಸಾಹವು ಹೆಚ್ಚಿ, ಆತನು ದಕ್ಷಿಣಕ್ಕೆ ದಂಡಯಾತ್ರೆಯನ್ನು ಯಥಾಸ್ಥಿತ ಕೊನೆಗಾಣಿಸುವ ಮಾರ್ಗವನ್ನು ಕುರಿತು ಆಲೋಚಿಸಿ, ಒಂದು ಲಕ್ಷರೂಪಾಯಿಗಳನ್ನು ಸಂಗಡ ತಕ್ಕೊಂಡು ಪುಣೆಗೆ ಬಂದು ತಳ ಊರಿದನು. ಮಿರ್ಝಾರಾಜನ ಪ್ರಯಾಣದ ಸುದ್ದಿಯನ್ನು ಆಗಾಗ್ಗೆ ತಿಳಿಸುತ್ತಿದ್ದ ಮಹಾರಾಜರ ಗುಪ್ತಚಾರರು, ಈ ದುಷ್ಟವಾರ್ತೆಯನ್ನು ಮಹಾರಾಜರಿಗೆ ತಿಳಿಸಿದರು.

## ಜಯಸಿಂಗನ ಪ್ರಭಾವ

ಮೇಲಿನ ಪ್ರಕರಣದ ಕೊನೆಯಲ್ಲಿ ಹೇಳಿದಂತೆ, ಔರಂಗಜೇಬ ಬಾದಶಹನು ಜಯಸಿಂಗನಿಗೆ ದಕ್ಷಿಣದ ದಂಡಯಾತ್ರೆಯಲ್ಲಿ ಖರ್ಚುವೆಚ್ಚದ ಸ್ವಾತಂತ್ರ್ಯವನ್ನು ಕೊಟ್ಟನು; ಸಂಶಯ ಸ್ವಭಾವದ ಆ ಹೊಟ್ಟೇಕಿಚ್ಚಿನ ಬಾದಶಹನು ಹಿಂದುವಾದ ಮಿರ್ಝಾರಾಜನಿಗೆ ಅಂಥ ಸ್ವಾತಂತ್ರ್ಯ ಕೊಟ್ಟದ್ದನ್ನು ಓದಿ, ವಾಚಕರು ಸಂಶಯಪಟ್ಟಿರಬಹುದು; ಆದರೆ ಮಿರ್ಝಾರಾಜನ ಪ್ರಭಾವವೇ ಅಂತಹದು. ಮಿರ್ಝಾರಾಜನು ಔರಂಗಜೇಬನ ಅಪ್ಪಣೆ ಪಡೆದು ಆಗ್ರಾಪಟ್ಟಣದಿಂದ ಹೊರಟ ಬಳಿಕ, ಮಾರ್ಗದಲ್ಲಿ ಬಾದಶಹನಿಗೆ ಒಂದು ಪತ್ರವನ್ನು ಬರೆದಿದ್ದನು. ತಾನು ಶಿವಾಜಿಯ ಪಾರುಪತ್ಯವನ್ನು ಮಾಡುವದಕ್ಕಾಗಿ ಹೊರಟಿರಲು, ತನ್ನ ಸ್ವಾತಂತ್ರ್ಯಕ್ಕೆ ಬಾಧೆಬರುವಂಥ ಸಂಗತಿಗಳನ್ನು ದೂರಮಾಡಿಕೊಳ್ಳದಿದ್ದರೆ ಕಾರ್ಯವು ಸಾಧಿಸಲಿಕ್ಕೆ ತೊಂದರೆಯಾಗುವದೆಂದು ತಿಳಿದು, ಆತನು ಬಾದಶಹನಿಗೆ ಪತ್ರದಲ್ಲಿ ತಿಳಿಸತಕ್ಕದ್ದನ್ನು ಸ್ಪಷ್ಟವಾಗಿ ತಿಳಿಸಿದ್ದನು. ಹೀಗೆ ಸ್ಪಷ್ಟವಾಗಿ ಔರಂಗಜೇಬನಿಗೆ ತಿಳಿಸುವ ಧೈರ್ಯವು ಮಿರ್ಝಾರಾಜನ ಹೊರತು ಅನ್ಯರಿಗೆ ಸಾಹಸ ಆಗುತ್ತಿದ್ದಿಲ್ಲ. ಆ ಪತ್ರದಿಂದ ಜಯಸಿಂಗನ ದೂರದರ್ಶಿತ್ವವೂ, ಮುತ್ಸದ್ದಿಗಿರಿಯೂ ವ್ಯಕ್ತವಾಗುವದರಿಂದ ಅದರ ಅಭಿಪ್ರಾಯವನ್ನು ಇಲ್ಲಿ ಕೊಡುವೆವು. ಪದ್ಧತಿಯಂತೆ ಒಕ್ಕಣಿಕೆ ಮುಂತಾದವುಗಳನ್ನೆಲ್ಲ ಬರೆದ ಬಳಿಕ ಮಿರ್ಝಾರಾಜನು ಬಾದಶಹನನ್ನು ಕುರಿತು ಬರೆದದ್ದೇನಂದರೆ— "ಖಾವಿಂದ, ದಂಡಯಾತ್ರೆಗಾಗಿ ಹೊರಟಿರುವ ಮುಖ್ಯ ಸೇನಾಪತಿಯ ಕೈಯಲ್ಲಿ ದಂಡಾಳುಗಳಿಗೆ ಆಶೆ ತೋರಿಸುವ, ಅಥವಾ ಅವರನ್ನು ಅಂಜಿಸುವ ಸಂಪೂರ್ಣ ಅಧಿಕಾರವು ಇರಬೇಕಾಗುವದು. ಯುದ್ಧದಲ್ಲಿ ಶೌರ್ಯವನ್ನು ತರಿಸಿದವರಿಗೆ ಇನಾಮು ಕೊಡಲಿಕ್ಕೂ, ಹೇಡಿತನ ತೋರಿಸಿದವರನ್ನು ಶಿಕ್ಷಿಸಲಿಕ್ಕೂ ಸ್ವತಂತ್ರಾಧಿಕಾರವಿಲ್ಲದ ಸೇನಾಪತಿಯನ್ನು ಯಾರು ಕೇಳುವರು? ಶಾಹಿಸ್ತೇಖಾನರ ತರುವಾಯದಲ್ಲಿ ಈ ಅಧಿಕಾರವನ್ನು ಔರಂಗಾಬಾದದ ಕಾರಕೂನರ ಕಡೆಗೆ ಒಪ್ಪಿಸಿದಂತಾಗಿದೆ. ಯಾರಿಗಾದರೂ ಇನಾಮು ಕೊಡಬೇಕಂದರೆ, ಸ್ವತಂತ್ರಾಧಿಕಾರವಿಲ್ಲದ್ದರಿಂದ ನಾನು ಶಹಾಜಾದಾಮುಅಝಿಮರವರ ಕಡೆಗೆ ಬರೆದು ಕೊಳ್ಳಬೇಕಾಗುವದು; ಅವರು ಒಪ್ಪಿಕೊಳ್ಳದಿದ್ದರೆ ನನ್ನ ಆಟವೇನೂ ನಡೆಯುವಹಾಗಿಲ್ಲ; ತಮಗೆ ಒಳಿತು–ಕೇಡುಗಳನ್ನು

ಮಾಡುವ ಅಧಿಕಾರವು ನನ್ನ ಕೈಯಲ್ಲಿರುತ್ತದೆಂಬದು ದಂಡಾಳುಗಳಿಗೆ ಗೊತ್ತಿದ್ದ ಹೊರತು ಅವರು ನನ್ನ ಹುಕುಮನ್ನು ಯಾಕೆ ಮನ್ನಿಸುವರು? ಈ ಸ್ಥಿತಿಯು ಒಳ್ಳೆಯದಲ್ಲ, ಕಾರ್ಯ ಸಾಧನದ ವಿಷಯದಲ್ಲಿ ಅದು ಅತ್ಯಂತ ಘಾತಕವಾಗಿರುವದು. ನನ್ನ ಕೈಯಲ್ಲಿ ಸಂಪೂರ್ಣ ಅಧಿಕಾರವಿದ್ದ ಹೊರತು, ಇಂಥ ಕೆಲಸವನ್ನು ನಾನು ಮಾಡಿಯೇ ತೀರೇನೆಂದು ಹೇಳಲಿಕ್ಕೆ ಧೈರ್ಯವಾಗಲಿಕ್ಕಿಲ್ಲ. ನನ್ನ ಮಾತು ಖಾವಂದರವರಿಗೆ ಸಮರ್ಪಕವಾಗಿ ತೋರಿದಲ್ಲಿ ನನ್ನ ಕೈಯೊಳಗಿನ ಯಾವತ್ತು ಸೈನ್ಯದ ಒಳಿತು ಹೀನುಗಳ ಸಂಬಂಧದ ಸಂಪೂರ್ಣಾಧಿಕಾರವನ್ನು ನನ್ನ ಕೈಯಲ್ಲಿ ಕೊಡಿಸೋಣವಾಗಬೇಕು. ನಾನು ದಕ್ಷಿಣದ ದಂಡಯಾತ್ರೆಯನ್ನು ಮುಗಿಸಿ ಕೊಂಡು ಉತ್ತರದ ಕಡೆಗೆ ತಿರುಗಿದೆನೆಂದರೆ, ಪುನಃ ಅವರವರ ಅಧಿಕಾರವನ್ನು ಅವರವರ ಕಡೆಗೆ ಕೊಡಬಹುದು. ಯಾರ ಯೋಗ್ಯತೆಯಷ್ಟು, ಯಾರು ಏನು ಕೆಲಸ ಮಾಡಿದರು ಎಂಬದು ನನಗೆ ಗೊತ್ತಾಗದಹಾಗೆ ಎರಡನೆಯವರಿಗೆ ಗೊತ್ತಾಗುವ ಸಂಭವವಿಲ್ಲ. ಶಹಾಜಾದಾರ ವರಾದರೂ ಕಣ್ಣುಮುಟ್ಟಿ ಎಲ್ಲ ಸಂಗತಿಗಳನ್ನು ಎಲ್ಲಿ ನೋಡುವರು? ಔರಂಗಾಬಾದದ ಕಾರಕೂನರು ಹೇಳಿದ್ದನ್ನೇ ಅವರು ನಿಜವೆಂದು ನಂಬತಕ್ಕವರು. ಈ ಸ್ಥಿತಿಯಲ್ಲಿ ನಾನು ಔರಂಗಾಬಾದದ ಕಾರಕೂನರ ಕೈಕೆಳಗಿನವನಾದಂತಾಗಿ, ಅವರು ನನ್ನ ಮಾತು ನಡಿಸಿದರೆ ನನ್ನ ಮಾನ ಉಳಿಯಬೇಕು, ಇಲ್ಲದಿದ್ದರೆ ಮಾನಹಾನಿಯಾಗಬೇಕು; ಎಂಬ ಅನಿಶ್ಚಿತ ಸ್ಥಿತಿಯು ಪ್ರಾಪ್ತವಾಗಿರುತ್ತದೆ. ಕುದುರೆ ಹತ್ತುವನೊಬ್ಬನು, ಲಗಾಮು ಹಿಡಿಯುವವನೊಬ್ಬನು ಎಂಬ ಸ್ಥಿತಿಯು ಸರಿಯಾದದ್ದಲ್ಲ. ಯುದ್ಧದ ಪ್ರಸಂಗದಲ್ಲಂತು ಈ ಸ್ಥಿತಿಯು ಸರ್ವಥಾ ಕೆಲಸದ್ದಲ್ಲ. ಈ ಮಾತನ್ನು ಖಾವಂದವರಿಗೆ ನಾನು ಬರೆದು ತಿಳಿಸಬೇಕೆನ್ನುವಹಾಗಿಲ್ಲ. ಆದ್ದರಿಂದ ಖಾವಂದರವರು ನನ್ನ ವಿಜ್ಞಾಪನೆಯನ್ನು ಪರಾಮರಿಸಿ, ಸೈನ್ಯದ ಯಾವತ್ತು ಅಧಿಕಾರವನ್ನೂ, ಖಜಾನೆಯನ್ನೂ ನನ್ನ ಕೈಯಲ್ಲಿ ಕೊಡಿಸಬೇಕು. ನನ್ನ ಈ ಬೇಡಿಕೆಯು ಖಾವಂದರವರಿಗೆ ಸಮರ್ಪಕವಾಗಿ ತೋರಿ ಅದರಂತೆ ವ್ಯವಸ್ಥೆ ಮಾಡಿಸಿದರಂತು ಸರಿಯೇ, ಒಂದುಪಕ್ಷದಲ್ಲಿ ಮನಸ್ಸಿಗೆ ಬಾರದಿದ್ದರೆ, ''ನಾನು ಹೀಗೆ ಕೇಳಿಕೊಂಡೆನು, ಖಾವಂದರವರು ಅದನ್ನು ನಡೆಸಿ ಕೊಡಲಿಲ್ಲ''ವೆಂಬದನ್ನಾದರೂ ಬೈಲಿಗೆ ಹಾಕಬಾರದು; ಯಾಕಂದರೆ ಅದರಿಂದ ನನ್ನ ನೀರು ಬಹಳವಾಗಿ ಇಳಿದೀತು. ಈ ಎಲ್ಲ ಸಂಗತಿಗಳನ್ನು ಮನಸ್ಸಿನಲ್ಲಿ ತಂದುಯೋಗ್ಯ ವ್ಯವಸ್ಥೆಯನ್ನು ಮಾಡಿಸುವಲ್ಲಿ ಖಾವಂದರವರು ಸಮರ್ಥರಿರುವಿರಿ.''

ಔರಂಗಜೇಬನು ಅತ್ಯಂತ ಸಂಶಯ ಸ್ವಭಾವದವನು, ಬಹು ಹೊಟ್ಟೇಕಿಚ್ಚಿನವನು ಸರಿ; ಆದರೆ ಈ ಪತ್ರವನ್ನು ಓದಿದ ಕೂಡಲೇ ಅದರೊಳಗಿನ ಬೇಡಿಕೆಯ ಸತ್ಯತೆಯು ಆತನ ಮನಸ್ಸಿನಲ್ಲಿ ಹೊಳೆಯಿತು. ಜಯಸಿಂಗನ ಬೇಡಿಕೆಯು ನ್ಯಾಯವಾದದ್ದೆಂದು ಬಾದಶಹನು ಒಪ್ಪಿಕೊಂಡನು. ಅಂದಬಳಿಕ ಯಾತಕ್ಕೇನು ತಡ? ಕೂಡಲೇ ಔರಂಗಾಬಾದಕ್ಕೆ ಬಾದಶಹನು ಆಜ್ಞಾಪತ್ರವನ್ನು ಕಳುಹಿದನು. ಜಯಸಿಂಗನು ಬೇಡಿದಷ್ಟು ಹಣವನ್ನು ಕೂಡಲೇ ಕೊಡ ಬೇಕೆಂತಲೂ, ಆ ಹಣದ ವ್ಯವಸ್ಥೆಯನ್ನು ಆತನು ತನ್ನ ಮನಸ್ಸಿಗೆ ಬಂದಹಾಗೆ ಮಾಡಬಹು ದೆಂತಲೂ ಬಾದಶಹನು ಆಜ್ಞಾಪತ್ರದಲ್ಲಿ ಉಲ್ಲೇಖಿಸಿದ್ದನು. ಅದರಂತೆ ಮಿರ್ಝಾರಾಜನು

ಕಳಿಸಿದ ಸಾಮಾನುಗಳನ್ನೂ, ಸೆರೆಯಾಳುಗಳನ್ನೂ ಆತನು ಹೇಳಿದ ದುರ್ಗದಲ್ಲಿ ಇಟ್ಟುಕೊಳ್ಳ ಬೇಕೆಂದು ಆಯಾ ದುರ್ಗಾಧಿಪತಿಗಳನ್ನು ಬಾದಶಹನು ಆಜ್ಞಾಪಿಸಿದ್ದನು. ಈ ಮೇರೆಗೆ ಬಾದಶಹನು ತನ್ನ ಮನಸ್ಸಿನಂತೆ ವ್ಯವಸ್ಥೆ ಮಾಡಿದ್ದನ್ನು ನೋಡಿ, ಮಿರ್ಝಾರಾಜನಿಗೆ ಬಹಳ ಸಂತೋಷವಾಯಿತು; ದಕ್ಷಿಣದಲ್ಲಿ ಬಾದಶಹನ ಅಧಿಕಾರವನ್ನು ಸ್ಥಾಪಿಸಿ, ಶಿವಾಜಿಯನ್ನು ಬಗ್ಗುಬಡಿಯುವ ವಿಷಯದ ಆತನ ಉತ್ಸಾಹವು ಇಮ್ಮಡಿಯಾಗಿ ಹೆಚ್ಚಿತು. ಹಿಂದೆ ಹೇಳಿದಂತೆ ಆತನು ಒಂದು ಲಕ್ಷ ರೂಪಾಯಿಗಳನ್ನು ಕಟ್ಟಿಕೊಂಡು ಪುಣೆಯಲ್ಲಿ ಕುಳಿತುಕೊಂಡು, ಮಹಾರಾಜರ ಸುತ್ತು ಬಲೆಯನ್ನು ಸುತ್ತುವ ಎತ್ತುಗಡೆಯನ್ನು ಮಾಡತೊಡಗಿದನು. ಮೂವರು ಬಾದಶಹನ ತಂತ್ರಗಳನ್ನು ನೋಡುತ್ತ ತನ್ನ ಪರಾಕ್ರಮ, ಕರ್ತೃತ್ವಶಾಲಿತ್ವ, ರಾಜತಂತ್ರ ಕುಶಲತೆ ಇವುಗಳನ್ನು ಪ್ರತ್ಯಕ್ಷ ಕೃತಿಗಳಿಂದ ಹೆಚ್ಚಿಸಿಕೊಂಡು, ಮೊಗಲ ಬಾದಶಾಹಿಯ ಆಧಾರಸ್ತಂಭವೆನಿಸಿದ ಮಿರ್ಝಾರಾಜನ ಅಬ್ಬರಕ್ಕೂ, ಕಾರ್ಯಕುಶಲತೆಗೂ ಮರಾಟರು ಬೆದರಿದರು. ಮಹಾರಾಜರ ಆಲೋಚನೆಯು ಹೆಚ್ಚಿತು. ವೇಷಾಂತರ ಗಳಿಂದಲೂ, ಬೇರೆ ಬೇರೆ ಯುಕ್ತಿಗಳಿಂದಲೂ ಈವರೆಗೆ ಬೇರೆ ಬೇರೆ ಮುಸಲ್ಮಾನ ಸರದಾರರನ್ನೂ, ಹಿಂದೂ ಸರದಾರರನ್ನೂ ಮಣ್ಣುಗೂಡಿಸಿ, ಇಲ್ಲವೆ ಮಂಕುಬೂದಿಯನ್ನು ಹಚ್ಚಿ ತಮ್ಮ ವರ್ಚಸ್ಸನ್ನು ಕಾಯ್ದುಕೊಂಡಂತೆ ಈಗ ಮಾಡಹೋದ ಮರಾಟರೆಲ್ಲರೂ ಧೂರ್ತ ಜಯಸಿಂಗನು ಒಡ್ಡಿದ ಬಲೆಯಲ್ಲಿ ಸಿಕ್ಕು ಸೆರೆಯಾಳಾದರು. ಜಯಸಿಂಗನು ಒಳ್ಳೇ ಮುತ್ಸದ್ದಿಯಾದದ್ದರಿಂದ, ಅರ್ಥಹಾನಿ–ಪ್ರಾಣಹಾನಿಗಳಾಗದೆ, ಮಹಾರಾಜರನ್ನು ಹಣ್ಣಿಗೆ ತಂದು, ಅವರು ತಾವಾಗಿ ಶರಣು ಬರುವಂತೆ ಮಾಡಬೇಕೆಂದು ಬಲೆಯನ್ನು ಒಡ್ಡಹತ್ತಿದನು. ಮೂಗು ಹಿಡಿದರೆ ಬಾಯಿಯು ತಾನೇ ತೆರೆಯುವದೆಂಬ ನಿಯಮದಂತೆ, ಆತನುಮರಾಟರ ಆಯಕಟ್ಟಿನ ಸ್ಥಳಗಳನ್ನು ತನ್ನ ಸೈನ್ಯಭಾಗಗಳಿಂದ ವ್ಯಾಪಿಸಿ, ಮರಾಟರು ಉಲುಕಾಡದಂತೆ ಮಾಡಿದನು. ಮಹಾರಾಜರನ್ನು ದ್ವೇಷಿಸುತ್ತಿದ್ದ ಬೇರೆ ಬೇರೆ ಮರಾಠಾ ಸರದಾರರನ್ನೂ, ದುರ್ಗಾಧಿಪತಿಗಳನ್ನೂ ತನ್ನ ಸಹಾಯಕ್ಕೆ ಬರಮಾಡಿಕೊಂಡು, ಮಹಾರಾಜರ ಬಿಗುವಿನ ಗುಟ್ಟುಗಳನ್ನು ಅರಿತುಕೊಳ್ಳಹತ್ತಿದನು. ಇದಲ್ಲದೆ ಮಹಾರಾಜರ ಪಕ್ಷದ ಜನರನ್ನು ಚತುರೋಪಾಯಗಳಿಂದ ತನ್ನ ಕಡೆಗೆ ಮಾಡಿಕೊಳ್ಳುವ ಉದ್ಯೋಗವನ್ನು ನಡೆಸಿದನು. ಆಲಸ್ಯದ ಸೋಂಕು ಸಹ ಇಲ್ಲದೆ ಒಂದೇಸವನೆ ಕೈ ತೊಳೆದುಕೊಂಡು ಬೆನ್ನುಹತ್ತಿದಂತೆ, ಮಿರ್ಝಾರಾಜನು ದೀರ್ಘಪ್ರಯತ್ನದಿಂದ ಮಹಾರಾಜರ ಬಲೆಯ ಹಗ್ಗಗಳನ್ನು ಜಗ್ಗಹತ್ತಿದ್ದರಿಂದ, ಇಡಿಯ ಮಹಾರಾಷ್ಟ್ರವೇ ಚಿಂತೆಗೊಳಗಾಯಿತು. ಮಹಾರಾಜರು ಗಂಭೀರಮುದ್ರೆಯಿಂದ ವಿಚಾರ ಮಾಡತೊಡಗಿದರು. ಇಂಥ ಕಠಿಣ ಪ್ರಸಂಗದಲ್ಲಿಯೂ ಅವರು ಕಂಗೆಡದೆ ಧೈರ್ಯದಿಂದ ಉಪಾಯಗಳನ್ನು ಯೋಚಿಸತೊಡಗಿದರು.

ಜಯಸಿಂಗನು ಈ ಮೇರೆಗೆ ಎಲ್ಲ ಸಿದ್ಧತೆಯನ್ನು ಮಾಡಿ, ಮಹಾರಾಜರ ಮೇಲೆ ಏರಿಹೋಗುವ ಹವಣಿಕೆಯಲ್ಲಿದ್ದನು. ಆತನ ಅಪ್ಪಣೆಯಿಂದ ಕುತುಬಖಾನನು ಅನ್ನ ಸಾಮಗ್ರಿಯನ್ನು ಮುಟ್ಟಿಸುವದಕ್ಕಾಗಿ ಜುನ್ನರಕ್ಕೆ ಹೋಗುತ್ತಿದ್ದನು. ಜಯಸಿಂಗನು ಪುಣೆಯಿಂದ

ಹೊರಟು ಪುರಂಧರ ದುರ್ಗವನ್ನು ಮುತ್ತುವ ಯೋಚನೆಯಲ್ಲಿದ್ದನು. ಅಷ್ಟರಲ್ಲಿ ''ಮಹಾರಾಜರು ಲೋಹಗಡದಲ್ಲಿರುತ್ತಿದ್ದು, ನೀವು ಪುಣೆಯಿಂದ ಹೊರಟಕೂಡಲೆ ಅವರು ಮೊಗಲ ರಾಜ್ಯದಲ್ಲಿ ಸೇರಿ ತಮ್ಮ ಪರಾಕ್ರಮವನ್ನು ತೋರಿಸುವರೆಂ''ಬ ವರ್ತಮಾನವನ್ನು ಚಾರರು ಜಯಸಿಂಗನಿಗೆ ಹೇಳಿದರು. ಕೂಡಲೆ ಮಿರ್ಝಾರಾಜನು ಕುತುಬಖಾನನನ್ನು ಹಿಂದಕ್ಕೆ ಕರೆಸಿಕೊಂಡು ತಕ್ಕ ಬಂದೋಬಸ್ತು ಮಾಡಿ, ತಾನು ಸಿಂಹಗಡವನ್ನೂ, ದಿಲೇರಖಾನನು ಪುರಂಧರ ದುರ್ಗವನ್ನೂ ಒಮ್ಮೆಲೇ ಮುತ್ತಬೇಕೆಂದು ನಿಶ್ಚಯಿಸಿದನು. ಇವೆರಡೂ ದುರ್ಗಗಳು ಬಹು ಪ್ರಸಿದ್ಧವಾದವುಗಳು. ಮೊದಲ ತುತ್ತಿಗೇ ಇವೆರಡನ್ನೂ ತಕ್ಕೊಂಡರೆ, ಮರಾಟರ ಒಗರು ಒಮ್ಮೆಲೆ ಕಡಿಮೆಯಾಗುವದೆಂದು ಆತನು ತಿಳಿದನು. ತನ್ನ ಈಗಿನ ಬಲೆಯ ಬಿಗತದಿಂದ ಮರಾಟರು ಬಹುಮಟ್ಟಿಗೆ ಮೆತ್ತಗಾಗಿ ಹೋಗಿರುವರೆಂದು ಮಿರ್ಝಾರಾಜನು ತಿಳಕೊಂಡಿದ್ದನು. ಆತನ ತಿಳುವಳಿಕೆಯು ನಿರರ್ಥಕವಾದದ್ದೆಂದು ಹೇಳುವಹಾಗಿದ್ದಿಲ್ಲ, ಮಿರ್ಝಾರಾಜನು ಯುದ್ಧಕಲೆಯಲ್ಲಿ ಒಳಿತಾಗಿ ನುರಿತವನಾಗಿದ್ದನು. ಆತನ ಶೌರ್ಯ–ಧೈರ್ಯ–ಸೈನ್ಯಬಲಗಳು ಹೊಗಳತಕ್ಕಂತಹ ವಾಗಿದ್ದವು. ನಿಜವಾಗಿ ಆತನು ಮರಾಟರನ್ನು ಯಾವ ಬಗೆಯಿಂದಲೂ ಲೆಕ್ಕಿಸುವ ಹಾಗಿದ್ದಿಲ್ಲ, ಆದರೂ ಆತನು ಮರಾಟರ ಕರ್ತೃತ್ವಶಕ್ತಿಯನ್ನೂ, ಚಪಲತನವನ್ನೂ, ಸ್ವಾಮಿಭಕ್ತಿಯನ್ನೂ, ಪರಾಕ್ರಮವನ್ನೂ ಅರಿತವನಾಗಿದ್ದನು. ಮಹಾರಾಜರ ದರ್ಪದ ಪರಿಣಾಮವು ಆ ವೃದ್ಧವೀರನ ಮೇಲೆಯೂ ಆಗಿತ್ತು ತನ್ನ ಬಲದ ಹೆಮ್ಮೆಯಿಂದ ಆತನು ಮರಾಟರನ್ನು ಸರ್ವಥಾ ತಿರಸ್ಕರಿಸುತ್ತಿದ್ದಿಲ್ಲ, ಮಹಾರಾಜರ ಉದ್ದೇಶವು ಸ್ತುತ್ಯವಾದದ್ದೆಂತಲೂ, ಈ ವರೆಗೆ ಅವರು ಮಾಡಿದ ಸಾಹಸವು ವರ್ಣನೀಯವೆಂತಲೂ ಆತನು ತಿಳಿದಿದ್ದನು. ತಾನು ಎಷ್ಟು ಅಟ್ಟಹಾಸ ಮಾಡಿದರೂ, ಒಂದೊಂದು ದುರ್ಗವನ್ನು ವಶಮಾಡಿಕೊಳ್ಳುವಾಗ ಮರಾಟರು ರಕ್ತದ ಕಾವಲಿಗಳನ್ನು ಹರಿಸದೆ ದುರ್ಗವನ್ನು ಬಿಡರೆಂದು ಆತನು ತಿಳಿದಿದ್ದನು. ಆದರೂ ಎಷ್ಟೋ ಕಠಿಣ ಪ್ರಸಂಗಗಳನ್ನು ಸ್ವಪರಾಕ್ರಮದಿಂದ ನೀಗಿ, ಮೊಗಲ ಬಾದಶಹರನ್ನು ಮೆಚ್ಚಿಸಿ ಅವರ ಮೇಲೆ ಸಹ ತನ್ನ ವರ್ಚಸ್ಸು ಕೂಡಿಸಿದ್ದ ಆ ರಜಪೂತವೀರನು, ಇಂಥ ಆತಂಕಗಳಿಗೆ ಸೊಪ್ಪು ಹಾಕುವ ಹಾಗಿದ್ದಿಲ್ಲ, ಆತನು ತನ್ನ ನಿಶ್ಚಯದಂತೆ ತಾನು ಸಿಂಹಗಡವನ್ನು ಮುತ್ತುವದನ್ನು ನಿರ್ಧರಿಸಿ, ದಿಲೇರಖಾನನಿಗೆ ಪುರಂಧರ ದುರ್ಗವನ್ನು ಮುತ್ತಹೇಳಿದನು. ಆತನು ದಿಲೇರಖಾನನಿಗೆ ಜಾಗರೂಕವಾಗಿರಲು ಸೂಚಿಸುವದಕ್ಕಾಗಿ ಸರಳತನದಿಂದ—''ಖಾನಸಾಹೇಬ, ಮರಾಟರೊಡನೆ ಕಾದುವದು, ಅದರಲ್ಲಿ ಅವರ ಕೈಯಲ್ಲಿದ್ದ ದುರ್ಗವನ್ನು ವಶಮಾಡಿಕೊಳ್ಳುವದು ಸುಲಭಕಾರ್ಯವಲ್ಲ, ವಿಲಕ್ಷಣ ಪ್ರಾಣಹಾನಿಯಾದ ಹೊರತು ಎಂದಿಗೂ ಕಾರ್ಯಸಿದ್ಧಿಯಾಗದು; ಆದ್ದರಿಂದ ಪ್ರಸಂಗಕ್ಕೆ ತಕ್ಕಂತೆ ಒಮ್ಮೆ ಸಾಮೋಪಚಾರದಿಂದ, ಒಮ್ಮೆ ದರ್ಪದಿಂದ, ಒಮ್ಮೆ ಅನುಕೂಲತೆ ತೋರಿಸಿ ಕಾರ್ಯವನ್ನು ಸಾಧಿಸಿದರೆ ಪ್ರಾಣಹಾನಿಯೂ, ಆಯಾಸವೂ ಆಗದೆ ಚಾತುರ್ಯದಿಂದ ಕಾರ್ಯವನ್ನು ಸಾಧಿಸಿದಂತಾಗುವದು. ಹೀಗೆ ಮಾಡದೆ ಕೇವಲ ಒಗರಿನಿಂದ ಕೋಟೆಗಳನ್ನು ಕೈವಶ ಮಾಡಿಕೊಳ್ಳಹೋದರೆ, ಸಿಂಹನ ದವಡೆಯಲ್ಲಿ ಸೇರಿ ಅದರ ಮೀಸೆಯ ಕೂದಲುಗಳ

ಕಿತ್ತಹೋದಂತಾಗುವದು; ಆದರೆ ಈ ಪ್ರಸಂಗದಲ್ಲಿ ಮೀಸೆಗಳು ಕಿತ್ತುಹೋವವೋ, ಒಳಗೆ ಸೇರಿದವರು ಜಿಬ್ಬಿಯಾಗುವರೋ ಎಂಬದನ್ನು ನಿಶ್ಚಯದಿಂದ ಹೇಳಲಾಗುದಿಲ್ಲ.

ಜಯಸಿಂಗನ ಈ ಮಾತುಗಳು ದಿಲೇರಖಾನನಿಗೆ ಎಷ್ಟು ಮಾತ್ರವೂ ಸರಿಬೀಳಲಿಲ್ಲ. ಆತನು ಬಲು ಒಗರಿನವನು. ತನ್ನ ಸಾಮರ್ಥ್ಯದ ವಿಷಯವಾಗಿ ಆತನಿಗೆ ಹೆಮ್ಮೆ ಬಹಳ. ಶಿವಾಜಿಯು ಮುಸಲ್ಮಾನ ಸರದಾರರನ್ನು ಒಬ್ಬೊಬ್ಬರನ್ನಾಗಿ ಹಣಿದ ಸೇಡನ್ನೆಲ್ಲ ಈಗ ತೀರಿಸಿಕೊಳ್ಳಬೇಕೆಂದು ಆತನು ಆತುರಪಡುತ್ತಿದ್ದನು. ಜಯಸಿಂಗನ ಈ ಯೋಗ್ಯವಾದ ಉಪದೇಶವನ್ನು ಖಾನನು ಹೇಡಿತನದ್ದೆಂದು ಭಾವಿಸಿದನು. ಜಯಸಿಂಗನು ಶಿವಾಜಿಗೆ ಅಂತರಂಗದಲ್ಲಿ ಅನುಕೂಲವಾಗಿರುವದರಿಂದಲೇ ಹೀಗೆ ಹೇಳುವನೆಂತಲೂ ಆತನು ತಿಳಿದು ಕೊಂಡನು. ಆ ಉದ್ಧಟ ಸ್ವಭಾವದ ಖಾನನು ಹೀಗೆ ಭಾವಿಸಿಕೊಂಡು, ಅಥವಾ ತಿಳಿದುಕೊಂಡು ಸುಮ್ಮನೇ ಇರಲಿಲ್ಲ. ಮಿರ್ಝಾರಾಜನ ಮೋರೆಯ ಮುಂದೆ ಅದರಂತೆ ಸ್ಪಷ್ಟವಾಗಿ ಆಡಿಬಿಟ್ಟನು. ಅದನ್ನು ಕೇಳಿ ಮಿರ್ಝಾರಾಜನು ಸಂತಾಪಗೊಂಡನು; ಆದರೆ ಸಂತಾಪವನ್ನು ಹೊರಗೆಡುವುದು ಹಿತಕರವಲ್ಲದ್ದರಿಂದ ಆ ಗಂಭೀರ ಸ್ವಭಾವದ ರಜಪೂತನು ಅದನ್ನು ಒಳಗೇ ನುಂಗಿಕೊಂಡನು. ದಿಲೇರಖಾನನು ಜಯಸಿಂಗನ ಕೈಕೆಳಗಿನವನಾಗಿದ್ದು ಹೀಗೆ ಉದ್ಧಟತನದಿಂದ ನಡಕೊಳ್ಳುವದನ್ನು ನೋಡಿ ವಾಚಕರು ಆಶ್ಚರ್ಯಪಡಬಹುದು; ಆದರೆ ಇದರಲ್ಲಿ ಆಶ್ಚರ್ಯಪಡತಕ್ಕ ಸಂಗತಿಯೇನೂ ಇಲ್ಲ. ಎಂಥ ಬಲಾಢ್ಯ ಹಿಂದೂವನ್ನಾದರೂ ಪ್ರಸಂಗ ವಿಶೇಷದಲ್ಲಿ ಹೀಗೆ ಅಪಮಾನಗೊಳಿಸುವದು ಮುಸಲ್ಮಾನರ ಮೈಉಂಡು ಹೋಗಿತ್ತು. ಬಾದಶಹನ ಜಾತಿಯವರಾದ್ದರಿಂದ ಅವರಿಂದಾದ ಅಪಮಾನವನ್ನು ಮನಸ್ಸಿನಲ್ಲಿ ಹಿಡಿಯದೆ ಎಂಥವರಾದರೂ ಹಿಂದುಗಳು ಸುಮ್ಮನೆ ಇರಬೇಕಾಗುತ್ತಿತ್ತು. ಇಲ್ಲವೆ ನಗೆಯ ಮೇಲೆ ಹಾಕಿ ಆದ ಅಪಮಾನವನ್ನು ಅವರು ಮುಚ್ಚಿಕೊಳ್ಳಬೇಕಾಗುತ್ತಿತ್ತು. ಹೊತ್ತು ಬಿದ್ದರೆ ಬಾದಶಹನು ತನ್ನ ಜಾತಿಯವರ ಪಕ್ಷಕಟ್ಟುತ್ತಿದ್ದನಲ್ಲದೆ, ನ್ಯಾಯ ಪಕ್ಷಪಾತಿಯಾಗುತ್ತಿದ್ದಿಲ್ಲ. ಆದ್ದರಿಂದಲೇ ಮಿರ್ಝಾರಾಜನು ತನ್ನ ಸಂತಾಪವನ್ನು ನುಂಗಿಕೊಳ್ಳುತ್ತ ಕೆಲವು ಹೊತ್ತು ಸುಮ್ಮನೆ ಕುಳಿತು ಕೊಂಡು ಆಮೇಲೆ ದಿಲೇರಖಾನನನ್ನು ಕುರಿತು— "ನನ್ನ ಮಾತಿನ ಅನುಭವವು ನಿಮಗೆ ಬಂದಿತೆಂದರೆ, ನನ್ನ ವಿಚಾರದಂತೆಯೇ ನಡಕೊಳ್ಳಬೇಕೆಂದು ನಿಮಗೇ ತೋರುವದು. ಈಗ ನಿಮ್ಮ ಮನಸ್ಸಿಗೆ ಸರಿದೋರಿದಂತೆ ನಡಕೊಳ್ಳಬಹುದು" ಎಂದು ನುಡಿದನು. ಅದನ್ನು ಕೇಳಿ ದಿಲೇರಖಾನನು "ಹ್ಯಾಗದೆ ನನ್ನ ಕೈ" ಎಂಬ ಭಾವವನ್ನು ವ್ಯಕ್ತಮಾಡುವದಕ್ಕಾಗಿ ಸುತ್ತು ಮುತ್ತಲಿನ ಹುಜರೆಗಳನ್ನು ನೋಡಿ ಬಿಂಕದಿಂದ ನಕ್ಕನು. ಅದನ್ನು ನೋಡಿಯಂತು ಜಯಸಿಂಗನು ಸಂತಾಪದಿಂದ ಉರಿಯಹತ್ತಿದನು; ಆದರೆ, ಆತನು ಒಮ್ಮೆ ನಿಟ್ಟಿಸಿರು ಬಿಡುವದಕ್ಕಿಂತ ಹೆಚ್ಚಿನದನ್ನೇನೂ ಮಾಡಲಿಲ್ಲ. ಸ್ವಲ್ಪ ವೇಳೆಯಲ್ಲಿ ದಿಲೇರಖಾನನು ಹೊರಟುಹೋದನು. ಜಯಸಿಂಗನು ಅತ್ಯಂತ ಖಿನ್ನನಾಗಿ ಕುಳಿತುಕೊಂಡಿದ್ದನು. ಅಷ್ಟರಲ್ಲಿ ಒಬ್ಬ ದ್ವಾರರಕ್ಷಕನು ಬಂದು—ಮಹಾರಾಜ, ಅಜಯಸಿಂಹರವರು ಸಿಂಹಗಡದ ಮರಾಟರ ಗುಪ್ತಚಾರನೆಂದು ಒಬ್ಬ ಕೊಂಗನನ್ನು ಹಿಡತಂದಿದ್ದಾರೆ, ಅಪ್ಪಣೆಯಾದರೆ ಕರಕೊಂಡು

ಬರುವೆನು ಎಂದು ಹೇಳಿದನು. ಅಸಮಾಧಾನದಲ್ಲಿದ್ದ ಜಯಸಿಂಗನು ಈ ಸುದ್ದಿಯನ್ನು ಕೇಳಿ ಹುಬ್ಬುಗಂಟಿಕ್ಕಿದನು. ಆತನು ಸ್ವಲ್ಪ ಹೊತ್ತು ಸುಮ್ಮನೆ ಕುಳಿತು, ಆಮೇಲೆ ದ್ವಾರರಕ್ಷಕನಿಗೆ—''ಹೋಗು ಅಜಯಸಿಂಗನನ್ನು ಕರಕೊಂಡು ಬಾ''ಎಂದು ಆಜ್ಞಾಪಿಸಿದನು. ಅಜಯಸಿಂಗನು ಬರುವದರೊಳಗೆ ಜಯಸಿಂಗನ ಖಿನ್ನತೆಯು ಎತ್ತೋ ಹೊರಟುಹೋಗಿ, ಆತನ ಮುಖವು ವಾಡಿಕೆಯಂತೆ ಗಂಭೀರವಾಗಿತ್ತು ಅಜಯಸಿಂಗನು ಬಂದು ಬಹುವಿನಯದಿಂದ ನಮಸ್ಕಾರ ಮಾಡಲು, ಜಯಸಿಂಗನು—''ಅಜಯ ಗುಪ್ತಚಾರನಾರು?'' ಎಂದು ಕೇಳಲು, ಅಜಯ ಸಿಂಗನು— ''ಮಹಾರಾಜ, ನಾನು ತಮ್ಮ ಸೈನ್ಯದ ಯೋಗಕ್ಷೇಮವನ್ನು ವಿಚಾರಿಸುತ್ತ ಸಂಚರಿಸುತ್ತಿರುವಾಗ, ಒಬ್ಬ ತೇಜಸ್ವಿಯಾದ ಕೊಂಗನು ನನ್ನ ಕಣ್ಣಿಗೆ ಬಿದ್ದನು. ಆತನು ಕಿವುಡನಂತೆಯೂ, ಮೂಕನಂತೆಯೂ, ಹುಚ್ಚನಂತೆಯೂ ವ್ಯವಹರಿಸುತ್ತಿರುವನು; ಆದರ ಆತನ ವರ್ಚಸ್ಸನ್ನು ನೋಡಿದರೆ ಆತನು ಸಾಮಾನ್ಯ ಮನುಷ್ಯನಾಗಿ ನನಗೆ ತೋರುವದಿಲ್ಲ. ಆತನು ಪ್ರತ್ಯಕ್ಷ ಶಿವಾಜಿಯಿದ್ದರೂ ಇರಬಹುದು; ಶಿವಾಜಿಯು ಇರದಿದ್ದರೂ ಆತನ ಅತ್ಯಂತ ಪ್ರೀತ್ಯಾಸ್ಪದನಾದ ಯಾವನಾದರೊಬ್ಬ ಕರ್ತೃತ್ವಶಾಲಿಯು ಇರಬಹುದು. ಆತನನ್ನು ನಾನು ಅಲ್ಲಿಯೇ ತುಂಡರಿಸಬೇಕೆಂದು ಮಾಡಿದ್ದೆನು; ಆದರೆ ಒಮ್ಮೆಲೆ ಹಾಗೆ ಮಾಡುವದಕ್ಕಿಂತ ಮಹಾರಾಜರ ಕಿವಿಯ ಮೇಲೆ ಹಾಕಿ ಮಾಡತಕ್ಕದ್ದನ್ನು ಮಾಡಿದರೆ ಹಿಂದುಗಡೆ ಪಶ್ಚಾತ್ತಾಪ ಪಡುವ ಪ್ರಸಂಗ ಬರಲಿಕ್ಕಿಲ್ಲೆಂದು ತಮ್ಮ ಬಳಿಗೆ ಬಂದಿದ್ದೇನೆ'' ಎಂದು ಹೇಳಲು, ಜಯಸಿಂಗನು—''ನೀನು ಬಂದದ್ದು ಒಳ್ಳೆಯದಾಯಿತು. ಇಂಥ ತರುಣರನ್ನು ಸಂಹರಿಸುವದಕ್ಕಿಂತ ರಕ್ಷಿಸುವದ ರಿಂದಲೇ ಹೆಚ್ಚು ಲಾಭವಾಗುವ ಸಂಭವವಿರುತ್ತದೆ. ಶತ್ರುಗಳ ಕಡೆಯ ಇಂಥ ತರುಣರನ್ನು ಪ್ರೇಮದಿಂದ ನಡಿಸಿಕೊಂಡರೆ, ಅವರು ಅನುಕೂಲವಾಗಿ ನಮ್ಮ ಕಾರ್ಯಕ್ಕೆ ಸಹಾಯಕರಾಗುವ ಸಂಭವವುಂಟು. ಒಳ್ಳೇದು, ನಿನ್ನ ಆ ಚಾರನನ್ನು ಒಮ್ಮೆ ನಮ್ಮ ಕಣ್ಣಿಗೆ ಹಾಕು ನೋಡೋಣ!''

ಜಯಸಿಂಗನು ಹೀಗೆ ನುಡಿಯುತ್ತಿರುವದರೊಳಗೆ ಸೇವಕರು ಕೊಂಗನನ್ನು ತಂದು ಜಯಸಿಂಗನ ಮುಂದೆ ನಿಲ್ಲಿಸಿದರು. ಕೊಂಗನ ತೇಜಸ್ವಿತೆಯನ್ನು ನೋಡಿ ಮಿರ್ಝಾರಾಜನು ಅಜಯಸಿಂಗನ ಮಾತಿನಲ್ಲಿ ತಥ್ಯವಿರುವದೆಂದು ಭಾವಿಸಿದನು. ಕೊಂಗನ ಹಣೆಯಲ್ಲಿ ಬಿಳಿಯ ಭವ್ಯವಾದ ಎರಡು ನಾಮಗಳು ಒಪ್ಪುತ್ತಿದ್ದು, ಅವುಗಳ ನಡುವೆಯೊಂದು ಕೆಂಪುನಾಮವು ಶೋಭಿಸುತ್ತಿತ್ತು, ತಲೆಗೆ ಸುತ್ತಿದ್ದೊಂದು ಚಿಂದಿ, ಶುಭ್ರವಾದ ಜನಿವಾರ, ಉಟ್ಟಿದ್ದೊಂದು ಪಂಜಿ ಇವುಗಳ ಹೊರತು ಒಂದು ನೂಲೆಳೆಯು ಕೂಡ ಕೊಂಗನ ಮೈಮೇಲೆ ಇದ್ದಿಲ್ಲ. ಆತನು ಮಿರ್ಝಾರಾಜನ ಮುಂದೆ ನಿಂತಾಗ ಹುಚ್ಚನಹಾಗೆ ನಾಲ್ಕೂ ಕಡೆಗೆ ನೋಡಹತ್ತಿದನು. ಯಾವ ಪರಿವೆಯೂ ಆತನಿಗೆ ಇದ್ದಂತೆ ತೋರಲಿಲ್ಲ. ಜನರ ಮಾತಿನ ಕಡೆಗೆ ಅವನ ಲಕ್ಷವಿದ್ದಂತೆ ಕಾಣಲಿಲ್ಲ. ಆಗ ಮಿರ್ಝಾರಾಜನು ಹುಬ್ಬುಗಂಟಿಕ್ಕಿ ತನ್ನ ಬಿಳಿಯ ಗಡ್ಡಗಳ ಮೇಲೆ ಕೈ ಎಳೆಯುತ್ತ ಕೊಂಗನನ್ನು ಕೆಲಹೊತ್ತು ಭೇದಕ ದೃಷ್ಟಿಯಿಂದ ನೋಡಿದನು. ಬಳಿಕ ಅವನು ಗಂಭೀರ ಧ್ವನಿಯಿಂದ ಕೊಂಗನನ್ನು ಹಿಂದೂಸ್ಥಾನೀ ಭಾಷೆಯಿಂದ ಮಾತಾಡಿಸಲು, ಕೊಂಗನಿಗೆ ಅದರ ಸುಳಿವೇ ಹತ್ತಲಿಲ್ಲ. ಮಿರ್ಝಾರಾಜನು ಮತ್ತೆ ಮತ್ತೆ ಮಾತಾಡಿಸಲು

ಕೊಂಗನು ಹುಚ್ಚನಹಾಗೆ ನಗುತ್ತ ತನಗೆ ಕಿವಿ ಕೇಳುವದಿಲ್ಲೆಂತಲೂ, ಮಾತಾಡಲಿಕ್ಕೆ ಬರುವದಿಲ್ಲೆಂತಲೂ ಸನ್ನೆಮಾಡಿ ತೋರಿಸಿದನು. ಆಗ ಜಯಸಿಂಗನು ನಗುತ್ತ ಆತನನ್ನು ಕುರಿತು— ''ನೀನು ಬಹಳ ಚನ್ನಾಗಿ ಸೋಗು ಹಾಕಿರುವೆ; ಆದರೆ ಇಲ್ಲಿ ಅದಕ್ಕೆ ಮೋಸ ಹೋಗುವವರು ಮಾತ್ರ ಯಾರೂ ಇಲ್ಲ ನೀನು ಕೊಂಗನೂ ಅಲ್ಲ ಮೂಕನೂ ಅಲ್ಲ ನಿನಗೆ ಚನ್ನಾಗಿ ಮಾತಾಡಲಿಕ್ಕೆ ಬರುತ್ತದೆ. ನಿನ್ನ ಕಿವಿಗಳೂ ಕೇಳಿಸುತ್ತವೆ. ನೀನು ಕಳ್ಳತನದಿಂದ ನಮ್ಮ ಛಾವಣಿಯಲ್ಲಿ ಸೇರಿ, ಸುದ್ದಿಗಳನ್ನು ತಿಳಕೊಂಡು ಹೋಗಲಿಕ್ಕೆ ಬಂದಿರುತ್ತೀ. ಇನ್ನು ತಪ್ಪಿಸಿ ಮಾತಾಡುವದರಲ್ಲಿ ಪ್ರಯೋಜನವೇನು? ಇದ್ದ ಸಂಗತಿಯನ್ನು ನಿಜವಾಗಿ ಹೇಳಿಬಿಡು, ನಿನ್ನನ್ನು ಕ್ಷಮಿಸುವೆವು ಅನ್ನಲು, ಕೊಂಗನು ಅದಕ್ಕೆ ಹಣೆಯಲಿಲ್ಲ. ಜಯಸಿಂಗನೂ ಸಾಮಾನ್ಯನಿದ್ದಿಲ್ಲ. ಆತನು ಬಹು ಧೂರ್ತನಿದ್ದನು. ಆತನು ಸುಲಭ ಉರ್ದೂ ಭಾಷೆಯಿಂದ ಮಾತಾಡುತ್ತಿದ್ದನು. ಆ ಮಾತುಗಳನ್ನು ಕೊಂಗನು ಕಿವಿಗೊಟ್ಟು ಕೇಳುವನೋ ಹೇಗೆಂಬದನ್ನು ಆತನು ತಿಳಕೊಳ್ಳ ಬೇಕಾಗಿತ್ತು. ನಡನಡುವೆ ಆತನು ಕೊಂಗನನ್ನು ಕದ್ದು ನೋಡುತ್ತಿದ್ದನು. ಮೊದಲಿನ ಕೆಲವು ಶಬ್ದಗಳನ್ನು ಕೊಂಗನು ಲಕ್ಷಪೂರ್ವಕವಾಗಿ ಕೇಳಿದಹಾಗೆತೋರಿತು; ಆದರೆ ಮುಂದೆ ಆತನು ಅದರ ಸುಳುವು ಹತ್ತಗೊಡದಾದನು. ಹುಚ್ಚನಹಾಗೆ ಎತ್ತ ಕಡೆಗೋ ನೋಡ ಹತ್ತಿದನು. ಇದನ್ನು ನೋಡಿ ಮಿರ್ಝಾರಾಜನು, ಈ ಹಾದಿಯಿಂದ ತನ್ನ ಕಾರ್ಯಸಿದ್ಧಿ ಯಾಗುವದಿಲ್ಲೆಂದು ತಿಳಿದು ಮತ್ತೊಂದು ಹಾದಿಯನ್ನು ತೆಗೆದನು. ಆತನು ಅಜಯಸಿಂಗನನ್ನು ಕುರಿತು— ''ಅಜಯ, ಈ ಕಳ್ಳನನ್ನು ಪರೀಕ್ಷಿಸುವದಕ್ಕಾಗಿಯೇ ನಾನು ಬೇಕೆಂತ ಸುಲಭವಾದ ಉರ್ದೂಭಾಷೆಯಿಂದ ಮಾತಾಡಿ ನೋಡಿದೆನು; ಆದರೆ ಇವನ ಲಕ್ಷವು ಇತ್ತ ಕಡೆಗೆ ಇದ್ದಂತೆ ತೋರಲಿಲ್ಲ; ಆದ್ದರಿಂದ ಇವನು ನಿಜವಾಗಿಯೇ ಮೂಕನಿರುವನು. ಇವನು ಯಾವನೋ ಒಬ್ಬ ಭಿಕ್ಷುಕನಿರಬಹುದಾಗಿ ತೋರುತ್ತದೆ; ಸುಮ್ಮನೇ ನೀನು ಈ ನಿರಪರಾಧಿಯನ್ನು ಕೊಂದು ಪಾಪಕ್ಕೆ ಗುರಿಯಾಗುತ್ತಿದ್ದೆ. ಅಜಯಸಿಂಗ, ನೀನು ಈತನನ್ನು ಪ್ರತ್ಯಕ್ಷ ಶಿವಾಜಿಯಾಗಲಿ, ಆತನ ಅತ್ಯಂತ ವಿಶ್ವಾಸದ ಸಂಗಡಿಗನಾಗಲಿ ಇರಬಹುದೆಂದು ಭಾವಿಸಿದ್ದೆಯಲ್ಲ; ನಿನ್ನ ಆ ಭಾವನೆಯು ವ್ಯರ್ಥವಾದದ್ದೇ ಸರಿ. ಶಿವಾಜಿಯು ಅತ್ಯಂತ ಸಾಹಸಿಯಾಗಿದ್ದರೂ, ಆತನ ಸ್ವಾಮಿನಿಷ್ಠ ಸೇವಕರು ಸಣ್ಣಪುಟ್ಟ ಕೆಲಸಗಳಿಗಾಗಿ ಇಂಥ ಸಾಹಸ ಮಾಡಲಿಕ್ಕೆ ಆತನನ್ನು ಹೋಗಗೊಡಲಾರರು. ಹಾಗೆ ಹೋಗಗೊಟ್ಟಿದ್ದರೆ ಶಿವಾಜಿಯಿಂದ ಸ್ವರಾಜ್ಯಸ್ಥಾಪನೆಯ ಕಾರ್ಯವು ಸಾಧಿಸುತ್ತಿದ್ದಿಲ್ಲ, ಆತನು ಯಾವದೊಂದು ಸಾಹಸದ ಕಾರ್ಯದಲ್ಲಿ ತನ್ನ ಜೀವನವನ್ನು ಕಳಕೊಂಡು ಬಿಡುತ್ತಿದ್ದನು; ಆದ್ದರಿಂದ, ಈ ಕೊಂಗನು ಅಂಥ ದೊಡ್ಡ ಯೋಗ್ಯತೆಯ ಮನುಷ್ಯನಿರುವದಿಲ್ಲ. ಇವನು ಮೂಲತಃ ಗುಪ್ತಚಾರನೇ ಅಲ್ಲವೆಂದು ಹೇಳಬಹುದು.''

ಈ ಮೇರೆಗೆ ನುಡಿಯುತ್ತಿರುವಾಗ ಮಿರ್ಝಾರಾಜನು ನಡುನಡುವೆ ಕೊಂಗನನ್ನು ನೋಡುತ್ತಿದ್ದನು. ಸ್ವಾಭಾವಿಕವಾಗಿಯೇ ಗುಪ್ತ ರಾಜಕಾರಣದ ಮಾತುಗಳನ್ನು ಕೊಂಗನ ಹಂಗು ಇಲ್ಲದೆ ತಾನು ಆಡಹತ್ತಿದಂತೆ ಮಿರ್ಝಾರಾಜನು ನಟಿಸಹತ್ತಿದನು. ಆತನು ಅಜಿತಸಿಂಗನನ್ನು ಕುರಿತು—ಅಜಿತ, ನಾವು ದಕ್ಷಿಣಕ್ಕೆ ಬಂದು ಸ್ವಲ್ಪ ದಿವಸಗಳಾಗುವುದರೊಳಗೆ ಶಿವಾಜಿಯ

ಜನರ ಎಷ್ಟೋ ಹುಳುಕುಗಳು ಬೈಲಿಗೆ ಬಿದ್ದವು. ಶಿವಾಜಿಯ ಜನರು ಅತ್ಯಂತ ಸ್ವಾಮಿನಿಷ್ಠರೆಂತಲೂ, ದೇವೇಂದ್ರನ ಸಾಮ್ರಾಜ್ಯವನ್ನು ಕೊಟ್ಟರೂ ಅವರು ಶಿವಾಜಿಯ ಮೇಲೆ ತಿರುಗಿ ಬೀಳಲಾರರೆಂತಲೂ ನಾನು ಕೇಳಿದ್ದೆನು; ಆದರೆ ಇಲ್ಲಿ ನೋಡಿದರೆ ಒಳಗೆ ಹುರುಳಿಲ್ಲ. ಶಿವಾಜಿಯ ಸ್ವಾಮಿನಿಷ್ಠ ಸೇವಕರು ಸಹ ಜಹಗೀರುಗಳ ಆಶೆಯಿಂದ ನಮ್ಮ ಕಡೆಗೆ ಬರಲಿಕ್ಕೆ ಒಡಂಬಡ ಹತ್ತಿದ್ದಾರೆ. ಸಿಂಹಗಡ, ಪುರಂಧರ ದುರ್ಗಗಳಿಗೆ ಹೋಗುವ ಅನ್ನಸಾಮಗ್ರಿಯನ್ನು ತಡೆಯಲಿಕ್ಕೂ, ಆ ದುರ್ಗದೊಳಗಿನ ಜನರನ್ನು ಒಡೆದುಕೊಳ್ಳಲಿಕ್ಕೂ ನಮಗೆ ಆಯಾಸವಾಗುವ ಹಾಗಿಲ್ಲ. ಮರಾಟರು ಅತ್ಯಂತ ಸ್ವಾಮಿನಿಷ್ಠರೂ, ಸ್ವರಾಜ್ಯಭಕ್ತರೂ ಎಂಬ ಮಾತಿನಲ್ಲಿ ಅರ್ಥವೇನೂ ಇರುವದಿಲ್ಲ. ಕೇವಲ ಫಿತೂರಿಯಿಂದಲೇ ಶಿವಾಜಿಯ ಎಲ್ಲ ದುರ್ಗಗಳನ್ನು ಸ್ವಾಧೀನಪಡಿಸಿಕೊಳ್ಳಬೇಕೆಂದು ನಾವು ಯತ್ನಿಸಿದರೂ ಅದು ಸಾಧಿಸುವ ಹಾಗಿದೆ. ಈ ಸಿಂಹಗಡದ ಠಾಣೇದಾರನ ಸ್ಥಿತಿಯನ್ನು ನೋಡಿದರೆ, ಉಳಿದವರ ಯೋಗ್ಯತೆಯ ಪರೀಕ್ಷೆಯು ತಾನೇ ಆಗುತ್ತದೆ. ಆತನು— ''ನನಗೆ ಮನಸಬದಾರಿಯನ್ನು ಕೊಡಿಸಿದರೆ ಸಿಂಹಗಡವನ್ನು ಜಯಸಿಂಹನಿಗೆ ಒಪ್ಪಿಸುವೆನು.'' ಎಂದು ಹೇಳಿಕಳಿಸಿದ್ದಾನೆ. ಶಿವಾಜಿಯ ಪರಿವಾರದವರು ಇಂಥ ವಿಶ್ವಾಸಘಾತಕರಿರಬಹುದೆಂದು ನನಗೆ ಗೊತ್ತಿದ್ದಿಲ್ಲ; ಆದರೆ ಈಗ ಒಂದೊಂದೇ ಹುಳುಕು ಬೈಲಿಗೆ ಬೀಳಹತ್ತಿದೆ. ಪುರಂಧರ ದುರ್ಗದ ಗತಿಯೂ ಹೀಗೆಯೇ ಇರುತ್ತದೆ. ಅಲ್ಲಿಯ ಠಾಣೇದಾರನಾದ ಮುರಾರಬಾಜಿಯ ಕೀರ್ತಿಯನ್ನು ನಾನು ಬಹಳವಾಗಿ ಕೇಳಿದ್ದೆನು. ಆದರೆ ಆತನೂ ಈಗ ನಮ್ಮ ಕಡೆಗೆ ಒಡೆದು ಬರುವಹಾಗಿದ್ದಾನೆ. ಆತನು ತನ್ನ ಪಂತನ ಮುಂದೆ ''ನಾವು ಮೂಲತಃ ವಿಜಾಪುರದ ಬಾದಶಹರ ಸೇವಕರು ಬಾದಶಾಹಿಯ ಅನ್ನದಿಂದಲೇ ನಾವು ದೊಡ್ಡವರಾಗಿದ್ದೇವೆ; ನಾವು ಬಾದಶಹನ ಕಡೆಯಿಂದ ಒಡೆದು ಶಿವಾಜಿಯನ್ನು ಕೂಡಿರುವೆವಷ್ಟೇ? ಅದರಂತೆ ಈಗ ಶಿವಾಜಿಯಿಂದ ಒಡೆದು ಮೊಗಲರ ಕಡೆಗೆ ಹೋಗೋಣ! ಶಿವಾಜಿಯ ಅಶಕ್ಯವಾದ ಸ್ವದೇಶೋದ್ಧಾರದ ಕಾರ್ಯದ ಹುಚ್ಚಿನಲ್ಲಿ ಸೇರಿ ವ್ಯರ್ಥ ಜೀವಕೊಳ್ಳುವಲ್ಲಿ ಜಾಣತನವೇನು? ಶಿವಾಜಿಯ ಸಲುವಾಗಿ ನಮ್ಮ ಹೆಂಡಿರು-ಮಕ್ಕಳನ್ನು ಅನ್ನಕ್ಕೆ ಗತಿಯಿಲ್ಲದವರನ್ನು ಯಾಕೆ ಮಾಡಬೇಕು? ಬಾದಶಹನು ನಮಗೆ ಈ ಪುರಂದರ ದುರ್ಗವನ್ನೂ, ಅದರ ಸುತ್ತುಮುತ್ತಲಿನ ಪ್ರದೇಶವನ್ನೂ ಇನಾಮು ಹಾಕಿಕೊಟ್ಟರೆ, ನಾನು ಯಾವತ್ತೂ ಮಾವಳರನ್ನು ಬಾದಶಹನಿಗೆ ಒಪ್ಪಿಸುತ್ತೇನೆ'' ಎಂದು ಹೇಳಿದನಂತೆ. ಆತನ ಪಂತನೇ ನನ್ನ ಬಳಿಗೆ ಬಂದು ಈ ಮಾತನ್ನು ತಿಳಿಸಿದನು. ಅಜಿತ, ನಾನು ದಕ್ಷಿಣಕ್ಕೆ ಬಂದದ್ದು ವ್ಯರ್ಥವಾಗಲಾರದು. ಸುಲಭ ರೀತಿಯಿಂದ ಬಾದಶಹರ ಕಾರ್ಯವನ್ನು ಸಂಪೂರ್ಣವಾಗಿ ಮಾಡಿಕೊಂಡು, ಶಿವಾಜಿಯನ್ನು ಆಗ್ರಾಪಟ್ಟಣಕ್ಕೆ ಸೆರೆಹಿಡಕೊಂಡು ಹೋಗಬಹುದು. ನಾವು ಶಿವಾಜಿಯ ಒಡಂಬಡಿಕೆಯ ಮಾತುಗಳಿಗೆ ಮರುಳಾಗದಿದ್ದರಾಯಿತು. ಆತನು ಅತ್ಯಂತ ಸುಪಿಮಾತಿನವನು, ಠಕ್ಕನು, ಷಾಯಿಸ್ತೇಖಾನ, ಅಫಜುಲಖಾನ, ಚಂದ್ರರಾವ, ಮೋರೆ ಮೊದಲಾದವರು ಮೋಸಹೋದಂತೆ ನಾವು ಮೋಸಹೋಗದೆ ಎಚ್ಚರದಿಂದಿದ್ದರಾಯಿತು.

ಧೂರ್ತನಾದ ಜಯಸಿಂಗನು ಹೀಗೆ ಮಾತಾಡುತ್ತಿರುವಾಗ ಕೊಂಗನ ಮುಖಮುದ್ರೆಯನ್ನು ನಡನಡುವೆ ಕದ್ದು ನೋಡುತ್ತಿದ್ದನು. ಶಿವಾಜಿಯ ಪರಿವಾರವು ಅತ್ಯಂತ ಸ್ವಾಮಿನಿಷ್ಠವಾದದ್ದರಿಂದ, ಇಂಥ ಮಾತುಗಳನ್ನು ಕೇಳಿ ಆತನ ಪರಿವಾರದವರಿಗೆ ಸಂತಾಪವಾಗದ ಹೋಗದೆಂದು ಆ ವೃದ್ಧ ರಜಪೂತವೀರನು ತಿಳಿಕೊಂಡಿದ್ದನು. ಶಿವಾಜಿಯ, ಹಾಗು ಆತನ ಪರಿವಾರದ ಜನರ ನಿಜವಾದ ಯೋಗ್ಯತೆಯು ಮಿರ್ಝಾರಾಜನಿಗೆ ಚನ್ನಾಗಿ ಗೊತ್ತಿತ್ತು. ಶಿವಾಜಿಯು ಬೇರೆಯವರ ಜನರನ್ನು ಒಡಕೊಳ್ಳುತ್ತಿದ್ದನು; ಆದರೆ ಶಿವಾಜಿಯ ಜನರನ್ನು ಒಡಕೊಳ್ಳುವದು ಬೇರೆಯವರಿಗೆ ತೀರ ಅಸುಖವೆಂಬದನ್ನು ಮಿರ್ಝಾರಾಜನು ತಿಳಕೊಂಡಿದ್ದನು. ತನ್ನ ಮಾತುಗಳನ್ನು ಕೇಳಿ ಕೊಂಗನ ಮುಖಲಕ್ಷಣದಲ್ಲಿ ಹೆಚ್ಚು-ಕಡಿಮೆಯಾದದ್ದನ್ನು ಆ ಧೂರ್ತನು ಕಂಡುಹಿಡಿದನು; ಆದ್ದರಿಂದ ಆತನು ಮತ್ತೆ ಅಜಿತಸಿಂಗನನ್ನು ಕುರಿತು— ''ಅಜಿತ, ದುಷ್ಟ ಶಿವಾಜಿಯ ಪರಿವಾರದವರ ಒಂದೊಂದು ಚರಿತ್ರವನ್ನು ಕೇಳಿದವರು ಬೆರಳು ಕಚ್ಚಿಕೊಳ್ಳಬಹುದಾಗಿದೆ. ನಮ್ಮಂಥ ಸ್ವಾಮಿನಿಷ್ಠ ರಜಪೂತ ವೀರರಿಗಂತು ಶಿವಾಜಿಯ, ಹಾಗು ಆತನ ಪರಿವಾರದವರ ಈ ನೀಚತನವನ್ನು ನೋಡಿ ಸಂತಾಪವಾಗುತ್ತದೆ. ಅಜಿತಸಿಂಗ, ಶಿವಾಜಿಯ ಮೋಸದ ಕೃತಿಗಳಿಗಂತು ನಾನು ಮರುಳಾಗುವ ಹಾಗಿಲ್ಲ ಆತನ ಜನರನ್ನು ಒಬ್ಬೊಬ್ಬರನ್ನಾಗಿ ನನ್ನ ಕಡೆಗೆ ಮಾಡಿಕೊಂಡು, ಆತನ ಮಂತ್ರವನ್ನು ಆತನಿಗೇ ತಿರುಗಿ ಹೂಡುವೆನು. ಶಿವಾಜಿಯನ್ನು ನಂಬಿ ಹಿಂದಿನವರು ಅನುಭವಿಸಿದ್ದು ನನ್ನ ಕಣ್ಣಿಗೆ ಕಟ್ಟಿರುತ್ತದೆ. ಬಹಳ ಹೇಳುವದೇನು, ನೇತಾಜಿ ಪಾಲಕರ, ಪ್ರತಾಪರಾವ ಗುಜರಂಥವರು ನಮ್ಮ ಕಡೆಗೆ ಬಂದ ಬಳಿಕ ಉಳಿಯಿತೇನು? ಇವರಿಬ್ಬರು ನಮ್ಮ ಕಡೆಗೆ ಬಂದರೆ ಶಿವಾಜಿಯ ಕಸವು ಅರ್ಧಕ್ಕರ್ಧ ಕಡಿಮೆಯಾಗುವದು. ಇವರಿಬ್ಬರು ನನ್ನ ಕಡೆಗೆ ಬರುವ ವಿಷಯವಾಗಿ ಸ್ವಲ್ಪವೂ ಸಂಶಯವಿಲ್ಲ, ನಿಶ್ಚಯವಾಗಿ ಬರುವರು; ಆಮೇಲೆ ಪುಂಡ ಶಿವಾಜಿಯ ಗತಿಯೇ ನಾಗುತ್ತದೆಂಬದನ್ನು ನೀನೇ ನೋಡವಿಯಂತೆ'' ಎಂದು ನುಡಿಯುತ್ತಿರಲು, ಕೊಂಗನ ಮುಖದಿಂದ ಅಕಲ್ಪಿತವಾಗಿ—''ತೀರ ಸುಳ್ಳು, ಇವರಿಬ್ಬರು ಮಹಾರಾಜರಿಂದ ಒಡೆದು ಬರುವದು ತೀರ ಸುಳ್ಳು. ಇಂಥ ವ್ಯರ್ಥ ಮಾತುಗಳನ್ನು ಯಾಕೆ ಆಡುತ್ತೀರಿ'' ಎಂಬ ಶಬ್ದಗಳು ಹೊರಟವು. ಆಗ ಕೊಂಗನ ಮೋರೆಯು ಸಿಟ್ಟಿನಿಂದ ಕೆಂಪಾಗಿತ್ತು, ಕಣ್ಣುಗಳು ಕೆಂಡದಂತಾಗಿದ್ದವು. ಕೈಗಳು ಥರ ಥರ ನಡುಗುತ್ತಿದ್ದವು. ಸಂತಾಪದಿಂದ ಆತನು ಜಯಸಿಂಗನ ಮೇಲೆ ದುಮುಕುವ ವಿಷಯವಾಗಿ ಆತುರಪಡುತ್ತಿರುವಂತೆ ತೋರುತ್ತಿತ್ತು. ಇದನ್ನು ನೋಡಿ ಅಜಿತಸಿಂಗನು ಬೆರಗಾಗಿ ಎವೆಯಿಕ್ಕದೆ ಕೊಂಗನನ್ನು ನೋಡಹತ್ತಿದನು. ಆಗ ಮಿರ್ಝಾರಾಜನು ಗಹಗಹಿಸಿ ನಕ್ಕು ಕೊಂಗನನ್ನು ಕುರಿತು— ಓಹೋಹೋ! ಒಟ್ಟಿಗೆ ಜಯಸಿಂಗನ ಹತ್ತರ ಮೂಕರನ್ನು ಮಾತಾಡಿಸುವ ಮಂತ್ರವೂ, ಕೊಂಗನಿಗೆ ಹಿಂದುಸ್ಥಾನಿಯನ್ನು ಕಲಿಸುವ ವಿದ್ಯೆಯೂ ಇರುತ್ತದೆಂದ ಹಾಗಾಯಿತು. ತಮ್ಮಗಳಿರಾ, ತರುಣರು ನೀವು ಹೀಗೆ ಮೋಸಹೋಗುವದರಲ್ಲಿ ಆಶ್ಚರ್ಯವಿಲ್ಲ. ಇಷ್ಟು ದಿವಸ ಹಲವು ಪ್ರಸಂಗಗಳನ್ನು ಅನುಭವಿಸಿ ಗಡ್ಡಬೆಳ್ಳಗಾಗಿ ಹೋಗಿದ್ದ ನಮ್ಮಂಥ ವೃದ್ಧರ ಯೋಗ್ಯತೆಯು, ಸಾಮಾನ್ಯವೆಂದು ನೀವು ತಿಳಿಯಬೇಡಿರಿ. ತರುಣರು ನೀವು

ಇಷ್ಟು ಮಾಡುವದೇ ಹೆಚ್ಚು. ನಿಮ್ಮ ಉದ್ದೇಶವು ಒಳ್ಳೆಯದೆಂಬದನ್ನು ನಾವು ಬಲ್ಲೆವು; ಆದರೆ ನಮ್ಮಂಥವರನ್ನು ಮೋಸಗೊಳಿಸುವ ಮಬ್ಬಿಗೆ ನೀವು ಬೀಳತಕ್ಕದ್ದಲ್ಲ. ನಿಮ್ಮಂತೆ ಕಸಕಾಗಿದ್ದ ಜನರಮೇಲೆ ನಿಮ್ಮ ಮಂತ್ರವು ನಡೆಯಿತು; ಆದರೆ ನಮ್ಮ ಮೇಲೆ ಅದು ಹ್ಯಾಗೆ ನಡೆಯಬೇಕು? ಒಬ್ಬನು ವಿದ್ವಾನ್ ಜ್ಯೋತಿಷಿಯಾಗಿ ಬಂದು ನಮ್ಮ ಸೆರೆಯಲ್ಲಿ ಬಿದ್ದಿರುತ್ತಾನೆ. ಈಗ ಕೊಂಗನಾಗಿ ಬಂದಿರುವ ನೀನು ಸೆರೆಮನೆಯನ್ನು ಸೇರು ಹೋಗು. ನಾನು ಈಗ ನಿಮ್ಮ ಉಸಾಬರಿಗೆ ಬರುವದಿಲ್ಲ. ನೀನು ನಿನ್ನ ಹೆಸರುದೆಸೆಗಳನ್ನು ನನಗೆ ಹೇಳುವ ಕಾರಣವಿಲ್ಲ. ಅವನ್ನು ಹೇಳೆಂದು ನಿನಗೆ ನಾನು ಆಗ್ರಹವನ್ನೂ ಮಾಡುವದಿಲ್ಲ; ಆದರೆ ನನ್ನಿಂದ ನಿನ್ನ ಕೂದಲುಕೂಡ ಕೊಂಕಲಾರದೆಂದು ತಿಳಿದು, ನನ್ನ ಪ್ರತಿಬಂಧದಲ್ಲಿರು ಹೋಗು. ಹಿಂದಿನಿಂದ ಹೆಚ್ಚಿನ ವಿಚಾರವು! ಎಂದು ನುಡಿಯಲು, ಕೊಂಗನು ತನ್ನ ದಡ್ಡತನಕ್ಕಾಗಿ ತನ್ನನ್ನು ಹಳಿದುಕೊಳ್ಳುತ್ತ ಮೋರೆ ತಗ್ಗಿಸಿಕೊಂಡು, ನಿಂತನು. ಅಷ್ಟರಲ್ಲಿ ಮಿರ್ಝಾರಾಜನ ಸೇವಕರು ಆತನನ್ನು ಕರೆದೊಯ್ದು ಸೆರೆಯಲ್ಲಿ ಹಾಕಿದರು. ಮಿರ್ಝಾರಾಜನ ಅಪ್ಪಣೆಯಂತೆ ಕೊಂಗನ ಮರ್ಯಾದೆಗೆ ಬಾಧೆಬಾರದಂತೆ, ಆತನ ಆದರೋಪಚಾರಗಳು ಉತ್ತಮ ರೀತಿಯಿಂದ ನಡಿಸಲ್ಪಡಹತ್ತಿದವು.

## ದಿಲೇರಖಾನನು

ಜಯಸಿಂಗನು ತಾನು ಸಿಂಹಗಡವನ್ನು ಮುತ್ತಿ ಪುರಂಧರ ದುರ್ಗವನ್ನು ಮುತ್ತುವದಕ್ಕಾಗಿ ದಿಲೇರಖಾನನನ್ನು ಕಳಿಸಿದ್ದನ್ನು ವಾಚಕರು ಬಲ್ಲರಷ್ಟೆ? ದಿಲೇರಖಾನನು ಬಲು ಒಗರಿಸವನೆಂದು ನಾವು ಹಿಂದೆಯೊಮ್ಮೆ ಹೇಳಿರುವೆವು ಖಾನನಿಗೆ ಮರಾಟರ ಲಕ್ಷವಿದ್ದಿಲ್ಲ. ಪುರಂದರದ ದುರ್ಗವನ್ನು ಹಾಹಾ ಅನ್ನುವದರೊಳಗೆ ಸ್ವಾಧೀನಪಡಿಸಿಕೊಳ್ಳುವೆನೆಂದು ಬಗೆದು, ಆತನು ತನ್ನ ಪ್ರಚಂಡ ಸೈನ್ಯದೊಡನೆ ಅದನ್ನು ಮುತ್ತಿದನು; ಆದರೆ ಎರಡೇ ದಿವಸಗಳಲ್ಲಿ ತನ್ನ ಸೈನ್ಯಕ್ಕೆ ಅನ್ನಸಾಮಗ್ರಿಯು ಮುಟ್ಟದಂತೆ ಮರಾಟರು ಮಾಡಲು, ಖಾನನ ಕಣ್ಣುಗಳು ತೆರೆದವು. ವಾಸ್ತವವಾಗಿ ನೋಡಿದರೆ ಖಾನನ ಪ್ರಚಂಡ ಸೈನ್ಯದ ಮುಂದೆ ಮರಾಟರ ಚಿಕ್ಕಸೈನ್ಯದ ಆಟವೇನೂ ನಡೆಯಬಾರದು; ಆದರೆ ಸ್ವದೇಶೋದ್ಧಾರಕ್ಕಾಗಿ ಶಿವರಾಯನ ಆಡಳಿತದಲ್ಲಿ ಜೀವನದ ಹಂಗುದೊರೆದು ಟೊಂಕಕಟ್ಟಿದ ನಿಸ್ಪೃಹನಾದ ಮರಾಟನೊಬ್ಬನು, ಹತ್ತುಜನ ಮೊಗಲರಿಗೆ ಭಾರಿಯಾಗುತ್ತಿದ್ದನು. ಮರಾಟರ ಕಗ್ಗತನ, ಚಟುವಟಿಕೆ, ಸ್ವಾಮಿನಿಷ್ಠೆ, ಸ್ವದೇಶಾಭಿಮಾನ ಇವು ಮೊಗಲರ ಎದೆಗುಂಡಿಗೆಗಳನ್ನು ಅರಳಿಸುತ್ತಿದ್ದವು. ತಮ್ಮ ಸ್ವಾಮಿ ಕಾರ್ಯವೇ ತಮ್ಮ ಕಾರ್ಯವು, ತಮ್ಮ ಸ್ವಾಮಿಕಾರ್ಯದಲ್ಲಿ ಮಡಿಯುವದೇ ತಮ್ಮ ಪರಮ ಪುರುಷಾರ್ಥವು, ಎಂದು ಮರಾಟರು ತಿಳಿದಿದ್ದರು. ತಮ್ಮ ಪ್ರಭುವಿಗೊದಗಿದ ವಿಪತ್ತಿನಿಂದ ಮರಾಟರು ಕೈಕಾಲುಗೆಡಲಿಲ್ಲ, ತಮ್ಮ ಸ್ವಾಮಿಯನ್ನು ಸಂತೋಷಪಡಿಸಿ, ವೀರಸ್ವರ್ಗವನ್ನು

ಪಡೆಯುವ ಕಾಲವು ಸಮೀಪಿಸಿತೆಂದು ತಿಳಿದು ತಮ್ಮ ತಮ್ಮ ಕರ್ತವ್ಯಗಳನ್ನು ಜರುಗಿಸುವ ವಿಷಯದಲ್ಲಿ ಅವರು ಉತ್ಸಾಹಗೊಂಡರು. ಇಂಥ ತೇಜಸ್ವಿಗಳ ತೇಜಸ್ಸಿನಿಂದ ದಿಲೇರಖಾನನ ಕಣ್ಣುಗಳು ಕುಕ್ಕಹತ್ತಿದ್ದರಲ್ಲಿ ಆಶ್ಚರ್ಯವೇನು? ಸ್ವಪರಾಕ್ರಮವನ್ನು ತೋರಿಸಲು ಆತುರಪಡುತ್ತಿರುವ ಮರಾಟರಿಗೆ, ಪುರಂದರ ದುರ್ಗದಂಥ ಪ್ರಚಂಡ ದುರ್ಗವು ಆಶ್ರಯಸ್ಥಾನವಾಗಿರಲು, ಅವರು ದಿಲೇರಖಾನನಿಗೆ ಸೊಪ್ಪುಹಾಕುವರೆ? ಖಾನನು ಬೆದರಿದನು. ಮರಾಟರನ್ನು ಹಣಿಯುವದು, ತಾನು ಈ ಮೊದಲು ತಿಳಿದುಕೊಂಡಷ್ಟು ಸುಲಭವಲ್ಲೆಂದು ಆತನು ಯೋಚಿಸತೊಡಗಿದನು. ದುರ್ಗವು ಅತ್ಯಂತ; ದುರ್ಗಮವು; ತನ್ನ ಸೈನ್ಯದವರು ಹಾದಿಬಟ್ಟೆಗಳನ್ನು ಅರಿಯದವರು. ಹೀಗಿರುವಾಗ ಹಿಂದುಮುಂದಿನ ವಿಚಾರವಿಲ್ಲದೆ ತಾನು ಹೆಮ್ಮೆಯ ಮಾತುಗಳನ್ನಾಡಿ ದುರ್ಗವ ಮುತ್ತಿದ್ದು ನೆಟ್ಟಗಾಗಲಿಲ್ಲೆಂದು ಆತನು ಮನಸ್ಸಿನಲ್ಲಿ ಮಿಡುಕಹತ್ತಿದನು; ಮಿರ್ಝಾರಾಜನಹಿತದ ಮಾತುಗಳ ಮಹತ್ವವು ಖಾನನಿಗೆ ಈಗ ತೋರಹತ್ತಿತು; ಆದರೆ ಯಾವಾಗಲೂ ಅಭಿಮಾನ ದಿಂದ ಮೆರೆಯುವ ಖಾನನು ಇದನ್ನೇನೂ ಹೊರಗೆ ತೋರಗೊಡದೆ, ವಿಶ್ವಪ್ರಯತ್ನದಿಂದ ದುರ್ಗವನ್ನು ಸ್ವಾಧೀನಪಡಿಸಿಕೊಂಡೆ ತೀರಬೇಕೆಂದು ಮೂರು ನಾಲ್ಕು ಸಾರೆ ಏರಿಹೋದನು; ಆದರೆ ಪ್ರತಿ ಒಂದು ಸಾರೆ ಮರಾಟರು ಆತನ ಆಟವನ್ನು ನಡೆಯಗೊಡದೆ ಹಣ್ಣು ಮಾಡಿದರು. ಇತ್ತ ಅನ್ನಸಾಮಗ್ರಿ ಬರುವದಂತು ನಿಂತುಹೋಗಿತ್ತು ಈ ಸ್ಥಿತಿಯಲ್ಲಿ ಖಾನನು ದುರ್ಗವನ್ನು ಮುತ್ತಿಕೊಂಡು, ಮುಂದೆ ಏನು ಮಾಡಬೇಕೆಂದು ಎಣಿಕೆ ಹಾಕಹತ್ತಿದನು.

ಒಂದು ದಿನ ಕಗ್ಗತ್ತಲೆಯ ಮಧ್ಯರಾತ್ರಿಯಾಗಿದೆ. ಖಾನನು ತನ್ನ ಡೆರೆಯಲ್ಲಿ ಗುಡುಗುಡಿ ಯನ್ನು ಸೇದುತ್ತ ಕಾಲು ಚಾಚಿಕೊಂಡು ಲೋಡಿಗೆ ಒರಗಿದ್ದಾನೆ. ಸಮೆಗಳಲ್ಲಿ ದೀಪಗಳು ನಿಚ್ಚಳವಾಗಿ ಉರಿಯುತ್ತಲಿವೆ. ಮಧ್ಯರಾತ್ರಿಯು ಮೀರುತ್ತ ಬಂದಂತೆ ಛಾವಣಿಯಲ್ಲಿಯ ಗದ್ದಲವು ಕಡಿಮೆಯಾಗಹತ್ತಿದೆ. ಪಹರೆಯವರ ಉಚ್ಚಸ್ವರಗಳು ಗಂಭೀರವಾಗಿ ಕೇಳತೊಡಗಿವೆ. ಈ ಪುಂಡ ಮರಾಟರನ್ನು ಯಾವ ಬಗೆಯಿಂದ ದಂಡಿಸಬೇಕೆಂದು ಖಾನನು ಯೋಚಿಸ ತೊಡಗಿದ್ದಾನೆ. ಅಷ್ಟರಲ್ಲಿ ಆತನ ಕಿವಿಗೆ ಕಲಕಲ ಧ್ವನಿಯು ಕೇಳಿಸತೊಡಗಿತು. ಈ ಮೊದಲೇ ಮರಾಟರು ಖಾನನಿಗೆ ಚನ್ನಾಗಿ ಕೈತೋರಿಸಿದ್ದರಿಂದ, ಆತನು ಗುಡುಗುಡಿ ಸೇದುವದನ್ನು ಬಿಟ್ಟು ವಿಚಾರಮಗ್ನನಾದನು. ಇದು ಪುಂಡ ಮರಾಟರ ಬಂಡು ಇರಬಹುದೇ? ಇವರೇನು ಭೂಮಿ ಯಿಂದ ಎದ್ದರೋ, ಆಕಾಶದಿಂದ ಇಳಿದರೋ, ದಿಕ್ಕುಗಳಿಂದ ಹೊರಬಿದ್ದು ಬಂದರೋ? ಇವರು ಬಂದಿದ್ದಾದರೂ ಎಲ್ಲಿಂದ? ನಮ್ಮ ಪ್ರಚಂಡ ಸೈನ್ಯದ ಬಲವನ್ನು ಲೆಕ್ಕಿಸದೆ ನಮ್ಮ ಮೇಲೆ ಹೀಗೆ ಸಾಗಿಬರುವ ಇವರ ಧೈರ್ಯವೆಷ್ಟಿರಬಹುದು! ನೋಡೋಣ, ಇವರ ಸೊಕ್ಕಾದರೂ ಎಷ್ಟಿರುತ್ತದೆ ನೋಡೋಣ. ಈಗ ಹ್ಯಾಗಾದರೂ ನಮ್ಮ ಮೇಲೆಯೇ ಅವರು ಏರಿಬರುತ್ತಿರುವರಷ್ಟೇ? ಬರಲಿ, ಅವರ ಮಗ್ಗಲು ಮುರಿಯುವೆನು. ದುರ್ಗದ ಆಶ್ರಯವನ್ನು ಬಿಟ್ಟುಬಂದ ಇವರು ತಿರುಗಿ ಹೋಗುವರೆಯೇ? ಎಂದು ನುಡಿಯುತ್ತ ಖಾನನು ಹೊರಗೆ ಬಂದು ನೋಡಲು, ಸಹಸ್ರಾವಧಿ ಪಿಲಾಲುಗಳು ಪುರಂದರ ದುರ್ಗದಿಂದ ಕೆಳಗಿಳಿದು ಬರುತ್ತಿರುವದು ಆತನ ಕಣ್ಣಿಗೆ ಬಿದ್ದಿತು. ಅದನ್ನು ನೋಡಿ ಖಾನನು ಬೆರಗಾದನು. ಮರಾಟರ

ಗರ್ಜನೆಯ ಗಂಭೀರಧ್ವನಿಯು ಸುತ್ತುಮುತ್ತಲಿನ ಗುಡ್ಡಗಳಲ್ಲಿ ಪ್ರತಿಧ್ವನಿಗೊಂಡು ಭಯವನ್ನುಂಟು ಮಾಡುತ್ತಿತ್ತು. ಆಗ್ಗೆ ಖಾನನು ಸಂತಾಪದಿಂದ ಹಲ್ಲುಕಡೆಯುತ್ತ ಮರಾಟರು ದುರ್ಗವಿಳಿದು ಬರುತ್ತಿರುವದನ್ನು ನೋಡುತ್ತ ನಿಂತುಕೊಂಡನು. ಸ್ವಲ್ಪಹೊತ್ತಿನಲ್ಲಿ ಮರಾಟರು ದುರ್ಗವನ್ನು ಇಳಿದು, ಖಾನನ ಛಾವಣಿಯ ಕಡೆಗೇ ಸಾಗಿ ಬರಹತ್ತಿದರು. ಇದನ್ನು ನೋಡಿ ಖಾನನು ಉಬ್ಬಿದನು. ದುರ್ಗದ ಆಶ್ರಯದಿಂದ ಈವರೆಗೆ ತನಗೆ ಚಳ್ಳಿಹಣ್ಣು ತಿನಿಸುತ್ತಿದ್ದ ಮರಾಟರು, ಈಗ ದುರ್ಗವಿಳಿದು ಬೈಲಿಗೆ ಬಂದಿರುವದರಿಂದ ಇವರ ಮುಗ್ಗಲು ಮುರಿಯೋಣವೆಂದು ಆತನು ಯೋಚಿಸಿದನು. ಆತನು ಕೊಂಬು ಊದಿ, ತನ್ನ ಸೈನ್ಯವನ್ನು ಜಾಗ್ರತಗೊಳಿಸಿದನು. ಆಗ ನಿದ್ರೆಯಿಂದ ಹೊರಳಾಡುತ್ತಿದ್ದ ಇಲ್ಲವೆ ನಾಚುರಂಗುಗಳಲ್ಲಿ ಮಗ್ನರಾಗಿದ್ದ ಮೊಗಲ ಸೈನಿಕರು ಲಗುಬಗೆಯಿಂದ ತಮ್ಮ ತಮ್ಮ ಶಸ್ತ್ರಗಳನ್ನು ಸಾವರಿಸಿಕೊಳ್ಳಹತ್ತಿದರು. ಖಾನನ ಸೈನ್ಯದಲ್ಲಿ ಗಲಿಬಿಲಿಯು ಉತ್ಪನ್ನವಾಯಿತು. ಮೊಗಲ ಸೈನ್ಯವು ಸುಖಕ್ಕೆ ಮೆಚ್ಚಿದ್ದಾದ್ದರಿಂದ ಇದನ್ನು ಆಲಸ್ಯವು ಮುಸುಕಿಕೊಂಡಿತ್ತು. ಆಲಸ್ಯದಿಂದ ಅಮೃತವು ವಿಷವಾಗುತ್ತದೆಂಬ ಮಾತು ಪ್ರಸಿದ್ಧವಾಗಿರುವದು. ಮರಾಟರ ಚಟುವಟಿಕೆಯ ತಾಪವನ್ನು ಮೊಗಲರು ಈವರೆಗೆ ಅನುಭವಿಸಿದ್ದರಾದರೂ, ಅವರು ಆಲಸ್ಯದಿಂದ ರಾತ್ರಿ ಎಚ್ಚರ ಪಡುತ್ತಿದ್ದಿಲ್ಲ. ಖಾನನಿಗೂ ಆತನ ದಂಡಾಳುಗಳಿಗೂ ತಮ್ಮ ಪ್ರಚಂಡಬಲದ ಹೆಮ್ಮೆ ಬಹಳ. ಈ ಹೆಮ್ಮೆಯ ಮೂಲಕವಾಗಿಯೇ ಅವರು ಮೇಲೆ ಮೇಲೆ ಮರಾಟರಿಂದ ಪೆಟ್ಟು ತಿನ್ನಬೇಕಾಗುತ್ತಿತ್ತು. ಅವರು ಈಗ ಗಾಬರಿಯಾಗಿ ಆಯುಧಗಳನ್ನು ತಕ್ಕೊಳ್ಳುತ್ತ ''ಕ್ಯಾ ಹೈ, ಕ್ಯಾಹೈ'' ಎಂದು ಕೇಳಹತ್ತಿದರು. ಮೊಗಲಸೈನ್ಯದ ಆ ದುರವಸ್ಥೆಯನ್ನು ನೋಡಿ ಯಾರಿಗಾದರೂ ನಗೆ ಬರಬಹುದಾಗಿತ್ತು. ತಮ್ಮ ಎದುರಿಗೆ ಸಾಗಿಬರುತ್ತಿರುವ ಮರಾಟರ ಮೇಲೆ ಸಾಗಿ ಹೋಗಬೇಕೆಂದು ಖಾನನು ತನ್ನ ಸೈನ್ಯದವರಿಗೆ ಸೂಚಿಸಿದನು. ಮೊಗಲರು ಹೊರಗೆ ಎಷ್ಟು ಡೌಲು ತೋರಿಸಿದರೂ, ಮರಾಟರಿಗೆ ಎದುರಾಗುವ ಪ್ರಸಂಗದಲ್ಲಿ ಅವರ ಎದೆಯು ನಡುಗುತ್ತಿತ್ತು. ಅಪ್ಪಣೆಯಂತೆ ಅವರು ಒತ್ತರದಿಂದ ಸಾಗಹತ್ತಿದರು. ತಮ್ಮ ಪ್ರಚಂಡ ಸೈನ್ಯವು ಹಾ ಹಾ ಅನ್ನುವದರೊಳಗಾಗಿ ಈ ಅಲ್ಪ ಜನರ ದೂಳ ಹಾರಿಸಬಹುದೆಂಬ ಉತ್ಸಾಹದಿಂದ ಅವರು ನಡೆದಿದ್ದರು. ಈ ಪುಂಡರಲ್ಲಿ ಒಬ್ಬರನ್ನೂ ಉಳಿಸದೆ ತುಂಡರಿಸಿ ಚಲ್ಲಬೇಕೆಂಬ ಸಿಟ್ಟಿನಿಂದ, ದಿಲೇರಖಾನನು ಛಾವಣಿಯೊಳಗಿನ ಸೈನ್ಯವನ್ನೆಲ್ಲ ಹೊರಡಿಸಿಕೊಂಡು ಹೊರಟಿದ್ದನೆಂದು ಹೇಳಬಹುದು. ಛಾವಣಿಯಲ್ಲಿ ದಂಡಾಳುಗಳು ತೀರ ಸ್ವಲ್ಪು ಜನರಿದ್ದು, ಬಾಜಾರಬುಣಗಿನವರೇ ವಿಶೇಷವಾಗಿ ಇದ್ದರು. ತಮ್ಮ ಛಾವಣಿಯ ಮೇಲೆ ಬೀಳುವ ಧೈರ್ಯವು ಯಾರಿಗಾಗುವದೆಂಬ ಹೆಮ್ಮೆಯಿಂದ, ಖಾನನು ತನ್ನ ಜನಾನಖಾನೆಯ ಸಂರಕ್ಷಣೆಯನ್ನು ಕೂಡಲಕ್ಷಿಸಲಿಲ್ಲ.

ಈ ಬಗೆಯಾಗಿ ಖಾನನು ತನ್ನ ಸೈನ್ಯವನ್ನು ಸಾಗಿಸಿಕೊಂಡು ಹೋಗುತ್ತಿರಲು, ಎದುರಿಗೆ ಬರುತ್ತಿದ್ದ ಮರಾಟರ ಸೈನ್ಯವು ಒಮ್ಮೆಲೆ ಎಡಕ್ಕೆ ಹೊರಳಿ ದುರ್ಗದ ಬುಡದ ಕಡೆಗೆ ಸಾಗಹತ್ತಿತು. ಖಾನನೂ ಅತ್ತ ಕಡೆಗೇ ಸಾಗಿದನು. ಮರಾಟರು ತಮ್ಮನ್ನು ನೋಡಿ ಅಂಜಿ ಹೀಗೆ

ಹೊರಳಿದರೆಂದು ತಿಳಿದು ಆತನು ಒತ್ತರದಿಂದ ಅತ್ತಕಡೆಗೆ ಸೈನ್ಯವನ್ನು ಸಾಗಿಸಿದನು. ಖಾನನು ಸ್ವತಃ ಸೈನ್ಯದ ಮುಂದೆ ನಡೆದಿದ್ದನು. ಆತನು ಈವರೆಗೆ ಐಧಾರುಸಾರೆ ದುರ್ಗದ ಮೇಲೆ ಏರಿಹೋಗಿ, ಕೈಸಾಗದೆ ಹಲ್ಲಲ್ಲಿ ಕಡ್ಡಿ ಕಚ್ಚಿಕೊಂಡು ತಿರುಗಿ ಬಂದಿದ್ದನು. ಆತನು ಮನಸ್ಸಿನಲ್ಲಿ– ತನ್ನ ಎದುರಿಗೆ ಹಿಲಾಲುಗಳ ಬೆಳಕಿನಲ್ಲಿ ಬರುತ್ತಿರುವವರು ಬಹಳವಾದರೆ 500 ಜನರಿರ ಬಹುದು; ಇವರಂತು ನನ್ನ ಕೈಯಲ್ಲಿ ಸಿಕ್ಕು ಹೋಗಿರುವರು. ಇನ್ನು ದುರ್ಗದಲ್ಲಿ ಎಷ್ಟು ಜನರು ಉಳಿದಿರಬಹುದು? ನನ್ನ ಪ್ರಚಂಡ ಸೈನ್ಯಕ್ಕೆ ಅವರು ಈಡಾಗುವರೆ? ನಮ್ಮ ಕೈಯಲ್ಲಿ ಸಿಕ್ಕಿರುವ ಈ ಜನರನ್ನು ಮೊದಲು ತುಂಡರಿಸಿ, ಇದೇ ಕೈಯಲ್ಲಿ ದುರ್ಗದ ಮೇಲೆ ಏರಿ ಹೋಗೋಣ. ಈ ಪ್ರಸಂಗದಲ್ಲಿ ನಾನು ಪರಾಕ್ರಮವನ್ನು ಪ್ರಕಟಿಸಿದ್ದರೆ ಮರ್ಯಾದೆಯುಳಿಯಲಿಕ್ಕಿಲ್ಲ, ಮಿರ್ಝಾರಾಜನ ಮುಂದೆ ತಲೆಯೆತ್ತಿ ಮಾತಾಡಲಿಕ್ಕೆ ನನಗೆ ಮಾರ್ಗವಿಲ್ಲದಂತಾದೀತು ಎಂದು ವಿಚಾರಿಸುತ್ತ ಆತನು ಭರದಿಂದ ಸೈನ್ಯವನ್ನು ಸಾಗಿಸಿಕೊಂಡು ನಡೆದನು. ಮುಂದೆ ಸ್ವಲ್ಪ ದೂರ ಹೋದಮೇಲೆ ಮರಾಟರ ಸೈನ್ಯವು ದುರ್ಗದ ಬುಡದಲ್ಲಿ ಸ್ವಸ್ಥವಾಗಿ ಕುಳಿತು ಕೊಂಡಂತೆ ತೋರಿತು. ಅದನ್ನು ನೋಡಿ ಖಾನನು ಬೆರಗಾದನು. ಹೀಗೆ ಕುಳಿತುಕೊಳ್ಳುವಲ್ಲಿ ಕಳ್ಳಮರಾಟರ ದುರಾಲೋಚನೆ ಏನಿರಬಹುದೆಂದು ಆತನು ಯೋಚಿಸತೊಡಗಿದನು. ಈ ಪುಂಡರು ಆಲೋಚಿಸುತ್ತ ಕುಳಿತಿರುವಾಗಲೇ ನಾವು ಹೋಗಿ ಮುತ್ತಬೇಕೆಂದು ಆತನು ಯೋಚಿಸಿದನು. ಆತನಿಗೆ ಮರಾಟರ ಮೋಸಗಾರಿಕೆಯು ಗೊತ್ತಿತ್ತಾದ್ದರಿಂದ, ಈಗಾದರೂ ಅವರು ತನ್ನನ್ನು ಮೋಸಗೊಳಿಸುತ್ತಿರಬಹುದೇ ಎಂಬ ಸಂಶಯವು ಆತನನ್ನು ಬಾಧಿಸಹತ್ತಿತು. ಹೀಗೆ ಇತ್ತಡಕಿನಲ್ಲಿ ಸಿಕ್ಕಂತಾಗಿ ಖಾನನು ನಿಂತುಕೊಂಡನು. ಮುಂದಕ್ಕೆ ಹೋಗಬೇಕೋ, ಹಿಂದಕ್ಕೆ ತಿರುಗಬೇಕೋ ಎಂಬ ಸಂಶಯಕ್ಕೆ ಆತನು ಒಳಗಾದನು. ಖಾನನು ಸ್ವಲ್ಪಹೊತ್ತು ಯೋಚಿಸಿ, ಕಡೆಗೆ ಮರಾಠರ ಮೇಲೆ ಬಿದ್ದು ಅವರನ್ನು ತುಂಡರಿಸಬೇಕೆಂದು ನಿಶ್ಚಯಿಸಿ, ಹಾಗೆಮಾಡಲು ತನ್ನ ಸೈನ್ಯದವರಿಗೆ ಅಪ್ಪಣೆಕೊಟ್ಟನು. ಆಗ ಮೊಗಲ ಸೈನಿಕರು ''ಮಹಮ್ಮದರ ಸೂಲ ಇಲ್ಲಾ ಇನ್ನಾಲ್ಲಾ'' ಇತ್ಯಾದಿ ಶಬ್ದಗಳನ್ನು ಉಚ್ಚರಿಸುತ್ತ ಆವೇಶಗೊಂಡು ಮರಾಟರು ಕುಳಿತಿರುವ ನಿಟ್ಟಿನಕಡೆಗೆ ಈ ಭರದಿಂದ ಸಾಗಿದರು. ತಮ್ಮ ಸಂಖ್ಯೆಯು ದೊಡ್ಡದಿರುವದರಿಂದ, ಅಲ್ಪಸಂಖ್ಯಾಕರಾದ ಮರಾಟರನ್ನು ಸಹಜವಾಗಿ ತುಂಡರಿಸಬಹುದೆಂಬ ಹೆಮ್ಮೆಯು ಅವರಿಗೆ ವಿಶೇಷವಾಗಿತ್ತೆಂದು ಹೇಳುವ ಕಾರಣವಿಲ್ಲ. ಹೋಗಹೋಗುತ್ತ ಅವರ ಆವೇಶವು ಹೆಚ್ಚಿತು; ಅವರ ಘರ್ಜನೆಯಿಂದ ದಶದಿಕ್ಕುಗಳು ತುಂಬಿದವು. ದಿಲೇರಖಾನನು ತ್ವೇಷದಿಂದ ಅವರೊಡನೆ ಹೊರಟಿದ್ದನು ಹೋಗಹೋಗುತ್ತ ಅವರು ಪುರಂದರ ದುರ್ಗದ ಬುಡದ ತೀರ ಸಮೀಪಕ್ಕೆ ಹೋದರು; ಆದರೂ ಮರಾಟರಲ್ಲಿ ಚಲನವಲನವೇನೂ ತೋರಲಿಲ್ಲ. ಅವರ ಹಿಲಾಲುಗಳು ನಿಚ್ಚಳವಾಗಿಯೂ, ಸ್ಥಿರವಾಗಿಯೂ ಉರಿಯುತ್ತಿದ್ದವು. ತಾವು ಇಷ್ಟು ಸನಿಯಕ್ಕೆ ಬಂದಿದ್ದರೂ ಮರಾಠರು ಅತ್ತಿತ್ತ ಉಲುಕದೆಯಿರುವದನ್ನು ನೋಡಿ ಖಾನನಿಗೆ ಹ್ಯಾಗೆ ಹ್ಯಾಗೋ ಆಯಿತು. ಆತನಲ್ಲಿ ಒಂದು ವಿಚಾರವು ಪಕ್ಕನೆ ಹೊಳೆಯಲು, ಆತನ ಎದೆಯು ದಸಕ್ಕೆಂದಿತು. ಮರಾಟರು ಮೋಸಗೊಳಿಸಿ ತನ್ನನ್ನು ಇತ್ತ ಕಡೆಗೆ ಹೊರಡಿಸಿ ಬಿಟ್ಟು, ಅತ್ತ ತಾವು ನನ್ನ

ಛಾವಣಿಯ ಮೇಲೆ ಬಿದ್ದು ಸುಲಿಗೆ ಮಾಡಿರಬಹುದೆಂದು ಆತನು ಭಾವಿಸಿದನು. ಈ ಭಾವನೆಯಿಂದ ಆತನ ಕೈಕಾಲುಗಳೇ ಹೋದವು. ಆತನು ಅಲ್ಲಿಯೇ ನಿಂತು ಸೈನ್ಯವನ್ನೂ ನಿಲ್ಲಿಸಿ, ಇಬ್ಬರು ಸವಾರರನ್ನು ನಿಜಸ್ಥಿತಿಯ ತಿಳಿದುಕೊಂಡು ಬರುವದಕ್ಕಾಗಿ ದುರ್ಗದ ಕಡೆಗೆ ಕಳಿಸಿದನು. ಅವರು ಅಲ್ಲಿಗೆ ವೇಗದಿಂದ ಹೋಗಿ ನೋಡಲು, ನೆಲದಲ್ಲಿ ನಟ್ಟಿದ್ದ ನೂರಾರು ಪಿಲಾಲುಗಳು ಮಾತ್ರ ನಿಚ್ಚಳವಾಗಿ ಉರಿಯುತ್ತಿದ್ದವು. ಆದರೆ ಮನುಷ್ಯರ ಸುಳುವು ಕೂಡ ಇದ್ದಿಲ್ಲ. ಈ ವರ್ತಮಾನವನ್ನು ರಾವುತರ ದಿಲೇರಖಾನನಿಗೆ ಹೇಳಲು, ಅವನು ಬೆದರಿ, ತಟ್ಟನೆ ಛಾವಣಿಯ ಕಡೆಗೆ ತಿರುಗಬೇಕೆಂದು ತನ್ನ ಸೈನಿಕರಿಗೆ ಆಜ್ಞಾಪಿಸಿದನು.

ಖಾನನ ಅಪ್ಪಣೆಯಂತೆ ಮೊಗಲರ ಸೈನ್ಯವು ಛಾವಣಿಯ ಕಡೆಗೆ ತಿರುಗಿ ಹೊರಟ ದ್ದೊಂದೇ ತಡ, ಅದು ಎರಡು ಫರ್ಲಾಂಗು ಹೋಗುವದರೊಳಗೆ ಹಿಂದಿನಿಂದ, ಹಾಗು ಮಗ್ಗಲುಗಳಿಂದ ಮರಾಟರ ಹೊಡೆತಕ್ಕೆ ಆರಂಭವಾಯಿತು. ಕಗ್ಗತ್ತಲು ಮುಸುಕಿದ್ದರಿಂದ ಮರಾಟರು ಎತ್ತ ಕಡೆಯಿಂದ ಹೊಡೆಯುವರೆಂಬದೂ ತಿಳಿಯಲೊಲ್ಲದು. ಇದರಿಂದ ಮೊಗಲರ ಸೈನ್ಯಕ್ಕೆ ದಿಗಿಲು ಬಿದ್ದಿತು. ಅರಣ್ಯದ ಗಿಡಗಳೇ ಮನುಷ್ಯರಾದವೋ, ಬಂಡೆಗಳ ಬುಡದಿಂದ ಜನರು ಎದ್ದು ಬಂದರೋ, ಆದದ್ದಾದರೂ ಏನು ಎಂದು ಮೊಗಲರು ಆಶ್ಚರ್ಯ ಪಡಹತ್ತಿದರು. ದಿನಕ್ಕೊಂದು ಹೊಸ ಹಂಚಿಕೆಯಿಂದ ಇವರು ನಮ್ಮನ್ನು ಸೋಲಿಸುವರಲ್ಲ ಎಂದು ದಿಲೇರಖಾನನು ಚಿಂತಿಸಿ, ವೈರಿಗಳಿಗೆ ಎದುರಾಗುವದಕ್ಕಾಗಿ ತನ್ನ ಸೈನ್ಯಕ್ಕೆ ಸೂಚಿಸಿದನು. ಆಗ ಮೊಗಲ ಸೈನ್ಯವು ತಿರುಗಿ ನಿಂತು ಮರಾಟರ ಮೇಲೆ ಬೀಳಹೋಗಲು, ಮರಾಟರು ಎತ್ತೋ ಅದೃಶ್ಯರಾಗಿ ಹೋದರು. ಇದನ್ನು ನೋಡಿ ದಿಲೇರಖಾನನಿಗೆ, ಏನು ಮಾಡಬೇಕೆಂಬದು ತೋಚದಾಯಿತು. ತಾನು ಹಿಂದಿರುಗಿ ಹೋಗಬೇಕೋ, ವೈರಿಗಳ ಶೋಧಮಾಡಿ ಅವರ ಶಾಸನ ಮಾಡಬೇಕೋ ಎಂಬ ಇತ್ತಂಡದ ವಿಚಾರವು ಅವನನ್ನು ಭಾದಿಸಹತ್ತಿತು. ಆಗ ಖಾನನು ತನ್ನ ಸೈನ್ಯದ್ದೊಂದು ಭಾಗವನ್ನು ವೈರಿಗಳ ಪಾರಪತ್ಯ ಮಾಡುವದಕ್ಕಾಗಿ ಹಿಂದೆ ಬಿಟ್ಟು, ಉಳಿದ ಸೈನ್ಯದೊಡನೆ ವೇಗದಿಂದ ಛಾವಣಿಯ ಕಡೆಗೆ ಹೋದನು. ನಮ್ಮನ್ನು ಇತ್ತ ಹೊರಡಿಸಿ, ಪುಂಡ ಮರಾಟರು ಅತ್ತ ನಮ್ಮ ಛಾವಣಿಯನ್ನು ಹಾಳು ಮಾಡಿದ್ದೇ ನಿಶ್ಚಯವೆಂದು ಆತನು ತರ್ಕಿಸಿದನು. ಆತನ ತರ್ಕವು ಅಕ್ಷರಶಃ ನಿಜವಾಯಿತು. ಖಾನನು ತನ್ನ ಛಾವಣಿಯ ಸನಿಯಕ್ಕೆ ಹೋದಹೋದಂತೆ ಛಾವಣಿಯವರ ಹಾ ಹಾ ಕಾರವು ಆತನಿಗೆ ಸ್ಪಷ್ಟವಾಗಿ ಕೇಳಿಸಹತ್ತಿತು. ಛಾವಣಿಯಲ್ಲಿ ಬಾಜಾರಬುಣಗಿನವರೂ, ಖಾನನ ಜನಾನಖಾನೆಯವರೂ, ಅಲ್ಲದೆ ಬೇರೆ ದಂಡಾಳುಗಳು ಸಂರಕ್ಷಣಕ್ಕಾಗಿ ತಕ್ಕಷ್ಟು ಇದ್ದಿಲ್ಲ ವೆಂಬದನ್ನು ನಾವು ಹಿಂದೆ ಹೇಳಿರುವೆವಷ್ಟೇ? ಮರಾಟರು ಅಲ್ಲಿ ಇದ್ದ ದಂಡಾಳುಗಳಲ್ಲಿ ತಮಗೆ ಅಡ್ಡಾದವರನ್ನು ತುಂಡರಿಸಿ, ಛಾವಣಿಯನ್ನು ಮನಸ್ಸಿಗೆ ಬಂದಂತೆ ಸುಲಿದರು. ದಿಲೇರಖಾನನು ಛಾವಣಿಗೆ ಬಂದಾಗ ಮರಾಟರು ಅದೇ ಸುಲಿಗೆಯ ಕೆಲಸವನ್ನು ತೀರಿಸಿಕೊಂಡು ಹೊರಟು ಹೋಗಿದ್ದರು. ಅದನ್ನು ನೋಡಿ ದಿಲೇರಖಾನನ ಹೃದಯಕ್ಕೆ ಬರೆ ಕೊಟ್ಟಂತಾಯಿತು; ಆದರೆ ಮಾಡುವದೇನು? ಖಾನನು ಕೂಡಲೇ ತನ್ನ ಸೈನ್ಯದಲ್ಲಿ ಬೇರೆ ಬೇರೆ ಗುಂಪುಗಳನ್ನು ಮಾಡಿ, ಒಂದೊಂದು ಗುಂಪನ್ನು

ಒಂದೊಂದು ನಿಟ್ಟಿಗೆ ಮರಾಟರ ಶೋಧಕ್ಕಾಗಿ ಕಳಿಸಿದನು; ಆದರೆ ಅದರಿಂದ ಪ್ರಯೋಜನವೇನು ಆಗಲಿಲ್ಲ. ಗುಡ್ಡಗಳ ಮೇಲೆ ಚಪಲ ಮೃಗಗಳಂತೆ ಸಂಚರಿಸುವ ಮರಾಟರನ್ನು ಹಿಡಿಯಲು ಯಾರು ಶಕ್ತರಾಗುವರು? ಕಳಿಸಿದ ಮೊಗಲ ಸೈನ್ಯದ ಗುಂಪುಗಳು ಅತ್ತಿತ್ತ ಅಲೆದಾಡಿ ಕಡೆಗೆ ಕೈಬೀಸುತ್ತ ತಿರುಗಿ ಛಾವಣಿಗೆ ಬಂದವು. ಸೈನ್ಯದ ಅನ್ನಸಾಮುಗ್ರಿಯೂ, ಭಂಡಾರವೂ ಮರಾಟರ ಪಾಲಾಗಿದ್ದವು. ಇದನ್ನು ನೋಡಿ ಖಾನನು ಸಂತೃಪ್ತನಾಗಿದ್ದನು; ಆದರೆ ಸಂತಾಪಗೊಂಡು ಮಾಡುವದೇನು? ಆತನು ಅಲ್ಲಲ್ಲಿ ಹೋಗಿ ಛಾವಣಿಯ ಸ್ಥಿತಿಯನ್ನು ಕಣ್ಣುಮುಟ್ಟ ನೋಡಿದನು; ಜನರ ಯೋಗಕ್ಷೇಮವನ್ನು ಸ್ವತಃ ವಿಚಾರಿಸಿದನು. ಹೀಗೆ ಮಾಡದೆ ಆತನು ತನ್ನ ಡೇರೆಗೆ ಹೋಗುವ ಹಾಗಿದ್ದಿಲ್ಲ. ಆತನು ಖಿನ್ನನೂ ಸಂತೃಪ್ತನೂ ಆಗಿದ್ದರೂ ತನ್ನ ಕರ್ತವ್ಯವನ್ನು ಸರಿಯಾಗಿ ಮಾಡಿದನು. ತನ್ನ ಛಾವಣಿಯ ಸುಲಿಗೆಯಾಗಿ ತನ್ನ ಮಾನಹಾನಿಯಾದ ಅಸಮಾಧಾನದಲ್ಲಿ ಆತನಿಗೆ ಜನಾನಖಾನೆಯ ಸ್ಮರಣವೇ ಆಗಿದ್ದಿಲ್ಲ. ಅಷ್ಟರಲ್ಲಿ ಜನಾನಖಾನೆಯ ಮುಖ್ಯ ಖೋಜ್ಜಿಯಾದ ಅಬದುಲ್ಲಾ ಮಗರೂರನು ಬಂದು ದಿಲೇರಖಾನನ ಚರಣಗಳಮೇಲೆ ತನ್ನ ದೇಹವನ್ನು ಈಡಾಡಿ ಖಾವಿಂದ, ಮರಾಟರು ತಮ್ಮ ಪ್ರಿಯಪುತ್ರಿಯಾದ ನೂರಎಲ್ ಹುದೆಯನ್ನು ಬಲಾತ್ಕಾರದಿಂದ ಕುದುರೆಯಮೇಲೆ ಹಾಕಿಕೊಂಡು ಹೊರಟುಹೋದರು ಎಂದು ಹೇಳಿದನು.

ಈ ಸುದ್ದಿಯನ್ನು ಕೇಳಿ ದಿಲೇರಖಾನನ ಹೃದಯದ ಗಾಯಕ್ಕೆ ಬರೆಕೊಟ್ಟಂತಾಯಿತು. ಸಂತಾಪದ ಭರದಲ್ಲಿ ಆತನ ಮೈಮೇಲಿನ ಎಚ್ಚರವು ತಪ್ಪಿತು. ಆತನು ತನ್ನ ಖಡ್ಗವನ್ನು ಹಿರಿದು ಅಬದುಲ್ಲಾನನ್ನು ತುಂಡರಿಸಹೋದನು. ಅಷ್ಟರಲ್ಲಿ ದುರ್ಜಯಸಿಂಗನೆಂಬವನು ಅಡ್ಡಬಂದು ಖಾನನ ಕೈಯನ್ನು ಹಿಡಿದು—"ಖಾವಿಂದ, ತಮ್ಮಂಥ ವೀರಖಡ್ಗವು ಅಬದುಲ್ಲಾನಂಥ ಷಂಢನ ರಕ್ತದಿಂದ ಕಲಂಕಿತವಾಗುವದು ಸರಿಯಲ್ಲ. ತಾವು ಸಿಟ್ಟಿನಭರದಲ್ಲಿ ಅವಿಚಾರದ ಕೃತಿಯನ್ನು ಮಾಡಿ ಅಪಕೀರ್ತಿಗೆ ಗುರಿಯಾಗಬಾರದು. ತಾವು ಸ್ವಲ್ಪ ಶಾಂತರಾಗಿ ವಿಚಾರಮಾಡಿದರೆ ಇದರಲ್ಲಿ ಅಬದುಲ್ಲಾನ ಅಪರಾಧವಿಲ್ಲೆಂದು ತಮಗೆ ಗೊತ್ತಾಗಬಹುದು. ದುಷ್ಟ ಮರಾಟರು ಒತ್ತಾಯದಿಂದ ನೂರಉಲ್ ಹುದೆಯವರನ್ನು ಎಳೆದೊಯ್ಯುವಾಗ ಒಬ್ಬ ಅಬದುಲ್ಲಾನು ಮಾಡುವದೇನು? ಮರಾಟರ ತಂತ್ರದ ಬಲೆಗೆ ಸಿಕ್ಕು ನಾವು ಸೈನ್ಯದೊಡನೆ ಎತ್ತೋ ಹೋಗಿ ಬಿಟ್ಟೆವು. ಅಂದಬಳಿಕ ಛಾವಣಿಯ ಸಂರಕ್ಷಣೆಗೆ ಜವಾಬದಾರನು ಯಾರು? ನಾವು ಹೋಗುವಾಗ ಛಾವಣಿಯ ಸಂರಕ್ಷಣದ ವಿಚಾರವನ್ನೇ ಮಾಡಲಿಲ್ಲ. ಇದಕ್ಕಾಗಿ ತಾವೇ ಅಪರಾಧಿಗಳಾಗಿದ್ದು, ಅಬದುಲ್ಲಾನಂಥ ಕ್ಷುದ್ರನ ಮೇಲೆ ಹರಿಹಾದರೆ ಆಗುವದೇನು?" ಎಂದು ನುಡಿದು, ಆತನು ಅಬದುಲ್ಲಾನ ಕಡೆಗೆ ಹೊರಳಿ ಕಣ್ಣು ಚಿವುಟಿ ಸನ್ನೆಮಾಡಿ ಅವನನ್ನು ಒಮ್ಮೆ ಕಸುವಿನಿಂದ ಒದ್ದಹಾಗೆ ಮಾಡಿ—"ಹೋಗು ಅಥವಾ ಇಲ್ಲಿಂದ ಹೊರಟುಹೋಗು. ನಿನ್ನ ಒಡೆಯಳ ಸಲುವಾಗಿ ಪ್ರಾಣವನ್ನು ಅರ್ಪಿಸದೆ, ಈ ಕೆಟ್ಟ ಸುದ್ದಿಯನ್ನು ಹೇಳಲಿಕ್ಕೆ ಖಾವಂದರವರ ಮುಂದೆ ಬರಲಿಕ್ಕೆ ನಿನಗೆ ನಾಚಿಕೆ ಬರಲಿಲ್ಲವೆ? ಹೋಗುವ, ನಿನ್ನ ಕೆಟ್ಟ ಮುಸುಡೆಯನ್ನು ಇನ್ನೊಮ್ಮೆ ತೋರಿಸಬೇಡ," ಎಂದು ಮತ್ತೊಮ್ಮೆ ಒದೆಯ ಹೋಗಲು,

ಅಬದುಲ್ಲಾನಿಗೆ ಅಷ್ಟೇ ನೆವಸಿಕ್ಕು ಆತನು ಅಲ್ಲಿಂದ ಓಡಿಹೋದನು; ಆದರೆ ಸಂತಾಪದಿಂದ ಅಂಧನಾಗಿದ್ದ ದಿಲೇರಖಾನನಿಗೆ ಅದು ಗೊತ್ತಾಗಲಿಲ್ಲ. ದುರ್ಜಯಸಿಂಗನು ತನ್ನ ಕೈಯನ್ನು ಹಿಡಿದಿರುವನೆಂಬದಿಷ್ಟು ಮಾತ್ರ ಆತನಿಗೆ ಗೊತ್ತಾಗಿತ್ತು ಅಬದುಲ್ಲಾನು ತನ್ನ ಎದುರಿಗೇ ಇರುವನೆಂದು ತಿಳಿದು ಖಾನನು ಆತನನ್ನು ಕುರಿತು—ಏ, ಸೈತಾನಾ–ಸೈತಾನಾ ನನ್ನ ಮಗಳನ್ನು ಮರಾಟರಿಗೆ ಒಪ್ಪಿಸಿ ಜೀವದಿಂದ ಉಳಿಯುವಷ್ಟು ನೀಚನು ನೀನಿರುವೆಯೆಂದು ನಾನು ತಿಳಿದಿದ್ದಿಲ್ಲ; ಮರಾಟರು ಹೆಂಗಸರ ಹಾಗು ಹುಡುಗರ ಗೊಡವಿಗೆ ಹೋಗುವದಿಲ್ಲೆಂದು ಜನರು ಹೇಳುವದನ್ನು ನಾನು ಕೇಳಿದ್ದೆನು; ಆದರೆ ನನ್ನ ಪಂಚಪ್ರಾಣದಂತೆ ಇದ್ದ ನನ್ನ ನೂರಎಲ್‌ಹುದೆಯನ್ನು ಅವರು ಒಯ್ದು ನನ್ನ ಮೋರೆಗೆ ಕಪ್ಪು ಬಡೆದರಲ್ಲ! ಎಲೈ ನನ್ನ ಜೀವನಸರ್ವಸ್ವವೇ, ನೂರಎಲ್‌ಹುದಾ, ನಿನ್ನ ಗತಿಯೇನಾಯಿತು. ದುಷ್ಟ ಮರಾಟರು ನಿನ್ನನ್ನು ಎತ್ತ ಎಳೆದೊಯ್ದರು? ಛಾವಣಿಯಲ್ಲಿದ್ದ ಜನರೆಲ್ಲ ಸತ್ತಿದ್ದರೆ? ನಿನ್ನನ್ನು ಅಗಲಿ ಹೋಗುವ ದುರ್ಬುದ್ಧಿಯು ಇಂದು ನನಗೇಕೆ ಉತ್ಪನ್ನವಾಗಿರಬಹುದು! ಈ ದುಷ್ಟ ಮರಾಟರನ್ನು ಒಬ್ಬೊಬ್ಬರನ್ನಾಗಿ ನಿಲ್ಲಿಸಿ ಸುಡಿಸಿದರೂ ನನ್ನ ಸಿಟ್ಟು ಹೋಗಲಾರದು. ಮರಾಟರ ಈ ಅಪರಾಧಕ್ಕಾಗಿ ಅವರ ಶಾಸನ ಮಾಡದೆ, ನಾನೆಂದಿಗೂ ಬಿಡೆನು; ಆದರೆ ಬೇಟಾ, ನೂರಎಲ್ ಹುದಾ, ನೀನು ಇನ್ನು ನನ್ನ ಕಣ್ಣಿಗೆ ಹ್ಯಾಗೆ ಬಿದ್ದೀ'' ಎಂದು ಮನಸ್ಸಿಗೆ ಬಂದಂತೆ ಖಾನನು ಬಡಬಡಿಸಹತ್ತಿದನು. ಮರಾಟರ ರಾಜ್ಯವನ್ನೆಲ್ಲ ಬೆಂಕೆಹಚ್ಚಿ ಸುಡಲಿಕ್ಕೆ ಬರುವಹಾಗಿದ್ದರೆ ಆತನು ಹಾಗೆ ಮಾಡಲಿಕ್ಕೆ ಸ್ವಲ್ಪವಾದರೂ ತಡಮಾಡುತ್ತಿದ್ದಿಲ್ಲ. ಆಗ ಆತನು ಉಳಿದ ಯಾವ ಮಾತನ್ನೂ ವಿಚಾರಿಸದೆ, ಯಾರ ಯೋಗಕ್ಷೇಮವನ್ನೂ ತಕ್ಕೊಳ್ಳದೆ, ನೆಟ್ಟಗೆ ತನ್ನ ಡೇರೆಗೆ ಹೋದನು. ಜಗತ್ತೇ ಆತನಿಗೆ ಶೂನ್ಯವಾಗಿ ತೋರಹತ್ತಿತು. ಆತನು ಡೇರೆಯಲ್ಲಿ ಹೋಗಿ ಕುಳಿತಕೂಡಲೇ ಒಬ್ಬೊಬ್ಬರು ಒಂದೊಂದು ಸುದ್ದಿಯನ್ನು ಹೇಳತೊಡಗಿದರು. ಒಬ್ಬನು ಭಂಡಾರವು ಬರಿದಾದ ಸುದ್ದಿಯನ್ನು ಹೇಳಿದನು; ಮತ್ತೊಬ್ಬನು ಉಗ್ರಾಣವು ತೆರವಾದದ್ದನ್ನು ತಿಳಿಸಿದನು; ಇನ್ನೊಬ್ಬನು ಇನ್ನೊಂದು ವರ್ತಮಾನವನ್ನು ಮುಟ್ಟಿಸಿದನು. ಅಷ್ಟರಲ್ಲಿ ಜನಾನ ಖಾನೆಯ ಸುದ್ದಿಯನ್ನು ಹೇಳುವವನೊಬ್ಬನು ಬಂದು—''ಮರಾಟರು ಜನಾನಖಾನೆಯೊಳಗಿನ ಉಳಿದ ಯಾವ ಹೆಂಗಸರನ್ನೂ ಹುಡುಗರನ್ನೂ ತಡವಲ್ಲಿಲ್ಲೆಂತಲೂ ನೂರಉಲ್‌ಹುದೆಯವ ರೊಬ್ಬರನ್ನೇ ಅವರು ಅಪಹರಿಸಿಕೊಂಡು ಹೋದರೆಂತಲೂ ಹೇಳಿದನು. ಮರಾಟರು ಛಾವಣಿಯೊಳಗಿನ ಜನರನ್ನು ಕೊಲ್ಲುವ ಗೊಡವಿಗೆ ಹೋಗಿದ್ದಿಲ್ಲ. ಹೆಂಗಸರನ್ನಂತೂ ಅವರು ಕಣ್ಣೆತ್ತಿ ನೋಡಿದ್ದಿಲ್ಲ. ತಮ್ಮ ಸುಲಿಗೆಯ ಕಾರ್ಯಕ್ಕೆ ಪ್ರತಿಬಂಧಿಸಿದವರನ್ನು ಮಾತ್ರ ಅವರು ತುಂಡರಿಸಿ ಚಲ್ಲಿದರು.

ಈ ಎಲ್ಲ ವರ್ತಮಾನವನ್ನು ಕೇಳಿ, ದಿಲೇರಖಾನನು ವಿಚಾರಮಗ್ನನಾದನು. ಆತನು ತನ್ನೊಳಗೆ—''ಮರಾಟರು ತಮ್ಮ ಕೀರ್ತಿಗೆ ಕಲಂಕವನ್ನುಂಟುಮಾಡುವ ಈ ಪರಸ್ತ್ರೀ ಹರಣದ ನೀಚಕೆಲಸವನ್ನು ಮಾಡಿರಬಹುದೆ? ಯಾವ ಹೆಂಗಸರ ಗೊಡವೆಗೆ ಹೋಗದೆ ಅವರು ನೂರಎಲ್‌ಹುದೆಯನ್ನೇ ಅಪಹರಿಸಲಿಕ್ಕೆ ಕಾರಣವೇನಿರಬಹುದು? ಬೇರೆ

ಕಾರಣವೇನಿರ ಬೇಕು? ನನ್ನ ಪ್ರಿಯಪುತ್ರಿಯ ಲೋಕೋತ್ತರ ಸೌಂದರ್ಯವೇ ಕಾರಣವಾಗಿರ ಬಹುದು. ಆ ಪುಂಡರು ಪರಸ್ತ್ರೀಯರ ಗೊಡವೆಗೆ ಹೋಗರೆಂಬ ಕೀರ್ತಿಯಲ್ಲಾದರೂ ಸತ್ಯವು ಎಷ್ಟರ ಮಟ್ಟಿಗಿರುವದೋ ಏನೋ? ಹಾಯ್ ಹಾಯ್! ಪ್ರಿಯ ಪುತ್ರೀ, ಎಂತ ಅಪಮಾನವಿದು! ಎಂದು ಯೋಚಿಸತೊಡಗಿದನು. ನೂರಎಲ್‌ಹುದೆಯ ಸೌಂದರ್ಯದ ಖ್ಯಾತಿಯು ಎಲ್ಲ ಕಡೆಗೆ ಹಬ್ಬಿತ್ತು. ಆಕೆಯ ವಯಸ್ಸು ಹದಿನೇಳು ವರ್ಷಕ್ಕಿಂತ ಹೆಚ್ಚು ಇದ್ದಿಲ್ಲ. ಆಕೆಯ ಸೌಂದರ್ಯದ ಮುಂದೆ ಇಡಿಯ ಜಗತ್ತನ್ನೇ ನಿವಾಳಿಸಿ ಒಗೆಯಬಹುದಾಗಿತ್ತು. ಬಾದಶಹನು ತನ್ನ ಅಳಿಯನಾಗಬೇಕೆಂಬ ಮಹತ್ವಾಕಾಂಕ್ಷೆಯು ದಿಲೇರಖಾನನಿಗಿದ್ದದ್ದರಿಂದ, ಆತನು ಈವರೆಗೆ ಮಗಳ ಲಗ್ನದ ಗೊಡವೆಗೆ ಹೋಗಿದ್ದಿಲ್ಲ. ಔರಂಗಜೇಬ ಬಾದಶಹನಿಗೆ ಹಲವು ಜನಮಕ್ಕಳಿದ್ದರು. ಅವರಲ್ಲಿ ಯಾರಮೇಲೆ ಬಾದಶಹನ ಪ್ರೇಮವಿತ್ತೆಂಬದನ್ನು ನಿಶ್ಚಯದಿಂದ ಹೇಳುವಹಾಗಿದ್ದಿಲ್ಲ. ಉದೇಪುರಿ ಬೇಗಮೆಯ ಮಗನ ಮೇಲೆ ಆತನ ಪ್ರೇಮ ವಿರುವದೆಂದು ಬಹುಜನರ ತಿಳುವಳಿಕೆ ಯಿತ್ತು. ಔರಂಗಜೇಬನ ತರುವಾಯ ಬಾದಶಹನಾಗು ವವನಿಗೆ ತನ್ನ ಮಗಳನ್ನು ಕೊಡಬೇಕೆಂದು ದಿಲೇರಖಾನನು ಹಾದಿಯ ನೋಡುತ್ತಿದ್ದನು. ಈಗ ದಕ್ಷಿಣಕ್ಕೆ ದಂಡೆತ್ತಿ ಬಂದಿದ್ದ ಶಹಾಜಾದಾಮುಆಝಮನನ್ನು ಔರಂಗಜೇಬನು ಕರ್ತೃತ್ವಶಾಲಿಯೆಂದು ತಿಳಿದಿದ್ದನು; ಆದರೆ ಆತನಮೇಲೆ ಬಾದಶಹನ ನಿಜವಾದ ಪ್ರೇಮವು ಇರುತ್ತದೆಂದು ಹೇಳುವಹಾಗಿದ್ದಿಲ್ಲ; ಆದ್ದರಿಂದಲೇ ದಿಲೇರಖಾನನು ಶಹಾಜಾದಾರಲ್ಲಿ (ರಾಜಪುತ್ರರಲ್ಲಿ) ಇಂಥವರಿಗೇ ತನ್ನ ಮಗಳನ್ನು ಕೊಡಬೇಕೆಂದು ಈವರೆಗೆ ನಿಶ್ಚಯಿಸಿದ್ದಿಲ್ಲ. ಇರಲಿ. ದಿಲೇರಖಾನನು ತನ್ನ ಮಗಳನ್ನು ಹುಡುಕುವದಕ್ಕಾಗಿ ಸೈನ್ಯದ ಬೇರೆ ಬೇರೆ ಭಾಗಗಳನ್ನು ಕಳಿಸಹತ್ತಿದನು. ಆಗ ದುರ್ಜಯಸಿಂಗನು—''ಖಾವಿಂದ, ಮರಾಟರು ನೂರಎಲ್‌ಹುದಾ ಬೇಗಮೆಯವರನ್ನು ಪುರಂದರ ದುರ್ಗದಲ್ಲಿಯೇ ಇಟ್ಟಿರಬಹುದು; ಎರಡನೆಯ ಕಡೆಗೆ ಒಯ್ಯಿಡುವ ಸಂಭವವಿಲ್ಲ, ಆದ್ದರಿಂದ ಸುಮ್ಮನೆ ಸೈನ್ಯವನ್ನು ನಾಲ್ಕೂ ಕಡೆಗೆ ಕಳಿಸಿ ದಣಿಸುವದರಲ್ಲಿ ಪ್ರಯೋಜನವೇನು?'' ಎಂದು ಸೂಚಿಸಿದನು; ಆದರೆ ಆತನ ಸೂಚನೆಯನ್ನು ಲಕ್ಷಿಸುವವರಾರು? ಲಕ್ಷಿಸುವದಂತು ಇರಲಿ, ಖಾನನು ಆತನ ಮೈಮೇಲೆ ಹೋಗಿ ಗದ್ದರಿಸಿ— ''ಸಾಕು, ಸುಮ್ಮನಿರು. ನಿನ್ನ ನಿರರ್ಥಕ ಪಾಂಡಿತ್ಯವನ್ನು ನನ್ನ ಮುಂದೆ ತೋರಿಸಬೇಡ. ಮೂರ್ಖಾ, ಹೀಗೆ ಹೇಳುವದಕ್ಕೆ ನಿನಗೆ ನಾಚಿಕೆ ಬರುವದಿಲ್ಲವೆ? ನೀಚ ಅಬದುಲ್ಲಾನಿಗೆ ತಕ್ಕಶಾಸನ ಮಾಡುತ್ತಿರಲು, ನೀನೇ ನಡುವೆ ಅಡ್ಡ ಬಂದೆ. ನೀಚರು ನೀವೆಲ್ಲರು ಮಸಲತ್ತು ಮಾಡಿ ನನ್ನ ಮಗಳನ್ನು ಅಪಹರಿಸಲಿಕ್ಕಿಲ್ಲೆಂದು ಯಾರು ಹೇಳಬೇಕು? ಮಗಳ ವಿಯೋಗ ದುಃಖದಿಂದ ನಾನು ಏನೂ ತೋಚದೆ ತಳಮಳಿಸುತ್ತಿರಲು, ಆಕೆಯನ್ನು ಹುಡುಕುವ ಯತ್ನಮಾಡದೆ, ನಾನು ಮಾಡುವ ಯತ್ನಕ್ಕೆ ನೀನು ಅಡ್ಡಬರುವೆಯಾ? ನೂರಎಲ್‌ಹುದೆಯನ್ನು ಹುಡುಕಿಕೊಂಡು ಬರುವಹಾಗಿದ್ದರೆ ನನ್ನ ಮುಂದೆ ಮಾತಾಡು. ಹಾಗೆ ಮಾಡದೆ ನನ್ನ ಮುಂದೆ ವ್ಯರ್ಥ ಪಾಂಡಿತ್ಯವನ್ನು ತೋರಿಸುವದಿದ್ದರೆ ಇಲ್ಲಿಂದ ಹೊರಟು ಹೋಗು. ರಜಪೂತರ ಅಧಮತನವೇ ಇದು. ನಿಮ್ಮ ಹೆಂಡಿರು ಮಕ್ಕಳನ್ನು ಅನ್ಯರು ಅಪಹರಿಸಿದರೂ ನಿಮಗೆ

ನಾಚಿಕೆಯಿಲ್ಲ, ದೌಲತ್ತಿನ ಆಶೆಯಿಂದ ನೀವೇ ನಿಮ್ಮ ಮಕ್ಕಳನ್ನು ಮೊಗಲರಿಗೆ ಅರ್ಪಿಸುತ್ತಿರಲು, ಎರಡನೆಯವರ ಮಕ್ಕಳ ವ್ಯವಸ್ಥೆಯೇನಾದ ಪರಿವೆ ನಿಮಗೇನು? ನನ್ನ ಮಗಳನ್ನು ಮರಾಟರಿಂದ ಬಿಡಿಸಿಕೊಂಡು ಬರುವಹಾಗಿದ್ದರೆ ಇಲ್ಲಿ ನಿಲ್ಲು; ಇಲ್ಲದಿದ್ದರೆ ಇಲ್ಲಿಂದ ತಟ್ಟನೆ ಹೊರಟು ನಡೆ.''

ದಿಲೇರಖಾನನ ಈ ಮಾತುಗಳನ್ನು ಕೇಳಿ ದುರ್ಜಯಸಿಂಗನಿಗೆ ಸಂತಾಪವಾಯಿತು. ಆತನ ಕೈಯು ತನ್ನ ಟೊಂಕದಲ್ಲಿ ಅಲೆದಾಡುತ್ತಿರುವ ಖಡ್ಗದ ಕಡೆಗೆ ಹೋಯಿತು. ಖಾನನು ತನ್ನನ್ನು ಇಷ್ಟು ಅವಮಾನಗೊಳಿಸಬಹುದೆಂದು ಆತನು ತಿಳಿದಿದ್ದಿಲ್ಲ; ಆದರೂ ಆ ಕಾರ್ಯಸಾಧಕನು ತನಗಾದ ಅವಮಾನವನ್ನು ತೋರಗೊಡದೆ ಖಾನನನ್ನು ಕುರಿತು ಅತ್ಯಂತ ಸಮಾಧಾನ ದಿಂದ– ಖಾನಸಾಹೇಬ, ಮಗಳ ವಿಯೋಗದ ದುಃಖದಿಂದ ಪೀಡಿತರಾಗಿರುವ ನೀವು ಏನು ಅಂದರೂ ಅದನ್ನು ನಾನು ಮನಸ್ಸಿಗೆ ಹಚ್ಚಿಕೊಳ್ಳುವದಿಲ್ಲ. ನಿಮ್ಮ ಮನಸ್ಸಿಗೆ ಅತ್ಯಂತ ವ್ಯಥೆಯಾಗಿರು ವದೆಂಬದನ್ನು ನಾನು ಬಲ್ಲೆನು. ಬರಿಯ ಮಗಳ ವಿಯೋಗ ದುಃಖವೊಂದೇ ಅಲ್ಲ, ಮರಾಟರು ನನ್ನನ್ನು ಮೋಸಗೊಳಿಸಿದರೆಂಬ ಅಪಮಾನದ ದುಃಖವು ನಿಮ್ಮನ್ನು ಬಾಧಿಸುತ್ತಿರುವದು; ಆದ್ದರಿಂದ ಈಗ ನಾನು ಹೋಗುತ್ತೇನೆ. ನೀವಾಡಿದ ಮಾತುಗಳನ್ನು ಮರೆತು ಬಿಡುವೆನು, ಎಂದು ನುಡಿಯಲು, ದಿಲೇರಖಾನನು ಮತ್ತಿಷ್ಟು ರೇಗಿಗೆದ್ದು–ಮಂದಿ ಏನಂದರೂ ಅವರ ಎಗ್ಗು ಇಲ್ಲದೇ ಹೊರಟುಹೋಗಲಿಕ್ಕೆ, ಅಥವಾ ಬಾಲ ಗುಂಡಾಡಿಸುತ್ತ ನಿಂತುಕೊಳ್ಳಲಿಕ್ಕೆ ರಜಪೂತನಿಗೆ ನಾಚಿಕೆ ಬರುವದಿಲ್ಲ, ಇದಕ್ಕಿಂತ ಹೆಚ್ಚಿನ ಪೌರುಷವು ನಿಮ್ಮಿಂದೇನಾಗುವದು? ಹೋಗು, ನಾನು ನಿನ್ನನ್ನು ಜೀವದಿಂದ ಹೋಗಗೊಡುತ್ತಿರುವದೇ ಭಾಗ್ಯವೆಂದು ತಿಳಿದುಕೋ. ಬಹಳ ಹೊತ್ತು ನಿಂತುಕೊಂಡರೆ ಸಂತಾಪದ ಭರದಲ್ಲಿ ನನ್ನಿಂದ ಏನು ಅನರ್ಥವಾದೀ ತೆಂಬದನ್ನು ಹೇಳಲಾರೆನು; ಆದ್ದರಿಂದ ನೀನು ಇಲ್ಲಿಂದ ತಟ್ಟನೆಹೊರಟು ಹೋಗುವದೇ ಉತ್ತಮ ಮಾರ್ಗವು, ಎಂದು ನುಡಿದನು. ಅದನ್ನು ಕೇಳಿ ದುರ್ಜಯಸಿಂಗನಿಗೆ ಸಿಟ್ಟು ಬಂದರೂ ಅದನ್ನು ಆತನು ನುಂಗಿಕೊಂಡು—''ಖಾನಸಾಹೇಬ, ಈ ಮಾತುಗಳನ್ನು ದಿಲೇರಖಾನರು ಆಡುವರೆಂದು ನಾನು ತಿಳಿದುಕೊಂಡೇ ಇಲ್ಲ; ಖಾನರ ಮೈಯಲ್ಲಿ ಒಂದು ಪಿಶಾಚವು ಸೇರಿಕೊಂಡು ಈ ಮಾತುಗಳನ್ನಾಡು ತ್ತಿರುವದೆಂದು ನಾನು ತಿಳಿದುಕೊಂಡಿರುತ್ತೇನೆ; ಆದ್ದರಿಂದ ನಾನು ಈಗ ಹೆಚ್ಚಿಗೆ ಮಾತಾಡುವದಿಲ್ಲ. ಬೇಗಮುಸಾಹೇಬರನ್ನು ಮರಾಟರಿಂದ ಬಿಡಿಸಿಕೊಂಡು ಬರಲಿಕ್ಕೆ ನಾನು ಹಿಂದೆ ಮುಂದೆ ನೋಡುತ್ತೇನೆಂದು ಮಾತ್ರ ನೀವು ಸರ್ವತಾ ತಿಳಕೊಳ್ಳಬೇಡಿರಿ. ಹಚ್ಚಿದರೆ ದುರ್ಜಯಸಿಂಗನೇ ಬೇಗಮುಸಾಹೇಬರ ಗೊತ್ತು ಹಚ್ಚಿ ಅವರನ್ನು ಬಿಡಿಸಿಕೊಂಡು ಬಂದು ತಂದೆ ಮಕ್ಕಳನ್ನು ಕೂಡಿಸುವನು. ಉಪಾಯವಿಲ್ಲ, ವಿಷವೇಳೆಯಲ್ಲಿ ನಿಮ್ಮ ಮುಖದಿಂದ ಹೊರಡಬಾರದ ಶಬ್ದಗಳು ಹೊರಟವು; ಆದರೂ ನನಗೆ ಸಿಟ್ಟಿಲ್ಲ. ಈಗ ಹೋಗಿಬರುತ್ತೇನೆ,'' ಎಂದು ನುಡಿದು, ಆ ದುಷ್ಟ ರಜಪೂತನು ಅಲ್ಲಿಂದ ಹೊರಟುಹೋದನು. ದಿಲೇರಖಾನನಿಗೆ ಅವನ ಮಾತುಗಳ ಕಡೆಗೆ ಅಷ್ಟು ಲಕ್ಷ್ಯವಿದ್ದಂತೆ ತೋರಲಿಲ್ಲ. ಆತನು ನೂರಾರು ಜನರನ್ನು ತನ್ನ ಮಗಳ ಶೋಧಕ್ಕಾಗಿ ನಾಲ್ಕೂ ಟಕ್ಕಿಗೆ ಕಳಿಸಿದನು. ತಾನು ಸ್ವತಃ ಮಗಳ ಶೋಧಕ್ಕಾಗಿ ಹೊರಡಬೇಕೆಂದು ಎಣಿಕೆ ಹಾಕಹತ್ತಿದನು.

ಪ್ರತ್ಯಕ್ಷ ತನ್ನ ಛಾವಣಿಯೊಳಗಿಂದ ತನ್ನ ಸುಂದರ ಕನ್ನಿಕೆಯನ್ನು ಶತ್ರುಗಳು ಅಪಹರಿಸಿದ ಅಪಮಾನವು ಅವನಿಗೆ ದುಃಸಹವಾಗಿತ್ತು. ತಾನು ಮಿರ್ಝಾರಾಜನಿಗೆ ಹ್ಯಾಗೆ ಮೋರೆ ತೋರಿಸಬೇಕೆಂದು ಆತನು ತಳಮಳಿಸಹತ್ತಿದನು; ಆದರೆ ದುರ್ಜಯಸಿಂಗನಿಗೆ ಖಾನನ ಈ ತಳಮಳದ ಕಲ್ಪನೆಯೇನು? ಆ ದುಷ್ಟನು; ತನ್ನ ನೀಚಕಾರ್ಯವನ್ನು ಸಾಧಿಸುವದಕ್ಕಾಗಿ ತನ್ನ ಜನರೊಡನೆ ಛಾವಣಿಯ ಕಡೆಗೆ ನಡೆದನು. ಆತನು ಸುಮಾರು ಒಂದು ಹರದಾರಿ ಹೋದ ಬಳಿಕ ಒಂದು ಸಿಳ್ಳುಹಾಕಲು, ಅಬದುಲ್ಲಾಮುಗರೂರನು ಒಂದು ಮೇಣೆಯೊಡನೆ ದುರ್ಜಯ ಸಿಂಗನ ಬಳಿಗೆ ಬಂದನು. ಕೂಡಲೆ ದುರ್ಜಯಸಿಂಗನು ಮೇಣೆಯನ್ನು ಸಾಗಿಸಿಕೊಂಡು ತನ್ನ ಛಾವಣಿಯ ಕಡೆಗೆ ನಡೆದನು. ಇತ್ತ ದಿಲೇರಖಾನನ ಜನರು ನಾಲ್ಕೂ ಕಡೆಗೆ ಶೋಧಮಾಡಿ ಬಂದು ನೂರಎಲ್‌ಹುದಾಬೇಗಮೆಯ ಗೊತ್ತು ಹತ್ತಲಿಲ್ಲೆಂದು ಹೇಳಿದರು. ಅಷ್ಟರಲ್ಲಿ ಬೆಳ್ಳಗೆ ಬೆಳಗಾಯಿತು. ಇಷ್ಟು ಹುಡುಕಿದರೂ ಬೇಗಮಸಾಹೇಬರ ಗೊತ್ತುಹತ್ತದ್ದರಿಂದ, ಮರಾಟರು ಅವರನ್ನು ಪುರಂದರದಲ್ಲಿಯೇ ಇಟ್ಟಿರುವರೆಂದು ಎಲ್ಲರ ಮತವಾಯಿತು. ಈ ಮತವನ್ನೇ ದಿಲೇರ ಖಾನನು ನಿಜವೆಂದು ನಂಬಿ ಮರಾಟರ ಮೇಲೆ ಹಲ್ಲುಕಡೆಯುತ್ತ, ಮೂರು ದಿವಸಗಳಲ್ಲಿ ಪುರಂದರ ದುರ್ಗವನ್ನು ಕೈವಶಮಾಡಿಕೊಳ್ಳುವ ಪ್ರತಿಜ್ಞೆಯನ್ನು ಮಾಡಿದನು. ಬಹು ಚಲುವೆಯೂ, ಗುಣಾಢ್ಯಳೂ ಆದ ನೂರಎಲ್‌ಹುದೆಯ ಶೋಧವಾಗದ್ದರಿಂದ ದಿಲೇರಖಾನನಿಗೊಬ್ಬನಿಗೇ ಅಲ್ಲ, ಇಡಿಯ ಸೈನ್ಯಕ್ಕೇ ಬಹಳ ಅಸಮಾಧಾನವಾಗಿತ್ತು!

## ಕುಮಾರಿಯ ಬಿಡುಗಡೆ

ಲೋಹಗಡದಲ್ಲಿರುವ ಶಿವಾಜಿ ಮಹಾರಾಜರಿಗೆ ದಿಲೇರಖಾನನ ಪ್ರತಿಜ್ಞೆಯ ವರ್ತಮಾನವು ಚಾರರಮುಖಾಂತರವಾಗಿ ಗೊತ್ತಾಯಿತು. ಪುರಂದರದ ತಮ್ಮ ಸ್ವಾಮಿನಿಷ್ಠ ಮರಾಟರು ದಿಲೇರಖಾನನ ಆಟವನ್ನು ನಡೆಯಗೊಡದೆ, ಆತನಿಗೆ ಅನ್ನಸಾಮಗ್ರಿಯು ಮುಟ್ಟದಂತೆ ಮಾಡಿ, ಯುಕ್ತಿಯಿಂದ ಆತನ ಛಾವಣಿಯ ಸುಲಿದದ್ದನ್ನು ಮನಸ್ಸಿನಲ್ಲಿ ತಂದು, ಬಹಳ ಸಮಾಧಾನಪಟ್ಟರು; ಮತ್ತು ಇಂಥ ಕಠಿಣ ಪ್ರಸಂಗದಲ್ಲಿಯೂ ತಮ್ಮವರು ಎದೆಗುಂದದೆ ಮಾಡುವ ಸಾಹಸಕ್ಕಾಗಿ ಮಹಾರಾಜರು ಅವರನ್ನು ಮನಸ್ಸಿನಲ್ಲಿ ಕೊಂಡಾಡಿದರು; ಆದರೆ ನೂರಎಲ್‌ಹುದೆಯನ್ನು ಮರಾಟರು ಅಪಹರಿಸಿದರೆಂಬ ಅಪಕೀರ್ತಿಯನ್ನು ಕೇಳುವದು ಮಾತ್ರ ಅವರಿಗೆ ದುಸ್ಸಹವಾಯಿತು. ತಮ್ಮವರು ಇಂಥ ಅನೀತಿಯ ಹೊಲಸು ಕೆಲಸವನ್ನು ಮಾಡಲಾರರೆಂಬ ನಂಬಿಗೆಯು ಅವರಿಗೆ ಸಂಪೂರ್ಣವಾಗಿ ಇತ್ತು. ಮರಾಟರು ತಮ್ಮ ಶತ್ರುಗಳೊಡನೆ ಎಂಥ ವಿಶ್ವಾಸಘಾತದಿಂದ ನಡೆದುಕೊಂಡರೂ, ತಮ್ಮ ಸ್ವದೇಶೋದ್ಧಾರದ ಕಾರ್ಯವನ್ನು ಸಾಧಿಸುವದಕ್ಕಾಗಿ ಎಂಥ ಅನ್ಯಾಯದ ಕೆಲಸಗಳನ್ನು ಮಾಡಿದರೂ, ಸಬಲರೊಡನೆ ಕಾದಿ ತಮ್ಮ ಸಂರಕ್ಷಣ ಮಾಡಿಕೊಳ್ಳಬೇಕಾದ್ದರಿಂದ ಅವರು ಪ್ರಸಂಗದಲ್ಲಿ

ಸುಳ್ಳುಹೇಳಲಿಕ್ಕೂ ಕಳವುಮಾಡಲಿಕ್ಕೂ ಹಿಂದೆಮುಂದೆ ನೋಡದಿದ್ದರೂ, ಪರಸ್ತ್ರೀಯರ ವಿಷಯದಲ್ಲಿ ಅವರು ಅತ್ಯಂತ ಪಾಪಭೀರುಗಳಾಗಿದ್ದರು. ಅವರು ಈ ಎಲ್ಲ ಅಯೋಗ್ಯ ಮಾರ್ಗಗಳನ್ನು ನಿರ್ವಾಹವಿಲ್ಲದೆ ಹಿಡಿಯಬೇಕಾಗುತ್ತಿತ್ತು. ಸತ್ಯಯುಗದ ಧರ್ಮಯುದ್ಧದ ಅವಲಂಬನವನ್ನು ಯಾರೂ ಮಾಡದಿರುವಾಗ, ಮರಾಟರ ಈ ಮರೆಮೋಸಗಳಿಗೆ ದೋಷ ಕೊಡುವದು ಅಪ್ರಶಸ್ತವೇ ಸರಿ; ಆದರೆ ಪರಸ್ತ್ರೀವಿಷಯದಲ್ಲಿ ಮಾತ್ರ ಅವರ ಮನಸ್ಸು ಅತ್ಯಂತ ಪವಿತ್ರವಾದದ್ದಿತ್ತು. ಮಹಾರಾಜರ ಕಾಲದಲ್ಲಿ, ಹಾಗು ಅವರ ತರುವಾಯದಲ್ಲಿ ಮರಾಟರು ಪರಸ್ತ್ರೀಯರ ಗೊಡವಿಗೆ ಹೋದದ್ದರ ಉಲ್ಲೇಖವನ್ನು ಎಲ್ಲಿಯೂ ಕಾಣಲಾಸಲ್ಲ. ರಾಜ್ಯದ ಹಾಗು ಧನದ ಪ್ರಾಪ್ತಿಗಾಗಿ ತಮ್ಮ ಯತ್ನವಿರುವದರಿಂದ, ಮೂರನೆಯ ಯಾವ ಪಾಪದ ಕೆಲಸಗಳಿಗೂ ಮನಸ್ಸು ಮಾಡಲಾಗದೆಂಬದು ಮಹಾರಾಜರ ಕಠಿಣತರ ಶಾಸನವಾಗಿತ್ತು. ಪರಸ್ತ್ರೀಯರ ಗೊಡವೆಗೆ ಹೋದವರನ್ನು ಮಹಾರಾಜರು ಶಿಕ್ಷಿಸದೆ ಎಂದೂಬಿಡಲಿಲ್ಲ. ಶತ್ರುಗಳ ಹೆಂಗಸರನ್ನು ಕೂಡ ಮರಾಟರು ಬಹು ಮರ್ಯಾದೆಯಿಂದ ನಡಿಸಿಕೊಳ್ಳುತ್ತಿದ್ದರೆಂಬ ಖ್ಯಾತಿಯು ಸರ್ವತ್ರ ಪಸರಿಸಿತು. ಈ ಸ್ಥಿತಿಯಲ್ಲಿ ತಮ್ಮ ಹೆಸರಿಗೆ ನಿಷ್ಕಾರಣ ಕಲಂಕ ಹತ್ತುವದು ಮಹಾರಾಜರಿಗೆ ಸಹನವಾಗಲಿಲ್ಲ. ನಮ್ಮವರು ಛಾವಣಿಯನ್ನು ಸುಲಿಯುವ ಸಂಧಿಯನ್ನು ಸಾಧಿಸಿ, ಯಾರೋ ದುಷ್ಟರು ನೂರಎಲ್‌ಹುದಾ ಬೇಗಮೆಯನ್ನು ಅಪಹರಿಸಿ ತಮ್ಮ ಕಾರ್ಯವನ್ನು ಸಾಧಿಸಿಕೊಂಡು, ನಮ್ಮವರನ್ನು ನಿಷ್ಕಾರಣ ಅಪವಾದಕ್ಕೆ ಗುರಿಮಾಡಿರುವರೆಂದು ಅವರು ತರ್ಕಿಸಿದರು. ಅವರ ತರ್ಕವು ಅಕ್ಷರಶಃ ನಿಜವಾದದ್ದಿತ್ತು. ವಾಚಕರಿಗೆ ದುರ್ಜಯ ಸಿಂಗನ ಪರಿಚಯವಿರುವದಷ್ಟೇ? ಅದೇ ದುರ್ಜಯ ಸಿಂಗನು ಶಹಾಜಾದಾ ಮುಅಝ್ಝಮನ ಪ್ರಸನ್ನತೆಯನ್ನು ಪಡೆಯುವದಕ್ಕಾಗಿ ಮರಾಟರ ಸುಲಿಗೆಯ ಸಂಧಿಯನ್ನು ಸಾಧಿಸಿ, ನೂರಎಲ್‌ಹುದೆಯನ್ನು ಎತ್ತಿಕೊಂಡು ಹೋಗಿದ್ದನು. ಅಬದುಲ್ಲಾಮುಗರೂರನು ಈ ನೀಚ ಕೆಲಸದಲ್ಲಿ ದುರ್ಜಯಸಿಂಗನಿಗೆ ಸಹಾಯಕನಾಗಿದ್ದನು. ಅವರಿಬ್ಬರು ಸ್ವಾರ್ಥದ ಆಶೆಯಿಂದ ನೂರಎಲ್‌ಹುದೆಯನ್ನು ಶಹಾಜಾದಾಮುಅಝ್ಝಮನ ಜನಾನಖಾನೆಯಲ್ಲಿ ಸೇರಿಸತಕ್ಕವರಿದ್ದರು. ಈ ಗುಪ್ತಸಂಚು ಮಹಾರಾಜರಿಗೆ ಹ್ಯಾಗೆ ಗೊತ್ತಾಗಬೇಕು? ಆದರೂ ಅವರು ಪ್ರಯತ್ನ ಪೂರ್ವಕವಾಗಿ ನೂರಎಲ್‌ಹುದೆಯ ಬಿಡುಗಡೆ ಮಾಡಿಕೊಂಡು ಬರುವದಕ್ಕಾಗಿ ತಮ್ಮ ಬಾಲಮಿತ್ರನಾದ ಏಸಾಜಿ ಕಂಕನನ್ನು ನಿಯಮಿಸಿದರು.

ಮರಾಟರು ಅತ್ಯಂತ ಸ್ವಾಮಿನಿಷ್ಠರು. ಮುನಿರಾಜರ ಅಪ್ಪಣೆಯನ್ನು ಅವರು ವೇದವಾಕ್ಯ ವೆಂದು ಮನ್ನಿಸುತ್ತಿದ್ದರು. ಅವರಲ್ಲಿ ಏಸಾಜಿಕಂಕನಂಥವರು ಮಹಾರಾಜರ ಅಪ್ಪಣೆಯಂತೆ ನಡಕೊಳ್ಳುವಲ್ಲಿ ತಮ್ಮ ಪ್ರಾಣವನ್ನರ್ಪಿಸಲಿಕ್ಕೆ ಸಹ ಹಿಂದೆ ಮುಂದೆ ನೋಡುತ್ತಿದ್ದಿಲ್ಲ. ಮಹಾರಾಜರು ತಮಗೆ ಯಾವದೊಂದು ಕೆಲಸವನ್ನು ಮಾಡಹೇಳುವದು ಮಹದ್ಭಾಗ್ಯವೆಂದು ಅವರು ತಿಳಿಯುತ್ತಿದ್ದರು. ಆ ಕಾರ್ಯವನ್ನು ಪೂರ್ಣಮಾಡಿ ಮಹಾರಾಜರನ್ನು ಸಂತೋಷ ಪಡಿಸುವದೇ ಅವರ ಪರಮ ಪುರುಷಾರ್ಥವಾಗಿತ್ತು. ಏಸಾಜಿಯು ತನ್ನ ಕಾರ್ಯವನ್ನು ಸಾಧಿಸಲು ಟೊಂಕಕಟ್ಟಿದನು. ನೂರಎಲ್‌ಹುದೆಯನ್ನು ಸಾಮಾನ್ಯ ಜನರು ಅಪಹರಿಸಿ

ಜೀವದಿಂದ ಉಳಿಯಲಾರರೆಂತಲೂ, ಹಾಗೆ ಮಾಡುವ ಧೈರ್ಯವು ಯಾರಿಗೂ ಆಗದೆಂತಲೂ, ಈ ಕಾರ್ಯಕ್ಕೆ ಶಹಾಜಾದಾಮುಆಜ್ಝೀಮನ ಸಂಬಂಧವು ಇರಲೇ ಬೇಕೆಂತಲೂ ಆತನು ತರ್ಕಿಸಿದನು. ಈ ತರ್ಕವನ್ನು ಅನುಸರಿಸಿ ಆತನು ನೂರವಲ್‌ಹುದೆಯ ಶೋಧವನ್ನು ನಡೆಸಿದನು. ಆತನ ಚತುರರಾದ ಅನುಚರರು ನಾಲ್ಕೂ ಕಡೆಗೆ ಶೋಧಕ್ಕಾಗಿ ಹೊರಡಲು ಸಿದ್ಧರಾದರು. ಅಷ್ಟರಲ್ಲಿ ಒಬ್ಬ ಮರಾಟನು ಏಸಾಜಿಯನ್ನು ಕುರಿತು—"ಸರಕಾರ, ಈ ಸಂಬಂಧದಿಂದ ನನಗೆ ಗೊತ್ತಿದ್ದದ್ದನ್ನು ಹೇಳುವೆನು. ಗ್ರಹಿಸುವ ಹಾಗಿದ್ದರೆ ಗ್ರಹಿಸಬೇಕು. ಮೊನ್ನೆ ನಮ್ಮ ಸುಲಿಗೆಯ ಕೆಲಸವು ತೀರಿದಬಳಿಕ ನಾನು ನಮ್ಮ ಜನರೊಡನೆ ಬರದೆ, ಮೊಗಲರ ಛಾವಣಿಯಲ್ಲಿಯೇ ನಿಂತು ಕೊಂಡೆನು. ನಾನು ಮುಸಲ್ಮಾನನ ಸೋಗು ಹಾಕಿಕೊಂಡದ್ದ ರಿಂದಲೂ, ರಾತ್ರಿಯ ಸಮಯವಾದದ್ದರಿಂದಲೂ, ಎಲ್ಲರ ಮನಸ್ಸು ಅಸಮಾಧಾನದಲ್ಲಿದ್ದದ್ದ ರಿಂದಲೂ ನನ್ನ ಗೊಡವೆಗೆ ಯಾರೂ ಬರಲಿಲ್ಲ. ಖಾನನು ಅತ್ಯಂತ ಸಂತಾಪದಿಂದ ಮೈಮೇಲೆ ಎಚ್ಚರಿಲ್ಲದವನಂತೆ ಆಚರಿಸುತ್ತಿದ್ದನು. ಆತನು ಸಿಟ್ಟಿನಿದ ಅಬದುಲ್ಲಾಮುಗರೂರನೆಂಬ ಜನಾನಖಾನೆಯ ಮುಖ್ಯನನ್ನು ತುಂಡರಿಸಹೋದಾಗ, ದರ್ಜಯಸಿಂಗನೆಂಬವನು ಕಣ್ಣುಚಿವುಟಿ ಅಬದುಲ್ಲಾನನ್ನು ಒದ್ದು ಓಡಿಸಿದ ರೀತಿಯನ್ನು ನಾನು ಕಣ್ಣುಮುಟ್ಟಿ ನೋಡಿರುವೆನು; ಮತ್ತು ದಿಲೇರಖಾನನಿಗೂ ದುರ್ಜಯಸಿಂಗನಿಗೂ ಆದ ಸಂವಾದವನ್ನು ಕಿವಿಮುಟ್ಟಿ ಕೇಳಿರುವೆನು. ಈ ನೀಚ ಕೆಲಸವನ್ನು ದುರ್ಜಯಸಿಂಗನೂ, ಅಬದುಲ್ಲಾನೂ ಕೂಡಿ ಮಾಡಿರುವರು. ನೂರವಲ್‌ಹುದಾ ಬೇಗಮೆಯನ್ನು ಔರಂಗಾಬಾದದಲ್ಲಿರುವ ಶಹಾಜಾದನಿಗೆ ಒಪ್ಪಿಸಿ, ತಮ್ಮ ಹಿತವನ್ನು ಸಾಧಿಸಿಕೊಳ್ಳಲು ಅವರು ಯೋಚಿಸಿರುವಂತೆ ತೋರುತ್ತದೆ; ಆದ್ದರಿಂದ ನಾವು ಔರಂಗಾಬಾದದ ಹಾದಿಯಲ್ಲಿ ಹೊಂಚುಹಾಕಿ ಇರಬೇಕು. ದಿಲೇರಖಾನನ ದಂಡಾಳುಗಳು ನೂರಎಲ್‌ಹುದೆ ಯನ್ನು ಹುಡುಕಿ, ಎಲ್ಲಿಯೂ ಕಾಣದೆ ಹೋದದ್ದರಿಂದ, ಆಕೆಯನ್ನು ಪುಂಡ ಮರಾಟರು ನಾವು ಪುರಂದರ ದುರ್ಗದ ಮೇಲಿಟ್ಟಿರುವೆವೆಂದು ತಿಳಿದು ಅವರು ಹುಡುಕುವ ದನ್ನು ಬಿಟ್ಟು ಬಿಟ್ಟಿರುವರು. ಖಾನನ ಎಲ್ಲ ರೊಚ್ಚು ಪುರಂದರದ ಜನರ ಮೇಲಿರುವದು. ಈ ಸಂಧಿಯನ್ನು ಸಾಧಿಸಿ ದುರ್ಜಯಿಸಿಂಗನೂ, ಅಬದುಲನೂ ನೂರವಲ್‌ಹುದೆಯನ್ನು ಹೊರಡಿಸಿಕೊಂಡು ಹೋಗಿ ಔರಂಗಾಬಾದಕ್ಕೆ ಮುಟ್ಟಿಸಬಹುದು ಈ ಕಾರ್ಯವು ಇಂದು ನಾಳೆ ಇಷ್ಟರಲ್ಲಿ ಆಗಬೇಕಾಗಿದೆ; ಕಾರಣ ನಾವು ತಕ್ಕಷ್ಟು ಜನರನ್ನು ಸಂಗಡ ಕರಕೊಂಡು ಇಂದೇ ಔರಂಗಾಬಾದಕ್ಕೆ ಹೊರಡುವದು ನೆಟ್ಟಗೆ" ಎಂದು ಹೇಳಿದನು. ಏಸಾಜಿಗೂ ಈ ಮಾತು ಶಕ್ಯವಾಗಿ ತೋರಿತು. ಕೂಡಲೆ ಆತನು ಇಪ್ಪತ್ತೈದು ಜನ ಶೂರ ಮರಾಟ ರಾವುತರೊಡನೆ ಔರಂಗಾಬಾದದ ಹಾದಿಯನ್ನು ಹಿಡದನು.

ಒಮ್ಮೊಮ್ಮೆ ಮನುಷ್ಯನ ತರ್ಕವು ಅಕ್ಷರಶಃ ನಿಜವಾಗುವ ಯೋಗವು ಒದಗುತ್ತಿರುತ್ತದೆ. ಅದರಂತೆಯೇ ಈಗ ಆ ಮರಾಟನ ತರ್ಕವು ನಿಜವಾಯಿತು. ಏಸಾಜಿಯು ತನ್ನ ಪರಿವಾರ ದೊಡನೆ ಹೊರಡುವ ಮೊದಲೇ ಅತ್ತ ದುರ್ಜಯಸಿಂಗನೂ, ಅಬದುಲ್ಲನೂ ಐವತ್ತು ಜನರೊಡನೆ ನೂರವಲ್‌ಹುದೆಯನ್ನು ಸಾಗಿಸಿಕೊಂಡು ಔರಂಗಾಬಾದದ ಕಡೆಗೆ

ನಡೆದಿದ್ದರು. ವಿಸಾಜಿಯು ತನ್ನ ಪರಿವಾರದೊಡನೆ ಔರಂಗಾಬಾದದ ಮಾರ್ಗವನ್ನು ಹಿಡಿದು ಹೋಗುತ್ತಿರುವಾಗ, ಹಾದಿಯಲ್ಲಿ ಕೂಡಿದವರನ್ನು ವಿಚಾರಿಸುತ್ತಿರಲು— ''ಸುಮಾರು ಐವತ್ತು ಜನ ರಜಪೂತರು ಒಂದು ಮೇಣೆಯನ್ನು ಸಾಗಿಸಿಕೊಂಡು ಹೋಗುತ್ತಿರುವದನ್ನು ನೋಡಿದವೆಂತಲೂ, ಅವರು ಇಷ್ಟುಹೊತ್ತಿಗೆ ಮೂರು ಹರದಾರಿ ಮುಂದಕ್ಕೆ ಹೋಗಿರಬಹುದೆ''ಂತಲೂ, ಯಾರೋ ಇಬ್ಬರು ತಿಳಿಸಿದರು. ಅದನ್ನು ಕೇಳಿ ವಿಸಾಜಿಗೆ ಬಹಳ ಸಮಾಧಾನವಾಯಿತು. ಆತನು ತನ್ನ ಪರಿವಾರದೊಡನೆ ಭರದಿಂದ ಮುಂದಕ್ಕೆ ಸಾಗಿಹೋದನು. ಒಂದೆರಡು ತಾಸುಗಳಲ್ಲಿ ದುರ್ಜಯಸಿಂಗನ ಜನರು ದೂರದಿಂದ ಆತನಿಗೆ ಕಾಣಹತ್ತಿದರು. ಆಗ ವಿಸಾಜಿಯು ತನ್ನ ಸಂಗಡ ಒಬ್ಬನನ್ನು ಕರಕೊಂಡ ಉಳಿದವರಿಗೆ ಅಡ್ಡಹಾದಿಯಿಂದ ತಮ್ಮನ್ನನುಸರಿಸಿ ಬರುವಂತೆ ಹೇಳಿ, ತಾನು ಸಂಗಡಿಗನೊಡನೆ ವೇಗದಿಂದ ಸಾಗಿದನು. ಮುಂದಿನ ಜನರನ್ನು ಮುಟ್ಟಲಿಕ್ಕೆ ಆತನಿಗೆ ವಿಲಂಬವಾಗಲಿಲ್ಲ. ಒಬ್ಬ ಪತಿವ್ರತೆಯ ಮಾನರಕ್ಷಣ ಮಾಡಿದರೆ ಸಾವಿರ ಗೋಗಳ ರಕ್ಷಣ ಮಾಡಿದ ಪುಣ್ಯಬರುವದೆಂದು ಸಮರ್ಥರು ಮಾಡಿದ ಬೋಧವು ಶಿವರಾಯನ ಪರಿವಾರದವರ ಮನಸ್ಸಿನಲ್ಲಿ ಸ್ಥಿರವಾಗಿ ನಟ್ಟುಹೋಗಿತ್ತು; ಆದ್ದರಿಂದ ಒಬ್ಬ ಸಾಧ್ವಿಯ ಮಾನ ರಕ್ಷಣದ ಪ್ರಸಂಗವು ಸಮೀಪಿಸಿತೆಂದು ವಿಸಾಜಿಯು ಉತ್ಸಾಹಗೊಂಡನು. ಆತನು ರಜಪೂತರೊಡನೆ ಬೆರತು ಮಾರ್ಗವನ್ನು ಕ್ರಮಿಸಹತ್ತಿದನು. ಮೇಣೆಯ ಹಿಂದೆ ನಡೆದಿರುವವನು ದುರ್ಜಯಸಿಂಗನೆಂತಲೂ, ಮೇಣೆಯ ಮುಂದೆ ನಡೆದಿರುವವನು ಅಬದುಲ್ಲಾಮುಗರೂರನೆಂತಲೂ ವಿಸಾಜಿಯು ತರ್ಕದಿಂದ ಸಹಜವಾಗಿ ತಿಳಿದುಕೊಂಡನು. ಉಳಿದ ರಜಪೂತರು ದಕ್ಷತೆಯಿಂದ ಮೇಣೆಯನ್ನು ಕಾಯುತ್ತ ನಡೆದಿದ್ದರು. ಈ ಇಬ್ಬರು ಮರಾಟರು ತಮ್ಮೊಡನೆ ಬರುವದನ್ನು ನೋಡಿ ಯಾರೋ ದಾರಿಕಾರರಿರಬಹುದೆಂದು ಆ ರಜಪೂತರು ತಿಳಿದು ಸುಮ್ಮನೆ ಮಾರ್ಗವಿಡಿದು ನಡೆದಿದ್ದರು; ಆದರೆ ''ಕಳ್ಳನ ಜೀವ ಹುಳ್ಳಹುಳ್ಳಗೆ'' ಎನ್ನುವಂತೆ, ದುರ್ಜಯಸಿಂಗನಿಗೆ ಮಾತ್ರ ಆ ಇಬ್ಬರು ಮರಾಟರ ಸಂಶಯವು ಬಂದಿತು. ಅದರಲ್ಲಿ ವಿಸಾಜಿಯ ತೇಜಸ್ವಿತೆಯನ್ನು ನೋಡಿಯಂತೂ ಆತನು ಮತ್ತಿಷ್ಟು ಶಂಕಿಸತೊಡಗಿದನು. ಈ ಮರಾಟನು ಸಾಮಾನ್ಯ ದಾರಿಕಾರನಿರುವಂತೆ ತೋರುವದಿಲ್ಲ, ಈತನು ಶಿವಾಜಿಯ ಮುಖ್ಯ ಸಂಗಡಿಗರಲ್ಲಿ ಒಬ್ಬನಾಗಿರುವಂತೆ ತೋರುತ್ತದೆ. ಈತನಿಂದ ನಮ್ಮ ಹುಳುಕು ಹೊರಬೀಳುವ ಸಂಭವವಿರುವದು; ಆದ್ದರಿಂದ ಈತನೊಡನೆ ಮಾರ್ಗವನ್ನು ಕ್ರಮಿಸುವದು ಸರಿಯಲ್ಲ. ಈತನು ಮುಂದಕ್ಕೆ ಹೋಗಲೊಲ್ಲನೇಕೆ? ನಾವು ವಿಶ್ರಾಂತಿಯ ನೆವದಿಂದ ಸ್ವಲ್ಪ ತಡೆದರೂ ಚಿಂತೆಯಿಲ್ಲ ಎಂದು ಯೋಚಿಸಿ, ದುರ್ಜಯಸಿಂಗನು ವಿಸಾಜಿಯನ್ನು ಕುರಿತು ಉರ್ದುಭಾಷೆಯಿಂದ—''ಸರ್ದಾರಸಾಹೇಬ, ಎತ್ತಕಡೆಗೆ ಹೊರಟಿರಿ?'' ಎಂದು ಕೇಳಿದನು. ವಿಸಾಜಿಗೆ ಉರ್ದುಭಾಷೆಯು ಜನ್ಮಭಾಷೆಯಾಗಿಲ್ಲದಿದ್ದರೂ ಮೊಗಲರ, ಹಾಗು ರಜಪೂತರ ಸಂಘಟನೆಯಿಂದ ಆ ಭಾಷೆಯು ಆತನಿಗೆ ಚನ್ನಾಗಿ ತಿಳಿಯುತ್ತಿತ್ತು, ಆ ಭಾಷೆಯಿಂದ ಸಂಭಾಷಿಸಲಿಕ್ಕೂ ಆತನು ಸಮರ್ಥನಾಗಿದ್ದನು. ಉರ್ದುಭಾಷೆಯು ಮೊಗಲರ ದರ್ಬಾರಿ ಭಾಷೆಯದದ್ದರಿಂದ ಪ್ರತಿಷ್ಠಿತ ಜನರಿಗೆ ಅದು ಬಂದೇ ಬರುತ್ತಿತ್ತು, ಅದನ್ನು ಅವರು

ಬುದ್ಧಿಪೂರ್ವಕವಾಗಿ ಕಲಿಯುತ್ತಿದ್ದರು. ಏಸಾಜಿಯು ದುರ್ಜಯಸಿಂಗನಿಗೆ ಪ್ರತ್ಯುತ್ತರವಾಗಿ ಈಗ ಉರ್ದುಭಾಷೆಯಲ್ಲಿಯೇ ಮಾತಾಡಿದನು. ಆತನು ದುರ್ಜಯಸಿಂಗನಿಗೆ— "ಏನು? ನನ್ನನ್ನು ಕೇಳುವಿರೋ? ನಾನು ಶಿವಾಜಿ ಮಹಾರಾಜನ ಒಬ್ಬ ಸೇವಕನು. ದುಷ್ಟ ದುರ್ಜಯ ಸಿಂಗನೆಂಬು ವನೊಬ್ಬ ರಜಪೂತ ಸರದಾರನೂ, ಅಬದುಲ್ಲಾ ಮಗರೂರನೆಂಬವನೂ ಕೂಡಿ ದಿಲೇರಖಾನನ ಮಗಳಾದ ನೂರಎಲ್‌ಹುದಾ ಬೇಗಮೆಯನ್ನು ಅಪಹರಿಸಿಕೊಂಡು ಔರಂಗಾಬಾದಕ್ಕೆ ಸಾಗಿಸಿಕೊಂಡು ಹೋಗುತ್ತಿರುವರಂತೆ, ಈ ನೀಚ ಕೆಲಸದ ಅಪವಾದವು ನಿಷ್ಕಾರಣ ಮರಾಟರ ಪಾಲಿಗೆ ಬಂದಿರುವದರಿಂದ, ಅದರ ನಿವಾರಣ ಮಾಡಿಕೊಳ್ಳುವದಕ್ಕಾಗಿ ನನಗೆ ಮಹಾರಾಜರ ಅಪ್ಪಣೆಯಾಗಿರುವದು; ಆದ್ದರಿಂದ ನಾನು ದುರ್ಜಯಸಿಂಗನ, ಹಾಗು ಅಬದುಲ್ಲಾನ ಶೋದಮಾಡುತ್ತ ಹೊರಟಿರುವೆನು. ನೀವು ಆ ದುಷ್ಟರನ್ನು ನೋಡಿದಿರೊ? ರಜಪೂತರು ಬಹು ದರ್ಮಿಷ್ಠರೆಂದು ನಾವು ಕೇಳಿದ್ದೆವು; ಆದರೆ ದುರ್ಜಯಸಿಂಗನ ಈ ಅಧಮ ಕೃತಿಯಿಂದ ರಜಪೂತರ ವಿಷಯವಾಗಿ ಮರಾಟರಲ್ಲಿ ತಿರಸ್ಕಾರವು ಉತ್ಪನ್ನವಾಗಿದೆ. ನೀವೂ ರಜಪೂತರಿರುವದರಿಂದ ನಿಜವನ್ನು ಬೈಲಿಗೆಳೆಯುವ ವಿಷಯದಲ್ಲಿ ನನಗೆ ಸಹಾಯ ಮಾಡಬೇಕು."

ಈ ಮೇರೆಗೆ ಏಸಾಜಿಯು ನಿಶ್ಯಂಕೆಯಿಂದ ತಮ್ಮ ನೀಚ ಕೃತಿಯನ್ನು ತಮ್ಮವರಿಗೆ ಹಾಗೂ ಪ್ರತ್ಯಕ್ಷ ನೂರಎಲ್‌ಹುದಾ ಬೇಗಮೆಗೂ ಕೇಳಿಸುವಂತೆ ಗಟ್ಟಿಸಿ ಗಟ್ಟಿಸಿ ಉಚ್ಚರಿಸುವ ದನ್ನು ಕೇಳಿ ದುರ್ಜಯಸಿಂಗನೂ, ಅಬದುಲ್ಲಾನೂ ಬೆದರಿ ಬೆಪ್ಪಾದರು. ದುರ್ಜಯಸಿಂಗನ ಪರಿವಾರದವರಿಗೂ ತಮ್ಮ ಯಜಮಾನನ ನೀಚ ಕೃತಿಯನ್ನು ಕೇಳಿ ಆಶ್ಚರ್ಯವಾಯಿತು. ಅವರು ತಮ್ಮ ಯಜಮಾನನನ್ನು ಆಶ್ಚರ್ಯದಿಂದ ನೋಡಹತ್ತಿದರು. ಅಬದುಲ್ಲಾ ಮಗರೂರನ ಹೊರತು ದುರ್ಜಯಸಿಂಗನ ಒಬ್ಬಿಬ್ಬರು ನಂಬಿಗೆಯ ಜನರಿಗೆ ಮಾತ್ರ ನೂರಎಲ್‌ಹುದೆಯ ವೃತ್ತಾಂತವು ಗೊತ್ತಿತ್ತು, ಉಳಿದವರು ಈ ಸಂಗತಿಯನ್ನು ಅರಿತಿದ್ದಿಲ್ಲ. ಮೇಣೆಯೊಳಗಿದ್ದ ನೂರಎಲ್‌ಹುದೆಯು ಈ ಸಂಗತಿಯನ್ನು ಕೇಳಿ ಸಂತಾಪಗೊಂಡಳು. ತನ್ನವರೇ ತನಗೆ ಮುಳುವಾಗಿದ್ದದ್ದನ್ನು ಕೇಳಿ ಅವಳ ಸರ್ವಾಂಗವು ದಗ್ಧವಾಗಹತ್ತಿತು; ಆದರೆ ಮಾಡುತ್ತಾಳೇನು? ಮರಾಟರ ಸೌಜನ್ಯ ವಾರ್ತೆಯನ್ನು ಕೇಳಿದ್ದ ಆಕೆಯು, ಮರಾಟರು ತನ್ನ ಬಂಧವಿಮೋಚ ನಕ್ಕಾಗಿ ಧಾವಿಸಿ ಬಂದದ್ದನ್ನು ನೋಡಿ ಸಮಾಧಾನಪಟ್ಟಳು. ಮುಂದೆ ಏನಾಗುವದೋ ನೋಡಬೇಕೆಂದು ಆಕೆಯು ಮೇಣೆಯಲ್ಲಿ ಉಲುಕದೆ ಕುಳಿತುಕೊಂಡಳು. ಅತ್ತ ಅಬದುಲ್ಲಾನು ಸಂತಾಪದಿಂದ ದುರ್ಜಯಸಿಂಗನ ಮೋರೆಯನ್ನು ನೋಡುತ್ತ ತನ್ನ ಖಡ್ಗಕ್ಕೆ ಕೈ ನೀಡಿದನು. ಅತ್ತ ದುರ್ಜಯ ಸಿಂಗನೂ ತನ್ನ ಖಡ್ಗವನ್ನು ಹಿರಿದನು. ಈ ಮರಾಟರಿಬ್ಬರನ್ನು ಇಲ್ಲಿಯೇ ತುಂಡರಿಸಿ ತಾವು ಮುಂದಕ್ಕೆ ಸಾಗಬೇಕೆಂದು ಅವರಿಬ್ಬರೂ ಮರಾಟರ ಮೇಲೆ ದುಮುಕಿದರು. ಆಗ ಏಸಾಜಿಯು ಸರಕ್ಕನೇ ತನ್ನ ಖಡ್ಗವನ್ನು ಹಿರಿದು ಅವರಿಬ್ಬರನ್ನು ಕುರಿತು— "ಖಬರದಾರ, ಮುಂದಕ್ಕೆ ಒಂದು ಹೆಜ್ಜೆಯನ್ನಿಟ್ಟರೆ ನಿಮ್ಮ ಪರಿಣಾಮವಾಗಲಿಕ್ಕಿಲ್ಲ. ಮರಾಟರ ಕೈ ನಿಮಗೆ ಗೊತ್ತಿರುವದಿಲ್ಲವೆ? ಸುಮ್ಮನೆ ಬೇಗಮೆಯನ್ನು ನಮಗೆ ಒಪ್ಪಿಸಿ ನೀವು ಬೇಕಾದತ್ತ

ಹೊರಟುಹೋಗಿರಿ. ನಾವು ನಿಮ್ಮ ಉಸಾಬರಿಗೆ ಬರುವದಿಲ್ಲ. ಮುಖ್ಯವಾಗಿ ನಾವು ನಮ್ಮ ಅಪವಾದವನ್ನು ದೂರಮಾಡಿಕೊಳ್ಳಬೇಕಾಗಿದೆ. ಬೇಗಮೆಯವರನ್ನು ಅವರ ತಂದೆಗೆ ಒಪ್ಪಿಸಿದರೆ ನಮ್ಮ ಕೆಲಸವಾಯಿತು. ನಿಮ್ಮ ರಕ್ತದಿಂದ ನಮ್ಮ ಖಡ್ಗಗಳನ್ನು ಕಲಂಕಿತವಾಗಿ ಮಾಡಿಕೊಳ್ಳುವ ಕಾರಣವಿಲ್ಲ. ಸುಮ್ಮನೆ ಗೊಂದಲ ಹಾಕಿದರೆ ಮಾತ್ರ ಈ ಭೂಮಿಯನ್ನು ಒಡೆದು ನಮ್ಮ ಮರಾಟಾವೀರರು ಬರುವರೆಂಬದನ್ನು ಚನ್ನಾಗಿ ನೆನಪಿನಲ್ಲಿಡಿರಿ. ಮುಖ್ಯವಾಗಿ ಬೇಗಮೆಯವರ ತಪ್ಪು ತಿಳುವಳಿಕೆಯು ದೂರವಾಗಬೇಕೆಂತಲೇ ನಾನು ಬುದ್ಧಿಪೂರ್ವಕವಾಗಿ ನಿಮ್ಮ ನೀಚಕೃತಿಯನ್ನು ಗಟ್ಟಿಸಿ ನುಡಿದಿದ್ದೇನೆ. ನಿಮ್ಮ ಈ ದುಷ್ಕೃತಿಯು ನಿಮ್ಮ ಪರಿವಾರದ ಮನಸ್ಸಿಗಾದರೂ ಬರುವದೇ? ನಿಮ್ಮ ಅಧಮ ಕೃತಿಗೆ ದೇವರು ಮೆಚ್ಚಬಹುದೇ? ನಿಮ್ಮ ಒಡೆಯರಾದ ದಿಲೇರಖಾನರ ಪ್ರಿಯ ಪುತ್ರಿಯನ್ನು ನೋಡದ ನೀವು ಯಾರನ್ನು ನೋಡುವಿರಿ? ಥು, ಇಳಿಸಿರಿ ಮೇಣೆಯನ್ನು, ಸರಿಯಿರಿ ಹಿಂದಕ್ಕೆ'' ಎಂದು ನುಡಿದು, ಒಂದು ಸಿಳ್ಳು ಹಾಕಿದನು. ಕೂಡಲೆ ಇಪ್ಪತ್ತೈದು ಜನ ಕುದುರೆಯ ಸವಾರರು ರಜಪೂತರನ್ನು ಸುತ್ತುಗಟ್ಟಿದರು. ರಜಪೂತರೇನು ಕೈಲಾಗದವರಿದ್ದಿಲ್ಲ. ಮೇಲಾಗಿ ಸಂಖ್ಯೆಯಿಂದ ಅವರು ಮರಾಟರ ಇಮ್ಮಡಿ ಯಾಗಿದ್ದರು. ಆದರ ಅವರ ದುಷ್ಕರ್ಮದ ಜಳದಿಂದ ಅವರ ಸತ್ವವು ಹುರಿದು ಹೋಗಿತ್ತು ಹೀಗೆ ಅಕಸ್ಮಾತ್ತಾಗಿ ಮರಾಟಾ ರಾವುತರು ತಮ್ಮನ್ನು ಸುತ್ತುಗಟ್ಟಿದ್ದನ್ನು ನೋಡಿ ದುರ್ಜಯಸಿಂಗನೂ, ಅಬದುಲನೂ ಸಂತಾಪಗೊಂಡು, ಮರಾಟರನ್ನು ತುಂಡರಿಸಲು ತಮ್ಮ ಪರಿವಾರಕ್ಕೆ ಅಪ್ಪಣೆಕೊಟ್ಟರು; ಆದರೆ ಅವರ ಪರಿವಾರವು ಅನ್ಯಾಯದ ಕೆಲಸದ ಸಮರ್ಥನಕ್ಕಾಗಿ ಮರಾಟರ ಮೇಲೆ ಕೈ ಮಾಡಲಿಲ್ಲ. ಮರಾಟರೂ ಅವರ ಮೇಲೆ ಶಸ್ತ್ರವೆತ್ತಲಿಲ್ಲ. ಇದನ್ನು ನೋಡಿ ದುರ್ಜಯಸಿಂಗನು ತನ್ನ ಜನರನ್ನು ಕುರಿತು— ''ವೀರರೇ, ರಜಪೂತರ ಶೌರ್ಯಕ್ಕೆ ಕಲಂಕವನ್ನುಂಟುಮಾಡುವ ಈ ಹೇಡಿತನವು ನಿಮ್ಮನ್ನು ಯಾಕೆ ಆವರಿಸಿತು? ಈ ಪುಂಡ ಮರಾಟರ ಮಾತನ್ನೇ ನೀವು ನಿಜವೆಂದು ನಂಬುವಿರೋ? ಮರಾಟರ ಮೋಸದ ಕೃತಿಗಳ ಅನುಭವವು ನಿಮಗಿರುವದಿಲ್ಲವೇ? ಅವರು ಹೊತ್ತು ಬಿದ್ದಹಾಗೆ ಬೇಕಾದ ಸೋಗು ಹಾಕುವರು; ಬೇಕಾದಹಾಗೆ ಮಾತಾಡುವರು; ಬೇಕಾದದ್ದು ಮಾಡುವರು. ನಾವು ಮರಾಟರ ಶಾಸನಕ್ಕಾಗಿ ದಕ್ಷಿಣಕ್ಕೆ ದಂಡೆತ್ತಿಬಂದ ಪ್ರಸಂಗದಲ್ಲಿ ಹೀಗೆ ಹಿಂಜರಿದರೆ ನಮ್ಮ ಶೌರ್ಯಕ್ಕೆ ಕಲಂಕವುಂಟಾಗದೆ ಹೋಗದು,'' ಎಂದು ನುಡಿದು, ತಾನು ಮರಾಟರ ಮೇಲೆ ಬಿದ್ದನು. ಅತ್ತ ಅಬದುಲನೂ ಮರಾಟರ ಮೇಲೆ ಏರಿಹೋದನು. ಕೂಡಲೇ ಮರಾಟರು ತಮ್ಮ ಖಡ್ಗಗಳನ್ನು ಹಿರಿದರು. ರಜಪೂತರೂ ರಣೋತ್ಸಾಹದಿಂದ ಮತ್ತರಾದರು. ಉಭಯ ಪಕ್ಷದವರೂ ಅಭಿಮಾನದಿಂದ ಕಾದಹತ್ತಿದರು. ರಜಪೂತರ ಬಲವು ಹೆಚ್ಚಿದರೂ ಸದುದ್ದೇಶದಿಂದ ಕಾದುವ ಮರಾಟರ ಮುಂದೆ ಅವರ ಆಟವು ನಡೆಯದಾಯಿತು. ಬಹುಜನರು ನೆಲಕ್ಕುರುಳಿದರು. ಅಬದುಲನು ಯುದ್ಧದಲ್ಲಿ ಮಡಿದನು. ದುರ್ಜಯಸಿಂಗನಿಗೂ ಬಲವಾದ ಗಾಯಗಳಾದವು. ಹೀಗೆ ಕದನವು ನಡೆದಿರಲು, ದೂರದಲ್ಲಿ ಮತ್ತೊಂದು ಮರಾಟರಗುಂಪು ''ಹರಹರ ಮಹಾದೇವ'' ಎಂದು ಗರ್ಜಿಸುತ್ತ ಬರತೊಡಗಿತು. ಇದನ್ನು ನೋಡಿ ರಜಪೂತರು ಒಬ್ಬೊಬ್ಬರೇ ಕಾಲುದೆಗೆಯಹತ್ತಿದರು.

ಮರಾಟರ ಆವೇಶವು ಹೆಚ್ಚಿತು. ಇದನ್ನು ನೋಡಿ ದುರ್ಜಯಸಿಂಗನು ಬೆದರಿದನು. ತನ್ನ ದುಷ್ಕೃತ್ಯವು ಬೈಲಿಗೆ ಬಿದ್ದಿರುವದರಿಂದ ದಿಲೇರಖಾನನು ಇನ್ನು ತನ್ನನ್ನು ನಿಲ್ಲಿಸಿ ಸುಡಿಸಬಹುದೆಂದು ಬಗೆದು, ಎತ್ತಾದರೂ ಅದೃಶ್ಯವಾಗಿ ಹೋಗಿಬಿಡಬೇಕೆಂದು ಆತನು ತನ್ನ ಕುದುರೆಯನ್ನು ತಿರುವಿದನು. ತನ್ನ ಒಡೆಯನು ಹೀಗೆ ಕಾದುವದನ್ನು ಬಿಟ್ಟು ಓಡಿಹೋಗುವದನ್ನು ನೋಡಿ ಉಳಿದ ರಜಪೂತರೂ ಓಡಹತ್ತಿದರು. ಆದರೆ ಮರಾಟರು ಅವರಲ್ಲಿ ಒಬ್ಬರನ್ನೂ ಓಡಹೋಗಗೊಡದೆ ಸೆರೆಹಿಡಿದರು. ದುರ್ಜ್ಜಯಸಿಂಗನು ಮಾತ್ರ ಮರಾಟರ ಕೈಗೆ ಹತ್ತಲಿಲ್ಲ. ಮರಾಟರು ಓಡಿಹೋಗುವ ಬೋವಿಗಳನ್ನು ಪ್ರತಿಬಂಧಿಸಿ ನಿಲ್ಲಿಸಿದರು. ಆ ಬೋವಿಗಳೇ ಪುನಃ ಮೊದಲಿನಂತೆ ಬೇಗಮೆಯ ಮೇಣೆಯನ್ನು ಹೊತ್ತುಕೊಂಡು, ಶಿವಾಜಿಯ ಅಪ್ಪಣೆಯಂತೆ ಬೋರಗಾವ ಎಂಬ ಊರಕಡೆಗೆ ಸಾಗಿದರು. ಮೇಣೆಯ ಸುತ್ತುಮುತ್ತು ರಜಪೂತರ ಕಾವಲಿನ ಬದಲು ಈಗ ಮರಾಟರ ಕಾವಲು ಕುಳಿತಿತು. ತನ್ನ ಈ ವಿಚಿತ್ರ ಸ್ಥಿತಿಯನ್ನು ಮನಸ್ಸಿನಲ್ಲಿ ತಂದು ನೂರಎಲ್‌ಹುದೆಯು, ಇನ್ನು ಮುಂದೆ ತನ್ನ ಗತಿಯು ಏನಾಗುವದೋ ಎಂಬ ಭಯದಿಂದ ಚಿಂತಿಸತೊಡಗಿದಳು. ಆಕೆಯನ್ನು ಮೊದಲು ಅಬದುಲ್ಲಾಮುಗರೂರನು ಅಪಹರಿಸಿ ದುರ್ಜ್ಜಯಸಿಂಗನ ಕೈಯಲ್ಲಿ ಕೊಟ್ಟಂತಾಗಿತ್ತು, ದುರ್ಜಯ ಸಿಂಗನ ಕೈಗಳಿಂದ ಆಕೆಯನ್ನು ಈಗ ಮರಾಟರು ಕಸಕೊಂಡರು. ಆರು ದಿನಗಳಲ್ಲಿ ನೂರಎಲ್ ಹುದೆಯು ಮೂವರ ಕೈಯಲ್ಲಿ ಓಡಾಡಬೇಕಾಯಿತು. ಬೋವಿಗಳು ಮೇಣೆಯನ್ನು ಬೋರಗಾವದೊಳಗಿನದೊಂದು ಭವ್ಯವಾದ ಮಂದಿರದಲ್ಲಿ ಒಯ್ದು ಇಳಿಸಿದರು.

ನೂರಎಲ್‌ಹುದೆಯು ಬಹು ಸದ್ಗುಣೆಯು; ಅತ್ಯಂತ ಶಾಂತ ಸ್ವಭಾವದವಳು; ಇಂಥ ವಿಪತ್ಕಾಲದಲ್ಲಿಯೂ ಆಕೆಯು ಧೈರ್ಯವನ್ನು ತಾಳಿ ವಿವೇಕದಿಂದ ನಡೆದುಕೊಳ್ಳುತ್ತಿದ್ದಳು. ಮೇಣೆಯನ್ನು ಇಳಿಸಿದಬಳಿಕ ಒಬ್ಬ ಮರಾಠಾ ಸ್ತ್ರೀಯು ಅದರ ಬಾಗಿಲಬಳಿಗೆ ಬಂದು ಬಹು ಸೌಮ್ಯವಾದ ಉರ್ದುಭಾಷೆಯಿಂದ ಬೇಗಮೆಯನ್ನು ಕುರಿತು—''ಬೇಗಮಸಾಹೇಬ, ನಮ್ಮ ಶಿವಾಜಿಮಹಾರಾಜರ ಸರದಾರರು ನಿಮ್ಮನ್ನು ದೊಡ್ಡ ಸಂಕಟದಿಂದ ಬಿಡಿಸಿ ಇಲ್ಲಿಗೆ ಕರೆತಂದಿರುವರು. ತಾವು ಸುರಕ್ಷಿತ ಸ್ಥಳದಲ್ಲಿರುವಿರಿ. ಎಷ್ಟು ಮಾತ್ರವೂ ಅಂಜಬಾರದು. ಇಂದಿಗೆ ತಮ್ಮ ಸಂಕಟದ ನಿವಾರಣವಾದಂತಾಯಿತು. ಇನ್ನು ಮೇಲೆ ಬೇಗನೇ ನಿಮ್ಮನ್ನು ನಿಮ್ಮ ತಂದೆಯವರ ಬಳಿಗೆ ಕಳಿಸಲಾಗುವದು. ಇಲ್ಲಿಯ ಜನರು ಶಿವಾಜಿಮಹಾರಾಜರ ಅಪ್ಪಣೆಯಂತೆ ನಡೆಯತಕ್ಕವರಿರುವರು. ಮಹಾರಾಜರು ಶತ್ರುಗಳ ಕಡೆಯ ಸ್ತ್ರೀಯರನ್ನಾದರೂ ಸಂಭಾವಿಸತಕ್ಕವರು. ಇಲ್ಲಿ ನಿಮ್ಮ ಅದರೋಪಚಾರಗಳಿಗೂ, ನಿಮ್ಮ ಮಾನ–ಮರ್ಯಾದೆಗಳಿಗೂ ಯಾವ ಬಗೆಯಿಂದಲೂ ಕೊರತೆಯಾಗಲಿಕ್ಕಿಲ್ಲ. ಈಗ ಐದಾರು ದಿನಗಳಿಂದ ನಿಮಗೆ ಬಹಳ ಶ್ರಮವಾಗಿರುವದು. ಇಲ್ಲಿ ಎರಡುದಿನ ನೀವು ವಿಶ್ರಮಿಸಿರಿ. ಇಲ್ಲಿಂದ ನೀವು ಪುರಂದರ ದುರ್ಗಕ್ಕೆ ಹೋಗಬೇಕಾಗಬಹುದು. ಎಲ್ಲಿಗೆ ಹೋಗಬೇಕಾದರೂ ನಿಮ್ಮ ಕೂದಲು ಕೂಡ ಕೊಂಕಲಾರದು. ಬೇಗನೆ ನೀವು ನಿಮ್ಮ ತಂದೆಯ ಬಳಿಗೆ ಹೋಗುವಿರಿ. ಈಗ ನೀವು ನಿಸ್ಸಂಶಯ ದಿಂದ ಮೇಣೆಯ ಹೊರಗೆ ಬಂದು ವಿಶ್ರಮಿಸಬೇಕು. ನಿಮ್ಮ ಸೇವೆಗಾಗಿ ನಾನು

ಸಿದ್ಧಳಿರುವೆನು; ಉಳಿದ ದಾಸೀಜನವೂ ಸಿದ್ಧವಾಗಿರುವದು.'' ಎಂದು ನುಡಿಯಲು, ನೂರಎಲ್ ಹುದೆಯು— ''ಈ ಸ್ತ್ರೀಯು ಯಾರು, ನಾನು ಎಲ್ಲಿಗೆ ಬಂದಿರುವೆನು,'' ಎಂಬದನ್ನು ನೋಡುವದಕ್ಕಾಗಿ ಮೇಣೆಯ ಬಾಗಿಲು ತೆರೆದು ಹೊರಗೆ ಹಣಿಕಿ ಹಾಕಿದಳು. ಆಗ ಭವ್ಯವಾದ ಮಂದಿರವು ಆಕೆಯ ಕಣ್ಣಿಗೆ ಬಿದ್ದಿತು. ಆ ಸ್ತ್ರೀಯ ಹೊರತು ಬೇರೆ ಯಾರೂ ಅಲ್ಲಿ ಕಾಣಲಿಲ್ಲ, ಆಗ ಬೇಗಮೆಯು ಆ ಸ್ತ್ರೀಯನ್ನು ಕುರಿತು— ''ನನ್ನ ದೈವದಲ್ಲಿ ಏನಿರುವದೆಂಬದನ್ನು ಅಲ್ಲಾನೇ ಬಲ್ಲನು. ಈಗ ಆರು ದಿನಗಳಿಂದ ಒಂದೇಸವನೆ ನನ್ನನ್ನು ಒಣ ಒಣ ತಿರುಗಿಸುತ್ತಿರುವರು. ಈಗ ನಾನು ಎಲ್ಲಿಗೆ ಬಂದಿರುವೆನೆಂಬದಾದರೂ ತಿಳಿದರೆ ನೆಟ್ಟಗಾಗಲಿಕ್ಕಿಲ್ಲವೆ?'' ಎಂದು ದೈನ್ಯದಿಂದ ಕೇಳಿಕೊಂಡಳು. ಅದನ್ನು ನೋಡಿ ಆ ಸ್ತ್ರೀಯ ಹೃದಯವು ಕರಗಿತು. ಆಕೆಯು ಬೇಗಮೆಗೆ— ''ಬೇಗಮುಸಾಹೇಬ. ನೀವು ನಿಮ್ಮ ತಂದೆಯ ಬಳಿಯಲ್ಲಿಯೇ ಇರುತ್ತೇನೆಂದು ತಿಳಿದುಕೊಳ್ಳಿರಿ. ಈ ಮಂದಿರವು ನಿಮ್ಮ ತಂದಿಯದೇ ಇರುವದೆಂದು ಭಾವಿಸಿರಿ. ನಿಮಗೆ ಯಾತರ ಭಯವೂ ಇರುವದಿಲ್ಲ, ನೀವು ಸುರಕ್ಷಿತವಾಗಿ ಇರುವಿರಿ.'' ಎಂದು ನಂಬಿಗೆ ಕೊಟ್ಟು ಹೇಳಿದಳು. ಆಗ ಬೇಗಮೆಯು ಮೇಣೆಯಿಂದ ಹೊರಗೆ ಬಂದು ಮಂದಿರದಲ್ಲಿ ಎಲ್ಲ ಕಡೆಗೆ ನೋಡಿದಳು. ಉಚ್ಚಪ್ರತಿಯ ಸ್ತ್ರೀಯರ ವಸ್ತಿಗೆ ಯೋಗ್ಯವಾದ ಎಲ್ಲ ಬಗೆಯ ವ್ಯವಸ್ಥೆಯೂ ಅಲ್ಲಿ ಉತ್ತಮ ರೀತಿಯಿಂದ ಮಾಡಲ್ಪಟ್ಟಿತ್ತು. ತನ್ನ ಸಲುವಾಗಿ ಯಾವನೋ ಒಬ್ಬ ದೊಡ್ಡ ಸರದಾರನ ಮನೆಯನ್ನು ಬುದ್ಧಿಪೂರ್ವಕ ಸಿದ್ಧಪಡಿಸಿರುವರೆಂದು ಆಕೆಯು ತಿಳಿದುಕೊಂಡಳು. ಇದು ಸುರಕ್ಷಿತ ಸ್ಥಳವೆಂದು ಮರಾಠಾ ಸ್ತ್ರೀಯು ಹಲವು ಸಾರೆ ಹೇಳಿದ್ದಳು. ಆದ್ದರಿಂದ ನೂರಎಲ್‌ಹುದೆಯು ಹೊರಗೆ ಬಂದು ತನಗೆ ಕುಳಿತುಕೊಳ್ಳಲಿಕ್ಕೆ ಸಿದ್ಧಪಡಿಸಿದ್ದ ಚೌರಂಗದ ಮೇಲೆ ಹೋಗಿ ಕುಳಿತುಕೊಂಡಳು. ಕೂಡಲೇ ಇಬ್ಬರು ಒಕ್ಕಲಗಿತ್ತಿಯರು ಗಾಳಿಯ ಬೀಸಹತ್ತಿದರು. ಆಕೆಯ ಊಟ–ಉಡಿಗೆಯು ಯಥಾಸ್ಥಿತವಾಗಿ ಉತ್ತಮ ರೀತಿಯಿಂದ ಮಾಡಲ್ಪಟ್ಟಿತು. ಆದ್ದರಿಂದ ನೂರಎಲ್‌ಹುದೆಯು ಇದ್ದದ್ದರಲ್ಲಿ ಸಮಾಧಾನಮಾಡಿಕೊಂಡು ಇರಹತ್ತಿದಳು. ಯಾಕಂದರೆ, ಎಷ್ಟು ಮಾಡಿದರೂ ಆಕೆಗೆ ತನ್ನ ತಂದೆಯ ಮನೆಯಲ್ಲಿದ್ದ ಹಾಗೆ ಆಗುವ ಸಂಭವವಿದ್ದಿಲ್ಲ.

ಈ ಮೇರೆಗೆ ಪಿಸಾಜಿಯು ನೂರಎಲ್‌ಹುದೆಯ ವ್ಯವಸ್ಥೆಯನ್ನು ಉತ್ತಮರೀತಿಯಿಂದ ಮಾಡಿ, ಮಹಾರಾಜರ ಅಪ್ಪಣೆಯಂತೆ ಔರಂಗಾಬಾದಕ್ಕೆ ಶಹಾಜಾದಾ ಮುಅಝ್ಝಮನನ್ನು ಕಾಣಲಿಕ್ಕೆ ಹೋಗಲು ಸಿದ್ಧನಾದನು. ಶಹಜಾದಾನು ಮಹಾರಾಜರಿಗೆ ಅಂತರಂಗದಲ್ಲಿ ಅನುಕೂಲನಾಗಿದ್ದನೆಂದು ಈ ಮೊದಲೇ ವಾಚಕರಿಗೆ ಗೊತ್ತಾಗಿದೆ. ಈ ಪ್ರಸಂಗದಲ್ಲಿ ತಮಗೆ ಆತನಿಂದ ಸಹಾಯವು ದೊರೆತರೆ ನೋಡಬೇಕೆಂದು, ಪಿಸಾಜಿಗೆ ಆ ರಾಜಪುತ್ರನ ಬಳಿಗೆ ಹೋಗಿಬರಲು ಮಹಾರಾಜರು ಹೇಳಿದ್ದರು. ಅದರಂತೆ ಪಿಸಾಜಿಯು ಸಂಗಡ ಒಬ್ಬನನ್ನು ಕರಕೊಂಡು ಔರಂಗಾಬಾದಕ್ಕೆ ಹೋದನು. ಆತನು ಒಂದು ಭವ್ಯವಾದ ಮಂದಿರಕ್ಕೆ ಹೋಗಲು, ಆತನನ್ನು ಸತ್ಕರಿಸುವದಕ್ಕಾಗಿ ನಾಲ್ಕೈದುಜನ ಸೇವಕರು ಧಾವಿಸಿದರು. ಪಿಸಾಜಿಯು ಮೊದಲು ರಾಜಪುತ್ರನ ಕಾರಭಾರಿಯನ್ನು ಕಂಡು ಹೇಳತಕ್ಕದ್ದನ್ನು ಹೇಳಿದನು. ಆ

ಕಾರಭಾರಿಯು ಶಹಾಜಾದಾರವರನ್ನು ಕಂಡು ಪುನಃ ವಿಸಾಜಿಯ ಬಳಿಗೆ ಬಂದು, ಆತನಿಗೆ ತಿಳಿಸತಕ್ಕದ್ದನ್ನು ತಿಳಿಸಿದನು. ಇಂಥ ದಿವಸ ರಾಜಪುತ್ರರ ದರ್ಶನಕ್ಕೆ ಹೋಗಬೇಕೆಂದು ಗೊತ್ತಾಯಿತು. ಆ ಗೊತ್ತಾದ ದಿವಸ ವಿಸಾಜಿಯು ಮುಅಝೀಮರವರನ್ನು ಕಾಣಲಿಕ್ಕೆ ಹೋದನು. ಭಾಲದಾರ– ಚೋಪದಾರರು ವಿಸಾಜಿಯನ್ನು ಶಹಾಜಾದಾರವರು ಕುಳಿತಿರುವ ಕೋಣೆಯ ಬಾಗಿಲದವರೆಗೆ ಕಳಿಸಿ ಹಿಂದಿರುಗಿದರು. ಕೂಡಲೇ ಕೋಣೆಯ ಬಾಗಿಲು ಹಾಕಲ್ಪಟ್ಟಿತು. ಕೋಣೆಯಲ್ಲಿ ಇಬ್ಬರೇ ಆದರು. ಹಾದಿಯಲ್ಲಿ ನಡೆದ ನೂರಎಲ್‌ಹುದೆಯ ವರ್ತಮಾನವು ಶಹಾಜಾದಾರಿಗೆ ಗೊತ್ತಾಗಿದ್ದಿಲ್ಲ. ವಿಸಾಜಿಯಂತೂ ಆ ಸಂಗತಿಯನ್ನು ಅವರ ಮುಂದೆ ಹೇಳುವಹಾಗಿದ್ದಿಲ್ಲ; ಯಾಕಂದರೆ ಆತನೇ ರಾಜಪುತ್ರರ ಕಾರ್ಯಘಾತವನ್ನು ಮಾಡಿದಂತಾಗಿತ್ತು. ಆ ಸಂಗತಿಯು ಅನ್ಯ ಮಾರ್ಗದಿಂದ ಶಹಾಜಾದಾರಿಗೆ ಗೊತ್ತಾಗಿದ್ದರೆ, ಅವರು ವಿಸಾಜಿಯ ಭೆಟ್ಟಿಯನ್ನಾದರೂ ತಕ್ಕೊಳ್ಳುತ್ತಿದ್ದರೋ ಇಲ್ಲವೋ ಎಂಬದನ್ನು ಹೇಳುವಹಾಗಿದ್ದಿಲ್ಲ. ಈ ಸಂಗತಿಯು ಮಹಾರಾಜರಿಗೆ ಗೊತ್ತಿದ್ದೂ, ಅವರು ನೂರಎಲ್ ಹುದೆಯನ್ನು ಬಿಡಿಸಿಕೊಂಡು ಬರಬೇಕೆಂದು ವಿಸಾಜಿಯನ್ನು ಕಳಿಸಿದ್ದರು. ಮಹಾರಾಜರು ಮುಅಝೀಮನೊಡನೆ ಸಖ್ಯವನ್ನು ಬೆಳಿಸಿದ್ದರೂ, ಆ ಸಖ್ಯವನ್ನು ಇಂಥ ನೀಚ ಕೃತಿಯಿಂದ ಹೆಚ್ಚಿಸುವದು ಸರ್ವಥಾ ಅವರಿಗೆ ಸೇರುತ್ತಿದ್ದಿಲ್ಲ. ಸ್ತ್ರೀಯರ ಮಾನರಕ್ಷಣದ ವಿಷಯದಲ್ಲಿ ತಮಗೆ ಎಷ್ಟು ಕಷ್ಟವಾದರೂ, ತಮಗೆ ಎಷ್ಟು ಹಾನಿಯೊದಗಿದರೂ ಅವರು ಲೆಕ್ಕಿಸುತ್ತಿದ್ದಿಲ್ಲ. ಸ್ತ್ರೀ ವ್ಯವಹಾರದಿಂದ ತಮ್ಮ ಹಿತವನ್ನು ಸಾಧಿಸಿ ಕೊಳ್ಳುವಂಥ ನೀಚತನದ ವಿಚಾರವು ಮಹಾರಾಜರ ಮನಸ್ಸಿನಲ್ಲಾದರೂ ಸುಳಿಯಬಹುದೇ? ಇರಲಿ. ವಿಸಾಜಿಯು ಶಹಾಜಾದಾ ಮುಅಝೀಮರವರಿಗೆ ಕುರ್ನಿಸಾತ ಮಾಡಿ ವಿನಯದಿಂದ ಸತ್ಕರಿಸಿದನು. ರಾಜಪುತ್ರ ರಾದರೂ ವಿನಯದಿಂದ ಆತನನ್ನು ಸತ್ಕರಿಸಿ ಹತ್ತರ ಕುಳ್ಳರಿಸಿಕೊಂಡು— "ಮಹಾರಾಜರು ನಿಮ್ಮನ್ನು ಯಾಕೆ ಕಳಿಸಿರುವರೆಂಬದರ ತರ್ಕವು ನನಗೆ ಆಗಿದೆ. ಈ ಪ್ರಸಂಗದಲ್ಲಿ ನೀವು ಸೋತು ನಡಿಯದಿದ್ದರೆ ಪರಿಣಾಮವಾಗಲಿಕ್ಕಿಲ್ಲೆಂದು ನನಗೆ ತೋರುತ್ತದೆ. ಹಾಗೆ ಮಾಡುವದರ ಹೊರತು ಅನ್ಯ ಉಪಾಯವೇ ಇಲ್ಲ. ನಾನಂತೂ ಈಗ ಇಲ್ಲಿಂದ ಆಗ್ರಾಕ್ಕೆ ಹೋಗೇ ಹೋಗುವೆನು; ಯಾಕಂದರೆ ಇನ್ನು ನಾನು ಇಲ್ಲಿ ಇರುವದರಲ್ಲಿ ತಾತ್ಪರ್ಯವಿಲ್ಲ. ನಿಂತರೆ ಹಿತವಾಗುವಹಾಗೂ ಇಲ್ಲ. ಮೊದಲು ನನ್ನ ಮೇಲೆ ಹಿರಿಯರ ಸಂಪೂರ್ಣ ವಿಶ್ವಾಸವೇ ಇರುವದಿಲ್ಲ. ನಿಮ್ಮವರ ಮೋಹಕ್ಕೆ ಗುರಿಯಾಗಿ ನಾನು ಕೆಲಮಟ್ಟಿಗೆ ಹಿರಿಯರ ವಿರುದ್ಧ ವಾಗಿಯೇ ವರ್ತಿಸಿರುವೆನು. ಇದನ್ನರಿತು ಹಿರಿಯರು ಬೇರೆಯವರನ್ನು ದಕ್ಷಿಣಕ್ಕೆ ಕಳಿಸಿದ್ದರಲ್ಲಿ ಆಶ್ಚರ್ಯವೇನೂ ಇರುವದಿಲ್ಲ. ಈಗ ಬಂದವರು ಸಾಮಾನ್ಯರಿರುವದಿಲ್ಲ. ಅವರು ತಮ್ಮ ಕಾರ್ಯವನ್ನು ಸಾಧಿಸಿಕೊಂಡ ಹೊರತು ಇಲ್ಲಿಂದ ಉಲುಕಲಾರರು. ಅವರ ಯೋಗ್ಯತೆಯೇ ಅಂಥ ಘನತರವಾದದ್ದಿರುತ್ತದೆ; ಆದ್ದರಿಂದ ನಾನು ನಿಮಗೆ ಸೂಚಿಸುವದೇನಂದರೆ —ನೀವು ಈಗ ಹೆಚ್ಚಿಗೆ ಬಿಗಿಹಿಡಿಯಬೇಡಿರಿ. ಸುಮ್ಮನೇ ಪೇಚಾಡಿ ಹಾನಿ ಮಾಡಿಕೊಳ್ಳಬೇಡಿರಿ; ಮರೆ ಮೋಸಗಳಿಂದ ಕಾರ್ಯವನ್ನು ಸಾಧಿಸುವ ಮೊಬ್ಬಿಗೆ ಬೀಳಬೇಡಿರಿ. ಇದರಿಂದ ನಿಮಗೆ ಹಿತವಾಗಲಿಕ್ಕಿಲ್ಲ. ನಾನು ಹೇಳಿದ ಈ ಸಂಗತಿಯನ್ನು ಶಿವಾಜಿರಾಜರಿಗೆ ಹೇಳಿರಿ. ನಾನು

ನಿಮ್ಮ ಹಿತಕ್ಕಾಗಿ ಹೀಗೆ ಹೇಳದಿದ್ದರೆ ನಿರ್ವಾಹವೇ ಇಲ್ಲ ನನಗೆ ಇಲ್ಲಿ ಇರಕೂಡದೆಂದು ಬಾದಶಹರ ಅಪ್ಪಣೆಯಾಗಿದೆ. ಆ ಅಪ್ಪಣೆಯನ್ನು ನಾನು ಮೀರಿದರೆ, ನನ್ನನ್ನು ಪ್ರತಿಬಂಧಿಸಲು ಮಿರ್ಝಾರಾಜರನ್ನು ಆಜ್ಞಾಪಿಸಲಿಕ್ಕೆ ಹಿರಿಯರು ಹಿಂದೆಮುಂದೆ ನೋಡುವಹಾಗಿಲ್ಲ. ಮಿರ್ಝಾರಾಜರಾದರೂ ಬಾದಶಹರ ಅಪ್ಪಣೆಯನ್ನು ಮೀರಲಾರದೆ ನನ್ನನ್ನು ಪ್ರತಿಬಂಧದಲ್ಲಿಡಿಸಬಹುದು. ಹೀಗೆ ಎಲ್ಲರಿಗೂ ತೊಂದರೆಯನ್ನುಂಟು ಮಾಡಿ ನಾನು ಇಲ್ಲಿ ಇರುವದರಲ್ಲಿ ಲಾಭವಿಲ್ಲ. ನಾನು ಇಷ್ಟು ಉದ್ದ ಮಾತಾಡಿ ನಿಮಗೆ ಸೂಚಿಸುವ ಕಾರಣವೇನಂದರೆ, ಇನ್ನು ನಮ್ಮಿಂದ ನಿಮಗೆ ಯಾವಬಗೆಯ ಸಹಾಯವೂ ಆಗುವಹಾಗಿಲ್ಲ. ನನ್ನೊಡನೆ ನಿಮ್ಮ ಒಡಂಬಡಿಕೆಯಾಗುವ ಸಂಭವವೂ ಇರುವದಿಲ್ಲ.''

ಮುಆಝೀಮನ ಈ ಮಾತುಗಳನ್ನು ಕೇಳಿ ವಿಸಾಜಿಯು ನಕ್ಕು— ''ಖಾವಿಂದ, ನಾವು ಬಾಗಿ ನಡೆಯುವದೆಂದರೆ, ಈವರೆಗೆ ಬಹು ಶ್ರಮದಿಂದ ಸಂಪಾದಿಸಿದ್ದನ್ನೆಲ್ಲ ಬಾದಶಹರಿಗೆ ಒಪ್ಪಿಸಿ ಕೈಕಟ್ಟಿಕೊಂಡು ನಿಂತಹಾಗೆಯೇ ಸರಿ. ಎರಡನೆಯ ಮಾರ್ಗವೇ ಇಲ್ಲ. ನಿಮ್ಮ ಸಹಾಯವು ದೊರೆತಿದ್ದರೆ, ಈಗ ಬಂದಿರುವವರಿಗೂ ಚಳ್ಳಹಣ್ಣು ತಿನಿಸುವದಕ್ಕೆ ನಾವು ಹಿಂದೆಮುಂದೆ ನೋಡುವಹಾಗಿದ್ದಿಲ್ಲ; ಆದರೆ ತಾವು ಆಗ್ರಾಕ್ಕೆ ಹೋಗುವೆವೆಂದು ಹೇಳುವಿರಲ್ಲ, ಉಪಾಯವಿಲ್ಲ'' ಎಂದು ನುಡಿಯಲು, ಮುಆಝೀಮನು— ''ವಿಸಾಜೀ, ಇವರಿಗೆ ಚಳ್ಳಹಣ್ಣು ತಿನಿಸುವದು ಸುಲಭವಲ್ಲ. ಮಿರ್ಝಾರಾಜರವರಿಗೆ ಚಳ್ಳಹಣ್ಣು ತಿನಿಸುವವರು ಈವರೆಗೆ ಯಾರೂ ಗಂಟುಬಿದ್ದಿರುವದಿಲ್ಲ; ಮುಂದೆಯಾದರೂ ಗಂಟುಬೀಳುವ ಸಂಭವವಿರುವದಿಲ್ಲ. ಅದರಲ್ಲಿ ದಿಲೇರಖಾನನ ಸಹಾಯವು ಅವರಿಗಿರುತ್ತದೆ. ಅವರಿಬ್ಬರ ಮೇಲೆ ನಮ್ಮ ಹಿರಿಯರ ಸಂಪೂರ್ಣ ವಿಶ್ವಾಸವಿರುವದು. ಅಷ್ಟು ವಿಶ್ವಾಸವು ಬೇರೆ ಯಾರ ಮೇಲೆಯೂ ಇರುವದಿಲ್ಲ. ನಿಜವಾಗಿ ಹೇಳಬೇಕೆಂದರೆ, ಅವರು ಅಂಥ ವಿಶ್ವಾಸಕ್ಕೆ ಪಾತ್ರರೂ ಇರುವರು; ಆದ್ದರಿಂದ ಅವರೊಡನೆ ಕಾದುವ ವಿಚಾರವನ್ನು ಬಿಟ್ಟುಬಿಡಬೇಕೆಂದು ನಾವು ಹೇಳಿದೆವೆಂದು ಶಿವಾಜೀರಾಜರಿಗೆ ತಿಳಿಸಿರಿ; ಸುಮ್ಮನೆ ನಾವು ಸಹಾಯ ಮಾಡವೆವೆಂದು ಹೇಳುವದರಲ್ಲಿ ಅರ್ಥವಿಲ್ಲ. ಇನ್ನೊಮ್ಮೆ ನಾನು ಸ್ಪಷ್ಟವಾಗಿ ಹೇಳುತ್ತೇನೆ. ನೀವು ಕಾದುವ ವಿಚಾರವನ್ನು ಬಿಟ್ಟುಬಿಡಿರಿ. ಮೋಸಗೊಳಿಸುವ ಗೊಡವಿಗೆ ಹೋಗಬೇಡಿರಿ. ವಿನಯದಿಂದ ಕಾರ್ಯವನ್ನು ಸಾಧಿಸಿಕೊಂಡರೆ, ಸಾಧಿಸಿದಷ್ಟು ಸಾಧಿಸುವದು. ನಾನು ಏನಾದರೂ ಸಮಾಧಾನ ಹೇಳುತ್ತೇನೆಂದು ತಿಳಿಯಬೇಡಿರಿ. ನಿಮಗೆ ಹಿತವಾದ ಮಾತನ್ನು ಮನಃಪೂರ್ವಕವಾಗಿ ಹೇಳುತ್ತೇನೆ. ಇದರಮೇಲೆ ನಿಮ್ಮ ವಿಚಾರವಿದ್ದಂತೆ ನಡೆದುಕೊಳ್ಳಬಹುದು.'' ಎಂದು ಸ್ಪಷ್ಟವಾಗಿ ಹೇಳಿದನು. ಅದನ್ನು ಕೇಳಿ ವಿಸಾಜಿಯು ಸುಮ್ಮನೇ ಕುಳಿತುಕೊಂಡನು.

# ಮೊಗಲರ ಅಬ್ಬರ

ಪುರಂದರ ಮುತ್ತಿಗೆಯಲ್ಲಿ ಮರಾಟರು ದಿಲೇರಖಾನನಿಗೆ ಚನ್ನಾಗಿ ಕೈತೋರಿಸಿದ್ದನ್ನು ಕೇಳಿ ಜಯಸಿಂಗನಿಗೆ ಕೌತುಕವಾಯಿತು. ಆತನಿಗೆ ಸ್ವಲ್ಪ ನಗೆಯೂ ಬಂದಿತು. ಹಿಂದಕ್ಕೆ ಜಯಸಿಂಗನು ದಿಲೇರಖಾನನಿಗೆ ಮರಾಟರೊಡನೆ ಜಾಗರೂಕತೆಯಿಂದ ನೆಡಯಬೇಕೆಂದು ಉಪದೇಶಿಸಿದಾಗ, ಖಾನನು ಅಹಂಭಾವದಿಂದ ಉಪಹಾಸ ಮಾಡಿದ್ದನ್ನು ವಾಚಕರು ಮರೆತಿರಲಿಕ್ಕಿಲ್ಲ. ದಿಲೇರಖಾನನಿಗೆ ಹೆಮ್ಮೆ ಬಹಳ. ನಾಲ್ಕು ಪ್ರಹರಗಳಲ್ಲಿ ಪುರಂದರ ದುರ್ಗವನ್ನು ಸ್ವಾಧೀನಪಡಿಸಿಕೊಳ್ಳುವೆನೆಂದು ಎಷ್ಟೋ ಸಾರೆ ಆತನು ಪ್ರತಿಜ್ಞೆಮಾಡಿ ಕೈಸಾಗದೆ ಪೆಟ್ಟುತಿಂದು ಹಿಂದಿರುಗಿ ಬಂದಿದ್ದನು. ಈಗ ಮರಾಟರು ಹೊತ್ತುಸಾಧಿಸಿ ಖಾನನಿಗೆ ನಾಮ ಹಚ್ಚಿದ್ದನ್ನು ನೋಡಿ, ಜಯಸಿಂಗನಿಗೆ ಒಂದುಬಗೆಯ ಸಮಾಧಾನವೇ ಆಯಿತು. ದಿಲೇರಖಾನನ ತಲೆಯೊಳಗಿನ ಮಡ್ಡು ಇಳಿದದ್ದು ಒಂದುಬಗೆಯಿಂದ ನೆಟ್ಟಗಾಯಿತೆಂದು ಆತನು ತಿಳಿದನು; ಆದರೆ ದಿಲೇರಖಾನನ ಮಗಳನ್ನು ಮರಾಟರು ಎಬ್ಬಿಸಿಕೊಂಡು ಹೋದರೆಂಬ ಮಾತನ್ನು ಮಾತ್ರ ಆತನು ಸರ್ವಥಾ ಒಪ್ಪಿಕೊಳ್ಳಲಿಲ್ಲ ಮರಾಟರು ನೂರಇಲ್‌ಹುದೆಯನ್ನು ಅಪಹರಿಸಿದರೆಂಬ ಸುದ್ದಿಯೇ ಆತನಿಗೆ ಬಹು ಕರ್ಣಕಠೋರವಾಗಿ ತೋರಿತು. ಆತನು ಈ ಸುದ್ದಿಯ ಹೇಳಿದವ ನನ್ನು ಬಹಳವಾಗಿ ನಿಷೇಧಿಸಿದನು. ಮರಾಟರು ಯಾವ ಸ್ತ್ರೀಯನ್ನೂ ಮುಟ್ಟಲಾರರೆಂಬ ನಂಬಿಗೆಯು ಮಿರ್ಝಾ ರಾಜನಿಗೆ ಇತ್ತು ಇಂಥ ಅನ್ಯಾಯವನ್ನು ಇನ್ನೂವರೆಗೆ ಮರಾಟರು ಮಾಡಿರುವುದಿಲ್ಲೆಂಬದನ್ನು ಆತನು ಅರಿತಿದ್ದನು. ಸ್ತ್ರೀ ವಿಷಯದಲ್ಲಿ ಶಿವಾಜಿಯ ಕಠೋರತನದ ಗೌರವವನ್ನು ಮಿರ್ಝಾರಾಜನು ಆಗಾಗ್ಗೆ ಮಾಡುತ್ತಿದ್ದನಲ್ಲದೆ, ಆತನ ವಿಷಯಕ್ಕೆ ಈ ಪರನಾರೀ ಸೋದರತ್ವವೇ ಕಾರಣವೆಂದು ಆತನು ತಿಳಿದಿದ್ದನು; ಆದರೂ ತಾನು ದಕ್ಷಿಣಕ್ಕೆ ದಂಡೆತ್ತಿ ಬಂದ ಉದ್ದೇಶದ ದೃಷ್ಟಿಯಿಂದಲೂ, ಶಿವಾಜಿಯ ಮೇಲೆ ತನ್ನ ವರ್ಚಸ್ಸನ್ನು ಕೂಡಿಸುವ ದೃಷ್ಟಿಯಿಂದಲೂ, ನೂರಎಲ್‌ಹುದೆಗೆ ಒದಗಿದ ವಿಪತ್ತಿನ ದೃಷ್ಟಿಯಿಂದಲೂ ತಮಗಾದ ಪರಾಜಯವು ಅಪಮಾನಕಾರಕವಾಗಿರುವುದರಿಂದ, ಅದರ ಸೇಡು ತೀರಿಸಿಕೊಳ್ಳಬೇಕೆಂದು ಮಿರ್ಝಾರಾಜನು ನಿಶ್ಚಯಿಸಿದನು. ಆತನು ಮರಾಟರ ಮೇಲೆ ತನ್ನ ದರ್ಪವನ್ನು ಸಂಪೂರ್ಣ ವಾಗಿ ಕೂಡಿಸಬೇಕಾಗಿತ್ತು, ಯಾವ ಯಾವ ಕಠಿಣೋಪಾಯಗಳನ್ನು ಯೋಚಿಸಿದರೆ ಶಿವಾಜಿಯು ಹಣ್ಣಿಗೆ ಬರಬಹುದೆಂಬದನ್ನು ಆಲೋಚಿಸಿ ಈ ಪ್ರಸಂಗದಲ್ಲಿ ತಾನು ಸ್ವತಃ ಹೋಗತಕ್ಕದ್ದೆಂದು ಆತನು ನಿಶ್ಚಯಿಸಿದನು. ಕೂಡಲೇ ಮಿರ್ಝಾರಾಜನ ಸೈನ್ಯವು ಸಮರಕ್ಕೆ ಸಿದ್ಧವಾಯಿತು.

ಇತ್ತ ದಿಲೇರಖಾನನ ಸ್ಥಿತಿಯು ವಿಲಕ್ಷಣವಾಗಿತ್ತು, ತನ್ನ ಮಗಳನ್ನು ಮರಾಟರು ಅಪಹರಿಸಿದರೆಂದು ನಿಶ್ಚಯಿಸಿದಂದಿನಿಂದ, ಮರಾಟರ ಮೇಲೆ ಆತನು ಮಿತಿಮೀರಿ ಸಿಟ್ಟಾಗಿದ್ದನು. ಸಂತಾಪದ ಭರದಲ್ಲಿ ಆತನು ಪುರಂದರ ಗಡವನ್ನು ಸ್ವಾಧೀನಪಡಿಸಿಕೊಂಡು, ಅದರೊಳಗಿನ ಮರಾಟರನ್ನೆಲ್ಲ ನಿಲ್ಲಿಸಿ ಸುಡಿಸಬೇಕೆಂದು ಮಾಡಿದ್ದನು; ಆದರೆ ದುರ್ಗವು ವಶವಾಗುವ ಬಗೆಯೆತ್ತ? ಆ ದುರ್ಗದ ರಕ್ಷಕನಾದ ಮುರಾರಬಾಜೀ ಎಂಬ ವೀರಾಗ್ರಣಿಯು

ದಿಲೇರಖಾನನಿಗೆ ಸೊಪ್ಪು ಹಾಕದೆ ದುರ್ಗವನ್ನು ಸಂರಕ್ಷಿಸಿಕೊಂಡಿದ್ದನು. ಆತನು ನಡನಡುವೆ ಖಾನನನ್ನು ತೊಂದರೆ ಪಡಿಸುತ್ತಲೇ ಇದ್ದನು; ಅದರಿಂದ ಖಾನನ ಸಂತಾಪವು ಮತ್ತಿಷ್ಟು ಹೆಚ್ಚಿತು. ಮನುಷ್ಯನು ಸಂತಾಪಗೊಂಡಾಗ, ತನ್ನ ಸಂತಾಪಕ್ಕೆ ಕಾರಣರಾದವರ ಸೇಡು ತೀರಿಸಿ ಕೊಳ್ಳುವದಕ್ಕೆ ಆತನು ಯೋಚಿಸಿದ ಕ್ರೂರ ಕರ್ಮಗಳೆಲ್ಲ ಸಾಧಿಸುತ್ತ ಬಂದಿದ್ದರೆ, ಇಷ್ಟುಹೊತ್ತಿಗೆ ಭೂಲೋಕದಲ್ಲಿ ಮನುಷ್ಯರ ವಸ್ತಿಯೇ ಉಳಿಯುತ್ತಿದ್ದಿಲ್ಲ. ದಿಲೇರಖಾನನ ಸ್ಥಿತಿಯು ಹೀಗೆಯೇ ಆಯಿತು. ಹೊಟ್ಟೆಯೊಳಗಿನ ಸಿಟ್ಟು ರಟ್ಟೆಯೊಳಗಿಲ್ಲೆನ್ನುವಂತೆ, ದುರ್ಗವನ್ನು ವಶಮಾಡಿಕೊಳ್ಳಲಾರದೆ ಆತನು ದಗದಗ ಉರಿಯಹತ್ತಿದನು. ಆತನಿಗೆ , ಏನುಮಾಡಲಿ ಏನುಬಿಡಲಿ ಎನ್ನುವಹಾಗಿತ್ತು. ಆತನ ಸಿಟ್ಟಿಗೆ ದುರ್ಗದ ಸುತ್ತಲಿನ ಹಳ್ಳಿಗಳು ಬಲಿಯಾದವು. ಖಾನನು ಹಳ್ಳಿಗಳನ್ನು ಸುಟ್ಟು ಬಯಲು ಮಾಡಿ, ಅಲ್ಲಿ ತನ್ನ ಸೈನ್ಯದ ತಳಊರಹತ್ತಿದನು. ದುರ್ಗದ ತೋಫುಗಳ ಹತ್ತರವೇ ಇತ್ತ ಕಡೆಯಲ್ಲಿ ಆತನ ಸೈನ್ಯದ ಬೀಡ ಬಿಟ್ಟಿತ್ತು. ತನಗಾದ ಅಪಮಾನವನ್ನು ಮಂದಿಯಮುಂದೆ ಉಚ್ಚರಿಸುವದು ಆತನ ಅಭಿಮಾನಕ್ಕೆ ಸಾಲದಾಯಿತು. ಪುರಂದರವನ್ನು ವಶಮಾಡಿಕೊಳ್ಳಲಿಕ್ಕೆ ಮಿರ್ಝಾರಾಜನ ಸಹಾಯದ ಅವಶ್ಯಕತೆಯಿದ್ದರೂ, ಸಹಾಯವನ್ನು ಕೇಳಿಕೊಳ್ಳುವಾಗ ತನಗಾದ ಅಪಮಾನವನ್ನು ಬರೆದು ತಿಳಿಸಲಿಕ್ಕೆ ಖಾನನಿಗೆ ಮರ್ಯಾದೆ ಸಾಲುತ್ತಿದ್ದಿಲ್ಲ. ಹೀಗಾಗಿ ಆತನು ತಳಮಳಿಸುತ್ತಿರುವಾಗ, ಮೇಲೆ ಹೇಳಿದಂತೆ ಜಯಸಿಂಗನೇ ತನ್ನ ಸೈನ್ಯದೊಡನೆ ದಿಲೇರಖಾನನ ಸಹಾಯಕ್ಕೆ ಬರಲು, ಖಾನನ ತೊಂದರೆಯು ದೂರವಾದಂತಾಯಿತು.

ಮಿರ್ಝಾರಾಜನು ದಿಲೇರಖಾನನನ್ನು ಕಾಣಲಿಕ್ಕೆ ಹೋದಾಗ, ಖಾನನು ಮರಾಟರ ಅಯೋಗ್ಯ ನಡತೆಯನ್ನು ವರ್ಣಿಸಿ ಹೇಳಿದನು. ಆ ವರ್ಣನವು ಜಯಸಿಂಗನಿಗೆ ಎಷ್ಟುಮಾತ್ರವೂ ನಿಜವಾಗಿ ತೋರದಿದ್ದರೂ, ಖಾನನ ಮನಸ್ಸನ್ನು ನೋಯಿಸಲಾರದೆ ಆತನು, ಎಂಟು ದಿವಸಗಳಲ್ಲಿ ದುರ್ಗವನ್ನು ತಕ್ಕೊಂಡು ಬಿಡೋಣವೆಂದು ಹೇಳಿದನು. ನಿಜವಾದ ಸಂಗತಿಯು ಹಿಂದಿನಿಂದ ತಾನೇ ಹೊರಬೀಳುವದೆಂದು ಮಿರ್ಝಾರಾಜನು ತಿಳಿದನು. ಆತನು ಮರಾಟರ ದುರ್ಗಗಳನ್ನು ಹ್ಯಾಗೂ ಒಂದೊಂದಾಗಿ ಸ್ವಾಧೀನಪಡಿಸಿಕೊಳ್ಳಲೇಬೇಕಾಗಿತ್ತು. ಅದರಲ್ಲಿ ಪುರಂದರದಂಥ ಪ್ರಚಂಡ ದುರ್ಗವನ್ನು ಮೊದಲ ತುತ್ತಿಗೇ ವಶಮಾಡಿಕೊಂಡರೆ, ಮರಾಟರ ಕಸವು ಬಹುಮಟ್ಟಿಗೆ ಕಡಿಮೆಯಾಗುವದೆಂದು ತಿಳಿದು, ಮಿರ್ಝಾನು ದಿಲೇರಖಾನನನ್ನು ಕುರಿತು— ''ಖಾನಸಾಹೇಬ, ನಾವಿಬ್ಬರೂ ಒಮ್ಮನಸ್ಸಿನಿಂದ ಕಾರ್ಯಮಾಡುತ್ತಿರುವಾಗ ಮರಾಟರಪಾಡೇನು? ನಿಮಗಾದ ದುಃಖ ಬೇರೆ, ನಮಗಾದ ದುಃಖಬೇರೆಯೆ? ಮರಾಟರಿಂದ ಈ ಅಯೋಗ್ಯ ಕೆಲಸವಾದದ್ದೇ ನಿಜವಿದ್ದರೆ, ಅದಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಅವರು ಭೋಗಿಸಿಯೇ ಭೋಗಿಸುವರು. ತಾವು ಶಾಂತರಾಗಬೇಕು. ನೂರಎಲ್‌ಹುದಾ ಬೇಗಮೆಯ ಗೊತ್ತು ಹತ್ತದಹೊರತು ನನಗೆ ಸಮಾಧಾನವಾಗುವಹಾಗಿಲ್ಲ.'' ಎಂದು ಹೇಳಿ ಆತನು ಸೈನ್ಯವನ್ನು ವ್ಯವಸ್ಥೆಗೊಳಿಸಿದನು. ಯಾರುಯಾರು ಎಲ್ಲೆಲ್ಲಿ ಇರಬೇಕೆಂಬದನ್ನು ಗೊತ್ತುಮಾಡಿ, ಅವರವರನ್ನು ಆಯಾಸ್ಥಳಕ್ಕೆ ಕಳಿಸಿಬಿಟ್ಟನು. ಒಂದು ಇರುವೆಯೂ ಕೂಡ ನುಸಿದು

ಹೋಗದಂತೆ ಆತನು ಪುರಂದರ ದುರ್ಗವನ್ನು ಮುತ್ತಿದನು. ಪುರಂದರ ದುರ್ಗದ ಬಳಿಯಲ್ಲಿ ನಿಂತು ಅದನ್ನು ಸ್ವಾಧೀನಪಡಿಸಿ ಕೊಳ್ಳುವಹಾಗಿದ್ದಿಲ್ಲ. ಆದ್ದರಿಂದ ಒಮ್ಮೆಲೆ ಆ ದುರ್ಗಕ್ಕೆ ಕೈಹಾಕಿ ಗಂಡಾಂತರಕ್ಕೆ ಗುರಿ ಯಾಗುವದಕ್ಕಿಂತ, ಮೊದಲು ಆ ಪುರಂದರದ ಬಳಿಯಲ್ಲಿರುವ ರುದ್ರಮಾಲ ಅಥವಾ ವಜ್ರಗಡವನ್ನು ಸ್ವಾಧೀನಪಡಿಸಿಕೊಂಡು, ಆಮೇಲೆ ಪುರಂದರಕ್ಕೆ ಕೈಹಾಕಬೇಕೆಂದು ಮಿರ್ಝಾನು ನಿಶ್ಚಯಿಸಿದನು.

ಕೂಡಲೆ ಮಿರ್ಝಾರಾಜನು ಸೈನ್ಯವನ್ನು ಸಾಗಿಸಿಕೊಂಡುಹೋಗಿ ವಜ್ರಗಡಕ್ಕೆ ಲಗ್ಗೆ ಹತ್ತಿದನು. ಇಂಥ ಪ್ರಚಂಡ ಸೈನ್ಯವು ತಮ್ಮ ಮೇಲೆ ಏರಿ ಬರುತ್ತಿದ್ದರೂ, ವಜ್ರಗಡದ ಮರಾಟರು ಎದೆಗುಂದಲಿಲ್ಲ. ಅವರು ಮೊಗಲರಿಗೆ ಎದೆಗೊಟ್ಟು ಕಾದಿ, ಹತ್ತುದಿವಸಗಳವರೆಗೆ ದುರ್ಗವನ್ನು ಕಾಯ್ದುಕೊಂಡರು; ಆದರೆ ಎಲ್ಲ ಕಡೆಯಲ್ಲಿಯೂ ಮೊಗಲರ ಮುತ್ತಿಗೆ ಬಿದ್ದದ್ದರಿಂದ ದುರ್ಗದೊಳಗೆ ಅನ್ನಸಾಮಗ್ರಿ ಬರುವದು ಕಟ್ಟಾಯಿತು. ದುರ್ಗದೊಳಗಿನ ಅನ್ನಸಂಗ್ರಹವು ತೀರುತ್ತ ಬಂದಿತು; ಆದ್ದರಿಂದ ಮರಾಟರು ವಿಚಾರಮಗ್ನರಾದರು. ಅಷ್ಟರಲ್ಲಿ ಮೊಗಲರು ಒಂದು ದಿನ್ನೆಯಮೇಲೆ ಬಹುಕಷ್ಟದಿಂದ ಮೂರು ತೋಪುಗಳನ್ನು ಏರಿಸಿ ವಜ್ರಗಡಕ್ಕೆ ಹೂಡಿ ಹೊಡೆಯಹತ್ತಿದರು. ''ಅಬದಲಾ'' ಎಂಬ ಹೆಸರಿನ ತೋಫನ್ನು ದಿನ್ನೆಯಮೇಲೆ ಒಯ್ಯಲಿಕ್ಕೆ ಮೂರು ದಿನಗಳು ಬೇಕಾದವು. ''ಫತ್ತೆ ಲಷ್ಕರ'' ಎಂಬ ಎರಡನೆಯ ತೋಫನ್ನು ಏರಿಸಲಿಕ್ಕೆ ಮೂರುವರೆ ದಿವಸಗಳು ಬೇಕಾದವು. ''ಹಾಲೇಲಿ'' ಎಂಬ ಮೂರನೆಯ ಪ್ರಚಂಡ ತೋಫನ್ನು ದಿನ್ನೆಯಮೇಲೆ ಏರಿಸಲಿಕ್ಕೆ ಬಹು ಕಷ್ಟವಾಯಿತು. ಹೀಗೆ ಮೂರು ತೋಪುಗಳು ವಜ್ರಗಡದ ಎದುರಿಗಿನ ದಿನ್ನೆಯಮೇಲಿಂದ ಹಾರಹತ್ತಲು, ವಜ್ರಗಡದೊಳಗಿನ ಜನರು ತತ್ತರಿಸಿದರು; ಆದರೂ ಆ ಕೆಚ್ಚೆದೆಯ ವೀರರು ದುರ್ಗವನ್ನು ಮೊಗಲರಿಗೆ ಒಪ್ಪಿಸಲಿಲ್ಲ. ಅಷ್ಟರಲ್ಲಿ ಮಗಳನ್ನು ಕಳಕೊಂಡು ಉರಿಯುತ್ತಿದ್ದ ದಿಲೇರಖಾನನು, ಇಷ್ಟು ದಿವಸಗಳಾದರೂ ದುರ್ಗವು ತಮ್ಮ ಕೈಸೇರಲೊಲ್ಲದೆಂಬ ಸಿಟ್ಟಿನಿಂದ ತಾನು ಸ್ವತಃ ದುರ್ಗಕ್ಕೆ ಲಗ್ಗೆಹತ್ತಿದನು. ''ಹೊಡೆಯುವೆನು, ಇಲ್ಲವೆ ಮಡಿಯುವೆನು'' ಎಂಬ ನಿಶ್ಚಯದಿಂದ ಆತನು ಕಾದತೊಡಗಿದನು. ಹೀಗೆ ಆತನು ವಿಲಕ್ಷಣ ಧೈರ್ಯವನ್ನೂ, ಪರಾಕ್ರಮವನ್ನೂ ಪ್ರಕಟಿಸುತ್ತಿರಲು, ದುರ್ಗದೊಳಗಿನ ಜನರು ಜರ್ಜರರಾದರು. ದುರ್ಗದೊಳಗಿನ ಅನ್ನಸಂಗ್ರಹವು ತೀರುತ್ತ ಬಂದಿತು. ಹೊಸದಾಗಿ ಅನ್ನ ಸಂಗ್ರಹವಾಗುವ ಹಾಗಿದ್ದಿಲ್ಲ. ಹೊಸ ಸಹಾಯವು ದೊರೆಯಲಿಕ್ಕೆ ಮಾರ್ಗವಿದ್ದಿಲ್ಲ. ಇಂಥ ಸ್ಥಿತಿಯಲ್ಲಿ ದುರ್ಗದೊಳಗಿನ ಜನರು ನಿರಾಶಪಟ್ಟಿದ್ದರಲ್ಲಿ ಆಶ್ಚರ್ಯವೇನು? ಹತಾಶರಾದ ಆ ಮರಾಟರು ಹಾಗೂ ಹೀಗೂ ದುರ್ಗವನ್ನು ಸಂರಕ್ಷಿಸಿಕೊಳ್ಳಲಿಕ್ಕೆ ಯತ್ನಿಸುತ್ತಿರಲು, ದಿಲೇರ ಖಾನನು ನಿಗ್ರಹದಿಂದ ಕಾದಿ ಅವರನ್ನು ಸೋಲಿಸಿ ದಿಕ್ಕುಪಾಲಾಗಿ ಓಡಿಸಿದನು. ಆಗ ಖಾನನು ಮಾಡಿದ ಕೊಲೆಯನ್ನು ವರ್ಣಿಸಲಶಕ್ಯವು. ದುರ್ಗದ ಮೇಲೆ ಮೊಗಲರ ನಿಶಾನೆಯು ನಿಂತಿತು. ದುರ್ಗದೊಳಗಿನವರೆಲ್ಲರೂ ಶಸ್ತ್ರಗಳನ್ನು ಕೆಳಗಿಟ್ಟು ಶರಣು ಬಂದು ದುರ್ಗವನ್ನು ಮೊಗಲರಿಗೆ ಒಪ್ಪಿಸಿದರು. ಶರಣು ಬಂದವರೆಲ್ಲರನ್ನು ಖಾನನು ಸೆರೆಯಲ್ಲಿರಿಸಿ, ಪುರಂದರ ದುರ್ಗವನ್ನು ವಶಮಾಡಿಕೊಳ್ಳಲಿಕ್ಕೆ ತನಗೆ ಸಹಾಯ ಮಾಡುವಂತೆ ಅವರನ್ನು ಬಲಾತ್ಕರಿಸಹತ್ತಿದನು.

ಸೆರೆಯಾಳುಗಳ ಕಷ್ಟದ ಮಿತಿಯು ಮೀರಿತು; ಮಗಳ ವಿಯೋಗದುಃಖದಿಂದ ವಿವೇಕಭ್ರಷ್ಟನಾದ ಖಾನನಿಗೆ ಲೇಶವಾದರೂ ದಯವು ಬರಲಿಲ್ಲ!

ದಿಲೇರಖಾನನ ಈ ರೀತಿಯು ಜಯಸಿಂಗನ ಮನಸ್ಸಿಗೆ ಬರಲಿಲ್ಲ. ಆತನು ದಿಲೇರಖಾನನೊಡನೆ ಆಲೋಚಿಸುವುದಕ್ಕಾಗಿ ಆತನನ್ನು ಒತ್ತಟ್ಟಿಗೆ ಕರಿಸಿಕೊಂಡು ಏಕಾಂತದಲ್ಲಿ— ''ಖಾನಸಾಹೇಬ, ಜನರನ್ನು ಹೀಗೆ ಪೀಡಿಸಿ ಅವರನ್ನು ರೇಗಿಗೆಬ್ಬಿಸುವದು ಸರಿಯಲ್ಲ. ಶರಣುಬಂದ ವೈರಿಗಳನ್ನು ದೊಡ್ಡ ಮನಸ್ಸಿನಿಂದ ನಡೆಸಿಕೊಂಡರೆ ನಮ್ಮ ವಿಷಯವಾಗಿ ಅವರಲ್ಲಿ ನಂಬಿಗೆಯುಳಿದು, ನಮ್ಮ ಕಾರ್ಯವು ಸುಲಭವಾಗಿ ಸಾಧಿಸಬಹುದು. ಒಮ್ಮೆ ನಾವು ಸೆರೆಯಾಳುಗಳನ್ನು ಕ್ರೂರತನದಿಂದ ನಡಿಸಿಕೊಂಡದ್ದು ಪ್ರಸಿದ್ಧವಾದರೆ, ಉಳಿದ ದುರ್ಗಗಳೊಳಗಿನ ಜನರು ಸಾಯುವತನಕ ಕಾದಿ ನಮ್ಮನ್ನು ತೊಂದರೆಗೊಳಿಸಬಹುದು. ಹೀಗೆ ಪ್ರಾಣಹಾನಿ ಮಾಡಿಕೊಳ್ಳುವದರಲ್ಲಿ ಅರ್ಥವೇನು? ದುರ್ಗಗಳನ್ನು ವಶಮಾಡಿಕೊಳ್ಳುವದಷ್ಟು, ನಮ್ಮ ಮುಖ್ಯ ಕೆಲಸವು; ನಾವು ಮೊದಲಿಗೆ ಸ್ವಾಧೀನಪಡಿಸಿಕೊಂಡಿರುವ ಈ ವಜ್ರಗಡದೊಳಗಿನ ಜನರನ್ನು ದೊಡ್ಡ ಮನಸ್ಸಿನಿಂದ ನಡಿಸಿಕೊಂಡರೆ ಬಹಳ ಪ್ರಯೋಜನವಾಗುವದು,'' ಎಂದು ಹೇಳಿ, ದುರ್ಗದೊಳಗಿನ ಮರಾಟರನ್ನು ತನ್ನ ಬಳಿಗೆ ಕರಿಸಿಕೊಂಡು ಅವರನ್ನು ಉಡುಗರೆಗಳಿಂದ ಸತ್ಕರಿಸಿ ಸವಿಮಾತುಗಳಿಂದ— ''ವೀರರೇ, ಸ್ವಾಮಿಕಾರ್ಯವನ್ನು ನೀವು ಉತ್ತಮ ರೀತಿಯಿಂದ ಮಾಡಿ ಕೀರ್ತಿಶಾಲಿಗಳಾದಿರಿ. ನಮ್ಮ ಪ್ರಚಂಡ ಬಲದ ಮುಂದೆ ನಿಮ್ಮ ಕೈಸಾಗದಾಗಲು, ನೀವು ಶರಣು ಬಂದು ಕೋಟೆಯನ್ನು ನಮಗೆ ಒಪ್ಪಿಸಿದ್ದರಲ್ಲಿ ದ್ರೋಹವೇನೂ ಇಲ್ಲ. ನಿಮ್ಮ ಪರಾಕ್ರಮವನ್ನು ನಾವು ಚನ್ನಾಗಿ ಅರಿತಿರುವೆವು; ಆದರೆ ಬಾದಶಹರ ಪ್ರಚಂಡ ಸಾಮರ್ಥ್ಯದ ಮುಂದೆ ನಿಮ್ಮ ಸಾಮರ್ಥ್ಯವು ಹ್ಯಾಗೆ ನಿಲ್ಲಬೇಕು? ವಿಶೇಷ ಪ್ರಾಣಹಾನಿಯನ್ನು ಮಾಡಿಕೊಳ್ಳದೆ ದುರ್ಗವನ್ನು ನಮಗೆ ಒಪ್ಪಿಸಿದ್ದು ನಿಮ್ಮ ಜಾಣತನವೇ ಸರಿ, ನಿಮ್ಮನ್ನು ನಾವು ಈಗ ಹೋಗಗೊಡುವೆವು. ನೀವು ಬೇಕಾದ ಕಡೆಗೆ ಹೋಗಿರಿ. ನಮ್ಮ ಪ್ರಚಂಡ ಬಲದ ಅನುಭವವಂತೂ ನಿಮಗೆ ಬಂದೇ ಇರುತ್ತದೆ. ಆದ್ದರಿಂದ ಉಳಿದ ದುರ್ಗದೊಳಗಿನ ಮರಾಟಾ ವೀರರಿಗೂ ವ್ಯರ್ಥ ಪ್ರಾಣಹಾನಿಯನ್ನು ಮಾಡಿಕೊಳ್ಳದೆ ದುರ್ಗಗಳನ್ನು ನಮಗೆ ಒಪ್ಪಿಸುವಂತೆ ಬೋಧಿಸಿರಿ. ಹ್ಯಾಗಿದ್ದರೂ ನಾವು ನಿಮ್ಮ ಯಾವತ್ತೂ ದುರ್ಗಗಳನ್ನು ಸ್ವಾಧೀನಪಡಿಸಿಕೊಳ್ಳದೇ ಬಿಡುವದಿಲ್ಲ. ನೀವು ನಮ್ಮೊಡನೆ ಕಾದಿದರೆ ನಾವು ಹಿಂಜರಿಯುವೆವೆಂದು ನೀವು ತಿಳಿಯಬೇಡಿರಿ. ನಮ್ಮ ಪ್ರಚಂಡಸೈನ್ಯವು ನಿಮ್ಮೊಡನೆ ಕಾದಲಿಕ್ಕೆ ಸಿದ್ಧವಾಗಿರುವದು; ಆದರೆ ವ್ಯರ್ಥ ಪ್ರಾಣಹಾನಿಯಾಗುವದು ನನ್ನ ಮನಸ್ಸಿಗೆ ಬರುವದಿಲ್ಲ,'' ಎಂದು ಹೇಳಿ, ಅವರನ್ನು ದುರ್ಗದಿಂದ ಹೋಗಗೊಟ್ಟನು. ಇದು ದಿಲೇರಖಾನನ ಮನಸ್ಸಿಗೆ ಬರಲಿಲ್ಲ. ಈ ಜನರನ್ನು ಪ್ರತಿಬಂಧಿಸಿ ಇಟ್ಟು, ನೂರಎಲ್‌ಹುದೆಯನ್ನು ತಂದು ಒಪ್ಪಿಸುವದಕ್ಕಾಗಿ ಆಗ್ರಹ ಮಾಡಿ, ಇವರ ಕೊಲೆಯ ಭಯವನ್ನು ಶಿವಾಜಿಗೆ ಹಾಕಿದರೆ ಕಾರ್ಯವಾಗಬಹುದೆಂದು ಆತನು ತಿಳಿದಿದ್ದನು; ಆದರೆ ಮಿರ್ಝಾರಾಜನ ಮುತ್ಸದ್ದಿತನದಿಂದ ಅದು ಸಾಧಿಸಲಿಲ್ಲ.

ಹೀಗೆ ರುದ್ರಮಾಲ ಅಥವಾ ವಜ್ರಗಡವು ಕೈವಶವಾದಬಳಿಕ ದಿಲೇರಖಾನನು ಪುರಂದರದ ಕಡೆಗೆ ನಡೆದನು. ಆತನು ಆದಷ್ಟು ಬೇಗನೆ ಪುರಂದರ ದುರ್ಗವನ್ನು ಸ್ವಾಧೀನ ಪಡಿಸಿಕೊಳ್ಳಬೇಕಾಗಿತ್ತು, ಆತನು ತನ್ನ ಪ್ರಚಂಡ ಸೈನ್ಯದಿಂದ ಪುರಂದರ ದುರ್ಗವನ್ನು ಬಿಗಿಯಾಗಿ ಮುತ್ತಿಬಿಟ್ಟನು. ಇತ್ತ ಜಯಸಿಂಗನು ಉಳಿದ ಸೈನ್ಯದಲ್ಲಿ ಬೇರೆ ಬೇರೆ ಭಾಗಗಳನ್ನು ಮಾಡಿ, ಅವನ್ನು ಮಹಾರಾಷ್ಟ್ರದ ಬೇರೆ ಬೇರೆ ಭಾಗಗಳನ್ನು ನಾಶಗೊಳಿಸುವದಕ್ಕಾಗಿ ಕಳಿಸಿದನು. ಹೀಗೆ ಮಾಡುವಲ್ಲಿ ಜಯಸಿಂಗನ ಮುತ್ಸದ್ದಿತನವಿತ್ತು. ''ಪುರಂದರ ದುರ್ಗವ ಮುತ್ತಿ ಇನ್ನೂ ಮೊಗಲರ ಪ್ರಚಂಡ ಸೈನ್ಯವು ಉಳಿದಿರುವದೆಂದು, ದೇಶವನ್ನು ನಾಶಮಾಡದೆ ಮೊಗಲರು ಬಿಡರು'' ಎಂದು ಮಹಾರಾಜರಿಗೂ, ಅವರ ಪ್ರಜೆಗಳಿಗೂ ತಿಳಿದರೆ, ತನ್ನ ಕಾರ್ಯವು ಅನಾಯಾಸವಾಗಿ ಸಾಧಿಸುವದೆಂದು ಆತನು ತಿಳಿದಿದ್ದನು. ತನ್ನ ಪ್ರಜೆಗಳಿಗಾಗುವ ತಾಪವನ್ನು ನೋಡಿ ಶಿವಾಜಿಯು ತಾನಾಗಿ ಶರಣುಬರುವಂತೆ ಮಾಡಬೇಕೆಂಬದು ಮಿರ್ಝಾರಾಜನ ಸಂಕೇತವಾಗಿತ್ತು. ಇದಕ್ಕಾಗಿ ಆತನು ತನ್ನ ಸೈನ್ಯದ ಭಾಗಗಳ ಮುಖ್ಯಸ್ಥರಿಗೆ—''ನೀವು ಮಹಾರಾಷ್ಟ್ರದಲ್ಲಿ ಮನಸ್ಸಿಗೆ ಬಂದಂತೆ ಕೊಲೆ ಸುಲಿಗೆಗಳನ್ನು ಮಾಡಬೇಕು; ಹೊಲಗಳೆನ್ನದೆ, ತೋಟಗಳೆನ್ನದೆ, ಕೈಗೆ ಸಿಕ್ಕವನ್ನು ನಾಶಗೊಳಿಸಿ, ಊರುಗಳಿಗೆ ಬೆಂಕಿ ಹಚ್ಚಿ ಜನರನ್ನು ದೆಸೆಗೆಡಿಸ ಬೇಕು,'' ಎಂದು ಅಪ್ಪಣೆಮಾಡಿದನು. ಶಿವಾಜಿಯು ಈ ಮೊದಲೆ ಮೊಗಲ ರಾಜ್ಯದಲ್ಲಿ ನಡಿಸಿದ ಅನರ್ಥದ ಸೇಡನ್ನು ಈಗ ಸಂಪೂರ್ಣವಾಗಿ ತೀರಿಸಿಕೊಳ್ಳಬೇಕೆಂದು ಆತನು ಅವರಿಗೆ ಸ್ಪಷ್ಟವಾಗಿ ಹೇಳಿದನು. ದಾವುದಖಾನ, ರಾಜಾರಾಯಸಿಂಗ, ಶಿರ್ಝಾಖಾನ, ಅಮರಸಿಂಗ, ಅಚಲಸಿಂಗ, ಜಬರ್ದಸ್ತಖಾನ ಮುಂತಾದ ಮುಖ್ಯರ ಕೈಯಲ್ಲಿ ಆರಿಸಿದ ಕ್ರೂರ ಜನರನ್ನು ಕೊಟ್ಟು, ಮರಾಟರ ದೇಶವನ್ನು ಹಾಳುಗೆಡವಲಿಕ್ಕೆ ಜಯಸಿಂಗನು ಕಳಿಸಿದನು.

ಹುಂಬರಿಗೆ ಈ ಪ್ರಕಾರದ ಅಪ್ಪಣೆಯಾದಬಳಿಕ ಕೇಳುವದೇನು? ಮೊದಲೇ ಮಂಗ, ಅದರಲ್ಲಿ ಸೆರೆಕುಡಿಸಿದರೆನ್ನುವಂತೆ ಆಗಿ, ದೇಶದಲ್ಲಿ ಅನರ್ಥಪರಂಪರೆಗಳು ಉತ್ಪನ್ನವಾಗಿ ಮಹಾಪ್ರಳಯಕ್ಕೆ ಆರಂಭವಾದಂತಾಯಿತು. ಜನರಿಗೆ ಸಂಪತ್ತಿಯ ಅಥವಾ ಬೇರೆಯಾತರ ಮೋಹವು ಉಳಿಯದೆ, ಅವರು ತಮ್ಮ ಮಕ್ಕಳು–ಮರಿಗಳನ್ನು ಕಟ್ಟಿಕೊಂಡು ದಾರಿಸಿಕ್ಕತ್ತ ಓಡಿಹೋಗಹತ್ತಿದರು. ಅವರಿಗೆ ಬೇರೆ ಪ್ರಾಣರಕ್ಷಣೋಪಾಯವು ಉಳಿಯಲಿಲ್ಲ. ಮನೆಮಾರು ಬಿಟ್ಟು ಜನರು ಓಡಿಹೋಗಹತ್ತಿದ್ದರಿಂದ ಅವರ ಧನ–ಧಾನ್ಯಗಳಂತು ಅನಾಯಾಸವಾಗಿ ಮೊಗಲರ ಕೈಸೇರುತ್ತಿದ್ದವು; ಹೆಂಡಿರು–ಮಕ್ಕಳನ್ನು ಕಟ್ಟಿಕೊಂಡು ಓಡಿಹೋಗುತ್ತಿರುವವರನ್ನು ಬೆನ್ನಟ್ಟಲಿಕ್ಕೆ ಮೊಗಲ ಸೈನ್ಯಕ್ಕೆ ಚಲ್ಲಾಟವಾಗುತ್ತಿತ್ತು. ಅವರು ಕೈಗೆ ಸಿಕ್ಕ ಗಂಡಸರನ್ನು ಕೊಲ್ಲುತ್ತಿದ್ದರು, ಹೆಂಗಸರನ್ನು ಪರಿಪರಿಯಾಗಿ ಪೀಡಿಸುತ್ತಿದ್ದರು. ಹೊಲ–ತೋಟ, ಮನೆ–ಮಾರು ಮುಂತಾದವುಗಳ ನಾಶಗೊಳಿಸಿದ್ದನ್ನಂತು ವರ್ಣಿಸಲಶಕ್ಯವು. ತಮ್ಮ ಸುತ್ತುಮುತ್ತಲಿನ ಊರುಗಳ ಈ ಹಾಡನ್ನು ಕೇಳಿ ಪುರಂದರದೊಳಗಿನ ಜನರ ಅಂತಃಕರಣಗಳು ಕರಗಿ ನೀರಾದವು. ದುರ್ಗದೊಳಗಿನ ಜನರ ಆಪ್ತರು ಸುತ್ತುಮುತ್ತಲಿನ ಊರುಗಳಲ್ಲಿದ್ದರೆಂದು ಹೇಳಲವಶ್ಯವಿಲ್ಲ. ಪ್ರತಿ ಒಬ್ಬನ ಆಪ್ತರ ನಾಶವು ಕಣ್ಣಿಗೆ ಕಟ್ಟಿದಂತೆ ಆಗಿತ್ತು; ಪುರಂದರದ ಸುತ್ತುಮುತ್ತಲಿನ

ಇಪ್ಪತ್ತೈದು ಮೂವತ್ತು ಹರದಾರಿಯ ಪ್ರದೇಶವು ಸಂಪೂರ್ಣವಾಗಿ ಹಾಳುಬಿದ್ದುಹೋಯಿತು. ಆದರೂ ದುರ್ಗದೊಳಗಿನ ವೀರರಲ್ಲಿ ಒಬ್ಬನಾದರೂ ದುರ್ಗವನ್ನು ಶತ್ರುಗಳಿಗೆ ಒಪ್ಪಿಸುವ ಮನಸ್ಸು ಮಾಡಲಿಲ್ಲ. ಪ್ರತಿಒಬ್ಬನ ಹೆಣವು ಬೀಳುವವರೆಗೆ ದುರ್ಗವು ಶತ್ರುಗಳ ಕೈಸೇರಲಾರ ದೆಂತಲೂ, ಶತ್ರುಗಳು ದುರ್ಗವನ್ನು ಸ್ವಾಧೀನಪಡಿಸಿಕೊಂಡಾಗ ಒಬ್ಬ ಜೀವಂತ ಪ್ರಾಣಿಯನ್ನಾದರೂ ದುರ್ಗದಲ್ಲಿ ಕಾಣದೆ, ಹೆಣದ ರಾಶಿಯನ್ನು ತುಳಿಯುತ್ತ ಅವರು ಒಳಗೆ ಬರುವಂತೆ ಮಾಡಬೇಕೆಂತಲೂ, ಆ ಶೂರ ಮರಾಟರು ನಿಶ್ಚಯಿಸಿದ್ದರು. ಪ್ರಸಂಗ ಒದಗಿದಲ್ಲಿ ಮರಣಕ್ಕೆ ಶರಣುಹೋಗಬೇಕಲ್ಲದೆ, ಶತ್ರುಗಳಿಗೆ ಶರಣು ಹೋಗಲಾಗದೆಂದು ಅವರ ನಿರ್ಧಾರವು! ಆ ವೀರರು ಇಂಥ ಕಠಿಣಪ್ರಸಂಗದಲ್ಲಿಯೂ ತಮ್ಮ ಧೈರ್ಯ–ಪರಾಕ್ರಮಗಳನ್ನು ತೋರಿಸದೆಯಿರಲಿಲ್ಲ. ಮೊಗಲರ ಪ್ರಚಂಡ ಸೇನಾಸಮುದ್ರವನ್ನು ನೋಡಿಯೇ ಅನ್ಯರು ಕೈಕಾಲು ಬಿಡಬಹುದಾಗಿತ್ತು; ಆದರೆ ಹಾಗೆ ಮಾಡುವದು ಮರಾಟರ ಶೀಲವಾಗಿದ್ದಿಲ್ಲ. ಆ ಕೆಚ್ಚೆದೆಯವರು ತಮ್ಮ ಸಾಮರ್ಥ್ಯದಂತೆ ಮೊಗಲರನ್ನು ಕಾಡಿ ತಮ್ಮ ಶೀಲವನ್ನು ಕಾಯ್ದು ಕೊಂಡರು! ಇವರ ತಾಪದಿಂದ ಹಲವು ಕಡೆಯ ಮೊಗಲ ಸೈನ್ಯದ ತಂಡಗಳು ಜರ್ಜರವಾದವು.

ಇತ್ತ ಪುರಂದರ ದುರ್ಗದೊಳಗಿನವರಂತು ರಾತ್ರಿ ಪಕ್ಕನೆ ಹೊರಬಿದ್ದು ಮೊಗಲ ಸೈನ್ಯದ ಬೇರೆ ಬೇರೆ ಭಾಗಗಳಿಗೆ ತೊಂದರೆ ಕೊಡುತ್ತಲೇ ಇದ್ದರು. ಒಮ್ಮೊಮ್ಮೆ ಇದರಿಂದ ಮೊಗಲರಿಗೆ ಬಹಳ ತ್ರಾಸವಾಗುತ್ತಿತ್ತು; ಒಮ್ಮೊಮ್ಮೆ ಮರಾಟರ ಸಂಹಾರವು ಮಿತಿಮೀರಿ ಆಗುತ್ತಿತ್ತು. ಹೀಗೆ ಮುಯ್ಯಕ್ಕೆ ಮುಯ್ಯ ಕಡಕ್ಕೆ ಕಡ ಅನ್ನುವಂತೆ ಪರಸ್ಪರ ರಣೋದ್ಯೋಗಗಳು ನಡೆದಿದ್ದವು; ಆದರೂ ರುದ್ರಮಾಲವು ಮೊಗಲರ ಕೈಸೇರಿದಂದಿನಿಂದ ಮೊಗಲರ ರಣೋತ್ಸಾಹವು ಹೆಚ್ಚುತ್ತ ಮರಾಟರದು ಕಡಿಮೆಯಾಗುತ್ತ ನಡೆದಿದ್ದವು. ಮುಖ್ಯವಾಗಿ ಮರಾಟರಿಗೆ ಹೊರಗಿನಿಂದ ಜನರ, ಹಾಗು ಅನ್ನಸಾಮಗ್ರಿಯ ಸಹಾಯವು ಒದಗದ ಹಾಗಾಗಿತ್ತು. ವಜ್ರಗಡವು ಕೈಬಿಟ್ಟು ಹೋಗಿ ಅವರ ಗುಪ್ತಮಾರ್ಗಗಳ ಸಂಚಾರವು ಕಟ್ಟಾಗಿತ್ತು; ಇದರಿಂದ ಮರಾಟರು ನಿರಾಶೆಪಡಹತ್ತಿದ್ದರು; ಆದರೂ ಶತ್ರುಗಳನ್ನು ಹಣ್ಣಿಗೆ ತರಲು, ಅವರು ತಮ್ಮಿಂದಾದಷ್ಟು ಹೆಣಗುತ್ತಲೇ ಇದ್ದರು. ದೈವವು ಪ್ರತಿಕೂಲವಾಯಿತೆಂದರೆ, ಎಲ್ಲಕಡೆಯಲ್ಲಿ ಅಪಯಶಸ್ಸಿನ ಮುತ್ತಿಗೆ ಬಿದ್ದಂತಾಗುತ್ತದೆ. ಏಪ್ರಿಲ್ ತಿಂಗಳಲ್ಲಿ ನೇತಾಜಿ ಪಾಲಕರನೆಂಬ ಮರಾಠಾ ವೀರನು, ಅತ್ಯಂತ ಸಾಹಸಮಾಡಿ ಮೊಗಲ ಸೈನ್ಯದೊಂದು ಭಾಗವನ್ನು ಜರ್ಜರಗೊಳಿಸಿ ಪುರಂದರ ದುರ್ಗಕ್ಕೆ ಅನ್ನಸಾಮಗ್ರಿಯ ಒದಗಿಸಿ ಕೊಡುವ ಎತ್ತುಗಡೆಮಾಡಿದನು; ಆದರೆ ಆಗ ಮಳೆಗಾಲವಲ್ಲದಿದ್ದರೂ ದುರ್ದೈವದಿಂದ ಅಕಸ್ಮಾತ್ತ ಮಳೆಯಾಗಿ ಆತನ ಕಾರ್ಯಕ್ಕೆ ದೊಡ್ಡ ವಿಘ್ನವುಂಟಾಯಿತು. ಅನುಕೂಲ ಕಾಲದಲ್ಲಿ ಮಣ್ಣು ಹಿಡಿದರೆ ಚಿನ್ನವಾಗುವಂತೆ, ಪ್ರತಿಕೂಲ ಕಾಲದಲ್ಲಿ ಚಿನ್ನ ಹಿಡಿದರೆ ಮಣ್ಣಾಗುತ್ತದೆಂಬ ಮಾತು ಮರಾಟರ ಅನುಭವಕ್ಕೆ ಈಗ ಬಹಳ ಕಡೆಯಲ್ಲಿ ಬಂದಿತು. ಇಂಥ ಆಕಸ್ಮಿಕ ವಿಘ್ನದಿಂದ ಪಾಲಕರನಿಗೆ ಕಾರ್ಯಸಾಧಿಸಲಿಕ್ಕೆ ಸ್ವಲ್ಪ ವಿಲಂಬವಾಯಿತು. ಅಷ್ಟರಲ್ಲಿ ಸುಪೆಯ ಕಡೆಯಿಂದ ಮೊಗಲರದೊಂದು ಸೈನ್ಯಭಾಗವು ಬಂದು, ನೇತಾಜಿಯ ದೂಳಹಾರಿಸಿಬಿಟ್ಟಿತು! ಮತ್ತೆ ಮೇ ತಿಂಗಳಲ್ಲಿ ಕುತುಬುದ್ದೀನಖಾನ

ನೆಂಬವನು ಉರವಟೆಯ ಕೋಟೆಗೆ ಲಗ್ಗೆಹತ್ತಿ ಅಲ್ಲಿ ಒಟ್ಟು ಗೂಡುತ್ತಿದ್ದ ಮರಾಟರನ್ನು ದಿಕ್ಕುಪಾಲಾಗಿ ಓಡಿಸಿಬಿಟ್ಟನು. ಈ ಖಾನನು ಮರಾಟರ ಊರುಗಳ ನಾಶಮಾಡಿದ್ದನ್ನು ವರ್ಣಿಸಲಶಕ್ಯವು. ಮೊಗಲರು ಮರಾಟರನ್ನು ಎಲ್ಲಿಯೂ ಒತ್ತಟ್ಟಿಗೆ ಒಟ್ಟುಕೂಡಗೊಡದಾದರು. ಊರು ಹಾಳುಗೆಡವುವ ಕಾರ್ಯವನ್ನಂತು ಅವರು ಒಂದೇಸವನೆ ನಡಿಸಿದ್ದರು. ಸಿಂಹಗಡ, ರಾಯಗಡ, ರೋಹಿಡಾ, ಕುಮಾರಿಲಗಡ ಇವುಗಳನ್ನು ಸ್ವಾಧೀನಪಡಿಸಿಕೊಳ್ಳುವದು ಮೊಗಲರ ಮನಸ್ಸಿನಲ್ಲಿ ಇರದಿದ್ದರೂ, ಅವುಗಳ ಸುತ್ತುಮುತ್ತಲಿನ ಊರುಗಳನ್ನು ಅವರು ಹಾಳುಗೆಡವದೆ ಬಿಡಲಿಲ್ಲ. ಒಮ್ಮೆ ಯಾರೋ ಮಿರ್ಝಾರಾಜನಿಗೆ— "ಮಹಾರಾಜರು ಲೋಹಗಡದಲ್ಲಿ ಒಂದು ದೊಡ್ಡ ಸೈನ್ಯವನ್ನು ಕೂಡಿಸುತ್ತಲಿದ್ದು ಅವರ ಆ ಕಾರ್ಯವು ಸಂಪೂರ್ಣವಾಗಿ ಸಾಧಿಸಿದರೆ, ನಮ್ಮ ಕಾರ್ಯಕ್ಕೆ ದೊಡ್ಡ ವಿಘ್ನವೊದಗಿದಂತಾಗುವದೆ"ಂದು ಹೇಳಿದರು. ಕೂಡಲೆ ಜಯಸಿಂಗನು ಸೈನ್ಯದ ಎರಡು ಭಾಗಗಳನ್ನು ಲೋಹಗಡದ ಕಡೆಗೆ ಸಾಗಿಸಿಕೊಂಡು ಹೋಗಿ, ಆ ದುರ್ಗದ ಹಿಂದಿನಿಂದಲೂ, ಮುಂದಿನಿಂದಲೂ ಕೊಳ್ಳೆಯಿಟ್ಟನು. ಅಲ್ಲಿ ಮಹಾರಾಜರು ಸೈನ್ಯವ ಕೂಡಿಸುತ್ತಲಿದ್ದದ್ದು ನಿಜವಿತ್ತು. ಮೊಗಲರು ತಮ್ಮನ್ನು ಚದರಿಸಲು ಬಂದಿರುವರೆಂದು ತಿಳಿದು 500 ಜನ ರಾವುತರೂ 1000 ಜನ ಕಾಲಾಳುಗಳೂ ಮರಣಕ್ಕೆ ಸಿದ್ಧರಾಗಿ ಮೊಗಲರಿಗೆ ಎದುರಾದರು; ಆದರೆ ರಜಪೂತರ ದೊಡ್ಡ ಸೈನ್ಯಕ್ಕೆ ಅವರು ಈಡಾಗಲಿಲ್ಲ. ಬಹುಜನ ಮರಾಟರು ರಣದಲ್ಲಿ ಮಡಿದರು; ಬಹುಜನರು ಸೆರೆಯಾಳಾದರು; ಅವರ ಕುದುರೆಗಳೂ, ದನಕರುಗಳೂ ಶತ್ರುಗಳ ಕೈಸೇರಿದವು. ಲೋಹಗಡ, ವಿಶಾಲಗಡ, ತಿಕೋನಾ, ಟಾಂಕಿ ಎಂಬ ನಾಲ್ಕು ದುರ್ಗಗಳ ಸುತ್ತುಮುತ್ತಲಿನ ಊರುಗಳು ಹಾಳುಬಿದ್ದವು. ಹೀಗೆ ಮೊಗಲರು ಒಂದು ಕಡೆಯಲ್ಲಿಯೂ ಮರಾಟರಿಗೆ ಒಟ್ಟುಗೂಡಲಿಕ್ಕೆ ಆಸ್ಪದ ಕೊಡಲಿಲ್ಲ. ಬಾಲೇಘಾಟ, ಪೈಣಘಾಟಗಳಲ್ಲಿ ಮೊಗಲರು ಹಾಳುಮಾಡದೆ ಇದ್ದ ಒಂದು ಊರಾದರೂ ಉಳಿದಿದ್ದಿಲ್ಲ. ಹೀಗೆ ದೇಶಗಳನ್ನು ಹಾಳುಮಾಡಲಿಕ್ಕೆ ಮರಾಟರಿಗೆ ಬರುತ್ತಿದ್ದಿಲ್ಲ ವೆನ್ನುವ ಹಾಗಿದ್ದಿಲ್ಲ; ಆದರೆ ತಮ್ಮ ಊರುಗಳನ್ನು ತಾವು ಹಾಳುಮಾಡಲಿಕ್ಕೆ ಅವರ ಕೈಗಳು ಏಳದಾದವು, ತಮ್ಮ ಪ್ರಜೆಗಳಿಗೆ ತ್ರಾಸವಾಗದೆ ಶತ್ರುಗಳಿಗೆ ಪ್ರತಿಬಂಧವಾಗುವಂತೆ ಕೆಲವು ಅರಣ್ಯಗಳಿಗೆ ಮಾತ್ರ ಬೆಂಕಿಹಚ್ಚಿ ಮರಾಟರು ಶತ್ರುಗಳನ್ನು ತೊಂದರೆಗೊಳಿಸಿದರು; ಆದರೆ ಈ ತೊಂದರೆಯ ಪ್ರಯೋಜನವು ಹೇಳಿಕೊಳ್ಳುವ ಹಾಗೆ ಆಗಲಿಲ್ಲ.

ಈ ಸ್ಥಿತಿಯಲ್ಲಿ ಪುರಂದರ ದುರ್ಗದವರು ತಮ್ಮ ಕರ್ತೃತ್ವಶಕ್ತಿಯಿಂದಲೇ ತಮ್ಮ ಸಂರಕ್ಷಣ ಮಾಡಿಕೊಳ್ಳಬೇಕಾಯಿತು. ಅವರಿಗೆ ಹೊರಗಿನ ಸಹಾಯವು ಕಟ್ಟಾಯಿತು; ಮೊಗಲ ಸೈನ್ಯಗಳು ಯಾವಾಗಲೂ ಜಾಗರೂಕವಾಗಿ ಇರಹತ್ತಿದ್ದರಿಂದ ಅವರ ರಾತ್ರಿಯ ಮುತ್ತಿಗೆಗಳಿಂದಲೂ ಪ್ರಯೋಜನವಾಗದಂತಾಯಿತು. ಆದ್ದರಿಂದ ಅವರು ಹತಾಶರಾದರು. ಹೀಗೆ ಮರಾಟರು ಹತಾಶರಾಗಬೇಕೆಂತಲೇ ಜಯಸಿಂಗನು ಇಚ್ಛಿಸುತ್ತಿದ್ದನು; ಯಾಕಂದರೆ, ತನ್ನ ಜನರ ಈ ಹತಾಶೆಯನ್ನೂ, ಗೋಳಾಟವನ್ನೂ ನೋಡಿ ಶಿವಾಜಿಯು ತನಗೆ ಅನಾಯಾಸವಾಗಿ ಶರಣು ಬರಬಹುದೆಂದು ಆತನು ತಿಳಿದಿದ್ದನು. ತನ್ನ ಪ್ರಜೆಗಳ ಗೋಳನ್ನು ಲೆಕ್ಕಿಸದೆ ಯುದ್ಧಮಾಡುವಷ್ಟು

ಶಿವಾಜಿಯು ಕಠಿಣ ಹೃದಯದವನಲ್ಲೆಂಬದು ಜಯಸಿಂಗನಿಗೆ ಗೊತ್ತಿತ್ತು. ಆದ್ದರಿಂದ ಮಿರ್ಝಾ ರಾಜನು ತನ್ನ ಕಾಯಕವನ್ನು ಭರದಿಂದ ಸಾಗಿಸಿದನು. ಜಯಸಿಂಗನ ಈ ಮನೋದಯವು ವ್ಯರ್ಥವಾದದ್ದಿದ್ದಿಲ್ಲ. ಮೊಗಲರು ನಡಿಸಿರುವ ಅನರ್ಥವನ್ನು ನೋಡಿ ಮಹಾರಾಜರು ಚಿಂತೆಗೊಳಗಾದರು. ಅವರಿಗೆ ರಾತ್ರಿ ನಿದ್ದೆ ಬಾರದಂತಾಯಿತು. ತಾವು ಬಹು ಕಷ್ಟದಿಂದ ಕಟ್ಟಿದ ಸ್ವರಾಜ್ಯ ಮಂದಿರವು ಕುಕ್ಕರಿಸಿ ಬೀಳುವ ಲಕ್ಷಣವು ತೋರಿ ಅವರಿಗೆ ಪರಮಾವಧಿ ವ್ಯಸನವಾಯಿತು. ತಮ್ಮ ಧರ್ಮದ ಜನರೇ ತಮಗೆ ಮುಳುವು ಆಗುವದನ್ನು ನೋಡಿ ಅವರು ಮರುಗಿದರು. ಒಮ್ಮೆ ಮಿರ್ಝಾರಾಜನನ್ನು ಕಂಡು ಹೀಗೆ ಅನರ್ಥ ನಡೆಸಿರುವದು ದೇಶಘಾತಕವೂ ಧರ್ಮಘಾತಕವೂ ಆಗಿರುವದೆಂಬದನ್ನು ಆತನಿಗೆ ಸ್ಪಷ್ಟವಾಗಿ ತಿಳಿಸಬೇಕೆಂದು ಅವರು ಮಾಡಿದರು; ಆದರೆ ಜಯಸಿಂಗನ ಸಂಪೂರ್ಣವಾದ ಮೊಗಲ ಪಕ್ಷಪಾತಿತ್ವದ ಶೀಲವನ್ನು ಅವರು ಅರಿತಿದ್ದರಿಂದ, ಹೀಗೆ ಮಾಡುವದರಿಂದ ಲಾಭವೇನೂ ಆಗದೆ ತಾವು ಮಾತ್ರ ಅನಾಯಾಸವಾಗಿ ಮೊಗಲರ ಕೈಯಲ್ಲಿ ಸಿಕ್ಕಂತಾಗುವದೆಂದು ಅವರು ತಿಳಿದರು. ಬಾದಶಹನನ್ನು ಸಂತೋಷಪಡಿಸಿ ತನ್ನ ವರ್ಚಸ್ಸನ್ನೂ, ವೈಭವವನ್ನೂ ಹೆಚ್ಚಿಸಿಕೊಳ್ಳುವದೊಂದನ್ನೇ ಜಯಸಿಂಗನು ಅರಿತಿದ್ದನು; ಆದರೂ ತಾವು ಮಾಡತಕ್ಕ ಯತ್ನವನ್ನು ಮಾಡಿ ನೋಡಬೇಕೆಂದು ಯೋಚಿಸಿ, ಮಹಾರಾಜರು ರಘುನಾಥ ಪಂಡಿತನೆಂಬ ಬ್ರಾಹ್ಮಣನನ್ನು ಸಂಧಾನಾರ್ಥವಾಗಿ ಮಿರ್ಝಾ ರಾಜನ ಕಡೆಗೆ ಕಳಿಸಿದರು.

## ಮಾತಾ ರಣದೇವಿ

ದುರ್ಜಯಸಿಂಗನು ಏಸಾಜಿಯಿಂದ ಪೆಟ್ಟುತಿಂದು ಓಡಿಹೋದದ್ದನ್ನು ವಾಚಕರು ಬಲ್ಲರಷ್ಟೇ? ನೂರಎಲ್‌ಹುದೆಯನ್ನು ಶಹಾಜಾದಾ ಮುಆಝೀಮನಿಗೆ ಅರ್ಪಿಸಿ, ಸ್ವಾರ್ಥ ಸಾಧಿಸಿಕೊಳ್ಳಬೇಕೆಂಬ ಅವನಿಗೆ ವಿಚಾರವು ವ್ಯರ್ಥವಾದದ್ದಲ್ಲದೆ, ತಿರುಗಿ ದಿಲೇರಖಾನನ ಕಣ್ಣಿಗೆ ಬೀಳುವದು ಸಹ ಅವನಿಗೆ ದುಸ್ತರವಾಯಿತು; ಯಾಕಂದರೆ, ಪ್ರಸಂಗವಶಾತ್ ನೂರಎಲ್ ಹುದೆಯ ಮುಖದಿಂದ, ಅಥವಾ ಬೇರೆಯವರ ಮುಖದಿಂದ ತನ್ನ ವಿಶ್ವಾಸಘಾತದ ನಡತೆಯು ದಿಲೇರಖಾನನ ಕಿವಿಗೆ ಮುಟ್ಟಿದರೆ, ಆತನು ತನ್ನ ಮೈದೊಗಲು ಸುಲಿಯಬಹುದೆಂಬ ಭಯವು ಸಂಪೂರ್ಣವಾಗಿ ಅವನ ಹೃದಯವನ್ನು ವ್ಯಾಪಿಸಿತ್ತು. ಸಮರಭೂಮಿಯಿಂದ ಜಾರಿಹೋದ ಅವನು ಚಿಂತಾಮಗ್ನನಾಗಿ ಮಾರ್ಗವನ್ನು ಕ್ರಮಿಸಹತ್ತಿದನು. ವಾಚಕರಿಗೆ ದುರ್ಜಯಸಿಂಗನ ದುಷ್ಟಹೃದಯದ ಜ್ಞಾನವಾಗುವದಕ್ಕಾಗಿ ಅವನ ಪೂರ್ವವೃತ್ತಾಂತವನ್ನು ಸ್ವಲ್ಪದರಲ್ಲಿ ಕೊಡುವೆವು. ಆ ಕಾಲದಲ್ಲಿ ರಜಪೂತಸ್ಥಾನದೊಳಗೆ ಮುಸಲ್ಮಾನರೊಡನೆ ಶರೀರಸಂಬಂಧ ಮಾಡದೆ ಇದ್ದ, ಪವಿತ್ರವಾದ ರಜಪೂತರ ಸಣ್ಣ-ದೊಡ್ಡ ಸಂಸ್ಥಾನಗಳು ಕೆಲವು ಇದ್ದವು. ಅವುಗಳಲ್ಲಿ ದುರ್ಜಯಸಿಂಗನ "ಖಿರಕಪೂರ" ಸಂಸ್ಥಾನಗಳು ಒಂದಾಗಿತ್ತು. ದುರ್ಜಯಸಿಂಗನ

ತಂದೆಯ ಹೆಸರು ಅನುಪಮಸಿಂಹ, ತಾಯಿಯ ಹೆಸರು ವಿಮಲಾದೇವಿ. ತಾವು ಶ್ರೀರಾಮ ಚಂದ್ರನ ಸಂತತಿಯವರೆಂದು ಅವರು ಅಭಿಮಾನಪಡುತ್ತಿದ್ದು, ತಮ್ಮ ಆ ಪೂಜ್ಯವಂಶದ ಗೌರವವನ್ನು ಕಾಯ್ದುಕೊಳ್ಳುವದಕ್ಕಾಗಿ ಅವರು ಮನಃಪೂರ್ವಕವಾಗಿ ಯತ್ನಿಸುತ್ತಿದ್ದರು. ಔರಂಗಜೇಬನಂಥ ಕ್ರೂರ ಬಾದಶಹನ ಭಯವನ್ನು ಕೂಡ ಲೆಕ್ಕಿಸದೆ ಅವರು ತಮ್ಮ ಮನೆತನದ ಗೌರವವನ್ನು ಕಾಯ್ದುಕೊಂಡಿದ್ದರು. ವಿಮಲಾದೇವಿಯು ಮಹಾ ಪತಿವ್ರತೆಯು. ಆಕೆಯ ಕುಲಾಭಿಮಾನವು ಜಾಜ್ವಲ್ಯವಾದದ್ದು. ಇಂಥ ತೇಜಸ್ವಿಗಳ ಹೊಟ್ಟೆಯಲ್ಲಿಯೇ ದುರ್ಜಯಸಿಂಗನು ಹುಟ್ಟಿದ್ದನು. ಒಮ್ಮೊಮ್ಮೆ ಕುಲಕಂಟಕರು ವಂಶದಲ್ಲಿ ಉತ್ಪನ್ನವಾಗುತ್ತಿರು ವಂತೆ, ದುರ್ಜಯಸಿಂಗನು ಅನುಪಮಸಿಂಹನ ಹೊಟ್ಟೆಯಲ್ಲಿ ಹುಟ್ಟಿದ್ದನು. ದುರ್ಜಯನು ಪ್ರಾಯಕ್ಕೆ ಬಂದಂತೆ ಮೊಗಲ ಬಾದಾಶಾಹಿಯ ಚಾಕರಿಯಿಂದ ಉತ್ಕರ್ಷಪಡೆಯುವ ಹವ್ಯಾಸಕ್ಕೆ ಬಿದ್ದನು. ಆತನ ಹೃದಯವು ಅತ್ಯಂತ ನೀಚವಾದದ್ದು, ದುರ್ಜಯಸಿಂಗನಂಥ ಅಭಿಮಾನಶೂನ್ಯರಾದ ಸುಖಾಭಿಳಾಷೆಯ ಜನರ ಸಂಖ್ಯೆಯೇ ರಜಪೂತಸ್ಥಾನದಲ್ಲಿ ಆಗ್ಗೆ ಹೆಚ್ಚಾಗಿತ್ತು. ಆ ಜನರ ಪ್ರಾಬಲ್ಯವೇ ದಿನದಿನಕ್ಕೆ ಹೆಚ್ಚುತ್ತ ಬಂದಿತ್ತು. ದುರ್ಜಯಸಿಂಗನು ಸ್ವತಃ ಔರಂಗಜೇಬನೊಡನೆ ಒಳಸಂಚು ಮಾಡಿ, ಮೋಸದಿಂದ ತನ್ನ ತಂದೆ-ತಾಯಿಗಳ ನಾಶಕ್ಕೆ ಬುದ್ಧಿಪೂರ್ವಕ ಕಾರಣನಾದನು. ಇಷ್ಟರಿಂದಲೇ ಆತನ ದುಷ್ಟಹೃದಯದ ಕಲ್ಪನೆಯು ವಾಚಕರಿಗೆ ಆಗಬಹುದು. ಅಭಿಮಾನಿಯಾದ ಅನುಪಮಸಿಂಹನು ಔರಂಗಜೇಬನಿಗೆ ಶರಣು ಹೋಗದೆ ಯುದ್ಧದಲ್ಲಿ ಮರಣ ಹೊಂದಿದನು. ವಿಮಲಾದೇವಿಯ ಗತಿಯೇನಾಯಿತೆಂಬದು ಯಾರಿಗೂ ಗೊತ್ತಾಗಲಿಲ್ಲ. ಇತ್ತ ದುರ್ಜಯಸಿಂಗನು ಔರಂಗಜೇಬನ ಆಶ್ರಯವನ್ನು ಪಡೆದು, ಹಲವು ಬಗೆಯಾಗಿ ತನ್ನ ಉತ್ಕರ್ಷ ಮಾಡಿಕೊಳ್ಳುತ್ತ ಕ್ರಮವಾಗಿ ದಿಲ್ಲಿಯ ದರ್ಬಾರದ ಪ್ರಸಿದ್ಧ ಸರದಾರರಲ್ಲಿ ಒಬ್ಬನಾಗಿ, ಈಗ ದಕ್ಷಿಣದ ದಂಡಯಾತ್ರೆಗೆ ಜಯಸಿಂಗನ ಸಂಗಡ ಬಂದಿದ್ದನು. ಈಗಾದರೂ ನೀಚಕೃತಿಯಿಂದ ತನ್ನ ಉತ್ಕರ್ಷಮಾಡಿಕೊಳ್ಳುವ ಆತನ ಹವ್ಯಾಸವು ಕಡಿಮೆಯಾಗಿದ್ದಿಲ್ಲವೆಂಬದು ನೂರಎಲ್‌ಹುದೆಯ ವೃತ್ತಾಂತದಿಂದ ವಾಚಕರಿಗೆ ಗೊತ್ತಾಗಿರ ಬಹುದು. ಹಡೆದ ತಾಯಿ ತಂದೆಗಳನ್ನು ನೋಡದ ನೀಚರು ಯಾರನ್ನು ನೋಡುವರು?

ಹೀಗೆ ಭಗ್ನಮನೋರಥನೂ, ಭಯಗ್ರಸ್ತನೂ ಆದ ದುರ್ಜಯಸಿಂಗನು ಕುದುರೆಯನ್ನು ಹತ್ತಿಕೊಂಡು ನಡೆದಿದ್ದನು. ಆತನಿಗೆ ಒಂದೆರಡು ಗಾಯಗಳಾಗಿದ್ದವು. ಹಸಿವೆ-ನೀರಡಿಕೆಗಳ ಪರಿವೆಯಿಲ್ಲದೆ ಆತನು ಮಾರ್ಗವನ್ನು ಕ್ರಮಿಸಬೇಕಾಗಿತ್ತು; ಯಾಕಂದರೆ, ದಿಲೇರಖಾನನ ಕೈಯಲ್ಲಿ ಸಿಕ್ಕಿದ್ದರೆ ಆತನ ಪರಿಣಾಮವಾಗಹಾಗಿದ್ದಿಲ್ಲ. ಆತನು ಅಖಂಡ ಇಪ್ಪತ್ತುನಾಲ್ಕು ತಾಸು ಹಾದಿಯ ನಡೆದದ್ದರಿಂದ, ಆತನ ಕುದುರೆಯು ದಣಿದು ಹೋಗಿತ್ತು, ಅದು ಮುಂದಕ್ಕೆ ಹೆಜ್ಜೆಯಿಡದಾಯಿತು. ದುರ್ಜಯಸಿಂಗನೂ ಬಹಳವಾಗಿ ದಣಿದಿದ್ದನು. ಆತನಿಗೊದಗಿದ ಕಠಿಣ ಪ್ರಸಂಗದಿಂದ ಆತನ ತಲೆಯೊಳಗಿನ ಉತ್ಕರ್ಷಾಭಿಲಾಷೆಯ ಮದ್ದು ಇಳಿದು ಹೋಗಿ, ಹೃದಯದಲ್ಲಿ ಪಶ್ಚಾತಾಪದ ಗಾಳಿಯು ಸುಳಿಯಹತ್ತಿತು. ಮನುಷ್ಯನ ಹೃದಯಕ್ಕಾಗುವ ಪ್ರಬಲಘಾತದಿಂದ ಅವನ ವೃತ್ತಿಯು ಬದಲಾವಣೆಯಾಗುವದುಂಟು. ಅದರಂತೆಯೇ

ದುರ್ಜಯಸಿಂಗನ ಸ್ಥಿತಿಯೂ ಆಯಿತು. ತನ್ನ ನೀಚತನದ ಕೃತಿಗಳೆಲ್ಲ ಆತನ ಕಣ್ಣಿಗೆ ಕಟ್ಟಿದವು. ಮಾತಾಪಿತೃಗಳ ದ್ರೋಹವು ಆತನ ಹೃದಯದಲ್ಲಿ ಬಾಧಿಸಹತ್ತಿತು. ಮೊಗಲರ ಆಶ್ರಯವು ಯಮನ ದವಡೆಯಂತೆ ಆತನಿಗೆ ಭಯಂಕರವಾಗಿ ತೋರಹತ್ತಿತು. ಈ ಸ್ಥಿತಿಯಲ್ಲಿ ಆತನು ಅತ್ಯಂತ ವ್ಯಾಕುಲಪಟ್ಟನು. ಆತನ ಕಣ್ಣೊಳಗಿಂದ ನೀರುಗಳು ಉದುರಹತ್ತಿದವು. ಹೀಗೆ ಆತನು ಪಶ್ಚಾತ್ತಾಪದಿಂದ ಕಣ್ಣೀರು ಹಾಕಿದ್ದು ಇದೇ ಮೊದಲು. ಆತನ ಹೃದಯವು ಕೋಮಲವಾಗ ಹತ್ತಿದ್ದು ಇಂದಿನಿಂದಲೇ ಎಂದು ಹೇಳಬಹುದು. ಭೂತದಯ–ಪಶ್ಚಾತ್ತಾಪಗಳು ಸೌಜನ್ಯದ ಲಕ್ಷಣಗಳಾಗಿರುವುದರಿಂದ, ಕಠೋರಹೃದಯದ ದುರ್ಜಯಸಿಂಗನಲ್ಲಿ ಈಗ ಅವು ಅಂಶತಃ ಉತ್ಪನ್ನವಾಗಿರಲು, ಆತನಲ್ಲಿ ಸೌಜನ್ಯದ ಮೊಳೆದೋರಿ ತನ್ನ ಕುದರೆಗಾದ ಶ್ರಮವನ್ನು ಸ್ಮರಿಸಿ ಆತನು ಮರುಗಿದನು. ಅಷ್ಟರಲ್ಲಿ ಒಂದು ನದಿಯು ಹತ್ತಲು, ಅಲ್ಲಿ ಕುದುರೆಯನ್ನು ಇಳಿದು ಅದರ ಕುತ್ತಿಗೆಯನ್ನು ಥಪ್ಪರಿಸಿ ಆತನು ಮಮತೆಯಿಂದ— "ರಣಛೋಡ, ನೀನು ಇಂದು ಬಹಳ ದಣಿದೆ! ನೀನು ಹಿರಿಯರ ಕಾಲದ ನಂಬಿಗೆಯ ಪ್ರಾಣಿಯು. ಇನ್ನು ಸ್ವಲ್ಪ ವಿಶ್ರಮಿಸು. ಆಮೇಲೆ ಮುಂದಕ್ಕೆ ಸಾಗೋಣವಂತೆ. ನಿನ್ನ ಯಜಮಾನನು ನಾನು ಬಹಳ ಕೆಟ್ಟವನೆಂದು ನೀನು ಭಾವಿಸಿರುವೆಯಲ್ಲವೆ? ನಿನ್ನ ಭಾವನೆಯು ವ್ಯರ್ಥವಾದದ್ದೆಂದಾದರೂ ನಾನು ಹ್ಯಾಗೆ ಹೇಳಲಿ? ಇರಲಿ, ನಡೆ ನಿನ್ನನ್ನು ಮೊದಲು ಈಸ ಹೊಡೆಯುವೆನು." ಎಂದು ನುಡಿದು ದುರ್ಜಯಸಿಂಗನು ಕುದರೆಯ ಜೀನು ಇಳಿಸಿ ಅದನ್ನು ಹೊಳೆಯಲ್ಲಿ ನೂಕಿದನು. ಜಲವಿಹಾರದಿಂದ ರಣಛೋಡನಿಗೆ ವಿಶ್ರಾಂತಿಯಾಯಿತು. ದುರ್ಜಯಸಿಂಗನೂ ನದಿಯಲ್ಲಿ ಮನದಣಿಯಾಗಿ ಈಸಿದನು. ಪಶ್ಚಾತ್ತಾಪದಿಂದ ಚಿತ್ತಶುದ್ಧಿಯಾಗಿ ಆತನಿಗೆ ಸ್ವಲ್ಪ ಸಮಾಧಾನವಾಯಿತು. ಅತ್ತ ರಣಛೋಡನು ಎಳೆಹುಲ್ಲನ್ನು ಮೇಯಹತ್ತಿದನು. ದುರ್ಜಯ ಸಿಂಗನಿಗೆ ವಿಶೇಷ ಶ್ರಮವಾದದ್ದರಿಂದಲೂ, ಹೊಟ್ಟೆಯಲ್ಲಿ ಅನ್ನವಿಲ್ಲದ್ದರಿಂದಲೂ ಆತನು ಸ್ವಲ್ಪ ಅಡ್ಡಾಗಲು ಮಲಗಿದಲ್ಲಿಯೇ ಜಂಪು ಬಂದಂತಾಗಿ ಆತನು ಕಣ್ಣುಗಳನ್ನು ಮುಚ್ಚಿದನು. ರಣಛೋಡನು ಮೇಯುತ್ತ ಮೇಯುತ್ತ ಸ್ವಲ್ಪ ಮೇಲಗಡೆಗೆ ನದೀ ತೀರದ ಬಳಿಗೆ ಬಂದನು.

ಇತ್ತ ಆ ನದೀತೀರದಲ್ಲಿ ಆರೇಳು ಜನ ಬೈರಾಗಿಣಿಯರು ಸ್ನಾನ–ಭಜನಾದಿ ಕ್ರಿಯೆಗಳನ್ನು ಮಾಡುತ್ತಲಿದ್ದರು. ಅವರಲ್ಲಿ ಮೂವರು ನದಿಯಲ್ಲಿ ಸ್ನಾನಮಾಡುತ್ತಲಿದ್ದರು. ಇಬ್ಬರು ದಂಡೆಯಲ್ಲಿ ನಿಂತು ಸೀರೆ ಉಟ್ಟುಕೊಳ್ಳುತ್ತಿದ್ದರು. ಒಬ್ಬ ಪ್ರೌಢವಯಸ್ಸಿನ ಬೈರಾಗಿಣಿಯು ತೀರದಿಂದ ಸ್ವಲ್ಪ ದೂರದಲ್ಲಿ ಕುಳಿತು, ಉಳಿದವರಿಗೆ ಹಚ್ಚಿಕೊಳ್ಳುವದಕ್ಕಾಗಿ ಚಂದನವನ್ನು ತೇಯುತ್ತಿದ್ದಳು. ಆ ತೇಜಸ್ವಿನಿಯಾದ ಪ್ರೌಢೆಯು ಚಂದನವನ್ನು ತೇಯುತ್ತ, ತೇಯುತ್ತ ಶ್ರೀರಾಮನ ಸಂಬಂಧದ ಹಿಂದೀಭಾಷೆಯ ಸುಂದರ ಪದ್ಯವನ್ನು ಹಾಡಹತ್ತಿದಳು.

ಕಹಾ ಗಯೋ ಮೇರಾ ರಾಮ । ನವಜಲ ಮೇಘಶ್ಯಾಮ ॥
ರಾಮಬಿನಾ ನಹಿ ನಿಂದಹಿ ಆವತ । ರಾಮಬಿನಾ ನಹಿ ಪ್ರಾಣಜಗಾವತ ॥
ಜಲಸ್ಥಲ ಸೂನ ಭಯೋಧಾಮ ॥ ಧ್ರು ॥
ಕೌಸಲಮಾತಾ ಮನಮೇ ಢುಂಡತ । ಕೌನಪಾಪಕಿಯಾ ಕಾಜನಾದೇಖತೆ ॥
ಘೂಮತ ಬನಬನ ಬಾಲಕೆರಾಮ ॥ ಧ್ರು ॥

ಹೀಗೆ ಆ ಪ್ರೌಢ ಗೋಸಾವಿನಿಯು ಮಂಜುಲ ಸ್ವರದಿಂದ ತನ್ನೊಳಗೆ ಮೆಲ್ಲಗೆ ಹಾಡುತ್ತಿರಲು, ಸಮೀಪದಲ್ಲಿಯೇ ಮೇಯುತ್ತಿದ್ದ ರಣಭೋಡನ ಕಿವಿಗಳು ನೆಟ್ಟಗಾದವು. ಇದಕ್ಕೆ ದನಿಯ ಗುರುತು ಹತ್ತಿದಂತಾಯಿತು. ರಣಭೋಡನು ಗೋಸಾವಿನಿಯ ಕಡೆಗೆ ನೋಡುತ್ತ ಮೆಲ್ಲನೆ ಆಕೆಯಬಳಿಗೆ ಸಾಗಿಬರಹತ್ತಿತು. ಗಂಧವನ್ನು ತೇಯುತ್ತ ಹಾಡುವದರಲ್ಲಿ ಮಗ್ನಳಾಗಿಹೋಗಿದ್ದ ಬೈರಾಗಿಣಿಗೆ, ಕುದುರೆ ಬಂದ ಸುಳವೇ ಗೊತ್ತಾಗಲಿಲ್ಲ. ಕುದುರೆಯು ತೀರಸನಿಯಕ್ಕೆ ಬಂದು ಗೋಸಾವಿನಿಯ ಹೆಗಲಿಗೆ ತನ್ನ ಮುಸುಡೆಯನ್ನು ತಿಕ್ಕಹೋಗಲು, ಬೈರಾಗಿಣಿಯು ಮೆಟ್ಟಿಬಿದ್ದು ಕುದುರೆಯ ಕಡೆಗೆ ನೋಡಿದಳು. ಕೂಡಲೆ ಆಕೆಯು ಚಕಿತಮುದ್ರೆಯಿಂದ— "ಯಾರು ರಣಭೋಡ, ಬೇಟಾ, ನೀನೇಕೆ ಇಲ್ಲಿ? ನಿನ್ನ ಯಜಮಾನನು ಎಲ್ಲಿರುವನು?" ಎಂದು ಕೇಳಿ, ರಣಭೋಡನ ಹೆಗಲ ಮೇಲೆ ಕೈಚಲ್ಲಿ ಮಮತೆಯಿಂದ ಅದರ ಆಯಾಲದ ಕೂದಲುಗಳನ್ನು ಸರಿಮಾಡಹತ್ತಿದಳು. ಆಕೆಯನ್ನು ನೋಡಿ ರಣಭೋಡನಿಗೆ ಬಹಳ ಸಂತೋಷವಾದಂತೆ ಅದರ ಮುಖಲಕ್ಷಣದಿಂದ ಗೊತ್ತಾಗುತ್ತಿತ್ತು. ಅದರ ಕಣ್ಣುಗಳೊಳಗಿಂದ ಆನಂದ ಬಾಷ್ಪಗಳು ಸ್ಪಷ್ಟವಾಗಿ ಉದುರಹತ್ತಿದವು. ಅದನ್ನು ನೋಡಿ ಆ ಬೈರಾಗಿಣಿಗೂ ಬಹಳ ಸಂತೋಷವಾಯಿತು. ಆಕೆಯು ಎದ್ದುನಿಂತು ರಣಭೋಡನ ಸರ್ವಾಂಗದ ಮೇಲೆ ಕೈಯಾಡಿಸಿ, ಅದರ ಬೆನ್ನನ್ನು ಚಪ್ಪರಿಸಿ ರಮಿಸಿದಳು. ಆಗ ರಣಭೋಡನು ಬೈರಾಗಿಣಿಯ ಹೆಗಲಿಗೆ ತನ್ನ ಮೋರೆಯನ್ನು ತಿಕ್ಕಿ, ತನ್ನ ಯಜಮಾನನು ಮಲಗಿರುವ ಕಡೆಗೆ ನೋಡಹತ್ತಿತು. ಕಡೆಗೆ ಅದು ಬೈರಾಗಿಣಿಯ ಸೆರಗನ್ನು ತನ್ನ ಹಲ್ಲುಗಳಿಂದ ಹಿಡಿದು, ತನ್ನ ಯಜಮಾನನು ಮಲಗಿರುವ ಕಡೆಗೆ ಜಗ್ಗಹತ್ತಿತು. ಅದರ ಭಾವವನ್ನು ತಿಳಿದು ಬೈರಾಗಿಣಿಯ ಅಂತಃಕರಣವು ಕರಗಿತು. ನೇತ್ರಗಳು ಅಶ್ರುಪೂರ್ಣವಾದವು. ಆಕೆಯು ದುರ್ಜಯಸಿಂಗನು ಮಲಗಿರುವ ಕಡೆಗೆ ಬಹುಕಷ್ಟದಿಂದ ನೋಡಿದಳು. ದೂರ ಒಂದು ಗಿಡದ ಬುಡದಲ್ಲಿ ಯಾರೋ ಮಲಗಿಕೊಂಡಂತೆ ಆಕೆಗೆ ತೋರಿತು. ಅದನ್ನು ನೋಡಿ ಬೈರಾಗಿಣಿಯು ಒಮ್ಮೆ ನಿಟ್ಟುಸಿರು ಬಿಟ್ಟಳು. ಆಕೆಯು ಹೊರಬೀಳುವ ಪ್ರೇಮಾಶ್ರುಗಳನ್ನು ಹತ್ತೊತ್ತಿಕೊಂಡರೂ ಅವು ಹೊರ ಬೀಳಲು, ಅವನ್ನು ಒರಸಿಕೊಂಡು ಆಕೆಯು ಮತ್ತೆ ರಣಭೋಡನ ಬೆನ್ನು ಚಪ್ಪರಿಸಿ ದುಃಖದಿಂದ— "ರಣಭೋಡ, ಆತನು ನಿನ್ನನ್ನಾದರೂ ಈವರೆಗೆ ಬಳಿಯಲ್ಲಿಟ್ಟುಕೊಂಡಿದ್ದೇ ಆಶ್ಚರ್ಯವು. ಅರಬಸ್ತಾನದ, ಅಥವಾ ತುರ್ಕಸ್ತಾನದ ಉತ್ತಮ ಕುದುರೆಯನ್ನು ಬಾದಶಹನು ಕೊಟ್ಟನೆಂದು ನಿನ್ನನ್ನು ಬಾಡಿಗೆ ಕಟ್ಟುವ ಪೆಂಡಾರಿಗಳಿಗೆ ಆತನು ಕೊಟ್ಟುಬಿಡಬಹುದಾಗಿತ್ತು! ಕೊಟ್ಟಿಲ್ಲ. ನೀನಾದರೂ ನಂಬಿಗೆಯನ್ನು ಕಾಯ್ದುಕೊಳ್ಳು" ಎಂದು ನುಡಿಯಲು, ಆ ಮೂಕಪ್ರಾಣಿಯು ತನಗೆ ಆಕೆಯ ಮಾತು ತಿಳಿದಂತೆ ತಲೆಯಲ್ಲಾಡಿಸಿ, ತನ್ನ ಯಜಮಾನನಿರುವ ದಿಕ್ಕಿನ ಕಡೆಗೆ ನೋಡಿತು; ಬಳಿಕ ಅದು ಮತ್ತೆ ಆ ಸ್ತ್ರೀಯ ಕಡೆಗೆ ನೋಡಿ ಆಕೆಯ ಸೆರಗನ್ನು ಹಿಡಿದು ಜಗ್ಗಹತ್ತಿತು; ಆದರೆ ಆ ಸ್ತ್ರೀಯು ತನ್ನ ಸ್ಥಳವನ್ನು ಬಿಟ್ಟು ಕದಲಲೊಲ್ಲಳು. ಆಕೆಯು ರಣಭೋಡನನ್ನು ಕುರಿತು— "ಅಪ್ಪಾ ರಣಭೋಡಾ, ಒಮ್ಮೆ ನಿಶ್ಚಯಮಾಡಿ ಹೊರಟಿದ್ದು ಹೊರಟುಹೋಯಿತು. ನಮ್ಮ ಕಾಲಕ್ಕೆ ಕಲಂಕವುಂಟು ಮಾಡಿದವನ ಮುಖಾವಲೋಕನವನ್ನು

ನಾನು ಮಾಡುವಹಾಗಿಲ್ಲ. ಆ ದುಷ್ಟನು ಜಯಸಿಂಗನಂಥವರ ಅನುಕರಣ ಮಾಡಿದನಲ್ಲದೆ, ಸ್ವಾತಂತ್ರ್ಯಾಭಿಲಾಷಿಯಾದ ಮೇವಾಡದ ರಾಜಸಿಂಹನಂಥವರ ಅನುಕರಣ ಮಾಡಲಿಲ್ಲ. ನಡೆ, ನೀನು ನಿನ್ನ ಯಜಮಾನನ ಬಳಿಗೆ ಹೋಗು. ನಾನು ಅವನ ಮುಖಾವಲೋಕನ ಮಾಡುವದಿಲ್ಲ. ನಿನ್ನಿಂದಾದಷ್ಟು ಅವನ ಸಂರಕ್ಷಣ ಮಾಡು. ದಕ್ಷಿಣಕ್ಕೆ ಅವನು ಯಾಕೆ ಬಂದಿರುವನೆಂಬದು ನನಗೆ ಗೊತ್ತಾಗಿದೆ. ಇನ್ನು ನಾನು ನನ್ನ ಸಖಿಯರನ್ನು ಕರಕೊಂಡು ಬೇರೆ ಕಡೆಗೆ ಹೋಗುವೆನು,'' ಎಂದು ಹೇಳಿ, ರಣಛೋಡನನ್ನು ಜುಲುಮೆಯಿಂದ ಆತನ ಯಜಮಾನನ ಕಡೆಗೆ ದೂಡಿದಳು; ಆಗ ರಣಛೋಡನು ಬಹುಕಷ್ಟದಿಂದ ಹೊರಟು ಹೋದನು.

ಈ ಮೇರೆಗೆ ಗೋಸಾವಿನಿಯು ಕುದುರೆಯೊಡನೆ ನಡಿಸಿರುವ ವ್ಯವಹಾರವನ್ನು ನೋಡಿ ಉಳಿದ ಗೋಸಾವಿನಿಯರು ಬೆರಗಾದರು. ಅವರು ಲಗುಬಗೆಯಿಂದ ಆಕೆಯ ಬಳಿಗೆ ಬಂದು ಸುತ್ತುಮುತ್ತು ನೆರೆದರು. ಅವರಲ್ಲಿ ಕೌಸಲ್ಯೆಯೆಂಬ ಬೈರಾಗಿಣಿಯು ಉತ್ಸುಕತೆಯಿಂದ— ''ಮಾತಾಜಿ, ಆ ಕುದುರೆ ಎಲ್ಲಿಯದು? ಅದಕ್ಕೆ ನಿಮ್ಮ ಪರಿಚಯವೇನು? ನಮ್ಮಂತೆ ನೀವು ಬಡವರಾಗಿರದೆ, ಯಾವದೋ ಒಂದು ದೊಡ್ಡ ಕುಲೀನ ಮನೆತನಕ್ಕೆ ಸಂಬಂಧಿಸಿದವರಿರುವಿರೆಂದು ನಾವು ತರ್ಕಿಸಿರುವೆವು. ನಿಮ್ಮ ವೃತ್ತಾಂತವನ್ನು ಕೇಳಿಕೊಳ್ಳುವ ಇಚ್ಛೆಯು ನಮಗೆ ಬಹಳವಾಗಿದೆ. ಅದನ್ನು ಯಾವಾಗಾದರೊಮ್ಮೆ ಹೇಳೇನೆಂತಲೇ ನೀವು ಅನ್ನುತ್ತ ಬಂದಿರುವಿರಿ. ಈ ಕುದುರೆಯನ್ನು ನೋಡಿದಬಳಿಕಂತು ನಿಮ್ಮ ವೃತ್ತಾಂತವನ್ನು ಕೇಳಲು ನಮ್ಮ ಮನಸ್ಸು ಹಾತೊರೆಯಹತ್ತಿದೆ. ಅದನ್ನು ಈಗ ಹೇಳಿರಿ'' ಎಂದು ಆಗ್ರಹ ಮಾಡಿದಳು. ರಣದೇವಿಯು ಅಷ್ಟು ಮುದಿಕೆಯೂ ಇದ್ದಿಲ್ಲ, ಅಷ್ಟು ಹರೆಯದವಳೂ ಇದ್ದಿಲ್ಲ, ಮಧ್ಯಮವಯಸ್ಸಿನವಳಿದ್ದಳು. ಆಕೆಯ ಸ್ವರೂಪವು ಬಹುಮೋಹಕವಾದದ್ದು. ಆಕೆಯ ಅಂಗಕಾಂತಿಯು ಸ್ವಾಭಾವಿಕವಾಗಿಯೇ ತೇಜಸ್ವಿಯಾಗಿದ್ದು, ಅದರಲ್ಲಿ ತಪಶ್ಚರಣದ ವಿಶೇಷಪ್ರಕಾರದ ಕಾಂತಿಯು ಬೆರತದ್ದರಿಂದ ಆಕೆಯನ್ನು ನೋಡುವವರ ಮನಸ್ಸಿನಲ್ಲಿ ಭಕ್ತಿಯು ಹುಟ್ಟುತ್ತಿತ್ತು. ಹೀಗೆ ಮೋಹಕವೂ, ಧೀರಗಂಭೀರವೂ ಆದ ಆಕೆಯ ಮುಖಮುದ್ರೆಯಲ್ಲಿ ವೈರಾಗ್ಯದ ಕಾಂತಿಯು ಮಿನುಗಹತ್ತಿ ಚಿತ್ತಹರಣವಾಗಲು, ನೋಡಿದವರು ಆಕೆಗೆ ವಂದಿಸದೆ ಇರುತ್ತಿದ್ದಿಲ್ಲ. ಈ ಮಹಾತ್ಮಳ ಕೃಪಾದೃಷ್ಟಿಯ, ಹಾಗು ಉಪದೇಶದ ಲಾಭವು ತಮಗೆ ಆದೀತೇನೆಂದು ಅವರು ಉತ್ಸುಕತೆಯಿಂದ ಆಶಿಸುತ್ತಿದ್ದರು. ಆಕೆಯ ಪರಿವಾರದ ಗೋಸಾವಿನಿಯರಂತು ಮಾತಾರಣದೇವಿಯನ್ನು ತಮ್ಮ ಅಧಿದೈವತವೆಂದು ತಿಳಿದು, ಶ್ರೀರಾಮಪ್ರಭುವು ತಮ್ಮನ್ನು ಅನುಗ್ರಹಿಸಿ ಈಕೆಯ ಸಹವಾಸವನ್ನು ತಮಗೆ ಒದಗಿಸಿ ಕೊಟ್ಟಿರುವನೆಂದು ಅವರು ಭಾವಿಸಿಕೊಂಡಿದ್ದರು. ಈಕೆಯ ಯೋಗದಿಂದ ತಮಗೆ ಯಾತರ ಕೊರತೆಯೂ ಇರುವದಿಲ್ಲೆಂತಲೂ, ಈಕೆಯು ಪ್ರತ್ಯಕ್ಷ ಅನ್ನಪೂರ್ಣೆಯಂತೆ ಇರುವಳೆಂತಲೂ ಅವರು ಅನ್ನುತ್ತಿದ್ದರು. ಎಲ್ಲ ಜನರು ಭಕ್ತಿಯಿಂದ ಆಕೆಯನ್ನು ''ಮಾತಾಜಿ, ಮಾತಾಜಿ'' ಎಂತಲೂ, ''ಮಾತಾರಣದೇವಿ'' ಯೆಂತಲೂ ಕರೆಯುತ್ತಲಿದ್ದರು. ಇತ್ತ ಮಾತಾಜಿಯು ತನ್ನವರ ಆ ಉತ್ಕಂಠೆಯನ್ನು ನೋಡಿ—

''ಗೆಳತಿಯರಿರಾ, ನಿಮ್ಮ ಸ್ನಾನವಾಯಿತಷ್ಟೆ? ನಾವು ಇಲ್ಲಿ ಸಂಜೆಯತನಕ ಇರಬೇಕೆಂದು ಮಾಡಿದ್ದೆವು; ಆದರೆ ವಿಶೇಷ ಕಾರಣದಿಂದ ಇಲ್ಲಿ ಇನ್ನು ಇರುವದು ನನ್ನಿಂದಾಗದು; ಕಾರಣ ನಾವು ಬೇಗನೆ ಇಲ್ಲಿಂದ ಹೊರಟು ಹೋಗೋಣ ನಡೆಯಿರಿ. ನೀವು ನನ್ನದಿಷ್ಟು ಮಾತನ್ನು ನಡಿಸಿದರೆ ನನಗೆ ಬಹಳ ಸಂತೋಷವಾಗುವದು. ನಾವು ಇಲ್ಲಿಂದ ನಾಲ್ಕು ಹರದಾರಿಯ ಮೇಲೆ ಹೋಗಿ ವಸ್ತಿಯನ್ನು ಮಾಡೋಣ'' ಅನ್ನಲು, ಆಕೆಯ ಈ ಮಾತುಗಳನ್ನು ಕೇಳಿ ಉಳಿದ ಬೈರಾಗಿಣಿಯರು ಬೆದರಿದರು. ಮಾತಾಜಿಯ ಈ ವಿಲಕ್ಷಣ ಸ್ಥಿತಿಯನ್ನು ನೋಡಿ ಅವರ ಕುತೂಹಲವು ಮತ್ತಿಷ್ಟು ಹೆಚ್ಚಿತು. ಆಕೆಯಲ್ಲಿ ಅವರ ಸಂಪೂರ್ಣ ಭಕ್ತಿಯಿದ್ದದ್ದರಿಂದ ಆಕೆಯ ಮಾತನ್ನು ಅವರು ಮೀರುವಹಾಗಿದ್ದಿಲ್ಲ; ಆದರೂ ಅವರೊಳಗಿನ ವಾರಾಣಸಿ ಎಂಬ ಹೆಸರಿನ ಅಲ್ಪವಯಸ್ಕಳಾದ ಬೈರಾಗಿಣಿಯು ಮಾತಾಜಿಯನ್ನು ಕುರಿತು— ''ಮಾತಾಜಿ, ತಮ್ಮ ಅಪ್ಪಣೆಯನ್ನು ನಾವು ಸರ್ವಥಾ ಮೀರಲಾರೆವು; ಆದರೆ ಕುದುರೆಯನ್ನು ನೋಡಿದಾಗಿನಿಂದ ನಿಮ್ಮ ಮನಸ್ಸು ಬಹಳವಾಗಿ ವ್ಯಾಕುಲಗೊಂಡಿದೆ; ಆದರೆ ಆ ಕುದುರೆಯು ಯಾರದು? ನಿಮಗೆ ಇಷ್ಟು ಅಸಮಾಧಾನವಾಗುವ ಕಾರಣವೇನು? ನಮ್ಮ ಉತ್ಕಂಠೆಯು ನಮ್ಮನ್ನು ಸುಮ್ಮನಿರಗೊಡದ್ದರಿಂದ ನಾನು ಹೀಗೆ ಸಥಿಯಿಂದ ತಮ್ಮನ್ನು ಕೇಳುತ್ತೇನೆ, ಅದನ್ನಿಷ್ಟು ಹೇಳಬೇಕು'' ಅನ್ನಲು, ಮಾತಾಜಿಯ ಶೋಕವು ಒತ್ತರಿಸಿತು. ಆಕೆಯು ಒತ್ತಟ್ಟಿಗೆ ಮೋರೆ ತಿರುವಲು, ಬಳಬಳ ಕಣ್ಣೀರುಗಳು ಉದುರಿದವು. ಅವನ್ನು ಮಾತಾಜಿಯು ಒರಸಿಕೊಂಡು— ''ಬೇಟಾ, ವಾರಾಣಸೀ ಅದನ್ನೆಲ್ಲ ಹೇಳಲು ಇದು ಸಮಯವಲ್ಲ, ನಾವು ಮೊದಲು ಇಲ್ಲಿಂದ ಹೊರಟು ಹೋಗೋಣ ನಡೆಯಿರಿ. ಬೇರೆ ಕಡೆಗೆ ಹೋದಬಳಿಕ ಸಮಾಧಾನದಿಂದ ಕುಳಿತುಕೊಂಡು ನಿಮಗೆ ಎಲ್ಲ ವೃತ್ತಾಂತವನ್ನು ಹೇಳುವೆನು'' ಎಂದು ಹೇಳಿದಳು. ಮಾತಾಜಿಯ ಈ ಸ್ಥಿತಿಯನ್ನು ನೋಡಿ ಎಲ್ಲರೂ ಮರಗಿದರು. ತಿರುಗಿ ಯಾರೂ ಮಾತಾಡದೆ ಅಲ್ಲಿಂದ ಹೊರಡಲುದ್ಯೋಗಿಸಿ, ತಮ್ಮ ತಮ್ಮ ಆಸನಗಳನ್ನು ಸುತ್ತಿಕೊಂಡು ಬಗಲಲ್ಲಿಟ್ಟುಕೊಂಡರು. ಮತ್ತು ತಾವು ತೋಯಿಸಿದ ವಸ್ತ್ರಗಳ ಹಿಂಡಿಕೆಗಳನ್ನು ಕೈಯಲ್ಲಿ ಹಿಡಿದುಕೊಂಡು, ಉಳಿದ ಸಾಮಾನುಗಳನ್ನು ತಕ್ಕೊಂಡು ಮಾತಾಜಿಯನ್ನು ಅನುಸರಿಸಿ ಲಗುಬಗೆಯಿಂದ ಹೊರಟುಹೋದರು.

ಹೀಗೆ ಮಾತಾರಣದೇವಿಯು ಗೋಸಾವಿನಿಯರ ಚಿಕ್ಕಸಂಘವನ್ನು ಕರಕೊಂಡು ಹೊರಟಿದ್ದಳಷ್ಟೆ? ಆದರೆ ಆಕೆಯ ಮನಸ್ಸು ಕುದುರೆ, ಹಾಗು ದುರ್ಜಯಸಿಂಗ ಇವರು ಇರುವ ನಿಟ್ಟಿನ ಕಡೆಗೆ ಹರಿಯುತ್ತಲಿತ್ತು, ಆಕೆಯು ತಿರು ತಿರುಗಿ ಅತ್ತ ಕಡೆಗೆ ನೋಡುತ್ತಿದ್ದಳು. ಒಮ್ಮೆ ದುರ್ಜಯಸಿಂಗನನ್ನು ಕಣ್ಣು ತುಂಬ ನೋಡಿ ಬರಬೇಕೆಂದು ಇಚ್ಛೆಯು ಆಕೆಗೆ ಆಯಿತು; ಆದರೆ ಆಕೆಯು ಬಹುಕಷ್ಟದಿಂದ ಆ ಇಚ್ಛೆಯನ್ನು ಹತ್ತಿಟ್ಟುಕೊಂಡು ಮಾರ್ಗಕ್ರಮಣ ಮಾಡುತ್ತಿದ್ದಳು. ಸ್ವಲ್ಪ ದೂರ ಹೋದಬಳಿಕ ಆಕೆಗೆ ಕುದುರೆಯೂ ಕಾಣದಾಯಿತು. ಮಲಗಿದ್ದ ದುರ್ಜಯ ಸಿಂಗನೂ ಕಾಣದಾದನು. ಆಗ ಮಾತಾಜಿಯು ಒಮ್ಮೆ ನಿಟ್ಟುಸಿರು ಬಿಟ್ಟು, ಮುಂದಕ್ಕೆ ನಡೆದಳು. ಆಕೆಯು ಸುಮ್ಮನೆ ಹೆಜ್ಜೆಗಳನ್ನು ಮಾತ್ರ ಇಡುತ್ತಿದ್ದಳಲ್ಲದೆ, ಮನಃಪೂರ್ವಕವಾಗಿ ಹಾದಿಯನ್ನು ನಡೆಯುತ್ತಿದ್ದಿಲ್ಲ. ಆಕೆಯ ಕಣ್ಣೀರುಗಳು ಒಂದೇಸವನೆ

ಸುರಿಯುತ್ತಲೇ ಇದ್ದವು. ಹೀಗೆ ಮಾತಾಜಿಯು ಶೋಕಪಟ್ಟಿದ್ದನ್ನು ಆಕೆಯ ಸಖಿಯರು ಎಂದೂ ನೋಡಿದ್ದಿಲ್ಲ, ಅವರು ಈ ಸ್ಥಿತಿಯಲ್ಲಿ ಒಂದು ಹರದಾರಿ ಹೋಗಿರಬಹುದು. ಆಗ ಕೌಸಲ್ಯೆಯು ಮಾತಾಜಿಯನ್ನು ಕುರಿತು— "ಮಾತಾಜಿ, ಇಂದು ನಿಮಗೆ ಬಹಳ ದುಃಖವಾಗಿದೆ. ನಾವು ಈಗ ಒಂದು ಹರದಾರಿ ಬಂದಿರುವೆವು. ಇನ್ನ ಮುಂದೆ ಹೋಗೋಣಬೇಡ. ಈ ಸುಂದರವಾದ ಆಲದಗಿಡದ ಬುಡದಲ್ಲಿಯೇ ಇಳಿದುಕೊಳ್ಳೋಣ. ಸ್ಥಳವು ಬಹಳ ರಮ್ಯವಾಗಿದೆ" ಎಂದು ನುಡಿದು, ಆಲದ್ದೊಂದು ಸಣ್ಣ ಟೊಂಗೆಯನ್ನು ಮುರಿದುಕೊಂಡು, ಅದರಿಂದ ಗಿಡದ ಬುಡದ ಕಸ ಉಡುಗಿ, ಹುಲಿದೊಗಲನ್ನು ಹಾಸಿ ಅದರ ಮೇಲೆ ಮಾತಾಜಿಯನ್ನು ಕುಳ್ಳಿರಿಸಿದರು. ಆ ವಿಸ್ತಾರವಾದ ಹುಲಿಯಚರ್ಮವನ್ನು ನೋಡಿ ಇಂದು ಮಾತಾಜಿಯ ಮನಸ್ಸು ಮತ್ತಿಷ್ಟು ಅಸ್ವಸ್ಥವಾಯಿತು. ಆಗ ಕೌಸಲ್ಯೆಯು ಮಾತಾಜಿಯನ್ನು ಕುರಿತು — "ಮಾತಾಜಿ, ಇಂದು ನಿಮ್ಮ ಮನಸ್ಸು ಬಹಳ ಅಸ್ವಸ್ಥವಾಗಿರುವದು. ಹ್ಯಾಗೂ ನಿಮ್ಮ ಸ್ನಾನವಾಗಿರುವದರಿಂದ ಜಪಮಾಲೆಯನ್ನು ತೆಗೆದುಕೊಂಡು ಶ್ರೀರಾಮನ ಜಪಮಾಡುತ್ತ ಕುಳಿತುಕೊಳ್ಳಿರಿ. ವಾರಾಣಾಸಿಯು ನಿಮ್ಮ ಬಳಿಯಲ್ಲಿ ಕುಳಿತಿರುವಳು. ನಾವು ಈಗ ಊರಲ್ಲಿ ಹೋಗಿ ಫಲಾಹಾರದ ಸಾಮಾನುಗಳನ್ನು ತಕ್ಕೊಂಡು ಬರುತ್ತೇವೆ" ಎಂದು ನುಡಿಯಲು, ಮಾತಾಜಿಯು ತಲೆಯಲ್ಲಾಡಿಸಿ ಒಪ್ಪಿಕೊಂಡಳು. ಆಗ ಕೌಸಲ್ಯೆಯು ವಾರಾಣಾಸಿಯ ಕಿವಿಯಲ್ಲಿ ಮೆಲ್ಲಗೆ ಏನೋ ಹೇಳಿ, ತನ್ನ ಸಖಿಯರೊಡನೆ ಊರಕಡೆಗೆ ನಡೆದಳು.

ಕೌಸಲ್ಯೆಯು ಹೇಳಿದಂತೆ ಆ ಸ್ಥಳವು ಬಹುರಮ್ಯವಾದದ್ದಿತ್ತು. ಅಲ್ಲಿ ಒಂದು ದೊಡ್ಡ ಹಳ್ಳವು ಹೊಳೆಗೆ ಬಂದು ಕೂಡುತ್ತಿತ್ತು. ಆ ಸಂಗಮಸ್ಥಾನದಲ್ಲಿ ಚಿಕ್ಕದೊಂದು ಸಂಗಮೇಶ್ವರನ ಸುಂದರ ದೇವಸ್ಥಾನವಿದ್ದು, ಅದರ ಸುತ್ತಲು, ತಮ್ಮ ದಟ್ಟ ನೆರಳುಗಳಿಂದ ಜನರತಾಪವನ್ನು ದೂರಮಾಡುವ ದೊಡ್ಡ ದೊಡ್ಡ ವೃಕ್ಷಗಳಿದ್ದವು. ಅವುಗಳಲ್ಲೊಂದರ ಬುಡದಲ್ಲಿಯೇ ಈಗ ಮಾತಾರಣದೇವಿಯು ಕುಳಿತುಕೊಂಡಿದ್ದಳು. ಈ ಜಗತ್ತಿನಲ್ಲಿ ಯಾವದು ಸ್ಥಿರವಲ್ಲವಷ್ಟೇ? ಅದರಂತೆಯೇ ಮಾತಾರಣ ದೇವಿಯ ಶೋಕವಾದರೂ ನಾಶಹೊಂದತಕ್ಕದ್ದೇ ಆಗಿತ್ತು. ಆ ನದಿಯ ಸಂಗಮಸ್ಥಾನ, ಸುಂದರ ದೇವಾಲಯ, ಸುತ್ತುಮುತ್ತಲಿನ ಮನೋಹರವಾದ ಬನ, ಇವನ್ನು ನೋಡಿ ರಣದೇವಿಯ ಚಿತ್ತವು ರಮಿಸಹತ್ತಿ ಆಕೆಗೆ ಮೆಲ್ಲನೆ ದುಃಖದ ವಿಸ್ಮೃತಿಯಾಗ ಹತ್ತಿತು. ಆಕೆಯು ಉತ್ತರೋತ್ತರ ಹೆಚ್ಚು ಹೆಚ್ಚು ಸಮಾಧಾನ ತಾಳುತ್ತ ಈ ಮೊದಲ ಹೇಳಿದ ಶ್ರೀರಾಮನ ಸಂಬಂಧದ ಹಿಂದುಸ್ಥಾನಿಯ ಪದ್ಯವನ್ನು ಮೆಲ್ಲಗೆ ಅನ್ನಹತ್ತಿದಳು. ಅದನ್ನು ನೋಡಿ ವಾರಾಣಸಿಗೆ ಬಹುಸಮಾಧಾನವಾಯಿತು. ತನ್ನಿಂದ ತನ್ನ ಸಖಿಯರ ಮನಸ್ಸು ಇಂದು ಅಸಮಾಧಾನಪಟ್ಟಿತೆಂದು ತಿಳಿದು, ಕರುಣಾಮೂರ್ತಿಯಾದ ರಣದೇವಿಯು ವಾರಾಣಸಿಯನ್ನು ಕುರಿತು—"ವಾರಾಣಸಿ, ಇಂದು ನನ್ನಿಂದ ನಿಮಗೆ ಬಹಳ ತ್ರಾಸವಾಯಿತು; ನೀವು ಬಹಳ ಹಸಿದಿರಿ; ಬಿಸಿಲಲ್ಲಿ ಇಷ್ಟು ದೂರ ನೀವು ನಡೆದು ಬರಬೇಕಾಯಿತು. ನನ್ನ ವೃತ್ತಾಂತವನ್ನು ಕೇಳಿಕೊಳ್ಳುವ ನಿಮ್ಮ ಕುತೂಹಲವನ್ನು ಕಠೋರ ಹೃದಯದ ನಾನು ಪೂರ್ಣಮಾಡಲಿಲ್ಲ; ಇದರಿಂದ ನನ್ನ ಮನಸ್ಸಿಗೆ ಬಹಳ ಅಸಮಾಧಾನವಾಗಿದೆ. ಈಗ ಕೌಸಲ್ಯೆ,

ಅನಸೂಯೆ, ಜಾನಕಿ, ದ್ರೌಪದಿ, ಸತ್ಯಭಾಮೆ ಮೊದಲಾದವರು ಬಂದಕೂಡಲೆ, ನಿಮ್ಮ ಕುತೂಹಲವನ್ನು ಪೂರ್ಣಮಾಡುವೆನು. ಅವ್ವಾ, ನಾವು ಸಣ್ಣ ಮನೆತನದವರಲ್ಲ ಶ್ರೀರಾಮ ಚಂದ್ರನ ವಂಶದವರು......'' ಎಂದು ನುಡಿಯುತ್ತಿರಲು, ಕೌಸಲ್ಯೆಯೇ ಮೊದಲಾದವರು ಫಲಾಹಾರದ ಸಾಮಾನುಗಳನ್ನು ತಕ್ಕೊಂಡು ಬಂದರು. ಮಾತಾಜಿಯ ಪ್ರಫುಲ್ಲಿತ ಮುಖ ಮುದ್ರೆಯನ್ನು ನೋಡಿ ಅವರಿಗೆ ಬಹಳ ಸಮಾಧಾನವಾಯಿತು. ತಾನು ಮಾತಾಜಿಯನ್ನು ಇಲ್ಲಿ ಕುಳ್ಳಿರಿಸಿದ್ದರಿಂದಲೇ ಅವರಿಗೆ ಸಮಾಧಾನವಾಯಿತೆಂದು ಕೌಸಲ್ಯೆಯು ತಿಳಿದುಕೊಂಡಳು. ಕೌಸಲ್ಯೆಯನ್ನು ನೋಡಿದಕೂಡಲೇ ವಾರಾಣಸಿಗೆ ಬಹಳ ಸಂತೋಷವಾಯಿತು. ಆಕೆಯು ಕೌಸಲ್ಯೆಗೆ—''ಕೌಸಲ್ಯೆ, ಇಂದು ಮಾತಾಜಿಯವರು ತಮ್ಮ ಚರಿತ್ರವನ್ನು ಹೇಳುತ್ತಾರಂತೆ; ಏಳಿರಿ, ಬೇಗನೆ ಫಲಾಹಾರವನ್ನು ತೀರಿಸಿಕೊಂಡು ಅದನ್ನು ಕೇಳೋಣ,'' ಎಂದು ಹೇಳಿದಳು. ಅದನ್ನು ಕೇಳಿ ಎಲ್ಲ ಗೋಸಾವಿನಿಯರು ಹರ್ಷಿತರಾದರು. ಅವರು ಫಲಾಹಾರದ ಸಾಮಾನು ಗಳನ್ನು ಇಟ್ಟು, ನದಿಗೆ ಹೋಗಿ ಕೈಕಾಲು ತೊಳಕೊಂಡು ಬಂದರು. ಮಾತಾರಣದೇವಿಯು ನದಿಗೆ ಹೋಗಿ, ಪುನಃ ಸ್ನಾನಮಾಡಿದಳು. ಎಲ್ಲರೂ ಶುಚಿರ್ಭೂತರಾಗಿ ಫಲಾಹಾರವನ್ನು ತೀರಿಸಿಕೊಂಡು ಉತ್ಸುಕತೆಯಿಂದ ಮಾತಾಜಿಯ ಸುತ್ತುಮುತ್ತು ಕುಳಿತುಕೊಂಡರು. ''ಕೇಳಬೇಕು, ಕೇಳಬೇಕೆ''ಂದಿದ್ದ ಮಾತಾಜಿಯ ಚರಿತ್ರವನ್ನು ಕೇಳುವ ಪ್ರಸಂಗವು ಇಂದು ಒದಗಿದ್ದರಿಂದ, ಅವರಿಗಾದ ಆನಂದವು ಅವರ ಹೊಟ್ಟೆಯಲ್ಲಿ ಹಿಡಿಸದಾಗಿತ್ತು, ಆಗ ಕೌಸಲ್ಯೆಯು—

ಕೌಸಲ್ಯೆ—ಮಾತಾಜಿ, ನೀವು ನಮ್ಮ ಹಾಗೆ ಕಂಗಾಲರಲ್ಲರೆಂತಲೂ, ದೊಡ್ಡ ಮನೆತನದ ವರಿದ್ದು, ಪ್ರಸಂಗವಿಶೇಷದಿಂದ ನೀವು ವೈರಾಗ್ಯ ತಾಳಿರುವಿರೆಂತಲೂ ನಾವು ತರ್ಕಿಸಿರುವೆವು. ನಿಮ್ಮ ಚರಿತ್ರಶ್ರವಣದಿಂದ ನಮ್ಮ ತರ್ಕವು ನಿಜವಾದದ್ದೆಂದು ಈಗ ತಾನೇ ಗೊತ್ತಾಗುತ್ತದೆ.

ವಾರಾಣಸಿ —ಆ ತರ್ಕವು ನಿಜವಾದಂತೆ ಆಗಿಹೋಗಿದೆ. ಮಾತಾಜಿಯವರು ಆಗಲೇ ನನ್ನ ಮುಂದೆ......ಎಂದು ನುಡಿಯುತ್ತಿರಲು, ದ್ರೌಪದಿಯು ನಡುವೇ ಬಾಯಿಹಾಕಿ— ''ಅನುಸೂಯೇ, ನಾವೆಲ್ಲ ಮಾತಾಜಿಯವರ ಮುಖದಿಂದ ಅವರ ಚರಿತ್ರವನ್ನು ಕೇಳುತ್ತೇವೆ, ನೀನು ಸುಮ್ಮನಿರು. ನಿನ್ನ ಚರಿತ್ರವನ್ನು ಕೇಳುವ ಪ್ರಸಂಗದಲ್ಲಿ ನೀನು ಅದನ್ನು ನಿನ್ನ ಮುಖದಿಂದಲೇ ಹೇಳುವೆಯಂತೆ,'' ಎಂದು ನುಡಿಯಲು, ಎಲ್ಲರೂ ಖೊಳ್ಳನೆ ನಕ್ಕರು. ಅವರ ಆ ನಿರ್ಮಲಾಂತಃಕರಣದ ಆನಂದವನ್ನು ನೋಡಿ ರಣದೇವಿಗೆ ಬಹಳ ಸಂತೋಷವಾಯಿತು. ಒಬ್ಬ ಪ್ರೇಮಲಸ್ವಭಾವದ ತಾಯಿಯು ಕಥೆಹೇಳುವದಕ್ಕಾಗಿ ತನ್ನ ಮಕ್ಕಳನ್ನು ನೆರಿಸಿಕೊಂಡು ಕುಳ್ಳಿರಿಸಿಕೊಂಡಿರುವಂತೆ, ತಾನು ಇವರನ್ನು ಕುಳ್ಳಿರಿಸಿಕೊಂಡು ಕುಳಿತಿರುವೆನೆಂಬದು ಮಾತಾರಣದೇವಿಯ ಮನಸ್ಸಿನಲ್ಲಿ ಬಂದು, ಆಕೆಗೆ ಪರಮಾವಧಿ ಆನಂದವಾಯಿತು. ಆಕೆಯು ಅವರೆಲ್ಲರನ್ನು ನೋಡಿ ಧೀರ ಗಂಭೀರ ಧ್ವನಿಯಿಂದ— ''ಸಖಿಯರೇ, ರಜಪೂತಸ್ಥಾನ ದಲ್ಲಿ..............'' ಎಂದು ನುಡಿಯುತ್ತಿರಲು, ಕೌಸಲ್ಯೆಯು ದೂರ ಕೈಮಾಡಿ— ''ಮಾತಾಜಿ! ಮಾತಾಜಿ! ವೇಗದಿಂದ ಬರುತ್ತಿರುವ ಈ ಕುದುರೆಯನ್ನು ನೋಡಿರಿ! ಇದು ನಮ್ಮ ಮೇಲೆಯೇ ಬರುತ್ತದೆಯೋ ಏನು? ಏಳಿರಿ, ಏಳಿರಿ, ಬಂದುಬಿಟ್ಟಿತು'', ಎಂದು ನುಡಿಯುತ್ತಿರಲು,

ಎಲ್ಲರೂ ಎದ್ದುನಿಂತು, ಕೌಸಲ್ಯೆಯು ಕೈಮಾಡಿದ ದಿಕ್ಕಿಗೆ ನೋಡಹತ್ತಿದರು. ಕುದುರೆಯು, ಮೇಲೆ ಕುಳಿತವನನ್ನು ಲೆಕ್ಕಿಸದೆ ಓಡಿಬರಹತ್ತಿತ್ತು. ಅದು ಓಡುತ್ತ ರಣದೇವಿಯ ತೀರ ಹತ್ತಿರಕ್ಕೆ ಬಂದು ಗಕ್ಕನೇ ನಿಂತುಕೊಂಡಿತು. ತನ್ನ ರಣಛೋಡನು ತನ್ನ ಯಜಮಾನನನ್ನು ಕುಳ್ಳಿರಿಸಿ ಕೊಂಡು ಹೀಗೆ ಓಡಿಬಂದದ್ದನ್ನು ನೋಡಿ ರಣದೇವಿಗೆ ಆಶ್ಚರ್ಯವಾಯಿತು. ಕುದುರೆಯು ನಿಂತಕೂಡಲೇ ದುರ್ಜಯಸಿಂಗನು ತಟ್ಟನೇ ಕೆಳಗಿಳಿದನು. ತನ್ನನ್ನು ಲೆಕ್ಕಿಸದೆ ರಣಛೋಡನು ಇಷ್ಟು ದೂರ ಬಂದದ್ದಕ್ಕಾಗಿ ದುರ್ಜಯಸಿಂಗನಿಗೆ ಬಹಳ ಸಿಟ್ಟು ಬಂದಿತ್ತು. ಸಿಟ್ಟಿನಭರದಲ್ಲಿ ಆತನು ತನ್ನ ಕುದುರೆಯನ್ನು ವಜ್ರಮುಷ್ಟಿಯಿಂದ ಒಳ್ಳೇ ಕಸುವಿನಿಂದ ಗುದ್ದಿ— "ಏ, ಬೇ ಇಮಾಮು, ಬೇವಕೂಫ, ಎಷ್ಟು ದೂರ ನನ್ನನ್ನು ತಂದೆಯಲ್ಲ? ಹೀಗೆಯೇ ನನ್ನನ್ನು ಎಲ್ಲಿಗೆ ಒಯ್ದು ಒಗೆಯಬೇಕೆಂದು ಮಾಡಿದ್ದಿ? ನೀಚತನದಲ್ಲಿಯೇ ನನ್ನ ಆಯುಷ್ಯವು ಹೋಗಿ, ಮಾತಾ–ಪಿತೃದ್ರೋಹದ ಭಯಂಕರ ಪಾಪದಿಂದ ಮೊದಲೇ ನಾನು ಮಲಿನನಾಗಿರಲು, ನನ್ನ ಪದರಿನಲ್ಲಿ ಸ್ತ್ರೀಹತ್ಯದ ಪಾತಕವನ್ನು ಈಗ ಕಟ್ಟುತ್ತಿದ್ದೆಯಲ್ಲ" ಎಂದು ನುಡಿದು, ಮತ್ತೊಮ್ಮೆ ಕಸುವಿನಿಂದ ಅದನ್ನು ಗುದ್ದಿದನು; ಆದರೆ ಆ ಗುದ್ದು ರಣಛೋಡನ ಮೂಗಿಗೆ ಮರ್ಮಸ್ಥಾನವಲ್ಲಿ ಬಿದ್ದದ್ದರಿಂದ, ರಣಛೋಡನು ದಪ್ಪನೆ ನೆಲಕ್ಕೆ ಬಿದ್ದಿತು! ಸ್ವಾಮಿನಿಷ್ಠ ರಣಛೋಡನ ಯೋಗ್ಯತೆಯು ದುರ್ಜಯಸಿಂಗನ ಮನಸ್ಸಿನಲ್ಲಾದರೂ ಹ್ಯಾಗೆ ಬರಬೇಕು? ದುರ್ಜಯ ಸಿಂಗನು ನಿದ್ದೆಹತ್ತಿ ಮಲಗಿದಾಗ ರಣಛೋಡನು ಮಾತಾರಣದೇವಿಯ ಬಳಿಗೆ ಬಂದು, ಆಕೆಯನ್ನು ತನ್ನ ಯಜಮಾನನ ಬಳಿಗೆ ಕರಕೊಂಡು ಹೋಗುವದಕ್ಕಾಗಿ ವಿಶ್ವಪ್ರಯತ್ನ ಮಾಡಿತು; ಆದರೆ ರಣದೇವಿಯು ಹೋಗದ್ದರಿಂದ, ತನ್ನ ಯಜಮಾನನನ್ನಾದರೂ ರಣದೇವಿಯ ಬಳಿಗೆ ಕರಕೊಂಡುಹೋಗಿ ಅವರಿಬ್ಬರ ಭೆಟ್ಟಿಯನ್ನು ಮಾಡಿಸಬೇಕೆಂದು, ತನ್ನ ಯಜಮಾನನು ಜೀನುಹಾಕಿ ತನ್ನನ್ನು ಹತ್ತಿದಕೂಡಲೇ ಆತನಿಗೆ ಅಸುಕೊಳ್ಳದೆ ಅದು ಇಲ್ಲಿಯವರೆಗೆ ಓಡುತ್ತ ಬಂದಿತ್ತು. ಇದೆಲ್ಲ ದುರ್ಜಯಸಿಂಗನಿಗೆ ಹ್ಯಾಗೆ ಗೊತ್ತಾಗಬೇಕು? ದುರ್ಜಯಸಿಂಗನು ಲಗಾಮುವನ್ನು ಜಗ್ಗಿ ಜಗ್ಗಿ ಸೋಟೆ ಹರಿದರೂ ರಣಛೋಡನು ಕೇಳಿದ್ದಿಲ್ಲ. ಮೊದಲೇ ದುರ್ಜಯಸಿಂಗನ ಮನಸ್ಸು ವ್ಯಗ್ರವಾಗಿತ್ತು. ಅದರಲ್ಲಿ ಕುದುರೆಯ ಹಟಮಾರಿತನ! ಅಂದಬಳಿಕ ಕೇಳುವದೇನು? ಸಿಟ್ಟಿನಿಂದ ಅದನ್ನು ಗುದ್ದತಕ್ಕದ್ದೇ ಸರಿ! ಆದರೆ ರಣಛೋಡನು ಹೀಗೆ ನೆಲಕ್ಕುರುಳಬೇಕೆಂದು ಆತನ ಮನಸ್ಸಿನಲ್ಲಿ ಮಾತ್ರ ಇದ್ದಿಲ್ಲ; ಪ್ರಮಾದದಿಂದ ರಣಛೋಡನು ಹಾಗೆ ನೆಲಕ್ಕೆ ಬಿದ್ದದ್ದನ್ನು ನೋಡಿ ಆತನ ಎದೆ ದಸಕ್ಕೆಂದಿತು. ಆತನು ಹೌಹಾರಿ ಕುದರೆಯನ್ನು ನೋಡುತ್ತ ನಿಂತುಕೊಂಡು ಪಶ್ಚಾತ್ತಾಪಪಡ ಹತ್ತಿದನು.

ದುರ್ಜಯಸಿಂಗನಿಗೆ ಹೀಗೆ ಮೇಲೆ ಮೇಲೆ ಪಶ್ಚಾತ್ತಾಪವಾಗಹತ್ತಿದ್ದು ಅವನ ಹಿತಕ್ಕಾಗಿಯೇ ಎಂದು ಹೇಳಬಹುದು; ಯಾಕಂದರೆ ಆತನ ಮನಸ್ಸು ಅತ್ಯಂತ ಕಲುಷಿತ ವಾಗಿತ್ತು. ಹೀನ ಬಂಗಾರವನ್ನು ಪುಟಕ್ಕೆ ಹಾಕಿದಂತೆ, ಅವನ ಹೀನ ಮನಸ್ಸನ್ನು ಪಶ್ಚಾತ್ತಾಪ ರೂಪವಾದ ಅಗ್ನಿಯಲ್ಲಿ ಪುಟಕ್ಕೆ ಹಾಕದಿದ್ದರೆ, ಅದು ಶುದ್ಧವಾಗುವದಾದರೂ ಹೇಗೆ? ರಣಛೋಡನು ನೆಲಕ್ಕೆ ಬಿದ್ದಕೂಡಲೇ ಮಾತಾರಣದೇವಿಯು ಅತ್ಯಂತ ಕನಿಕರದಿಂದ ಧಾವಿಸಿ

ಹೋಗಿ ಅದರ ಕಣ್ಣುಗಳನ್ನು ಮುಚ್ಚಿ, ನೀರುತರಲು ತನ್ನ ಸಖಿಯರಿಗೆ ಹೇಳಿದಳು. ಕೂಡಲೇ ಒಬ್ಬೊಬ್ಬರು ಒಂದೊಂದು ಲೋಟಾ ನೀರು ತಂದರು. ರಣದೇವಿಯು ರಣಭೋಡನ ನೆತ್ತಿಗೆ ನೀರು ತಟ್ಟಿ ಅದನ್ನು ಜಾಗ್ರತಗೊಳಿಸಲು ಯತ್ನಮಾಡಹತ್ತಿದಳು. ಅದನ್ನು ನೋಡಿ ದುರ್ಜಯ ಸಿಂಗನಿಗೆ ಆಶ್ಚರ್ಯವಾಯಿತು. ಈವರೆಗೆ ಆತನು ಬೈರಾಗಿಣಿಯನ್ನು ಲಕ್ಷಪೂರ್ವಕವಾಗಿ ನೋಡಿದ್ದೇಯಿಲ್ಲ. ಆತನ ಅಂತಃಕರಣವು ಅತ್ಯಂತ ವ್ಯಥಿತವಾಗಿತ್ತು; ಕುದರೆಯನ್ನು ಉಪಚರಿಸುತ್ತಿದ್ದ ಮಾತಾರಣದೇವಿಯ ಕಡೆಗೆ ಅವನ ಲಕ್ಷ್ಯವು ಹೋಗಿರುವಾಗ, ಏನೋ ನೆನಪಾದಂತಾಗಿ ಅವನ ಚಿತ್ತವು ಅಸ್ವಸ್ಥವಾಯಿತು. ಅವನು ಚಿತ್ರದ ಗೊಂಬೆಯಂತೆ ಸ್ವಸ್ಥವಾಗಿ ನಿಂತುಕೊಂಡುಬಿಟ್ಟನು. ಅಷ್ಟರಲ್ಲಿ ಅತ್ತ ರಣಭೋಡನು ಕಣ್ಣುತೆರೆದು ಗೋಣುಕೆಡವಿ ರಣದೇವಿಯ ಕೈಮೇಲೆ ಗೋಣುಚೆಲ್ಲಿ ಪ್ರಾಣಬಿಟ್ಟಿತು. ಅದನ್ನು ನೋಡಿ ಮಾತಾರಣದೇವಿಗೆ ಬಹಳ ವ್ಯಸನವಾಯಿತು. ಆಕೆಯು ಕಣ್ಣೀರು ಸುರಿಸುತ್ತ— ''ಬೇಟಾ, ರಣಭೋಡ, ಬರಖಪೂರ ಸಂಸ್ಥಾನದ ಉತ್ತಮೋತ್ತಮ ರತ್ನಗಳ ಪರಿಸಮಾಪ್ತಿಯು ಇಂದಿಗೆ ಆದಂತಾಗಿ, ಇದ್ದಲಿಯುಮಾತ್ರ ಉಳಿದದ್ದನ್ನು ನೋಡಲಿಕ್ಕೆ ನಾನು ಬದುಕಿ ಉಳಿದಹಾಗಾಯಿತು! ನನ್ನನ್ನು ನೋಡಿ ನಿನಗೆ ಆನಂದವಾದಂತೆ, ನಿನ್ನ ಈ ದುಷ್ಟ ಯಜಮಾನನಿಗೂ ನನ್ನನ್ನು ನೋಡಿ ಆನಂದವಾದೀತೆಂದು ತಿಳಿದು ನೀನು ಅವನನ್ನು ನನ್ನ ಬಳಿಗೆ ಕರಕೊಂಡು ಬಂದೆ; ಆದರೆ ದುಷ್ಟರಿಗೆ ಉಪಕಾರಮಾಡಹೋದದ್ದರ ಪ್ರಾಯಶ್ಚಿತ್ತವು ಮಾತ್ರ ನಿನಗೆ ದೊರೆತಂತಾಯಿತು. ಅಪ್ಪಾ, ರಣಭೋಡಾ, ನಿನಗೆ ಸ್ವರ್ಗಪ್ರಾಪ್ತಿಯಾಗದೆ ಹೋಗದು. ನಿನ್ನ ಶೀಲಕ್ಕೆ ಒಪ್ಪುವ ಕರ್ಮವನ್ನು ನೀನು ಮಾಡಿರುತ್ತೀ. ನಿನ್ನಂಥ ಸ್ವಾಮಿನಿಷ್ಠರಿಗೆ ಇಂಥ ಮರಣವೇ? ಹಾಯ್ ಹಾಯ್! ನಾನು ಏನು ಮಾಡಲಿ!! ನನ್ನಿಂದೇನಾಗುವಹಾಗಿದೆ? ನಾನು ನಿನ್ನ ಹೆಸರಿನಿಂದ ಇನ್ನೊಮ್ಮೆ ಸ್ನಾನಮಾಡಿ ತಿಲಾಂಜಲಿಯನ್ನು ಮಾತ್ರ ಅರ್ಪಿಸುವೆನು. ಸ್ವಾಮಿನಿಷ್ಠ ಪಶುವೇ, ಈಗಿನ ಸ್ಥಿತಿಯಲ್ಲಿ ಇದಕ್ಕೂ ಹೆಚ್ಚಿಗೆ ನಾನೇನು ಮಾಡುವ ಹಾಗಿದ್ದೇನೆ ಹೇಳು. ನೋಡು, ನಿನ್ನ ಯೋಗ್ಯತೆಯು ಈ ನರಪಶುವಿಗೆ ಇರುವದಿಲ್ಲ. ಪಶುವಾದರೂ ನೀನು ಕ್ರಿಯಾಭ್ರಷ್ಟ ನಾಗಲಿಲ್ಲ; ಆದರೆ ಮನುಷ್ಯನೆನಿಸುವ ಈ ನೀಚನು ಮಾತ–ಪಿತೃ ದ್ರೋಹವನ್ನೂ, ಸ್ವದೇಶದ್ರೋಹವನ್ನೂ, ಸ್ವಧರ್ಮ ದ್ರೋಹವನ್ನೂ ಮಾಡಿ ಯವನರನ್ನು ಸೇವಿಸಹೋಗಿ ಹಾಳಾದನು. ಎಲಾ, ದುಷ್ಟಾ, ಅಧಮಾ, ದುರ್ಜಯಾ, ನೋಡಿದೆಯೇನು ರಣಭೋಡನ ಯೋಗ್ಯತೆಯನ್ನು! ಆ ಪಶುವಿಗಿದ್ದ ಬೆಲೆಯಾದರೂ ನಿನಗಿರುತ್ತದೆಯೇ? ಸ್ವಾಮಿನಿಷ್ಠ ರಣಭೋಡನನ್ನು ಕೊಂದು ನೀನು ಯಾವ ನರಕಕ್ಕೆ ಹೋಗುವೆ? ಅಧಮಾಧಮಾ, ನಿನ್ನ ಮುಖಾವಲೋಕನ ಮಾಡಬಾರದೆಂದು ವಿರಕ್ತಳಾಗಿ ಮನೆಬಿಟ್ಟು ಹೊರಟುಬಂದಿದ್ದ ನನಗೆ, ಮತ್ತೆ ನಿನ್ನ ದರ್ಶನವಾಯಿತಲ್ಲ! ಸಖಿಯರಿರಾ! ಈ ನರಾಧಮನ ಮುಖಾವಲೋಕನ ಮಾಡಿದ ನಾವು ಸಚೈಲ ಸ್ನಾನಮಾಡಿ ಶುದ್ಧರಾಗೋಣ ನಡೆಯಿರಿ!''ಎಂದು ನುಡಿದು ಮಾತಾರಣದೇವಿಯು ಮೇಲಕ್ಕೆದ್ದಳು. ಅದನ್ನು ನೋಡಿ ಬೈರಾಗಿಣಿಯರೆಲ್ಲ ಬೆರಗಾಗಿ, ಒಮ್ಮೆ ಮಾತಾಜಿಯನ್ನೂ, ಒಮ್ಮೆ ದುರ್ಜಯಸಿಂಗನನ್ನೂ ನೋಡಹತ್ತಿದರು. ರಣದೇವಿಯು

ಸಂತಪ್ತಳಾಗಿದ್ದಳು; ಅವಳ ಮುಖಮಂಡಲವು ಆರಕ್ತವಾಗಿತ್ತು; ಕೆಳದುಟಿಯು ಥರಥರ ನಡುಗುತ್ತಿತ್ತು. ಇತ್ತ ದುರ್ಜಯಸಿಂಗನು ಮಹಾಪರಾಧಿಯಂತೆ ಕಣ್ಣೀರು ಸುರಿಸುತ್ತ ತಲೆಬಾಗಿಸಿ ನಿಂತುಕೊಂಡಿದ್ದನು. ಇದನ್ನೆಲ್ಲ ನೋಡಿ ಬೈರಾಗಿಣಿಯರು ಬೆಪ್ಪಾದರು. ಆಗ ರಣದೇವಿಯು ಹಾಗೆಯೇ ನದಿಗೆ ಹೋಗಿ ಸಚೈಲ ಸ್ನಾನಮಾಡಿ ರಣಛೋಡನಿಗೆ ತಿಲಾಂಜಲಿಯನ್ನಿತ್ತಳು. ಬೈರಾಗಿಣಿಯರೂ ಅವಳನ್ನು ಹಿಂಬಾಲಿಸಿ ಹೋಗಿದ್ದರು. ಸ್ನಾನದಿಂದ ರಣದೇವಿಯ ಕ್ರೋಧಾವೇಶವು ಕಡಿಮೆಯಾದದ್ದರಿಂದ ಆಕೆಯು, ಸಣ್ಣಮೋರೆ ಮಾಡಿಕೊಂಡು ತನ್ನನ್ನು ನೋಡುತ್ತ ನಿಂತಿದ್ದ ಕೌಸಲ್ಯೆಯೇ ಮೊದಲಾದವರನ್ನು ನೋಡಿ ಮನಸ್ಸು ಕರಗಿ ಸೌಮ್ಯ ಸ್ವರದಿಂದ— "ಸಖಿಯರೇ, ಅಸಮಾಧಾನಪಡಬೇಡಿರಿ. ನನ್ನ ಚರಿತ್ರ ಶ್ರವಣದಿಂದ ಹ್ಯಾಗೂ ನಿಮಗೆ ದುಃಖವಾಗಲೇಬೇಕಾಗಿತ್ತು. ಆ ಚರಿತ್ರವು ಮೂರ್ತಿಮತ್ತಾಗಿ ನಿಮ್ಮ ಕಣ್ಣಿಗೆ ಕಟ್ಟಿದ್ದರಿಂದ ನಿಮಗೆ ಈಗ ದುಃಖವಾಗಿರುವದು ಸ್ವಾಭಾವಿಕವು. ಅಳುವವರ ಸಹವಾಸದಿಂದ ಅಳುವದೂ, ನಗುವವರ ಸಹವಾಸದಿಂದ ನಗುವದೂ ಬಿಟ್ಟದ್ದಲ್ಲ." ಎಂದು ನುಡಿದು, ಆಕೆಯು ಸಂಗಮೇಶ್ವರನ ದೇವಾಲಯಕ್ಕೆ ಹೋಗಿ, ಶಂಭುವಿನ ಸನ್ನಿಧಿಯಲ್ಲಿ ಸ್ವಸ್ಥವಾಗಿ ಕುಳಿತು ಕೊಂಡುಬಿಟ್ಟಳು, ದುರ್ಜಯಸಿಂಗನಿದ್ದ ಕಡೆಗೆ ಆಕೆಯು ಹಣಿಕಿ ಸಹ ನೋಡಲಿಲ್ಲ!

ಇತ್ತ ದುರ್ಜಯಸಿಂಗನು ಬಹುವ್ಯಸನಪಟ್ಟು ಊರೊಳಗೆ ಹೋಗಿ ನಾಲ್ಕುಜನ ಕೂಲಿಯವರನ್ನು ಕರತಂದು ರಣಛೋಡನಿಗೆ ಮಣ್ಣುಕೊಟ್ಟು ಸ್ನಾನಮಾಡಿದನು. ಆತನಿಗೆ ಬಹಳ ಪಶ್ಚತ್ತಾಪವಾಗಿತ್ತು. ಮಾತಾರಣದೇವಿಯ ಮಾತಿನಿಂದ ಆತನಿಗೆ ಪರಮಾವಧಿಯಾದ ವೈರಾಗ್ಯವು ಉತ್ಪನ್ನವಾಗಲು, ಆತನು ರಣಗೂದಲುಗಳನ್ನು ಉಚ್ಚಿ ಜಡೆಗಳನ್ನು ಕಟ್ಟಿದನು. ಸರದಾರಿಕೆಯ ಉಡುಪು-ತೊಡಪುಗಳನ್ನು ಚಲ್ಲಿಕೊಟ್ಟು ಲಂಗೋಟಿಯನ್ನೂ, ಕಪನಿಯನ್ನೂ ಹಾಕಿಕೊಂಡನು. ಹೀಗೆ ಬೈರಾಗಿಣಿಯ ವೇಷಧರಿಸಿದ ಆತನಿಗೆ, ರಣದೇವಿಯೊಡನೆ ಮಾತಾಡಲಿಕ್ಕೆ ಧೈರ್ಯವಾಗಲಿಲ್ಲ. ಆಕೆಯ ಮುಂದೆ ನಿಲ್ಲುವ ಎದೆಯೂ ಆತನಿಗಿದ್ದಿಲ್ಲ; ಆಕೆಯನ್ನು ಬಿಟ್ಟು ಬೇರೆಕಡೆಗೆ ಹೋಗಬೇಕೆಂದರೆ ಅವನ ಕಾಲುಗಳೇ ಏಳಲೊಲ್ಲವು. ಹೀಗಾಗಿ ಅವನು ರಣದೇವಿಯ ಗುಪ್ತ ಬೆಂಗಾವಲಿನವನಂತೆ ಆಕೆಯ ಬೆನ್ನುಹತ್ತಿ ತಿರುಗಹತ್ತಿದನು. ರಣದೇವಿಯು ರಾತ್ರಿ ವಸ್ತಿಮಾಡಿದ್ದ ಸ್ಥಳದ ಸುತ್ತುಮುತ್ತು ಬೆಳಗಾಗುವದರೊಳಗೆ ಸ್ವಚ್ಛವಾಗಿ ಕಸ ತೆಗೆಯುವದು ಅವನ ಮುಖ್ಯ ಕೆಲಸವಾಗಿತ್ತು. ಹೀಗೆ ಹಲವು ದಿನಗಳು ಕ್ರಮಿಸಿ ಹೋದವು. ದುರ್ಜಯಸಿಂಗನು ತನ್ನ ನಿತ್ಯಕ್ರಮದಲ್ಲಿ ಸ್ವಲ್ಪವೂ ತಪ್ಪಲಿಲ್ಲ. ಹೀಗೆ ಏಕನಿಷ್ಠೆಯಿಂದಲೂ, ಭಯ-ಭಕ್ತಿಯಿಂದಲೂ ರಣದೇವಿಯನ್ನು ಸೇವಿಸುತ್ತಿದ್ದ ದುರ್ಜಯಸಿಂಗನು, ರಣದೇವಿಗೆ ಏನಾಗಬೇಕೆಂಬದನ್ನು ವಾಚಕರು ತರ್ಕಿಸಿರಬಹುದು. ಕೆಲವರಿಗೆ ಸಂಶಯವಿದ್ದ ಪಕ್ಷದಲ್ಲಿ ನಾವು ಅವರ ಸಂಶಯ ನಿವಾರಣ ಮಾಡಿಬಿಡುವೆವು. ದುರ್ಜಯಸಿಂಗನ ತಾಯಿಯು ವಿಮಲಾದೇವಿ ಯೆಂಬದನ್ನು ವಾಚಕರು ಬಲ್ಲರಷ್ಟೇ? ತನ್ನ ಪತಿಯಾದ ಅನುಪಮಸಿಂಗನು ಯುದ್ಧದಲ್ಲಿ ಮರಣಹೊಂದಿದ ಬಳಿಕ, ವಿಮಲಾದೇವಿಯು ಮೊಗಲರ ಕೈಯೊಳಗಿಂದ ಕಷ್ಟದಿಂದ ಪಾರಾಗಿ ಬೈರಾಗಿಣಿಯಾಗಿ ರಣದೇವಿಯೆಂಬ ಹೆಸರನ್ನು ಪಡೆದಿದ್ದಳು. ಬೈರಾಗಿಣಿಯಾಗಿರುವವರೆಗೆ

ರಣದೇವಿಯೆಂಬ ಹೆಸರಿನಿಂದಲೇ ನಾವಾದರೂ ಆಕೆಯನ್ನು ಕರೆಯೋಣ. ರಣದೇವಿಯು ತನ್ನ ಮಗನ ಪಶ್ಚಾತ್ತಾಪದ ಸ್ಥಿತಿಯನ್ನೂ, ಅವನ ವೈರಾಗ್ಯವನ್ನೂ ಪರಿಕ್ಷಿಸುತ್ತಲೇ ಇದ್ದಳು. ದುರ್ಜಯನ ನಿಕಟವಾದ ಸೇವೆಯನ್ನು ನೋಡಿ ಆಕೆಯ ಮನಸ್ಸು ಕರಗಿತು. ಒಮ್ಮೆ ದುರ್ಜಯನು ರಾತ್ರಿ ಕಸವನ್ನು ಹೊಡೆಯುತ್ತಿರುವಾಗ ರಣದೇವಿಯು ಆತನ ಬಳಿಗೆ ಹೋಗಿ— "[illegible] ಈ ಬುದ್ಧಿಯು ಮೊದಲೇ ನಿನಗೆ ಹುಟ್ಟಿದ್ದರೆ ಈ ಸ್ಥಿತಿಯು ನಮಗೆ [illegible] ಆದರೂ ಸ್ವದೇಶದ್ರೋಹವನ್ನೂ, ಸ್ವಧರ್ಮದ್ರೋಹವನ್ನೂ ಕಟ್ಟಿಕೊಂಡಿರುವ ನೀನು, ಸ್ವದೇಶೋದ್ಧಾರದ, ಹಾಗು ಸ್ವಧರ್ಮೋದ್ಧಾರದ ಕಾರ್ಯದಲ್ಲಿ ಪರಿತಪ್ತನಾಗಿ ಶುದ್ಧನಾದ ಹೊರತು ನನ್ನ ವಾತ್ಸಲ್ಯಕ್ಕೆ ಪಾತ್ರನಾಗಲಾರೆ. ಸ್ವಧರ್ಮೋದ್ಧಾರದ ಪವಿತ್ರ ಕಾರ್ಯವನ್ನು ಮಾಡುವ ಪುಣ್ಯಾತ್ಮನಾದ ಶಿವಾಜಿಯನ್ನು ಬಗ್ಗುಬಡೆಯುವದಕ್ಕಾಗಿ ಜಯಸಿಂಗನ ಬೆನ್ನುಹತ್ತಿ ಈಗ ನೀನು ಬಂದಿರುವಿಯಷ್ಟೇ? ಇದಕ್ಕಾಗಿ ನೀನು ಪೂರ್ಣ ಪಶ್ಚಾತ್ತಾಪಪಟ್ಟು ಶಿವಪ್ರಭು ವನ್ನು ಮನಃಪೂರ್ವಕ ಸೇವಿಸಿ, ಆತನ ಪ್ರಸನ್ನತೆ ಪಡೆದು ನಿನ್ನ ಪಾಪದ ಪ್ರಕ್ಷಾಲನವನ್ನು ಮಾಡಿಕೊಳ್ಳು. ಹಾಗೆ ಮಾಡದೆ, ಬರಿಯ ಈ ಕಸ–ಮುಸುರೆ ಮಾಡುವದರಿಂದ ನಿನ್ನ ಪಾಪದ ಕ್ಷಾಲನವಾಗದು; ನಾನೂ ನಿನ್ನನ್ನು ಪ್ರೀತಿಸಲಾರೆನು. ನಡೆ, ಇಂದೇ ನೀನು ಇಲ್ಲಿಂದ ಹೊರಟು ಹೋಗು. ಮೊದಲು ವಿಮಲಾದೇವಿಯೆನಿಸಿ, ಈಗ ರಣದೇವಿಯೆನಿಸಿರುವ ನಿನ್ನ ತಾಯಿಯನ್ನು ಸಂತೋಷ ಪಡಿಸುವದಿದ್ದರೆ ಹೀಗೆ ಮಾಡು ಹೋಗು." ಎಂದು ನುಡಿದಳು. ಇದೊಂದು ತನ್ನಮೇಲೆ ತಾಯಿಯವರ ಪರಮಾನುಗ್ರಹವೇ ಆಯಿತೆಂದು ದುರ್ಜಯಸಿಂಗನು ತಿಳಿದು ಕೊಂಡನು. ಆತನು ರಣಪಂಡಿತನಿದ್ದನು; ಶೂರನಿದ್ದನು; ಮಹಾ ಧೈರ್ಯಶಾಲಿಯಿದ್ದನು; ಸತತೋದ್ಯೋಗಿಯಿದ್ದನು. ಆದರೆ ಜೀವಕಲೆಯಿಲ್ಲದ ದೇಹದಂತೆ ಪವಿತ್ರ ಸ್ವಾಭಿಮಾನವೊಂದು ಆತನಲ್ಲಿ ಇಲ್ಲದೆ ಹೋದದ್ದರಿಂದ ಆತನು ತಿರಸ್ಕರಣೀಯನಾಗಿದ್ದನು. ಆತನು ಭಯ–ಭಕ್ತಿ ಯಿಂದ ತಾಯಿಯ ಚರಣಗಳ ಮೇಲೆ ಮಸ್ತಕವನ್ನಿಟ್ಟು, ಒಮ್ಮೆ ಪೂಜ್ಯಬುದ್ಧಿಯಿಂದ ಆಕೆಯನ್ನು ನೋಡಿ ಅಲ್ಲಿಂದ ಹೊರಟುಹೋದನು. ಅದನ್ನು ನೋಡಿ ವೀರಮಾತೆಯಾದ ರಣದೇವಿಗೆ ಪರಮಾನಂದವಾಯಿತು.

## ಮರಾಟರ ಸತ್ವಶಾಲಿತ್ವ!

ದೀಲೇರಖಾನನು ರುದ್ರಮಾಲ, ಅಥವಾ ವಜ್ರಗಡವನ್ನು ಸ್ವಾಧೀನಪಡಿಸಿಕೊಂಡು ಪುರಂದರ ದುರ್ಗವನ್ನು ಮುತ್ತಿದನೆಂದು ಹಿಂದೆ ಹೇಳಿದೆಯಷ್ಟೆ? ಮರಾಟರು ನೂರವಲ್ ಹುದೆಯನ್ನು ಪುರಂದರದಲ್ಲಿಟ್ಟಿರುವರೆಂದು ಖಾನನು ತಿಳಿದುಕೊಂಡಿದ್ದರಿಂದ, ಆತನು ಆದಷ್ಟು ಬೇಗನೆ ಪುರಂದರ ದುರ್ಗವನ್ನು ಸ್ವಾಧೀನಪಡಿಸಿಕೊಳ್ಳಬೇಕಾಗಿತ್ತು, ಮೊಗಲರ ಪ್ರಚಂಡ

ಸೈನ್ಯವು ಮುತ್ತಿದ್ದರಿಂದ ದುರ್ಗದೊಳಗಿನ ಜನರು ಉಲುಕದಂತಾಗಿತ್ತು, ಹೊರಗಿನಿಂದ ಅನ್ನಸಾಮಗ್ರಿಯು ಬರುವದು ಕಟ್ಟಾಯಿತು; ಆದರೆ ಪುರಂದರ ದುರ್ಗಕ್ಕೆ ಹೋಗುವ ಹಲವು ಗುಪ್ತದ್ವಾರಗಳಿಂದ ಅನ್ನಸಾಮಗ್ರಿಯು ಮುಟ್ಟುತ್ತಲೇ ಇದ್ದದ್ದರಿಂದ ಮರಾಟರು ಹಣಿಯುವ ಹಾಗಿದ್ದಿಲ್ಲ. ಮೊಗಲರು ಎಷ್ಟುದಿವಸ ಮುತ್ತಿಗೆ ಹಾಕಿದರೂ ದುರ್ಗದೊಳಗಿನವರಿಗೆ ಅನ್ನದ ತಾಪವು ಆಗುವಹಾಗಿದ್ದಿಲ್ಲ. ಮೊದಲಿಗೇ ಮಹಾರಾಜರು ಪುರಂದರ ದುರ್ಗದಲ್ಲಿ ಅನ್ನಸಾಮಗ್ರಿಯನ್ನು ವಿಪುಲವಾಗಿ ಸಂಗ್ರಹಿಸಿದ್ದರು; ಗುಪ್ತದ್ವಾರಗಳಿಂದ ಅನ್ನಸಾಮಗ್ರಿಯು ಮೇಲೆ ಮೇಲೆ ಬರುತ್ತಲೇ ಇತ್ತು. ಮೊಗಲರು ಮಾತ್ರ ನಾವು ಅನ್ನದ ಪ್ರತಿಬಂಧ ಮಾಡಿರುವದರಿಂದ, ಪುರಂದರ ದುರ್ಗವು ಇಂದು ಕೈಸೇರುವದು, ನಾಳೆ ಕೈಸೇರುವದು ಎಂದು ಹಾದಿಯ ನೋಡುತ್ತಿದ್ದರು. ಮುರಾರಬಾಜಿ ದೇಶಪಾಂಡೆ ಎಂಬ ವೀರಾಗ್ರಣಿಯು ಪುರಂದರ ರಕ್ಷಕನಾಗಿದ್ದನು. ಆತನು ಏನು ಮಾಡಿದರೂ ಮೊಗಲರ ಆಟವನ್ನು ಸಾಗಗೊಡಲಿಲ್ಲ. ಮೊಗಲರು ವಜ್ರಗಡದ ಮೇಲೆ ತೋಫುಗಳನ್ನು ಹೂಡಿ ಪುರಂದರದ ಮೇಲೆ ಹೊಡೆಯ ಹತ್ತಿದರು. ಅದರಿಂದಲೂ ವಿಶೇಷ ಪ್ರಯೋಜನವಾಗಲಿಲ್ಲ. ರಾತ್ರಿಯಲ್ಲಿ ಅಕಸ್ಮಾತ್ ಮುತ್ತಿಗೆ ಹಾಕಿ ಮರಾಟರು ತ್ರಾಸ ಕೊಡುವದು ಕಡಿಮೆಯಾಗಿದ್ದರೂ, ಕೋಟೆಯನ್ನು ಮರಾಟರಿಂದ ವಶಮಾಡಿಕೊಳ್ಳುವದು ಆಗದ್ದರಿಂದ ದಿಲೇರಖಾನನು ಚಡಪಡಿಸುತ್ತಿದ್ದನು. ಮುರಾರಬಾಜಿಯ ಮುಂದೆ ಆತನ ಆಟವೇನೂ ನಡೆಯಲಿಲ್ಲ.

ಮುರಾರಬಾಜಿಯು ಸಾಮಾನ್ಯ ವೀರನಿದ್ದಿಲ್ಲ. ಮಹಾರಾಜರ ಪ್ರಮುಖ ಸಹಾಯಕರಲ್ಲಿ ಈತನೊಬ್ಬನಾಗಿದ್ದನು. ಈತನು ಅತ್ಯಂತ ಸ್ವಾಮಿನಿಷ್ಠನು. ಉಪ್ಪು ಉಂಡವರ ಮೇಲೆ ಸರ್ವಥಾ ತಿರುಗಿ ಬೀಳತಕ್ಕವನಲ್ಲ. ಒಮ್ಮೆ ಒಬ್ಬರ ಸೇವೆಯನ್ನು ಕೈಕೊಂಡರೆ ತೀರಿತು; ಅವರ ಹಿತಕ್ಕಾಗಿ ದೇಹವನ್ನರ್ಪಿಸಲಿಕ್ಕೆ ಈತನು ಹಿಂದೆಮುಂದೆ ನೋಡತಕ್ಕವನಲ್ಲ. ಈತನು ಮೊದಲು ಚಂದ್ರರಾವ ಮೋರೆಯ ಪಕ್ಷದವನಾಗಿದ್ದನು. ಚಂದ್ರರಾವ ಮೋರೆಗೂ, ಶಿವಾಜಿ ಮಹಾರಾಜರಿಗೂ ಬದ್ದದ್ವೇಷವಿತ್ತು. ಚಂದ್ರರಾಯನು ವಿಜಾಪುರದ ಬಾದಶಹನ ಪ್ರಬಲ ಸರದಾರನಾಗಿದ್ದನು. ಅಂದಬಳಿಕ ಮಹಾರಾಜರ ಸ್ವರಾಜ್ಯ ಸ್ಥಾಪನೆಗೆ ಆತನು ವಿರೋಧಿಯಾಗಿದ್ದನೆಂದು ಹೇಳುವ ಕಾರಣವಿಲ್ಲ. ಮಹಾರಾಜರಿಗೂ, ಚಂದ್ರರಾಯನಿಗೂ ಯುದ್ಧಪ್ರಸಂಗ ಒದಗಿದಾಗ ಚಂದ್ರ ರಾಯನ ಪಕ್ಷದವನಾದ ಮುರಾರಬಾಜಿಯು ಮಹಾರಾಜರ ಸೈನ್ಯವನ್ನು ಸೋಲಿಸಿ ದಿಕ್ಕುಪಾಲಾಗುವಂತೆ ಓಡಿಸಿದ್ದನು. ಅಂದಿನ ಮುರಾರಬಾಜಿಯ ಪರಾಕ್ರಮವನ್ನು ನೋಡಿ ಸಂತುಷ್ಟರಾಗಿದ್ದ ಮಹಾರಾಜರು— "ಈ ಪ್ರಭುವೀರನಿಂದ ಮಹಾರಾಷ್ಟ್ರ ರಾಜ್ಯಸ್ಥಾಪನೆಯ ಕಾರ್ಯದಲ್ಲಿ ವಿಶೇಷ ಸಹಾಯವಾಗುವಹಾಗಿದೆ; ಆದ್ದರಿಂದ ಈತನನ್ನು ಹ್ಯಾಗಾದರೂ ಮಾಡಿ ಸಂಗ್ರಹಿಸಬೇಕು." ಎಂದು ಯೋಚಿಸಿ, ಮುರಾರಬಾಜಿಯನ್ನು ಒಲಿಸಿಕೊಳ್ಳಲಿಕ್ಕೆ ಬೇಕಾದ ಉಪಾಯವನ್ನು ಮಾಡಬೇಕೆಂದು ತಮ್ಮವರಿಗೆ ಹೇಳಿದ್ದರು. ಮುರಾರಬಾಜಿಯು ಯಾವ ಆಶೆಗೂ ಗುರಿಯಾಗತಕ್ಕವನಲ್ಲ. ಸ್ವಾಮಿದ್ರೋಹದ ಕಾರ್ಯವಂತೂ ಎಂದಿಗೂ ಅವನಿಂದ ಆಗುವಹಾಗಿದ್ದಿಲ್ಲ; ಆದ್ದರಿಂದ ಶಿವಾಜಿಯ ಜನರ ಆಟವೇನೂ

ನಡೆಯಲಿಲ್ಲ. ಮುಂದೆ ಮಹಾರಾಜರು ಚಂದ್ರರಾವ ಮೋರೆಯ ಮೇಲೆ ಯುಕ್ತಿಯಿಂದ ದಂಡೆತ್ತಿ ಹೋಗಿ ಆತನನ್ನು ಕೊಂದು, ಅವನ ತಮ್ಮನಾದ ಕೃಷ್ಣರಾಯನನ್ನು ಸೆರೆಹಿಡಕೊಂಡು ಬಂದರು. ಮುರಾರಬಾಜಿಯು ತಮ್ಮ ಪಕ್ಷಕ್ಕೆ ಬರುವದು ಮಹಾರಾಜರಿಗೆ ಅವಶ್ಯವಾಗಿತ್ತು. ಆದ್ದರಿಂದ ಅವರು ಕೃಷ್ಣರಾಯನಿಗೆ—"ನೀವು ಮುರಾರಬಾಜಿಯನ್ನು ಆತನ ಪರಿವಾರ ಸಹಿತವಾಗಿ ನಮ್ಮ ಚಾಕರಿಗೆ ಇಡಬೇಕು; ಇಲ್ಲದಿದ್ದರೆ ನಿಮ್ಮ ಶಿರಚ್ಛೇದ ಮಾಡಿಸುವೆನು" ಎಂದು ಅಂಜಿಕೆ ಹಾಕಿದರು. ಮುರಾರಬಾಜಿಯ ಪೂರ್ವಜರ ಮೇಲೆ ಚಂದ್ರರಾವ ಮೋರೆಯ ಹಿರಿಯರು ಉಪಕಾರಮಾಡಿದ್ದರು; ಆದ್ದರಿಂದ ಮುರಾರಬಾಜಿಯು ಮೋರೆಯವರ ಹಿತಕ್ಕಾಗಿ ಏನು ಮಾಡಲಿಕ್ಕೂ ಹಿಂದೆಮುಂದೆ ನೋಡುವ ಹಾಗಿದ್ದಿಲ್ಲ. ಶಿವಾಜಿಯ ಈ ನಿರ್ಬಂಧವನ್ನು ಕೇಳಿ ಚಂದ್ರರಾವ ಮೋರೆಗೆ ಬಹಳ ಕಷ್ಟವಾಯಿತು. ಮುರಾರಬಾಜಿಯನ್ನು ಶಿವಾಜಿಯ ಪಕ್ಷಕ್ಕೆ ಕಳಿಸುವದು ಅವನ ಜೀವದಸುತ್ತು ಬಂದಂತಾಯಿತು; ಆದರೆ ಕಳಿಸದಿದ್ದರೆ ತನ್ನ ಜೀವವು ಉಳಿಯುವಹಾಗಿದ್ದಿಲ್ಲ! ಆದ್ದರಿಂದ ಆತನು ಮುರಾರಬಾಜಿಯನ್ನು ಬಹು ಕಷ್ಟದಿಂದ ಶಿವಾಜಿಯ ಪಕ್ಷಕ್ಕೆ ಕಳಿಸಿ, ತನ್ನ ಬಿಡುಗಡೆ ಮಾಡಿಕೊಂಡನು. ತನ್ನ ಒಡೆಯನ ಪಂಚಪ್ರಾಣಗಳನ್ನು ಉಳಿಸುವದಕ್ಕಾಗಿ ಮುರಾರಬಾಜಿಯು ಮಹಾರಾಜರ ಚಾಕರಿಯನ್ನು ಒಪ್ಪಿಕೊಂಡನು. ಆತನು ತನ್ನ ಎರಡುನೂರು ಜನರೊಡನೆ ಮಹಾರಾಜರನ್ನು ಕೂಡಿಕೊಂಡು, ಅಂದಿನಿಂದ ಮಹಾರಾಜರ ನೌಕರನಾದನು. ಒಮ್ಮೆ ಒಬ್ಬರ ದಾಸನಾದ ಬಳಿಕ ಜೀವದ ಹಂಗು ಇಲ್ಲದೆ ಅವರ ಹಿತವನ್ನು ಸಾಧಿಸುವದು ಮುರಾರಬಾಜಿಯ ಶೀಲವಾದದ್ದರಿಂದ, ಮಹಾರಾಜರು ಅಂಥ ಮಹತ್ವದ ಕಾರ್ಯಕ್ಕಾಗಿಯೇ ಮುರಾರ ಬಾಜಿಯನ್ನು ಕಳಿಸುತ್ತಿದ್ದರು. ಮುರಾರಬಾಜಿಯು ಹೋದಲ್ಲಿ ಜಯವು ಸಿದ್ಧವಾಗಿಯೇ ಇರುತ್ತಿತ್ತು. ತನ್ನ ಒಡೆಯನ ಪ್ರಾಣವನ್ನು ಉಳಿಸುವದಕ್ಕಾಗಿ, ಅಥವಾ ತಮ್ಮ ಪೂರ್ವಜರ ಮೇಲೆ ಮಾಡಿದ ಉಪಕಾರವನ್ನು ಸ್ಮರಿಸಿ, ಎರಡನೆಯವರ ದಾಸರಾಗುವ ಜನರು ತೀರ ಅಪರೂಪವೆಂದು ಹೇಳಬಹುದು. ಮುರಾರ ಬಾಜಿಯು ತಾನೊಬ್ಬನೇ ಮಹಾರಾಜರ ಪಕ್ಷವನ್ನು ಸ್ವೀಕರಿಸದೆ, ತನ್ನ ಬಂಧುಗಳನ್ನೂ ಮಹಾರಾಜರ ಪಕ್ಷಕ್ಕೆ ಸೇರಿಸಿದನು.

ಮುರಾರಬಾಜಿಯು ಮೊದಲು ರುದ್ರಮಾಳದಲ್ಲಿರುವಾಗ ದಿಲೇರಖಾನನನ್ನು ಹೊಡೆದು ಓಡಿಸಿದ್ದನು. ಮುಂದೆ ಆತನು ಪುರಂದರ ದುರ್ಗಕ್ಕೆ ಹೋಗಬೇಕಾದ್ದರಿಂದ ರುದ್ರಮಾಳದ ವ್ಯವಸ್ಥೆಯನ್ನು ಮಾಡಿ ಆತನು ಪುರಂದರಕ್ಕೆ ಹೋಗಿದ್ದನು. ಇತ್ತ ದಿಲೇರಖಾನನೂ, ಜಯಸಿಂಗನೂ ಕೂಡಿ ರುದ್ರಮಾಳವನ್ನು ಕೈವಶಮಾಡಿಕೊಂಡರು. ಅದನ್ನು ಕೇಳಿ ಮುರಾರ ಬಾಜಿಯು ಪುರಂದರ ದುರ್ಗವನ್ನು ದಿಲೇರಖಾನನಿಗೆ ಒಪ್ಪಿಸಲಿಕ್ಕಿಲ್ಲೆಂಬ ನಿಶ್ಚಯದಿಂದ ಎಲ್ಲ ಸಿದ್ಧತೆಯನ್ನು ಮಾಡಿಕೊಂಡನು. ಆತನು ಅತ್ಯಂತ ಸ್ವಾಮಿನಿಷ್ಠೆಯಿಂದ— "ಏನೇ ಆಗಲಿ, ಈ ದೇಹವನ್ನು ಸ್ವಾಮಿಕಾರ್ಯಕ್ಕಾಗಿ ಅರ್ಪಿಸಿ ಮಹಾರಾಷ್ಟ್ರದ ರಾಜ್ಯದ ಅಸ್ತಿವಾರವನ್ನು ಗಟ್ಟಿಮುಟ್ಟಿಯಾಗಿ ಮಾಡುವೆನು. ಯವನರ ಆಟವನ್ನು ಎಷ್ಟು ಮಾತ್ರವೂ ನಡೆಯು ಗೊಡಲಿಕ್ಕಿಲ್ಲ. ನನ್ನ ಪರಾಕ್ರಮದಿಂದ ಸ್ವಾಮಿಯನ್ನು ಸಂತೋಷಪಡಿಸುವೆನು. ಬಡವರನ್ನು

ಪರಿಪರಿಯಾಗಿ ಪೀಡಿಸಿ, ಕುಲಾಂಗನೆಯರ ಮರ್ಯಾದೆಗೆ ಕೈಹಾಕಿದ ಮುಸಲ್ಮಾನರ ಸಮಾಚಾರವನ್ನು ತಕ್ಕೊಳದೆ ನಾನು ಎಂದಿಗೂ ಬಿಡೆನು. ಮುಸಲ್ಮಾನರು ನಮ್ಮ ರಾಜ್ಯವನ್ನು ಮುಣುಗಿಸಲಿಕ್ಕೆ ಬಂದಿರುವರಲ್ಲವೆ? ಅವರ ಮಗ್ಗಲು ಮುರಿಯುವ ಸುಸಮಯವು ಶಿವ ಪ್ರಭುವಿನ ಪುಣ್ಯದಿಂದ ಅನಾಯಾಸವಾಗಿ ಒದಗಿರುತ್ತದೆ. ಮೊಗಲರ ಹಟವಾರಿನತದ ಸೇಡು ತೀರಿಸಿಕೊಳ್ಳುವ ಸಮಯವು ಸಮೀಪಿಸಿರುತ್ತದೆಂದು ಹೇಳಬಹುದು. ನನ್ನ ಕರ್ತವ್ಯವನ್ನು ನಾನು ಮಾಡಿಯೇ ತೀರುವೆನು. ನನ್ನ ದೇಹದ ಅವಸ್ಥೆಯು ಏನೇ ಆಗಲಿ, ದಿಲೇರಖಾನನ ಅಭಿಲಾಷೆ ಯನ್ನು ಎಂದೂ ಪೂರ್ಣವಾಗಗೊಡಲಿಕ್ಕಿಲ್ಲ, ಕೊಂಕಣದವರು ಬರಿಯ ಅಕ್ಕಿಯ ಅನ್ನವನ್ನು ಉಣ್ಣುವರೆಂದು, ದೇಶದವರು ನಮ್ಮನ್ನು ಹೀಯಾಳಿಸುವರು. ಈ ದಿನ ನಾನು ಅವರ ಮಾತನ್ನು ಸಂಪೂರ್ಣವಾಗಿ ಸುಳ್ಳು ಮಾಡುವೆನು.'' ಎಂದು ಆವೇಶದ ಮಾತುಗಳನ್ನಾಡಿ, ಅದಕ್ಕೆ ತಕ್ಕ ಕಾರ್ಯವನ್ನು ಮಾಡಿ ತೋರಿಸಲು ಆತನು ಸಿದ್ದನಾದನು.

ಮೊಗಲ ಸೈನ್ಯಕ್ಕೆ ಅನ್ನ ಸಾಮಗ್ರಿಯು ಮುಟ್ಟದಂತೆ ಮುರಾರಬಾಜಿಯು ಮೊದಲೇ ವ್ಯವಸ್ಥೆ ಮಾಡಿದ್ದನು. ಪುರಂದರದಿಂದ ಮೂರು ಹರದಾರಿಯ ಮೇಲೆ ದಿಲೇರಖಾನನು ತನ್ನ ಛಾವಣಿಯನ್ನು ಬಿಟ್ಟಿದ್ದನು. ಮುರಾರಬಾಜಿಯು ಮುಸಲ್ಮಾನ ದಂಡಾಳಿನ ವೇಷದಿಂದ ತಾನೊಬ್ಬನೇ ದಿಲೇರಖಾನನ ಸೈನ್ಯವನ್ನು ಹೊಕ್ಕು ಅವನನ್ನು ಕೊಲ್ಲಬೇಕೆಂದು ಮಾಡಿದ್ದನು. ಮುಸಲ್ಮಾನರಲ್ಲಿ ಸೈನಿಕರ ಲೆಕ್ಕವಿಲ್ಲದ್ದರಿಂದ ಮುರಾರಬಾಜಿಯ ಈ ಪ್ರಯತ್ನಕ್ಕೆ ಅನುಕೂಲ ವಾಯಿತು. ಆತನು ಮೊಗಲ ಸೈನ್ಯದಲ್ಲಿ ಸೇರಿ ದಿಲೇರಖಾನನ ಮದ್ದಿನ ಖಜಾನೆಗೆ ಬೆಂಕಿಯನ್ನು ಹಚ್ಚಿದನು. ಇದರಿಂದ ದಿಲೇರಖಾನನು ಹಲ್ಲುಮುರಿದ ಹಾವಿನಂತಾದನು. ಆತನ ಸಂತಾಪವು ಹೆಚ್ಚಿತು. ಮರಾಟರ ಫಿತೂರಿಯಿಂದ ನಮ್ಮ ಜನರೇ ಈ ನೀಚ ಕೆಲಸವನ್ನು ಮಾಡಿದರೆಂಬ ಸಿಟ್ಟಿನಿಂದ ಖಾನನು ಹಲವು ಜನರ ತಲೆಹೊಡೆಸಲಿಕ್ಕೆ ಹಿಂದೆಮುಂದೆ ನೋಡಲಿಲ್ಲ. ಸಿಟ್ಟು ಶಾಂತವಾದ ಬಳಿಕ ಇನ್ನು ಮುಂದೆ ಏನು ಮಾಡಬೇಕೆಂದು ಆತನು ಆಲೋಚಿಸತೊಡಗಿದನು. ಮರಾಟರು ಮಹಾ ಕಪಟಿಗಳು. ಪ್ರಯತ್ನಪೂರ್ವಕ ನನ್ನ ಮದ್ದು-ಗುಂಡಿನ ನಾಶಮಾಡಿದರು. ಇನ್ನು ಯಶಃಪ್ರಾಪ್ತಿಯ ಆಶೆಯನ್ನು ಹಿಡಿಯುವಹಾಗಿಲ್ಲ. ಜಯಸಿಂಗನು ಮೊದಲು ನನ್ನನ್ನು ಎಚ್ಚರಗೊಳಿಸಿದ್ದು ಯೋಗ್ಯವೆಂದು ಈಗ ನನ್ನ ಅನುಭವಕ್ಕೆ ಬಂದಿತು. ಇರಲಿ, ಬಂದ ಪ್ರಸಂಗಕ್ಕೆ ಎದೆಗೊಟ್ಟು ನಿಲ್ಲಲೇಬೇಕು. ಮರಾಟರ ಸೊಕ್ಕನ್ನು ಮುರಿಯಬಂದ ನಾನು ತಲೆಯಮೇಲೆ ಕೈ ಇಟ್ಟುಕೊಂಡು ಕುಳಿತರೆ ಆಗುವದೇನು? ಎಂಥ ಕಠಿಣ ಪ್ರಸಂಗ ಒದಗಿದರೂ ಮರಾಟರ ಸೊಕ್ಕು ಮುರಿಯುವ ವಿಷಯದಲ್ಲಿ ನಾನು ಹಿಂಜರಿಯಲಾರೆನು. ಎಂದು ನಿಶ್ಚಯಿಸಿ, ಮಿರ್ಝಾರಾಜನ ದಂಡಿನೊಳಗಿಂದ ನಿತ್ಯದ ವೆಚ್ಚಕ್ಕೆ ಬೇಕಾಗುವಷ್ಟು ಮದ್ದುಗುಂಡನ್ನು ತರಿಸಿಕೊಂಡು, ಹೆಚ್ಚು ಮದ್ದು-ಗುಂಡನ್ನು ಬೇಗನೆ ಕಳಿಸುವದಕ್ಕಾಗಿ ಔರಂಗಾಬಾದಕ್ಕೆ ಪತ್ರ ಬರೆದನು. ಬಳಿಕ ದಿಲೇರಖಾನನು ಹತವೀರ್ಯವಾಗಿದ್ದ ತನ್ನ ಸೈನ್ಯಕ್ಕೆ ಧೈರ್ಯಹೇಳಿ ಪುರಂದರವನ್ನು ಲಗ್ಗೆಹತ್ತಲು ಉತ್ಸಾಹಗೊಳಿಸಿದನು.

ಕೋಟೆಯ ಮಾರ್ಗಗಳನ್ನೆಲ್ಲ ಮೊಗಲರು ಹಿಡಿದುಕೊಂಡು ಕುಳಿತಿದ್ದರಿಂದ ದುರ್ಗಕ್ಕೆ ಹೋಗುವದು ಬರುವದು ಕಟ್ಟಾಗಿಹೋಗಿತ್ತು. ಗುಪ್ತಮಾರ್ಗಗಳನ್ನು ಮಾತ್ರ ತಡೆಯುವದು ಖಾನನಿಂದಾಗಲಿಲ್ಲ. ಆ ಮಾರ್ಗಗಳಿಂದ ಅನ್ನಸಾಮಗ್ರಿಯೂ, ಮದ್ದು-ಗುಂಡುಗಳೂ ಮುರಾರಬಾಜಿಗೆ ದುರ್ಗದ ಮೇಲೆ ಮುಟ್ಟುತ್ತಲೇ ಇದ್ದವು. ಆತನು ಶತ್ರುಗಳೊಡನೆ ಕಾದಲಿಕ್ಕೆ ಸಜ್ಜಾದನು. ಮಾತಿನಲ್ಲಿಯೂ, ಶೌರ್ಯವ ಪ್ರಕಟಿಸುವಲ್ಲಿಯೂ ಮುರಾರಬಾಜಿಯು ನಿಷ್ಣಾತನಿದ್ದದ್ದರಿಂದ, ಆತನು ತನ್ನ ಸೈನಿಕರಲ್ಲಿ ವೀರಶ್ರೀಯು ಉತ್ಪನ್ನವಾಗುವ ಉಪಾಯ ಗಳನ್ನು ಮಾಡತೊಡಗಿದನು. ಶತ್ರುಗಳೊಡನೆ ಕಾದುವದಕ್ಕಾಗಿ ತನ್ನ ಸೈನ್ಯವು ಉತ್ಸಾಹದಿಂದ ಸಜ್ಜಾದದ್ದನ್ನು ನೋಡಿ ಮುರಾರಬಾಜಿಯು ಆವೇಶಗೊಂಡನು. ಆತನು ಕೋಟೆಯ ಮೇಲಿಂದ ಒಮ್ಮೆಲೆ ತೋಪುಗಳನ್ನು ಹಾರಿಸಹತ್ತಿದನು. ದುರ್ಗದ ಯಾವತ್ತು ಮಾರ್ಗಗಳನ್ನು-ಕೆಲವುಗಳ ಮೇಲೆ ದೊಡ್ಡ ದೊಡ್ಡ ಬಂಡೆಗಳನ್ನು ಉರುಳಿಸಿ, ಕೆಲವುಗಳ ಮೇಲೆ ದೊಡ್ಡ ದೊಡ್ಡ ಕಂದಕಗಳನ್ನು ಹೊಡಿಸಿ ಕಟ್ಟುಮಾಡಿ, ಒಂದೇ ಮಾರ್ಗವನ್ನು ತೆರವಿಟ್ಟನು. ಅದೇ ಮಾರ್ಗದಿಂದಲೇ ಶತ್ರುಗಳ ಮೇಲೆ ಆತನು ಸಾಗಿಹೋಗುತ್ತಿದ್ದನು. ಹೀಗೆ ಮಾರ್ಗವನ್ನು ಕಟ್ಟುಮಾಡಿದ್ದರೂ ಅಕಸ್ಮಾತ್ತಾಗಿ ಶತ್ರುಗಳು ದುರ್ಗವೇರಿ ಬಂದಾರೆಂದು ತಿಳಿದು ಆತನು ಕಟ್ಟುಮಾಡಿದ ಮಾರ್ಗಗಳಲ್ಲಿಯೂ ದಂಡಾಳುಗಳ ಕಾವಲಿಟ್ಟಿದ್ದನು. ದುರ್ಗದ ಮೇಲಿಂದ ಬಂಡೆಗಳನ್ನು ಉರುಳಿಸಿ ಜನರ ನಾಶಮಾಡುವ ಉಪಾಯವಂತೂ ನಡದೇ ಇತ್ತು. ಗುಪ್ತಸಂಚು ಗಳಿಂದ ಶತ್ರುಗಳ ನಾಶಮಾಡುವ ಉಪಾಯ ಗಳನ್ನು ಮುರಾರಬಾಜಿಯು ನಡೆಸಿದ್ದನು. ಮೊಗಲರಿಗೆ ಮೇಲೆ ಏರಿಹೋಗಲಿಕ್ಕೆ ಮಾರ್ಗಗಳಿಲ್ಲ. ಒಂದೇ ಮಾರ್ಗದಿಂದ ಮರಾಟರು ಹಣೆಯಹತ್ತಿದ್ದರಿಂದ ಮೊಗಲ ಸೈನ್ಯದ ಸಂಹಾರವು ಮಿತಿಮೀರಿಹೋಗಹತ್ತಿತು. ಈ ಸ್ಥಿತಿಯಲ್ಲಿ ಮೊಗಲ ಸೈನ್ಯದ ಮೇಲೆ ಒಮ್ಮೆಲೆ ಮುಗಿಬೀಳಬೇಕೆಂದು ಮುರಾರಬಾಜಿಯು ನಿಶ್ಚಯಿಸಿದನು. ಅರ್ಧಸೈನ್ಯವನ್ನು ದುರ್ಗದ ದ್ವಾರದಲ್ಲಿಟ್ಟು, ಅದರ ಮೇಲೆ ತನ್ನ ಬಂಧುವಾದ ಶಂಕರಾಜಿ ಬಾಜಿ ಸಭಾಸದ ಎಂಬವನನ್ನು ಅಧಿಪತಿಯನ್ನಾಗಿ ನಿಯಮಿಸಿದನು. ಉಳಿದ ಅರ್ಧ ಸೈನ್ಯದೊಡನೆ ಸ್ವತಃ ಮುರಾರಬಾಜಿಯು ''ಹರಹರ ಮಹಾದೇವ'' ಎಂದು ಗರ್ಜಿಸುತ್ತ ದುರ್ಗವನ್ನು ಇಳಿದು ಬಂದು ಮುಸಲ್ಮಾನ ಸೈನ್ಯದ ಮೇಲೆ ಬಿದ್ದನು. ಮರಾಟರು ದುರ್ಗದಲ್ಲಿದ್ದೇ ಕಾದುವರು, ಕೆಳಗಿಳಿದು ಬರುವದಿಲ್ಲೆಂದು ತಿಳಿದು, ಅವ್ಯವಸ್ಥೆಯಿಂದ ಆಚರಿಸುತ್ತಿದ್ದ ಮೊಗಲಸೈನ್ಯದಲ್ಲಿ ಮುರಾರಬಾಜಿಯ ಈ ಆಕಸ್ಮಿಕ ಮುತ್ತಿಗೆಯಿಂದ ಗೊಂದಲವೆದ್ದಿತು. ಎಷ್ಟೋ ಪಠಾಣ ಸೈನಿಕರು ದಾರಿಸಿಕ್ಕತ್ತ ಓಡಿದರು.

ದಿಲೇರಖಾನನು ತನ್ನ ಸೈನ್ಯವನ್ನು ವ್ಯವಸ್ಥೆಗೊಳಿಸಿ ಮತ್ತೆ ಯುದ್ಧಕ್ಕೆ ಅಣಿಯಾದನು. ಮುರಾರಬಾಜಿಯು ಸ್ವಲ್ಪ ಜನರೊಡನೆ ಬಂದು ತನ್ನ ಸೈನ್ಯವ ಚದರಿಸಿಬಿಟ್ಟದ್ದನ್ನು ನೋಡಿ ಖಾನನಿಗೆ ಆಶ್ಚರ್ಯವಾಯಿತು. ಮರಾಟರ ಆವೇಶಕ್ಕೂ, ಕಾಟಕತನಕ್ಕೂ ಖಾನನು ಮೆಚ್ಚಿದನು. ಮಣ್ಣಿನ ದೊಡ್ಡ ದೊಡ್ಡ ಗುಂಪುಗಳ ಮೇಲೆ ತೋಪುಗಳನ್ನೇರಿಸಿ ಮೊಗಲರು ಕೋಟೆಗೆ ಹೊಡೆಯಹತ್ತಿದರು. ಮುರಾರಬಾಜಿಯು ತಾನು ಸ್ವಲ್ಪ ಜನರೊಡನೆ ಬಂದಿದ್ದರೂ

ಮೊಗಲರನ್ನು ಕೋಟೆಯಮೇಲೆ ಏರಗೊಡಲಿಲ್ಲ. ಎರಡೂ ಸೈನ್ಯದವರು ಕೈಗೆ ಕೈಹತ್ತಿ ಕಾದಹತ್ತಿದರು. ಎರಡು ಪ್ರಹರಗಳವರೆಗೆ ನಿಕರದ ಕಾಳಗವಾಯಿತು. ಮೊಗಲರು ಹಿಂದಕ್ಕೆ ಸರಿಯಹತ್ತಿದರು. ಮುರಾರಬಾಜಿಯು ತನ್ನ ಐವತ್ತು ಜನರೊಡನೆ ದಿಲೇರಖಾನನ ಡೇರೆಯ ಬಳಿಗೆ ಹೋದನು. ''ದಿಲೇರಖಾನನ ಸೇಡು ತೀರಿಸಿಕೊಂಡೇ ಬರುವೆನು'' ಎಂದು ಪ್ರತಿಜ್ಞೆಮಾಡಿ ಮುರಾರಬಾಜಿಯು ದುರ್ಗವಿಳಿದು ಬಂದಿದ್ದನು. ಆ ಪ್ರತಿಜ್ಞೆಯು ಈಡೇರುವ ಪ್ರಸಂಗವು ಒದಗಿದ್ದರಿಂದ, ಅವನ ಆವೇಶವು ಹೆಚ್ಚಿತು. ಆತನು ತನ್ನ ಯುದ್ಧಕೌಶಲ್ಯವನ್ನು ಖಾನನಿಗೆ ಚನ್ನಾಗಿ ತೋರಿಸಿದನು. ವಿಸ್ತಾರವಾಗಿ ಹಬ್ಬಿದ ಮೊಗಲ ಸೈನ್ಯವನ್ನು ಲೆಕ್ಕಿಸದೆ ಮುರಾರಬಾಜಿಯು ತನ್ನ ಬಳಿಗೆ ಬಂದದ್ದನ್ನು ನೋಡಿ ದಿಲೇರಖಾನನು ಬೆರಗಾದನು. ''ಈ ಮರಾಟರು ನಿಜವಾಗಿ ವೀರಸಿಂಹರಿರುವರೆ''ಂದು ಜಯಸಿಂಗನ ಮುಖದಿಂದ ಖಾನನು ಕೇಳಿದ್ದು ಇಂದು ಆತನಿಗೆ ನಿಜವಾಗಿ ತೋರಿತು. ಖಾನನು ಮುರಾರಬಾಜಿಯ ನಿಜವಾದ ಕ್ಷಾತ್ರತೇಜವನ್ನು ನೋಡಿ ವಿನಯದಿಂದ— ''ಮುರಾರಜೀ, ನೀವು ಯುದ್ಧ ಮಾಡಬೇಡಿರಿ. ನಿಮ್ಮ ಅತುಲವಾದ ಪರಾಕ್ರಮವನ್ನು ನೋಡಿ ನಾನು ಪರಮ ಸಂತುಷ್ಟನಾಗಿದ್ದೇನೆ. ನಿಮಗೆ ನಾನು ಆಶ್ವಾಸನ ಪತ್ರವನ್ನು ಕೊಡುವೆನು. ನೀವು ನಮ್ಮ ಪಕ್ಷವನ್ನು ವಹಿಸಿರಿ. ನೀವು ಬಹುದಿವಸಗಳಿಂದ ಮುಸಲ್ಮಾನ ಬಾದಶಹರ ಪದರಿನಲ್ಲಿದ್ದವರು. ಈಗ ನಮ್ಮ ಮೊಗಲ ಸಾರ್ವಭೌಮರ ಆಶ್ರಯವನ್ನು ಪಡೆದು ಸುಖಿಗಳೂ, ವೈಭವಶಾಲಿಗಳೂ ಆಗಿರಿ. ನಾನು ಬಾದಶಹರಿಗೆ ಹೇಳಿಕೊಂಡು ನಿಮ್ಮನ್ನು ದಕ್ಷಿಣದ ಬಾದಶಾಹಿ ಸುಭೇದಾರರನ್ನಾಗಿ ಮಾಡುವೆನು. ನನ್ನ ಮಾತಿನಲ್ಲಿ ಎಳ್ಳಷ್ಟು ಹೆಚ್ಚು ಕಡಿಮೆಯಾಗಲಿಕ್ಕಿಲ್ಲ. ನೀವು ಶಸ್ತ್ರವನ್ನು ಕೆಳಗಿಟ್ಟು ನಾನು ಹೇಳಿದಂತೆ ಕೇಳಿರಿ.'' ಎಂದು ನುಡಿಯಲು, ಮುರಾರಬಾಜಿಯು ನಖಶಿಖಾಂತವಾಗಿ ಉರಿಯಹತ್ತಿದನು. ಆತನು ಖಾನನನ್ನು ನಿಷೇಧಿಸಿ ಆತನನ್ನು ಕುರಿತು— ''ನೀವು ವಿಧರ್ಮಿಗಳು, ನಿಮ್ಮ ಆಶ್ವಾಸನ ಪತ್ರವನ್ನು ತಕ್ಕೊಂಡು ನಾನೇನು ಮಾಡಲಿ? ರಣಭೂಮಿಯಲ್ಲಿ ದೇಹವಿಟ್ಟೇನು, ಆದರೆ ನಿಮ್ಮ ದಾಸತ್ವವು ಬೇಡ. ನೀಚತನದಿಂದ ನಡೆಯುವ ನಿಮ್ಮ ಮುಖಾವಲೋಕನ ಮಾಡಲಿಕ್ಕೂ ನನ್ನ ಮನಸ್ಸು ಮೆಚ್ಚುವದಿಲ್ಲ. ನೀವು ಬೇಕಾದಷ್ಟು ಕಾದಿರಿ, ನಮ್ಮ ಸೈನ್ಯವನ್ನು ಬೇಕಾದಷ್ಟು ಸಂಹರಿಸಿರಿ, ನಾನು ಬದುಕಿರುವವರೆಗೆ ಈ ದುರ್ಗದಮೇಲೆ ನಿಮ್ಮ ವಾಸ್ತವ್ಯವಾಗಲಾರದು.'' ಎಂದು ನಿಷ್ಠುರವಾಗಿ ನುಡಿದನು. ಅದನ್ನು ಕೇಳಿ ಖಾನನು ಸಂತಾಪಗೊಂಡು ಸ್ವತಃ ಕಾದಲನುವಾಗಿ ಮುರಾರಬಾಜಿಯ ಮೇಲೆ ಸಾಗಿಬಂದನು. ಖಾನನು ಸ್ವತಃ ಕಾದುವದನ್ನು ನೋಡಿ ಅವನ ಸೈನ್ಯದವರೂ ಆವೇಶಗೊಂಡು ಮುರಾರಬಾಜಿಯ ಜನರ ಮೇಲೆ ಬಿದ್ದರು. ಈ ಘೋರ ಯುದ್ಧದಲ್ಲಿ ಹಲವರು ಮರಾಟರು ಮಡಿದರು, ಮೊಗಲರೂ ಮಡಿದರು. ಹಲವರು ಗಾಯಹೊಂದಿದರು. ಈ ಪ್ರಸಂಗದಲ್ಲಿ ಮುರಾರಬಾಜಿಯ ಢಾಲು ಮುರಿದು ಚೂರಾಯಿತು. ಆಗ ಆತನು ಕೈಗೆ ಸೆಲ್ಲೆಯನ್ನು ಸುತ್ತಿಕೊಂಡು ಕಡತಗಳನ್ನು ತಪ್ಪಿಸಿಕೊಳ್ಳಹತ್ತಿದನು. ಆದರೆ ಇಂಥ ಭಯಂಕರ ಪ್ರಸಂಗದಲ್ಲಿ ತನ್ನ ಸಂರಕ್ಷಣ ಮಾಡಿಕೊಳ್ಳುವದು ಮುರಾರಬಾಜಿಗೆ ದುಸ್ತರವಾಯಿತು. ಆತನು ''ಹೊಡೆಯುವೆನು

ಇಲ್ಲವೆ ಮಡಿಯುವೆನು'' ಎಂಬ ನಿಶ್ಚಯದಿಂದಲೇ ಪ್ರತಿಜ್ಞೆಮಾಡಿ ಹೊರಟುಬಂದಿದ್ದನಾದ್ದರಿಂದ, ಆತನು ಎದೆಗುಂದದೆ, ಹಿಂದಿರುಗದೆ ಕಾದಹತ್ತಿದನು. ಈ ಕಾಳಗದಲ್ಲಿ ಆತನು ಖಾನನಿಗೆ ಗಾಯಮಾಡದೆ ಇರಲಿಲ್ಲ. ಮುರಾರಬಾಜಿಯ ಈ ಪರಾಕ್ರಮವನ್ನು ನೋಡಿ ಖಾನನೂ ಆವೇಶದಿಂದ ಕಾದಹತ್ತಿದನು. ಹೀಗೆ ಭಯಂಕರ ಕಾಳಗನಡೆದಿರುವಾಗ, ಖಾನನ ಬಾಣದಿಂದ ಮುರಾರಬಾಜಿಯ ಶಿರಸ್ಸು ಹಾರಿತು. ಆತನ ಕಬಂಧವೇ ಕಾದಹತ್ತಿತು. ಮುರಾರಬಾಜಿಯ ಕಬಂಧವೇ ಮುನ್ನೂರು ಜನ ಮೊಗಲರನ್ನು ಕೊಂದಿತೆಂದು ಈಗಲೂ ಕೊಂಕಣದಲ್ಲಿ ಜನವಾರ್ತೆಯು ಇರುವದು.

ಮುರಾರಬಾಜಿಯ ಶಿರಸ್ಸು ಹಾರುವ ಮೊದಲು ಆತನು ತನ್ನ ಜನರಿಗೆ ಹೇಳಿದ್ದೇನಂದರೆ — ''ಒಂದು ಪಕ್ಷದಲ್ಲಿ ನನ್ನ ವೈರಿಯು ನನ್ನ ಶರೀರವನ್ನು ಚೂರುಚೂರಾಗಿ ತುಂಡರಿಸಿದರೆ, ಆ ಚೂರಗಳನ್ನೆಲ್ಲ ನನ್ನ ಈ ಥಾಲಿನಲ್ಲಿ ತುಂಬಿಕೊಂಡು ಹೋಗಿ ಶಿವಪ್ರಭುವಿನ ಚರಣದಲ್ಲಿ ಅರ್ಪಿಸಿರಿ; ಮತ್ತು ಆ ಪ್ರಭುವಿಗೆ— ''ನಿಮ್ಮ ಪದರಿನಲ್ಲಿ ನನ್ನಂಥ ಹಲವು ಜನ ವೀರರ ಸಂಗ್ರಹವಿರುವದು. ಹಿಂದೂಜನರನ್ನು ಯವನರ ಬಾಧೆಯಿಂದ ಮುಕ್ತಮಾಡುವ ಸಂಕಲ್ಪವನ್ನು ನೀವು ಕೊನೆಗಾಣಿಸುವಿರೆಂದು ನಾನು ನಂಬಿದ್ದೇನೆ. ನನ್ನ ವಂಶದವರು ತಮ್ಮ ಸೇವೆಯಲ್ಲಿ ತತ್ಪರರಾಗಿರುವರು. ಹಾಗೆ ತತ್ಪರರಾಗಿರುವಂತೆ ನಾನು ಅವರಿಗೆ ಹೇಳಿದ್ದೇನೆಂ''ದು ಮಹಾರಾಜರಿಗೆ ತಿಳಿಸಬೇಕು. ಈ ಅರ್ಥಪೂರ್ಣವಾದ ನಿರೂಪದಂತೆ ಮುರಾರಬಾಜಿಯ ಜನರು ಆತನ ಶರೀರದ ಚೂರುಗಳನ್ನು ಆತನ ಥಾಲಿನಲ್ಲಿ ತುಂಬಿಕೊಂಡು ರಾಯಗಡಕ್ಕೆ ಹೋಗಿ ಶಿವಪ್ರಭುವಿನ ಮುಂದಿಟ್ಟರು. ಆ ಸ್ವಾಮಿಭಕ್ತನಾದ ಪ್ರಭುವೀರನ ಕಟ್ಟಕಡೆಯ ನಿರೂಪವನ್ನು ಅವರು ಮಹಾರಾಜರಿಗೆ ಅರಿಕೆ ಮಾಡಿಕೊಂಡರು. ಅದನ್ನು ಕೇಳಿ ಮಹಾರಾಜರು ಪರಮ ದುಃಖಿತರಾದರು. ಶತ್ರುವಿನ ಸಂಬಂಧದಿಂದ ಮುರಾರಬಾಜಿಯು ಮಾಡಿದ ಉಗ್ರಪ್ರತಿಜ್ಞೆಯೂ, ಆತನ ಮುತ್ಸದ್ದಿತನವೂ, ಸತ್ವಯುಕ್ತ ಕ್ಷಾತ್ರತೇಜವೂ, ನಿಜವಾದ ಸ್ವಾಮಿಭಕ್ತಿಯೂ ಮಹಾರಾಜರ ಕಣ್ಣಮುಂದೆ ಮೂರ್ತಿಮತ್ತಾಗಿ ನಿಂತದ್ದರಿಂದ, ಅವರಿಗೆ ಬಹಳ ದುಃಖವಾಯಿತು. ಅವರು ಸದ್ಗದಿತ ಕಂಠದಿಂದ— ''ಮುರಾರಬಾಜಿಯು ಇದ್ದನೆಂತಲೇ ಪುರಂದರದ ರಕ್ಷಣವಾಯಿತು,'' ಎಂದು ನುಡಿದು, ಥಾಲಿನಲ್ಲಿರುವ ಮಾಂಸ–ಖಂಡಗಳಿಗೆ ಕಣ್ಣೀರುಗಳಿಂದ ಅಭಿಷೇಕ ಮಾಡಿಸಿದರು. ಇತ್ತ ಮುರಾರಭಾಜಿಯು ಮರಣಹೊಂದಿದ್ದನ್ನು ನೋಡಿ ದಿಲೇರಖಾನನು ದುರ್ಗವನ್ನು ಏರಿಹೋ[illegible]ನು; ಆದರೆ ಜೀವದ ಹಂಗುದೊರೆದಿದ್ದ ಮರಾಠಾವೀರರು, ತಮ್ಮ ನಾಯಕನು ಮರಣಹೊಂದಿದ್ದರೂ ಹತಾಶರಾಗದೆ ಕಾದಲು ಸಿದ್ಧರಾದರು. ಮತ್ತೆ ಘೋರ ಸಂಗ್ರಾಮ ನೆಸಗಿತು. ಮೊಗಲರಿಗೆ ಮರಾಟರು ಹಣಿಯಲಿಲ್ಲ, ತಮ್ಮ ಅತುಲವಾದ ಪರಾಕ್ರಮದಿಂದ ಮರಾಟರು ಮೊಗಲ ಸೈನ್ಯವನ್ನು ಹಿಂದಕಟ್ಟಿದ್ದರು. ಮರಾಟರರೊಬ್ಬಿನ ಹೊಡೆತಕ್ಕೆ ಮೊಗಲರು ನಿಲ್ಲಲಾರದೆ ಹಿಂದಕ್ಕೆ ಸರಿದರು. ದಿಲೇರಖಾನನು ನಿರುಪಾಯನಾದನು. ಜಯಸಿಂಗನು ದುರ್ಗತಕ್ಕೊಳ್ಳಲು ಯತ್ನಿಸುವದರಲ್ಲಿ ಅರ್ಥವಿಲ್ಲೆಂದು ಹೇಳಿದ್ದರಿಂದ,

ಯುದ್ಧವು ನಿಲ್ಲಿಸಲ್ಪಟ್ಟಿತು. ಈ ಯುದ್ಧದಲ್ಲಿ ಮರಾಟರು ಪೂರ್ಣ ಜಯಶಾಲಿಗಳಾಗಿ, ಅವರ ಸತ್ವಶಾಲಿತ್ವವು ಚನ್ನಾಗಿ ಪ್ರಕಟವಾಯಿತು!

ಮುರಾರಬಾಜಿಯ ಮರಣದಿಂದ ಮಹಾರಾಜರಿಗೆ ಬಹಳ ಅಸಮಾಧಾನವಾಯಿತು. ಸಧ್ಯಕ್ಕೆ ಪುರಂದರ ದುರ್ಗವು ಮೊಗಲರ ಕೈಸೇರದಿದ್ದರೂ, ಅದು ಅವರ ಕೈಸೇರಿದ ಹಾಗೆಯೇ ಎಂದು ಅವರು ತಿಳಿದುಕೊಂಡರು. ಅವರು ಏಕಾಂತಸ್ಥಾನದಲ್ಲಿ ಕುಳಿತು ಆಲೋಚಿಸ ತೊಡಿಗಿದರು. ಒಟ್ಟಿನಮೇಲೆ ಲಕ್ಷಣವು ಅವರಿಗೆ ನೆಟ್ಟಗೆ ಕಾಣಲಿಲ್ಲ. ಸಮರ್ಥರ ಭವಿಷ್ಯವಾಣಿಯಂತೆ ಮಹಾಗಂಡಾಂತರವು ಮುಸುಕಿ, ಈವರೆಗೆ ತಾವು ಬಹುಶ್ರಮಪಟ್ಟು ಸ್ಥಾಪಿಸಿದ ಸ್ವರಾಜ್ಯದ ಲಯವಾಗುವದೋ ಎಂದು ಅವರು ಚಿಂತಿಸಿದರು. ಮನಸ್ಸಿನ ಈ ಚಿಂತಾಭಾರವು ಕಡಿಮೆಯಾಗಬೇಕೆಂದು ಎಷ್ಟುಯತ್ನಿಸಿದರೂ ಅದು ಕಡಿಮೆಯಾಗದೆ ಅವರನ್ನು ಬಾಧಿಸುತ್ತಲೇ ಇತ್ತು. ಜಯಸಿಂಗನ ಛಾವಣಿಯೊಳಗಿನ ಸುದ್ದಿಗಳನ್ನು ತಿಳಕೊಂಡು ಬರುತ್ತೇನೆಂದು ಜಂಗು ಕಟ್ಟಿಕೊಂಡು ಹೋಗಿದ್ದ ತಾನಾಜಿಯೂ, ಶ್ರೀಧರಸ್ವಾಮಿಯೂ ಇನ್ನೂ ಬಂದಿದ್ದೇ ಇಲ್ಲ. ಅವರ ಗತಿಯೇನಾಯಿತೆಂಬದೂ ಮಹಾರಾಜರಿಗೆ ಗೊತ್ತಾಗಿದ್ದಿಲ್ಲ. ಅವರು ನಾಲ್ಕೂಕಡೆಗೆ ಶೋಧಮಾಡಿದರೂ ಫಲವೇನೂ ಆಗಲಿಲ್ಲ. ಇದೂ ಒಂದು ಚಿಂತೆಯು ಮಹಾರಾಜರನ್ನು ಬಾಧಿಸಹತ್ತಿತ್ತು. ಪುರಂದರದ ದುರ್ಗದ ಗತಿಯು ಹಾಗಾಯಿತು, ಸುದ್ದಿಯ ತರಹೋದ ಜನರ ಗತಿಯು ಹೀಗಾಯಿತು. ಇನ್ನು ರಘುನಾಥಪಂಡಿತನನ್ನು ಜಯಸಿಂಗನ ಕಡೆಗೆ ಕಳಿಸಿದ್ದರ ಸುದ್ದಿಯಾದರೂ ಸಮಾಧಾನಕರವಾಗಿ ಬಂದೀತೆಂದರೆ, ಆ ಸಂಬಂಧದಿಂದಲೂ ನಿರಾಶೆಯೇ ಆಯಿತು. ಎಲ್ಲ ರಾಜ್ಯವನ್ನೂ ತನಗೊಪ್ಪಿಸಿ ಕೈಕಟ್ಟಿಕೊಂಡು ಶರಣು ಬಂದ ಹೊರತು ಯಾರ ಭೆಟ್ಟಿಯನ್ನೂ ತಕ್ಕೊಳ್ಳುವದಿಲ್ಲೆಂಬರ್ಥದ ಪತ್ರವನ್ನು ರಘುನಾಥಪಂತನು ಅದೇ ಬರೆದು ಕಳಿಸಿದ್ದನು. ಹೀಗೆ ನಾಲ್ಕೂ ಕಡೆಯಿಂದ ನಿರಾಶಾಜನಕ ಸಂಗತಿಗಳೇ ಒದಗಿದಬಳಿಕ, ಬಹುಕಷ್ಟದಿಂದ ಸ್ವರಾಜ್ಯವನ್ನು ಸ್ಥಾಪಿಸಿದ್ದ ಮಹಾರಾಜರು ಚಿಂತೆಮಾಡಿದ್ದರೆ ಮತ್ತೇನು ಮಾಡಬೇಕು? ಶ್ರೀ ಸಮರ್ಥರ ಭವಿಷ್ಯವಾಣಿ ನಿಜವಾಗುವದಕ್ಕೆ ಅನುಕೂಲವಾಗಿಯೇ ಎಲ್ಲ ಸಂಗತಿಗಳು ಒದಗುತ್ತ ಬಂದಿರುವದೆಂದು ಮಹಾರಾಜರು ಮನಗಂಡರು. ಶ್ರೀ ಗುರುವಿನ ಭವಿಷ್ಯವಾಣಿಯು ತಮಗೆ ಕಡೆಗೆ ಕಲ್ಯಾಣಪ್ರದವಾಗಿ ರುತ್ತದೆಂಬದೂ ಅವರಿಗೆ ಗೊತ್ತಿತ್ತು. ಇದೆಲ್ಲ ಸರಿ; ಆದರೆ ಸ್ವರಾಜ್ಯದ ಸಲುವಾಗಿ ಅಟ್ಟುಂಡು ತಟ್ಟಿಯಹಾಯ್ದು ಮಹಾರಾಜರ ಮನಸ್ಸಿಗೆ ಹ್ಯಾಗೆ ಸಮಾಧಾನವಾಗಬೇಕು? ಹೀಗೆ ಅಸಮಾಧಾನವಾದಾಗೆಲ್ಲಾ ಏಕಾಂತ ಸ್ಥಳದಲ್ಲಿ ಕುಳಿತುಕೊಳ್ಳುವಂತೆ, ಈಗ ಅವರು, ಏಕಾಂತ ಸ್ಥಾನದಲ್ಲಿ ಕುಳಿತುಕೊಂಡಿದ್ದರು. ರಘುನಾಥ ಪಂಡಿತನು ಜಯಸಿಂಗನ ಛಾವಣಿಯಿಂದ ಕಳಿಸಿದ್ದ ಪತ್ರವು ಅಲ್ಲಿಯೇ ಬಿದ್ದಿತ್ತು. ಉಳಿದ ಎಲ್ಲ ಕಾರಣಗಳಿಗಿಂತ ರಘುನಾಥಪಂಡಿತನ ಪತ್ರದಿಂದ ಮಹಾರಾಜರಿಗೆ ಬಹಳ ಅಸಮಾಧಾನವಾಗಿತ್ತು. ಅವರ ಆ ಪತ್ರವನ್ನು ತಕ್ಕೊಂಡು ಒಕ್ಕಣಿಕೆಯನ್ನು ಬಿಟ್ಟು, ಮುಖ್ಯ ಮಜಕೂರನ್ನು ಮತ್ತೊಮ್ಮೆ ಓದಹತ್ತಿದರು. ಆ ಪತ್ರದಲ್ಲಿ ಬರೆದದ್ದೇನಂದರೆ—

''ಅಪ್ಪಣೆಯನ್ನು ಪಡೆದು ಹೊರಟ ನಾನು, ಮಾರ್ಗವನ್ನು ಕ್ರಮಿಸುತ್ತಿರುವಾಗ ನನ್ನ ಕಣ್ಣಿಗೆ ಬಿದ್ದದ್ದರ ಮೇಲಿಂದ, ಜಯಸಿಂಗರಾಜರು ಬಾದಶಹನ ಮನೋದಯವನ್ನು ಪೂರ್ಣ ಸಿದ್ಧಿಗೊಯ್ಯುವ ನಿಶ್ಚಯದಿಂದಲೇ ಬಂದಿರುವರೆಂಬ ಲಕ್ಷಣವು ತೋರಿತು. ಅವರ ನಿಶ್ಚಯದ ಭಂಗವಾಗುವದು ಅತ್ಯಂತ ದುಸ್ತರವೇ ಸರಿ. ಈವರೆಗೆ ಮಾಡಿದ ಕಾರ್ಯಗಳಿಗಿಂತ ಅತಿ ಮಹತ್ವದ ಕಾರ್ಯವನ್ನು ಮಾಡಿದೆನೆಂಬ ದೊಡ್ಡಿಸ್ತನವನ್ನು ಬಾದಶಹರಿಗೆ ತೋರಿಸುವ ಉಬ್ಬಿನಿಂದ ಅವರು ಪ್ರಯತ್ನವನ್ನು ನಡೆಸಿರುವಂತೆ ತೋರುತ್ತದೆ. ನಾನು ಜಯಸಿಂಗರಾಜರ ಛಾವಣಿಗೆ ಹೋಗಿ ನಾನು ಬಂದ ಸುದ್ದಿಯನ್ನು ಕಳಿಸಲು, ಸುದ್ದಿಯು ಮುಟ್ಟಿತೋ ಮುಟ್ಟಲಿಲ್ಲವೋ ಅನ್ನುವದರೊಳಗೆ ದೂತನು ತಿರುಗಿ ನನ್ನ ಬಳಿಗೆ ಬಂದು—''ಸಂಪೂರ್ಣ ರಾಜ್ಯವನ್ನು, ಒಂದು ಯವಮಾತ್ರವೂ ಉಳಿಯದಂತೆ ನಮಗೆ ಒಪ್ಪಿಸಿದಬಳಿಕ ಭೆಟ್ಟಿಯ ವಿಚಾರವನ್ನು ಹಿಂದಿನಿಂದ ಮಾಡಬಹುದು. ಅಲ್ಲಿಯವರೆಗೆ ಭೆಟ್ಟಿಯನ್ನು ತಕ್ಕೊಳ್ಳಲಿಕ್ಕೆ ನಮಗೆ ಅನುಕೂಲವಿಲ್ಲ'' ಎಂಬರ್ಥದ ಉತ್ತರವನ್ನು ಹೇಳಿದನು. ಅದರಿಂದ ಮನಸ್ಸಿಗೆ ಬಹಳ ವಿಷಾದವಾಯಿತು; ಸಮಕ್ಷ ಭೆಟ್ಟಿಯಾಗಿ ನಾಲ್ಕು ಮಾತುಗಳನ್ನು ಆಡಬೇಕೆಂದರೆ, ಅದಕ್ಕೆ ಆಸ್ಪದವೇ ದೊರೆಯದಾಗಿದೆ. ''ರುಮಾಲದಿಂದ ಕೈಕಟ್ಟಿಕೊಂಡು ಮೊದಲು ಶರಣು ಬರಬೇಕು, ಆಮೇಲೆ ನಿಮ್ಮ ಸ್ವಾಧೀನದಲ್ಲಿರುವ ಎಲ್ಲ ದುರ್ಗಗಳನ್ನೂ, ಕೋಟೆಗಳನ್ನೂ ನಮಗೆ ಒಪ್ಪಿಸಿ, ನಿಮ್ಮ ಕಾವಲುಗಾರರನ್ನೆಲ್ಲ ತೆಗೆದು ನಮ್ಮವರನ್ನು ಅಲ್ಲಿ ಇಡಬೇಕು. ಅಂದರೆ ಮುಂದೆ ಒಡಂಬಡಿಕೆಯ ಮಾತುಕಥೆಯಾಡಬಹುದೆಂ''ದು ಅವರ ಮನಸ್ಸಿನಲ್ಲಿದ್ದಂತೆ ತೋರುತ್ತದೆ. ಇಂಥ ಸ್ಥಿತಿಯಲ್ಲಿ ನಾವು ಮಾತಾಡುವದಾದರೂ ಏನು? ನಮ್ಮ ಮಾತಿನಿಂದ ಪ್ರಯೋಜನವಾದರು ಏನಾದೀತು? ಇದರಿಂದ ನಮಗೆ ಏನೂ ತೋಚದಾಗಿದೆ. ನಮ್ಮ ಕಡೆಯ ಯಾರೋ ಇಬ್ಬರನ್ನು ಗುಪ್ತಚಾರರೆಂದು ಮಿರ್ಝಾರಾಜರು ಸೆರೆಯಲ್ಲಿಟ್ಟ ವರ್ತಮಾನವಿದೆ; ಆದರೆ ಇಂಥವರೇ ಎಂಬದು ಗೊತ್ತಾಗಿಲ್ಲ. ಗೊತ್ತುಹಚ್ಚುವ ಯತ್ನ ನಡಿಸಿರುವೆನು. ಒಟ್ಟಿಗೆ ಕೆಲಸವು ಬಹು ಕಠಿಣವಾಗಿ ತೋರುತ್ತದೆ. ಅವಿಂಧರ ಪಕ್ಷವನ್ನು ವಹಿಸಿ ಜಯಸಿಂಗರಾಜರು ಇಷ್ಟು ಕಠೋರತನದಿಂದ ನಡಕೊಳ್ಳುವದನ್ನು ನೋಡಿ ಮನಸ್ಸಿಗೆ ಬಹಳ ವಿಷಾದವಾಗುತ್ತದೆ. ಹೆಚ್ಚು ಕಡಿಮೆ ತಿಳಿದದ್ದನ್ನು ಹಿಂದಿನಿಂದ ತಿಳಿಸುವೆನು. ಸನ್ನಿಧಿಗೆ ಶ್ರುತವಿರಬೇಕು.''

ಈ ಪತ್ರವನ್ನು ಓದಿ ಮಹಾರಾಜರು ಒಮ್ಮೆ ನಿಟ್ಟುಸಿರು ಬಿಟ್ಟರು. ಈ ಪ್ರಸಂಗದಲ್ಲಿ ತಾವು ಏನು ಮಾಡಬೇಕೆಂದು ಅವರು ವಿಚಾರಿಸಹತ್ತಿದರು; ಆದರೆ ಅವರಿಗೆ ಏನೂ ತೋಚದ ಹಾಗಾದ್ದರಿಂದ ಶ್ರೀಭವಾನಿಯ ಸನ್ನಿಧಿಗೆ ಹೋಗಿ ಆಕೆಯ ಆಜ್ಞೆಯನ್ನಾದರೂ ಕೇಳಿಕೊಳ್ಳಬೇಕೆಂದು ಪ್ರತಾಪಗಡಕ್ಕೆ ಹೋಗಲು ನಿಶ್ಚಯಿಸಿದರು. ಒಮ್ಮೆ ಅವರು ನಿಶ್ಚಯ ಮಾಡಿದರೆಂದರೆ, ಅದನ್ನು ಅಮಲಿನಲ್ಲಿ ತರಲಿಕ್ಕೆ ತಡವಾಗುತ್ತಿದ್ದಿಲ್ಲ. ಕೂಡಲೆ ಅವರ ಕುದುರೆಯು ಸಿದ್ಧವಾಯಿತು. ಸಂಗಡ ಬರತಕ್ಕ ನಾಲ್ಕುಜನರ ಕುದುರೆಗಳೂ ಸಿದ್ಧವಾದವು. ಕೂಡಲೆ ಮಹಾರಾಜರು ರಾಯಗಡದಿಂದ ಹೊರಟರು. ಎಲ್ಲ ಕಡೆಯಲ್ಲಿ ಮೊಗಲ ಸೈನ್ಯವು

ವ್ಯಾಪಿಸಿರುವಾಗ, ತಾವು ಹೀಗೆ ಅಲ್ಪವಾದ ಸೈನ್ಯದೊಡನೆ ರಾಯಗಡವನ್ನು ಬಿಟ್ಟು ಹೊರಬೀಳಬಾರದೆಂದು ಮಹಾರಾಜರ ಹಿತೈಷಿಗಳು ಆಗಾಗ್ಗೆ ಅವರಿಗೆ ಹೇಳುತ್ತಿದ್ದರು. ಪ್ರಸಂಗಬಂದಾಗ ಅವರು ಮಹಾರಾಜರನ್ನು ನಿರ್ಬಂಧಿಸುತ್ತಲೂ ಇದ್ದರು, ಆದರೆ ಮಹಾರಾಜರು ಯಾವಾಗಲೂ ಅವರ ಮಾತುಗಳನ್ನು ನಡಿಸುತ್ತಿದ್ದರೆಂದು ಮಾತ್ರ ಹೇಳಲಿಕ್ಕೆ ಬರುವಹಾಗಿದ್ದಿಲ್ಲ. ತಮ್ಮ ಸಂಗಡಿಗರು ವೈರಿಗಳ ಕೈಯಲ್ಲಿ ಸಿಕ್ಕಾಗ, ಯುಕ್ತಿ-ಪ್ರಯುಕ್ತಿಯಿಂದ ಅವರನ್ನು ಬಿಡಿಸಿಕೊಂಡು ಬರಲಿಕ್ಕೆ ತಮಗೆ ಮೊದಲ ಅನುಕೂಲವಿರುವಂತೆ, ಈಗ ಅನುಕೂಲವಿಲ್ಲೆಂದು ಅವರು ಅಸಮಾಧಾನಪಡುತ್ತಿದ್ದರು. ಭವಾನಿಯ ದರ್ಶನದ ವಿಷಯದ ಉತ್ಕಟವಾದ ಇಚ್ಛೆಯು ಉತ್ಪನ್ನವಾದ ಕೂಡಲೆ, ಆಕೆಯಮೇಲೆ ಭಾರಹಾಕಿ ಭಕ್ತಿಪರವಶತೆಯಿಂದ ಅವರು ಹೊರಟುಬಿಡುತ್ತಿದ್ದರು. ಅದರಂತೆಯೇ ಈಗಾದರೂ ಮಹಾರಾಜರು ಹೊರಟಿದ್ದರು. ಮಹಾರಾಜರಿಗೂ ಅವರ ಪರಿವಾರದವರಿಗೂ ಇಂಥ ಭಯಂಕರ ಗಂಡಾಂತರವು ಒದಗಿದ್ದರೂ, ಅವರು ಧೈರ್ಯದಿಂದ ಗಂಡಾಂತರದ ನಿವಾರಣಕ್ಕಾಗಿ ಬಗೆಬಗೆಯಿಂದ ಯತ್ನಿಸುವದನ್ನು ನೋಡಿದರೆ, ಮರಾಟರ ಸತ್ವಶಾಲಿತ್ವವನ್ನು ಎಷ್ಟು ವರ್ಣಿಸಿದರೂ ಸ್ವಲ್ಪವೇ ಎಂದು ಅನ್ನಬೇಕಾಗುವದು!

## ಸತ್ಯ ಸಂಕಲ್ಪವು!

ಮಹಾರಾಜರು ಮಾರ್ಗವಿಡಿದು ಹೋಗುವಾಗ ಅವರ ಮನಸ್ಸಿನಲ್ಲಿ ಹಲವು ವಿಚಾರ ತರಂಗಗಳು ಉತ್ಪನ್ನವಾದವು. ಬಾದಶಹನ ನಂಬಿಗೆಯು ತನ್ನ ಮೇಲೆ ಇರುವದರಿಂದ ಜಯಸಿಂಗನು ಮಾನಾಪಮಾನಗಳನ್ನು ಲೆಕ್ಕಿಸದೆ ತಮ್ಮ ಸಂಗಡ ಉದ್ಧಟವೃತ್ತಿಯಿಂದ ನಡಕೊಳ್ಳುವನೆಂತಲೂ, ಕೈಸಾಗದ್ದರಿಂದ ಆತನಿಂದಾದ ಅಪಮಾನವನ್ನು ತಾವು ಸಹಿಸದಿದ್ದರೆ, ನಿರ್ವಾಹವಿಲ್ಲದಂತಾಗಿದೆಯೆಂತಲೂ ಅವರು ವ್ಯಸನಪಡಹತ್ತಿದರು. ಬಹುಕಷ್ಟದಿಂದ ಸಂಪಾದಿಸಿದ ರಾಜ್ಯವನ್ನೆಲ್ಲ ಒಪ್ಪಿಸಿ ಕೈಕಟ್ಟಿಕೊಂಡು ಶರಣು ಹೋಗುವದೆಂದರೆ, ಎಂಥ ಅಪಮಾನವು? ಇದಕ್ಕಿಂತ ನನಗೆ ಮರಣವು ಶ್ರೇಯಸ್ಕರವಲ್ಲವೆ? ಜಯಸಿಂಗನು ವೇದಧರ್ಮವನ್ನು; ಗೋ-ಬ್ರಾಹ್ಮಣರ ಪ್ರತಿಪಾಲನವು ಆತನ ಕರ್ತವ್ಯವು; ಹೀಗಿದ್ದು ವೈಭವದ ಆಶೆಯಿಂದ ತಾನು ಬಾದಶಹನ ದಾಸತ್ವವನ್ನು ಒಪ್ಪಿಕೊಂಡಿರುವದಲ್ಲದೆ, ಸ್ವಜನರ, ಹಾಗು ಸ್ವಧರ್ಮದ ಹಿತಕ್ಕಾಗಿ ಯತ್ನಿಸುವವರಿಗೂ ವಿಘ್ನವನ್ನುಂಟು ಮಾಡುತ್ತಾನಲ್ಲ! ದಿಲ್ಲಿಯೆತ್ತ, ನಮ್ಮ ಮಹಾರಾಷ್ಟ್ರವೆತ್ತ? ಇಷ್ಟು ದೂರ ಬಂದು ತಮ್ಮ ಸಂಬಂಧವಿಲ್ಲದ ಕೆಲಸದಲ್ಲಿ ಕೈಹಾಕಿ ಜನತಾಪವನ್ನುಂಟು ಮಾಡುವದು ಎಷ್ಟು ಪಾಪಕರವು! ಈ ಕ್ರೂರಕಾರ್ಯವನ್ನು ಬದ್ಧಕಂಕಣನಾಗಿ ನಡೆಸಿರುವ ಔರಂಗಜೇಬ ಬಾದಶಹನ ದುಷ್ಟ ಮಹತ್ವಾಕಾಂಕ್ಷೆಯಾದರೂ ಎಷ್ಟು ಬಲಿಷ್ಠವಾಗಿರುವದು. ಆ ದುಷ್ಟನ ಮಾತಿನಂತೆ ಕುಣಿಯುವವರ ವಿವೇಕವೂ,

ಪಾಪ–ಪುಣ್ಯ ವಿಚಾರವೂ ಹಾಳಾಗಿ ಹೋಗಿರಬಹುದೇ? ಜಯಸಿಂಗ, ನೀನು ಇಷ್ಟು ಕೀರ್ತಿಯನ್ನು ಸಂಪಾದಿಸಿದ್ದೂ, ಇಷ್ಟು ಬಲಿಷ್ಠನೂ–ಶ್ರೇಷ್ಠ ಮುತ್ಸದ್ದಿಯೂ, ದೃಢ ನಿಶ್ಚಯದವನೂ ಆಗಿಯಿದ್ದದ್ದೂ, ಸ್ವಜನರ ಕುತ್ತಿಗೆಯನ್ನು ಸರಕ್ಕನೆ ಕೊಯ್ಯುವದಕ್ಕಾಗಿಯೇ ಏನು? ನನ್ನನ್ನು ಇಷ್ಟು ರಸಾತಳಕ್ಕೆ ಮೆಟ್ಟಬೇಕೆಂದು ಆ ದುಷ್ಟ ಬಾದಶಹನ ಮನಸ್ಸಿನಲ್ಲಿ ಸಹ ಬಂದಿರಲಿಕ್ಕಿಲ್ಲ; ಆದರೆ ಬಾದಶಹನ ಮನಸ್ಸನ್ನು ಪ್ರಸನ್ನೀಕರಿಸಿಕೊಳ್ಳಲು ಆತುರ ಪಡುತ್ತಿರುವ ನೀನು ಕಠೋರತನದಲ್ಲಿ ಬಾದಶಹನ ತಲೆಮೆಟ್ಟಿ ಹಾರಿಬಿಟ್ಟೆ; ಉಪಾಯವಿಲ್ಲ. ನಮ್ಮಲ್ಲಿ ಸಾಮರ್ಥ್ಯವಿಲ್ಲದಾಗ ಮಂದಿಗೆ ದೋಷವಿಡುವದರಿಂದ ಪ್ರಯೋಜನವೇನಾಗುವದು? ಒಟ್ಟಿಗೆ ಲಕ್ಷಣವು ನೆಟ್ಟಗೆ ಕಾಣುವದಿಲ್ಲ. ಭವಾನೀಮಾತೇ, ನಿನ್ನ ಮನಸ್ಸಿಗೆ ಹೀಗೆಯೇ ಬಂದಿತೇ? ನಾನು ಕೈಕೊಂಡ ಕಾರ್ಯವು ಅನ್ಯಾಯದ್ದಿರಬಹುದೇ? ನನ್ನ ಹೃದಯವು ಅಪವಿತ್ರ ವಾದದ್ದಿರಬಹುದೇ? ಯಾವ ಕಾರಣದಿಂದ ನನ್ನ ಕಾರ್ಯಕ್ಕೆ ಇಂಥ ಮಹಾವಿಘ್ನವು ಪ್ರಾಪ್ತವಾಗಿರ ಬಹದು! ಎಂಥ ಕಠಿಣ ಪ್ರಸಂಗವಿದು! ಸ್ವರಾಜ್ಯದ ನಾಶವು, ಜಯಸಿಂಗನಿಗೆ ನಾನು ಶರಣು ಹೋದರೂ ಆಗುವದು, ಹೋಗದಿದ್ದರೂ ಆಗುವದು; ನಾನು ಮಾಡಲಾದರೂ ಏನು? ಸಮರ್ಥಾ, ಸದ್ಗುರೋ, ನಿನ್ನ ಭವಿಷ್ಯವಾಣಿಯು ಅಪರಿಹಾರ್ಯವಾಗಿದ್ದು ಅದರಂತೆ ಈಗ ಎಲ್ಲ ಸಂಗತಿಗಳೂ ಒದಗುತ್ತ ಬಂದಿದ್ದರೂ ಕಾರಣವಿಲ್ಲದೆ ನನ್ನ ಮನಸ್ಸು ಯಾಕೆ ವ್ಯಥಿತ ವಾಗುತ್ತಿರಬಹದು? ಪರಿಣಾಮದಲ್ಲಿ ಸುಖವಾಗುವದೆಂದು ನೀನು ಹೇಳಿರುವೆಯಲ್ಲವೆ? ಆಗಲಿ, ಶ್ರೀ ಭವಾನಿಯ ಅಪ್ಪಣೆಯು ಏನಾಗುತ್ತದೆಯೋ ನೋಡುವೆನು. ಶ್ರೀ ಭವಾನಿಯ ಯೋಗದಿಂದ ನನ್ನ ದೈವ ಬಲವೂ, ನಿನ್ನ ಯೋಗದಿಂದ ನನಗೆ ಗುರುಬಲವೂ ಅನುಕೂಲ ವಾಗಿರುವದರಿಂದಲೇ ಈ ವರೆಗೆ ಹಲವು ಸಂಕಟಗಳಿಂದ ನಾನು ಪಾರಾಗಿರುವೆನು, ಮುಂದೆ ಯಾದರೂ ಪಾರಾಗುವೆನು. ಹೀಗಿದ್ದು ಈಗ ನಾನು ವ್ಯರ್ಥ ಚಿಂತಿಸುವದೇಕೆ? ಬರುವದೆಲ್ಲ ನಮ್ಮ ಹಿತಕ್ಕಾಗಿಯೇ ಬರುತ್ತದೆಂಬ ನಿನ್ನ ಬೋಧವಚನವನ್ನು ಮನಸ್ಸಿನಲ್ಲಿಟ್ಟುಕೊಂಡು, ಸದಾಚರಣೆಯನ್ನು ಬಿಡದೆ, ಸದುದ್ದೇಶವನ್ನು ತ್ಯಜಿಸದೆ. ಸತತೋದ್ಯೋಗಕ್ಕೂ ಪರಿತಾಪಗಳಿಗೂ ಬೇಸರಿಯದೆ, ಸ್ವೀಕೃತ ಸತ್ಕಾರ್ಯವನ್ನು ದೃಢನಿಶ್ಚಯದಿಂದ ನಡೆಸುತ್ತ ಹೋದರಾಯಿತು. ಅದರಲ್ಲಿ ತೇಲಿದರೂ ಶ್ರೇಯಸ್ಕರವೇ, ಮುಣುಗಿದರೂ ಶ್ರೇಯಸ್ಕರವೇ! ಎಂದು ಮಹಾರಾಜರು ಮನಸ್ಸನ್ನು ಸಮಾಧಾನಪಡಿಸಿಕೊಳ್ಳುತ್ತ ಎದುರಿಗೆ ನೋಡಲು, ಪ್ರತಾಗಡವು ಕಾಣಹತ್ತಿತು. ಅದರಿಂದ ಮಹಾರಾಜರಿಗೆ ಮತ್ತಿಷ್ಟು ಸಮಾಧಾನವಾಯಿತು. ಇನ್ನು ಬೇಗನೆ ಶ್ರೀ ಭವಾನಿ ಮಾತೆಯ ದರ್ಶನವಾಗುವದೆಂಬ ಉತ್ಸಾಹದಿಂದ ಅವರು ಬೇಗ ಬೇಗನೆ ಮಾರ್ಗವನ್ನು ಕ್ರಮಿಸಹತ್ತಿದರು.

ಮೊದಲೇ ಭವಾನಿಯ ಮೇಲೆ ಮಹಾರಾಜರ ಭಕ್ತಿಯು ವಿಶೇಷ; ಅದರಲ್ಲಿ ದುರ್ಧರವಾದ ಸಂಕಟಕ್ಕೆ ಗುರಿಯಾಗಿ ''ಸಂಕಟ ಬಂದಾಗ ವೆಂಕಟರಮಣ''ನೆಂಬ ಸ್ಥಿತಿಯೂ ಅವರಿಗೆ ಈಗ ಪ್ರಾಪ್ತವಾಗಿತ್ತು ಅಂದಬಳಿಕ ಅವರ ಭಕ್ತಿಯು ಹೆಚ್ಚದೆಯೇನುಮಾಡೀತು? ಅತಿಶಯವಾದ ಆನಂದವಾದಾಗ, ಇಲ್ಲವೆ ದುಃಖವಾದಾಗ ಭಗವದ್ಭಕ್ತರಿಗೆ ಭಗವಂತನ

ನೆನಪಾಗುವದು ಸ್ವಾಭಾವಿಕವೇ ಸರಿ. ಮಹಾರಾಜರು ಪ್ರತಾಪಗಡವನ್ನೇರಿ ನೆಟ್ಟಗ ಶ್ರೀ ಭವಾನೀಮಾತೆಯ ಮಂದಿರಕ್ಕೇ ಹೋಗತಕ್ಕವರು; ಆದರೆ ಮಾತು ಶ್ರೀ ಜೀಜಾಬಾಯಿ ಸಾಹೇಬರು ಆಗ ಪ್ರತಾಪಗಡದಲ್ಲಿಯೇ ಇದ್ದದ್ದರಿಂದ ಮಹಾರಾಜರು ಮೊದಲು ಅವರ ದರ್ಶನಕ್ಕಾಗಿ ಹೋದರು. ಮಹಾರಾಜರ ಭಕ್ತಿಯು ಶ್ರೀ ಭವಾನಿಯ ಮೇಲಿದ್ದಷ್ಟೇ ಜೀಜಾಬಾಯಿಯವರ ಮೇಲೆಯೂ ಇತ್ತು. ಅವರು ತಾಯಿಯ ಬಳಿಗೆ ಹೋಗಿ ಭಕ್ತಿಯಿಂದ ಅವರ ಚರಣಕ್ಕೆ ಸಾಷ್ಟಾಂಗವೆರಗಿದರು. ಜೀಜಾಬಾಯಿ ಸಾಹೇಬರು ಮಗನ ಸಂಕಟ ನಿವಾರಣಕ್ಕಾಗಿ ಭವಾನೀಮಾತೆಯನ್ನು ಅದೇ ಪ್ರಾರ್ಥಿಸಿ ಬಂದಿದ್ದರು; ಆದ್ದರಿಂದ ಈಗ ತಾವು ಮಗನನ್ನು ಕಂಡದ್ದು ಆಕೆಯ ಕೃಪೆಯೆಂತಲೇ ಆ ಸಾಧ್ವಿಯು ಭಾವಿಸಿದಳು. ಆ ವೀರಮಾತೆಯು ವಾತ್ಸಲ್ಯದಿಂದ ಮಗನನ್ನು ಹಿಡಿದೆತ್ತಿ ಮೈಮೇಲೆ ಕೈಯಾಡಿಸಿ—"ನಮ್ಮಪ್ಪನು ಎಷ್ಟು ಸೊರಗಿದನಲ್ಲ; ದುಷ್ಟ ಮೊಗಲರೊಡನೆ ಪೇಚಾಡುವ ತಾಪದಲ್ಲಿ ಹೊತ್ತು ಹೊತ್ತಿಗೆ ಅನ್ನವಿಲ್ಲ! ನೀರಿಲ್ಲ!! ಶಿವಬಾ, ಪರೋಪಕಾರ ಮಾಡುವವರ ಗತಿಯು ಹೀಗೆಯೇ ಸರಿ. ಚಂದನದ ಕೊರಡಿನಂತೆ ದೇಹವನ್ನು ಸವಿಸದಿದ್ದರೆ ಪರೋಪಕಾರವು ಘಟಿಸದು. ಶಿವಬಾ, ನೀನು ಸಮರ್ಥ ಶಿಷ್ಯನಲ್ಲವೇ? ಭವಾನಿಯ ಭಕ್ತನಲ್ಲವೇ? ನೀನು ಜನಿಸಿದ್ದರಿಂದಲೇ ಜೀಜಾಬಾಯಿಯು ವೀರಮಾತೆಯೆಂಬ ಪದವಿಯನ್ನು ಹೊಂದಿರುವಳಲ್ಲವೇ? ಅಂದಬಳಿಕ ನೀನು ಮಹಾ ವಿಪತ್ತಿನಲ್ಲಾದರೂ ಸತ್ವಹೀನನಾಗದೆ ಉತ್ಸಾಹದಿಂದ ಉದ್ಯೋಗ ಮಾಡಲೇ ಬೇಕು. ಹಿರಿಯರ ಪುಣ್ಯವಿರುವದು, ಶ್ರೀ ಭವಾನಿಯ ಕೃಪೆಯಿರುವದು, ಶ್ರೀ ಗುರುವಿನ ಆಶೀರ್ವಾದವಿರುವದು. ಅಂದಬಳಿಕ ಹೆದರುವದೇಕೆ? ಹಿರಿಯರ ಪುಣ್ಯಕ್ಕೂ, ಭವಾನಿಯ ಭಕ್ತಿಗೂ, ಶ್ರೀ ಗುರುವಿನ ಬೋಧಕ್ಕೂ ಕಲಂಕವುಂಟಾಗದಂತೆ ನಡೆದುಕೊಳ್ಳುವಾಗ, ದೇಹವು ಬಿದ್ದುಹೋದರೆಯೇ ಅದನ್ನು ಧರಿಸಿದ್ದರ ಸಾರ್ಥಕತೆಯಾದಂತಾಗುವದು. ಹೋಗು, ಶ್ರೀ ಭವಾನಿಯ ದರ್ಶನ ಮಾಡಿಕೊಂಡು ಬಾ. ಈಗ ನಿನಗೆ ಎಷ್ಟು ಕಷ್ಟ ಒದಗಿದರೂ ಕಡೆಗೆ ಕಲ್ಯಾಣವಾಗುವದು. ಸತ್ಯಸಂಕಲ್ಪವನ್ನು ತಪ್ಪಿಸುವದು ಯಾರಿಂದಲೂ ಆಗದು. ಸತ್ಯಸಂಕಲ್ಪದ ದಾತೃವು ಈಶ್ವರನಾದ್ದರಿಂದ, ಅದನ್ನು ಪೂರಯಿಸುವವರಿಂದಲೇ ನಮ್ಮ ನಿಜವಾದ ಕಲ್ಯಾಣವಾಗುವದು." ಎಂದು ನುಡಿಯಲು, ತನ್ನ ತಾಯಿಯ ಘನತರವಾದ ಯೋಗ್ಯತೆಗಾಗಿ ಶಿವರಾಯನ ಕಣ್ಣುಗಳು ಬಾಷ್ಪಪೂರ್ಣವಾದವು. ಆತನು ಅತ್ಯಂತ ಭಕ್ತಿಯಿಂದ ತಾಯಿಯನ್ನು ಕಣ್ಣುತುಂಬ ನೋಡಿ ಮತ್ತೊಮ್ಮೆ ಆಕೆಯ ಚರಣಕ್ಕೆರಗಿ ಶ್ರೀ ಭವಾನಿಯ ದರ್ಶನಕ್ಕೆ ಹೊರಟನು.

ಈ ಮೇರೆಗೆ ತಾಯಿಯ ಅಪ್ಪಣೆಯನ್ನು ಪಡೆದು ಮಹಾರಾಜರು ಶ್ರೀ ಭವಾನಿಯ ಮಂದಿರವನ್ನು ಪ್ರವೇಶಿಸಿದರು. ಅವರ ಸಂಗಡ ಮಹಾಸ್ವಾಮಿ ಭಕ್ತನಾದ ಬಾಳಾಜಿ ಆವಜಿ ಚಿಟನೀಸನು ಪದ್ಧತಿಯಂತೆ ಬಂದಿದ್ದನು. ಆತನನ್ನು ಹೊರಗೆ ಕುಳ್ಳಿರಿಸಿ, "ನಾವು ದೇವಿಯ ದೃಷ್ಟಾಂತದ ಲಕ್ಷಣವು ಕಂಡಕೂಡಲೆ ಒಳಗೆ ಬಂದು ದೃಷ್ಟಾಂತದ ವಾಕ್ಯಗಳನ್ನು ಬರೆದಿಡ ಬೇಕೆಂ"ದು ಹೇಳಿ ಮಹಾರಾಜರು ತಾವು ದೇವಿಯ ಸನ್ನಿಧಿಗೆ ತೆರಳಿದರು. ಭವಾನಿಯ

ದೃಷ್ಟಾಂತವನ್ನು ಕೇಳಿಕೊಳ್ಳುವದಕ್ಕಾಗಿ ಮಹಾರಾಜರು ಹೋಗುವ ಕ್ರಮವು ಎರಡು ವಿಧವಾಗಿತ್ತೆಂಬದನ್ನು ನಮ್ಮ ''ಮರಾಟರ ಅಭ್ಯುದಯ''ವೆಂಬ ಇದರ ಹಿಂದಿನ ಕಾದಂಬರಿಯಲ್ಲಿ ನಾವು ಕೊಟ್ಟಿರುವದನ್ನು ವಾಚಕರು ಮರೆತಿರಲಿಕ್ಕಿಲ್ಲ. ಸರ್ವಸಾಧಾರಣ ಪ್ರಸಂಗದಲ್ಲಿ ಮಹಾರಾಜರು ಭವಾನಿಯ ಕಡೆಗೆ ಏಕಾಗ್ರ ದೃಷ್ಟಿಯನ್ನಿಟ್ಟು ತಾದಾತ್ಮ್ಯವನ್ನು ಹೊಂದುತ್ತಿದ್ದರು. ಆ ಸ್ಥಿತಿಯಲ್ಲಿ ಹೊರಟ ಶಬ್ದಗಳನ್ನು ಚೀಟನೀಸನು ಬರೆದಿಡುತ್ತಿದ್ದನು. ಎಚ್ಚತ್ತ ಬಳಿಕ ಮಹಾರಾಜರು ಅದನ್ನು ಓದಿಸಿ ಅದರಂತೆ ನಡೆದುಕೊಳ್ಳುತ್ತಿದ್ದರು. ಹೀಗೆ ದೃಷ್ಟಾಂತವಾಗುವಾಗ ಮಹಾರಾಜರ ಬಳಿಯಲ್ಲಿ ಬೇರೆ ಜನರಿದ್ದರೂ ಇರಬಹುದಾಗಿತ್ತು. ಇನ್ನು ಪ್ರಸಂಗವು ಬಹುಕಠಿಣವಿದ್ದಲ್ಲಿ ಮಹಾರಾಜರು ಭವಾನಿಯ ಸನ್ನಿಧಿಗೆ ಒಬ್ಬರೇ ಹೋಗಿ, ಗುಡಿಯ ಬಾಗಿಲುಗಳನ್ನು ಇಕ್ಕಿಕೊಳ್ಳುತ್ತಿದ್ದರು. ಆಮೇಲೆ ತಮ್ಮ ಮೈಮೇಲಿನ ವಸ್ತ್ರಗಳನ್ನು ತೆಗೆದಿಟ್ಟು ಕೈಕಾಲುಗಳನ್ನು ತೊಳೆದುಕೊಂಡು, ಭವಾನೀಮಾತೆಯಂತೆಯೇ ತಮಗೆ ಪೂಜ್ಯವಾದ ತಮ್ಮ ಭವಾನೀ ಎಂಬ ಹೆಸರಿನ ಖಡ್ಗವನ್ನು ಬಲಗಡೆಗೆ ಕೈಗೆ ನಿಲುಕುವ ಹಾಗೆ ಇಟ್ಟುಕೊಂಡು ಜಗದಂಬೆಯ ತೀರ ಹತ್ತರ ಹೋಗಿ ಕುಳಿತುಕೊಳ್ಳುತ್ತಿದ್ದರು. ಕೂತಕೂತಂತೆಯೇ ಅವರಿಗೆ ಗುಂಡು ಬಡಿದಂತಾಗಿ ಅವರ ಕಣ್ಣುಗಳು ತಮ್ಮಿಂದ ತಾವೇ ಮುಚ್ಚಹತ್ತಿ ಅವರು ಜಗದಂಬೆಯ ಚರಣಗಳ ಮೇಲೆ ಮಸ್ತಕವನ್ನಿಡುತ್ತಿದ್ದರು. ಕ್ವಚಿತ್ತವಾಗಿ ಮನಸ್ಸಿನ ಪೂರ್ಣ ಲಯವಾಗಿ ಅವರಿಗೆ ಗಾಢವಾದ ನಿದ್ರೆಯೂ ಹತ್ತುತ್ತಿತ್ತು ಆಗ ಸ್ವಪ್ನದಲ್ಲಿ ಆಗತಕ್ಕ ದೃಷ್ಟಾಂತಗಳು ಆಗುತ್ತಿದ್ದವು. ಈ ಪ್ರಸಂಗದಲ್ಲಿ ಮತ್ತೊಮ್ಮೆ ಮಹಾರಾಜರು ಮಾತಾಡುತ್ತಲೂ ಇದ್ದರು. ಹೀಗೆ ಮಾತಾಡಹತ್ತಿದ ಕೂಡಲೆ ಚೀಟನೀಸನು ಒಳಗೆ ಬಂದು ಆ ಮಾತುಗಳನ್ನು ಬರೆದಿಡುತ್ತಿದ್ದನು. ಮುಂದೆ ಎಚ್ಚತ್ತಬಳಿಕ ಮಹಾರಾಜರು ಅದನ್ನು ಓದಿಸಿ ತಮಗೆ ಬಿದ್ದ ಸ್ವಪ್ನದ ಸಂಗತಿಗೆ ಹೊಂದಿಸಿ ಅರ್ಥಮಾಡುತ್ತಿದ್ದರು. ಅವರ ಹೊರತು ಬೇರೆಯವರಿಗೆ ಅದರ ಅರ್ಥವಾಗುತ್ತಿದ್ದಿಲ್ಲ. ಅದರಂತೆ, ಇಂದು ಮಹಾರಾಜರ ಮೈಮೇಲಿನ ವಸ್ತ್ರಗಳನ್ನು ತೆಗೆದು ಶುಚಿರ್ಭೂತರಾಗಿ, ಭವಾನೀ ಎಂಬ ಹೆಸರಿನ ತಮ್ಮ ಖಡ್ಗವನ್ನು ತಮ್ಮ ಕೈಗೆ ನಿಲುಕುವ ಹಾಗೆ ಬಲಗಡೆಗೆ ಇಟ್ಟುಕೊಂಡು ದೇವಿಯ ಸಮ್ಮುಖದಲ್ಲಿ ಕುಳಿತು ಕೆಲವು ಬೀಜಮಂತ್ರಗಳನ್ನು ಉಚ್ಚರಿಸಿದರು. ಕೂಡಲೆ ಅವರು ಕಣ್ಣುಗಳನ್ನು ಮುಚ್ಚಿ ದೇವಿಯ ಚರಣಗಳ ಮೇಲೆ ಮಸ್ತಕವನ್ನಿಡಲು, ಗಾಢ ಸಮಾಧಿಯಲ್ಲಿ ಸ್ವಪ್ನ ಬಿದ್ದಂತಾಗಿ ಅವರಿಗೆ ದೇವಿಯ ದೃಷ್ಟಾಂತವಾಯಿತು.

ಮಹಾರಾಜರು ಸ್ವಪ್ನದಲ್ಲಿ ಬಂದು ಘೋರಾರಣ್ಯವನ್ನು ಪ್ರವೇಶಿಸಿದ ಹಾಗಾಯಿತು. ಅಷ್ಟರಲ್ಲಿ ಭಯಂಕರವಾದ ಬಿರುಗಾಳಿಯು ಬಿಟ್ಟು, ದೊಡ್ಡ ದೊಡ್ಡ ಗಿಡಗಳು ಬೇರುಸಹಿತ ಕಡಕೊಂಡು ಬೀಳಹತ್ತಿದವು. ಸಣ್ಣ ಸಣ್ಣ ಕಂಟೆಗಳೂ ಗಾಳಿಯ ಹೊಡೆತಕ್ಕೆ ಹಾರಿಹೋಗ ಹತ್ತಿದವು. ಆಗ ಆ ಅರಣ್ಯದೊಳಗಿನ ಪಶು ಮೃಗಾದಿಗಳು ಪ್ರಾಣರಕ್ಷಣಕ್ಕಾಗಿ ದಿಕ್ಕುದಿಕ್ಕಿಗೆ ಓಡಹತ್ತಿದ್ದವು. ಎಲ್ಲ ಪ್ರಾಣಿಗಳಿಗೂ ಸರಿಯಾಗಿಯೇ ಸಂಕಟ ಒದಗಿದ್ದರೂ, ಅವುಗಳಲ್ಲಿಯ ತೋಳ, ಹುಲಿ, ಸಿಂಹ ಮೊದಲಾದ ಕ್ರೂರ ಶ್ವಾಪದಗಳು ಚಿಗರೆ ಮೊದಲಾದ ಬಡಪ್ರಾಣ

ಗಳನ್ನು ಸಂಹರಿಸತೊಡಗಿದವು. ಇದನ್ನೆಲ್ಲ ನೋಡುತ್ತ ಮಹಾರಾಜರು ಸುಮ್ಮನೆ ನಿಂತು ಕೊಂಡಿದ್ದರು. ಅಷ್ಟರಲ್ಲಿ ಒಂದು ಆಕಳ ಹಿಂಡು ಓಡುತ್ತ ಬಂದಿತು. ಅದನ್ನು ಹಲವು ತೋಳಗಳೂ, ಮೂರು ನಾಲ್ಕು ಹುಲಿಗಳೂ, ಒಂದೆರಡು ಸಿಂಹಗಳೂ ಬೆನ್ನಟ್ಟಿದ್ದವು. ಹೆಜ್ಜೆಹೆಜ್ಜೆಗೆ ಗೋಗಳ ಸಂಹಾರವಾಗತೊಡಗಿತು. ಮಹಾರಾಜರು ಅದನ್ನು ನೋಡಲಾರದೆ ತಮ್ಮ ಖಡ್ಗವನ್ನು ಹಿರಿದು ಕೆಲವು ತೋಳಗಳನ್ನೂ, ಹುಲಿಗಳನ್ನೂ ಕೊಂದಹಾಗಾಯಿತು. ಹೀಗೆ ಮಹಾರಾಜರು ಆ ಕ್ರೂರ ಪ್ರಾಣಿಗಳನ್ನು ಸಂಹರಿಸುತ್ತಿರಲು, ಅವರ ಕೈಯೊಳಗಿನ ಖಡ್ಗವು ಒಮ್ಮಿಂದೊಮ್ಮೆ ಎತ್ತೋ ಹೋಗಿಬಿಟ್ಟಿತು. ಮಹಾರಾಜರು ಖಡ್ಗವನ್ನು ಹುಡುಕಹತ್ತಿದರು, ಸಿಗಲೊಲ್ಲದು! ಹೀಗೆ ಶಸ್ತ್ರಹೀನರಾಗಿ ನಿಂತಿರುವ ಮಹಾರಾಜರನ್ನು ಒಂದು ಸಿಂಹವೂ, ಒಂದು ಹುಲಿಯೂ, ಒಂದೊಂದು ತೋಳು ಹಿಡಕೊಂಡು ದೂರ ಎಳಕೊಂಡು ಹೋಗಹತ್ತಿದವು. ಬಹುದೂರ ಹೋದಬಳಿಕ ಒಂದು ಗುಹೆಯಲ್ಲಿ ಒಂದು ಮುದುಕ ಸಿಂಹವು ಉಚ್ಚಾಸನದ ಮೇಲೆ ಕುಳಿತುಕೊಂಡಿತ್ತು. ಅದರ ಸುತ್ತುಮುತ್ತು ಮೂರು ನಾಲ್ಕು ಸಿಂಹಗಳೂ, ಎಷ್ಟೋ ಹುಲಿಗಳೂ, ಹಲವು ತೋಳಗಳೂ ಕುಳಿತುಕೊಂಡಿದ್ದವು. ಅಲ್ಲಿಗೆ ಮಹಾರಾಜರನ್ನು ಎಳಕೊಂಡು ಹೋಗಲು, ಮಹಾರಾಜರನ್ನು ನೋಡಿ ಮೂರು ನಾಲ್ಕುಗಳ ಹೊರತು ಉಳಿದವೆಲ್ಲ ಆನಂದದಿಂದ ಗರ್ಜಿಸಿದವು. ಉಚ್ಚಾಸನದಲ್ಲಿ ಕುಳಿತಿದ್ದ ಮುದಿ ಸಿಂಹನಿಗೂ ಆನಂದವಾಯಿತು; ಆದರೆ ಅದು ತನಗಾದ ಆನಂದವನ್ನು ವ್ಯಕ್ತಮಾಡಲಿಲ್ಲ. ಅದು ಮಹಾರಾಜರನ್ನು ಸೆರೆಯಲ್ಲಿಡಹೇಳಿತು. ಅದನ್ನು ಕೇಳಿ ಅಲ್ಲಿ ನೆರದಿದ್ದ ಪ್ರಾಣಿಗಳಿಗೆಲ್ಲ ಆಶ್ಚರ್ಯವಾಯಿತು; ಆದರೆ ಒಂದಕ್ಕೂ ಮಾತಾಡುವ ಧೈರ್ಯವಾಗಲಿಲ್ಲ. ಅಪ್ಪಣೆಯಂತೆ ಮಹಾರಾಜರನ್ನು ಒಂದು ಗುಹೆಯಲ್ಲಿ ಪ್ರತಿಬಂಧಿಸಿ ಇಟ್ಟರು. ಗುಹೆಯ ದ್ವಾರವನ್ನು ಹಲವು ಹುಲಿಗಳೂ, ತೋಳಗಳೂ ಕಾಯಹತ್ತಿದವು. ಅದನ್ನು ನೋಡಿ ಮಹಾರಾಜರಿಗೆ ಬಹಳ ಪಶ್ಚಾತ್ತಾಪವಾಯಿತು. ತಮ್ಮನ್ನು ಹಿಡಿದೆಳೆದು ತರುವಾಗ್ಗೇ ಜಗ್ಗಾಡಿ ತಾವು ತಿರುಗಿ ಹೋಗಿ ಬಿಟ್ಟಿದ್ದರೆ, ಇಂಥ ಅನರ್ಥವೇ ಒದಗುತ್ತಿದ್ದಿಲ್ಲವೆಂದು ಮಹಾರಾಜರು ಅಸಮಾಧಾನಪಟ್ಟರು. ಅವರು ಈ ಸ್ಥಿತಿಯಲ್ಲಿ ಭವಾನೀಮಾತೆಗೆ ಶರಣು ಹೋಗಲಿಚ್ಛಿಸಿ, ಆಕೆಯ ಚರಣಗಳ ಮೇಲೆ ಮಸ್ತಕವಿಟ್ಟಂತಾಯಿತು. ಆಗ ಅವರಿಗೆ ಸ್ವಪ್ನದಲ್ಲಿ ಸ್ವಪ್ನಬಿದ್ದಂತಾಗಿ ಭವಾನಿಯು ಅವರ ಮಸ್ತಕದ ಮೇಲೆ ವರದಹಸ್ತವನ್ನಿಟ್ಟು— "ವತ್ಸಾ, ಹೀಗೆ ಆಗಬೇಕೆಂದು ಸತ್ಯಸಂಕಲ್ಪವಿರುವದರಿಂದ ಅದು ಎಂದೂ ತಪ್ಪಲಾರದು. ನೀನು ಚಿಂತೆಮಾಡಬೇಡ ಸ್ವಪ್ನದ ಸಂಗತಿಯನ್ನೆಲ್ಲ ನೆನಪಿನಲ್ಲಿಟ್ಟು ವರ್ತಿಸು." ಎಂದು ಹೇಳಿದ ಹಾಗಾಯಿತು. ಮುಂದೆ ಮಹಾರಾಜರು ತೋಳ--ಹುಲಿಗಳ ಕಣ್ಣು ತಪ್ಪಿಸಿ ಸೆರೆಮನೆಯಿಂದ ಪಾರಾಗಿ ಪುನಃ ರಾಯಗಡಕ್ಕೆ ಹೋಗಿ ಅಂಬಾಭವಾನಿಯ ಚರಣಗಳ ಮೇಲೆ ಮಸ್ತಕವಿಡಲು, ಆ ಲೋಕಮಾತೆಯು ತನ್ನ ವರದ ಹಸ್ತವನ್ನು ಶಿವರಾಯನ ತಲೆಯಮೇಲೆ ಇಟ್ಟಹಾಗಾಯಿತು!!

ಇಷ್ಟು ವೃತ್ತಾಂತವಾಗುವದರೊಳಗೆ ಬಹಳ ಹೊತ್ತಾಯಿತು. ಹೊರಗೆ ಕುಳಿತಿದ್ದ ಸ್ವಾಮಿನಿಷ್ಠ ಬಾಳಾಜಿ ಆವಜಿಯು ಗಾಬರಿಯಾದನು. ಇಷ್ಟು ಹೊತ್ತು ಮಹಾರಾಜರಿಗೆ

ಸಮಾಧಿಯು ಎಂದೂ ಹತ್ತಿದ್ದಿಲ್ಲ; ಇಷ್ಟು ವಿಲಂಬವಾದದ್ದನ್ನು ನೋಡಿ, ದೇವಿಯು ಮಹಾರಾಜರಿಗೆ ಮಹತ್ವದ ಅನುಭವವನ್ನು ಕೊಟ್ಟಿರಬಹುದೆಂದು ಆ ಚಿಟನೀಸನು ತರ್ಕಿಸಿದನು. ಆತನು ಮೆಲ್ಲಗೆ ಬಾಗಿಲು ತೆರೆದು ಒಳಗೆ ಹೋಗಿ ಮಹಾರಾಜರನ್ನು ನೋಡಿ, ಅವರ ಶ್ವಾಸೋಚ್ಛ್ವಾಸವನ್ನು ಕಿವಿಗೊಟ್ಟು ಕೇಳಿದನು; ಆದರೆ ಮಹಾರಾಜರು ಸ್ತಬ್ಧವಾಗಿದ್ದರು. ಅಷ್ಟರಲ್ಲಿ ಜೀಜಾಬಾಯಿಯವರು ಮಗನ ಊಟದ ವ್ಯವಸ್ಥೆಯನ್ನು ಮಾಡಿಸಿ, ಬಹಳ ಹೊತ್ತಾದರೂ ಆತನು ಬರಲಿಲ್ಲೆಂದು ತಿಳಿದು ದೇವಿಯ ಮಂದಿರಕ್ಕೆ ಬಂದರು. ಶಿವಬಾನು ಇನ್ನೂ ಸಮಾಧಿಯಲ್ಲಿರುವದನ್ನು ನೋಡಿ ಅವರಿಗೂ ಆಶ್ಚರ್ಯವಾಯಿತು. ವಿಶೇಷ ಪ್ರಕಾರದ ದೃಷ್ಟಾಂತವಾಗುತ್ತಿರುವದರಿಂದಲೇ ಇಷ್ಟು ಹೊತ್ತು ಸಮಾಧಿಯು ಹತ್ತಿರುವದೆಂದು ಅವರೂ ತಿಳಿದುಕೊಂಡರು; ಆದರೆ ತಾಯಿಯ ಕರಳು, ಅವರ ಮನಸ್ಸಿಗೆ ಸಮಾಧಾನವಾಗ ಲೊಲ್ಲದು. ಅವರು ಶಿವಬಾನ ಹತ್ತರ ಹೋದರು. ಅವರ ಕಾಲಸಪ್ಪಳದಿಂದ ಮಹಾರಾಜರಿಗೆ ಎಚ್ಚರ ವಾಗಲಿಲ್ಲ. ಆಗ ಅವರು ಸ್ವಲ್ಪ ಗಾಬರಿಯಾಗಿ ಶಿವಬಾನ ಮಸ್ತಕದ ಮೇಲೆ ಕೈಯಿಟ್ಟು ಎಚ್ಚರಗೊಳಿಸಬೇಕೆಂದು ಯೋಚಿಸಿ, ಮಹಾರಾಜರ ಮಸ್ತಕದ ಮೇಲೆ ಕೈಯಿಟ್ಟರು. ಅದೇ ಕಾಲದಲ್ಲಿ ಸ್ವಪ್ನದಲ್ಲಿಯೂ ದೇವಿಯು ಮಹಾರಾಜರ ಮಸ್ತಕದಲ್ಲಿ ವರದಹಸ್ತವನ್ನು ಇಟ್ಟಳು. ಮಹಾರಾಜರು ತಾಯಿಯ ಶೀತ ಕರಸ್ಪರ್ಶದಿಂದ ಜಾಗರೂಕರಾಗಿ ಮೇಲಕ್ಕೆ ಮುಖವೆತ್ತಿ ಕಣ್ತೆರೆದು ನೋಡಲು, ಎದುರಿಗೆ ಶ್ರೀ ಭವಾನಿ ಮೂರ್ತಿಯು! ಹಿಂದೆ ಪೂಜ್ಯಜನನಿಯ ಮೂರ್ತಿಯು! ಅವರಿಬ್ಬರ ದರ್ಶನದಿಂದ ಮಹಾರಾಜರಿಗೆ ಬಹಳ ಸಮಾಧಾನವಾಯಿತು. ಅವರು ತಮ್ಮ ಜನನಿಯನ್ನು ಪ್ರತ್ಯಕ್ಷ ಅಂಬಾಬಾಯಿಯೆಂದು ಭಾವಿಸಿದ್ದರ ಸತ್ಯತೆಯ ಅನುಭವವು ಮತ್ತೆ ಈ ಸಾರೆಯೂ ಬಂದಂತಾಗಿ ಅವರು ಸಂತೋಷಪಟ್ಟರು. ಅವರು ತಮಗಾದ ಸ್ವಪ್ನದ ದೃಷ್ಟಾಂತವನ್ನೆಲ್ಲ ತಾಯಿಯ ಮುಂದೆ ಚಿಟನೀಸನ ಸಮಕ್ಷ ಹೇಳಿದರು.

ಈ ದೃಷ್ಟಾಂತದಿಂದ ದೇವಿಯಾದರೂ ಶ್ರೀ ಸಮರ್ಥರ ಭವಿಷ್ಯವಾಣಿಯನ್ನೇ ಅನುಸರಿಸಿದ ಹಾಗಾದ್ದರಿಂದ, ಹೀಗಾಗುವದು ಸತ್ಯಸಂಕಲ್ಪವಾಗಿರಲು, ಅದು ಸರ್ವಥಾ ತಪ್ಪಲಾರದೆಂದು, ಮಹಾರಾಜರಂತೆ ಜೀಜಾಬಾಯಿಯವರೂ, ಬಾಳಾಜಿ ಆವಜಿಯೂ ತಿಳಿದುಕೊಂಡರು. ಇದರಿಂದ ಮಹಾರಾಜರಿಗೆ ಅಸಮಾಧಾನವಾದಂತೆ ತೋರಿತು. ಆಗ ಜೀಜಾಬಾಯಿಯವರು ಮಗನಿಗೆ—"ಶಿವಬಾ, ಎಲ್ಲ ಸಂಗತಿಗಳು ನಮ್ಮ ಮನಸ್ಸಿನಲ್ಲಿದ್ದಂತೆಯೇ ಸಾಧಿಸಬೇಕೆಂದು ನೀನು ಯೋಚಿಸುವಂತೆ ತೋರುತ್ತದೆ; ಆದರೆ ಹಾಗೆ ಹ್ಯಾಗಾಗಬೇಕು ಹೇಳು? ಒಮ್ಮೆ ನಮ್ಮ ಇಚ್ಛೆಯಂತೆ ಕಾರ್ಯವು ಸಾಧಿಸಬಹುದು, ಒಮ್ಮೆ ಸಾಧಿಸಲಿಕ್ಕಿಲ್ಲ; ಆದರೆ ಕಡೆಯ ಪರಿಣಾಮವು ಮಾತ್ರ ನಮ್ಮ ಮನಸ್ಸಿನಲ್ಲಿದ್ದಂತೆ ಆಗುವದೇ ನಿಶ್ಚಯವು. ನಿನಗಾದ ದೃಷ್ಟಾಂತದಲ್ಲಿಯೇ ದೇವಿಯು ಈ ಮಾತನ್ನು ಸೂಚಿಸಿರುತ್ತಾಳೆ. ಮೊದಲಿಗೆ ನಿನಗೂ, ನಿನ್ನ ಪ್ರಜೆಗಳಿಗೂ, ಪರಿವಾರಕ್ಕೂ ಎಷ್ಟು ಕಷ್ಟವಾದರೂ ಕಡೆಗೆ ನಿನ್ನ ಸ್ವರಾಜ್ಯವು ನಿಷ್ಕಂಟಕವಾಗುವದೆಂದು ದೇವಿಯು ಸೂಚಿಸಿರುವದಿಲ್ಲವೇ? ಯಾವಾಗಲೂ ನಮ್ಮ ಮನಸ್ಸಿ ನಲ್ಲಿದ್ದಂತೆಯೇ ಆಗಬೇಕೆಂದು ಯಾರು ಇಚ್ಛಿಸುವದಿಲ್ಲ? ನೀನು ಇಚ್ಛಿಸುವಂತೆ ಜಯಸಿಂಗನೂ

ಇಚ್ಛಿಸುವನು, ಔರಂಗಜೇಬನೂ ಇಚ್ಛಿಸುವನು. ನಮ್ಮ ಇಚ್ಛೆಯನ್ನು ಪೂರ್ಣಮಾಡೆಂದು ನಾವು ನಮ್ಮ ಜಗದಂಬೆಯನ್ನು ಪ್ರಾರ್ಥಿಸುವಂತೆ, ಜಯಸಿಂಗನು ತನ್ನ ಏಕಲಿಂಗಜಿಯನ್ನೂ, ಔರಂಗಜೇಬನು ತನ್ನ ಅಲ್ಲಾನನ್ನೂ ಪ್ರಾರ್ಥಿಸುತ್ತಿರಬಹುದು. ಒಮ್ಮೆ ನಮಗೆ ಸಂತೋಷ ವಾಗುವದು, ಒಮ್ಮೆ ಅವರಿಗೆ ಸಂತೋಷವಾಗುವದು. ನಮಗೆ ಸಂತೋಷವಾದಾಗ ಅವರು ವ್ಯಸನಪಡುವರು, ಅವರಿಗೆ ಸಂತೋಷವಾದಾಗ ನಾವು ವ್ಯಸನಪಡುವೆವು. ನಮ್ಮ ಮನುಷ್ಯ ವ್ಯವಹಾರದ ಮಾತು ಹೀಗೆಯೇ ಸರಿ; ಆದರೆ ನಾವು ನ್ಯಾಯಪಥವನ್ನು ಮಾತ್ರ ಬಿಡಬಾರದು; ಅಂದರೆ ದುರ್ಯೋಗದಿಂದ ಒಂದು ಪಕ್ಷದಲ್ಲಿ ಕಾರ್ಯವು ಸಾಧಿಸದಿದ್ದರೂ ದೇವರಮುಂದೆ ನಾವು ಅಪರಾಧಿಗಳಾಗುವೆವು. ಅಪ್ಪಾ, ದೇವಿಯು ಕಡೆಗೆ ಹಿತವಾಗುವದೆಂದು ಹೇಳಿದ್ದನ್ನು ನೀನು ಮರೆಯಬೇಡ; ಅನ್ನಲು ಉದ್ವಿಗ್ನಚಿತ್ತರಾದ ಮಹಾರಾಜರು— ''ಕಡೆಗೆ ಅಂದರೆ ಯಾವಾಗ? ಸ್ವರಾಜ್ಯ ಮಂದಿರವು ಸಂಪೂರ್ಣವಾಗಿ ನೆಲಕ್ಕೆ ಬಿದ್ದ ಬಳಿಕೋ? ಹಾಗಾದಬಳಿಕ ಪುನಃ ಮಂದಿರವನ್ನು ಕಟ್ಟುವದು ಶಕ್ಯವೇ?'' ಎಂದು ಕೇಳಿದರು. ಆಗ ಜೀಜಾಬಾಯಿಯವರು ಸಮಾಧಾನದಿಂದ— ''ಶಿವಬಾ, ಇಂದು ವಿಲಕ್ಷಣವಾದ ನಿರಾಶೆಯು ನಿನ್ನನ್ನು ಆವರಿಸಿದಂತೆ ತೋರುತ್ತದೆ; ಇಂದು ಅಂಬಾಭವಾನಿಯ ಮೇಲಿನ ನಿನ್ನ ವಿಶ್ವಾಸವೂ ಸ್ವಲ್ಪ ಕಡಿಮೆ ಯಾದಂತೆ.....'' ಎಂದು ನುಡಿಯುತ್ತಿರಲು, ಮಹಾರಾಜರು ನಡುವೆ ಬಾಯಿಹಾಕಿ—''ಛೆ. ಛೆ. ಛೆ. ಆಯಿಸಾಹೇಬ, ಹೀಗೆ ತಾವು ಸ್ವಪ್ನದಲ್ಲಿ ಕೂಡ ಎಣಿಸಲಾಗದು. ಅಂಬಾಬಾಯಿಯ ಮೇಲಿನ, ಹಾಗು ಶ್ರೀಸಮರ್ಥರ ಮೇಲಿನ ನನ್ನ ವಿಶ್ವಾಸವು ಕಡಿಮೆಯಾಗಲಾರದು. ಅವರಿಬ್ಬರ ಮೇಲಿನ ಶ್ರದ್ಧೆಯೇ ಯಾವತ್ತು ಸ್ವರಾಜ್ಯದ ಮೂಲವಾಗಿರು.....'' ಹೀಗೆ ನುಡಿಯುತ್ತಿರಲು— ''ಅಂತೇ ಎಷ್ಟು ಸಂಕಟಗಳೊದಗಿದರೂ, ಎಷ್ಟು ಸೋತು ನಡೆಯ ಬೇಕಾದರೂ ಕಡೆಗೆ ನಿನಗೆ ವಿಜಯವೇ ಆಗುವದು'' ಎಂದು ಗಂಭೀರ ಧ್ವನಿಯಿಂದ ಉಚ್ಚರಿಸಿದ ವಾಕ್ಯವು ಎಲ್ಲರ ಕಿವಿಗೆ ಬಿದ್ದಿತು. ಆಗ ಅವರೆಲ್ಲರೂ ಚಕಿತರಾಗಿ ಹಿಂದಿರುಗಿ ನೋಡಲು, ಶ್ರೀ ಸಮರ್ಥರ ದಿವ್ಯಮೂರ್ತಿಯ ದರ್ಶನವು ಅವರಿಗಾಯಿತು!

ಹೀಗೆ ಸಂಕಟಸಮಯದಲ್ಲಿ ಶ್ರೀ ಗುರುಮೂರ್ತಿಯ ದರ್ಶನವು ಅಕಲ್ಪಿತವಾಗಿ ಆದದ್ದರಿಂದ ಆ ಮೂವರಿಗೂ ಪರಮಾನಂದವಾಯಿತು. ಅವರು ಒಬ್ಬೊಬ್ಬರೇ ಗುರುಚರಣಕ್ಕೆ ಸಾಷ್ಟಾಂಗವಾಗಿ ಎರಗಿದರು. ಸಮರ್ಥರು ಒಳ್ಳೆಯ ಸುಪ್ರಸನ್ನ ಮನಸ್ಸಿನಿಂದಲೂ, ನಗೆಮೊಗ ದಿಂದಲೂ ಅವರನ್ನು ಆಶೀರ್ವದಿಸಿದರು. ಅಲ್ಲಿ ಮಂಡಿಸಿದ್ದ ವ್ಯಾಸಪೀಠದಲ್ಲಿ ಶ್ರೀ ಗುರು ಮೂರ್ತಿಯು ಕುಳಿತುಕೊಳ್ಳಲು, ಎಲ್ಲರೂ ಪ್ರಸನ್ನವದನರಾಗಿ ಭಯ–ಭಕ್ತಿಯಿಂದ ಅವರ ಎದುರಿಗೆ ಕುಳಿತುಕೊಂಡರು. ಆನಂದದ ಭರದಲ್ಲಿ ಕೆಲಹೊತ್ತಿನವರೆಗೆ ಯಾರ ಮುಖ ದಿಂದಲೂ ಮಾತುಗಳು ಹೊರಡಲಿಲ್ಲ. ಮಹಾರಾಜರು ತಮ್ಮ ವಿಶಾಲವಾದ ನೇತ್ರಗಳಿಂದ ಗುರುಮೂರ್ತಿಯನ್ನು ನೋಡುತ್ತ ಕುಳಿತುಕೊಂಡಿದ್ದರು. ತಾವು ಮಹತ್ಸಂಕಟದಲ್ಲಿರುವಾಗ ಶ್ರೀ ಗುರುಮೂರ್ತಿಯು ತಮ್ಮ ಯೋಗಕ್ಷೇಮವ ವಿಚಾರಿಸಲು ಬಂದದ್ದೊಂದು ಸುಲಕ್ಷಣ ವೆಂದು ಅವರು ತಿಳಿದುಕೊಂಡರು. ಕೆಲಹೊತ್ತು ಸ್ವಸ್ಥ ಕುಳಿತುಕೊಂಡಬಳಿಕ ಸಮರ್ಥರು

ಒಮ್ಮೆಲೆ ಮಹಾರಾಜರನ್ನು ಕುರಿತು— ''ಶಿವಬಾ, ನೀನು ಇಷ್ಟು ಖಿನ್ನನಾಗಬೇಡ. ಅಪ್ಪಾ, ದೊಡ್ಡ ರಾಜಮಂದಿರವನ್ನು ಕಟ್ಟುವವನು ಯಾವಾಗದಾರೊಮ್ಮೆ ಸೋತು ನಡೆಯ ಬೇಕಾಗುವದು. ಯಾವಾಗಲೂ ಶಕ್ತಿಯಿಂದಲೇ ಕಾರ್ಯವು ,ಸಾಧಿಸುತ್ತದೆಂದು ತಿಳಿಯಬೇಡ; ಒಮ್ಮೊಮ್ಮೆ ಯುಕ್ತಿಯಿಂದಲೂ ಕಾರ್ಯವನ್ನು ಸಾಧಿಸಬೇಕಾಗುವದು. ಕಾರ್ಯಸಾಧಕನು ಒಮ್ಮೆ ಮುಂದಕ್ಕೆ ಸರಿಯಬೇಕಾಗುವದು, ಒಮ್ಮೆ ಹಿಂದಕ್ಕೆ ಸರಿಯಬೇಕಾಗುವದು. ಮುಖ್ಯವಾಗಿ ಆತನು ಕಾರ್ಯಸಾಧನದಲ್ಲಿ ಲಕ್ಷವಿಡಬೇಕು. ಜಯಸಿಂಗನು ಹೇಳಿದಂತೆ ನೀನು ನಡೆದುಕೊಂಡು ಒಡಂಬಡಿಕೆ ಮಾಡಿಕೊಳ್ಳಲು ಬಾಧಕವಿಲ್ಲ. ಈಗ ನಡೆದಿರುವ ಜನಸಂಹಾರವೂ, ಪ್ರಜಾತಾಪವೂ ಅನಿಷ್ಟವಾಗಿರುವದರಿಂದ, ಅದನ್ನು ನಿಲ್ಲಿಸಲಿಕ್ಕೆ ಜಯಸಿಂಗನ ಮಾತನ್ನು ನಡಿಸಲೇಬೇಕು. ನೀನು ಆರಂಭಿಸಿದ ಕಾರ್ಯದ ಗೌರವವನ್ನು ಜಯಸಿಂಗನು ತಿಳಿದುಕೊಂಡಿಲ್ಲ, ತಿಳಿದುಕೊಳ್ಳುವ ಇಚ್ಛೆಯೂ ಅವನಿಗಿಲ್ಲ; ಅಂದಬಳಿಕ ನಾವು ಮೇಲುಬಿದ್ದು ಆತನಿಗೆ ತಿಳಿಸಹೋಗುವದರಲ್ಲಿ ಅರ್ಥವೇನು? ಸೂರ್ಯನು ಎಂಥ ತೇಜೋರಾಶಿಯು! ಅಂಥವನಿಗೂ ಉದಯಾಸ್ತಗಳೂ, ಗ್ರಹಣಗಳೂ ಆಗಿ ತೇಜೋಭಂಗ ವಾಗುತ್ತಿರುವಾಗ,ನಮ್ಮಂಥ ಕ್ಷುದ್ರರ ಪಾಡೇನು? ಕಾರ್ಯಾ ರ್ಥಿಯು ಬಿಸಿಲು ಬಂದತ್ತ ಕೊಡೆ ಹಿಡಿಯಬೇಕಾಗುವದು. ಆತನು ಉದ್ದೇಶವನ್ನು ಮಾತ್ರ ಮರೆಯದೇ ಕಾರ್ಯಸಾಧನಾರ್ಥ ವಾಗಿ ಉದ್ಯೋಗಮಾಡುತ್ತಲಿದ್ದರಾಯಿತು. ಜಯಸಿಂಗನ ಮನಸ್ಸನ್ನು ಒಲಿಸುವ ಗೊಡವಿಗೆ ನೀನು ಸರ್ವಥಾ ಹೋಗಬೇಡ. ತನ್ನ ಮನಸ್ಸಿನಂತೆ ಕಾರ್ಯವಾಯಿತೆಂಬ ನಂಬಿಗೆಯಾದ ಹೊರತು ಆತನು ಯಾರ ಮಾತನ್ನೂ ಕೇಳನು. ನಿನಗೆ ಕೇಡಾಗಬೇಕೆಂದು ಆತನ ಮನಸ್ಸಿನಲ್ಲಿರುವದಿಲ್ಲ; ತಾನು ಬಂದ ಕಾರ್ಯವು ಮೊದಲು ಈಡೇರಬೇಕೆಂದು ಆತನು ಇಚ್ಛಿಸುತ್ತಿರುವನು. ಅಂದಬಳಿಕ ನೀನು ಸದ್ಯಕ್ಕೆ ಸೋತು ನಡೆಯಲೇಬೇಕು. ಭಗವಾನ ದಾಶರಥೀ ಶ್ರೀರಾಮನಿಗೂ ವನವಾಸವು ತಪ್ಪಲಿಲ್ಲವೆಂದ ಬಳಿಕ, ನಮ್ಮ ಪಾಡೇನು? ಬರುವದೆಲ್ಲ ನಮ್ಮ ಹಿತಕ್ಕಾಗಿಯೇ ಬರುವದೆಂದು ತಿಳಿದು, ಜಗದಂಬೆಯು ಸ್ವಪ್ನದಲ್ಲಿ ಸೂಚಿಸಿದ್ದನ್ನು ಲಕ್ಷದಲ್ಲಿಟ್ಟು ಒಡಂಬಡಿಕೆಯ ಉದ್ಯೋಗವನ್ನು ನಡಿಸು. ನಾನೂ ಇನ್ನು ತೀರ್ಥಾಟನೆಗೆ ಹೊರಡಬೇಕೆಂದಿರುವೆನು. ಕೆಲವು ದಿನ ನಿನಗೆ ನಮ್ಮ ದರ್ಶನವಾಗಲಾರದು. ನಮಗೆ ಒಮ್ಮಿಂದೊಮ್ಮೆಲೆ ತೀರ್ಥಾಟನೆಗೆ ಹೊರಡುವ ಪ್ರೇರಣೆಯಾಗಿದೆ. ಪ್ರೇರಣೆಯೆಂದರೆ ನಮಗಾದ ಆಜ್ಞೆಯೇ ಸರಿ. ಆಜ್ಞೆಯಾದ ಬಳಿಕ ಒಂದು ಕ್ಷಣದ ವಿಲಂಬವು ಆಗಲಾರದು. ನಾವೊಬ್ಬರೇ ತೀರ್ಥಯಾತ್ರೆಗೆ ಹೊರಡುವೆವು. ನಾವು ಯಾವಾಗ ಅದೃಶ್ಯವಾದೇವೆಂಬದರ ನಿಯಮವಿಲ್ಲ; ಆದರೆ ನಿನಗೆ ತಿಳಿಸದೇ ಮಾತ್ರ ಅದೃಶ್ಯವಾಗುವದಿಲ್ಲ.

ಇಂಥ ವಿಪತ್ಕಾಲದಲ್ಲಿ ಶ್ರೀಗುರುವಿನ ವಿಯೋಗವಾಗುವದನ್ನು ಕೇಳಿ ಮಹಾರಾಜರಿಗೆ ಪರಮ ವಿಷಾದವಾಯಿತು; ಮತ್ತು ಶ್ರೀ ಗುರುವು ಒಬ್ಬನೇ ತೀರ್ಥಯಾತ್ರೆಗೆ ಹೊರಡುವು ದನ್ನರಿತು ಅವರು ಶಂಕಿಸಿದರು. ಆಗ ಅವರ ವಿನಯದಿಂದ ಗುರುಗಳನ್ನು ಕುರಿತು— ''ಏನು? ತಾವು ಒಬ್ಬರೇ ತೀರ್ಥಾಟನೆಗೆ ಹೊರಡುವಿರಾ? ಛೇ, ಛೇ! ತಮ್ಮ ಸಂರಕ್ಷಣಾಕ್ಕಾಗಿ

ಸ್ವಲ್ಪವಾದರೂ ಶಿಬ್ಬಂದಿಯನ್ನು ಕೊಡದೆ ನಾನು ಕಳಿಸಲಾರೆನು; ಆದರೆ ಮಹಾರಾಜ, ಈಗಿನ ಕಠಿಣ ಕಾಲದಲ್ಲಿ ತಾವು ತೀರ್ಥಾಟನೆಗೆ ಹೋಗುವದರಿಂದ ನನ್ನ ಯಶೋದೇವತೆಯೇ ಹೊರಟು ಹೋದಂತಾಗುತ್ತದೆ. ತಮ್ಮ ದರ್ಶನವು ಮೇಲೆ ಮೇಲೆ ಆಗದಿದ್ದರೂ, ತಾವು ಸಮೀಪದಲ್ಲಿರುವಿರೆಂಬ ಧೈರ್ಯದಿಂದ ನಮ್ಮ ಕಾರ್ಯಗಳೆಲ್ಲ ಸಮಾಧಾನದಿಂದ ನಡೆಯುತ್ತಿರುವವು. ಅಂಥ ಪ್ರಸಂಗವು ಒದಗಿದರೆ ತಟ್ಟನೆ ಹೋಗಿ ದರ್ಶನಮಾಡಿಕೊಂಡು ಬಂದೇನೆಂಬ ಧೈರ್ಯವು ನನಗಿತ್ತು; ಆದರೆ ತಾವು ತೀರ್ಥಾಟನಕ್ಕೆ ಹೋಗುವದರಿಂದ ನನ್ನ ಆಧಾರವೇ ತಪ್ಪಿದ ಹಾಗಾಗುತ್ತದೆ.'' ಅನ್ನಲು, ಸಮರ್ಥರು— ''ಅಪ್ಪಾ, ನನ್ನ ಸಂರಕ್ಷಣದ ಆಲೋಚನೆಯನ್ನು ಯಾರು ಮಾಡುವರು? ದಾಶರಥಿ ಶ್ರೀರಾಮನಿಗೆ ಅದರ ಆಲೋಚನೆ ಯಿರುವದು. ಆತನ ಹೊರತು ಬೇರೆಯವರು ಆ ಆಲೋಚನೆ ಮಾಡಲಿಕ್ಕೆ ಸಮರ್ಥರಲ್ಲ. ಸುಮ್ಮನೇ ನೀನು ಆ ಹುಚ್ಚಿಗೆ ಯಾಕೆ ಹೋಗುತ್ತೀ? ನಾವು ಸ್ವಚ್ಛಂದಿಗಳು. ಬೇಕಾದಾಗ ಮನಸ್ಸಿಗೆ ಬಂದತ್ತ ಹೋಗುವವರು. ಮುಂದಿನ ಕ್ಷಣದಲ್ಲಿ ಏನು ಮಾಡಬೇಕೆಂಬದರ ವಿಚಾರವು ನಮಗಿರುವದಿಲ್ಲ. ಸಿಬ್ಬಂದಿ–ಶಿಪಾಯಿಗಳು ನಮಗೇತಕಪ್ಪಾ? ನಾವು ಇನ್ನು ಒಂದೆರಡು ವರ್ಷ ತೀರ್ಥಾಟನ ಮಾಡತಕ್ಕವರೇ. ಹೋದಲ್ಲಿ ಮಠವನ್ನು ಕಟ್ಟುವೆವು. ಅಲ್ಲಿ ಬೇಕಾದಷ್ಟು ದಿವಸ ಇರುವೆವು. ಅಲ್ಲಿಂದ ಬೇರೊಂದು ಕಡೆಗೆ ಹೊರಟುಹೋಗುವೆವು. ಮನಸ್ಸಿಗೆ ಬಂದರೆ ತಿರುಗಿ ಬರುವೆವು; ಇಲ್ಲದಿದ್ದರೆ ಬದರೀನಾರಾಯಣಕ್ಕೆ ಹೋಗಿ ಅಲ್ಲಿಂದ ಪ್ರಯಾಣಮಾಡಿದರೂ ಮಾಡಬಹುದು. ಅದು ಹೇಗೇ ಇರಲಿ, ತೀರ್ಥಾಟನೆಗೆ ಹೊರಡ ಬೇಕೆಂದು ರಘುನಾಥನ ಅಪ್ಪಣೆಯಾಗಿರುವದರಿಂದ, ನಾವು ಹೊರಡುವ ಮೊದಲು ನಿನ್ನನ್ನು ಕಂಡು, ನಿನಗೆ ನಾಲ್ಕು ಸಮಾಧಾನದ ಮಾತುಗಳನ್ನು ಹೇಳಬೇಕೆಂದು ಬಂದಿದ್ದೇವೆ. ನೀನು ಸರ್ವಥಾ ಚಿಂತೆಮಾಡಬೇಡ. ಈಗ ನೀನು ಸೋತು ನಡೆಯುವದರಿಂದ ಸ್ವಲ್ಪ ಹಾನಿಯಿದ್ದರೂ, ಮುಂದೆಯೆಲ್ಲ ನಿನ್ನ ಮನಸ್ಸಿನಂತೆಯೇ ಆಗುವದು. ಶಿವಬಾ, ತೀರ್ಥಾಟನೆ ಮಾಡುವ ಪ್ರಸಂಗವು ನಿನಗೆ ಬರಲಿಕ್ಕಿಲ್ಲವೆಂದಾದರೂ ಹ್ಯಾಗೆ ಹೇಳಬೇಕು? ಮುಂದೆ ಏನಾದೀತೆಂಬ ಚಿಂತೆಯಿಂದ ನೀನು ಸುಮ್ಮನೆ ಕೊರಗಬೇಡ. ದಾಶರಥಿ ರಾಮನ ಕೃಪೆಯು ನಿನ್ನಮೇಲೆ ಸಂಪೂರ್ಣವಾಗಿ ಇರುವದರಿಂದ, ಎಲ್ಲ ಕಾರ್ಯಗಳಲ್ಲಿ ನೀನು ಪೂರ್ಣ ಯಶಸ್ವಿ ಯಾಗುವೆ. ನಾಲ್ಕುದಿನ ಆತನಿಗೆ ವನವಾಸಭೋಗಿಸುವ ಪ್ರಸಂಗ ಒದಗಿದಂತೆ, ನಿನಗೆ ಈಗ ಒದಗಿದರೆ ತಪ್ಪೇನು? ನಿನ್ನಂಥ ವಿಭೂತಿಗೆ ಗೃಹವಾಸವೇನು? ವನವಾಸವೇನು? ಎರಡೂ ಅಷ್ಟೇ. ಇನ್ನು ಸಾಕು, ಹೆಚ್ಚು ವಿಚಾರ ಮಾಡುತ್ತ ಕಾಲಹರಣ ಮಾಡುವಲ್ಲಿ ಅರ್ಥವಿಲ್ಲ, ಇನ್ನು ನಾವು ಹೊರಡುವೆವು.''

ಈವರೆಗೆ ಜೀಜಾಬಾಯಿಯವರು ಸುಮ್ಮನೇ ಕುಳಿತಿದ್ದರು. ಸಮರ್ಥರ ಈ ನಿರ್ಧಾರದ ಮಾತುಗಳನ್ನು ಕೇಳಿ ಅವರು ಸಖೇಯಿಂದ— ''ಕೃಪಾವಂತಾ, ಸದ್ಗುರೋ, ವ್ಯರ್ಥ ಕಾಲಹರಣ ಮಾಡಬೇಕೆಂದು ಯಾರು ಹೇಳುವರು? ಆದರೆ ಇಷ್ಟುದಿವಸ ಪಟ್ಟ ಶ್ರಮವೆಲ್ಲ ವ್ಯರ್ಥವಾಗುವ ಲಕ್ಷಣ ತೋರಿದಾಗ ಯಾರಿಗೆ ವ್ಯಸನವಾಗಲಿಕ್ಕಿಲ್ಲ? ನಮ್ಮ ಕಾರ್ಯದಲ್ಲಿ ವಿಘ್ನಬರುವದನ್ನು

ಆ ರಘುವೀರನಾದರೂ ನೋಡಿ ಸುಮ್ಮನೇ ಯಾಕೆ ಇರುವನು? ಅಂಬಾಬಾಯಿಯು ದೃಷ್ಟಾಂತದಿಂದ ಸೂಚಿಸುವ ವಿಘ್ನಗಳನ್ನಾದರೂ ಆಕೆಯು ಯಾಕೆ ಒದಗಗೊಡುವಳು? ಎಂಬ ವಿಚಾರವು ಕ್ಷಣಮಾತ್ರ ಮನಸ್ಸಿನಲ್ಲಿ ಬಂದರೆ ಆಶ್ಚರ್ಯವೇನು? ಮಹಾರಾಜ, ಈಗ ಎರಡು ತಿಂಗಳಾಯಿತು; ನಮ್ಮ ಶಿವಬಾನು ಸಮಾಧಾನದಿಂದ ಊಟವನ್ನು ಸಹ ಮಾಡಿರುವದಿಲ್ಲ, ಅಂಥದರಲ್ಲಿ ಈಗ ಒಪ್ಪಂದದ ಪ್ರಸಂಗವು ಬಂದೊದಗಿರುತ್ತದೆ; ಅಂದಬಳಿಕ ಶಿವಬಾನ ಜೀವಕ್ಕೆ ಎಷ್ಟು ವ್ಯಥೆಯಾಗಬೇಡ? ಆದರೆ ತಾವೂ ಒಪ್ಪಂದ ಮಾಡಿಕೊಳ್ಳೆಂದೇ ಹೇಳುವಿರಿ; ಅಂಬಾಬಾಯಿಯೂ ಒಪ್ಪಂದ ಮಾಡಿಕೊಳ್ಳೆಂದೇ ಹೇಳುವಳು; ಅಂದಬಳಿಕ ಎರಡನೆಯ ಮಾರ್ಗವೇನಿರುವದು? ತಾವು ಹೇಳಿದಂತೆಯೇ ಮಾಡುವೆವು. ತಾವು ಹ್ಯಾಗೂ ತೀರ್ಥಾಟನಕ್ಕೆ ಹೊರಡಲು ನಿಶ್ಚಯಿಸಿರುವಿರಿ; ಅಂದಬಳಿಕ ಒಮ್ಮೆ ಇದರ ವ್ಯವಸ್ಥೆಯನ್ನಾದರೂ ಮಾಡಿ ಹೋಗಿರಿ'' ಎಂದು ಸ್ಪಷ್ಟವಾಗಿ ಹೇಳಲು, ಸಮರ್ಥರು ನಕ್ಕು— ''ತಾಯಿಯ ಕರಳು ಹೀಗೆ ಮರುಗತಕ್ಕದ್ದೇ ಸರಿ. ನಾವೂ ಮರುಗುವೆವು. ಜೀಜಾಬಾಯೀ, ಶಿವಬಾನು ಹ್ಯಾಗೆ ನಿನ್ನವನೋ ಹಾಗೆ ನನ್ನವನೂ ಇರುತ್ತಾನೆ. ಆತನು ಎಲ್ಲ ವಿಷಯಗಳಲ್ಲಿ ನಿಷ್ಣಾತನಿರುವನು. ಆತನಿಗೆ ಕಾಲಕಾಲಕ್ಕೆ ತಕ್ಕ ಪ್ರೇರಣೆಯನ್ನು ರಘುವೀರನು ಮಾಡೇಮಾಡುವನು. ಅದರ ವಿಷಯವಾಗಿ ನನಗೂ ನಿನಗೂ ಇಬ್ಬರಿಗೂ ಯೋಚನೆಬೇಡ. ರಘುನಾಥಪಂತರು ಒಳ್ಳೇ ಮುತ್ಸದ್ದಿಗಳು. ಅವರ ಮಾತಿನಲ್ಲಿ ಸ್ವಾರಸ್ಯ ಬಹಳ. ಅವರನ್ನು ಜಯಸಿಂಗನ ಕಡೆಗೆ ಕಳಿಸಿ ಒಡಂಬಡಿಕೆಯ ಕರಾರುಗಳನ್ನು ಕೇಳಿಕೊಂಡು, ಅದರಂತೆ ಶಿವಬಾನು ನಡೆಯಲಿ. ಜಯಸಿಂಗನು ನಮಗೆ ಅನುಕೂಲವಾಗಬಹುದಾಗಿದ್ದರೂ, ದಿಲೇರಖಾನನು ಅದಕ್ಕೆ ಹರಿಗೊಡಲಿಕ್ಕಿಲ್ಲೆಂಬದನ್ನು ಮರೆಯಲಾಗದು. ದಿಲೇರಖಾನನ ಮಾತನ್ನು ಮೀರಿಹೋಗಲಿಕ್ಕೆ ಜಯಸಿಂಗನಿಗೆ ಬರುವ ಹಾಗಿಲ್ಲ. ಸತ್ಯ ಸಂಕಲ್ಪವು ತಪ್ಪಲಾರದು. ಹ್ಯಾಗಿದ್ದರೂ ಕಡೆಯ ಪರಿಣಾಮವು ಹಿತಕರ ವಾಗುವದು. ನಾವು, ತೀರ್ಥಾಟನೆಗೆ ಹೋದರೇನು? ಎಲ್ಲಿ ಇದ್ದರೇನು? ನಮ್ಮ ಮನಸ್ಸೆಲ್ಲ ಶಿವಬಾನಲ್ಲಿ ಹಾಗು ಆತನು ಆರಂಭಿಸುವ ಕಾರ್ಯದಲ್ಲಿ! ಪುನಃ ಪುನಃ ನಾವು ನಂಬಿಗೆ ಯಿಂದ ಹೇಳುವೆವು; ಕಡೆಗೆ ಶಿವಬಾನ ಕಲ್ಯಾಣವಾಗುವದು. ಇದು ನಮ್ಮ ಪೂರ್ಣವಾದ ಆಶೀರ್ವಾದವೆಂದು ತಿಳಿಯತಕ್ಕದ್ದು'' ಎಂದು ನುಡಿದು, ಶಿವಬಾನ ಮಸ್ತಕದಮೇಲೆ ವರದಹಸ್ತವನ್ನಿಟ್ಟು, ಒಮ್ಮೆ ಆತನ ಕಡೆಗೂ, ಜೀಜಾಬಾಯಿಯವರ ಕಡೆಗೂ ನೋಡಿ ನಕ್ಕರು; ಮತ್ತು ನೋಡನೋಡುತ್ತ ಅವರು ಬಂದಂತೆ ಹೊರಟು ಹೋಗಿಬಿಟ್ಟರು!

# ಒಡಂಬಡಿಕೆ

ಹೀಗೆ ನಿಸ್ಪೃಹರಾದ ಸಮರ್ಥರು ಸ್ವಚ್ಛಂದದಿಂದ ಹೊರಟುಹೋಗಲು, ಆ ಮೂವರೂ ಗುರುಗಳ ಮಹಿಮೆಯನ್ನು ವರ್ಣಿಸುತ್ತ ಕೆಲಹೊತ್ತು ಕುಳಿತುಕೊಂಡಿದ್ದರು. ಬಳಿಕ, ಜಯಸಿಂಗನು ಹೇಳಿದಂತೆ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದೆಂದು ನಿಶ್ಚಯವಾಯಿತು. ಮಹಾರಾಜರು ಭೋಜನೋತ್ತರ ತಾಯಿಯ ಆಶೀರ್ವಾದ ಪಡೆದು ರಾಯಗಡಕ್ಕೆ ಹೊರಟು ಹೋದರು. ಹೀಗೆ ಒಡಂಬಡಿಕೆಯ ಮಾಡಿಕೊಳ್ಳುವ ಇಚ್ಛೆಯು ಇತ್ತ ಒಬ್ಬ ಮಹಾರಾಜರಿಗೇ ಉತ್ಪನ್ನವಾಗಿತ್ತೆಂತಲ್ಲ; ಅತ್ತ ಜಯಸಿಂಗನಿಗೂ, ದಿಲೇರಖಾನನಿಗೂ ಅಂತರಂಗದಲ್ಲಿ ಆ ಇಚ್ಛೆಯು ಉತ್ಪನ್ನವಾಗಿತ್ತು. ಮೊಗಲರ ಉಪದ್ರವದಿಂದ ಮಹಾರಾಷ್ಟ್ರರು ಹಣ್ಣಾಗಿದ್ದಂತೆ, ಮಹಾರಾಷ್ಟ್ರ ಉಪದ್ರವದಿಂದ ಮೊಗಲರೂ ಹಣ್ಣಾಗಿದ್ದರು; ಆದರೆ ಮೊಗಲರ ಸೈನ್ಯವು ಪ್ರಚಂಡವಾಗಿದ್ದದ್ದರಿಂದ ಅವರು ಹಣ್ಣಾದದ್ದು ಬೈಲಿಗೆ ಬಿದ್ದಿದ್ದಿಲ್ಲ. ತಮ್ಮ ಮಾತು ಬಹಳ ನಡೆದು ಶಿವಾಜಿಯ ಮಾತು ಸ್ವಲ್ಪ ನಡೆದು ಒಡಂಬಡಿಕೆಯು ಬೇಗನೆ ಆದಷ್ಟು ದಿಲೇರ ಖಾನನಿಗೆ ಬೇಕಾಗಿತ್ತು; ಆದರೆ ಆ ಒಡಂಬಡಿಕೆಯ ಕರಾರುಗಳೆಲ್ಲ ತನ್ನ ಹಿರಿಯತನದಿಂದ ಗೊತ್ತಾಗಬೇಕೆಂತಲೂ, ತನ್ನ ಮಗಳನ್ನು ಮರಾಟರು ತಂದೊಪ್ಪಿಸಿ ಕ್ಷಮೆ ಬೇಡಿಕೊಳ್ಳ ಬೇಕೆಂತಲೂ ಆತನು ಇಚ್ಛಿಸುತ್ತಿದ್ದನು. ಮರಾಟರು ತನ್ನ ಮಗಳನ್ನು ಶಹಾಜಾದಾ ಮುಅಝ್ಝಮನ ಕಡೆಗೆ ಕಳಿಸಿರಬಹುದೆಂದು ಮೊದಲು ಆತನ ಭಾವನೆಯಾಗಿತ್ತು; ಆದರೆ ಶೋಧಾಂತದಲ್ಲಿ ನೂರಎಲ್‌ಹುದೆಯು ಔರಂಗಾಬಾದದಲ್ಲಿ ಶಹಾಜಾದಾ ಮುಅಝ್ಝಮನ ಬಳಿಯಲ್ಲಿ ಇಲ್ಲವೆಂದು ಆತನಿಗೆ ಗೊತ್ತಾಯಿತು. ಅದರಿಂದಂತೂ ಆತನು ಮರಾಟರ ಮೇಲೆ ಹೆಚ್ಚು ರೊಚ್ಚಿಗೆದ್ದನು. ಮರಾಟರೇ ತನ್ನ ಮಗಳ ದುರ್ದಸೆ ಮಾಡಿದರೆಂದು ಆತನು ತಿಳಿದು ಕೊಂಡನು; ಅದರಲ್ಲಿ ಜಯಸಿಂಗನ ಬಳಿಗೆ ಮಹಾರಾಜರ ಕಡೆಯಿಂದ ರಘುನಾಥಪಂಡಿತನು ಬಂದು ಒಡಂಬಡಿಕೆಯ ಮಾತುಕಥೆಗಳು ಹೊರಗಿನಿಂದ ಹೊರಗೇ ನಡೆಯಹತ್ತಿದ್ದರಿಂದಂತೂ, ದಿಲೇರಖಾನನು ಜಯಸಿಂಗನ ಮೇಲೆಯೂ ಸಿಟ್ಟು ಬೆಂಕಿಯಾದನು. ಸ್ವಭಾವತಃ ದಿಲೇರಖಾನನು ಒಳ್ಳೇ ಮನಸ್ಸಿನವನಿದ್ದು, ಜಯಸಿಂಗನಮೇಲೆ ಆತನ ಸಂಪೂರ್ಣ ವಿಶ್ವಾಸವೂ ಇತ್ತು; ಆದರೆ ತನ್ನ ಮಗಳು ಇಲ್ಲದಂತಾದ ಸಂಬಂಧದಿಂದ ಜಯಸಿಂಗನು ಏನೂ ಪ್ರಯತ್ನ ಮಾಡದಿರುವದನ್ನು ನೋಡಿ ಅವನ ಅಂತರಂಗವು ಕಲುಷಿತವಾಗಿತ್ತು. ಜಯಸಿಂಗನು ಅಂತರಂಗದಿಂದ ಮರಾಟರಿಗೆ ಅನುಕೂಲವಾಗಿದ್ದ ಹೊರತು, ಅವರು ತನ್ನ ಮಗಳನ್ನು ಅಪಹರಿಸಿಕೊಂಡು ಹೋಗಲಾರರೆಂದು ಸಹ ಆತನು ಒಮ್ಮೆ ಭಾವಿಸಿದನು; ಆದರೆ ಜಯಸಿಂಗನ ಮೇಲೆ ಹೀಗೆ ಆರೋಪಮಾಡಲಿಕ್ಕೆ ದಿಲೇರಖಾನನ ಮನಸ್ಸು ಒಪ್ಪಲಿಲ್ಲ. ಇತ್ತ ಜಯಸಿಂಗನು ನೂರಎಲ್‌ಹುದೆಯ ಪ್ರಸಕ್ತಿಯಲ್ಲಿ ಮನಸ್ಸು ಹಾಕದಿರುವದಕ್ಕೆ ಬೇರೆ ಕಾರಣವಿತ್ತು. ಶಹಾಜಾದಾ ಮುಅಝ್ಝಮನ ಮನಸ್ಸು ನೂರಎಲ್‌ಹುದೆಯ ಮೇಲಿದ್ದದ್ದು ಜಯಸಿಂಗನಿಗೆ ದಿಲ್ಲಿಯಲ್ಲಿದ್ದಾಗೇ ಗೊತ್ತಿತ್ತು; ಅದ್ದರಿಂದ ಮುಅಝ್ಝಮನೇ ಏನಾದರೂ

ತಂತ್ರಮಾಡಿ ನೂರವಲ್‌ಹುದೆಯನ್ನು ಹೊರಡಿಸಿಕೊಂಡು ಹೋಗಿರಬಹುದೆಂದು ಆತನು ತಿಳಿದಿದ್ದನು; ಅಥವಾ ನೂರುವಲ್‌ಹುದೆಯು ತಾನಾಗಿಯೇ ಶಹಾಜಾದನ ಬಳಿಗೆ ಹೋಗಿದ್ದರೂ ಹೋಗಿರಬಹುದೆಂತಲೂ ಆತನು ಭಾವಿಸಿದ್ದನು. ಮರಾಟರು ನೂರವಲ್‌ಹುದೆಯನ್ನು ಅಪಹರಿಸಿದರೆಂಬ ಮಾತು ಆತನಿಗೆ ಸರ್ವಥಾ ಒಪ್ಪಿಗೆಯಾಗಿದ್ದಿಲ್ಲ. ದಿಲೇರಖಾನನ ಮನಸ್ಸಿನೊಳಗಾದರೂ ಮೊದಲಿನಿಂದ ಶಹಾಜಾದಾನು ತನ್ನ ಅಳಿಯನಾಗಬೇಕೆಂದು ಇದ್ದದ್ದರಿಂದ, ಈಗ ಒಬ್ಬನಿಲ್ಲ ಮತ್ತೊಬ್ಬ ಶಹಾಜಾದನು ಅಳಿಯನಾದಂತಾದ್ದರಿಂದ, ಖಾನನಿಗೆ ಕಡೆಗೆ ಸಮಾಧಾನವೇ ಆಗುವದೆಂದು ತಿಳಿದು ಜಯಸಿಂಗನು ಈ ಮಾತಿನ ಕಡೆಗೆ ದುರ್ಲಕ್ಷ ಮಾಡಿದ್ದನು. ಏನೇ ಇರಲಿ, ಈಗಂತು ದಿಲೇರಖಾನನ ಮನಸ್ಸು ಜಯಸಿಂಗನ ಸಂಬಂಧದಿಂದಲೂ ಮರಾಟರ ಸಂಬಂಧದಿಂದಲೂ ಕಲುಷಿತವಾಗಿ, ಆಯತ ಹೊತ್ತಿನಲ್ಲಿ ಒಡಂಬಡಿಕೆಗೆ ವಿಘ್ನಮಾಡಬೇಕೆಂದು ಖಾನನು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡನು.

ಇತ್ತ ಮಹಾರಾಜರು ಜಯಸಿಂಗನಿಗೆ ಶರಣು ಹೋಗುವದನ್ನು ಬಹುಕಷ್ಟದಿಂದ ನಿಶ್ಚಯಿಸಿ, ಒಡಂಬಡಿಕೆಯ ಕರಾರುಗಳನ್ನು ನಿಶ್ಚಿತವಾಗಿ ತಿಳಕೊಂಡು ಬರುವದಕ್ಕಾಗಿ ರಘುನಾಥಪಂಡಿತನನ್ನು ಮತ್ತೆ ಮಿರ್ಝಾರಾಜನ ಬಳಿಗೆ ಕಳಿಸಿದರು. ಜಯಸಿಂಗನು ಪಂಡಿತರನ್ನು ಆದರದಿಂದ ಬರಮಾಡಿಕೊಂಡು ಸತ್ಕರಿಸಿದನು. ಶಿವರಾಯನು ಶರಣು ಬರಲು ನಿಶ್ಚಯಿಸಿದ್ದನ್ನು ಕೇಳಿ ಜಯಸಿಂಗನಿಗೆ ಬಹಳ ಸಂತೋಷವಾಯಿತು. ರಘುನಾಥ ಪಂಡಿತನು ಜಯಸಿಂಗನಿಗೆ ಇನ್ನೊಮ್ಮೆ ನಾಲ್ಕು ಮಾತು ಹೇಳಿ ನೋಡಬೇಕೆಂದು ನಿಶ್ಚಯಿಸಿ, ಆತನನ್ನು ಕುರಿತು—''ರಾಜೇಸಾಹೇಬ, ಮಹಾರಾಜರು ತಮ್ಮ ಮಾತು ಮೀರುವಹಾಗಿಲ್ಲ; ಆದರೆ ತಾವು ವೇದಧರ್ಮಿಗಳೂ, ಗೋಬ್ರಾಹ್ಮಣ ಪ್ರತಿಪಾಲಕರೂ ಆಗಿರುವದರಿಂದ, ಎರಡು ಮಾತು ಆಡಬೇಕೆಂದು ನಾನು ಇಚ್ಛಿಸುತ್ತೇನೆ, ಕ್ಷಮಿಸಬೇಕು. ತಾವು ದ್ವಿಜರು, ವೇದ ವೇದಾಂಗ ಸ್ಮೃತಿ–ಪುರಾಣಧರ್ಮದ ಸೂರ್ಯವಂಶದ ಕ್ಷತ್ರಿಯರು; ಹೀಗಿದ್ದು ಗುರುತಲ್ಪ ಗಾಮಿಯಾದ ಚಂದ್ರದ ಉಪಾಸಕರೆನಿಸುವ ಯವನರ ನಿಶಾನೆಯನ್ನು ಕೈಯಲ್ಲಿ ಹಿಡಕೊಂಡು ನೀವು ಎಲ್ಲ ಕಡೆಯಲ್ಲಿ ಸ್ವಜನ ಸಂಹಾರವನ್ನು ನಡೆಸುವದು ಉಚಿತವಾಗಬಹುದೇ? ಇದರಿಂದ ಅಧರ್ಮವು ಹೆಚ್ಚಬಹುದೋ ಧರ್ಮವು ಹೆಚ್ಚಬಹುದೋ? ಅಧರ್ಮವೃದ್ಧಿಯಾಗ ಬಾರದೆಂತಲೂ, ಕುರಾಣದ ಸ್ಥಳವನ್ನು ಪುರಾಣಗಳು ವ್ಯಾಪಿಸಿ ಗೋವದವು ನಿಲ್ಲುವ ಹಾಗೆ ಮಾಡಬೇಕೆಂತಲೂ ಭಗವೀ ಪತಾಕೆಯನ್ನು (ಕೆಂಪುಶಾಟಿಯ ನಿಶಾನೆಯನ್ನು) ಕೈಯಲ್ಲಿ ಹಿಡಕೊಂಡು ಬಹು ಕಷ್ಟದಿಂದ ವೇದಧರ್ಮವನ್ನು ಹೆಚ್ಚಿಸುವವರಿಗೆ ಮಹಾ ವಿಘ್ನವನ್ನುಂಟು ಮಾಡುವದು ಹ್ಯಾಗೆ ಉಚಿತವಾದೀತು? ಮಹಾರಾಜ, ದಾಸನ ಸ್ಪಷ್ಟ ಮಾತುಗಳಿಗಾಗಿ ಸಿಟ್ಟಾಗ ಬಾರದೆಂದು ಕೈಜೋಡಿಸಿ ಬೇಡಿಕೊಳ್ಳುವೆನು'', ಎಂದು ನುಡಿಯಲು, ಜಯಸಿಂಗನು ನಕ್ಕು ಪಂಡಿತರ ಕಡೆಗೆ ನೋಡಿ— ''ಇಂಥ ಮಾತುಗಳಿಂದ ಕಾರ್ಯವಾಗಲಾರದು. ಯಾವ ದಿವಸ ಅವಿಂಧರಿಗೆ ಕುರ್ನಿಸಾತಮಾಡಿ ಅವರ ಮನಸಬದಾರಿಯನ್ನು ಸ್ವೀಕರಿಸಿದೆವೋ, ಅದೇ ದಿವಸ ಆ ಮಾತಿನ ವಿಚಾರವನ್ನೆಲ್ಲ ಮಾಡಿರುವೆವು. ಅಂದಿನಿಂದ ಇಪ್ಪು ವರ್ಷಗಳಾಗಿ ಹೋದವು.

ಅವಿಂಧರ ಅನ್ನದಿಂದ ಈ ಪಿಂಡವು ಬೆಳೆಯಿತು. ನಾವು ಬಾದಶಹನ ಮಾತೃ-ಪಿತೃ-ಭ್ರಾತೃಘಾತದ ಪಾತಕದ ಪಾಲುಗಾರರಾಗಿ ಹೋದೆವು. ಇನ್ನೇನು ಉಳಿದಿರುವದು? ಆದರೆ ಇಂಥ ಮಾತುಗಳಿಂದ ನನ್ನ ಮನಸ್ಸು ತಿರುಗೀತೆಂದು ಆಶಿಸದೆ, ಬೇರೆ ಏನಾದರೂ ಹೇಳುವ ಹಾಗಿದ್ದರೆ ಹೇಳಿರಿ,'' ಎಂದು ಸ್ಪಷ್ಟವಾಗಿ ನುಡಿದನು. ಒಂದು ಕಡತ ಎರಡು ತುಂಡುಗಳಂತೆ ಇರುವ ಈ ಮಾತುಗಳನ್ನು ಕೇಳಿ ರಘುನಾಥಪಂತನು ಬೆರಗಾದನು. ಆತನು ಮತ್ತೆ ಜಯಸಿಂಗನನ್ನು ಕುರಿತು— ''ಮಹಾರಾಜ, ಹೀಗೆ ತಾವು ನುಡಿದ ಬಳಿಕ ನಾನು ತಿರುಗಿ ಮಾತಾಡುವದೇನು? ತಮ್ಮ ಮನಸ್ಸಿನಲ್ಲಿ ಹೀಗಿದ್ದ ಬಳಿಕ ರಾಯನಾದರೂ ಏನು ಮಾಡ ಬೇಕೆಂಬದನ್ನು ಹೇಳಬೇಕು. ವೇದ ಧರ್ಮದ ರಾಜನು ವೇದಧರ್ಮದ ರಾಜನನ್ನು ಸೆರೆಹಿಡಿದೊಯ್ದು ಅವಿಂಧರಿಗೆ ಕುರ್ನಿಸಾತ ಮಾಡಹಚ್ಚುವದು ವಿಲಕ್ಷಣವಾಗಿ ತೋರುತ್ತದೆ. ಮಹಾರಾಜರು ತಮ್ಮ ಧರ್ಮಬಾಂಧವರಾದದ್ದರಿಂದ ಈ ಮಾತನ್ನು ಆಡದೆ ನನಗೆ ಸಮಾಧಾನವಾಗದು, ಅನ್ನಲು, ಜಯಸಿಂಗನು— ''ರಾಯನು ಮಾಡುವದೇ ನೆಂದು ಕೇಳುವಿರೋ? ಆತನು ತನ್ನ ಯಾವತ್ತು ರಾಜ್ಯವನ್ನು ನಮಗೆ ಒಪ್ಪಿಸಿ ಕೈಕಟ್ಟಿಕೊಂಡು ನಮಗೆ ಶರಣು ಬರಬೇಕು. ಇದಕ್ಕೆ ಒಪ್ಪಿಗೆ ಇದ್ದರೆ ಮುಂದೆ ಮಾತು'' ಎಂದು ಹೇಳಿದನು. ಅದಕ್ಕೆ ಪಂಡಿತನು— ''ರಾಯರು ಶರಣು ಬರಲು ಒಪ್ಪಿರುವರು; ಪ್ರಜಾಸಂಹಾರವನ್ನು ಅವರು ನೋಡಲಾರರು; ಆದರೆ ಒಡಬಡಿಕೆಯ ಕಲಮುಗಳನ್ನು ತಿಳಿಸಿದರೆ, ನನಗೆ ಕೇಳಿಕೊಂಡು ಬರಲಿಕ್ಕೆ ನೆಟ್ಟಗಾಗುವದು,'' ಎಂದು ಪಂಡಿತನು ಮತ್ತೆ ಕೇಳಿದನು. ಅದಕ್ಕೆ ಜಯಸಿಂಗನು — ''ಪಂಡಿತ, ಒಡಂಬಡಿಕೆಯ ಹಲವು ಕಲಮುಗಳನ್ನು ಹೇಳಿ ರಾಯರನ್ನು ಛಲಿಸುವ ಇಚ್ಛೆಯು ನಮಗಿಲ್ಲ, ಕಲಮುಗಳು ಸ್ವಲ್ಪ ಇರುವವು. ಅವು ಯಾವವೆಂದರೆ—

1. ಬಾದಶಹನ ರಾಜ್ಯದೊಳಗಿನ ಯಾವತ್ತು ದುರ್ಗಗಳನ್ನೂ, ಅವುಗಳ ಸುತ್ತಮುತ್ತಲಿನ ಪ್ರದೇಶಗಳನ್ನೂ ಕೂಡಲೆ ರಾಯನು ಬಿಟ್ಟುಕೊಡಬೇಕು. ಇಂಥ ದುರ್ಗಗಳು ಇಪ್ಪತ್ತೇಳು. ಅವುಗಳ ತಪಸೀಲು ಬಿ. ಕಾಗದದಲ್ಲಿರುವದು.

2. ಸುಮಾರು ಹನ್ನೆರಡು ದುರ್ಗಗಳನ್ನು, ಬಾದಶಹನಿಂದ ದೊರೆತ ಜಹಗೀರೆಂದು ತಿಳಿದು ರಾಯನು ಉಪಭೋಗಿಸಬೇಕು; ಆದರೆ ಕಾಗದಪತ್ರಗಳಲ್ಲಿ ಬಾದಶಹನ ಮುದ್ರೆಯನ್ನು ಉಪಯೋಗಿಸಬೇಕು. ಈ ಜಹಗೀರು ಹತ್ತು ಲಕ್ಷದ್ದಿರುವದು.

3. ಮಹಾರಾಜರ ಹೆಸರಿನಿಂದ ಮನಸಬದಾರಿಯು ದೊರೆಯಬಹುದು; ಅದು ಐದುಸಾವಿರದ್ದಿರುವದು.

4. ವಿಜಾಪುರದ ಸೀಮೆಯಲ್ಲಿ ಈವರೆಗೆ ಚೌಥಾಯಿ-ಸರದೇಶಮುಖಿಯನ್ನು ಎತ್ತಿದಂತೆ ಇನ್ನು ಮುಂದೆಯಾದರೂ ಎತ್ತಬೇಕು. ಅದರ ಸಂಬಂಧದಿಂದ ಒಂದು ಕೋಟಿ ನಲ್ವತ್ತು ಲಕ್ಷದ ನಜರಾಣೆಯನ್ನು ಹಪ್ತೆ ಹಪ್ತೆಯಿಂದ ಬಾದಶಹನಿಗೆ ಕೊಡಬೇಕು.

ಈ ಕಲಮುಗಳನ್ನು ಓದಿ ಪಂಡಿತನು ಜಯಸಿಂಗನ ಒಲವನ್ನರಿತು ಸಮಾಧಾನವಟ್ಟನು. ಮಹಾರಾಜರನ್ನು ಪೂರ್ಣ ನಾಶಗೊಳಿಸಿ, ಬಾದಶಹನ ಮುಂದೆ ತನ್ನ ದೊಡ್ಡಸ್ತಿಕವನ್ನು

ತೋರಿಸುವ ಇಚ್ಛೆಯು ಜಯಸಿಂಗನಿಗಿರುವದಿಲ್ಲೆಂದು ಆತನ ನಂಬಿಕೆಯಾಯಿತು. ಏನಾದರೂ ಭೂತದಯವು ಇರುವದೆಂದು ಪಂಡಿತನು ತಿಳಿದನು. ಆತನು ಮಿರ್ಝಾ ರಾಜನಿಗೆ— ''ಹನ್ನೆರಡು ದುರ್ಗಗಳನ್ನಿಟ್ಟು ಉಳಿದವನ್ನು ಬಾದಶಹನಿಗೆ ಒಪ್ಪಿಸುವಲ್ಲಿ ಮಹತ್ವವೇನು? ಬಾದಶಹರ ತಾಬೇದಾರಿಯನ್ನು ಒಪ್ಪಿಕೊಂಡಬಳಿಕ ಎಲ್ಲ ದೇಶವು ಬಾದಶಹರದೇ ಆಗುವದು. ದಿಲೇರಖಾನರೇ ಮೊದಲಾದವರು ಬಾದಶಹನ ಸೇವೆ ಮಾಡಿ ಕೊಂಡು ಇದ್ದಂತೆ, ಮಹಾರಾಜರೂ ಇರುವರು. ಇರಲಿ, ಈ ಎಲ್ಲ ಸಂಗತಿಯನ್ನು ಮಹಾರಾಜರಿಗೆ ತಿಳಿಸುವೆನು. ಉತ್ತರ ಬಂದಂತೆ ಅರಿಕೆ ಮಾಡಿಕೊಳ್ಳುವೆನು'' ಎಂದು ಹೇಳಿ, ಪಂಡಿತನು ತನ್ನ ಡೇರೆಗೆ ಹೋಗಿ ನಡೆದ ಎಲ್ಲ ಸಂಗತಿಯನ್ನು ಅಕ್ಷರಶಃ ಮಹಾರಾಜರಿಗೆ ಬರೆದು ತಿಳಿಸಿದನು.

ಮಹಾರಾಜರು ರಘುನಾಥಪಂಡಿತನ ಪತ್ರವನ್ನು ಓದಿದರು. ಹೇಳಿದ್ದಕ್ಕೆಲ್ಲ ತಾವು ಒಡಂಬಟ್ಟರೂ ಜಯಸಿಂಗನು ಮತ್ತೆ ಮತ್ತೆ ಬಿಗಿದು ಹಿಡಿಯುವುದನ್ನು ನೋಡಿ ಅವರಿಗೆ ಬಹಳ ಅಸಮಾಧಾನವಾಯಿತು. ಒಡಬಂಡಿಕೆ ಮಾಡಿಕೊಂಡ ಹೊರತು ನಮಗೆ ಗತಿ ಇಲ್ಲೆಂದು ಜಯಸಿಂಗನು ತಿಳಿದುಕೊಂಡದ್ದರಿಂದ, ಆತನು ಹೀಗೆ ಬಿಗಿಹಿಡಿಯುತ್ತಿರುವದರಿಂದ, ನಾವೂ ಸ್ವಲ್ಪ ಬಿಗಿಹಿಡಿಯಬೇಕೆಂದು ಅವರು ಯೋಚಿಸಿದರು. ತಾವು ವಿಜಾಪುರದ ಬಾದಶಹನೊಡನೆ ಒಡಂಬಡಿಕೆ ಮಾಡಿಕೊಳ್ಳುವ ಯತ್ನ ನಡಿಸಿದರೆ, ಜಯಸಿಂಗನು ಹಾದಿಗೆ ಬರಬಹುದೆಂದು ಯೋಚಿಸಿ, ಅದರಂತೆ ಉದ್ಯೋಗವನ್ನು ನಡಿಸಿದರು. ತಾವು ಹೀಗೆ ಉದ್ಯೋಗ ನಡಿಸುವದು ಜಯಸಿಂಗನಿಗೆ ಗೊತ್ತಾಗಬೇಕೆಂದು ಮಹಾರಾಜರ ಮನಸ್ಸಿನಲ್ಲಿ ಇತ್ತು; ಅದರಂತೆ ಗುಪ್ತಚಾರರ ಮುಖಾಂತರವಾಗಿ ಜಯಸಿಂಗನಿಗೆ ಅದು ಗೊತ್ತಾಗಲು, ಆತನ ಕಣ್ಣುಗಳು ತೆರೆದವು. ಆತನು ಮನಸ್ಸಿನಲ್ಲಿ— ''ಶಿವಾಜಿಯು ನಿಜವಾಗಿಯೇ ವಿಜಾಪುರದವರೊಡನೆ ಸಂಧಾನ ನಡಿಸಿದ್ದರೆ, ನಾವು ಬಂದ ಕೆಲಸಕ್ಕೆ ತೊಂದರೆಯಾಗ ಬಹುದು. ಶಿವಾಜಿಯು ನಮಗೆ ನಿಜವಾಗಿಯೇ ಶಹಕೊಡಬೇಕೆಂದು ಮಾಡಿರಬಹುದು. ಈ ಪ್ರಸಂಗದಲ್ಲಿ ನಾವು ಶಹಕ್ಕೆ ಕಾಡ ಶಹವನ್ನು ಕೊಡಲೇಬೇಕು'' ಎಂದು ಯೋಚಿಸಿ ರಘುನಾಥ ಪಂತನನ್ನು ಕರಿಸಿ ಅವನನ್ನು ಕುರಿತು ''ಪಂತ ನೀವು ಇತ್ತ ನಮ್ಮೊಡನೆ ಒಡಂಬಡಿಕೆಯ ಮಾತುಗಳನ್ನಾಡುವಿರಿ ಅದು ಮುಗಿಯುವದರೊಳಗೆ ಅತ್ತ ವಿಜಾಪುರದವ ರೊಡನೆ ಸಂಧಾನ ನಡಿಸುವಿರಿ; ಇದೆಲ್ಲಿಯ ರೀತಿಯು? ಇದರಿಂದ ಸರ್ವಥಾ ಹಿತವಾಗಲಾರದು. ವಿಜಾಪುರದವರೊಡನೆ ಒಡಂಬಡಿಕೆ ಮಾಡಿಕೊಳ್ಳುವವರು ನೀವು ಒಬ್ಬರೆಯೋ? ನಾವು ಅವರೊಡನೆ ಒಡಂಬಡಿಕೆ ಮಾಡಿಕೊಳ್ಳಲಾರೆವೋ? ವಿಜಾಪುರದವರು ಆಲಮಗೀರ ಬಾದಶಹನೊಡನೆ ಒಡಂಬಡಿಕೆ ಮಾಡಿಕೊಳ್ಳುವದನ್ನು ಬಿಟ್ಟು ನಿಮ್ಮೊಡನೆ ಒಡಂಬಡಿಕೆ ಮಾಡಿಕೊಳ್ಳಬಹುದೋ? ನಾವಿಬ್ಬರು ಒಂದಾದರೆ ನಿಮಗೆ ಒಂದು ಅಂಗೈಯ ಷ್ಟಾದರೂ ಭೂಮಿಯು ಉಳಿಯಬಹುದೋ? ಆದ್ದರಿಂದ ಏನು ಮಾಡತಕ್ಕದ್ದನ್ನು ನೀವು ಪೂರ್ಣ ವಿಚಾರದಿಂದ ಮಾಡಿರಿ. ನಾನು ಹಿಂದುವು, ನೀವೂ ಹಿಂದುಗಳು; ನಿಮ್ಮ ನಾಶವಾಗ

ಬಾರದು, ನನ್ನ ಅಪ್ರತಿಷ್ಠೆಯೂ ಆಗಬಾರದು; ಇದನ್ನರಿತೇ ನಾನು ನಿಮ್ಮೊಡನೆ ಒಡಂಬಡಿಕೆ ಮಾಡಿಕೊಳ್ಳಲಿಕ್ಕೆ ಒಪ್ಪಿಕೊಂಡಿರುವೆನು. ಈವೊತ್ತಿನ ಮಿತಿಗೆ ನನ್ನ ಕರಾರುಗಳು ನಿಮಗೆ ವಿಲಕ್ಷಣವಾಗಿ ತೋರುತ್ತಿರಬಹುದು; ಆದರೆ ಅವು ಹಾಗೆ ಇರುವದಿಲ್ಲ. ನಿಮಗೆ ಐದುಸಾವಿರದ ಮನಸಬದಾರಿಯನ್ನು ನಾನು ಕೊಡಿಸಿದರೆಯೇ ಹೌದೆನ್ನಿರಿ; ಆದರೆ ಶಿವಾಜಿಯು ನಮಗೆ ತೀರದ ಅಂಕಿತನಾಗಿರುವನೆಂತಲೂ, ಆತನು ನಮ್ಮ ನೌಕರಿಯನ್ನು ಒಪ್ಪಿಕೊಂಡಿರುವ ನೆಂತಲೂ ಬಾದಶಹನಿಗೆ ಬರೆದು ತಿಳಿಸುವಂತೆ ಇಲ್ಲಿ ವ್ಯವಸ್ಥೆಯಾಗಬೇಕು. ಈ ಎಲ್ಲ ಮಾತಿನ ವಿಚಾರವನ್ನು ಮಾಡಿ ನನಗೆ ಬೇಗನೇ ಏನೆಂಬುದನ್ನು ತಿಳಿಸಿರಿ. ಇನ್ನು ಒಂದು ಕ್ಷಣವಾದರೂ ನಾವು ವಿಲಂಬಮಾಡಲಾರೆವು. ವಿಜಾಪುರದವರನ್ನೂ, ನಿಮ್ಮನ್ನೂ ಕೂಡಿಯೇ ಬಕ್ಕಬರಲು ಹಾಕುವದಕ್ಕಾಗಿ ನಾವು ಬಂದಿರುವೆವು. ನಿಮ್ಮೊಡನೆ ಸಖ್ಯ ಬೆಳಿಸಿ ವಿಜಾಪುರ ದವರನ್ನು ಮುರಿಯಬೇಕು, ಇಲ್ಲವೆ ವಿಜಾಪುರದವರೊಡನೆ ಸಖ್ಯ ಬೆಳಿಸಿ ನಿಮ್ಮನ್ನು ಮುರಿಯಬೇಕು. ನಮಗೆ ಎರಡೂ ಶಕ್ಯವಾಗಿರುವವು. ನಿಮಗೂ, ಅವರಿಗೂ ಸಖ್ಯವು ಎಲ್ಲಿಯವರೆಗೆ? ನಾವು ಅವರೊಡನೆ ಸಖ್ಯಬೆಳೆಸುವ ಮಾತು ತೆಗೆಯುವವರೆಗೆ. ನಾವು ಒಡಂಬಡಿಕೆಯ ಮಾತು ತೆಗೆದುಕೂಡಲೆ ವಿಜಾಪುರದವರು ನಮಗೆ ವಶರಾದರೆಂದು ತಿಳಿಯಿರಿ; ಆದ್ದರಿಂದ ಈಗ ನೀವು ಪೂರ್ಣ ವಿಚಾರಮಾಡಿರಿ. ಇಪ್ಪತ್ತನಾಲ್ಕು ತಾಸುಗಳಲ್ಲಿ ಯಾವದೊಂದರ ನಿರ್ಣಯವಾಗಲೇಬೇಕು. ಒಡಂಬಡಿಕೆಯ ಕರಾರುಗಳನ್ನಂತೂ ನಾನು ಮೊದಲು ತಿಳಿಸಿಯೇ ಇರುವೆನು.

ಈ ಮೇರೆಗೆ ಜಯಸಿಂಗನು ಕಠೋರತನದಿಂದ ಆಡಿದ ಮಾತುಗಳನ್ನೆಲ್ಲ ರಘುನಾಥ ಪಂಡಿತನು ಮಹಾರಾಜರಿಗೆ ತಿಳಿಸಿ, ಜಯಸಿಂಗನು ಒಡಂಬಡಿಕೆಗೆ ಅತ್ಯಂತ ಆತುರನಾಗಿರು ವನೆಂದು ಬರೆದನು. ಮಹಾರಾಜರಿಗೂ ಅಷ್ಟೇ ಬೇಕಾಗುತ್ತಿತ್ತು, ಒಮ್ಮೆ ಈ ಪ್ರಕರಣವು ಮುಗಿದು ಹೋಗಲೆಂದು ಅವರು ಆತುರಪಡುತ್ತಿದ್ದರು. ಅವರು ತಮ್ಮವೆಂದು ಕೆಲವು ಕರಾರುಗಳನ್ನು ಜಯಸಿಂಗನಿಗೆ ಹೇಳಿದರು. ಹೌದು ಅಲ್ಲ ಎನ್ನುತ್ತ ಜಯಸಿಂಗನು ಅವನ್ನು ಒಪ್ಪಿಕೊಂಡನು. ಬಳಿಕ ಆತನು ಮಹಾರಾಜರಿಗೆ— ''ಒಡಂಬಡಿಕೆಯ ಕರಾರುಗಳನ್ನು ದಿಲೇರಖಾನನ ಕಡೆಗೆ ಕಳಿಸಿ, ಅದಕ್ಕೆ ಆತನು ಒಪ್ಪಿಕೊಂಡಬಳಿಕ ತಮಗೆ ತಿಳಿಸುವೆನು.'' ಎಂದು ಹೇಳಿ ಕಳಿಸಿದನು. ಅಷ್ಟರಲ್ಲಿ ಆತನ ವಿಚಾರವು ಬದಲಾಯಿತು. ದಿಲೇರಖಾನನು ಈ ಕರಾರುಗಳಿಗೆ ಒಪ್ಪಿಕೊಳ್ಳದಿದ್ದರೆ ತೊಂದರೆಯಾದೀತಾದ್ದರಿಂದ, ಆತನನ್ನೇ ಇಲ್ಲಿಗೆ ಕರೆಸಿ, ಶಿವಾಜಿಯ ಸಮಕ್ಷವಾಗಿಯೇ ಎಲ್ಲ ಕರಾರುಗಳನ್ನು ಗೊತ್ತುಮಾಡಿಬಿಡೋಣವೆಂದು ಯೋಚಿಸಿ ಆತನು ದಿಲೇರಖಾನನಿಗೆ—''ಶಿವಾಜಿಯು ನಿಮ್ಮ ಭೆಟ್ಟಿಗೆ ಬಂದು ಒಡಂಬಡಿಕೆ ಮಾಡಿಕೊಳ್ಳುವವನಿದ್ದಾನೆ; ಆದರೆ ತಾವು ಆತನನ್ನು ಕರಕೊಂಡು ಬರಹೇಳಿದರೆ ತಮ್ಮಕಡೆಗೆ ಕರಕೊಂಡು ಬರುವೆನು. ಇಬ್ಬರೂ ಕೂಡಿ ಒಡಂಬಡಿಕೆಯ ಕರಾರುಗಳನ್ನು ಮುಗಿಸಿಬಿಡೋಣ.'' ಎಂದು ಹೇಳಿಕಳಿಸಿದನು. ಇದರಿಂದ ದಿಲೇರಖಾನನಿಗೆ ಸ್ವಲ್ಪ ಸಮಾಧಾನವಾದರೂ, ಮರಾಟರ ಮೇಲಿನ ಆತನ ಸಿಟ್ಟು ಕಡಿಮೆಯಾಗದ್ದರಿಂದ, ಆಯಿತ ಸಮಯದಲ್ಲಿ ಒಡಂಬಡಿಕೆಗೆ

ವಿಘ್ನಮಾಡಬೇಕೆಂತಲೇ ಆತನು ನಿಶ್ಚಯಿಸಿದನು. ಆತನು ಜಯಸಿಂಗನಿಗೆ— ''ಒಡಂಬಡಿಕೆ ಮಾಡುವ ಮೊದಲು ಬಾದಶಹರಿಗೆ ಎಲ್ಲ ಕರಾರುಗಳನ್ನು ತಿಳಿಸಿ, ಅವಕ್ಕೆ ಒಪ್ಪಿಕೊಂಡ ಬಳಿಕ ಒಡಂಬಡಿಕೆ ಮಾಡಬೇಕು. ಬಾದಶಹರ ಸಮ್ಮತಿಯ ಹೊರತು ಒಡಂಬಡಿಕೆ ಮಾಡಲಾಗದು.'' ಎಂದು ಹೇಳಿಕಳಿಸಿದನು. ಇದಕ್ಕೆ ಜಯಸಿಂಗನು ಅಸಮ್ಮತಿಪಡುವ ಸಂಭವವಿದ್ದಿಲ್ಲ. ಆತನು ಅದಕ್ಕೆ ಒಪ್ಪಿಕೊಂಡು ತಿರುಗಿ ದಿಲೇರಖಾನನಿಗೆ— ''ನಿಮ್ಮ ಮಾತಿನಂತೆಯೇ ಮಾಡೋಣ. ಮೊದಲು ನಾವಿಬ್ಬರೂ ಕೂಡಿ ಶಿವಾಜಿಯೊಡನೆ ಕರಾರುಗಳನ್ನು ಮುಗಿಸಿಕೊಂಡು ಆಮೇಲೆ ಬಾದಶಹರಿಗೆ ತಿಳಿಸೋಣ. ಅದಕ್ಕೆ ಬಾದಶಹರು ಒಪ್ಪಿಕೊಂಡಬಳಿಕ ಒಡಂಬಡಿಕೆಯ ಕರಾರುಗಳಿಗೆ ರುಜುಹಾಕೋಣ. ಈಗ ಕರಾರು ಮುಗಿಸಿ ಯುದ್ಧವನ್ನು ನಿಲ್ಲಿಸಿ. ವಿಜಾಪುರ ದವರೊಡನೆ ಯುದ್ಧವನ್ನು ಹೂಡೋಣ. ಆ ಯುದ್ಧದಲ್ಲಿ ಶಿವಾಜಿಯು ನಮಗೆ ಮನಃ ಪೂರ್ವಕ ಸಹಾಯ ಮಾಡಿದರೆ, ಒಡಂಬಡಿಕೆಯು ನಿಜವೆಂದು ತಿಳಿಯತಕ್ಕದ್ದು; ಇಲ್ಲದಿದ್ದರೆ ಇಲ್ಲ. ಆದರೆ ಕರಾರು ಗೊತ್ತುಮಾಡುವದಕ್ಕೆ ನೀವು ಬೇಕಾಗುವದು; ಆದ್ದರಿಂದ ನನಗೆ ಏನೆಂಬುದನ್ನು ತಿಳಿಸಿರಿ,'' ಎಂದು ಮತ್ತೆ ಹೇಳಿಕಳಿಸಿದನು.

ದಿಲೇರಖಾನನು ತನ್ನ ಮಾತನ್ನು ಮೀರಿಯಾನೆಂದು ಜಯಸಿಂಗನು ಸರ್ವಥಾ ತಿಳಿದಿದ್ದಿಲ್ಲ; ಆದ್ದರಿಂದ ಆತನು ''ಮಹಾರಾಜರು ಇನ್ನು ಒಡಂಬಡಿಕೆಗಾಗಿ ಬರಬೇಕೆಂ''ದು ರಘುನಾಥ ಪಂಡಿತರ ಮುಖಾಂತರ ಹೇಳಿಕಳಿಸಿದ್ದನು. ಒಡಂಬಡಿಕೆಯ ದಿವಸವು ಸನ್ 1665ನೇ ಇಸವಿಯ ಜೂನ ತಿಂಗಳ 11ನೇ ತಾರೀಖು ಎಂದು ಗೊತ್ತಾಗಿತ್ತು ಮಹಾರಾಜರು ಬಂದಾಗ ಅವರ ಯೋಗ್ಯತೆಗೆ ತಕ್ಕಂತೆ ಮಾನ–ಮರ್ಯಾದೆ ಮಾಡುವ ವಿಷಯದಲ್ಲಿ ಜಯಸಿಂಗನು ತನ್ನವರಿಗೆ ಅಪ್ಪಣೆಮಾಡಿದ್ದನು. ಅತ್ತ ಮಹಾರಾಜರು ಜಯಸಿಂಗನನ್ನು ಕಾಣಲು ಹೊರಡುವ ಸಿದ್ಧತೆಯಲ್ಲಿ ತೊಡಗಿದರು. ರಾಜಕೀಯ ಪ್ರಕರಣದಲ್ಲಿ ವಿಶ್ವಾಸವು ಮಾತಿನಮಟ್ಟಿಗೆ; ಕೃತಿಯಲ್ಲಿ ಹಿಡಯಲಾಗದೆಂದು ತಿಳಿದು ಮಹಾರಾಜರು ತಮ್ಮ ನಂಬಿಗೆಯ ಜನರನ್ನು ಸಂಗಡ ಕರಕೊಂಡು ಅವರಿಗೆ ಹೇಳತಕ್ಕದ್ದನ್ನು ಹೇಳಿದರು. ಎಲ್ಲ ಪರಿವಾರವು ರಾಯಗಡದಿಂದ ಹೊರಟು, ಜಯಸಿಂಗನ ಛಾವಣಿಯ ಕಡೆಗೆ ಸಾಗಿತು. ಛಾವಣಿಯ ಬಾಗಿಲಿಗೆ ಮಹಾರಾಜರ ಸವಾರಿಯು ಹೋದಕೂಡಲೇ ಅವರ ಸ್ವಾಗತಕ್ಕಾಗಿ ಉದೈರಾಜ ಮುನಸಿ, ಹಾಗು ಉಗ್ರಸೇನ ಕಚ್ಛವಾ ಎಂಬವರು ಬಂದಿದ್ದರು. ಅವರು ಮತ್ತೆ ಮಹಾರಾಜರಿಗೆ —''ನೀವು ಯಾವತ್ತು ದುರ್ಗಗಳನ್ನೂ, ಎಲ್ಲ ಪ್ರಾಂತಗಳನ್ನೂ ನಮಗೆ ಒಪ್ಪಿಸುತ್ತಲಿದ್ದರೆ ಒಡಂಬಡಿಕೆಯ ಮಾತು; ಇಲ್ಲದಿದ್ದರೆ ಇಲ್ಲ'' ಎಂದು ಸ್ಪಷ್ಟವಾಗಿ ಹೇಳಿದರು. ಅದನ್ನು ಕೇಳಿ ಮಹಾರಾಜರಿಗೆ ಬಹಳ ನಗೆಬಂದಿತು. ಅವರು ಒಳ್ಳೇ ಮುತ್ಸದ್ದಿಗಿರಿಯಿಂದ ಅವರಿಗೆ— ''ಈವೊತ್ತಿನ ಮಿತಿಗೆ ನಮ್ಮ ಸ್ವಾಧೀನಪಡಿಸಿಕೊಳ್ಳುವ ಪ್ರಾಂತಗಳು ನಿಮ್ಮವೇ ಇರುವವು'' ಎಂದು ಹೇಳಿದರು. ಈ ಮಾತಿನ ಅರ್ಥವು ಮುನಸಿಗೂ, ಉಗ್ರಸೇನನಿಗೂ ತಿಳಿದಂತೆ ತೋರಲಿಲ್ಲ. ಅವರು ಸಂತೋಷಪಟ್ಟು ತಲೆಯಲ್ಲಾಡಿಸಿದರು. ಮಹಾರಾಜರ ಸಂಗಡಿಗರು ಮಾತ್ರ ಈ ಮಾತಿನ ಮರ್ಮವನ್ನರಿತು ಒಬ್ಬರನ್ನೊಬ್ಬರು ನೋಡಿ ನಕ್ಕರು. ಮುಂದೆ

ಮಹಾರಾಜನು ಪರಿವಾರದೊಡನೆ ಜಯಸಿಂಗನ ಡೇರೆಯ ಬಾಗಿಲಿಗೆ ಹೋದರು. ಆಗ ಜಾನಿಬಕ್ಷಿಯು ಅವರ ಸ್ವಾಗತ ಸತ್ಕಾರಮಾಡಿದನು. ಮಹಾರಾಜರು ಒಳಗೆ ಹೋದಬಳಿಕ ಜಯಸಿಂಗನ ಭೆಟ್ಟಿಯಾಯಿತು. ಜಯಸಿಂಗನು ಎದ್ದು ಬಂದು ಕೈಹಿಡಿದು ಮಹಾರಾಜರನ್ನು ಮರ್ಯಾದೆಯಿಂದ ಕುಳ್ಳಿರಿಸಿಕೊಂಡನು. ಯೋಗಕ್ಷೇಮದ ವಿಚಾರಣೆಯಾದ ಬಳಿಕ ಆತನು ಮಹಾರಾಜರನ್ನು ಕುರಿತು— ''ನೀವು ಯೋಗ್ಯ ವಿಚಾರಮಾಡಿದಿರಿ. ಈ ಸಾರೆ ನಿಮ್ಮ ಪ್ರಯತ್ನಕ್ಕೆ ಯಶಸ್ಸು ಬರುತ್ತಿದ್ದಿಲ್ಲ. ನಿಷ್ಕಾರಣ ಮನುಷ್ಯ ಹಾನಿಯಾಗುತ್ತಿತ್ತು. ಕಡೆಗೆ ನಾವು ನಿಮ್ಮ ಎಲ್ಲ ರಾಜ್ಯವನ್ನು ತಕ್ಕೊಂಡೇ ತಕ್ಕೊಳ್ಳುತ್ತಿದ್ದೆವು. ಆದ್ದರಿಂದ ಈಗ ನೀವು ಮಾಡಿದ ವಿಚಾರವು ಬಹು ಜಾಣತನದ್ದು. ಈಗ ನಿಮ್ಮ ರಾಜ್ಯವು ನಮ್ಮ ಕಡೆಗೇ ಉಳಿಯುವದು; ಆದರೆ ಬಾದಶಹರದೆಂದು ಉಳಿಯುವದು. ನಾವು ಇನ್ನು ಇಲ್ಲಿಂದ ಹೋಗತಕ್ಕವರು. ನೀವೇ ನೋಡಿರಿ, ಬಾದಶಹರ ಸಾಮರ್ಥ್ಯವೆಷ್ಟು, ನಿಮ್ಮ ದೌರ್ಬಲ್ಯವೆಷ್ಟು? ಅದರಲ್ಲಿ ಸಾವಿರಾರು ತರಲಿಗಳು. ಇಂಥ ಸ್ಥಿತಿಯಲ್ಲಿ ಸುಮ್ಮನೆ ಸ್ವರಾಜ್ಯ ಸ್ಥಾಪನೆಯ ಸಲುವಾಗಿ ಕಷ್ಟಪಡುವದರಿಂದ ಪ್ರಯೋಜನವೇನಾಗುವದು? ಈಗ ಪುರಂದರದುರ್ಗವನ್ನು ದಿಲೇರಖಾನನಿಗೆ ಒಪ್ಪಿಸುವದಕ್ಕಾಗಿ ನಿಮ್ಮವರಿಗೆ ತಿಳಿಸಿಬಿಡಿರಿ. ಸುಮ್ಮನೆ ಅವರು ಪುಂಡತನ ನಡೆಸಿರುವರು. ದುರ್ಗವು ನಮ್ಮ ವಶವಾದಂತೆಯೇ ಆಗಿದೆ; ಆದರೂ ಖಾನನು ದುರ್ಗದಮೇಲೆ ಹೋಗಿ ಇರುವ ತನಕ ಆತನಿಗೆ ಸಮಾಧಾನವಾಗುವದಿಲ್ಲ. ಒಡಂಬಡಿಕೆಗೆ ಆತನ ಒಪ್ಪಿಗೆಯೂ ಬೇಕಾಗುವದು. ಅಂದಬಳಿಕ ಸುಮ್ಮನೆ ಆತನ ಮನಸ್ಸನ್ನು ಯಾಕೆ ಅಸಮಾಧಾನಪಡಿಸಬೇಕು? ಪುರಂದರವು ಪೂರ್ಣವಾಗಿ ವಶವಾದರೆ ಆತನಿಗೆ ಯಾವ ಬಗೆಯ ಸಂಶಯವೂ ಉಳಿಯುವದಿಲ್ಲ.

ಈ ಮೇರೆಗೆ ಜಯಸಿಂಗನು ಆಡಿದ ಮಾತಿಗೆ ಮಹಾರಾಜರು ಒಪ್ಪಿಕೊಂಡರು. ಈಗಿನ ಅವರ ಸ್ಥಿತಿಯನ್ನು ಮನಸ್ಸಿನಲ್ಲಿ ತಂದರೆ, ಜಯಸಿಂಗನು ಹೇಳಿದ್ದಕ್ಕೆ ಹೂ ಅನ್ನುವದರ ಹೊರತು ಬೇರೆ ಮಾರ್ಗವೇ ಅವರಿಗೆ ಉಳಿದಿದ್ದಿಲ್ಲ. ಮಹಾರಾಜರು ತಮ್ಮ ಪರಿವಾರ ದೊಳಗಿನವರಿಬ್ಬರನ್ನು ಕಳಿಸಿ ಪುರಂದರವನ್ನು ಖಾನನಿಗೆ ಒಪ್ಪಿಸುವಂತೆ ಮಾಡಿದರು. ಅದನ್ನು ನೋಡಿ ಜಯಸಿಂಗನಿಗೆ ಬಹಳ ಸಂತೋಷವಾಯಿತು. ಆತನಿಗೆ ಯಾವ ಬಗೆಯ ಸಂಶಯವೂ ಉಳಿಯಲಿಲ್ಲ. ಆಮೇಲೆ ಮಹಾರಾಜರಿಗೆ ವಿಶ್ರಾಂತಿಯನ್ನು ಪಡೆಯಲು ವಿನಂತಿಯನ್ನು ಮಾಡಿಕೊಂಡು, ಅವರಿಗಾಗಿ ತನ್ನ ದಿವಾಣಖಾನೆಯಲ್ಲಿಯೇ ಎಲ್ಲ ಅನಕೂಲತೆಗಳನ್ನು ಮಾಡಿಕೊಟ್ಟನು; ಸಿಂಹವನ್ನು ಹಲವುಬಗೆಯಿಂದ ಹಣ್ಣಿಗೆ ತಂದು ಪಂಜರದಲ್ಲಿ ಹಾಕಿ ಇಟ್ಟಂತಾಗಿತ್ತು. ಸ್ವಾತಂತ್ರ್ಯದ ಒಗರಿನಿಂದಲೇ ಕಾಲಹರಣಮಾಡಿದ ಮಹಾರಾಜರಿಗೆ, ಈಗಿನ ಪರಾಧೀನಸ್ಥಿತಿಯು ಅತ್ಯಂತ ಅಪಮಾನಕರವಾಯಿತು. ಆದ್ದರಿಂದ ಅವರ ಮನಸ್ಸಿಗೆ ಲೇಶವಾದರೂ ಸ್ವಾಸ್ಥ್ಯವಿದ್ದಿಲ್ಲ. ಹೀಗೆ ಅಂದಿನ ದಿನವು ಕಳೆದುಹೋಯಿತು. ಮರುದಿನ ಬೆಳಗಾಯಿತು. ಪುರಂದರದಿಂದ ಖಾನನ ಪತ್ರವು ಬಂದಿತು. ಈಗ ಎಲ್ಲ ಬಗೆಯಿಂದ ದುರ್ಗದಲ್ಲಿ ಶಾಂತತೆಯುಂಟಾಗಿದೆಯೆಂದು ಖಾನನು ಬರೆದಿದ್ದನು; ಆದರೆ ಒಡಂಬಡಿಕೆಗೆ ಮಾತ್ರ ಆತನು ಒಪ್ಪಿಕೊಂಡಿದ್ದಿಲ್ಲ. ಆತನು ಮಿರ್ಝಾರಾಜನಿಗೆ— ''ಒಡಂಬಡಿಕೆ ಮಾಡಿಕೊಳ್ಳುವ

ಇಚ್ಛೆಯು ನಮಗೆ ಇಲ್ಲ. ಈವರೆಗೆ ನಾವು ಬಹಳ ಕಷ್ಟಪಟ್ಟಿರುವೆವು. ಇಷ್ಟು ಕಷ್ಟವಾಗದೆ ನಮ್ಮ ಕಾರ್ಯವಾಗಿದ್ದರೆ ಒಡಂಬಡಿಕೆ ಮಾಡಿಕೊಳ್ಳಬಹುದಾಗಿತ್ತು. ಭೋಗಿಸುವದನ್ನೆಲ್ಲ ಭೋಗಿಸಿದ ಬಳಿಕ ಇನ್ನು ಒಡಂಬಡಿಕೆಯ ಮಾತೇಕೆ? ನಾವು ಶಿವಾಜಿಯ ಯಾವತ್ತು ರಾಜ್ಯವನ್ನು ಸ್ವಾಧೀನಪಡಿಸಿಕೊಂಡೇ ತೀರುವೆವು. ಇದರಲ್ಲಿ ಎಳ್ಳಷ್ಟಾದರೂ ಸಂಶಯವಿಲ್ಲ. ಇಷ್ಟೆಲ್ಲ ಆದಬಳಿಕ ಎಲ್ಲಿಯೋ ಈಗ ಒಡಂಬಡಿಕೆಯ ಮಾತು ಹೊರಟಿದೆ. ಹೊರಡ ಲೊಲ್ಲದೇಕೆ. ಹ್ಯಾಗೂ ನೀವು ದೊಡ್ಡವರಿರುವಿರಿ. ಬಾದಶಹರು ಸಂಪೂರ್ಣ ಅಧಿಕಾರವನ್ನು ನಿಮಗೆ ಕೊಟ್ಟಿರುತ್ತಾರೆ. ಅಂದಬಳಿಕ ಒಡಂಬಡಿಕೆಗೆ ನಮ್ಮ ಒಪ್ಪಿಗೆಯಾದರೂ ಯಾತಕ್ಕೆ ಬೇಕು? ನಿಮ್ಮೊಳಗೆ ನಾನು ಬಂದೆನೆಂದು ತಿಳಿದೇ ಒಡಂಬಡಿಕೆಯ ಎಲ್ಲ ಕರಾರುಗಳನ್ನು ಮುಗಿಸಿ ಬಿಡಿರಿ. ಯಾರ ಹೊಟ್ಟೆನೊಂದರೆ ಯಾರು ಅಜವಾನ ತಿನ್ನುವರು? ನಮಗಾದ ದುಃಖವನ್ನು ನಾವೇ ನೋಡಿಕೊಳ್ಳಬೇಕು. ನಮ್ಮ ಕರಳು ಕೊಯ್ದವರ ಸಂಗಡ ನಮ್ಮ ಒಡಂಬಡಿಕೆಯು! ಈ ಮಾತು ಎಂದಿಗೂ ಆಗದು. ನೀವು ಬೇಕಾದರೆ ಒಡಂಬಡಿಕೆ ಮಾಡಿಕೊಳ್ಳಿರಿ.''

ದಿಲೇರಖಾನನು ಹೀಗೆ ಹೇಳಿಕಳಿಸಿದ್ದು ಜಯಸಿಂಗನಿಗೆ ಬಹು ಚಮತ್ಕಾರವಾಗಿ ತೋರಿತು. ದಿಲೇರಖಾನನು ತನ್ನ ಮಾತು ತೆಗೆದುಹಾಕುವನೆಂದು ಮಿರ್ಝಾರಾಜನು ತಿಳಿದಿದ್ದಿಲ್ಲ. ಖಾನನಿಂದ ಒಡಂಬಡಿಕೆಗೆ ಹೀಗೆ ವಿಘ್ನಬಿದಗೀತೆಂಬ ವಿಚಾರವು ಈ ವೃದ್ಧ ರಜಪೂತನ ಮನಸ್ಸಿನಲ್ಲಿ ಎಂದೂ ಬಂದಿದ್ದಿಲ್ಲ. ಖಾನನ ಹೇಳಿಕೆಯಂತೆ ಆತನು ಪುರಂದರ ಕೋಟೆಯನ್ನು ಮಹಾರಾಜರಿಗೆ ಹೇಳಿ ತೆರವು ಮಾಡಿಸಿಕೊಟ್ಟಿದ್ದನು; ಮತ್ತು ಉಳಿದ ಕೋಟೆ ಗಳನ್ನೂ ಬಿಡಿಸಿಕೊಡುವಂತೆ ಮಹಾರಾಜರನ್ನು ಒಡಂಬಡಿಸಿದ್ದನು. ಹೀಗೆ ತಾನು ಖಾನನ ಮನೋದಯಗಳನ್ನೆಲ್ಲ ಪೂರ್ಣಮಾಡಲು, ಆತನು ಹೀಗೆ ಒಡಂಬಡಿಕೆಗೆ ಅಸಮ್ಮತಿಪಡಲಿಕ್ಕೆ ಕಾರಣವೇನಿರಬಹು ದೆಂಬದು ಜಯಸಿಂಗನಿಗೆ ತಿಳಿಯದಾಯಿತು. ನೂರಎಲ್‌ಹುದೆಯನ್ನು ಶಹಾಜಾದಾನೇ ಹೊರಡಿಸಿಕೊಂಡು ಹೋಗಿರಬಹುದೆಂದು ಜಯಸಿಂಗನು ತಿಳಿದಿದ್ದನು. ಮಗಳ ಸಲುವಾಗಿ ಮರಾಟರ ಮೇಲೆ ಖಾನನು ಸಿಟ್ಟಾಗಿರುವನೆಂಬ ಕಲ್ಪನೆಯು ಸಹ ಜಯಸಿಂಗನಿಗೆ ಬಂದಿದ್ದಿಲ್ಲ. ''ಕರಳು ಕೊಯ್ದವರ ಸಂಗಡ ಒಡಂಬಡಿಕೆಯು!'' ಎಂಬ ವಾಕ್ಯದಿಂದ ಖಾನನ ಮನಸ್ಸಿನ ಸಂಶಯವು ಜಯಸಿಂಗನಿಗೆ ಈಗ ಗೊತ್ತಾಯಿತು. ಹೇಳಿಕೆಯ ಮಾತಿನಿಂದ ಮನುಷ್ಯನ ಮನಸ್ಸು ತಿರುಗುತ್ತಿರುವದು ಎಲ್ಲರಿಗೂ ಗೊತ್ತಿದ್ದ ಮಾತಷ್ಟೇ? ಜಯಸಿಂಗನಿಗೆ ಸೇರದ ಜನರು ಖಾನನ ಮುಂದೆ ಇಲ್ಲದ್ದೊಂದು ಹೇಳಿ ಆತನ ಮನಸ್ಸನ್ನು ಕೆಡಿಸಿದ್ದರು. ಜಯಸಿಂಗನ ಮೇಲೆ ದಿಲೇರಖಾನನ ಸಂಪೂರ್ಣ ವಿಶ್ವಾಸವಿದ್ದರೂ, ದುರ್ಯೋಗ ದಿಂದ ಆತನ ಮನಸ್ಸು ಜಯಸಿಂಗನ ಸಂಬಂಧದಿಂದ ಈಗ ಕಲುಷಿತವಾಗಿತ್ತು. ದಿಲೇರ ಖಾನನ ಈ ಪ್ರತಿಕೂಲತೆಯಿಂದ ಒಡಂಬಡಿಕೆಯ ಕಾರ್ಯಕ್ಕೆ ದೊಡ್ಡ ವಿಘ್ನವಾದಂತಾಯಿತು. ಆಗ ಜಯಸಿಂಗನು ಮಹಾರಾಜರನ್ನು ಕರೆಸಿ ಆಲೋಚಿಸ ತೊಡಗಿದನು. ಬಹಳ ಹೊತ್ತಿನವರೆಗೆ ಅವರ ಮಾತುಕಥೆಗಳು ನಡೆದವು. ಕಡೆಗೆ ಯಾವುದೋ ಒಂದು ವಿಷಯದಿಂದ

ಅವರಿಬ್ಬರ ಮುಖಗಳೂ ಪ್ರಫುಲ್ಲಿತವಾದವು. ಇದರಿಂದ ಒಡಂಬಡಿಕೆಯ ಕಾರ್ಯದಲ್ಲಿ ಒದಗಿದ್ದ ದೊಡ್ಡ ವಿಘ್ನವು ದೂರವಾಗಬಹುದೆಂದು ಅವರು ಭಾವಿಸಿದರು. ಜಯಸಿಂಗನು ಕೂಡಲೆ ಪುರಂದರಕ್ಕೆ ದಿಲೇರಖಾನನ ಬಳಿಗೆ— "ಒಮ್ಮೆ ತಾವು ಇಲ್ಲಿಯವರೆಗೆ ಬಂದೇ ಹೋಗಬೇಕು. ತಮ್ಮ ಕರಳು ಕೊಯ್ದರೆ ನಮ್ಮ ಕರಳು ಕೊಯ್ದಹಾಗೆಯೆಂದು ನಾನು ಬರೆದು ತಿಳಿಸುವ ಕಾರಣವಿಲ್ಲ. ತಮ್ಮ ಕೊಯ್ದ ಕರಳನ್ನು ಪುನಃ ಹಚ್ಚಿ ಮಾಯಿಸುವ ಮುಲಾಮು ನಮ್ಮ ಬಳಿಯಲ್ಲಿರುತ್ತದೆ; ಆದ್ದರಿಂದ ತಾವು ಇಲ್ಲಿಗೆ ಬಂದೇ ತೀರಬೇಕು. ನಮ್ಮ ಭೆಟ್ಟಿಯಾದ ಬಳಿಕ ತಮಗೂ ಸಮಾಧಾನವಾಗುವದು, ನಮಗೂ ಸಮಾಧಾನವಾಗುವದು" ಎಂಬರ್ಥದ ಪತ್ರವನ್ನು ಬರೆದು ಕಳಿಸಿದನು. ಆ ಪತ್ರವನ್ನು ಓದಿ ಕಲುಷಿತ ಹೃದಯನಾದ ಖಾನನು ವಿಕಲ್ಪವನ್ನೇ ಭಾವಿಸಿದನು. ಜಯಸಿಂಗನು ತನ್ನೊಡನೆ ವಿನೋದ ಮಾಡುತ್ತಿರಬಹುದೆಂದು ತಿಳಿದು, ತಾನು ಬರುವದಿಲ್ಲೆಂದು ಸ್ಪಷ್ಟವಾಗಿ ಹೇಳಿಕಳಿಸಿದನು; ಆದರೆ ಜಯಸಿಂಗನು ಮತ್ತೆ ಪತ್ರ ಬರೆದನು. ದಿಲೇರಖಾನನು ಅದಕ್ಕೆ ಮತ್ತೆ ನಕಾರಾರ್ಥದ ಉತ್ತರ ಬರೆದನು. ಹೀಗೆ ಪ್ರಶ್ನೋತ್ತರಗಳ ದ್ವಾರದಿಂದ ನಾಲ್ಕುದಿನ ಅರೆದಾಟವಾಗಿ ಕಡೆಗೆ ದಿಲೇರಖಾನನು ಜಯಸಿಂಗನ ಮಾತಿನಂತೆ ಆತನ ಛಾವಣಿಗೆ ಬಂದನು. "ಖಾನನು ಮಗಳ ವಿಯೋಗದಿಂದ ದುಃಖಿತನಾಗಿರುವದರಿಂದ ಆತನ ಸಮಾಧಾನಕ್ಕಾಗಿ, ನಿಮ್ಮ ದರ್ಜೆಯ ಕಡೆಗೆ ಲಕ್ಷಗೊಡದೆ ಆತನನ್ನು ಇದಿರ್ಗೊಂಡು ಕರಕೊಂಡು ಬರಬೇಕೆಂ"ದು ಜಯಸಿಂಗನು ಮಹಾರಾಜರಿಗೆ ಹೇಳಲು, ಅದರಂತೆ ಮಹಾರಾಜರು ಖಾನನ ಸ್ವಾಗತೋಪಚಾರವನ್ನು ಸ್ವತಃ ಮಾಡಿದರು; ಆದರೆ ಖಾನನು ಮಹಾರಾಜರ ಸಂಗಡ ನೆಟ್ಟಗೆ ಮಾತು ಸಹ ಆಡಲಿಲ್ಲ. ಎಲ್ಲರೂ ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತುಕೊಂಡಬಳಿಕ ಜಯಸಿಂಗನು ದಿಲೇರಖಾನನಿಗೆ— "ಖಾನಸಾಹೇಬ, ಒಡಂಬಡಿಕೆಯ ಮಾತುಗಳನ್ನು ಆಡುವಮೊದಲು ಶಿವಾಜೀಮಹಾರಾಜರು ತಮ್ಮ ಸಲುವಾಗಿಯೇ ಒಂದು ಕಾಣಿಕೆಯನ್ನು ತಂದಿರುತ್ತಾರೆ, ಅದನ್ನಿಷ್ಟು ನೋಡಿಬರಬೇಕು," ಎಂದು ವಿಜ್ಞಾಪಿಸಿದನು. ಅದನ್ನು ಕೇಳಿ ಖಾನನು ಬೆರಗಾದನು. ಆತನಿಗೆ ಏನೂ ತೋಚದಾಯಿತು. ಆಗ ಜಯಸಿಂಗನು ಮುಗುಳುನಗೆ ನಕ್ಕು— "ತಾವು ಆ ಕಾಣಿಕೆಯನ್ನು ಒಮ್ಮೆ ನೋಡಿಯಾದರೂ ಬರಬೇಕು" ಎಂದು ಮತ್ತೆ ವಿಜ್ಞಾಪಿಸಿದನು.

ಮಿರ್ಝಾರಾಜನ ಈ ಮಾತುಗಳನ್ನು ಕೇಳಿ ದಿಲೇರಖಾನನಿಗೆ ಏನೂ ತೋಚದಾಯಿತು. ಆತನು ತನ್ನ ಸುತ್ತುಮುತ್ತು ನೋಡಹತ್ತಿದನು; ಕಾಣಿಕೆಯ ಒಡವೆಯಂತೂ ಎಲ್ಲಿಯೂ ಕಾಣಲೊಲ್ಲದು. ಶಿವಾಜಿಯು ಕಾಣಿಕೆಯನ್ನು ತಂದಿರುವನೆಂದು ಜಯಸಿಂಗನು ಒಂದು ಸಾರೆ, ಎರಡು ಸಾರೆ, ಮೂರುಸಾರೆ ಹೇಳಿ ನಗುತ್ತಿದ್ದನು; ಮತ್ತು ಆ ಪರದೆಯ ಹಿಂದೆ ಕಾಣಿಕೆಯ ಪದಾರ್ಥವಿರುತ್ತದೆ,ಅದನ್ನು ನೋಡಿಬರಬೇಕೆಂದು ಹೇಳುತ್ತಿದ್ದನು; ಆದರೆ "ಅಂಥ ಗುಪ್ತ ಕಾಣಿಕೆಯಾದರೂ ಏನಿರಬಹುದು, ಕಾಣಿಕೆಯ ವಿಷಯದಲ್ಲಿ ಇಷ್ಟು ಗೂಢವೇಕೆ?" ಎಂದು ತನ್ನೊಳಗೆ ಅಂದುಕೊಂಡು ಖಾನನು ಜಯಸಿಂಗನನ್ನು ಕುರಿತು—

ದಿಲೇರಖಾನ—ಮಿರ್ಝಾ, ನಾಲ್ಕುಜನರಲ್ಲಿ ಇಡಲಿಕ್ಕೆ ಬಾರದ ಕಾಣಿಕೆಯನ್ನು ನಾನು ಸರ್ವಥಾ ಸ್ವೀಕರಿಸುವುದಿಲ್ಲ. ದಿಲೇರಖಾನನು ಇಂಥ ಕಾಣಿಕೆಗೀಣಿಕೆಗೆ ಮರುಳಾಗಿ ಕರ್ತವ್ಯ ಭ್ರಷ್ಟನಾಗತಕ್ಕವನಲ್ಲವೆಂಬ ಮಾತು ನಿಮಗೆ ಗೊತ್ತಿರಬಹುದು; ಗೂಢವಂತೂ ನನಗೆ ಬೇಡವೇ ಬೇಡ. ಕಾಣಿಕೆ ಏನು ಇದ್ದದ್ದು ಬೈಲಿಗೆ ಬರಲಿ. ನಾನು ಒಡಂಬಡಿಕೆಗೆ ಅನುಕೂಲವಾಗಬೇಕೆಂಬ ಇಚ್ಛೆ ನಿಮಗಿದ್ದರೆ, ನನ್ನ ಕರಾರುಗಳನ್ನು ಕೇಳಿಕೊಳ್ಳಿರಿ, ಇಲ್ಲದಿದ್ದರೆ ನೀವು ಮುಖತ್ಯಾರ್‍ಯಾರಿರುವಿರಿ, ಮನಸ್ಸಿಗೆ ಬಂದಂತೆ ಮಾಡಿರಿ.

ಜಯಸಿಂಗ— (ನಕ್ಕು) ಖಾನಸಾಹೇಬ, ಇದು ನಗೆಯ ಮಾತಲ್ಲ, ನಗುವ ಸ್ಥಳವೂ ಅಲ್ಲ. ಆದರೆ ಏನು ಮಾಡಬೇಕು, ನಗೆಬಾರದೆಯಿರಲೊಲ್ಲದು. ಶಿವಾಜಿರಾಜರು ತಂದಿರುವ ಕಾಣಿಕೆಯು ಬೈಲಿಗೆ ಬರತಕ್ಕದ್ದಲ್ಲ. ಅದು ಬರುವ ಹಾಗೂ ಇಲ್ಲ. ಇದರ ಮೇಲೆಯೂ ಒತ್ತಾಯದಿಂದ ಬೈಲಿಗೆ ತಂದರೆ ನಿಮಗೆ ಸಂತಾಪವಾಗದೇ ಹೋಗದು; ಆದ್ದರಿಂದ ತಾವು ನಮ್ಮ ಮಾತು ನಡಿಸುವ ಉದ್ದೇಶದಿಂದಲೇ ಆಗಲೊಲ್ಲದೇಕೆ, ಒಮ್ಮೆ ಪಡದೆಯೊಳಗೆ ಹೋಗಿ ಕಾಣಿಕೆಯ ಒಡವೆಯನ್ನು ನೋಡಿ ಬರ್ರಿ.

ದಿಲೇರಖಾನ–ಒಳ್ಳೇಯದು, ನೀವು ಇಷ್ಟು ಆಗ್ರಹಪಡುತ್ತಿದ್ದರೆ, ಒಳಗೆ ಹೋಗಿ ನೋಡಿಬರುವೆನು; ಆದರೆ ಏನಾದರೂ ಉಪಹಾಸದ ಪ್ರಕಾರವಿದ್ದರೆ, ನನ್ನಂಥ ಕೆಟ್ಟ ಮನುಷ್ಯನಿಲ್ಲೆಂಬುದನ್ನು ನಾನು ಬಾಯಿಂದ ಹೇಳುವ ಕಾರಣವಿಲ್ಲ.

ಈ ಮೇರೆಗೆ ನುಡಿಯುವಾಗ ಖಾನನು ಶಿವಾಜಿಮಹಾರಾಜರನ್ನು ಕೆಟ್ಟ ಕಣ್ಣಿನಿಂದ ನೋಡುತ್ತ ಪರದೆಯೊಳಗೆ ಹೋದನು. ಆ ಪರದೆಯ ಹಿಂದೆ ಮತ್ತೊಂದು ಪರದೆಯಿತ್ತು. ಆ ಪರದೆಯೊಳಗೆ ಹೋದಬಳಿಕ ಖಾನನ ಸಂಗಡ ಬಂದಿದ್ದ ಮನುಷ್ಯನು ಅಲ್ಲಿಯೇ ನಿಂತು— ''ತಾವು ಇನ್ನು ಒಬ್ಬರೇ ಒಳಗೆ ಹೋಗಬೇಕೆಂ''ದು ಖಾನನಿಗೆ ಬೇಡಿಕೊಂಡನು. ಆಗ ಖಾನನು ಆಶ್ಚರ್ಯಮುದ್ರೆಯಿಂದ ಅವನನ್ನು ನೋಡಹತ್ತಿ ಕಡೆಗೆ ಆತನನ್ನು ಹೋಗ ಗೊಟ್ಟನು. ಒಟ್ಟಿನಮೇಲೆ ಖಾನನಿಗೆ ಕಾಣಿಕೆಯ ಗೂಢವೇ ತಿಳಿಯದಾಯಿತು. ಸ್ವಲ್ಪಹೊತ್ತು ಆತನು ವಿಚಾರಮಾಡುತ್ತ ನಿಂತುಕೊಂಡನು. ಬಳಿಕ ಅವನ ಮನಸ್ಸಿನಲ್ಲಿ ಏನೋ ಹೊಳೆದು, ಆತನಿಗೆ ಪರಮ ಸಂತೋಷವಾಯಿತು; ಆದರೆ ಉತ್ತರಕ್ಷಣದಲ್ಲಿಯೇ ಆತನಲ್ಲಿ ಅಸಮಾಧಾನವು ಉತ್ಪನ್ನವಾಯಿತು. ಮುಂದಿನ ಪರದೆಯನ್ನು ಓರೆಮಾಡಲಿಕ್ಕೆ ಅವನ ಕೈಗಳು ಏಳಲೊಲ್ಲವು. ಕಡೆಗೆ ಅವನು ಪರದೆಯನ್ನು ಓರೆಮಾಡಿ ಒಳಗೆ ಹೋದನು. ಆಗ ಅಲ್ಲಿ ಅವನ ಕಣ್ಣಿಗೆ ಏನುಬಿದ್ದಿತು? ಯಾವಳು ಆತನ ಪಂಚಪ್ರಾಣವಾಗಿದ್ದಳೋ, ಯಾವಳ ವಿಯೋಗದಿಂದ ಆತನಿಗೆ ಹೃದ್ರೋಗವು ಹತ್ತಿದಂತಾಗಿತ್ತೋ ಆತನ ನಕ್ಷತ್ರದಂಥ ಮಗಳು ನೂರಎಲ್ ಹುದೆಯು ಆತನ ಕಣ್ಣಿಗೆ ಬಿದ್ದಳು. ಆಕೆಯನ್ನು ನೋಡಿ ಖಾನನಿಗೆ ಪರಮಾನಂದವಾಯಿತು. ತಂದೆಯನ್ನು ನೋಡಿದಕೂಡಲೇ ನೂರಎಲ್‌ಹುದೆಯು ''ಅಪ್ಪಾ ಅಪ್ಪಾ'' ಎಂದು ಆತನನ್ನು ಅಪ್ಪಿಕೊಂಡಳು. ದಿಲೇರಖಾನನು ಮಗಳನ್ನು ಬಿಗಿಯಾಗಿ ಅಪ್ಪಿಕೊಂಡು ಕಣ್ಣೀರು ಸುರಿಸಿದನು. ಹೀಗೆ ಕೆಲಹೊತ್ತು ತಂದೆಮಕ್ಕಳು ಪರಸ್ಪರರನ್ನು ಆಲಂಗಿಸಿ ಆನಂದವ ಅನುಭವಿಸುತ್ತಿರುವಾಗ

ಒಬ್ಬರ ಮುಖದಿಂದಲೂ ಮಾತುಗಳು ಹೊರಡಲಿಲ್ಲ. ಹೀಗೆ ಕೆಲವು ಕಾಲ ಕ್ರಮಿಸಿದ ಬಳಿಕ ಖಾನನ ಮನಸ್ಸಿನಲ್ಲಿ ಏನೋ ದುರ್ವಿಚಾರವು ಉತ್ಪನ್ನವಾಗಲು, ಅವನು ಆಲಂಗಿಸಿದ ತನ್ನ ಕೈಗಳನ್ನು ಸಡಿಲಿಸಿ ಮಗಳನ್ನು ಹಿಂದಕ್ಕೆ ಸರಿಸಿ ಆಕೆಯ ಗದ್ದವನ್ನು ಹಿಡಿದು ಮುಖವನ್ನು ಮೇಲಕ್ಕೆತ್ತಿ ಕಠೋರ ಸ್ವರದಿಂದ—"ಏ ನೂರ, ಆ ದುಷ್ಟ ಮರಾಟರು ನಿನ್ನನ್ನು ಅಪಹರಿಸಿ ದಂದಿನಿಂದ ಇಂದಿನವರೆಗೆ ನೀನು ಪರಿಶುದ್ಧವಾಗಿರುವಿಯಾ? ಎಂದು ಪ್ರಶ್ನೆಮಾಡಿದನು; ಆದರೆ ಖಾನನು ತನ್ನ ಭೇದಕ ದೃಷ್ಟಿಗಳಿಂದ ಮಗಳ ದೃಷ್ಟಿಗಳನ್ನು ನೀರಿಕ್ಷಿಸುವಾಗ ಆಕೆಯ ಪರಿಶುದ್ಧತೆಯ ಲಕ್ಷಣವು ಆತನ ಮನಸ್ಸಿಗೆ ಸ್ಪಷ್ಟವಾಗಿ ಹೊಳೆಯಿತು. ನೂರಎಲ್‌ಹುದೆಯ ಪರಿಶುದ್ಧ ಮುಖಲಕ್ಷಣವೇ ಆತನ ಪ್ರಶ್ನೆಗೆ ಸಮಾಧಾನಕರವಾದ ಉತ್ತರವನ್ನು ಕೊಟ್ಟಿತು. ಪರಿಶುದ್ಧತೆಯ ನಂಬಿಗೆಯ ಬಗ್ಗೆ ನೂರಎಲ್ ಹುದೆಯ ಉತ್ತರದ ಅಪೇಕ್ಷೆಯೇ ಆತನಿಗೆ ಉಳಿಯಲಿಲ್ಲ. ಆ ಉತ್ತರವೂ ಖಾನನಿಗೆ ದೊರೆಯಲಿಲ್ಲ. ಖಾನನು ಮಗಳ ಪರಿಶುದ್ಧ ಮುಖವನ್ನು ನೋಡಿ ಸಮಾಧಾನಪಡುತ್ತ— "ಆ ದುಷ್ಟ ಮರಾಟರು ನಿನ್ನನ್ನು ಅಪಹರಿಸಿ ದಾಗಲೇ ಅವರು ನಿನ್ನ ನಖಕ್ಕೆ ಕೂಡ ಅಪಾಯಮಾಡಲಾರರೆಂತಲೂ, ನಿನ್ನನ್ನು ಮರ್ಯಾದೆ ಯಿಂದ ರಕ್ಷಿಸಿ, ಪ್ರಸಂಗದಲ್ಲಿ ನಿನ್ನನ್ನು ಮುಂದೆಮಾಡಿ ತಮ್ಮ ಹಿತಮಾಡಿಕೊಳ್ಳಲು ಯತ್ನಿಸಬಹು ದೆಂತಲೂ ನಾನು ತಿಳಿದಿದ್ದೆನು. ಅದರಂತೆಯೇ ಈಗ ಒಡಬಂಡಿಕೆಯ ಕಾಲದಲ್ಲಿ ನಿನ್ನನ್ನು ನನಗೆ ಅವರು ಒಪ್ಪಿಸಬಂದಿದ್ದರೆ........" ಅನ್ನಲು, ನೂರಎಲ್‌ಹುದೆಯು ತಂದೆಯನ್ನು ಕುರಿತು ತಟ್ಟನೆ —

ನೂರಎಲ್‌ಹುದೆ—ಛೀ. ಛೀ. ಛೀ. ಅಪ್ಪಾ, ನನ್ನನ್ನು ಮರಾಟರು ಅಪಹರಿಸಿಕೊಂಡು ಹೋಗಿರುವದೇ ಇಲ್ಲ. ಆ ದುಷ್ಟನಾದ ಅಬದುಲ್ಲಾಮಗರೂರನು ಫಿತೂರಾಗಿ ನನ್ನ ಸರ್ವಸ್ವದ ನಾಶಮಾಡಬೇಕೆಂದು ಮಾಡಿದ್ದನು. ಅವನೂ ನಿಮ್ಮೊಬ್ಬ ರಜಪೂತ ಸರದಾರನೂ ಕೂಡಿ ನನ್ನನ್ನು ಅಪಹರಿಸಿ, ಐವತ್ತು ಜನ ರಜಪೂತ ಕಾವಲಿನಿಂದ ನನ್ನನ್ನು ಎತ್ತೋ ಕರಕೊಂಡು ನಡೆದಿದ್ದರು; ಅಷ್ಟರಲ್ಲಿ ಪುಣ್ಯಾತ್ಮರಾದ ಮರಾಟರು ನನ್ನನ್ನು ಬಿಡಿಸಿ, ನನ್ನ ಮಾನವನ್ನು ಕಾಯ್ದರು.

ದಿಲೇರಖಾನ—ಏನು? ಮರಾಟರು ನಿನ್ನನ್ನು ಅಪಹರಿಸಿಲ್ಲವೆ? ರಜಪೂತ ಸರದಾರನು ಅಪಹರಿಸಿದನೇ? ಮರಾಟರು ನಿನ್ನನ್ನು ಬಿಡಿಸಿದರೆ? "ಅಲ್ಲಾ ಅಲ್ಲಾ?" ನೂರ, ನಿನಗೆ ಭ್ರಾಂತಿಯಾಗಿರಬಹುದು. ನಿನ್ನ ಮಾತು ನನಗೆ ಸಂಭವವಾಗಿ ತೋರುವುದಿಲ್ಲ; ಆದರೆ ನೀನು ಹೇಳುವದರಿಂದ ಸುಳ್ಳೆನ್ನಲಿಕ್ಕೂ ಬಾರದಹಾಗಿದೆ; ಆದರೆ ಹೇಳು. ಬೇಗನೆ ಹೇಳು. ನಿನ್ನನ್ನು ಅಪಹರಿಸಿದ ಆ ನೀಚ ಸರದಾರನ ಹೆಸರೇನು ಬೇಗನೆ ಹೇಳು.

ನೂರಎಲ್‌ಹುದೆ—ಅಪ್ಪಾ. ನನ್ನ ಛಾವಣಿಯಿಂದ ನನ್ನನ್ನು ಸಾಗಿಸಿಕೊಂಡು ಹೋಗುವಾಗ, ನನ್ನನ್ನು ಯಾರು ಕರಕೊಂಡು ಹೋಗುತ್ತಿರುವರೆಂಬದರ ಗೊತ್ತೇ ನನಗಾಗಲಿಲ್ಲ. ನನ್ನನ್ನು ಮರಾಟರೇ ಒಯ್ಯುತ್ತಿರಬಹುದುದೆಂದು ನಾನು ತಿಳಿದೆನು. ಆ ದುಷ್ಟ ಅಬದುಲ್ಲಾನಾದರೂ ಹಾಗೆಯೇ ನನ್ನ ಮುಂದೆ ಹೇಳುತ್ತ ಬಂದಿದ್ದನು; ಆದರೆ ರಜಪೂತರ ಕಾವಲಿನ ಲಕ್ಷಣವನ್ನು ನೋಡಿ ನನಗೆ ಪರಮಾಶ್ಚರ್ಯವಾಯಿತು. ಹೀಗೆ

ಸಂಶಯದಲ್ಲಿ ನಾನಿರುವಾಗ ಔರಂಗಾಬಾದದ ಸಮೀಪಕ್ಕೆ ನನ್ನ ಮೇಣೆಯು ಹೋಗಿರ ಬಹುದು; ಅಷ್ಟರಲ್ಲಿ ಮರಾಟರದೊಂದು ಗುಂಪು ನಮ್ಮನ್ನು ಮುತ್ತಿತು. ಆ ಗುಂಪಿನ ಮುಖ್ಯನ ಹೆಸರು ಏಸಾಜಿಯು. ಆ ಪುಣ್ಯವಂತನು ತನ್ನ ಜನರೊಡನೆ ನಮ್ಮನ್ನು ಮುತ್ತಿದಕೂಡಲೆ ಆತನು ಗಟ್ಟಿಗಟ್ಟಿಸಿ ಮಾತಾಡಿದ್ದೇನೆಂದರೆ—''ದುಷ್ಟಾ, ದುರ್ಜಯಾ, ಶಹಾಜಾದಾನ ಮನಸ್ಸು ಒಲಿಸಿಕೊಳ್ಳುವದಕ್ಕಾಗಿ ಖಾನಸಾಹೇಬರನ್ನು ವಂಚಿಸಿ, ಅವರ ಮಗಳನ್ನು ಅಪಹರಿಸಿ ಕೊಂಡು ಬಂದು, ಸ್ತ್ರೀಯ ಅಪಹರಣದ ನೀಚವಾದ ಅಪವಾದಕ್ಕೆ ಮರಾಟರನ್ನು ಗುರಿ ಮಾಡಿದಿಯಾ? ನಮ್ಮ ಮಹಾರಾಜರು ಪರನಾರೀ ಸೋದರರೆಂಬುದನ್ನು ಅರಿಯೆಯಾ? ನಿನ್ನ ಮಹಾಪರಾಧದ ಪ್ರಾಯಶ್ಚಿತ್ತವನ್ನು ಭೋಗಿಸು,'' ಎಂದು ನುಡಿಯುತ್ತಿರಲು, ಉಭಯ ಪಕ್ಷದವರಲ್ಲಿ ಕಲಹವು ಉತ್ಪನ್ನವಾಯಿತು. ಏಸಾಜಿಯ ಈ ಮಾತನ್ನು ಕೇಳಿ ರಜಪೂತ ಕಾವಲುಗಾರರು ದುರ್ಜಯಸಿಂಗನನ್ನು ನಿಷೇಧಿಸಿದಂತೆ ತೋರಿತು; ಯಾಕಂದರೆ, ಅವರು ಮೊದಲು ಮರಾಟರೊಡನೆ ಕಾದದಾದರು. ಕಡೆಗೆ ದುರ್ಜಯಸಿಂಗನು ಏನೇನೋ ಹೇಳಿ ಅವರನ್ನು ಕಾದಹಚ್ಚಿದನು; ಆದರೆ ಶುದ್ಧ ಮನಸ್ಸಿನ ಮರಾಟರಿಗೆ ನೀಚ ದುರ್ಜಯ ಸಿಂಗನು ಈಡಾಗುವನೇ? ಅಬದುಲ್ಲಾನು ಕಾಳಗದಲ್ಲಿ ಮರಣಹೊಂದಿದನು. ಕೆಲವರು ರಜಪೂತರು ಮಡಿದರು, ಕೆಲವರು ಓಡಿಹೋದರು. ಕಡೆಗೆ ದುರ್ಜಯಸಿಂಗನೂ ಮರಾಟರ ಕೈಮೀರಿ ಹೋದಂತೆ ತೋರಿತು.

ದಿಲೇರಖಾನ—ಏನಂದಿ? ದುರ್ಜಯಸಿಂಗನು ನಿನ್ನನ್ನು ಅಪಹರಿಸಿದನೇ? ಎಲಾ ದುಷ್ಟಾ, ದುರ್ಜಯಾ, ನಿನಗೆ ದಿಲೇರನ ಭಯವು ಇಲ್ಲದಾಯಿತೇ? ನಿನ್ನ ನೀಚತನವೆಲ್ಲ ಈಗ ನನ್ನ ಮನಸಿನಲ್ಲಿ ಬಂದಿತು. ಬೇಟಾ, ಮೇರಾ ನೂರ, ನಿನ್ನನ್ನು ಮರಾಟರು ಎತ್ತ ಕರೆದೊಯ್ದರು?

ನೂರಏಲ್‌ಹುದಾ—ಅಪ್ಪಾ, ನನ್ನನ್ನು ಮರಾಟರು ಬೋರಗಾವೆಂಬ ಊರಲ್ಲಿ ಒಂದು ದೊಡ್ಡ ಪ್ರಾಸಾರದಲ್ಲಿ ಇಟ್ಟರು. ಅಲ್ಲಿ ನನಗೆ ಯಾತರ ಕೊರತೆಯೂ ಇದ್ದಿಲ್ಲ. ಒಬ್ಬ ರಾಜಪುತ್ರಿಯಂತೆ ಅಲ್ಲಿ ನಾನು ಇದ್ದೆನು. ನನ್ನ ಯೋಗಕ್ಷೇಮವನ್ನು ಒಬ್ಬ ಕುಲೀನ ಮನೆತನದ ಮರಾಠಾ ಸ್ತ್ರೀಯು ಹಲವು ಜನ ದಾಸಿಯರ ಸಹಾಯದಿಂದ ಉತ್ತಮರೀತಿ ಯಿಂದ ವಿಚಾರಿಸುತ್ತಲಿದ್ದಳು. ಅಪಮಾನದ ಒಂದು ಶಬ್ದವಾದರೂ ನನ್ನ ಕಿವಿಗೆ ಬೀಳಲಿಲ್ಲ. ಯೋಗ್ಯ ಪ್ರಸಂಗ ನೋಡಿ ನಿಮ್ಮನ್ನು ನಿಮ್ಮ ತಂದೆಯ ಬಳಿಗೆ ನಮ್ಮ ಮಹಾರಾಜರು ಕಳಿಸುವರೆಂದು ಆ ಕುಲೀನಸ್ತ್ರೀಯು ನನಗೆ ಮೇಲೆ ಮೇಲೆ ಹೇಳುತ್ತಲಿದ್ದಳು.

ಮಗಳ ಈ ಮಾತುಗಳನ್ನು ಕೇಳಿ ದಿಲೇರಖಾನನು ಆಶ್ಚರ್ಯಚಕಿತನಾದನು. ಪರಸ್ತ್ರೀಯರ ಸಂಬಂಧದ ಮರಾಟರ ಕೀರ್ತಿಯ ಸತ್ಯತೆಯು ಆಗ ಆತನಿಗೆ ತೋರಹತ್ತಿತು. ಶಹಾಜಾದಾಮು ಅಝೀಮನು ಅಂತರಂಗದಲ್ಲಿ ಶಿವಾಜಿಗೆ ಅನುಕೂಲನಾಗಿರುವನೆಂಬದು ಬಾದಶಹರವರಿಗೆ ಗೊತ್ತಾಗ್ಗಿರುವದಷ್ಟೆ? ಈಗ ಶಿವಾಜಿಯು, ಅಲ್ಲ, ಅಲ್ಲ ಶಿವಾಜಿ ಮಹಾರಾಜನು ನನ್ನ ಮಗಳನ್ನು ಶಹಾಜಾದಾನಿಗೆ ಒಪ್ಪಿಸಿ ಆತನ ಮನಸ್ಸನ್ನು ಒಲಿಸಿಕೊಂಡು

ಅವನ ಸಹಾಯಪಡೆಯಲು ಯತ್ನಿಸಲಿಕ್ಕೆ ಏನು ಬಾಧಕವಿತ್ತು? ಆದರೆ ಆ ನೀಚ ವಿಚಾರಮಾಡದೆ ನನ್ನ ಮಗಳನ್ನು ಈ ಪರಿಯ ಗೌರವದಿಂದ ರಕ್ಷಿಸಿದ ಶಿವಾಜಿರಾಜನ ಉದಾರಮನಸ್ಸನ್ನು ಎಷ್ಟೆಂದು ವರ್ಣಿಸಬೇಕು? ಯಾ ಅಲ್ಲಾ! ಇಂಥ ಸದ್ಗುಣಯೋಗದಿಂದಲೇ ಆ ಮರಾಠಾವೀರನು ಈವರೆಗೆ ಜಯಶಾಲಿಯಾಗುತ್ತಾ ಬಂದಿರುತ್ತಾನೆ, ಮುಂದೆ ಯಾರೂ ಆತನನ್ನು ಅಪಜಯವು ಸೋಂಕದು! ಎಂದು ಶಿವರಾಯನನ್ನು ಶ್ಲಾಘಿಸುತ್ತಿರಲು, ತಂದೆಯ ಮನಸ್ಸಿನೊಳಗಿನ ವಿಚಾರವನ್ನು ತಿಳಕೊಂಡು ಮಾತಾಡಿದಳೋ ಅನ್ನುವಂತೆ ನೂರಎಲ್‌ಹುದೆಯು ತಂದೆಯನ್ನು ಕುರಿತು—ಅಪ್ಪಾ, ಯುದ್ಧಪ್ರಸಂಗದಲ್ಲಿ ಮರಾಟರು ನಿನ್ನ ಸಂಗಡ ಬೇಕಾದಷ್ಟು ಕಳ್ಳತನದಿಂದ ನಡಕೊಳ್ಳಲಿ, ನಿನಗೆ ಬೇಕಾದಹಾಗೆ ವಿಶ್ವಾಸಘಾತ ಮಾಡಲಿ; ಆದರೆ ನಮ್ಮಂಥ ಹೆಂಗಳೆಯರ ಸಂಬಂಧದಿಂದ ಅವರು ಕಳ್ಳರೂ, ವಿಶ್ವಾಸ ಘಾತಕರೂ ಸರ್ವಥಾ ಇರುವದಿಲ್ಲ. ಶಿವರಾಯನ ದೊಡ್ಡಿಸ್ತನವಾದರೂ ಎಷ್ಟದು! ಆತನಲ್ಲಿ ಸೌಜನ್ಯವಾದರೂ ಎಷ್ಟಿದ್ದೀತು! ಒಂದು ದಿನವಾದರೂ ಆ ಮಹಾತ್ಮನು ನಾನಿರುವ ಊರ ಸನಿಯಕ್ಕೆ ಸುಳಿಯಲಿಲ್ಲ, ಇಷ್ಟು ದಿವಸಗಳಲ್ಲಿ ಗಂಡಸರ ದನಿಯು ನನ್ನ ಕಿವಿಗೆ ಬೀಳಲಿಲ್ಲ! ನನ್ನ ಸೇವೆಗಾಗಿ ಇಟ್ಟಿದ್ದ ಸ್ತ್ರೀಯರು ಯಾವಾಗಲೂ ನನಗೆ—ಅಮ್ಮಾ ನೀವು ನಿಶ್ಚಿಂತೆಯಿಂದ ನಿಮ್ಮ ತಂದೆಯ ಬಳಿಯಲ್ಲಿ ಇದ್ದಂತೆ ಇರ್ರಿ. ನಮ್ಮ ಮಹಾರಾಜರಿಗೆ ಪರಸ್ತ್ರೀಯರು ತಾಯಿಯ ಸಮಾನ, ಇಲ್ಲವೆ ಅಕ್ಕ–ತಂಗಿಯರ ಸಮಾನ! ಅವರು ನೀವಿರುವ ಮಂದಿರದಲ್ಲಿ ಕಾಲಿಡರು. ಯಾರಾದರೂ ಗಂಡಸರು ಕಾಲಿಟ್ಟರೆ, ಅವರನ್ನು ನಿಲ್ಲಿಸಿ ಚಂಡಾಡುವರೆಂಬ ಭಯವು ಎಲ್ಲರಿಗೂ ಇರುತ್ತದೆ! ಎಂದು ಹೇಳುತ್ತಿದ್ದರು. ನನಗೆ ಮೊದಲು ಒಂದೆರಡು ದಿನ ನಿದ್ದೆಬರಲಿಲ್ಲ; ಆದರೆ ಮುಂದೆ ನನಗೆ ಗಡದ್ದು ನಿದ್ದೆ ಹತ್ತುತ್ತಿತ್ತು. ಅಪ್ಪಾ, ಮಹಾರಾಜರು ದಿನಾಲು ನನಗೆ—"ನೀವು ಸ್ವಲ್ಪವೂ ಚಿಂತೆಮಾಡಬೇಡಿರಿ. ಯೋಗ್ಯ ಪ್ರಸಂಗ ನೋಡಿ ನಿಮ್ಮನ್ನು ನಿಮ್ಮ ತಂದೆಯ ಬಳಿಗೆ ಕಳಿಸುವೆನು. ಖಾನಸಾಹೇಬರ ಮಗಳು ನನ್ನ ಮಗಳು!" ಎಂದು ಹೇಳಿ ಕಳಿಸಿಕೊಡುತ್ತಿದ್ದರು.

ಮಗಳ ಈ ಮಾತುಗಳನ್ನು ಕೇಳಿ ಖಾನನ ಕಂಠವು ಗದ್ಗದಿತವಾಯಿತು, ಆತನ ಕಣ್ಣೀರುಗಳುದುರಿದವು. ಆತನು— "ಅಹಹ! ಇಂಥ ಶಿವರಾಯನ ದ್ರೋಹವನ್ನು ನಾನು ಚಿಂತಿಸುತ್ತಿದ್ದೆನಲ್ಲ! ಆತನಿಗೆ ಎಂಥ ದುಷ್ಟಮಾತುಗಳನ್ನಾಡಿದೆನು! ಆತನು ದೊಡ್ಡ ಮನಸ್ಸಿನಿಂದ ನನ್ನನ್ನು ಎದುರುಗೊಂಡರೂ ನಾನು ಸಿಟ್ಟಿನಿಂದ ಆತನೊಡನೆ ನೆಟ್ಟಗೆ ಮಾತು ಸಹ ಆಡಲಿಲ್ಲ! ಆಗಲಿ, ಶಿವರಾಯನ ಈ ಉಪಕಾರವನ್ನು ಹ್ಯಾಗಾದರೂ ತೀರಿಸುವೆನು," ಎಂದು ಮನಸ್ಸಿನಲ್ಲಿ ಅಂದುಕೊಂಡು ಕಣ್ಣು ಒರಿಸಿಕೊಳ್ಳುತ್ತ ಮಗಳ ಅನುಮತಿಯಿಂದ ಆತನು ಹೊರಗೆ ಬಂದನು. ಆಗ ಆತನ ಮುಖಮುದ್ರೆಯಲ್ಲಿ ದೀನತೆಯು ತೋರುತ್ತಿತ್ತು, ಆತನು ಬಹು ಕೃತಜ್ಞತೆಯಿಂದ ಮಹಾರಾಜರನ್ನು ಕುರಿತು— "ಶಿವರಾಜರೇ, ನಾನು ನಿಮಗೆ ಅತ್ಯಂತ ಕೃತಜ್ಞನಾಗಿರುವೆನು. ಏನುಮಾಡಿದರೂ ನಿಮ್ಮ ಉಪಕಾರದ ಹೊರೆಯು ತೀರಲಾರದು. ಆಗಲಿ, ಈಗ ಬಹಳ ಮಾತಾಡುವದರಿಂದ ಪ್ರಯೋಜನವೇನು? ಈಗ ನೀವು ಮಿರ್ಝಾ ರಾಜರ ಕರಾರುಗಳಂತೆ ಒಡಂಬಡಿಕೆಯನ್ನು ನಿಶ್ಶಂಕೆಯಿಂದ ಮಾಡಿಕೊಳ್ಳಿರಿ. ಈಗ ಮಾಡಿರುವ

ಕರಾರುಗಳಲ್ಲಿ ಯಾವದಾದರೂ ನಿಮಗೆ ಬಾಧಕವಾಗಿ ತೋರಿದರೆ, ಮಿರ್ಝಾರಾಜರಿಗೆ ಹೇಳಿ ಅದನ್ನೂ ತೆಗಿಸಿಬಿಡುವೆನು,'' ಎಂದು ಹೇಳಿದನು. ಹೀಗೆ ಸೌಜನ್ಯದ ಸಾಮ್ರಾಜ್ಯದಲ್ಲಿ ಎಲ್ಲರೂ ಶತ್ರುಭಾವವನ್ನು ಮರೆತು ಪರಮಮಿತ್ರರಾಗಿ ಆನಂದಪಟ್ಟರು. ಆ ಆನಂದದ ಭರದಲ್ಲಿಯೇ ಒಂಡಬಡಿಕೆಯ ಕೆಳಗಿನ ಕರಾರುಗಳು ಸರ್ವಸಮ್ಮತಿಯಿಂದ ನಿರ್ಧರಿಸಲ್ಪಟ್ಟವು. ಸುರತಸಿಂಗ ಕಚ್ಛವಾ, ಹಾಗು ಉದೇರಾಜ ಮುನಸಿ ಇವರು ಒಡಂಬಡಿಕೆಯ ಕೆಲಸವು ಜರಗುವಾಗ ಮಧ್ಯಸ್ಥರಾಗಿದ್ದರು. ಆ ಕರಾರುಗಳು ಯಾವವೆಂದರೆ—

1. ಸ್ವರಾಜ್ಯದೊಳಗಿನ ಸಣ್ಣ ದೊಡ್ಡ 23 ದುರ್ಗಗಳೂ, ಅವುಗಳ ಸುತ್ತುಮುತ್ತಲಿನ ನಾಲ್ಕು ಲಕ್ಷ ಹೊನ್ನಿನ ಪ್ರದೇಶವೂ ಬಾದಶಹರ ರಾಜ್ಯದಲ್ಲಿ ಕೂಡತಕ್ಕದ್ದು. ರಾಯಗಡ ಸಹಿತವಾಗಿ ಸಣ್ಣ ದೊಡ್ಡ 12 ದುರ್ಗಗಳೂ, ಅವುಗಳ ಸುತ್ತಲಿನ ಒಂದು ಲಕ್ಷಹೊನ್ನಿನ ಪ್ರದೇಶವೂ ಮಹಾರಾಜರ ಸ್ವಾಧೀನದಲ್ಲಿರಬೇಕು. ಈ ಪ್ರದೇಶವನ್ನು ಮಹಾರಾಜರು ಬಾದಶಹನ ನೌಕರರೆಂದು ಉಪಭೋಗಿಸಬೇಕು.

2. ಮಹಾರಾಜರ ಹೆಸರಿನಿಂದ ಐದುಸಾವಿರ ಮನಸಬದಾರಿಯನ್ನು ಬಾದಶಹ ರಿಂದ ಸಂಪಾದಿಸಿ ಕೊಡತಕ್ಕದ್ದು.

3. ವಿಜಾಪುರದ ಯುದ್ಧದಲ್ಲಿ ಮಹಾರಾಜರು ಬಾದಶಹನಿಗೆ ಸಹಾಯ ಮಾಡಬೇಕು.

ಮಹಾರಾಜರಿಗೆ ಈ ಕಲಮುಗಳೆಲ್ಲ ಸಮ್ಮತವಾದವು; ಆದರೆ ಬಾದಶಹನ ನೌಕರಿಗಾಗಿ ಐದುಸಾವಿರದ ಮನಸಬದಾರಿಯನ್ನು ಸಂಪಾದಿಸುವದು ಅವರ ಮನಸ್ಸಿಗೆ ಬರಲಿಲ್ಲ; ಆದ್ದರಿಂದ ಅವರು ಜಯಸಿಂಗನಿಗೆ— ''ನಾನು ಒಡಂಬಡಿಕೆಗೆ ಒಪ್ಪಿದ್ದರಿಂದ ಬಾದಶಹನ ಬಂದಾಗುಲಾಮನಾದಂತಾಯಿತು. ಇನ್ನು ಮತ್ತೆ ನೌಕರನೆಂದು ಒಪ್ಪಿಸಿಕೊಳ್ಳುವ ದರಲ್ಲಿ ವಿಶೇಷವೇನು? ಐದು ಸಾವಿರದ ಮನಸಬದಾರಿಯು ನನಗೆ ಬೇಡ. ನನ್ನ ಮಗ ಸಂಭಾಜಿರಾಜನನ್ನು ನಿಮ್ಮ ಸಂಗಡ ಕಳಿಸುವೆನು, ಆತನಿಗೆ ಬಾದಶಹರಿಂದ ಮನಸಬ ದಾರಿಯನ್ನು ಕೊಡಿಸಿರಿ. ಇದಕ್ಕೂ ಹೆಚ್ಚು ನಾನೇನು ಹೇಳುವದು?'' ಅನ್ನಲು; ಜಯಸಿಂಗನೂ, ದಿಲೇರಖಾನನೂ ಅದಕ್ಕೆ ಒಪ್ಪಿಕೊಂಡರು. ಇದರಿಂದ ತಾವು ಆದಷ್ಟು ಮಟ್ಟಿಗೆ ಬಾದಶಹನ ನೌಕರರೆನಿಸಬಾರದೆಂಬ ಮಹಾರಾಜರ ಮನೋದಯವು ಸಾಧಿಸಿದಂತಾಗಿ, ಅವರಿಗೆ ಬಹಳ ಸಮಾಧಾನವಾಯಿತು. ಹೀಗೆ ಅವರು ಆನಂದದಲ್ಲಿರುವಾಗ ಮಿರ್ಝಾರಾಜನು ತನ್ನಲ್ಲಿರುವ ಮಹಾರಾಜರ ಕಡೆಯ ಇಬ್ಬರು ಸೆರೆಯಾಳನ್ನು, ಅಂದರೆ ಜೋಯಿಸನನ್ನೂ, ಕೊಂಗನನ್ನೂ ಮಹಾರಾಜರಿಗೆ ಪ್ರತಿಕಾಣಿಕೆಯಾಗಿ ಒಪ್ಪಿಸಿದನು. ಆ ವೇಷಧಾರಿಗಳಿಬ್ಬರು ಕ್ರಮವಾಗಿ ಶ್ರೀಧರಸ್ವಾಮಿಯೂ, ತಾನಾಜಿಯೂ ಆಗಿದ್ದು ಅವರು ನಾಚಿಕೆಯಿಂದ ತಲೆಬಾಗಿಸಿದ್ದರು! ಕಾಲಮಹಿಮೆಯಿಂದ ಜಾಣರು ದಡ್ಡರೂ, ದಡ್ಡರು ಜಾಣರೂ ಆಗುತ್ತಾರೆಂಬ ಮಾತು ಸುಳ್ಳಲ್ಲ

# ದಿಲ್ಲಿಗೆ ಪ್ರಯಾಣ

ಈ ಮೇರೆಗೆ ಒಡಂಬಡಿಕೆಯ ಕರಾರುಗಳನ್ನು ಮುಗಿಸಿಕೊಂಡು ಮಹಾರಾಜರು ಪರಿವಾರದೊಡನೆ ರಾಯಗಡದ ಕಡೆಗೆ ನಡೆದರು. ತಾನಾಜಿಯೂ, ಶ್ರೀಧರಸ್ವಾಮಿಗಳೂ ನಾಚಿಕೆಯಿಂದ ತಲೆಬಾಗಿಸಿಕೊಂಡು ಅವರನ್ನು ಹಿಂಬಾಲಿಸಿದ್ದರು. ಮಹಾರಾಜರಿಗೆ ಪರಮಾವಧಿ ವ್ಯಸನವಾಗಿತ್ತು, ಅವರು ಯಾರ ಸಂಗಡಲೂ ಮಾತಾಡುತ್ತಿದ್ದಿಲ್ಲ! ಅದರಿಂದ ತಾನಾಜಿಗೂ, ಶ್ರೀಧರಸ್ವಾಮಿಗಳಿಗೂ ಮತ್ತಿಷ್ಟು ವ್ಯಸನವಾಯಿತು. ಮಹಾರಾಜರು ತಮ್ಮ ಮೇಲೆ ಬಹಳ ಸಿಟ್ಟಾಗಿರುವದರಿಂದಲೇ ತಮ್ಮ ಸಂಗಡ ಮಾತಾಡುವದಿಲ್ಲೆಂದು ಅವರು ತಿಳಕೊಂಡರು; ಆದರೆ ಮಹಾರಾಜರು ಸುಮ್ಮನೆ ಇರುವ ಕಾರಣವು ಬೇರೆಯೇ ಆಗಿತ್ತು. ತಮ್ಮ ಕೈಮುಟ್ಟಿ ಬೆಳಿಸಿದ ಸ್ವರಾಜ್ಯವೃಕ್ಷವನ್ನು ತಮ್ಮ ಕೈಮುಟ್ಟಿ ಛೇದಿಸುವ ಪ್ರಸಂಗ ಒದಗಿದ್ದರಿಂದ ಅವರಿಗೆ ಬಹಳ ವ್ಯಸನವಾಗಿ, ಒಬ್ಬರ ಸಂಗಡ ಮಾತುಬೇಡ, ಕಥೆಬೇಡ ಅನ್ನುವಹಾಗೆ ಅವರಿಗೆ ಆಗಿತ್ತು. ತಾವು ಇನ್ನು ರಾಯಗಡಕ್ಕೆ ಇಪ್ಪತ್ತೇಳು ಜನ ದುರ್ಗರಕ್ಷಕರಿಗೆ ತಮ್ಮ ತಮ್ಮ ದುರ್ಗಗಳನ್ನು ಮೊಗಲರಿಗೆ ಬಿಟ್ಟುಕೊಡುವದಕ್ಕಾಗಿ ಪತ್ರ ಬರೆಯಲಿಕ್ಕೆ ಹೋಗುತ್ತೇವೆಂಬ ಸ್ಮರಣವಾಗಿಯಂತು ಅವರಿಗೆ ಮರಣಪ್ರಾಯ ದುಃಖವಾಗಿ ಅವರ ದೇಹದಲ್ಲಿ ಕಂಪವುಂಟಾಯಿತು; ಅವರು ಒಂದೇಸವನೆ ಉಸರ್ಗಳೆಯಹತ್ತಿದರು. ಆಗುವದೆಲ್ಲ ನಿನ್ನ ಹಿತಕ್ಕಾಗಿಯೇ ಆಗತ್ತದೆಂದು ಅಂಬಾಭವಾನಿಯು ಅವರಿಗೆ ಹೇಳಿದಳು; ಸಮರ್ಥರೂ ಹೇಳಿದ್ದರು; ಜೀಜಾಬಾಯಿ ಸಾಹೇಬರೂ ಹೇಳಿದ್ದರು; ಆದರೆ ಬರಿಯ ವೇದಾಂತ ಶ್ರವಣಮಾತ್ರದಿಂದ ದುಃಖದ ಉಪಶಮನವಾಗದಿರುವಂತೆ, ಮಹಾರಾಜರ ಕಣ್ಣಿಗೆ ಕಟ್ಟಿದ್ದ ಸ್ವರಾಜ್ಯನಾಶದ ದುಃಖದ ಉಪಶಮನವು ಇವರೆಲ್ಲರ ಹೇಳಿಕೆಯಿಂದ ಆಗದೇ ಹೋಯಿತು. ಅವರು ರಾಯಗಡಕ್ಕೆ ಹೋದ ಬಳಿಕ ಇಪ್ಪತ್ತೇಳುಜನ ದುರ್ಗರಕ್ಷಕರಿಗೆ ಕಣ್ಣೀರು ಸುರಿಸುತ್ತ ಪತ್ರಗಳನ್ನು ಬರೆದು ಕಳಿಸಿದರು. ಪತ್ರ ಬರೆಯುವ ಕೆಲಸವು ಮುಗಿಯುವವರೆಗೆ ಅವರು ಯಾರ ಸಂಗಡಲೂ ಮಾತಾಡಲಿಲ್ಲ; ಜೀಜಾಬಾಯಿಯವರ ಸಂಗಡಲೂ ಮಾತಾಡಲಿಲ್ಲ; ಅವರಿಗೂ ಮಗನನ್ನು ಮಾತಾಡಿಸುವ ಧೈರ್ಯವಾಗಲಿಲ್ಲ; ಹೀಗೆ ಮಹಾರಾಜರು ಒಮ್ಮೆ ಪತ್ರವನ್ನು ಬರೆದು ಕಳಿಸಿದಬಳಿಕ, ತಮ್ಮ ಎಲ್ಲ ಸ್ಥಿತಿಯನ್ನು ಮನಸ್ಸಿನಲ್ಲಿ ತಂದುಕೊಂಡರು. ಆಗ ಅವರಿಗೆ ಬಹಳ ಸಂತಾಪವಾಯಿತು. ಇಂದಿಲ್ಲ ನಾಳೆಯಾದರೂ ಇದರ ಸೇಡನ್ನು ತೀರಿಸಿಕೊಳ್ಳದೆ ಬಿಡಲಿಕ್ಕಿಲ್ಲವೆಂದು ಅವರು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡರು. ಮಹಾರಾಜರ ಪರಿವಾರದಲ್ಲಿ ನೆಲೆಗೊಂಡಿದ್ದ ದೊಡ್ಡ ಗುಣವೆಂದರೆ ಆಜ್ಞಾಪಾಲನವು! ಮಹಾರಾಜರ ಪತ್ರಗಳು ಹೋದಬಳಿಕ ಆಯಾ ದುರ್ಗರಕ್ಷಕರು ತಮ್ಮ ತಮ್ಮ ದುರ್ಗಗಳನ್ನು ಮೊಗಲರಿಗೆ ಒಪ್ಪಿಸಿ, ತಾವು ಅಪ್ಪಣೆಯಂತೆ ವರ್ತಿಸಿದ ಬಗ್ಗೆ ವಿನಂತಿ ಮಾಡಿಕೊಳ್ಳುವದಕ್ಕಾಗಿ ಮಹಾರಾಜರ ಬಳಿಗೆ ಬಂದರು. ಆಗ ಮಹಾರಾಜರಿಗೂ, ಆ ದುರ್ಗರಕ್ಷಕರಿಗೂ ಎಷ್ಟು ವ್ಯಸನವಾಗಿರಬಹುದೆಂಬುದನ್ನು ವಾಚಕರೇ ತರ್ಕಿಸಬೇಕು. ಅದನ್ನು

ವರ್ಣಿಸುವದು ನಮ್ಮಿಂದಾಗದು. ತಮ್ಮೆಲ್ಲರ ಪ್ರೀತಿಗೆ ಪಾತ್ರನಾದವನೊಬ್ಬ ಮನುಷ್ಯನನ್ನು ಸುಟ್ಟು ಸ್ಮಶಾನದಿಂದ ಬಂದು ಒಟ್ಟುಗೂಡಿದವರಿಗಾಗುವ ದುಃಖದ ನೂರಾರು ಪಟ್ಟು ಹೆಚ್ಚು ದುಃಖವು ಮಹಾರಾಜರಿಗೂ, ಅವರ ಸ್ವಾಮಿನಿಷ್ಠ ಪರಿವಾರಕ್ಕೂ ಆಗ ಆಯಿತು. ಮಹಾರಾಜರು ಒಡಂಬಡಿಕೆಯ ಕರಾರಿನಂತೆ ತಾವು ಮಾಡತಕ್ಕದ್ದನ್ನೆಲ್ಲ ಮಾಡಿದರು. ಇನ್ನು ಜಯಸಿಂಗನು ತನ್ನ ಕರಾರುಗಳಿಗೆ ಮುಟ್ಟಿಕೊಳ್ಳದೆ ವಿಶ್ವಾಸಘಾತಮಾಡಿದರೆ ತಮ್ಮ ಪರಿಣಾಮ ವಾಗದೆಂದು ಅವರು ಚಿಂತಿಸತೊಡಗಿದರು. ಮನುಷ್ಯನ ಮನಸ್ಸು ಒಮ್ಮೆ ವ್ಯಥಿತವಾಯಿ ತೆಂದರೆ, ಎಡವಿದ್ದೇ ಬಟ್ಟನ್ನೆಡವಿದಂತೆ, ಅದಕ್ಕೆ ಅಷ್ಟಕ್ಕಿಷ್ಟಕ್ಕೆ ವ್ಯಥೆಯಾಗಹತ್ತುತ್ತದೆ. ಆ ಮನುಷ್ಯನನ್ನು ಹಲವು ಪ್ರಕಾರದ ಶಂಕೆಗಳು ಬಾಧಿಸಹತ್ತುವವು. ಇದರಂತೆಯೇ ಮಹಾರಾಜರ ಸ್ಥಿತಿಯಾಗಿತ್ತು ಇತ್ತಿತ್ತ ಮಹಾರಾಜರು ಯಾರ ಸಂಗಡಲೂ ಮನಬಿಚ್ಚಿ ಮಾತಾಡದಾಗಿದ್ದರು. ತಾಯಿಯ ಸಂಗಡಲೂ ಅವರ ಹೆಚ್ಚಿನ ಮಾತುಗಳಿದ್ದಿಲ್ಲ; ಆದರೂ ಅವರು ಕರ್ತವ್ಯ ಪರಾಙ್ಮುಖರಾಗಲಿಲ್ಲ. ಇಷ್ಟು ತಮಗೆ ಅಸಮಾಧಾನವಾಗಿದ್ದರೂ, ಒಡಂಬಡಿಕೆಯದೊಂದು ಕರಾರಿನಂತೆ ಮೊಗಲರ ಪಕ್ಷದಿಂದ ವಿಜಾಪುರದವರೊಡನೆ ಕಾದುವಲ್ಲಿ ಅವರು ಮೈಗಳ್ಳತನ ಮಾಡಲಿಲ್ಲ. ಸ್ವತಃ ಮಹಾರಾಜರೂ, ಪ್ರತಾಪರಾವ ಗುಜ್ಜರೂ, ನೇತಾಜಿ ಪಾಲಕರೂ ಬಹಳ ಪರಾಕ್ರಮವನ್ನು ಪ್ರಕಟಿಸಿ ಮೊಗಲರಿಗೆ ಹಲವು ಜಯಗಳನ್ನು ಒದಗಿಸಿಕೊಟ್ಟರು. ಇದರಿಂದ ವಿಜಾಪುರದವರ ಹಲವು ಕೋಟೆಗಳೂ, ಪ್ರದೇಶಗಳೂ ಮೊಗಲರ ಕೈಸೇರಿದವು. ಇದಕ್ಕಾಗಿ ಜಯಸಿಂಗನು ಬಾದಶಹನ ಕಡೆಗೆ ಮಹಾರಾಜರ ಸಂಬಂಧದಿಂದ ಮತ್ತೊಂದು ಶಿಫಾರಸ್ಸು ಪತ್ರವನ್ನು ಬರೆದು ಕಳಿಸಿದನು. ಇದಕ್ಕೂ ಮೊದಲು ಒಡಂಬಡಿಕೆಯಾದ ಬಳಿಕ ಎಲ್ಲ ವೃತ್ತಾಂತ ವನ್ನು ಸವಿಸ್ತಾರವಾಗಿ ಬರೆದು, ಮಹಾರಾಜರ ಮೇಲೆ ಮೆಹರ್ಬಾನಿಗೆ ಮಾಡುವದಕ್ಕಾಗಿ ಆತನು ಒಂದು ಪತ್ರವನ್ನು ಬಾದಶಹನಿಗೆ ಬರೆದು ಕಳಿಸಿದ್ದನು. ಶಿವಾಜಿಯ ಮಲತಮ್ಮಂದಿರಾದ ವೆಂಕೋಜಿರಾಯರು ವಿಜಾಪುರದ ಬಾದಶಹನ ಪಕ್ಷದವರಾಗಿದ್ದರು. ಈಗ ಮಹಾರಾಜರು ಮೊಗಲರ ಪಕ್ಷಗಟ್ಟಿ ವಿಜಾಪುರದವರೊಡನೆ ಕಾದಹತ್ತಿದ್ದರಿಂದ, ತಮ್ಮ ತಮ್ಮಂದಿರೊಡನೆ ಕಾದುವ ಪ್ರಸಂಗವು ಮಹಾರಾಜರಿಗೆ ಬಂದೊದಗಿತ್ತು; ಆದರೆ ಅಷ್ಟರಲ್ಲಿ ಜಯಸಿಂಗನ ಸವಿಸ್ತರ ಪತ್ರಕ್ಕೆ ಬಾದಶಹನು ಬರೆದು ಕಳಿಸಿದ ಉತ್ತರವು ಜಯಸಿಂಗನಿಗೆ ಮುಟ್ಟಿದ್ದ ರಿಂದ, ಈ ಯುದ್ಧಪ್ರಸಂಗವು ಅಷ್ಟಕ್ಕೆ ನಿಂತುಹೋಯಿತು.

ತಾನು ದಕ್ಷಿಣಕ್ಕೆ ದಂಡೆತ್ತಿಬಂದ ಕಾರ್ಯವು ಉತ್ತಮರೀತಿಯಿಂದ ಸಾಧಿಸಿದ್ದಕ್ಕಾಗಿ ಜಯಸಿಂಗನಿಗೆ ಬಹಳ ಸಂತೋಷವಾಗಿತ್ತು. ಬಹು ಜನರು ಮಾಡುತ್ತೇವೆ ಮಾಡುತ್ತೇವೆಂದು ಬಂದು, ಕೈ ಊರಿದ ಕಾರ್ಯವನ್ನು ತಾನು ಸಂಪೂರ್ಣವಾಗಿ ಸಾಧಿಸಿದ್ದರಿಂದ ಬಾದಶಹನು ಬಹು ಸಂತುಷ್ಟನಾಗುವನೆಂದು ಮಿರ್ಝಾರಾಜನು ತಿಳಿದಿದ್ದನು. ಸ್ವರ್ಗವು ಆತನಿಗೆ ಮೂರೇ ಗೇಣು ಉಳಿದಂತಾಗಿತ್ತು. ತಾನು ಮಾಡಿದ ಒಡಂಬಡಿಕೆಯ ಕರಾರುಗಳನ್ನು ಸಂಪೂರ್ಣವಾಗಿ ನಡೆಸಿಕೊಟ್ಟರೆ, ತನ್ನ ಗೌರವವನ್ನು ಕಾದಂತಾಗುತ್ತದೆಂದು ಮಿರ್ಝಾರಾಜನು ಬಾದಶಹನಿಗೆ ಬಹು ವಿನಯದಿಂದ ಅಂಗಲಾಚಿ ಬೇಡಿಕೊಂಡಿದ್ದನು. ಔರಂಗಜೇಬ ಬಾದಶಹನ ದುಷ್ಟ ಸ್ವಭಾವವು ಎಲ್ಲರಿಗೂ ಗೊತ್ತಿತ್ತು. ಬಾದಶಹನು ತನ್ನ ಮೇಲೆ ಬಹಳ ನಂಬಿಗೆಯಿಟ್ಟಂತೆ

ತೋರಿಸುತ್ತಿದ್ದರೂ ಕಾರ್ಯಸಾಧನದ ಪ್ರಸಂಗ ಒದಗಿದಾಗ ನಂಬಿಗೆಗಿಂಬಿಗೆಗಳನ್ನು ಬದಿಗೊತ್ತಿ ಮನಬಂದಂತೆ ನಡೆಯಲು, ಆತನು ಹಿಂದೆಮುಂದೆ ನೋಡುವವನಲ್ಲೆಂದು ಮಿರ್ಝಾರಾಜನು ಸಂಪೂರ್ಣವಾಗಿ ತಿಳಿದಿದ್ದನು. ತಾನು ಬಾದಶಹನಿಗೆ ಅಷ್ಟು ಹೇಳಿಕೊಂಡು ಪತ್ರ ಬರೆದಿದ್ದರೂ ಬಾದಶಹನು ಏನು ಉತ್ತರ ಬರೆಯುವನೋ ಎಂದು ಜಯಸಿಂಗನು ಶಂಕಿಸುತ್ತಲೇ ಇದ್ದನು. ಮೇಲೆ ಹೇಳಿದಂತೆ ಬಾದಶಹನಿಂದ ಉತ್ತರಬರಲು, ಅದನ್ನು ಓದಿ ಮಿರ್ಝಾರಾಜನಿಗೆ ಸಮಾಧಾನವಾದಂತಾಯಿತು. ಕೂಡಲೇ ಆತನು ಮಹಾರಾಜನಿಗೆ— ''ಬಾದಶಹರಿಂದ ಪತ್ರ ಬಂದಿರುವದು. ಅವರು ನಮ್ಮ ಕರಾರುಗಳನ್ನೂ, ಸಿಫಾರಸನ್ನೂ ಸಂಪೂರ್ಣವಾಗಿ ಒಪ್ಪಿಕೊಂಡಿರುತ್ತಾರೆ; ಆ ಸಂಬಂಧದಿಂದ ನಿಮ್ಮೊಡನೆ ಆಲೋಚಿಸ ಬೇಕಾಗಿದೆ; ಬಂದು ಹೋಗಬೇಕು'' ಎಂದು ಪತ್ರ ಬರೆದು ಕಳಿಸಿದನು. ಹೀಗೆ–ಪರಾಧೀನ ರಾಗಿ ಎಡತಾಕುವ ಪ್ರಸಂಗವು ಮಹಾರಾಜರಿಗೆ ಇದೇ ಹೊಸದಾದ್ದರಿಂದ, ಅವರಿಗೆ ಜಯಸಿಂಗನಿಂದ ಪತ್ರ ಬಂದಾಗೆಲ್ಲ ಮನಸ್ಸಿಗೆ ಬಹಳ ವ್ಯಥೆಯಾಗುತ್ತಿತ್ತು. ಆದರೆ ಬರಿಯ ವ್ಯಥೆಯಾಗಿ ಮಾಡುವದೇನು? ಹೋಗದಿದ್ದರೆ ನಿರ್ವಾಹವೇ ಇದ್ದಿಲ್ಲ. ''ತಮ್ಮ ಪ್ರಾಣವನ್ನು ಉಳಿಸಿಕೊಳ್ಳಬೇಕು, ಸ್ವರಾಜ್ಯವೃಕ್ಷದ ಬೇರುಗಳನ್ನು ಒಣಗಗೊಡಬಾರದು'' ಎಂದು ಮಹಾರಾಜರು ನಿಶ್ಚಯಿಸಿದ್ದರು; ಆದ್ದರಿಂದ ಮಾನಾಪಮಾನಗಳ ಕಡೆಗೆ ಲಕ್ಷಗೊಡದೆ ಅವರು ಜಯಸಿಂಗನ ಬಳಿಗೆಹೋದರು. ಆಗ ಮಿರ್ಝಾರಾಜನು ಬಾದಶಹನ ಪತ್ರವನ್ನು ಓದಿ ತೋರಿಸಿದನು. ಪತ್ರ ಬರೆಯುವಲ್ಲಿ ಔರಂಗಜೇಬನು ಪ್ರಸಿದ್ಧನೇ ಇದ್ದನು. ಆತನ ಬರಹವು ಬಹು ಸರಸವಾದದ್ದು. ಬಾದಶಹನ ಪತ್ರದ ಸಂಗತಿಗಳೆಲ್ಲ ಬಹು ಸಮಾಧಾನಕರ ವಾಗಿದ್ದವು. ಅಲ್ಲಲ್ಲಿ ಬಾದಶಹನು ಸಕ್ಕರಿಯ ಚೀಲಗಳನ್ನು ಉರುಳಿಸಿದ್ದನು; ಆದರೆ ಕಟ್ಟಕಡೆಯಲ್ಲಿ ಬರೆದಿದ್ದ ಒಂದು ಸಂಯುಕ್ತ ವಾಕ್ಯದಿಂದ ಸರ್ವ ಚಿತ್ತಾರವನ್ನು ಮಸಿ ನುಂಗಿದಂತಾಗಿತ್ತು. ಆ ವಾಕ್ಯವೆಂದರೆ— ''ಒಡಂಬಡಿಕೆಯ ಕಲಮುಗಳೆಲ್ಲ ಶಿವಾಜಿಯು ಇಲ್ಲಿಗೆ (ದಿಲ್ಲಿಗೆ) ಬಂದರೆ ಮಾನ್ಯವಾಗುವವು; ಮತ್ತು ಆತನು ತನ್ನ ಮಗ ಸಂಬಾಜಿಯನ್ನು ಇಲ್ಲಿಗೆ ಕರಕೊಂಡು ಬಂದರೆ ಆತನ ಹೆಸರಿನಿಂದ ಐದುಸಾವಿರ ಮನಸಬದಾರಿಯ ವಸ್ತ್ರಗಳು ಕೊಡಲ್ಪಡುವವು'' ಎಂಬದು. ಈ ವಾಕ್ಯವನ್ನು ಓದಿದ ಕೂಡಲೇ ಮಹಾರಾಜರು ದಿಗಿಲು ಬಿದ್ದರು. ಹೀಗೆ ಏನಾದರೂ ಕವಡಕಂಟಕತನ ಮಾಡದೆ ಬಾದಶಹನು ಬಿಡತಕ್ಕವನಲ್ಲ ವೆಂದು ಅವರು ಮೊದಲೇ ಭಾವಿಸಿದ್ದರು. ಆತನು ತಮ್ಮನ್ನು ದರ್ಬಾರಕ್ಕೆ ಕರಿಸಬಹುದೆಂಬ ವಿಚಾರವೂ ಒಮ್ಮೆ ಮಹಾರಾಜರ ಮನಸ್ಸಿನಲ್ಲಿ ಬಂದಿತ್ತು. ಈಗ ಅದರ ಪ್ರತ್ಯಕ್ಷ ಅನುಭವವು ಅವರಿಗಾಯಿತು. ಅವರು ಮನಸ್ಸಿನಲ್ಲಿ—''ನಾನು ದಿಲ್ಲಿಗೆ ಹೋದಾಗ ಬಾದಶಹನು ಏನಾದರೂ ಕಪಟಮಾಡಿ ನನ್ನನ್ನು ಘಾತಿಸಿದರೆ ಮಾಡುವದೇನು? ಔರಂಗಜೇಬನು ಮಹಾ ಕಪಟಿಯು. ಪ್ರತ್ಯಕ್ಷ ಹಡೆದ ತಂದೆಯನ್ನೂ, ಒಡಹುಟ್ಟಿದ ಅಣ್ಣ–ತಮ್ಮಂದಿರನ್ನೂ ನೋಡಿದವನಲ್ಲ. ಈಗ ಆತನು ಸವಿಮಾತಿನಿಂದ ಪತ್ರ ಬರೆದಿರುವದೇನೋ ನಿಜ; ಆದರೆ ಅಲ್ಲಿಗೆ ಹೋದಬಳಿಕ ಘಾತಮಾಡಿದರೆ ಹ್ಯಾಗೆ? ಮೇಲಾಗಿ ಸಂಭಾಜಿಯನ್ನು ಕರೆತರಲು

ಬರೆದಿರುವನು; ಆದ್ದರಿಂದ ಅನಾಯಾಸವಾಗಿ ಸಿಕ್ಕ ತಂದೆ--ಮಕ್ಕಳನ್ನು ಕೂಡಿಯೇ ಘಾತಿಸಿ ತಾನು ನಿಷ್ಕಂಟಕನಾಗಬೇಕೆಂದು ಆತನು ಮನಸ್ಸಿನಲ್ಲಿ ಯೋಚಿಸಿರಲಿಕ್ಕಿಲ್ಲವೆಂದು ಯಾರು ಹೇಳಬೇಕು?'' ಎಂದು ಯೋಚಿಸಿ, ಜಯಸಿಂಗನನ್ನು ಕುರಿತು— ''ಬಾದಶಹನು ನಮ್ಮನ್ನು ದರ್ಬಾರಕ್ಕೆ ಕರೆಯಲಿಕ್ಕೆ ಕಾರಣವೇನು? ಆತನು ಕರೆದಂತೆ ನಾವು ಅಲ್ಲಿಗೆ ಹೋದಾಗ ನಮ್ಮನ್ನು ಘಾತಿಸಿದರೆ ಮಾಡುವುದೇನು?'' ಎಂದು ಕೇಳಲು, ರಾಜಾ ಜಯಸಿಂಗನಿಗೂ ಅವರ ಕೇಳ್ಕೋಣವು ನಿರರ್ಥಕವಾಗಿ ತೋರಲಿಲ್ಲ. ಆತನು ಸ್ವಲ್ಪಹೊತ್ತು ಸುಮ್ಮನೆ ಯೋಚಿಸಿ ಬಳಿಕ ಮಹಾರಾಜರನ್ನು ಕುರಿತು— ''ತಮ್ಮ ಮನಸ್ಸಿನಲ್ಲಿ ಹೀಗೆ ಸಂಶಯ ಬಂದದ್ದರಲ್ಲಿ ಆಶ್ಚರ್ಯವಿಲ್ಲ; ಆದರೆ ನನ್ನಲ್ಲಿ ನಂಬಿಗೆಯನ್ನಿಟ್ಟು ದಿಲ್ಲಿಗೆ ಹೋಗುವುದನ್ನು ನೀವು ನಿಶ್ಚಯಿಸಿರಿ. ತಮ್ಮ ಕೂದಲು ಕೂಡ ಕೊಂಕದಂತೆ ನಾನು ತಮಗೆ ಹೊಣೆಯಾಗುವೆನು. ನನ್ನ ಮಗ ರಾಮಸಿಂಗನು ಅಲ್ಲಿ ಇರುವನು. ಸ್ವಲ್ಪ ಸಂಶಯ ಬಂದಕೂಡಲೇ ನಿಮಗೆ ಆತನು ತಿಳಿಸುವನು. ಈಗ ನೀವು ಸಂಶಯಪಟ್ಟು ದಿಲ್ಲಿಗೆ ಹೋಗುವದನ್ನು ಬಿಟ್ಟರೆ ಕೆಲಸವು ಕೆಡುವದು. ನೀವು ದಿಲ್ಲಿಗೆ ಹೋದರೆ ಎಲ್ಲಬಗೆಯಿಂದ ನಿಮ್ಮ ಹಿತವೇ ಆಗುವದು. ಅಂಥ ಪ್ರಸಂಗವು ಒದಗಿದರೆ ನಿಮ್ಮ ಸಲುವಾಗಿ ರಾಮಸಿಂಗನು ಬಾದಶಹನೊಡನೆ ವಿರೋಧ ಬೆಳಿಸಲಿಕ್ಕೂ ಹಿಂದೆಮುಂದೆ ನೋಡುವ ಹಾಗಿಲ್ಲ, ನೀವು ಬರುವವರೆಗೆ ನಾನು ದಕ್ಷಿಣದಲ್ಲಿಯೇ ಇರುವೆನು. ಬಾದಶಹನು ನಿಮಗೇನಾದರೂ ತೊಂದರೆಕೊಟ್ಟರೆ ನಾನು ಇತ್ತಕಡೆಗೆ ಬಾದಶಹನಿಗೆ ಚನ್ನಾಗಿ ಕೈ ತೋರಿಸುವೆನು. ನೀವು ಮಾತ್ರ ಹೋಗುವದನ್ನು ರಹಿತ ಮಾಡಬೇಡಿರಿ'' ಎಂದು ಹೇಳಿದನು.

ಹೀಗೆ ಜಯಸಿಂಗನ ಅತ್ಯಾಗ್ರಹಕ್ಕಾಗಿಯೂ, ಔರಂಗಜೇಬನಿಂದ ಒಳ್ಳೇ ಉತ್ತೇಜನಪರ ಪತ್ರಬಂದದ್ದರಿಂದಲೂ ಮಹಾರಾಜರು ದಿಲ್ಲಿಗೆ ಹೋಗುವದನ್ನು ನಿಶ್ಚಯಿಸಿ ಜಯಸಿಂಗನ ಛಾವಣಿಯಿಂದ ಹೊರಟು ರಾಯಗಡಕ್ಕೆ ಬಂದರು. ಅವರು ತಮ್ಮ ಮುಖ್ಯ ಮುಖ್ಯ ಸರದಾರರನ್ನೂ, ಮುತ್ಸದ್ದಿಗಳನ್ನೂ ಕರೆಸಿ ತಾವು ದಿಲ್ಲಿಗೆ ಹೋಗುವ ವಿಚಾರವನ್ನು ಅವರಿಗೆ ತಿಳಿಸಿದರು. ಅದನ್ನು ಕೇಳಿ ಕೆಲವರು—''ಮಹಾರಾಜ, ಔರಂಗಜೇಬನು ಕೇವಲ ದೈತ್ಯನಾಗಿರುವನು. ಆತನು ಅತ್ಯಂತ ಕಪಟಿಯಾಗಿದ್ದು, ನಮ್ಮ ವೈರಿಯಾಗಿರುವನು. ಇಂಥವನಲ್ಲಿ ವಿಶ್ವಾಸವಿಡುವದು ಸರಿಯಲ್ಲ, ಮೇಲಾಗಿ ದಿಲ್ಲಿಯು ಇಲ್ಲಿಂದ ಎರಡು ತಿಂಗಳ ದಾರಿಯಿರುತ್ತದೆ; ಅಂದಬಳಿಕ ನಡುವೆ ಏನಾದರೂ ಘಾತವಾದರೆ ಮಾಡುವದೇನು?'' ಅನ್ನಲು ಅದಕ್ಕೆ ಮಹಾರಾಜರು— ''ಈಗ ನಾವು ದಿಲ್ಲಿಗೆ ಹೋಗಲೇಬೇಕಾಗಿರುವದು, ಹೋಗದಿದ್ದರೆ ನಡೆಯುವ ಹಾಗಿಲ್ಲ, ಅಂದಬಳಿಕ ವಿಘ್ನಗಳನ್ನು ಮನಸ್ಸಿನಲ್ಲಿ ತಂದು ಮಾಡುವದೇನು? ದಿಲ್ಲಿಗೆ ಹೋಗಬೇಕೆಂದು ಶ್ರೀಭವಾನಿಯೂ ಹೇಳಿರುವಳು; ಅಲ್ಲಿಂದ ನಾನು ಪಾರಮಾಡಿ ಕೊಂಡುಬರುವೆನೆಂತಲೂ ಆ ಲೋಕಮಾತೆಯು ಅಭಯವಿತ್ತಿರುವಳು. ಅತ್ತ ಕಡೆಗೆ ಹೋದಬಳಿಕ ಉತ್ತರದ ಕಡೆಯ ರಾಜ್ಯಗಳನ್ನೂ, ದಿಲ್ಲಿಯ ದರ್ಬಾರವನ್ನೂ ನೋಡುವ ಯೋಗವು ನಮಗೆ ಒದಗುವದು. ನಮ್ಮ ಪೂರ್ವಜರು ಉತ್ತರದಲ್ಲಿ ರಾಜ್ಯವಾಳಿದರು; ಆ ಸ್ಥಳವನ್ನು ನೋಡುವ ಸುಯೋಗವು ನಮಗೆ ಒದಗಿದಂತಾಗುವದು. ಇದಲ್ಲದೆ, ಭಾಗೀರಥೀ,

ಯಮುನಾ ಮೊದಲಾದ ತೀರ್ಥಗಳ ದರ್ಶನವೂ, ಕಾಶಿ, ಪ್ರಯಾಗ, ಗಯಾ ಮೊದಲಾದ ಮಹಾಕ್ಷೇತ್ರಗಳ ದರ್ಶನವೂ ಘಟಿಸುವವು. ಜಯಸಿಂಗರಾಜನು ನಮಗೆ ಅಭಯವನ್ನಿತ್ತಿರುವನು; ಮತ್ತು ದಿಲ್ಲಿಯಿಂದ ನಮಗೆ ಅನುಕೂಲವಾದ ಒಡಂಬಡಿಕೆಯ ಕರಾರುಗಳು ಬಾದಶಹನಿಂದ ಮಂಜೂರಾಗಿ ಬಂದಿರುವವು. ಆದ್ದರಿಂದ ಅಂಜಿಕೆಯ ಕಾರಣವೇನೂ ಉಳಿದಿರುವದಿಲ್ಲ. ಇದರ ಮೇಲೆಯೂ ಅಂಥ ಕಠಿಣ ಪ್ರಸಂಗವೇನಾದರೂ ಒದಗಿದರೆ ಶ್ರೀ ಭವಾನಿಯ ಕೃಪೆಯಿಂದ ಅದರೊಳಗಿಂದಲೂ ಪಾರಾಗಿ ಬಂದೇವೆಂಬ ಧೈರ್ಯವು ನಮಗಿರುತ್ತದೆ.'' ಎಂದು ಹೇಳಿ, ಮಹಾರಾಜರು ಸಂಭಾಜಿಯೊಡನೆ ದಿಲ್ಲಿಗೆ ಹೊರಡುವದನ್ನು ನಿಶ್ಚಯಿಸಿದರು. ಬಳಿಕ ಅವರು ಮೋರೋಪಂತ ಪೇಶವೆ, ಅಣ್ಣಾಜಿ ದತ್ತೋ ಸುರನೀಸ, ನೀಳೋ ಸೋನದೇವ ಮಜುಮದಾರ ಈ ಮೂವರನ್ನು ಸರ್ವಾಧ್ಯಕ್ಷರನ್ನಾಗಿ ನಿಯಮಿಸಿ, ಅವರಿಗೆ ಯಾವತ್ತೂ ರಾಜ್ಯಕಾರಭಾರವನ್ನು ಒಪ್ಪಿಸಿದರು. ಅವರು ರಾಯಗಡದಲ್ಲಿರಬೇಕೆಂದು ಅಪ್ಪಣೆಯಾಯಿತು; ಮತ್ತು ಯಾವತ್ತೂ ಸರದಾರರಿಗೂ, ಕಾರಕೂನರಿಗೆ ಇವರ ಅಪ್ಪಣೆಯನ್ನು ಮನ್ನಿಸುವಂತೆ ಮಹಾರಾಜರು ಕಟ್ಟುಮಾಡಿದರು. ಪ್ರತಾಪರಾಯನೇ ಮೊದಲಾದ ವಿಶ್ವಾಸದ ಸರದಾರರಿಗೆ ಮಾತೃಶ್ರೀಯವರನ್ನೂ, ರಾಜಾರಾಮನನ್ನೂ ರಕ್ಷಿಸಹೇಳಿ ಅವರನ್ನು ಕುರಿತು —''ಯಾವತ್ತೂ ರಾಜ್ಯದ ವ್ಯವಸ್ಥೆಯನ್ನೂ, ಬಂದೋಬಸ್ತನ್ನೂ ಈವೊತ್ತಿನವರೆಗೆ ಇಡುತ್ತ ಬಂದಂತೆ ಮುಂದೆಯಾದರೂ ನೀವು ಪ್ರಾಮಾಣಿಕತನದಿಂದಲೂ, ಜಾಣತನದಿಂದೂ ಇಡಿರಿ. ಈಗ ಉಳಿದಿರುವ ದುರ್ಗಗಳ, ಹಾಗು ಕೋಟೆಗಳ, ಅದರಂತೆ ಪ್ರಾಂತಗಳ ಜತನವನ್ನು ಚನ್ನಾಗಿ ಮಾಡಿರಿ. ಈಗಿರುವ ರಾಜ್ಯದಲ್ಲಿ ಸಾಧಿಸಿದರೆ ಹೊಸದನ್ನು ಕೂಡಿಸಿರಿ. ನಾವು ದಿಲ್ಲಿಗೆ ಹೋದಬಳಿಕ ನಮ್ಮ ಕಡೆಯ ಸುದ್ದಿಯನ್ನು ಯಾವಾಗಲೂ ತರಿಸುತ್ತಲಿರ್ರಿ. ಅಲ್ಲಿ ಎಂಥ ಪ್ರಸಂಗ ಬಂದರೂ ನಾವು ಹೆದರುವಹಾಗಿಲ್ಲ. ಏನಾದರೂ ಹಂಚಿಕೆಮಾಡಿ ಪಾರಾಗಿ ಸ್ವದೇಶಕ್ಕೆ ತಿರುಗಿ ಬಂದೇಬರುವೆವು. ಜಯಸಿಂಗನಂಥ ಹಿಂದೂರಾಜರು ನಮಗೆ ಅನುಕೂಲರಾಗಿರುವರು. ನಮಗೇನಾದರೂ ಕೇಡು ಒದಗಿದರೆ ಅವರು ನಮ್ಮ ಕಡೆಗಾಗಿ ಜಗಳಾಡಲಿಕ್ಕೆ ಸಿದ್ಧರಾಗಿರುವರೆಂಬ ನಂಬಿಗೆಯು ನಮಗಿರುತ್ತದೆ. ನಾವು ಅಲ್ಲಿ ಬಹು ಎಚ್ಚರದಿಂದ ಇರುವೆವು. ನಮ್ಮ ಚಿಂತೆಯನ್ನು ನೀವು ಮಾಡಬಾರದು. ಮಾತೃಶ್ರೀಯವರ ಸಮಾಧಾನವನ್ನು ಮಾತ್ರ ನೀವು ಮೇಲೆ ಮೇಲೆ ಮಾಡುತ್ತಲಿರ್ರಿ. ಕದಾಚಿತ್ ನಮ್ಮ ಮೇಲೆ ಆಕಾಶವು ಕಡಕೊಂಡು ಬಿದ್ದಂತಾಗಿ, ನಮ್ಮ ನಾಶವಾದರೆ ನೀವು ಹೆದರದೆ ಸ್ವರಾಜ್ಯದ ರಕ್ಷಣಾವನ್ನು ಮಾಡಿರಿ. ರಾಜಾರಾಮನ ಹೆಸರಿನಿಂದ ರಾಜ್ಯಕಾರಭಾರವನ್ನು ನಡಿಸಿರಿ. ನಿಮ್ಮ ವಿಶ್ವಾಸವನ್ನೂ, ಜಾಗ್ರತೆಯನ್ನೂ, ಧೈರ್ಯವನ್ನೂ ನಂಬಿ ನಿಮ್ಮಮೇಲೆ ರಾಜ್ಯದ ಎಲ್ಲ ಭಾರವನ್ನು ಹಾಕಿ ನಾವು ಉತ್ತರ ಹಿಂದುಸ್ತಾನಕ್ಕೆ ಹೋಗುವೆವು.''

ಈ ಮೇರೆಗೆ ಎಲ್ಲ ವ್ಯವಸ್ಥೆಯನ್ನು ಮಾಡಿ ಮಹಾರಾಜರು ದಿಲ್ಲಿಗೆ ಹೊರಡುವ ಸಿದ್ಧತೆಯನ್ನು ಮಾಡಿದರು. ತಮ್ಮ ಸಂಗಡ ತೀರ ಆರಿಸಿದ ಜನರನ್ನು ಕರಕೊಂಡರು. ಅವರು ಎಂಥ ಪ್ರಸಂಗ ಒದಗಿದರೂ ಹೆದರದೆ ಮಹಾರಾಜರ ಪ್ರೀತ್ಯರ್ಥವಾಗಿ ಪ್ರಾಣಕೊಡಲಿಕ್ಕೆ

ಹಿಂದೆಮುಂದೆ ನೋಡುವಹಾಗಿದ್ದಿಲ್ಲ. ಅವರ ಸಂಗಡ ನಿರಾಜಿ ರಾವಜಿ ಶಹಾಣೆ, ತ್ರ್ಯಯಂಬಕಜಿ ಸೋನದೇವ ಡಬೀರ, ದತ್ತಾಜಿ ತ್ರ್ಯಯಂಬಕ ಮಾಣಕೋ ಹರಿಸಬನೀಸ ಇವರು ಕಾರಕೂನರಿದ್ದರು. ಹಿರೋಜಿ ಫರ್ಜಂದ, ರಾಘೋಮಿತ್ರ, ದಾವಲಜಿ ಗಾಗಡೆ, ಜೀವಾ ಮಹಾಲ್ಯಾ ಇವರು ಹುಜರೆಯರಿದ್ದರು. ಇವರಲ್ಲದೆ ಮಹಾರಾಜರು ತಮ್ಮ ಸಂಗಡ ಧಾರಕರಿ, ಹಾಗು ಮಾವಳೆ ಇವರು ಕೂಡಿ ಸರಾಸರಿ ಮೂರು ನಾಲ್ಕು ಸಾವಿರ ಆರಿಸಿದ ಜನರನ್ನು ಕರಕೊಂಡಿದ್ದರು. ಹೊರಡುವ ಮೊದಲು ಅವರು ಎಲ್ಲ ಸರದಾರರನ್ನು ಪುನಃ ಕಂಡು, ಎಚ್ಚರದಿಂದಿರುವಂತೆ ಅವರನ್ನು ಬೋಧಿಸಿದರು. ಬಳಿಕ ಅವರು ಶ್ರೀಭವಾನಿಯ ದರ್ಶನಮಾಡಿಕೊಂಡು, ಮಾತೃಶ್ರೀಯವರ ಅಪ್ಪಣೆಯನ್ನು ಪಡೆಯುವುದಕ್ಕಾಗಿ ಅವರ ಬಳಿಗೆ ಹೋದರು. ಆಗ ಜೀಜಾಬಾಯಿಯವರು ಚರಣಕ್ಕೆರಗಿದಮಗನನ್ನು ಎಬ್ಬಿಸಿತಬ್ಬಿಕೊಂಡು ಅಪ್ಪಿ, ಮಸ್ತಕದಮೇಲೆ ದಯಾಹಸ್ತವನ್ನಿಟ್ಟು ಸದ್ಗದಿತ ವಾಣಿಯಿಂದ— "ಬಾಳಾ, ನೀನು ಶ್ರೀಶಂಭುವಿನ, ಹಾಗೂ ಶ್ರೀ ಭವಾನಿಯ ಕೃಪೆಯಿಂದ ಯಶಸ್ವಿಯಾಗಿ ತಿರುಗಿ ಬರುವೆ. ಅವಿಂಧರರು ಪರಮ ಕೃತಘ್ನರೂ, ದುರಾತ್ಮರೂ, ಕರುಣಾಹೀನರೂ ಆಗಿರುವರು. ಅವರ ದರ್ಬಾರಕ್ಕೆ ಬಾಲಕನಾದ ಸಂಭಾಜಿಯನ್ನು ಕರಕೊಂಡು ಹೋಗುವದು ಸಾಮಾನ್ಯ ಸಂಗತಿಯಲ್ಲ. ಶಿವಬಾ, ಪ್ರವಾಸದಲ್ಲಿ ಜಾಗರೂಕನಾಗಿರು. ಕೂಸಿನ ಪ್ರಕೃತಿಯ ವಿಷಯವಾಗಿ ಎಚ್ಚರಪಡು. ಬಾದಶಹನಮಾನವನ್ನು ಕಾಯ್ದು ಸಮಯೋಚಿತವಾಗಿ ಸ್ವಕಾರ್ಯವನ್ನು ಸಾಗಿಸಿಕೊಂಡು ಬೇಗನೆ ಸ್ವದೇಶಕ್ಕೆ ತಿರುಗಿ ಬಾ. ಜಯಸಿಂಗನು ಸತ್ಯವಚನದವನೂ, ಕ್ರಿಯಾ ವಂತನೂ, ಒಳ್ಳೇ ಧರ್ಮಿಷ್ಠನೂ ಆದ ಹಿಂದೂರಾಜನಿರುವನು. ಆತನು ಹೇಳಿದಂತೆ ಕೇಳಿ ಸ್ವಕಾರ್ಯವನ್ನು ಸಿದ್ಧಗೊಳಿಸು. ನೀನು ಸುಶೀಲನೂ, ಸದಾಚಾರಿಯೂ, ಸ್ವಧರ್ಮಾಭಿ ಮಾನಿಯೂ ಇರುತ್ತೀ. ಪಾಂಡವರಿಗೆ ಶ್ರೀಕೃಷ್ಣನ ಪ್ರಸಾದದಿಂದ ಭಾರತೀಯ ಯುದ್ಧದಲ್ಲಿ ಹ್ಯಾಗೆ ಯಶಸ್ಸು ಪ್ರಾಪ್ತವಾಯಿತೋ, ಹಾಗೆ ನಿನಗೆ ಹಿರಿಯರ ಪುಣ್ಯದಿಂದಲೂ, ಶ್ರೀಜಗದಂಬೆಯ ವರಪ್ರಸಾದದಿಂದಲೂ, ಸಮರ್ಥರ ಕೃಪೆಯಿಂದಲೂ ಯಶಃಪ್ರಾಪ್ತಿ ಯಾಗುವದು" ಎಂದು ಆಶೀರ್ವದಿಸಿದರು. ಹೀಗೆ ತಾಯಿಯ ಆಶೀರ್ವಾದದಿಂದ ಸಂತೋಷ ಪಟ್ಟ ಮಹಾರಾಜರು ತಮ್ಮ ಕುಟುಂಬವಾದ ಸಯಿಬಾಯಿಯವರ ಅನುಮತಿ ಪಡೆದು, ಪುನಃ ಜಯಸಿಂಗನ ಭೆಟ್ಟಿಗೆ ಹೊರಟರು. ಮಹಾರಾಜರು ತನ್ನ ಭೆಟ್ಟಿಗೆ ಬರಲು, ಜಯಸಿಂಗನು ಸಮಾರಂಭದಿಂದ ಅವರನ್ನು ಬರಮಾಡಿಕೊಂಡು ಅವರಿಗೆ ಮೇಜವಾನಿಯನ್ನು ಮಾಡಿದನು. ದಿಲ್ಲಿಗೆ ಹೋದಬಳಿಕ ಹ್ಯಾಗೆ ನಡೆದುಕೊಳ್ಳಬೇಕೆಂಬುದನ್ನು ಆತನು ತಿಳಿಸಿ ಕೊಟ್ಟನು. ಬಾದಶಹನ ದರ್ಬಾರದಲ್ಲಿರುವ ತನ್ನ ಮಗನಾದ ರಾಮಸಿಂಗನಿಗೆ ಮಿರ್ಝಾರಾಜನು ಒಂದು ಪತ್ರವನ್ನು ಕೊಟ್ಟನು. ಅದರಲ್ಲಿ ಆತನು ಮಹಾರಾಜರ ಎಲ್ಲ ಬಗೆಯ ವ್ಯವಸ್ಥೆಯನ್ನು ಉತ್ತಮರೀತಿಯಿಂದ ಇಡುವಂತೆಯೂ, ಅವರ ಸುರಕ್ಷಿತತೆಯ ವಿಷಯವಾಗಿ ಜಾಗರೂಕ ವಾಗಿರುವಂತೆಯೂ ಬರೆದಿದ್ದನು. ಆತನು ಮಹಾರಾಜರಿಗೆ ಮತ್ತೊಮ್ಮೆ ನಂಬಿಗೆಕೊಟ್ಟು ಹೇಳಿದ್ದೇನೆಂದರೆ—"ನೀವು ದಿಲ್ಲಿಯಿಂದ ಇಲ್ಲಿಗೆ ಬರುವವರೆಗೆ ನಾನು ದಕ್ಷಿಣದಲ್ಲಿಯೇ

ಇದ್ದು ನಿಮ್ಮ ರಾಜ್ಯಕ್ಕೆ ಮೊಗಲರಿಂದ ಯಾವತರದ ಬಾಧೆಯೂ ಆಗದಂತೆ ನೋಡಿಕೊಳ್ಳುವೆನು. ನಿಮಗೆ ಅಂಥ ಪ್ರಸಂಗ ಬಂದರೆ ನಿಮ್ಮ ಸಂರಕ್ಷಣಕ್ಕಾಗಿ ರಾಮಸಿಂಗನು ಬಾದಶಹನ ವಿರೋಧವನ್ನಾದರೂ ಬಳಿಸುವನು, ನಾನೂ ದಕ್ಷಿಣದಲ್ಲಿ ಬಾದಶಹನಿಗೆ ನನ್ನ ಕೈ ತೋರಿಸುವೆನು, ಎಂದು ಈ ಮೊದಲೆಯೊಮ್ಮೆ ನಾನು ಹೇಳಿದ್ದನ್ನು ನೀವು ಚನ್ನಾಗಿ ನೆನಪಿನಲ್ಲಿಟ್ಟು ನಿಶ್ಶಂಕೆಯಿಂದ ಹೋಗಿ ಬರ್ರಿ.'' ಹೀಗೆ ಮಹಾರಾಜರು ದಿಲ್ಲಿಗೆ ಹೋಗುವ ಬಗ್ಗೆ ಪುನರಪಿ ಜಯಸಿಂಗನಿಂದ ಆಶ್ವಾಸನ ಪಡೆದು ಹಾದಿಯನ್ನು ಹಿಡಿದರು. ನಾವು ಬರುತ್ತೇವೆಂಬ ಸುದ್ದಿಯನ್ನು ತಿಳಿಸುದಕ್ಕಾಗಿ ಮಹಾರಾಜರು ಮುಂದೆ ತಮ್ಮ ವಕೀಲನನ್ನು ದಿಲ್ಲಿಗೆ ಕಳಿಸಿದ್ದರು. ಹಾದಿಯಲ್ಲಿ ಮಾನಮರ್ಯಾದೆಗಳನ್ನು ಸರಿಯಾಗಿ ಮಾಡಬೇಕೆಂತಲೂ ಶಹಾಜಾದನನ್ನು ಸನ್ಮಾನಿಸಿದಂತೆ ಶಿವಾಜಿಯವರನ್ನು ಸನ್ಮಾನಿಸಬೇಕೆಂತಲೂ ಬಾದಶಹನು ಅಲ್ಲಲ್ಲಿ ಆಜ್ಞಾಪತ್ರಗಳನ್ನು ಕಳಿಸಿದನು. ಮಹಾರಾಜರು ಅತ್ಯಂತ ಮಾನಧನರೆಂಬದು ಎಲ್ಲರಿಗೂ ಗೊತ್ತಿತ್ತು ಆದ್ದರಿಂದ ಮಹಾರಾಜರು ಹೋದಲ್ಲಿ ಅವರ ಮಾನಮರ್ಯಾದೆಗಳು ಸರಿಯಾಗಿ ದಕ್ಷತೆಯಿಂದ ಕಾಯಲ್ಪಡಹತ್ತಿದವು. ಪ್ರೌಢ ಪ್ರತಾಪಿಯಾದ ಈ ಮಹಾಪುರುಷನು ಇಳಿದುಕೊಂಡಲ್ಲೆಲ್ಲ ಆತನ ದರ್ಶನಕ್ಕಾಗಿ ಜನರು ನೆರೆಯುತ್ತಿದ್ದರು.

ಇನ್ನು ಮಹಾರಾಜರ ಮಾನಧನತೆಯನ್ನೂ, ಅವರ ಜನರ ಕರ್ತವ್ಯದಕ್ಷತೆಯನ್ನೂ ಕುರಿತು ಒಂದೊಂದು ಉದಾಹರಣವನ್ನು ಬರೆದು, ಈ ಪ್ರಯಾಣ ಪ್ರಕರಣವನ್ನು ಮುಗಿಸುವೆವು. ಇನ್ನು ಮುಂದಿನ ಸುರಸ ಕಥಾ ಪ್ರಸಂಗಗಳನ್ನು ಕುರಿತು ಮುಂದೆ ಬರೆಯುವ ಪ್ರಕರಣಗಳನ್ನು ಓದಿ ವಾಚಕರು ಆನಂದಪಡಬಹುದು. ಮಹಾರಾಜರು ಸ್ವತಃ ಅತ್ಯಂತ ಸ್ವಾಭಿಮಾನಿಗಳೂ, ಮಾನಧನರೂ ಆದದ್ದರಿಂದ ಸ್ವಲ್ಪ ಅಪಮಾನವಾದರೂ ಅವರಿಗೆ ತಡೆಯುತ್ತಿದ್ದಿಲ್ಲ. ಮಹಾರಾಜರು ದಿಲ್ಲಿಗೆ ಹೊರಡುವ ಮೊದಲು ಜಯಸಿಂಗನ ಬಳಿಗೆ ಹೋಗುವಾಗ ಔರಂಗಾಬಾದದ ಹತ್ತರ ಬಂದರು. ಈ ವರ್ತಮಾನವನ್ನು ಕೇಳಿ ಔರಂಗಾಬಾದದ ಸುಬೇದಾರನು ತಾನು ಸ್ವತಃ ಮಹಾರಾಜರನ್ನು ಎದುರುಗೊಳ್ಳಲಿಕ್ಕೆ ಬಾರದೆ, ತನ್ನ ಆಪ್ತನಾದ ಅಮೀರನನ್ನು ಎದುರುಗೊಳ್ಳಲಿಕ್ಕೆ ಕಳಿಸಿದನು. ಈ ಅಪಮಾನವು ಮಹಾರಾಜರಿಗೆ ಸಹನವಾಗಲಿಲ್ಲ. ಅವರು ಪರಭಾರೆ ಜಯಸಿಂಗನ ಡೇರೆಯ ಕಡೆಗೆ ಹೋಗ ಹತ್ತಿದರು. ಆಗ ಅಮೀರನು ಮಹಾರಾಜರಿಗೆ—''ಸುಬೇದಾರರು ದರ್ಬಾರು ನೆರೆಸಿ ಮಹಾರಾಜರ ಹಾದಿಯನ್ನು ನೋಡುತ್ತಿರುವರು,'' ಎಂದು ಹೇಳಿದನು. ಆಗ ಮಹಾರಾಜರು— ''ನಿಮ್ಮ ಸುಬೇದಾರರ ಮನಸ್ಸಿನಲ್ಲಿ ನಾವು ಬರಬೇಕೆಂದಿದ್ದರೆ ಅವರು ನಮ್ಮನ್ನು ಎದುರುಗೊಳ್ಳಲಿಕ್ಕೆ ಸ್ವತಃ ಯಾಕೆ ಬರಲಿಲ್ಲ?'' ಎಂದು ಕೇಳಿ, ಅಮೀರನನ್ನೂ ಅವನ ಸಂಗಡ ಬಂದವರನ್ನೂ ತಿರುಗಿ ಕಳಿಸಿ ತಾವು ಜಯಸಿಂಗನ ಕಡೆಗೆ ಹೋದರು. ಇತ್ತ ಆ ಸುಬೇದಾರನನ್ನು ತನ್ನ ಪರಿವಾರದೊಡನೆ ಬಂದು ಕ್ಷಮೆಬೇಡಿ ಅವರನ್ನು ಕರಕೊಂಡು ಹೋಗಿ ದೊಡ್ಡ ಮೇಜವಾನಿ ಮಾಡಿದನು. ಅದರಂತೆ ಬೇರೆ ಅಮೀರರೂ, ಉಮರಾವರೂ ಮಹಾರಾಜರಿಗೆ ದೊಡ್ಡ ದೊಡ್ಡ ಮೇಜವಾನೆಗಳನ್ನು ಮಾಡಿ ಸತ್ಕರಿಸಿದರು.

ಮಹಾರಾಜರು ಸ್ವರಾಜ್ಯವನ್ನು ಬಿಟ್ಟು ದಿಲ್ಲಿಯ ಕಡೆಗೆ ಹೋಗುವ ಮೊದಲು, ತಮ್ಮ ದುರ್ಗರಕ್ಷಕರು ತಾವು ಇಲ್ಲದಾಗ ತಾವು ಹೇಳಿರುವ ಪದ್ಧತಿಯಂತೆ ತಮ್ಮ ತಮ್ಮ ದುರ್ಗಗಳನ್ನು ರಕ್ಷಿಸುವರೋ ಇಲ್ಲವೋ ಎಂಬದನ್ನು ಪರೀಕ್ಷಿಸುವದಕ್ಕಾಗಿ ಒಂದುದಿನ ರಾತ್ರಿ ಮೂರುತಾಸಿನ ಸುಮಾರಕ್ಕೆ ಒಂದು ದುರ್ಗದ ಬಾಗಿಲಿಗೆ ಹೋದರು; ಆಗ ಅವರು ಅಲ್ಲಿಯ ಹವಾಲ ದಾರನನ್ನು ಕರೆಸಿ— ''ಮಹಾರಾಜರು ದುರ್ಗದ ಬಾಗಿಲಿಗೆ ಬಂದಿದ್ದಾರೆ. ಹಿಂದೆ ಶತ್ರುಗಳು ಅವರನ್ನು ಬೆನ್ನಟ್ಟಿರುವರು'' ಆದ್ದರಿಂದ ಬಾಗಿಲು ತೆರೆದು ಅವರನ್ನು ಒಳಗೆ ಕರಕೊಳ್ಳಬೇಕು'' ಎಂದು ಹೇಳಿದರು. ಅದನ್ನು ಕೇಳಿ, ಹವಾಲದಾರನು ತನ್ನ ಜನರನ್ನು ಗೋಡೆಯ ಮೇಲೆ ನಿಲ್ಲಿಸಿ ಮಹಾ ರಾಜರನ್ನು ಕುರಿತು— ''ರಾತ್ರಿ ಎಂದೂ ಬಾಗಿಲು, ತೆರಯಬಾರದೆಂದು ಮಹಾರಾಜರು ಕಟ್ಟುಮಾಡಿರುವರು; ಆದ್ದರಿಂದ ಈಗ ಬಾಗಿಲು ತೆರೆಯಲಾಗುವದಿಲ್ಲ, ಶತ್ರುಗಳು ಬೆನ್ನಟ್ಟಿ ಬರುತ್ತಿದ್ದರೆ ದುರ್ಗದ ಸುತ್ತಲಿನ ಜನರಿಂದ ಅವರನ್ನು ತಡೆದು ನಿಲ್ಲಿಸುತ್ತೇನೆ. ತಾವು ಗೋಡೆಯ ಹತ್ತರ ಬಾಗಿಲು ಬಳಿಯಲ್ಲಿ ಇರಬೇಕು. ಶತ್ರುವು ಮುಂದಕ್ಕೆ ಸಾಗಿಬರ ದಂತೆ ವ್ಯವಸ್ಥೆ ಮಾಡುವೆನು'', ಎಂದು ಹೇಳಿದನು. ಅದಕ್ಕೆ ಮಹಾರಾಜರು ''ಕಟ್ಟೂ ನಮ್ಮದೇ, ಈಗ ಬಾಗಿಲು ತೆರೆಯಲಿಕ್ಕೆ ಕೊಡುವ ಪರವಾನಿಗಿಯೂ ನಮ್ಮದೇ. ನಾವು ಸ್ವತಃ ಹೇಳುತ್ತಿರುವಾಗ ಬಾಗಿಲು ತೆರೆಯಲಿಕ್ಕೆ ನಿಮಗೆ ಪ್ರತಿಬಂಧವೇನು? ಬಾಗಿಲು ತೆರೆಯದಿದ್ದರೆ ನಿಮ್ಮನ್ನು ಶಿಕ್ಷಿಸಲಾದೀತು. ನೀವು ನಮ್ಮ ನೌಕರರು, ನಮ್ಮ ಅಪ್ಪಣೆಯನ್ನು ಮನ್ನಿಸಲೇಬೇಕು,'' ಎಂದು ಗದ್ದರಿಸಲು, ಆದರೂ ಕಿಲ್ಲೇದಾರನು ಹೆದರದೆ ಮಹಾರಾಜರನ್ನು ಕುರಿತು—''ಇನ್ನು ರಾತ್ರಿಯು ಸ್ವಲ್ಪ ಉಳಿದಿರುವದು, ಬೆನ್ನಟ್ಟಿಬರುವ ವೈರಿಗಳ ಆಟವನ್ನು ನಾವು ಏನೂ ನಡೆಯ ಗೊಡುವದಿಲ್ಲ'' ಎಂದು ಹೇಳಿ ಮಹಾರಾಜರನ್ನು ಬೆಳತನಕ ಕೋಟೆಯ ಬಾಗಿಲಲ್ಲಿಯೇ ಕುಳ್ಳಿರಿಸಿದನು. ಮುಂದೆ ಬೆಳಗಾಗಲು ಹವಾಲದಾರನೇ ಮೊದಲಾದ ದುರ್ಗದೊಳಗಿನ ಅಧಿಕಾರಿಗಳು ಕೈ ಕಟ್ಟಿಕೊಂಡು ಬಂದು ಕೀಲಿಗಳನ್ನು ತೆಗಿಸಿ ಬಾಗಿಲು ತೆರೆದು ಮಹಾರಾಜ ರನ್ನು ಒಳಗೆ ಕರಕೊಂಡು— ''ನಾವು ಅಪರಾಧಿಗಳಿರುವೆವು; ನಮಗೆ ತಕ್ಕ ಶಿಕ್ಷೆಯನ್ನು ಮಾಡಬೇಕು'' ಎಂದು ಹೇಳಿದರು. ಅವರ ಈ ನಡತೆಯನ್ನು ನೋಡಿ ಮಹಾರಾಜರು ಬಹಳ ಸಂತೋಷಪಟ್ಟರು. ಇದರಂತೆಯೇ ತಾವಿಲ್ಲದಾಗ ದುರ್ಗಗಳ ರಕ್ಷಣವು ಚನ್ನಾಗಿ ಆದೀತೆಂದು ತಿಳಿದುಕೊಂಡು, ಹವಾಲದಾರನೇ ಮೊದಲಾದವರಿಗೆ ಬಡತಿಯನ್ನು ಮಾಡಿದರು. ಮಹಾರಾಜರೂ, ಅವರ ಪರಿವಾರದವರೂ ಹೀಗೆ ಕರ್ತವ್ಯದಕ್ಷರಾಗಿದ್ದದ್ದ ರಿಂದಲೇ ಅವರಿಂದ ಸ್ವರಾಜ್ಯದ ಸ್ಥಾಪನೆಯಾಯಿತು; ಈ ಸಂಗತಿಯನ್ನು ಓದಿ ಕೌತುಕಪಡ ಬಹುದು, ಅದರಂತೆ ಬಾಯಿಂದ ಹೇಳಲೂಬಹುದು; ಆದರೆ ನಮ್ಮ ನಮ್ಮ ಕೆಲಸದಲ್ಲಿ ದಕ್ಷತೆ ಕಾಯ್ದುಕೊಳ್ಳುವದು ಮಾತ್ರ ಕಠಿಣವು!

# ಸಜ್ಜನ ಸಮುಚ್ಚಯ !

ಮಹಾರಾಜರು ಮಾರ್ಗಕ್ರಮಣ ಮಾಡುತ್ತ ಬರ್ಹಾಣಪುರಕ್ಕೆ ಬಂದು, ತಾಪೀನದಿಯ ತೀರದಲ್ಲಿ ತಮ್ಮ ಸೈನ್ಯದ ಬೀಡು ಬಿಟ್ಟರು. ಬರ್ಹಾಣಪುರವು ಆ ಕಾಲದಲ್ಲಿ ಪ್ರಸಿದ್ಧ ಪಟ್ಟಣ ವಾಗಿತ್ತು ಮಾರ್ಗಸ್ತರು ಅಲ್ಲಿ ಇಳಿದುಕೊಂಡು ವಿಶ್ರಾಂತಿ ಹೊಂದಿಯೇ ಮುಂದಕ್ಕೆ ಸಾಗುತ್ತಿದ್ದರು. ಊರಹೊರಗೆ ತಾಪೀನದಿಯ ತೀರದಲ್ಲಿ ಒಂದು ದೊಡ್ಡ ಶಿವಾಲಯವಿತ್ತು ಅಲ್ಲಿ ಬಡಹಾದಿಕಾರರು ವಿಶೇಷವಾಗಿ ಬಾವಾ–ಬೈರಾಗಿಗಳು ಇಳಿದುಕೊಂಡು, ಊರಲ್ಲಿ ಭಿಕ್ಷೆ ಬೇಡಿಕೊಂಡು ಬಂದು, ತಾಪಿಯಲ್ಲಿ ಸ್ನಾನಮಾಡಿ ಶ್ರೀಶಂಭುವಿನ ಸನ್ನಿಧಿಯಲ್ಲಿ ಆನಂದದಿಂದ ಕಾಲಹರಣ ಮಾಡುತ್ತಿದ್ದರು. ಗುಡಿಯ ಒಳ ಅಂಗಳದ ಸುತ್ತುಮುತ್ತು ಪ್ರಶಸ್ತ ಪಡಸಾಲೆಯೂ, ಕೋಣೆಗಳೂ ಇದ್ದದ್ದರಿಂದ ಮಾರ್ಗಸ್ಥರ ವಸತಿಗೆ ಆ ದೇವಸ್ಥಾನವು ಬಹು ಅನುಕೂಲವಾಗಿತ್ತು ಒಂದುದಿನ ಮೂರುಸಂಜೆಯ ಸಮಯವು ಸಮೀಪಿಸಿತ್ತು ಸೂರ್ಯನು ಅದೇ ತಾಯಿಯ ಹೊಟ್ಟೆಯಲ್ಲಿ ಹೋಗತೊಡಗಿದ್ದನು. ಅಷ್ಟರಲ್ಲಿ ಮಹಾರಾಜರು ಸಾಯಂಕಾಲದ ಶಿವದರ್ಶನ ಕ್ಕಾಗಿ, ಶಿವಾಲಯಕ್ಕೆ ಬಂದರು. ಆ ಭಾವಿಕರು ಶಿವದರ್ಶನದಿಂದ ಪರಮ ಸಂತುಷ್ಟರಾಗಿ ಶಿವಾಲಯದ ಸುತ್ತುಮುತ್ತು ಇಳಿದುಕೊಂಡಿದ್ದ ಜನರು ಆನಂದದಿಂದ ತಮ್ಮ ತಮ್ಮ ಕೆಲಸಗಳಲ್ಲಿ ತೊಡಗಿರುವದನ್ನೂ, ಕೆಲವರು ನಿಶಂಕೆಯಿಂದ ಕಾಲುಚಾಚಿಕೊಂಡು ಮಲಗಿರುವದನ್ನೂ, ಕೆಲವರು ಶಿವಭಜನೆ, ರಾಮಭಜನೆ, ಮಾಡುತ್ತಿರುವದನ್ನೂ, ಕೆಲವರು ಸ್ವಚ್ಛಂದದಿಂದ ಹಾಡುವದನ್ನೂ ನೋಡಿ ಕೌತುಕಪಡುತ್ತ ಹಾಗೆಯೇ ತಾಪಿಯ ತೀರಕ್ಕೆ ಹೋದರು. ಆಗಿನ ಸಮಯವೇ ಬಹುರಮ್ಯವಾದದ್ದು; ಸೂರ್ಯನು ಅಸ್ತಮುಣಗಿದ್ದು, ಆತನ ದಿವ್ಯ ಕರಗಳು ಆಕಾಶಮಂಡಲದಲ್ಲಿ ಮೇಲಕ್ಕೆ ತಡಹಾಯ್ದು, ನೋಡುವವರ ಚಿತ್ತವನ್ನು ರಮಿಸುತ್ತಲಿದ್ದವು. ಆ ಸುಂದರ ದೇವಸ್ಥಾನದ ಬಳಿಯ ತಾಪೀನದಿಯ ಪ್ರಶಸ್ತವಾದ ಪಾವಟಿಗೆಗಳು, ಆ ಪಾವಟಿಗೆಗಳಿಗೆ ಹೊಂದಿ ಹರಿಯುವ ತಾಪಿಯ ಶುಭ್ರಜಲಪ್ರವಾಹ, ಆ ಜಲಪ್ರವಾಹದಲ್ಲಿ ಪ್ರತಿಬಿಂಬಿಸಿರುವ ನದೀತೀರದ ವೃಕ್ಷರಾಜಿಗಳು, ಆ ವೃಕ್ಷರಾಜಿಗಳನ್ನು ಅಲಂಕರಿಸುವದಕ್ಕಾಗಿ ಪಶ್ಚಿಮ ದಿಗ್ಭಾಗದಿಂದ ಬಿದ್ದಿರುವ ಹೂಬಿಸಲು ಇವನ್ನು ನೋಡಿ ಮಹಾರಾಜರ ಚಿತ್ತವು ರಮಿಸಿತು. ಹಿಂದುಸ್ಥಾನದ ಉತ್ತರ–ದಕ್ಷಿಣದ ನಿಟ್ಟುಗಳನ್ನು ಬೇರೆ ಬೇರೆ ಮಾಡುವ ಪುಣ್ಯನದಿಗಳಲ್ಲಿ ಒಂದು ನದಿಯಾದ ಸುಪ್ರಸಿದ್ಧ ತಾಪಿಯ ದರ್ಶನದಿಂದ ಮಹಾರಾಜರ ಹೃದಯವು ಭಕ್ತಿಪೂರ್ಣವಾಯಿತು. ಏಕಸಮಯಾವಚ್ಛೇದದಿಂದ ಇಷ್ಟು ಸಂಗತಿಗಳು ಅವರ ನಿರ್ಮಲ ಮನಸ್ಸನ್ನು ರಮಿಸಲು, ಅವರು ತಲ್ಲೀನರಾಗಿ ಆ ದಿವ್ಯ ಶೋಭೆ ಯನ್ನು ನೋಡುತ್ತ ನಿಂತುಕೊಂಡರು. ಈ ಸ್ಥಿತಿಯಲ್ಲಿ ಕೆಲಕಾಲ ಕ್ರಮಿಸಿ ಮಬ್ಬುಗತ್ತಲಾಗಹತ್ತಿತು. ಆದರೂ ಮಹಾರಾಜರ ಚಿತ್ತವು ಚಂಚಲವಾಗಲಿಲ್ಲ; ಅಷ್ಟರಲ್ಲಿ—"ಅನಸೂಯೇ, ಕೌಸಲ್ಯೇ, ನೀವೂ ನನ್ನ ಹಾಗೆಯೇ ಈ ಸಾಯಂಕಾಲದ ದಿವ್ಯ ಶೋಭೆಯನ್ನು ನೋಡುತ್ತ ನಿಂತುಕೊಂಡು ಬಿಟ್ಟಿರೇನು? ಏಳಿರಿ, ಕತ್ತಲಾಗುತ್ತ ಬಂದಿತು ನಿಮ್ಮ ಕೈಕಾಲು

ತೊಳೆದುಕೊಳ್ಳುವದಾಯಿತೋ ಇಲ್ಲವೋ? ಭಜನೆಯ ಹೊತ್ತಾಯಿತಲ್ಲವೇ?'' ಎಂದು ನುಡಿದು ಗಂಭೀರವಾದ ಮಂಜುಲಧ್ವನಿಯು ಮಹಾರಾಜರ ಕಿವಿಗೆ ಬೀಳಲು, ಕೂಡಲೇ ಅವರು ಎಚ್ಚತ್ತಂತೆ ಮಾಡಿ ಆ ಧ್ವನಿ ಬರುವ ದಿಕ್ಕಿನಕಡೆಗೆ ಆತುರದಿಂದ ನೋಡಹತ್ತಿದರು. ಆಗ ತಮ್ಮ ತಾಯಂದಿರಾದ ಜೀಜಾಬಾಯಿಯವರ ಸ್ಮರಣ ಮಾಡಿಕೊಂಡು ಅದೊಂದು ಪವಿತ್ರವಾದ ದಿವ್ಯ ಮೂರ್ತಿಯು ಅವರ ಕಣ್ಣಿಗೆ ಬಿದ್ದಿತು. ಆ ಮೂರ್ತಿಯು ವಾಚಕರಿಗೆ ಅಪರಿಚಿತವಾದದ್ದಲ್ಲ. ಮಾತಾರಣ ದೇವಿಯೇ ತನ್ನ ಪರಿವಾರದೊಡನೆ ತೀರ್ಥ-ಯಾತ್ರೆಗಳನ್ನು ಮಾಡುತ್ತ ಅಲ್ಲಿಗೆ ಅಂದೇ ಬಂದು ಶಿವಾಲಯದಲ್ಲಿ ಇಳಿದುಕೊಂಡಿದ್ದಳು. ಶುಭ್ರವಸ್ತ್ರಗಳನ್ನುಟ್ಟುಕೊಂಡು, ದಿವ್ಯಕಾಂತಿಯಿಂದ ಪ್ರತ್ಯಕ್ಷ ಶಾರದೆಯೋ, ಪತಿವ್ರತಾ ಶಿರೋಮಣಿಯಾದ ಮಹಾಶ್ವೇತೆಯೋ ಎನ್ನುವಂತೆ ತೋರುವ ಮಾತಾರಣದೇವಿಯನ್ನು ನೋಡಿ ಮಹಾರಾಜರಲ್ಲಿ ಮಾತೃಭಕ್ತಿಯು ಉತ್ಪನ್ನವಾಯಿತು. ಮಾತಾಜಿಯವರ ಪರಿವಾರದ ತರುಣ ಗೋಸಾವಿನಿಯರು ಮಹಾರಾಜರಿಗೆ ಭಗಿನಿಯಂತೆ ತೋರಿದರು. ತಮ್ಮ ಪೂಜ್ಯ ಜನನಿಯನ್ನು ಬಿಟ್ಟು ಉತ್ತರಕ್ಕೆ ಬಂದಿದ್ದ ಮಹಾರಾಜರಿಗೆ ಪುನಃ ಜನನಿಗೆ ದರ್ಶನವಾದಂತಾಯಿತು. ಮಾತಾಜಿಯೇ ಮೊದಲಾದ ಆ ಗೊಸಾವಿನಿಯರು ಬಿಳಿಯ ವಸ್ತ್ರಗಳನ್ನುಟ್ಟುಕೊಂಡು, ತಮ್ಮ ಕುಂಬಳ ಸೊರಟೆಗಳನ್ನು ತುಂಬಿಕೊಂಡು, ಬಲಗೈಯಲ್ಲಿ ರುದ್ರಾಕ್ಷಮಾಲೆಯನ್ನು ಹಿಡಕೊಂಡು ಲಗಬಗೆಯಿಂದ ಪಾವಟಿಗೆಗಳನ್ನು ಹತ್ತಿಬರುತ್ತಿದ್ದರು. ಅದನ್ನು ನೋಡಿ ಧರ್ಮಾತ್ಮರಾದ ಮಹಾರಾಜರಿಗೆ ಪ್ರಾಚೀನಕಾಲದ ಋಷಿಪತ್ನಿಯರ, ಹಾಗು ಋಷಿ ಕುಮಾರಿಯರ ನೆನಪಾಗಿ ಅವರ ಮನಸ್ಸು ಅತ್ಯಂತ ಲೀನವಾಯಿತು! ಅವರ ಕಣ್ಣುಗಳಿಂದ ಆನಂದಾಶ್ರುಗಳು ಉದುರಹತ್ತಿದವು!

ಹೀಗೆ ಮಹಾರಾಜರು ಆನಂದಪರವಶರಾಗಿ ನೋಡುತ್ತಿರಲು, ಈ ಪವಿತ್ರ ಮೂರ್ತಿಗಳ ಕಡೆಗೆ ಯಮದೂತರಂಥವರು ಪಾವಟಿಗೆಗಳನ್ನು ಇಳಿದು ಬರಹತ್ತಿದ್ದು ಅವರ ಕಣ್ಣಿಗೆ ಬಿದ್ದಿತು. ಇಂಥ ಮೂರುಸಂಜೆಯ ಹೊತ್ತಿನಲ್ಲಿ ಈ ದುಷ್ಟರು ಇವರ ಕಡೆಗೆ ಯಾಕೆ ಬರುತ್ತಿರಬಹುದು? ಇವರದೇನಾದರೂ ದುರಾಲೋಚನೆಯಿರಬಹುದೇ ಎಂದು ಮಹಾರಾಜರು ಜಾಗರೂಕರಾಗಿ ನಿಂತುಕೊಂಡು ನೋಡಹತ್ತಿದರು. ಈ ದುಷ್ಟರು ಮೈಗೆಲ್ಲ ಕಪ್ಪುಬಟ್ಟೆಯನ್ನು ಸುತ್ತಿಕೊಂಡಿದ್ದರು. ಎಲ್ಲರ ಕೈಯಲ್ಲಿ ಶಸ್ತ್ರಗಳಿದ್ದಂತೆ ತೋರಿದವು. ಅವರಲ್ಲಿ ಒಬ್ಬನು ಮಾತಾರಣದೇವಿಯ ಬಳಿಗೆ ಬಂದು ಖಡ್ಗವನ್ನು ಝಳಪಿಸುತ್ತ— ''ಏ ಮುದವಿ, ಇದು ನೋಡು ಈ ಖಡ್ಗವನ್ನು! ಗದ್ದಲ ಮಾಡಿದರೆ ನಿನ್ನ ಚಂಡನ್ನೇ ತುಂಡರಿಸುವೆನು. ಸುಮ್ಮನಿದ್ದರೆ ನಿನ್ನ ಉಸಾಬರಿಗೆ ನಾವು ಬರುವುದಿಲ್ಲ, ನಾವು ಈ ಮೂವರು ತರುಣ ಗೋಸಾವಿನಿಯರ ಸಲುವಾಗಿ ಬಂದಿರುವೆವು. ಇವರನ್ನು ಸುಮ್ಮನೆ ನಮಗೆ ಒಪ್ಪಿಸಿಬಿಡು. ನೀವು ಯಾರಾದರೂ ''ಕುಯ್'' ಅಂದ ಒಬ್ಬೊಬ್ಬರು ಒಬ್ಬೊಬ್ಬರನ್ನು ತುಂಡರಿಸಿ ಚಲ್ಲುವೆವು,'' ಎಂದು ಗದ್ದರಿಸಿದನು. ಈ ಗದ್ದರಿಕೆಯ ಮಾತುಗಳು ಮಾಹಾರಾಜರ ಕಿವಿಗೆ ಬಿದ್ದವು. ಅಷ್ಟರಲ್ಲಿ ಮಾತಾರಣದೇವಿಯು ಸಂತಾಪದಿಂದ— ''ಛೀ ಅಧಮಾ, ಹಿಂದಕ್ಕೆ ಸರಿ'' ಎಂದು ನುಡಿಯುತ್ತಿರಲು, ಅವರಲ್ಲಿ

ಒಬ್ಬನು ತನ್ನ ಒರಟ ಹಸ್ತದಿಂದ ರಣದೇವಿಯ ಬಾಯಿಯನ್ನು ಗಟ್ಟಿಯಾಗಿ ಮುಚ್ಚಿದನು. ಇದನ್ನು ನೋಡಿ ಮಹಾರಾಜರು ತೀವ್ರವಾಗಿ ಹೋಗಿ ಬಾಯಿಮುಚ್ಚಿದವನನ್ನು ಒದ್ದು ಹಿಂದಕ್ಕೆ ಕೆಡವಿದರು; ಆದರೆ ಮಹಾರಾಜರು ಒಬ್ಬರು, ಆ ದುಷ್ಟರು ಏಳೆಂಟುಜನರು! ಎಲ್ಲರೂ ಮಹಾರಾಜರ ಮೇಲೆ ಮುಗಿಬಿದ್ದರು. ಆ ದುಷ್ಟರ ಸಮಾಚಾರವನ್ನು ತೆಗೆದುಕೊಳ್ಳಲಿಕ್ಕೆ ಮಹಾರಾಜರ ಭವಾನೀ ಖಡ್ಗವು ಸಜ್ಜಾಯಿತು. ಇತ್ತ ಮಾತಾರಣದೇವಿಯು ಗದ್ದಲ ಮಾಡಲು, ಗುಡಿಯೊಳಗಿನ ಜನರು ಅಲ್ಲಿಗೆ ಬಂದರು. ಆ ಜನರಲ್ಲಿದ್ದ ಒಬ್ಬ ರಜಪೂತನು, ಮಹಾರಾಜರೊಬ್ಬರೇ ಏಳು ಜರನೊಡನೆ ಕಾದುವದನ್ನು ನೋಡಿ ಸಿಂಹನಂತೆ ಜಿಗಿದು ಆ ದುಷ್ಟರೊಳಗಿನವನೊಬ್ಬನನ್ನು ಗುದ್ದಿ ನೆಲಕ್ಕೆ ಕೆಡವಿದನು. ಅಷ್ಟರಲ್ಲಿ ಒಬ್ಬನು ಆ ರಜಪೂತನ ಮೇಲೆ ಖಡ್ಗವನ್ನು ಪ್ರಯೋಗಿಸಲು, ಕಡತವು ಮರ್ಮಸ್ಥಾನಕ್ಕೆ ಬಿದ್ದು ರಜಪೂತನು ನೆಲಕ್ಕುರುಳಿದನು. ಇತ್ತ ಮಹಾರಾಜರು ಒಬ್ಬಿಬ್ಬರಿಗೆ ಚನ್ನಾಗಿ ಗಾಯಮಾಡಿದರು. ರಜಪೂತನು ನೆಲಕ್ಕೆ ಬಿದ್ದದ್ದನ್ನು ನೋಡಿ ಮಾತಾರಣದೇವಿಯು— "ಹಾ ಹಾ! ಘಾತವಾಯಿತು, ದುಷ್ಟರು ಈ ಪುಣ್ಯವಂತನನ್ನು ಕೊಂದರು." ಎಂದು ಒದರಲು, ಎಲ್ಲರೂ ಆ ರಜಪೂತನನ್ನು ಮುತ್ತಿದರು. ಈ ಸಂಧಿಯನ್ನು ಸಾಧಿಸಿ ಆ ದುಷ್ಟರೆಲ್ಲರೂ ಒಬ್ಬೊಬ್ಬರೇ ಓಡಿಹೋದರು. ಈ ಭಯಂಕರ ಪ್ರಸಂಗವನ್ನು ನೋಡಿ ಎದೆ ಒಡೆದು ಹೋಗಿದ್ದ ಕೌಶಲ್ಯೆಯೇ ಮೊದಲಾದವರು ಯಾವಾಗೋ ಗುಡಿಯೊಳಗೆ ಓಡಿಹೋಗಿ ತಮ್ಮ ಕೋಣೆಯ ಬಾಗಿಲು ಹಾಕಿಕೊಂಡು ಕುಳಿತುಬಿಟ್ಟಿದ್ದರು. ಇತ್ತ ಮಹಾರಾಜರು ರಜಪೂತನ ಗಾಯವನ್ನು ನೋಡಿ ಗಾಬರಿಯಾದರು. ಗಾಯದೊಳಗಿಂದ ರಕ್ತವು ಒಂದೇಸವನೆ ಪುಟಿಯುತ್ತಿತ್ತು. ಮಾತಾರಣದೇವಿಯು ಇದನ್ನು ನೋಡಿ, ನಮ್ಮ ಕಾಲಲ್ಲಿ ಈ ಪುಣ್ಯವಂತನಿಗೆ ಎಂಥ ದುರವಸ್ಥೆಯು ಒದಗಿತಲ್ಲ ಎಂದು ಮರಗುತ್ತ ಆತನ ಬಳಿಯಲ್ಲಿ ಕುಳಿತು ಗಾಯವನ್ನು ತನ್ನ ಕೈಯಿಂದ ಗಟ್ಟಿಯಾಗಿ ಹಿಡಿದಳು. ಆಗ ರಕ್ತ ಪುಟಿಯುವದು ಸ್ವಲ್ಪ ಕಡಿಮೆಯಾಯಿತು. ಆಕೆಯು ನೆರೆದ ಜನರಿಗೆ— "ಅಪ್ಪಗಳಿರಾ, ಯಾರಾದರೂ ಊರೊಳಗೆ ಹೋಗಿ ಒಬ್ಬ ವೈದ್ಯನನ್ನಾಗಲಿ, ಹಕೀಮನನ್ನಾಗಲಿ ಕರಕೊಂಡು ಬರಬಾರದಿರಾ? ಇಲ್ಲದಿದ್ದರೆ ಇಲ್ಲ ನೀವು ಹೀಗೆ ಗಾಯವನ್ನು ಹಿಡಿದು ಕುಳಿತುಕೊಳ್ಳಿರಿ, ನಾನು ಹೋಗಿಬರುತ್ತೇನೆ" ಎಂದು ಅಂಗಲಾಚಿ ಬೇಡಿಕೊಳ್ಳಹತ್ತಿದಳು; ಆ ತೇಜೋವಂತ ಪುಣ್ಯಮೂರ್ತಿಯ ಮಾತನ್ನು ಮೀರುವದು ಯಾರಿಗೆ ಶಕ್ಯವು? ಆಗ ಎಷ್ಟೋ ಜನರು ಊರೊಳಗೆ ಹೋಗಲು ಸಿದ್ಧರಾದರು. ಅದನ್ನು ನೋಡಿ ಮಹಾರಾಜರು ರಣದೇವಿಯನ್ನು ಕುರಿತು—"ಮಾತಾಜೀ, ತಾವು ಅಷ್ಟು ಆಯಾಸಪಡುವ ಕಾರಣವಿಲ್ಲ. ಇಲ್ಲಿಯೇ ಸಮೀಪದಲ್ಲಿ ಮರಾಟರ ಛಾವಣಿಯು ಇರುವದು. ಅಲ್ಲಿಗೆ ಈತನನ್ನು ಕರಕೊಂಡು ಹೋದರೆ ಎಲ್ಲ ವ್ಯವಸ್ಥೆಯು ಸರಿಯಾಗಿ ಆಗುತ್ತದೆ. ಇವರು ಊರಲ್ಲಿ ಹೋಗಿ ವೈದ್ಯರನ್ನು ಹುಡುಕುತ್ತ ಕುಳಿತುಕೊಳ್ಳುವದಕ್ಕಿಂತ ಇಲ್ಲಿಯೇ ಮರಾಟರ ಛಾವಣಿಯವರೆಗೆ ಈತನನ್ನು ಕರಕೊಂಡು ಬಂದರೆ ನೆಟ್ಟಗಾಗುವದು" ಎಂದು ಹೇಳಲು, ರಣದೇವಿಯೂ ಅದಕ್ಕೆ ಒಪ್ಪಿಕೊಂಡಳು; ಆ ಜನರೂ ತಡಮಾಡದೆ ಆ ಶಿಪಾಯಿಯನ್ನು ಎತ್ತಿಕೊಂಡು ಮಹಾರಾಜರನ್ನು ಹಿಂಬಾಲಿಸಿ ನಡೆದರು.

ರಣದೇವಿಯು ಹಾಗೆಯೇ ಶಿಪಾಯಿಯನ್ನು ಹಿಂಬಾಲಿಸಿ ಹೋಗತಕ್ಕವಳು; ಆದರೆ ಕೌಸಲ್ಯೆ ಮೊದಲಾದವರನ್ನು ಮಾತಾಡಿಸಿ ಅವರಿಗೆ ಧೈರ್ಯ ಹೇಳಿ ಹೋಗಬೇಕೆಂದು ಆಕೆಯು ಗುಡಿಗೆ ಹೋದಳು. ಆದರೆ ಅಲ್ಲಿ ಯಾರೂ ಕಾಣಲಿಲ್ಲ, ತಾವು ಇಳಿದುಕೊಂಡಿದ್ದ ಕೋಣೆಯ ಬಾಗಿಲು ಇಕ್ಕಿತ್ತು. ಮಾತಾಜಿಯು ಬಾಗಿಲಿಗೆ ಹೋಗಿ ಹೆಸರುಗೊಂಡು ಕರೆಯಲು, ಒಳಗಿನವರು ಲಗುಬಗೆಯಿಂದ ಬಾಗಿಲು ತೆರೆದು ಹೊರಗೆ ಬಂದರು. ಆಗ ರಣದೇವಿ— "ನಾನು ಈಗ ಆ ಗಾಯಹೊಂದಿದ ರಜಪೂತನ ವ್ಯವಸ್ಥೆಮಾಡಿ ಬರುವೆನು, ನೀವು ಇಲ್ಲಿಯೇ ಇರಿ" ಎಂದು ಹೇಳಲು ಅವರು— ನಮ್ಮನ್ನು ಬಿಟ್ಟು ನೀವು ಹೋಗುವದು ಹ್ಯಾಗೆ? ನಾವೂ ನಿಮ್ಮ ಸಂಗಡಲೇ ಬರುವೆವು. ನಾವು ಇಲ್ಲಿಯೇ ಕುಳಿತುಕೊಂಡಾಗ ಆಗಲೆ ಆದಹಾಗೆ ಆದರೆ ಏನು ಮಾಡಬೇಕು?" ಎಂದು ಕೇಳಿದರು. ಆಗ ಮಾತಾರಣದೇವಿಯು ಅವರಿಗೆ ಸಮಾಧಾನ ಹೇಳಿ, ಇಷ್ಟು ಜನರಿರುವದರಿಂದ ನಿಮಗೇನು ಬಂದದೆ, ನಾನು ಈಗ ಬರುವೆನು," ಎಂದು ನುಡಿದು, ಮರಾಟರ ಛಾವಣಿಯ ಕಡೆಗೆ ವೇಗದಿಂದ ನಡೆದಳು. ಪರೋಪಕಾರಿಗಳು ತಮ್ಮ ಕಷ್ಟವನ್ನು ಸರ್ವಥಾ ನೋಡರು. ಅತ್ತ ಜನರು ರಜಪೂತನನ್ನು ಎತ್ತಿಕೊಂಡು ದೂರ ಹೋಗಿದ್ದರೂ, ರಣದೇವಿಯು ಬೇಗನೆ ಅವರನ್ನು ಮುಟ್ಟಿದಳು. ಮಾತಾಜಿಯು ಬಂದದ್ದನ್ನು ನೋಡಿ ಮಹಾರಾಜರು— "ನೀವೇಕೆ ಬಂದಿರಿ? ಈ ರಜಪೂತನು ಯಾವನೇ ಇರಲೊಲ್ಲನೇಕೆ, ಶೂರನೂ, ಪರೋಪಕಾರಿಯೂ ಇರುವದರಿಂದ ನಾನು ಈತನನ್ನು ಬಂಧುವೆಂದು ತಿಳಿದಿರುವೆನು. ಈತನ ಯೋಗಕ್ಷೇಮವನ್ನು ನಾನು ಮನಃಪೂರ್ವಕವಾಗಿ ವಿಚಾರಿಸುವೆನು. ಈತನಿಗೆ ಔಷಧೋಪಚಾರ ಮಾಡಿಸಿ ಪ್ರಕೃತಿಯ ಸ್ಥಿತಿಯನ್ನು ನಿಮಗೆ ತಿಳಿಸುವೆನು. ಬೇಕಾದರೆ ಮೂರುಮೂರು ತಾಸಿಗೊಮ್ಮೆ ಒಬ್ಬನನ್ನು ನಿಮ್ಮ ಬಳಿಗೆ ಕಳಿಸಿ ಪ್ರಕೃತಿಯ ಮಾನವನ್ನು ತಿಳಿಸುವೆನು. ತಮ್ಮಂಥ ಸಜ್ಜನರು ಶ್ರಮಪಡುವದು ಸರಿಯಲ್ಲ, ತಮಗೆ ಈಗಾದ ಶ್ರಮವೇ ಬಹಳವಾಯಿತು. ನೀವು ಹೋಗಿರಿ, ನಿಮ್ಮವರೊಡನೆ ಸಮಾಧಾನದಿಂದ ಇರಿ. ಈತನ ಚಿಂತೆ ಬೇಡ, ಎನ್ನಲು ರಣದೇವಿಯು—"ಪುಣ್ಯಪುರುಷಾ, ನಿನ್ನ ಮೇಲಿನ ಅವಿಶ್ವಾಸದಿಂದ ನಾನು ಬರುವದಿಲ್ಲ; ನಮ್ಮ ಸಲುವಾಗಿ ಆ ಪರೋಪಕಾರಿಯಾದ ರಜಪೂತನು ಗಾಯಹೊಂದಿರುವಾಗ ಅವನನ್ನು ಬಿಟ್ಟುಹೋಗುವ ಹಾಗೆ ನನಗೆ ಆಗಲೊಲ್ಲದು; ಆದ್ದರಿಂದ ಛಾವಣಿಯತನಕ ಬಂದು ಆತನನ್ನು ನೋಡಿಕೊಂಡು ಬರುವೆನು" ಎಂದು ಹೇಳಿದಳು. ಅದಕ್ಕೆ ಮಹಾರಾಜರು— "ಹಾಗಾದರೆ ನಿಮ್ಮ ಸಲುವಾಗಿ ಒಂದು ಮೇಣೆಯನ್ನು ತರಿಸುವೆನು ನಿಲ್ಲಿರಿ; ನಮ್ಮ ಛಾವಣಿಯಲ್ಲಿ ಮೇಣೆಗಳಿರುವವು," ಅನ್ನಲು ರಣದೇವಿಯು— "ಮಹಾರಾಜ, ನೀವು ನನ್ನ ಚಿಂತೆಯನ್ನು ಮಾಡಬೇಡಿರಿ. ನಾನು ರಾಮೇಶ್ವರದ ಯಾತ್ರೆಯನ್ನು ಕಾಲನಡಿಗೆಯಿಂದ ಮಾಡಿಕೊಂಡು ಬಂದಿರುವೆನು; ನನಗೆ ನಡೆಯುವ ರೂಢಿಯಿದೆ," ಎಂದು ಹೇಳಿದಳು. ಆಗ ಮಹಾರಾಜರು ಹೆಚ್ಚಿಗೆ ಮಾತಾಡದೆ, ಮಾತಾಜಿಯವರ ಸಂಗಡ ವಿನಯದಿಂದ ಮಾರ್ಗವ ಕ್ರಮಿಸಹತ್ತಿದರು. ಈ ಪುಣ್ಯವಂತನು ಯಾರಿರಬಹುದೆಂದು ಮಾತಾಜಿಯು ತನ್ನೊಳಗೆ ಆಲೋಚಿಸುತ್ತ ಮಹಾರಾಜರ ಸಂಗಡ ನಡೆಯಹತ್ತಿದಳು.

ಛಾವಣಿಗೆ ಹೋದಕೂಡಲೆ ವೈದ್ಯರು ಆ ರಜಪೂತನ ಗಾಯವನ್ನು ತೊಳೆದು ಒರಿಸಿ ಔಷಧಹಾಕಿ ಕಟ್ಟಿದರು. ಗಾಯದಿಂದ ರಕ್ತಬರುವದು ಕಟ್ಟಾಯಿತು. ಆತನಿಗೆ ಪ್ರಾಣಭಯ ವಿಲ್ಲೆಂತಲೂ, ನಾಳಿಗೆ ಆತನಿಗೆ ಬಹುಮಟ್ಟಿಗೆ ನೆಟ್ಟಗಾಗುವದೆಂತಲೂ ವೈದ್ಯರು ಹೇಳಿದರು. ಅದನ್ನು ಕೇಳಿ ಮಹಾರಾಜರಿಗೂ, ರಣದೇವಿಗೂ ಬಹಳ ಸಂತೋಷವಾಯಿತು. ಆಗ ಮಹಾರಾಜರು ಮಾತಾ ರಣದೇವಿಗೆ— ''ಮಾತಾಜಿ, ಇನ್ನು ನೀವು ಚಿಂತಿಸುವ ಕಾರಣವಿಲ್ಲ. ಆತನ ಆರೈಕೆಯಲ್ಲಿ ಎಷ್ಟು ಮಾತ್ರವೂ ಹೆಚ್ಚುಕಡಿಮೆಯಾಗುವದಿಲ್ಲ. ನಿಮ್ಮ ಸಖಿಯರು ಆ ಗುಡಿಯಲ್ಲಿರುವರು. ನಮ್ಮ ಸಂಗಡ ತಾವೂ ಪ್ರವಾಸ ಮಾಡುವದಾದರೆ ಅವರನ್ನು ಇತ್ತಕಡೆಗೆ ಕರೆಯಿಸುವೆನು. ನನ್ನನ್ನು ತಮ್ಮ ಹೊಟ್ಟೆಯ ಮಗನಂತೆ ಭಾವಿಸಿರಿ. ನೀವು ಗುಡಿಗೆ ಹೋಗುವದಿದ್ದರೆ ಸಂಗಡ ಯಾರನ್ನಾದರೂ ಕೊಟ್ಟು ಕಳಿಸಿಕೊಡುವೆನು. ನಾಳೆ ಬೆಳಗಾದ ಕೂಡಲೆ ಈತನ ಪ್ರಕೃತಿಯ ಸಮಾಚಾರವನ್ನು ನೀವಿದ್ದಲ್ಲಿ ತಿಳಿಸುವೆನು'' ಎಂದು ಹೇಳಿದರು. ರಣದೇವಿಯು ಮಹಾರಾಜರ ಈ ಸೌಜನ್ಯವನ್ನು ನೋಡಿ, ಇವರು ಯಾರಿರಬಹುದೆಂದು ಯೋಚಿಸ ತೊಡಗಿದಳು. ಛಾವಣಿಯವರೆಲ್ಲರೂ ಇವರನ್ನು ''ಮಹಾರಾಜ'' ''ಮಹಾರಾಜ'' ಎಂದು ಕರೆಯುವದನ್ನೂ, ಇವರೊಡನೆ ಸೇವಕ ವೃತ್ತಿಯಿಂದ ನಡಕೊಳ್ಳುವದನ್ನೂ ನೋಡಿ, ಇವರು ಮರಾಟರ ರಾಜರಾದ ಶಿವಾಜಿ ಮಹಾರಾಜರಾಗಿರಬಹುದೆ? ಎಂದು ರಣದೇವಿಯು ಶಂಕಿಸತೊಡಗಿದಳು. ಆಕೆಯು ತನ್ನ ಶಂಕೆಯನ್ನು ದೂರಮಾಡಿಕೊಳ್ಳುವದಕ್ಕಾಗಿ ಮಹಾ ರಾಜರನ್ನು ಕುರಿತು—''ಅಪ್ಪಾ, ನೀನು ಒಳ್ಳೇ ಕರುಣಾಳುವೂ, ಪೀಡಿತರ ವಿಷಯವಾಗಿ ಕನಿಕರಪಡುವವನೂ, ಒಳ್ಳೇ ತೇಜಸ್ವಿಯೂ ಆಗಿ ತೋರುವೆ; ಆದ್ದರಿಂದ ನೀನು ಮರಾಟರ ರಾಜನಾದ ಶಿವಾಜಿಯಂತೂ ಅಲ್ಲವಷ್ಟೇ? ನಾನು ಈವರೆಗೆ ನಿನ್ನ ಸಂಗಡ ಬಹಳ ಸಲಿಗೆಯಿಂದ ನಡೆದುಕೊಂಡೆನು. ಇನ್ನು ಮೇಲೆಯಾದರೂ ಆ ತಪ್ಪು ನನ್ನಿಂದಾಗಬಾರದೆಂದು ಕೇಳಿಕೊಳ್ಳುತ್ತೇನೆ,'' ಅನ್ನಲು, ಮಹಾರಾಜರು ಏನೂ ಉತ್ತರ ಕೊಡದೆ ತಲೆ ತಗ್ಗಿಸಿ ಅತಿ ವಿನಯದಿಂದ ಮಾತಾರಣ ದೇವಿಯನ್ನು ನಮಸ್ಕರಿಸಿದರು. ಅದನ್ನು ನೋಡಿದ ಕೂಡಲೇ ರಣದೇವಿಯ ಕಣ್ಣುಗಳೊಳಗಿಂದ ದಳದಳ ನೀರುಗಳು ಉದರಹತ್ತಿದವು. ಆಕೆಯು ಶಿವರಾಯನಮೇಲೆ ಕೈ ನಿವಾಳಿಸಿ ಬಾಯಿಂದ ಏನೋ ಅಂದಳು. ಬಳಿಕ ಆಕೆಯು ಮಹಾರಾಜರನ್ನು ತೀರ ಹತ್ತರ ಕರೆದು—''ಅಪ್ಪಾ, ಭಗವಾನ್ ಏಕಲಿಂಗಜಿಯು ನಿನ್ನನ್ನು ದೀರ್ಘಾಯುಷಿಯನ್ನಾಗಿಮಾಡಲಿ. ನೀನು ನಿನ್ನ ತಾಯಿ–ತಂದೆಗಳ ಉದರದಿಂದ ಜನಿಸಿ ಅವರನ್ನು ಕೃತಾರ್ಥರನ್ನಾಗಿಮಾಡಿದೆ ನಾನು ನಿನ್ನ ಕೀರ್ತಿಯನ್ನು ಬಹಳವಾಗಿ ಕೇಳುತ್ತಿದ್ದೆನು. ಇಂದು ಕಣ್ಣುಮುಟ್ಟ ನಿನ್ನನ್ನು ನೋಡಿದೆನು, ಸಮಾಧಾನವಾಯಿತು. ನಮ್ಮಂಥ ಗೋಸಾ ವಿನಿಯರ ಜೀವದ ಸಲುವಾಗಿ ನೀನು ಏಳೆಂಟು ಜನ ದುಷ್ಟರಮೇಲೆ ಒಬ್ಬನೇ ಸಾಗಿಹೋದೆ; ನಿನ್ನ ತಾಯಿಯ ಹೊಟ್ಟೆಯು ತಣ್ಣಗಿರುವದು. ಅಂಜನಾಮಾತೆಯಂತೆ ನಿನ್ನ ತಾಯಿಯು ಪರಮ ಧನ್ಯಳೇ ಸರಿ! ಪರಮೇಶ್ವರನು ನಿಶ್ಚಯವಾಗಿ ನಿನಗೆ ಯಶಸ್ಸನ್ನೀಯುವನು. ನಮ್ಮಂಥ ಅಬಲೆಯರ ಮಾನವನ್ನು ಕಾಯ್ದ ನೀನು, ನಮ್ಮ ಹರಕೆಯಿಂದ ಜಯಶೀಲನೂ,

ದೀರ್ಘಾಯುಷಿಯೂ ಆಗುವೆ. ಈಗ ನೀನು ಎತ್ತಕಡೆಗೆ ಹೊರಟಿರುವೆ? ಇಷ್ಟು ಚಿಕ್ಕ ಸೈನ್ಯದೊಡನೆ ಉತ್ತರ ಹಿಂದುಸ್ಥಾನದ ಕಡೆಗೆ ಹೊರಟಿರುವಿಯಲ್ಲ! ಆದರೆ ಬಾದಶಹನು ಮಹಾದುಷ್ಟನು, ಕಪಟಿಯು. ಹಡೆದ ತಂದೆಯನ್ನು ನೋಡಿದವನಲ್ಲ. ಯಾವ ಕಾಲದಲ್ಲಿ ಏನು ಮಾಡಿಯಾನೆಂಬುದನ್ನು ಹೇಳಲಾಗುವದಿಲ್ಲ. ಆದರೆ ನಿನ್ನಂಥ ಅನಾಥ ರಕ್ಷಕರ ಬೆನ್ನನ್ನು ದೇವರು ಕಾಯುತ್ತಿರುವದರಲ್ಲಿ ಸಂಶಯವಿಲ್ಲ. ನೀನು ಬಹುಜಾಗರೂಕನಾಗಿರತಕ್ಕದ್ದು; ಆದರೆ ಶಿವರಾಜಾ, ನಾನು ಇನ್ನು ನನ್ನ ಸ್ಥಳಕ್ಕೆ ಹೋಗುತ್ತೇನೆ. ನನ್ನ ಗೆಳತಿಯರು ಉತ್ಕಂಠೆಯಿಂದ ನನ್ನ ಹಾದಿಯನ್ನು ನೋಡುತ್ತಿರಬಹುದು. ನಾಳೆ ಬೆಳಗಿನಲ್ಲಿ ನಾವು ಇಲ್ಲಿಂದ ಮುಂದಕ್ಕೆ ಸಾಗಿದರೂ ಸಾಗಬಹುದು. ಆಗ ನಿನ್ನ ಬಳಿಗೆ ಬಂದು ನಿನ್ನನ್ನು ಆಶೀರ್ವದಿಸಿ ಹೋಗುವೆವು, ಇನ್ನು ನನಗೆ ಅಪ್ಪಣೆಯನ್ನು ಕೊಡಬೇಕು'' ಅನ್ನಲು, ಮಹಾರಾಜರು ದೀವಟಿಗೆ ಕೊಟ್ಟು ತಾನಾಜಿಯನ್ನು ಸಂಗಡ ಕಳಿಸಿದರು. ಆಗ ಮಾತಾಜಿಯು ಏನೂ ಮಾತಾಡದೆ ಪೂಜ್ಯಬುದ್ಧಿಯಿಂದಲೂ, ಕೌತುಕದಿಂದಲೂ ಶಿವಾಜಿಯನ್ನು ನೋಡಿ ಹಾದಿಯ ಹಿಡಿದಳು. ತಾನಾಜಿಯು ಮಾತಾಜಿಯನ್ನು ಗುಡಿಯ ಒಳತನಕ ಕಳಿಸಿ ಎಲ್ಲರ ಯೋಗಕ್ಷೇಮವನ್ನು ಕೇಳಿಕೊಂಡು ಮಾತಾಜಿಯನ್ನು ನಮಸ್ಕರಿಸಿ ಹೊರಟುಹೋದನು.

ಈ ದಿನ ದುಷ್ಟರ ಕೈಯೊಳಗಿಂದ ತಮ್ಮನ್ನು ಬಿಡಿಸಿದವರು ಶಿವಾಜಿಮಹಾರಾಜರೆಂಬದನ್ನು ಮಾತಾಜಿಯವರ ಮುಖದಿಂದ ಕೇಳಿ ಕೌಶಲ್ಯಯೇ ಮೊದಲಾದವರಿಗೆ ಆಶ್ಚರ್ಯವಾಯಿತು. ನಾಳೆ ಮಹಾರಾಜರ ದರ್ಶನವಾಗುವದೆಂದು ಮಾತಾಜಿಯವರು ಹೇಳಿದ್ದನ್ನು ಕೇಳಿಯಂತು ಅವರ ಆನಂದವು ಅವರ ಹೊಟ್ಟೆಯಲ್ಲಿ ಹಿಡಿಸದಾಯಿತು. ರಾತ್ರಿಯೆಲ್ಲ ಮಹಾರಾಜರ ಚರಿತ್ರ ಶ್ರವಣದಲ್ಲಿಯೇ ಕಳೆದುಹೋಗಿ ಬೆಳ್ಳಗೆ ಬೆಳಗಾಯಿತು. ಗೋಸಾವಿಗಳು, ಬೈರಾಗಿಗಳು ಮೊದಲಾದವರು ದಕ್ಷಿಣದ ರಾಜನ ಪ್ರಸಿದ್ಧಿಯನ್ನು ಕೇಳಿದ್ದರು. ಆತನು ಮುಸಲ್ಮಾನರ ಅಳಕಿನೊಳಗಿಂದ ಹಿಂದೂ ಜನರನ್ನು ಬಿಡಿಸಿ ಗೋಬ್ರಾಹ್ಮಣರ ಪ್ರತಿಪಾಲನ ಮಾಡುವ ಯತ್ನವ ನಡಿಸಿರುವನೆಂಬುದನ್ನು ಚನ್ನಾಗಿ ಅವರು ಅರಿತಿದ್ದರು. ಕಾಶಿಯಿಂದ ರಾಮೇಶ್ವರದವರೆಗೆ ಸಂಚರಿಸುತ್ತಿದ್ದ ಈ ಜನರ ಯೋಗದಿಂದಲೇ ಶಿವಾಜಿ ಮಹಾರಾಜರ ಖ್ಯಾತಿಯು ಎಲ್ಲ ಕಡೆಗೆ ಆಗಿತ್ತು. ವರ್ತಮಾನಪತ್ರಗಳೂ, ಪ್ರಯಾಣದ ಈಗಿನ ಸುಲಭ ಸಾಧನಗಳೂ ಇಲ್ಲದ ಆಗಿನ ಕಾಲದಲ್ಲಿ ಈ ತೀರ್ಥಾಟನದ ಜನರು ಲೋಕಪ್ರಸಿದ್ಧಿಯ ಮುಖ್ಯಸಾಧನವಾಗಿದ್ದರು. ಔರಂಗಜೇಬನು ತಮ್ಮ ಧರ್ಮದ ಮೇಲೆ ಅನನ್ವಿತ ಒತ್ತಾಯವ ಹ್ಯಾಗೆ ನಡಿಸಿರುವನೆಂಬದು ಈ ತೀರ್ಥಾಟನದ ಜನರಿಗೆ ಗೊತ್ತಿದ್ದಷ್ಟು ಬೇರೆ ಯಾವ ಜನರಿಗೂ ಗೊತ್ತಿದ್ದಿಲ್ಲವೆಂದು ಹೇಳಬಹುದು. ಇದೇ ಜನರೇ ಮಹಾರಾಜರ ಸದ್ಗುಣಗಳ ಕೀರ್ತಿಯನ್ನು ಭರತಭೂಮಿಯ ತುಂಬ ಹರಡಿದ್ದರು. ಔರಂಗಜೇಬನ ಧರ್ಮಚ್ಛಲನದಿಂದ ಹಿಂದೂ ಜನರನ್ನು ಮುಕ್ತವಾಡಲು ಪರಿಪರಿಯ ಕಷ್ಟಗಳನ್ನು ಭೋಗಿಸುವ ಮಹಾರಾಜರ ಆಯುಷ್ಯದ ವೃದ್ಧಿಯಾಗಲೆಂದು ಈ ಯಾತ್ರಿಕರು ದೇವರನ್ನು ಪ್ರಾರ್ಥಿಸುತ್ತಲಿದ್ದರು. ದಕ್ಷಿಣದ ಯಾತ್ರೆಗೆ ಹೊರಟಿದ್ದ ಜನರು ಒಮ್ಮೆ ಈ ಮಹಾಪುರುಷನ ದರ್ಶನಮಾಡಿಕೊಳ್ಳಬೇಕೆಂದು ಬಹಳವಾಗಿ

ಯತ್ನಿಸುತ್ತಿದ್ದರು; ಆದರೆ ಶಿವಾಜಿಮಹಾರಾಜರ ಸಂಚಾರಕ್ರಮವು ಸ್ವತಃ ಅವರಿಗೆ ಗೊತ್ತಿರದ್ದರಿಂದ ಯಾತ್ರಿಕರಿಗೆ ಮಹಾರಾಜರ ದರ್ಶನವಾಗುವದು ದುರ್ಲಭವಾಗುತ್ತಿತ್ತು; ಇಂಥವರ ದರ್ಶನವು ತಮಗೆ ನಾಳೆ ಅನಾಯಾಸವಾಗಿ ಆಗುವದೆಂದು ತಿಳಿದು ಕೌಶಲ್ಯಯೇ ಮೊದಲಾದವರು ಆನಂದಪಟ್ಟದ್ದು ಆಶ್ಚರ್ಯವಲ್ಲ. ಇವರು ಹೀಗೆ ಆನಂದಪಡುತ್ತಿರಲು, ತಾನಾಜಿಯು ಬಂದು ರಜಪೂತನ ಪ್ರಕೃತಿಯು ನೆಟ್ಟಗಿರುವದನ್ನು ತಿಳಿಸಿದನು. ಅದನ್ನು ಕೇಳಿ ಎಲ್ಲರಿಗೂ ಸಂತೋಷವಾಯಿತು. ಆಗ ಮಾತಾಜಿಯು ತಾನಾಜಿಗೆ—ಅಪ್ಪಾ, ನಿನ್ನ ಬಾಯಲ್ಲಿ ಸಕ್ಕರೆ ಬೀಳಲಿ. ನೀನು ಒಳ್ಳೇ ಸುದ್ದಿಯನ್ನು ಹೇಳಿದೆ. ನಮಗೆ ಸಹಾಯ ಮಾಡಬಂದ ಮನುಷ್ಯನು ಮರಣಹೊಂದಿದನೆಂಬ ಸುದ್ದಿಯನ್ನು ಕೇಳುವ ಪ್ರಸಂಗ ಒದಗಿದ್ದರೆ ಸಾಯುವತನಕ ನನ್ನ ಮನಸ್ಸಿನಲ್ಲಿ ಅದು ಕಟೆಯುತ್ತಿತ್ತು. ಇನ್ನು ನಮ್ಮನ್ನು ದಯಮಾಡಿ ಮಹಾರಾಜರ ಬಳಿಗೆ ಕರಕೊಂಡು ಹೋಗು. ಅವರನ್ನು ಕಂಡು ಆ ಗಾಯಹೊಂದಿದ ರಜಪೂತನನ್ನು ಮಾತಾಡಿಸಿ ನಾವು ಹಾದಿಯ ಹಿಡಿಯುವೆವು. ಆ ದುಷ್ಟರು ಯಾರು, ಎಲ್ಲಿಂದ ಬಂದರು, ಎಲ್ಲಿಗೆ ಹೋದರು ಎಂಬದೇನೂ ತಿಳಿಯದ್ದರಿಂದ ನಾವು ಮತ್ತೊಂದು ಮಾರ್ಗದಿಂದ ಹೋಗುವೆವು.'' ಅನ್ನಲು, ತಾನಾಜಿಯು ಎರಡು ಕೈಗಳನ್ನು ಜೋಡಿಸಿ ನಮಸ್ಕರಿಸಿ— ''ಮಾತಾಜೀ, ನಿಮ್ಮೆಲ್ಲರನ್ನು ಕರಕೊಂಡು ಬರಲು ಮಹಾರಾಜರು ನನಗೆ ಹೇಳಿದರು; ಆದರೆ ನೀವೇ ಬರಲು ಒಪ್ಪಿಕೊಂಡದ್ದರಿಂದ ಬಹಳ ಸಂತೋಷವಾಯಿತು. ಮಹಾರಾಜರ ಇಚ್ಛೆಯನ್ನು ತಮಗೆ ನಿವೇದಿಸುವ ಕಾರಣವೇ ನನಗೆ ಬೀಳಲಿಲ್ಲ. ನಿಮ್ಮ ಸಾಮಾನು ಗಳೇನಾದರೂ ಇದ್ದರೆ ಕೊಡಿರಿ, ಅವನ್ನು ನಾನು ತಕ್ಕೊಳ್ಳುವೆನು. ನೀವು ನನ್ನ ಸಂಗಡ ನಡೆಯಬೇಕು'' ಅನ್ನಲು, ರಣದೇವಿಯು ನಕ್ಕು—''ನಮ್ಮ ಬೈರಾಗಿಣಿಯರ ಸಾಮಾನು ಗಳೇನಿರಬೇಕು? ಇದ್ದ ನಮ್ಮ ಸಾಮಾನುಗಳನ್ನು ನಾವು ತಕ್ಕೊಳ್ಳುವೆವು,'' ಎಂದು ಹೇಳಿದರೂ ತಾನಾಜಿಯು ಕೇಳಲಿಲ್ಲ; ಆದ್ದರಿಂದ ನಿರಪಾಯರಾಗಿ ತಮ್ಮ ಸಾಮಾನುಗಳನ್ನು ತಾನಾಜಿಯ ಕೈಯಲ್ಲಿ ಕೊಟ್ಟು ಆತನನ್ನು ಹಿಂಬಾಲಿಸಿ ಅವರೆಲ್ಲರೂ ಹೊರಟರು. ಸ್ವಲ್ಪ ವೇಳೆಯಲ್ಲಿ ಅವರು ಛಾವಣಿಯನ್ನು ಮುಟ್ಟಿದರು. ಮಹಾರಾಜರು ಇವರನ್ನು ನೋಡಿ ಆದರದಿಂದ ಚನ್ನಾಗಿ ಸತ್ಕರಿಸಿದರು. ಗಾಯಹೊಂದಿದ ರಜಪೂತನ ಪ್ರಕೃತಿಯು ಈಗ ನೆಟ್ಟಗಿರುತ್ತದೆಂದು ಮಹಾರಾಜರು ಹೇಳಲು, ರಣದೇವಿಯು—''ಮಹಾರಾಜಾ, ನಿನ್ನ ಪುಣ್ಯವು ಒಳ್ಳೇ ಬಲಿಷ್ಠವಾಗಿರುತ್ತದೆ; ಅಂದಬಳಿಕ ರಜಪೂತನಿಗೆ ಅಪಾಯವು ಯಾಕೆ ಆಗುವದು? ಸದ್ಯಕ್ಕೆ ನಾಲ್ಕುದಿನ ನೀನು ಸೋತು ನಡೆಯಬೇಕಾದರೂ, ಮುಂದೆ ನಿನಗೆ ಜಯವಾಗುವದೆಂದು ನಿಶ್ಚಯವಾಗಿ ಹೇಳುವೆನು. ನೀನು ಔರಂಗಜೇಬನ ಹಿಡಿಕೆಯಲ್ಲಿ ಸಿಗುವದು ಮಾತ್ರ ಒಳ್ಳೇದಲ್ಲ. ಆತನು ಕಪಟದ ಮೂರ್ತಿಯಾಗಿರುವನು. ಆತನ ಸಂಗಡ ನೀನು ಬಹಳ ಎಚ್ಚರದಿಂದ ನಡೆಯಬೇಕೆಂಬದನ್ನಾದರೂ ನೆನಪಿನಲ್ಲಿಡು. ಆತನು ಯಾವ ಕಾಲದಲ್ಲಿ ಏನು ಘಾತ ಮಾಡಿಯಾನೆಂಬದರ ನಿಯಮವಿಲ್ಲ. ಈವರೆಗೆ ಎಷ್ಟೋ ಜನರನ್ನು ಆತನು ಕಪಟಜಾಲದಲ್ಲಿ ತೊಡಗಿಸಿ, ಅವರ ಸರ್ವಸ್ವದ ನಾಶಮಾಡಿರುವದು ನಿನಗೆ ಗೊತ್ತಿರಲಿಕ್ಕಿಲ್ಲ. ಇನ್ನು ನೀನು ಇಲ್ಲಿಯವರೆಗೆ ಬಂದಿರುತ್ತೀ. ಇನ್ನುಮೇಲೆ ತಿರುಗಿ ಹೋಗುವದು

ಶಕ್ಯವಿಲ್ಲ, ತಿರುಗಿ ಹೋಗುವದರಲ್ಲಿ ಲಾಭವೂ ಇಲ್ಲ; ಆದರೆ ನೀನು ಬಹಳ ಎಚ್ಚರದಿಂದ ಇರಬೇಕೆಂದು ಮೇಲೆ ಮೇಲೆ ಹೇಳುವೆನು. ಬೈರಾಗಿಣಿಯು ನಾನು ಇದಕ್ಕೂ ಹೆಚ್ಚಿನ ಆಶೀರ್ವಾದವನ್ನಾದರೂ ನಾನೇನು ಕೊಡಲಿ? ನನ್ನ ಆಶೀರ್ವಾದವು ಎಂದೂ ಸುಳ್ಳಾಗ ಲಾರದು. ಇನ್ನು ನಾನು ಆ ರಜಪೂತರನ್ನು ಕಂಡು ಮಾತಾಡಿಸಿ ನನ್ನ ಪರಿವಾರದೊಡನೆ ಮುಂದಕ್ಕೆ ಸಾಗುವೆನು.''

ಮಾತಾಜಿಯ ಈ ಮಾತುಗಳನ್ನು ಕೇಳಿ ಮಹಾರಾಜರು— ''ತಮ್ಮಂಥವರ ಸಲುವಾಗಿ ತನ್ನ ಪ್ರಾಣವನ್ನು ಗಂಡಾಂತರಕ್ಕೆ ಗುರಿಮಾಡದವನನ್ನು ಮನುಷ್ಯನೆಂದಾದರೂ ಹ್ಯಾಗೆ ಕರೆಯಬೇಕು? ತಾವು ರಜಪೂತನ ಭೆಟ್ಟಿಯನ್ನು ಮಾಡಿಕೊಳ್ಳಬೇಕು; ಆದರೆ ಮೊದಲು ನನ್ನದೊಂದು ವಿನಂತಿಯನ್ನು ಕೇಳಿಕೊಂಡು ಮುಂದೆ ಮಾಡುವದನ್ನು ಮಾಡಬೇಕು. ಇನ್ನು ನೀವು ನಮ್ಮ ಛಾವಣಿಯ ಸಂಗಡ ಪ್ರವಾಸವನ್ನು ಮಾಡಿರಿ; ಆದರೆ ನಿಮಗೆ ಇಂಥ ಕಠಿಣ ಪ್ರಸಂಗವು ಒದಗಲಾರದು. ನಿನ್ನಿನ ಪ್ರಸಂಗದಲ್ಲಿ ಏನಾದರೂ ಅಸ್ತವ್ಯಸ್ತವಾಗಿದ್ದರೆ ಎಷ್ಟು ಅನರ್ಥವಾಗುತ್ತಿತ್ತಲ್ಲ! ನೀವು ಎಲ್ಲಿಗಾದರೂ ಬೇರೆ ಕಡೆಗೆ ಹೋಗುವದಾದರೆ ನಾಲ್ಕು ಜನರನ್ನು ನಿಮ್ಮ ಸಂಗಡ ಕಳಿಸುವೆನು. ನಮ್ಮ ನಿಮ್ಮ ಹಾದಿಯು ಒಂದೇ ಇರುವವರೆಗೆ ನಮಗೆ ನಿಮ್ಮ ಸತ್ಸಂಗತಿಯ ಲಾಭವು ಒದಗುವದು; ನಿಮಗೆ ನಮ್ಮ ಸಹಾಯವು ದೊರತಂತಾಗುವದು. ದಿನಾಲು ನಾಲ್ಕೈದುಸಾರೆ ನನಗೆ ನಿಮ್ಮ ದರ್ಶನವಾಗುವದು. ಹಾದಿ ಒಡೆದಲ್ಲಿ ನಿಮ್ಮನ್ನು ಕಳಿಸುವದಕ್ಕಾಗಿ ನಾಲ್ಕು ಜನರನ್ನು ಕಳಿಸುವೆನು'' ಎಂದು ಹೇಳಿದರು. ಅದನ್ನು ಕೇಳಿದಕೂಡಲೆ ಮಾತಾರಣದೇವಿಯು— ''ಮಹಾರಾಜಾ, ನಮ್ಮ ಸಲುವಾಗಿ ನೀನು ಆಲೋಚಿಸುವದು ಯಥಾರ್ಥವೇ ಸರಿ; ಯಾಕಂದರೆ ನೀನು ಸ್ವಭಾವತಃ ಬಡವರ ಪಕ್ಷಪಾತಿಯೂ, ದೀನಾನಾಥರ ರಕ್ಷಕನೂ ಆಗಿರುತ್ತಿ; ಆದರೆ ಭಿಕ್ಷುಕರಾದ ಗೋಸಾವಿನಿಯರು ನಾವು ಹೆಜ್ಜೆ ಹೆಜ್ಜೆಗೆ ಮಂದಿಯ ಆಶ್ರಯವನ್ನು ಕೇಳಹತ್ತಿದರೆ ಹ್ಯಾಗೆ ನಡೆಯಬೇಕು?। ನೀನನ್ನುವದು ಸರಿಯಾದದ್ದೇ; ಆದರೆ ನಮ್ಮ ವಿಚಾರವನ್ನು ನಾವು ನೋಡಿಕೊಳ್ಳಬೇಕಾಗುವದಲ್ಲವೇ? ನಾವು ಎಲ್ಲಿಯವರೆಗೆ ಅನ್ಯರನ್ನು ಯಾಚಿಸಬೇಕು? ಎಲ್ಲಿಯವರೆಗೆ ಮಂದಿಗೆ ಉಪಹತಿಯನ್ನುಂಟು ಮಾಡಬೇಕು? .....'' ಎಂದು ನುಡಿಯುತ್ತಿರುವಾಗ ಮಹಾರಾಜರು ಮುಂದೆ ಅವರನ್ನು ಮಾತಾಡ ಗೊಡದೆ—''ಮಾತಾಜೀ, ನೀವು ನನಗೆ ನನ್ನ ತಾಯಿಯ ಸಮಾನರು. ದೂರದಿಂದ ನಿಮ್ಮನ್ನು ನೋಡಿದರೆ ನನ್ನ ತಾಯಿಯನ್ನು ನೋಡಿದಹಾಗಾಗುತ್ತದೆ. ನಿಮ್ಮನ್ನು ನೋಡಿದಾಗಿನಿಂದ ನನಗೆ ನನ್ನ ತಾಯಿಯ ಸ್ಮರಣವಾಗುತ್ತಿರುವದು. ನಿಮ್ಮಂತೆಯೇ ನಮ್ಮ ತಾಯಿಯು ಪವಿತ್ರವಾದ ತೇಜಸ್ಸಿನಿಂದ ಪ್ರಕಾಶಿಸುತ್ತಿರುವಳು; ನಿಮ್ಮ ಹಾಗೆಯೇ ಆಕೆಯ ದೇಹಕಾಂತಿಯು ಇರುವದು. ಆ ನನ್ನತಾಯಿಯ ಕೈಯಲ್ಲಿಯೇ ಎಲ್ಲ ಅಧಿಕಾರವು. ಆಕೆಯ ಅಪ್ಪಣೆಯನ್ನು ಯಾರೂ ಉಲ್ಲಂಘಿಸಲಾರರು. ಆದರೆ ಆಕೆಯ ವೃತ್ತಿಯೂ ನಿಮ್ಮ ವೃತ್ತಿಯ ಹಾಗೆ ನಿಸ್ಪೃಹವಾದದ್ದು. ಸಂಸಾರದಲ್ಲಿದ್ದೂ ಆ ನಮ್ಮ ತಾಯಿಯು ನಿರ್ಲಿಪ್ತಳು; ಆದ್ದರಿಂದ ನೀವು ನನ್ನ ಬಳಿಯಲ್ಲಿ ಇದ್ದರೆ ನನ್ನ ತಾಯಿಯ ಬಳಿಯಲ್ಲಿದ್ದ ಹಾಗೆ ಆಗುವದು'' ಎಂದು ಬಹು ಆದರದಿಂದ ನುಡಿದರು.

ಅವರ ಮಾತುಗಳನ್ನು ರಣದೇವಿಯು ಸಮಾಧಾನದಿಂದ ಕೇಳುತ್ತಿದ್ದಳು; ಆದರೆ ಆಕೆಯ ಈ ಸಮಾಧಾನವು ಕಡೆತನಕ ನಿಲ್ಲದೆ ಆಕೆಯ ಮನಸ್ಸು ವ್ಯಗ್ರವಾಗಿ ಆಕೆಯ ಕಣ್ಣುಗಳಲ್ಲಿ ನೀರು ಬಂದವು. ಅಶ್ರುಪೂರ್ಣವಾದ ನೇತ್ರಗಳಿಂದಲೇ ಆಕೆಯು ಮಹಾರಾಜರನ್ನು ನೋಡುತ್ತ— ''ಮಹಾರಾಜಾ, ನನ್ನ ಮಗನು ನಿನ್ನಹಾಗೆ ಇದ್ದರೆ ನಾನು ಹೀಗೆ ದೇಶ ದೇಶ ಯಾಕೆ ತಿರುಗುತ್ತಿದ್ದೆನು'' ಎಂದು ತಟ್ಟನೆ ಆಡಿಬಿಟ್ಟಳು; ಆದರೆ ಕೂಡಲೆ ಆಕೆಯು ಆಡಬಾರದ್ದನ್ನು ಆಡಿದೆನೆಂದು ಪಶ್ಚಾತ್ತಾಪಪಟ್ಟಂತೆ ತೋರಿತು. ಆಕೆಯು ಮಹಾರಾಜರಿಗೆ—''ಮಹಾರಾಜಾ, ನನ್ನನ್ನು ಮತ್ತೆ ಮೋಹದಲ್ಲಿ ಕೆಡವಬೇಡ. ನಾನು ಈ ಮಾತೃಮೋಹದ ಪಾಶವನ್ನು ಒಮ್ಮೆ ಕಡಿದುಬಿಟ್ಟಿದ್ದೇನೆ. ಅದಕ್ಕೆ ನಾನು ಮತ್ತೆ ಒಳಗಾಗಲಾರೆನು. ನಿನ್ನಂಥ ಸತ್ಪುತ್ರನ ಜನನಿಯೆನಿಸಿ ಕೊಳ್ಳುವ ನಾನು ಪುಣ್ಯವಂತಳೇ ಸರಿ; ಆದರೂ ನಾನೊಬ್ಬಳೇ ತೀರ್ಥಯಾತ್ರೆ ಮಾಡುತ್ತ ಸಂಚರಿಸುವೆನು. ಈ ನನ್ನ ಗೆಳತಿಯರು ಅಕಸ್ಮಿಕವಾಗಿ ಬಂದು ಕೂಡಿದ್ದರಿಂದ, ನಾವು ಕೂಡಿ ಯಾತ್ರೆ ಮಾಡುವೆವು. ಇಲ್ಲದಿದ್ದರೆ ಪ್ರತಿಒಬ್ಬರು ನಮ್ಮಷ್ಟಕ್ಕೆ ನಾವು ಸ್ವತಂತ್ರರು. ನಾನು ನನ್ನ ದುರ್ದೈವದಿಂದ ಬೈರಾಗಿಣಿಯಾಗಿರುವಂತೆ, ಇವರೂ ತಮ್ಮ ದುರ್ದೈವದಿಂದಲೇ ಬೈರಾಗಿಣಿಯರಾಗಿರುತ್ತಾರೆ; ಅವರವರಷ್ಟಕ್ಕೆ ಅವರವರು ಸ್ವತಂತ್ರರು. ಅಂದಬಳಿಕ ನಾವೆಲ್ಲರೂ ನಿನಗೆ ಸುಮ್ಮನೆ ಯಾಕೆ ತೊಂದರೆಕೊಡಬೇಕು? ನಾವು ಸ್ವಚ್ಛಂದದಿಂದ ಹೋಗುವೆವು. ಅಂಥ ಪ್ರಸಂಗವು ಒದಗಿದ್ದರೆ ಭಗವಾನ್ ಏಕಲಿಂಗಜಿಯು ಇಂದಿನಂತೆಯೇ ನಮ್ಮ ಸಂರಕ್ಷಣವನ್ನು ಮಾಡುವನು. ಇಂದು ನೀನಾದರೂ ನಮ್ಮ ಸಹಾಯಕ್ಕೆ ಬರುವ ಸಂಭವವಿತ್ತೆ? ಹೀಗೆಯೇ ಈಶ್ವರೀತಂತ್ರದಿಂದ ಯೋಗಾಯೋಗವು ಒದಗುತ್ತಿರುತ್ತದೆ. ಪುನಃ ಸಂಕಟವು ಕದಾಚಿತ್ ಬರಲಿಕ್ಕಿಲ್ಲ, ಬಂದರೆ ಸರ್ವೇಶ್ವರನು ಈಗಿನಂತೆಯೇ ಸಂರಕ್ಷಣ ಮಾಡುವನು. ಇಲ್ಲದಿದ್ದರೆ ಪೂರ್ವಸಂಚಿತಾನುಸಾರ ಭೋಗಿಸುವದನ್ನು ಭೋಗಿಸಿದರಾಯಿತು. ಭೋಗಗಳನ್ನು ಕೊಡುವವನೂ ಆತನೇ, ಭೋಗಿಸುವವನೂ ಆತನೇ. ನಮ್ಮ ಕೈಯಲ್ಲೇ ನಿರುವದು? ಅಂದಬಳಿಕ ನಾವು ಸುಮ್ಮನೆ ಚಿಂತೆಯನ್ನಾದರೂ ಯಾಕೆ ಮಾಡಬೇಕು? ಮಹಾರಾಜಾ, ನಮಗೆ ಅಪ್ಪಣೆಯನ್ನು ಕೊಡು ನಿನ್ನ ದರ್ಶನದ ಅಲಭ್ಯ ಲಾಭವಾಯಿತು. ಇಷ್ಟೇ ನಮ್ಮ ಪುಣ್ಯವು. ನೀವು ನಮ್ಮನ್ನು ದೊಡ್ಡ ಸಂಕಟದಿಂದ ಮುಕ್ತಮಾಡಿರುತ್ತೀ. ಹೀಗೆಯೇ ನಿನ್ನಿಂದ ನಾವು ಎಷ್ಟು ಉಪಕಾರ ಮಾಡಿಸಿಕೊಳ್ಳಬೇಕು?''

ರಣದೇವಿಯ ಈ ಮಾತುಗಳನ್ನು ಕೇಳಿ ಮಹಾರಾಜರು ವಿಚಾರಮಗ್ನರಾದರು. ಇವರ ಮಗನು ಯಾವನಿರಬಹುದು? ಇಂಥ ಸಾಧ್ವಿಯ ಮನಸ್ಸನ್ನು ಆತನು ಯಾವಬಗೆಯಿಂದ ನೋಯಿಸಿರಬಹುದು? ಅಂಥ ಮನೋವ್ಯಥೆಯು ಆಗಿರದಿದ್ದರೆ ಹೀಗೆ ಇವರು ವೈರಾಗ್ಯ ವೃತ್ತಿಯನ್ನು ತಾಳಬಹುದೆ? ಎಂದು ಅಂದುಕೊಂಡುರಣದೇವಿಗೆ— ''ಮಾತಾಜಿ, ನಿಮ್ಮ ಮೇಲೆ ನನ್ನ ಉಪಕಾರವೇನಾಯಿತು? ಹೀಗೆ ತಾವು ಸರ್ವಥಾ ಅನ್ನಬಾರದು. ತಮ್ಮ ಮಗನೆಂದು ಹೇಳಿರುವವರಿಂದ ತಾಯಿಯ ಸಂಕಟವನ್ನು ದೂರ ಮಾಡುವದು ನನ್ನ ಕರ್ತವ್ಯವಾಯಿತು. ಹೆಚ್ಚಿಗೆ ಹೇಳುವದು ನನ್ನ ಯೋಗ್ಯತೆಯಲ್ಲ. ಕೆಲವು ದಿನಗಳಾದರೂ ನನ್ನ

ಸಂಗಡ ನೀವು ಪ್ರವಾಸಮಾಡಬೇಕೆಂದು ನಿಮಗೆ ಕೇಳಿಕೊಳ್ಳುವೆನು. ನನ್ನ ಮನಸ್ಸನ್ನು ಸಮಾಧಾನಪಡಿಸಬೇಕೆಂದು ನಿಮಗೆ ತೋರಿದರೆ, ನನ್ನ ಮಾತನ್ನು ನಡಿಸಬೇಕು. ನಿಮಗ ತೊಂದರೆ ಕೊಟ್ಟ ದುಷ್ಟರ ಗೊತ್ತು ಇನ್ನೂ ಹತ್ತಿರುವದಿಲ್ಲ. 'ಶೋಧಕ್ಕಾಗಿ ನಮ್ಮ ಜನರನ್ನು ಕಳಿಸಿದ್ದೇನೆ. ಅವರು ಗೊತ್ತುಹಚ್ಚದೆ ಬಿಡರು. ಅವರು ಗೊತ್ತುಹತ್ತಿದ ಬಳಿಕ ಅವರಿಗೆ ತಕ್ಕಶಾಸನ ಮಾಡೋಣ. ಆಮೇಲೆ ನೀವು ಬೇಕಾದಕಡೆಗೆ ಹೋಗಬಹುದು,'' ಎಂದು ಹೇಳಲು, ಮಾತಾರಣದೇವಿಯು ತಿರುಗಿ ಮಾತಾಡದೆ ಅದಕ್ಕೆ ಸಮ್ಮತಿಸಿದಳು. ಬಳಿಕ ಮಾತಾಜಿ ಯೊಡನೆ ಮಹಾರಾಜರು ಆ ರಜಪೂತನ ಬಳಿಗೆ ಹೋದರು. ಆತನ ಪ್ರಕೃತಿಯು ಸುಧಾರಿಸುತ್ತ ನಡೆದಿದ್ದರೂ, ನೆಟ್ಟಗೆ ಮಾತಾಡುವಷ್ಟು ತ್ರಾಣವು ಇನ್ನೂ ಆತನಿಗೆ ಬಂದಿದ್ದಿಲ್ಲ. ಆದರೂ ಮಹಾರಾಜರನ್ನೂ, ರಣದೇವಿಯನ್ನೂ ನೋಡಿ ಭಕ್ತಿಯಿಂದ ಆತನು ನಮಸ್ಕಾರಮಾಡಿ ಏನೋ ಮಾತಾಡಬೇಕೆಂದು ಮಾಡಿದನು; ಆದರೆ ಮಾತಾಜಿಯು ಮಾತಾಡಗೊಡಲಿಲ್ಲ. ಆ ರಜಪೂತನ ಗುರುತು ಮಾತಾಜಿಗೆ ಸ್ವಲ್ಪ ಸ್ವಲ್ಪ ಹತ್ತಿದ ಹಾಗಾಗುತ್ತಿತ್ತು. ಗಾಯಕ್ಕೆ ಪಟ್ಟಿಯ ಕಟ್ಟಿದ್ದರಿಂದಲೂ, ಆತನು ಬಹು ಕ್ಷೀಣನೂ, ನಿಸ್ತೇಜನೂ, ಆದ್ದರಿಂದಲೂ ಮಾತಾಜಿಗೆ ಆತನ ಪೂರ್ಣ ಪರಿಚಯ ಹತ್ತಲಿಲ್ಲ. ಇತ್ತ ಆ ರಜಪೂತನಿಗೂ ಮಾತಾಜಿಯ ಗುರುತು ಹತ್ತಿತ್ತೋ ಹ್ಯಾಗೋ ತಿಳಿಯದು; ಯಾಕಂದರೆ ಆತನು ಒಂದೇಸವನೆ ಮಾತಾಜಿಯನ್ನು ನೋಡುತ್ತಲಿದ್ದನು. ಆತನು ಮಾತಾಜಿಗೆ ಕ್ಷೀಣಸ್ವರದಿಂದ— ''ನಿಮ್ಮಂಥ ಪವಿತ್ರ ಮೂರ್ತಿಯ ದರ್ಶನವಾದದ್ದು ನನ್ನ ಪುಣ್ಯವು. ನನ್ನಿಂದ ನಿಮಗೇನು ಸಹಾಯವಾಗದಿದ್ದರೂ ನಿಮಗೂ, ಮಹಾರಾಜರಿಗೂ ನನ್ನ ಯೋಗಕ್ಷೇಮದ ಭಾರವು ಮಾತ್ರ ಬಿದ್ದಿತು,'' ಎಂದು ನುಡಿದನು. ಇಷ್ಟು ಮಾತಾಡಿದ್ದೇ ಆತನಿಗೆ ಆಯಾಸವಾಯಿತು. ಮುಂದೆ ಮಾತಾಜಿಯು ಆತನಿಗೆ ಮಾತಾಡಗೊಡಲಿಲ್ಲ. ನೆಟ್ಟಗಾದ ಬಳಿಕ ನೀನು ನನ್ನ ಉಪಕಾರವನ್ನೂ, ಮಹಾರಾಜರ ಉಪಕಾರವನ್ನೂ ತೀರಿಸುವೆ ಯಂತೆ. ಪುಣ್ಯವಂತಾ, ಪರೋಪಕಾರಕ್ಕಾಗಿ ನಿನ್ನ ಹಾಗೆ ತಮ್ಮ ಜೀವವನ್ನು ಗಂಡಾಂತರಕ್ಕೆ ಗುರಿಮಾಡುವವರು ತೀರ ಅಪರೂಪವು. ಇರಲಿ, ಈಗ ಹೆಚ್ಚು ಆಯಾಸಮಾಡಿಕೊಳ್ಳಬೇಡ. ಮಹಾರಾಜರು ಆಗ್ರಹಮಾಡುವದರಿಂದ ನಾವೂ ನಾಲ್ಕು ದಿನ ಅವರೊಡನೆ ಪ್ರವಾಸ ಮಾಡುವೆವು; ಅಷ್ಟುಹೊತ್ತಿನಲ್ಲಿ ನಿನಗೆ ನೆಟ್ಟಗೆ ಆಗೇ ಆಗುವದು. ಆಮೇಲೆ ಬೇಕಾದಷ್ಟು ಮಾತಾಡುವೆಯಂತೆ, ಬೇಕಾದಷ್ಟು ಪ್ರತ್ಯುಪಕಾರ ಮಾಡುವೆಯಂತೆ. ಈಗ ನೀನು ಸ್ವಸ್ಥವಾಗಿ ಮಲಗಿಕೋ. ನಾವು ಮತ್ತೆ ಬರುವೆವು'' ಎಂದು ಹೇಳಿ ಮಾತಾಜಿಯೂ, ಮಹಾರಾಜರೂ ಅಲ್ಲಿಂದ ಹೊರಟುಹೋದರು.

ಬರಬರುತ್ತ ಆ ರಜಪೂತ ಶಿಪಾಯಿಗೆ ಗುಣವಾಗಹತ್ತಿತು. ಮಹಾರಾಜರು ಛಾವಣಿಯನ್ನು ಕಿತ್ತಿ ಆಗ್ರಾದ ಹಾದಿಯನ್ನು ಹಿಡಿದರು. ಮಾತಾರಣದೇವಿಯು ತನ್ನ ಪರಿವಾರದೊಡನೆ ಅವರನ್ನು ಅನುಸರಿಸಿ ನಡೆದಳು. ಮಹಾರಾಜರು ಮಾತಾಜಿಯ ಸಲುವಾಗಿ ಒಂದು ಸ್ವತಂತ್ರ ಡೇರೆಯನ್ನು ಕೊಟ್ಟಿದ್ದರು. ಅದನ್ನು ಛಾವಣಿ ಕಿತ್ತುವಾಗ ನೌಕರರು ಕಿತ್ತುತ್ತಿದ್ದರು. ಛಾವಣಿ ಹೊಡೆಯುವಾಗ ಹೊಡೆಯುತ್ತಿದ್ದರು. ಅವರ ಊಟ–

ಉಡಿಗೆಯ ಸಲುವಾಗಿ ದಿನಾಲು ಉತ್ತಮ ಸಾಮಾನುಗಳ ಉಲಪಿಯು ಹೊತ್ತು-ಹೊತ್ತಿಗೆ ಸಿಗುವಂತೆ ಮಹಾರಾಜರು ದಕ್ಷತೆಯಿಂದ ವ್ಯವಸ್ಥೆ ಮಾಡಿದ್ದರು. ನಿಯಮಿಸಲ್ಪಟ್ಟ ಜನರ ಹೊರತು ಉಳಿದವರಾದರೂ ರಣದೇವಿಯ ಕಡೆಗೆ ತಮ್ಮ ಪರವಾನಿಗೆಯ ಹೊರತು ಅಡ್ಡ ಹಣಕದಂತೆ ಮಹಾರಾಜರು ಕಟ್ಟುಮಾಡಿದ್ದರು. ಅವರ ಭಜನ-ಪೂಜಾದಿಗಳಿಗೆ ಯಾವತರದ ತೊಂದರೆಯೂ ತಗಲದಂತೆ ಹೊತ್ತು-ಎಡಹೊತ್ತುಗಳನ್ನು ಲಕ್ಷಿಸದೆ ನನ್ನನ್ನು ಆಜ್ಞಾಪಿಸಲಿಕ್ಕೆ ಮಾತ್ರ ಮರೆಯಬಾರದೆಂದು ಮಹಾರಾಜರು ಮಾತಾಜಿಯವರಿಗೆ ಹೇಳಿಕೊಂಡಿದ್ದರು. ಆಶೀರ್ವಾದ ಪಡೆಯುವದಕ್ಕಾಗಿ ಅವರು ಒಮ್ಮೆ ಸಂಭಾಜಿಯನ್ನು ಮಾತಾಜಿಯವರ ಬಳಿಗೆ ಕರಕೊಂಡು ಬಂದಿದ್ದರು; ಅಂದಿನಿಂದಲೇ ಸಂಭಾಜಿಗೆ ಮಾತಾಜಿಯವರ ಸಲಿಗೆ ಬಿದ್ದುಹೋಯಿತು; ಆತನು ಅವರನ್ನು ಬಿಟ್ಟು ಅಗಲದಾದನು. ಆಗಾಗ್ಗೆ ಆತನು ಮಾತಾಜಿಯವರ ಬಳಿಗೆ ಹೋಗಹತ್ತಿದನು. ಹೀಗೆ ಮಹಾರಾಜರ ಪ್ರಯಾಣವು ಪರಮಾನಂದಕರವಾಯಿತು. ಸಜ್ಜನಸಮುಚ್ಚಯವಾಗಿರಲು, ಆನಂದಕ್ಕೆ ಕೊರತೆ ಯಾದರೂ ಯಾಕಾಗುವದು! ಅತ್ತ ರಜಪೂತ ಸಿಪಾಯಿಗೂ ದಿನದಿನಕ್ಕೆ ನೆಟ್ಟಗಾಗಿ ಆತನು ಓಡಾಡಹತ್ತಿದನು. ಮಹಾರಾಜರ ಮೇಲೆ ಆತನ ವಿಶ್ವಾಸ ಬಹಳ. ಅವರನ್ನು ಆತನು ತನ್ನ ಕುಲದೈವತವಾದ ಪ್ರತ್ಯಕ್ಷ ಏಕಲಿಂಗಜಿಯೆಂದು ತಿಳಿದಿದ್ದನು. ತನ್ನ ಪ್ರಾಣವನ್ನು ಉಳಿಸಿದ ಈ ಮಹಾತ್ಮನ ಸೇವೆಯಲ್ಲಿಯೇ ತನ್ನ ದೇಹವನ್ನು ಸವಿಸಬೇಕೆಂದು ಆತನು ನಿಶ್ಚಯಿಸಿದನು. ಮುಂದೆ ಮಾತಾರಣದೇವಿಗೆ ಆ ರಜಪೂತ ಸಿಪಾಯಿಯ ಗುರುತು ಹತ್ತಿತು. ರಜಪೂತ ಸಿಪಾಯಿಗೆ ಮಾತಾರಣದೇವಿಯ ಗುರುತು ಹತ್ತಿತು. ತನ್ನ ನೀಚ ಮಗನಾದ ದುರ್ಜಯಸಿಂಗನು ತಮ್ಮ ನಾಶಕ್ಕೆ ಕಾರಣವಾದಾಗ, ತಮ್ಮನ್ನು ರಕ್ಷಿಸುವದಕ್ಕಾಗಿ ಪರಿಪರಿಯಿಂದ ಕಷ್ಟಪಟ್ಟಿದ್ದ ಸ್ವಾಮಿನಿಷ್ಠ ಕೀರ್ತಿಸಿಂಗನೇ ಈತನೆಂದು ಮಾತಾಜಿಯು ತಿಳಿದುಕೊಂಡಿದ್ದಳು. ತನ್ನ ಸ್ವಾಮಿನಿಯಾದ ವಿಮಲಾದೇವಿಯೇ ಈ ಮಾತಾರಣದೇವಿಯೆಂದು ಕೀರ್ತಿಸಿಂಗನು ತಿಳಿದಿದ್ದನು; ಆದರೆ ತಮ್ಮ ಪರಸ್ಪರ ಸಂಬಂಧವನ್ನು ಅವರಿಬ್ಬರೂ ಮಹಾರಾಜರಿಗೆ ತಿಳಿಯಗೊಡಲಿಲ್ಲ. ಕೀರ್ತಿಸಿಂಗನು ಮೊದಲು ಮಹಾರಾಜರ ಸೇವೆಯಲ್ಲಿಯೇ ತನ್ನ ದೇಹವನ್ನು ಸವಿಸಬೇಕೆಂದು ಮಾಡಿದ್ದೇನೂ ನಿಜ; ಆದರೆ ತನ್ನ ಸ್ವಾಮಿನಿಯ ಗೊತ್ತು ಹತ್ತಿದಬಳಿಕ ಇಂಥ ವಿಪತ್ತಿನಲ್ಲಿ ಅವರ ಸೇವೆ ಮಾಡುವದು ಯೋಗ್ಯವೆಂದು ತಿಳಿದು, ಆತನು ತನ್ನ ವಿಚಾರವನ್ನು ಬದಲಿಸಿದನು; ಆದರೆ ಇದು ಮಾತಾಜಿಯವರ ಮನಸ್ಸಿಗೆ ಸರ್ವಥಾ ಬರಲಿಲ್ಲ, ಅವರು ಕೀರ್ತಿಸಿಂಗನಿಗೆ ಏಕಾಂತದಲ್ಲಿ—

"ಬಾಳಾ, ಕೀರ್ತಿ, ನಿನ್ನ ವಿಚಾರವು ನಿನ್ನ ಸ್ವಾಮಿನಿಷ್ಠೆಗೆ ಯೋಗ್ಯವಾದದ್ದೇ ಸರಿ; ಆದರೆ, ಶಿವರಾಯನಂಥ ವಿಭೂತಿಯು ಸ್ವದೇಶೋದ್ಧಾರಕ್ಕಾಗಿ ಯತ್ನಿಸಿ ಪರಿಪರಿಯ ಕಷ್ಟವನ್ನು ಭೋಗಿಸುತ್ತಿರುವಾಗ, ನಾವೆಲ್ಲರು ಆತನಿಗೆ ಸಹಾಯಮಾಡುವದನ್ನು ಬಿಟ್ಟು ಮತ್ತೇನು ಮಾಡಬೇಕು ಹೇಳು? ಇದಕ್ಕಿಂತಲೂ ಹೆಚ್ಚಿನ ಪುಣ್ಯಕಾರಕ ಪವಿತ್ರ ಕಾರ್ಯವು ಮತ್ತೊಂದಿರುವದೆ? ಕೀರ್ತಿ, ನೀವು ಮಹಾರಾಜರ ಸೇವೆಗಾಗಿ ಅವರನ್ನು ಆಶ್ರಯಿಸಿ ಪ್ರಸಂಗದಲ್ಲಿ ಅವರ ಪ್ರತ್ಯರ್ಥವಾಗಿ ನಿನ್ನ ದೇಹವನ್ನು ಅರ್ಪಿಸಿದರೆ ನಮ್ಮ ನಿಮ್ಮ

ಕುಲಕೋಟಿಯ ಉದ್ಧಾರವಾಗುವದು ನಿಶ್ಚಯವು; ಹಸಿದವರಿಗೆ ನಮ್ಮಿಂದ ಊಟಕ್ಕೆ ಹಾಕುವದಾಗದಿರುವಾಗ, ಊಟಕ್ಕೆ ಹಾಕುವವರ ಮನೆಯನ್ನಾದರೂ ತೋರಿಸಬೇಕೆನ್ನುವಂತೆ, ನಮ್ಮಿಂದ ಸ್ವದೇಶೋದ್ಧಾರದ ಕಾರ್ಯವಾಗದಿದ್ದಾಗ,ಅದನ್ನು ಮಾಡುತ್ತಿರುವ ಅವತಾರಿಕನಿಗೆ ಅಳಲಿಯ ಭಕ್ತಿಯಿಂದ ಸಹಾಯಮಾಡಿಯಾದರೂ ಕೃತಾರ್ಥರಾಗಬೇಕಲ್ಲವೆ? ಈಗ ಕೆಲವು ದಿವಸಗಳ ಹಿಂದೆ ದುಷ್ಟ ದುರ್ಜಯನು ಯಾವ ಕಾರಣದಿಂದಲೋ ಪಶ್ಚಾತ್ತಾಪಪಟ್ಟು, ವೈರಾಗ್ಯವನ್ನು ತಾಳಿರುವನು; ಆದರೆ ಆ ನೀಚನ ಮುಖಾವಲೋಕನವನ್ನು ಸಹ ಮಾಡಲಾರದೆ ''ನೀನು ಶಿವಪ್ರಭುವಿನ ಚರಣವನ್ನು ಸೇವಿಸಿ ಪಾಪಕ್ಷಾಲನೆ ಮಾಡಿಕೊಂಡು ಪವಿತ್ರನಾಗಿ ಬಾರೆ''ಂದು ಆತನನ್ನು ನಾನು ನಿಷೇಧಿಸಿ ಕಳಿಸಿದ್ದೇನೆ; ಆದ್ದರಿಂದ ಕೀರ್ತಿಸಿಂಹ, ನೀನೂ ಶಿವರಾಯನ ದಾಸನಾಗು!

ಮಾತಾರಣದೇವಿಯ ಈ ಮಾತುಗಳನ್ನು ಕೇಳಿ ಕೀರ್ತಿಸಿಂಗನಿಗೆ ಪರಮಾನಂದ ವಾಯಿತು; ಅದರಲ್ಲಿ ತನ್ನ ಸ್ವಾಮಿಪುತ್ರನಾದ ದುರ್ಜಯಸಿಂಗನು ಹಾದಿಗೆ ಹತ್ತಿದ್ದನ್ನು ಕೇಳಿ ಆತನು ಬಹುಸಮಾಧಾನಪಟ್ಟನು. ಒಂದು ದಿನ ಕೀರ್ತಿಸಿಂಗನು ಮಾತಾಜಿಯ ಸಮಕ್ಷ ತನ್ನನ್ನು ನೌಕರನಾಗಿ ಇಟ್ಟುಕೊಳ್ಳುವದಕ್ಕಾಗಿ ಮಹಾರಾಜರನ್ನು ಪ್ರಾರ್ಥಿಸಲು, ಮಹಾರಾಜರು ಸಂತೋಷದಿಂದ ಅದಕ್ಕೆ ಒಪ್ಪಿಕೊಂಡರು. ಆಗ ರಣದೇವಿಯು ಕೀರ್ತಿಸಿಂಗನನ್ನು ಕುರಿತು— ''ಅಪ್ಪಾ, ನೀನು ಬಹಳ ಒಳ್ಳೆಯ ಕೆಲಸ ಮಾಡಿದೆ; ಇಂಥ ಮಹಾತ್ಮನ ಬಳಿಯಲ್ಲಿ ಮೃತ್ಯುವು ಒದಗಿದರೆ ಉದ್ಧಾರವೇ ಆಗುವದು; ಆದರೆ ಅಲಮಗೀರನ ದರ್ಬಾರದಲ್ಲಿ ದಿವಾಣಗಿರಿ ದೊರೆತರೂ ಬೇಡ! ನೀನು ಮಹಾರಾಜರ ಸೇವಾತತ್ಪರನಾಗಿ ಕೀರ್ತಿಶಾಲಿಯಾಗುವದಕ್ಕಾಗಿ ನಿನ್ನನ್ನು ನಾನು ಕೀರ್ತಿಸಿಂಗನೆಂದು ಕರೆಯುತ್ತೇನೆ. ಕೀರ್ತಿಸಿಂಗ, ಪರಮೇಶ್ವರನು ನಿನ್ನ ಕಲ್ಯಾಣಮಾಡುವನು. ನಿಮಗೆ ಯಾತರ ಕೊರತೆಯೂ ಆಗಲಾರದು. ನಿನ್ನ ಹೆಂಡತಿಯು ನಿನ್ನನ್ನು ಕೂಡವಳು. ಎಲ್ಲ ಬಗೆಯಿಂದ ನಿನ್ನ ಕಲ್ಯಾಣವೇ ಆಗುವದು; ಯಾಕಂದರೆ ಮಹಾಪುರುಷರ ಸೇವೆಯ ಪ್ರಭಾವವೇ ಅಂತಹದಿರುತ್ತದೆ. ನಿನ್ನಂಥ ವೀರರನ್ನು ಮಹಾರಾಜರು ಸ್ವೀಕರಿಸಿದ್ದು ಬಹಳ ನೆಟ್ಟಗಾಯಿತು. ನೀನು ಇನ್ನು ಏನು ಮಾಡತಕ್ಕ ದ್ದೆಂಬದನ್ನು ಮಹಾರಾಜರ ಸಮಕ್ಷ ನಾನು ಹೇಳುತ್ತೇನೆ ಕೇಳಿಕೊಳ್ಳು. ಜಯಸಿಂಗರಾಜನ ಮಾತಿನಲ್ಲಿ ವಿಶ್ವಾಸವಿಟ್ಟು ಮಹಾರಾಜರು ಈಗ ಅಲಮಗೀರನ ದರ್ಬಾರಕ್ಕೆ ಹೋಗುತ್ತಿರುವರು. ಅಲಮಗೀರನ ಸ್ವಭಾವವನ್ನಂತು ನಿನ್ನ ಮುಂದೆ ವರ್ಣಿಸುವ ಕಾರಣವಿಲ್ಲ, ರಾಜ್ಯವನ್ನು ಸಂಪಾದಿಸುವದಕ್ಕಾಗಿ ತನ್ನ ತಂದೆಯನ್ನು ಸೆರೆಮನೆಯಲ್ಲಿ ದೂಡಲಿಕ್ಕೆ ಆತನು ಹಿಂದೆ ಮುಂದೆ ನೋಡಿದವನಲ್ಲ; ತನ್ನ ಹಿತ ಸಾಧಿಸಿಕೊಳ್ಳುವ ಪ್ರಸಂಗದಲ್ಲಿ ಆ ದುಷ್ಟನು ಯಾರನ್ನೂ ನೋಡನು, ಯಾವ ವಚನವನ್ನೂ ಪಾಲಿಸನು, ಎಂಥ ಪಾಪ ಕೃತ್ಯಕ್ಕೂ ಹೇಸನು. ಮಹಾರಾಜರ ಪರಿವಾರದೊಳಗಿನವರಿಗಾರಿಗೂ ಇತ್ತ ಕಡೆಯ ಸ್ಥಿತಿಯು ಗೊತ್ತಿರುವದಿಲ್ಲ; ಆದ್ದರಿಂದ ನೀನು ಬಹುಜಾಗರೂಕನಾಗಿರತಕ್ಕದ್ದು. ನೀನು ಯಾವಾಗಲೂ ಕಣ್ಣುತೆರೆದು ವ್ಯವಹರಿಸು. ನೀನು ಬೇಕಾದ ಸೋಗು ಹಾಕಿಕೋ, ಬೇಕಾದದ್ದು ಮಾಡು; ಆದರೆ ಬಾದಶಹನ

ದರ್ಬಾರದಲ್ಲಿ ಯಾವಸಂಗತಿಗಳು ಒದಗುವವು, ಯಾರು ಏನು ಅನ್ನುವರು, ಮಹಾರಾಜರ ಸಂಗಡ ಯಾರು ಹ್ಯಾಗೆ ವರ್ತಿಸುವರು ಎಂಬದನ್ನು ಲಕ್ಷಪೂರ್ವಕವಾಗಿ ಅವಲೋಕಿಸು, ಮರೆಯಬೇಡ. ನಿನ್ನ ಕಣ್ಣಿಗೆ ಬಿದ್ದದ್ದನ್ನು ಮನಸ್ಸಿಗೆ ಹೊಳೆದದ್ದನ್ನು ಮಹಾರಾಜರಿಗೆ ಆಗಾಗ್ಗೆ ಹೇಳುತ್ತ ಹೋಗು. ಮತ್ತೇನಾದರೂ ಸಂಕಟವು ಒದಗಿದರೆ ಅದನ್ನು ದೂರ ಮಾಡಲು ಯತ್ನಿಸು. ಜಯಸಿಂಗನ ಮಗನಾದ ರಾಮಸಿಂಗನು ತಮ್ಮ ವಿಷಯವಾಗಿ ಜಾಗರೂಕನಾಗಿರುವನೆಂದು ಮಹಾರಾಜರು ಹೇಳುವರು; ಅವರ ಮಾತು ಅಶಕ್ಯವೆಂತಲೂ ನಾನು ಹೇಳುವದಿಲ್ಲ; ರಾಮಸಿಂಗನು ಸುಜನನೆಂಬ ಮಾತಾದರೂ ಒಪ್ಪತಕ್ಕದ್ದೇ ಸರಿ; ಆದರೆ ಎಷ್ಟಾದರೂ ಆತನು ಗುಲಾಮಗಿರಿಯ ಹಾಲನ್ನು ಕುಡಿದು ಬೆಳೆದವನು. ಆತನ ಮನಸ್ಸಿನ ಉದ್ದೇಶವು ಒಳ್ಳೆಯದಿದ್ದರೂ ಆತನ ಕೈಯಿಂದ ಒಳ್ಳೆಯ ಕೃತಿಗಳು ಘಟಿಸಬಹುದೆಂದು ಮಾತ್ರ ನಂಬಿಗೆಯಿಂದ ಹೇಳಲಾಗುವುದಿಲ್ಲ. ಗುಲಾಮಗಿರಿಯಲ್ಲಿ ಬೆಳೆದವರ ಆಲೋಚನೆಗಳು ಗುಲಾಮರಿಗೆ ಒಪ್ಪುವಂತೆ ಇರತಕ್ಕವು; ಆದ್ದರಿಂದ, ನಾನು ನಿನಗೆ ಹೇಳುವದೇನಂದರೆ, ನಿನ್ನಿಂದಲೇ ಮಹಾರಾಜರ ಸಂರಕ್ಷಣವಾಗತಕ್ಕದ್ದೆಂದು ನಂಬಿ ನಿನ್ನ ಕರ್ತವ್ಯವನ್ನು ನೀನು ಜರುಗಿಸು. ಕೀರ್ತಿಸಿಂಗ, ಹೀಗೆ ನಿನ್ನನ್ನು ಬೋಧಿಸುವದಕ್ಕಿಂತ ಅಬಲೆಯಾದ ನನ್ನಿಂದ ಹೆಚ್ಚಿನದೇನಾಗುವದು ಹೇಳು? ಆದರೆ ಸಾರ್ವಭೌಮನಿಗೂ ಕೂಡ ಕಡ್ಡಿಯ ಅವಶ್ಯಕತೆಯಿರುವಂತೆ, ನನ್ನಿಂದೇನಾದರೂ ಮಹಾರಾಜರಿಗೆ ಸಹಾಯವಾಗುವಂತೆ ತೋರಿದರೆ, ಈ ರಣದೇವಿಯು ಹಿಂದೆ–ಮುಂದೆ ನೋಡಲಿಕ್ಕಿಲ್ಲವೆಂಬದನ್ನು ಚನ್ನಾಗಿ ನೆನಪಿನಲ್ಲಿಡು! ಮಹಾರಾಜ; ನೀವಾದರೂ ಈ ಕೀರ್ತಿಸಿಂಗನನ್ನು ಇಟ್ಟುಕೊಳ್ಳಿರಿ. ಈತನಿಂದ ನಿಶ್ಚಯವಾಗಿ ನಿಮ್ಮ ಮಹಾಕಾರ್ಯದಲ್ಲಿ ಸಹಾಯವಾಗುವದು. ನನ್ನ ಹಾದಿಯು ಇಲ್ಲಿಂದಲೇ ಒಡೆಯುವದು. ನಾನು ವೃಂದಾವನಕ್ಕೆ ಹೋಗುವೆನು. ಇನ್ನು ನನಗೆ ಆಗ್ರಹ ಮಾಡಬೇಡಿರಿ. ಹೋಗುವ ಹೊತ್ತಿನಲ್ಲಿ ನನಗೆ ಬೇಡೆಂದು ಅನ್ನಬೇಡಿರಿ. ಆಗ್ರಾಪಟ್ಟಣಕ್ಕೆ ವೃಂದಾವನವೇನು ದೂರವಿರುವುದಿಲ್ಲ. ಶ್ರೀ ಏಕಲಿಂಗೇಶ್ವರನ ಇಚ್ಛೆಯಿದ್ದಂತೆ ಆಗಲಿ, ಇನ್ನು ನಾನು ಹೋಗಿಬರುತ್ತೇನೆ. ಕೌಶಲ್ಯೇ–ಅನಸೂಯೇ, ದ್ರೌಪದೀ ನಡೆಯಿರಿ, ನಿಮ್ಮ ಸಾಮಾನುಗಳನ್ನು ತಕ್ಕೊಳ್ಳಿರಿ.'' ಎಂದು ಹೇಳಿ, ತಾನು ವ್ಯಾಘ್ರಚರ್ಮದ ಸುರಳೆಯನ್ನು ಬಗಲಲ್ಲಿಟ್ಟುಕೊಂಡು ಹೊರಡಲು ಸಿದ್ಧಳಾದಳು. ಚೇಳಿನ ಸಿದ್ಧತೆಯೆಂದರೇನು? ಅದು ಹೆಗಲ ಮೇಲೆ ತನ್ನ ಕೊಂಡೆಯನ್ನಿಟ್ಟುಕೊಂಡರೆ ತೀರಿತು. ಅದರಂತೆ ಆ ಗೋಸಾವಿನಿಯರು ಕ್ಷಣದಲ್ಲಿ ಹೊರಡಲು ಸಿದ್ಧರಾಗಿ ನಿಂತುಕೊಂಡರು. ಮಾತಾಜಿಯ ಯೋಗ್ಯತೆಯನ್ನರಿತ ಮಹಾರಾಜರ ಕಂಠವು ಸದ್ಗದಿತವಾಗಿತ್ತು; ಅತ್ತ ಮಾತಾಜಿಯ ಕಣ್ಣುಗಳು ನೀರಿನಿಂದ ತುಂಬಿದ್ದವು. ಆಗ ಮಾತಾಜಿಯನ್ನು ತಡೆಯುವ ಧೈರ್ಯವು ಮಹಾರಾಜರಿಗೂ ಆಗಲಿಲ್ಲ. ಸಂಗಡ ಯಾರನ್ನಾದರೂ ಕರಕೊಂಡು ಹೋಗಬೇಕೆಂದು ಮಹಾರಾಜರು ಹೇಳಿದರೂ ಅದಕ್ಕೆ ಅವರು ಒಪ್ಪಲಿಲ್ಲ. ಆಗ ಮಹಾರಾಜರು ಪ್ರಯಾಣೋನ್ಮುಖರಾದ ಮಾತಾಜಿಯವರ ಚರಣಗಳ ಮೇಲೆ ಮಸ್ತಕವನ್ನಿಟ್ಟರು. ಉಳಿದವರು ಮಾತಾಜಿಗೆ ಸಾಷ್ಟಾಂಗವಾಗಿ ಎರಗಿದರು. ಸಂಭಾಜಿಯು ಮಾತಾಜಿಯ

ಬಗಲು ಬಿಟ್ಟು ಇಳಿಯಲೊಲ್ಲನು. ಉಳಿದ ಬೈರಾಗಿಣಿಯರ ಕಣ್ಣುಗಳೂ ನೀರಿನಿಂದ ತುಂಬಿದವು. ಅಹಹ! ಸಜ್ಜನ ಸಮುಚ್ಚಯದ ಮಹಾಮಹಿಮೆಯನ್ನೇನು ವರ್ಣಿಸಬೇಕು? ಆ ಸಜ್ಜನರೆಲ್ಲರೂ ತಮ್ಮಲ್ಲಿಯ ಸದ್ವೃತ್ತಿಯ ಸಂಬಂಧದಿಂದ. ಪರಮಾಪ್ತರಾಗಿ, ವಿಯೋಗ ದುಃಖವನ್ನು ಸಹಿಸಲಾರದೆ ಕಣ್ಣೀರು ಸುರಿಸುತ್ತಿದ್ದರು! ಮಾತಾಜಿಯು ಶಿವರಾಯನನ್ನು ವರದಹಸ್ತವಿಟ್ಟು ಆಶೀರ್ವದಿಸಿ, ವಾತ್ಸಲ್ಯದಿಂದ ನೋಡುತ್ತ ಪರಿವಾರದೊಡನೆ ವೃಂದಾವನದ ಹಾದಿಯಹಿಡಿದಳು. ಇತ್ತ ಮಹಾರಾಜರೂ ಕೂಡಲೆ ಅಲ್ಲಿಂದ ಹೊರಟು ಆಗ್ರಾಪಟ್ಟಣದ ಸೀಮೆಯನ್ನು ಸೇರಿದರು. ಎಲೈ ಸಜ್ಜನಸಮುಚ್ಚಯವೇ, ನಿನಗೆ ಅನಂತ ಪ್ರಣಾಮಗಳಿರಲಿ!!

## ಸ್ವಾಗತ ಸಮಾರಂಭ

ಮಾತಾರಣದೇವಿಯು ವೃಂದಾವನಕ್ಕೆ ಹೋದ ಮುಕ್ಕಾಮಿನಿಂದಲೇ ಮಹಾರಾಜರು ತಾವು ಬಂದ ವರ್ತಮಾನವನ್ನು ದೂತ ಮುಖದಿಂದ ರಾಮಸಿಂಗನಿಗೆ ತಿಳಿಸಿದರು. ಸುದ್ದಿಯು ಮುಟ್ಟಿದಕೂಡಲೆ ರಾಮಸಿಂಗನು ಬಾದಶಹನ ಬಳಿಗೆ ಹೋದನು. ಆಗ ಮುಂಜಾನೆ ಮೂರುತಾಸು ಹೊತ್ತು ಏರಿತ್ತು. ಬಾದಶಹನು ಅದೇ ನಮಾಜುಮಾಡಿ ಬಂದು ಸ್ವಸ್ಥವಾಗಿ ಕುಳಿತುಕೊಂಡು ಪತ್ರಗಳನ್ನು ಬರೆಯುತ್ತಿದ್ದನು. ಆಗ ರಾಮಸಿಂಗನು ಹೋಗಿ ಬಾದಶಹನ ದರ್ಶನಮಾಡಿಕೊಂಡು ಕುರ್ನಿಸಾತ ಮಾಡಿದನು; ಆಗ ಬಾದಶಹನು ಮುಗುಳುನಗೆ ನಗುತ್ತ— "ಏನು ಸುದ್ದಿಯು," ಎಂದು ಪ್ರಶ್ನ ಮಾಡಿದನು. ಕೂಡಲೆ ರಾಮಸಿಂಗನು— "ದಕ್ಷಿಣದಿಂದ ಶಿವಾಜಿಮಹಾರಾಜರು ಬಂದಿರುವರು. ಅವರ ಸ್ವಾಗತಕ್ಕಾಗಿ ಯಾರು ಹೋಗಬೇಕು? ಸಂಗಡ ಎಷ್ಟು ಜನರನ್ನು ಕರಕೊಂಡು ಹೋಗಬೇಕು? ಲವಾಜಮು ಏನು ಒಯ್ಯಬೇಕು" ಎಂಬದನ್ನು ಕುರಿತು ಅಪ್ಪಣೆಯಾದರೆ, ಅದರಂತೆ ನಡಕೊಳ್ಳುವೆನು? ಎಂದು ಹೇಳಿಕೊಂಡನು; ಅದನ್ನು ಕೇಳಿ ಬಾದಶಹನು ಅತ್ತಕಡೆಗೆ ತನ್ನ ಲಕ್ಷವೇ ಇಲ್ಲವೆಂಬಂತೆ ತೋರಿಸಿಬಿಟ್ಟನು! ಲಕ್ಷವಂತು ಇರಲಿ, ರಾಮಸಿಂಗನು ತನ್ನ ಎದುರಿಗೆ ನಿಂತುಕೊಂಡಿರುವನು, ತನ್ನನ್ನು ಏನೋ ಕೇಳುವನು ಎಂಬ ಲಕ್ಷ ಸಹ ತನಗಿಲ್ಲೆಂಬಂತೆ ಬಾದಶಹನು ನಟಿಸಿದನು; ಆದರೆ ವಾಸ್ತವವಾಗಿ ಹಾಗೇನೂ ಇದ್ದಿಲ್ಲ. ಮಹಾರಾಜರು ಬಂದ ವರ್ತಮಾನವು ಈ ಮೊದಲೆ ಬಾದಶಹನಿಗೆ ಗುಪ್ತಚಾರರ ಮುಖಾಂತರವಾಗಿ ಗೊತ್ತಾಗಿದ್ದು, ಅದರ ಬಗ್ಗೆ ಏನು ವ್ಯವಸ್ಥೆ ಮಾಡಬೇಕೆಂಬದನ್ನು ಸಹ ಆತನು ಈ ಮೊದಲೆ ಗೊತ್ತುಮಾಡಿ ಇಟ್ಟುಕೊಂಡಿರಬಹುದು; ಆದರೆ ಈಗ ಬೇಕಂತ ರಾಮಸಿಂಗನನ್ನು ಆತನು ದುರ್ಲಕ್ಷಿಸಿ ಪತ್ರಬರೆಯುವದರಲ್ಲಿ ಗುಂಗಾಗಿರುವಂತೆ ತೋರುತ್ತಿದ್ದನು. ರಾಮಸಿಂಗನಿಗೆ ಬಾದಶಹನ ಈ ಸ್ವಭಾವವು ಗೊತ್ತಿದ್ದಿಲ್ಲ ವೆಂತಲ್ಲ; ಆದರೆ ತನ್ನ ತಂದೆಯು ಶಿವಾಜಿಯನ್ನು ಸತ್ಕರಿಸುವದಕ್ಕಾಗಿ ಪರಿಪರಿಯಾಗಿ ಬರೆದಿದ್ದೂ ಬಾದಶಹನು ಹೀಗೆ ಮಾಡುವದನ್ನು ನೋಡಿ ರಾಮಸಿಂಗನಿಗೆ ಆಶ್ಚರ್ಯವಾಯಿತು. ತನ್ನ

ತಂದೆಯು ಗೌರವಕ್ಕಾದರೂ ಬಾದಶಹನು ಶಿವಾಜಿಯನ್ನು ಸತ್ಕರಿಸಬಹುದೆಂದು ಆತನು ತಿಳಿದಿದ್ದನು; ಆದರೆ ಆ ಲಕ್ಷಣವು ತೋರಲಿಲ್ಲ. ಬಾದಶಹನು ಪತ್ರ ಬರೆಯುವ ಭರದಲ್ಲಿ ಹೀಗೆ ಸುಮ್ಮನಾಗಿರಬಹುದೆಂದು ತಿಳಿದು ರಾಮಸಿಂಗನು ಮತ್ತೆ ಕುರ್ನಿಸಾತ ಮಾಡಿ— "ಎದುರುಗೊಳ್ಳುವ ಬಗ್ಗೆ ಏನು ಅಪ್ಪಣೆಯಾಗುವದು? ಶಿವಾಜಿಮಹಾರಾಜರು ತೀರ ಸಮೀಪಕ್ಕೆ ಬಂದಿರುವರು. ಯಾರಾದರೂ ಎದುರಿಗೆ ಹೋಗಲೇಬೇಕು" ಎಂದು ಮತ್ತೆ ವಿನಂತಿ ಮಾಡಿಕೊಂಡನು. ಅದನ್ನು ಕೇಳಿ ಔರಂಗಜೇಬನು ಸ್ವಲ್ಪ ಹೊತ್ತು ಏನೂ ಮಾತಾಡಲಿಲ್ಲ. ಬಳಿಕ ಆತನು ರಾಮಸಿಂಗನನ್ನು ಕುರಿತು— "ಮೊದಲು ಶಿವಾಜಿಮಹಾರಾಜರೆಂದರೆ ಯಾರು ಹೇಳು, ಆಮೇಲೆ ಏನಾದರೂ ಹೇಳೋಣವಂತೆ. ನಾಲ್ಕೆಂಟು ಕೋಟೆಗಳನ್ನೂ, ಹತ್ತಿಪ್ಪತ್ತು ಹಳ್ಳಿಗಳನ್ನೂ ಬಿಕ್ಕೆ ಬೇಡಿ ತನ್ನ ಕೈಯಲ್ಲಿ ಇಟ್ಟುಕೊಂಡ ಮಾತ್ರದಿಂದ ಮನುಷ್ಯನು ಮಹಾರಾಜನಾಗುವನೇನು? ಹೋಗು, ಇಂಥ ಮನುಷ್ಯನ ಯೋಗ್ಯತೆಗೆ ಒಪ್ಪುವಂತೆ ನಾಲ್ಕೆಂಟು ಜನರ ಲವಾಜಮು ಕೊಟ್ಟು ಯಾರಾದರೊಬ್ಬ ಶಿಲೇದಾರನನ್ನು ಎದುರುಗೊಳ್ಳಲಿಕ್ಕೆ ಕಳಿಸಿಕೊಡು ಹೋಗು. ಆತನ ಸಂಗಡ ಎಷ್ಟು ಜನರಿರುವರು? ಇದ್ದಾರೇನು ನಾಲ್ಕೆಂಟು ಜನರು? ಆತನಿಗೆ ಯಾವದಾದರೊಂದು ಸಣ್ಣ ಮನೆಯನ್ನು ಕೊಟ್ಟು ಇಳಿಸು. ಮಹಾರಾಜನಂತೆ ಮಹಾರಾಜನು; ಪುನಃ ನನ್ನ ಮುಂದೆ ಆತನಿಗೆ ಮಹಾರಾಜನೆಂದು ಯಾರೂ ಕರೆಯಲಾಗದು ನಡೆ" ಎಂದು ತಟ್ಟನೆ ನುಡಿದುಬಿಟ್ಟನು. ಇದನ್ನು ನೋಡಿ ರಾಮಸಿಂಗನಿಗೆ ಬಹುಚಮತ್ಕಾರವಾಯಿತು. ಆತನು ಮನಸ್ಸಿನಲ್ಲಿ—"ಈ ವರೆಗೆ ಶಿವಾಜಿಮಹಾರಾಜರ ಸಂಬಂಧದಿಂದ ಇಂಥ ಉದ್ಗಾರಗಳನ್ನು ಬಾದಶಹನು ಎಂದೂ ಹೊರಗೆಡವಿರುವದಿಲ್ಲ. ಹೀಗಿದ್ದು ಇಂದೇ ಯಾಕೆ ಹೀಗೆ ನಡೆಯುತ್ತಿರಬಹುದು? ಶಿವಾಜಿಯು ನಮ್ಮ ಬಲೆಯಲ್ಲಿ ಸಿಕ್ಕನೆಂಬ ನಂಬಿಗೆಯಿಂದ ಹೀಗೆ ಈತನು ನುಡಿಯುತ್ತಿದ್ದರೆ, ಮುಂದೆ ಏನು ಅನರ್ಥವಾಗುವದೋ ಏನೋ! ಮುಂದಾಗುವ ಅನರ್ಥದ ಪೂರ್ವ ಸೂಚನೆಯು ಇದು ಆಗಿರಬಹುದೇ? ಏನೇ ಇರಲಿ, ಹೆಚ್ಚಿಗೆ ಮಾತಾಡಲಿಕ್ಕೆ ಇದು ಸಮಯವಲ್ಲ; ಈಗಂತು ಹೋಗೋಣ," ಎಂದು ಅಪ್ಪಣೆ ಪಡೆಯುವದಕ್ಕಾಗಿ ಪುನಃ ಆತನು ಕುರ್ನಿಸಾತ ಮಾಡಿದನು. ಬಾದಶಹನು ಆತನ ಕಡೆಗೆ ನೋಡುತ್ತಲೇ ಇದ್ದನು. ರಾಮಸಿಂಗನು ಹೋಗಲು ಅಪ್ಪಣೆ ಕೇಳಿಕೊಳ್ಳುವ ಲಕ್ಷಣವನ್ನು ತೋರಿಸಿದ ಕೂಡಲೇ ಬಾದಶಹನು ಆತನನ್ನು ಕುರಿತು—"ಏನೂ ಚಿಂತೆಯಿಲ್ಲ, ನೀವು ಬೇಕಾದಷ್ಟು ಲವಾಜಮು ತಕ್ಕೊಂಡು ಹೋಗಿ ಆತನನ್ನು ಕರೆಕೊಂಡು ಬರ್ರಿ. ಆತನಿಗೆ ಇಳಿದುಕೊಳ್ಳುವ ಸ್ಥಳದ ವ್ಯವಸ್ಥೆಯನ್ನು ಮಾಡಿರುವಿರಷ್ಟೆ? " ಎಂದು ಕೇಳಲು, ರಾಮಸಿಂಗನು ಸರಳತನದಿಂದ—"ದೊಡ್ಡದೊಂದು ವಾಡೆಯನ್ನು ಸ್ವಚ್ಛ ಮಾಡಿಸಿ ಎಲ್ಲ ವ್ಯವಸ್ಥೆಯನ್ನು ಉತ್ತಮ ರೀತಿಯಿಂದ ಮಾಡಿಸಿರುವೆನು. ಸೀದಾ ಸಾಮಗ್ರಿಗಳನ್ನು ತುಂಬಿಸಿಟ್ಟಿರುವೆನು; ಇನ್ನೇನು ಮಾಡಬೇಕೆಂಬ ಬಗ್ಗೆ ಅಪ್ಪಣೆಯಾದರೆ ಅದರಂತೆ ವ್ಯವಸ್ಥೆ ಮಾಡಿಸುವೆನು" ಎಂದು ಉತ್ತರಕೊಟ್ಟನು. ಅದಕ್ಕೆ ಆ ವಕ್ರಸ್ವಭಾವದ ಬಾದಶಹನು—"ನೀವೆಲ್ಲರೂ ಹಿಂದುಗಳು ಒಂದೇ. ಆದ್ದರಿಂದ ಎಲ್ಲ ವ್ಯವಸ್ಥೆಯು ಆಗೇ ಆಗಿರಬಹುದು; ಸುಮ್ಮನೆ

ನಮ್ಮ ಕೇಳತಕ್ಕ ಧರ್ಮವಾದದ್ದರಿಂದ ಕೇಳಿದೆವು.'' ಎಂದು ಕಟ್ಟಿಗೆ ಮುರಿದಹಾಗ ಮಾತಾಡಿದನು. ಬಾದಶಹನ ಇಂದಿನ ಈ ಮಾತುಗಳ ರೀತಿಯನ್ನು ನೋಡಿ, ಈತನ ಮೈಯಲ್ಲಿ ಇಂದು ಭೂತ ಸಂಚಾರವಾಗಿರಬಹುದೇ ಎಂದು ರಾಮಸಿಂಗನು ಅಂದುಕೊಂಡನು. ಮಾತಾಡಿದಾಗೊಂದು ಈತನ ಪಿಕ್ಕ ಮಾತು ಇದ್ದೇ ಇರುವದಲ್ಲ ಎಂದು ಆತನು ಖೇದಗೊಂಡನು. ವಾಸ್ತವವಾಗಿ ಮಹಾರಾಜರ ಸ್ವಾಗತ ಸಮಾರಂಭವನ್ನು ಮಾಡಲಿಕ್ಕೆ ರಾಮಸಿಂಗನಿಗೆ ಯಾವ ಮಾತಿನ ಕೊರತೆಯು ಇದ್ದಿಲ್ಲ, ಆತನ ಬಳಿಯಲ್ಲಿ ದೊಡ್ಡ ಸಿಬ್ಬಂದಿಯಿತ್ತು; ಮೇಣೆ-ಪಲ್ಲಕ್ಕಿಗಳಿದ್ದವು; ಆದರೆ ಬಾದಶಹನನ್ನು ಕೇಳದೇ ಮಾಡಿದರೆ ಆತನು ಸಿಟ್ಟಾಗುವನೆಂದು ತಿಳಿದು ಕೇಳಹೋದರೆ, ಆತನು ಹೀಗೆ ತಿರುಗಿ ಹೂಡಿದನು. ಇಂದು ಬಾದಶಹನ ಮನಸ್ಸು ನೆಟ್ಟಗಿಲ್ಲದ್ದರಿಂದ ಆದಷ್ಟು ಬೇಗನೆ ಇಲ್ಲಿಂದ ಹೋಗುವದೇ ನೆಟ್ಟಗೆಂದು ತಿಳಿದು, ರಾಮಸಿಂಗನು ಬಾದಶಹನ ಪಿಕ್ಕು ಮಾತುಗಳ ಭಯವನ್ನು ಹಿಡಿಯದೆ ಮನೆಗೆ ಹೋಗುವದಕ್ಕಾಗಿ ಸಿದ್ಧನಾದನು. ಅದನ್ನು ನೋಡಿ ಬಾದಶಹನು— ''ಆತನು ಬಂದು ಇಳಿದುಕೊಂಡು ನಾಲ್ಕುದಿನ ವಿಶ್ರಾಂತಿಯನ್ನು ಹೊಂದಿ ಸಮಾಧಾನಪಟ್ಟನೆಂದರೆ ನಮಗೆ ತಿಳಿಸಿರಿ; ಅಂದರೆ ಆತನನ್ನು ಕಾಣುವ ವ್ಯವಸ್ಥೆ ಮಾಡೋಣ. ನಾನು ಈವರೆಗೆ ಆಡಿದ ಮಾತುಗಳನ್ನು ಆತನ ಮುಂದೆ ಹೇಳಬೇಡಿರಿ; ಹೋಗಿರಿ, ಬೇಕಾದಷ್ಟು ಲವಾಜಮು ತಕ್ಕೊಂಡು ಹೋಗಿ ಆತನನ್ನು ಕರಕೊಂಡು ಬರ್ರಿ; ಆತನ ಮನಸ್ಸನ್ನು ಸಂತೋಷಪಡಿಸಿರಿ; ಬೇಕಾದಹಾಗೆ ಆತನ ಸರಬರಾಯಿ ಮಾಡಿರಿ; ಯಾವ ಮಾತಿನ ಕೊರತೆಯೂ ಆಗದಂತೆ ವ್ಯವಸ್ಥೆ ಮಾಡಿರಿ. ಇದಕ್ಕೂ ಹೆಚ್ಚಿಗೆ ಏನು ಹೇಳುವದದೆ?'' ಎಂದು ನುಡಿಯಲು, ಇದನ್ನೇ ಮಹದಾಜ್ಞೆಯೆಂದು ಭಾವಿಸಿ ರಾಮಸಿಂಗನು ಅಲ್ಲಿಂದ ಹೊರಟುಹೋದನು. ಆತನು ಅಲ್ಲಿಂದ ತನ್ನ ವಾಡೆಗೆ ಹೋದಕೂಡಲೆ ಮಹಾರಾಜರ ಸ್ವಾಗತ ಸಮಾರಂಭದ ಸಿದ್ಧತೆಯನ್ನು ಮಾಡತೊಡಗಿದನು. ತನ್ನ ಕಾರಭಾರಿಯನ್ನೂ, ವಾಗನೀಸನನ್ನೂ ಕರೆಸಿ ಏನೇನು ಮಾಡಬೇಕೆಂಬದನ್ನು ಅವರಿಗೆ ಹೇಳಿದನು. ಮಹಾರಾಜರು ಆಗ್ರಾದ ಅಗಸಿಗೆ ಯಾವಾಗ ಬರಬೇಕು, ಮತ್ತು ಎಲ್ಲಿ ನಿಲ್ಲಬೇಕು ಎಂಬದನ್ನು ತಿಳಿಸುವದಕ್ಕಾಗಿ ರಾಮಸಿಂಗನು ಮಹಾರಾಜರ ದೂತನ ಸಂಗಡಲೇ ತನ್ನ ದೂತನೊಬ್ಬ ನನ್ನು ಕಳಿಸಿದನು. ಹೀಗೆ ತನ್ನ ಮನೆಯಿಂದ ಮಾಡತಕ್ಕ ವ್ಯವಸ್ಥೆಯನ್ನೆಲ್ಲ ಮಾಡಿದ ಬಳಿಕ, ತನ್ನ ಜತೆಯ ಸರದಾರರನ್ನು ಕರೆಸುವ ಉದ್ಯೋಗವನ್ನು ಆರಂಭಿಸಿದನು. ಮಹಾರಾಜರನ್ನು ನೋಡುವ ಇಚ್ಛೆಯು ದರ್ಬಾರದೊಳಗಿನ ಬಹುಜನರಿಗೆ ಇತ್ತು. ಮಹಾರಾಜರು ಎಂದು ಬರುವರೆಂದು ಅವರ ಎಂಟು ದಿನಗಳಿಂದ ರಾಮಸಿಂಗನನ್ನು ಕೇಳುತ್ತಲಿದ್ದರು. ಹೀಗೆ ಕೇಳಿದವರನ್ನೆಲ್ಲ ರಾಮಸಿಂಗನು ಕರೆಸಿದನು. ಅವರಾದರೂ ತಮ್ಮ ತಮ್ಮ ಲವಾಜಮುಗಳೊಡನೆ ಮಹಾರಾಜರನ್ನು ಎದುರುಗೊಳ್ಳುವದಕ್ಕಾಗಿ ಸಿದ್ಧರಾದರು. ಇವರೆಲ್ಲರ ಸಿದ್ಧತೆಯಿಂದ ಅನಾಯಾಸವಾಗಿ ದೊಡ್ಡದೊಂದು ಕಾರ್ಯವಾಯಿತು. ''ದಕ್ಷಿಣದಲ್ಲಿ ಪುಂಡಾಟಿಕೆ ನಡಿಸಿ ಬಾದಶಹನಿಗೆ ಬಹಳವಾಗಿ ತ್ರಾಸಕೊಟ್ಟಿದ್ದ ಶಿವಾಜಿರಾಜನು ಈಗ ಬಂದಿದ್ದ. ಆತನ ಸ್ವಾಗತ ಸಮಾರಂಭವು ಬಹು ವಿಜೃಂಭಣೆಯಿಂದ ಆಗುತ್ತದೆ''ಂಬ ಸುದ್ದಿಯು ಪಟ್ಟಣದ ತುಂಬೆಲ್ಲ

ಹಬ್ಬಿತ್ತು ಬಾದಶಹನ ಹೊರತು ಉಳಿದ ಎಲ್ಲ ರಜಪೂತ ಸರದಾರರೂ, ಮುಸಲ್ಮಾನ ಸರದಾರರೂ ಆತನನ್ನು ಎದುರುಗೊಳ್ಳುವದಕ್ಕೆ ಹೊರಡುವರೆಂತಲೂ, ಸ್ವತಃ ಬಾದಶಹನ ಸವಾರಿಯು ಹೊರಟರೆ ಆಗುವಷ್ಟು ಸಮಾರಂಭವು ಈಗ ಆಗುವದೆಂತಲೂ ಗುಲ್ಲು ಹುಟ್ಟಿಬಿಟ್ಟಿತ್ತು; ಅಂದಬಳಿಕ ಕೇಳುವದೇನು? ಮುಖ್ಯ ಮುಖ್ಯ ಮಾರ್ಗಗಳೊಳಗಿನ ಮನೆಯ ಜನರು ತಮ್ಮ ತಮ್ಮ ಮನೆಯ ಕಿಡಿಕಿಗಳಲ್ಲಿ ಕುಳಿತುಕೊಂಡರು. ದಕ್ಷಿಣ ರಾಜನು ತಮ್ಮ ಕಣ್ಣಿಗೆ ಬೀಳಬೇಕೆಂಬ ಕುತೂಹಲವು ಎಲ್ಲರಲ್ಲಿಯೂ ಉತ್ಪನ್ನವಾಯಿತು! ಆತನು ಯಾವಾಗ ಬರುವನು, ಯಾವ ಮಾರ್ಗದಿಂದ ಬರುವನು ಎಂಬುದರ ಗುರುತು ಯಾರಿಗೂ ಇದ್ದಿಲ್ಲ; ಆದರೆ ಮುಖ್ಯ ಮುಖ್ಯ ಮಾರ್ಗದ ಜನರು ತಮ್ಮ ಮಾರ್ಗದಿಂದಲೇ ಆತನು ಬರುವನೆಂದು ತಿಳಿದುಕೊಂಡಿದ್ದರು. ಶಿವಾಜಿಮಹಾರಾಜರ ಹೆಸರೂ, ಕೀರ್ತಿಯೂ ಹಿಂದುಸ್ಥಾನದಲ್ಲೆಲ್ಲ ಹಬ್ಬಿದ್ದರಿಂದ, ಅವರನ್ನು ನೋಡಲಿಕ್ಕೆ ಎಲ್ಲರೂ ಆತುರಪಡುತ್ತಿದ್ದರು. ಆದ್ದರಿಂದ ಹೇಳದೆ ಕೇಳದೆ ಮಾಹಾರಾಜರ ಸ್ವಾಗತ ಸಮಾರಂಭದ ಸಿದ್ಧತೆಯನ್ನು ಜನರು ತಾವಾಗಿ ಮಾಡಹತ್ತಿದರು. ಶಿವಾಜಿಮಹಾರಾಜರು ಪ್ರತ್ಯಕ್ಷ ಶಿವಾವತಾರವಿದ್ದು ಅವರ ಕೈಯಿಂದ ಮೊಗಲರ ಶಾಸನ ವಾಗತಕ್ಕದ್ದದೆಯೆಂದು ಬಹುಜನರ ಶ್ರದ್ಧೆಯಿತ್ತು ಹೀಗೆ ಪಾರಪತ್ಯ ಮಾಡುವವರು ಈಗ ಬಾದಶಹನಿಗೆ ಶರಣು ಯಾಕೆ ಬಂದರೆಂದು ಯಾರಾದರೂ ಕೇಳಿದರೆ, ಅದಕ್ಕೆ ಈ ಶ್ರದ್ಧಾಳು ಜನರು—''ಅಪ್ಪಗಳಿರಾ, ವನವಾಸವು ಶ್ರೀರಾಮಚಂದ್ರನಿಗೆ ಬಿಡಲಿಲ್ಲ; ಪಾಂಡವರಿಗೆ ಬಿಡಲಿಲ್ಲ; ಅದರಂತೆಯೇ ಈಗ ನಾಲ್ಕು ದಿನ ಮಹಾರಾಜರು ಸೋತು ನಡೆಯಬೇಕಾ ಗಿರುವದು,'' ಎಂದು ಉತ್ತರ ಕೊಡುತ್ತಲಿದ್ದರು.

ಹೀಗೆ ಪರಸ್ಪರ ಮಾತುಕಥೆಗಳು ನಡೆದು ಆಗ್ರಾಪಟ್ಟಣದ ತುಂಬೆಲ್ಲ ಶಿವಾಜಿ ಮಹಾರಾಜರ ಸ್ವಾಗತ ಸಮಾರಂಭದ ಸಿದ್ಧತೆಯ ಸಂಭ್ರಮವು ನಡೆಯಿತು; ಯಾರು ತಮ್ಮ ತಮ್ಮ ಮನೆಗಳನ್ನು ಮೇಲಾಟದಿಂದ ಶೃಂಗರಿಸಿದರು; ಯಾರು ಗುಡಿಗಳನ್ನು ನಿಲ್ಲಿಸಿದರು; ಯಾರು ತೋರಣಗಳನ್ನು ಕಟ್ಟಿದರು; ಯಾರು ಅಂಗಳಗಳನ್ನು ಉಡುಗಿ ಸಾರಿಸಿ ರಂಗವಲ್ಲಿ ಗಳನ್ನು ಹಾಕಿದರು. ಸ್ವಲ್ಪ ಸಂಜೆಯಾದೀತೆಂಬ ಕಲ್ಪನೆಯು ಹೊಳೆದಕೂಡಲೆ ಕೆಲವರು ದೀಪೋತ್ಸವದ ಸಿದ್ಧತೆಯನ್ನು ಸಹಮಾಡಹತ್ತಿದರು. ''ಗತಾನುಗತಿಕೋಲೋಕಃ'' ಎಂಬ ಉಕ್ತಿಯಂತೆ ಎಲ್ಲರ ಅವಸ್ಥೆಯಾಯಿತು. ಮಹಾರಾಜರ ಸ್ವಾಗತ ಸಮಾರಂಭವು ತನ್ನಷ್ಟಕ್ಕೆ ತಾನೇ ಇಷ್ಟು ವಿಜೃಂಭಣೆಯಿಂದ ಆದೀತೆಂದು ರಾಮಸಿಂಗನ ಕನಸುಮನಸುಗಳಲ್ಲಿ ಕೂಡ ಬಂದಿದ್ದಿಲ್ಲ. ಯಾವತ್ತೂ ಸರದಾರರೂ, ದರಕದಾರರೂ, ದರ್ಬಾರೀ ರಜಪೂತರೂ, ಇತರ ಹಿಂದೂಗಳೂ ತಮ್ಮ ತಮ್ಮ ಲವಾಜಮುಗಳೊಡನೆ ಮಹಾರಾಜರ ಸ್ವಾಗತಕ್ಕಾಗಿ ಹೊರಟರು. ಇಡಿಯ ಆಗ್ರಾ ಪಟ್ಟಣವು ಗದಗಮಿಸಿ ಹೋಯಿತು. ಈ ಗಡಿಬಿಡಿಯು ಬಾದಶಹನ ಕಿವಿಯವರೆಗೆ ಹೋಯಿತು. ಆತನ ಜನಾನಖಾನೆಯಲ್ಲಿಯೂ ಈ ಸುದ್ದಿಯು ಮುಟ್ಟಿತು; ಆದ್ದರಿಂದ ರಾಮಸಿಂಗನು ಶಿವಾಜಿಮಹಾರಾಜರಿಗೆ— ''ಇನ್ನು ನೀವು ಬೇಗನೆ ಪಟ್ಟಣದಲ್ಲಿ ಬರುವಂತೆ ಮಾಡಬೇಕು; ವಿಲಂಬ ಮಾಡಬಾರದು. ಸಣ್ಣವರಿಂದ ದೊಡ್ಡವರವರೆಗೆ

ಎಲ್ಲಜನರು ತಮ್ಮ ದರ್ಶನದ ವಿಷಯದಲ್ಲಿ ಉತ್ಸುಕರಾಗಿರುವರು'' ಎಂದು ಹೇಳಿಕಳಿಸಿದನು. ಮಹಾರಾಜರು ಮುಂದಕ್ಕೆ ಸಾಗಿಬರಹತ್ತಿದರು. ಅವರ ಮನಸ್ಸು ಬಹಳ ಅಸ್ವಸ್ಥವಾಗಿತ್ತು. ಬಾದಶಹನು ನನ್ನ ದೈನ್ಯವನ್ನು ಜಗತ್ತಿಗೆ ತೋರಿಸುವದಕ್ಕಾಗಿಯೇ ನನ್ನನ್ನು ಇಲ್ಲಿಗೆ ಕರತಂದಿರುವನೆಂದು ಅವರು ತಿಳಿದುಕೊಂಡಿದ್ದರು. ಸ್ವಂತದ ಗೌರವವು ಹೆಚ್ಚಾಗಿ ತನ್ನ ಸಾಮರ್ಥ್ಯದ ಕೀರ್ತಿಯು ಜಗತ್ಪ್ರಸಿದ್ಧವಾಗ ಬೇಕೆಂಬದೊಂದು ಬಾದಶಹನ ಉದ್ದೇಶವಿರುವ ದೆಂತಲೂ ಅವರು ಭಾವಿಸಿದ್ದರು. ಈ ಸ್ಥಿತಿಯಲ್ಲಿ ಆತನು ತಮ್ಮ ಸ್ವಾಗತವು ಆದಷ್ಟು ಅಪಮಾನ ಕಾರಕವಾಗುವಂತೆ ನೋಡಿಕೊಳ್ಳುವಲ್ಲಿ ಸಂಶಯವಿಲ್ಲೆಂದು ಅವರಿಗೆ ತೋರುತ್ತಿತ್ತು. ಜಯಶಾಲಿಯಾದ ಪುರುಷನು ತನ್ನ ಶತ್ರುವನ್ನು ಶೆರೆ ಹಿಡಿದುಕೊಂಡು ಬಂದು ತನ್ನ ರಾಜಧಾನಿಯಲ್ಲೆಲ್ಲ ಮೆರಿಸುವಂತೆ, ಇನ್ನು ತಮ್ಮ ಮೆರವಣಿಗೆಯು ಆಗ್ರಾ ಪಟ್ಟಣದಲ್ಲಿ ಆಗುವದೆಂದು ಅವರು ನಂಬಿದ್ದರು. ಬಾದಶಹನ ಮಕ್ಕಳಲ್ಲಿ ಯಾರಾದರೊಬ್ಬರು ತಮ್ಮನ್ನು ಎದುರುಗೊಳ್ಳುವದಕ್ಕಾಗಿ ಬಂದು, ತಮ್ಮ ತಂದೆಯ ಪ್ರತಾಪದಿಂದ ಬಾಗಿ ಬಂದವನೀತನೆಂದು ಜನರಮುಂದೆ ಹೇಳುವಂತೆ ಆಗ್ರಾಪಟ್ಟದಲ್ಲೆಲ್ಲ ತಮ್ಮ ಮೆರವಣಿಗೆ ಮಾಡಿಸುವರೆಂದು ಅವರು ವ್ಯಸನಪಡುತ್ತಿದ್ದರು. ಒಟ್ಟಿಗೆ ಅವರಿಗೆ ಆಗ್ರಾಪಟ್ಟಣವನ್ನು ಪ್ರವೇಶಿಸುವಾಗ ಎಳ್ಳಷ್ಟೂ ಸಮಾಧಾನವಿದ್ದಿಲ್ಲ, ಅವರು ಪಟ್ಟಣದ ಅಗಸಿಗೆ ಬರಲು, ಮುಸಲ್ಮಾನರಾರೂ ತಮ್ಮನ್ನು ಎದುರುಗೊಳ್ಳಲಿಕ್ಕೆ ಬಾರದೆ, ಹಿಂದೂ ಜನರೇ ಬಂದದ್ದು ಅವರ ಕಣ್ಣಿಗೆ ಬಿದ್ದಿತು. ಅದರಿಂದ ಮಹಾರಾಜರಿಗೆ ಒಂದುಬಗೆಯ ಸಮಾಧಾನವೇ ಆಯಿತು. ಮುಂದೆ ಆ ಜನರ ಉತ್ಸಾಹವೂ, ತಮ್ಮ ವಿಷಯವಾಗಿ ಅವರು ವಹಿಸಿರುವ ಪ್ರೇಮಾದರಗಳೂ ಮಹಾರಾಜರ ಕಣ್ಣಿಗೆ ಬೀಳುತ್ತಹೋದಂತೆ, ಅವರಿಗೆ ಹೆಚ್ಚು ಹೆಚ್ಚು ಸಮಾಧಾನವಾಗಹತ್ತಿತು. ಮುಂದೆ ಬರಬರುತ್ತ ಜನರ ಉತ್ಸಾಹವೂ, ಭಕ್ತಿಯು ವ್ಯಕ್ತ ವಾಗುವದನ್ನೂ, ಅವರು ಪ್ರೇಮಪೂರ್ವಕವಾಗಿ ತಮ್ಮ ತಮ್ಮ ಮನೆಗಳ ಶೃಂಗರಿಸಿದ್ದನ್ನು ನೋಡಿ ಯಂತೂ ಮಹಾರಾಜರಿಗೆ ಪರಮಾನಂದವಾಯಿತು. ಒಬ್ಬ ಪರಾಕ್ರಮಶಾಲಿಯಾದ ರಾಜನು ವಿಜಯವನ್ನು ಸಂಪಾದಿಸಿಕೊಂಡು ತನ್ನ ರಾಜಧಾನಿಯನ್ನು ಪ್ರವೇಶಿಸುವಾಗ ನಡೆಯಬಹುದಾದ ಸಮಾರಂಭದಂತೆ ಮಹಾರಾಜರ ಸ್ವಾಗತಸಮಾರಂಭವು ವಿಜೃಂಭಣೆ ಯಿಂದ ನಡೆದಿತ್ತು. ಇದನ್ನು ನೋಡಿ ಮಹಾರಾಜರಿಗೂ, ಅವರ ಪರಿವಾರಕ್ಕೂ ಬಹಳ ಸಂತೋಷವಾಯಿತೆಂದು ಮೇಲೆ ಮೇಲೆ ಹೇಳುವ ಕಾರಣವಿಲ್ಲ.

ಮೊಗಲರ ಶಾಸನ ಮಾಡುವದಕ್ಕಾಗಿ ಅವತರಿಸಿದ ಪುರುಷನು ಇಂದು ತಮ್ಮ ಕಣ್ಣಿಗೆ ಬಿದ್ದದ್ದಕ್ಕಾಗಿ ಆಗ್ರಾಪಟ್ಟಣದ ಹಿಂದೂ ಜನರಿಗೆಲ್ಲ ಬಹಳ ಸಂತೋಷವಾಗಿತ್ತು. ಅವರು ತಮ್ಮ ತಮ್ಮೊಳಗೆ—''ನಮ್ಮ ಉತ್ತರದ ಹಿಂದೂ ರಾಜರೆಲ್ಲ ಒಬ್ಬೊಬ್ಬರಾಗಿ ಬಾದಶಹನಿಗೆ ಅಂಕಿತರಾದರೂ, ದಕ್ಷಿಣದ ರಾಜನಾದ ಶಿವಾಜಿಯು ತನ್ನ ಸ್ವಾತಂತ್ರ್ಯವನ್ನು ಕಾಯ್ದು ಕೊಳ್ಳಲಿಕ್ಕೆ ಯತ್ನಿಸುವನು. ಆತನನ್ನು ಶಿಕ್ಷಿಸುವದಕ್ಕಾಗಿ ಮಿರ್ಝಾರಾಜನಂಥವರೂ, ದಿಲೇರಖಾನ ನಂಥವರೂ ದಕ್ಷಿಣಕ್ಕೆ ದಂಡೆತ್ತಿ ಹೋಗಬೇಕಾಯಿತು; ಆದರೂ ಕಡೆಗೆ

ಬಾದಶಹನು ಶಿವಾಜಿಯೊಡನೆ ಒಡಂಬಡಿಕೆ ಮಾಡಿಕೊಂಡು, ಆತನನ್ನು ರಮಿಸುವದಕ್ಕಾಗಿ ಐದು ಸಾವಿರ ಮನಸಬದಾರಿಯನ್ನು ಕೊಡುವೆನೆಂದು ಆತನನ್ನು ಇಲ್ಲಿಗೆ ಕರೆಸಿಕೊಳ್ಳ ಬೇಕಾಯಿತು,'' ಎಂದು ಮಾತಾಡುತ್ತ ಮಹಾರಾಜರನ್ನು ಹೊಗಳಹತ್ತಿದರು. ದಿಲ್ಲಿ ಆಗ್ರಾಪಟ್ಟಣಗಳಲ್ಲಿ ಸುಮಾರು ನಾನೂರು ವರ್ಷಗಳಿಂದ ಮುಸಲ್ಮಾನರ ಆಳಿಕೆಯಿದ್ದರೂ, ಅಲ್ಲಿರುವ ಸ್ವಾತಂತ್ರ್ಯ ಪ್ರೀತಿಯು ನಷ್ಟವಾಗಿರುವದಿಲ್ಲೆಂದು ಮಹಾರಾಜರು ಸಂತೋಷ ಪಟ್ಟರು; ಹಾಗೆ ಸ್ವಾತಂತ್ರ್ಯ ಪ್ರೀತಿ ಇರದಿದ್ದರೆ ಅವರು ತಮ್ಮನ್ನು ಇಷ್ಟು ಪ್ರೇಮಪೂರ್ವಕವಾಗಿ ಸತ್ಕರಿಸುತ್ತಿದ್ದಿಲ್ಲವೆಂತಲೂ, ಸ್ವಾತಂತ್ರ್ಯಕ್ಕಾಗಿ ಯತ್ನಿಸುವ ತಮ್ಮನ್ನು ಹುಚ್ಚನೆಂದು ಹಳಿಯದೆ ಇರುತ್ತಿದ್ದಿಲ್ಲವೆಂತಲೂ ಅವರು ತಿಳಿದುಕೊಂಡರು. ನಮ್ಮ ಯೋಗ್ಯತೆಯು ಇಷ್ಟೇ ಸರಿ; ಇಷ್ಟಕ್ಕಾಗಿಯೇ ದೇವರು ನಮ್ಮನ್ನು ಹುಟ್ಟಿಸಿರುತ್ತಾನೆ, ಎಂಬ ಹೇಡಿತನದ ಮಾತಾಡಿ, ಹೆಚ್ಚಿನ ಯಾವ ಆಶೆಯನ್ನೂ ಮಾಡದ ಜನರ ಪ್ರಗತಿಯಾಗುವದು ಬಹಳ ಕಷ್ಟವು; ಅಂದರೆ ಅಷ್ಟೇನು ಹೀನಸ್ಥಿತಿಯು ಇತ್ತಕಡೆಯ ಜನರದು ಆಗಿರದ್ದರಿಂದ ಇವರು ಇಂದಿಲ್ಲ ನಾಳೆಯಾದರೂ ಕಣ್ಣು ತೆರೆದಾರೆಂದು ಮಹಾರಾಜರು ಸಮಾಧಾನಪಟ್ಟರು. ಅವರಿಗಾದ ಈ ಅಪೂರ್ವ ಸತ್ಕಾರವನ್ನು ನೋಡಿ ರಾಮಸಿಂಗನಿಗೆ ಬಹಳ ಸಮಾಧಾನವಾಯಿತು. ಈ ಸುದ್ದಿಯು ಬಾದಶಹನಿಗೆ ಮುಟ್ಟಿ ಆತನು ಹೊಟ್ಟೇಕಿಚ್ಚುಬಟ್ಟು ಉರುಳುವನೆಂತಲೂ, ಸಂತಾಪದಿಂದ ಉರಿಯುವನೆಂತಲೂ ರಾಮಸಿಂಗನು ತಿಳಿದಿದ್ದನು; ಆದರೆ ಸನ್ಮಾನನೀಯರ ಸನ್ಮಾನವು ಯೋಗ್ಯವಾಗಿ ಆಗಿರುವದ ರಿಂದ ಬಾದಶಹನ ಸಿಟ್ಟನ್ನು ಹಿಂದಿನಿಂದ ನೋಡಿಕೊಳ್ಳಬಹುದೆಂದು ಆತನು ಸಮಾಧಾನ ಮಾಡಿಕೊಂಡನು.

ರಾಮಸಿಂಗನು ತಾನಿರುವ ಸ್ಥಳದ ಬಳಿಯಲ್ಲಿಯೇ ಮಹಾರಾಜರ ಸಲುವಾಗಿಯೂ, ಅವರ ಪರಿವಾರದ ಸಲುವಾಗಿಯೂ, ಇಳಿದುಕೊಳ್ಳುವ ಸ್ಥಳವನ್ನು ನೋಡಿದ್ದನು. ಒಂದು ಪ್ರಚಂಡವಾದ ವಾಡೆಯು ಮಹಾರಾಜರ ವಾಸಸ್ಥಳವಾಗಿ ಗೊತ್ತಾಗಿತ್ತು. ಆ ವಾಡೆಯ ಆವಾರದಲ್ಲಿ ಡೇರೆ, ತಂಬುಗಳನ್ನು ಹೊಡೆದು ಪರಿವಾರದವರು ಇಳಿದುಕೊಳ್ಳುವಂತೆ ಮಾಡಿದ್ದರು. ಯಾವತ್ತು ಪರಿವಾರದೊಡನೆ ಮಹಾರಾಜರು ವಾಡೆಗೆ ಬಂದರು. ರಾಮಸಿಂಗನು ಮಹಾರಾಜರನ್ನು ವಾಡೆಯ ದಿವಾಣಖಾನೆಯಲ್ಲಿ ಕುಳ್ಳಿರಿಸಿದನು. ಬಳಿಕ ಹಿಂದೂ ಅಮೀರರೂ, ಉಮರಾವರೂ ಮಹಾರಾಜರ ದರ್ಶನ ಮಾಡಿಕೊಂಡರು. ಯೋಗಕ್ಷೇಮದ ವಿಚಾರಣೆಯಾದಬಳಿಕ ಅವರೆಲ್ಲರು ತಮ್ಮ ತಮ್ಮ ಸ್ಥಳಕ್ಕೆ ಹೋದರು. ರಾಮಸಿಂಗನು ಮಹಾರಾಜರ ವಾಕನೀಸನನ್ನು ಕರೆಸಿ—''ಎಲ್ಲ ವ್ಯವಸ್ಥೆಯನ್ನು ಸರಿಯಾಗಿ ಮಾಡಿರುತ್ತದೆ. ಅದರಲ್ಲಿ ಏನಾದರೂ ಕೊರತೆಯಿದ್ದರೆ ಸಂಕೋಚಪಡದೆ ನಮಗೆ ತಿಳಿಸಿಬೇಕಾದದ್ದನ್ನು ತರಿಸಿಕೊಳ್ಳಬೇಕು. ನಮ್ಮ ವಾಸಸ್ಥಳವು ಇಲ್ಲಿಯೇ ಸಮೀಪದಲ್ಲಿರುತ್ತದೆ. ನೀವು ನಿಮ್ಮ ಪ್ರಾಂತದಲ್ಲಿ ನಿಮ್ಮ ರಾಜವಾಡೆಯಲ್ಲಿ ಇರುವಂತೆ ತಿಳಿದುಕೊಳ್ಳಬೇಕು'' ಎಂದು ಗಟ್ಟಿಮುಟ್ಟಿ ಯಾಗಿ ಹೇಳಿ ಮಹಾರಾಜರನ್ನು ಕೇಳಿ ಮನೆಗೆ ಹೋದನು. ರಾಮಸಿಂಗನು ಹೋದಬಳಿಕ ಮಹಾರಾಜರು ಸ್ವಸ್ಥವಾಗಿ ಕುಳಿತುಕೊಂಡರು. ಅವರ ಪರಿವಾರದವರು ಅವರ ಸುತ್ತುಮುತ್ತು

ಕುಳಿತುಕೊಂಡರು. ಸ್ವಾಭಾವಿಕವಾಗಿಯೇ ಸ್ವಾಗತಸಮಾರಂಭದ ಸುದ್ದಿಯು ಹೊರಟಿತು. ಆಗ ಮಹಾರಾಜರು ಸುಮ್ಮನೆ ಕುಳಿತಿದ್ದರು. ಅವರ ಮನಸ್ಸಿನಲ್ಲಿ ಬೇರೊಂದು ವಿಚಾರವು ಉತ್ಪನ್ನವಾಗಿತ್ತು ಅವರು ತೀರ ತಮ್ಮ ಹತ್ತರ ಕುಳಿತಿರುವ ಬಾಳಾಜಿಯನ್ನೂ, ತಾನಾಜಿಯನ್ನೂ ಕುರಿತು—''ರಾಮಸಿಂಗನ ಮನಸ್ಸಿನಲ್ಲಿ ಏನೋ ಕಟಿಯುತ್ತಿರುವದು. ಆತನ ಮನಸ್ಸು ಚಿಂತಾಮಗ್ನವಾಗಿರುವ ವಿಷಯದಲ್ಲಿ ಸಂಶಯವಿಲ್ಲ, ಒಂದೆರಡು ಸಾರೆ ಆತನು ನನ್ನ ಸಂಗಡ ಏನೋ ಏಕಾಂತವಾಡಬೇಕೆಂದು ಮಾಡಿದ್ದನು; ಆದರೆ ಅಷ್ಟಕ್ಕೆ ಯಾಕೋ ಬಿಟ್ಟನು. ಮುಸಲ್ಮಾನ ಸರದಾರರಲ್ಲಿ ಯಾರೂ ನಮ್ಮನ್ನು ಕಾಣಲಿಕ್ಕೆ ಬಾರದಿರುವದು ವಿಚಾರ ಮಾಡತಕ್ಕ ಸಂಗತಿಯಾಗಿದೆ ಎಂದು ಹೇಳಿದರು. ಬಾಳಾಜಿಗೂ, ತಾನಾಜಿಗೂ ರಾಮಸಿಂಗನ ಈ ಸ್ಥಿತಿಯು ಗೊತ್ತಾಗಿದ್ದಿಲ್ಲ ಯಾಕಂದರೆ, ಅವರು ಆತನ ಕಡೆಗೆ ವಿಶೇಷವಾಗಿ ಲಕ್ಷಗೊಟ್ಟಿದ್ದಿಲ್ಲ, ಮಹಾರಾಜರ ಸ್ವಾಗತವು ಉತ್ತಮ ರೀತಿಯಿಂದ ಆಯಿತೆಂದು ಅವರಿಗೆ ಬಹಳ ಸಮಾಧಾನವಾಗಿತ್ತು ಆ ಸಮಾಧಾನದಲ್ಲಿ ಅನ್ಯ ವಿಷಯಗಳ ಕಡೆಗೆ ಅವರ ಲಕ್ಷವೇ ಹೋಗಿದ್ದಿಲ್ಲ, ಕೀರ್ತಿಸಿಂಗನು ಮಹಾರಾಜರ ಪರಿವಾರದಲ್ಲಿ ಇದ್ದನಷ್ಟೇ ಆತನಿಗೆ ಮಹಾರಾಜರ ಮಾತು ಯಥಾರ್ಥವಾಗಿ ತೋರಿತು. ಆತನು ಮಹಾರಾಜರನ್ನು ಕುರಿತು—''ಮಹಾರಾಜ ರಾಮಸಿಂಗನು ಚಿಂತಾಕ್ರಾಂತನಾಗಿದ್ದರಲ್ಲಿ ಆಶ್ಚರ್ಯವಿಲ್ಲ, ಬಾದಶಹನಿಗೆ ಈ ಸ್ವಾಗತ ಸಮಾರಂಭದ ವೃತ್ತಾಂತವು ತಿಳಿದರೆ, ಆತನು ಅಸೂಯೆಯಿಂದಲೂ, ಸಂತಾಪದಿಂದಲೂ ಉರಿಯುವನು. ಆ ಸ್ಥಿತಿಯಲ್ಲಿ ಆ ದುಷ್ಟನು ಏನು ಮಾಡಬಹುದೆಂಬದನ್ನು ಹೇಳಲಾಗುವದಿಲ್ಲ, ತಮ್ಮ ಸುರಕ್ಷಿತತೆಯ ಚಿಂತೆಯು ರಾಮಸಿಂಗನಿಗಿರುವದರಿಂದ, ಬಾದಶಹನ ದುಷ್ಟತನದಿಂದ ಎಂಥ ಕಠಿಣ ಪ್ರಸಂಗವು ಒದಗುವದೋ ಎಂದು ಆತನು ಚಿಂತಾಕ್ರಾಂತನಾಗಿರಬಹುದು. ಶಹಾಜಾದರಲ್ಲಿ (ಬಾದಶಹನ ಮಕ್ಕಳಲ್ಲಿ) ಒಬ್ಬರಾದರೂ ತಮ್ಮ ಸ್ವಾಗತಕ್ಕೆ ಬಂದರೇನು? ಅದೂ ಬೇಡ, ಮುಸಲ್ಮಾನ ಸರದಾರರಾದರೂ ಬಂದಿದ್ದರೆ? ಅಂದಬಳಿಕ ಇವೆಲ್ಲ ದುರ್ಲಕ್ಷಣಗಳು ಚಿಂತೆಯ ಕಾರಣಗಳೇ ಸರಿ ಎಂದು ನುಡಿಯಲು, ಮಹಾರಾಜರಿಗೆ ಅವನ ಮಾತು ಯಥಾರ್ಥವಾಗಿ ತೋರಿತು. ಸ್ವಲ್ಪಹೊತ್ತು ಆ ಮಾತು ಈ ಮಾತು ಆಡಿಬಳಿಕ ಮಹಾರಾಜರು ಭೋಜನಕ್ಕೆ ಎದ್ದರು.

ಭೋಜನೋತ್ತರ ಮಹಾರಾಜರು ಸ್ವಲ್ಪ ಅಡ್ಡಾಗಬೇಕೆಂಬ ವಿಚಾರದಲ್ಲಿರುತ್ತಿರಲು, ರಾಮಸಿಂಗನು ಬಂದಿರುವನೆಂಬ ಸುದ್ದಿಯು ಅವರಿಗೆ ಮುಟ್ಟಿತು. ಕೂಡಲೇ ಅವರು ಆತನನ್ನು ಕರಿಸಿಕೊಂಡು—''ತಾವು ನಮ್ಮ ಸಲುವಾಗಿ ಬಹಳ ಪರಿಶ್ರಮಮಾಡುವಿರಿ. ನಮ್ಮ ಪರಾಮರಿಕೆಯ ಯಾವತ್ತು ಭಾರವು ನಿಮ್ಮ ಮೇಲಿರುತ್ತದೆಂಬದು ನಿಜವು; ಆದರೆ ತಮಗೆ ಇಷ್ಟು ಆಯಾಸವಾಗುವದೇನು ನಮ್ಮ ಮನಸ್ಸಿಗೆ ಬರುವದಿಲ್ಲ, ನಮಗೆ ಎಲ್ಲ ಮಾತಿನ ಅನುಕೂಲವದೆ. ಯಾತರ ಕೊರತೆಯೂ ಇರುವದಿಲ್ಲ, ತಾವು ನಿಶ್ಚಿಂತೆಯಿಂದ ಇರಬೇಕು'' ಎಂದು ಸ್ಪಷ್ಟವಾಗಿ ಹೇಳಿದರು. ಅದಕ್ಕೆ ರಾಮಸಿಂಗನು ಕೆಲವು ಔಪಚಾರಿಕ ಮಾತುಗಳನ್ನಾಡಿ ಮಹಾರಾಜರ ಅಪ್ಪಣೆಪಡೆದು ಮನೆಗೆ ಹೊರಟನು; ಆದರೆ ಆತನು ಮತ್ತೆ ಹಿಂದಿರುಗಿ—

''ಹೇಳಿಬಿಡುವದು ನೆಟ್ಟಗೆ'' ಎಂದು ಯೋಚಿಸಿ, ಮಹಾರಾಜರ ಬಳಿಗೆ ಮತ್ತೆ ಹೋಗುತ್ತಿದ್ದನು. ಅಷ್ಟರಲ್ಲಿ ಯಾರೋ ಆತನ ಅಂಗಿಯನ್ನು ಹಿಡಿದು ಜಗ್ಗಿದಂತಾಯಿತು. ಆತನು ಹಿಂದಿರುಗಿ ನೋಡಲು, ಕೀರ್ತಿಸಿಂಗನು ಆತನ ಕಣ್ಣಿಗೆ ಬಿದ್ದನು. ಆಗ ರಾಮಸಿಂಗನು ''ನೀನು ಇಲ್ಲಿ ಯಾಕೆ?'' ಎಂದು ಕೇಳುತ್ತಿರಲು, ಕೀರ್ತಿಸಿಂಗನು—''ತಮ್ಮ ಸಂಗಡ ನಾನು ಸ್ವಲ್ಪ ಮಾತಾಡಬೇಕಾಗಿದೆ; ಆದರೆ ಹಿಂದಿನಿಂದ ಆಡುವೆನು. ನಾನು ಇಲ್ಲಿ ಯಾಕೆ ಬಂದೆನೆಂಬುದನ್ನು ಹಿಂದಿನಿಂದ ಹೇಳುವೆನು. ನೀವು ಈಗ ಮಹಾರಾಜರ ಮುಂದೆ ಏನೂ ಹೇಳಬೇಡಿರಿ. ಮಹಾರಾಜರು ನನ್ನ ಮೇಲೆ ಅನಂತ ಉಪಕಾರಮಾಡಿದ್ದಾರೆ. ಆ ಉಪಕಾರದ ಹೊರೆಯನ್ನು ಅಂಶತಃ ತೀರಿಸುವದಕ್ಕಾಗಿಯೇ ನಾನು ಅವರ ಸೇವೆಯನ್ನು ಕೈಕೊಂಡಿರುವೆನು. ಹುಲಿಯು ತನ್ನ ಮರಿಗಳನ್ನು ಸಂರಕ್ಷಿಸುವಂತೆ ಮಹಾರಾಜರನ್ನು ಸಂರಕ್ಷಿಸಲು ನಾನು ಯತ್ನಿಸುವೆನು. ನನ್ನ ಜೀವದ ಮೇಲೆ ಮಹಾರಾಜರ ಸಂಪೂರ್ಣ ಸ್ವಾಮಿತ್ವವಿರುತ್ತದೆ. ನೀವು ನಿಶ್ಚಿಂತೆಯಿಂದ ಇರ್ರಿ. ಬಾದಶಹನು ಏನು ಅನ್ನುವನು, ದರ್ಬಾರದಲ್ಲಿ ಏನು ನಡೆಯಿತು; ಎಂಬದನ್ನಿಷ್ಟು ನನಗೆ ಹೇಳುತ್ತ ಬರ್ರಿ'' ಎಂದು ಹೇಳಿದನು. ಅದಕ್ಕೆ ಒಡಂಬಟ್ಟು ರಾಮಸಿಂಗನು ಮನೆಗೆ ಹೋದನು.

ಇತ್ತ ಕ್ಷಣಶಃ ಬಾದಶಹನಿಗೆ ಸುದ್ದಿಗಳು ಮುಟ್ಟುತ್ತಲೇ ಇದ್ದವು. ಆತನು ಸಂತಾಪದಿಂದ ಉರಿಯುತ್ತಿದ್ದನು. ತನ್ನ ಮನಸ್ಸಿನಲ್ಲಿಲ್ಲದ ಕೆಲಸವನ್ನು ರಾಮಸಿಂಗನು ಇಷ್ಟು ಆಸ್ಥೆಯಿಂದ ಮಾಡಿದನೆಂತಲೂ, ಹಿಂದೂ ಜನರೆಲ್ಲ ಸಮಾರಂಭದಲ್ಲಿ ಸೇರಿದ್ದರಿಂದ ಅದಕ್ಕೆ ಇಷ್ಟು ವಿಸ್ತೃತ ಸ್ವರೂಪವು ಪ್ರಾಪ್ತವಾಯಿತೆಂತಲೂ ಆತನು ತಳಮಳಿಸಿದನು; ಆದರೆ ಹೊರಗೆ ಮಾತ್ರ ಅದನ್ನು ಯಾರಿಗೂ ತೋರಗೊಡುತ್ತಿದ್ದಿಲ್ಲ. ಬಾದಶಹನ ಬಳಿಯಲ್ಲಿ ಕುಳಿತಿದ್ದ ಮುಸಲ್ಮಾನ ಸರದಾರರಲ್ಲಿ ಒಬ್ಬಿಬ್ಬರು ಬಾದಶಹನ ಮನಸ್ಸಿನ ಒಲವನ್ನು ನೋಡಿ—''ಈ ಹುಚ್ಚಾಟಿಕೆಯು ಇನ್ನು ನಿಲ್ಲಿಸಲ್ಪಡುವದಿಲ್ಲೇನು?'' ಎಂದು ಪ್ರಶ್ನೆ ಮಾಡಿದರು; ಅದಕ್ಕೆ ಬಾದಶಹನು ಏನೂ ಉತ್ತರ ಕೊಡದೆ ಅವರನ್ನು ಚಮತ್ಕಾರದ ದೃಷ್ಟಿಯಿಂದ ನೋಡಿ ಹುಬ್ಬುಗಂಟಕ್ಕಿ ಬೇರೆ ಕಡೆಗೆ ನೋಡಹತ್ತಿದನು. ಆತನ ಮನಸ್ಸಿನಲ್ಲಿ ನಡೆದ ವಿಚಾರವೇನೋ ದೇವರೇ ಬಲ್ಲ. ಇಷ್ಟರಲ್ಲಿ ರಾಮಸಿಂಗನು ಬಂದನೆಂಬ ಸುದ್ದಿಯು ಬಂದಿತು. ಕೂಡಲೆ ಬಾದಶಹನು ಆತನನ್ನು ಕರೆಸಿಕೊಂಡನು. ರಾಮಸಿಂಗನು ಕುರ್ನಿಸಾತ ಮಾಡಿ ನಿಂತುಕೊಳ್ಳಲು, ಬಾದಶಹನು— ''ಶಾಬಾಸ! ನೀವು ಸಮಾರಂಭವನ್ನು ಬಹಳ ಚೆನ್ನಾಗಿ ಮಾಡಿದರೆಂದು ಕೇಳಿದ್ದೇನೆ. ಯೋಗ್ಯ ಕೆಲಸ ಮಾಡಿದಿರಿ. ''ನಾನು ಇತ್ತ ಬಂದೆನು, ಅಪಮಾನವಾಯಿತು,'' ಎಂದು ಆತನ ಮನಸ್ಸಿಗೆ ತೋರಬಾರದು. ತಿರುಗಿ ಆತನಿಗೆ ದಕ್ಷಿಣಕ್ಕೆ ಹೋಗಲಿಕ್ಕೆ ಮನಸ್ಸೇ ಆಗದಂತೆ ಎಲ್ಲ ವ್ಯವಸ್ಥೆಯನ್ನಿಡಿರಿ; ಒಂದು ಪಕ್ಷದಲ್ಲಿ ಆತನು ಹೋದರೂ ನಮ್ಮ ವಿರುದ್ಧವಾಗಿ ವರ್ತಿಸುವ ಮನಸ್ಸು ಆತನಿಗಾಗಬಾರದು. ಆತನು ಇರುವ ಸ್ಥಳ, ಊಟ-ಉಡಿಗೆ ಮೊದಲಾದವುಗಳ ವ್ಯವಸ್ಥೆಯನ್ನು ಚನ್ನಾಗಿ ಇಟ್ಟಿರುವಿರಷ್ಟೆ? ಯಾವ ಮಾತಿನ ಕೊರತೆಯನ್ನೂ ಆಗಗೊಡಬೇಡಿರಿ. ನಮ್ಮ ವಿಷಯದ ಆತನ ಶತ್ರುಭಾವವನ್ನು ಕಳೆದು ಆತನನ್ನು ನಮ್ಮ

ಮಿತ್ರನನ್ನಾಗಿ ಮಾಡಿಕೊಳ್ಳಬೇಕಾಗಿದೆ. ನೀವು ಆತನ ಯೋಗಕ್ಷೇಮಕ್ಕಾಗಿ ಆತನ ಬಳಿಯಲ್ಲಿ ರಲೇಬೇಕಾಗಬಹುದು. ಆತನ ಸಂತೋಷಕ್ಕಾಗಿ ನೀವು ಬಹಳ ಎಚ್ಚರಪಡತಕ್ಕದ್ದು'' ಎಂದು ಹೇಳಿದನು. ಬಾದಶಹನ ಈ ಮಾತುಗಳನ್ನು ಕೇಳಿ ರಾಮಸಿಂಗನು ಬೆರಗಾದನು. ಬಾದಶಹನ ಮನಸ್ಸಿನೊಳಗೇನಿರುವದೆಂಬದು ಆತನಿಗೆ ತಿಳಿಯದಾಯಿತು. ಮಹಾರಾಜರು ಬಂದ ದಿವಸ ಬಾದಶಹನ ಭಾಷಣಕ್ಕೂ ಇಂದಿನ ಆತನ ಭಾಷಣಕ್ಕೂ ಭೂಮ್ಯಾಕಾಶದಷ್ಟು ಅಂತರವಾಯಿತು. ಆತನ ಆಶ್ಚರ್ಯದ ಮುದ್ರೆಯನ್ನು ಬಾದಶಹನು ನೋಡುತ್ತಲೇ ಇದ್ದನು. ಬಾದಶಹನು ಮತ್ತೆ ರಾಮಸಿಂಗನನ್ನು ಕುರಿತು— ''ಎರಡು ಮೂರು ದಿವಸ ಶಿವನು ವಿಶ್ರಾಂತಿಯನ್ನು ಹೊಂದಲಿ. ಆತನ ಮನಸ್ಸಿಗೆ ಸ್ವಾಸ್ಥ್ಯವುಂಟಾಯಿತೆಂದರೆ ದರ್ಬಾರು ನೆರಸುವ ವಿಚಾರಮಾಡೋಣ. ನಾವು ಹೀಗೆ ಹೇಳಿದೆವೆಂದು ಆತನಿಗೆ ಹೇಳು. ಆತನು ಯಾವ ಸಂಶಯವನ್ನೂ ಮನಸ್ಸಿನಲ್ಲಿ ತಾರದೆ ವಿಶ್ರಾಂತಿಯನ್ನು ಹೊಂದಲಿ. ರಾಮಸಿಂಗ, ಇನ್ನು ನೀನು ಹೋಗಬಹುದು. ಆತನ ಯೋಗಕ್ಷೇಮದಲ್ಲಿ ಕೊರತೆಯಾಗಗೊಡಬೇಡ, ನಾವು ಆತನ ಮಿತ್ರತ್ವವನ್ನು ಸಂಪಾದಿಸಬೇಕಾಗಿದೆ; ನಮಗೆ ಆತನ ಶತ್ರುತ್ವವು ಬೇಡ.

ಬಾದಶಹನ ಅಪ್ಪಣೆಯಂತೆ ರಾಮಸಿಂಗನು ಕುರ್ನಿಸಾತ ಮಾಡಿ ಅಲ್ಲಿಂದ ಹೊರಟನು. ಆತನಿಗೆ ಬಾದಶಹನ ಕಪಟ ಸ್ವಭಾವದ ರೀತಿಯು ಚನ್ನಾಗಿ ಗೊತ್ತಿದ್ದದ್ದರಿಂದ, ಬಾದಶಹನ ಈಗಿನ ಮಾತುಗಳು ಆತನಿಗೆ ನಿಜವಾಗಿ ತೋರಲಿಲ್ಲ. ಬಾದಶಹನು ತನ್ನ ಸಂತಾಪವನ್ನು ಮುಚ್ಚಿಕೊಂಡು, ಹೊರಗೆ ಒಂದೂ ಕೆಟ್ಟ ಮಾತಾಡದೆ, ತನ್ನ ಸೌಜನ್ಯ ಸುರಸಿದ್ದು ರಾಮಸಿಂಗನಿಗೆ ಅತ್ಯಂತ ಘಾತಕವಾಗಿ ತೋರಿತು. ಸ್ವಾಗತ ಸಮಾರಂಭವು ವಿಜೃಂಭಣೆಯಿಂದ ಆದದ್ದಕ್ಕಾಗಿ ಬಾದಶಹನು ತನ್ನನ್ನು ನಿರಾಕರಿಸಬಹುದೆಂತಲೂ, ಏನಾದರೂ ಪಿಕ್ಕ ಮಾತು ಆಡಬಹುದೆಂತಲೂ, ಪ್ರಸಂಗವೊದಗಿದರೆ ತನಗೆ ಬಾಯಿಗೆ ಬಂದ ಹಾಗೆ ಅನ್ನಲಿಕ್ಕೆ ಹಿಂದೆಮುಂದೆ ನೋಡಲಿಕ್ಕಿಲ್ಲೆಂತಲೂ ರಾಮಸಿಂಗನು ತಿಳಿದಿದ್ದನು. ಆದರೆ ಅದೆಲ್ಲ ಹೋಗಿ ಆತನ ಅಭಿನಂದನವನ್ನು ಬಾದಶಹನು ಸಲಕ್ಷಣವಾಗಿ ಮಾಡಿದನು; ಆದರೆ ರಾಮಸಿಂಗನಿಗೆ ಇದು ಸರ್ವಥಾ ನಂಬಿಗೆಯಾಗಿ ತೋರಲಿಲ್ಲ. ಈ ಸವಿಮಾತಿನಲ್ಲಿ ಸಂಪೂರ್ಣ ಮೋಸವಿದ್ದು, ಮೋರೆಯಮೇಲೆ ಕೈ ಎಳೆದು ಒಳಗಿಂದೊಳಗೆ ವಿಷಪ್ರಯೋಗ ಮಾಡುವ ರೀತಿಯೇ ಇದೆಂದು ಆತನು ತಿಳಿದುಕೊಂಡನು. ತಾನು ಮಹಾರಾಜರ ಸುರಕ್ಷಿತತೆಯ ವಿಷಯವಾಗಿ ಆದಷ್ಟು ಜಾಗರೂಕನಾಗಿರತಕ್ಕದ್ದೆಂದು ಆತನು ನಿಶ್ಚಯಿಸಿದನು.

ಈ ಮಾತಿಗೆ ಎಂಟು ದಿನಗಳಾದವು. ದರ್ಬಾರದ ಸುದ್ದಿಯೇ ಇಲ್ಲ. ಇಷ್ಟರೊಳಗೆ ಒಂದು ದಿನ ಬಾದಶಹನ ಕಡೆಯಿಂದ ಒಬ್ಬನು ಬಂದು ಮಹಾರಾಜರಿಗೆ—''ತಾವು ಸ್ವಲ್ಪ ವಿಶ್ರಾಂತಿ ಹೊಂದಿದಕೂಡಲೆ ಬಾದಶಹರು ತಮ್ಮನ್ನು ದರ್ಬಾರಕ್ಕೆ ಕರೆಸುವರು'' ಎಂದು ತಿಳಿಸಿಹೋಗಿದ್ದನು. ಆ ಮಾತಿಗೂ ನಾಲ್ಕು ದಿನಗಳಾಗಿ ಹೋಗಿದ್ದವು. ಎಷ್ಟು ದಿವಸ ವಿಶ್ರಾಂತಿಯದು! ತಾವು ದಿಲ್ಲಿಗೆ ಬಂದದ್ದಕ್ಕಾಗಿ ಮಹಾರಾಜರಿಗೆ ಸಮಾಧಾನವಿದ್ದಿಲ್ಲ. ತಾವು ಬಂದ ಕೆಲಸವನ್ನು ಹ್ಯಾಗಾದರೂ ತೀರಿಸಿಕೊಂಡು ಒಮ್ಮೆ ದಕ್ಷಿಣಕ್ಕೆ ಯಾವಾಗ ಹೋದೇ

ವೆನ್ನುವ ಹಾಗೆ ಅವರಿಗೆ ಆಗಿತ್ತು. ಉತ್ತರದ ಜನರಲ್ಲಿ ಅಲ್ಪಸ್ವಲ್ಪ ಜಿಗಟು ಇರಬಹುದೆಂದು ಅವರು ತಿಳಿದಿದ್ದರು; ಆದರೆ ಬರಿಯ ಮಾತಿನಲ್ಲಿಯಲ್ಲದೆ ಕೃತಿಯಲ್ಲಿ ಹುರುಳು ತೋರಲಿಲ್ಲ. ಅಂದಬಳಿಕ ವ್ಯರ್ಥ ಕಾಲಹರಣ ಮಾಡುವದರಲ್ಲಿ ಪ್ರಯೋಜನವೇನೆಂದು ಅವರು ದಕ್ಷಿಣಕ್ಕೆ ಹೊರಡಲು ಆತುರಪಡುತ್ತಿದ್ದರು. ರಾಮಸಿಂಗನು ದಿನಕ್ಕೆ ಎರಡು ಸಾರೆ ಬಂದು, ಮಹಾರಾಜರು ದರ್ಬಾರದ ಬಗ್ಗೆ ಕೇಳಿದಾಗ— "ಸ್ವಲ್ಪ ತಡೆಯಬೇಕು, ದರ್ಬಾರಕ್ಕೆ ಇನ್ನು ವಿಲಂಬವಾಗುವದಿಲ್ಲ. ಎಲ್ಲ ಕೆಲಸಗಳು ಯಥಾಸ್ಥಿತವಾಗಿ ಆಗುವವು," ಎಂದು ಸಮಾಧಾನ ಹೇಳುತ್ತಲಿದ್ದನು; ಆದರೆ ಬಾದಶಹನ ನಡತೆಯ ಸಂಬಂಧವಾಗಿ ರಾಮಸಿಂಗನು ಮನಸ್ಸಿನಲ್ಲಿಯೇ ಸಮಾಧಾನವಿರುವದಿಲ್ಲವೆಂಬದನ್ನು ಮಹಾರಾಜರು ಈ ಮೊದಲೆ ಕಂಡು ಹಿಡಿದಿದ್ದರು.

## ದರ್ಬಾರವು

ಮಹಾರಾಜರು ಬಂದದ್ದನ್ನು ಬಾದಶಹನು ಮರೆತುಬಿಟ್ಟಂತೆ ಮಾಡಿದನು. ದಿನಗಳು ಒಂದೊಂದಾಗಿ ಹೋಗಹತ್ತಿದರೂ ದರ್ಬಾರದ ಸುದ್ದಿಯಿಲ್ಲ; ಭೆಟ್ಟಿಯಮಾತಿಲ್ಲ. ಅದರಿಂದ ಮಹಾರಾಜರಿಗೆ ಬಹಳ ಬೇಸರ ಬಂದಿತು. ಸೆರೆಯಾಳಿನಂತೆ ತಾವು ಕೊಳೆಯಬೇಕಾಯಿತೆಂದು ಅವರು ಚಡಪಡಿಸಹತ್ತಿದ್ದರು. ಮುಂದೆ ಏನು ಮಾಡಬೇಕೆಂಬ ಆಲೋಚನೆಗೆ ಅವರು ಒಳಗಾದರು. ರಾಮಸಿಂಗನು ದಿನಾಲು ಎರಡುಸಾರೆ ಮಹಾರಾಜರ ಬಳಿಗೆ ಬರುತ್ತಿದ್ದನು; ಆತನು ಬಾದಶಹನನ್ನು ದಿನಾಲು ಕಾಣುತ್ತಿದ್ದನು; ಆದರೆ ಬಾದಶಹನು ದರ್ಬಾರದ ಸುದ್ದಿಯನ್ನೇ ಎತ್ತುತ್ತಿದ್ದಿಲ್ಲ. ಮಹಾರಾಜರು ಬಂದದ್ದು ತನ್ನ ಸ್ಮರಣದಲ್ಲಿ ಸಹ ಇಲ್ಲವೆಂಬಂತೆ ಆತನು ರಾಮಸಿಂಗನಿಗೆ ತೋರಿಸುತ್ತಿದ್ದನು. ಈ ಸ್ಥಿತಿಯು ನಡೆದಿರುವಾಗ ಮಹಾರಾಜರು ಒಂದು ದಿವಸ ರಾಮಸಿಂಗನನ್ನು ಕುರಿತು—"ನಮ್ಮನ್ನು ದಕ್ಷಿಣದಿಂದ ಕರತಂದದ್ದು ಹೀಗೆ ಸೆರೆಮನೆಯಲ್ಲಿ ಕೊಳೆಹಾಕುವದಕ್ಕಾಗಿಯೇ ಏನು? ನೀವು ಒಂದು ದಿವಸ ಬಾದಶಹನಿಗೆ ಈ ಮಾತಿನ ನೆನಪನ್ನಾದರೂ ಮಾಡಿಕೊಡಿರಿ; ಅವರು ನಮ್ಮನ್ನು ಮರೆತು ಬಿಟ್ಟಿದ್ದರೂ ಬಿಟ್ಟಿರಬಹುದು." ಅನ್ನಲು, ರಾಮಸಿಂಗನು ನಕ್ಕು—"ಮಹಾರಾಜ, ಅವರು ಮರೆಯುವದಂತು ಶಕ್ಯವೇ ಇಲ್ಲ. ಯಾವದಾದರೂ ವಿಚಾರದಲ್ಲಿ ಅವರ ಮನಸ್ಸು ತೊಡಗಿರಬಹುದು. ತಮ್ಮ ಮನಸ್ಸಿನೊಳಗಿನ ಮಾತನ್ನು ಕಡೆತನಕ ಅವರು ಯಾರಿಗೂ ಹೇಳತಕ್ಕವರಲ್ಲ. ನಾವು ಎಚ್ಚರದಿಂದಿದ್ದರಾಯಿತು. ತಾವು ಬಂದು ಬಹಳ ದಿವಸವಾಯಿತೆಂದೂ ನನಗೆ ಗೊತ್ತಿರುವದು. ಆದರೂ ಒಮ್ಮೆಲೆ ಅವಸರ ಮಾಡುವದು ಅವಿಚಾರವು. ಈ ದಿನ ಬಾದಶಹನಿಗೆ ನಾನು ನೆನಪು ಕೊಡುವೆನು. ಆತನ ವಿಲಕ್ಷಣ ಸ್ವಭಾವದ ಅಂತವು ಯಾರಿಗೂ ಹತ್ತುವಹಾಗಿಲ್ಲ" ಎಂದು ಹೇಳಿದನು. ಅದಕ್ಕೆ ಮಹಾರಾಜರು—"ಆತನ ವಿಲಕ್ಷಣ ಸ್ವಭಾವದಿಂದ ನಮ್ಮ

ಪ್ರಾಣಹೋಗುತ್ತದೆ. ಆತನನ್ನು ಸ್ಪಷ್ಟವಾಗಿ ಕೇಳಿಬಿಡಿರಿ. ಬಾದಶಹನ ಮನಸ್ಸಿನಲ್ಲಿ ಹೀಗೆಯೇ ನಮ್ಮನ್ನು ಪ್ರತಿಬಂಧಿಸುವದಿದ್ದರೆ ನಮ್ಮ ಹಾದಿಯನ್ನು ನಾವು ಕಂಡುಕೊಳ್ಳುತ್ತೇವೆ;'' ಎಂದು ಸ್ಪಷ್ಟವಾಗಿ ಹೇಳಿದರು. ರಾಮಸಿಂಗನು ಇತ್ತಡಕಿನಲ್ಲಿ ಸಿಕ್ಕು ಒದ್ದಾಡಹತ್ತಿದನು. ಇತ್ತ ಮಹಾರಾಜರ ಮಾತು ಆತನಿಗೆ ಯೋಗ್ಯವಾಗಿ ತೋರುತ್ತಿತ್ತು; ಅತ್ತ ಬಾದಶಹನಿಗೆ ಸ್ಪಷ್ಟವಾಗಿ ಕೇಳಲಿಕ್ಕೆ ಧೈರ್ಯವಾಗುತ್ತಿದ್ದಿಲ್ಲ; ಆದರೆ ಇನ್ನು ಬಾದಶಹನನ್ನು ಸ್ಪಷ್ಟವಾಗಿ ಕೇಳದಿದ್ದರೆ ನಿರ್ವಾಹವಿಲ್ಲೆಂದು ತಿಳಿದು ಆತನು ಕೂಡಲೇ ಬಾದಶಹನ ಬಳಿಗೆ ಹೋಗಿ ಆತನನ್ನು ಕುರಿತು—''ಖಾವಿಂದ, ತಮಗೆ ಯಾವ ಮಾತಿನ ವಿಸ್ಮರಣವು ಎಂದೂ ಆಗುವದಿಲ್ಲ; ಆದ್ದರಿಂದ ನನ್ನಂಥವರು ತಮಗೆ ಯಾವದೊಂದು ಮಾತಿನ ನೆನಪು ಮಾಡಿ ಕೊಡುವದೆಂದರೆ ಪರಮ ಸಾಹಸವೂ ಉದ್ಧತತನವೂ ಆಗಿರುವದು; ಆದರೆ ಶಿವಾಜಿ ಮಹಾರಾಜರು ಬಂದು ಬಹಳ ದಿವಸಗಳಾದವು. ಒಮ್ಮೆ ಅವರನ್ನು ದರ್ಬಾರಕ್ಕೆ ಕರೆಸಿ, ಅವರಿಗೆ ಮಾಡುವ ಮಾನ-ಮರ್ಯಾದೆಗಳನ್ನು ಮಾಡಿ, ಅವರ ಮಗ ಸಂಭಾಜಿರಾಜರಿಗೆ ಕೊಡತಕ್ಕ ವಸ್ತ್ರ ಪಾತ್ರಗಳನ್ನು ಕೊಡೋಣವಾಗಬೇಕೆಂದು ಬೇಡಿಕೊಳ್ಳುವೆನು. ಬಹಳ ದಿವಸಗಳಾದದ್ದರಿಂದ ತಮ್ಮ ಮೇಲೆ ಖಾವಿಂದರ ಅವಕೃಪೆಯಾಗಿರುವದೋ ಏನೋ ಎಂದು ಅವರು ತಿಳಿದುಕೊಂಡಿರುವರು. ಜನರಲ್ಲಿ ಇಲ್ಲದ ತರ್ಕ ವಿತರ್ಕಗಳು ನಡೆದಿರುವವು. ಇದರ ಮೇಲೆ ಖಾವಂದರ ಮರ್ಜಿಯು,'' ಅನ್ನಲು ಬಾದಶಹನು—''ಯಾಕೆ, ಆತನ ಫಿತೂರಿ ಮಾಡುವ ಉದ್ಯೋಗವು ಸಫಲವಾಗಲಿಲ್ಲೆಂಬಂತೆ ತೋರುತ್ತದೆ. ಸಫಲವಾಗಿದ್ದರೆ ಇಷ್ಟು ಬೇಗನೆ ದಕ್ಷಿಣಕ್ಕೆ ಹೋಗಲು ಆತನು ಚಡಪಡಿಸುತ್ತಿದ್ದಿಲ್ಲ. ಆತನ ಪರಿವಾರದ ಜನರು ಊರಲ್ಲಿ ತಿರುಗುತ್ತಿರುವರು; ಎಲ್ಲೆಲ್ಲಿಗೋ ಹೋಗುತ್ತಿರುವರು. ನಾವೇನು ಅವರಿಗೆ ಪ್ರತಿಬಂಧ ಮಾಡಿರುವದಿಲ್ಲ. ದರ್ಬಾರಕ್ಕೆ ಸ್ವತಃ ಅವರು ಬರದಿದ್ದರೂ, ನಮ್ಮಾ-ಅವರಾ ಭೆಟ್ಟಿಯಾಗಿರ ದಿದ್ದರೂ ಅವರು ನಮ್ಮ ಪಟ್ಟಣದಲ್ಲಿ ಬಂದಿರುವರಷ್ಟೆ? ನಮ್ಮ ನೌಕರಿ ಮಾಡುವ ಇಚ್ಛೆಯಿಂದ ಅವರು ಬಂದಿರುವರಲ್ಲವೆ? ಅಂದಬಳಿಕ ಹೀಗೆ ಬೇಸತ್ತರೆ ಹ್ಯಾಗಾಗುವದು? ಯಾರಾದರೊಬ್ಬರನ್ನು ಕಂಡು ಅವರನ್ನು ನಮ್ಮ ಮೇಲೆ ತಿರುಗಿ ಬೀಳುವಂತೆ ಮಾಡುವ ಅವರ ಉದ್ಯೋಗವು ನಡದೇ ಇರುತ್ತದೆ; ಅಂದಬಳಿಕ ಇನ್ನೇನು ಬೇಕು? ಅವರಿಗೆ ನಾವು ಹೀಗೆ ಹೇಳಿದೆವೆಂದು ಸ್ಪಷ್ಟವಾಗಿ ಹೇಳಿರಿ. ಅವರು ಅಸಮಾಧಾನಪಡುವ ಕಾರಣವಿಲ್ಲ. ಬಾದಶಹನಿಗೆ ಅವರ ಗುಟ್ಟು ಚನ್ನಾಗಿ ಗೊತ್ತಿರುತ್ತದೆ. ರಾಮಸಿಂಗ, ನೀವು ಅವರ ಕೆಲಸಕ್ಕೆ ಸಹಾಯ ಮಾಡುತ್ತಲಿರಿ'' ಎನ್ನಲು, ರಾಮಸಿಂಗನಿಗೆ ಬಾದಶಹನ ಈ ಮರ್ಮೋದ್ಘಾಟದ ಮಾತುಗಳು ದುಃಸಹವಾದವು. ಬಾದಶಹನು ತನ್ನ ಮೇಲೆ ಸಿಟ್ಟಾಗಿರುವನೆಂದು ತಿಳಿದು ಆತನು ಬಹುವಿನಯದಿಂದ ಕುರ್ನಿಸಾತ ಮಾಡಿ ರುಮಾಲದಿಂದ ಕೈ ಕಟ್ಟಿಕೊಂಡು— ''ತಾವು ಆಡುವ ಮಾತುಗಳ ಅರ್ಥವು ನನಗೆ ತಿಳಿಯಲೊಲ್ಲದು; ಇದಕ್ಕಾಗಿ ನಾಚಿಗೆ ಬರುತ್ತದೆ,'' ಅನ್ನಲು, ಬಾದಶಹನು ಕುತ್ಸಿತತನದಿಂದ— ''ಹ್ಯಾಗೆ ಅರ್ಥ ತಿಳಿದೀತು? ನೀವು ಎಲ್ಲ ಕಾರಭಾರವನ್ನು ಕಣ್ಣುಮುಚ್ಚಿಕೊಂಡೇ ಮಾಡುತ್ತೀರಿ; ಅದರಿಂದಲೇ ಅವರ ಚಲ್ಲಾಟ

ನಡೆದಿದೆ.'' ಒಳ್ಳೇದು–ಒಳ್ಳೇದು, ಪ್ರಸಂಗಬಂದಾಗ ನೋಡೋಣವಂತೆ, ಆ ನಿಮ್ಮ ಮಹಾರಾಜರಿಗೆ ಸ್ಪಷ್ಟವಾಗಿ ಹೇಳಿರಿ. ನಾವು ದರ್ಬಾರು ನೆರೆಸಿ ಕರೆಕಳುಹುವವರೆಗೆ ಅವರು ಇಲ್ಲಿ ಸುಮ್ಮನಿರಲೇಬೇಕು. ಅವರಿಗೆ ಯಾವ ಬಗೆಯ ತ್ರಾಸವನ್ನೂ ನಾವು ಕೊಟ್ಟಿರುವುದಿಲ್ಲ, ದಕ್ಷಿಣದಲ್ಲಿ ಈ ವರೆಗೆ ಪಟ್ಟಿರುವ ಶ್ರಮದ ನಿವಾರಣವನ್ನು ಈಗ ಅವರು ಮಾಡಿಕೊಳ್ಳಲಿ; ಅಂದರೆ ಮುಂದೆ ಕೆಲಸ ಮಾಡಲಿಕ್ಕೆ ಅವರಿಗೆ ಹೊಸ ಉತ್ಸಾಹವು ಉತ್ಪನ್ನವಾಗುವದು.

ಬಾದಶಹನು ಹೀಗೆ ನಿಷ್ಠುರವಾಗಿ ಹೇಳಿದಬಳಿಕ ಇನ್ನು ಉಳಿಯಿತೇನು? ಮುಂದೆ ರಾಮಸಿಂಗನು ಒಂದು ಅಕ್ಷರವನ್ನಾದರೂ ನುಡಿಯದೆ ತನ್ನ ವಾಡೆಗೆ ಹೊರಟುಹೋದನು. ಆತನ ಮನಸ್ಸು ಬಹಳ ಅಸ್ವಸ್ಥವಾಯಿತು. ಮಹಾರಾಜರಿಗೆ ಏನು ಹೇಳಬೇಕೆಂದು ಆತನಿಗೆ ತಿಳಿಯದಾಯಿತು. ಅಂದಿನ ದಿವಸವನ್ನು ತಾನು ಅಸಮಾಧಾನದಲ್ಲಿಯೇ ಕಳೆದನು. ಮರುದಿವಸ ನಿತ್ಯಕ್ರಮದಂತೆ ಆತನು ಮಹಾರಾಜರ ಬಳಿಗೆ ಹೋದನು. ಮಹಾರಾಜರು ಆತನ ಹಾದಿಯನ್ನೇ ನೋಡುತ್ತ ಕುಳಿತುಕೊಂಡಿದ್ದರು; ಆದ್ದರಿಂದ ರಾಮಸಿಂಗನು ಬಂದ ಕೂಡಲೆ ಆತನನ್ನು ಕುರಿತು—''ನೀವು ಬಾದಶಹನ ಮುಂದೆ ಮಾತು ತೆಗೆದಿದ್ದಿರೋ? ಆತನು ಏನು ಅಂದನು? ಆತನ ಉದ್ದೇಶವಾದರೂ ಏನಿರುವದು?'' ಎಂದು ಕೇಳಿದರು. ಅದಕ್ಕೆ ರಾಮಸಿಂಗನು ತಟ್ಟನೆ— ''ಬಾದಶಹನು ಇನ್ನು ಬೇಗನೆ ದೊಡ್ಡ ದರ್ಬಾರು ನೆರೆಸಿ ನಿಮಗೆ ಮಾಡತಕ್ಕ ಮಾನ–ಮರ್ಯಾದೆಗಳನ್ನು ಮಾಡುವವನಿದ್ದಾನೆ. ಇಷ್ಟು ದಿವಸ ಸುಮ್ಮನೆ ಕಾರಣವೇನೂ ಇಲ್ಲದೆ ತಡವಾಯಿತು'' ಎಂದು ಹೇಳಿದನು; ಆದರೆ ಮಹಾರಾಜರು ಆತನ ಮುಖಲಕ್ಷಣದ ಮೇಲಿಂದ ಈ ಮಾತು ಸುಳ್ಳೆಂದು ತಿಳಿದುಕೊಂಡರು. ರಾಮಸಿಂಗನು ನಿರ್ವಾಹವಿಲ್ಲದೆ ಈ ಮಾತು ಹೇಳುವನೆಂಬದು ಸಹಜವಾಗಿ ಅವರಿಗೆ ಗೊತ್ತಾಯಿತು. ಈತನಿಗೆ ಬಾದಶಹನನ್ನು ಕೇಳುವ ಧೈರ್ಯವೇ ಆಗಿರುವದಿಲ್ಲ; ಒಂದು ಪಕ್ಷದಲ್ಲಿ ಕೇಳಿದ್ದರೂ ಬಾದಶಹನು ಈತನನ್ನು ಬೆದರಿಸಿ ಬಿಟ್ಟಿರುವನು, ಎಂದು ಮನಸ್ಸಿನಲ್ಲಿ ತಿಳಕೊಂಡು, ರಾಮಸಿಂಗನ ಮನಸ್ಸನ್ನು ನೋಯಿಸಲಾರದೆ ಆತನನ್ನು ಕುರಿತು—''ಬಾದಶಹನವನು ಬಾದಶಹನೇ ಸರಿ! ನಮ್ಮಂಥವರ ಸ್ಮರಣವು ಆತನಿಗೆ ಉಳಿದರೆ ಮತ್ತೇನು ಬೇಕು? ಒಳ್ಳೇದು, ಇಲ್ಲಿಯ ಅನ್ನೋದಕ ಋಣಾನುಬಂಧವಿರುವತನಕ ಏನು ಮಾಡಿದರೂ ನಾವು ಹೋಗುವ ಹಾಗಿಲ್ಲ, ಋಣಾನುಬಂಧ ತೀರಿದ ಬಳಿಕ ಒಂದು ಕ್ಷಣ ಸಹ ನಿಲ್ಲುವಹಾಗಿಲ್ಲ; ಬಾದಶಹನ ಹುಕುಮು ಅಲ್ಲಿಯೇ ಉಳಿದಿರುವದು. ಆದರೆ ಬಾದಶಹನ ಮನಸ್ಸಿನಲ್ಲಿ ಏನಿರುತ್ತದೆಂಬದಾದರೂ ಗೊತ್ತಾದರೆ ನಮ್ಮ ಹಾದಿಯ ಹಿಡಿಯಲಿಕ್ಕೆ ಅಥವಾ ಮತ್ತೇನಾದರೂ ಉಪಾಯ ಮಾಡಲಿಕ್ಕೆ ನಮಗೆ ನೆಟ್ಟಗಾಗುವದು,'' ಅನ್ನಲು ರಾಮಸಿಂಗನು— ''ಆತನ ಮನಸ್ಸಿನಲ್ಲಂತು ಹಾಗೇನು ಕೆಡಕು ಇದ್ದಹಾಗೆ ತೋರುವದಿಲ್ಲ; ನಿಮ್ಮಲ್ಲಿಯ ಇಲ್ಲದ ಸುದ್ದಿಗಳನ್ನು ಮಾತ್ರ ಯಾರೋ ಅಲ್ಲಿಗೆ ಮುಟ್ಟಿಸುವಂತೆ ತೋರುತ್ತದೆ; ಆದ್ದರಿಂದ ನಿಮ್ಮಲ್ಲಿ ಯಾರಾದರೂ ಅಂಥವರಿದ್ದರೆ ಅವರನ್ನು ದೂರಮಾಡುವದು ನೆಟ್ಟಗೆ ಕಾಣುತ್ತದೆ.'' ಎಂದು ಸೂಚಿಸಿದನು!

ಅದಕ್ಕೆ ಮಹಾರಾಜರು—''ನಮ್ಮಲ್ಲಿಯಂತು ಯಾರೂ ಅಂಥವರಿರುವದಿಲ್ಲ. ನಮ್ಮ ತೈನಾತಿಗೆ ಇರುವ ನಿಮ್ಮ ಜನರಲ್ಲಿ ಯಾರಾದರೂ ಅಂಥವರಿದ್ದರೆ ನೋಡಿರಿ. ಹೇಳುವರು ಯಾರೇ ಇರಲೊಲ್ಲರೇಕೆ, ಅವರು ಬಾದಶಹನ ಮುಂದೆ ಹೇಳಿದ್ದಾದರೂ ಏನು? ಅದು ಗೊತ್ತಾದರೆ ಮುಂದೆ ಏನಾದರೂ ಮಾಡಲಿಕ್ಕೆ ಬಂದೀತು,'' ಅನ್ನಲು, ರಾಮಸಿಂಗನು—''ಏನೆಂಬದು ನನಗೂ ಗೊತ್ತಾಗಿಲ್ಲ ಕ್ರಮದಿಂದ ಅದರ ಗೊತ್ತು ಹಚ್ಚುವೆನು,'' ಎಂದು ಹೇಳಿ, ಮಹಾರಾಜರ ಅನುಮತಿಯಿಂದ ಆತನು ಮನೆಗೆ ಹೋದನು.

ಹೀಗೆ ಮಹಾರಾಜರು ಅರೆದಾಡುತ್ತ ಬೇಸರದಿಂದ ಕಾಲಹರಣ ಮಾಡುತ್ತಿರಲು, ಒಂದು ದಿನ ರಾಮಸಿಂಗನ ಸವಾರನು ಕುದುರೆ ಓಡಿಸುತ್ತ ಒಂದು ಥೈಲಿಯನ್ನು ತಕ್ಕೊಂಡು ಮಹಾರಾಜರ ವಾಡೆಯ ಕಡೆಗೆ ಬಂದನು. ಥೈಲಿಯನ್ನು ಮಹಾರಾಜರಿಗೆ ಮುಟ್ಟಿಸುವ ಕೆಲಸವು ಬಾಳಾಜಿ ಅವಜಿಯದಾಗಿತ್ತು ಆದ್ದರಿಂದ ಆ ಸವಾರನು ಥೈಲಿಯನ್ನು ಬಾಳಾಜಿ ಯವರ ಕೈಯಲ್ಲಿ ಕೊಟ್ಟನು. ಆಗ ಸುರ್ಯೋದಯವಾಗುತ್ತಲಿತ್ತು ಮಹಾರಾಜರು ಮುಖ ಮಾರ್ಜನಾದಿ ವಿಧಿಗಳನ್ನು ತೀರಿಸಿಕೊಂಡು ಪರಿವಾರದೊಡನೆ ಮಹತ್ವದ ಮಾತು-ಕಥೆ ಗಳಾಡುತ್ತ ಕುಳಿತುಕೊಂಡಿದ್ದರು; ಅಷ್ಟರಲ್ಲಿ ಬಾಳಾಜಿಯು ತಾನು ಬಂದಿರುವ ವರ್ತಮಾನವನ್ನು ತಿಳಿಸಲು, ಕೂಡಲೆ ಆತನನ್ನು ಮಹಾರಾಜರು ಕರಿಸಿಕೊಂಡರು. ಬಾಳಾಜಿಗೆ ಯಾವಾಗಲೂ ಭೆಟ್ಟಿಗೆ ಬರಲಿಕ್ಕೆ ಪ್ರತಿಬಂಧವಿದ್ದಿಲ್ಲ ಬಾಳಾಜಿಯು ಹೋದಕೂಡಲೆ ಥೈಲಿಯನ್ನು ಒಡೆದನು. ಥೈಲಿಯು ಬಾದಶಹನ ಕಡೆಯಿಂದ ರಾಮಸಿಂಗನ ಮುಖಾಂತರ ಬಂದದ್ದಾಗಿತ್ತು, ಅದರಲ್ಲಿ ಬಾದಶಹನು—''ಇಂದಿನ ಎರಡು ಪ್ರಹರದ ದೊಡ್ಡ ದರ್ಬಾರ ನೆರೆಸಿ, ನಿಮಗೆ ವಸ್ತ್ರ ಮೊದಲಾದವನ್ನು ಕೊಡಬೇಕೆಂದು ಮಾಡಿರುತ್ತದೆ; ಆದ್ದರಿಂದ ತಾವು ದರ್ಬಾರಕ್ಕೆ ಬರಬೇಕು. ತಾವು ಬಹಳ ದಿವಸ ಕೊಳೆಯುತ್ತ ಕುಳಿತುಕೊಳ್ಳಬೇಕಾಯಿತು; ಆದರೆ ಆ ದಿನಗಳ ಉಪಯೋಗವನ್ನು ತಾವು ಚನ್ನಾಗಿ ಮಾಡಿಕೊಂಡಿರಬಹುದು.'' ಎಂದು ಕೈಮುಟ್ಟಿ ಬರೆದಿದ್ದನು. ಈ ಥೈಲಿಯ ಸಂಗಡ ರಾಮಸಿಂಗನ ಥೈಲಿಯೊಂದು ಇತ್ತು ಅದರಲ್ಲಿ ಆತನು—''ಇದರೊಡನೆಯಿರುವ ಥೈಲಿಯು ಇದೇ ಈಗ ಬಾದಶಹರ ಕಡೆಯಿಂದ ಬಂದಿತು. ಅದನ್ನು ನಿಮ್ಮ ಕಡೆಗೆ ಕಳಿಸಿದ್ದೇನೆ. ಅದರಲ್ಲಿ ಏನಿರುವದೆಂಬುದು ನನಗೆ ಗೊತ್ತಿರುತ್ತದೆ; ಯಾಕಂದರೆ ಬಾದಶಹರು ಅದರೊಳಗಿನ ಸಂಗತಿಗಳನ್ನೆಲ್ಲ ನನಗೆ ಕಳಿಸಿದ ಥೈಲಿಯಲ್ಲಿ ಬರೆದಿರುತ್ತಾರೆ. ಬಾದಶಹರು ನಿನ್ನೆ ರಾತ್ರಿ ಬಹಳ ಸಂತೋಷದಲ್ಲಿದ್ದರು. ಇಂದಿನ ದರ್ಬಾರದಲ್ಲಿ ನಿಮ್ಮ ಮಾನ-ಮರ್ಯಾದೆಗಳು ಚನ್ನಾಗಿ ಆಗುವಂತೆ ತೋರುತ್ತದೆ. ಚನ್ನಾಗಿ ಆಗೇ ಆಗುವವು. ಸ್ವಲ್ಪ ಹೊತ್ತು ತಡೆದು ನಾನು ನಿಮ್ಮ ಬಳಿಗೆ ಬರುವೆನು. ಈಗ ಥೈಲಿಯನ್ನು ತಕ್ಕೊಂಡೇ ಬರುತ್ತಿದ್ದೆನು; ಆದರೆ ಅವಸರದ ಕೆಲಸ ಬಿದ್ದದ್ದರಿಂದ ಅದನ್ನು ತೀರಿಸಿಕೊಂಡು ಬರಬೇಕಾದರೆ ಸ್ವಲ್ಪ ತಡವಾದೀತು.'' ಎಂದು ಬರೆದಿದ್ದನು. ಮಹಾರಾಜರು ಈ ಪತ್ರಗಳನ್ನು ಓದಿ ತಮ್ಮ ಪರಿವಾರದವರಿಗೆಲ್ಲ ಅವುಗಳೊಳಗಿನ ಸಂಗತಿಯನ್ನು ತಿಳಿಸಿದರು. ಅದನ್ನು ಕೇಳಿ ಎಲ್ಲರಿಗೂ ಸಂತೋಷವಾಯಿತು; ಆದರೆ ಮಹಾರಾಜರ ಮುಖಮುದ್ರೆಯು

ಮಾತ್ರ ಸಂತುಷ್ಟವಾಗಿ ತೋರಲಿಲ್ಲ, ಅಷ್ಟರಲ್ಲಿ ರಾಮಸಿಂಗನು ಬಂದ ಸುದ್ದಿಯನ್ನು ಹೇಳಲು, ಮಹಾರಾಜರು ಕೂಡಲೆ ಆತನನ್ನು ಕರೆಸಿಕೊಂಡರು. ಉಪಚಾರದ ಆ ಮಾತು ಈ ಮಾತು ಆದಬಳಿಕ ರಾಮಸಿಂಗನು ಸಮಯನೋಡಿ ಮಹಾರಾಜರನ್ನು ಕುರಿತು— ''ತಾವು ಸುಜ್ಞರೂ, ಸುವಿಚಾರಗಳೂ ಇರುವದರಿಂದ ನಾನು ತಮಗೆ ಹೆಚ್ಚಿಗೆ ಹೇಳ ಬೇಕೆನ್ನುವ ಹಾಗಿಲ್ಲ. ತಾವು ವಿನಯದಿಂದ ಬಾದಶಹನಿಗೆ ಕುರ್ನಿಸಾತ ಮೊದಲಾದದ್ದನು ಮಾಡಿ, ಆತನು ತೋರಿಸಿದ ಸ್ಥಳದಲ್ಲಿ ಕುಳಿತುಕೊಂಡರೆ, ಎಲ್ಲ ಕೆಲಸಗಳು ಸುಸೂತ್ರವಾಗಿ ಆಗುವವು; ಆದರೆ ಅದರಲ್ಲೇನಾದರೂ ತಪ್ಪಾದರೆ ಮಾತ್ರ.........

ಮಹಾರಾಜರಿಗೆ ಮಾತಾಡಿದ ಮಾತು ಸೇರಲಿಲ್ಲೆಂದು ತಿಳಿದು ರಾಮಸಿಂಗನು ಅಷ್ಟಕ್ಕೆ ಆ ಮಾತು ಬಿಟ್ಟು—''ತಮಗೆ ದರ್ಬಾರದ ಯಾವತ್ತೂ ಬೇಕಾಗುವ ಸಾಮಗ್ರಿ ಗಳೆಲ್ಲ ಈಗ ಬರುವವು, ನಾನೂ ಅವುಗಳ ಹಿಂದೆಯೇ ಬರುವೆನು. ನಾನು ತಮ್ಮ ಹತ್ತರ ಇರಬೇಕೆಂದು ಬಾದಶಹರ ಅಪ್ಪಣೆಯೇ ಆಗಿದೆ.'' ಎಂದು ಹೇಳಿದನು. ಮಹಾರಾಜರು ಸುಮ್ಮನೆ ಕುಳಿತುಕೊಂಡು ಆತನ ಮಾತುಗಳನ್ನು ಕೇಳುತ್ತಲಿದ್ದರು; ಬಳಿಕ ಅವರು ರಾಮ ಸಿಂಗನನ್ನು ಕುರಿತು—''ಆಗಲಿ, ನಾನು ನಿಯಮಿಸಿದ ಹೊತ್ತಿಗೆ ಪೋಷಾಕು ಹಾಕಿಕೊಂಡು ಸಿದ್ಧವಾಗಿರುವೆನು. ನೀವು ಬಂದಿರೆಂದರೆ ಕೂಡಿಯೇ ಹೋಗೋಣ. ನೀವು ನಮ್ಮ ಬಳಿಯಲ್ಲಿದ್ದ ಹೊರತು ನಮಗೆ ಸಮಾಧಾನವಾಗಲಾರದು.'' ಎಂದು ಹೇಳಿದರು. ರಾಮಸಿಂಗನು ಹೊರಟು ಹೋದನು. ಮಹಾರಾಜರೂ ತಮ್ಮ ಮನಸ್ಸನ್ನು ಸಮಾಧಾನಪಡಿಸಿಕೊಂಡು ತಮ್ಮ ಜೀವದ ಗೆಳೆಯರನ್ನು, ಹಿತಕರ್ತರನ್ನು ಏಕಾಂತದಲ್ಲಿ ಕರಿಸಿಕೊಂಡು ಅವರೊಡನೆ ಆಲೋಚಿಸುವದನ್ನು ಆಲೋಚಿಸಿದರು, ಅವರಿಗೆ ಹೇಳತಕ್ಕದ್ದನ್ನು ಹೇಳಿದರು. ಆಮೇಲೆ ಅವರು ಪೋಷಾಕು ಹಾಕಿಕೊಂಡರು. ಸಂಭಾಜಿ ಮಹಾರಾಜರಿಗೂ ಪೋಷಾಕು ಹಾಕಿದರು. ಅವರು ತಮ್ಮ ಎರಡು ಒಳ ಅಂಗಿಗಳನ್ನು ಹಾಕಿಕೊಂಡು ಮೇಲೊಂದು ನಿಲುವಂಗಿಯನ್ನು ತೊಟ್ಟು ಕೊಂಡರು. ಅಲ್ಲಿಯೇ ಅವರ ಶ್ರೀ ಭವಾನಿಯ ತಲವಾರವು ಇತ್ತು ಅದನ್ನು ವಂದಿಸಿತಕ್ಕೊಂಡು ಮಹಾರಾಜರು ಹೊರಡಲು ಸಿದ್ಧರಾದರು. ಅವರ ದರ್ಜೆಯಂತೆ ಅವರ ಸಂಗಡ ದರ್ಬಾರಕ್ಕೆ ಹೋಗುವದಕ್ಕಾಗಿ ತಕ್ಕ ಲವಾಜಮನ್ನು ರಾಮಸಿಂಗನು ಕಳಿಸಿದ್ದನು. ಉಳಿದವರೂ ಹೊರಡಲು ಸಿದ್ಧವಾಗಿದ್ದರು. ಅವರೂ ಆತ್ಮರಕ್ಷಣಕ್ಕೆ ತಕ್ಕ ಪೋಷಾಕು ಧರಿಸಿದ್ದರು. ಬಾದಶಹನು ಮಹಾರಾಜರ ಸಲುವಾಗಿ ಒಂದು ಶೃಂಗರಿಸಿದ ಪಲ್ಲಕ್ಕಿಯನ್ನು ಕಳಿಸಿದ್ದನು; ಆದರೆ ಮಹಾರಾಜರು ಅದರಲ್ಲಿ ಕುಳಿತುಕೊಳ್ಳಲಿಕ್ಕೆ ಒಪ್ಪದೆ, ತಮ್ಮ ಸ್ವಂತದ ಪಲ್ಲಕ್ಕಿ ಯಲ್ಲಿಯೇ ಕುಳಿತುಕೊಂಡು ಬರುತ್ತೇವೆಂದು ಹೇಳಿದರು. ಹೀಗೆ ಮಾಡಿದರೆ ಬಾದಶಹರಿಗೆ ಸಿಟ್ಟು ಬರಬಹುದೆಂದು ರಾಮಸಿಂಗನ ತೈನಾತಿಯ ಜನರಲ್ಲೊಬ್ಬನು ಸೂಚಿಸಿದನು; ಆದರೆ ಮಹಾರಾಜರು ಆತನ ಮಾತಿಗೆ ಕಿವಿಗೊಡಲಿಲ್ಲ; ಶಂಭುವನ್ನು ಆ ಪಲ್ಲಕ್ಕಿಯಲ್ಲಿ ಕುಳ್ಳಿರಿಸಿರಿ; ಯಾಕಂದರೆ ಇನ್ನು ಆತನು ಬಾದಶಹನ ಐದು ಸಾವಿರದ ಮನಸಬದಾರ ನಾಗತಕ್ಕವನು, ಎಂದು ಹೇಳಿದರು. ಅಂದಬಳಿಕ ಯಾರಿಗೆ ಏನು ಹೇಳುವ ಧೈರ್ಯ

ವಾಗುವದು? ಬಂದ ಪಲ್ಲಕ್ಕಿಯನ್ನು ಹಾಗೇ ಹಿಂದಕ್ಕೆ ಕಳಿಸದೆ ಮಹಾರಾಜರು ತಮ್ಮ ಚಿರಂಜೀವರನ್ನಾದರೂ ಅದರೊಳಗೆ ಕೂಡಿಸಲಿಕ್ಕೆ ಪರವಾನಿಗೆ ಕೊಡುತ್ತಿರುವುದೇ ಎಲ್ಲರಿಗೂ ಹೆಚ್ಚಿನದಾಗಿ ತೋರಿತು.

ಮಹಾರಾಜರ ಸ್ವಂತದ ಪಲ್ಲಕ್ಕಿಯು ಸಿದ್ಧವಾಯಿತು. ಅವರ ನಿತ್ಯದ ಬೋಯಿಗಳು ಬಂದರು. ಇನ್ನು ಹೊರಡಲಿಕ್ಕೆ ಎಲ್ಲರೂ ಸಿದ್ಧವಾಗಿ ನಿಂತುಕೊಂಡರು. ರಾಮಸಿಂಗನು ಬರುವ ಹಾದಿಯನ್ನೇ ಎಲ್ಲರೂ ನೋಡುತ್ತಿದ್ದರು. ಅಷ್ಟರಲ್ಲಿ ರಾಮಸಿಂಗನೂ ಬಂದನು. ಬಾದಶಹರು ಕಳಿಸಿದ ಪಲ್ಲಕ್ಕಿಯಲ್ಲಿ ಮಹಾರಾಜರು ತಾವು ಕುಳಿತುಕೊಳ್ಳದೆ ಸಂಭಾಜಿಯನ್ನು ಕುಳ್ಳಿರಿಸಿದ್ದು ರಾಮಸಿಂಗನ ಮನಸ್ಸಿಗೆ ಬರಲಿಲ್ಲ; ಆತನು ಅದರಂತೆ ಮಹಾರಾಜರಿಗೆ ಸೂಚಿಸಿದನು; ಆದರೆ ಮಹಾರಾಜರು ಆತನಿಗೆ— ''ನಾವು ಮಾಡಿದ್ದೇ ಯೋಗ್ಯವಾಗಿರುವದು. ಸಂಭಾಜಿ ರಾಜರಿಗೇ ಮನಸಬದಾರಿಯ ವಸ್ತ್ರಗಳು ದೊರೆಯತಕ್ಕವಿರುವದರಿಂದ ಅವರೇ ಬಾದಶಹನ ಮರ್ಯಾದೆಯನ್ನು ಸ್ವೀಕರಿಸುವದು ಯೋಗ್ಯವು ಎಂದು ಅರ್ಧ ಉಪಹಾಸದಿಂದ ಹೇಳಿ, ತಮ್ಮ ಪಲ್ಲಕ್ಕಿಯನ್ನು ಹತ್ತುವದಕ್ಕಾಗಿ ಗೊಂಡೆಗೆ ಕೈ ಹಾಕಿದರು. ಕೂಡಲೇ ಗೊಂಡೆಯು ಹರಿದು ಮಹಾರಾಜರ ಕೈಯಲ್ಲಿ ಬಂದು ಅಪಶಕುನವಾಯಿತು! ಇದನ್ನು ನೋಡಿ ಎಲ್ಲರ ಎದೆಗಳು ದಸಕ್ಕೆಂದವು. ಪ್ರಸಂಗಾವಧಾನಿಗಳಾದ ಮಹಾರಾಜರು ಒಮ್ಮೆಲೇ ನಕ್ಕು— ''ಶಾಭಾಸ ಶ್ರೀ ಭವಾನಿಮಾತೆಯ ದೃಷ್ಟಾಂತದ ಕೌತುಕವನ್ನಾದರೂ ಎಷ್ಟೆಂದು ಹೇಳಬೇಕು? ಅಪ್ಪಾ, ಯಾವದೊಂದು ಹೊರಗಿನ ಆಧಾರದ ಮೇಲೆ ಕೈ ಊರಿ ನೀನು ಕೆಲಸ ಮಾಡಿದರೆ ನಿನಗೆ ಯಶಸ್ಸು ಪ್ರಾಪ್ತವಾಗಲಾರದು. ತನ್ನ ಆಧಾರವೇ ನಿನ್ನ ಆಧಾರವೆಂದು ಆಕೆಯು ನನಗೆ ಸೂಚಿಸಿದಳು'' ಎಂದು ನುಡಿದು, ನಿಶ್ಶಂಕೆಯಿಂದ ತಟ್ಟನೆ ಪಲ್ಲಕ್ಕಿಯಲ್ಲಿ ಕುಳಿತುಕೊಂಡರು. ಬೋಯಿಗಳು ಆ ಗೊಂಡೆಯನ್ನು ತೆಗೆದು ಮತ್ತೊಂದು ಗೊಂಡೆಯನ್ನು ಕಟ್ಟಿದರು. ಪದ್ಧತಿಯಂತೆ ಎರಡೂ ಪಲ್ಲಕ್ಕಿಗಳ ಎರಡೂ ಬದಿಗಳಲ್ಲಿ ಚಾಮರ ಬೀಸುವವರು ಚಾಮರ ಬೀಸಹತ್ತಿದರು; ಗಾಳಿಯ ಹಾಕುವವರು ಗಾಳಿಯ ಹಾಕಹತ್ತಿದರು. ತುತೂರಿ, ಕೊಂಬು, ನೌಬತ್ತು ಮೊದಲಾದವುಗಳ ಧ್ವನಿಯಾಗಹತ್ತಿತು. ಹೀಗೆ ಮಹಾರಾಜರ ಸವಾರಿಯು ಯಥಾಸ್ಥಿತವಾಗಿ ಆಗ್ರಾದ ಕೋಟೆಯ ಕಡೆಗೆ ಸಾಗಿತು. ಇಂದು ಮಹಾರಾಜರು ದರ್ಬಾರಕ್ಕೆ ಹೋಗುವರೆಂಬ ಸುದ್ದಿಯು ಜನರಿಗೆ ತಿಳಿದಕೂಡಲೆ ಅವರು ಪುನಃ ಮಹಾರಾಜರನ್ನು ನೋಡುವ ಇಚ್ಛೆಯಿಂದ ಗುಂಪುಗುಂಪಾಗಿ ಕೋಟೆ ಮಾರ್ಗದ ಕಡೆಗೆ ಸಾಗಹತ್ತಿದರು.

ಇತ್ತ ಬಾದಶಹನು ದರ್ಬಾರದ ಪೊಷಾಕು ಹಾಕಿಕೊಳ್ಳಹತ್ತಿದ್ದನು. ಆತನಿಗೆ ಡಾಂಭಿಕತನವೂ, ಐಷಾರಾಮವೂ ಸೇರುತ್ತಿದ್ದಿಲ್ಲವೆಂಬುದನ್ನು ವಾಚಕರು ಅರಿತಿರ ಬಹುದು; ಆತನಿಗೆ ಐಷರಾಮು ಎಂಬ ಶಬ್ದವು ಸಹ ಸೇರುತ್ತಿದ್ದಿಲ್ಲ. ಆತನು ಸಾದಾ ಪೋಷಾಕಿಗೆ ಮೆಚ್ಚಿದವನಿದ್ದನು. ಅಂದಬಳಿಕ ಆತನ ಪೋಷಾಕು ದಿಮಾಕಿನದು ಹ್ಯಾಗಿರಬೇಕು? ಆದರೆ ಎಷ್ಟಾದರೂ ಆತನು ಬಾದಶಹನು; ಅದರಲ್ಲಿ, ದಕ್ಷಿಣದ ರಾಜನ ಕಣ್ಣುಗಳನ್ನು ತನ್ನ ವೈಭವಸಾಮರ್ಥ್ಯಗಳಿಂದ ಇಂದು ಆತನು ಸಂಪೂರ್ಣವಾಗಿ ಕುಕ್ಕಬೇಕಾಗಿತ್ತು; ಆದ್ದರಿಂದ

ಇದ್ದದ್ದರಲ್ಲಿ ತಾನು ದರ್ಬಾರದ ಒಳ್ಳೆಯ ಪೋಷಾಕನ್ನು ಹಾಕಿಕೊಳ್ಳಬೇಕೆಂದು ಬಾದಶಹನು ನಿಶ್ಚಯಿಸಿದ್ದನು. ಅದರಂತೆ ಆತನು ತನ್ನ ಪೋಷಾಕು ಹಾಕಿಕೊಳ್ಳಹತ್ತಿದನು. ಅಷ್ಟರಲ್ಲಿ ತನ್ನ ಸೋದರತ್ತೆಯಾದ ಷಾಹಿಸ್ತೇಖಾನನ ಹೆಂಡತಿಯು, ತನ್ನನ್ನು ಕಾಣಲಿಕ್ಕೆ ಬಂದಿರುವಳೆಂಬ ಸುದ್ದಿಯು ಬಂದಿತು. ಇದೇನು ಪ್ರಸಂಗವೆಂದು ಬಾದಶಹನು ಸ್ವಲ್ಪ ಹೊತ್ತು ಆಲೋಚಿಸಿದನು. ಬಳಿಕ ಆತನು—''ದರ್ಬಾರಕ್ಕೆ ಹೋಗುವ ಹೊತ್ತಿನಲ್ಲಿ ಈಗ ಭೆಟ್ಟಿಯಾಗಲಿಕ್ಕೆ ಅನುಕೂಲ ವಿಲ್ಲ''ಂದು ಹೇಳಿಕಳಿಸಿದನು. ಅದಕ್ಕೆ ಆ ಹೆಣ್ಣುಮಗಳು ಪುನಃ ಬಾದಶಹನಿಗೆ—''ಏನೇ ಇರಲಿ, ದರ್ಬಾರಕ್ಕೆ ಹೋಗುವ ಮೊದಲು ನನ್ನನ್ನು ಕಾಣಲೇಬೇಕು; ತಮಗೆ ಕಾಣಲಿಕ್ಕೆ ಅನುಕೂಲವಿದ್ದರೆ ನಾನು ಸ್ವತಃ ನೀವಿದ್ದಲ್ಲಿಗೆ ಬಂದು ನಿಮ್ಮ ಭೆಟ್ಟಿಯನ್ನು ತಕ್ಕೊಳ್ಳುವೆನು. ನಾನೇನು ಮುದುಕೆಯು, ಗೋಷೆ-ಗೀಷೆಯನ್ನು ಮನಸ್ಸಿನಲ್ಲಿ ತರುವದಿಲ್ಲ.'' ಎಂದು ಹೇಳಿಕಳಿಸಿದಳು. ಈ ವಿಲಕ್ಷಣ ರೀತಿಯನ್ನು ನೋಡಿ ಬಾದಶಹನಿಗೆ ಬಹಳ ಆಶ್ಚರ್ಯ ವಾಯಿತು. ಸೋದರತ್ತೆಯ ಮೇಲೆ ಬಾದಶಹನ ಭಕ್ತಿಯು ವಿಶೇಷ ಆದ್ದರಿಂದ ಆಕೆಯ ಈ ನಿರ್ಧಾರದ ಮಾತನ್ನು ನಿರಾಕರಿಸಲಾರದೆ, ''ಈಗ ಬರುವೆನು, ನಮ್ಮ ದಿವಾಣಖಾನೆಯಲ್ಲಿ ನೀವು ಬಂದು ಕುಳಿತುಕೊಳ್ಳಬೇಕು,'' ಎಂದು ಹೇಳಿಕಳಿಸಿದನು. ಹೀಗೆ ಹೇಳಿಕಳಿಸಿದ್ದರ ಹಿಂದಿ ನಿಂದಲೇ ತಾನೂ ಹೋದನು. ಅಷ್ಟರಲ್ಲಿ ಆತನ ಅತ್ತೆಯು ಅಲ್ಲಿ ಬಂದು ಕುಳಿತುಕೊಂಡಿದ್ದಳು. ಆಕೆಯು ಬಾದಶಹನನ್ನು ನೋಡಿದ ಕೂಡಲೆ ನುಡಿದಳೇನೆಂದರೆ—''ನನ್ನ ಮಗನನ್ನು ಕೊಂದ ಕಾಫರನ ಆಗತಸ್ವಾಗತವನ್ನು ಮಾಡಿ ನೀನು ಆತನಿಗೆ ಮನಸಬದಾರಿ ಸುಬೇದಾರಿ ಗಳನ್ನು ಕೊಡವವೆನೋ ಏನು? ಅಂದಬಳಿಕ ಅಬಲೆಯರಾದ ನಾವು ಆತನ ಸೇಡು ತೀರಿಸಿಕೊಳ್ಳುವದಕ್ಕಾಗಿ ಯಾರ ಮೋರೆಯನ್ನು ನೋಡಬೇಕು? ಆತನ ಸ್ವಾಗತವು ಯಾವ ವಿಧದಿಂದ ಆಯಿತೆಂಬದನ್ನು ಕೇಳಿದಾಗಿನಿಂದ ನನ್ನ ಸರ್ವಾಂಗವು ತಪ್ತವಾಗಿರುತ್ತದೆ. ಆತನು ನಿನ್ನ ಕೈಯಲ್ಲಿ ಬಂದು ಸಿಕ್ಕಿರಲು, ಮಾನ-ಮರ್ಯಾದೆಗಳಿಂದ ನೀನು ಆತನನ್ನು ಹೊಡೆ ಯುವಿಯೋ, ಹಿಂದೆ ಆದದ್ದರ ಸೇಡು ತೀರಿಸಿಕೊಳುವೆಯೋ? ಸ್ವರ್ಗದಲ್ಲಿ ನಿನ್ನ ಮಾವನು ನಿನ್ನ ಈ ಕೃತ್ಯದ ಸಲುವಾಗಿ ನಿನಗೆ ಏನು ಅನ್ನುತ್ತಿರಬಹುದೆಂಬದನ್ನು ವಿಚಾರಮಾಡು. ಆತನ ಮಗನ ಪ್ರಾಣವು ಯಾರ ಸಲುವಾಗಿ ಹೋಯಿತು? ಸ್ವತಃ ಆ ನಿನ್ನ ಮಾವನು ಯಾರಸಲುವಾಗಿ ಗಂಡಾಂತರಕ್ಕೆ ಗುರಿಯಾದನು? ಇದನ್ನು ಸ್ವಲ್ಪ ಮನಸ್ಸಿನಲ್ಲಿ ತಂದುಕೊಳ್ಳು ನೀನು ಏನಾದರೂ ಆ ಕಾಫರನ ಶಾಸನ ಮಾಡೀಯೆಂದು ನಾನು ತಿಳಿದಿದ್ದೆನು; ಆದರೆ ಆತನ ಶಾಸನ ಮಾಡುವದು ಒತ್ತಟ್ಟಿಗೆ ಉಳಿದು, ಆತನ ಬಡೇಜಾವು ನಡೆದದೆ! ಈಗ ನೀನು ಏನಾದರೂ ಆತನ ಶಾಸನ ಮಾಡುವೆನೆಂದು ಅಭಿವಚನ ಕೊಟ್ಟ ಹೊರತು ನಾನು ಇಲ್ಲಿಂದ ಉಲುಕುವದಿಲ್ಲ. ಇಲ್ಲದಿದ್ದರೆ ಇಲ್ಲಿಯೇ ತಲೆ ಒಡಕೊಂಡು ಪ್ರಾಣಕೊಡುವೆನು. ಅವರು ನಿನ್ನ ಸಲುವಾಗಿ ತಮ್ಮನ್ನು ಗಂಡಾಂತರಕ್ಕೆ ಗುರಿ ಮಾಡಿಕೊಂಡರು; ಅವರ ಮಗನು ನಿನ್ನ ಸಲುವಾಗಿಯೇ ಪ್ರಾಣಕೊಟ್ಟನು. ನಾನು ನಿನ್ನ ಸಲುವಾಗಿ ಈಗ ಪ್ರಾಣ ಕೊಡುವೆನು! ಆಮೇಲೆ ನೀನು ಏನು ಮಾಡಿದರೂ ನಾನು ನೋಡಲಿಕ್ಕೇನು ಬರುವದಿಲ್ಲ.

ತನ್ನ ಅತ್ತೆಯ ಈ ಮಾತುಗಳನ್ನು ಕೇಳಿ ಔರಂಗಜೇಬನು ಸ್ತಬ್ಧನಾದನು. ಆತನು ಒಳ್ಳೇ ದೀರ್ಘದರ್ಶಿಯು, ನಿಶ್ಚಯದ ಸ್ವಭಾವದವನು. ಹೆಂಗಸರ ಇಂಥ ಅಳೋಣ ಕರೆಯೋಣ ಗಳಿಂದ ಆತನ ಹೃದಯವು ಚಲಿಸತಕ್ಕದ್ದಲ್ಲ, ಆದರೆ ಆ ಮುದುಕೆಯ ಅಳೋಣವನ್ನು ನೋಡಿ, ಉದ್ವೇಗದಿಂದ ಆಕೆಯು ಆಡಿದ ಮಾತುಗಳನ್ನು ಕೇಳಿ, ಆಕೆಯ ಪ್ರಾಣಕೊಡುವ ವಿಚಾರವನ್ನು ಮನಸ್ಸಿನಲ್ಲಿ ತಂದು ಅಂಥವನ ಹೃದಯವು ಕೂಡ ಕಂಪಿಸಿತು. ಆ ಮುದುಕೆಗೆ ಏನು ಹೇಳಬೇಕೆಂಬದು ಬಾದಶಹನಿಗೆ ತೋಚದಾಯಿತು. ಕಡೆಗೆ ಆತನು ತನ್ನ ಅತ್ತೆಗೆ— "ನೀನು ಏನೂ ಚಿಂತೆಮಾಡಬೇಡ. ನಿನ್ನ ಅಪೇಕ್ಷೆಯಂತೆ ಎಲ್ಲ ವ್ಯವಸ್ಥೆಯಾಗುವದು" ಎಂದು ಉತ್ತರಕೊಟ್ಟನು. ಆ ಮುದುಕೆಗೂ ಬಾದಶಹನ ಸ್ವಭಾವ ಪೂರ್ಣವಾಗಿಗೊತ್ತಿತ್ತು; ಆದ್ದರಿಂದ ಆಕೆಯು ಹೆಚ್ಚಿಗೆ ಜಗ್ಗದೆ, ಈಗ ಅದಷ್ಟೇ ಸಾಕೆಂದು ತಿಳಿದು, ಆಕೆಯು ಹೋಗ ಹೋಗುತ್ತ ಬಾದಶಹನನ್ನು ಕುರಿತು—"ಇನ್ನು ನಾನು ನಿಶ್ಚಿಂತಳಾದೆನು. ಆಡಿದಂತೆ ನೀನು ಮಾಡೇಮಾಡುವೆ; ನಾನೂ ರಂಡೆಯಾದೆನು, ನನ್ನ ಮಗನೂ ಸತ್ತು ಹೋದನು; ಅಂದಬಳಿಕ ನಾನು ನಿನ್ನ ಬಳಿಗೆ ಬಾರದೆ ಯಾರ ಬಳಿಗೆ ಬರಲಿ? ಇನ್ನು ನನ್ನ ಸಮಾಧಾನ ವಾಯಿತು" ಎಂದು ನುಡಿದು ಹೊರಟುಹೋದಳು.

ಇತ್ತ ರಾಮಸಿಂಗನೂ, ಮಹಾರಾಜರೂ, ಸಂಭಾಜಿಯೂ ತಮ್ಮ ತಮ್ಮ ಪಲ್ಲಕ್ಕಿಗಳಲ್ಲಿ ಕುಳಿತುಕೊಂಡು ಸಮಾರಂಭದಿಂದ ಹೊರಟಿದ್ದರು. ಬರಬರುತ್ತ ಅವರು ಕೋಟೆಯನ್ನು ಪ್ರವೇಶಿಸಿ, ದರ್ಬಾರವು ಕೂಡತಕ್ಕ "ಆಮಖಾಸ್" ಎಂಬ ಹೆಸರಿನ ಭವ್ಯವಾದ ದಿವಾಣ ಖಾನೆಗೆ ಬಂದರು. ರಾಮಸಿಂಗನೂ, ಆತನ ಮಿತ್ರರಾದ ಸರದಾರರೂ ತಮ್ಮೊಳಗಿನ ಉಚ್ಚಾಸನವನ್ನು ಮಹಾರಾಜರಿಗೆ ಕೊಟ್ಟರು; ಬಹುಜನರು ತಮ್ಮ ತಮ್ಮ ರೀತಿಯಂತೆ ಆದರದಿಂದ ಮಹಾರಾಜರ ಹಸ್ತಲಾಘವ ಮಾಡಿ ತಲೆಯಲ್ಲಾಡಿಸಿ ತಮ್ಮ ಆದರವನ್ನು ವ್ಯಕ್ತಗೊಳಿಸಿದರು. ಮಹಾರಾಜರಾದರೂ ಬಹುಮಾನಪೂರ್ವಕವಾಗಿ ಎಲ್ಲ ಕಡೆಗೆ ನೋಡಿ ನಕ್ಕು ಅವರಿಗೆ ಪ್ರತಿಸತ್ಕಾರಮಾಡಿದರು. ಅಷ್ಟರಲ್ಲಿ ನೌಬತಖಾನೆಯೊಳಗೆ ನೌಬತ್ತು ಬಾರಿಸಹತ್ತಿತು. ಕೊಂಬು, ತೂತೂರೆಗಳು ಊದಹತ್ತಿದವು, ಇದು ಬಾದಶಹರು ಬರುವ ಗುರುತು. ಭಾಲದಾರ ಚೋಪ ದಾರರು 'ನಿಗಾರಖೋ' ಎಂದು ಕೂಗಹತ್ತಿದರು. ಆಗ ಎಲ್ಲರೂ ಎದ್ದುನಿಂತರು; ಮಹಾರಾಜರು ಎದ್ದು ನಿಲ್ಲುವ ಮೊದಲು ಸ್ವಲ್ಪ ಸಂಕೋಚಪಡಹತ್ತಿದ್ದರು. ಅದನ್ನು ನೋಡಿ ರಾಮಸಿಂಗನು —"ಹೀಗೆ ಮಾಡಬೇಡಿರಿ, ಏಳಿರಿ" ಎಂದು ಸೂಚಿಸಿದನು. ಮಹಾರಾಜರೂ ಎದ್ದುನಿಂತರು. ಅಷ್ಟರಲ್ಲಿ ಬಾದಶಹನು ಬಂದು ತನ್ನ ಸಿಂಹಾಸನದಮೇಲೆ ಕುಳಿತುಕೊಂಡನು. ತನ್ನ ವೈಭವ ಸಾಮರ್ಥ್ಯವನ್ನು ನೋಡಿ ಶಿವಾಜಿಯು ಬೆರಗಾಗಿ ತನ್ನೊಡನೆ ಹಗೆತನ ಬಳಿಸುವ ವಿಚಾರವ ಬಿಟ್ಟುಬಿಡಬೇಕೆಂದು ಬಾದಶಹನು ದರ್ಬಾರದ ಸ್ಥಳವನ್ನು ಬುದ್ಧಿಪೂರ್ವಕವಾಗಿ ಶೃಂಗರಿಸಿದ್ದನು. ದಿವಾಣಖಾನೆಯೊಳಗಿನ ಖಂಬ, ಗೋಡೆ ಕಮಾನುಗಳು ವಿವಿಧ ರೀತಿಯಿಂದ ಶೃಂಗರಿಸ ಲ್ಪಟ್ಟಿರುವಂತೆ ಆ ದರ್ಬಾರದಲ್ಲಿ ಕುಳಿತುಕೊಂಡಿದ್ದ ಅಮೀರರೂ, ಉಮರಾವರರೂ, ದರಕದಾರರೂ, ಅರಸರೂ ಬಗೆಬಗೆಯಿಂದ ಶೃಂಗಾರರಾಗಿ ಬಂದಿದ್ದರು. ಬೇರೆ ಪ್ರಸಂಗದಲ್ಲಿ

ಬಾದಶಹನ ಅಪ್ಪಣೆಯಂತೆ ಹೀಗೆ ಅವರು ಅಲಂಕರಿಸಲ್ಪಟ್ಟವರಾಗಿ ದರ್ಬಾರಕ್ಕೆ ಬರಬೇಕಾಗುತ್ತಿತ್ತು ಆದರೆ ಈಗ ಅವರು ಸ್ವಸಂತೋಷದಿಂದಲೇ ಹೀಗೆ ಅಲಂಕೃತರಾಗಿ ಬಂದಿದ್ದರು. ಇವರೆಲ್ಲರು ಬಾದಶಹನ ಸಿಂಹಾಸನದ ಎರಡೂ ಮಗ್ಗಲಿಗಿರುವ ಬೆಳ್ಳಿಯ ಕಟಾಂಜನಗಳೊಳಗಿನ ಸುಂದರ ಅಧಿಷ್ಠಾನಗಳಲ್ಲಿ ತಮ್ಮ ತಮ್ಮ ಯೋಗ್ಯತೆಯಂತೆ ಕುಳಿತು ಕೊಂಡಿದ್ದರು. ಸಿಂಹಾಸನದ ಮೇಲೆ ಬಾದಶಹನು ಬಂದು ಕುಳಿತಕೂಡಲೇ ಎಲ್ಲ ಕಡೆಯಲ್ಲಿ ಸ್ತಬ್ಧತೆಯುಂಟಾಯಿತು. ತೀರ ಸಾದಾ ಉಡಿಗೆ–ತೊಡಿಗೆಯ ಬಾದಶಹನೂ ಇಂದು ಮಹಾರಾಜರನ್ನು ಬೆರಗುಗೊಳಿಸುವದಕ್ಕಾಗಿ ಬಹುಬೆಲೆಯುಳ್ಳ ಆಡಂಬರದ ಉಡಿಗೆ–ತೊಡಿಗೆಗಳನ್ನು ಧರಿಸಿದ್ದನು. ಆತನು ಬಹು ಸೂಕ್ಷ್ಮ ಹೂಗಳ ಹೆಣಿಕೆಯಿಂದ ಅಲಂಕೃತವಾಗಿರುವ ಶುಭ್ರವಾದ ಸಾಟನಿಯ ನಿಲುವಂಗಿಯನ್ನು ತೊಟ್ಟುಕೊಂಡಿದ್ದನು. ಆ ಸಾಟನಿಯ ನಿಲುವಂಗಿಯ ಮೇಲೆ ರೇಶಿಮೆಯ, ಹಾಗು ಜರತಾರಿಯ ಅತ್ಯುತ್ತಮ ಕಸೂತಿಗಳು ಶೋಭಿಸುತ್ತಿದ್ದವು. ಆತನು ತಲೆಯ ಮೇಲೆ ಕೆಲಮಟ್ಟಿಗೆ ಮುಂಡಾಸದಂತೆ, ಕೆಲಮಟ್ಟಿಗೆ ಟೊಪ್ಪಿಗೆಯಂತೆ ಇರುವ ಒಂದು ಶಿರೋಭೂಷಣವು ಒಪ್ಪುತ್ತಲಿತ್ತು, ಅದರ ಮೇಲೆ ಸುಂದರ ರತ್ನಗಳು ಕೆಚ್ಚಿದ, ಹಾಗು ಮಧ್ಯದಲ್ಲಿ ದೊಡ್ಡ ಮಾಣಿಕ ಕೆಚ್ಚಿದ ಒಂದು ಪಟ್ಟಿಯು ಇತ್ತು ಆತನ ಕೊರಳಲ್ಲಿ ದೊಡ್ಡ ಬೋರೆಹಣ್ಣಿನಷ್ಟು ದೊಡ್ಡವಾದ ಮುತ್ತುಗಳದೊಂದು ಸುಂದರ ಹಾರವು ಎದೆಯ ಮೇಲಿಂದ ಇಳಿದು ಹೊಟ್ಟೆಯ ಮೇಲೆ ಹಾದು ಹೊಕ್ಕಳದವರೆಗೆ ಇಳಿಬಿದ್ದಿತ್ತು! ಹೀಗೆ ಬಾದಶಹನ ಪೋಷಾಕು ಬಿಳಿಯದಾಗಿದ್ದರೂ ಬಹು ಬೆಲೆಯುಳ್ಳದ್ದಾಗಿತ್ತು,

ಈ ಬಗೆಯ ಬಾದಶಹನು ದರ್ಬಾರಕ್ಕೆ ಬಂದು ಸಿಂಹಾಸನದ ಮೇಲೆ ಕುಳಿತಬಳಿಕ ಒಮ್ಮೆ ಎಲ್ಲರ ಕಡೆಗೆ ನೋಡಿ ತಲೆಯಲ್ಲಾಡಿಸಿ ಗಾಂಭೀರ್ಯದಿಂದ ನಕ್ಕನು; ಆಮೇಲೆ ಆತನು ರಾಮಸಿಂಗನ ಕಡೆಗೆ ನೋಡಿದನು. ಅರ್ಥಾತ್ ರಾಮಸಿಂಗನು ಬಾದಶಹನ ಭಾವವನ್ನರಿತು ಮಹಾರಾಜರ ಕಡೆಗೆ ನೋಡಿ ಸನ್ನೆ ಮಾಡಿ, ಸಿಂಹಾಸನದ ಬಳಿಗೆ ಹೋಗಿ ಕುರ್ನಿಸಾತ ಎಂಬ ವಂದನ ಮಾಡಿಬರಬೇಕೆಂದು ಸೂಚಿಸಿದನು. ಆಗ ಮಹಾರಾಜರ ಹುಬ್ಬುಗಳು ಗಂಟಿಕ್ಕಿದವು. ಅವರ ಮನಸ್ಸಿಗೆ ವ್ಯಥೆಯಾಯಿತು. ಅಷ್ಟರಲ್ಲಿ ರಾಮಸಿಂಗನು—''ಹೀಗೆ ಮಾಡುವದು ಸರಿಯಲ್ಲ, ಇದರಿಂದ ಅನರ್ಥವಾದೀತು, ಹೋಗಿರಿ, ಕುರ್ನಿಸಾತ ಮಾಡಿರಿ,'' ಎಂದು ಸೂಚಿಸಲು, ಮಹಾರಾಜರು ಬಾದಶಹನ ಬಳಿಗೆ ಹೋದರು. ರಾಮಸಿಂಗನು ಅವರ ಬಳಿಯಲ್ಲಿ ಇದ್ದೇ ಇದ್ದನು. ಭಾಲದಾರ–ಚೋಪದಾರರ ಪಾರಧ್ವನಿಗಳಾದವು. ಮಹಾರಾಜರು ಬಹುಕಷ್ಟದಿಂದ ಕುರ್ನಿಸಾತಮಾಡಿದರು. ಬಾದಶಹನು ಅದನ್ನು ತಕ್ಕೊಂಡನೋ ತಕ್ಕೊಳ್ಳಲಿಲ್ಲವೋ ಎಂಬಂತೆ ಮಾಡಿದನು; ಮತ್ತು ''ಕಶಿಕಾಯ ತಬ್ಯತ್ (ಹ್ಯಾಗಿದೆ ಪ್ರಕೃತಿ )'' ಎಂದು ಪ್ರಶ್ನೆ ಮಾಡಿ, ''ಹೋಗಿರಿ, ಅಗೋ ಅಲ್ಲಿ ಬಲಗಡೆಯ ಮಗ್ಗಲು ಅತ್ತಕಡೆಗೆ ಹೋಗಿ ನಿಂತುಕೊಳ್ಳಿರಿ'' ಎಂದು ಕೈಯಿಂದ ಸನ್ನೆಮಾಡಿದನು. ಹೀಗೆ ಹೇಳುವಾಗ ಬಾದಶಹನ ಮುಖಮುದ್ರೆಯಲ್ಲಿ ಅತ್ಯಂತ ತಿರಸ್ಕಾರವು ತೋರುತ್ತಿತ್ತು ಅದನ್ನು ನೋಡಿ ಮಹಾರಾಜರಿಗೆ ಖೇದವೂ, ಸಂತಾಪವೂ ಆದವು. ಇವನ್ನು ಇಲ್ಲಿ ವ್ಯಕ್ತಮಾಡುವದರಿಂದ ಅಪಾಯದ ಹೊರತು ಎರಡನೆಯ ಪ್ರಯೋಜ

ನವೇನೂ ಆಗದೆಂದು ತಿಳಿದು ಮಹಾರಾಜರು ತಮ್ಮ ಮನಸ್ಸನ್ನು ಬಿಗಿಹಿಡಿದರು. ಕೂಡಲೆ ಅವರು ಹಿಂದಿರುಗಿದರು, ಆಗ ರಾಮಸಿಂಗನು, ಬಾದಶಹನು ತೋರಿಸಿದ ಸ್ಥಳಕ್ಕೆ ಅವರನ್ನು ಕರೆದುಕೊಂಡು ಹೋಗಿ, ಇಲ್ಲಿ ಕುಳಿತುಕೊಳ್ಳಬೇಕೆಂದು ಸೂಚಿಸಿದನು. ಆಗ ಮಹಾರಾಜರ ಸರ್ವಾಂಗವು ಸಂತಪ್ತವಾಯಿತು. ಬಾದಶಹನು ತಮ್ಮನ್ನು ಬಹುಮಾನದಿಂದ ನಡಿಸಿಕೊಳ್ಳ ಬಹುದೆಂದು ಅವರು ತಿಳಿದಿದ್ದರು; ಆದರೆ ಪ್ರತ್ಯಕ್ಷ ನೋಡಿದರೆ ಆತನು ತಮಗೆ ಮೂರನೇ ನಾಲ್ಕನೇ ಪ್ರತಿಯ ಸರದಾರರಲ್ಲಿ ನಿಂತುಕೊಳ್ಳುವಂತೆ ಸೂಚಿಸಿದನು. ಈ ಅಪಮಾನವು ಅವರಿಗೆ ಹ್ಯಾಗೆ ಸಹನವಾಗಬೇಕು? ಅವರು ರಾಮಸಿಂಗನ ಮಾತಿನಂತೆ ಅತ್ತ ಕಡೆಗೆ ಹೋಗುವಂತೆ ತೋರಿಸಿದರುಃ ಅಷ್ಟರಲ್ಲಿ ಅವರು ತಮ್ಮ ಜನರಿಗೆ ಸನ್ನೆ ಮಾಡಿ ಅವರೊಡನೆ ಬಾದಶಹನ ಕಡೆಗೆ ಬೆನ್ನು ಮಾಡಿ ಆತನ ಅಪ್ಪಣೆಗಿಪ್ಪಣೆಯನ್ನು ಕೇಳಿಕೊಳ್ಳದೆ, ದರ್ಬಾರ ದಿಂದ ಹೊರಗೆ ಹೋಗುವ ಹಾದಿಯನ್ನು ಹಿಡಿದರು. ರಾಮಸಿಂಗನು ಅವರ ಈ ಕೃತಿಯನ್ನು ನೋಡಿ ಚಕಿತನೂ ಭಯಭೀತನೂ ಆದನು.

ಹೀಗೆ ಮಹಾರಾಜರು ತಮ್ಮ ಪರಿವಾರದೊಡನೆ ದರಬಾರದಿಂದ ಹೊರಟುಹೋದರು. ಕೂಡಲೆ ಯಾವತ್ತು ಸರದಾರರು ತಮ್ಮ ತಮ್ಮೊಳಗೆ ಗಜಗುಟ್ಟಹತ್ತಿದರು. ''ಶಾಬಾಸ್'' ''ನಿಜವಾದ ಧೈರ್ಯಶಾಲಿಯು'' ''ವೀರನೆನಬೇಕು, ಇವನಿಗೇ'' ''ಮುಂದೆ ಏನಾದೀ ತೆಂಬುದರ ಲಕ್ಷವಿಲ್ಲ, ಆದರೆ ಸದ್ಯದ ಅಪಮಾನವು ಸಹನವಾಗಲಿಲ್ಲ'' ಇತ್ಯಾದಿ ಉದ್ಗಾರಗಳು ದರ್ಬಾರದಲ್ಲಿ ಬಹು ಮೆಲ್ಲಗೆ ಹೊರಡಹತ್ತಿದವು. ಅವು ಒಬ್ಬರ ಕಿವಿಗೆ ಬಿದ್ದರೆ ಒಬ್ಬರ ಕಿವಿಗೆ ಬೀಳುತ್ತಿದ್ದಿಲ್ಲ, ಇನ್ನು ಏನು ಮಾಡಬೇಕೆಂಬ ಚಿಂತೆಯು ರಾಮಸಿಂಗನಿಗೆ ಉತ್ಪನ್ನವಾಯಿತು. ಆತನು ಚಕಿತನಾದನು. ಕ್ಷಣಮಾತ್ರ ಆತನಿಗೆ ಯಾವ ವಿಚಾರವೂ ತೋಚಲೊಲ್ಲದು. ಹೀಗೆಯೇ ಮಹಾರಾಜರ ಬೆನ್ನು ಹತ್ತಿ ಹೋಗಿ ಅವರನ್ನು ಕರಕೊಂಡು ಬರಲೋ,ಅಥವಾ ಬಾದಶಹನ ಬಳಿಗೆ ಹೋಗಿ ಮಹಾರಾಜರು ಹೀಗೆ ಮಾಡಿದ್ದರ ಕಾರಣವನ್ನು ಕುರಿತು ಏನಾದರೂ ಹೇಳಲೋ ಎಂಬುದನ್ನು ಆತನು ನಿಶ್ಚಯಿಸದಾದನು. ಯಾವದೂ ಆತನಿಗೆ ತೋಚಲೊಲ್ಲದು. ಕಡೆಗೆ ಆತನು ಬಾದಶಹನ ಕಡೆಗೆ ತಿರುಗಿ ಬಹುವಿನಯದಿಂದ— ''ಗರೀಬಪರವರ, ಶಿವಾಜಿಮಹಾರಾಜರು ನನಗೆ ವಿನಂತಿಮಾಡಿಕೊಳ್ಳಲು ಹೇಳಿರುವರೇನಂದರೆ— ''ನಾನು ದಕ್ಷಿಣದೊಳಗಿನ ಒಬ್ಬ ಜಡ ಇನಾಮದಾರನು. ನನಗೆ ದರ್ಬಾರದ ರೀತಿ–ರಿವಾಜು ಗಳೊಂದೂ ಗೊತ್ತಿಲ್ಲ, ತಮ್ಮ ದರ್ಬಾರದ ವೈಭವವನ್ನೂ ತಮ್ಮ ವರ್ಚಸ್ಸನ್ನೂ, ದರ್ಪವನ್ನೂ ಒಟ್ಟಿನಿಂದ ಕಂಡುಬರುವ ವಿಲಕ್ಷಣ ಗಾಂಭೀರ್ಯವನ್ನೂ ನೋಡಿ ನನ್ನ ಮತಿಯು ಕುಂಠಿತ ವಾಯಿತು. ಮತ್ತು ಇಂಥ ದೊಡ್ಡ ವೈಭವಸಂಪನ್ನವಾದ ಸಮಾಜದಲ್ಲಿ ಬಂದದ್ದು ಇದೇ ನನಗೆ ಮೊದಲನೆಯ ಪ್ರಸಂಗವಾದದ್ದರಿಂದ, ನನ್ನ ಕಣ್ಣಲ್ಲಿ ಕತ್ತಲುಗೂಡಿಸಿದ ಹಾಗಾಯಿತು.ಇನ್ನು ಎಲ್ಲಿ ಕಡಕೊಂಡು ಬಿದ್ದು ಜನರ ನಗೆಗೆ ಈಡಾಗುವೆನೋ ಎಂದು ತಿಳಿದು ಅಪ್ಪಣೆಯಿಲ್ಲದೆ ನಾನು ಹೊರಟುಹೋಗಿರುತ್ತೇನೆ. ಇದಕ್ಕಾಗಿ ಬಡ ಇನಾಮದಾರನ ಮೇಲೆ ಸಿಟ್ಟಾಗಬಾರದು. ನನ್ನ ಪ್ರಕೃತಿಯು ಬಹಳ ಅಸ್ವಸ್ಥವಾಗಿದೆ. ಸಂಭಾಜಿರಾಜನಿಗೆ ಕೊಡಬೇಕಾದ ಪೋಷಾಕು

ಗಳನ್ನೂ, ಸನದನ್ನೂ ನನ್ನ ವಾಸಸ್ಥಳಕ್ಕೆ ಕಳಿಸಿಕೊಡೋಣವಾಗಬೇಕು. ಖಾವಿಂದ, ಶಿವಾಜಿ ರಾಜರು ನಿಜವಾಗಿ ಗುಡ್ಡಗಾಡುಗಳಲ್ಲಿ ವಾಸಿಸುವರು. ಅವರಿಗೆ ಇಂಥ ವೈಭವಸಂಪನ್ನ ದರ್ಬಾರದ ಪರಿಚಯವಾಗುವ ಸಂಭವವೂ ಕಡಿಮೆ; ಅಂದಬಳಿಕ ಇಂದಿನ ದರ್ಬಾರದಲ್ಲಿ ಅವರ ಸ್ಥಿತಿಯು ಹೀಗಾದದ್ದರಲ್ಲಿ ಆಶ್ಚರ್ಯವಿಲ್ಲ. ನನಗಂತು ಇವರು ಇನ್ನು ಇಲ್ಲಿ ನಿಶ್ಚಯವಾಗಿ ಕಡಕೊಂಡು ಬೀಳುವರೆಂಬಂತೆ ತೋರಿತು; ಆದ್ದರಿಂದ ಖಾವಿಂದರು, ಅವರು ಮನೆಗೆ ಹೋದದ್ದಕ್ಕಾಗಿ ಸಿಟ್ಟಾಗಬಾರದು. ಗೊತ್ತಿಲ್ಲದರಿಂದ ಈ ಕೆಲಸವಾಗಿದೆಯೆಂದು ಕಿವಿಯ ಮೇಲೆ ಹಾಕಿದ್ದೇನೆ. ಬಾದಶಹನು ಎಲ್ಲರಿಗಿಂತ ಶ್ರೇಷ್ಠನೂ ಜ್ಞಾನಿಯೂ ಇದ್ದೇ ಇರುತ್ತಾನೆ; ಮತ್ತು ಆತನು ಜ್ಞಾನಿಯೂ, ಶ್ರೇಷ್ಠನೂ ಇದ್ದಂತೆ ದಯಾಳುವೂ ಇರುತ್ತಾನೆ.''

ರಾಮಸಿಂಗನ ಈ ಮಾತುಗಳನ್ನು ಕೇಳಿ ಬಾದಶಹನ ಹುಬ್ಬುಗಳು ಗಂಟಿಕ್ಕಿದವು. ಕ್ಷಣಮಾತ್ರ ಆತನು ವಿಚಾರಮಗ್ನನಾದಂತೆ ತೋರಿತು. ಮುಂದೆ ಏನೋ ಅಪ್ಪಣೆ ಮಾಡಬೇಕೆಂದು ಆತನು ನಿಶ್ಚಯಿಸಿದ ಹಾಗೆ ಕಾಣಿಸಿತು. ಆತನು ಕೈಯೆತ್ತಿ ಏನೋ ಅಪ್ಪಣೆ ಕೊಡತಕ್ಕವನು, ಅಷ್ಟರಲ್ಲಿ ಆತನ ವಿಚಾರಗಳು ಬದಲಾಗಿ ಆತನು ಮಾತಾಡುವ ಲಕ್ಷಣವನ್ನು ಮುಚ್ಚಿಕೊಳ್ಳುವದಕ್ಕಾಗಿ ಮೆಲ್ಲಗೆ ಸಿಳ್ಳುಹಾಕಿದಂತೆ ಮಾಡಿ ಸುಮ್ಮನಾದನು. ಆತನು ರಾಮಸಿಂಗನನ್ನು ಕುರಿತು— ''ಒಳ್ಳೇದು,ಆತನು ದರ್ಬಾರಕ್ಕೆ ಬಂದದ್ದೇ ನಮ್ಮಮೇಲೆ ದೊಡ್ಡ ಉಪಕಾರವಾದಂತೆ ಆಗಿದೆ; ಮತ್ತು ನೀವು ಆತನನ್ನು ಕರೆತಂದು ಕುಳ್ಳಿರಿಸಿದ್ದಕ್ಕಾಗಿ ನಿಮ್ಮನ್ನು ಎಷ್ಟು ವರ್ಣಿಸಿದರೂ ತೀರದು. ಒದಗಿದ ಪ್ರಸಂಗದ ಸಂಬಂಧದಿಂದ ಈಗೇ ಏನೂ ಮಾತಾಡುವದಿಲ್ಲ; ಆದರೆ......'' ಎಂದು ನುಡಿದು ಬಾದಶಹನು ಆ ಮಾತನ್ನು ಅಷ್ಟಕ್ಕೆ ಮುಗಿಸಿದನು. ಮುಂದೆ ಆತನು ಏನು ಮಾತಾಡಬೇಕೆಂದು ಮಾಡಿದ್ದನೋ ಆತನಿಗೇ ಗೊತ್ತು. ಕೂಡಲೆ ಆತನು ದಿವಾಣನ ಕಡೆಗೆ ತಿರುಗಿ—''ದಕ್ಷಿಣದ ರಾಜನಿಗೆ ನಮ್ಮ ದರ್ಬಾರದ ಥಾಟನ್ನು ನೋಡಿ ಕಣ್ಣು ಕತ್ತಲಗೂಡಿದ ಹಾಗಾಗಿದ್ದರಿಂದ, ನಾವು ಆತನಿಗೆ ಮನೆಗೆ ಹೋಗಲಿಕ್ಕೆ ಅಪ್ಪಣೆ ಕೊಡುತ್ತೇವೆ; ಸ್ವತಃ ಆತನಿಗೆ ನಾವು ಏನಾದರೂ ಕೊಡಬೇಕೆಂದು ಮಾಡಿದ್ದೆವು; ಆದರೆ ಈಗ ಆತನ ಮಗನಿಗೇ ಐದುಸಾವಿರದ ಮನಸಬದಾರಿಯ ಕೊಡುವದನ್ನು ನಿಶ್ಚಯಿಸಿ, ನಿಮ್ಮೆಲ್ಲರ ಸಮಕ್ಷ ವಸ್ತ್ರಗಳನ್ನು ಸಂಭಾಜಿಯ ಕಡೆಗೆ ಕಳಿಸಿಕೊಡುತ್ತೇವೆ'' ಎಂದು ಎಲ್ಲ ದರ್ಬಾರದವರಿಗೆ ತಿಳಿಸಿರಿ'' ಎಂದು ಆಜ್ಞಾಪಿಸಿದನು. ಬಾದಶಹನ ಈ ಮಾತನ್ನು ದಿವಾಣನು ದರ್ಬಾರದವರಿಗೆ ತಿಳಿಸಲು, ಪ್ರತಿ ಒಬ್ಬರು ಬಾದಶಹನ ಈ ಸೌಮ್ಯತನಕ್ಕಾಗಿ ಆಶ್ಚರ್ಯ ಪಟ್ಟರು.

# ಸಮಯ ನಿರೀಕ್ಷಣ

ಇತ್ತ ಮಹಾರಾಜರು ಅತ್ಯಂತ ಸಂತಪ್ತರಾಗಿ, ಇನ್ನು ಏನು ಮಾಡಬೇಕೆಂದು ವಿಚಾರ ಮಾಡತೊಡಗಿದರು. ಯಾವದೊಂದು ಮಾತಿನ ನಿಶ್ಚಯವನ್ನು ಮಾಡಲಿಕ್ಕೆ ಅವರಿಗೆ ಬಹಳ ಹೊತ್ತು ಬೇಕಾಗುತ್ತಿದ್ದಿಲ್ಲ, ಅದರಂತೆ ಅವರು ಮುಂದೆ ಏನು ಮಾಡಬೇಕೆಂಬದನ್ನು ನಿಶ್ಚಯಿಸಿ, ತಮ್ಮ ಪರಿವಾರದ ಜನರನ್ನೆಲ್ಲ ಕರೆದು, ಅವರಿಗೆ ನಡೆದ ಸಂಗತಿಯನ್ನೆಲ್ಲ ಹೇಳಿದರು. ಇನ್ನು ಮೇಲೆ ಕಠಿಣ ಪ್ರಸಂಗವು ಒದಗುವದರಿಂದ ನೀವು ಇಲ್ಲಿ ಇರಲಾಗದೆಂತಲೂ, ನಾವು ಈಗ ಹೇಳುವ ಜನರು ನಿಮ್ಮ ನಿಮ್ಮ ಪರಿವಾರದೊಡನೆ ಎರಡು ಗಳಿಗೆಗಳೊಳಗೆ ಇಲ್ಲಿಂದ ಹೊರಟುಹೋಗಬೇಕೆಂತಲೂ ಹೇಳಿ, ಬಡಬಡ ಜನರ ಹೆಸರುಗಳನ್ನು ಉಚ್ಚರಿಸಿದರು. ಹೀಗೆ ಮಹಾರಾಜರು ತಮ್ಮನ್ನು ಕಳಿಸಿಕೊಡುವದು ಯೋಗ್ಯವಲ್ಲೆಂದು ಅವರು ತಿಳಿದರು. ಕಠಿಣ ಪ್ರಸಂಗದಲ್ಲಿ ಮಹಾರಾಜರನ್ನು ಅಲ್ಪ ಪರಿವಾರದೊಡನೆ ಬಿಟ್ಟುಹೋಗಲಿಕ್ಕೆ ಅವರ ಮನಸ್ಸು ಒಪ್ಪದಾಯಿತು; ಆದರೆ ಮಹಾರಾಜರ ಅಪ್ಪಣೆಯ ವಿರುದ್ಧ ಮಾತಾಡುವ ಧೈರ್ಯವು ಯಾರಿಗಾಗಬೇಕು? ಮಹಾರಾಜರೇ ಈ ಸಂಗತಿಯನ್ನರಿತು ಅವರನ್ನು ಕುರಿತು— "ನಮ್ಮೊಬ್ಬರನ್ನೇ, ಅಥವಾ ನಾಲ್ಕೆಂಟು ಜನರೊಡನೆ ನಮ್ಮನ್ನು ಬಿಟ್ಟು ಸ್ವದೇಶಕ್ಕೆ ಹೋಗಲಿಕ್ಕೆ ನಿಮ್ಮ ಜೀವದ ಸುತ್ತು ಬಂದಿರುತ್ತದೆಂಬದನ್ನು ನಾವು ಬಲ್ಲೆವು. ಆದರೆ ನಮ್ಮ ನಿಮ್ಮ ಹಿತಕ್ಕಾಗಿ ನೀವು ಈಗ ಹೀಗೆ ಮಾಡಲೇಬೇಕು. ನೀವು ಇಲ್ಲಿ ಇರುವದರಿಂದಲೇ ನಾವುಹೆಚ್ಚು ಸಂಕಟಕ್ಕೆ ಗುರಿಯಾಗುವ ಸಂಭವವದೆ; ಆದ್ದರಿಂದ ನಾವು ಹೇಳಿದಂತೆ ಈಗ ನೀವು ಹೊರಡಿರಿ. ನಾಲ್ನಾಲ್ಕು ಐದೈದು ಜನರ ಗುಂಪಿನಂತೆ ಗುಂಪು ಮಾಡಿಕೊಂಡು ನೀವು ದಾರಿ ಸಿಕ್ಕತ್ತ ಹೋಗಿಬಿಡಿರಿ; ಅಂದರೆ ಮೊಗಲರಿಗೆ ನಿಮ್ಮನ್ನು ಬೆನ್ನಟ್ಟಲಿಕ್ಕೆ ಅನುಕೂಲವಾಗಲಿಕ್ಕಿಲ್ಲ. ನರ್ಮದೆಯನ್ನು ದಾಟಿದರೆ, ಅಥವಾ ಗೋದಾವರಿಯನ್ನು ದಾಟಿಹೋದರೆ ನೀವು ಸುರಕ್ಷಿತವಾಗಿ ಮುಟ್ಟಿದಿರೆಂದು ತಿಳಿಯಿರಿ. ಅಲ್ಲಿಯವರೆಗೆ ಒಂದೇಸವನೆ ಮಾರ್ಗಕ್ರಮಣ ಮಾಡಿರಿ. ನಾವೂ ನಮ್ಮ ಬಳಿಯಲ್ಲಿರುವ ನಾಲ್ಕೆಂಟು ಜನರೂ ಅಂಬಾಬಾಯಿಯ ಕೃಪೆಯಿಂದ ಪಾರಾಗಿ ನಿಶ್ಚಯವಾಗಿ ಬರುವೆವು.ಇನ್ನು ನೀವು ಕ್ಷಣವಾದರೂ ವಿಲಂಬ ಮಾಡದೆ ಹೊರಟುಹೋಗಿರಿ'' ಎಂದು ಹೇಳಿದರು. ಇಷ್ಟು ಹೇಳಿದ ಬಳಿಕ ತಿರುಗಿ ಮಾತಾಡುವ ಧೈರ್ಯವು ಯಾರಿಗಾಗಬೇಕು? ಅವರು ಮಹಾರಾಜರ ಅಪ್ಪಣೆಯಂತೆ ಬಡಬಡ ಹೊರಟು ಹೋದರು. ದರ್ಬಾರದ ಕೆಲಸವು ಮುಗಿದು ಜನರು ತಮ್ಮ ತಮ್ಮ ಮನೆಗೆ ಹೋಗುವದರೊಳ ಗಾಗಿಯೇ ಮಹಾರಾಜರ ಪರಿವಾರವು ಆಗ್ರಾ ಪಟ್ಟಣದಿಂದ ಹೊರಟು ಹೋಗಿಬಿಟ್ಟಿತು.

ಸಾಯಂಕಾಲದಲ್ಲಿ ರಾಮಸಿಂಗನು ನಿತ್ಯದಂತೆ ಮಹಾರಾಜರ ಬಳಿಗೆ ಬರಲು, ಅವರು ರಾಮಸಿಂಗನನ್ನು ಕುರಿತು—''ನಾವು ನಮ್ಮ ಜನರನ್ನೆಲ್ಲ ಕಳಿಸಿಬಿಟ್ಟೆವು. ನಮಗೂ ಇಲ್ಲಿ ಇರಲಿಕ್ಕೆ ಬೇಸರಬಂದಿದೆ. ನಮಗೆ ಹೋಗಲಿಕ್ಕೆ ಬಾದಶಹನ ಅಪ್ಪಣೆಯನ್ನಷ್ಟು ಹ್ಯಾಗಾದರೂ ಮಾಡಿ ತಂದುಕೊಡಿರಿ. ನಾವೂ ಹೋಗಿಬಿಡುವೆವು'' ಎಂದು ಹೇಳಿದರು.

ರಾಮಸಿಂಗನು ಬಹಳ ಹೊತ್ತಿನವರೆಗೆ ಏನೂ ಮಾತಾಡಲಿಲ್ಲ. ಆಮೇಲೆ ಆತನು ಮಹಾರಾಜರಿಗೆ—''ನೀವು ಆರಂಭಿಸಿರುವ ಕ್ರಮವು ಒಳ್ಳೆಯದಲ್ಲ. ಬಾದಶಹನನ್ನು ಸುಮ್ಮನೆ ಸಿಟ್ಟಿಗೆಬ್ಬಿಸಿದಿರಿ. ಇದರಿಂದ ಹಿತವಾಗಬಹುದೆ? ಆದರೂ ಇನ್ನು ಕೆಲವು ದಿವಸ ತಾವು ಇಲ್ಲಿ ಇರಲೇಬೇಕು. ದ್ವೇಷಬುದ್ಧಿಯಿಂದ ನಡೆಯುವದರಿಂದ ಹಿತವಾಗದು. ಇಂದು ಬಾದಶಹನ ಮನಸ್ಸು ಬಹಳ ಅಸಂತುಷ್ಟವಾಯಿತು'' ಎಂದು ನುಡಿದನು. ಅದಕ್ಕೆ ಮಹಾರಾಜರು— ''ನಮ್ಮ ಮನಸ್ಸಾದರೂ ಎಲ್ಲಿ ಸಂತುಷ್ಟವಾಗಿರುತ್ತದೆ? ನಮ್ಮ ಮನಸ್ಸು ಸಂತುಷ್ಟವಾಗುವಂತೆ ಆತನು. ಆತನ ಮನಸ್ಸು ಸಂತುಷ್ಟವಾಗುವಂತೆ ನಾವು ನಡೆಯಲಿಕ್ಕೆ ನಾವಿಬ್ಬರೂ ಹುಟ್ಟಿರುವದೇ ಇಲ್ಲ. ನಾವು ಇಲ್ಲಿಂದ ಹೋದರೆ ಸ್ವರಾಜ್ಯದ ಕಾರ್ಯವನ್ನು ಪುನಃ ಮುಂದಕ್ಕೆ ಸಾಗಿಸುವೆವು. ಹೋಗದಿದ್ದರೆ ಈಗ ಹೋಗಿರುವ ಜನರು ಸಾಗಿಸುವರು. ಹ್ಯಾಗಿದ್ದರೂ ನಮ್ಮ ಕಾರ್ಯವು ತಡೆದು ನಿಲ್ಲುವದಿಲ್ಲ. ನೀವು ಅಸಮಾಧಾನಪಡಬೇಡಿರಿ. ದರ್ಬಾರದಲ್ಲಿ ಬಾದಶಹನು ನಮ್ಮನ್ನು ಒಬ್ಬ ಬಾರಾಗೀರನಂತೆ ಭಾವಿಸಿ, ದೂರನಿಂತುಕೊಳ್ಳುವಂತೆ ಸಂಜ್ಞೆ ಮಾಡಿದನು; ಅದಕ್ಕೇನೆನ್ನಬೇಕು? ಆಗಲಿ, ಉಪಾಯವಿಲ್ಲ. ನಾವು ಇನ್ನು ನಾಲ್ಕೆಂಟು ದಿನ ಇಲ್ಲಿಯ ದೊಡ್ಡ ಜನರ ಭೆಟ್ಟಿಯ ತೆಗೆದುಕೊಳ್ಳುವೆವು. ಅಷ್ಟರಲ್ಲಿ ನೀವು ಬಾದಶಹನ ಅಪ್ಪಣೆ ಯನ್ನು ದೊರಕಿಸಿಕೊಡಿರಿ. ಕೂಡಲೆ ನಾವು ಆಗ್ರಾಪಟ್ಟಣವನ್ನು ಬಿಟ್ಟು ಹೊರಟು ಹೋಗುವೆವು. ನೀವು ನಮಗೆ ಸಹಾಯಮಾಡಬೇಕೆಂದು ಇಚ್ಛಿಸುತ್ತಿದ್ದರೆ, ನಾವು ದಿಲ್ಲಿಗೆ ಬಂದವರ ನೆನಪಿಗಾಗಿ ಗುಡಿ, ಮಸೀದೆ, ಧರ್ಮಶಾಲೆ ಮೊದಲಾದವುಗಳಲ್ಲಿರುವ ಬಾವಾ, ಬೈರಾಗಿ, ಫಕೀರರು, ಕಬೀರ ಪಂಥದವರು ಮೊದಲಾದ ಭಿಕ್ಷುಕರಿಗೆ ಮಿಠಾಯಿ ಹಂಚುವ ವ್ಯವಸ್ಥೆ ಮಾಡಿಸಿರಿ. ನಾವು ಮಿಠಾಯಿ ಮಾಡುವವರ ಕಡೆಯಿಂದ ಮಿಠಾಯಿ ಮಾಡಿಸುವೆವು. ಅವರು ಬಂದು ನಮ್ಮ ಬೇರೆ ಬೇರೆ ಜನರ ಕೈಯಲ್ಲಿ ಮಿಠಾಯಿಯನ್ನು ಕೊಟ್ಟು ಹೋಗುವರು. ನಮ್ಮ ಜನರು ಬೇರೆ ಬೇರೆ ಕಡೆಗೆ ಅವನ್ನು ಹಂಚುವರು. ಬಾದಶಹನು ನಮಗೆ ದಕ್ಷಿಣಕ್ಕೆ ಹೋಗಲಪ್ಪಣೆ ಕೊಡುವವರೆಗೆ ಈ ಕ್ರಮವನ್ನು ನಡಿಸುವೆವು. ಇನ್ನು ಮೇಲೆ ಬಡಬಗ್ಗರ ಹರಿಕೆಯನ್ನಾದರೂ ನಾವು ಪಡೆಯೋಣ!'' ಅನ್ನಲು ಮಹಾರಾಜರ ಈ ವಿಲಕ್ಷಣ ಕೃತಿಯನ್ನು ನೋಡಿ ರಾಮಸಿಂಗನು ಬೆರಗಾದನು.

ಮಹಾರಾಜರು ಹೀಗೆ ತಮ್ಮ ಜನರನ್ನೆಲ್ಲ ಕಳಿಸಿ, ಭ್ರಮಿಷ್ಟರಂತೆ ಆಚರಿಸುವ ಸುದ್ದಿಯು ಬಾದಶಹನ ಕಿವಿಗೆ ಮುಟ್ಟಿ, ಆತನು ಸಮಾಧಾನಪಟ್ಟನು; ಆದರೂ ಇದರಲ್ಲಿ ಮಹಾರಾಜರ ಕುಯುಕ್ತಿಯೇನಾದರೂ ಇರಬಹುದೆಂಬ ವಿಚಾರವು ಆ ಧೂರ್ತನ ಮನಸ್ಸಿಗೆ ಹೊಳೆಯದೆ ಇರಲಿಲ್ಲ. ರಾಮಸಿಂಗನು ಆಗಾಗ್ಗೆ ಬಾದಶಹನನ್ನು ಕಂಡು ಮಹಾರಾಜರ ಸ್ಥಿತಿಯನ್ನು ತಿಳಿಸುತ್ತಲಿದ್ದನು. ಬಾದಶಹನು ಒಂದು ದಿನ ರಾಮಸಿಂಗನನ್ನು ಕುರಿತು—''ರಾಮಸಿಂಗ, ಶಿವನು ಏನು ಅನ್ನುವನು? ಆತನ ಪ್ರಕೃತಿಯು ಅಸ್ವಸ್ಥವಾಗಿರುವದೆಂದು ಕೇಳುತ್ತೇವೆ. ಈಗ ಹೇಗಿದೆ? ಸಿಟ್ಟಿನ ಭರದಲ್ಲಿ ಆತನು ತನ್ನ ಜನರನ್ನೆಲ್ಲ ಕಳಿಸಿಕೊಟ್ಟು, ಈಗ ಪಶ್ಚಾತ್ತಾಪ ಪಡುತ್ತಿರಬಹುದಲ್ಲವೆ? ನಮ್ಮ ನೌಕರನಾಗಿ ಇಲ್ಲಿಯೇ ಇದ್ದು ನಮಗೆ ಸಹಾಯಮಾಡಿ ತನ್ನ

ಉತ್ಕರ್ಷ ಮಾಡಿಕೊಳ್ಳಲಿಕ್ಕೆ ಈಗ ಆತನು ಒಪ್ಪಿಕೊಳ್ಳಬಹುದಲ್ಲವೆ?'' ಎಂದು ಕೇಳಲು, ರಾಮಸಿಂಗನು—''ಖಾವಿಂದ, ಮಹಾರಾಜರ ಸ್ಥಿತಿಯು ನನಗಂತು ವಿಲಕ್ಷಣವಾಗಿ ತೋರುತ್ತದೆ; ದರ್ಬಾರದಿಂದ ಹೋದಾಗಿನಿಂದ ಅವರು ಒಂದು ಬಗೆಯ ಭ್ರಮಿಷ್ಠರಾದಂತೆ ತೋರುತ್ತದೆ; ಮೇಲಿಂದಮೇಲೆ ಅವರ ಪ್ರಕೃತಿಯು ಅಸ್ವಸ್ಥವಾಗುತ್ತಿರುವದು. ತಮ್ಮ ಜನರನ್ನು ಕಳಿಸಿಕೊಟ್ಟ ಬಗ್ಗೆ ಅವರಿಗೆ ಪಶ್ಚಾತ್ತಾಪವಾಗುವದು ಒತ್ತಟ್ಟಿಗುಳಿದು, ತಮ್ಮ ಬಳಿಯಲ್ಲಿ ಈಗ ಇರುತ್ತಿರುವ ಹೆಚ್ಚಿನ ಜನರನ್ನು ಸ್ವದೇಶಕ್ಕೆ ಕಳಿಸುವದಕ್ಕಾಗಿ ತಮ್ಮ ಒಪ್ಪಿಗೆಯನ್ನು ಕೇಳಿಕೊಳ್ಳಲು ನನ್ನ ಮುಂದೆ ಅವರು ಹೇಳಿದ್ದಾರೆ. ಇಲ್ಲಿಯ ಹವೆಯು ತಮ್ಮವರಿಗೆ ತಡೆಯುವದಿಲ್ಲವಂತೆ. ತಮ್ಮ ಪ್ರಕೃತಿಯೂ ಅಶಕ್ತವಾಗಿರುವದರಿಂದ ತಮ್ಮನ್ನೂ ದಕ್ಷಿಣಕ್ಕೆ ಹೋಗಗೊಡಬೇಕೆಂದು ಅವರು ಖಾವಂದರನ್ನು ಪ್ರಾರ್ಥಿಸುತ್ತಿರುವರು. ಅವರ ಉತ್ಸಾಹವು ಅಳಿದುಹೋಗಿರುವದು; ಅವರು ಕೇವಲ ಉದಾಸೀನರಾಗಿ ಕಾಲಹರಣ ಮಾಡುತ್ತಿರುವರು. ಬಾವಾ ಬೈರಾಗಿಗಳಿಗೂ, ಭಿಕ್ಷುಕರಿಗೂ, ಫಕೀರರಿಗೂ ಮೇವಾ–ಮಿಠಾಯಿಯನ್ನೂ ಬಗೆಬಗೆಯ ಖಾದ್ಯಗಳನ್ನೂ ಹಂಚುವದಕ್ಕಾಗಿ ಖಾವಿಂದರವರ ಒಪ್ಪಿಗೆ ಪಡೆಯಲು ನನಗೆ ತಿಳಿಸಿದ್ದನ್ನು ಈ ಮೊದಲೆ ಸನ್ನಿಧಿಗೆ ಅರಿಕೆ ಮಾಡಿ ಕೊಂಡಿರುವೆನಷ್ಟೆ? ಮೇಲೆ ಹೇಳಿದಂತೆ ಈಗ ತಮ್ಮ ಬಳಿಯಲ್ಲಿದ್ದ ಹೆಚ್ಚಿನ ಜನರನ್ನು ಸ್ವದೇಶಕ್ಕೆ ಕಳಿಸಿಕೊಡಲಿಕ್ಕೆ ಖಾವಂದರವರ ಪರವಾನಿಗಿಯನ್ನು ಈಗ ಕೇಳಿಕೊಳ್ಳುತ್ತಿರುವರೆಂದ ಬಳಿಕ, ತಮಗೆ ಅಂಕಿತರಾಗಿ ಅವರು ನಡೆದುಕೊಳ್ಳುವ ವಿಷಯದಲ್ಲಿ ನನಗಂತು ಸಂಶಯವು ತೋರುವದಿಲ್ಲ, ಅವರಿಗೆ ಒಂದು ಬಗೆಯ ವೈರಾಗ್ಯವು ಉತ್ಪನ್ನವಾದಂತಾಗಿರುತ್ತದೆ. ಈ ಪ್ರಸಂಗದಲ್ಲಿ ಖಾವಿಂದರು ಅವರ ಮಾತುಗಳನ್ನು ನಡಿಸಿ ಅವರನ್ನು ಪ್ರೋತ್ಸಾಹಿಸಿ ಅವರಿಗೆ ಹೊಸ ಆಶೆ ತೋರಿಸಿದರೆ, ಖಾವಿಂದರ ಶತ್ರುವೊಬ್ಬನು ತನ್ನ ಶತ್ರುಭಾವವನ್ನು ಬಿಟ್ಟು ಖಾವಿಂದರ ಚಾಕರನಾಗಬಹುದಾಗಿ ತೋರುತ್ತದೆ. ಅವರ ಬೇಡಿಕೆಯಂತೆ ಖಾವಿಂದರು ಅವರ ಜನರನ್ನು ದಕ್ಷಿಣಕ್ಕೆ ಹೋಗಗೊಟ್ಟರೆ, ಸ್ವತಃ ಅವರ ಮಗ ಸಂಭಾಜಿ ಬಾಲಕನು, ಹಿರೋಜಿಫರ್ಜಂದ, ಒಬ್ಬಿಬ್ಬರು ಸೇವಕರು ಇಷ್ಟೇ ಜನರು ಉಳಿಯುವರು. ಖಾವಿಂದರ ನೌಕರರಿಂದಲೇ ತಮ್ಮ ಕೆಲಸ ಸಾಗಿಸಿಕೊಳ್ಳುವೆವೆಂದು ಮಹಾರಾಜರು ಅನ್ನುತ್ತಿರುವರು. ಒಟ್ಟಿಗೆ ಕೃತಕರ್ಮದ ಪಶ್ಚಾತ್ತಾಪವಾಗಿರುವಂತೆ ತೋರುತ್ತದೆ. ಖಾವಂದರವರ ಚಾಕರಿಯನ್ನು ಮಾಡಲಿಕ್ಕೆ ಸಹಜವಾಗಿ ಅವರು ಒಪ್ಪಿಕೊಳ್ಳಬಹುದು. ಇದನ್ನೆಲ್ಲ ಪರಾಮರ್ಶಿಸಿ ಖಾವಂದರು ದಾಸನನ್ನು ಆಜ್ಞಾಪಿಸುವ ಕೃಪೆ ಮಾಡಬೇಕು.''

ರಾಮಸಿಂಗನ ಈ ಮಾತುಗಳನ್ನು ಕೇಳಿ ಬಾದಶಹನು ವಿಚಾರಮಗ್ನನಾದನು; ಆದರೆ ಈ ವಿಚಾರಮಗ್ನ ಸ್ಥಿತಿಯನ್ನು ಆತನು ಹೊರಗೆ ತೋರಗೊಡದೆ ತಾನು ಪತ್ರಲೇಖದಲ್ಲಿ ತೊಡಗಿರುವಂತೆ ನಟಿಸಿದನು. ಮಹಾರಾಜರ ಹಲವು ಕುಟಿಲ ತಂತ್ರಗಳನ್ನು ಆತನು ಕೇಳಿದ್ದ ನಾದ್ದರಿಂದ, ರಾಮಸಿಂಗನ ಮಾತಿನಲ್ಲಿ ಸಂಪೂರ್ಣ ವಿಶ್ವಾಸವಿಡುವದು ಆತನಿಗೆ ಪ್ರಶಸ್ತವಾಗಿ ತೋರಲಿಲ್ಲ; ಶಿವಾಜಿಯು ತನ್ನನ್ನು ಮೋಸಗೊಳಿಸುತ್ತಿರುವ ಪ್ರಸಂಗದಲ್ಲಿ ತಾನಾದರೂ ಆತನಿಗೆ ಬಹಿರಂಗದಲ್ಲಿ ಅತ್ಯಂತ ವಿಶ್ವಾಸವನ್ನು ತೋರಿಸಿ, ಆತನ ಮಾತು ನಡಿಸಿದಂತೆ ಮಾಡಿ, ತನ್ನ

ಮನಸ್ಸಿನನೊಳಗಿದ್ದದ್ದನ್ನು ಸಾಧಿಸಿಕೊಳ್ಳಬೇಕೆಂದು ಆ ತಂತ್ರಗಾರನಾದ ಬಾದಶಹನು ನಿರ್ಧರಿಸಿದನು. ಆತನು ರಾಮಸಿಂಗನನ್ನು ಕುರಿತು— "ಶಿವಾಜಿಯನ್ನು ನಮ್ಮ ದರ್ಬಾರ ದಲ್ಲಿಯೇ ಇಟ್ಟುಕೊಂಡು ಆತನಿಗೆ ದೊಡ್ಡ ದೊಡ್ಡ ಕೆಲಸಗಳನ್ನು ಕೊಡಬೇಕೆಂದು ನಮ್ಮ ಮನಸ್ಸಿನಲ್ಲಿರುತ್ತದೆ. ದಕ್ಷಿಣದಲ್ಲಿಯ ಆತನ ಜಹಗೀರಿಯ ವ್ಯವಸ್ಥೆಯನ್ನಂತು ನಾವು ಆತನ ಇಚ್ಛೆಯಂತೆ ಈಗ ಮಿರ್ಝಾರಾಜನ ಮುಖಾಂತರ ಮಾಡಿಯೇ ಇರುವೆವು. ಆ ಜಹಗೀರಿ ಯನ್ನು ಆತನು ತನ್ನ ಮಗ ಸಂಭಾಜಿಯ ಹೆಸರಿನಿಂದ ನಡಿಸಲಿ. ನಾವು ಇಲ್ಲಿ ಆತನಿಗೆ ಹೊಸದಾಗಿ ಕೋಟ್ಯಂತರ ರೂಪಾಯಿಗಳ ಹೊಸ ಜಹಗೀರನ್ನು ಹಾಕಿಕೊಡುವೆವು. ಆತನು ಲಕ್ಷ ಐವತ್ತು ಸಾವಿರ ದಂಡನ್ನು ಕಟ್ಟಿಕೊಂಡು ದೊಡ್ಡ ದೊಡ್ಡ ಕಾರ್ಯಗಳನ್ನು ಮಾಡಲಿ. ಆತನಂಥ ಶೂರನೂ, ಚತುರನೂ, ಕರ್ತೃತ್ವಶಾಲಿಯೂ ಆದ ಪುರುಷನ ಗುಣಗಳ ಗೌರವವು ನಮ್ಮ ದರ್ಬಾರದಲ್ಲಿ ಉತ್ತಮ ರೀತಿಯಿಂದ ಆಗುವದು ಯೋಗ್ಯವು . ಈ ವಿಚಾರಗಳನ್ನು ನೀವು ಆತನಿಗೆ ತಿಳಿಸಿರಿ. ಆತನು ಯಾವ ವಿಷಯದಲ್ಲಿಯೂ ಚಿಂತೆಮಾಡುವ ಕಾರಣವಿಲ್ಲ. ನಾವು ಆತನ ಹಿತವನ್ನೇ ಚಿಂತಿಸುತ್ತಿರುವೆವು" ಎಂದು ಹೇಳಿಕಳಿಸಿದನು. ಬಾದಶಹನ ಈ ವಿಚಾರಗಳನ್ನು ಕೇಳಿ ಮಹಾರಾಜರು ಅಸಮಾಧಾನಪಟ್ಟರು. ಕಪಟಿಯಾದ ಬಾದಶಹನು ಇತ್ತ ಉತ್ತರಹಿಂದು ಸ್ಥಾನದಲ್ಲಿ ನನ್ನನ್ನು ತೊಡಗಿಸಿಕೊಂಡು, ಅತ್ತ ದಕ್ಷಿಣದೊಳಗಿನ ತನ್ನ ಕಂಟಕವನ್ನು ಸಂಪೂರ್ಣ ವಾಗಿ ದೂರಮಾಡಿಕೊಳ್ಳಬೇಕೆಂದು ಮಾಡಿದ್ದಾನೆಂದು ಅವರು ತಿಳಿದುಕೊಂಡಿದ್ದರು. ಅವರು ತಮ್ಮ ವಕೀಲನಾದ ರಘುನಾಥಪಂತನನ್ನು ಬಾದಶಹನ ಬಳಿಗೆ ಕಳಿಸಿ ಬೇಡಿಕೊಂಡದ್ದೇ ನೆಂದರೆ— "ತಾವು ನನ್ನ ಉತ್ಕರ್ಷ ಮಾಡುವ ಇಚ್ಛೆಯಿಂದ ನನ್ನನ್ನು ಇಲ್ಲಿಗೆ ಕರಿಸಿಕೊಂಡಿರು ವಿರೆಂಬದೇನೋ ನಿಜ; ಆದರೆ ನನಗೂ, ನನ್ನ ಜನರಿಗೂ ಇಲ್ಲಿಯ ಹವೆಯು ತಡೆಯುವದಿಲ್ಲ. ಜಯಸಿಂಗರವರ ಮುಖಾಂತರವಾಗಿ ಮಾಡಿಕೊಂಡ ಕರಾರುಗಳನ್ನು ನಾನು ತಪ್ಪುವುದಿಲ್ಲ. ವಿಜಾಪುರದ ಆದಿಲಶಾಹಿ, ಗೊವಳಕೊಂಡದ ಕುತುಬಶಾಹಿಗಳನ್ನು ಮುಣುಗಿಸುವ ತಮ್ಮ ಪ್ರಯತ್ನಕ್ಕೆ ನಾನು ಮನಮುಟ್ಟಿ ಸಹಾಯಮಾಡುವೆನು. ನಿಮ್ಮ ಸೈನ್ಯಕ್ಕೆ ದಕ್ಷಿಣದಲ್ಲಿ ಬೇಕಾಗುವ ಸಹಾಯವನ್ನೆಲ್ಲ ನಾನು ಒದಗಿಸಿಕೊಡುವೆನು. ಇಲ್ಲಿ ಅಪರಿಚಿತ ದೇಶದಲ್ಲಿ ನನ್ನಿಂದಾಗ ಬಹುದಾದ ತಮ್ಮ ಚಾಕರಿಗಿಂತ, ದಕ್ಷಿಣದಲ್ಲಿ ನಾನು ಮಾಡುವ ತಮ್ಮ ಚಾಕರಿಯು ಬಹು ಮಹತ್ವವಾದದ್ದು; ಆದ್ದರಿಂದ ನನಗೆ ದಕ್ಷಿಣಕ್ಕೆ ಹೋಗಲಿಕ್ಕೆ ಅಪ್ಪಣೆಕೊಡಬೇಕು."

ಈ ಅರ್ಜಿಗೆ ಬಾದಶಹನು ನಿಶ್ಚಯವಾದ ಉತ್ತರವನ್ನೇನೂ ಕೊಡಲಿಲ್ಲ. ಶಿವಾಜಿಯು ಅನಾಯಾಸವಾಗಿ ತನ್ನ ಕೈಯಲ್ಲಿ ಸಿಕ್ಕಿರುವದರಿಂದ, ಅವನನ್ನು ನಾಶಗೊಳಿಸಿ ತನ್ನ ಒಬ್ಬ ಪ್ರಬಲ ಶತ್ರುವಿನ ಕಾಟವನ್ನು ತಪ್ಪಿಸಿಕೊಳ್ಳಬೇಕೆಂದು ಆತನು ಮಾಡಿದ್ದನು; ಆದರೆ ಜಯಸಿಂಗರಾಜನ ಮಧ್ಯಸ್ಥಿತಿಯಿಂದ ಆದ ಕರಾರುಗಳನ್ನು ಮುರಿಯಲಿಕ್ಕೆ ಆತನಿಗೆ ಧೈರ್ಯವಾಗಲಿಲ್ಲ; ಆದರೂ ಶಿವಾಜಿಯನ್ನು ಸೆರೆಯಲ್ಲಿರಿಸಬೇಕಲ್ಲದೆ ದಕ್ಷಿಣಕ್ಕೆ ಬಿಡಬಾರದೆಂದು ಆತನು ಯೋಚಿಸಿ, ಶಹರ ಕೊತವಾಲನಾದ ಪೋಲಾದಖಾನನನ್ನು ಕರೆಯಿಸಿ ಆತನನ್ನು ಕುರಿತು—"ಶಿವಾಜಿಯು ಇರುವ ಸ್ಥಳದಲ್ಲಿ ಐದು ಸಾವಿರ ಜನರೊಡನೆ ನೀನು ಕಾವಲಾಗಿರಬೇಕು. ಶಿವಾಜಿಯು

ಎಲ್ಲಿಗಾದರೂ ಹೋಗುವದಾದರೆ, ಆತನ ಬೆನ್ನ ಮೇಲೆ ಅಜ್ಞಾವಲಿಡಬೇಕು.'' ಎಂದು ಅಪ್ಪಣೆಮಾಡಿದನು. ಅದರಂತೆ ಕೊತವಾಲನು ಸೈನ್ಯದೊಡನೆ ಮಹಾರಾಜರ ವಾಡೆಯ ಸುತ್ತಲು ತಳ ಊರಿದನು. ಇದನ್ನು ನೋಡಿ ಮಹಾರಾಜರು ಅಸಮಾಧಾನಪಟ್ಟರು. ಬಾದಶಹನ ಮನಸ್ಸು ತಮ್ಮ ವಿಷಯವಾಗಿ ನಿಶ್ಚಯವಾಗಿ ಕಲುಷಿತವಾಗಿರುತ್ತದೆಂತಲೂ, ಇನ್ನು ಇಲ್ಲಿ ಇರುವದರಿಂದ ತಮ್ಮ ಹಿತವಾಗದೆಂತಲೂ ಅವರು ನಿಶ್ಚಯಿಸಿದರು. ಅವರ ಮನಸ್ಸು ವಿಚಾರಮಗ್ನವಾಯಿತು. ಬಾದಶಹನ ಈ ಪ್ರತಿಬಂಧದಿಂದ ಪಾರಾಗುವ ಒಂದೊಂದೇ ಹಂಚಿಕೆಗಳು ಅವರ ಮನಸ್ಸಿಗೆ ಹೊಳೆಯಹತ್ತಿದವು. ಕಡೆಗೆ ಅವರು ಶ್ರೀ ಭವಾನಿಯ ಪ್ರೇರಣೆಯಿಂದ ಒಂದು ಉಪಾಯವನ್ನು ನಿಶ್ಚಯಿಸಿದರು. ಇಷ್ಟೆಲ್ಲ ಮಾಡಿ ಬಾದಶಹನು ಮಹಾರಾಜರ ಗುರುವಾರದ ವ್ರತದ ಸಲುವಾಗಿ ಮೇವಾ–ಮಿಠಾಯಿಯನ್ನು ಹಂಚುವದಕ್ಕೆ ಪರವಾನಿಗೆಯನ್ನು ಕೊಟ್ಟನು. ಆದರೆ ಆ ಸಂಬಂಧದಿಂದ ಬಹು ಜಾಗ್ರತೆಯಿಂದ ಶೋಧ ವಿರುವ ಬಗ್ಗೆ ಪೋಲಾದಖಾನನನ್ನು ಎಚ್ಚರಗೊಳಿಸುವದನ್ನು ಆತನು ಮರೆಯಲಿಲ್ಲ. ಮಿಠಾಯಿಯ ಪ್ರತಿಯೊಂದು ಪೆಟ್ಟಿಗೆಯನ್ನು ಚೆನ್ನಾಗಿ ಶೋಧಿಸಿಯೇ ಹೊರಗೆ ಬಿಡ ಬೇಕೆಂದು ಬಾದಶಹನು ಕಟ್ಟಪ್ಪಣೆ ಮಾಡಿದನು. ಇತ್ತ ಮಹಾರಾಜರ ಗುರುವಾರದ ವ್ರತವು ಯಥಾಸ್ಥಿತವಾಗಿ ನಡೆಯಹತ್ತಿತು. ಮುಂದೆ ಬಾದಶಹನಿಂದ ಪಾಸುಗಳನ್ನು ಸಂಪಾದಿಸಿ ತಮ್ಮ ಜನರನ್ನೆಲ್ಲ ಅವರು ಸ್ವದೇಶಕ್ಕೆ ಕಳಿಸಿಬಿಟ್ಟರು.

## ಹಕೀಮನು

ಕೃಷ್ಣಪಕ್ಷದ ಮಧ್ಯರಾತ್ರಿಯು; ಕಗ್ಗತ್ತಲು ಮುಸುಕಿದೆ; ಹಗಲು ಯಾತಾಯಾತದಿಂದ ದಣಿದ ಜನರು ಸ್ವಸ್ಥ ಮಲಗಿಕೊಂಡು ಗಡದ್ದ ನಿದ್ರೆ ಮಾಡಹತ್ತಿದ್ದರಿಂದ ಆಗ್ರಾಪಟ್ಟಣದಲ್ಲಿ ಸ್ತಬ್ಧತೆಯು ಹೆಚ್ಚುತ್ತಲಿದೆ; ಗಸ್ತಿಯವರ ಎಚ್ಚರಿಕೆಯ ಧ್ವನಿಯು ಸ್ಪಷ್ಟವಾಗಿ ಕೇಳುತ್ತಲಿದೆ. ಯಾವ ಚಿಂತೆಯೂ ಇಲ್ಲದ ಸಂಭಾಜಿ ಬಾಲಕನು ಮಹಾರಾಜರ ಬಳಿಯಲ್ಲಿ ಮಲಗಿಕೊಂಡು ಸ್ವಸ್ಥ ನಿದ್ರೆಮಾಡಹತ್ತಿದ್ದಾನೆ. ಮಹಾರಾಜರ ಚಾಕರರೂ, ಮಿತ್ರರೂ ತಮ್ಮ ತಮ್ಮ ಸ್ಥಳಗಳಲ್ಲಿ ನಿದ್ರೆಹೋಗಿದ್ದಾರೆ. ಇಂಥ ಪ್ರಶಾಂತ ಸಮಯದಲ್ಲಿ ವಿಚಾರಮಗ್ನರಾದ ಮಹಾರಾಜರಿಗೆ ನಿದ್ರೆಬರಲೊಲ್ಲದು. ಶ್ರೀಭವಾನಿಯ ಪ್ರಸಾದವು ಎಂದಿಗೆ ಲಭಿಸುವದೋ ಎಂದು ಅವರು ಚಿಂತಿಸತೊಡಗಿದರು. ಬಾದಶಹನ ದವಡೆಯೊಳಗಿಂದ ತಾವು ಹ್ಯಾಗೆ ಪಾರಾಗಬೇಕೆಂದು ಅವರು ಯೋಚಿಸತೊಡಗಿದರು. ತಾವು ಸ್ಥಾಪಿಸಲು ಯೋಚಿಸಿದ್ದ ಸ್ವರಾಜ್ಯದ ಕೆಲಸವು ಅಪೂರ್ಣ ವಾದದ್ದರಿಂದ, ಅವರಿಗೆ ಬಹಳ ಅಸಮಾಧಾನವಾಗಿತ್ತು. ಹೀಗೆ ಮಹಾರಾಜರು ತಳಮಳಿಸುತ್ತ ಮಲಗಿರಲು, ಅವರಿಗೆ ಸ್ವಲ್ಪ ಜಂಪುಹತ್ತಿದ ಹಾಗಾಗುತ್ತಿರುವಾಗ ಅವರ ಎದುರಿಗೆ ಮಂದ ಪ್ರಕಾಶದಲ್ಲಿ ಒಂದು ಅಸ್ಪಷ್ಟ ಮನುಷ್ಯಾಕೃತಿಯು ದೂರಕಾಣಿಸಹತ್ತಿತು. ಅದನ್ನು

ಮಹಾರಾಜರು ದಿಟ್ಟಿಸಿ ನೋಡಹತ್ತಿದರು. ಅದು ತಮ್ಮ ಕಡೆಗೆ ಬರುತ್ತಿರುವಂತೆ ತೋರಿತು. ಇಂಥ ಮಧ್ಯರಾತ್ರಿಯಲ್ಲಿ ಬಾದಶಹನ ಇಷ್ಟು ಬಿಗುವಿನ ಕಾವಲಿರುವಾಗ ಯಾರುಬರುತ್ತಿರ ಬಹುದೆಂದು ಮಹಾರಾಜರು ಯೋಚಿಸತೊಡಗಿದರು. ಸಮೀಪಕ್ಕೆ ಬಂದಂಬಂದಂತೆ ಪುರುಷಾ ಕೃತಿಯು ಅವರಿಗೆ ಸ್ಪಷ್ಟವಾಗಿ ಕಾಣಹತ್ತಿತ್ತು. ಆಗ ಮಹಾರಾಜರು ಎದ್ದು ಕುಳಿತುಕೊಂಡು, ಆ ಬರುವ ವ್ಯಕ್ತಿಯನ್ನು ಕುರಿತು— "ಯಾರವರು?" ಎಂದು ಪ್ರಶ್ನೆಮಾಡಲು,— "ನಿಮ್ಮೋರ್ವ ಹಿತಚಿಂತಕನು, ಗದ್ದಲ ಮಾಡುವದರಿಂದ ಘಾತವಾಗಬಹುದು" ಎಂದು ಆ ಬರುವ ವ್ಯಕ್ತಿಯು ಮೆಲ್ಲಗೆ ಉತ್ತರಕೊಟ್ಟಿತು. ಉತ್ತರದ ಧ್ವನಿಯು ಮಹಾರಾಜರಿಗೆ ಕೇವಲ ಪರಿಚಯದ್ದಾಗಿ ತೋರಿ, ಕೂಡಲೆ ಅವರು ಎದ್ದು ನಿಂತರು; ಆದರೂ ತಾವು ಶಂಕಿಸಿದವರು ಇಂಥ ಅಪರಾತ್ರಿ ಯಲ್ಲಿ ಇಲ್ಲಿಗೆ ಬರುವ ಸಂಭವವಿಲ್ಲೆಂದು ಮಹಾರಾಜರು ನಿರಾಶೆಪಟ್ಟರು. ಬರಬರುತ್ತ ಆ ವ್ಯಕ್ತಿಯ ಭವ್ಯರೂಪವು ಮಹಾರಾಜರಿಗೆ ಸ್ಪಷ್ಟವಾಗಿ ಕಾಣಿಸಹತ್ತಿತು. ಆ ರೂಪದಲ್ಲಿ ಕೌಪೀನದ ಹೊರತು ಬೇರೆ ವಸ್ತ್ರಗಳು ತೋರಲಿಲ್ಲ. ಜಡೆ-ಗಡ್ಡಗಳ ಹೊರತು ಬೇರೆ ಅಲಂಕಾರಗಳು ಇದ್ದಿಲ್ಲ. ಭಸ್ಮಲೇಪನದ ಹೊರತು ಬೇರೆ ಆಚ್ಛಾದನಗಳಿದ್ದಿಲ್ಲ. ಕೊರಳೊಳಗಿನ ತುಲಸಿಯ ಮಾಲೆ, ಕೈಯೊಳಗಿನ ಕಮಂಡಲು, ಹಾಗು ಯೋಗದಂಡ, ಕಾಲೊಳಗಿನ ಆವುಗೆ ಇವು ಆ ಭವ್ಯರೂಪದ ದೈವೀವೈಭವವನ್ನು ಹೆಚ್ಚಿಸುತ್ತಲಿದ್ದವು. ಮಹಾರಾಜರು ನಯ-ಭಯ ಭಕ್ತಿಯಿಂದ ಸಾಗಿಹೋಗಿ ಆ ದಿವ್ಯ ಮೂರ್ತಿಯು ಚರಣಗಳ ಮೇಲೆ ಮಸ್ತಕವಿಡಲು— "ವಿಜಯಿಭವ," ಎಂದು ಆಶೀರ್ವದಿಸಿ, ಆ ಮೂರ್ತಿಯ ಮಹಾರಾಜರನ್ನು ಹಿಡಿದೆತ್ತಿ— "ಶಿವಬಾ, ಲೋಕಸೇವಕನಾದ ನಿನ್ನ ಕಷ್ಟವು ಜಗತ್ತಿಗೆ ಎಷ್ಟು ಬೋಧಪ್ರದವಾಗಿರುವದಲ್ಲ! ಜಗತ್ತಿನ ಕಷ್ಟವನ್ನು ಜಗತ್ತೇ ಭೋಗಿಸಬೇಕಾಗಿರುವಾಗ, ಮಹಾತ್ಮರು ಆ ಜಗತ್ತಿನ ಕಷ್ಟಭೋಗ ವನ್ನು ತಾವು ಭೋಗಿಸಿ ಜಗತ್ತನ್ನುದ್ಧರಿಸುವರು; ಅದರಿಂದಲೇ ಅವರಿಗೆ ಲೋಕಪೂಜ್ಯತೆಯು ಪ್ರಾಪ್ತವಾಗುವದು. ಹಾಗಲ್ಲದೆ ತಮ್ಮಷ್ಟಕ್ಕೆ ತಾವಿರುವ ಸ್ವಕಾರ್ಯಸಾಧಕರನ್ನು ಲೋಕವು ಯಾಕೆ ವಂದಿಸುವದು ಹೇಳು? ಯವನರಿಂದ ಮಹಾರಾಷ್ಟ್ರಕ್ಕಾಗುವ ಬಾಧೆಯನ್ನು ಮಹಾ ಸತ್ವಶಾಲಿ ಯಾದ ನೀನೊಬ್ಬನೇ ಒಟ್ಟುಗೂಡಿಸಿ ಭೋಗಿಸಿ, ಇಡಿಯ ಮಹಾರಾಷ್ಟ್ರವನ್ನೇ ಯವನಬಾಧೆ ಯಿಂದ ಮುಕ್ತಮಾಡಿರುವದರಿಂದ, ನಿನ್ನ ಕೀರ್ತಿಯು ಅಜರಾಮರವಾಗುವದು. ಧನ್ಯ ಪುರುಷಾ, ನಿನಗೆ ಯವನರಿಂದಾಗುವ ಪರಿಪರಿಯಬಾಧೆಗಳು ನಿನ್ನ ಕುಲದೈವತವಾದ ಶ್ರೀಭವಾನಿಯ ವರಪ್ರಸಾದಗಳೆಂದು ತಿಳಿ; ಆ ಬಾಧೆಗಳನ್ನು ಸಹಿಸಿ, ಲೋಕಸೇವೆಯನ್ನು ಅವಿಚ್ಛಿನ್ನವಾಗಿ ಸಾಗಿಸುವದಕ್ಕಾಗಿ ನೀನು ದೃಢಾಂಗನೂ, ದೃಢಚಿತ್ತನೂ, ದೃಢವ್ಯವಸಾಯಿಯೂ ಆಗಿರುವದು ಆ ವರಪ್ರಸಾದದ ಚಿಹ್ನಗಳೆಂದು ತಿಳಿ. ನಾನು ತೀರ್ಥ-ಯಾತ್ರೆಯನ್ನು ಮಾಡುತ್ತಿರುವಾಗ ನಿನಗಾದ ತಾಪದ ಅರಿವನ್ನು ಶ್ರೀ ರಘುವೀರನು ನನಗೆ ದಯಪಾಲಿಸಿದನು. ಆತನೇ ನನ್ನನ್ನು ಈಗ ನಿನ್ನ ಬಳಿಗೆ ಕರೆತಂದಿರುವನು. ಆತನೇ ನನ್ನ ಮುಖದಿಂದ ಈ ಮಾತುಗಳನ್ನು ಆಡಿಸುತ್ತಿರುವನು; ಈಗ ಅದೇ ರಘುಪತಿಯು ಹೇಳುವದೇನಂದರೆ, ನೀನು ಈ ಮೊದಲೆ ಯೋಚಿಸಿರುವಂತೆ ನಾಳಿನ ಮೋಹರಮ್ಮದ ಹಬ್ಬದ ಗೊಂದಲದಲ್ಲಿ

ಈ ಕಾರಾಗೃಹದಿಂದ ಮುಕ್ತನಾಗಿ ನಡೆ. ನಿನಗೆ ಮಾರ್ಗದಲ್ಲಿ ಬಂದ ವಿಘ್ನಗಳನ್ನೆಲ್ಲ ದೂರಮಾಡಿ ನಿನ್ನನ್ನು ಸುರಕ್ಷಿತವಾಗಿ ದಕ್ಷಿಣಕ್ಕೆ ಕರಕೊಂಡು ಹೋಗುವದಕ್ಕಾಗಿ ಧನುಷ್ಪಾಣಿಯಾದ ಅದೇ ರಘುಪತಿಯೇ ಬೇರೆ ಬೇರೆ ರೂಪಗಳಿಂದ ಮಾರ್ಗದಲ್ಲಿ ಅಲ್ಲಲ್ಲಿ ನಿನ್ನ ಹಾದಿಯನ್ನು ನೋಡುತ್ತ ನಿಂತುಕೊಂಡಿರುವನೆಂಬುದರ ಅನುಭವವು ನಿನಗೆ ಬಂದೇ ಬರುವದು.

ಪ್ರಿಯ ವಾಚಕರೇ, ಹೀಗೆ ತಾರಕೋಪದೇಶಮಾಡಿದ ಮಹಾತ್ಮರು ಶ್ರೀ ಸಮರ್ಥ ರಾಮದಾಸಸ್ವಾಮಿಗಳೆಂಬದು ಆಗಲೆ ನಿಮ್ಮ ಮನಸ್ಸಿಗೆ ಹೊಳೆದಿರಬಹುದು. ಶಿಷ್ಯನ ದುರ್ಧರ ತಾಪವು ಸಮರ್ಥರನ್ನು ಎಳತರುತ್ತದೆಂಬದು ಸುಳ್ಳಲ್ಲ ಇಂದು ಮಹಾರಾಜರು ಪಟ್ಟ ತಾಪವು ಶ್ರೀರಾಮದಾಸರನ್ನು ಎಳೆತಂದಿತು. ಸರ್ವಜ್ಞರೂ ಯೋಗದಲ್ಲಿ ಬಲ್ಲಿದರೂ ಆದ ಆ ಮಹಾತ್ಮರಿಗೆ ಯಾವದು ತಾನೆ ಅಸಾಧ್ಯವು? ಶ್ರೀಗುರುಮಹಿಮೆಯನ್ನರಿತಿದ್ದ ಮಹಾ ರಾಜರಿಗೆ ತಮ್ಮ ಗುರುವು ಅಕಸ್ಮಾತ್ತಾಗಿ ಬಂದದ್ದರ ಆಶ್ಚರ್ಯವಾಗಲಿಲ್ಲ; ಮೃತನನ್ನು ಸಜೀವಗೊಳಿಸುವ ಸದ್ಬೋಧ ಮಾಡಿದ್ದರ ಕೌತುಕವು ಅವರಿಗೆ ಆಗಲಿಲ್ಲ; ಆದರೆ ತನ್ನ ಗುರುವಿನ ಕರುಣಾಶಾಲಿತ್ವಕ್ಕಾಗಿ ಅವರ ಅಂತಃಕರಣವು ಕರಗಿ, ರೋಮಾಂಚನೆಗಳೇಳಲು, ಅವರ ಕಣ್ಣುಗಳೊಳಗಿಂದ ಆನಂದಭಾಷ್ಪಗಳು ದುರಿದವು. ಕಂಠವು ಸದ್ಗದಿತವಾಯಿತು. ಮಹಾರಾಜರ ಹೃದಯವು ಮೊದಲೇ ಅತ್ಯಂತ ಕೋಮಲ, ಆದರಲ್ಲಿ ಶ್ರೀಗುರುವಿನ ಕೃಪಾಕಟಾಕ್ಷದ ಅಘಾತವಾದ ಬಳಿಕ ಅದು ಕಂಪಿಸಿ ಕರಗಿ ರೂಪಾಂತರಿಸಿದ್ದೇನಾಶ್ಚರ್ಯವು? ಮಹಾರಾಜರು ಬದ್ಧಾಂಜಲಿಗಳಾಗಿ ಕೃತಜ್ಞತಾಭಾವದಿಂದ ಶ್ರೀಗುರುವಿನ ಮುಖವನ್ನು ನೋಡಲಿಕ್ಕೂ ಸಂಕೋಚಪಡುತ್ತ ತಲೆಬಾಗಿಸಿ ನಿಂತುಕೊಂಡರು. ತಮ್ಮ ಶಿಷ್ಯನ ಈ ಸೌಜನ್ಯ ಸಂಪತ್ತನ್ನು ನೋಡಿ ಸಂತೋಷಪಟ್ಟು, ಸಮರ್ಥರು ಮತ್ತೆ ಶಿಷ್ಯನನ್ನು ಕುರಿತು— ಶಿವಬಾ, ಶ್ರೀ ರಘುವೀರನು ಈಗ ನಿನಗೆ ತೀರ್ಥ–ಯಾತ್ರೆಯ ಯೋಗವನ್ನಿಟ್ಟಿರುವಂತೆ ತೋರುತ್ತದೆ. ಈ ಮೊದಲೆ ಸ್ವರಾಜ್ಯದ ವ್ಯವಹಾರದಲ್ಲಿ ಮಗ್ನನಾಗಿಹೋಗಿದ್ದ ಹಾಗು ಇನ್ನು ಮುಂದೆ ಮಗ್ನನಾಗಬೇಕಾಗಿರುವ, ನಿನಗೆ ತೀರ್ಥಯಾತ್ರೆಯ ಯೋಗವು ಹ್ಯಾಗೆ ಒದಗಬೇಕು ಹೇಳು? ಈಗ ಸುಯೋಗಗಳನ್ನು ಬಾದಶಹನು ಒದಗಿಸಿಕೊಟ್ಟಿರುವದರಿಂದ, ನೀನು ಆತನ ಉಪ ಕಾರವನ್ನು ಸ್ಮರಿಸತಕ್ಕದ್ದು ನ್ಯಾಯವು! ನಿನ್ನಂಥ ದೈವಶಾಲಿಯು, ಮಣ್ಣು ಹಿಡಿದರೆ ಚಿನ್ನವಾಗುವಾಗ ಔರಂಗಜೇಬ ಬಾದಶಹನ ಅಪಕಾರದ ಕೃತಿಯೇ ನಿನಗೆ ಉಪಕಾರವಾಗಿ ಪರಿಣಮಿಸಿದ್ದರಲ್ಲಿ ಆಶ್ಚರ್ಯವೇನು? ಎಂದು ನುಡಿಯುತ್ತಿರಲು, ಮಹಾರಾಜರು ಪುನಃ ಶ್ರೀ ಗುರುಚರಣಕ್ಕೆರಗುವಾಗ ಸಮರ್ಥರು ಅದೃಶ್ಯವಾದವರು ತಿರುಗಿ ಮಹಾರಾಜರ ಕಣ್ಣಿಗೆ ಬೀಳಲೇ ಇಲ್ಲ, ಇದು ಮಹಾರಾಜರಿಗೆ ಆಶ್ಚರ್ಯದ ಸಂಗತಿಯಾಗಿ ತೋರಲಿಲ್ಲ. ತಮ್ಮ ಗುರುವಿನ ಮಹಾಮಹಿಮೆಯೇ ಅಂತಹದೆಂದು ಅವರು ತಿಳಿದುಕೊಂಡರು. ಅಷ್ಟರಲ್ಲಿ ಬೆಳ್ಳಗೆ ಬೆಳಗಾಯಿತು. ಮಹಾರಾಜರು ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಪರಮೋತ್ಸಾಹ ದಿಂದ ಸದರಿನಲ್ಲಿ ಕುಳಿತುಕೊಂಡಿದ್ದರು. ಅಂದು ಗುರುವಾರವಾದದ್ದರಿಂದ ಮಿಠಾಯಿ ಹಂಚುವ ಕೆಲಸವು ಒತ್ತರದಿಂದ ನಡೆದಿತ್ತು. ಹೀಗೆಯೇ ಕೆಲವು ದಿನಗಳು ಕ್ರಮಿಸಿದವು. ಅಷ್ಟರಲ್ಲಿ

ಮಹಾರಾಜರು ವ್ಯಾಧಿಪೀಡಿತರಾಗಿ ಹಾಸಿಗೆ ಹಿಡಿದರೆಂಬ ಸುದ್ದಿಯು ಹಬ್ಬಿತು. ಜನರು ಮಹಾರಾಜರ ದರ್ಶನಕ್ಕಾಗಿ ಬರತೊಡಗಿದರು. ವೈದ್ಯರ, ಹಾಗು ಹಕೀಮರ ಚಿಕಿತ್ಸೆಯು ನಡೆಯಿತು. ಮಹಾರಾಜರು ಯಾವಾಗಲೂ ಮಲಗಿಯೇ ಇರುತ್ತಿದ್ದರು. ಬಹುತರ ಅವರು ಬಂದವರ ಸಂಗಡ ಮುಸುಕು ತೆಗೆದು ಮಾತಾಡುತ್ತಿದ್ದಿಲ್ಲ. ಆಗ ಮಹಾರಾಜರ ಪರಿವಾರವು ಅತಿ ಖಿನ್ನವಾಗಿ ಕುಳಿತುಕೊಂಡಿರುತ್ತಿತ್ತು. ಇದನ್ನು ನೋಡಿ ಜನರು ಬಹು ಅಸಮಾಧಾನಪಟ್ಟು, ಮಹಾರಾಜರು ಅತ್ಯಂತ ವ್ಯಾಧಿಪೀಡಿತರಾಗಿರುವರೆಂತಲೂ, ತಾವು ಹೋಗುವದರಿಂದ ಅವರಿಗೆ ತ್ರಾಸವಾಗುವದೆಂತಲೂ ತಿಳಿದು ಅವರು ಬರುವದನ್ನು ಕಡಿಮೆ ಮಾಡಹತ್ತಿದರು. ಮಹಾರಾಜರಿಗೆ ಅತ್ಯವಸ್ಥೆಯಾಗಿರುವದೆಂಬ ಸುದ್ದಿಯು ಆಗ್ರಾಪಟ್ಟಣದ ತುಂಬ ಹಬ್ಬಿತು. ಮಹಾರಾಜರ ಈ ಬೇನೆಯ ವರ್ತಮಾನವು ಬಾದಶಹನ ಕಿವಿಯವರೆಗೆ ಹೋಗಿ ಆತನಿಗೆ ಅಂತರಂಗದಲ್ಲಿ ಸಮಾಧಾನವಾಯಿತು. ಹೊರಗಿನ ಪೀಡೆಯು ಹೊರಗಿನಿಂದಲೇ ಹೋದರೆ ನೆಟ್ಟಗೆಂದು ಆತನು ಎಣಿಸಹತ್ತಿದನು; ಆದರೆ ಹೊರಗೆಮಾತ್ರ ಈ ಭಾವವನ್ನು ಆತನು ತೋರಿಸಲಿಲ್ಲ. ಮಹಾರಾಜರ ವಿಷಯವಾಗಿ ಅತ್ಯಂತವಾದ ಆದರವಹಿಸುವವನಂತೆ ಆತನು ಆಗಾಗ್ಗೆ ಹಕೀಮರನ್ನು ಮಹಾರಾಜರ ಬಳಿಗೆ ಕಳಿಸುತ್ತಲಿದ್ದನು; ಆದರೆ ಮಹಾರಾಜರು ಅವರನ್ನು ಒಳಗೆ ಬರಗೊಡುತ್ತಿದ್ದಿಲ್ಲ. ಯವನರ ಕೈಯಿಂದ ಔಷಧ ತೆಗೆದುಕೊಳ್ಳುವದಿಲ್ಲವೆಂದು ಸ್ಪಷ್ಟವಾಗಿ ಹೇಳಿ, ಹಕೀಮರ ಮಾನ-ಮರ್ಯಾದೆಯನ್ನು ಬಹಳ ಚನ್ನಾಗಿ ಮಾಡುತ್ತಿದ್ದರು. ಮಹಾರಾಜರ ಈ ಔದಾರ್ಯದಿಂದ ಹಕೀಮರು ಸಂತುಷ್ಟರಾಗಿ ಹೋಗುತ್ತಿದ್ದರು. ಅವರು ಬಾದಶಹನ ಬಳಿಗೆಹೋಗಿ ಮಹಾರಾಜರ ಬೇನೆಯು ಕಠಿಣವಿರುವದೆಂದು ಹೇಳುತ್ತಲಿದ್ದರು. ಹಡೆದ ತಂದೆಗೆ ಬೇನೆ ಬಂದಾಗ ಔಷದ ಕೊಡಿಸದ ಕಠೋರ ಹೃದಯದ ಬಾದಶಹನು, ತನ್ನ ಶತ್ರುವಿನ ಹಿತವನ್ನು ಎಷ್ಟರಮಟ್ಟಿಗೆ ಚಿಂತಿಸಿರಬಹುದೆಂಬದನ್ನು ವಾಚಕರೇ ತರ್ಕಿಸತಕ್ಕದ್ದು.

ಒಂದು ದಿನ ಎರಡು ತಾಸು ಹೊತ್ತು ಏರಿದೆ, ಮಹಾರಾಜರು ಆದೇ ಮುಖಮಾರ್ಜನ ಮಾಡಿ ಹಾಸಿಗೆಯ ಮೇಲೆ ಮಲಗಿಕೊಂಡಿದ್ದಾರೆ, ಹಿರೋಜಿಫರ್ಜಂದನು ಬಳಿಯಲ್ಲಿ ಕುಳಿತುಕೊಂಡಿದ್ದಾನೆ, ಸಂಭಾಜಿ ಬಾಲಕನು ಯಾವದೋ ಆಟದಲ್ಲಿ ತೊಡಗಿರುತ್ತಾನೆ. ಅಷ್ಟರಲ್ಲಿ ಒಬ್ಬ ಸೇವಕನು ಬಂದು—"ಬಾದಶಹನ ಕಡೆಯಿಂದ ಒಬ್ಬ ಹಕೀಮನು ಬಂದಿರುತ್ತಾನೆ. ಪಲ್ಲಕ್ಕಿಯು ಬಾಗಿಲಮುಂದೆ ಇಳಿಸಿರುವದು. ಹಕೀಮನು ಮಹಾರಾಜರ ಅಪ್ಪಣೆಯ ಮಾರ್ಗ ವನ್ನು ನೋಡುತ್ತಿರುವನು" ಎಂದು ಹೇಳಿದನು. ಕೂಡಲೆ ಮಹಾರಾಜರ ಹುಬ್ಬುಗಳು ಗಂಟಿಕ್ಕಿದವು. ತಾವು ಔಷಧ ತಕ್ಕೊಳ್ಳುವದಿಲ್ಲವೆಂತಲೂ, ಪ್ರಕೃತಿಯನ್ನು ತೋರಿಸುವದಿಲ್ಲ ವೆಂತಲೂ ಸ್ಪಷ್ಟವಾಗಿ ಹೇಳಿಕಳಿಸಿದರು; ಆದರೆ ಹಕೀಮನು ಕೇಳಲೇ ಇಲ್ಲ. ಪ್ರಕೃತಿಯನ್ನು ನೋಡಿ ಔಷಧ ಕೊಡಲೇಬೇಕೆಂದು ಬಾದಶಹರ ಕಟ್ಟಪ್ಪಣೆಯಾಗಿರುವದರಿಂದ ನಾನು ಹಾಗೇ ಹಿಂದಿರುಗಿ ಹೋಗುವದಿಲ್ಲವೆಂತಲೂ, ಪ್ರಕೃತಿಯನ್ನು ತೋರಿಸದೆ ಇದ್ದಪಕ್ಷದಲ್ಲಿ ಏನಾದರೂ ಮೋಸವಿರುತ್ತಧೆಂದು ಬಾದಶಹನಿಗೆ ಹೇಳಬೇಕಾಗುವದೆಂತಲೂ ಆ ಹಕೀಮನು ಮಹಾರಾಜರಿಗೆ ತಿರುಗಿ ಹೇಳಿಕಳಿಸಿದನು. ಹಿರೋಜಿ ಫರ್ಜಂದನು ಪರಿಪರಿಯಾಗಿ ವೈದ್ಯನಿಗೆ

ಹೇಳಿಕೊಂಡು ಆತನಿಗೆ ಹೇರಳ ಹಣ ಕೊಡಹೋದನು; ಆದರೆ ಹಕೀಮನು ಕೇಳಲಿಲ್ಲ, ಮಹಾರಾಜರನ್ನು ಕಾಣಲೇಬೇಕೆಂದು ಹಟಹಿಡಿದನು. ಆಗ ಮಹಾರಾಜರು ನಿರುಪಾಯರಾಗಿ ಹಕೀಮನನ್ನು ಒಳಗೆ ಬರಮಾಡಿಕೊಂಡರು. ವೈದ್ಯನು ಮಹಾರಾಜರ ಮಂಚದ ಬಳಿಯಲ್ಲಿ ಬಂದು ಕುಳಿತುಕೊಂಡನು. ಆತನು ವೃದ್ಧನಿದ್ದನು. ಅವನ ಗಡ್ಡಗಳೆಲ್ಲ ಬೆಳ್ಳಗೆ ಆಗಿದ್ದವು. ಆತನು ಮಹಾರಾಜರ ಮುಖವನ್ನು ತೀಕ್ಷ್ಣದೃಷ್ಟಿಯಿಂದ ನೋಡಿ ಅವರನ್ನು ಕುರಿತು— ''ಪ್ರಕೃತಿಯು ಹ್ಯಾಗಿದೆ? ಏನೇನು ವಿಕಾರಗಳಾಗುವವು? ಯಾವ ಬೇನೆಯು?'' ಎಂದು ಕೇಳಿದನು. ಅದಕ್ಕೆ ಮಹಾರಾಜರು—

ಮಹಾರಾಜರು—ಯಾವ ಬೇನೆಯೋ ನಾನರಿಯೆ; ಪ್ರಕೃತಿಯು ಮಾತ್ರ ದಿನದಿನಕ್ಕೆ ಕ್ಷೀಣವಾಗುತ್ತ ನಡೆದಿದೆ; ನಾಲಿಗೆ ರುಚಿಯಲ್ಲ; ಅನ್ನ ಕಟ್ಟಾಗಿದೆ; ಕುಳಿತುಕೊಳ್ಳುವ ತ್ರಾಣವು ಸಹ ಇರುವದಿಲ್ಲ.

ಹಕೀಮ (ನಾಡಿಗಳನ್ನು ನೋಡಿ)— ನಾಡಿಗಳಂತು ಶುದ್ಧವಾಗಿರುತ್ತವೆ. ಸ್ವಾತಂತ್ರ್ಯವು ನಷ್ಟವಾಗಿ ಪಾರತಂತ್ರ್ಯವು ಪ್ರಾಪ್ತವಾಯಿತೆಂಬ ಚಿಂತಾರೋಗವು ಒದಗಿದಂತೆ ತೋರುತ್ತದೆ.

ಮಹಾರಾಜ (ವೈದ್ಯನ ತೇಜಃಪುಂಜ ಮುಖವನ್ನು ನೋಡಿ)— ನೋಡಿದವರೆಲ್ಲ ಹೀಗೆಯೇ ಹೇಳುತ್ತಾರೆ; ಆದರೆ ಯಾವ ರೋಗವೆಂಬದರ ನಿದಾನವನ್ನು ಯಾರೂ ಮಾಡಲೊಲ್ಲರು. ನನ್ನ ಮೈಯು ಯಾವಾಗಲೂ ಉರಿಯುತ್ತಿರುತ್ತದೆ.

ಹಕೀಮ— ನಾನು ಇದಕ್ಕೆ ಔಷಧವನ್ನು ಕೊಡುವೆನು.

ಮಹಾರಾಜ–ನಾವು ಯವನರ ಕೈಯೊಳಗಿನ ಔಷಧವನ್ನು ಸರ್ವಥಾ ಸ್ವೀಕರಿಸುವುದಿಲ್ಲ. ನೀವು ಬಹು ಕಷ್ಟಪಟ್ಟು ನಮ್ಮ ರೋಗಚಿಕಿತ್ಸೆಯನ್ನು ಮಾಡಿರುತ್ತೀರಿ. ನಿಮ್ಮ ಶ್ರಮಕ್ಕಾಗಿ ಇದು ಅಲ್ಪ ಸಂಭಾವನೆಯು.

ಈ ಮೇರೆಗೆ ನುಡಿದು ಮಹಾರಾಜರು ತಮ್ಮ ಬೆರಳಿನೊಳಗಿನ ಬಹು ಬೆಲೆಯುಳ್ಳ ಉಂಗುರವನ್ನು ತೆಗೆದು ಹಕೀಮನಿಗೆ ಕೊಡುತ್ತಿರಲು, ಹಕೀಮನು ಉಂಗುರವನ್ನು ಸ್ಪರ್ಶಮಾಡಿ—''ಧನ್ಯರು ಧನ್ಯರು! ಮಹಾರಾಜರು ಪರಮಧನ್ಯರು! ಔದಾರ್ಯವು ಶ್ಲಾಘನೀಯವಾದದು; ಆದರೆ ಯವನ ಚಕ್ರವರ್ತಿಯ ಸಂಭಾವನೆಯನ್ನು ಸ್ವೀಕರಿಸಿದ ನನ್ನ ಈ ಕೈಗಳು ಅನ್ಯರ ಸಂಭಾವನೆಯನ್ನು ಸ್ವೀಕರಿಸಲಾರವು. ಮೇಲಾಗಿ ಬಾದಶಹರು ಔಷಧವನ್ನು ಕೊಡಲೇಬೇಕೆಂದು ನನ್ನನ್ನು ಆಜ್ಞಾಪಿಸಿರುವರು. ಆದ್ದರಿಂದ ರೋಗಪರೀಕ್ಷೆಯನ್ನು ಚನ್ನಾಗಿಮಾಡಿ ಔಷಧವನ್ನು ಕೊಟ್ಟೇಹೋಗುವೆನು. ಮಹಾರಾಜರು ವನಸ್ಪತಿಯನ್ನಂತು ಸ್ವೀಕರಿಸಬಹುದಲ್ಲವೆ? ಆ ವನಸ್ಪತಿಯು ಇಲ್ಲಿಯೇ ಉಪವನದಲ್ಲಿರುವದು'' ಎಂದು ನುಡಿಯುತ್ತ ಮಹಾರಾಜರಿರುವ ವಾಡೆಯ ಉಪವನವನ್ನು ಪ್ರವೇಶಿಸಿದನು. ಇತ್ತ ಮಹಾರಾಜರು ವೈದ್ಯನ ಹಟಮಾರಿತನಕ್ಕಾಗಿ ಸಂತಾಪಗೊಂಡಿದ್ದರು. ಅಷ್ಟರಲ್ಲಿ ಒಬ್ಬ ತರುಣ ಯವನ ಸ್ತ್ರೀಯು ಮಹಾರಾಜರ ಬಳಿಗೆ ಬಂದು ವಿನಯದಿಂದ

ವಂದಿಸಿ ಬಹುಮಾನ ಪುರಸ್ಸರವಾಗಿ ನಿಂತುಕೊಂಡಳು! ಆಗ ಮಹಾರಾಜರು ತಟ್ಟನೆ ಹಾಸಿಗೆಯ ಮೇಲೆ ಎದ್ದುಕುಳಿತು ಆ ಸ್ತ್ರೀಯನ್ನು ಕುರಿತು ಮರ್ಯಾದೆಯಿಂದ— ''ತಾಯಿ, ನೀನಾರಮ್ಮಾ! ನನ್ನ ಬಳಿಯಲ್ಲಿ ನಿನ್ನ ಕೆಲಸವೇನಿರುವದು?'' ಎಂದು ಕೇಳಿದರು. ಅದಕ್ಕೆ ಆ ತರುಣ ಯವನ ಸ್ತ್ರೀಯು—''ಮಹಾರಾಜ ತಮ್ಮ ಬಳಿಯಲ್ಲಿ ನನ್ನ ಮಹತ್ವದ ಕೆಲಸ ವಿರುವದು; ಆದರೆ ಅದು ಅನ್ಯರ ಕಿವಿಗೆ ಬೀಳುವಹಾಗಿಲ್ಲ; ಏಕಾಂತದಲ್ಲಿ ಅದನ್ನು ಹೇಳುವೆನು,'' ಎಂದು ನುಡಿಯಲು, ಮಹಾರಾಜರು ಹಿರೋಜಿ ಫರ್ಜಂದನನ್ನು ನೋಡಿದರು. ಕೂಡಲೆ ಹಿರೋಜಿಯು ಸಂಭಾಜಿ ಮಹಾರಾಜರನ್ನು ಕರಕೊಂಡು ಹೊರಗೆ ಹೋದನು. ಉಳಿದ ನೌಕರರು ಅಷ್ಟರಲ್ಲಿ ಹೋಗಿಬಿಟ್ಟಿದ್ದರು. ಆಗ ಆ ಸ್ತ್ರೀಯು ಮಹಾರಾಜರನ್ನು ಕುರಿತು—''ಮಹಾರಾಜ, ನಾನು ಬಾದಶಹರ ಪ್ರೀತಿಯ ಮಗಳಾದ ನಿಸಾಬೇಗಮರ ದಾಸಿಯು. ಬೇಗಮುಸಾಹೇಬರು ಮಹಾರಾಜರ ವ್ಯಾಧಿಯ ಸುದ್ದಿಯನ್ನು ಕೇಳಿ ವ್ಯಸನಪಟ್ಟು, ಯೋಗಕ್ಷೇಮವನ್ನು ವಿಚಾರಿಸಿ ಬರುವದಕ್ಕಾಗಿ ನನ್ನನ್ನು ಕಳಿಸಿರುವರು. ನಾನೇ ಹಕೀಮನ ವೇಷದಿಂದ ಬಂದಿದ್ದೆನು. ಅವರು ತಮ್ಮ ಪ್ರತಾಪವನ್ನು ಕಿವಿಯಿಂದ ಕೇಳಿದಂತೆ, ತಮ್ಮ ಧೀರ–ಗಂಭೀರವಾದ ತೇಜೋಮಯಮೂರ್ತಿಯನ್ನು ತಾವು ದರ್ಬಾರದಲ್ಲಿರುವಾಗ ನೋಡಿ ತಾವು ದರ್ಬಾರದಲ್ಲಿ ನಿಜವಾದ ವೀರರಿಗೆ ಒಪ್ಪುವಂತೆ ನಡೆದುಕೊಂಡದ್ದನ್ನು ಮನಸ್ಸಿನಲ್ಲಿ ತಂದು, ಅವರು ಸುಪ್ರಸನ್ನರಾಗಿ ತಮ್ಮನ್ನು ಮನಸಾವರಿಸಿರುವರು. ನಿಮ್ಮೊಡನೆ ಪ್ರತ್ಯಕ್ಷ ವಿವಾಹ ವಾಗುವ ಸಂಭವವೇ ಇಲ್ಲದ್ದರಿಂದ, ಅವರು ಆಜನ್ಮ ಬ್ರಹ್ಮಚರ್ಯದಿಂದಲೇ ಇರತಕ್ಕವರು. ಈ ಸಂಗತಿಯನ್ನು ತಿಳಿಸಿ, ನಿಮ್ಮ ಯೋಗಕ್ಷೇಮವನ್ನು ವಿಚಾರಿಸಿ ಬರ ಹೇಳಿರುವರು. ಬೇಗಮುಸಾಹೇಬರು ಸಾಮಾನ್ಯ ಬುದ್ಧಿಶಾಲಿಗಳಲ್ಲ ಉತ್ತಮ ಕಾವ್ಯಸ್ಫೂರ್ತಿಯು ಅವರಿಗಿರುವದು. ಕವಿಗಳಲ್ಲಿ ಅವರ ಗಣನೆ ಇರುವದು. ತಮ್ಮ ಬೇನೆಯು ನಿಜವಿರಲಿಕ್ಕಿಲ್ಲ ವೆಂತಲೂ, ತಮ್ಮ ತಂದೆಯ ಪ್ರತಿಬಂಧದಿಂದ ಪಾರಾಗುವದಕ್ಕಾಗಿ ನೀವು ಯೋಚಿಸಿರುವ ಯುಕ್ತಿಯ ಪೂರ್ವಸಿದ್ಧತೆಯು ಈ ಬೇನೆಯ ನೆವವಿರಬಹುದೆಂತಲೂ ಅವರು ತರ್ಕಿಸಿದ್ದರು. ನಿಮ್ಮ ಮಿಠಾಯಿ ಹಂಚುವದರ ರಹಸ್ಯವೂ ಅವರಿಗೆ ತಿಳಿದಂತೆ ತೋರುತ್ತದೆ. ಅವರ ತರ್ಕವು ನಿಜವಾದದ್ದಕ್ಕಾಗಿ ನನಗೆ ಬಹಳ ಸಂತೋಷವಾಗಿದೆ. ನಿಮಗೆ ಪ್ರಸಂಗದಲ್ಲಿ ಉಪಯೋಗವಾಗ ಬೇಕೆಂದು ಈ ಉಂಗುರವನ್ನು ಅವರು ತಮಗೆ ಕೊಡಹೇಳಿರುತ್ತಾರೆ. ಬೇಗಮುಸಾಹೇಬರ ಪ್ರೇಮದ ಕುರುಹೆಂದು ತಿಳಿದು, ಮಹಾರಾಜರು ಅದನ್ನು ಸ್ವೀಕರಿಸಿದರೆ ಅವರಿಗೆ ಬಹಳ ಸಂತೋಷವಾಗುವದು. ಈ ಉಂಗುರವನ್ನು ಆಗ್ರಾಪಟ್ಟಣದ ಯಾವ ಕಾವಲುಗಾರರಿಗೆ ತೋರಿಸಿದರೂ ಅವರು ತೋರಿಸುವವರನ್ನು ಪ್ರತಿಬಂಧಿಸದೆ ಹೋಗಗೊಡುವರು.

ಯವನತರುಣಿಯ ಈ ಮಾತುಗಳನ್ನು ಆಶ್ಚರ್ಯದಿಂದ ಕೇಳುತ್ತಿದ್ದ ಮಹಾರಾಜರು ಬಹು ಆದರದಿಂದ ಆ ಉಂಗುರವನ್ನು ಸ್ವೀಕರಿಸಿ ಬೆರಳಿನಲ್ಲಿಟ್ಟುಕೊಂಡು—''ವಿನಯ ಶೀಲಳೇ, ನಿಮ್ಮ ಬೇಗಮುಸಾಹೇಬರು ನನ್ನ ಕಲ್ಯಾಣವನ್ನು ಚಿಂತಿಸುತ್ತಿರುವದಕ್ಕಾಗಿ ನಾನು ಅತ್ಯಂತ ಕೃತಜ್ಞನಾಗಿರುವೆನು. ನನ್ನ ಸಲುವಾಗಿ ಇಷ್ಟು ಸ್ವಾರ್ಥತ್ಯಾಗ ಮಾಡುವದು

ಯೋಗ್ಯವಲ್ಲೆಂದು ನಿಮ್ಮ ಬೇಗಮಸಾಹೇಬರಿಗೆ ನಾನು ಹೇಳಿದೆನೆಂದು ಹೇಳು! ವಿಧರ್ಮಿಗಳ ವಿವಾಹಕ್ಕೆ ನಮ್ಮ ಶಾಸ್ತ್ರವು ಒಪ್ಪಿಕೊಳ್ಳದ್ದರಿಂದ, ನಿಮ್ಮ ಬೇಗಮಸಾಹೇಬರ ಪವಿತ್ರ ಪ್ರೇಮಕ್ಕೆ ಪ್ರತಿಯಾಗಿ ನನ್ನ ಪವಿತ್ರ ಪ್ರೇಮವನ್ನು ಸಮರ್ಪಿಸುವದಕ್ಕಿಂತ ಹೆಚ್ಚಿನ ಯಾವ ಮಾತನ್ನೂ ನಾನು ಆಡಲಾರೆನು. ನಿಮ್ಮ ಬೇಗಮಸಾಹೇಬರಿಗೆ ನನ್ನ ಪ್ರೇಮಪೂರ್ವಕ ಸಲಾಮುಗಳನ್ನು ಹೇಳು. ನಾನು ಆಗಲೆ ನಿನಗೆ ಕೊಡಬೇಕೆಂದು ಮಾಡಿದ್ದ ಈ ಉಂಗುರವನ್ನು ನನ್ನ ಪವಿತ್ರಪ್ರೇಮದ ಕುರುಹೆಂದು ತಿಳಿದು ನಿಮ್ಮ ಬೇಗಮಸಾಹೇಬರಿಗೆ ನಾನು ಅರ್ಪಿಸುತ್ತೇನೆ. ಅದನ್ನು ಅವರು ಸ್ವೀಕರಿಸಿದರೆ ನನಗೆ ಪರಮಸಂತೋಷವಾಗುವದು. ಇನ್ನು ನೀನು ಇಲ್ಲಿ ಬಹಳ ಹೊತ್ತು ನಿಲ್ಲಬೇಡ, ಅನರ್ಥಕ್ಕೆ ಕಾರಣವಾದೀತು,'' ಎಂದು ಹೇಳಲು, ಆ ದಾಸಿಯು ಪುನಃ ಉಪವನಕ್ಕೆ ಹೋಗಿ ಕಾಜಿಯ ಪೋಷಾಕು ಹಾಕಿಕೊಂಡು ಪಲ್ಲಕ್ಕಿಯಲ್ಲಿ ಕುಳಿತುಕೊಂಡಳು. ಕೂಡಲೇ ಆಕೆಯ ಪಲ್ಲಕ್ಕಿಯು ಮಹಾರಾಜರ ಮನೆಯಿಂದ ಹೊರಗೆ ಹೊರಟಿತು!

## ಆಗ್ರಾದಿಂದ ಪ್ರಯಾಣ

ಹೀಗೆ ಮಹಾರಾಜರ ಬೇನೆಯ ಸುದ್ದಿಯು ಜನರಲ್ಲಿ ಪಸರಿಸಿ ಜನರು ಮಿಡುಕುತ್ತಿರುವಾಗ, ಮಹಾರಾಜರ ಪ್ರಕೃತಿಯು ಸ್ವಲ್ಪ ಗುಣಮುಖವದೆಯೆಂಬ ಸುದ್ದಿಯು ಹೊರಬಿದ್ದು ಆಗ್ರಾಪಟ್ಟಣದಲ್ಲೆಲ್ಲ ಪಸರಿಸಿತು. ಹೀಗೆಯೇ ಮಹಾರಾಜರಿಗೆ ಗುಣವಾಗುತ್ತ ಹೋಗಿ ಅವರು ಸುರಕ್ಷಿತ ತಮ್ಮ ರಾಜ್ಯಕ್ಕೆ ಹೋಗಲೆಂದು ಬಹುಜನರು ಇಚ್ಛಿಸುತ್ತಿದ್ದರು. ಬರಬರುತ್ತ ಪ್ರಕೃತಿಗೆ ಈಗ ಸಂಪೂರ್ಣ ಗುಣವದೆಯೆಂದು ವೈದ್ಯರು ಹೇಳಹತ್ತಿದರು. ಆಗ ಸಂತೋಷಕ್ಕಾಗಿ ಮಹಾರಾಜರು ಬೇರೆ ಬೇರೆ ತಮ್ಮ ಇಷ್ಟಮಿತ್ರರ ಮನೆಗೂ, ವೈದ್ಯರ ಮನೆಗೂ ಕಾಣಿಕೆಗಳನ್ನೂ, ಮಿಠಾಯಿಗಳನ್ನೂ ನಿತ್ಯ ಕಳಿಸಹತ್ತಿದ್ದರು. ಭಿಕ್ಷುಕರಿಗಂತು ಮಿಠಾಯಿಯು ದಿನಾಲು ದೊರೆಯಹತ್ತಿತು. ಹೀಗಿರುವಾಗ ಮೊಹರಮ್ಮದ ಹಬ್ಬವು ಬಂದಿತು. ಮೊಗಲ ಬಾದಶಾಹಿಯ ವೈಭವಕ್ಕೆ ತಕ್ಕಂತೆ ಆಗ್ರಾಪಟ್ಟಣವು ಶೃಂಗರಿಸಲ್ಪಟ್ಟು, ಹಬ್ಬವು ಒಳ್ಳೇ ವಿಜೃಂಭಣೆಯಿಂದ ನೆರವೇರತೊಡಗಿತು. ಇತ್ತ ಮಹಾರಾಜರು ಶ್ರೀಗುರುವಿನ ಅಪ್ಪಣೆಯಂತೆ ತಾವು ಬಂಧಮುಕ್ತರಾಗುವ ಉದ್ಯೋಗವನ್ನು ನಡಿಸಿದರು. ಹಿರೋಜಿ ಫರ್ಜಂದನೊಡನೆ ಅವರು ಬಹಳಹೊತ್ತು ಆಲೋಚಿಸಿ, ಶ್ರೀಭವಾನಿಯನ್ನು ಪ್ರಾರ್ಥಿಸಿ, ಶ್ರೀಗುರುವಿನ ಸ್ಮರಣಮಾಡಿ, ತಮ್ಮ ಜನನಿಯನ್ನು ಮನಸಾ ವಂದಿಸಿ ಒಂದು ಪೆಟ್ಟಿಗೆಯಲ್ಲಿ ಸಂಭಾಜಿಯನ್ನು ಮಲಗಿಸಿದರು; ಆತನಿಗೆ ಹೇಳತಕ್ಕದ್ದನ್ನೆಲ್ಲ ಹೇಳಿ ಮಹಾರಾಜರು ತಾವು ಒಂದು ಪೆಟ್ಟಿಗೆಯಲ್ಲಿ ಮಲಗಿಕೊಂಡರು. ಆ ಮಲಗಿದವರ ಮೇಲೆ ವ್ಯವಸ್ಥೆಯಿಂದ ಮಿಠಾಯಿಯ ಪುಡಕಿಗಳನ್ನು ಇಟ್ಟರು. ಹಿರೋಜಿ ಫರ್ಜಂದನು ಮಹಾರಾಜರ ಮಂಚದ

ಮೇಲೆ ಬೇನೆಯುವನಾಗಿ ಮುಸುಕು ಹಾಕಿಕೊಂಡು ಮಲಗಿಕೊಂಡನು. ಮಹಾರಾಜರ ಉಳಿದ ನೌಕರರು ಪೆಟ್ಟಿಗೆಯ ವಾಹಕರಾದರು. ಹಿರೋಜಿಯ ಹೊರತು ಒಂದು ಪಿಳ್ಳೆಯು ಕೂಡ ಬಾದಶಹನ ಪ್ರತಿಬಂಧದಲ್ಲಿ ಉಳಿಯಲಿಲ್ಲ. ಒಬ್ಬ ಹುಡುಗನು ಮಾತ್ರ ಹಿರೋಜಿಯ ಕಾಲದೆಸೆಗೆ ಕುಳಿತುಕೊಂಡನು. ಒಂದೇತರದ ಹಲವು ಪೆಟ್ಟಿಗೆಗಳು ಮಹಾರಾಜರ ವಾಡೆಯಿಂದ ಹೊರಬೀಳಹತ್ತಿದವು. ಅಂದು ಗುರುವಾರ ವಾದದ್ದರಿಂದಲೂ, ಮೊಹರಮ್ಮದ ಹಬ್ಬವಿದ್ದದ್ದರಿಂದಲೂ ಮಿಠಾಯಿಯ ಪೆಟ್ಟಿಗೆಗಳು ಒಂದೇಸವನೆ ಹೋಗುತ್ತಲಿದ್ದವು; ಅವುಗಳನ್ನು ನೋಡುವದರಲ್ಲಿ ಕಾವಲುಗಾರರು ಬೇಸತ್ತುಹೋದರು. ಮಹಾರಾಜರು ಇನ್ನೂ ಹಾಸಿಗೆ ಬಿಟ್ಟು ಏಳದೆ ಇರುವದರಿಂದ, ಕಾವಲುಗಾರರಿಗಾಗಲಿ, ಬಾದಶಹನಿಗಾಗಲಿ, ಬೇರೆಯವರಿಗಾಗಲಿ ಯಾವ ತರದ ಸಂಶಯವೂ ಬರುವ ಹಾಗಿದ್ದಿಲ್ಲ. ಮಹಾರಾಜರು ಮಲಗಿದ್ದ ಪೆಟ್ಟಿಗೆಗಳು ವಾಡೆಯಬಿಟ್ಟು ಹೊರಟಾಗ ಹೊರಗೆ ಒಂದು ತಾಸು ಹೊತ್ತು ಇದ್ದರೆ ಇರಬಹುದು. ಆಗ ಕಾವಲುಗಾರರು ಬೇಸತ್ತು ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತುಕೊಂಡಿದ್ದರು. ಅಷ್ಟರಲ್ಲಿ ಮೂವರು ಬೈರಾಗಿಣಿಯರು ಮಂಜುಲಸ್ವರದಿಂದ ಹಾಡುತ್ತ ಬಂದರು. ಬೈರಾಗಿಣಿಯರ ರೂಪವು ಮೋಹಕವಾಗಿ ಇದ್ದು, ಅವರು ಅತ್ಯಂತ ತರುಣರಾಗಿದ್ದದ್ದರಿಂದ ಅವರ ಸುತ್ತುಮುತ್ತು ಕಾವಲುಗಾರರು ಮುತ್ತಿದರು. ಇದೇ ಕಾಲದಲ್ಲಿ ಮಿಠಾಯಿಯ ಪೆಟ್ಟಿಗೆಗಳು ವಾಡೆಯಿಂದ ಹೊರಗೆ ಬಂದವು. ಅವನ್ನು ಕಾವಲುಗಾರರ ಮುಖ್ಯನು ನೋಡಿ ತಮ್ಮವರನ್ನು ಕುರಿತು— ''ಹೋಗಿರೋ, ಯಾರಾದರೂ ಹೋಗಿ ಪೆಟ್ಟಿಗೆಯನ್ನು ನೋಡಿಬರ್ರಿ'' ಎಂದು ಹೇಳಿದನು. ಕೂಡಲೆ ಇಬ್ಬರು ತಟ್ಟನೆ ಓಡುತ್ತ ಹೋಗಿ ಗುರಿಯಿಟ್ಟಂತೆ ಒಬ್ಬನು ಮಹಾರಾಜರು ಮಲಗಿರುವ ಪೆಟ್ಟಿಗೆಯ ಬಳಿಯಲ್ಲಿ, ಇನ್ನೊಬ್ಬನು ಸಂಭಾಜಿ ಮಹಾರಾಜರು ಮಲಗಿದ ಪೆಟ್ಟಿಗೆಯ ಬಳಿಯಲ್ಲಿ ನಿಂತುಕೊಂಡು, ಪೆಟ್ಟಿಗೆಗಳನ್ನು ಕೆಳಗೆ ಇಳಿಸಹೇಳಿದರು. ಇದನ್ನು ನೋಡಿ ವಾಹಕರು ಬೆದರಿದರು. ಒಳಗೆ ಮಲಗಿದ್ದ ಮಹಾರಾಜರೂ ಶಂಕಿತರಾದರು. ಗಾಯನದ ಧ್ವನಿಯು ಮಹಾರಾಜರಿಗೆ ಗುರುತಿನದಾಗಿ ತೋರುತ್ತಿತ್ತು. ಅವುಗಳಲ್ಲಿ ಮಾತಾರಣದೇವಿಯ ಗಂಭೀರ ಧ್ವನಿಯ ಗುರುತಂತು ಮಹಾರಾಜರಿಗೆ ಚನ್ನಾಗಿ ಹತ್ತಿತು; ಆದರೆ ಆಕಸ್ಮಿಕವಾಗಿ ತಮ್ಮ ಪೆಟ್ಟಿಗೆಯನ್ನೇ ಕಾವಲುಗಾರರು ಶೋಧಿಸಲು ತಡೆದದ್ದನ್ನು ನೋಡಿ ಅವರು ಚಿಂತೆಗೊಳಗಾದರು. ಪೆಟ್ಟಿಗೆ ಶೋಧಿಸುವವರು ಪೆಟ್ಟಿಗೆಯನ್ನು ತೆರೆದು ತೋರಿಸಲೇಬೇಕೆಂದು ಆಗ್ರಹ ಹಿಡಿದರು. ವಾಹಕರು, ತಮಗೆ ಬಹಳ ಅವಸರ ವಿರುವದರಿಂದ ನಮ್ಮನ್ನು ಬೇಗನೆ ಹೋಗಗೊಡಬೇಕೆಂದು ಎಷ್ಟು ಲಂಚದ ಆಶೆ ತೋರಿಸಿದರೂ ಕಾವಲುಗಾರರು ಕೇಳಲಿಲ್ಲ. ಇನ್ನು ವಾಹಕರು ತಮ್ಮ ಗುಪ್ತ ಶಸ್ತ್ರಗಳಿಗೆ ಕೈ ಇಡತಕ್ಕವರಿದ್ದರು. ಒಳಗೆ ಮಹಾರಾಜರೂ ಸಂತಾಪಗೊಂಡು ತಮ್ಮ ಪೂಜ್ಯಭವಾನೀ ಖಡ್ಗದಿಂದ ಭವಾನೀಮಾತೆಗೆ ತಮ್ಮ ಶಿರಸ್ಸನ್ನು ಬಲಿಕೊಡಬೇಕೆಂದು ನಿಶ್ಚಯಿಸಿ ಖಡ್ಗಕ್ಕೆ ಕೈಹಾಕಿದರು. ಅಷ್ಟರಲ್ಲಿ ಪೆಟ್ಟಿಗೆ ಶೋಧಿಸಬಂದವರು ವಾಹಕರ ಕಿವಿಯಲ್ಲಿ ಮೆಲ್ಲನೆ ಏನೋ ಹೇಳಿದ್ದರಿಂದ, ವಾಹಕರು ಸಮಾಧಾನಪಟ್ಟು, ಪೆಟ್ಟಿಗೆಗಳನ್ನು ತೆರೆದರು. ಒಬ್ಬ ಕಾವಲುಗಾರನು ಮಿಠಾಯಿಯ ಪುಡಿಕೆಗಳನ್ನು ಮೈಲಿಗಿಟ್ಟಂತೆ

ಮಾಡಿ ಮಹಾರಾಜರಿಗೆ ಬಹುವಿನಯದಿಂದ ಮುಜುರೆಮಾಡಿ, ಒಂದು ಚೀಟಿಯನ್ನು ಮಹಾರಾಜರ ಕೈಯಲ್ಲಿ ಕೊಟ್ಟನು. ಕೂಡಲೆ ಮಹಾರಾಜರು ಕೀರ್ತಿಸಿಂಗನ ಗುರುತು ಹಿಡಿದು ಸಮಾಧಾನಪಟ್ಟರು. ರಣದೇವಿಯ ಸಂರಕ್ಷಣಕ್ಕಾಗಿ ಗಾಯಹೊಂದಿದ್ದ ಕೀರ್ತಿಸಿಂಗನ ಪರಿಚಯವನ್ನು ವಾಚಕರು ಇಷ್ಟರಲ್ಲಿ ಮರೆತಿರಲಿಕ್ಕಿಲ್ಲ. ಮುಂದೆ ಕೀರ್ತಿಸಿಂಗನು ಕ್ಷಣವಾದರೂ ವಿಲಂಬ ಮಾಡಲಿಲ್ಲ. ವಾಹಕರಿಗೆ ಪೆಟ್ಟಿಗೆಯನ್ನು ಮುಂದಕ್ಕೆ ಒಯ್ಯಲು ಹೇಳಿದನು. ಕೂಡಲೆ ಆ ತಂದೆ-ಮಕ್ಕಳಿಬ್ಬರು ಮಲಗಿಕೊಂಡಿದ್ದ ಪೆಟ್ಟಿಗೆಗಳೆರಡೂ ಹೋಗಿಬಿಟ್ಟವು. ಅತ್ತ ಬೈರಾಗಿಣಿಯರು ಗಿರಡಿಯ ಮೇಲೆ ಗಿರಡಿಯನ್ನು ಹೊರಳಿಸುತ್ತ ನಾ ಮೇಲು ನೀ ಮೇಲು ಎಂದು ಮೇಲಾಟವಾಡುತ್ತ ಹಾಡುತ್ತಲಿದ್ದರು. ಕೇಳುವವರಿಗೆ ಇತ್ತಕಡೆಯ ಸ್ಮೃತಿಯೇ ಇದ್ದಿಲ್ಲ. ಮೂರು ತಾಸು ರಾತ್ರಿಯಾಗುವವರೆಗೆ ಕಾವಲುಗಾರರು ಗಾಯನ ಕೇಳುವಲ್ಲಿ ಮಗ್ನರಾಗಿದ್ದರು. ಆ ಅವಧಿಯಲ್ಲಿ ಯಾರೂ ಮಹಾರಾಜರ ವಾಡೆಗೆ ಹೋಗಿ ಅವರ ಶೋಧವನ್ನು ಮಾಡಲಿಲ್ಲ. ನಾಲ್ಕೈದು ತಾಸು ರಾತ್ರಿಯ ಸುಮಾರಕ್ಕೆ ಪೋಲಾದಖಾನನೇ ಹೋಗಿ, ನೋಡಲು, ಮಹಾರಾಜರು ಸ್ವಸ್ಥ ಮಲಗಿರುವಂತೆ ಆತನಿಗೆ ತೋರಿತು.

ಮರುದಿವಸ ಬೆಳಗಾಯಿತು, ಎರಡು ತಾಸು ಹೊತ್ತು ಏರಿದರೂ ಮಹಾರಾಜರು ಇನ್ನೂ ಮಲಗಿಯೇ ಇದ್ದರು. ಅವರ ಕಾಲದೆಸೆಯಲ್ಲಿ ಒಬ್ಬ ಹುಡುಗನು ಕುಳಿತು ಕಾಲು ತಿಕ್ಕುತ್ತಿದ್ದನು. ಕಾವಲುಗಾರನು ಆ ಹುಡುಗನಿಗೆ—''ಯಾಕೆ? ಮಹಾರಾಜರು ಇನ್ನೂ ಎದ್ದಿಲ್ಲವೆ''ಂದು ಕೇಳಲು, ಆತನು—''ನಿನ್ನೆ ರಾತ್ರಿ ಮತ್ತೆ ಜಡ್ಡಾಗಿತ್ತು, ತಲೆ ನೋಯುತ್ತಿರುವ ದರಿಂದ ಮಲಗಿರುವರು'' ಎಂದು ಹೇಳಿದನು. ಕಾವಲುಗಾರನು ಹೆಚ್ಚಿಗೆ ವಿಚಾರಮಾಡದೆ ಹೊರಟುಹೋದನು. ಆತನಿಗೆ ಹುಡುಗನ ಮಾತು ಅಶಕ್ಯವಾಗಿ ತೋರಲಿಲ್ಲ. ಮುಂದೆ ಕೆಲವು ಹೊತ್ತಿನ ಮೇಲೆ ಹಿರೋಜಿ ಫರ್ಜಂದನು ಹಾಸಿಗೆಯಿಂದೆದ್ದು, ತನ್ನ ಚಣ್ಣವನ್ನೂ, ಮುಂಡಾಸವನ್ನೂ ಹಾಕಿಕೊಂಡು ಆ ಹುಡುಗನನ್ನು ಸಂಗಡ ಕರಕೊಂಡು ಹೊರಟನು. ಹೊರಗೆ ಹೋಗುವಾಗ ಆತನು ಅಲ್ಲಿಯ ನೌಕರರಿಗೂ, ಹುಜುರೆಯವರಿಗೂ— ''ಮಹಾ ರಾಜರ ಪ್ರಕೃತಿಯು ನಿನ್ನೆ ಅಸ್ವಸ್ಥವಾದ್ದರಿಂದ ಅವರಿಗೆ ಬೆಳತನಕ ನಿದ್ದೆಯಿಲ್ಲ. ಈಗ ಸ್ವಲ್ಪ ಜಂಪುಹತ್ತಿದೆ, ಒಳಗೆ ಯಾರೂ ಹೋಗಬಾರದು. ಈಗ ನಾವು ಔಷಧ ತೆಗೆದುಕೊಂಡು ಬರುವೆವು'' ಎಂದು ಹೇಳಿದನು. ಆತನು ಕಾವಲುಗಾರರಿಗೂ ಹೀಗೆಯೇ ಹೇಳುತ್ತ ನಡೆದನು. ಆತನು ರಾಮಸಿಂಗನ ಬಳಿಗೆ ಹೋಗಿ ಮಹಾರಾಜರು ಸುರಕ್ಷಿತ ಪಾರಾದದ್ದನ್ನು ಆತನಿಗೆ ಏಕಾಂತದಲ್ಲಿ ತಿಳಿಸಿ ತಾನು ಸ್ವದೇಶಕ್ಕೆ ತೆರಳಿದನು. ಬಹಳ ಹೊತ್ತಾದರೂ ಹಿರೋಜಿಯು ಬಾರದಿರುವದನ್ನು ನೋಡಿ ಕಾವಲುಗಾರರು ದಿಗಿಲುಬಿದ್ದು ವಾಡೆಗೆ ಹೋಗಿ ಹುಜುರೆ ಯನ್ನೂ, ಚಾಕರರನ್ನೂ ಮಹಾರಾಜರ ವಿಷಯವಾಗಿ ಕೇಳಿದರು. ಆಗ ಚಾಕರರು ಇನ್ನೂ ಮಹಾರಾಜರು ಮಲಗಿರುವರೆಂತಲೂ, ಹಿರೋಜಿಯು ಬರುವವರೆಗೆ ನಾವು ಒಳಗೆ ಹೋಗುವಹಾಗಿಲ್ಲವೆಂತಲೂ ಹೇಳಿದರು. ಅದನ್ನು ಕೇಳಿ ಕಾವಲುಗಾರರು ಗಾಬರಿಯಾದರು. ಆರುತಾಸು ಹೊತ್ತಾಗುತ್ತ ಬಂದಿದ್ದರೂ ಮಹಾರಾಜರು ಏಳದಿರುವದರಲ್ಲಿ ಏನೋ

ಮೋಸವಿರುತ್ತದೆಂದು ತಿಳಿದು ಅವರ ವಾಡೆಯನ್ನು ಹೊಕ್ಕರು; ಆದರೆ ಅಲ್ಲಿ ಯಾರಿದ್ದಾರೆ! ಮಹಾರಾಜರ ಹಾಸಿಗೆಯು ಬರಿಯದದೆ; ಸಂಭಾಜಿ ಮಹಾರಾಜರ ಸುಳವಿಲ್ಲ, ಚಾಕರರ ಸದ್ದಿಲ್ಲ, ಎಲ್ಲಿ ನೋಡಿದರೂ ಸ್ತಬ್ಧತೆಯು! ಅದನ್ನು ನೋಡಿ ಚಾಕರರ ಎದೆಯು ದಸಕ್ಕೆಂದಿತು. ಮಹಾರಾಜರು ತಮಗೆ ಮಂಕುಬೂದಿಯ ಹಚ್ಚಿ ಓಡಿಹೋದರೆಂದು ಅವರು ತಿಳಿದರು. ಈ ಸುದ್ದಿಯು ಹಾ ಹಾ ಅನ್ನುವದರೊಳಗಾಗಿ ಛಾವಣಿಯ ತುಂಬೆಲ್ಲ ಹಬ್ಬಿ, ಫೋಲಾದಖಾನನ ಕಿವಿಯವರೆಗೂ ಹೋಯಿತು. ಆಗ ಖಾನನಿಗುಂಟಾದ ಭಯವನ್ನು ವರ್ಣಿಸಲಾಸಲ್ಲ, ಆತನ ಹೃದಯವು ಕಂಪಿಸಿತು. ಕಾಲುಗಳು ಏಳದಾದವು. ಇನ್ನು ಬಾದಶಹರ ಮುಂದೆ ಯಾವ ಮೋರೆಯಿಂದ ನಿಂತುಕೊಳ್ಳಬೇಕೆಂದು ಆತನು ಚಿಂತಿಸಹತ್ತಿದನು. ಆತನ ಜನರು ನಾಲ್ಕೂ ಕಡೆಗೆ ಮಹಾರಾಜರನ್ನು ಹುಡುಕುವದಕ್ಕಾಗಿ ಧಾವಿಸಿದರು. ಫೋಲಾದಖಾನನು ವ್ಯರ್ಥ ಚಿಂತಿಸುತ್ತ ಕಾಲಹರಣ ಮಾಡುವಹಾಗಿದ್ದಿಲ್ಲ. ಆತನು ನಡೆದ ಸುದ್ದಿಯನ್ನು ತಟ್ಟನೆ ಬಾದಶಹನಿಗೆ ತಿಳಿಸುವದು ಅವಶ್ಯವಾಗಿತ್ತು; ಆದ್ದರಿಂದ ಆತನು ಓಡುತ್ತಹೋಗಿ ಬಾದಶಹನಿಗೆ ಮಹಾರಾಜರು ಅದೃಶ್ಯವಾದ ಸುದ್ದಿಯನ್ನು ಹೇಳಿದನು. ಅದನ್ನು ಕೇಳಿ ಬಾದಶಹನು ಸಂತಾಪದಿಂದ ಮುಂಗೈಯ್ಯನ್ನೇ ಕಡಿದುಕೊಂಡನು.

ಇತ್ತ ಮಹಾರಾಜರು ಮಲಗಿಕೊಂಡಿದ್ದ ಪೆಟ್ಟಿಗೆಯನ್ನೂ, ಸಂಭಾಜಿಯು ಮಲಗಿ ಕೊಂಡಿದ್ದ ಪೆಟ್ಟಿಗೆಯನ್ನೂ ಸೇವಕರು ಹೊತ್ತುಕೊಂಡು, ಉಳಿದ ಪೆಟ್ಟಿಗೆಗಳೊಡನೆ ವೇಗದಿಂದ ಯಮುನಾತೀರಕ್ಕೆ ಬಂದರು. ಆಗ ಮಬ್ಬುಗತ್ತಲಾಗಿತ್ತು. ಅಲ್ಲಿ ಭಿಕ್ಷುಕರ ಗುಂಪು ನೆರೆದಿತ್ತು ಸೇವಕರು ಮಿಠಾಯಿಯನ್ನು ಹಂಚಹತ್ತಿದರು. ಅಷ್ಟರಲ್ಲಿ ಮಹಾರಾಜರು ಪೆಟ್ಟಿಗೆಯಿಂದ ಹೊರಬಿದ್ದು ಸಂಭಾಜಿಯನ್ನು ಕರಕೊಂಡು ತಮ್ಮ ಜನರೊಡನೆ ಸಂಕೇತದ ಸ್ಥಳಕ್ಕೆ ಹೋದರು. ಅಲ್ಲಿ ಕುದುರೆಗಳು ಸಿದ್ಧವಾಗಿದ್ದವು. ಮಹಾರಾಜರು ಕುದುರೆಯನ್ನು ಹತ್ತಿ ಸಂಭಾಜಿಯನ್ನು ತಮ್ಮ ಮುಂದೆ ಕುಳ್ಳಿರಿಸಿಕೊಂಡರು. ಉಳಿದವರು ತಮ್ಮ ತಮ್ಮ ಕುದುರೆಗಳನ್ನು ಹತ್ತಿಕೊಂಡು ಮುಂದಕ್ಕೆ ಸಾಗಿದರು. ಸಂಕೇತದ ಸ್ಥಳಕ್ಕೆ ಹೋದಬಳಿಕ ಮಹಾರಾಜರೇ ಮೊದಲಾದವರು ಬೈರಾಗಿಯ ವೇಷಹಾಕಿಕೊಂಡು ಹೊರಟರು. ಅವರು ಒತ್ತರದಿಂದ ಮಾರ್ಗವನ್ನು ಕ್ರಮಿಸುತ್ತಲಿದ್ದರು. ಬೈರಾಗಿಗಳು ಹೀಗೆ ಕುದುರೆ ಹತ್ತಿಕೊಂಡು ಹೋಗುವದನ್ನು ನೋಡಿ ಮಾರ್ಗದಲ್ಲಿ ಎಷ್ಟೋ ಜನರು ಆಶ್ಚರ್ಯದಿಂದ ಅವರನ್ನು ನೋಡುತ್ತಲಿದ್ದರು. ಆದರೂ ''ನೀವು ಯಾರು? ಎಲ್ಲಿಗೆ ಹೋಗುವವರು? ಎಲ್ಲಿಂದ ಬಂದಿರಿ'' ಎಂದು ಪ್ರಶ್ನೆಮಾಡುವವರ ಹೊರತು ಹೆಚ್ಚಿನ ಪ್ರತಿಬಂಧವೇನು ಮಹಾರಾಜರಿಗೆ ಆಗಲಿಲ್ಲ. ಅಷ್ಟರಲ್ಲಿ ಮಹಾರಾಜರ ಶೋಧಕ್ಕಾಗಿ ಬಾದಶಹನು ಕಳಿಸಿದ್ದ ಹತ್ತುಹದಿನೈದು ಜನ ಮುಸಲ್ಮಾನ ರಾವುತರದೊಂದು ಗುಂಪು ಅವರಿಗೆ ಅಕಸ್ಮಾತ್ತಾಗಿ ಎದುರಾಯಿತು. ಆ ಗುಂಪಿನವರು ಒಮ್ಮೆಲೆ ಮಹಾರಾಜರ ಮೇಲೆ ಏರಿಬಂದರು; ಆದರೆ ನಾಲ್ವರು ಹದಿನೈದು ಜನರಿಗೆ ಈಡಾಗುವ ಬಗೆಯೆಂತು? ಆದರೂ ನಾಲ್ವರೇ ಮರಾಟರು ಹದಿನೈದು ಜನ ರಾವುತರೊಡನೆ ಕಾದತೊಡಗಿದರು. ಹೀಗೆ ಕಾದುತ್ತಿರಲು, ಇಬ್ಬರು ಮರಾಟರು ನೆಲಕ್ಕೆ ಬಿದ್ದರು. ಇದೊಂದು ದೊಡ್ಡ ಗಂಡಾಂತರ

ಒದಗಿದ್ದರಿಂದ, ಇದರೊಳಗಿಂದ ಪಾರಾಗುವದು ಕಠಿಣವೆಂದು ಮಹಾರಾಜರು ಎಣಿಸಹತ್ತಿದರು; ಆದರೂ ಅವರು ಎದೆಗುಂದದೆ ಶೌರ್ಯದಿಂದ ಕಾದುವದನ್ನು ನೋಡಿ ಮುಸಲ್ಮಾನ ರಾವುತರು ಬೆರಗಾದರು. ಒಬ್ಬರಿಗೂ ಮಹಾರಾಜರ ಮೇಲೆ ಏರಿಬರುವ ಧೈರ್ಯವಾಗಲೊಲ್ಲದು; ಅಷ್ಟರಲ್ಲಿ ಒಬ್ಬ ಮುಸಲ್ಮಾನ ಸರದಾರನು ಮಹಾರಾಜರ ಕಣ್ಣು ತಪ್ಪಿಸಿ ಅವರ ಹಿಂದೆಬಂದು, ಮಹಾರಾಜರ ಮೇಲೆ ಪ್ರಯೋಗಿಸುವದಕ್ಕಾಗಿ ತನ್ನ ಖಡ್ಗವನ್ನು ಎತ್ತಿದನು. ಇನ್ನು ಆತನ ಖಡ್ಗವು ಮಹಾರಾಜರ ಮಸ್ತಕದ ಮೇಲೆ ಬೀಳತಕ್ಕದ್ದು, ಅಷ್ಟರಲ್ಲಿ ಯಾರೋ ಕುದುರೆ ಓಡಿಸುತ್ತಬಂದು, ಆ ರಾವುತನ ಎತ್ತಿದ ಖಡ್ಗದ ಕೈಯನ್ನು ಅಲ್ಲಿಯೇ ತುಂಡರಿಸಲು, ''ಯಾ ಅಲ್ಲಾ'' ಎಂದು ಆತನು ನೆಲಕ್ಕೆ ಬಿದ್ದನು. ಅಷ್ಟರಲ್ಲಿ ಎಂಟುಜನ ರಾವುತರು ಎಲ್ಲಿಂದಲೋ ಬಂದು ಮುಸಲ್ಮಾನ ರಾವುತರ ಮೇಲೆ ಬಿದ್ದರು. ತಮ್ಮನ್ನು ಪ್ರಾಣಸಂಕಟದೊಳಗಿಂದ ಬದುಕಿಸಿದ ಮಹೋಪಕಾರಿಯು ಯಾರೆಂದು ಮಹಾರಾಜರು ಹಿಂದಿರುಗಿ ನೋಡುತ್ತಿರಲು, ಆ ನೂತನ ರಾವುತನು ಮುಸಲ್ಮಾನರ ಮೇಲೆ ಬಿದ್ದು ಒಬ್ಬೊಬ್ಬರಾಗಿ ತುಂಡರಿಸಹತ್ತಿದನು. ಆತನು ವೀರಾವೇಶಗೊಂಡಿದ್ದನು. ಆತನೂ ಹೊಸದಾಗಿ ಬಂದ ಆ ಎಂಟುಜನ ರಾವುತರೂ ಮುಸಲ್ಮಾನರ ಸಮಾಚಾರವನ್ನು ಚನ್ನಾಗಿ ತೆಗೆದು ಕೊಂಡರು. ಉಳಿದ ಮುಸಲ್ಮಾನ ರಾವುತರಲ್ಲಿ ಅರ್ಧಕ್ಕಿಂತ ಹೆಚ್ಚು ಜನರು ಸತ್ತರು. ಅಷ್ಟರಲ್ಲಿ ಆ ಮುಸ್ಮಲಾನ ರಾವುತರ ಮುಖ್ಯನು ಆವೇಶದಿಂದ ಏರಿಬಂದನು. ತಮ್ಮನ್ನು ಪ್ರಾಣಸಂಕಟದಿಂದ ಉಳಿಸಿದ ವೀರನಮೇಲೆ ಹೀಗೆ ಆ ಮುಖ್ಯನು ಏರಿ ಬರುವದನ್ನು ನೋಡಿ ಮಹಾರಾಜರು ತಮ್ಮ ಕುದುರೆಯನ್ನು ಆತನ ಮೇಲೆ ನೂಕಿದರು. ಅಷ್ಟರಲ್ಲಿ ಆ ಮುಖ್ಯನು ಮಹಾರಾಜರ ಪ್ರಾಣರಕ್ಷಕನನ್ನು ಖಡ್ಗದಿಂದ ಹೊಯ್ದನು. ಕಡತವು ಮರ್ಮಸ್ಥಾನಕ್ಕೆ ಬಿದ್ದು ಆ ವೀರನು ನೆಲಕ್ಕುರುಳಿದನು. ಅದನ್ನು ನೋಡಿ ಮಹಾರಾಜರು ಸಂತಾಪದಿಂದ ಆ ಮುಖ್ಯನ ಶಿರಸ್ಸನ್ನು ತುಂಡರಿಸಿದರು. ಹೀಗೆ ತಮ್ಮ ಮುಖ್ಯನು ನೆಲಕ್ಕುರುಳಿದ್ದನ್ನು ನೋಡಿ ಉಳಿದ ನಾಲ್ವರು ಮುಸಲ್ಮಾನ ರಾವುತರು ಕಾಲುದೆಗೆದರು. ಆಗ ಮಹಾರಾಜನು ಆ ಓಡುವವರ ಗೊಡವೆಗೆ ಹೋದೆ, ತಾವು ಕುದುರೆಯಿಂದ ಇಳಿದು ತಮ್ಮ ಪ್ರಾಣರಕ್ಷಕನ ಬಳಿಗೆ ಹೋಗಿ ಆತನನ್ನು ತೊಡೆಯಮೇಲೆ ಹಾಕಿಕೊಂಡರು. ಅದನ್ನು ನೋಡಿ ಹೊಸದಾಗಿ ಬಂದ ಸವಾರರಲ್ಲಿಯೊಬ್ಬನು ಗಂಭೀರ ಸ್ವರದಿಂದ—''ದೀನರಕ್ಷಕಾ, ಶಿವರಾಜಾ, ಧರ್ಮಮೂರ್ತೀ, ಇಂದಿಗೆ ನಾನು ಧನ್ಯಳಾದೆನು. ನನ್ನ ಮಗ ದುರ್ಜಯಸಿಂಗನೂ ಧನ್ಯನಾದನು'' ಎಂದು ನುಡಿದನು. ಹೀಗೆ ನುಡಿದವರು ಮಾತಾರಣದೇವಿಯೆಂದು ಮಹಾರಾಜರು ದನಿಯಮೇಲಿಂದ ಗುರುತು ಹಿಡಿದು, ಕುಳಿತಲ್ಲಿಯೇ ಭಕ್ತಿಯಿಂದ ಆಕೆಯನ್ನು ವಂದಿಸಿದರು.

# ಜಯಸಿಂಗನ ಮರಣೋನ್ಮುಖತೆ !

ತಾವು ಪ್ರಾಣಸಂಕಟಕ್ಕೆ ಗುರಿಯಾಗಿರುವಾಗ, ತಮ್ಮ ಪ್ರತ್ಯಕ್ಷ ಜನನಿಯವರಾದ ಪೂಜ್ಯ ಜೀಜಾಬಾಯಿಯವರು, ಅಥವಾ ಪ್ರತ್ಯಕ್ಷ ಅಂಬಾಭವಾನಿಯು ಮಾತಾರಣದೇವಿಯವರ ರೂಪದಿಂದ ಬಂದಂತಾಯಿತೆಂದು ಮಹಾರಾಜರು ಪರಮಾನಂದಪಟ್ಟರು. ಅವರ ಕಂಠವು ಸದ್ಗದಿತವಾಯಿತು. ಅವರು ತಮ್ಮ ಪ್ರಾಣರಕ್ಷಕನನ್ನು ಕೆಳಗಿಳಿಸಿ ಬರಲಾರದೆ ಮೇಲೆ ಹೇಳಿದಂತೆ ಕುಳಿತಲ್ಲಿಯೇ ಅತ್ಯಂತ ಭಕ್ತಿಯಿಂದ ಮಾತಾಜಿಗೆ ತಲೆಬಾಗಿ ವಂದಿಸಿ— "ಮಾತಾಜಿ, ಇಂದು ಶಿವಬಾನು ಹೊಸದಾಗಿ ನಿಮ್ಮ ಹೊಟ್ಟೆಯಲ್ಲಿ ಹುಟ್ಟಿದಂತಾಯಿತು. ಹೀಗೆ ನೀವು ನನಗೆ ಜನ್ಮಕೊಡುವ ಯೋಗವಿದ್ದದ್ದರಿಂದಲೇ ನನಗೆ ನೀವು ಯಾವಾಗಲೂ ನಮ್ಮ ಜನನಿಯ ಹಾಗೆ ಕಾಣುತ್ತಿದ್ದಿರಿ. ನೀವು ನನ್ನ ಬಳಿಯಲ್ಲಿರುವಾಗ ನನ್ನ ಜನನಿಯೇ ನನ್ನನ್ನು ಪರಿಪಾಲಿಸುತ್ತ ಇದ್ದಂತಾಗಿತ್ತು! ನಿಮ್ಮ ಮಾತೃವಾತ್ಸಲ್ಯವು ಎಷ್ಟು ಬಲಿಷ್ಠವಾದದ್ದು! ಹಸುವು ಎಳೆಗರುವಿನ ಹಂಬಲದಿಂದ ಧಾವಿಸಿ ಬರುವಂತೆ, ನೀವು ಶಿವಬಾನ ಹಂಬಲದಿಂದ ಆತನ ಪ್ರಾಣಸಂಕಟ ವನ್ನು ನಿವಾರಿಸುವದಕ್ಕಾಗಿ ಧಾವಿಸಿ ಬಂದಿರಿ! ನನ್ನ ಪ್ರಾಣರಕ್ಷಕನಾದ ಈ ನನ್ನ ಪ್ರಿಯ ಬಂಧುವು ನಿಮ್ಮ ಮಗನೇ? ಈತನ ಹೆಸರು ದುರ್ಜಯಸಿಂಗನೇ? ಈತನು ಅನ್ಯರಿಂದ ಜಯಿಸಲಶ್ಯಕ್ಯ ನಾದದ್ದರಿಂದಲೇ ಇಂದು ನನಗೆ ಪ್ರಾಣದಾನ ಮಾಡಿದನು! ಇಂಥ ವೀರನಿಗೆ–ಪರೋಪಕಾರ ದಕ್ಷನಿಗೆ–ಅನಿಮಿತ್ತ ಬಾಂಧವನಿಗೆ ಇಂಥ ಶೋಚನೀಯ ಸ್ಥಿತಿಯು ಒದಗಬೇಕೆ?" ಎಂದು ನುಡಿಯುತ್ತಿರಲು, ರಣದೇವಿಯು ಹತ್ತರ ಬಂದು— "ಮಹಾರಾಜ, ಇದು ಮಾತಾಡಿ ಕಾಲಹರಣ ಮಾಡತಕ್ಕ ಸಮಯವಲ್ಲ. ಏಳಿರಿಲ್ಲಿಂದ ನೀವು. ನಾವೆಲ್ಲ ದುರ್ಜಯಸಿಂಗನ ವ್ಯವಸ್ಥೆ ಮಾಡುವೆವು. ಆತನ ಜನ್ಮವು ಹ್ಯಾಗಿದ್ದರೂ ಕೃತಾರ್ಥ ವಾಗಿರುವದು. ಮಹಾತ್ಮನಾದ ನಿನ್ನ ಸೇವೆಮಾಡುವ ಯೋಗವಿದ್ದರೆ ತಲೆಯಮೇಲೆ ಕಲ್ಲು ಎತ್ತಿಹಾಕಿದರೂ ಈತನು ಸಾಯುವದಿಲ್ಲ. ನನಗೆ ನಿಮ್ಮ ದರ್ಶನವಾದದ್ದು ಇದು ಎರಡನೆಯ ಸಾರೆ; ಇನ್ನು ಮೂರನೆಯ ಸಾರೆ ನಿಮ್ಮ ದರ್ಶನವು ಆಗೇಆಗುವದು. ಆಗ ದುರ್ಜಯ ಸಿಂಗನೂ ನಿಮ್ಮ ದರ್ಶನಕ್ಕೆ ಬಂದರೆ, ಆಗ ಆತನನ್ನು ತಾವು ಬೇಕಾದಷ್ಟು ಅಭಿನಂದಿಸ ಬಹುದು. ಈಗ ನೀವು ಕುದುರೆಗಳನ್ನು ಬಿಟ್ಟು ಕಾಲುನಡಿಗೆಯಿಂದಲೇ ಮುಂದಕ್ಕೆ ಸಾಗತಕ್ಕದ್ದು. ಕುದುರೆಗಳು ಸಂಶಯಕ್ಕೆ ಕಾರಣವಾಗುತ್ತವೆ. ಬಾಲಕನಾದ ಸಂಭಾಜಿಯನ್ನು ಕರಕೊಂಡು ಹೋಗುವದು ಅದಕ್ಕೂ ಹೆಚ್ಚು ಸಂಶಯಾಸ್ಪದವು; ಆದ್ದರಿಂದ ಸಂಭಾಜಿಯನ್ನು ಅನುಕೂಲ ಸ್ಥಳದಲ್ಲಿ ಬಿಟ್ಟುಹೋಗುವದು ಅತ್ಯವಶ್ಯವು. ನೀವು ಈ ಕೀರ್ತಿಸಿಂಗನನ್ನೂ, ಹಿರೋಜಿ ಫರ್ಜಂದನನ್ನೂ ಸಂಗಡ ಕರಕೊಂಡು, ಬೈರಾಗಿಯ ವೇಷದಿಂದ ಈಗಲೇ ಮುಂದಕ್ಕೆ ಸಾಗಿರಿ. ನೀವು ಸ್ವಲ್ಪದೂರ ಹೋದಬಳಿಕ ಮಾರ್ಗದಲ್ಲಿಯೇ ಒಂದು ಬಾಲಾಜಿಯ ಗುಡಿಯು ಹತ್ತುವದು. ಅಲ್ಲಿ ಒಬ್ಬ ಮಹಂತರು ಇರುವರು. ಅವರಲ್ಲಿ ನೀವು ಗುಪ್ತವಾಗಿ ಹದಿನೈದು ದಿನಗಳವರೆಗೆ ಇರಬೇಕು. ಬಾದಶಹನ ಜನರು ಇಷ್ಟರಲ್ಲಿ ನಿಮ್ಮ ಬೆನ್ನಟ್ಟಿ ಬರುವರು. ಅವರ

ಕಣ್ಣಿಗೆ ಇಂಗು ಹಚ್ಚುವದು ಅವಶ್ಯವಾಗಿದೆ. ಹು, ಏಳಿರಿ ಇಲ್ಲಿಂದ ತಿರುಗಿ ಒಂದು ಮಾತಾಡಿದರೆ ಮಾತ್ರಾಗ್ನ ಭಂಗದ ದೋಷವು ನಿಮಗೆ ಬರುವದು, ದುರ್ಜಯನ ಚಿಂತೆಯನ್ನು ಬಿಟ್ಟು, ನೀವು ಸ್ವರಾಜ್ಯದ ಚಿಂತೆಯನ್ನು ಮಾಡಿರಿ'' ಎಂದು ನುಡಿದು, ದುರ್ಜಯಸಿಂಹನನ್ನು ತಮ್ಮ ತೊಡೆಯಮೇಲೆ ಮಲಗಿಸಿಕೊಂಡು ಮಹಾರಾಜರನ್ನು ಎಬ್ಬಿಸಿದರು. ಮಹಾರಾಜರು ಮಾತಾಜಿಯವರ ಚರಣಕ್ಕೆರಗಿ ಅವರ ಅಪ್ಪಣೆಯಂತೆ ಹೊರಟುಹೋದರು.

ಮಹಾರಾಜರು ತಮ್ಮ ಜನರೊಡನೆ ಬೈರಾಗಿಗಳ ಹಿಂಡಿನಲ್ಲಿ ಬೆರೆತು ತೀರ್ಥಾಟನೆ ಮಾಡುತ್ತ ಪ್ರತಿ ಒಂದು ತೀರ್ಥದಲ್ಲಿ ಯಾವತ್ತು ವಿಧಿಗಳನ್ನು ಯಥಾಸಾಂಗವಮಾಡಿ, ಕೈ ಬಿಗಿಹಿಡಿದು ದಾನಧರ್ಮ ಮಾಡುತ್ತ ನಡೆದರು. ಅವರು ತಮ್ಮ ಜನರೊಡನೆ ಮತ್ತೆ ಕೆಲವರನ್ನು ಬೈರಾಗಿಗಳ ವೇಷದಿಂದ ಸ್ವದೇಶಕ್ಕೆ ಹೋಗಹೇಳಿ, ತಮ್ಮ ಶೋಧ ನಡಿಸಿರುವ ಜನರಿಗೆ ತಮ್ಮ ಗೊತ್ತು ಹತ್ತಬಾರದೆಂದು ಮೂರು ಜನ ಕಾರಕೂನರು, ಇಬ್ಬರು ಮೂವರು ಹುಜರೆಯರು ಇವರೊಡನೆ ಸಾವಕಾಶ ತೀರ್ಥಯಾತ್ರೆ ಮಾಡುತ್ತ ಸಾಗಿದ್ದರು. ಅವರು ಮೊದಲು ಕಾಶಿಗೆ ಹೋದರು; ಅಲ್ಲಿಂದ ಮಥುರೆಗೆ ಬಂದರು. ಅಲ್ಲಿ ಮೋರೋಪಂತ ಪಿಂಗಳೆಯ ಆಪ್ತರಾದ ಕೃಷ್ಣಾಜಿಪಂತ, ಕಾಶೀಪಂತ, ಮಿಸಾಜಿಪಂತ ಎಂಬ ಮೂವರು ಬಂಧುಗಳು ಗುರುತಿನವರು ಭೆಟ್ಟಿಯಾದರು. ಮಹಾರಾಜರು ಅವರಿಗೆ ತಮ್ಮ ವೃತ್ತಾಂತವನ್ನು ಹೇಳಿ, ಸಂಭಾಜಿಯನ್ನು ನಿಮ್ಮ ಬಳಿಯಲ್ಲಿ ಇಟ್ಟುಕೊಳ್ಳುವಿರೇನೆಂದು ಕೇಳಿದರು. ಅದಕ್ಕೆ ಆ ಬಂಧುಗಳು ಸಂತೋಷದಿಂದ ಒಪ್ಪಿಕೊಳ್ಳಲು, ಮಹಾರಾಜರು ಸಂಭಾಜಿಯನ್ನು ಅಲ್ಲಿ ಬಿಟ್ಟು ಆ ಬಂಧುಗಳಿಗೆ— ''ನಾವು ಸ್ವದೇಶಕ್ಕೆ ಹೋದಬಳಿಕ ನಿಮಗೆ ಪತ್ರ ಕಳಿಸುವೆವು. ಆಗ ನೀವು ಸಂಭಾಜಿಯನ್ನು ಕರಕೊಂಡು ಸಕುಟುಂಬವಾಗಿ ಬರಬೇಕು. ನಿಮ್ಮ ಕಲ್ಯಾಣವಾದೀತು'' ಎಂದು ಹೇಳಿ, ಕೃಷ್ಣಾಜಿಪಂತನನ್ನು ತಮ್ಮ ಸಂಗಡ ತೀರ್ಥಯಾತ್ರೆಗೆ ಕರಕೊಂಡರು. ಈ ಕ್ಷೇತ್ರದಲ್ಲಿ ಮಹಾರಾಜರು ತಮ್ಮ ಗಡ್ಡ–ಮೀಸೆಗಳನ್ನೂ, ಚಂಡಿಕೆಯನ್ನೂ ಬೋಳಿಸಿಕೊಂಡು ಪೂರ್ಣ ಸನ್ಯಾಸಿಗಳಾದರು. ಮಾರ್ಗದಲ್ಲಿ ಹಲವು ವಿಘ್ನಗಳು ಒದಗಿದರೂ ಮಹಾರಾಜರು ಅವುಗಳೊಳ ಗಿಂದ ಪಾರಾಗಿ ಸುರಕ್ಷಿತವಾಗಿ ಔರಂಗಾಬಾದಕ್ಕೆ ಬಂದರು. ಅಲ್ಲಿ ಮಿರ್ಝಾರಾಜನು ಇದ್ದನು. ಮಹಾರಾಜರು ಮಿರ್ಝಾರಾಜನನ್ನು ಕಾಣಬೇಕೆಂದು ಅಲ್ಲಿಗೆ ಹೋದರು. ತನ್ನ ಪತ್ರದಂತೆ ಬಾದಶಹನು ಮಹಾರಾಜರೊಡನೆ ಸ್ನೇಹದಿಂದ ನಡಕೊಳ್ಳದೆ, ವಿಶ್ವಾಸಘಾತ ಮಾಡಿದ್ದನ್ನು ಕೇಳಿ ಆ ವೃದ್ಧವೀರನಿಗೆ ಬಹಳ ವ್ಯಸನವಾಯಿತು. ಆ ಸರಳ ಹೃದಯದ ರಜಪೂತನು ತಾನು ವಿಶ್ವಾಸಘಾತದ ಆರೋಪಕ್ಕೆ ಗುರಿಯಾದೆನೆಂಬ ಚಿಂತೆಯಿಂದ ಬೇನೆಬಿದ್ದನು. ದಿನದಿನಕ್ಕೆ ಆತನ ದೇಹವು ಕ್ಷೀಣವಾಗತೊಡಗಿತ್ತು. ದಕ್ಷಿಣದಲ್ಲಿ ಜಯಸಿಂಗರಾಜನ ಅಂತವಾದರೆ ಒಂದು ಅರಿಷ್ಟ ಹಿಂಗಿದ ಹಾಗಾಯಿತೆಂದು ಬಾದಶಹನು ತಿಳಿದಿದ್ದನು. ತಾನು ಹೀಗೆ ವಿಪದ್ಗ್ರಸ್ತನಾಗಿರುವಾಗ ಬಾದಶಹನು ತನ್ನ ಯೋಗಕ್ಷೇಮವ ತೆಗೆದುಕೊಳ್ಳದಿರುವದನ್ನು ನೋಡಿ ರಾಜನು ಮನಸ್ಸಿನಲ್ಲಿ ಸಣ್ಣಾಗಹತ್ತಿದನು. ಆತನು ಹೃದ್ರೋಗಪೀಡಿತನಾದನೆಂದು ಹೇಳಬಹುದು. ಹೀಗೆ ವ್ಯಾಧಿಪೀಡಿತನಾದ ವೃದ್ಧ ವೀರನನ್ನು ಕಾಣುವದಕ್ಕಾಗಿ ಮಹಾರಾಜರು

ಹೋದರು. ಶಿವಾಜಿರಾಜನು ತನ್ನನ್ನು ಕಾಣಲಿಕ್ಕೆ ಬೈರಾಗಿ ವೇಷದಿಂದ ಬಂದಿರುವನೆಂಬದನ್ನು, ತನ್ನ ಮಗನಾದ ಕಿರಾತಸಿಂಗನ ಮುಖಾಂತರ ಕೇಳಿ ಮಿರ್ಝಾರಾಜನಿಗೆ ಬಹಳ ಸಂತೋಷ ವಾಯಿತು. ಮಹಾರಾಷ್ಟ್ರ ವೀರನು ಬಾದಶಹನ ಬಿಂಕವನ್ನು ಚನ್ನಾಗಿ ಇಳಿಸಿದನೆಂದು ಮನಸ್ಸಿನಲ್ಲಿ ಅಂದುಕೊಂಡು ಆತನು ಸಂತೋಷಪಟ್ಟು, ಮಹಾರಾಜರನ್ನು ಆದರದಿಂದ ಬರಮಾಡಿಕೊಂಡನು.

ಮಿರ್ಝಾರಾಜನ ಕ್ಷೀಣದೆಸೆಯನ್ನು ನೋಡಿ ಮಹಾರಾಜರ ಕೋಮಲ ಹೃದಯವು ಕರಗಿತು. ಅವರು ವ್ಯಥಿತಾಂತಃಕರಣದಿಂದ ಮಿರ್ಝಾನ ಚರಣಕ್ಕೆರಗುವಾಗ ಕಣ್ಣೀರುದುರಿದವು. ಇದನ್ನು ನೋಡಿ ಜಯಸಿಂಗನ ಕಣ್ಣುಗಳಲ್ಲಿಯೂ ನೀರು ಬಂದವು. ಆತನು ಗದ್ಗದಕಂಠ ದಿಂದ ಮಹಾರಾಜರ ತಲೆಯಮೇಲೆ ಕೈಯಿಟ್ಟು ಅವರನ್ನು ಮೇಲಕ್ಕೆಬ್ಬಿಸಿ—

ಜಯಸಿಂಗ— ''ಶಿವರಾಯಾ, ನಿನ್ನ ಸೌಜನ್ಯವಾದರೂ ಎಷ್ಟದು! ನನ್ನ ಈ ವಿಪನ್ನ ಸ್ಥಿತಿಯನ್ನು ನೋಡಿ ನನ್ನ ಮಗನಾದ ರಾಮಸಿಂಗನಂತೆ ನೀನು ವ್ಯಸನಪಡುವೆಯಲ್ಲ! ಸ್ವಧರ್ಮೋದ್ಧಾರಕಾ, ಇಂದಿಗೆ ನೀನೇ ನನ್ನ ಮಗನು. ದುಷ್ಟ ಬಾದಶಹನ ದುರಾಲೋಚನೆ ಯಿಂದ ನಾನು ಪುತ್ರಹೀನನಾಗಿ ಪ್ರಾಣಬಿಡುತ್ತಿರುವಾಗ, ಪುತ್ರನಂತೆ ನೀನು ನನ್ನನ್ನು ಉದ್ಧರಿಸುವದಕ್ಕಾಗಿ ಬಂದೆ! ಇನ್ನು ನಾನು ಸಮಾಧಾನದಿಂದ ಪ್ರಾಣವನ್ನು ತ್ಯಜಿಸುವೆನು. ಎದ್ದು ಸನ್ಮಾನದಿಂದ ನಿನ್ನನ್ನು ಆಲಿಂಗಿಸಲು ನನ್ನಲ್ಲಿ ಸಾಮರ್ಥ್ಯವಿಲ್ಲ, ಈ ದೋಷಕ್ಕಾಗಿ ನನ್ನನ್ನು ಕ್ಷಮಿಸು.''

ಮಹಾರಾಜರು—ಮಹಾರಾಜ, ಮಗನಲ್ಲಿಯೂ ಇಷ್ಟು ಸಂಕೋಚವೆ? ನನಗೆ ನೀವು ನಮ್ಮ ತಂದೆಯ ಸಮಾನರು. ನನ್ನನ್ನು ತಾವು ಮಗನಂತೆ ಭಾವಿಸಿದ್ದಕ್ಕಾಗಿ ನಾನು ಧನ್ಯನಾದೆನು. ಮಹಾರಾಜರ ಪ್ರಕೃತಿಯ ಪರಿಣಾಮವು ಈ ಮನೆಗೆ ಬಂದೀತೆಂದು ನಾನು ಕನಸು-ಮನಸು ಗಳಲ್ಲಿಯೂ ಎಣಿಸಿದ್ದಿಲ್ಲ.

ಜಯಸಿಂಗ-ಶಿವರಾಯ, ನನ್ನ ಮೇಲಿನ ವಿಶ್ವಾಸದಿಂದ ನೀನು ದಿಲ್ಲಿಗೆ ಹೋಗಲಿಲ್ಲವೆ? ಇಂಥ ನಿನ್ನನ್ನು ಬಾದಶಹನು ಘಾತಿಸಲು ಯತ್ನಿಸಿದ ಬಳಿಕ, ನಾನು ವಿಶ್ವಾಸಘಾತಕಿಯಾದೆನಲ್ಲ! ರಜಪೂತವೀರರಿಗೆ ಈ ಕಲಂಕವು ದುಸ್ಸಹವಾದದ್ದು. ಈ ಕಲಂಕವು ತಗಲಿದ ದಿವಸವೇ ನಾನು ದೇಹವನ್ನು ತ್ಯಜಿಸುವ ಪ್ರತಿಜ್ಞೆ ಮಾಡಿರುತ್ತೇನೆ.

ಮಹಾರಾಜರು— (ಕಿವಿಗಳ ಮೇಲೆ ಕೈಯಿಟ್ಟುಕೊಂಡು) ಶಿವ ಶಿವ! ಮಹಾರಾಜರು ಇಂಥ ಮಾತುಗಳನ್ನಾಡಬಾರದು. ತಮ್ಮ ನಿರ್ಮಲ ಹೃದಯವನ್ನು ನಾನು ಸಂಪೂರ್ಣವಾಗಿ ಅರಿತಿರುವೆನು. ಮಹಾರಾಜ, ಎಂಥ ಘೋರ ಪ್ರತಿಜ್ಞೆಯಿದು! ನನ್ನ ಕಾರಾಗೃಹವಾಸಕ್ಕೆ ನನ್ನ ಪ್ರಾರಬ್ಧವೂ, ಔರಂಗಜೇಬನ ದುಷ್ಟತನವೂ ಕಾರಣವಾಗಿರುವದು. ತಮ್ಮ ಆಶೀರ್ವಾದ ದಿಂದಲೇ ನಾನು ಈಗ ಪಾರಾಗಿ ಬಂದಿರುವೆನು. ಇನ್ನು ತಾವು ಆ ದುಷ್ಟ ಪ್ರತಿಜ್ಞೆಯ ಸ್ಮರಣವನ್ನು ಕೂಡಾ ಮಾಡಲಾಗದು. ಔರಂಗಜೇಬನ ಸೇವೆಯ ವಿಷಯವಾಗಿ ತಾವು ತಿರಸ್ಕಾರಪಡುತ್ತಿದ್ದರೆ, ರಾಜಸ್ಥಾನದಲ್ಲಿ ಸ್ವತಂತ್ರರಾಗಿ ಸಿಂಹಾಸನಾರೂಢರಾಗಬೇಕು. ನಾನು

ತಮ್ಮ ಸೇವಾತತ್ಪರನಾಗಿರುವೆನು. ತಾವು ಬಾದಶಹನ ಮೇಲಿನ ಮನಸ್ಸು ತೆಗೆದರೆ, ಇಂದಿಗೇ ರಾಜಸ್ಥಾನದಲ್ಲಿ ಒಕ್ಕಟ್ಟು ಉಂಟಾಗಿ, ಯವನರ ಅಲ್ಪ ಬಲವು ನಷ್ಟವಾಗುವಲ್ಲಿ ಸಂಶಯವೇನು?

ಜಯಸಿಂಗ— ವೀರನೇ, ನೀನಂದಂತೆಯೇ ಸ್ವಲ್ಪ ದಿವಸಗಳಲ್ಲಿ ಆಗುವದು; ಆದರೆ ವೃದ್ಧನಾದ ನಾನು ಅದಕ್ಕಾಗಿ ಪ್ರತಿಜ್ಞಾ ಭಂಗಮಾಡಿಕೊಳ್ಳುವ ಕಾರಣವಿಲ್ಲ. ಯವನರ ದುಷ್ಕರ್ಮವೇ ಅವರನ್ನು ನಾಶಗೊಳಿಸುತ್ತಿರಲು, ನಾನು ಬುದ್ಧಿಪೂರ್ವಕ ಬದುಕಿ ಉಳಿಯುವದರ ಅವಶ್ಯವೇನು? ಶಿವಬಾ, ನಮ್ಮಂಥ ವೃದ್ಧರು ಕಷ್ಟಪಟ್ಟು ಸಂಪಾದಿಸಿದ್ದರಲ್ಲಿ ನಿಮ್ಮಂಥ ತರುಣರು ಸಂತುಷ್ಟರಾಗುವದಕ್ಕಿಂತ, ಸ್ವಂತ ಪೌರುಷದಿಂದ ನೀವು ಸ್ವಾತಂತ್ರ್ಯವ ಸಂಪಾದಿಸಿ ಸಂತೋಷಪಡಿರಿ. ಭರತಭೂಮಿಯಲ್ಲಿ ನಿಮ್ಮಂಥ ಸತ್ವಶಾಲಿಗಳ ಪರಂಪರೆಯು ಇಷ್ಟವಾಗಿರುವದಲ್ಲದೆ, ಗಳಿಸಿಟ್ಟಿದ್ದರ ಮೇಲೆ ಚಕ್ಕಂದವಾಡುವವರ ಪರಂಪರೆಯೂ, ಐಶ್ವರ್ಯಲೋಲುಪರ ಪರಂಪರೆಯೂ ಇಷ್ಟವಾಗಿರುವದಿಲ್ಲ. ನನ್ನ ಪ್ರತಿಜ್ಞಾಭಂಗ ಮಾಡಿಸುವದು ನಿನ್ನಂಥ ಸತ್ವಶಾಲಿಗೆ ಭೂಷಣವಲ್ಲ. ಯವನರ ನಾಶಕಾಲವು ಒದಗಿರುವದ ರಿಂದಲೇ, ಅಕಬರ ಬಾದಶಹನಂಥ ಮಹಾತ್ಮರೂ, ಬಾಬರನಂಥ ವೀರರೂ, ಹುಮಾಯೂನನಂಥ ಉದಾರರೂ ಮೊಗಲರಲ್ಲಿ ಉತ್ಪನ್ನರಾಗದಾದರು! ಮೊಗಲರ ದುಷ್ಟ ಮಹತ್ವಾಕಾಂಕ್ಷೆಯು ಹೆಚ್ಚಿತು; ಅವರ ಪರಧರ್ಮದ್ವೇಷವು ಮಿತಿಮೀರಿತು; ಪ್ರಜಾತಾಪದ ಅಭಿವೃದ್ಧಿಯಾಯಿತು; ಅಂದಬಳಿಕ ಅವರ ನಾಶವಾಗದೆ ಹೇಗೆ ಹೋಗುವದು? ಈ ಔರಂಗಜೇಬನ ಅಧಿಕಾರದ ಅಭಿವೃದ್ಧಿಯಾದಂತೆ ತೋರುತ್ತಿದ್ದರೂ, ಆ ಅಧಿಕಾರದ ಬೇರುಗಳಿಗೆ ಬಾದಶಹನ ಹಲವು ಪಾಪರೂಪ ಗೆದ್ದಲಿಗಳು ಹತ್ತಿರುವವೆಂಬದನ್ನು ಮರೆಯ ಲಾಗದು. ಕಾಲಕ್ಕನುಸರಿ ಆಗುವದು ಆಗುತ್ತಿರುವಾಗ, ನಾನು ಬದುಕಿ ಮಾಡುವದೇನು ಹೇಳು. ವಶಿಷ್ಠ-ಯಾಜ್ಞವಲ್ಕ್ಯಾದಿ ಋಷಿಗಳು ಅದೃಶ್ಯರಾದರು; ಶ್ರೀರಾಮ, ಶ್ರೀಕೃಷ್ಣ ಆದಿ ಅವತಾರಿಕ ಪುರುಷರು ಮುಗಿದುಹೋದರು; ನಳ, ನಹುಷ, ಪುರೂರವಾದಿ ಧರ್ಮಿಷ್ಠ ರಾಜರು ಕಾಣದಾದರು; ಆದರೆ ಅವರ ಕೀರ್ತಿಯು ಈವೊತ್ತಿಗೂ ಜಗತ್ತಿನಲ್ಲಿ ಉಳಿದಿರುವದು. ಅದರಂತೆ ನಾವೆಲ್ಲರೂ ಕೀರ್ತಿಶೇಷರಾಗತಕ್ಕದ್ದು; ಆದರೆ ವೀರಾಗ್ರಣಿಯಾದ ಶಿವರಾಯ, ದುರ್ದೈವದಿಂದ ಕೀರ್ತಿಶೇಷರಾಗುವಂಥ ಕಾರ್ಯಗಳು ನನ್ನಿಂದ ಒದಗಲಿಲ್ಲ. ನಿನ್ನಂತೆ ಸ್ವಾರ್ಥವನ್ನು ತ್ಯಜಿಸಿ, ದೇಶೋದ್ಧಾರಕ್ಕಾಗಿ ನಾನು ಪ್ರಾಯದಲ್ಲಿ ಯತ್ನಿಸಿದ್ದರೆ, ದೊಡ್ಡ ಕಾರ್ಯವಾಗಬಹುದಾಗಿತ್ತು; ಆದರೆ ಸ್ವಾರ್ಥಮೂಲವಾದ ಯವನಸೇವೆಯಲ್ಲಿಯೇ ನನ್ನ ಕಾಲಕ್ರಮಣವಾಯಿತು. ಊರಲ್ಲಿದ್ದಾಗ ಕೀರ್ತಿಪ್ರದ ಕಾರ್ಯಗಳನ್ನು ಮಾಡದ ನಾನು, ಗೋರಿಗೆ ಹೋಗುವಾಗ ಅಂಥ ಕಾರ್ಯಗಳನ್ನು ಮಾಡಬಹುದೆ? ಈಗಿನ ಪಶ್ಚಾತ್ತಾಪ ರೂಪವಾದ ಅಗ್ನಿಯಲ್ಲಿ ನನ್ನ ಮಲಿನವಾದ ಆತ್ಮವನ್ನು ಈಡಾಡಿ ಅದರಲ್ಲಿಯ ದೋಷವನ್ನು ಕಳೆದುಕೊಳ್ಳುವ ನನ್ನ ಕಾರ್ಯಕ್ಕೆ ಪವಿತ್ರಾತ್ಮನಾದ ನೀನು ಪ್ರತಿಬಂಧಿಸುವದು ನ್ಯಾಯವಾಗ ಬಹುದೇ ಹೇಗೆ ನೀನೇ ಹೇಳು. ಧನ್ಯಪುರುಷಾ, ಧರ್ಮೋದ್ಧಾರಕಾ, ಹಾಳು ಮೋಹವನ್ನು

ಬಿಡು; ವೃದ್ಧನಾದ ನನ್ನ ಯಾಚನೆಗೆ ಕಿವಿಗೊಟ್ಟು ನಿನ್ನ ತೊಡೆಯನ್ನು ನನಗೆ ಕೊಡು. ಅದರ ಮೇಲೆ ತಲೆಯಿಟ್ಟು, ನಿನ್ನ ಪವಿತ್ರಮೂರ್ತಿಯನ್ನು ಕಣ್ಣುಗಳಿಂದ ನೋಡುತ್ತ ಮನಸ್ಸಿನಲ್ಲಿ ಪರಮಾತ್ಮನ ಧ್ಯಾನಮಾಡುತ್ತ ಆತ್ಮವನ್ನು ತ್ಯಜಿಸುವೆನು!

ಈ ಮೇರೆಗೆ ನುಡಿಯುವಾಗ ಆ ವೃದ್ಧ ವೀರನ ಕಣ್ಣುಗಳೊಳಗಿಂದ ನೀರುಗಳು ಸುರಿಯಹತ್ತಿದವು. ಆಗ ಮಹಾರಾಜರು ಆತನಿಗೆ ರಾಮಸಿಂಗನಿಗಿಂತಲೂ ಪ್ರಿಯರಾಗಿ ತೋರಿದರು. ಮಿರ್ಝಾರಾಜನ ಈ ನಿರ್ಮಲ ಹೃದಯದ ಉಜ್ವಲೋದ್ಗಾರಗಳನ್ನು ಕೇಳಿ ಮೊದಲೇ ಸಹೃದಯರಾಗಿದ್ದ ಮಹಾರಾಜರ ಕಣ್ಣುಗಳಲ್ಲಿ ನೀರುಗಳು ದಡಗುಟ್ಟಿ ಹರಿಯಹತ್ತಿದ್ದವು. ಅವರು ತಟ್ಟನೇ ಮುಂದಕ್ಕೆ ಸರಿದು ಜಯಸಿಂಗನ ತಲೆಗೆ ತೊಡೆಕೊಟ್ಟರು. ಆಗ ಮಿರ್ಝಾರಾಜನು ಕಣ್ಣೀರು ಸುರಿಸುವ ಮಹಾರಾಜರನ್ನು ನೋಡುತ್ತ ಗದ್ಗದಿತ ಕಂಠದಿಂದ— ''ದಾಮೋದರಾ, ವಿಶ್ವಂಬರಾ, ಜಗದೀಶ್ವರಾ, ನಿನಗೆ ಅನಂತ ಪ್ರಣಾಮಗಳಿರಲಿ. ನನ್ನಿಂದ ಅನಂತ ಅಪರಾಧ ಗಳಾಗಿರಬಹುದು; ಆದರೆ ಕ್ಷಮಾಶೀಲನಾದದ್ದರಿಂದ ಅವನ್ನೆಲ್ಲ ಕ್ಷಮಿಸಿ ನನ್ನನ್ನು ಕೃಪಾದೃಷ್ಟಿ ಯಿಂದ ಅವಲೋಕಿಸು. ನನ್ನ ದೇಹತ್ಯಾಗದ ಪ್ರತಿಜ್ಞೆಯನ್ನು, ಪ್ರತ್ಯಕ್ಷ ಶಿವನವತಾರವಾಗಿದ್ದ ಶಿವರಾಯನ ತೊಡೆಯಮೇಲೆ ಪೂರ್ಣಮಾಡುವ ಯೋಗವನ್ನು ತಂದದ್ದರಿಂದ ನನ್ನ ಮೇಲೆ ನಿನ್ನ ಕೃಪಾದೃಷ್ಟಿಯು ಇರುವದೆಂದು ನಾನು ಭಾವಿಸಿದ್ದೇನೆ. ಶಿವರಾಜನ ಈ ಉಪಕೃತಿಯನ್ನು ತೀರಿಸುವ ಭಾರವು ನಿನ್ನನ್ನೇ ಕೂಡಿಯದೆ. ಆ ದೈವಶಾಲಿಗೆ ತಪಸ್ಸಿದ್ಧ ಫಲಗಳು ಕೈಕಟ್ಟಿಕೊಂಡು ನಿಂತಿರುವಾಗ, ನನ್ನ ಪ್ರಾರ್ಥನೆಯ ಅವಶ್ಯಕತೆಯು ಇಲ್ಲದಿದ್ದರೂ ಕರುಣಾಳುವಾದ ನಿನ್ನನ್ನು ನಾನು ಪ್ರಾರ್ಥಿಸದೇ ಇರಲಾರೆನು. ಶಿವರಾಜನು ಸ್ವರಾಜ್ಯ ಪ್ರತಿಷ್ಠಾಪಕನಾಗಲಿ, ಛತ್ರಪತಿ ಯಾಗಲಿ, ಕ್ಷತ್ರಿಯ ಕುಲಾವಸಂತನೆನಿಸಲಿ! ಆತನ ಸಂತತಿಯವರು ನೂರಾರು ವರ್ಷ ರಾಜ್ಯವಾಳಲಿ!

ಹೀಗೆ ಪ್ರಾರ್ಥಿಸುವಾಗ ಮಿರ್ಝಾರಾಜನ ಕಂಠ ಬಿಗಿದು ಮಾತುಗಳು ಹೊರಡದಾದವು. ಆತನ ಶಕ್ತಿಪಾತವಾಗಿ ಮಾತಾಡುವ ತ್ರಾಣವೂ ಇಲ್ಲದಾಯಿತು. ಆತನು ವಾತ್ಸಲ್ಯದಿಂದ ಶಿವರಾಯನನ್ನು ನೋಡುತ್ತ—''ನಾರಾಯಣ, ನಾರಾಯಣ, ನಾರಾಯಣ, ರಾಮ, ರಾಮ, ರಾಮ.......'' ಎಂದು ಮಂದಸ್ವರದಿಂದ ಉಚ್ಚರಿಸಿ, ಕಣ್ಣುಗಳನ್ನು ಮುಚ್ಚಿದನು. ಸ್ವಲ್ಪ ಹೊತ್ತಿನಲ್ಲಿಯೇ ಸರಳ ಹೃದಯದ ಆ ವೀರನ ಪ್ರಾಣೋತ್ಕ್ರಮಣವಾಯಿತು. ಅದನ್ನು ನೋಡಿ ಮಹಾರಾಜರಿಗೆ ಅತ್ಯಂತ ವ್ಯಸನವಾಯಿತು. ಮಹಾರಾಜರು ಮಗನಂತೆ ಜಯಸಿಂಗನ ಮುಂದಿನ ವ್ಯವಸ್ಥೆಯನ್ನು, ಕಿರಾತಸಿಂಗನ ಮುಖಾಂತರ ಮಾಡಿಸಿ, ಸ್ವದೇಶಕ್ಕೆ ಬೈರಾಗಿಯ ವೇಷದಿಂದಲೇ ತೆರಳಿದರು!

# ಪ್ರತಾಪ ಪ್ರದರ್ಶನ

ಔರಂಗಜೇಬ ಬಾದಶಹನು ಮಹಾರಾಜರನ್ನು ಪ್ರತಿಬಂಧದಲ್ಲಿಟ್ಟನೆಂಬ ಸುದ್ದಿಯನ್ನು ಕೇಳಿದಕೂಡಲೆ, ಇತ್ತ ಮರಾಟರು ಪುನಃ ಮೊಗಲರಾಜ್ಯದಲ್ಲಿ ಗೊಂದಲ ಹಾಕಹತ್ತಿದರು; ಮುಂದೆ ಮಹಾರಾಜರು ಪ್ರತಿಬಂಧದೊಳಗಿಂದ ಪಾರಾಗಿ ಬಂದರೆಂಬದನ್ನು ಕೇಳಿದಬಳಿ ಕಂತು, ಅವರ ವೀರಾವೇಶವೂ ಹೆಚ್ಚಿತು; ಅವರು ನಾಲ್ಕೂಕಡೆಯಿಂದ ಮೊಗಲರನ್ನು ಮುತ್ತಿ ಹಸಿದ ತೋಳಗಳಂತೆ ಹರಿಯಹತ್ತಿದರು. ಮಿರ್ಝಾರಾಜನನ್ನೂ, ದಿಲೇರಖಾನನನ್ನೂ, ಇಷ್ಟು ದೊಡ್ಡ ಸೈನ್ಯಕೊಟ್ಟು ದಕ್ಷಿಣಕ್ಕೆ ಕಳಿಸಿದರೂ, ಪರಿಣಾಮದಲ್ಲಿ ಮಹತ್ವದ ಕಾರ್ಯವೇನೂ ಆಗದ್ದರಿಂದ, ಬಾದಶಹನಿಗೆ ಅಸಮಾಧಾನವಾಯಿತು. ಅದರಲ್ಲಿ ಮಹಾರಾಜರು ತನ್ನ ಪ್ರತಿಬಂಧದಿಂದ ಪಾರಾಗಿ ಹೋದದ್ದರಿಂದಂತು ಆತನಿಗೆ ಬಹಳ ವ್ಯಸನವಾಯಿತು. ಆತನು ಮಿರ್ಝಾರಾಜನ ಮೇಲೆ ಸಿಟ್ಟಾಗಿ ಆತನನ್ನು ಹಿಂದಕ್ಕೆ ಕರಿಸಿಕೊಂಡು ಶಹಾಜಾದಾ ಮುಅಝ್ಝಿಮನನ್ನೂ, ಜಸವಂತಸಿಂಗನನ್ನೂ ದಕ್ಷಿಣದ ಸುಬೇದಾರನನ್ನಾಗಿ ನಿಯಮಿಸಿ ಕಳಿಸಿದನು. ಬಾದಶಹನು ಇವರಿಬ್ಬರನ್ನೂ ದಕ್ಷಿಣಕ್ಕೆ ಕಳಿಸುವಾಗ ಹೇಳಿದ್ದೇನಂದರೆ— "ನೀವು ಶಿವಾಜಿಯ ಗೊಡವಿಗೆ ಸಹಸಾ ಮೇಲುಬಿದ್ದು ಹೋಗಬೇಡಿರಿ. ಆತನೊಡನೆ ಹೆಣಗುವದು ನಿಮ್ಮಿಂದಾಗಲಾರದು. ಆತನು ಈವರೆಗೆ ಹಲವು ಜನ ಸರದಾರರನ್ನು ಗೊತ್ತಿಗೆ ಹಚ್ಚಿರುವನು. ಅದರಂತೆ ನಿಮ್ಮ ಅವಸ್ಥೆಯಾದರೆ ದುರ್ಲೌಕಿಕವಾಗಿ ಬಾದಶಾಹಿಗೆ ಅಪಾಯವು ಒದಗೀತು; ಆದ್ದರಿಂದ ಆತನೊಡನೆ ಸ್ನೇಹಬಳಸಿ ಅತ್ತಕಡೆಯ ನಮ್ಮ ಪ್ರಾಂತಗಳನ್ನು ಕಾಯ್ದುಕೊಳ್ಳಿರಿ," ಎಂದು ಹೇಳಿದ್ದನು. ಅದರಂತೆ ಶಹಜಾದಾನು ಮಹಾರಾಜ ರೊಡನೆ ಅವರಿಗೆ ಅನುಕೂಲವಾದ ಒಡಂಬಡಿಕೆಯನ್ನು ಮಾಡಿಕೊಂಡನು.

ಶಹಾಜಾದಾನೊಡನೆ ಮಾಡಿಕೊಂಡ ಈ ಒಡಂಬಡಿಕೆಯಿಂದ ಮಹಾರಾಜರಿಗೆ ಬಹುತರ ಅವರ ಮೊದಲಿನ ರಾಜ್ಯವೆಲ್ಲ ಕೈಸೇರಿದಂತಾಯಿತು; ಆದರೆ ಪುರಂದರ, ಸಿಂಹಗಡ ಎಂಬ ಎರಡು ದುರ್ಗಗಳು ಮಾತ್ರ ಅವರ ಕೈಸೇರಲಿಲ್ಲ. ಈ ದುರ್ಗಗಳು ಬಾದಶಹನ ಕೈಯಲ್ಲಿದ್ದದ್ದರಿಂದ ಮಹಾರಾಜರ ರಾಜ್ಯದ ಮುಗದಾಣವೇ ಬಾದಶಹನ ಕೈಯಲ್ಲಿದ್ದಂತಾಗಿತ್ತು ಆದರೆ ಶಹಾಜಾದಾನೊಡನೆ ಮಾಡಿಕೊಂಡ ಒಡಂಬಡಿಕೆಯ ಮೂಲಕ ಅವನ್ನು ತಕ್ಕೊಳ್ಳಲಿಕ್ಕೆ ಮಹಾರಾಜರಿಗೆ ಬರುವಹಾಗಿದ್ದಿಲ್ಲ. ಹೀಗೆ ಸ್ವಲ್ಪಕಾಲವು ಕ್ರಮಿಸುತ್ತಿರಲು, ಬಾದಶಹನಿಗೆ ಮಹಾರಾಜರ ಒಡಂಬಡಿಕೆಯ ಸಂಶಯವು ಉತ್ಪನ್ನವಾಯಿತು. ಜಸವಂತಸಿಂಗನನ್ನೂ, ಶಹಾಜಾದಸಿಂಗನನ್ನೂ ಶಿವಾಜಿಯು ಮರಳು ಮಾಡಿ ತನ್ನನ್ನು ಮೋಸಗೊಳಿಸುವದಕ್ಕಾಗಿಯೇ ಈ ಒಡಂಬಡಿಕೆ ಮಾಡಿಕೊಂಡಿರುವನೆಂದು ತಿಳಿದು, ಅದನ್ನು ಮುರಿಯಬೇಕೆಂದು ಆತನು ಶಹಜಾದಾನನ್ನು ಅಜ್ಞಾಪಿಸಿದನು. ಇದರಿಂದ ಮಹಾರಾಜರಿಗೆ ಅಸಮಾಧಾನವಾಗಲಿಲ್ಲ. ಸುಮ್ಮನೆ ಕೈಮುಚ್ಚಿಕೊಂಡು ಕುಳಿತು ಅವರಿಗೆ ಬೇಸರ ಬಂದಿತು. ಅವರು ಕೂಡಲೆ ಸಿಂಹಗಡವನ್ನು ತಕ್ಕೊಳ್ಳುವದಕ್ಕಾಗಿ ತಾನಾಜಿ ಮಾಲಸುರೆಯನ್ನು ಕಳಿಸಿದರು. ಆ ವೀರನು

ಈ ದುರ್ಗವನ್ನು ಕೈಸೇರಿಸಿಕೊಳ್ಳುವದಕ್ಕಾಗಿ ಮಾಡಿದ ಸಾಹಸವನ್ನು ನಮ್ಮ ''ಕಮಲಕುಮಾರಿ'' ಯೆಂಬ ಸುರಸ ಕಾದಂಬರಿಯನ್ನು ಓದಿದ ವಾಚಕರು ಅರಿತುಕೊಂಡಿರಬಹುದು. ಸಿಂಹಗಡವು ವಶವಾದಬಳಿಕ ಪುರಂದರ ದುರ್ಗವನ್ನೂ ಮಹಾರಾಜರು ಸ್ವಾಧೀನಪಡಿಸಿಕೊಂಡರು. ಮೊಗಲ ರಾಜ್ಯದೊಳಗಿನ ಸುರತ ಪಟ್ಟಣವನ್ನು ಸುಲಿದು ಅವರು ಅಗಣಿತ ದ್ರವ್ಯವನ್ನು ಹೇರಿಕೊಂಡು ಹೋದರು. ಇದನ್ನು ಕೇಳಿ ಬಾದಶಹನು ಜಸವಂತಸಿಂಗನನ್ನು ಹಿಂದಕ್ಕೆ ಕರೆಸಿಕೊಂಡು, ಅವನ ಸ್ಥಳದಲ್ಲಿ ಮೊಹಬತಖಾನನನ್ನು ನಿಯಮಿಸಿದನು. ಈ ಸರದಾರನಿಗೆ ಸ್ವತಂತ್ರಾಧಿಕಾರವನ್ನು ಕೊಟ್ಟು, ಆತನ ಮೇಲೆ ಶಹಾಜಾದಾನ ಅಧಿಕಾರವೇನೂ ನಡೆಯದಂತೆ ಮಾಡಿದನು. ಮೊಹಬತಖಾನನು ದಕ್ಷಿಣಕ್ಕೆ ಬಂದಕೂಡಲೆ ಮಹಾರಾಜರೊಡನೆ ಯುದ್ಧವನ್ನು ಆರಂಭಿಸಿದನು. ಆತನು ತನ್ನ ಸೈನ್ಯದಲ್ಲಿ ಎರಡು ಭಾಗಗಳನ್ನು ಮಾಡಿ ಒಂದು ಭಾಗಕ್ಕೆ ದಿಲೇರಖಾನನನ್ನು ಮುಖ್ಯನನ್ನಾಗಿ ನಿಯಮಿಸಿ, ಚಾಕಣ ದುರ್ಗವನ್ನು ತಕ್ಕೊಳ್ಳುವದಕ್ಕೆ ಆತನನ್ನು ಕಳಿಸಿದನು. ಅದರಂತೆ ದಿಲೇರಖಾನನು ಚಾಕಣ ದುರ್ಗವನ್ನು ಸ್ವಾಧೀನಪಡಿಸಿಕೊಂಡು, ಒಂಬತ್ತು ವರ್ಷದ ಮೇಲಿನ ವಯಸ್ಸಿನವರನ್ನೆಲ್ಲ ಕಡಿದುಹಾಕಿದನು. ಮೊಹಬತಖಾನನು ತನ್ನ ಉಳಿದ ಸೈನ್ಯದೊಡನೆ ಸಾಲ್ಹೇರಿಯ ಕೋಟೆಯನ್ನು ಮುತ್ತಿದನು. ಈ ಕೋಟೆಯು ಬಹು ಮಹತ್ವದ್ದಾದ್ದರಿಂದ ಅದನ್ನು ಕಾಯ್ದುಕೊಳ್ಳುವದಕ್ಕಾಗಿ ಮಹಾರಾಜರು ಪ್ರತಾಪರಾವ ಗುಜರನನ್ನು ಕರೆಸಿದರು. ಪ್ರತಾಪರಾಯನ ಸೈನ್ಯವು ಬರುವದನ್ನು ನೋಡಿ ಅದನ್ನು ಮುಂದಕ್ಕೆ ಬರಗೊಡದಂತೆ ಮೊಗಲ ಸೈನ್ಯವು ಅಡ್ಡಾಯಿತು. ಆ ಸೈನ್ಯದ ಮುಖ್ಯಸ್ಥನು ಎಕಲಾಸಖಾನ ನೆಂಬವನಿದ್ದನು. ಹೀಗೆ ಮೊಗಲ ಸೈನ್ಯವು ತನ್ನ ಮೇಲೆ ಸಾಗಿಬರುವದನ್ನು ನೋಡಿ ಪ್ರತಾಪ ರಾಯನು ಮುಂದಕ್ಕೆ ಸಾಗುವದನ್ನು ಬಿಟ್ಟು ಕಾದಲು ಸಿದ್ಧನಾಗಿ ನಿಂತನು. ಮೊಗಲರು ಒಳ್ಳೇ ಆವೇಶದಿಂದ ಅವನ ಸೈನ್ಯದಮೇಲೆ ಬಿದ್ದರು. ಆಗ ಪ್ರತಾಪರಾಯನು ಅವರೊಡನೆ ಕೆಲವು ಹೊತ್ತು ಯುದ್ಧ ಮಾಡಿದ ಹಾಗೆ ತೋರಿಸಿ, ತನ್ನ ಸೈನ್ಯಕ್ಕೆ ಓಡಿಹೋಗಲು ಆಜ್ಞಾಪಿಸಿದನು. ಕೂಡಲೆ ಮರಾಟರು ನಾಲ್ಕೂ ಕಡೆಗೆ ಹರಿಬಿದ್ದು ಓಡಹತ್ತಿದರು. ಇದನ್ನು ನೋಡಿ ಮೊಗಲರು ಜಯಾನಂದದ ಭರದಿಂದ ಅವರ ಬೆನ್ನಟ್ಟಿ ಹೋದರು. ಹೀಗೆ ಬೆನ್ನಟ್ಟುವಾಗ ಅವರ ಸಾಲುಗಳು ಮುರಿದು ದಂಡಾಳುಗಳು ಚಲ್ಲಾಪಿಲ್ಲಿಯಾದರು. ಅಷ್ಟರಲ್ಲಿ ಪ್ರತಾಪರಾಯನು ಹಿಂದಿರುಗಿ ನಿಂತು ತನ್ನ ದಂಡಾಳುಗಳಿಗೆ ಒಟ್ಟುಗೂಡಲು ಆಜ್ಞಾಪಿಸಿದನು. ಕೂಡಲೆ ಅವರು ಒಟ್ಟುಗೂಡಿ ಶತ್ರುಗಳ ಮೇಲೆ ಬಿದ್ದರು. ಹೀಗೆ ಯುದ್ಧವು ನಡೆದಿರುವಾಗ ಮೋರೋಪಂತ ಪಿಂಗಳೆಯು ತನ್ನ ದಂಡಿನೊಡನೆ ಅಲ್ಲಿಗೆ ಬಂದನು. ಆತನ ಸಹಾಯದಿಂದ ಪ್ರತಾಪ ರಾಯನು ಮೊಗಲರ ದೂಳ ಹಾರಿಸಿದನು. ಎಕಲಾಸಖಾನನ ಸಂಪೂರ್ಣ ಪರಾಜಯ ವಾದದ್ದರಿಂದ, ಮೊಹಬತಖಾನನ ಉತ್ಸಾಹವು ಕುಗ್ಗಿತು. ಉಳಿದ ಸೈನ್ಯದಿಂದ ಮರಾಟರ ಸಂಗಡ ಕಾದಲು ಧೈರ್ಯ ಸಾಲದೆ ಆತನು ಸಾಲ್ಹೇರಿಯ ಮುತ್ತಿಗೆಯನ್ನು ಎಬ್ಬಿಸಿ ಔರಂಗಾ ಬಾದದ ಕಡೆಗೆ ಒಂದೇಸವನೆ ಓಡಹತ್ತಿದನು. ಮರಾಟರು ಕಡೆತನಕ ಅವನ ಬೆನ್ನು ಬಿಡಲಿಲ್ಲ. ಈ ಯುದ್ಧದಲ್ಲಿ ಮಹಾರಾಜರಿಗೆ ೧೨೫ ಆನೆಗಳು, ೭೦೦ ಒಂಟೆಗಳು, ೬,೦೦೦ ಕುದುರೆಗಳು,

ಜಡ ಜವಾಹಿರುಗಳು, ನೂರಾರು ಎತ್ತುಗಳು, ಬೇರೆ ಎಷ್ಟೋ ಯುದ್ಧೋಪ ಯೋಗದ ಸಾಮಾನುಗಳು ಸಿಕ್ಕವು. ಮೊಗಲ ಸೈನ್ಯದೊಡನೆ ಎದುರಿಗೆ ನಿಂತು ಕಾದಿದ ಮಹಾರಾಜರ ಹಲವು ಕದನಗಳಲ್ಲಿ ಈ ಸಾಲ್ಹೇರಿಯ ಕನದವು ಬಹು ಶ್ರೇಷ್ಠವಾದದ್ದು. ಇಷ್ಟು ದೊಡ್ಡ ಜಯವನ್ನು ಅವರು ಈ ಮೊದಲು ಎಂದೂ ಸಂಪಾದಿಸಿದ್ದಿಲ್ಲ. ಈ ಘನಘೋರ ಸಂಗ್ರಾಮದಲ್ಲಿ ಮಹಾರಾಜರ ದಂಡಾಳುಗಳು ತೋರಿಸಿದ ಶೌರ್ಯದ, ಹಾಗೂ ಯುದ್ಧ ಕೌಶಲ್ಯದ ಕೀರ್ತಿಯು ನಾಲ್ಕೂಕಡೆಗೆ ಹಬ್ಬಿದ್ದರಿಂದ, ಮಹಾರಾಜರ ಭಯವು ಶತ್ರುಗಳಿಗೆ ಮೊದಲಿಗಿಂತ ಹೆಚ್ಚಾಯಿತು.

ಹೀಗೆ ಮೊಹಬತಖಾನನು ಮರಾಟರಿಂದ ಸೋತದ್ದರಿಂದ ಬಾದಶಹನಿಗೆ ಸಿಟ್ಟು ಬಂದು, ಆತನು ಖಾನನನ್ನೂ, ಶಹಾಜಾದಾನನ್ನೂ ಹಿಂದಕ್ಕೆ ಕರೆಸಿಕೊಂಡು, ಖಾನಜಾಹಾನ ಬಹದ್ದೂರನೆಂಬ ಗುಜರಾಥದ ಸುಬೇದಾರನನ್ನು ಎಪ್ಪತ್ತು ಸಾವಿರ ಸೈನ್ಯದೊಡನೆ ಮಹಾರಾಜರ ಮೇಲೆ ಕಳಿಸಿದನು. ಈತನನ್ನು ಮಹಾರಾಜರು ಗುಜರಾಥದಲ್ಲಿ ಸುಮ್ಮನೆ ಕುಳ್ಳಿರಿಸಿಬಿಟ್ಟರು. ಮಹಾರಾಜರೊಡನೆ ಕಾದುವದರಿಂದ ತನಗೆ ಜಯಪ್ರಾಪ್ತಿಯಾಗುವದೆಂಬ ನಂಬಿಗೆಯು ಖಾನನಿಗೆ ಉಳಿಯಲಿಲ್ಲ. ಆತನು ಬಾದಶಹನನ್ನು ಸಮಾಧಾನಪಡಿಸುವದಕ್ಕಾಗಿ, ಮಹಾರಾಜರು ತನಗೆ ಶರಣು ಬಂದರೆಂಬಂತೆ ತೋರಿಸಬೇಕಾಗಿತ್ತು. ಆದ್ದರಿಂದ ಆತನು ಮಹಾರಾಜರಿಗೆ ಬಾದಶಹನೊಡನೆ ಒಡಂಬಡಿಕೆ ಮಾಡಿಕೊಳ್ಳಬೇಕೆಂದು ಅಂತರಂಗದಲ್ಲಿ ಸೂಚಿಸಿದನು. ಇತ್ತ ಮಹಾರಾಜರಿಗೆ ವಿಜಾಪುರದವರನ್ನು ಹಣಿಯುವದಕ್ಕಾಗಿ ಮೊಗಲ ರೊಡನೆ ಒಡಂಬಡಿಕೆ ಮಾಡಿಕೊಳ್ಳುವದು ಅವಶ್ಯವಾಗಿತ್ತು. ಆದ್ದರಿಂದ ಖಾನಜಹಾನನೊಡನೆ ಸಾಮೋಪಚಾರದ ಮಾತು-ಕಥೆಗಳನ್ನು ನಡಿಸಿದರು. ಅವರು ಖಾನನಿಗೆ—"ನನ್ನ ಅಪರಾಧಗಳನ್ನು ಕ್ಷಮಿಸಿ, ನಮ್ಮ ಸಲುವಾಗಿ ಬಾದಶಹರೊಡನೆ ಮಧ್ಯಸ್ತಿಕೆಯನ್ನು ಮಾಡಬೇಕು. ಈ ಮೊದಲೆ ಹೇಳಿದಂತೆ ಬಾದಶಹರು ನನಗೆ ದಕ್ಷಿಣದ ದೇಶಮುಖಿಯನ್ನು ಕೊಟ್ಟು, ನನ್ನನ್ನು ತಮ್ಮ ಉಡಿಯಲ್ಲಿ ಹಾಕಿಕೊಳ್ಳಬೇಕು. ನನ್ನ ಮಗನಾದ ಸಂಭಾಜಿಗೆ ಕೊಡಬೇಕೆಂದು ಗೊತ್ತಾದಂತೆ ಮನಸಬದಾರಿಯನ್ನು ಪುನಃಕೊಡಬೇಕು. ಅಂದರೆ ನಾನು ಇನ್ನುಮೇಲೆ ಬಾದಶಹರ ಮೇಲೆ ತಿರುಗಿ ಬೀಳದೆ ವಿಶ್ವಾಸದಿಂದ ನಡಕೊಳ್ಳುವೆನು" ಎಂದು ಹೇಳಿಕೊಂಡು, ಅದೇ ಅರ್ಥದ ಅರ್ಜಿಯನ್ನು ಬಾದಶಹನ ಕಡೆಗೆ ಮಾಡಿಕೊಂಡರು. ಈ ಕಾಲದಲ್ಲಿ ಉತ್ತರ ಹಿಂದುಸ್ತಾನದೊಳಗೆ ಸ್ವಲ್ಪ ಗೊಂದಲವೆದ್ದದ್ದರಿಂದ, ಅದನ್ನು ನಿಲ್ಲಿಸುವ ಕೆಲಸದಲ್ಲಿ ಬಾದಶಹನು ತೊಡಗಿದ್ದನು. ಮಹಾರಾಜರ ಈ ಅರ್ಜಿಯು ಆತನಿಗೆ ವಿಶ್ವಾಸದ್ದಾಗಿ ತೋರದಿದ್ದರೂ ಸದ್ಯಕ್ಕೆ ಶಿವಾಜಿಯನ್ನು ಕೆಣಕುವದು ಹಿತವಲ್ಲೆಂದು ತಿಳಿದು, ಮಹಾರಾಜರ ಅರ್ಜಿಗೆ ಉತ್ತರ ಕೊಡುವದನ್ನು ಆತನು ಹಿಂದಕ್ಕೆ ಹಾಕಹತ್ತಿದನು. ಹ್ಯಾಗೇ ಆಗಲಿ, ಮಹಾರಾಜರಿಗೆ ಮೊಗಲರ ಉಪದ್ರವವು ಇಲ್ಲದಂತೆ, ಆಗಿ, ವಿಜಾಪುರ-ಗೋವಳಕೊಂಡದವರನ್ನು ಹಣಿಯಲಿಕ್ಕೆ ಅವರಿಗೆ ಅನುಕೂಲವಾಯಿತು.

ಹೀಗೆ ಮಹಾರಾಜರು ಔರಂಗಜೇಬ ಬಾದಶಹನನ್ನು ಸುಮ್ಮನೆ ಕುಳ್ಳಿರಿಸಿದ ಬಳಿಕ, ವಿಜಾಪುರದ ಬಾದಶಹನ ರಾಜ್ಯದಲ್ಲಿ ಹಾವಳಿ ಮಾಡಹತ್ತಿದರು. ವಿಜಾಪುರ-ಗೋವಳ ಕೊಂಡದ ಬಾದಶಹನನ್ನು ಹಣ್ಣು ಮಾಡಿದಷ್ಟು ದಿಲ್ಲಿಯ ಬಾದಶಹನಿಗೆ ಬೇಕಾಗಿತ್ತು; ಯಾಕಂದರೆ ಆ ಎರಡು ಬಾದಶಾಹಿಗಳ ಮುಣುಗಿಸುವದನ್ನು ಆತನು ನಿಶ್ಚಯಿಸಿದ್ದನು. ಆದ್ದರಿಂದ ಆತನು ಮಹಾರಾಜರನ್ನು ಪ್ರತಿಬಂಧಿಸುವಹಾಗಿದ್ದಿಲ್ಲ. ಹೀಗೆ ಮಹಾರಾಜರು ಮೊಗಲರ ಸಹಾಯದಿಂದ ತಮ್ಮ ಉಳಿದ ರಾಜ್ಯವನ್ನು ಸ್ವಾಧೀನಪಡಿಸಿಕೊಳ್ಳಹತ್ತಲು, ವಿಜಾಪುರದವರು ಮೊಗಲರೊಡನೆ ಒಡಂಬಡಿಕೆ ಮಾಡಿಕೊಳ್ಳಲಿಚ್ಛಿಸಿದರು. ಅದರಂತೆ ಅವರಲ್ಲಿ ಒಡಂಬಡಿಕೆಯಾಗಿ, ಮಹಾರಾಜರು ವಿಜಾಪುರದವರ ಗೊಡವಿಗೆ ಹೋಗಬಾರದಾಯಿತು; ಆದರೆ ಮಹಾರಾಜರು ಜಸವಂತಸಿಂಗನಿಗೂ, ಶಹಾಜಾದನಿಗೂ ಹೇಳಿ ವಿಜಾಪುರದಲ್ಲಿ ಚೌಥಾಯಿಯನ್ನು ಎತ್ತಿದರೆ ಅವರು ಸುಮ್ಮನಿರುವಂತೆ ಮಾಡಿಕೊಂಡು, ಭರದಿಂದ ಚೌಥಾಯಿ ಸರದೇಶ ಮುಖಿಗಳನ್ನು ಎತ್ತಹತ್ತಿದರು. ಹೀಗೆ ತಮ್ಮ ರಾಜ್ಯಕ್ಕೆ ಯಾವಾಗಲೂ ಮರಾಟರಿಂದಾಗುವ ತ್ರಾಸವನ್ನು ತಪ್ಪಿಸುವದಕ್ಕಾಗಿ, ಆದಿಲಶಹನ ವಜೀರನಾದ ಅಬದುಲ ಮಹಮ್ಮದನು ಮಹಾರಾಜರಿಗೆ ವರ್ಷಕ್ಕೆ ಮೂರು ಲಕ್ಷ ಹೊನ್ನುಗಳ ಖಂಡಣಿಯನ್ನು ಕೊಡಬೇಕೆಂತಲೂ, ಮಹಾರಾಜರು ತಮ್ಮ ರಾಜ್ಯಕ್ಕೆ ಯಾವ ಬಗೆಯ ತ್ರಾಸವನ್ನು ಕೊಡಬಾರದೆಂತಲೂ ಗುಪ್ತರೀತಿಯಿಂದ ಒಡಂಬಡಿಕೆ ಮಾಡಿಕೊಂಡನು; ಹಾಗೆ ಗುಪ್ತವಾಗಿ ಮಾಡಿಕೊಳ್ಳದಿದ್ದರೆ ಹಿಂದುವಿನೊಡನೆ ಒಡಂಬಡಿಕೆ ಮಾಡಿಕೊಂಡು ಕಪ್ಪುಕಾಣಿಕೆ ಕೊಡಲೊಪ್ಪಿ ಯವನ ಬಾದಶಾಹಿಯ ಗೌರವಕ್ಕೆ ಬಾಧೆಯನ್ನುಂಟು ಮಾಡಿದ ಹಾಗಾಗುತ್ತದೆಂದು ತಿಳಿದು, ದರ್ಬಾರದ ಅಮೀರ ಉಮರಾವರೂ, ಸರದಾರರೂ ಗೊಂದಲವೆಬ್ಬಿಸಬಹುದಾಗಿತ್ತು ಆದರೆ ಸ್ವತಃ ಆದಿಲಶಹನಿಗೆ ಈ ಒಡಂಬಡಿಕೆಯು ಮನಸ್ಸಿಗೆ ಬಂದು ಆತನು ಮಹಾರಾಜರ ವಕೀಲನನ್ನು ತನ್ನ ದರ್ಬಾರದಲ್ಲಿ ಇಟ್ಟುಕೊಂಡನು. ಕೆಲವು ದಿನಗಳವರೆಗೆ ಮಹಾರಾಜರಿಗೆ ಈ ಹಣವು ಸುರಕ್ಷಿತ ಮುಟ್ಟುತ್ತ ಬಂದದ್ದರಿಂದ, ಅವರು ವಿಜಾಪುರದ ರಾಜ್ಯಕ್ಕೆ ಉಪದ್ರವ ಕೊಡುವದನ್ನು ಬಿಟ್ಟರು; ಆದರೆ 1673ರಲ್ಲಿ ಆದಿಲಶಹನು ತೀರಿಕೊಳ್ಳಲು, ಆತನ ಐದು ವರ್ಷದ ಮಗನು ಪಟ್ಟಕ್ಕೆ ಕುಳಿತುಕೊಂಡನು. ಖವಾಸಖಾನನು ಮುಖ್ಯಾಧಿಕಾರಿಯಾದನು. ಅದರಿಂದ ಅಬದುಲ ಮಹಮ್ಮದನು ಮಹಾರಾಜರೊಡನೆ ಮಾಡಿಕೊಂಡಿದ್ದ ಒಡಂಬಡಿಕೆಯು ಮುರಿದಂತಾಯಿತು. ಖವಾಸಖಾನನು ಸೊಕ್ಕಿನ ನಡತೆಯವನಾದದ್ದರಿಂದ, ದರ್ಬಾರದೊಳಗಿನ ಬೇರೆ ಜನರ ಮಾತನ್ನು ಕೇಳದಾಗಲು, ದರ್ಬಾರದಲ್ಲಿ ಬೇರೆ ಬೇರೆ ಬಣಗಳುಂಟಾಗಿ ಬೇರೆ ಬೇರೆ ಬಣದವರು ತಮ್ಮ ಬಣಗಳನ್ನು ಬಲಿಷ್ಠವಾಗಿ ಮಾಡಿಕೊಳ್ಳಹತ್ತಿದ್ದರಿಂದ ರಾಜ್ಯದಲ್ಲಿ ಅಂತಃಕಲಹಗಳುಂಟಾದವು. ಈ ಸಂಧಿಯು ಅನುಕೂಲವೆಂದು ತಿಳಿದು ಮಹಾರಾಜರು ವಿಜಾಪುರದ ರಾಜ್ಯದಲ್ಲಿ ನುಗ್ಗಿದರು. ಆಗ ವಿಜಾಪುರದ ದರ್ಬಾರದ ಮುಖ್ಯ ಸೇನಾಪತಿಯಾದ ಅಬದುಲಕರೀಮ ಬಹಿಲೋಲಖಾನನೆಂಬವನು ಮೊಗಲರೊಡನೆ ಸ್ನೇಹಬೆಳಸಿ ಮಹಾರಾಜರೊಡನೆ ಯುದ್ಧಕ್ಕೆ ಸಿದ್ಧನಾದನು. ಮಹಾರಾಜರು ಪನ್ಹಾಳದ ದುರ್ಗವನ್ನು

ಸ್ವಾಧೀನಪಡಿಸಿಕೊಳ್ಳುವದಕ್ಕಾಗಿ ಹದಿನೈದು ಸಾವಿರ ದಂಡನ್ನು ಕಳಿಸಿದರು. ಆ ದಂಡು ಪಲ್ಹಾಳಗಡಕ್ಕೆ ಮುತ್ತಿಗೆ ಹಾಕಿರಲು, ಅಬದುಲಕರೀಮನು ದೊಡ್ಡ ಸೈನ್ಯದೊಡನೆ ಸಾಗಿ ಬಂದನು. ಉಭಯಪಕ್ಷದಲ್ಲಿ ಘನಘೋರ ಯುದ್ಧವಾಗಿ, ಅದರಲ್ಲಿ ಖಾನನಿಗೆ ಮೊದಲು ಜಯ ಒದಗಿತು. ಆಗ ಆತನು ದಣಿದಿದ್ದ ತನ್ನ ಸೈನ್ಯವು ವಿಶ್ರಮಿಸಲೆಂದು ತಿಕೋಟದ ಬಳಿಯಲ್ಲಿ ಕೆಲಹೊತ್ತು ತಳಊರಿ ನಿಂತುಕೊಂಡನು. ಅಷ್ಟರಲ್ಲಿ ಮಹಾರಾಜರ ಸೈನ್ಯಕ್ಕೆ ಹೊಸ ಸಹಾಯವು ಒದಗಲು, ಅವರು ಅಬದುಲ್‌ಕರೀಮನ ಸೈನ್ಯದಮೇಲೆ ಬಿದ್ದು ಅದನ್ನು ಪೂರ್ಣವಾಗಿ ಸೋಲಿಸಿದರು.

ಈ ಜಯವು ಪ್ರಾಪ್ತವಾದ ಬಳಿಕ ಮಹಾರಾಜರು ಹಾಗೇ ಮುಂದಕ್ಕೆ ಸಾಗಿಹೋಗಿ ಹುಬ್ಬಳ್ಳಿ ಶಹರವನ್ನು ಸುಲಿದರು. ಆಗೂ ಹುಬ್ಬಳ್ಳಿಯು ದೊಡ್ಡ ವ್ಯಾಪಾರದ ಸ್ಥಾನವಾಗಿತ್ತು ಎಲ್ಲ ಕಡೆಯ ಜನರು ವ್ಯಾಪಾರಕ್ಕಾಗಿ ಅಲ್ಲಿಗೆ ಬರುತ್ತಿದ್ದರು. ಈ ಸುಲಿಗೆಯಲ್ಲಿ ಮಹಾರಾಜರಿಗೆ ಹೇರಳ ಹಣವು ದೊರೆಯಿತು. ಇಷ್ಟು ಹಣವು ಬೇರೆ ಯಾವ ಸುಲಿಗೆಯಿಂದಲೂ ಅವರಿಗೆ ಬಂದಿದ್ದಿಲ್ಲ. ತರುವಾಯ ಮಹಾರಾಜರು ವಿಜಾಪುರದವರ ಪರಳಿ, ಸಾತಾರೆಗಳ ಕೋಟೆಗಳನ್ನು ಸ್ವಾಧೀನ ಪಡಿಸಿಕೊಂಡರು. ಹೀಗೆ ತಮ್ಮ ರಾಜ್ಯದಲ್ಲಿ ಮಹಾರಾಜರು ಗೊಂದಲ ಹಾಕಹತ್ತಿದ್ದನ್ನು ನೋಡಿ ಖವಾಸಖಾನನು ಅಬದುಲಕರೀಮನನ್ನು ದೊಡ್ಡ ಸೈನ್ಯದೊಡನೆ ಪುನಃ ಕಳಿಸಿದನು. ಕೂಡಲೇ ಆತನು ಪಲ್ಹಾಳ ದುರ್ಗದ ಕಡೆಗೆ ಸಾಗಿ, ಸುತ್ತುಮುತ್ತಲಿನ ಪ್ರದೇಶವನ್ನು ಸ್ವಾಧೀನ ಪಡಿಸಿಕೊಂಡು ದುರ್ಗವನ್ನು ಮುತ್ತಿದನು. ಈ ಸುದ್ದಿಯನ್ನು ಕೇಳಿದೊಡನೆ ಮಹಾರಾಜರು ಪ್ರತಾಪರಾವ ಗುಜರನನ್ನು ಸೈನ್ಯದೊಡನೆ ಆತನ ಮೇಲೆ ಕಳಿಸಿದರು. ಈ ಖಾನನೊಡನೆ ನಡಿಸಿದ ಯುದ್ಧದಲ್ಲಿ ಪ್ರತಾಪರಾಯನು ಮರಣಹೊಂದಿದನು. ತಮ್ಮ ಸೇನಾಪತಿಯು ಮಡಿದದ್ದರಿಂದ ಮರಾಟರು ಕಂಗೆಟ್ಟು ದಾರಿ ಸಿಕ್ಕಕಡೆಗೆ ಓಡಹತ್ತಿದರು. ಆಗ ಅಬ್ದುಲ್ಲ ಕರೀಮನ ದಂಡಿನವರು ಬೆನ್ನಟ್ಟಿ ಬಹುಜನರನ್ನು ಕೊಂದರು. ಹೀಗೆ ಓಡಿಹೋದ ಮರಾಟರು ನೆಟ್ಟಗೆ ಹೋಗಿ ಪಲ್ಹಾಳಗಡದ ಆಶ್ರಯವನ್ನು ಹೊಂದಿದರು. ಹಿಂದಿನಿಂದ ಬೆನ್ನಟ್ಟಿ ಬರುವ ಶತ್ರುಗಳ ಮೇಲೆ ದುರ್ಗದ ಮೇಲಿಂದ ತೋಫುಗಳು ಹಾರಹತ್ತಿದವು. ಇತ್ತ ಹಂಸಾಜಿಮೋಹಿತೆಯೆಂಬ ಹೆಸರಿನ ಐದುಸಾವಿರದ ಒಬ್ಬ ಮರಾಟಾ ಸರದಾರನು ಹಿಂದಿನಿಂದ ಬಂದು ಶತ್ರುಗಳ ಮೇಲೆ ಒಳ್ಳೇ ಆವೇಶದಿಂದ ಬಿದ್ದನು. ಮುಂದೆ ತೋಫುಗಳ ಹೊಡೆತ, ಹಿಂದೆ ಕತ್ತಿಯ ಕಡತ, ಹೀಗಾಗಿ ವೈರಿಗಳು ಸಂಕಟಕ್ಕೊಳಗಾದರು. ಆಗ ಮೋಹಿತೆಯು ಶೌರ್ಯದಿಂದ ಕಾದಿ ವಿಜಯವನ್ನು ಸಂಪಾದಿಸಿದನು. ವೈರಿಗಳು ಓಡಹತ್ತಲು ಮರಾಟರು ಬೆನ್ನಟ್ಟಿದರು. ಆಗ ಅಬ್ದುಲ್ಲಕರೀಮನು ಕಂಗೆಟ್ಟು, ಬಹು ಖಿನ್ನನಾಗಿ ಅಂತು ಇಂತು ವಿಜಾಪುರವನ್ನು ಮುಟ್ಟಿದನು. ಹೀಗಾದ್ದರಿಂದ ಮಹಾರಾಜನೊಡನೆ ಕಾದುವ ಕಸುವು ವಿಜಾಪುರದವರಲ್ಲಿ ಉಳಿಯಲಿಲ್ಲ. ಮತ್ತು ದರ್ಬಾರದೊಳಗಿನ ಯಾವ ಸರದಾರರೂ ಮಹಾರಾಜರೊಡನೆ ಯುದ್ಧಮಾಡಲು ಒಪ್ಪದಾದರು; ಆದ್ದರಿಂದ ವಜೀರನಾದ ಖವಾಸಖಾನನು ಸಧ್ಯಕ್ಕೆ ಮಹಾರಾಜರ ಉಸಾಬರಿಗೆ ಹೋಗದಿರುವದೇ ಯೋಗ್ಯವೆಂದು ನಿಶ್ಚಯಿಸಿದನು. ಆಗ ಗೋವಳಕೊಂಡದ ಬಾದಶಹನು

ಮಹಾರಾಜರಿಗೆ ವರ್ಷಕ್ಕೆ ಐದು ಲಕ್ಷ ವರಹಗಳ ಕಾಣಿಕೆ ಕೊಡುವಂತೆ ಒಡಂಬಡಿಕೆ ಮಾಡಿಕೊಂಡು, ಮಹಾರಾಜರ ಉಸಾಬರಿಯನ್ನು ಬಿಟ್ಟು ಸುಮ್ಮನೆ ಕುಳಿತನು. ಹೀಗೆ ಮಹಾರಾಜರು ತಮ್ಮ ಪ್ರತಾಪದಿಂದ ಮೂವರು ಯವನ ಬಾದಶಹರನ್ನು ಸುಮ್ಮನೆ ಕುಳ್ಳಿರಿಸಿ, ತಾವು ಸ್ವತಂತ್ರರಾದರು. ಅವರ ಪ್ರತಾಪ ಪ್ರದರ್ಶನದಿಂದ ಅವರ ದ್ರವ್ಯಬಲವೂ, ಸೇನಾಬಲವೂ, ಅಭಿವೃದ್ಧವಾದವು.

## ಛತ್ರಪತಿ

ಈ ಮೇರೆಗೆ ಮಹಾರಾಜರು ಯಾವತ್ತು ಯವನಬಾದಶಹರನ್ನು ಅವರವರ ಸ್ಥಳದಲ್ಲಿ ಅವರು ಕೈಮುಚ್ಚಿಕೊಂಡು ಸ್ವಸ್ಥವಾಗಿ ಕುಳಿತುಕೊಳ್ಳುವಂತೆ ಮಾಡಿದಬಳಿಕ, ತಾವು ಪಟ್ಟಾಭಿಷೇಕ ಮಾಡಿಸಿಕೊಳ್ಳುವ ಸಂಬಂಧದಿಂದ ಆಲೋಚಿಸತೊಡಗಿದರು. ಯೋಗ್ಯ ವಿಚಾರವು ಒಮ್ಮೆ ಹೊಳೆದರಾಯಿತು. ಕೂಡಲೆ ಅದರಂತೆ ಆಚರಿಸುವದಕ್ಕಾಗಿ ಹಗಲಿರುಳು ಯತ್ನಿಸುವದು ಮಹಾರಾಜರ ಸ್ವಭಾವವಾಗಿತ್ತು, ಒಂದುದಿನ ರಾತ್ರಿ ಅವರು ಈ ವಿಚಾರದಲ್ಲಿ ಮಗ್ನರಾಗಿ ಮಲಗಿರಲು, ಶ್ರೀಭವಾನಿಯು ಅವರ ಸ್ವಪ್ನದಲ್ಲಿ ಬಂದು— "ನೀನು ಸ್ವಧರ್ಮ ರಕ್ಷಣಾರ್ಥವಾಗಿ ಇಷ್ಟು ಪರಿಶ್ರಮಪಟ್ಟಿರುವದರಿಂದ, ಸಿಂಹಾಸನಾಧೀಶ ನಾಗುವದಕ್ಕೆ ಯೋಗ್ಯನಾಗಿರುತ್ತೀ. ನಿನ್ನ ಈ ಮನೋದಯವು ನನ್ನ ಪ್ರಸಾದದಿಂದ ಪೂರ್ಣ ವಾಗುವದು." ಎಂದು ಅಭಯವನ್ನಿತ್ತಳು. ಬಳಿಕ ಅವರು ತಮ್ಮ ಮಾತೃಶ್ರೀಯವರ ಬಳಿಯಲ್ಲಿ ಈ ಮಾತು ತೆಗೆದರು. ಅದಕ್ಕೆ ಅವರು ಸಂತೋಷದಿಂದ ಒಪ್ಪಿಕೊಂಡರು. ಆಮೇಲೆ ಮಹಾರಾಜರು ಶ್ರೀಸಮರ್ಥ ರಾಮದಾಸಸ್ವಾಮಿಗಳವರಿಗೂ, ಚಿಂಚವಡದ "ದೇವ" ಮೊದಲಾದ ಸಾಧು-ಸತ್ಪುರುಷರಿಗೂ ತಮ್ಮ ಮನೋದಯವನ್ನು ಅರಿಕೆ ಮಾಡಿಕೊಳ್ಳಲು, ಅವರೂ ಒಪ್ಪಿಗೆಯನ್ನಿತ್ತರು. ಇಷ್ಟಾದಬಳಿಕ ಸ್ವರಾಜ್ಯದೊಳಗಿನ ದೊಡ್ಡ ದೊಡ್ಡ ಪಂಡಿತರು. ವಿದ್ವಾಂಸರು, ಪ್ರತಿಷ್ಠಿತ ಬ್ರಾಹ್ಮಣರು ಮೊದಲಾದವರನ್ನು ಮೇಣೆ-ಪಲಕ್ಕಿಗಳನ್ನು ಕಳಿಸಿ ಬಹುಮಾನದಿಂದ ಬರಮಾಡಿಕೊಂಡರು; ಅದರಂತೆ ಮುಖ್ಯ ಮುಖ್ಯ ಸರದಾರರನ್ನೂ, ಮುತ್ಸದ್ದಿಗಳನ್ನೂ, ಇಷ್ಟಮಿತ್ರರನ್ನೂ, ಸುಹೃತ್ಸಮಂಧಿಕರನ್ನೂ ಕರೆಸಿಕೊಂಡರು. ಇವರೆಲ್ಲರ ಸಭೆ ನೆರೆಸಿ ಮಹಾರಾಜರು ತಮ್ಮ ಮನೋದಯವನ್ನು ಅರುಹಿ, ಅವರ ಮತವನ್ನು ಕೇಳಿಕೊಂಡರು. ಅದನ್ನು ಕೇಳಿ ಅವರೆಲ್ಲರಿಗೆ ಬಹು ಸಂತೋಷವಾಯಿತು. ಅವರೆಲ್ಲರು ಆಲೋಚಿಸಿ, ಮಹಾರಾಜರು ಛತ್ರಸಿಂಹಾಸನಾದಿ ರಾಜಚಿಹ್ನೆಗಳನ್ನು ಶಾಸ್ತ್ರೋಕ್ತವಾಗಿ ಧರಿಸತಕ್ಕದ್ದೆಂದು ಹೇಳಿದರು. ಆದರೆ ಶಾಸ್ತ್ರವು ಒಂದುಮಾತಿನಲ್ಲಿ ಅಡ್ಡಬರತೊಡಗಿತು. ಮಹಾರಾಜರ ವ್ರತಬಂಧ ಸಂಸ್ಕಾರವು ಆಗದೆಯಿರುವದರಿಂದ ಅವರಿಗೆ ಸಶಾಸ್ತ್ರ ರಾಜ್ಯಾಭಿಷೇಕ ಮಾಡಲಿಕ್ಕೆ ಬರುವದಿಲ್ಲೆಂದು ಶಿಷ್ಟಜನರು ಅಭಿಪ್ರಾಯಪಟ್ಟರು.

ಮಹಾರಾಜರ ಉಪನಯನವಾಗದೆ ಇರುವದರಿಂದ ಅವರ ಪರಿಗಣನೆಯು ಪಂಡಿತರ ಮತದಿಂದ ಶೂದ್ರರಲ್ಲಿ ಆಗುತ್ತಿತ್ತು ಆದ್ದರಿಂದ ಮಹಾರಾಜರ ಸಿಂಹಾಸನಾರೋಹಣಕ್ಕೆ ದಕ್ಷಿಣದ ಪಂಡಿತರ ಮತದಿಂದ ದೊಡ್ಡ ವಿಘ್ನ ಒದಗಿದಂತಾಯಿತು. ಆಗ ಬಾಳಾಜಿ ಆವಜಿಯು ಮಹಾರಾಜರನ್ನು ಕುರಿತು—''ಕಾಶಿಯಲ್ಲಿ ಗಾಗಾಭಟ್ಟರೆಂಬ ಮಹಾಪಂಡಿತರಿರುವರು. ಅವರು ನಾಲ್ಕು ವೇದ, ಆರು ಶಾಸ್ತ್ರ, ಸ್ಮೃತಿ–ಪುರಾಣಾದಿ ಗ್ರಂಥಗಳ ಅಧ್ಯಯನವನ್ನು ಸಾಂಗೋಪಾಂಗವಾಗಿ ಮಾಡಿ, ಲೋಕಪ್ರಸಿದ್ಧಿಯನ್ನು ಪಡೆದಿರುವರು. ಅವರ ನಿರ್ಣಯವು ಬೇರೆ ಸ್ಥಳದ ಪಂಡಿತರಿಗೆ ಶಿರಸಾ ವಂದ್ಯವಾಗುವದು. ಅವರ ಅಧಿಕಾರವೇ ಅಂಥ ಮಹತ್ತರವಾದದ್ದು. ಈ ಶಾಸ್ತ್ರಾರ್ಥವನ್ನು ಕುರಿತು ಅವರನ್ನು ವಿಚಾರಿಸುವದು ಯೋಗ್ಯವು. ಸದ್ಯಕ್ಕೆ ಆ ಮಹಾಪಂಡಿತರು ಪೈಠಣಕ್ಕೆ ಬಂದಿರುವರು; ಆದ್ದರಿಂದ ಅವರನ್ನೂ, ಪೈಠಣದ ಬೇರೆ ಪಂಡಿತರನ್ನೂ ಮಹಾರಾಜರು ಕರೆಕಳುಹಬೇಕು. ಮಹಾರಾಜರ ಉಜ್ವಲ ಕೀರ್ತಿಯು ಅವರ ಕಿವಿಗೂ ಮುಟ್ಟಿರುವದರಿಂದ, ಅವರು ನಿಯಂತ್ರಣವನ್ನು ನಿರಾಕರಿಸಲಾರರು.'' ಎಂದು ಹೇಳಲು, ಮಹಾರಾಜರು ಗಾಗಾಭಟ್ಟರನ್ನು ಕರತರುವದಕ್ಕಾಗಿ ಬಾಳಾಜಿಯನ್ನೇ ಕಳಿಸಿದರು.

ಬಾಳಾಜಿ ಆವಜಿಯು ಪೈಠಣಕ್ಕೆ ಹೋಗಿ ಗಾಗಾಭಟ್ಟರನ್ನು ಕಂಡು ಅವರಿಗೆ ಮಹಾರಾಜರ ಮನೋದಯವನ್ನರುಹಿ, ಅಲ್ಲಿಯ ಬೇರೆ ಪಂಡಿತರ ಸಭೆಯನ್ನು ಕೂಡಿಸಿದನು. ಸಭೆಯಲ್ಲಿ ಬಹಳ ಹೊತ್ತು ಚರ್ಚೆಯಾಗಿ, ಮಹಾರಾಜರು ಸಿಂಹಾಸನವೇರಲು ಪ್ರತಿಬಂಧವಿಲ್ಲೆಂದು ನಿರ್ಣಯವಾಯಿತು. ಬಾಳಾಜಿಯು ಗಾಗಾಭಟ್ಟರೇ ಮೊದಲಾದ ಎಲ್ಲ ಪಂಡಿತರನ್ನು ಕರಕೊಂಡು ರಾಯಗಡಕ್ಕೆ ಹೊರಟನು. ಪಂಡಿತರು ಬರುವ ವರ್ತಮಾನವನ್ನು ಕೇಳಿ ಮಹಾರಾಜರು ಬಹುಮಾನದಿಂದ ಅವರನ್ನು ಎದುರುಗೊಂಡು ಊದುತ್ತ–ಬಾರಿಸುತ್ತ ಸಮಾರಂಭದಿಂದ ರಾಯಗಡದೊಳಗೆ ಕರಕೊಂಡು ಹೋದರು. ಪುನಃ ಸಭೆಯಾಯಿತು. ಪಂಡಿತರ ವಾದ–ವಿವಾದನಂತರ ಗಾಗಾಭಟ್ಟರು ನಿರ್ಣಯಿಸಿದ್ದೇನೆಂದರೆ—''ಈ ಕಲಿಯುಗದಲ್ಲಿ ಕ್ಷಾತ್ರಧರ್ಮವು ತೀರ ಲುಪ್ತವಾಗಿ ಹೋಯಿತು. ಯಾವತ್ತು ಪೃಥ್ವಿಯು ಯವನಮಯವಾಗಿ, ಯವನರು ಸಿಂಹಾಸನವೇರಿದರು. ಸೂರ್ಯವಂಶ, ಚಂದ್ರವಂಶದ ಕ್ಷತ್ರಿಯರಲ್ಲಿ ತ್ರಾಣವು ಉಳಿದಿರುವದಿಲ್ಲ. ಯಜನ–ಯಾಜನಗಳು ನಿಂತುಹೋದವು. ಎಲ್ಲ ಕಡೆಯಲ್ಲಿ ಅನಾಚಾರವು ಪಸರಿಸಿತು. ಬ್ರಾಹ್ಮಣಧರ್ಮವು ತೀರ ಲೋಪವಾಗಿ ಹೋಯಿತು. ಮಹಾಕ್ಷೇತ್ರಗಳು ಕುಂಠಿತವಾದವು. ಈ ಸ್ಥಿತಿಯಲ್ಲಿ ಮಹಾರಾಜರು ಸ್ವಧರ್ಮೋದ್ಧಾರಕ್ಕಾಗಿ ಪರಿಪರಿಯಾಗಿ ಕಷ್ಟಪಟ್ಟು ಸ್ವಪರಾಕ್ರಮದಿಂದ ದಕ್ಷಿಣದ ಬಾದಶಹನನ್ನು ಹತವೀರ್ಯರಾಗಿ ಮಾಡಿದರು; ಔರಂಗಜೇಬ ಬಾದಶಹನನ್ನು ತೆಪ್ಪಗೆ ಕುಳ್ಳಿರಿಸಿದನು; ಆತನ ದೊಡ್ಡ ದೊಡ್ಡ ಸರದಾರರು ತಮ್ಮ ಮೇಲೆ ಒಂದೇ ಸವನೆ ಸಾಗಿಬರಲು, ಮಹಾರಾಜರು ಅವರನ್ನು ಸೋಲಿಸಿದರು. ಅಲ್ಪಾವಕಾಶದಲ್ಲಿ ಮಹಾರಾಜರು ಇಷ್ಟು ದೊಡ್ಡ ರಾಜ್ಯವನ್ನು ಸಂಪಾದಿಸಿ, ಹಿಂದೂಧರ್ಮದ ಮರ್ಯಾದೆಯನ್ನು ಕಾಯ್ದು ಸ್ವರಾಜ್ಯವನ್ನು ಸ್ಥಾಪಿಸಿರುವರು. ಲಕ್ಷ ಕುದುರೆಗಳೂ,

ಮೂನ್ನೂರಾ ಅರವತ್ತು ಕೋಟೆಗಳೂ ಮಹಾರಾಜರ ಬಳಿಯಲ್ಲಿದ್ದು, ಧನಸಂಪತ್ತೂ ವಿಪುಲ ವಾಗಿರುತ್ತದೆ. ಇಂಥ ಅಸಾಮಾನ್ಯ ಪುರುಷನಿಗೆ ಸಿಂಹಾಸನವೇರುವದಕ್ಕೆ ಪ್ರತಿಬಂಧಿಸುವದು ಸರಿಯಲ್ಲ. ಮಹಾರಾಜರು ಶಿಸೋದಿಯಾ ರಾಜವಂಶದಲ್ಲಿ ಉತ್ಪನ್ನರಾದವರಿದ್ದು, ಮೂಲತಃ ಕ್ಷತ್ರಿಯರಿರುತ್ತಾರೆ. ಇವರ ಪೂರ್ವಜರು ನರ್ಮದಾ ನದಿಯನ್ನು ದಾಟಿಬಂದು ತಮ್ಮನ್ನು ಮರಾಠರೆಂದು ಕರೆಸಿಕೊಳ್ಳಹತ್ತಿದರು; ಮತ್ತು ವ್ರತಬಂಧವೇ ಮೊದಲಾದ ಎಷ್ಟೋ ಸಂಸ್ಕಾರಗಳನ್ನು ಬಿಟ್ಟುಕೊಟ್ಟರು; ಆದರೂ ಅವರ ಕ್ಷತ್ರಿಯತ್ವವೇನು ನಷ್ಟವಾಗಿರುವದಿಲ್ಲ. ಉದೇಪುರ, ಜಯಪುರ ಮೊದಲಾದ ಸಂಸ್ಥಾನಗಳಲ್ಲಿಯ ರಜಪೂತರ ವ್ರತಬಂಧಾನಂತರ ಪಟ್ಟಾಭಿಷೇಕವಾಗುವಂತೆ, ಈಗ ಮಹಾರಾಜರಿಗೂ ಪಟ್ಟಾಭಿಷೇಕವಾಗಲಿಕ್ಕೆ ಯಾವ ಪ್ರತಿಬಂಧವೂ ಇರುವದಿಲ್ಲ. ಇದಕ್ಕೆ ಶಾಸ್ತ್ರವಾಗಲಿ, ರೂಢಿಯಾಗಲಿ ಎಂದೂ ಅಡ್ಡಾಗಲಾರದು. ಇವರ ಉದೇಪುರದ ಮನೆತನದಲ್ಲಿ ಈಗೂ ಛತ್ರ-ಸಿಂಹಾಸನಾದಿ ಚಿಹ್ನಗಳು ಇರುತ್ತಿರುವಾಗ, ಅವು ಮಹಾರಾಜರಿಗೇ ಯಾಕೆ ಇರಬಾರದು? ಅದಕ್ಕೆ ಪ್ರತಿಬಂಧಕ ಕಾರಣವೇನಿರುವದೆಂಬದು ನಮಗಂತು ತಿಳಿಯುವದಿಲ್ಲ. ಇನ್ನು ಮಹಾರಾಜರ ವಯಸ್ಸು ಬಹಳವಾಗಿದ್ದು, ಅವರಿಗೆ ಹಲವು ವಿವಾಹಗಳಾಗಿ ಪುತ್ರಸಂತತಿಯು ಆಗಿರುವದರಿಂದ ಅವರ ಉಪನಯನವಾಗಲು ಮಾರ್ಗ ವೇನೆಂಬ ಪ್ರಶ್ನವು ಉತ್ಪನ್ನವಾಗುವದು. ಅದಕ್ಕೆ ಉತ್ತರವೇನೆಂದರೆ, ಈ ಪ್ರಸಂಗದಲ್ಲಿ ಆಪದ್ಧರ್ಮವನ್ನು ಅವಲಂಬಿಸಿ ವ್ರತಬಂಧವು ರಾಜ್ಯಾಭಿಷೇಕ ವಿಧಿಯದೊಂದು ಅಂಗವೆಂದು ತಿಳಿದು, ಅದನ್ನು ಮುಖ್ಯ ವಿಷಯದ ಅನುಸಂಗದಿಂದ ನಿರ್ಬಾಧವಾಗಿ ಮಾಡತಕ್ಕದ್ದು.''

ಹೀಗೆ ಗಾಗಾಭಟ್ಟರು ಮಾಡಿದ ನಿರ್ಣಯವನ್ನು ಪಂಡಿತರೆಲ್ಲ ಒಪ್ಪಿಕೊಳ್ಳಲು, ರಾಜ್ಯಾಭಿಷೇಕ ಮಾಡಬೇಕೆಂಬದು ಸರ್ವಾನುಮತದಿಂದ ನಿರ್ಧರಿಸಲ್ಪಟ್ಟಿತು. ಇದರಿಂದ ಮಹಾರಾಜರಿಗೆ ಬಹಳ ಸಂತೋಷವಾಯಿತು. ಗಾಗಾಭಟ್ಟರು ಹೇಳಿದ ಸಾಹಿತ್ಯಗಳನ್ನೆಲ್ಲ ಮಹಾರಾಜರು ವಿಲಂಬಮಾಡದೆ ಸಿದ್ಧಮಾಡಿದರು. ಮಹಾನದಿಯ ಪುಣ್ಯೋದಕಗಳು, ಸಮುದ್ರೋದಕಗಳು, ಸುಲಕ್ಷಣದ ಕುದುರೆಗಳು, ಆನೆಗಳು, ವ್ಯಾಘ್ರ ಚರ್ಮಗಳು, ಮೃಗ ಚರ್ಮಗಳು ಇವೇ ಮೊದಲಾದವುಗಳನ್ನು ತರಿಸಿದರು. ಸಿಂಹಾಸನ, ಪೀಠ, ಸುವರ್ಣಾದಿಗಳ ಕಲಶಗಳು, ಬೇರೆ ಪಾತ್ರೆಗಳು ಇವನ್ನು ಸಿದ್ಧಮಾಡಿಸಿದರು. ದೊಡ್ಡ ದೊಡ್ಡ ವಿದ್ವಾಂಸರಾದ ಜ್ಯೋತಿಷಿಗಳಿಂದ ಉತ್ತಮ ಮುಹೂರ್ತವನ್ನು ಗೊತ್ತುಪಡಿಸಿದರು. ರಾಜ್ಯಾರೋಹಣದ ಮುಹೂರ್ತವು ಆನಂದನಾಮ ಸಂವತ್ಸರದ ಜ್ಯೇಷ್ಠ ಶುದ್ಧ ತ್ರಯೋದಶಿಯೆಂದು ಗೊತ್ತಾಯಿತು. ಆ ಮೇಲೆ ಮಹಾರಾಜರು ತಮ್ಮ ರಾಜ್ಯದೊಳಗಿನ, ಹಾಗು ಬೇರೆಕಡೆಯ ಪ್ರತಿಷ್ಠಿತರಾದ ವಿದ್ವಾಂಸ ಬ್ರಾಹ್ಮಣರನ್ನೂ, ಯಾವತ್ತು ಮಾಂಡಲಿಕರಾಜರನ್ನೂ, ಬೇರೆ ಅರಸರನ್ನೂ, ಎಲ್ಲ ಸುಹೃತ್ಸಮ್ಬಂಧಿಕರನ್ನೂ, ಸ್ವರಾಜ್ಯದೊಳಗಿನ ಎಲ್ಲ ಪ್ರತಿಷ್ಠಿತ ಜನರನ್ನೂ, ಸೇವಕ ಜನರನ್ನೂ ಸಮಾರಂಭಕ್ಕಾಗಿ ಕರೆಕಳುಹಿದರು. ದುರ್ಗದ ಮೇಲೆಯೂ ಕೆಳಗೂ ಹಲವು ಮಂಟಪಗಳೂ, ರಾಹುಟಿಗಳೂ ಸಂವಟಿತವಾಗಿ ತುಂಬಿಹೋದವು. ಬಂದವರಿಗೆ ಯಾವ ಪದಾರ್ಥಗಳ ಕೊರತೆಯು ಎಂದೂ ಆಗದಂತೆ ಧಾನ್ಯಾಧಿಗಳನ್ನು ಪರ್ವತಪ್ರಾಯವಾಗಿ ಸಂಗ್ರಹಿಸಿ,

ಉಗ್ರಾಣವನ್ನು ರಚಿಸಿ ಅವುಗಳ ಮೇಲೆ ಅಧಿಕಾರಗಳನ್ನು ನಿಯಮಿಸಿದರು. ಅವರೆಲ್ಲರ ಮೇಲೆ ಅಧ್ಯಕ್ಷರ ಯೋಜನೆಯಾಯಿತು, ಒಂದೊಂದು ಪದಾರ್ಥಕ್ಕೆ ಒಬ್ಬೊಬ್ಬ ಅಧಿಕಾರಿಯನ್ನು ನಿಯಮಿಸಿ, ಆತನ ಕೈಕೆಳಗೆ ಕಾರಕೂನರನ್ನೂ, ನೌಕರರನ್ನೂ ನಿಯಮಿಸಿದರು. ಕಾರಕೂನರು ಬೇಕಾದವರಿಗೆ ಬೇಕಾದಷ್ಟು ಪದಾರ್ಥಗಳನ್ನು ಬೇಕಾದಾಗ ಕೊಡಬೇಕೆಂತಲೂ, ಬಂದವರಿಗೆ ಯಾವತರದ ತೊಂದರೆಯೂ ಆಗಬಾರದೆಂತಲೂ ಕಟ್ಟಪ್ಪಣೆಯಾಗಿತ್ತು ಬೆಳಗಿನಿಂದ ಸಾಯಂಕಾಲದ ಮಲಗುವ ಹೊತ್ತಿನವರೆಗೆ ಯಾವು ಯಾವ ನೌಕರರು ಏನೇನುಕೆಲಸ ಮಾಡಬೇಕು, ಯಾವ ಯಾವ ಸಾಮಾನುಗಳನ್ನು ಹ್ಯಾಗೆ ಹ್ಯಾಗೆ ಕೊಡಬೇಕು ಎಂಬದನ್ನು ಕುರಿತು ನಿಯಮಗಳನ್ನು ಮಾಡಿ ಬರೆದು ಅವರವರ ಕಡೆಗೆ ಕೊಡೋಣವಾಗಿತ್ತು ಈ ಕೆಲಸಗಳ ಮೇಲೆ ಸಹೃದಯರೂ, ಅತ್ಯಂತ ಸ್ವಾಮಿನಿಷ್ಠರೂ, ಪ್ರಾಮಾಣಿಕರೂ, ಆಲಸ್ಯರಹಿತರೂ, ಕರ್ತವ್ಯತತ್ಪರರೂ ಆದ ಜನರನ್ನು ನೋಡಿ ನಿಯಮಿಸಿದ್ದರು. ದುರ್ಗದ ಮೇಲೆಯೂ, ದುರ್ಗದ ಕೆಳಗೂ ಸಾವಿರಾರು ಜನರು ಕೂಡಿದ್ದರೂ, ಅವ್ಯವಸ್ಥೆ ಗೊಂದಲಗಳೇನು ಇಲ್ಲದೆ ಸಮಾಧಾನದಿಂದ ಎಲ್ಲ ಕಾರ್ಯಗಳು ಜರಗುವಂತೆ ವ್ಯವಸ್ಥೆಯಾಗಿತ್ತು

ಈ ಮೇರೆಗೆ ಎಲ್ಲ ಬಗೆಯ ವ್ಯವಸ್ಥೆಯಾದಬಳಿಕ ಬಂದವರ ಯೋಗಕ್ಷೇಮವು ಸರಿಯಾಗಿ ನಡೆದಿರಲು, ಜೇಷ್ಠಶುದ್ಧ ಚತುರ್ದಶಿಯ ಸುಮುಹೂರ್ತವು ಪ್ರಾಪ್ತವಾಯಿತು. ಅಂದು ಮಹಾರಾಜರ ವ್ರತಬಂಧ ಸಮಾರಂಭವು ಆರಂಭವಾಯಿತು. ಈ ಸಮಾರಂಭವನ್ನು ಎರಡು ದಿವಸಗಳಲ್ಲಿ ಮುಗಿಸಿಕೊಂಡರು. ಆಮೇಲೆ ಷಷ್ಠಿಯ ದಿವಸ ಪ್ರಥಮ ಪಟಬಂಧನ-ವಿಧಿಯಾದ ಮೇಲೆ ಪುಣ್ಯಾಹವಾಚನಪೂರ್ವಕವಾಗಿ ಯಜ್ಞಕ್ಕೆ ಆರಂಭವಾಯಿತು. ವಿನಾಯಕಶಾಂತಿ, ನಕ್ಷತ್ರಶಾಂತಿ, ಗ್ರಹಶಾಂತಿ ಇವೇ ಮೊದಲಾದ ರಾಜ್ಯಾಭಿಷೇಕಾಂಗಭೂತವಾದ ಸರ್ವಶಾಸ್ತ್ರ ವಿಧಿಗಳು ಯಥಾಸಾಂಗವಾಗಿ ಜರುಗಿದವು. ಋತ್ವಿಜರೂ, ಯಜಮಾನನೂ (ಮಹಾರಾಜರು) ಹಾಲು-ಹಣ್ಣಿನ ಮೇಲೆ ವ್ರತಸ್ಥರಾಗಿದ್ದರು. ಕಡೆಗೆ ತ್ರಯೋದಶಿಯ ಸುಮಂಗಲ ದಿನವು ಪ್ರಾಪ್ತವಾಗಲು, ಇಷ್ಟಮಿತ್ರರ ಹಾಗು ಸ್ವಾಮಿನಿಷ್ಠ ಸೇವಕರ ಹೃದಯಗಳು ಆನಂದದಿಂದ ಉಕ್ಕೇರಿದವು. ಅಭಿಷೇಕ ಸಮಾರಂಭವನ್ನು ನೋಡುವ ಲವಲವಿಕೆಯು ಎಲ್ಲರಲ್ಲಿಯೂ ಉತ್ಪನ್ನವಾಯಿತು. ಮಹಾರಾಜರೇ ಮೊದಲಾಗಿ ಎಲ್ಲ ಅಧಿಕಾರಿಗಳು ಮಂಗಲಸ್ನಾನ ಮಾಡಿದರು. ಮೃತಿಕಾಸ್ನಾನ, ಪಂಚಗವ್ಯಸ್ನಾನ, ಗಂಗಾದಿ ಪುಣ್ಯತೀರ್ಥೋದಕಸ್ನಾನ, ಪಂಚಾಮೃತ ಸ್ನಾನಗಳನ್ನು ಅವರು ವಿದ್ಯುಕ್ತವಾಗಿ ಮಾಡಿದರು. ಎಲ್ಲರು ಶುಭ್ರ ವಸ್ತ್ರಗಳನ್ನು ಉಟ್ಟುಕೊಂಡು, ಗಂಧ-ಪುಷ್ಪಗಳನ್ನೂ, ಅಲಂಕಾರಗಳನ್ನೂ ಧರಿಸಿದರು. ಒಂದೂಕಾಲು ಮೊಳ ಎತ್ತರ ಒಂದೂಕಾಲು ಮೊಳ ಅಗಲಾದ ಕ್ಷೀರವೃಕ್ಷದ ಆಸನವನ್ನು ಮಾಡಿ, ಅದಕ್ಕೆ ಬಂಗಾರದ ಮಡಾಸು ಮಾಡಿದರು. ಅದರ ಮೇಲೆ ಮಹಾರಾಜರು ಕುಳಿತುಕೊಂಡರು. ಪಟ್ಟರಾಣಿಯು ಪಟ್ಟಬಂಧನ ಮಾಡಿಕೊಂಡು ಬಳಿಯಲ್ಲಿ ಕುಳಿತುಕೊಂಡಳು; ಸಂಭಾಜಿಯು ಬಳಿಯಲ್ಲಿ ಕುಳಿತುಕೊಂಡನು. ಪೂರ್ವದಿಕ್ಕಿನಲ್ಲಿ ಮುಖ್ಯ ಪ್ರಧಾನನಾದ ಮೋರೋಪಂತ ಪಿಂಗಳೆಯು ಘೃತಪೂರ್ಣ ಸುವರ್ಣ ಕುಂಭವನ್ನು

ಹಿಡಿದುಕೊಂಡು ನಿಂತುಕೊಂಡನು. ದಕ್ಷಿಣದಿಕ್ಕಿನಲ್ಲಿ ಸೇನಾಪತಿಯಾದ ಹಂಬೀರರಾವ ಮೋಹಿತೆಯು ದುಗ್ಧಪೂರ್ಣಕಾಂಶ ಕಲಶವನ್ನು ಹಿಡಿದುಕೊಂಡು ನಿಂತುಕೊಂಡನು. ಪಶ್ಚಿಮದಿಕ್ಕಿನಲ್ಲಿ ರಾಮಚಂದ್ರ ನೀಲಕಂಠ ಪಂಡಿತ ಅಮಾತ್ಯನು ದಧಿಪೂರ್ಣ ತಾಮ್ರ ಕಲಶವನ್ನು ಹಿಡಿದುಕೊಂಡು ನಿಂತುಕೊಂಡನು. ಉತ್ತರದಿಕ್ಕಿನಲ್ಲಿ ಛಾಂದೋಗಾಮಾತ್ಯ ಪ್ರಧಾನ ರಘುನಾಥ ಪಂಡಿತರಾಯನು ಮಧುಪೂರ್ಣ ಸುವರ್ಣ ಕಲಶವನ್ನು ಹಿಡದುಕೊಂಡು ನಿಂತುಕೊಂಡನು. ಇವರ ಬಳಿಯಲ್ಲಿ ಮೃಣ್ಮಯ ಕುಂಭಗಳಲ್ಲಿ ಸಮುದ್ರೋದಕಗಳನ್ನು ತುಂಬಿ ಇಟ್ಟಿದ್ದರು. ಉಪದಿಕ್ಕುಗಳಲ್ಲಿ ಬೇರೆ ಪ್ರಧಾನರು ಛತ್ರಚಾಮರಾದಿಗಳನ್ನು ಹಿಡಕೊಂಡು ನಿಂತುಕೊಂಡರು. ಸುಹೃಜ್ಜನರೂ, ಮಾಂಡಲೀಕರಾಜರೂ ಸುತ್ತುಮುತ್ತು ನಿಂತುಕೊಂಡರು. ಹೀಗೆ ಎಲ್ಲರು ನಿಂತುಕೊಂಡ ಬಳಿಕ ಅಭಿಷೇಕಕ್ಕೆ ಆರಂಭವಾಯಿತು. ಶತಛಿದ್ರವುಳ್ಳ ಸುವರ್ಣಪಾತ್ರದಲ್ಲಿ ಜಲವನ್ನು ಹಾಕಿ ಅದರಿಂದಲೂ ಪ್ರಧಾನರು ತಮ್ಮ ತಮ್ಮ ಕಲಶಗಳಲ್ಲಿ ಹಿಡಿದುಕೊಂಡಿದ್ದ ದ್ರವ್ಯಗಳನ್ನು ಹಾಕಿ ಅವುಗಳಿಂದಲೂ ಮಹಾರಾಜರಿಗೆ ಯಥಾಶಾಸ್ತ್ರ ಮಂತ್ರೋಚ್ಚಾರ ಪೂರ್ವಕವಾಗಿ ಅಭಿಷೇಕ ಮಾಡಿದರು. ಆ ಕಾಲದಲ್ಲಿ ಎಲ್ಲ ಮಂಗಲ ವಾದ್ಯಗಳು ಘೋರ್ಗರೆಯುತ್ತಿದ್ದವು; ವಾರಾಂಗನೆಯರು ನರ್ತನ ಮಾಡುತ್ತಲಿದ್ದರು, ಗಾಯಕರು ಗಾಯನ ಮಾಡುತ್ತಲಿದ್ದರು. ಇವೆಲ್ಲವುಗಳ ಮಿಶ್ರಧ್ವನಿಯು ದಿಗಂತವನ್ನು ವ್ಯಾಪಿಸಿ, ಸಹೃದಯರ ಸಹೃದಯತ್ವವನ್ನು ವ್ಯಕ್ತಗೊಳಿಸುತ್ತಲಿತ್ತು. ಆ ಸಮಾರಂಭವನ್ನು ನೋಡುವವರ ಕಣ್ಣುಗಳು ಆನಂದಾಶ್ರುಪೂರ್ಣವಾದವು; ಕಂಠಗಳು ಸಂದಟಿತವಾದವು. ಮೈಯಲ್ಲಿ ರೋಮಾಂಚನಗಳು ಉತ್ಪನ್ನವಾದವು. ಮರಾಟವೀರರ ಬಾಹುಗಳೂ, ಸ್ವಾಮಿನಿಷ್ಠರ ಸ್ವಾಮಿಭಕ್ತಿಯೂ, ಪ್ರಜೆಗಳ ರಾಜನಿಷ್ಠೆಯೂ ಧನ್ಯತೆಯನ್ನು ಪಡೆದವು. ಅತ್ತ ಸಾಧ್ವಿಯಾದ ಜೀಜಾಬಾಯಿಯವರ ಕಣ್ಣುಗಳೊಳಗಿಂದ ಒಂದೇಸವನೆ ನೀರುಗಳು ಸುರಿಯುತ್ತಲಿದ್ದವು. ತಮ್ಮ ಶಿವಬಾನ ಕೃತಕೃತ್ಯತೆಯನ್ನು ತಾವು ಒಬ್ಬರೇ ನೋಡಬೇಕಾದದ್ದರಿಂದ ಆ ಪತಿವ್ರತೆಗೆ ಪರಮಾವಧಿ ವ್ಯಸನವಾಗಿತ್ತು. ಇತ್ತ ಮಹಾರಾಜರಲ್ಲಿ ಅತ್ಯಂತ ಲೀನಭಾವವು ಉತ್ಪನ್ನವಾಗಿತ್ತು! ಹೀಗೆ ಎಲ್ಲರ ಮನಸ್ಸಿನಲ್ಲಿ ಒಂದಿಲ್ಲೊಂದು ಬಗೆಯ ಉಜ್ವಲ ಭಾವನೆಯು ಉತ್ಪನ್ನವಾಗಿರುವಾಗ ಅಭಿಷೇಕದ ವಿಧಾನವು ಮುಗಿಯಿತು. ಮಹಾರಾಜರು ಪುನಃ ಸ್ನಾನಮಾಡಿದರು. ಸುವಾಸಿನಿಯರು ಆರತಿ ಮಾಡಿದರು. ಘೃತಪೂರ್ಣಕಾಂಶ ಪಾತ್ರದಲ್ಲಿಯೂ, ಕನ್ನಡಿಯಲ್ಲಿಯೂ ಮುಖವನ್ನು ನೋಡಿಕೊಳ್ಳಬೇಕೆಂದು ಮಹಾರಾಜರಿಗೆ ಹೇಳಿದರು. ಇಷ್ಟೆಲ್ಲ ವಿಧಾನವಾದ ಬಳಿಕ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಟ್ಟರು. ಆಮೇಲೆ ಮಹಾರಾಜರು ಪುನಃ ಶುಭ್ರವಸ್ತ್ರವನ್ನುಟ್ಟುಕೊಂಡು ಸಿಂಹಾಸನವನ್ನೇರುವ ಮುಹೂರ್ತವನ್ನು ನಿರೀಕ್ಷಿಸುತ್ತ ಕುಳಿತುಕೊಂಡರು.

ಶಾಸ್ತ್ರೋಕ್ತವಾಗಿ ರಚಿಸಿದ ಮನೋಹರವಾದ ಬಹು ಬೆಲೆಯುಳ್ಳ ಸಿಂಹಾಸನದ ಮೇಲೆ ಮೊದಲು ಮೃಗಚರ್ಮವನ್ನು ಹಾಸಿ, ಅದರಮೇಲೆ ಕೆಲವು ಸುವರ್ಣ ದ್ರವ್ಯವನ್ನು ಹರಹಿ ಅದರ ಮೇಲೆ ವ್ಯಾಘ್ರ ಚರ್ಮವನ್ನು ಹಾಸಿದ್ದರು. ಆ ವ್ಯಾಘ್ರಚರ್ಮದ ಮೇಲೆ ಉತ್ತಮ ಮಖಮಲಿನ ಕಾರ್ಪಾಸನವನ್ನು ಹಾಕಿ, ಉತ್ತಮ ಜರತಾರಿಯ ವಸ್ತ್ರದ ಆವರಣವುಳ್ಳ ತಕ್ಕೆ

ಲೋಡುಗಳನ್ನು ಇಟ್ಟಿದ್ದರು. ಸಿಂಹಾಸನದ ಹಿಂದೆ ಸುವರ್ಣಮಯವಾದ ಪ್ರಭಾವಲಿಯಿದ್ದು ಅದರಮೇಲೆ ರತ್ನಖಚಿತವಾದ ಸುವರ್ಣ ಛತ್ರವು ಮುತ್ತಿನ ಝಾಲರಿಗಳಿಂದ ಪ್ರಕಾಶಿಸುತ್ತಲಿತ್ತು ಅದರಮೇಲೆ ಅಲ್ಲಲ್ಲಿ ಮುತ್ತಿನ ಗೊಂಚಲಗಳು ತೂಗಾಡುತ್ತಲಿದ್ದವು. ಹೀಗೆ ಸಿಂಹಾಸನವನ್ನು ವ್ಯವಸ್ಥೆಗೊಳಿಸಿ, ಸಭಾಮಂಟಪದ ಎದುರಿಗೆ ಸಲಕ್ಷಣವಾದ ಆನೆಯನ್ನೂ, ಕುದುರುಯನ್ನೂ, ಬೆಲೆಯುಳ್ಳ ವಸ್ತ್ರಗಳಿಂದಲೂ, ಸುವರ್ಣಾಲಂಕಾರಗಳಿಂದಲೂ ಶೃಂಗರಿಸಿ ನಿಲ್ಲಿಸಿದ್ದರು. ಸಿಂಹಾಸನಾ ರೋಹಣ ಮುಹೂರ್ತವು ಸಮೀಪಿಸಲು, ಮಹಾರಾಜರು ಸುವರ್ಣದ ವಿಷ್ಣು ಪ್ರತಿಮೆಯನ್ನು ಷೋಡಶೋಪಚಾರಗಳಿಂದ ಪೂಜಿಸಿ ಅದನ್ನು ಬಲಗೈಯಲ್ಲಿಟ್ಟುಕೊಂಡು, ಮುಹೂರ್ತದ ಗಳಿಗೆಯು ತುಂಬಿದಕೂಡಲೆ ಬ್ರಾಹ್ಮಣರನ್ನು ನಮಸ್ಕರಿಸಿ, ಅವರ ವೇದೋಕ್ತಾಶೀರ್ವಾದವನ್ನು ಪಡೆದು, ತಾಯಂದಿರಾದ ಜೀಜಾಬಾಯಿಯವರನ್ನು ವಂದಿಸಿ, ಅವರ ಪ್ರೇಮಪೂರ್ವಕ ಆಶೀರ್ವಾದವನ್ನು ಪಡೆದು, ಹಾಗೆಯೇ ವಿಷ್ಣುಪ್ರತಿಮೆಯೊಡನೆ ಸಿಂಹಾಸನವನ್ನು ಆರೋಹಿಸುವದಕ್ಕಾಗಿ ಹೊರಟರು. ಮಹಾರಾಜರು ಸಿಂಹಾಸನದ ಬಲಗಡೆಗೆ ನಿಂತು ಬಲ ಮೊಣಕಾಲೂರಿ ಅದನ್ನು ವಂದಿಸಿ, ಅದಕ್ಕೆ ಕಾಲು ಹತ್ತದಂತೆ ಪೂರ್ವಾಭಿ ಮುಖರಾಗಿ ಸಿಂಹಾಸನ ವೇರಿದರು. ಸಿಂಹಾಸನದ ಅಷ್ಟಸ್ತಂಭಗಳಲ್ಲಿ ಅಷ್ಟಪ್ರಧಾನರು ಬದ್ಧಾಂಜಲಿಗಳಾಗಿ ನಿಂತುಕೊಂಡರು. ಮಹಾರಾಜರು ಸಿಂಹಾಸನವೇರಿದ ಕೂಡಲೆ ನೌಬತ್ತು ಚೌಘಡೆ ಮೊದಲಾದ ಮಂಗಲವಾದ್ಯಗಳು ಭೋರ್ಗರೆಯಹತ್ತಿದವು. ನೃತ್ಯ–ಗಾಯನ ಆರಂಭವಾಯಿತು. ಪ್ರೇಕ್ಷಕರೆಲ್ಲರು ಜಯಘೋಷ ಮಾಡಿದರು. ಈ ಗಂಭೀರ ಘೋಷ ದಿಂದ ದಿಗ್ತಟಗಳು ತುಂಬಿ ಹೋಗುತ್ತಿರಲು, ತೋಫುಗಳ ಗರ್ಜನೆಗೆ ಆರಂಭವಾಯಿತು. ಸ್ವರಾಜ್ಯದೊಳಗಿನ ಪ್ರತಿಒಂದು ದುರ್ಗದ ಅಧಿಪತಿಗೆ ಸೂಚಿಸಿದ್ದೇನೆಂದರೆ–''ಒಂದು ದುರ್ಗದ ಮೇಲಿನ ತೋಫಿನ ಧ್ವನಿಯು ಕೇಳಿದಕೂಡಲೆ ತಮ್ಮಲ್ಲಿಯ ತೋಫುಗಳನ್ನು ಹಾರಿಸಬೇಕು. ಈ ವ್ಯವಸ್ಥೆಯಿಂದ ಶಿವಛತ್ರಪತಿಯ ರಾಜ್ಯದೊಳಗಿನ ದುರ್ಗಗಳ ಮೇಲೆಲ್ಲ ಒಮ್ಮೆಲೆ ತೋಫುಗಳು ಭೋರ್ಗರೆಯ ಹತ್ತಿದವು.

ಸಿಂಹಾಸನಾರೋಹಣಾನಂತರ ಮಹಾರಾಜರು ಮೊದಲಿನ ಶುಭ್ರವಸ್ತ್ರಗಳನ್ನು ಬಿಟ್ಟು, ರಕ್ತವಸ್ತ್ರಗಳನ್ನು ಧರಿಸಿದರು. ಚೌಕಳಿ, ಕಂಠಿ, ಮಾಲೆ, ಶಿರಪೇಚ, ತುರಾಯಿ, ಝುಗಾ, ಪೋಚೆ ಮುಂತಾದ ಅಲಂಕಾರಗಳನ್ನು ಧರಿಸಿದರು. ಧನುರ್ಬಾಣಗಳನ್ನೂ, ಖಡ್ಗವನ್ನೂ ಮಂತ್ರವಿಧಿ ಪೂರ್ವಕ ಪೂಜಿಸಿ, ಅವನ್ನು ಕೈಯಲ್ಲಿ ಧರಿಸಿದರು. ಆಗ ಜನರು ಮಹಾರಾಜರ ಮೇಲೆ ಬೆಳ್ಳಿ ಬಂಗಾರದ ಹೂಗಳ ಮಳೆಗರೆದರು. ಹದಿನಾರು ಜನ ಬ್ರಾಹ್ಮಣ ಸುವಾಸಿನಿಯರು ಮಹಾರಾಜರಿಗೆ ಆರತಿಯನ್ನು ಮಾಡಿದರು. ಅವರಿಗೆ ವಸ್ತ್ರಾಭರಣಗಳ ಉಡುಗೊರೆ ಯಾಯಿತು. ಸಿಂಹಾಸನದ ಮೇಲೆ ಕುಳಿತ ಬಳಿಕ ಆಗತಕ್ಕ ಉಳಿದ ಮಂತ್ರವಿಧಿಗಳು ಆದಬಳಿಕ, ಮಹಾರಾಜರು ಬ್ರಾಹ್ಮಣರ ಆಶೀರ್ವಾದವನ್ನು ಪಡೆದರು. ಬಳಿಕ ಋತ್ವಿಜರ, ಆಚಾರ್ಯರ, ಬ್ರಾಹ್ಮಣರ ಪೂಜೆಯನ್ನು ಮಾಡಿ, ಅವರಿಗೆ ವಿಪುಲವಾದ ದಕ್ಷಿಣೆಯನ್ನು ಕೊಟ್ಟರು. ಈ ಪ್ರಸಂಗದಲ್ಲಿ ಗಾಗಾಭಟ್ಟರಿಗೆ ಒಂದು ಲಕ್ಷರೂಪಾಯಿ ದಕ್ಷಿಣೆಯನ್ನೂ

ಬಹು ಬೆಲೆಯುಳ್ಳ ವಸ್ತ್ರಭೂಷಣಾದಿಗಳನ್ನೂ ಕೊಟ್ಟು ಗೌರವಿಸಿದರು. ಯಾವತ್ತು ಋತ್ವಿಜರಿಗೂ, ಆಚಾರ್ಯರಿಗೂ ಐದೈದು ಸಾವಿರ ರೂಪಾಯಿ ದಕ್ಷಿಣೆಕೊಟ್ಟರು. ಪುರೋಹಿತನಿಗೆ ಇಪ್ಪತ್ತುನಾಲ್ಕು ಸಾವಿರರೂಪಾಯಿ ದಕ್ಷಿಣೆಕೊಟ್ಟರು. ಶಿಷ್ಟಬ್ರಾಹ್ಮಣರಿಗೆ ಅವರವರ ಯೋಗ್ಯತೆಯಂತೆ, ಯಾರಿಗೆ ಸಾವಿರ ಸಾವಿರ ರೂಪಾಯಿ, ಯಾರಿಗೆ ಐದುನೂರು ರೂಪಾಯಿ, ಯಾರಿಗೆ ಎರಡೆರಡರು ನೂರು ರೂಪಾಯಿ ದಕ್ಷಿಣೆಕೊಟ್ಟರು. ಉಳಿದ ಯಾವತ್ತು ಬ್ರಾಹ್ಮಣರಿಗೆ ಇಪ್ಪಿಪ್ಪತ್ತೈದು ರೂಪಾಯಿಗಳಂತೆ ದಕ್ಷಿಣೆಕೊಟ್ಟರು. ಇದಲ್ಲದೆ ಗೋಸಾವಿಗಳು, ಬಡಬಗ್ಗರು, ಬಿಕ್ಕೆ ಬೇಡುವವರು ಮೊದಲಾದವರಿಗೆ ಐದೈದು, ನಾಲ್ಕಾಲ್ಕು, ಎರಡೆರಡು ರೂಪಾಯಿಗಳಂತೆ ಹಂಚಿದರು. ದೊಡ್ಡ ದೊಡ್ಡ ಸಾಧುಸಂತರಿಗೂ, ಧರ್ಮ ಪರಾಯಣರಾದ ಬ್ರಾಹ್ಮಣರಿಗೂ ಊರುಗಳನ್ನೂ, ಹೊಲಗಳನ್ನೂ ಇನಾಮು ಹಾಕಿಕೊಟ್ಟರು. ಈ ಕಾಲದಲ್ಲಿ ಮಹಾರಾಜರು ತುಲಾಭಾರವನ್ನು ಮಾಡಿಕೊಂಡರು. ಭಾರವು ಹದಿನಾರು ಸಾವಿರ ಹೊನ್ನು ಆಯಿತು. ಈ ಧನವನ್ನೆಲ್ಲ ಬ್ರಾಹ್ಮಣರಿಗೆ ಹಂಚಿಕೊಟ್ಟರೆಂದು ಬರೆಯುವ ಕಾರಣವಿಲ್ಲ. ಈ ಹೊನ್ನುಗಳ ತೂಕವು ಸರಾಸರಿ ಐದುಮಣವಾಯಿತು.

ಬಳಿಕ ಬಹು ವೈಭವದಿಂದ ಮಹಾರಾಜರು ದೇವರ ದರ್ಶನಕ್ಕಾಗಿ ಹೊರಟು, ದೇವರಿಗೆ ವಸ್ತ್ರಾಲಂಕಾರಗಳನ್ನು ಸಮರ್ಪಿಸಿ, ಪೂಜಾರಿಗಳನ್ನು ದಕ್ಷಿಣಾದಿಗಳಿಂದ ಸಂತೋಷಪಡಿಸಿ ರಾಜಗೃಹವನ್ನು ಪ್ರವೇಶಿಸಿದರು. ಅಲ್ಲಿ ಕುಲದೇವತೆಯ ದರ್ಶನ ಮಾಡಿಕೊಂಡು ತಮ್ಮ ಪೂಜ್ಯ ಜನನಿಯನ್ನು ನಮಸ್ಕರಿಸಿದರು. ರಾಣಿಯರು ಆರತಿಗಳನ್ನು ಮಾಡಿದರು. ಅವರಿಗೆ ಅಮೌಲ್ಯ ವಸ್ತ್ರಾಭರಣಗಳನ್ನಿತ್ತು ಮಹಾರಾಜರು ಸಭಾಗೃಹಕ್ಕೆ ಬಂದು ಸಿಂಹಾಸನವನ್ನು ಆರೋಹಿಸಿದರು. ಆಗ ಎಲ್ಲರ ಮುಜುರೆಗಳನ್ನು ಸ್ವೀಕರಿಸಿದ ಬಳಿಕ ತಾಂಬುಲ, ಪುಷ್ಪಹಾರ, ಸುಂಗಧದ್ರವ್ಯಗಳ ಸಮರ್ಪಣಾನಂತರ ಎಲ್ಲರಿಗೆ ನಿರೂಪ ಕೊಟ್ಟರು. ಆಮೇಲೆ ಬ್ರಾಹ್ಮಣ ಭೋಜನವಾಯಿತು. ಮಹಾರಾಜರು ಎಲ್ಲ ಸುಹೃಜ್ಜನರೊಡನೆ ಹಾಗು ಇಷ್ಟಮಿತ್ರರೊಡನೆ ಕುಳಿತು ಭೋಜನ ಮಾಡಿದರು. ಮಾಂಡಲೀಕ ರಾಜರನ್ನು ವಸ್ತ್ರಾಲಂಕಾರಗಳಿಂದ ಸತ್ಕರಿಸಿ ನಿರೂಪಕೊಟ್ಟು, ಕಳುಹಿದರು. ಯಾವತ್ತು ಗುಣಿಜನರ ಯಥಾ ಯೋಗ್ಯ ಸಂಭಾವನೆಯಾಗಿ, ಎಲ್ಲರು ತಮ್ಮ ತಮ್ಮ ಸ್ಥಳಗಳಿಗೆ ಹೊರಟು ಹೋದರು. ಈ ಮೇರೆಗೆ ರಾಜ್ಯಾರೋಹಣ ಸಮಾರಂಭವು ನಿರ್ವಿಘ್ನವಾಗಿ ಒಳ್ಳೇ ವಿಜೃಂಭಣೆಯಿಂದ ನೆರವೇರಿತು. ಸಮಾರಂಭಕ್ಕೆ ಬಂದ ಜನರೆಲ್ಲ ಸಂತೋಷಭರಿತರಾಗಿ ಮಹಾರಾಜರ ಐಶ್ವರ್ಯ ಸಂಪನ್ನತೆಯನ್ನೂ, ಔದಾರ್ಯವನ್ನೂ ವರ್ಣಿಸುತ್ತ ತಮ್ಮ ತಮ್ಮ ಸ್ಥಳಗಳಿಗೆ ಹೊರಟುಹೋದರು. ಈ ಸಮಾರಂಭಕ್ಕಾಗಿ ಒಟ್ಟು ವೆಚ್ಚವು ಒಂದು ಕೋಟಿ ನಾಲ್ವತ್ತೆರಡು ಲಕ್ಷ ವರಹಗಳದಾಯಿತೆಂದು ಹೇಳುವರು. ಮಹಾರಾಜರು ''ಕ್ಷತ್ರಿಯ ಕುಲಾವಸಂತ ಶ್ರೀ ರಾಜಾ ಶಿವಛತ್ರಪತಿ'' ಎಂಬ ಬಿರುದು ಧರಿಸಿದರು. ರಾಜ್ಯಾಭಿಷೇಕ ಸಮಾರಂಭವು ಶಕೆ ೧೫೯೬ನೇ ಜ್ಯೇಷ್ಠ ಶುದ್ಧ ತ್ರಯೋದಶಿಯ ದಿವಸ ಆಯಿತು. ಈ ದಿನ ಇಂಗ್ರೇಜಿ ತಾರೀಖು ೬ನೇ ಜೂನ ಸನ್ ೧೬೭೪ನೇ ಇಸವಿಯಾಗಿತ್ತು. ಈ ಮೇರೆಗೆ ಮಹಾರಾಜರು ತೀರ ಚಿಕ್ಕ ವಯಸ್ಸಿನಲ್ಲಿ ಅತ್ಯಂತ ಸುತ್ತ್ಯವಾದ ಉದ್ದೇಶವನ್ನು ಮನಸ್ಸಿನಲ್ಲಿ

ತಂದು ಇಷ್ಟು ದಿವಸ ಸತತವಾದ ಪರಿಶ್ರಮ ಮಾಡಿ ತಮ್ಮ ಪವಿತ್ರೋದ್ದೇಶವನ್ನು ಕೊನೆಗಾಣಿಸಿ ಸ್ವರಾಜ್ಯವನ್ನು ಸ್ಥಾಪಿಸಿ, ಸಶಾಸ್ತ್ರ ಸಿಂಹಾಸನಾರೋಹಣ ಮಾಡಿ, ಮಹಾರಾಷ್ಟ್ರದಲ್ಲಿ ನೂತನವಾದ ಶತಕವನ್ನು ಸ್ಥಾಪಿಸಿದರು! ಮಹಾರಾಜರ ಈ ಪಟ್ಟಾಭಿಷೇಕೋತ್ಸವ ಸಮಾರಂಭದ ಸುದ್ದಿಯನ್ನು ಕೇಳಿ ಯವನ ಬಾದಶಹರು ಅತ್ಯಂತ ಖಿನ್ನರಾದರು. ಇಂದಿನಿಂದ ಯಾವತ್ತು ರಜಪೂತ ರಾಜರು, ಇಂಗ್ರಜರು, ಫ್ರೆಂಚರು, ಫಿರಂಗಿಗಳು ಮಹಾರಾಜರನ್ನು ವಿಶೇಷವಾಗಿ ಮನ್ನಿಸತೊಡಗಿದರು. ಆದಿಲಶಹಾ ಕುತುಬಶಹಾ ಮೊದಲಾದವರೂ ಸರಿಸಮಾನ ಸ್ಕಂದರಂತೆ ಮಹಾರಾಜರನ್ನು ಮನ್ನಿಸಬೇಕಾಯಿತು. ಈ ವರೆಗೆ ಯಾವತ್ತು ಜನರ ಮನಸ್ಸಿನಲ್ಲಿ ಮಹಾರಾಜರ ವಿಷಯದ ಭಯವಷ್ಟೇ ವಾಸಿಸುತ್ತಿತ್ತು; ಆದರೆ ಈಗ ಭಯ–ಮಾನಗಳೆಂಬ ಎರಡು ಮನೋವೃತ್ತಿಗಳು ಅವರ ಮನಸ್ಸಿನಲ್ಲಿ ಉತ್ಪನ್ನವಾದವು!

ಪ್ರಿಯವಾಚಕರೇ, ಆಗಿನವರ ಮಾತು ಹಾಗಿರಲಿ, ಈಗಿನ ನಮ್ಮ ಮನಸ್ಸಿನಲ್ಲಿ ಮಹಾರಾಜರ ವಿಷಯವಾಗಿ ಅವರ ಪ್ರತಾಪ, ದೈವಭಕ್ತಿ ಗುರುಭಕ್ತಿ ಮಾತಾ–ಪಿತೃಭಕ್ತಿ ಪ್ರಜಾವಾತ್ಸಲ್ಯ, ದೀನಬಾಂಧವ್ಯ, ಸ್ವಧರ್ಮ ನಿಷ್ಠೆ ಮೊದಲಾದ ಪೂಜ್ಯಗುಣಗಳ ಯೋಗದಿಂದ ಅತ್ಯಂತ ಪೂಜ್ಯಭಾವವು ಉತ್ಪನ್ನವಾಗಿರಲು ನಾವು ಅತ್ಯಂತ ನಯ–ಭಯ–ಭಕ್ತಿಯಿಂದ ಮಹಾರಾಜರನ್ನು ಶತಶಃ ಮನಸಾ ವಂದಿಸಿ, ಅವರ ಈ ಪ್ರತಾಪ ಪ್ರದರ್ಶಕ ಕಾದಂಬರಿಯನ್ನು ಮುಗಿಸುವೆವು!

**ಸಂಪೂರ್ಣ**

ಗಳಗನಾಥ ಸಮಗ್ರ ಸಾಹಿತ್ಯ

## ನಿಮ್ಮ ನೆನೆದಾಗಲೆ ಉದಯ

'ಗಳಗನಾಥ' ಹಾವೇರಿ ಜಿಲ್ಲೆಯ ಒಂದು ಹಳ್ಳಿ. ವೆಂಕಟ
ತಿರಕೋ ಕುಲಕರ್ಣಿಯವರು ತಮ್ಮ ಈ ಹಳ್ಳಿಯ ಹೆಸರ
ಕಾವ್ಯನಾಮವಾಗಿ ಬಳಸುವ ಮೂಲಕ, ಅದನ್ನು ಸಾಹಿತ್ಯ
ಚಿರಸ್ಥಾಯಿಗೊಳಿಸಿದರು.

ಧಾರವಾಡದ ಗಂಡುಮಕ್ಕಳ ಟ್ರೇನಿಂಗ್ ಕಾಲೇಜು ಇ
ಸಾಹಿತ್ಯಿಕ ವ್ಯಕ್ತಿತ್ವವನ್ನು, ಅಗಡಿ ಆನಂದಾಶ್ರಮ ಇವರ ಆಧ್ಯಾ
ವ್ಯಕ್ತಿತ್ವವನ್ನು ರೂಪಿಸಿದವು. ಈ ಎರಡೂ ಆಯಾಮಗ
ಆಧಾರವಾದುದು ಅವರ ಕನ್ನಡ ಶಾಲೆಯ ಶಿಕ್ಷಕವೃತ್ತಿ. ಹೊಸಗನ
ಸಾಹಿತ್ಯಿಕ ಪರಿಸರವನ್ನು ಮೈಸೂರು ಪ್ರದೇಶದಲ್ಲಿ ರಾಜರ ಆಸ
ವಿದ್ವಾಂಸರು ಸೃಷ್ಟಿಸಿದರೆ, ಉತ್ತರ ಕರ್ನಾಟಕದಲ್ಲಿ ಅಂ
ಪರಿಸರವನ್ನು ಕನ್ನಡ ಶಾಲೆಯ ಮಾಸ್ತರರು ಸೃಷ್ಟಿಸಿದರು. ಇವ
ಎದ್ದು ಕಾಣುವ ಹೆಸರು, ಗಳಗನಾಥ ಮಾಸ್ತರು.

೨೦ನೆಯ ಶತಮಾನದಲ್ಲಿ ಗದ್ಯಯುಗವನ್ನು ಆಳಿದು
ಕಾದಂಬರಿ. ಹೀಗಾಗಿ ಈ ಶತಮಾನವನ್ನು "ಕಾದಂ
ಪ್ರಧಾನಯುಗ" ವೆಂದು ಕರೆಯಬಹುದಾಗಿದೆ. ಇದು ನವೋದ
ಪ್ರಗತಿಶೀಲ, ನವ್ಯವೆಂಬ ಮೂರು ಹಂತಗಳಲ್ಲಿ ಸಾಗಿ ಬಂದಿ
ಇವುಗಳಲ್ಲಿ ಪ್ರಗತಿಶೀಲವೆಂಬುದು ಒಂದು ಪ್ರಯೋಗವ
ಉಳಿಯಿತೇ ಹೊರತು, ಪರಂಪರೆಯಾಗಿ ಬೆಳೆಯಲಿಲ್ಲ. ಇತ್ತೀ
ನವ್ಯ ಕಾದಂಬರಿ ಬಂದು ಪರಂಪರೆಯಾಗಿ ಬೆಳೆಯುತ್ತಲಿದ್ದರೂ ಅ
ಸಂಖ್ಯೆ ಕಡಿಮೆ. ಆದುದರಿಂದ ಇಂದಿಗೂ ಕಾದಂಬರಿ ಕ್ಷೇತ್ರವ
ಬಹುಪಾಲು ವ್ಯಾಪಿಸಿದುದು ನವೋದಯಪ್ರಜ್ಞೆಯ ಕಾದಂಬರಿ.
ಪ್ರಜ್ಞೆಯ ಮೂಲಪುರುಷರಲ್ಲಿ ಮುಖ್ಯವೆನಿಸಿದ್ದಾರೆ, ಕಾದಂ
ಪಿತಾಮಹ ಗಳಗನಾಥರು.

ಸಾಹಿತ್ಯವನ್ನು ಸೃಷ್ಟಿಸುವವನು ಸಾಹಿತಿಯಾದರೂ ಅ
ವಾರಸುದಾರರು ಸಹೃದಯರು. ಈಗಿನಂತೆ ಪುಸ್ತಕದ ಉತ್ಪಾದನ
ಅನುಕೂಲವಿಲ್ಲದ ಪ್ರಾಚೀನಕಾಲದಲ್ಲಿಯೂ ಇವರು ಉತ್ತಮ ಸಾಹಿ
ಕೃತಿಗಳನ್ನು ತಲೆಮಾರಿನಿಂದ ತಲೆಮಾರಿಗೆ ಪ್ರತಿಮಾಡುತ್ತ
ಮಾಡಿಸುತ್ತ ಬಂದಿದ್ದಾರೆ. ಹೀಗಿರುವಾಗ ಎಲ್ಲ ಬಗೆ
ಅನುಕೂಲತೆಗಳನ್ನು ಹೊಂದಿರುವ ಇಂದಿನ ಕಾಲದವರಾದ ನಾ
ಅವುಗಳ ಮರುಮುದ್ರಣ ವಿಷಯದಲ್ಲಿ ಹೆಚ್ಚು ಆಸಕ್ತಿವಹಿಸುವದು ತ
ಸಹಜ. ಆದುದರಿಂದ, ಪ್ರಾಚೀನ ಹಸ್ತಪ್ರತಿಗಳ ಪರಿಷ್ಕರಣ - ಮುದ್ರಣ
ಮರುಮುದ್ರಣದಂತೆ ನವೋದಯಕಾಲೀನ ಯಂತ್ರಪ್ರತಿಗಳನ್ನು
ಮತ್ತೆ ಮತ್ತೆ ಅಚ್ಚಿಸಿ ಓದುಗರಿಗೆ ಒದಗಿಸುತ್ತಲಿದ್ದೇವೆ.

ಎಂ. ಎಂ. ಕಲಬುರ್ಗಿ
ಪ್ರಧಾನ ಸಂಪಾದಕ


ISBN 978-93-81822-41-8

Rs. 2000/- (Set of 6 Volumes)

ಗಳಗನಾಥರ ವರ್ಣಚಿತ್ರ ಕೃಪೆ : ಎಸ್.ಸಿ. ದೇಸಾಯಿ